ಮಾರ್ಚ 1963







# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪಾದಕರು: ಅನ್ನದಾನಯ್ಯ ಪುರಾಣಿಕ, ಬಿ.ಕಾಮ್., ಎಲ್‌ಎಲ್.ಬಿ.

ಸಂಪುಟ ೨೬] [ಸಂಚಿಕೆ ೩

ರಾಷ್ಟ್ರದ ಪ್ರಥಮ ರಾಷ್ಟ್ರಪತಿ



ಡಾ॥ 'ಭಾರತರತ್ನ' ರಾಜೇಂದ್ರ ಪ್ರಸಾದರು

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮




# ವೀರ ಕವಿತಾಗೋಷ್ಠಿ

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ದಿನಾಂಕ ೩೦–೧–೬೩ ರಂದು ನಡೆದ ವೀರ ಕವಿತಾ ಗೋಷ್ಠಿಯಲ್ಲಿ ಪಠಿಸಲಾದ ಮತ್ತಿಷ್ಟು ಕವನಗಳನ್ನು ಈ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ.—ಸಂ.

## ಸ್ವಾತಂತ್ರ್ಯವೆ ನಮಗೆ ಸ್ವರ್ಗ

ಸ್ವಾತಂತ್ರ್ಯವೆ ನಮಗೆ ಸ್ವರ್ಗ
ವೊಳಗಲಿ ರಣಕಹಳೆ
ಮನಮನದಲಿ ಸಿಡಿದೇಳಲಿ
ರೋಷದ ಕಿಡಿ;–ಜ್ವಾಲೆ.

ಹಸಿವಿನಿಂದ ಬುಸುಗುಟ್ಟುವ ಹೆಬ್ಬುಲಿಗಿದು ಕಾಲ
ಧರ್ಮದ ಹೊಳೆ ಶಾಂತಿಯ ನೆಲೆಗೇಕೆ ಬಂತು ಶೂಲ?
ಸ್ವಾತಂತ್ರ್ಯವ ಅಪಹರಿಸುವ ಬಹುವಿಧಗಳ ಜಾಲ
"ಯುದ್ಧಮಾಡಿ–ಜಯವ ಪಡೆ"–ಇದೇ ಮಂತ್ರಮೂಲ.

ಬುದ್ಧನ ಕುಲ, ಬಸವನ ಕುಲ
ಶರಣರ ಕುಲ ನಮ್ಮದು
ಎಂದೆಂದಿಗೂ ಅಚ್ಚಳಿಯದ
ಧರ್ಮದ ಹೊಲ ನಮ್ಮದು
"ಅಹಿಂಸಾ ಪರಮೋಧರ್ಮಃ"
ದಿನ ನಿತ್ಯವು ನಮಗೆ
ಇದೆ ಕಂಕಣ, ಕರಣಗಣ;–
ಇದೆ ಭೂಷಣ ನಮಗೆ

ರೊಯ್ಯನೆಂದು ಭೋರಿಡುತಲಿ ಬೀಸುತ್ತಿದೆ ಗಾಳಿ,
ಶತ್ರುಸಮರ ಸಿದ್ಧನಾಗಿ ನಡೆಸುತಿಹನು; ಧಾಳಿ!
ಎದ್ದೇಳಿರಿ ಎಲ್ಲ ಜನರೆ! ಒಂದಾಗಲಿ ಜನಬಲ
ನಮ್ಮಿ ಸಿದ್ಧತೆಗೆಲ್ಲಾ–ಇದೆ ಲೋಕದ ಬೆಂಬಲ

* * *

ತೊಟ್ಟು ಕಾಕಿಯ, ಹೊತ್ತು ಕೋವಿಯ
ನುಗ್ಗಿ ಸೈನಿಕ ನಡೆಯಲಿ
ಮುತ್ತಿನಾರತಿ ಎತ್ತಿ ಕಳುಹಲಿ
ಅವನ ನಲ್ಮೆಯ ಚಿನ್ಮಯಿ

ಮೈಯ ಕೊರೆಯುವ ಹಿಮದ ಬಯಲಲಿ
ಯುದ್ಧಮಾಡುವ ಕಡುಗಲಿ
ಶತ್ರುಸೇನೆಯ ಕೇಕಿ;–ಹಾವಳಿ
ಮರುಕ ಯಾತನೆ ನರಬಲಿ
ತೊಗಲ ಮೈಯಲಿ, ನವಿರು ಮೂಡಲಿ
ರೋಮುಗರಗಸವಾಗಲಿ
ಬೆರಗಿನಿಂದಲಿ ವಿಶ್ವನಿಲ್ಲಲಿ ಎಮ್ಮ ಪೌರುಷ ಮೆರೆಯಲಿ!

—ಸೋಮತ್ತನಹಳ್ಳಿ ದಿವಾಕರ

---

## ನಾಡ ಹಗೆಯ ದಮನಕೆ

ಏಳಿ ಎದ್ದೇಳಿ ಭಾರತಾಂಬೆ ವೀರ ಪುತ್ರರೇ
ಕೂಗೆ ಕಹಳೆ ಮೊಳಗೆ ಭೇರಿ ಕೂಡಿಬನ್ನಿ ಧೀರರೇ
ಏಳಿ ಎದ್ದೇಳಿ ಏಳಿ ಎದ್ದೇಳಿ ಏಳಿ ಎದ್ದೇಳಿ

ಅಂದಿನಿಂದ ಹೆಮ್ಮೆಯಿಂದ ಮೆರೆವ ನಾಡನಿಂದಿಗೂ
ಮುಂದೆ ಕುಂದು ತಾರದಂತೆ ನಾವು ಮೆರೆಸಲೆಂದಿಗೂ।
ಮಿತ್ರದ್ರೋಹಿ ವೈರಿಧಾಳಿಯನ್ನೆ ನಾವು ಎದುರಿಸಲ್
ಶಾಂತಿದ್ರೋಹಿ ಶತ್ರುವನ್ನೆ ನಮ್ಮ ನೆಲೆಯಿಂದಟ್ಟಲು।
ಏಳಿ ಎದ್ದೇಳಿ ಏಳಿ ಎದ್ದೇಳಿ ಏಳಿ ಎದ್ದೇಳಿ

ಕರ್ಮಯೋಗಿ ದೇಹದಣಿಸಿ ಧನದ ದಾನಿಯಾಗು ನೀ
ಧರ್ಮಯೋಗಿ ಕೃಷಿಕ ನೀನು ಧಾನ್ಯ ದಾನಿಯಾಗು ನೀ
ಉಡಿಗೆ ತೊಡಿಗೆ ದ್ರವ್ಯ ದಾನ ನೀಡಿ ದೇಶಭಕ್ತರೆ
ನಾಡಿನೇಳ್ಗೆಗಾಗಿ ಅಮಿತ ಸ್ವಾರ್ಥ ತ್ಯಾಗಮಾಡಿರಿ,
ಏಳಿ ಎದ್ದೇಳಿ ಏಳಿ ಎದ್ದೇಳಿ ಏಳಿ ಎದ್ದೇಳಿ

ರಕ್ತನೀಡಿ ವಸ್ತ್ರನೀಡಿ ನಮ್ಮ ವೀರಯೋಧ ಬಲಕೆ
ಗುಪ್ತನಿಧಿಯ ಹೊನ್ನನೀಡಿ ನಮ್ಮ ಹಗೆಯ ಪ್ರಳಯಕೆ
ಮುದುಕ ಹರೆಯ ತಿರುಕ ಧನಿಕರೆಲ್ಲ ಬನ್ನಿ ಒಟ್ಟಿಗೆ

ಮಾತೆ ಹಸುಳೆ ಶ್ರಮಿಸಿರೆಲ್ಲ ಭಾರತಾಂಬೆಯೊಳಿತಿಗೆ
ಏಳಿ ಎದ್ದೇಳಿ ಏಳಿ ಎದ್ದೇಳಿ ಏಳಿ ಎದ್ದೇಳಿ
ಮಾತೃಭೂಮಿ ಭಕ್ತಿ ಉಕ್ಕೆ ನಮ್ಮ ನಾಡಿ ನರಗಳೋಳ್
ಶತ್ರುನಾಶ ಶಕ್ತಿ ಉಕ್ಕಿ ಹರಿಸೆ ನಮ್ಮ ಯೋಧರೋಳ್ |
ವೀರ ಕಹಳೆ ರಣದ ಭೇರಿ ಮೊಳಗೆ ನಮ್ಮ ನಾಡಲಿ
ವೀರರೇಳಿ ಹಗೆಯನಳಿಸೆ ನಮ್ಮ ನಾಡ ಗಡಿಯಲಿ |
ಏಳಿ ಎದ್ದೇಳಿ ಏಳಿ ಎದ್ದೇಳಿ ಏಳಿ ಎದ್ದೇಳಿ

ಮಡಿದರೆನಿತೋ ಶೂರರೆಲ್ಲ ನಮ್ಮ ನಾಡಿನೇಳ್ಗಿಗೆ
ಮಡಿದರೆನಿತೋ ಸ್ತ್ರೀಯರೆಲ್ಲ ನಮ್ಮ ನಾಡ ಹಿರಿಮೆಗೆ
ಮಾಡೆ ದುಷ್ಟ ವೈರಿ ದಮನ ತೊಡಿರಿ ವೀರ ಕಂಕಣ
ಹಾಡೆ ಭಾರತಾಂಬೆ ಕೀರ್ತಿಹಾಡಿ ವಿಜಯಘೋಷಣ
ಏಳಿ ಎದ್ದೇಳಿ ಏಳಿ ಎದ್ದೇಳಿ ಏಳಿ ಎದ್ದೇಳಿ

—ಮೋ. ಮಹದೇವಶಾಸ್ತ್ರಿ

---

## ಮೂಕನು ಕವಿತೆಯ ಹಾಡುವನು

ಝಾಡಿಸಿ ಒದೆದೋಡಿಸಿ ಸದೆಬಡಿದು ನಾವು
ಕಾಯ್ವೆವು |
ರೂಢಿಯೊಳಗೆ ಬಲು ಮೆರೆವ ಆಕ್ರಮಣವ ತಡೆವೆವು ||

ಅಂತಿಮಕಾಲದಿ ಅತಿಬುದ್ಧಿ ಬಂದಿದೆ-ವೈರಿಗೆ;
ಸಲ್ಲದು ನೋಡ |
ಚಿಂತೆಯಿಲ್ಲ ಬಲುಮೋಜಿನ ಕೆಲಸವ ಮಾಡಲು ಕೈಗೂಡ ||

ಪೀತವರ್ಣದಾಮಂದಿಗೆ ಪಿತ್ಥವು ನೆತ್ತಿಗೇರಿರಬಹುದು |
ಶ್ವೇತವರ್ಣೀಯರ ಪ್ರಭುತ್ವ ನೀಗಿದ ನಾವ್-
ಯಾರಿಗೆ ತಾನೇ ಬೀಳಹುದು ||

ಉಜ್ವಲವಾದ ಇತಿಹಾಸವು ತಾ ಕಣ್ಮುಂದೆಯೆ
ಬಂದಂತಿಹುದು |
ಪ್ರಜ್ವಲಿಸುತ್ತಿಹ ತಾರಗೆಯಂತದು ಮಿರಮಿರನೆS
ಮಿನುಗುತ್ತಿಹುದು ||

ಭಾರತ ಮಾತೆಯ ಬಂಧನ ಬಿಡಿಸಿದ
ಮಹಾತ್ಮಗಾಂಧಿಯ ನೆನೆಯೋಣ |
ಆರಿಸಿ ಬಂದಿಹ ನಾಯಕಮಣಿಗಳೆ, ಅದರಿಂ
ಸ್ಫೂರ್ತಿಯ ಪಡೆಯೋಣ ||

ಬಾಯೊಳಗೊಂದು, ಕರದಲಿ ಮತ್ತೊಂದು
ಮಾಡದೆ ದುಡಿದರೆ ಜಯವು |
ಬಾಯ ಬ್ರಹ್ಮದಲೆ ಕಾಲ ಕಳೆಯುತಲೆ ನಿಂದರೇನು
ಫಲವು ||

ಜ್ಞಾನವಿಲ್ಲದಾ ಚೀನ ಗೈದಿಹದೊಂದುಪಕಾರವ
ಮರೆಯದೆಯೆ |
ಊನವಿಲ್ಲದಲೆ ಸೇತು-ಹಿಮಾಚಲ
ವೊಂದುಗೂಡಿಹುದ ಸ್ಮರಿಸುತಲೆ ||

ಹೇಡಿಯು ತಾ ಕಲಿಯಾಗುವನು |
ಮೂಕನು ಕವಿತೆಯ ಹಾಡುವನು ||

ಮಾವೊ, ನೀ-ಸಿರಿಮಾವೊ ಸಲಹೆಯನ್ನು
ಚೌ-ತಾನು 'ಚವ್ಹಾಣ್'ರ ಪ್ರತಿಭೆಯನ್ನು;
ಗಣಿಸದೊಡೆ,
ಗಣಿಸಿಯೂ-ಮಲೆತಾದೊಡೆ-
ಬಿಡುವೆವೆ ?
ಮಿಡಿವೆವು;
ಹಿಡಿದು ಬಡಿವೆವು |
ಅದಕಾಗಿ ಧನ-ಕನಕ-ರಕುತ
ಮುಡುಪಿಡುವೆವು |
ಮುಡುಪಿಟ್ಟು ಸತತವೂ ಹೋರಾಡುವೆವು ||

—ಪುಲಿಕೇಶಿ
(ಪಂಡಿತ ಕೆ. ಪಿ. ಶಿವಲಿಂಗಯ್ಯ)

---

## ರಣಕೇಳಿ

ಹಿಮದ ಭೂಪ್ರದ ಮಧ್ಯೆ-ನಡೆದಿಹುದು ರುದ್ರಹೋಮ
ಸತ್ಯಮಿಥ್ಯದ ಸೋಲು ಗೆಲುವಿನ ಮಹಾ ಹೋಮ
ಚೇತನಗೊಳ್ಳಲಿ ನಿನ್ನಯ ರೋಮ ರೋಮ
ಕಾತರಗೊಳ್ಳಲಿ ವೈರಿಯ ದಹಿಸುವ ಕಾಮ || ೧ ||

ಮೊಳಗಿದೆ ಜಯಭೇರಿ ನಭವನು ಮೀರಿ
ಉಳಿದಿಹೆ ನೀನಿಲ್ಲಿಯೇ ಏಕೆಂದು
ಕಳುವಿನ ಮುನ್ನ ಎಣಿಕೆಯ ಮೀರಿ
ಬಾಳನು ಬಾಳಾಗಿಸಿಂದು ॥ ೨ ॥

ಭಾರತ ಬಂಜೆಯೆ? ಸಾವಿಗೆ ಅಂಜಿಕೆಯೆ?
ವೀರಗೆ ಕೊರತೆಯೆ? ಭಾರಕೆ ಭಯವೆ?
ವೈಮರೆವನು ತೊರೆದು ನಿನ್ನಿರವನು ಬಗೆದು
ಕೈಮರವನು ಹಿಡಿದು ಹೊರಡುವೆಯಾ? ॥ ೩ ॥

ಅಟ್ಟಬಿಡು ಸಂದೇಹ ಇಟ್ಟುಬಿಡು ದೇಹ
ಕೊಟ್ಟುಬಿಡು ಮತ್ತಿಟ್ಟಿರುವ ಹೊನ್ನನೆಲ್ಲಾ
ಕಟ್ಟಿಬಿಡು ಕಾಮ ಸುಟ್ಟುಬಿಡು ಮೋಹ
ಮಟ್ಟಹಾಕಲು ಚೀನಿಯರನೆಲ್ಲಾ ॥ ೪ ॥

ತೋಳಲಿ ಬಲವಿರೆ ಮನದಲಿ ಹುರುಪಿರೆ
ಕಾಳಗ ಮಾಡಲು ಅಂಜಿಕೆಯೇಕೆ?
ಬಾಳಲಿ ನೀತಿಯಿರೆ ಧೃತಿಯಲಿ ರಸವಿರೆ
ನಾಳೆಯೆಂದು ಕಾಯುವುದೇಕೆ? ॥ ೫ ॥

ಬಿಡು ಶೃಂಗಾರ ತೊಡು ಅಂಗಾರ
ಹಿಡಿ ಖಡ್ಗವ ಉಡು ಖಾಕಿಯನು
ನಡೆ ಸಮರಕೆ ಹೊಡೆ ವೈರಿಯ
ನಡೆ ಅಮರಕೆ ಪಡೆ ಸಗ್ಗವನು ॥ ೬ ॥

ಹೊಲದಲಿ ಬೆಳೆಯಿರೆ ಬಿಲದಲಿ ಕಾಳಿರೆ
ಕರದಲಿ ಹಿಡಿತವು ಏಕೆ?
ಗಿರಣಿ ತಿರುಗುತಿರೆ ಭರಣಿ ತುಂಬುತಿರೆ
ಭರತಿಮಾಡಲು ಬಳಲಿಕೆ ಏಕೆ? ॥ ೭ ॥

ನರವನೆ ಹೊಸೆದು ಎದೆಯನೆ ಬಸೆದು
ವರ ಭರಿತೆಯನು ಸಲಹಿಂದು
ಕರಿ ಕಾಲದಲಿ ವರ ದೇಹವಿದು
ಉರಿಯಲಿ ತಾಯ್ನಾಡಿಗೆಂದು ॥ ೮ ॥

ಶಾಂತಿಯ ನಾಡನು ಕಾಂತಿಯ ಬೀಡನು
ಕೆರಳಿಸಿದೆ ಚೀಣವು ಪಾಂಚಶೀಲವನು ಹೂಳಿ
ಭೀರುವನು ಬಿಟ್ಟು, ಶೌರ್ಯವನೆ ತೊಟ್ಟು
ಹಾರುತ ಬನ್ನಿ, ಆಡುವ ರಣಕೇಳಿ ॥ ೯ ॥

—ಕೆ. ಭೀಮರಾವ್

---

## ನಾಡಗೀತೆ

ಬಾಳಬಂಡಿಯ ಬಾಳನಡಿಗೆಯ ಭಾವನಾಕೃತಿ
ಬೇಡವೆ?
ಭವ್ಯನಾಡಿನ ಭವ್ಯದಾರಿಯ ಭಾರತಾಂಬೆಯ
ಚರಣವೆ!

ನಾಡಿನಗಲಕೆ ಹಬ್ಬುವಂತಾ ನಾಡಗೀತೆಯ ಹಾಡಿರೊ
ಬಾಳಬಂಧುರ ಹಾಡುಸುಂದರ ನಾಡ ಬಾಳನು ಅರಿಹಿರೊ

ನಮ್ಮ ನಾಡಿನ ಕ್ಷಾತ್ರದೀಕ್ಷೆಯ ಹೊತ್ತು ನಡೆದರು
ಧೀರರು
ನಾಡು ನಮ್ಮದು ಬಾಳು ನಮ್ಮದು
ಬಿಟ್ಟು ಹೊರಡಿರಿ ಎಂದರು – ಆಂಗ್ಲರ
ಬಿಟ್ಟು ಹೊರಡಿರಿ ಎಂದರು

ಮನದ ಆಸೆಯು ತೀರಲೆಂದು ದಾಸ್ಯಜೀವನ
ಅಳಿಯಲೆಂದು
ರಕ್ತ ಹರಿಸುತೆ ಕೋಡಿಯಲ್ಲಿ ತಿಲುಕವಿಟ್ಟರು ಮಗುವಿಗೆ

ಕಳೆದ ದಿನಗಳ ನೆನೆಹಿನಲ್ಲಿ ಇಂದು ನಾವು ಸ್ವತಂತ್ರರು
ಗಣತಂತ್ರ ರಾಷ್ಟ್ರ ಕಟ್ಟಿಕೊಂಡು
ಬಾಳದೀವಿಗೆ ಹಚ್ಚಿರುವೆವು

ನಮ್ಮ ನಾಡಿನ ಗಡಿಯ ಗೋಡೆಯ ಒಡೆಯುತಿಹರು
ದೂರ್ತರು
ಧರ್ಮಕರ್ಮವು ಲೇಶಮಾತ್ರವು ಇಲ್ಲದಾಗಿದೆ ಅವರಿಗೆ

ಶಾಂತಿಮಂತ್ರದ ನಮ್ಮ ನಾಡಿಗೆ ಜಗವೆ ಬೆಂಬಲ ಕೊಟ್ಟಿದೆ
ಶಾಂತಿದೂತರ ರಕ್ತದಾಳದಿ ಕ್ರಾಂತಿಮಂತ್ರ ತ್ವಳೆದಿದೆ

ಭಾರತೀಯರ ಕೆಣಕಿ ಧೂರ್ತರು ಕಾರಕಕ್ಕುತೆ ಬೀಳ್ವರು
ಅವರ ಕತ್ತಿಗೆ ಅವಕುತ್ತಿಗೆ ಆಹುತಿ ಆಗದೇ ಖಂಡಿತ?

ಭಾರತೀಯರ ಯೆದೆಯನಗಲಿಸಿ ಚಾಚಿ ಬನ್ನಿರಿ ಮುಂದಕೆ
ದೇಶಕಾಯುವ ಕಾಲ ಒದಗಿದೆ ನುಗ್ಗಿ ಬನ್ನಿರಿ ಮುಂದಕೆ
—ಬಾಳಬಂಡಿಯ

—ತಿರುಮಲೆ ಶ್ರೀನಿವಾಸ್

---

## ರಣಭೇರಿ

ಗುಡುಗುತಲಿ ಸಿಡಿಯುತಲಿ ಹೊಡೆಯಲೀ....ಜಯಭೇರಿ
ಮಿಂಚಿನೊಲು ಕಂಚಿನೊಲು ಬಾರಿಸಲಿ....ರಣಭೇರಿ

ಚೀನಿ ಎದೆಯು ಬಿರಿಯುವಂತೆ
ತಾಯಿ ನೆಲವ ಉಳಿಸುವಂತೆ
ಗುಪ್ತ ಶಕ್ತಿ ನೆನೆಯುವಂತೆ
ಜಡದ ತನುವು ಏಳುವಂತೆ
ದೈವಿ ಶಕ್ತಿ ತುಂಬುವಂತೆ (ಗುಡು....)

ದೇಶ ಸ್ಥೈರ್ಯ ಕುಗ್ಗದಂತೆ
ಸ್ಫೂರ್ತಿ ಗಂಗೆ ಹರಿಯುವಂತೆ
ದೇಶ ದೇಳ್ಗೆ ಜಗ್ಗದಂತೆ
ನಾಡು ನಾಡೆ ಏಳುವಂತೆ
ಅಮರ ಶಕ್ತಿ ತುಂಬುವಂತೆ (ಗುಡು....)

ಸಮರ ಕೆಂದು ಹೊರಡುವಂತೆ
ಗೀತೆ ಮಂತ್ರ ನುಡಿಸುವಂತೆ
ತನುವು ಮನವು ಕೂಡುವಂತೆ
ಸಮರ ರೋಷ ಉಕ್ಕುವಂತೆ
ತಾಯಿ ಕೂಗು ನೆನೆಯುವಂತೆ (ಗುಡು....)

'ನಾನು' 'ನೀನು' ಅಳಿಯುವಂತೆ
ಹೃದಯ ಕಳೆಯ ಕೀಳುವಂತೆ
ಮಾನ ಶೀಲ ಉಳಿಸುವಂತೆ
ನ್ಯಾಯ ಧರ್ಮ ಬೆಳಗುವಂತೆ
ವಿಜಯ ವಧುವ ವರಿಸುವಂತೆ (ಗುಡು....)

—"ಸುಶಿರಾ"

---

## ಭಾರತವನುಳಿಸು ಬಾ

ಭಾರತವನುಳಿಸು ಬಾ | ಶತೃಸಂಹರಿಸು ಬಾ
ಹರಸು ಬಾ ಮರೆಸು ಬಾ | ಮಹಾಮಾಯೆ ಬಾ
ಮಹಿಷಾಸುರಿಯೆ ನಿ ಬಾ | ಶತೃಮರ್ದಿನಿಯೆ ಬಾ
ಅಹಿತಕೋರುವ ಜನರ | ಕತ್ತರಿಸುವೆ ಬಾ ೧

ವೀರಮಾತೆಯರೆಲ್ಲ | ಜೋರಾಗಿ ಬರುತಿಹರು
ನಾರಿ ನಿಂತರೆ ಎದಿರು | ಶತೃ ತಾ ಪರಾರಿ
ನಾರಿ ಜನಕುಪಕಾರಿ | ಶತೃವಿಗೆs ಹೆಮ್ಮಾರಿ
ನಾರಿ ಕಂಡರೆ ವೈರಿ | ಸರಿವ ಹರಿದಾರಿ ೨

ಓ ಭದ್ರೆ ಓ ಕಾಳಿ | ಚಂಡಿ ಚಾಮುಂಡಿ
ಪ್ರಳಯಾಗ್ನಿ ಬಿರುಗಾಳಿ | ಬಿಸಿಗಾಳಿ ಬೀಸೆ
ಶತೃವೆಂ ಹೆಬ್ಬಿದಿರು | ಚಟಚಟನೆ ಉರಿದೆದ್ದು
ಹೆಸರೇಳೆ ಇನ್ನಿಲ್ಲ | ವೆಂದು ಬಿದ್ದಿಹರು ೩

ನಗುತಿಹಳು ಭಾರತಿಯು | ಹಗೆಯು ತಾನುರುಳಿಹನು
ಕೊರಗುತಲೆ ನಡುಗುತಲೆ | ಹಿಂದೋಡುತಿಹನು
ಹರಸು ತಾಯ್ ಕಲ್ಯಾಣಿ | ತಾಯ್ನಾಡ ಫಣಿವೇಣಿ
ಶ್ರೀವಾಣಿ ಸಿರಿ ವಾಣಿ | ಲೋಕ ಕಲ್ಯಾಣಿ ೪

ಕಿತ್ತೂರು ರಾಣಿ ಬಾ | ಮತ್ತೆ ನೀನೆದ್ದು ಬಾ
ಝಾನ್ಸಿ ಮಹಾರಾಣಿ ಬಾ | ಸಂಚಿ ಹೊನ್ನೆ ಬಾ
ವೀರ ಪನ್ನೆಯೆ ನೀನು | ಧೀರ ಪದ್ಮಿನಿ ನೀನು
ಉತ್ತರೆಯೆ ನೀನು ಬಾ | ಕಸ್ತೂರಿ ನೀ ಬಾ ೫

ಹಿಮ್ಮೆಟ್ಟೊ ಹೇಡಿಗಳ | ಸೋಮಾರಿ ಪೀಡೆಗಳ
ಸುಮ್ಮನೆ ಬಿಡಬೇಡ | ಮಹತಾಯಿ ನೀನು
ಸಿರಿಗೆ ಹಿರಿದಾನವನು | ವಿದ್ಯೆಗುದ್ಯೋಗವನು
ಹರಿಜನರುದ್ಧಾರವನು | ಮಾಡು ಬಾ ತಾಯೆ ೬

ಭೂತಾಯಿ ಕಂದನೇ | ದೇಶದಾ ಚಂದವೇ
ಅಂದದಾ ಚೆಂದದಾ | ಮಕರಂದನೆ ಬಾ
ಆವಾರ ಈವಾರ | ಎಲ್ಲ ಮಂಗಳವಾರ
ಶತೃವಿನ ಸಂಹಾರ | ಬಾ ಭರತ ವೀರ ೭

ಆ ಭಾಷೆ ಈ ಭಾಷೆ | ಆ ನೆಲವು ಈ ಜಲವು
ಅಂತರ ಪಿಶಾಚಿಯಾ | ಆತಂಕ ಬಿಡಿಸು
ಜಾತಿ ಗುಂಪುಗಳನ್ನು | ನಾ ಮೇಲು ನೀ ಕೀಳು
ಎಂಬ ಹಂಕಾರವನು | ಬಾ ತಾಯೆ ಬಿಡಿಸು ೮

ಬಿಂಕ ಬಿನ್ನಣಕೊಂಕು | ಅಂಕೆ ಇಲ್ಲದ ಮಾತು
ಶಂಕೆಲಿಹ ಮನುಜರನು | ಮಂಕವಿನ ಬೇಡ
ಮೂರ್ಖಜಾಣನು ಅವ | ಅವನೆ ಹಿತಶತೃವೂ
ಗೋರ್ಕಲ್ಲ ಮೇಲವ | ನ ಬಡಿ ಬಿಡಬೇಡ ೯

ಕೂಡಿಟ್ಟ ಹುಗಿದಿಟ್ಟ | ಹಣವೆ ನೀನೆದ್ದು ಬಾ
ಮುಚ್ಚಿಟ್ಟ ಮಡಿಸಿಟ್ಟ | ಬಟ್ಟೆ ನೀ ಬಾರೈ
ಹೊನ್ನುಹೊಳೆ ನೀನು ಬಾ | ಧಾನ್ಯಬೆಳೆ ಚಿಗುರಿ ಬಾ
ಕಾರ್ಖಾನೆ ತುಂಬಿ ಬಾ | ಒಟ್ಟಾಗಿ ಬನ್ನಿರೈ ೧೦

ತರುಲತೆಯಿ ಹೂಗಾಳಿ | ಗಿಡಗೆಂಟಿ ಬನ್ನಿರೈ
ಗಿಳಿವಿಂಡೆ ಕೋಗಿಲೆಯೆ | ನವಿಲಂಚೆ ಬಾರೈ
ಜಿಂಕೆಮೊಲ ಮರಿದುಂಬಿ | ಹುರಿದುಂಬಿ ಬನ್ನಿರೈ
ಮಂಕುತನವನು ಬಿಡಿಸಿ | ಡೊಂಕನ್ನು ತಿದ್ದಿ ೧೧

ಸರಕಾರ ಸಹಕಾರ | ಎಲ್ಲವೂ ಒಂದೆನ್ನಿ
ಒಮ್ಮತವು ಒಗ್ಗಟ್ಟು | ನಮಗೆ ಬೇಕೆನ್ನಿ
ಸುಮ್ಮನಿರೆ ಬೊಮ್ಮತಾ | ಎಮ್ಮನ್ನು ಅವ ಮೆಚ್ಚ
ಅಮ್ಮ ನಿನ್ನನು ನಾವು | ಎಂದಿಗೂ ಬಿಡೆವು ೧೨

**—ಎಸ್. ಆರ್. ನಾಗರಾಜರಾವ್**

---

## ಉದ್ಬೋಧನ

ಭಾರತೀಯ ವೀರಯುವಕರೆಲ್ಲ ಕೂಡಿಬನ್ನಿ |
ಏರಿಬರುವ ವೈರಿಜನರ ದೂರ ದೂಡಬನ್ನಿ ||

ಸತ್ಯ, ಶಾಂತಿ, ನ್ಯಾಯ, ಧರ್ಮವೆಲ್ಲವನ್ನು ಮರೆಯುತಾ !
ನಿತ್ಯವೂ ಸ್ವಾರ್ಥವನ್ನೆ ತಮ್ಮ ಧ್ಯೇಯವೆನ್ನುತಾ !
ವಿಶ್ವದಲ್ಲೆ ಕ್ರಾಂತಿಯನ್ನು ಬಯಸಿ ಮುಂದುವರೆಯುತಾ !
ರಾಕ್ಷಸೀ ಪ್ರವೃತ್ತಿಯಿಂದ ನುಗ್ಗುತಿಹರು ಸಂತತಾ !

ಮೇರೆಮೀರಿ ಬರುತಲಿರುವ ಕ್ರೂರಿಗಳ ನಾಶಕೆ
ಏರು ಜವ್ವನಿಗರೆ ನಿಮ್ಮ ಶೌರ್ಯಧೈರ್ಯ ತೇಜಕೆ
ಕೂರಸಿಯು, ಕೋವಿಗಳನು ಹಿರಿದುಬನ್ನಿ ಯುದ್ಧಕೆ
ನೂರು ನೂರು ಕೋಟಿ ಸಂಖ್ಯೆಯಲ್ಲಿ ಜಗದ ಉದ್ಧಕೆ

ಜಾತಿ-ಪಂಥ, ಭೇದ-ಭಾವಗಳನು ಬಿಟ್ಟುಬನ್ನೀ,
ಧರ್ಮ, ಕರ್ಮ, ದೇಶ, ಭಾಷೆ ಜಗಳ ತೊರೆದುಬನ್ನೀ,
ವ್ಯಕ್ತಿ ಸ್ವಾರ್ಥವನ್ನು ದೂರ ಒತ್ತಿ ಬೇಗಬನ್ನೀ,
ಶಕ್ತಿ ಸಾಹಸಗಳ ತೋರೆ ಸಮಯವಿದೂ ಬನ್ನೀ.

ಮಾತೆಯ ಸಿರಿಮುಡಿಯನೀಗ ಚೀಣೆ ದುರುಳರೆಳೆವರು
ನೀತಿಯನ್ನು ಬಿಟ್ಟು ಪಂಚಶೀಲವನ್ನು ಹಳಿವರು
ಗಡಿಯ ಹೆಸರ ಹೇಳಿ ತಮ್ಮ ಅಡಿಯ ಮುಂದಕಿಡುವರು
ಕಡುಗಲಿಗಲಿಗಳ ಎದುರಿನಲ್ಲಿ ಒಂದು ಚಣವು ತಡೆಯರು

ಭೂಮಿತಾಯ ಋಣವ ತೀರಿಸುವ ಸುಸಂಧಿ ಬಂದಿದೆ
ಸಾಮ, ದಾನ, ಮಾನವೆಲ್ಲ ನಿಷ್ಪ್ರಯೋಜ್ಯವಾಗಿದೆ,
ಕರದಿ ಕೈದುಗಳನು ಹಿರಿದು ಭರದಿ ಮುಂದೆ ನುಗ್ಗಿರಿ,
ಬರಸಿಡಿಲು ಎರಗುವಂತೆ ಅರಿಗಳನ್ನು ಒಕ್ಕಿರಿ.

ಎಲ್ಲಿ ದೇವತಾತ್ಮವಾದ ಅಚಲಗಿರಿಯದಿದ್ದಿತೋ !
ಎಲ್ಲಿ ಗಂಗೆ ಸರಸತಿಯರ ಪಾವನ ಜಲ ಉಕ್ಕಿತೋ !
ಎಲ್ಲಿ ಪ್ರಕೃತಿ ತನ್ನ ಲೀಲೆಗಾಗಿ ಒಮ್ಮೆ ನಕ್ಕಿತೋ !
ಅಲ್ಲೆ ಇಂದು ದುಷ್ಟಶಕ್ತಿ ನಗ್ನನೃತ್ಯ ನಡೆಸಿದೇ ! !

ನಿಲ್ಲದೇ ಬೇಗದಿಂದ ಹಿಮದ ಶಿಖರವೇರಿರಿ !
ಎಲ್ಲರೊಂದೆಮನದಿ ಕಲೆತು ರಣದಿ ಕಾದಾಡಿರಿ !
ಎಲ್ಲಮೀರಿ ಹರ್ಷದಿಂದ "ಜಯವು ನಮ್ಮದೆನ್ನಿರಿ !"
**"ಗೆಲ್ಗೆ ಭಾರತಾಂಬೆ"** ಎಂದು ಹರ್ಷಘೋಷವೆಸಗಿರಿ ! !

**—ವಿ. ಎಂ. ಶರ್ಮಾ**

---

## ದೇಶರಕ್ಷಣೆ

ಬನ್ನಿ ಹಿರಿಯರೆ ಬನ್ನಿ ಕಿರಿಯರೆ
ಬನ್ನಿ ಎನ್ ಸನ್ಮಿತ್ರರೇ
ಭಾರತಾಂಬೆಯ ಪುತ್ರರೇ.

ಪಡೆದು ಸ್ವಾತಂತ್ರ್ಯವನು ಭಾರತ
ಗಳಿಸಿದೆಲ್ಲೆಡೆ ಕೀರ್ತಿಯ
ಪಡೆದ ಸ್ವಾತಂತ್ರ್ಯವನು ರಕ್ಷಿಸಿ
ಉಳಿಸಿ ಅದರಾ ಹಿರಿಮೆಯ—ಭಾರತಾಂಬೆಯ ಪುತ್ರರೆ.

ಜಾತಿಮತಗಳ ಹಾಳುಜಗಳವ
ಇಂದೆ ದೂರವ ಮಾಡುವ
ಭಾರತೀಯರು ಒಂದು ಎನ್ನುತ
ಮೈತ್ರಿಯಿಂದಲೆ ದುಡಿಯುವ—ಭಾರತಾಂಬೆಯ ಪುತ್ರರೆ.

ಭಾಷೆ ಭೇದವ ಪ್ರಾಂತ್ಯ ಭೇದಗ-
ಳೊಂದು ಮನದಲಿ ಎಣಿಸದೆ
ಒಂದೆ ತಾಯಿಯ ಮಕ್ಕಳೆನ್ನುತ
ಬನ್ನಿ ಬಾಳುವ ಕಾಯದೆ—ಭಾರತಾಂಬೆಯ ಪುತ್ರರೆ.

ಹೊರಗಿನ ಶತ್ರುಗಳಡಿ ಇಡೆ ದೇಶದಿ
ಎಂದೆಂದವರನು ಬಿಡಬೇಡಿ
ಒಂದಡಿ ಜಾಗವ ಕೊಡಬೇಡಿ
ಇತರರು ದೇಶವನಾಕ್ರಮಿಸಲು ಬರೆ
ಸಾಹಸ ಧೈರ್ಯದಲೊಡಗೂಡಿ
ಹೋರಾಡವರನು ಹೊರದೂಡಿ

ನಮ್ ನಮ್ಮಗಳಲಿ ಏನೊಂದೆ ಇರಲಿ ಎಲ್ಲವನು
ದೂರವಮಾಡಿ
ಎಂದೆಂದು ನಾವು ಒಂದೆಂದು ತಿಳಿದು ಒಗ್ಗಟ್ಟಿನಿಂದ ಕೂಡಿ
ಸ್ವಾತಂತ್ರ್ಯಕೆಂದು ಸ್ವಾರ್ಥವನು ತೊರೆದು ಮಡಿದವರ
ಮನದಿ ನೆನೆದು
ಹೋರಾಡಿ ಬಿಡದೆ ಸ್ವಾತಂತ್ರ್ಯವನ್ನು ಉಳಿಸೋಣ
ಬನ್ನಿ ಇಂದು.

ಈ ದೇಶದುಳಿವು ಅಂತವರ ಅಳಿವು ಇರಲೆಮ್ಮ ಮೇಲೆ
ಬಿಡದೆ
ನಿರ್ವೀರ್ಯರಾಗಿ ನಿಸ್ತೇಜರಾಗಿ ಬಾಳುವುದು ಬೇಡ ಮುಂದೆ.

ಎಮ್ಮಲೈಕ್ಯತೆಯ ಗಳಿಸಿ
ದ್ವೇಷಭಾವನೆಯ ತ್ಯಜಿಸಿ
ವೀರತ್ವವನ್ನು ಗಳಿಸಿ
ದೇಶಾಭಿಮಾನ ಬೆಳೆಸಿ.

ವಿಶ್ವದಲೆ ಇಂದು ಅತಿಶಕ್ತರೆಂದು ತೋರಿಸುವ ಬನ್ನಿ
ಇಂದು

ನಮ್ಮ ದೇಶಕೆ ದುಡಿವೆವು
ದುಡಿತದಿಂದಲೆ ಮಡಿವೆವು

ಐಕ್ಯಮತ್ಯದಿ ಎಂದು ಬಿಡದಲೆ
ಕೂಡಿ ಕುಗ್ಗದೆ ಧೈರ್ಯದಿ

ತೊರೆದು ಎಲ್ಲರು ಸ್ವಾರ್ಥವ
ಮಾಡಿ ಇಂದೇ ಸತ್ಯವ

ಏನೆ ಬಂದರು ದೇಶ ರಕ್ಷಿಪೆ-
ವೆಂದು ನುಡಿಯಿರಿ ಸತ್ರ್ವದಿ.
ಭಾರತಾಂಭೆಯ ಪುತ್ರರೆ

ಬನ್ನಿ ಹಿರಿಯರೆ ಬನ್ನಿ ಕಿರಿಯರೆ
ಬನ್ನಿ ಎನ್ ಸನ್ಮಿತ್ರರೇ
ಭಾರತಾಂಬೆಯ ಪುತ್ರರೇ

**—ಆಚಾರ್ಯ ವಿಠ್ಠಲ್**

---

## ಅಗ್ನಿಪರ್ವತವಾಗು

ಅಗ್ನಿಪರ್ವತವಾಗು ಉಗುಳುಗುಳು ಕೆಂಡವನು
ನೋಡದೋ ನಿನ್ನೆದುರು ಕವಿಯುತಿದೆ ರಿಪುಬಲವು
ಹಿರಿ ನಿನ್ನ ಕಡುಗವನು ಬೀಸದನು ಗುರಿಯತ್ತ
ಕರೆ ನಿನ್ನ ಪರಿಜನರ ಮಳೆಗರೆಯುತಸ್ತ್ರಗಳ ||

ಇದು ನಿನ್ನ ಹೆತ್ತನೆಲ ಮುಕ್ಕೆಡೆಗು ಪುಣ್ಯಜಲ
ಭಾರತಿಯ ಮಡಿಲೊಳಗೆ ನೊಲೆಯುಂಡ ವೀರಭಟ
ಚಿಮ್ಮು ರಕುತವ ನೆಲಕೆ ಭುಜವನೊದರಿಸಿ ಏಳು
ಅದುವೀಗ ಕರ್ತವ್ಯ ನುಗ್ಗು ಬವರಕೆ ವೀರ ||

ಅಗೊ ನೋಡು ಅರಿಪಡೆಯು ನುಗ್ಗುತಿದೆ ಎಲ್ಲೆಯೊಳು
ಓಡಲ್ಲಿ ತಡೆಯಲ್ಲಿ ತೊಡೆಯವರ ಪಡೆಯ
ಭಾರತಿಗೆ ಜಯವೆಂದು ಇದು ನಮ್ಮ ನೆಲವೆಂದು
ನುಗ್ಗು ರಭಸದಿ ಮುಂದೆ ದೈತ್ಯರನು ಸದೆಯೆ ||

ಯುದ್ಧವಿದು ಹೊಸತಲ್ಲ ಭಾರತಿಯ ಸುತ ನಿನಗೆ
ಕುರುಕುಲವ ತರಿದೊಟ್ಟ ನಿಂತನೆಲ ಗಂಡು ಛಲ
ಭೀಮು ನಮ್ಮವನಿದ್ದ ಬಲಹನುಮನವನಿದ್ದ
ನೆನೆಯವರ ಸೋದರರ ನುಗ್ಗು ಮುಂದಕೆ ಶೂರ ||

ಬಿಟ್ಟುಕೊಡದಿರು ಹಗೆಗೆ ಹುಟ್ಟಿದೀ ನೆಲವನ್ನು
ಕೆಡಹಿ ರಿಪುಗಳ ಶಿರವ ಕೊಚ್ಚಿ ಕೈಯೆತ್ತು
ಕವಿಯಿರೈ ಸೋದರರ ಕೆಡವಿರೈ ವೈರಿಕುಲ
ಕರೆಯಿರೈ ಮಾರಿಯನು ರಣದೂಟಕೀಗ ||

ಮೊಳಗುತಿದೆ ಕಹಳೆಯದೊ ಭಾರತಿಯ ವೀರ ಕರೆ
ಸಾಲಿಟ್ಟು ಬನ್ನಿರೈ ಗೆಲುವಿನೀಹಬ್ಬಕೆ
ನುಂಗಿ ಶತೃವ ತೊಡೆದು ಬಂದ ಕುತ್ತವ ಕಳೆದು
ತೋರಿ ನಿಮ್ಮಭಿಮಾನವನು ಪಟುಭಟರೆ ನುಗ್ಗಿ ||

ಬರಿಯ ಮಾತಿದು ಸಾಕು ಕೃತಿಗೀಗ ಮುಂದಾಗು
ಜವ್ವನದ ಭಟರೀಗ ಮೈದೋರಿ ಬನ್ನಿ
ಮುತ್ತಿ ಸುತ್ತಲು ನಿಂತು ಶತೃವನು ಕಡಿಕಡಿದು
ಕಲಿಭೀಮನಂತಾಗಿ ಕುಡಿಯಿರೈ ರಕುತ ||

ಅಗ್ನಿಪರ್ವತವಾಗು ರೋಷದಲಿ ಕಿಡಿಯುಗುಳು
ಕಾಲಭೈರವನಾಗು ಪ್ರಳಕಾಲವಿದು
ತರಿದೊಟ್ಟು ವೈರಿಗಳ ಕರೆನಿನ್ನ ಸೋದರರ
ಭಾರತಿಗೆ ಜಯವೆನುತ ಕಾಳಗಕೆ ಹೊರಡು ||

—ವೈ. ಕೆ. ತಿಮ್ಮರಸಯ್ಯ

---

## ರಣ-ಕಾಳಿ

ಗಡಿನಾಡಿನ ಮೇಲಾಗಿದೆ ಕೆಡು ಚೀನದ ಧಾಳಿ |
ಘುಡುಘುಡಿಸಲಿ ರಣಕಾಳಿಯು ಸಲೆ ರೌದ್ರವ ತಾಳಿ ||ಪ||

ರಣ-ಯೋಧರು ಮುನ್ನುಗ್ಗಲಿ ನಿಮ್ಮ ಕಾಯಲಿ ಈಶ|
ಅಣುಗರ ಕಣ-ಕಣದಿಂ ಹೊರಹೊಮ್ಮಲಿ ಆವೇಶ||

ತೌರೂರಿನ ಗಂಡಾಂತರ ಸಹಿಪಳೆ ಕುಲನಾರಿ?
ಗೌರೀಸತಿ ಅತಿಕೋಪದಿ ತಾನಾಗಲಿ ಮಾರಿ||

ಗಿರಿಸುತೆಯಿಂ ಪಶುಪತಿಯು ವ್ಯಥೆ-ಕಥೆಯನು ಕೇಳಿ
ಹರ-ಶೂಲಿಯು ಉರಿದೇಳಲಿ ಕಡು ರೌದ್ರವ ತಾಳಿ ||

ಗಿರಿರಾಜನ ವರಸುತೆಯು ಇಂದಾಗಲಿ ಕಾಳಿ |
ಶಿವ-ಶಿವೆಯರ ನಿಡುಕೋಪದ ಭರ ತಾಂಡವ ಕೇಳಿ ||

ಗಿರಿ-ಝರಿಗಳ ನದಿ-ನದಗಳ ಘನ-ನಿನದದ ತಾನ |
ಗಿರಿರಾಜನ ರಣ-ನರ್ತನಕನುವಾಗಿದೆ ಗಾನ ||

ಶಂಕರನೋಂಕಾರವೆ ಧನುವಿನ ಟೇಂಕಾರ |
ಕಿಂಕರ ರುದ್ರಗಣ ಮಾಡಲಿ ಹುಂಕಾರ |
ಢಮರುಗ ಢಂ ಯೆನಲು, ನಂದಿಯ ಡೋಲುಲಿಯೆ-
ಎನಿತೆನಿತೋ ದೇವತೆಗಳು ಹೆಸರಿದೆ ಎಂಥೆಂಥಾ !
ಅನಿತನಿತೂ ದೇವತೆಗಳ ಕಿಂಕರರೆಂಥೆಂಥಾ !-
ಅವರೆಲ್ಲರ ಬಳಿಯಿಟ್ಟಿಹ ವಿಧವಿಧದಾಯುಧವ
ತೆಗೆದೆಸಲಿ ನುಚ್ಚಾಗಲಿ ಅರಿಸೇನೆಯ ಜನವು |

ಗಡಿನಾಡಿನ ಮೇಲಾಗಿದೆ ಕೆಡು ಚೀನದ ಧಾಳಿ |
ಘುಡುಘುಡಿಸಲಿ ರಣ-ಕಾಳಿಯು
ಸಲೆ ರೌದ್ರವ ತಾಳಿ || ಪ ||

(೨)

ಧರ್ಮವೆಂಬ ಹಿರಿಯ ಅಸ್ತ್ರಕಿರುವುದೆರಡು ತುದಿಗಳು |
ಎರಡು ತುದಿಗೂ ಹರಿಯುತಿದೆ ಅಮೃತ-ವಿಷದ
ಹೊಳೆಗಳು ||

ಒಂದು ತುದಿಯ ಕರುಣೆ-ಶಾಂತಿ-ಅಮೃತದಲ್ಲಿ ಅದ್ದಿದೆ
ಅಭಯವನ್ನೆ ತಳೆದಿದೆ |
ಉಭಯಕ್ಷೇಮ ವರಸಿದೆ |

ಅಶೋಕ ಬುದ್ಧ ಪಾರ್ಶ್ವನಾಥ ಗಾಂಧಿತಾತರೊಲವಿದೆ |
ಒಂದು ಬದಿಯ ಕ್ಷಾತ್ರ-ಶೌರ್ಯ-ರಕ್ತದಲ್ಲಿ ತಿದ್ದಿದೆ |
ಕ್ರಾಂತಿಕಹಳೆಯೂದಿದೆ |
ಹೇಡಿತನವ ಹಳಿದಿದೆ ||

ವೀರಪಾರ್ಥಗೊರೆದ ಗೀತೆ ಯುದ್ಧಗೀತೆಯಾಗಿದೆ |
ಅರಿಯ-ಕರಿಯ ಸ್ವಪ್ನ-ಸಿಂಹ, ಸಿಂಹ-ರವ-ನೃಸಿಂಹರ,
ಶಕದಪುರುಷ ಶಕ್ತಿಶಾಲಿ, ಶಾಲಿವಾಹನಾದ್ಯರ
ಅನಂಗಪಾಲ ಆಂಭಿ ರಣs-ಜೀತಸಿಂಗ ಹೈದರ
ಅಸಂಖ್ಯಧೀರ ವೀರರ ಅದೃಶ್ಯ ಹರಕೆ ಬಲವಿದೆ |

ಆದಿಕವಿಯ ಮಹಾಕಾವ್ಯ ಧರ್ಮಯುದ್ಧಕಾದ
ವಿಜಯ,
ವೇದವ್ಯಾಸ ಭಣಿತ 'ಜಯ', ವಿಧರ್ಮಿಗಾದ
ವಿಕಟ-ಕ್ಷಯ.

ಇತಿಹಾಸದ ಗತವೈಭವ ಸ್ಮೃತಿಗೊಯ್ವುದು ಲಕ್ಷ |
ಅತಿಸಾಸದ ರಣಯೋಧರ ಅಸ್ತಿತ್ವಕೆ ಸಾಕ್ಷ್ಯ ||

ಹಿಮಗಿರಿ ಮೇಲಿಹ ಹಿಮ ಕರಗಿಸಲಾತಾಪ |
ಧರ್ಮಮಾರ್ಗದಿ ಮುಂಬರಿಯುವ ಭಾರತ ಸಂತಾಪ |
ನಮ್ಮ ಯೋಧರ ಕರ್ಮವೀರರ ಧರ್ಮಯುದ್ಧಪ್ರತಾಪ |
ಮರ್ಮಘಾತಕ ಕೆಂಪು ಚೀಣಕೆ ಆಗಲಿ ಹೃತ್ತಾಪ |
ಹಿಮಗಿರಿಯೊಳು ತಪಗೈವರ ಋಷಿವರ್ಯರ ಶಾಪ |
ಗಿರಿಯೊಳಗಿನ ಹಿರಿಗುಹೆಗಳಿಂದೇಳಲಿ ಬಿರುಗಾಳಿ |
ಘುಡುಘುಡಿಸಲಿ ರಣಕಾಳಿಯು ಸಲೆ ರೌದ್ರವ ತಾಳಿ ||

(೩)

ನರಬಲಿಗೊಲಿಯುವ ಎಲೆ ಕಲ್ಕತ್ತೆಯ ಕಾಳಿ |
ಚಾಮುಂಡಿಯ ಬೆಟ್ಟದಲಿಹ ಮೈಸೂರಿನ ಕಾಳಿ ||

ಪ್ರತಿ ಹಳ್ಳಿಯ ಜನಮನದಲಿ ಹುದುಗಿಹ ರೌದ್ರಾಳಿ।
ನೀನೀಗಲೆ ಅಣುಬಾಂಬಿಗೆ ಪಡಿ-ಶಕ್ತಿಯ ತಾಳು
ಚೀನದ ಮಹಿಷಾಸುರನ ತಡಮಾಡದೆ ಹೂಳು॥

ಜನಜಲಧಿಯ ಮೇಲ್ಬೀಸಿದೆ ಧಾಳಿಯ ಬಿರುಗಾಳಿ।
ಮನಮನದಲಿ ರಾಷ್ಟ್ರೀಯತೆ ಅಲೆಗಳ ವೈಹಾಳಿ।

ಮೇಲ್ನೋಟಕೆ ಬಲುಶಾಂತವು ಆಡಿಯೊಳು ಬಡಬಾಗ್ನಿ।
“ದ್ವಾಪರಯುಗ ಕಲಿಭೀಮನು, ತ್ರೇತೆಯ ಹನುಮಂತ
ಕಲಿಯುಗದಲಿ ಕಲಿಯಾಗವತರಿಸಲಿ”-ಎಂದು
ಝಾನ್ಸಿಯ ರಣರಂಗದಿ ಘಳಹರವನು ಪಿಡಿದವಳ,
ಕಿತ್ತೂರಿನ ಚೆನ್ನಮ್ಮನ, ಓಬವ್ವೆಯ, ಪದುಮಿನಿಯ
ಸಂತತಿಯಲಿ ಜನಿಸಿರುವ ಬಸುರಿಯರದೊ ಉಸುರಿಹರು
ಹರಕೆಯನೇ ಹೊತ್ತಿಹರು
ಪಣವನ್ನೇ ತೆತ್ತಿಹರು।
ಊರ್ಮುಂದಿನ ಹನುಮಂತನ ಪಾದವನೆ ಒತ್ತಿಹರು।

ಗಡಿನಾಡಿನ ಮೇಲಾಗಿದೆ ಕೆಡು ಚೀನದ ಧಾಳಿ।
ಘುಡುಘುಡಿಸಲಿ ರಣಕಾಳಿಯು ಸಲೆ ರೌದ್ರವ ತಾಳಿ॥

(೪)

ನಮ್ಮ ಸೈನ್ಯ ಹೆಜ್ಜೆಯಿಡಲು ಕಾಲಿನಡಿಯ ಹಿಮದ ಗೆಡ್ಡೆ
ಪದಾಘಾತ-ಜನಿತ-ಶಾಖದಿಂದ ಕರಗಿಹೋಗಲಿ।
ಪದದ ಧಾಳಿಯಿಂದ ಧೂಳಿ ಬೆಟ್ಟವಾಗಿ ಏಳಲಿ।
ಧೂಳಿ ಬೆಟ್ಟ ಮೇಲಕೆದ್ದು ಹಿಮಾಲಯವ ಮುಸುಕಲಿ।
ದೇವಲೋಕಕಬ್ಬಲಿ

ಶಿಖರ-ಶಿಬಿರದಲ್ಲಿ ತಪವಗೈಯ್ಯುತಿರುವ ಸ್ಥಾಣುವ
ಪ್ರಖರ-ಧೂಳಿಯೆಬ್ಬಿಸಲು, ಶೂಲಿ ಕೋಪಗೊಳ್ಳಲಿ
ಶೃಂಗವೆಂಬ ನಿಶಿತ ಶೂಲದಿಂದ ಮೇಘ ಬಗೆಯಲಿ
ಕಾಲರುದ್ರ ಭದ್ರರೂಪ ವೀರಭದ್ರನಾಗಲಿ।
ಫಾಲನೇತ್ರ ತೆರೆದು ನಿಂತು ಅಟ್ಟಹಾಸಗೈಯ್ಯಲಿ।
ಇಂದ್ರ ವಜ್ರ ಸಿಡಿಸಲಿ
ಸಾಂದ್ರಮೇಘ ಕರಗಲಿ

ರತ್ನಗರ್ಭೆಯೆಂಬ ಪೃಥಿವಿ ಅಗ್ನಿಗರ್ಭೆಯಾಗಲಿ।
ಅಗ್ನಿಗರ್ಭದಿಂದ ಕಾದ ಕರ್ಬುನದ್ರವವುಕ್ಕಲಿ।
ಆಗಸದಲಿ ಆಮ್ಲ ಜನಕ ಸಿಡಿದು ಸ್ಫೋಟವಾಗಲಿ।
ಸ್ಫೋಟದಿಂದ ಸಪ್ತದ್ವೀಪ ತಪ್ತವಾಗಿ ಹೋಗಲಿ।

ಸಮುದ್ರಕ್ಷುದ್ರ ಅಲೆಗಳೆಲ್ಲ ದಕ್ಷ-ಯಕ್ಷವಾಗಲಿ।
ಅಧರ್ಮಪಕ್ಷ-ಶತ್ರುಲಕ್ಷ ದಕ್ಷ-ಯಜ್ಞವಾಗಲಿ।
ಅಟ್ಟಹಾಸವನ್ನು ಕಂಡು ಬೆಟ್ಟವಾಯ್ತು ಕಡುಗಲಿ-
ರೌದ್ರ-ರಾಗ, ಪ್ರಳಯ-ತಾಳ—ಮೇಳ-ಗಾನ ಮೊಳಗಲಿ

ತಕಿಟ-ತಕಿಟ-ತಕಿಟ ಎಂಬ-ಭವ-ತಾಂಡವ-ತಾಳಕೆ
ಪ್ರಸಿದ್ಧ-ಸಿದ್ಧ-ಕಿಂಪುರುಷರ ರುದ್ರ-ಗೀತ ಮೇಳಕೆ
ಹಿಮಾಲಯದ ಪಾದದಿಂದ ಹರಿಯುತಿರುವ ನದಿಗಳ,
ಗಂಗೆ ಯಮುನೆ ತಥಾ ಬ್ರಹ್ಮಪುತ್ರ ಪಂಚ ನದಿಗಳ
ಹೆಜ್ಜೆ-ಹೆಜ್ಜೆ ಮುಂದಕಿಡೆ ಕಾಲಂದುಗೆ ಸಪ್ಪಳ॥

ನಮ್ಮ ಯುಕುತಿ ನಮ್ಮ ಶಕುತಿ ದೇಶಕಾಗಿ ಅರ್ಪಣ
ನಮ್ಮ ತನು ನಮ್ಮ ಧನ ಜನಕೆ ಸಮಾರಾಧನ
ಪಂಚಪ್ರಾಣ ಜನಿತತ್ರಾಣ ಗಣಿಸುವೆನಕಿಂಚನ
ಸಂಚಿತ ಬಲುಧನವನಿಟ್ಟು ಮಾಡೆವಾತ್ಮವಂಚನ

ಭಾರತ ಭೂ-ಭಾಗದ ಮೇಲಾಗಿದೆ ಧಾಳಿ।
ಘುಡುಘುಡಿಸಲಿ ರಣಕಾಳಿಯು ಸಲೆ ರೌದ್ರವ ತಾಳಿ॥

(೫)

ಪ್ರಾಂತ-ಪ್ರಾಂತ್ಯದ ಜನದ ಮಧ್ಯೆ
ಜಗಳ-ಜಂಜಡವಳಿಯಲಿ-
ತೆಲುಗು ಕನ್ನಡ ತಮಿಳು ಜನ ಮಲೆಯಾಳ
ಪ್ರಾಂತದ ಜನರಲಿ
ಹಿಂದಿ ಉರ್ದೂ ಬಲ್ಲವರು ಕಾಶ್ಮೀರಿ ಪಂಜಾಬಿಗಳಲಿ
ಒಡಿಯ ಅಸ್ಸಾಮಿಗಳು ಬೆರೆಯಲಿ ನೆರೆಯ ಬಂಗಾಳಿಗಳಲಿ
ಗುಜರಾತಿಗಳು ಮಹರಾಷ್ಟ್ರರಲಿ ತಾನೈಕ್ಯಭಾವನೆ
ಬೆಳೆಯಲಿ।

ಎಲ್ಲ ಭಾಷೆಗೆ ಜೀವದಂತಿದೆ ದೇವಭಾಷೆಯು ಸಂಸ್ಕೃತ
ದೇವಭಾಷೆಯ ದಿವ್ಯಸಂಸ್ಕೃತಿ ಎಲ್ಲ ಭಾಷೆಗೆ ಹರಿಯುತ
ಅಷ್ಟಪಡ್ವ್ಯಾಪಿಣಿಯು ಭಾರತಿ ಭಾವವೊಂದೇ ಎನ್ನುತ

ಪ್ರಾಂತ-ಪ್ರಾಂತ್ಯದ ಭೇದವಳಿಸಿತೊ ಕೆಂಪು ಚೀನದ ಬೇನೆ
ನಮ್ಮ ದೇಶದ ಸ್ವಾತಂತ್ರ್ಯಕೆ ಅಸು ನೀಗಿದೆ ಸೇನೆ
ಕೆಂಪು ಚೀನದ ಭೂತಕ್ಕೆ ಬೇಕಾಯಿತು ರಕುತ-ಬಲಿ
ಘುಡುಘುಡಿಸಲಿ ರಣಕಾಳಿಯು ಸಲೆ ರೌದ್ರವ ತಾಳಿ।

—“ಸತ್ಯಪ್ರಿಯ”

# ಮಾರ್ಚಿಂಗ್ ಸಾಂಗ್

ರಾಷ್ಟ್ರಕಾಗಿ ಸರ್ವತ್ಯಾಗ ಮಾಳ್ಪನೇ ಮಹಾತ್ಮನು
ನಾಡಿಗಾಗಿ ಸ್ವಾರ್ಥತ್ಯಾಗ ಗೈವನೇ ಪುಣ್ಯಾತ್ಮನು ‖ ಪ ‖

ದೇಶಕಾಗಿ ಸೈನ್ಯದಲ್ಲಿ ದುಡಿವನೇ ಬಲಾಢ್ಯನು
ವೈರಿಯೊಡನೆ ಕದನ ನಡೆಸಿ ಮಡಿವನೇ ಗುಣಾಢ್ಯನು‖

ದೇಶದಲ್ಲಿ ಯುದ್ಧಭೀತಿ ತೊರೆಯಲೀ ಜನಂಗಳು
ನಾಡಿನಲ್ಲಿ ಶಾಂತಿಮಾತ ಪಾಡಲೀ ಪ್ರಜೆಂಗಳು ‖

ಚಾಚ ನೆಹರು ವೀರನೆಂದು ಸಾರುತೀ ಸಮೂಹವು
ಪಂಚಶೀಲ ಮಾನ್ಯವೆಂದು ಪಾಡಲೀ ಪ್ರಜಾಳಿಯು ‖

ಚೀಣ ಜನತೆ ಠಕ್ಕರೆಂದು ಪಡೆದಿದೇ ದುಷ್ಕೀರ್ತಿಯ
ಹಿಂದು ಜನತೆ ವೀರರೆಂದು ಗಳಿಸಿದೇ ಸತ್ಕೀರ್ತಿಯ ‖

ಕೆಂಪುಚೀಣ ಸೈನ್ಯವನ್ನು ಇಂದೆ ನಾವು ಹುಗಿಯುವಾ
ಗುಂಪುಕೂಡಿ ಶಿಸ್ತಿನಿಂದ ಗಡಿಯ ಮತ್ತೆ ಪಡೆಯುವಾ‖

ಹಿಮದ ಬೆಟ್ಟದೊಡೆಯ ಶಿವನು ನಮ್ಮನೆಲ್ಲ ಪೊರೆಯಲಿ
ಜಗದಿ ಶಾಂತಿ ನೆಲೆಸಿ ಇಂದು ಜನಗಳೆಲ್ಲ ಸುಖಿಸಲಿ ‖

—'ವನವಿಹಾರಿ'

---

# ಹಳದಿ ಗೆದ್ದಲು

ಕೋವಿ ಗೋಲಿಗಳಂದು ನಿಶ್ಶಬ್ದ ಮೇರುವಿನ ಮಹಾಮೌನವನು ಕಲಕಿದ ಕಾಳರಾತ್ರಿ,
ಸಿಡಿಗುಂಡುಗಳ ಸಿಡಿಸಿತಂದು ನೆರೆರಾಷ್ಟ್ರ—ವಿಪರ್ಯಾಸ ಮೈತ್ರಿ.
ಸನಾತನ ಧರ್ಮದೇಗುಲಧವಳ ಪ್ರಾಕಾರಕ್ಕೆ ಹತ್ತಿದೆ ಹಳದಿ ಗೆದ್ದಲು,
ಹೊಗೆ, ಮಿಂಚು, ಸಿಡಿಲುಮರಿಗಳ ದೈವಶಕ್ತಿಯನೆ ಹುಗಿದ ಸಮರದ ಕರಿಮುಗಿಲು.
ಧವಳಗಿರಿ ಶಿಖರ ಗಹ್ವರದಲ್ಲಿ ವೀರಯೋಧರ ರಕ್ತ ಸಿಂಧೂರ,
ಭಾರತಿಯ ಸಿರಿಮುಖಕೆ ಹೂಣದೈತ್ಯರ ರುಂಡಗಳ ಹಾರ!
ಸಿಡಿದು ಲಾವಾರಸವನುಗುಳಲಿದೇವ ಹಿಮವಂತ ಧೀರ,
ಕೋವಿ ಮೊನೆಯಲಿ ಕೆದಕು ನಗರಾಜನಡಿಯಲ್ಲಿ ನುಸುಳಿಬಂದಿರುವ ಕೊಳೆತ ಮಂಡಲದ ಚೇರ.
ಪಂಚಶೀಲದ ಧರ್ಮಗುರುವಿಗೇ ತಿರುಮಂತ್ರ—ಕೋವಿ ಗುರುದಕ್ಷಿಣೆಯ ತಂತ್ರ,
ಒಂದುವರೆ ದಶಕದಲಿ ನಡೆಸಿದ ಕುತಂತ್ರದವಶೇಷವೀ ಷಡಯಂತ್ರ.
ರಾಷ್ಟ್ರಯೋಜನೆ, ಜನತೆಯ ಪುರೋಭಿವೃದ್ಧಿ ಶಿವಪೂಜೆಯಲಿ,
ಮತಿಗೆಟ್ಟ ಈ ಪೀತಕರಡಿಯ ರಾಜ್ಯದಾಹದ ಕಚಕುಳಿ.
ಕಿಚ್ಚು ಹಚ್ಚಿದೆ ಪೀ(ತ)ಕಿಂಗದು ಹಳದಿಯಲ್ಲದ ಜನದ ಸ್ವಾತಂತ್ರ್ಯಕೆ,
ಎಚ್ಚರೆಚ್ಚರ, ಸಮರಸನ್ನದ್ಧ ಭಾರತೀಯರೇ, ಹಾರಿಸಿರಿ ವಿಜಯಪತಾಕೆ.

* * * *

ಚೀಣದ ಚರಿತ್ರೆಯ ಪುಟಪುಟಕು ನಡೆದೆ ಇದೆ ದಂಡಯಾತ್ರೆಯ ಹಗರಣ ;
ಕಾರುಣ್ಯ, ನೀತಿ-ನಿಯಮಗಳಿರದ ಅವರ ದೃಷ್ಟಿತಾಕಿದ ಜನದ ಮಾರಣ.
ಗಡಿಗೆ ಗೋಡೆಯ ಕಟ್ಟಿಸಿದ ಮಂಕುಜನ—ನಮ್ಮ ಗಡಿಯೊಳಗೆ ನುಸುಳಿದ ಭಾಯಿ !
ಚಕ್ರವರ್ತಿಗಳ ಮೂಲಪುರುಷನೇ ತಾನೆಂದು ಜಗಕೆಲ್ಲ ಕರಿಯತೆರೆ ಹಾಯಿಸಲು ಇತಿಹಾಸ ಭಂಡಾರಕ್ಕೆ ಕಿಚ್ಚಿಟ್ಟ ಕೈಯಿ.
ಸಮತಾವಾದ ವ್ಯತಿರಿಕ್ತ ಬೇಗೆಯಲಿ ನರಳುತಿದೆ ಆ ಜನತೆ,
ಜಗಕೆಲ್ಲ ಸಾರುತಿದೆ ಆ ದೇಶ—"ನಮ್ಮ ರಾಷ್ಟ್ರದಲೆ ಮೊಳೆಯಿತದು ಸಮತೆ."
ಅವರ ಸಾಮೂಹಿಕೋತ್ಪನ್ನ ಮುನ್ನೆಗೆತದಾಸೆಯಾರ್ಥಿಕಾಶ್ವದ ಹಿನ್ನೆಗೆತ,

ಅಲ್ಲಿ ಸಾಹಿತ್ಯ, ಗೀತ, ಪ್ರಸರಣಗಳೆಲ್ಲ ಕುರುಡು ವರ್ತಮಾನದ ಸೆಳೆತ.
ಕಳೆದ ತಲೆಮಾರುಗಳ ಜನತೆ ಒಪ್ಪಿದ್ದ ಸೀಮೆಯೇ ಇಂದು ಉಲ್ಲಂಘನೆಯೊಡನೆ ಒದರುತಿದೆ—'ನಮ್ಮ ದೇಶ!'
ಕಾಳೆಗದ ಕಹಳೆ ಮೊಳಗುತಿದೆ ಭಾರತದ ಪ್ರಧಾನಿಯಾದೇಶ.
ಸಾಮ್ರಾಜ್ಯಷಾಹಿಗಳ ನಿರ್ಮೂಲ ತತ್ವದ ಹಾಳೆಹಾಳೆಗು ಬೆಂಕಿಯಿಟ್ಟಿದೆ ಚೀಣ,
ನಿರಂಕುಶ ಪ್ರಭುತ್ವವದು ಪರರಾಜ್ಯಾಪಹರಣ ನಡೆಸಿ, ಚರಿತ್ರೆಯ ಚಿತ್ರವನೆ ನುಂಗಿತು ದೈತ್ಯಮಸಿಹೂಣ.
ಸಾರುತಿದೆ ತಾನೆಸರಿ, ನ್ಯಾಯವಾದಿಯೆಂದು,
ಅಖಂಡವಿಶ್ವದ ಜನತೆ ಆಕ್ರಮಣದ ನಗ್ನಸತ್ಯವನರಿಯದೆಂದು.

* * * *

'ನೆಲವೊಂದೆ, ಕುಲವೊಂದೆ, ಜಲವೊಂದೆ' ಆಸೇತು ಹಿಮವಂತ ಪರ್ಯಂತ, ಜೊತೆಗೆ 'ಛಲವೊಂದೆ' ಎಂಬ ಕವಿವಾಣಿ ಮೊಳಗುತಿದೆ.
ಭೇದಗಳ ಬದಿಗಿರಿಸಿ, ಸಮರದ ಧರ್ಮಯಜ್ಞಕ್ಕೆ ಜನತೆ ಕರ್ತವ್ಯದಾನ ನೆರವೀಯುತಿದೆ.
ಚೀಣದ ನಳಿಗೆ ತುದಿಯಧಿಕಾರವದು ನಡೆಸಿದೆ ದಂಡುಧಾಳಿ,
ಮಣಿಯದೀನಮ್ಮ ಜನತೆ—ಧೀಶಕ್ತಿ 'ಮುನಿದರೆ ಮಹಾಕಾಳಿ.'
ಭಾರತದ ಮನ್ನೆಯರೆ, ಏಳಿ, ಎಚ್ಚರಗೊಳ್ಳಿ, ಹಿಮಾಲಯದ ಬೆಂಬಳಿಗೆ ಶತ್ರುಗಳ ದೂಡಿ,
ಗುಂಡು ಸುರಿಮಳೆಗರೆದು, ಹರಿಹಾಯ್ದು ಮುನ್ ಕವಿದು ಗಂಡುಗೆಡಿಸಿರಿ--ಹೂಣದೈತ್ಯನಿಗೆ ಕೋವಿಯಲೆ ಚರಮಗೀತೆಯನು ಹಾಡಿ.
ವಿಜಯ ತ್ರಿರಂಗಧ್ವಜ ಮೆರೆಯುತ್ತ ಹಾರುತಿರಲೆಂದು ಮುಂದೂ ಎಂದು,
ಜೈಹಿಂದ್, ಜೈಹಿಂದ್, ಜೈಹಿಂದ್!

—ಹೆಚ್. ಎಂ. ರಂಗನಾಥ್

---

## ಪರಿಷತ್ತಿನ ಸದಸ್ಯರಲ್ಲಿ ವಿನಂತಿ

೧೯೬೨ನೇ ಸಾಲಿನ ಪರಿಷತ್ತಿನ ಸದಸ್ಯತ್ವದ ಚಂದಾ ಡಿಸೆಂಬರ್ ೩೧ನೇ ತಾರೀಖಿಗೆ ಮುಗಿಯಿತು. ೧೯೬೩ರ ಪರಿಷತ್ತಿನ ಸದಸ್ಯತ್ವದ ಚಂದಾ ಆರು ರೂಪಾಯಿಗಳನ್ನು ದಯೆಯಿಟ್ಟು ಈ ಕೂಡಲೇ ಪರಿಷತ್ತಿಗೆ ಕಳಿಸಿ ನೆರವು ನೀಡಬೇಕೆಂದು ವಿನಯದಿಂದ ವಿನಂತಿಸುತ್ತೇವೆ.

ಅನ್ನದಾನಯ್ಯ ಪುರಾಣಿಕ
ಕೆ. ಎಂ. ಕೃಷ್ಣರಾವ್
ಗೌರವ ಕಾರ್ಯದರ್ಶಿಗಳು

# ಶ್ರೀ ದಾತಾರರ ವಿಯೋಗದ ಬಗ್ಗೆ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರ ಕಂಬನಿ



ಕನ್ನಡ ನಾಡು ನುಡಿಗಳ ಉಜ್ವಲಾಭಿಮಾನಿಗಳೂ, ಕನ್ನಡ ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯರೂ, ಕೇಂದ್ರ ಸರ್ಕಾರದ ಗೃಹಸಚಿವರೂ ಆಗಿದ್ದ ಮಾನ್ಯ ಬಿ. ಎನ್. ದಾತಾರ್ ಅವರು ದಿನಾಂಕ ೧೩-೨-೬೩ ರ ಸಂಜೆ ದಿಲ್ಲಿಯಲ್ಲಿ ಸತ್ತು ಸ್ವರ್ಗವೇರಿದರೆಂದು ಕೇಳಿ ಮರುಗದ ಕನ್ನಡಿಗರಿಲ್ಲ. ಅವರ ವಿಯೋಗದಿಂದ ಅವರ ಕುಟುಂಬದವರಿಗೇ ಅಲ್ಲ; ಸಮಗ್ರ ಕರ್ನಾಟಕಕ್ಕೆ, ಸಮಗ್ರಭಾರತಕ್ಕೆ ತುಂಬಿಬಾರದ ಹಾನಿಯಾಗಿದೆ. ಮಾನ್ಯ ದಾತಾರರು ಕನ್ನಡ, ಸಂಸ್ಕೃತ, ಇಂಗ್ಲಿಷ್, ಮರಾಠಿ, ಹಿಂದಿ ಭಾಷೆಗಳಲ್ಲಿ ಪಂಡಿತರಾಗಿದ್ದರು. ವೇದಾಂತ ಮತ್ತು ನ್ಯಾಯಶಾಸ್ತ್ರಗಳಲ್ಲಿ ಅವರಿಗೆ ಹೆಚ್ಚಿನ ಪರಿಶ್ರಮವಿತ್ತು. ಅವರು ಭಾರತದ ಸ್ವಾತಂತ್ರ್ಯಕ್ಕಾಗಿ, ಕರ್ನಾಟಕ ಏಕೀಕರಣಕ್ಕಾಗಿ ತಮ್ಮ ಆಯುಷ್ಯದ ಬಹು ಭಾಗವನ್ನು ಕಳೆದರು. ಬೆಳಗಾವಿಯಲ್ಲಿ ಲಾ ಕಾಲೇಜು ಸ್ಥಾಪಿಸಿದರು. ಕರ್ನಾಟಕ ಯೂನಿವರ್ಸಿಟಿಗೆ ಬೆಂಬಲವಿತ್ತರು. ಕನ್ನಡ ಸಾಹಿತ್ಯ ಪರಿಷತ್ತಿಗೆ ಸದಾ ತಮ್ಮ ಬೆಂಬಲವನ್ನು ಕೊಡುತ್ತಿದ್ದರು. ದಿಲ್ಲಿಯಲ್ಲಿ ಕನ್ನಡ ಸಂಘ ಸಂಸ್ಥೆಗಳನ್ನು ಕಟ್ಟಿ ಕನ್ನಡದ ಧ್ವಜವನ್ನು ಎತ್ತಿ ನಿಲ್ಲಿಸಿದರು. ನಮ್ಮ ರಾಜ್ಯಕ್ಕೆ 'ಕರ್ನಾಟಕ' ಎಂಬ ಹೆಸರು ಸಮಂಜಸವೆಂದು ನಮಗೆ ಅವರು ಹಲವಾರು ಸಾರಿ ಹೇಳಿದ್ದರು. ಅವರು ಒಳ್ಳೆಯ ಪ್ರಜಾಪ್ರಭುತ್ವವಾದಿಗಳಾಗಿದ್ದರು. ಬೆಂಗಳೂರಿಗೆ ಬಂದಾಗಲೆಲ್ಲ ಕನ್ನಡ ಸಾಹಿತ್ಯ ಪರಿಷತ್ತನ್ನು ಸಂದರ್ಶಿಸದೆ ಅಥವಾ ಅವರ ಯೋಗಕ್ಷೇಮವನ್ನು ವಿಚಾರಿಸದೆ ಹೋಗುತ್ತಿರಲಿಲ್ಲ. ಇತ್ತೀಚೆಗೆ ಬೆಂಗಳೂರಿಗೆ (ದಿನಾಂಕ ೧೫-೧೦-೬೨ ರಂದು) ಬಂದಾಗ ಪರಿಷತ್ತಿಗೆ ಭೇಟಿ ಕೊಟ್ಟಿದ್ದರು. ಕನ್ನಡ ನಾಡಿನ ಗಡಿಗಳಾದ ಕಾಸರಗೋಡು, ತಾಳವಾಡಿ, ಹೊಸೂರು, ಮಡಕಶಿರ, ಅಕ್ಕಲಕೋಟೆ, ಜತ್ತ, ಸೊಲ್ಲಾಪುರ ಮೊದಲಾದುವು ನಮ್ಮ ರಾಜ್ಯಕ್ಕೆ ಸೇರಿ ಅಲ್ಲಿನ ಅಸಂಖ್ಯಾತ ಕನ್ನಡಿಗರ ಮನಸ್ಸಿಗೆ ನೆಮ್ಮದಿ ಲಭಿಸಲೆಂಬುದು ಅವರ ಹೃದ್ಗತವಾಗಿತ್ತು. ಮೈಸೂರು ಶ್ರೀಮನ್ಮಹಾರಾಜರ ಬಗ್ಗೆ ಅವರಿಗೆ ವಿಶೇಷ ಗೌರವವಿತ್ತು. ಅವರೇ ರಾಜ್ಯಪಾಲರಾಗಿ ಮುಂದುವರೆಯಬೇಕೆಂದು ಅವರ ಅಪೇಕ್ಷೆಯಿತ್ತು. ಅದರಿಂದ ಮೈಸೂರಿಗೆ ಹೆಚ್ಚು ಲಾಭವೆಂದು ಅವರ ಅಪೇಕ್ಷೆಯಾಗಿತ್ತು.

ಭಾರತದ ಸ್ವಾತಂತ್ರ್ಯ ರಕ್ಷಣೆಯ ಬಗ್ಗೆ ಅವರಿಗೆ ಹೆಚ್ಚಿನ ಕಳಕಳಿಯಿತ್ತು. ಕೇಂದ್ರದಲ್ಲಿ ಅವರು ಸಮರ್ಥ ಮಂತ್ರಿಗಳೆನಿಸಿದ್ದರು. ಮೈಸೂರಿನಿಂದ ದಿಲ್ಲಿಗೆ ಹೋದವರಿಗೆ ಅವರು ಆಶ್ರಯದಾತರೆನಿಸಿದ್ದರು. ಕರ್ನಾಟಕದ ಅತ್ಯಂತ ಹಿತೈಷಿಗಳಲ್ಲಿ ಶ್ರೀ ದಾತಾರ್ ಮೊದಲಿಗರಾಗಿದ್ದರು. ಅವರ ವಿಯೋಗದಿಂದ ನಮ್ಮ ನಾಡಿನ ಆಧಾರಸ್ತಂಭವೊಂದು ಕಳಚಿಬಿದ್ದಂತಾಗಿದೆ. ಅವರ ಮರಣವು ಅನಿರೀಕ್ಷಿತವಾದುದು. ದೈವೇಚ್ಛೆಗೆ ಉಪಾಯವಿಲ್ಲ. ಅವರು ನಿರ್ಮಲಮನಸ್ಸಿನ ಸ್ಪಷ್ಟಮಾತುಗಾರರಾಗಿದ್ದರು. ಅವರು ಗುಣೈಕ ಪಕ್ಷಪಾತಿಗಳೂ, ಧೈರ್ಯ ಸ್ಥೈರ್ಯಗಳುಳ್ಳವರೂ ಆಗಿದ್ದರು. ಮೃತರ ಆತ್ಮಕ್ಕೆ ಶಾಂತಿಯೂ, ವಿಯೋಗಿಗಳಾದ ಅವರ ಪುತ್ರಮಿತ್ರರ ಮನಸ್ಸಿಗೆ ಸಮಾಧಾನವೂ ಉಂಟಾಗಲೆಂದು ಭಗವಂತನನ್ನು ಕುರಿತು ಪ್ರಾರ್ಥಿಸುತ್ತೇನೆ. ಇವರ ವಿಯೋಗದಿಂದ ಕೇಂದ್ರದಲ್ಲಿ ಕನ್ನಡಿಗರ ಪ್ರಾತಿನಿಧ್ಯ ಕಡಿಮೆಯಾಯಿತೆಂದು ಹೇಳಬೇಕಾಗಿದೆ.

ತಾ॥ ೨೦-೨-೬೩
ಬೆಂಗಳೂರು

**ಬಿ. ಶಿವಮೂರ್ತಿ ಶಾಸ್ತ್ರೀ,**
ಅಧ್ಯಕ್ಷರು.

# ಗ್ರಂಥಾವಲೋಕನ

**Mysore's Political Evolution:** by Sri P. R. Ramaiya, B.sc., Editor, Chetana'; Publishers: Jaya Gowri Publications, Bangalore. Size: Crown 1/8, Pages iii + 105, Price Re. 1–25 nP.

ಇದು ಹಿಂದಿನ ಮೈಸೂರು ಸಂಸ್ಥಾನದ ರಾಜಕೀಯ ಪ್ರಗತಿಯ ಕುರಿತಾದ ಆಂಗ್ಲಭಾಷೆಯಲ್ಲಿರುವ ಸಣ್ಣ ಪುಸ್ತಕ. ಇದರ ಕರ್ತೃಗಳಾದ ಶ್ರೀ ರಾಮಯ್ಯನವರು ಪತ್ರಿಕೋದ್ಯಮಿಗಳು; ರಾಜಕೀಯದಲ್ಲಿ ಕೆಲಕಾಲ ಶ್ರಮಿಸಿದವರು; ಅಲ್ಲದೆ ಮೈಸೂರಿನ ಅಭಿಮಾನಿಗಳು. ಈ ಎಲ್ಲದಕ್ಕಿಂತ ಹೆಚ್ಚಾಗಿ, ಮೈಸೂರಿನ ಖ್ಯಾತಿವೆತ್ತ ಸಾರ್ವಜನಿಕ ಮುಂದಾಳುಗಳೂ, ದೇಶಾಭಿಮಾನಿಗಳೂ, ನಿಸ್ವಾರ್ಥಿಗಳೂ ಆಗಿದ್ದ ವೃದ್ಧಪಿತಾಮಹ ಶ್ರೀ ಎಂ. ವೆಂಕಟಕೃಷ್ಣಯ್ಯನವರ ಗರಡಿಯಲ್ಲಿ ಪಳಗಿದವರು. ಈ ಎಲ್ಲ ಕಾರಣಗಳಿಂದ ಶ್ರೀ ರಾಮಯ್ಯನವರ ಪುಸ್ತಕದ ವರ್ಚಸ್ಸು ಮಿಗಿಲಾಗಿದೆ ಎಂದರೆ ತಪ್ಪಾಗದು.

ಮೈಸೂರಿನ ಖ್ಯಾತಿ ಇಂದಿನದಲ್ಲ, ಬಹುಕಾಲದ್ದೆಂದು ಇತಿಹಾಸ ಹೇಳುತ್ತದೆ. ಸಂಸ್ಕೃತಿಯ ದೃಷ್ಟಿಯಿಂದಾಗಲೀ, ಸಾಮಾಜಿಕ ಮೇಲ್ಮೆಯ ಬಗೆಯಿಂದಾಗಲೀ, ಆಡಳಿತದ ವೈಶಿಷ್ಟ್ಯತೆಯ ದೆಶೆಯಿಂದಾಗಲೀ ಅದು ಎಷ್ಟು ಗಣನೀಯವಾಗಿದ್ದಿತೋ, ಗಮನಾರ್ಹವಾಗಿದ್ದಿತೋ, ಅಷ್ಟೇ, ಅದು ಏಕೆ, ಇನ್ನೂ ಅತಿಶಯವಾಗಿ ರಾಜಕೀಯ ವಿಚಾರಗಳಲ್ಲಿ ಮುಂದುವರಿದಿತ್ತೆಂದು ಖಚಿತವಾಗಿ ಹೇಳಬಹುದು. ಮೈಸೂರಿನ ಇತಿಹಾಸದಲ್ಲಿ ಇದಕ್ಕೆ ವಿಪುಲವಾಗಿ ನಿದರ್ಶನಗಳು ದೊರೆಯುತ್ತವೆ. ರಾಜ್ಯದ ಪ್ರಭುಗಳು ಆದರ್ಶ ವ್ಯಕ್ತಿಗಳಾಗಿ, ತಮ್ಮ ಪ್ರಜೆಗಳಿಗೆ ಹೆಚ್ಚು ಹೆಚ್ಚಿನ ಸ್ವಾತಂತ್ರ್ಯವನ್ನು ಕೊಡಲು ಉತ್ಸಾಹಶಾಲಿಗಳಾಗಿದ್ದರೂ, ಬ್ರಿಟಿಷ್ ಸಾರ್ವಭೌಮಾಧಿಕಾರ ಇದಕ್ಕೆ ಅಡಚಣೆ ತಂದೊಡ್ಡುತ್ತಿದ್ದ ಪ್ರಸಂಗಗಳು ಅಂದಿನ ಕಾಲದಲ್ಲಿ ಅಪಾರವಾಗಿದ್ದವು. ಆದರೂ ಪ್ರಜೆಗಳ ಸರ್ವತೋಮುಖವಾದ ಅಭಿವೃದ್ಧಿಯ ಕಡೆಗೆ ವಿಶೇಷ ಮಮತೆಯನ್ನು ತೋರುತ್ತಾ, ಶ್ರಮಿಸುತ್ತಾ ಸಾಗಿದ ಮೈಸೂರು ಮಿಕ್ಕೆಲ್ಲ ದೇಶೀಯ ಸಂಸ್ಥಾನಗಳಿಗೆ–ಹೆಚ್ಚೇಕೆ ಬ್ರಿಟಿಷ್ ಹಿಂದೂಸ್ಥಾನಕ್ಕೇ ಮಾರ್ಗದರ್ಶನವಾಗಿತ್ತು. ಇದು ಅತಿಶಯೋಕ್ತಿಯಲ್ಲ, ವಾಸ್ತವ ವಿಚಾರ.

ಶ್ರೀ ರಾಮಯ್ಯನವರು ತಮ್ಮ ಸಣ್ಣ ಈ ಪುಸ್ತಕದಲ್ಲಿ ಮುಖ್ಯವಾಗಿ ರಾಜಕೀಯ ಪ್ರಗತಿಯನ್ನು ಸಂಗ್ರಹವಾದರೂ ಅರ್ಥವತ್ತಾಗಿ ವಿವರಿಸಿ ರಾಜಕೀಯ ಇತಿಹಾಸದ ಅಭಿಮಾನಿಗಳಲ್ಲಿ, ಆಸಕ್ತರಲ್ಲಿ ಉತ್ಸುಕತೆ ಕೆರಳುವಂತೆ ಮಾಡಿದ್ದಾರೆ. ಮೊದಲೇ ತಿಳಿಸಿದಂತೆ, ಈ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಲು ಶ್ರೀ ರಾಮಯ್ಯನವರಿಗಿರುವ ಅನುಭವವೇ ಹಿನ್ನೆಲೆ.

ಮೈಸೂರಿನ ರಾಜಕೀಯ ಪ್ರಗತಿಯನ್ನು ಪ್ರಸ್ತಾಪಿಸುವ ಮುನ್ನ ಅದಕ್ಕೆ ಮೂಲ ಕಾರಣವನ್ನು ಪ್ರಸ್ತಾಪಿಸುವುದು ಅನಿವಾರ್ಯ. ಒಂದು ನಾಡಿನ ಸಂಸ್ಕೃತಿ ಅಥವಾ ಅದರ ಸರ್ವಾಂಗೀಣ ಪ್ರಗತಿಯ ಒರೆಗಲ್ಲು ಅದರ ಪ್ರಜಾಕೋಟಿಯ ವರ್ಚಸ್ಸಿನ ವೈಖರಿ. ಈ ವರ್ಚಸ್ಸಿನ ಆಧಾರ ಆ ಕಾಲಕ್ಕಂತೂ ರಾಜಪ್ರಭುತ್ವದ ಸುಲಕ್ಷಣ ಪರಂಪರೆ. ಇಂತಹ ಪರಂಪರೆ ಮೈಸೂರಿನ ಸುದೈವ, ಸೌಭಾಗ್ಯ. ಪ್ರಜಾವತ್ಸಲರಾದ ಮಹಾರಾಜರುಗಳು; ಮೇಧಾವಿಗಳೂ, ದಕ್ಷರೂ ಆದ ಅಧಿಕಾರಿ ವರ್ಗದವರು; ಮೇಲಾಗಿ ಅಂದಂದಿನ ಸ್ಥಿತಿಗತಿಗನುಗುಣವಾಗಿ ಹೊಂದಿಕೊಂಡು, ಪ್ರಗತಿಭಾವನೆಯನ್ನೂ, ಉತ್ಸಾಹವನ್ನೂ, ಶ್ರದ್ಧೆಯನ್ನೂ ತೋರುತ್ತ ಬಂದ ಪ್ರಜಾವರ್ಗ; ಇವು ಮೈಸೂರಿನ ಅಚ್ಚಳಿಯದ ಕೀರ್ತಿಗೆ, ಶ್ರೇಯಸ್ಸಿಗೆ ಸಾಧಕಗಳಾದವು.

ಶ್ರೀ ರಾಮಯ್ಯನವರು ಮೈಸೂರಿನ ರಾಜಕೀಯ ಪ್ರಗತಿಯ ಕಾಲವನ್ನು ಐದು ಘಟ್ಟಗಳನ್ನಾಗಿ ವಿಭಾಗಿಸಿಕೊಂಡು ವಿವರಣೆಗೆ ಕೈಹಾಕಿದ್ದಾರೆ: ಮೊದಲನೆಯದು ೧೮೮೧ ರಿಂದ ೧೯೧೨, ಎರಡನೆಯದು ೧೯೧೨ ರಿಂದ ೧೯೨೨, ಮೂರನೆಯದು ೧೯೨೨ ರಿಂದ ೧೯೩೭, ನಾಲ್ಕನೆಯದು ೧೯೩೭ ರಿಂದ ೧೯೪೫, ಕಡೆಯದಾಗಿ ೧೯೪೫ ರಿಂದ ೧೯೪೭.

ದಿವಾನ್ ರಂಗಾಚಾರ್ಲು ಅವರ ದಿವಾನ್‌ಗಿರಿಯಲ್ಲಿ ಮೈಸೂರಿನ ಪ್ರಜಾಸ್ವಾತಂತ್ರ್ಯದ ನಿರ್ದಿಷ್ಟ ಚೇತನ ಆರಂಭಗೊಂಡು, ಬರಬರುತ್ತಾ ಪುಷ್ಟಿಗೊಂಡು, ಬಲಾಢ್ಯವಾಗಿ ಬೆಳೆದುನಿಂತು, ಕಡೆಯ ದಿವಾನರಾದ ರಾಮಸ್ವಾಮಿ ಮೊದಲಿಯಾರ್ ಅವರ ಕಾಲದಲ್ಲಿ ಅದು ತನ್ನ ಅಂತಿಮ ಗುರಿಯನ್ನು ಸಾಧಿಸಿತು. ಅನೇಕ ಎಡರು ತೊಡರುಗಳು ಪ್ರಾಪ್ತವಾದಾಗ್ಯೂ ಕೂಡ ಈ ಅವಧಿಯಲ್ಲಿ ಹಂತ ಹಂತವಾಗಿ ರಾಜಕೀಯ ಪ್ರಗತಿ ತಲೆದೋರಿದ್ದು ಚರಿತ್ರಾರ್ಹ ಸಂಗತಿ. ರಂಗಾಚಾರ್ಲು ನಂತರ ಬಂದ ದಿವಾನರುಗಳ ಅಂತರಂಗ ಬಗೆಬಗೆಯಾಗಿತ್ತು. ಈ ದೆಶೆಯಿಂದ ಸಂಸ್ಥಾನದ ವಾತಾವರಣದಲ್ಲಿ ಕಾವು ಏರಿ ಉಲ್ಬಣ ಸ್ಥಿತಿಯೂ ಉಂಟಾಗಿತ್ತು. ಆದರೆ ಇದು ಕೊಂಚ ಕಾಲದ ಏರುಪೇರೆನ್ನಬಹುದು.

ಆಡಳಿತದೊಡನೆ ಪ್ರಜೆಗಳ ಸಂಪರ್ಕವಿರಬೇಕೆಂಬ ಸದ್ಭಾವನೆ ಮತ್ತು ಧ್ಯೇಯ ಉಂಟಾದದ್ದು ದಿವಾನ್ ರಂಗಾಚಾರ್ಲು ಅವರ ಕಾಲದಲ್ಲಿ. ಇದನ್ನು ಸಾಧಿಸಲು ೧೮೮೧ರಲ್ಲಿ ಪ್ರಜಾಪ್ರತಿನಿಧಿ ಸಭೆ ಸ್ಥಾಪನೆಯಾಯಿತು. ಈ ಸಂದರ್ಭದಲ್ಲಿ ರಂಗಾಚಾರ್ಲು ಅವರು ಮತ್ತು ಮಹಾರಾಜರು ವ್ಯಕ್ತಪಡಿಸಿದ ಭಾವನೆಗಳು, ತಾಳಿದ ಧೋರಣೆ ಅನುಪಮವಾಗಿದ್ದವು. ಪ್ರಜೆಗಳಲ್ಲಿ ಸ್ವಾತಂತ್ರ್ಯಾಪೇಕ್ಷೆಯು ರೂಢಮೂಲವಾಗಲು ಸ್ಪಷ್ಟವಾಗಿಯೇ ಉತ್ತೇಜಿಸುವಂತಿದ್ದವು. ಶ್ರೀ ರಾಮಯ್ಯನವರು ಹೇಳುವಂತೆ ಇಡೀ ಹಿಂದೂಸ್ಥಾನದಲ್ಲೇ, ಪ್ರಪ್ರಥಮ ಪ್ರಜಾಪ್ರತಿನಿಧಿ ಸಭೆ ಮೈಸೂರಿನದಾಯಿತು. ಶ್ರೀ ರಾಮಯ್ಯನವರು ರಂಗಾಚಾರ್ಲು ಅವರ ಮತ್ತು ಮಹಾರಾಜರು ಅಂದು ಆಡಿದ ಮಾತುಗಳನ್ನು ತಮ್ಮ ಪುಸ್ತಕದಲ್ಲಿ ಕೊಟ್ಟಿದ್ದರೆ ಯುಕ್ತವೆನಿಸುತ್ತಿತ್ತೆಂದು ಈ ಸಂದರ್ಭದಲ್ಲಿ ಹೇಳಬೇಕಾಗಿದೆ.

ರಂಗಾಚಾರ್ಲು ನಂತರ ಬಂದ ದಿವಾನರುಗಳಲ್ಲಿ ಪ್ರಜಾಸತ್ತೆಯ ಬಗ್ಗೆ ಅಷ್ಟಾಗಿ ವಿಶ್ವಾಸವಿರಲಿಲ್ಲವೆಂದು ಅವರ ಕಾರುಬಾರುಗಳಿಂದ ವ್ಯಕ್ತಪಡುತ್ತದೆ. ಪರಿಣಾಮ, ಪದೇಪದೇ ಆಡಳಿತವರ್ಗಕ್ಕೂ ಪ್ರಜಾಪ್ರತಿನಿಧಿಗಳಿಗೂ ವಿರಸ. ಪ್ರಜೆಗಳ ಮೂಲಭೂತ ಹಕ್ಕುಗಳು ಮೊಟಕಾಗುವಂತಹ ಕಹಿ ಪ್ರಸಂಗಗಳೂ ಜರುಗಿದವು. ಒಂದು ಬಗೆಯಿಂದ ಈ ಪ್ರಸಂಗಗಳೆಲ್ಲ ಭಾವೀ ಪ್ರಗತಿಗೆ ಅನುಕೂಲವಾಗಿಯೇ ಪರಿಣಮಿಸಿದವೆನ್ನಬಹುದು.

ಶ್ರೀ ರಾಮಯ್ಯನವರು ತಮ್ಮ ಪುಸ್ತಕದಲ್ಲಿ ಮುಂದಿನ ಘಟನೆಗಳನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಬ್ರಿಟಿಷ್ ಹಿಂದೂಸ್ಥಾನದಲ್ಲಿ ತಲೆ ಎತ್ತಿದ ಸ್ವಾತಂತ್ರ್ಯ ಚಳುವಳಿ ಮೊದಲೇ ಜಾಗೃತಗೊಂಡಿದ್ದ ಮೈಸೂರಿನ ಜನತೆಯ ಮೇಲೆ ಉಂಟುಮಾಡಿದ ಪ್ರಭಾವ, ಅದರಿಂದ ಆಡಳಿತ ಖತಿಗೊಂಡದ್ದು, ಪತ್ರಿಕಾ ಶಾಸನ ಜಾರಿಗೆ ಬಂದದ್ದು, ಅದರ ರದ್ದಿಗಾಗಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಪ್ರತಿನಿಧಿಗಳು ಸತತವಾಗಿ ಹೋರಾಟ ನಡೆಸಿದ್ದು, ಇವೆಲ್ಲಾ ಮೈಸೂರಿನ ರಾಜಕೀಯ ಪ್ರಗತಿಗೆ ಮೆರುಗಿಡುವ ಪ್ರಕರಣಗಳು.

ಸರ್ ಎಂ. ವಿಶ್ವೇಶ್ವರಯ್ಯನವರ ದಿವಾನ್‌ಗಿರಿಯಲ್ಲಿ ಮೈಸೂರಿನ ಪ್ರಗತಿ ಮತ್ತೊಂದು ದಿಟ್ಟ ಹೆಜ್ಜೆಯನ್ನಿಟ್ಟಿತು. ದೇಶದ ಆರ್ಥಿಕ ಪ್ರಗತಿಗಾಗಿ ಇವರು ಎಷ್ಟು ತವಕಪಡುತ್ತಿದ್ದರೋ ಅಷ್ಟೇ ತವಕವನ್ನು ರಾಜಕೀಯ ಪ್ರಗತಿಯ ಕಡೆಗೂ ತೋರುತ್ತಿದ್ದರು. ಇದರ ಫಲವಾಗಿ ಸಂಸ್ಥಾನದ ವರ್ಚಸ್ಸು ಅಖಂಡವಾಗಿ ಬೆಳೆಯಿತು. ಪ್ರಜೆಗಳ ಸ್ವಾತಂತ್ರ್ಯಕ್ಕಾಗಿ ಇವರು ದಿಟ್ಟತನದ ಕ್ರಮಗಳನ್ನು ಕೈಗೊಂಡರು. ಪ್ರಜಾ ಸ್ವಾತಂತ್ರ್ಯಪ್ರಿಯರಾದ ಇವರು ಪಟ್ಟಪಾಡು ಅವರ್ಣನೀಯ. ಇದನ್ನು ಸಹ ಶ್ರೀ ರಾಮಯ್ಯನವರು ತಮ್ಮ ಪುಸ್ತಕದಲ್ಲಿ ಹೃದಯಂಗಮವಾಗಿ ವರ್ಣಿಸಿದ್ದಾರೆ.

ಬ್ರಿಟಿಷ್ ಹಿಂದೂಸ್ಥಾನದ ಜನರು ಸ್ವಾತಂತ್ರ್ಯದ ಸವಿಗನಸು ಕಾಣುವ ಮೊದಲೇ ಮೈಸೂರಿನಲ್ಲಿ ಪ್ರಜಾಪ್ರತಿನಿಧಿಗಳು ವ್ಯಕ್ತಪಡಿಸಿದ ಭಾವನೆಗಳು, ಮಂಡಿಸಿದ ಪ್ರಜಾ ಸ್ವಾತಂತ್ರ್ಯದ ಬೇಡಿಕೆಗಳು ವಾಸ್ತವವಾಗಿ ಆ ಕಾಲಕ್ಕಂತು, ತೀರ ಕ್ರಾಂತಿಕಾರಕವಾಗಿದ್ದವೆಂದು ಸ್ಪಷ್ಟವಾಗಿ ಹೇಳಬಹುದು. ರಾಜ್ಯದ ಸಚಿವ ಮಂಡಲದಲ್ಲಿ ಖಾಸಗಿಯವರಿಗೂ ಸ್ಥಾನವಿರಬೇಕೆಂಬ ಬೇಡಿಕೆಯನ್ನು ಪ್ರಜಾ ಪ್ರತಿನಿಧಿಗಳು ಮುಂದಿಟ್ಟು, ಚರ್ಚಿಸಿ, ಆಡಳಿತ ವರ್ಗದವರಿಂದ ಸಹಾನುಭೂತಿಕರವಾದ ಸಮಾಧಾನ ಪಡೆದ ವರದಿಗಳು ಹಿಂದಿನ ಕಡತಗಳಲ್ಲಿ ದೊರೆಯುತ್ತವೆ. ಅಷ್ಟೇ ಅಲ್ಲ, ಬ್ರಿಟಿಷ್ ಆಳ್ವಿಕೆಯ ಪ್ರತಿಷ್ಠೆಯನ್ನು ಮುರಿಯುವ ಕೆಲವು ಸೂಚನೆಗಳೂ ಆ ಕಾಲದಲ್ಲಿ ಮೈಸೂರಿನ ಪ್ರಜಾಪ್ರತಿನಿಧಿಗಳು ತಂದದ್ದು ಗಮನಾರ್ಹವಿಚಾರ. ಇಂತಹ ನಡವಳಿಕೆಗಳು ಬಹಳವಾಗಿವೆ. ಹಿಂದಿನವರು ಸ್ವಾತಂತ್ರ್ಯಾಪೇಕ್ಷೆಯಲ್ಲಿ ಇಂದಿನವರಿಗಿಂತ ಯಾವ ಮಟ್ಟದಲ್ಲೂ, ಯಾವ ಬಗೆಯಲ್ಲೂ ಕಡಿಮೆಯಾಗಿರಲಿಲ್ಲವೆಂದು ಈ ನಿದರ್ಶನಗಳು ತೋರಿಸಿಕೊಡುತ್ತವೆ. ಇದು ಮೈಸೂರಿನ ರಾಜಕೀಯ ಪ್ರಗತಿಯ ಜ್ಯೋತಿ! ಶ್ರೀ ರಾಮಯ್ಯನವರು ಈ ಅಂಶಗಳನ್ನು ಸಂಗ್ರಹವಾಗಿ ತಮ್ಮ ಪುಸ್ತಕದಲ್ಲಿ ಅಳವಡಿಸಿಕೊಟ್ಟಿದ್ದರೆ, ಇಂದಿನ ಪೀಳಿಗೆಯವರಿಗೆ ಮಹದುಪಕಾರವಾಗಿರುತ್ತೆಂದೂ, ಹಿಂದಿನವರ ಬಗ್ಗೆ ಅವರು ಕೃತಜ್ಞತೆ ತೋರಲು ಅವಕಾಶ ದೊರೆಯುತ್ತಿತ್ತೆಂದೂ ಹೇಳಬೇಕಾಗುತ್ತದೆ.

ವಿಶ್ವೇಶ್ವರಯ್ಯನವರ ತರುವಾಯ ಬಂದ ದಿವಾನರುಗಳ ಕಾಲದಲ್ಲಿ ಸಂಸ್ಥಾನದ ರಾಜಕೀಯದಲ್ಲಿ ಬದಲಾವಣೆಗಳಾದವು. ಬ್ರಿಟಿಷ್ ಹಿಂದೂಸ್ಥಾನದಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯ ನೇರವಾದ ಪರಿಣಾಮ ಮೈಸೂರಿನ ಜನತೆಯ ಮೇಲೆ ಆಗದೆ ಇದ್ದಿಲ್ಲ. ದೇಶೀಯ ಸಂಸ್ಥಾನದ ಜನರು ಬ್ರಿಟಿಷ್ ಹಿಂದೂಸ್ಥಾನದ ಚಳುವಳಿಯಲ್ಲಿ ನೇರಪಾತ್ರ ವಹಿಸುವಂತಿಲ್ಲದಿದ್ದರೂ, ಪರೋಕ್ಷವಾಗಿ ಮೈಸೂರು ನೀಡಿದ ಬೆಂಬಲ, ಪ್ರೋತ್ಸಾಹ, ವಹಿಸಿದ ಪಾತ್ರ ಇವು ಪ್ರಶಂಸನೀಯ. ಕಾಂಗ್ರೆಸ್ಸಿನ ಶಾಖೆ ಸಂಸ್ಥಾ

ನವಲ್ಲಿ ಸ್ಥಾಪನೆಯಾದದ್ದು, ರಾಜಕೀಯದ ಒಂದು ಮೈಲಿಗಲ್ಲು. ಅಲ್ಲಿನ ಸ್ವಾತಂತ್ರ್ಯ ಬಯಕೆ ಸಂಸ್ಥಾನದ ಪ್ರಜೆಗಳಲ್ಲೂ ಅದೇ ಆಕಾಂಕ್ಷೆಯನ್ನು ಉಂಟುಮಾಡಿತು. ಇದರ ಫಲವಾಗಿ ೧೯೨೧ ರಲ್ಲೇ ಜವಾಬ್ದಾರಿ ಸರ್ಕಾರ ಸ್ಥಾಪನೆಗೆ ಪ್ರಜಾಪ್ರತಿನಿಧಿ ಸಭೆಯಲ್ಲಿ ಬೇಡಿಕೆ ಬಂದಿತು. ಇಂತಹ ಘಟನೆಗಳು ಮೇಲಿಂದ ಮೇಲೆ ಸಂಸ್ಥಾನದಲ್ಲಿ ಪ್ರಾಪ್ತವಾದವು. ಪ್ರಜಾಮಿತ್ರಮಂಡಲಿ, ಪ್ರಜಾಪಕ್ಷ ಇತ್ಯಾದಿ ಪಕ್ಷಗಳು, ಸ್ಥಾಪನೆಯಾಗಿ ಸಮಾಜದಲ್ಲಿ ಸರಿ ಸಮಾನತೆಯ ಸ್ಥಾನಮಾನಕ್ಕಾಗಿ ಚಳುವಳಿ ನಡೆಸಿದ ಪ್ರಕರಣ ರಾಜಕೀಯ ಲವಲವಿಕೆಯ ಮುನ್‌ಸೂಚನೆ ಯಾಗಿ ಕಾಣಬಂದಿತು. ಈ ಅಂಶಗಳನ್ನೆಲ್ಲಾ ಶ್ರೀ ರಾಮಯ್ಯನವರು ತಮ್ಮ ಪುಸ್ತಕದಲ್ಲಿ ಸೂಚಿಸಿದ್ದಾರೆ.

ಒಟ್ಟಿನಲ್ಲಿ ಹಳೆಯ ಮೈಸೂರಿನ ರಾಜಕೀಯ ಪ್ರಗತಿ ಗಮನಾರ್ಹವಾದ ಪ್ರಗತಿ. ಇದನ್ನು ಉದಾರ ಮನೋಭಾವದಿಂದ ಅರ್ಥಮಾಡಿಕೊಳ್ಳುವುದಾದರೆ, ಅಂಥ ಸುಹೃದಯ ಮನೋಭಾವ ತಳೆಯುವುದಾದರೆ, ಮೈಸೂರಿನವರು ಅದಕ್ಕಾಗಿ ಹೆಮ್ಮೆ ಪಟ್ಟುಕೊಳ್ಳಬೇಕಾದುದು ಸಹಜವೇ. ಮೈಸೂರನ್ನು ಹಳಿಯುವ ಪ್ರವೃತ್ತಿ ಇತ್ತೀಚೆಗೆ ಕೆಲವು ವರ್ಗದಲ್ಲಿ ಉಂಟಾಗಿರುವುದನ್ನು ಗಮನಿಸಿದರೆ, ಅವರಲ್ಲಿರುವ ಅಪಕ್ವ ತಿಳಿವಳಿಕೆಯೇ ಹೊರತು ಮತ್ತೆ ಬೇರೆ ಅಲ್ಲವೆಂದು ಹೇಳಬೇಕಾಗುತ್ತದೆ. ಇಂಥ ಜನ ಶ್ರೀ ರಾಮಯ್ಯನವರ ಪುಸ್ತಕವನ್ನು ತೆರೆದ ಮನಸ್ಸಿನಿಂದ ಓದಬೇಕೆಂದು ನನ್ನ ಸಲಹೆ.

ಶ್ರೀ ರಾಮಯ್ಯನವರ ಪುಸ್ತಕದಲ್ಲಿ ಇನ್ನೂ ಎಷ್ಟೋ ವಿಚಾರ ಪರಂಪರೆಗಳು ಅಡಕವಾಗಿವೆ. ಮುಖ್ಯವಾಗಿ ರಾಜಕೀಯ ಇತಿಹಾಸವನ್ನು ಅರಿಯಲು ಇಚ್ಛೆಯುಳ್ಳವರಿಗೆ ಇದೊಂದು ಒಳ್ಳೆಯ ಕೈಪಿಡಿ. ಇಂದಿನ ಯುವಕ ಜನಾಂಗ ನಮ್ಮ ನಾಡಿನ ಇತಿಹಾಸವನ್ನು ತಿಳಿದುಕೊಳ್ಳುವುದು, ಆ ಮೂಲಕ ನಿಜವಾದ ಜ್ಞಾನ ಸಂಪಾದನೆ ಮಾಡಿಕೊಳ್ಳುವುದು ಯುಕ್ತವಾದರೆ, ಇತ್ತಕಡೆ ಶ್ರೀ ರಾಮಯ್ಯನವರ ಪ್ರಯತ್ನ ಅನುಕೂಲವೆನಿಸುವುದು. ರಾಜಕೀಯದಲ್ಲಿ ಮನಸ್ಸನ್ನು ತಲ್ಲೀನಗೊಳಿಸಿರುವ ವ್ಯಕ್ತಿಗಳು ಆಗಾಗ್ಗೆ ವ್ಯಕ್ತಪಡಿಸುವ ಭಾವನೆಗಳು ಪಕ್ಷಪಾತದಿಂದಿರುವುದುಂಟು. ಅಂದಮೇಲೆ ರಾಮಯ್ಯನವರೂ ಸಹ ಇದಕ್ಕೆ ದೂರವಾಗಿಲ್ಲ. ಒಂದೆರಡು ಕಡೆ ಅವರ ಭಾವನಾ ಪ್ರಪಂಚ ಸ್ವಲ್ಪ ಅಡ್ಡದಾರಿ ಹಿಡಿದಿದೆ. ವ್ಯಕ್ತಿಗಳ ಬಗ್ಗೆ ತಾತ್ಸಾರ ಮನೋಧರ್ಮದ ಭಾವನೆಗಳಿವೆ. ವಿಚಾರಗಳನ್ನು ಇದ್ದಕ್ಕಿದ್ದಂತೆ ಮುಂದಿಡುವುದು ಇತಿಹಾಸಕಾರರ ಕರ್ತವ್ಯ. ಶ್ರೀ ರಾಮಯ್ಯನವರು ಈ ಕರ್ತವ್ಯ ನಿಷ್ಠರಾಗಿದ್ದಿದ್ದರೆ ಚೆನ್ನಾಗಿರುತ್ತಿತ್ತೆಂದು ಅನಿಸುತ್ತದೆ.

ಇಷ್ಟು ಸಣ್ಣ ಪುಸ್ತಕದಲ್ಲಿ ಹೆಚ್ಚಿನ ವಿವರಗಳನ್ನು ನಿರೀಕ್ಷಿಸುವುದು ಅಸಾಧ್ಯ. ಆದರೂ ಶ್ರೀ ರಾಮಯ್ಯನವರು ಉತ್ಸಾಹದ ಉತ್ಪಾದಕರಾಗಿದ್ದಾರೆ. ಅದನ್ನು ಸಾರ್ಥಕಪಡಿಸಿಕೊಳ್ಳುವುದು ಜನತೆಯ ಜವಾಬ್ದಾರಿ. ಇಂತಹ ಪುಸ್ತಕಗಳು ಕನ್ನಡ ಭಾಷೆಯಲ್ಲಿ ಹೆಚ್ಚು ಹೆಚ್ಚಾಗಿ ಬಂದು ಜಾಗೃತರಲ್ಲದ ಜನರಲ್ಲಿ ಜಾಗೃತಿಯನ್ನುಂಟು ಮಾಡಲು ಸಾಧಕವಾಗಬೇಕು. ಸಾಮಾನ್ಯ ಜನರಲ್ಲಿ ವಿಚಾರ ಪರಂಪರೆಗಳು ಮೂಡಿ, ಬಲಪಡಬೇಕು. ರಾಜಕೀಯ ಜ್ಞಾನ ಪ್ರಜಾಸತ್ತೆಯ ಅಡಿಗಲ್ಲು. ಇಂತಹ ರಾಜಕೀಯ ಜ್ಞಾನಕ್ಕೆ ಶ್ರೀ ರಾಮಯ್ಯನವರ ಪುಸ್ತಕ ಒಂದು ಸಾಧನವಾಗಿ ಪರಿಣಮಿಸಲೆಂಬುದು ನನ್ನ ಆಶೆ.

—ಕೆ. ಜೀವಣ್ಣರಾವ್.

**ಭಗವಾನ್ ಶಿರಿದಿ ಶ್ರೀ ಸಾಯಿಬಾಬಾ** : ಲೇಖಕರು : ಶ್ರೀ ವಿ. ಎಸ್. ಶಿಬ್ರೂರ್‌ಕರ್ ; ಪ್ರಕಾಶಕರು : ಸನಾತನ ಧರ್ಮ ಪ್ರಚಾರಕ ಗೋಕುಲ, ಬೆಂಗಳೂರು-೧೩, ಸೈಜು ೧/೮ ಕ್ರೌನ್ ; ಪುಟಗಳು ೫೧ ; ಬೆಲೆ ರೂ. ೨-೫೦ ನ.ಪೈ.

ನಮ್ಮ ಭರತ ಭೂಮಿಯಲ್ಲಿ ಈವರಿವಿಗೆ ಅನೇಕ ಸಾಧುಸಂತರು ಬಾಳಿ ಬೆಳಗಿ, ಆಗಿ ಹೋಗಿರುವರು. ನಮ್ಮ ನಾಡಿನ ಇತಿಹಾಸದಲ್ಲೂ ಸಹ ಸಾಧುಸಂತರಿಗೆ ಎಂದೂ ಕೊರತೆಯಾಗಿಲ್ಲ. ಈವರಿವಿಗೆ, ಈಗಲೂ ಸಹ ನಮ್ಮ ನಾಡು ಪರಕೀಯರ ಧಾಳಿಗೆ ಸಿಕ್ಕಿ ತೊಂದರೆಪಡುತ್ತಿರುವ ಅಂಶ ಸರ್ವವಿದಿತವೇ ಆಗಿದೆ. ಆದರೆ ಯಾವ ಆಕ್ರಮಣಕಾರನೂ ನಮ್ಮ ಸಾಧುಸಂತರ ಧಾರ್ಮಿಕ ಸಂಸ್ಕೃತಿಯನ್ನು ಕಸಿಯಲು ಶಕ್ತವಾಗದೇ ಇರುವ ವಿಚಾರ ಗಮನಾರ್ಹವಾಗಿದೆ.

ಪ್ರಸ್ತುತ ಗ್ರಂಥದಲ್ಲಿ ಶಿರಿದಿಯ ಸಂತರಾದ ಶ್ರೀ ಸಾಯಿಬಾಬಾರವರ ಜೀವನ ಮತ್ತು ಉಪದೇಶಗಳ ಒಂದು ಸೂಕ್ಷ್ಮ ಪರಿಚಯವಿದೆ. ಇದರಲ್ಲಿ ಸಾಯಿಬಾಬಾರವರ ವ್ಯಕ್ತಿಚಿತ್ರಣ, ಅವರ ಜನಪ್ರಿಯತೆ, ಅವರ ಜನನ ಮತ್ತು ಬಾಲ್ಯದ ವಿವರಗಳು, ಅವರ ಆತ್ಮಜ್ಞಾನ ಸಂಪತ್ತಿ, ಶಿರಿದಿಯ ಆಗಿನ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗಳು, ಅವರು ನಡೆಸಿದ ಕೆಲವು ಪವಾಡಗಳು, ಇತ್ಯಾದಿ ವಿಷಯಗಳಮೇಲೆ ಹರಿಸಿದ ವಿಹಂಗಮ ನೋಟವಿದೆ. ಕೊನೆಯಲ್ಲಿ ಅವರ ನುಡಿ ಮುತ್ತುಗಳು, ಹಿತವಚನಗಳು, ಮತ್ತು 'ಸಾಯಿಗೀತ ಮುಕ್ತಾವಲೀ' ಎಂಬ ಶೀರ್ಷಿಕೆಯಲ್ಲಿ ಅವರನ್ನು ಕುರಿತಾದ ಪ್ರಾರ್ಥನಾ ಗೀತಗಳು ಇವೆ.

ಶ್ರೀ ಸಾಯಿ ಭಕ್ತರಿಗೆ ಮತ್ತು ಸಾಧುಸಂತರ ಜೀವನಿಯಲ್ಲಿ ಆಸಕ್ತಿಯುಳ್ಳವರಿಗೆ ಇದು ಉಪಯೋಗಕರವಾದ ಪುಸ್ತಕ. ಅಕ್ಷರಸ್ಖಾಲಿತ್ಯ, ವಿಚಿತ್ರ ಪದಪ್ರಯೋಗಗಳು; ಉದಾ:-'ಕಹಿಬೇವಿನ ಮರ' (ಸಿಹಿ ಬೇವಿನ ಮರವೂ ಇದೆಯೆ ?!) 'ಘೋರಿ' (ಗೋರಿ) ಇತ್ಯಾದಿಗಳು. ಸರಳ ಪಠಣದ ಓಟಕ್ಕೆ ತಡೆಹಾಕುತ್ತವೆ. ಪುಸ್ತಕದ ಮುದ್ರಣ ಮತ್ತು ಕಾಗದ ಸುಂದರವಾಗಿದ್ದರೂ, ೫೧ ಪುಟದ ಪುಸ್ತಕಕ್ಕೆ ರೂ. ೨-೫೦ ನ.ಪೈ. ಬೆಲೆ ಹೆಚ್ಚೆಂದೇ ಅನ್ನಿಸುತ್ತದೆ. ಅಥವಾ ಭಕ್ತಜನಗಳಿಗೆ ಅದು ಹೆಚ್ಚಲ್ಲವೋ ಏನೋ ಅದು ಪ್ರಕಾಶಕರಿಗೆ ತಿಳಿದ ಅಂಶ.

**ಶ್ರೀ ವಾಗೀಶ ಕಾವ್ಯಮಾಲೆ:** ಲೇಖಕರು: 'ವರಕವಿ ವಾಗೀಶ'; ಪ್ರಕಾಶಕರು: ಎಂ. ಮುದ್ದಣ್ಣ ಅಂಡ್ ಸನ್ಸ್' ಬೆಂಗಳೂರು; ಸೈಜು ೧/೮ ಕ್ರೌನ್; ಪುಟಗಳು ೮೦.

ಈ ಕಾವ್ಯ ಮಾಲೆಯಲ್ಲಿ ಶ್ರೀ ಜಗದ್ಗುರು 'ವರಕವಿ ವಾಗೀಶ'ರವರು ಪೂರ್ವಾಶ್ರಮದಲ್ಲಿ ರಚಿಸಿರುವ, ಅಸಂಖ್ಯ ಕಾವ್ಯಗಳಿಂದ ಆಯ್ದುಕೊಂಡ ಕೆಲವು ಪದ್ಯಗಳನ್ನು ಸಂಗ್ರಹಿಸಿ ಪೋಣಿಸಲಾಗಿದೆ. ಶ್ರೀ ಜಗದ್ಗುರುಗಳು ವರ ಕವಿಗಳಾದಂತೆ ಆಶುಕವಿಗಳೂ ಹೌದು. ಈ ಪದ್ಯಗಳು ಕಾವ್ಯಾಭಿರುಚಿಯುಳ್ಳ ಸರ್ವರ ಮನ್ನಣೆಯನ್ನು ಪಡೆಯುವದರಲ್ಲಿ ಸಂಶಯವಿಲ್ಲ. ಸಹೃದಯ ಪಾಠಕರಿಗೆ ಇವನ್ನು ಸುಲಭವಾಗಿ ರಾಗಗಳಲ್ಲಿ ಹಾಡಿಕೊಳ್ಳಲನುವಾಗುವಂತೆ ಸರಳ ಛಂದಸ್ಸಿನಲ್ಲಿ ರಚಿಸಲಾಗಿದೆ.

ಶ್ರೀಶೈಲ ಪುಣ್ಯಕ್ಷೇತ್ರ ವರ್ಣನೆ, ಸತ್ಕರ್ಮಗಳಿಗೆ ಆಹ್ವಾನ, ಮೈಸೂರು ರಾಜ್ಯದ ಒಂದು ಪುಟ್ಟ ವರ್ಣನೆ, ಸೃಷ್ಟಿವೈಚಿತ್ರ್ಯವನ್ನು ಕುರಿತಾದ ಕೆಲವು ಪದ್ಯಗಳು, ಆತ್ಮ ಬೋಧೆ, ಬಾಲಕರಿಗೆ ಉಪದೇಶ, ಇತ್ಯಾದಿ ನೀತಿಪೂರ್ಣವೂ, ಬೋಧಪ್ರದವೂ ಆದ ವಿವಿಧ ವಸ್ತುಗಳನ್ನು ತಮ್ಮ ಕಾವ್ಯಕ್ಷೇತ್ರದಲ್ಲಿ ಕವಿಯು ಅಳವಡಿಸಿಕೊಂಡಿದ್ದಾರೆ.

ಸರಳವೂ ಮತ್ತು ನೇರವಾಗಿ ಮನಮುಟ್ಟುವಂತೆಯೂ ಇರುವ ಶೈಲಿ. ದೀರ್ಘವಲ್ಲದ, ನಿರಾಡಂಬರ ಪದ ಪ್ರಯೋಗ, ಇವರ ವೈಶಿಷ್ಟ್ಯವಾಗಿದೆ.

ಉದಾಹರಣೆ :—

'ಪರದೇಶದವರಂತೆ ನಿಮ್ಮ ಮರ್ಯಾದೆಗಳು
ಕಿರಿದಾದವಲ್ಲವದರಿಂದ ನೀವು' ಪುಟ ೨೩

ಜ್ಞಾನವೆಂಬ ಕಡಿವಾಣವನ್ನಿಕ್ಕಿ
ಮಾನವೆಂಬ ಕುಕ್ಕೆಯ ನೊಗಕಿಕ್ಕಿ
ಸ್ವಾನುಭವದ ಶಮೆ ಚಟಕವನಿಕ್ಕಿ
ಹೀನಮಾರ್ಗದಿಂದೆಳೆಧುಮ್ಮಿಕ್ಕಿ ಪುಟ ೩೦

ಅರಿಯದೆಲೆ ಮೃಗತೃಷ್ಣೆಗೊಳಗಾಗಿ ಸರ್ವರೂ
ಪರಿಪರಿಯ ಕಷ್ಟವನು ಪೊಂದುತಿಹರು ಪುಟ ೪೯

ಈ ಕಾವ್ಯ ಮಾಲೆಯ ಪದ್ಯಗಳು ಕರ್ನಾಟಕದ ತುಂಬೆಲ್ಲಾ ಜನಪ್ರಿಯವಾಗಿವೆ ಎಂದು ಪ್ರಕಾಶಕರೇ ತಮ್ಮ "ನುಡಿ" ಯಲ್ಲಿ ಹೇಳಿಕೊಂಡಿದ್ದಾರೆ. ಹಾಗಾಗಲೆಂಬುದೇ ನಮ್ಮ ಆಶಯ.

**—ಕೆ. ಎಸ್. ಸೂಲಿಬೆಲೆ**

**ಶ್ರೀ ಗಣೇಶ ಮಹಾತ್ಮೆ** (ಯಕ್ಷಗಾನ): ಲೇಖಕರು-ಪ್ರಕಾಶಕರು: ಡಿ. ವಿ. ಹೊಳ್ಳ, ವಿದ್ವಾನ್, ಕುಂದಾಪುರ, ದ. ಕ.; ಪುಟಗಳು ೧೮; ಬೆಲೆ ೨೫ ನ.ಪೈ.

ಇದು ಸುಪ್ರಸಿದ್ಧವಾಗಿರುವ ಶ್ರೀ ಗಣಪತಿಯ ಸೃಷ್ಟಿ ಮೊದಲಾದುವುಗಳು, ಯಕ್ಷಗಾನದ ಆದರಲ್ಲೂ ಕೇವಲ ಪದ್ಯಮಯವಾದ ರೀತಿಯಲ್ಲಿ ರಚಿತವಾಗಿರುವ ಕೃತಿ.

ಪ್ರಾರಂಭದಲ್ಲಿ ವಿಘ್ನನಾಶಕನಾದ ಶ್ರೀ ಗಜಾನನ, ಮೃತ್ಯುಂಜಯ, ದೇವಿಭಾರತಿ—ಇವರ ಸ್ತುತಿರೂಪವಾದ ಪದ್ಯವಿದೆ. ಎರಡನೆಯದರಲ್ಲಿ ಇಡೀ ಕಥಾನಕದ ಸಾರಾಂಶವನ್ನು **ಸೂಚ್ಯಾರ್ಥವಾಗಿ** ಹೇಳಿದೆ. "ನೈಮಿಶಾರಣ್ಯದಲಿ ಸೂತನು ಮುನಿಜನಕೆ ಪೇಳ್ದ—ಆ ಗಣಪಾಲನ ಉಜ್ವಲ ಮಹಿಮೆಗಳ . . . ತಾ ಶೈಲಜಾತೆಯ ಪುತ್ರನೆನಿಸಿದ ಮೂಲ ಕಥೆಯ . . . ಹರನಶೂಲಕೆ ತಲೆಯನಿತ್ತು ಆನೆಯ ಶಿರವ ನೇರಿಸಿ ಗಜಮುಖನೆನಿಸಿದ . . . . ಪ್ರಥಮ ಪೂಜೆಯಗೊಂಡು, ಗುಹನನು ಸೋಲಿಸಿದ, ಆ ಮೃಗದರಗೆ ಶಪಿಸಿದ . . . ಕಥೆಯ" ಬರೆವೆನು ಎಂದು ಹೇಳಿರುವುದಲ್ಲದೆ, 'ಕೊರತೆಯಿರೆ ಬುಧವರರು ತಿದ್ದಲು ಬೇಕು'—ಎಂಬುದಾಗಿ ಪ್ರಾರ್ಥಿಸಿಕೊಂಡು ತನ್ಮೂಲಕ ವಿನಯವನ್ನು ವ್ಯಕ್ತಪಡಿಸಿದ್ದಾರೆ—ಕೃತಿಕಾರರು.

ಆ ಬಳಿಕ—'ಏನಿದ್ದರೇನು ಸಂತಾನವಿಲ್ಲದೆ?' ಎಂದು ಚಿಂತಿಸಿದ ಗಿರಿಜೆಗೆ ಸಮಾಧಾನ ಹೇಳುತ್ತಾನೆ ಶಂಕರ. ಅಂತೇ ಪರಮೇಶ್ವರಿಯು ಮಂಗಲದ್ರವ್ಯಗಳ ಲೇಪನವಗೈದಳು . . . ಅಂಗಶೃಂಗಾರದಲಿ ಬೆವರಿದ ಅಂಗರಾಗವನೆತ್ತಿಕೊಳುತಾ ಮಂಗಲಾಕೃತಿಯನ್ನು ಗೈದಳು . . . ಪ್ರಾಣಕೊಟ್ಟಳು . . . ಹಾಸಿಬಾರದ ವರವನಿತ್ತಳು . . . ಬಾಗಿಲ ಮಣೆಯಮೇಲ್ ಕುಳ್ಳಿರಿಸುತೆಂದಳು . . . ಹರನೆ ಬಂದರು . . . ಈ ದ್ವಾರವ ಬಿಡದಿರೆನುತ . . . ತೆರಳಿದಳು ಮಜ್ಜನಕೆ;—ಹರನು ನಡೆದೈತಂದನು . . . ಬಾಲಕನ ಕಂಡು . . . ಹುಡುಗನಾ ಕಥೆಯರಿತು ಬಾರೈ ಎನಲು . . . , ನಂದೀ

ಶ್ವರನು 'ಯಾರೆಲ ಕ್ಷುದ್ರಕುಮಾರನೆ . . .' ಎಂದು ಮೂದಲಿಸಿ ಪರಸ್ಪರ ಹೋರಾಟ ನಡೆದು—ಕಡೆಗೆ ಶಿವನೆಡೆಗೆಯ್ದು ತನ್ನ ಸೋಲನೊರೆದಂ.

ಅನಂತರದಲ್ಲಿ ಶಿವನು ಕಳುಹಿಸಿದ ಬ್ರಹ್ಮನಿಗೂ ಕೂಡ 'ಹೆತ್ತ ಮಾತೆಯ ಮಾತಿಗೆರಡುಂಟೇ? ಮೃತ್ಯುವೊ ರುದ್ರನೊ ಬರಲಿ ಗೆದ್ದಪೆನು' ಎಂದು ಉತ್ತರಿಸಿ ಕಳುಹಿಸುತ್ತಾನೆ. ಅಲ್ಲಿಂದ ಮುಂದೆ ಕದನಮುಖದೊಳುನಿಂದ ಇಂದ್ರಾದಿದೇವತೆಗಳು ಕೂಡ ಸೋತು ಹರನಲ್ಲಿಗೈತಂದು—ಆ ಘೋರನ ರೀತಿಯನ್ನು ತಿಳಿಸುತ್ತಾರೆ.

ಆಮೇಲೆ ಹರಿಯೊಂದಿಗೆ ಕರೆತಂದ ಹರನು ಮುಳಿದು ಶೂಲದಿಂದವನ ಶಿರವ ಕತ್ತರಿಸೆ, ಇತ್ತ ಗಿರಿಸುತೆ ಒಡನೆ ಸಿಡಿದೆದ್ದು ಘೋರಶಕ್ತಿಗಳ ನಿರ್ಮಿಸಿದಳು. ತತ್ಫಲವಾಗಿ ಎಲ್ಲಿ ನೋಡಿದರೂ ಸುಖವಿಲ್ಲದಂತಾಗೆ, ಸುರಪತಿ ಭೂತಪತಿಗೆ ವಿಷಯವ ನೊರೆದಂ.

ಆಗ ಬ್ರಹ್ಮಾದಿಗಳೆಲ್ಲ ಸ್ತುತಿಸಲು, ಮಾದೇವಿ ಶಾಂತಿಯನು ತಳೆದು . . . 'ಪುತ್ರನನು ಬದುಕಿಸಿ ಕೊಟ್ಟರೆ ಸೈರಿಪೆ'ನೆನ್ನುತ್ತಾಳೆ. ಮಾದೇವಂ 'ಉತ್ತರಮುಖವಾಗಿ' ಮೊದಲು ದೊರಕಿದ ಪ್ರಾಣಿಯ ಶಿರವ ಕತ್ತರಿಸಿ ತಂದಿರಿಸಿರಿ—ಎನೆ, ಮಹಾಗಜದ ಶಿರವ ತಂದು . . . ಆ ದೇಹಯಂತ್ರಕೇರಿಸಿ ಬಿಟ್ಟರು.

ಜೀವನ ಪಡೆದು, ಎದ್ದು ಬಂದಾ ಮಗನ ಅದ್ರಿಜಾತೆ—ಹರಸಿದಳು; ಪೂಜಿಸಿದಳು. ಮತ್ತೆ ಶಿವನು 'ನೀ ವಿಘ್ನೇಶನಾಗಿ ಸತ್ಯ ಸುಖದೊಳಾಳು' ಎಂದು ಹರಸಿ ಸುರರ ಮೊತ್ತದಲಿ ಗಣಾಧಿಪತ್ಯವಿತ್ತು 'ಯಾವ ಭಾದ್ರಪದ ಶುದ್ಧ ಚೌತಿ ವ್ರತವ ಗೈವಂ—ಅವಗೆ ಸಕಲಭಾಗ್ಯವ ನೀವಂ' ಎಂದು ವರವನಿತ್ತನು. ಸಕಲ ದೇವತೆಗಳೂ ಬೇರೆ ಬೇರೆ ವರಂಗಳನಿತ್ತರ್.

ಒಂದು ದಿನ ಶಿವಂ 'ನಮ್ಮ ಕುಮಾರರಲಿ ಶೂರರು . . . ಯಾರು?' ಎನೆ, ಗಜಮುಖನುಂ ತಾರಕಾಂತಕನುಂ ತಂತಮ್ಮ ಸಾಹಸಗರ್ಪಿಕೆಯ ಕೊಂಡಾಡಿಕೊಳ್ಳಲು, 'ಈ ಧರಿತ್ರಿ ಮೊದಲು ಸುತ್ತಿ ಸಾಧಿಸುವುದು ಜಯವ' ಎಂದು ಸಲಹೆ ಕೊಡುವನು. . . . ಕೇಕಿಯನಡರುತ ನಡೆದನು ಷಣ್ಮುಖ; ಗಜಮುಖಂ—'ಹೆತ್ತವರೇ ಸತ್ಪುತ್ರರಿಗುತ್ತಮ ತೀರ್ಥ ಕ್ಷೇತ್ರಂಗಳು' ಎಂದಾಕ್ಷಣ ತಾಯ್ತಂದೆಗಳಿಗೆ ಬಲದಿಂದಲಿ ಮೂರ್ಬಾರಿ ಪ್ರದಕ್ಷಿಣೆ ಗೈದಂ.

ಅವರೀರ್ವರೂ ಹೆಣಗುತಿರೆ, ಮಾದೇವ ನೊಡನೆದ್ದು ಶಾಂತರಾಗಿರೆಂದು ಪೇಳೆ, ಆಗಜೆ 'ಷಣ್ಮುಖನು ಪರಾಕ್ರಮದಲಿ, ಗಣಪನು ವಿಚಾರಗಳಲಿ—ಘನ ಸಮರ್ಥರಹರು' ಎಂದು ಸಾಂತ್ವನ ಗೊಳಿಸಿದಳು. ಜೊತೆಗೆ ಚಂದ್ರಮನಿಗೆ ಬುದ್ಧಿಗಲಿಸಿದ ಸಂಗತಿಯೂ ಹದನಾಗಿ ಚಿತ್ರಿತವಾಗಿದೆ ಹೀಗೆ ಹಿತಮಿತವಾಗಿ ವಿನೂತನ ಮಾರ್ಗದಲ್ಲಿ ವಿರಚಿತವಾಗಿರುವ ಈ ಕೃತಿ ಕಿರಿದಾದರೂ ಅವಲೋಕಿಸತಕ್ಕುದಾಗಿದೆ.

**ಶ್ರೀ ರಾಧೇಶ್ಯಾಮಯುಗಲ ಸ್ತೋತ್ರ ರತ್ನಮಾಲಾ:** ಸಂಗ್ರಾಹಕರು: ಕೀರ್ತನಾಗ್ರೇಸರ ಭದ್ರಗಿರಿ ಅಚ್ಯುತದಾಸರು; ಪ್ರಕಾಶಕರು: ದಾಸಾಶ್ರಮ ಪಬ್ಲಿಕೇಶನ್ಸ್, ೧೬೪, ೫ನೇ ಬ್ಲಾಕ್, ರಾಜಾಜಿ ನಗರ, ಬೆಂಗಳೂರು–೧೦; ಪುಟಗಳು ೩೪.

ಬ್ರಹ್ಮವೈವರ್ತಪುರಾಣ ಮತ್ತು ನಾರದ ಪುರಾಣಗಳಿಂದ ಆರಿಸಿದ ಶ್ಲೋಕಗಳ ಸಂಗ್ರಹವೇ ಈ ಕೃತಿರೂಪ ತಾಳಿದೆ. ನಿತ್ಯ ಪೂಜಾ ಪ್ರಾರ್ಥನೆಗೆ ಅನುಕೂಲವಾಗಿದ್ದು, ಆಧ್ಯಾತ್ಮಿಕ ಶಾಂತಿದಾಯಕವಾದುದೂ ಆಗಿದೆ.

ಅಷ್ಟಾವಕ್ರ ಕೃತ ಕೃಷ್ಣ ಸ್ತುತಿ ಹಾಗೂ ನಾರಾಯಣೋಕ್ತ (ನಾರದರಿಗೆ ಉಪದೇಶಿಸಿದ) ರಾಧಾ ನಾಮಾವಳಿ—ಇವುಗಳಿಗೆ ಕನ್ನಡದಲ್ಲಿ ಅರ್ಥ ಬರೆದಿರುವುದರಿಂದ ಜನಸಾಮಾನ್ಯರಿಗೂ ತಿಳಿಯಲನುವು ದೊರೆತಿದೆ.

ಅಂತೂ ಮಾನವಜೀವಿತದ ಮುಖ್ಯ ಗುರಿಯಾದ—ನೈಜ ಸುಖವೆನಿಸಿದ—ಮುಕ್ತಿ ಪಡೆಯಬೇಕೆಂಬುದೇ ಈ ಸಂಗ್ರಹದ ಉದ್ದೇಶವಾಗಿರೋಣದರಿಂದ ಈ ಕಾರ್ಯ ಸ್ವಾಗತಾರ್ಹವೇ ಸೈ.

**ವೇಣುನಾದ:** ರಚಯಿತರು: ಕೀರ್ತನಕೇಸರಿ ಹರಿದಾಸ ಭದ್ರಗಿರಿ ಕೇಶವ ಪೈ, ಬಿ.ಎ., ಎಲ್‌ಎಲ್.ಬಿ., ಬೆಂಗಳೂರು; ಪುಟಗಳು ೫೧.

ಕೃತಿಕಾರರೇ ಸೂಚಿಸಿರುವಂತೆ—ಭಗವಂತ ಅವರ ದೇಹವನ್ನು ವೇಣುವಾಗಿಸಿ ಹೊರಡಿಸಿದ ನಾದ ತರಂಗಗಳು—'ಹೃದಯತರಂಗ'ಗಳಾಗಿ ಇಲ್ಲಿ ಭಜನರೂಪದಿಂದ ಕಾಣಿಸಿಕೊಂಡಿವೆ.

ಇದರಲ್ಲಿ ಸರಿಸುಮಾರು ಅರವತ್ತನಾಲ್ಕು ಗೀತಗಳಿವೆ. ಬಹುಮಟ್ಟಿಗೆ 'ದಾಸ ಕೇಶವನುತ' ಇಲ್ಲವೆ 'ಕೇಶವದಾಸನುತ'—ಎಂಬ ಅಂಕಿತದಿಂದ ಕೂಡಿದುವೇ ಆಗಿವೆ.

ತರಂಗತಾಕುವ ಮುನ್ನ—ತತ್ವಜಿಜ್ಞಾಸ್ಯ, ಮನದ ಮಥನ, ದೇವನಿರುವನೆಂಬುದಕ್ಕೆ ಆಧಾರ, ಬಾಳ್ವೆ ಬಾಳದೆ ಬಿಡದು—ಮುಂತಾದ 'ಸಪ್ತ' ಪ್ರಕರಣಗಳು ಅತ್ಯುಪಯುಕ್ತ ಲೇಖನಗಳೆನಿಸಿವೆ. ಕೊನೆಯಲ್ಲಿ 'ಅನುಭವವಾಣಿ' ಎಂಬ ತಲೆಬರಹದ ಪಟ್ಟಿಯೊಂದಿದ್ದು, ಅದರಲ್ಲಿನ ಹನ್ನೆರಡು ವಚನಗಳೂ ಅಣ್ಣ ಬಸವೇಶ್ವರನ ದಿವ್ಯನುಡಿಗಳನ್ನು ನೆನಪಿಗೆ ತರುವಂತಿವೆ.

ಒಟ್ಟಿನಲ್ಲಿ ದಾಸವರ್ಯರ ಈ ವಿಧದ ಕೆಲಸ ಅತ್ಯಂತ ಯೋಗ್ಯವಾದುದೆಂಬುದರಲ್ಲಿ ಸಂಶಯವಿಲ್ಲ.

—ಪಂಡಿತ ಕೆ. ಪಿ. ಶಿವಲಿಂಗಯ್ಯ

# ಪಂಡಿತರತ್ನಂ ಬಿ. ಶಿವಮೂರ್ತಿ ಶಾಸ್ತ್ರಿಗಳವರ ಷಷ್ಠಿಪೂರ್ತಿ ಶಾಂತಿ

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ, "ಶರಣ ಸಾಹಿತ್ಯ" ಪತ್ರಿಕೆಯ ಸಂಪಾದಕರೂ ಆದ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರಿಗೆ ಅರುವತ್ತು ವರ್ಷಗಳು ತುಂಬಿದ್ದರ ಸುಸಂದರ್ಭದಲ್ಲಿ ಗಾಂಧಿನಗರದ ಶ್ರೀ ಗುರುಸಿದ್ದಪ್ಪ ಕಲ್ಯಾಣ ಮಂದಿರದಲ್ಲಿ ಅವರ ಷಷ್ಠಿಪೂರ್ತಿ ಶಾಂತಿ ಮಹೋತ್ಸವವನ್ನು ವಿಧ್ಯುಕ್ತವಾಗಿ ನೆರವೇರಿಸಲಾಯಿತು. ಬೆಳಿಗ್ಗೆ ಶಾಂತಿ ಕರ್ಮದ ಅಂಗವಾಗಿ ಕಳಶ ಸ್ಥಾಪನೆ, ಹವನ ಹೋಮ ಮೊದಲಾದ ಕಾರ್ಯಕ್ರಮಗಳು ನಗರದ ಬೇಲಿ ಮಠಾಧ್ಯಕ್ಷರಾದ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಮತ್ತು ಹಲಗೂರಿನ ಬೃಹನ್ಮಠಾಧ್ಯಕ್ಷರಾದ ಶ್ರೀ ವೃಷಭಲಿಂಗ ದೇಶಿಕೇಂದ್ರ ಸ್ವಾಮಿಗಳವರ ನೇತೃತ್ವದಲ್ಲಿ ನಡೆದವು.

ಸಂಜೆ ನಡೆದ ಸರಳ ಸಮಾರಂಭದಲ್ಲಿ ನಗರದ ಗಣ್ಯರೂ, ಶ್ರೀ ಶಾಸ್ತ್ರಿಗಳ ಆಪ್ತ ಮಿತ್ರರೂ, ಬಂಧು ವರ್ಗದವರೂ ಅಪಾರವಾಗಿ ಬಂದು ಅವರಿಗೆ ಹರಕೆಯನ್ನು ಸಲ್ಲಿಸಿದರು. ಎಲ್ಲರನ್ನೂ ಶ್ರೀ ಶಾಸ್ತ್ರಿಗಳ ಮಕ್ಕಳಾದ ಶ್ರೀ ಎಚ್. ಎಸ್. ರೇಣುಕಾಪ್ರಸಾದ್ ಹಾಗೂ ಅವರ ಪತ್ನಿ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್‌ರವರೂ ಸ್ವಾಗತಿಸಿದರು.

ಸಮಾರಂಭಕ್ಕೆ ಹೈಕೋರ್ಟಿನ ಶ್ರೇಷ್ಠ ನ್ಯಾಯಾಧೀಶ ಶ್ರೀ ನಿಟ್ಟೂರು ಶ್ರೀನಿವಾಸರಾವ್, ನ್ಯಾಯಮೂರ್ತಿಗಳಾದ ಶ್ರೀ ಎ. ಆರ್. ಸೋಮನಾಥ ಅಯ್ಯರ್, ಶ್ರೀ ಸದಾಶಿವಯ್ಯ, ಶ್ರೀ ಸದಾನಂದ ಹೆಗ್ಗಡೆ, ಶ್ರೀ ಮಿರ್ ಇಕ್ಬಲ್ ಹುಸೇನ್, ಸಚಿವ ಬಿ. ಡಿ. ಜತ್ತಿ, ಉಪಸಚಿವರುಗಳಾದ ಶ್ರೀ ವೈ. ರಾಮಚಂದ್ರ, ಶ್ರೀ ಅಬ್ದುಲ್ ಗಫಾರ್, ಶ್ರೀ ಪ್ರಭಾಕರ್, ಮೇಯರ್ ಶ್ರೀ ಕೆ. ಎಂ. ನಂಜಪ್ಪ, ಉಪಮೇಯರ್ ಶ್ರೀಮತಿ ಪಿ. ಆರ್. ಜಯಲಕ್ಷಮ್ಮ, ವಾಣಿಜ್ಯ ಸಂಘದ ಅಧ್ಯಕ್ಷ ಕೋಟಾ ರಾಮಯ್ಯಶೆಟ್ಟಿ, ವಿಧಾನ ಪರಿಷತ್ತಿನ ಉಪ ಸಭಾಪತಿ ಶ್ರೀಮತಿ ಎಂ. ಆರ್. ಲಕ್ಷಮ್ಮ, ಕನ್ನಡದ ಖ್ಯಾತ ಸಾಹಿತಿಗಳಾದ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್, ಶ್ರೀ ದ. ರಾ. ಬೇಂದ್ರೆ, ಶ್ರೀ ವೀರಕೇಸರಿ ಸೀತಾರಾಮ ಶಾಸ್ತ್ರಿ, ಶ್ರೀ ಪು. ತಿ. ನರಸಿಂಹಾಚಾರ್, ಪ್ರೊ|| ಜವರೇಗೌಡ, ಶ್ರೀ ಅ. ನ. ಕೃಷ್ಣರಾವ್, ಶ್ರೀ ಕಾ. ಸ. ಧರಣೇಂದ್ರಯ್ಯ, ಶ್ರೀ ನಿರಂಜನ, ಶ್ರೀ ಎಲ್. ಗುಂಡಪ್ಪ, ಶ್ರೀ ಎಂ.ಪಿ.ಎಲ್. ಶಾಸ್ತ್ರಿ ಮೊದಲಾದವರೂ, ಆಗಮಿಸಿದ್ದರು. ಸೊಲ್ಲಾಪುರದ ಮಿತ್ರ ಸಮಾಜದವರು, ಹಲಗೂರಿನ ವೀರಶೈವ ತರುಣ ಸಂಘದವರು, ಮಂಡ್ಯದ ಸಿ. ಕೆ. ಎಂ. ಕಲಾವಿದರು, ಬೆಂಗಳೂರಿನ ಜ್ಞಾನಜ್ಯೋತಿ ಕಲಾವಿದರು ಅರ್ಪಣ ಪತ್ರಿಕೆಯನ್ನು ಶ್ರೀ ಶಾಸ್ತ್ರಿಗಳಿಗೆ ಅರ್ಪಿಸಿದರು.

ಶ್ರೀ ಶಾಸ್ತ್ರಿಗಳು ಸಾಹಿತ್ಯ ಸೇವೆಯನ್ನು ಮುಂದುವರೆಯುವಂತೆ ಗ್ರಂಥ ಪ್ರಕಟಣೆಗಾಗಿ ನಿವೃತ್ತ ಶ್ರೇಷ್ಠ ನ್ಯಾಯಾಧೀಶ ಶ್ರೀ ಜಿ. ಪರಮಶಿವಯ್ಯನವರು, ತುಮಕೂರಿನ ಪುರಸಭಾ ಸದಸ್ಯ ಶ್ರೀ ಎಚ್. ಎ. ಶಿವಾನಂದ ಅವರು ೫೦೧ ರೂ. ಗಳನ್ನು ಕಾಣಿಕೆಯಾಗಿ ಇತ್ತರು.

ಸಮಾರಂಭದ ಅಂಗವಾಗಿ ಕುಮಾರಿ ಸಿ. ಕೆ. ಪದ್ಮಾ ಮತ್ತು ವೃಂದದವರಿಂದ ಸಂಗೀತ ಕಛೇರಿಯನ್ನು ಏರ್ಪಡಿಸಲಾಗಿದ್ದಿತು.

ಶ್ರೀ ಶಾಸ್ತ್ರಿಗಳಿಗೆ ಆಯುರಾರೋಗ್ಯವನ್ನು ಕೋರಿ ಭಾರತಾದ್ಯಂತ ಅನೇಕ ಶುಭ ಸಂದೇಶಗಳು ಬಂದಿದ್ದುವು. ಪ್ರಮುಖವಾಗಿ ಮೈಸೂರಿನ ರಾಜ್ಯಪಾಲರು, ಕೇಂದ್ರ ಸಚಿವ ಶ್ರೀ ಬಿ. ಗೋಪಾಲರೆಡ್ಡಿ, ಡೆಪ್ಯುಟಿ ಸ್ಪೀಕರ್ ಶ್ರೀ ಎಸ್. ವಿ. ಕೃಷ್ಣಮೂರ್ತಿರಾವ್, ಶೃಂಗೇರಿ ಜಗದ್ಗುರುಗಳು, ಚಿತ್ರದುರ್ಗದ ಜಗದ್ಗುರುಗಳು, ಉಡುಪಿಯ ಪುತ್ತಿಗೆ ಮಠಾಧೀಶ್ವರರು, ಕೂಡ್ಲಿ ಶೃಂಗೇರಿ ಜಗದ್ಗುರುಗಳು, ಹುಬ್ಬಳ್ಳಿ ಮೂರುಸಾವಿರ ಮಠಾಧೀಶ್ವರರು, ಸಿರಿಗೆರೆ ಮತ್ತು ಸುತ್ತೂರು ಜಗದ್ಗುರುಗಳು, ಸಿದ್ಧಗಂಗೆ ಶ್ರೀ ಶಿವಕುಮಾರ ಸ್ವಾಮಿಗಳವರು, ಧಾರವಾಡದ ಮುರುಘಮಠಾಧ್ಯಕ್ಷರು ಮೊದಲಾದ ಅನೇಕ ಮಠಾಧೀಶರೂ, ರಾಷ್ಟ್ರಕವಿ ಗೋವಿಂದ ಪೈ, ಶ್ರೀ ರಂ. ಶ್ರೀ. ಮುಗಳಿ, ಶ್ರೀ ತೀ. ನಂ. ಶ್ರೀಕಂಠಯ್ಯ, ಶ್ರೀ ಡಿ. ಕೆ. ಭೀಮಸೇನರಾವ್, ಪ್ರೊ|| ಸ. ಸ. ಮಾಳವಾಡರು, ಮದ್ರಾಸಿನ ಮೇಯರ್ ಶ್ರೀ ಕುಚೇಲರ್ ಅವರು ಸಂದೇಶಗಳನ್ನು ಕಳಿಸಿದ್ದರು.

—'ತಾಯಿನಾಡು'

# ಪರಿಷತ್ತಿನ ಸುದ್ದಿಗಳು

## ಭಾರತೀಯ ಭಾವೈಕ್ಯ ಕವಿಗೋಷ್ಠಿ

ದಿನಾಂಕ ೨೮-೨-೧೯೬೩ ರಂದು ಸಂಜೆ ೬ ಗಂಟೆಗೆ ರಾಜ್ಯದ ರಾಷ್ಟ್ರರಕ್ಷಣಾ ಸಮಿತಿಯ ಸಂಚಾಲಕರಾದ ಶ್ರೀ ಎಂ. ಪಿ. ಎಲ್. ಶಾಸ್ತ್ರೀ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಭಾರತೀಯ ಭಾವೈಕ್ಯ ಕವಿಗೋಷ್ಠಿಯನ್ನು ಡಾ॥ ಮಾಸ್ತಿ ವೆಂಕಟೇಶ ಐಯಂಗಾರ್ಯರ ಅಧ್ಯಕ್ಷತೆಯಲ್ಲಿ ಏರ್ಪಡಿಸಿದ್ದರು. ಮೊದಲು ಶ್ರೀ ಎಂ. ಆರ್. ವರದಾಚಾರ್ ಅವರಿಂದ ಪ್ರಾರ್ಥನೆಯಾಯಿತು. ನಾಡಿನ ಪ್ರಸಿದ್ಧ ಕವಿಗಳಾದ ಸರ್ವಶ್ರೀ ಪು. ತಿ. ನರಸಿಂಹಾಚಾರ್, ಜಿ. ಪಿ. ರಾಜರತ್ನಂ, ಎಂ. ವಿ. ಸೀತಾರಾಮಯ್ಯ, ಕೆ. ಎಸ್. ನರಸಿಂಹಸ್ವಾಮಿ, ನಾರಾಯಣ ಸಂಗಮ, ಕೆ. ಎಸ್. ನಿಸ್ಸಾರ್ ಅಹಮದ್, ರಾಮಚಂದ್ರಶರ್ಮ ತ್ಯಾಗಲಿ, ಶ್ರೀಮತಿ ದೇವಕಿಯಮ್ಮ ಅಪ್ಪಯ್ಯ ಇವರುಗಳು ಭಾಗವಹಿಸಿದ್ದರು. ಪರಿಷತ್ತಿನ ಅಧ್ಯಕ್ಷರಾದ ಪಂಡಿತ ರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಸಕಲರನ್ನೂ ಸ್ವಾಗತಿಸಿ ಭಾವೈಕ್ಯ ಕವಿಗೋಷ್ಠಿಯ ಉದ್ದೇಶವನ್ನು ವಿವರಿಸಿ ಇಂತಹ ಗೋಷ್ಠಿಗಳು ಎಲ್ಲ ಕಡೆಗಳಲ್ಲಿಯೂ ನಡೆಯಬೇಕೆಂದು ಸೂಚಿಸಿದರು. ಈ ಗೋಷ್ಠಿಗೆ ರಾಷ್ಟ್ರೀಯ ನಿಧಿ ಸಂಗ್ರಹಕ್ಕಾಗಿ ಬಂದ ರಾಜಸ್ಥಾನದ ಪ್ರಸಿದ್ಧ ಕವಿಗಳಾದ ಶ್ರೀ ಕೃಷ್ಣಕುಮಾರ್, ಶ್ರೀ ವಜ್ರಮೋಹನ್, ಶ್ರೀ ತಾರಾದತ್, ಶ್ರೀ ಗೋವಿಂದ ಪ್ರಶಾಂತ್ ಅವರನ್ನು ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳು ಎಲ್ಲರಿಗೂ ಪರಿಚಯ ಮಾಡಿಕೊಟ್ಟರು. ಕವಿಗಳೆಲ್ಲರೂ ಸ್ಫೂರ್ತಿದಾಯಕವಾದ ತಮ್ಮ ಕವಿತೆಗಳನ್ನು ಓದಿದರು. ಶ್ರೀಮತಿ ದೇವಕಿಯಮ್ಮ ಅಪ್ಪಯ್ಯ ಅವರು ರವೀಂದ್ರರ ಮೇಲೆ ರಚಿಸಿದ್ದ ಲಾವಣಿಯನ್ನು ಹೃದಯಂಗಮವಾಗಿ ಹಾಡಿದರು. ಅಧ್ಯಕ್ಷರಾಗಿದ್ದ ಶ್ರೀ ಮಾಸ್ತಿ ಅವರು ಗೋಷ್ಠಿಯಲ್ಲಿ ಭಾಗವಹಿಸಿದ್ದ ಕವಿಗಳನ್ನು ಪ್ರಶಂಸಿಸಿ,

"ಭರತಖಂಡದಲ್ಲಿರುವ ಜನರೆಲ್ಲರೂ ಏಕಭಾವದಿಂದಲೇ ಇದ್ದಾರೆ. ಆದರೆ ಭಾಷೆಗಳು ಮಾತ್ರ ಭಿನ್ನವಾಗಿ ಅನೇಕವಾಗಿವೆ. ಒಬ್ಬರ ಅಭಿಪ್ರಾಯಗಳು ಮತ್ತೊಬ್ಬರಿಗೆ ತಿಳಿಯಬೇಕಾದರೆ ಅವರ ಭಾಷೆಗೆ ಆ ಅಭಿಪ್ರಾಯಗಳು ತರ್ಜುಮೆಯಾಗಬೇಕು. ಹಾಗೆಯೇ ಅವೆಲ್ಲಾ ಭರತ ಖಂಡದ ಎಲ್ಲಾ ಭಾಷೆಗಳಿಗೂ ಅನುವಾದವಾಗಬೇಕು. ಆಗ ಭಾವೈಕ್ಯದ ಅರ್ಥ ಎಲ್ಲರಿಗೂ ಅರಿವಾಗುತ್ತದೆ. ಹಾಗಾಗಬೇಕಲ್ಲದೆ ಒಂದೇ ಭಾಷೆಯಲ್ಲಿ ಆಸೇತು ಹಿಮಾಚಲ ಎಲ್ಲರೂ ಅಭ್ಯಾಸಮಾಡಬೇಕೆಂದು ಹೇಳುವುದು ಆಗದ ಮಾತು. ಒಂದು ಅಭಿಪ್ರಾಯ ಎಲ್ಲರಿಗೂ ತಿಳಿದು ಒಗ್ಗಟ್ಟು ಸಾಧಿಸಬೇಕಾದರೆ ಇದೊಂದೇ ಮಾರ್ಗ. ಪಾಶ್ಚಾತ್ಯ ದೇಶದಲ್ಲಿ ಈಗಲೂ ಆ ರೀತಿ ನಡೆಯುತ್ತಿದೆ. ಭಾವೈಕ್ಯ ಹೊಸದಲ್ಲ, ಹಿಂದೆ ಇತ್ತು; ಮುಂದೆಯೂ ಇರುತ್ತದೆ. ಈಗಲೂ ಇದೆ. ಅಂದರೆ ಪರಸ್ಪರ ತಿಳಿಯಲು ಭಾಷೆಯ ಆತಂಕವಿರುವುದರಿಂದ ಇಡೀ ದೇಶಕ್ಕೆ ಒಂದು ಭಾಷೆ ಆಗಬೇಕು. ಹಿಂದಿನ ಆಡಳಿತಗಾರರು ತಮ್ಮ ಸೌಕರ್ಯಕ್ಕಾಗಿ ಆಂಗ್ಲಭಾಷೆಯನ್ನು ಎಲ್ಲರ ಮೇಲೂ ಪರಿಣಾಮವಾಗುವಂತೆ ಮಾಡಿದರು. ಈಗಿನ ಪ್ರಜಾ ಪ್ರಭುತ್ವದಲ್ಲಿ ಅದು ಆಗದ ಮಾತು. ಭಾವೈಕ್ಯತೆಯ ಮಾತು ಎಲ್ಲರಿಗೂ ಅರ್ಥವಾಗಬೇಕಾದರೆ ಆಯಾ ಅಭಿಪ್ರಾಯಗಳು ಎಲ್ಲಾ ಜನಾಂಗಗಳವರ ಆಯಾ ಭಾಷೆಗೆ ಅನುವಾದಿಸಲ್ಪಟ್ಟು ಐಕ್ಯತೆಗೆ ನೆರವಾಗಬೇಕು" ಎಂದು ಹೇಳಿದರು.

ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ರಾಷ್ಟ್ರ ರಕ್ಷಣಾ ನಿಧಿಗೆ ಹತ್ತು ರೂ. ಗಳನ್ನು ಅರ್ಪಿಸಿದರು. ಶ್ರೀಮತಿ ದೇವಕಿಯಮ್ಮ ಅಪ್ಪಯ್ಯ ಅವರು ಎರಡು ರೂ. ಗಳನ್ನು ನಿಧಿಗೆ ಕೊಟ್ಟರು. ಕೊನೆಯದಾಗಿ ಶ್ರೀ ಎಂ. ಪಿ. ಎಲ್. ಶಾಸ್ತ್ರೀ ಅವರು ವಂದನಾರ್ಪಣೆಯನ್ನು ಸಲ್ಲಿಸಿದರು. ರಾಷ್ಟ್ರಗೀತೆಯೊಡನೆ ಸಭೆಯು ಮುಕ್ತಾಯವಾಯಿತು.

## ಗಮಕ ಪ್ರೌಢ ಪರೀಕ್ಷೆಗಳು ೧೯೬೪

೧೯೬೩-೬೪ನೆಯ ಸಾಲಿನಲ್ಲಿ ಗಮಕ ಪ್ರೌಢ ಪರೀಕ್ಷೆಯನ್ನು ಏಪ್ರಿಲ್ ೧೯೬೪ ರಲ್ಲಿ ಬೆಂಗಳೂರಿನಲ್ಲಿ ನಡೆಸಲು ಕನ್ನಡ ಸಾಹಿತ್ಯ ಪರಿಷತ್ತು ನಿರ್ಧರಿಸಿರುತ್ತದೆ. ಈ ಪರೀಕ್ಷೆಗೆ ಸ್ವಂತ ವ್ಯಾಸಂಗದಿಂದ ವಿದ್ಯಾರ್ಥಿಗಳು ಕುಳಿತುಕೊಳ್ಳಲು ಅವಕಾಶವನ್ನು ಕೊಡಲಾಗುವುದು. ಪಠ್ಯಭಾಗ ಮತ್ತು ಇತರ ವಿವರಗಳಿಗೆ ಅಭ್ಯರ್ಥಿಗಳು ಪರಿಷತ್ತಿನ ಕಛೇರಿಗೆ ಬರೆದು ತಿಳಿದುಕೊಳ್ಳಬಹುದು.

ಅನ್ನದಾನಯ್ಯ ಪುರಾಣಿಕ
ಕೆ. ಎಂ. ಕೃಷ್ಣರಾವ್
ಗೌ॥ ಕಾರ್ಯದರ್ಶಿಗಳು

## ಶ್ರೀ ದಾತಾರರ ನಿಧನದ ಬಗ್ಗೆ ಪರಿಷತ್ತಿನ ಸಂತಾಪ

ದಿನಾಂಕ ೧೮-೨-೬೩ ನೆಯ ಸೋಮವಾರ ಸಂಜೆ ೬-೩೦ ಗಂಟೆಗೆ, ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಭಾರತಮಾತೆಯ ಸುಪುತ್ರರೂ, ಕನ್ನಡ ನಾಡುನುಡಿಗಳ ಉಜ್ವಲಾಭಿಮಾನಿಗಳೂ, ಭಾರತ ಸರ್ಕಾರದ ಗೃಹ ಸಚಿವರೂ, ಕನ್ನಡ ಸಾಹಿತ್ಯ ಪರಿಷತ್ತಿನ ಹಿರಿಯ ಹಿತೈಷಿಗಳೂ ಆಗಿದ್ದ ಶ್ರೀ ಬಿ. ಎನ್. ದಾತಾರ್ ಅವರು, ನಿಧನಹೊಂದಿದಪ್ರಯುಕ್ತ ದಿವಂಗತರ ಆತ್ಮ ಶಾಂತಿಗಾಗಿ ಸಂತಾಪ ಸೂಚಕಸಭೆಯನ್ನು ಪರಿಷತ್ತು ಏರ್ಪಡಿಸಿತ್ತು. ಮೈಸೂರು ಹೈಕೋರ್ಟಿನ ಶ್ರೇಷ್ಠ ನ್ಯಾಯಾಧೀಶರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಅಧ್ಯಕ್ಷತೆ ವಹಿಸಿದ್ದರು.

ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಅಂದಿನ ಸಭೆಯ ಉದ್ದೇಶವನ್ನು ತಿಳಿಸಿ ದಿವಂಗತರ ಆತ್ಮಕ್ಕೆ ಶಾಂತಿ ಕೋರಿದರು. ಮೈಸೂರು ರಾಜ್ಯದ ಅರ್ಥ ಸಚಿವರಾದ ಶ್ರೀ ಬಿ. ಡಿ. ಜತ್ತಿ ಅವರು ಮತ್ತು ಜಮೀನು ಅಡಮಾನ ಬ್ಯಾಂಕಿನ ಅಧ್ಯಕ್ಷರಾದ ಶ್ರೀ ಅನಂತರಾಮನ್ ಅವರೂ ದಿವಂಗತರ ಗುಣ ಗಾನಮಾಡಿ ಅವರು ನಾಡು ನುಡಿಗಳಿಗೆ ಗೈದ ಸೇವೆಯನ್ನು ಪ್ರಶಂಸಿಸಿದರು. ತರುವಾಯ ಸಭಾಧ್ಯಕ್ಷರು ಇಲ್ಲಿ ಕಾಣಿಸಿರುವ ನಿರ್ಣಯವನ್ನು ಮಂಡಿಸಿದರು. ಸಭಿಕರು ಎರಡು ನಿಮಿಷಗಳ ಕಾಲ ಎದ್ದು ನಿಂತು ಮೌನದಿಂದ ನಿರ್ಣಯವನ್ನು ಅಂಗೀಕರಿಸಿದರು.

### ನಿರ್ಣಯ

"ಭಾರತಮಾತೆಯ ಸುಪುತ್ರರೂ, ಕನ್ನಡ ನಾಡು ನುಡಿಗಳ ಉಜ್ವಲಾಭಿಮಾನಿಗಳೂ, ಭಾರತ ಸರ್ಕಾರದ ಗೃಹಸಚಿವರೂ, ಕನ್ನಡ ಸಾಹಿತ್ಯ ಪರಿಷತ್ತಿನ ಹಿರಿಯ ಹಿತೈಷಿಗಳೂ, ಆದ ಶ್ರೀ ಬಿ. ಎನ್. ದಾತಾರ್ ಅವರ ನಿಧನದಿಂದ ನಮ್ಮ ನಾಡಿಗೆ ಆಗಿರುವ ಅಪಾರನಷ್ಟಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಸೇರಿರುವ ಈ ಸಭೆಯು ತನ್ನ ತೀವ್ರ ದುಃಖವನ್ನು ವ್ಯಕ್ತಪಡಿಸುತ್ತದೆ; ಮತ್ತು ದಿವಂಗತರ ಕುಟುಂಬ ವರ್ಗಕ್ಕೆ ತನ್ನ ಗೌರವ ಪೂರ್ವಕವಾದ ಅನುತಾಪವನ್ನು ಸೂಚಿಸುತ್ತದೆ."

---

## ಗಮಕ ಪ್ರೌಢ ಪರೀಕ್ಷೆಗಳ ನಿಯಮಾವಳಿ ಮತ್ತು ಅಭ್ಯಾಸ ಭಾಗಗಳು

### ಗಮಕ ಪ್ರೌಢ ಪರೀಕ್ಷೆ

ಗಮಕ ಕಲೆಯ ವಿಶೇಷ ವ್ಯಾಸಂಗದಲ್ಲಿ ಆಸಕ್ತಿಯುಳ್ಳವರ ಉಪಯೋಗಕ್ಕಾಗಿ ೧೯೬೩ನೆಯ ಏಪ್ರಿಲ್ ತಿಂಗಳಲ್ಲಿ ಪರಿಷತ್ತು ಗಮಕ ಪ್ರೌಢ ಪರೀಕ್ಷೆಯನ್ನು ನಡೆಸಬೇಕೆಂದು ನಿಶ್ಚಯಿಸಿದೆ.

### ಈ ಪರೀಕ್ಷೆಗೆ ಕುಳಿತುಕೊಳ್ಳಲು ಅರ್ಹತೆ

(i) ಪರಿಷತ್ತಿನ ಗಮಕ ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು.

(ii) ಪರಿಷತ್ತು ಅಂಗೀಕರಿಸಿರುವ ಗಮಕ ವಿದ್ವಾಂಸರೊಬ್ಬರಿಂದ ಕನಿಷ್ಠ ಪಕ್ಷ ಹತ್ತು ತಿಂಗಳಾದರೂ ವ್ಯಾಸಂಗ ಮಾಡಿರುವ ಬಗ್ಗೆ ಪತ್ರವನ್ನು ಪರಿಷತ್ತಿಗೆ ಹಾಜರು ಪಡಿಸಬೇಕು.

(iii) ಸ್ವಂತ ವ್ಯಾಸಂಗದಿಂದ ಪರೀಕ್ಷೆಗೆ ಕುಳಿತುಕೊಳ್ಳಲಪೇಕ್ಷಿಸುವವರು ಕೊನೆಯ ಪಕ್ಷ ನಾಲ್ಕು ವರ್ಷಗಳ ಗಮಕ ವಾಚನದ ಅನುಭವವನ್ನು ಪಡೆದವರಾಗಿರಬೇಕು. ಆ ಬಗ್ಗೆ ಗಮಕ ವಿದ್ವಾಂಸರಿಂದ ಅಥವಾ ಹಿರಿಯ ಸಾಹಿತಿಗಳಿಂದ ಪತ್ರವನ್ನು ಪರೀಕ್ಷಾ ಅರ್ಜಿದನ ಪತ್ರಿಕೆಯೊಂದಿಗೆ ಕಳುಹಿಸಬೇಕು. ಪ್ರೌಢ ಪರೀಕ್ಷೆಯ ಪ್ರವೇಶ ಶುಲ್ಕ ಒಂದು ರೂಪಾಯಿ ಮತ್ತು ಪರೀಕ್ಷಾ ಶುಲ್ಕ ಹತ್ತು ರೂಪಾಯಿಗಳನ್ನು ಅರ್ಜಿದನಾ ಪತ್ರದೊಂದಿಗೆ ನಿರ್ದಿಷ್ಟವಾದ ಕಾಲದೊಳಗೆ ಪರಿಷತ್ತಿಗೆ ತಲುಪಿಸಬೇಕು.

(iv) ೧೯೬೩ನೆಯ ಏಪ್ರಿಲ್ ಎರಡನೆಯ ವಾರದಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಗಮಕ ಪ್ರೌಢ ಪರೀಕ್ಷೆಯನ್ನು ನಡೆಸಲಾಗುವುದು.

(v) ಪರೀಕ್ಷಾ ಕೇಂದ್ರಕ್ಕೆ ಪರೀಕ್ಷೆಗಾಗಿ ಬಂದು ಹೋಗುವ ಎಲ್ಲ ಖರ್ಚನ್ನು ಪರೀಕ್ಷಾರ್ಥಿಗಳೇ ವಹಿಸಿಕೊಳ್ಳಬೇಕು.

## ೧೯೬೪ರ ಗಮಕ ಪ್ರೌಢ ಪರೀಕ್ಷೆಗೆ ನಿಯಮಿತವಾಗಿರುವ ಪಠ್ಯಭಾಗಗಳು

### (ಅ) ಸಾಹಿತ್ಯಭಾಗ

೧. ಚಂಪೂಕಾವ್ಯ :—(i) ಪಂಪಭಾರತ: ಕಾವ್ಯಸೌರಭದ ಪುಟ ೧ ರಿಂದ ೭ ರ ವರೆಗೆ. (ii) ಗಿರಿಜಾ ಕಲ್ಯಾಣ : ಕಾವ್ಯಸೌರಭದ ಪುಟ ೨೦ ರಿಂದ ೨೨ ರ ವರೆಗೆ ಮತ್ತು ಗಮಕ ಕಾವ್ಯಮಂಜರಿಯ ಪುಟ ೩೫ ರಿಂದ ೩೮ ರ ವರೆಗೆ. (iii) ಜಗನ್ನಾಥ ವಿಜಯ : ಕಾವ್ಯಸೌರಭದ ಪುಟ ೩೩ ರಿಂದ ೩೫ ರ ವರೆಗೆ.

೨. ಷಟ್ಪದಿ :—(i) ಕುಮಾರವ್ಯಾಸ ಭಾರತ : "ಅಕ್ಷಯ ವಸ್ತ್ರ" ಕಾವ್ಯಸೌರಭದ ಪುಟ ೬೧ ರಿಂದ ೭೮ ರ ವರೆಗೆ. (ii) ಜೈಮಿನಿ ಭಾರತ : "ಲವಕುಶರ ಬಾಲ್ಯ" ಕಾವ್ಯಸೌರಭದ ಪುಟ ೧೨೫ ರಿಂದ ೧೩೦ ರ ವರೆಗೆ. (iii) ಹರಿಶ್ಚಂದ್ರ ಕಾವ್ಯ : ಕಾವ್ಯಸೌರಭದ ಪುಟ ೨೭ ರಿಂದ ೩೨ ರ ವರೆಗೆ.

೩. ರಗಳೆ :—(i) ನಂಬಿಯಣ್ಣನ ರಗಳೆ: ಪ್ರಮಾಣ ಪತ್ರದ ಪರೀಕ್ಷೆಯ ಭಾಗ ಸುಮಾರು ನೂರು ಸಾಲುಗಳು. (ii) ಕುವೆಂಪು ಅವರ "ರಾಮಾಯಣ ದರ್ಶನಂ" ದಿಂದ ಸೀತೆಯ ಅಗ್ನಿಪ್ರವೇಶದ ಭಾಗ ಸುಮಾರು ೧೫೦ ಸಾಲುಗಳು.

೪. ನಾಟಕ :—(i) ರನ್ನನ ಗದಾಯುದ್ಧ ನಾಟಕಂ (ಊರು ಭಂಗದ ಭಾಗ); (ii) ಶ್ರೀ ಶಿವರಾಮ ಕಾರಂತರ ಗೀತಾನಾಟಕ "ಬುದ್ಧೋದಯ".

೫. ಸಾಂಗತ್ಯ :—ಕಾವ್ಯಸೌರಭದ ಪುಟ ೧೧೩ ರಿಂದ ೧೧೬ ರ ವರೆಗೆ.

೬. ಆಧುನಿಕ ಗೀತೆಗಳು :—(೧) ಡಿ. ವಿ. ಜಿ. ಅವರ ಅಂತಃಪುರ ಗೀತೆಗಳು. (೨) ಕುವೆಂಪು ಅವರ ಕೊಳಲು. (೩) ಪು. ತಿ. ನ. ಅವರ ಗೋಕುಲ ನಿರ್ಗಮನ. (೪) ದ. ರಾ. ಬೇಂದ್ರೆಯವರ ಸೂರ್ಯಪಾನ. (೫) ವಿ. ಸೀ. ಅವರ ದ್ರಾಕ್ಷಿ-ದಾಳಿಂಬೆ. (೬) ಶೂಲಪಾಣಿ ಅವರ ದುಂಬಿ ಮತ್ತು ನಾದ. (೭) ಮಾಸ್ತಿ ಅವರ ಮನವಿ. (೮) ಕೆ. ಎಸ್. ನ. ಅವರ ಮೈಸೂರ ಮಲ್ಲಿಗೆ. (೯) ಚನ್ನವೀರ ಕಣವಿ ಅವರ ಭಾವಜೀವಿ. (೧೦) ಕಾವ್ಯಾನಂದ ಅವರ ಮಾನಸ ಸರೋವರ.

ಈ ಕವಿಗಳ ಈ ಕವನಸಂಕಲನಗಳಿಂದ ಎರಡೆರಡು ಗೀತಗಳು (ವಾಚನ ಪರೀಕ್ಷೆಗೆ ಮಾತ್ರ).

೭. ವಚನಗಳು:—ದಾಸರ ಪದಗಳು: (i) ಬಸವಣ್ಣನವರು, ಅಲ್ಲಮ ಪ್ರಭು, ಅಕ್ಕಮಹಾದೇವಿ, ದೇವರ ದಾಸಿಮಯ್ಯ ಇವರ ಎರಡೆರಡು ವಚನಗಳು. (ii) ಪುರಂದರದಾಸರು, ವಿಜಯದಾಸರು, ಗೋಪಾಲದಾಸರು ಮತ್ತು ಜಗನ್ನಾಥದಾಸರು ಇವರ ಎರಡೆರಡು ಕೃತಿಗಳು. (ವಾಚನ ಪರೀಕ್ಷೆಗೆ ಮಾತ್ರ).

೮. ಛಂದಸ್ಸು :—ಅಲಂಕಾರ, ವ್ಯಾಕರಣ, ಕಾವ್ಯಲಕ್ಷಣ ಮತ್ತು ಕನ್ನಡ ಸಾಹಿತ್ಯ ಚರಿತ್ರೆಗಳ ಸ್ಥೂಲ ಪರಿಚಯ.

### ಓದಬೇಕಾದ ಪುಸ್ತಕಗಳು

(i) ಮೈಸೂರು ವಿಶ್ವವಿದ್ಯಾನಿಲಯದ ಕೈಪಿಡಿ ಭಾಗ I. (ii) ಪ್ರೊ॥ ಎಂ. ಮರಿಯಪ್ಪ ಭಟ್ಟರ ಕನ್ನಡ ಸಾಹಿತ್ಯ ಸಂಕ್ಷಿಪ್ತ ಚರಿತ್ರೆ.

### (ಆ) ಗಮಕ ಕಲೆ

### ಓದಬೇಕಾದ ಪುಸ್ತಕ

ಶ್ರೀ ಎಂ. ರಾಘವೇಂದ್ರರಾಯರ "ಕಾವ್ಯಗಾಯನ ಕಲಾ ಸಂಗ್ರಹ".

### (ಇ) ಸಂಗೀತ

೧. ಶಂಕರಾಭರಣ. ೨. ಕಲ್ಯಾಣಿ. ೩. ಕಾಂಬೋಧಿ. ೪. ತೋಡಿ. ೫. ಮೋಹನ. ೬. ಕಾನಡ. ೭. ಹಿಂಧೋಳ. ೮. ಸಿಂಧು ಭೈರವಿ. ೯. ಬೇಹಾಗ್. ೧೦. ಕಾಪಿ.

ಈ ಹತ್ತು ರಾಗಗಳ ಸ್ವರಸಂಚಾರ ಕ್ರಮವನ್ನೂ ಲಕ್ಷಣಗಳನ್ನೂ ತಿಳಿದಿರಬೇಕು. ಸಂಗೀತ ಶಾಸ್ತ್ರದ ಮೂಲತತ್ವಗಳ ಪರಿಚಯ ಅಗತ್ಯ.

### ಓದಬೇಕಾದ ಪುಸ್ತಕ

"ಭಾರತೀಯ ಸಂಗೀತ ದರ್ಶನ", ಪ್ರಕಾಶಕರು : ಲೋಕ ಶಿಕ್ಷಣ ಟ್ರಸ್ಟ್, ಹುಬ್ಬಳ್ಳಿ.

ಈ ಪಠ್ಯ ಭಾಗಗಳನ್ನು ಬಿಟ್ಟು ವಾಚನ ಪರೀಕ್ಷೆಯಲ್ಲಿ ಪರೀಕ್ಷಕರು ಕೇಳುವ ಬೇರೆ ಯಾವುದಾದರೂ ಒಂದು ಷಟ್ಪದಿಯ ಕಾವ್ಯ ಭಾಗದಿಂದ ಕೆಲವು ಪದ್ಯಗಳನ್ನು ಸಂಗೀತಕ್ಕೆ ಅಳವಡಿಸಿ ವಾಚನ ಮಾಡುವ ಸಾಮರ್ಥ್ಯವನ್ನು ಹೊಂದಿರಬೇಕು.

ಅನ್ನದಾನಯ್ಯ ಪುರಾಣಿಕ
ಕೆ. ಎಂ. ಕೃಷ್ಣರಾವ್
ಗೌ॥ ಕಾರ್ಯದರ್ಶಿಗಳು

# ಕನ್ನಡದ ಸುದ್ದಿಗಳು

**ಬೆಂಗಳೂರು**

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರ ಷಷ್ಟ್ಯಬ್ದಿ ಶಾಂತಿ ಸಮಾರಂಭವು ದಿನಾಂಕ ೨೪-೨-೬೩ ರಂದು ಬೆಂಗಳೂರಿನಲ್ಲಿ ವೈಭವದಿಂದ ನಡೆಯಿತು.

ತಾ|| ೨೧--೬೩ ರಂದು ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಕನ್ನಡ ಸಾಹಿತಿಗಳ ಸ್ನೇಹ ಸಮ್ಮೇಳನ ನಡೆಯಿತು. ನಾಡಿನ ನಾನಾ ಭಾಗಗಳಿಂದ ಸುಮಾರು ೩೫ ಮಂದಿ ಸಾಹಿತಿಗಳು ಸೇರಿದ್ದರು. ವಯಸ್ಕರ ಶಿಕ್ಷಣದ ಅನಂತರ ಅವರಿಗೆ ಗ್ರಂಥಗಳನ್ನು ಒದಗಿಸುವ ಕುರಿತು ಚರ್ಚೆಯಾಯಿತು.

ತಾ|| ೨೨-೨-೬೩ ರಂದು ದೂರವಾಣಿನಗರದ ಕರ್ನಾಟಕ ಸಂಘದಲ್ಲಿ ಪದ್ಮಶ್ರೀ ಶ್ರೀ ಸಿ. ಕೆ. ವೆಂಕಟರಾಮಯ್ಯನವರು ಭಾಷಣ ಮಾಡಿದರು.

ತಾ|| ೨೭-೨-೬೩ ರಂದು ಮೈಸೂರು ಸಂಸ್ಕೃತ ಕಾಲೇಜಿನಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು "ಸಂಸ್ಕೃತ ವಾಙ್ಮಯಕ್ಕೆ ಕರ್ನಾಟಕದ ಕಾಣಿಕೆ" ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು.

ತಾ|| ೨೮-೨-೬೩ ರಂದು ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರ ಅಧ್ಯಕ್ಷತೆಯಲ್ಲಿ ಭಾರತೀಯ ಭಾಷೈಕ್ಯ ಕವಿ ಸಮ್ಮೇಳನ ನಡೆಯಿತು.

**ಮಂಡ್ಯ**

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರ ಷಷ್ಟ್ಯಬ್ದಿ ಸಮಾರಂಭವನ್ನು ಸಿ. ಆರ್. ಎಂ. ಎಂ. ಕಲಾಸಂಘದಲ್ಲಿ ಫೆ. ೨೩ ರಂದು ಆಚರಿಸಲಾಯಿತು. ಶ್ರೀ ಬಿ. ವಿ. ರಾಮರಾಯರು ಅಧ್ಯಕ್ಷತೆ ವಹಿಸಿದ್ದರು.

**ಧಾರವಾಡ**

ತಾ|| ೨೨-೨-೬೩ ರಂದು ಕರ್ನಾಟಕ ವಿಶ್ವವಿದ್ಯಾಲಯದ ಕರ್ನಾಟಕ ಸಂಘದಲ್ಲಿ ಉಪಕುಲಪತಿ ಶ್ರೀ ಪಾವಟೆಯವರ ಅಧ್ಯಕ್ಷತೆಯಲ್ಲಿ ವಾರ್ಷಿಕೋತ್ಸವ ನಡೆಯಿತು. ನ್ಯಾಯಮೂರ್ತಿ ಶ್ರೀ ಟಿ. ಕೆ. ತುಕ್ಕೋಳರು ಭಾಷಣ ಮಾಡಿದರು. ದಿ. ಪ್ರೊ|| ಬಸವನಾಳ ಅವರ ಭಾವಚಿತ್ರ ಅನಾವರಣವಾಯಿತು.

ಕರ್ನಾಟಕ ವಿಶ್ವವಿದ್ಯಾಲಯದವರು ಹಿರಿಯ ಸಾಹಿತಿಗಳಾದ ಡಾ|| ಪುಟ್ಟಪ್ಪ, ಶ್ರೀ ಎಂ. ಗೋವಿಂದ ಪೈ, ಶ್ರೀ ಶಿವರಾಮ ಕಾರಂತ ಇವರಿಗೆ ಡಾಕ್ಟರೇಟ್ ಪದವಿ ಕೊಡಲು ನಿರ್ಧರಿಸಿರುವರು.

**ಮೈಸೂರು**

ತಾ|| ೩-೩-೬೩ ರಂದು ಮೈಸೂರು ಪುರಭವನದಲ್ಲಿ ಪ್ರೊ|| ಟಿ. ಎಸ್. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಶ್ರೀ ಶಿವರಾಮ ಕಾರಂತರ ಷಷ್ಟ್ಯಬ್ದಿ ಪೂರ್ತಿ ಸಮಾರಂಭವಾಯಿತು. ಪ್ರೊ|| ಎ. ಎನ್. ಮೂರ್ತಿರಾಯರು ಭಾಷಣ ಮಾಡಿದರು.

ಮೈಸೂರು ವಿಶ್ವವಿದ್ಯಾಲಯದವರು ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿ ರಾಂಗ್ಲರ್ ಪಾವಟೆ, ಸುಪ್ರಸಿದ್ಧ ಸಾಹಿತಿಗಳಾದ ಶ್ರೀ ಎಂ. ಗೋವಿಂದಪೈ, ಶ್ರೀ ಶಿವರಾಮ ಕಾರಂತ ಇವರಿಗೆ ಡಾಕ್ಟರೇಟ್ ಪದವಿ ಕೊಡಲು ನಿರ್ಧರಿಸಿದ್ದಾರೆ.

**ಹೊಳೆನರಸೀಪುರ**

ಹೊಳೆನರಸೀಪುರದ ಕನ್ನಡ ಅಭಿಮಾನಿಗಳು ತಾ|| ೨-೩-೬೩ ರಂದು ಹಿರಿಯ ಸಾಹಿತಿ ಶ್ರೀ ಶಿವರಾಮ ಕಾರಂತರ ೬೦ ನೇ ವಯಸ್ಸಿನ ಹುಟ್ಟುಹಬ್ಬ ಆಚರಿಸಿ ಗೌರವಿಸಿದರು.

**ದೆಹಲಿ**

ಕೇಂದ್ರ ಸಾಹಿತ್ಯ ಅಕ್ಯಾಡಮಿಯು ದಿವಂಗತ ದೇವುಡುರವರ 'ಮಹಾಕ್ಷತ್ರಿಯ' ಎಂಬ ಗ್ರಂಥಕ್ಕೆ ೫,೦೦೦ ರೂ. ಬಹುಮಾನ ವಿತ್ತು ಗೌರವಿಸಿದೆ.

ತಾ|| ೧೦-೨-೬೩ ನೇ ಭಾನುವಾರ ಸಂಜೆ ಬೆಂಗಳೂರಿನ ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗರಾಯರ "ಕವಿ ಕಾವ್ಯ ಪರಂಪರೆ" ಕಾರ್ಯಕ್ರಮ ಅತ್ಯಂತ ಯಶಸ್ವಿಯಾಗಿ ನೆರವೇರಿತು. ಸಂಘದ ಪ್ರಧಾನ ಕಾರ್ಯದರ್ಶಿ ಶ್ರೀ ಸಿ. ಕೆ. ತಿರುಮಲೇಶರು ಸಭಿಕರನ್ನು ಸ್ವಾಗತಿಸಿದರು. ಶ್ರೀ ಕೆ. ವಿ. ರಾಘವಾಚಾರ್ಯರು ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗರಾಯರ ಪರಿಚಯ ಮಾಡಿಕೊಟ್ಟರು. ಶ್ರೀಮತಿಯವರು ಕನ್ನಡದ ಪ್ರಾಚೀನ ಕವಿಗಳ ಕಾವ್ಯಗಳಿಂದ ಮೊದಲುಮಾಡಿ ಆಧುನಿಕ ಕವಿಗಳ ಕವನಗಳವರೆಗೆ ಕನ್ನಡ ಕಾವ್ಯ ಕವನಗಳನ್ನು ಸುಶ್ರಾವ್ಯವಾಗಿ ಹಾಡಿ ತೋರಿಸಿದರು.

**ಮಂಗಳೂರು**

ತಾ|| ೨೩-೨-೬೩ ರಂದು ಮಂಗಳೂರಿನಲ್ಲಿ ಕವಿ ಸಮ್ಮೇಳನ ನಡೆಯಿತು. ಶ್ರೀ ಶಿವರಾಮ ಕಾರಂತರು ಅಧ್ಯಕ್ಷರಾಗಿದ್ದರು.

**ಉಡುಪಿ**

ಫೆ. ದಿನಾಂಕ ೨೭ ರಂದು ಬೋರ್ಡ್ ಹೈಯರ್ ಸೆಕೆಂಡರಿ ಶಾಲೆಯಲ್ಲಿ ಶ್ರೀ ಕಡೆಕಾರು ರಾಜಗೋಪಾಲ ಕೃಷ್ಣರಾಯರ ಮತ್ತು ದಿ. ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಭಾವಚಿತ್ರ ಅನಾವರಣ ಸಮಾರಂಭ ಜರುಗಿತು.

# ಸಂಪಾದಕೀಯ

## ೧ ದಿವಂಗತ ಡಾ॥ ರಾಜೇಂದ್ರ ಪ್ರಸಾದರು

ಬಾಪೂಜಿಯವರ ಪ್ರತಿರೂಪು ಎನ್ನಿಸಿದ್ದ ಡಾಕ್ಟರ ರಾಜೇಂದ್ರ ಪ್ರಸಾದರು ಪರಲೋಕವಾಸಿಯಾದರು. ಭಾರತದ ದಿವ್ಯ ದೀಪ್ತಿಯೊಂದು ನಂದಿತು. ಸ್ವಾತಂತ್ರ್ಯ ಚಳುವಳಿಯ ಸೇನಾನಿ, ಸತ್ಯ ಅಹಿಂಸಾ ವ್ರತಿ, ತ್ಯಾಗ ಸೇವೆಗಳ ಸಾಕಾರಮೂರ್ತಿ, ಅಜಾತ ಶತ್ರು, ಸದ್ಗುಣ ಸಂಪನ್ನ, ಭಾರತದ ಪ್ರಥಮ ರಾಷ್ಟ್ರಾಧ್ಯಕ್ಷ, ರಾಜ ಯೋಗಿ ರಾಜೇಂದ್ರ ಪ್ರಸಾದರ ನಿರ್ಯಾಣವು ಭಾರತೀಯರಿಗೆ ತುಂಬಿಬಾರದ ನಷ್ಟವು. ಬಾಪೂಜಿಯವರ ಆಧ್ಯಾತ್ಮಿಕ ವಾರಸುದಾರರಾಗಿದ್ದ ಪ್ರಸಾದರ ಅಗಲುವಿಕೆಯು ರಾಷ್ಟ್ರದ ಆಧ್ಯಾತ್ಮಿಕ ಶಕ್ತಿಗೆ ಬಲವಾದ ಆಘಾತವನ್ನುಂಟುಮಾಡಿದೆ.

ಭಾರತೀಯ ಸಂಸ್ಕೃತಿಯ ಸ್ವರೂಪರಾಗಿದ್ದ ಪ್ರಸಾದರು ಜೀವನದ ಕೊನೆಯ ಉಸಿರಿನವರೆಗೂ ಭಾರತೀಯರ ಮೇಲ್ಮೆಯನ್ನು, ಧರ್ಮ, ಸಾಹಿತ್ಯ, ಕಲೆ ಮತ್ತು ಸಂಸ್ಕೃತಿಗಳ ಉತ್ಕರ್ಷೆಯನ್ನು ಆಶಿಸಿದರು. ಅನಾರೋಗ್ಯವನ್ನು ಲೆಕ್ಕಿಸದೆ, ಐಹಿಕ ಭೋಗವಿಲಾಸಗಳನ್ನು ಬಯಸದೆ, ಕಷ್ಟಕಾರ್ಪಣ್ಯಗಳಲ್ಲಿ ಧೃತಿಗೆಡದೆ, ಸತ್ಯ ಅಹಿಂಸಾ ಪಥವನ್ನು ಬಿಡದೆ, ಬಾಪೂಜಿ ತೋರಿದ ಬೆಳಕಿನಲ್ಲಿ ಭಾರತದ ಸೇವೆಯನ್ನು ಮಾಡಿದರು. ಭಾರತಕ್ಕಾಗಿ ಬದುಕಿದರು; ಭಾರತೀಯರ ಸೇವೆಯಲ್ಲಿಯೇ ಅಸು ನೀಗಿದರು. ಅವರಂತೆ ಬಾಳಿದವರು, ಅವರಷ್ಟು ಉನ್ನತಾಸನಗಳನ್ನು ಅಲಂಕರಿಸಿದವರು, ಉನ್ನತ ಪೀಠಗಳಲ್ಲಿದ್ದು ಅವರಂತೆ ಮಾನವೀಯತೆಯ ಮೌಲ್ಯಗಳನ್ನು ಮೆರೆದವರು, ಸತ್ಯಸಂಧರು, ಸಚ್ಚಾರಿತ್ರರು, ಸರಳಜೀವಿಗಳು, ಮೇಧಾವಿಗಳು, ವಿನಯಶೀಲರು, ತ್ಯಾಗವೀರರು, ಧರ್ಮ ರಕ್ಷಕರು, ಸಾಹಿತ್ಯ ಪೋಷಕರು, ಸೇವಾಮೂರ್ತಿಗಳು ಪ್ರಪಂಚದಲ್ಲಿ ಇನ್ನಿಲ್ಲ. ಬಾಬು ರಾಜೇಂದ್ರ ಪ್ರಸಾದರು ಇಪ್ಪತ್ತನೆಯ ಶತಮಾನದ ಋಷಿಪುಂಗವರು, ಅರಿವು ಆಚಾರಗಳೊಂದಾದ ಶರಣರು; ಜೀವನ ಸಾರ್ಥಕ್ಯವನ್ನು ಸಾಧಿಸಿದ ಸಂತರು.

ಬಾಬು ರಾಜೇಂದ್ರ ಪ್ರಸಾದರ ವಿಯೋಗವು ಭಾರತೀಯರಿಗೆ ಅಪಾರ ದುಃಖವನ್ನುಂಟುಮಾಡಿದೆ. ವಿಪತ್ತುಗಳ ಪರಂಪರೆಗೆ ಸಿಕ್ಕು ಪರಿತಪಿಸುತ್ತಿರುವ ಭಾರತಕ್ಕೆ ಅವರ ಮಾರ್ಗದರ್ಶನ ಅಗತ್ಯವಾಗಿತ್ತು. ಭಾರತೀಯರ ದುರದೃಷ್ಟದಿಂದ ಅವರು ಇಹಲೋಕವನ್ನು ತ್ಯಜಿಸಿದರು. ಪ್ರಸಾದರ ಪುಣ್ಯಾತ್ಮವು ಭಾರತವನ್ನು ಮುಸುಕಿದೀ ಮಬ್ಬಿನಲ್ಲಿ ಕೈಹಿಡಿದು ನಡಸಲೆಂದೂ, ಭಾರತೀಯರ ಮನಗಳಲ್ಲಿ ಅವರ ನೆನಹು ಸದಾ ಉಳಿಯಲೆಂದೂ ನಾವು ಮನಃಪೂರ್ವಕವಾಗಿ ಹಾರೈಸುತ್ತೇವೆ.

## ೨ ದಿವಂಗತ ದೇವುಡುರವರಿಗೆ ಸಾಹಿತ್ಯ ಅಕಾಡೆಮಿ ಸನ್ಮಾನ

ಕನ್ನಡ ಸಾಹಿತ್ಯದ ಆಚಾರ್ಯರಲ್ಲೊಬ್ಬರಾದ ದಿವಂಗತ ದೇವುಡು ನರಸಿಂಹ ಶಾಸ್ತ್ರಿಗಳವರ 'ಮಹಾಕ್ಷತ್ರಿಯ' ಎಂಬ ಕೃತಿಗೆ ಈ ಸಲದ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ದೊರೆತಿದೆ. ಅವರ 'ಮಹಾಬ್ರಾಹ್ಮಣ' ಸಾಧಿಸದಿದ್ದುದನ್ನು 'ಮಹಾಕ್ಷತ್ರಿಯ' ಸಾಧಿಸಿದ್ದಾನೆ.



ಶ್ರೀ ದೇವುಡುರವರು ಶಂಕರ ಸಾನ್ನಿಧ್ಯವನ್ನು ಸೇರಿ ಮೂರು ತಿಂಗಳಾದನಂತರ ಈ ಸನ್ಮಾನ ಬಂದಿದೆ. ಅದನ್ನು ಸ್ವೀಕರಿಸುವ ಭಾಗ್ಯ ಶ್ರೀ ದೇವುಡುರವರಿಗಿಲ್ಲ, ಎನ್ನುವುದಕ್ಕಿಂತಲೂ, ಅವರು ಜೀವಿಸಿದ್ದಾಗಲೇ ಅವರನ್ನು ಸನ್ಮಾನಿಸುವ ಸುಯೋಗ ಸಾಹಿತ್ಯ ಅಕಾಡೆಮಿಗೆ ದೊರೆಯಲಿಲ್ಲ

ವೆಂದು ಹೇಳುವುದು ಹೆಚ್ಚು ಸೂಕ್ತವಾದೀತು. ಸತ್ತ ಮೇಲೆ ಸನ್ಮಾನಿಸುವ ಪದ್ಧತಿ ಭಾರತೀಯರಿಗೇನೂ ಹೊಸದಲ್ಲ.

ಶ್ರೀ ದೇವುಡುರವರು ಪ್ರತಿಭಾ ಸಂಪನ್ನರು, ಪಂಡಿತ ಪ್ರಕಾಂಡರು, ಸರ್ವ ದರ್ಶನ ತೀರ್ಥರು, ವಾಗ್ದೇವಿಯ ಪ್ರೀತಿಯ ಪುತ್ರರು. ಅವರನ್ನು ಕುರಿತು ಸಾಹಿತ್ಯ ಪರಿಷತ್ತಿನ ಇಂದಿನ ಅಧ್ಯಕ್ಷರಾಡಿದ ಮಾತುಗಳಿಲ್ಲಿ ಉಲ್ಲೇಖನಾರ್ಹವಾಗಿವೆ. "ಭಗವದ್ಗೀತೆ, ಶಾಂಕರ ದರ್ಶನ, ರಾಮಾಯಣ, ಭಾರತ, ಭಾಗವತ, ಶ್ರುತಿ-ಸ್ಮೃತಿ, ಷಡ್ದರ್ಶನಗಳನ್ನು ಅಥೇತಿ ಪರ್ಯಂತವಾಗಿ ಓದಿದವರು ಹಾಗೂ ಅವುಗಳನ್ನು ಕುರಿತು ಚೆನ್ನಾಗಿ ಮಾತನಾಡಬಲ್ಲವರು, ಬರೆಯಬಲ್ಲವರು ದೇವುಡು ನರಸಿಂಹ ಶಾಸ್ತ್ರಿಗಳು. ಶ್ರೀ ದೇವುಡು ದೈವಭಕ್ತರು, ರಾಜಭಕ್ತರು, ದೇಶಭಕ್ತರು, ಸ್ನೇಹಪರರು, ಧೈರ್ಯಶಾಲಿಗಳು, ಸ್ಪಷ್ಟವಾದಿಗಳು. ಎಲ್ಲಕ್ಕೂ ಮಿಗಿಲಾಗಿ ಸಹೃದಯರು, ಗುಣೈಕಪಕ್ಷಪಾತಿಗಳು. ಒಳ್ಳೆಯ ವ್ಯಕ್ತಿತ್ವ, ಅದಕ್ಕೆ ಅನುಗುಣವಾದ ಶಾಸ್ತ್ರ ಪಾಂಡಿತ್ಯ, ಅದಕ್ಕೆ ಸಮ್ಮತವಾದ ಉತ್ತಮವಾದ ನಡವಳಿಕೆಗಳು ದೇವುಡುರವರ ವೈಶಿಷ್ಟ್ಯಗಳು". ಶ್ರೀ ದೇವುಡುರವರ ವ್ಯಕ್ತಿತ್ವದರ್ಶನವನ್ನು ಈ ನುಡಿಗಳಲ್ಲಿ ಕಾಣಬಹುದು. ಇವರ ಸಾಹಿತ್ಯ ಸೃಷ್ಟಿ ವಿಪುಲ ಹಾಗೂ ವೈವಿಧ್ಯಪೂರ್ಣ. ಸತ್ವಯುತ ಸಾಹಿತ್ಯ ಸೃಷ್ಟಿಯಲ್ಲಿ ಅವರು ಸಿದ್ಧಹಸ್ತರು.

ಕನ್ನಡನಾಡಿನ ಓರ್ವ ಹಿರಿಯ ಸಾಹಿತ್ಯ ಭಕ್ತರಿಗೆ ದೊರೆತ ಈ ಸನ್ಮಾನವು ಕನ್ನಡಿಗರಿಗೆ ಸಂತೋಷವನ್ನುಂಟುಮಾಡಿದೆ. ಈ ಸನ್ಮಾನವನ್ನು ಶ್ರೀ ದೇವುಡುರವರ ಪರವಾಗಿ ಸ್ವೀಕರಿಸುವ ಭಾಗ್ಯವನ್ನು ಪಡೆದ ಶ್ರೀಮತಿ ದೇವುಡುರವರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಪತಿದೇವರ ವಿಯೋಗದಿಂದಲೂ ಹಾಗು ಆರ್ಥಿಕ ಮುಗ್ಗಟ್ಟಿನಿಂದಲೂ ಕಂಗೆಟ್ಟು ಕಣ್ಣೀರಿನಲ್ಲಿ ಕೈ ತೊಳೆಯುತ್ತಲಿರುವ ಆ ತಾಯಿಗೆ ಈ ಸನ್ಮಾನವು ಕಿಂಚಿತ್ತಾದರೂ ಸಾಂತ್ವನವನ್ನು ನೀಡಲೆಂದು ಹಾರೈಸುತ್ತೇವೆ.

---

## ಕನ್ನಡ ಸಾಹಿತ್ಯ ಪರಿಷತ್ತಿನ ಉಜ್ವಲ ಅಭಿಮಾನಿಗಳಾಗಿದ್ದ



ದಿ|| ಶ್ರೀ ಬಿ. ಎನ್. ದಾತಾರರು

---

ಸಂಪಾದಕರು: ಶ್ರೀ ಅನ್ನದಾನಯ್ಯ ಪುರಾಣಿಕ, ಬಿ.ಕಾಮ್., ಎಲ್‌ಎಲ್.ಬಿ. ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ. ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು-೧೮

# ಸಾದರ ಸ್ವೀಕಾರ

**ಮಹಾಪ್ರಯೋಗ:** ಲೇಖಕರು: ಶ್ರೀ ವೆಲ್ಲಾಲಸತ್ಯಂ; ಪ್ರಕಾಶಕರು: ಆನಂದ ಪ್ರಕಾಶನ, ಬೆಂಗಳೂರು; ಸೈಜು ೧/೮ ಕ್ರೌನ್; ಪುಟಗಳು ೧೮೨; ಬೆಲೆ ರೂ. ೨.

**ಡಾ॥ ಶ್ರೀನಾಥ್:** ಲೇಖಕರು: ಶ್ರೀ ವೆಲ್ಲಾಲಸತ್ಯಂ; ಪ್ರಕಾಶಕರು: ಆನಂದ ಪ್ರಕಾಶನ, ಬೆಂಗಳೂರು; ಸೈಜು ೧/೮ ಕ್ರೌನ್; ಪುಟಗಳು ೩೦೦; ಬೆಲೆ ರೂ. ೨.

* **ಗುರು ಕರುಣ:** ಲೇಖಕರು: ಶ್ರೀ ಸ್ವಾಮಿ ಮಹಾಮನೆ; ಪ್ರಕಾಶಕರು: ಮಹಾಮನೆ ಪ್ರಕಟನಾಲಯ, ಮೈಸೂರು-೪; ಸೈಜು ೧/೮ ಕ್ರೌನ್; ಪುಟಗಳು ೩೩; ಬೆಲೆ ೭೫ ನ.ಪೈ.

* **ಕನ್ನಡ ಕಥಾಸೃಷ್ಟಿ:** ಲೇಖಕರು: ಶ್ರೀ ಬಿ. ಬಿ. ಮಹೀಶವಾಡಿ, ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಸೈಜು ೧/೮ ಫುಲ್‌ಸ್ಕೇಪ್; ಪುಟಗಳು ೫೯; ಬೆಲೆ ೨೫ ನ.ಪೈ.

**ನಾಲ್ವರು ಸ್ನೇಹಿತರು (ಪಂಚತಂತ್ರ ಕಥೆಗಳು):** ಲೇಖಕರು: ಶ್ರೀ ಪಾ. ಶ. ಶ್ರೀನಿವಾಸ; ಸೈಜು ೧/೮ ಡೆಮ್ಮಿ; ಬೆಲೆ ರೂ. ೧-೨೦ ನ.ಪೈ.

* **ವಿಜ್ಞಾನ ಪರಿಚಯ ಅಥವಾ ಆಕಾಶ ಪುರಾಣ:** ಲೇಖಕರು: ಶ್ರೀ ಬಿ. ಹನುಮಂತಯ್ಯಗೌಡ; ಸೈಜು ೧/೮ ಕ್ರೌನ್; ಪುಟಗಳು ೧೮೪; ಬೆಲೆ ರೂ. ೩.

ಕವಿಸಾಮ್ರಾಟ್ ನೋರಿ ನರಸಿಂಹಶಾಸ್ತ್ರಿ, ನೋರಿವಾರು ರೇಪಲ್ಲೆ, ಗುಂಟೂರು ಜಿಲ್ಲಾ, ಅವರಿಂದ ಈ ಕೆಳಗೆ ಕಂಡ ತೆಲುಗು ಗ್ರಂಥಗಳು ಉಚಿತವಾಗಿ ಕೊಡಲ್ಪಟ್ಟಿವೆ:—

೧. ಕವಿಸಾರ್ವಭೌಮುಡು
೨. ರುದ್ರಮದೇವಿ
೩. ವಾಘಿರಾ
೪. ಕರ್ಪೂರ ದ್ವೀಪಯಾತ್ರ
೫. ಭೀಮಾಭಿಕ್ಷುನಿ
೬. ಶಬ್ದವೇಧಿ
೭. ಸರ್ಪಸತ್ರಮು
೮. ನಾರಾಯಣಭಟ್ಟು
೯. ಸೋಮನಾಥ ವಿಜಯಮು
೧೦. ತೇನೇಟಿಟ್ಟಿ

* **ಯುದ್ಧಗೀತೆಗಳು:** ಸಂಪಾದಕರು: ಶ್ರೀ ಹೆಚ್. ಎಸ್. ರೇಣುಕಾಪ್ರಸಾದ್; ಸೈಜು ೧/೮ ಕ್ರೌನ್; ಪುಟಗಳು ೩೮; ಬೆಲೆ ೭೫ ನ.ಪೈ.

**ಯುಗವಾಣಿ (ವಿಶೇಷಾಂಕ-೧೯೬೩):** ವಿಕಾಸ ಆಶ್ರಮ, ಶಿರಸಿ; ಸಂಪಾದಕರು: ಶ್ರೀ ಟಿ. ಕೆ. ಮಹಮೂದ್; ಪುಟಗಳು ೧೩೦; ಬೆಲೆ ರೂ. ೧.

* **ಯಕ್ಷಗಾನ (ಭಗವಾನ್ ಬಸವೇಶ್ವರ ಚರಿತ್ರೆ):** ಲೇಖಕರು: ಶ್ರೀ ಕೆ. ವಿ. ಕೃಷ್ಣಪ್ಪ; ಸೈಜು ೧/೮ ಕ್ರೌನ್; ಪುಟಗಳು ೨೮; ಬೆಲೆ ೪೦ ನ.ಪೈ.

* **ಪಿನಾಕಿನಿ:** ಲೇಖಕರು: ಶ್ರೀ ಸಮೇತನಹಳ್ಳಿ ರಾಮರಾಯರು; ಪ್ರಕಾಶಕರು: ರಾಸ ಪ್ರಕಾಶನ; ಸೈಜು ೧/೮ ಕ್ರೌನ್; ಪುಟಗಳು ೭೦; ಬೆಲೆ ರೂ. ೧-೫೦ ನ.ಪೈ.

* **ಕಲಾರಾಧನೆ (ಐದು ನಾಟಕಗಳು):** ಲೇಖಕರು: ಶ್ರೀ ಸಮೇತನಹಳ್ಳಿ ರಾಮರಾಯರು; ಸೈಜು ೧/೮ ಕ್ರೌನ್; ಪುಟಗಳು ೧೨೮; ಬೆಲೆ ರೂ. ೨.

* **ಸ್ವರ್ಗಸೋಪಾನ:** ಲೇಖಕರು: ಶ್ರೀ ಸಮೇತನಹಳ್ಳಿ ರಾಮರಾಯರು; ಸೈಜು ೧/೮ ಕ್ರೌನ್; ಪುಟಗಳು ೧೨೩; ಬೆಲೆ ರೂ. ೨.

**ಭಾರತದ ಭವ್ಯ ನದಿಗಳು:** ಲೇಖಕರು: ಶ್ರೀಮತಿ ಗಿರಿಜಾಬಾಯ್; ಪ್ರಕಾಶಕರು: ವಿಚಾರ ಸಾಹಿತ್ಯ ಲಿಮಿಟೆಡ್, ಬಳೇಪೇಟೆ; ಸೈಜು ೧/೮ ಡೆಮ್ಮಿ; ಪುಟಗಳು ೧೩೨; ಬೆಲೆ ರೂ. ೧-೫೦ ನ.ಪೈ.

* **ಶಿವರಾತ್ರಿ ಶಿವಾಚಾರ್ಯ** (ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ): ಲೇಖಕರು: ಆಸ್ಥಾನವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯ; ಸೈಜು ೧/೮ ಕ್ರೌನ್; ಪುಟಗಳು ೨೭೧; ಬೆಲೆ ರೂ. ೩.

* **ಆಶೀರ್ವಾದ** (ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ): ಸಂಪಾದಕರು: ಶ್ರೀ ಹೆಚ್. ಗಂಗಾಧರನ್; ಸೈಜು ೧/೮ ಡೆಮ್ಮಿ; ಪುಟಗಳು ೨೨೪; ಬೆಲೆ ರೂ. ೨.

**ಅಂಜನಾಪವನಂಜಯ (ನಾಟಕ):** ಲೇಖಕರು: ಶ್ರೀ ಹಸ್ತಿಮಲ್ಲ; ಪ್ರಕಾಶಕರು: ಜೈನ ಸಾಹಿತ್ಯ ಪ್ರಚಾರ ಸಂಘ; ಅನುವಾದಕರು: ಶ್ರೀ ಎಂ. ಸಿ. ಪದ್ಮನಾಭಶರ್ಮ; ಸೈಜು ೧/೮ ಕ್ರೌನ್; ಪುಟಗಳು ೯೬.

**ಸ್ತುತಿವಿದ್ಯಾ:** ಸಂಪಾದಕರು: ನ್ಯಾಯತೀರ್ಥ ಶ್ರೀ ಎಂ. ಸಿ. ಪದ್ಮನಾಭ ಶರ್ಮ; ಪ್ರಕಾಶಕರು: ಜೈನ ಸಾಹಿತ್ಯ ಪ್ರಚಾರ ಸಂಘ; ಸೈಜು ೧/೮ ಕ್ರೌನ್; ಪುಟಗಳು ೪೬; ಬೆಲೆ ೪೦ ನ.ಪೈ.

* **ಕಾಯಕ ಕಲೆ:** ಲೇಖಕರು: ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ.; ಸೈಜು ೧/೮ ಕ್ರೌನ್; ಪುಟಗಳು ೨೦೮; ಬೆಲೆ ರೂ. ೩.

---

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತದೆ.

*Statement about ownership and other particulars about*

# KANNADA NUDI (Kannada)

tobe published in the first issue every year after last day of February

*Form IV*

*(See Rule 8)*

| | | | |
|---|---|---|---|
| 1. | *Place of Publication* | .... | BANGALORE |
| 2. | *Periodicity of its Publication* | .... | MONTHLY |
| 3. | *Printer's Name* | .... | B. M. SRIKANTIA PRESS (KANNADA SAHITYA PARISHAT) |
| | *Nationality* | .... | INSTITUTION |
| | *Address* | .... | Kannada Sahitya Parishat, Chamarajapet, Bangalore-18. |
| 4. | *Publisher's Name* | .... | Kannada Sahitya Parishat |
| | *Nationality* | .... | REGISTERED PUBLIC CULTURAL INSTITUTION |
| | *Address* | .... | Chamarajapet, Bangalore-18. |
| 5. | *Editor's Name* | .... | Sri Annadanayya Puranik, B.COM., LL.B. |
| | *Nationality* | .... | INDIAN |
| | *Address* | .. | Hon. Secretary, Kannada Sahitya Parishat, Bangalore-18. |
| 6. | *Names and Addresses of Individuals who own the newspaper and partners or shareholders holding more than one per-cent of the total capital.* | .. | KANNADA SAHITYA PARISHAT, BANGALORE |

I, B. Sivamurthy Sastry, hereby declare that the particulars given above are true to the best of my knowledge and belief.

B. Sivamurthi Sastry
*President, Kannada Sahitya Parishat.*

7th March 1963
BANGALORE

# ಕನ್ನಡ ನುಡಿ ಬೆಳ್ಳಿಯ ಸಂಚಿಕೆ

## ಕನ್ನಡಿಗರಿಗೆ ಸಾಹಿತ್ಯ ಪರಿಷತ್ತಿನ ಯುಗಾದಿಯ ಕೊಡುಗೆ

**ಕನ್ನಡ ಸಾಹಿತ್ಯದ ವಿವಿಧ ಮುಖಗಳ ಕಾಲು ಶತಮಾನದ ಬೆಳವಣಿಗೆಯ ವಿಹಂಗಮ ನೋಟ!**
**ಕನ್ನಡ ನಾಡಿನ ಸುಪ್ರಸಿದ್ಧ ಸಾಹಿತಿಗಳು ಉಣಬಡಿಸುವ ಸಾಹಿತ್ಯದ ರಸದೂಟ!**

## ಬೆಳ್ಳಿ ಸಂಚಿಕೆಯ ವೈಶಿಷ್ಟ್ಯಗಳು!!

ಸುಪ್ರಸಿದ್ಧ ಸಾಹಿತಿಗಳಾದ ಸರ್ವಶ್ರೀ ತೀ. ನಂ. ಶ್ರೀ., ಡಿ. ಎಲ್. ಎನ್., ತಿ. ತಾ. ಶರ್ಮಾ, ರಂ. ಶ್ರೀ. ಮುಗಳಿ, ಬಿ. ಎಸ್. ಶಾಸ್ತ್ರೀ, ಸು. ರಾಮರಾವ್, ಅ. ನ. ಕೃ., ಎಂ. ಮರಿಯಪ್ಪ ಭಟ್ಟ, ಎಸ್. ಎಸ್. ಮಾಳವಾಡ, ಆರ್. ಸಿ. ಹಿರೇಮಠ, ಎಂ. ವಿ. ಸೀತಾರಾಮಯ್ಯ, ಸಿದ್ಧಯ್ಯ ಪುರಾಣಿಕ, ಜಿ. ವೆಂಕಟಸುಬ್ಬಯ್ಯ, ಎನ್. ಕೆ. ಕುಲಕರ್ಣಿ, ಗ. ಸ. ಹಾಲಪ್ಪ, ಸುಂಕಾಪುರ, ಚೆನ್ನವೀರ ಕಣವಿ, ವೃಷಭೇಂದ್ರಸ್ವಾಮಿ, ದೇಶಿಕಾಚಾರ್ಯ, ಆರ್. ಎಲ್. ನರಸಿಂಹಯ್ಯ, ಬಿ. ಎಚ್. ಶ್ರೀಧರ, ಎಲ್. ಎಸ್. ಶೇಷಗಿರಿರಾವ್, ಕೆ. ಗೋಪಾಲಕೃಷ್ಣರಾವ್, ಎನ್. ಬಸವಾರಾಧ್ಯ, ಜಿ. ವರದರಾಜರಾವ್, ಕೆ. ನರಸಿಂಹಮೂರ್ತಿ, ಕೆ. ಎಂ. ಕೃಷ್ಣರಾವ್, ಚಂದ್ರಶೇಖರ ಐತಾಳ, ಅ. ರಾ. ಮಿತ್ರ, ವೆಂಕಟೇಶಯ್ಯ, ಶಾಂತವೀರಯ್ಯ, ಚೌಡಪ್ಪ ರೆಡ್ಡಿ, ಕುಮಾರಿ ಚಿ. ನ. ಮಂಗಳ, ಶ್ರೀಮತಿ ಶಾಂತಾದೇವಿ ಮಾಳವಾಡ, ಮೊದಲಾದವರ ವಿದ್ವತ್‌ಪೂರ್ಣ ಲೇಖನಗಳಿಂದಲೂ, ಮತ್ತು ಸಂಸ್ಕೃತಿ ಹಾಗೂ ಕಲಾವೈಭವವನ್ನು ಪ್ರತಿಬಿಂಬಿಸುವ ಚಿತ್ರಗಳಿಂದಲೂ ಶೋಭಿಸುವುದು ಬೆಳ್ಳಿ ಸಂಚಿಕೆ.

**ಆಕಾರ ಕ್ರೌನ್ ೧/೪ | ಪುಟಗಳು ಸು. ೧೫೦ | ಬೆಲೆ ರೂ. ೨-೦೦**

**ಪರಿಷತ್ತಿನ ಸದಸ್ಯರಿಗೂ** ಮತ್ತು ಪುಸ್ತಕ ವ್ಯಾಪಾರಿಗಳಿಗೂ ಪರಿಷತ್ತಿನ ಇತರ ಪ್ರಕಟಣೆಗಳಿಗೆ ನೀಡಲಾಗುತ್ತಲಿರುವ ಶೇಕಡಾ ೨೫ ರಂತೆ ರಿಯಾಯಿತಿಯನ್ನು ನೀಡಲಾಗುವುದು.

## ಜಾಹೀರಾತುಗಳನ್ನು ಕೊಡಲು ವ್ಯಾಪಾರಿಗಳಿಗೆ ಇದು ಶ್ರೇಷ್ಠ ಮಾಧ್ಯಮ

**ಜಾಹೀರಾತು ದರಗಳು :**

**ರಕ್ಷಾಪುಟಗಳು :**

ಕೊನೆಯ ಪುಟ : ೨೫೦ ರೂ. (ವರ್ಣಗಳಲ್ಲಿ)
೨ ಮತ್ತು ೩ ಪುಟ : ೨೦೦ ರೂ. (ವರ್ಣಗಳಲ್ಲಿ)

**ಒಳಪುಟಗಳು :**

ಪೂರ್ಣಪುಟ : ೧೨೫ ರೂ.
ಅರ್ಧಪುಟ : ೭೫ ರೂ.
ಕಾಲುಪುಟ : ೪೫ ರೂ.

ಮುಂಗಡ ಹಣ ಕಳುಹಿಸಿ ನಿಮ್ಮ ಪ್ರತಿಯನ್ನು ಕಾಯ್ದಿರಿಸಿಕೊಳ್ಳಿ

ವಿವರಗಳಿಗೆ ಬರೆಯಬಹುದು

## ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮.

Reg. No. B. G. 4—March 1963

Licensed to Post without pre-payment. License No 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಬೆಂಗಳೂರು-೧೮.

ಏಪ್ರಿಲ್ 1963




ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೬] ಸಂಪಾದಕರು: ಅನ್ನದಾನಯ್ಯ ಪುರಾಣಿಕ, ಬಿ.ಕಾಮ್., ಎಲ್ಎಲ್.ಬಿ. [ಸಂಚಿಕೆ ೪

# ಪರಿಷತ್ ಅಧ್ಯಕ್ಷರ ಷಷ್ಟ್ಯಬ್ಧಿ



ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಆಸ್ಥಾನವಿದ್ವಾನ್ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರ ಷಷ್ಟ್ಯಬ್ಧಿ ಶಾಂತಿ ಪೂಜಾ ಸಮಾರಂಭ ಫೆಬ್ರವರಿ ೨೪ ರಂದು ನಡೆದಾಗ ತೆಗೆದ ಚಿತ್ರ

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

# ವಿಷಯ ಸೂಚಿಕೆ

ಕನ್ನಡನುಡಿ





ಸಂಪುಟ ೨೬ ] ಏಪ್ರಿಲ್ ೧೯೬೩ [ ಸಂಚಿಕೆ ೪

## ಕಾಯ್ವನೀ ಭಾರತಮಂ

ಪಂ॥ ರಾಮಾನುಜಂ

ನೀಡೆನಗಾ ಗುರುಗದೆಯಂ ಕುರುಭಯಂಕರ ಭೀಮ!
ಓ ಶೌರ್ಯಧಾಮ!
ಕುಡು ಶೀಘ್ರಮೇಯೊಂದಿನಿಸೀ ಚಣಮದಂ ಪಿಡಿದೊಯ್ವೆಂ
ಅರಿಯೊಳಾಂ ಪಾಯ್ವೆಂ

ಬಡಿದಿಕ್ಕಿದಪೆಂ, ತರಿದೊತ್ತರಿಪೆಂ,
ತಲೆಯಂ ಪೋಳ್ದಪೆನುರಮಂ ಸೀಳ್ದಪೆ
ನಾದರ್ಾದರ್ಡರ್ವೆನಗಿಯೆ ನರಿಗಳ್ಗೆ
ಬೊಬ್ಬಿರಿದಿರಿವೆಂ ಕಟ್ಟುಬ್ಬರದಿಂ ....

ತುಹಿನಗಿರಿಶಿಖರದೊಳ್ ಮಹಿಮಶಿವ ಭವನದೊಳ್ ಕಾಲನಿಟ್ಟಹನಾ ಖೂಳಂ
ಕತ್ತರಿಸಿ ಕಾಲ್ಗಳಂ ಬಿತ್ತರಿಸಿ ಸಮರವಂ, ಸಾರ್ಥಕಂ ಗೆಯ್ವೆಂ ಬಾಳಂ ....

ತೊಡೆಯುಡಿದಯ್ ಕುರುನೃಪನಾ ಮರುಕಮಿಲ್ಲದೆ ನಿಂದು ....
ಬಿಡುಮುಡಿಯಂ ಪ್ರಿಯಸತಿಯಾ, ಪಿಡಿದುಕಟ್ಟಿದೆಯಂದು ....
ನಿನ್ನಂತೆವೊಲಾಗದೆಯಂ ಭುಜದಮೇಲಲವಡಿಪೆಂ
ಅರಿರುಧಿರದಿನಭಿಷೇಕಮನಾನೊಡಚ್ಚರ್ುವೆನೀಗಳ್.

ಸಂದೆಯಮೇಂ ಆಗದೆಯಂ ಪಿಡಿದು ತೂಗಲ್ ಸಾಲ್ಗುಂ
ಮದ್ಭುಜಮಿಾ ಶಕ್ತಿಸದನಮುದುವು ಮಿಾಗುಡುಗಿಲ್ಲಂ

ನಿನ್ನಂದದಿಂ ಪಗೆಯತೀರಿದರುಮಿನ್ನೊಳರೇ!
ನಿನ್ನಂದದಿಂ ಛಲವ ಕಾಯ್ದುವರುಮಿನ್ನೊಳರೇ?

ಆ ನಿನ್ನ ರಕ್ತಮುಂ ಪರಿವುದೆನ್ನೀಯೊಡಲೊಳ್
ಘುಡುಘುಡಿಸಿ-ಗಜಿಗೊಂಡು ಕಾಯ್ವೆನೀ ಭಾರತಮಂ ....
ನೀಡೆನಗಾ ಗುರುಗದೆಯಂ ಕುರುಭಯಂಕರ ಭೀಮ!

# ಕೆಂಪು ನಾರಾಯಣ

ಪದ್ಮಶ್ರೀ ಶ್ರೀ ಸಿ. ಕೆ. ವೆಂಕಟರಾಮಯ್ಯ

ಮುದ್ರಾಮಂಜೂಷ, ಘಟನಾಪ್ರಧಾನವಾದ ಕಥಾಭಿತ್ತಿಯನ್ನೊಳಗೊಂಡಿರುವ ಹಳೆಯ ಕಾಲದ ಕಾದಂಬರಿಯೆನ್ನಬಹುದು. ಅದು "ಹೊಯಿಸಣಿಗ" ಬ್ರಾಹ್ಮಣ ಕುಲದ ಕೆಂಪು ನಾರಾಯಣನಿಂದ ಕ್ರಿಸ್ತಶಕ ೧೮೨೩ನೆಯ ಸಂವತ್ಸರದಲ್ಲಿ ರಚಿತವಾಯಿತು. ಆತ ಮೈಸೂರು ಶ್ರೀಮನ್ಮಹಾರಾಜ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಆಶ್ರಿತ. ಆತ "ಮುದ್ರಾ ರಾಕ್ಷಸ" ಎಂಬ ಪ್ರಖ್ಯಾತ ಸಂಸ್ಕೃತ ನಾಟಕದ ಆಧಾರದ ಮೇಲೆ, ಕಾದಂಬರಿಯ ರೂಪದ ತನ್ನ ಹೊಸಗನ್ನಡ ಗದ್ಯಕೃತಿಯನ್ನು ರಚಿಸಿದ್ದಾನೆ. ಆ ನಾಟಕದ ಕಥೆಯಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿಕೊಂಡು ಆತ ಕೃತಿ ರಚನೆಗಳನ್ನು ಮಾಡಿದ್ದಾನೆ. ಹೃದಯಂಗಮವಾದ ಕೆಲವು ವರ್ಣನೆಗಳನ್ನು ಅಲ್ಲಲ್ಲಿ ಸೇರಿಸಿದ್ದಾನೆ; ಅಲ್ಲದೆ ಸಂದರ್ಭೋಚಿತವಾಗಿ ಶುಕ್ರನೀತಿ, ಪಂಚತಂತ್ರ ಮುಂತಾದ ಗ್ರಂಥಗಳಿಂದ ಪಾತ್ರಗಳು ಶ್ಲೋಕಗಳನ್ನು ಉದಾಹರಿಸಿ ತಮ್ಮ ಹೇಳಿಕೆಗಳನ್ನು ಪುಷ್ಟಿಗೊಳಿಸುವಂತೆಯೂ ಮಾಡಿ, ಕಳೆಯೇರಿಸಿದ್ದಾನೆ. ಹೊಸಗನ್ನಡ ಗದ್ಯನಿರ್ಮಾಪಕರಲ್ಲಿ ಆತನೂ ಒಬ್ಬನೆಂಬ ದೃಷ್ಟಿಯಿಂದ ಆತನ ಗ್ರಂಥಕ್ಕೆ ಹೆಚ್ಚಿನ ಮಾನ್ಯತೆ. ಅದರಲ್ಲಿಯೂ "ಬರಲೀಸದಂತೆ ಮಾಡಾನು", "ಅನುಭವಿಸಾರು", "ಆರೋಪಿಸಾರು" ಮುಂತಾದ ಆಡುಮಾತುಗಳ ಪ್ರಯೋಗಗಳಿವೆ. ಅವುಗಳ ಪ್ರಯೋಗದಲ್ಲಿ ಔಚಿತ್ಯವಿರುವಂತೆ ಆತನು ಎಚ್ಚರಿಕೆ ವಹಿಸಿದ್ದಾನೆ. ಆದರೆ, ಕಥಾವಸ್ತು ಕ್ರಿಸ್ತಪೂರ್ವ ಮೂರನೆಯ ಶತಮಾನಕ್ಕೆ ಸಂಬಂಧಪಟ್ಟಿರುವ ಗ್ರಂಥದಲ್ಲಿರಕೂಡದು. "ಸರಕಾರ", "ಫೌಜು", "ಸರದಾರ" ಮುಂತಾದ ಮಾತುಗಳನ್ನು ಆಗಿನ ಕಾಲದ ಪಾತ್ರಗಳಿಂದ ಹೊರಡಿಸಿದ್ದಾನೆ; "ಮುಂಡೇಗಂಡ" ಮುಂತಾದ ಪ್ರಯೋಗಗಳು ಅನುಚಿತವೆಂದು ಹೇಳಬೇಕಾಗಿದೆ. ಕ್ರಿಸ್ತಪೂರ್ವ ಮೂರನೆಯ ಶತಮಾನದಲ್ಲಿ ಇಸ್ಲಾಂ ಮತವೇ ಏರ್ಪಟ್ಟಿರಲಿಲ್ಲ; ಮುಸಲ್ಮಾನರೂ ಇರಲಿಲ್ಲ. ಹೀಗಿದ್ದೂ, ಆಗಿನ ಕಾಲದ ಸೈನ್ಯದಲ್ಲಿ ಹಿಮ್ಮತಖಾನ, ಷಂಶೇರ ನವಾಜ ಮುಂತಾದ ಹೆಸರುಗಳ ಮುಸಲ್ಮಾನ ಸರದಾರರಿದ್ದರೆಂದು ಮುದ್ರಾಮಂಜೂಷದಲ್ಲಿ ವರ್ಣಿತವಾಗಿರುವದು ಅಸಂಗತವಾದ ಕಲ್ಪನೆ. ಮೂಲ ಗ್ರಂಥವಾದ ಮುದ್ರಾರಾಕ್ಷಸ ನಾಟಕದಲ್ಲಿಲ್ಲದ ಈ ಅಸಂಗತ ಕಲ್ಪನೆಗೆ ಮುದ್ರಾಮಂಜೂಷದಲ್ಲೇಕೆ ಅವಕಾಶ ದೊರೆಯಿತೋ ತಿಳಿಯದು. ಆದರೂ, ಒಟ್ಟಿನ ಮೇಲೆ ಶೈಲಿಯ ಸೊಬಗು, ವರ್ಣನೆಗಳ ಸೊಗಸು, ಉಪಮಾನಗಳ ಚೆಲುವು ಮುಂತಾದ ಕಾವ್ಯ ಗುಣಗಳಿಂದ ಮುಗ್ಧವಾದ ಮನಸ್ಸಿಗೆ ಈ ಕುಂದುಗಳು ಎದ್ದುಕಾಣದೆ ಎಲ್ಲಿಯೋ ತೇಲಿ ಹೋಗುತ್ತವೆ. ಕೆಲವು ವರ್ಣನೆಗಳು ಹೀಗೆ ಹಳೆಗನ್ನಡದ ಛಾಯೆಯಿಂದ ಕೂಡಿದ್ದರೂ ಒಟ್ಟಿನಲ್ಲಿ ಮುದ್ರಾಮಂಜೂಷ ಹೊಸಗನ್ನಡದ ಗದ್ಯಕೃತಿ.

ಚಂದ್ರಗುಪ್ತನ ತಂದೆಯನ್ನೂ ಸಹೋದರನನ್ನೂ ಮೋಸದಿಂದ ಘೋರ ಮರಣಕ್ಕೀಡುಮಾಡಿದ ಪಾಪಿಗಳು ನವನಂದರು ತನ್ನನ್ನು ಮರೆಹೊಕ್ಕಿರುವ ಚಂದ್ರಗುಪ್ತನ ಪಕ್ಷವನ್ನು ವಹಿಸಿದ ಚಾಣಕ್ಯನ ಉಪಾಯಗಳಿಂದ ನವನಂದರ ನಿಗ್ರಹವೂ ಚಂದ್ರಗುಪ್ತನ ಪಟ್ಟಾಭಿಷೇಕವೂ ನಡೆಯುವದೇ ಐತಿಹಾಸಿಕ ಕಾದಂಬರಿಯೆನ್ನಬಹುದಾದ ಮುದ್ರಾಮಂಜೂಷದ ಕಥಾವಸ್ತು.

ನವನಂದರು ಚಾಣಕ್ಯನಿಗೆ ಅಪಮಾನ ಮಾಡುತ್ತಾರೆ. ಅದರಿಂದ ಕೆರಳಿ, ಅವರ ನಿಗ್ರಹದ ಪ್ರತಿಜ್ಞೆ ಮಾಡಿ, ಚಾಣಕ್ಯನು ಚಂದ್ರಗುಪ್ತನೊಡನೆ ಪರ್ವತ ರಾಜ್ಯದ ರಾಜಾ ಪರ್ವತೇಶ್ವರನ ಬಳಿಗೆ ಹೋಗುತ್ತಾನೆ. ಪರ್ವತೇಶ್ವರನಿಗೆ ನವನಂದರ ರಾಜ್ಯದ ಮೇಲೆ ಕಣ್ಣು. ನಂದರ ನಿಗ್ರಹಕ್ಕೆ ಸಹಾಯ ಮಾಡಿದರೆ ಆ ರಾಜ್ಯದಲ್ಲಿ ಅರ್ಧಭಾಗವನ್ನು ಕೊಡಿಸಿ ಚಂದ್ರಗುಪ್ತನನ್ನು ಉಳಿದ ಅರ್ಧ ರಾಜ್ಯಕ್ಕೆ ಒಡೆಯನನ್ನಾಗಿ ಮಾಡುವಂತೆ ತಿಳಿಸಿ ಚಾಣಕ್ಯನು ಪರ್ವತೇಶ್ವರನನ್ನು ತನ್ನ ಕಡೆಗೆ ಒಲಿಸಿಕೊಳ್ಳುತ್ತಾನೆ; ಪರ್ವತೇಶ್ವರನಿಗೆ ಬೇರೆ ರಾಜ್ಯದೊಡನೆ ಕೈಗಟ್ಟುವಂತಿದ್ದ ಯುದ್ಧವನ್ನು ತನ್ನ ಬುದ್ಧಿಬಲದಿಂದ ತಪ್ಪಿಸಿ ಅವನಿಗೆ ಆಪ್ತನಾಗುತ್ತಾನೆ. ಪಾಟಲೀಪುತ್ರ ನಗರದ ಬಳಿಗೆ ಪರ್ವತೇಶ್ವರನು ತನ್ನ ಸೈನ್ಯದೊಡನೆ ಬರುವನು. ಅವನೊಡನೆ ಅವನ ಮಗ ಮಲಯಕೇತುವೂ, ಚಂದ್ರಗುಪ್ತ ಚಾಣಕ್ಯರೂ ಬರುವರು. ನವನಂದರ ವಧೆಯಾಗುವುದು. ಚಂದ್ರಗುಪ್ತನು ರಾಜನಾಗುವನು. ಅವನು

ಮೃತಪಡುವಂತೆ ಮಾಡುವ ಉದ್ದೇಶದಿಂದ ಅಮಾತ್ಯ ರಾಕ್ಷಸ ವಿಷಕನ್ಯೆಯನ್ನು ಅವನ ಬಳಿಗೆ ಕಾಣಿಕೆಯಾಗಿ ಕಳುಹಿಸುವನು. ಅವಳನ್ನು ಚಂದ್ರಗುಪ್ತ ಸ್ವೀಕರಿಸನೆಂದು ತಿಳಿಸಿ ಚಾಣಕ್ಯನು ಅವಳನ್ನು ಪರ್ವತೇಶ್ವರನ ಬಳಿಗೆ ಕಳುಹುವನು. ಅವಳ ರೂಪದಿಂದ ಮೋಹಿತನಾಗಿ ಅವಳನ್ನು ಕೂಡಿದ ಪರ್ವತೇಶ್ವರನು ಮೃತನಾಗುವನು. ಚಾಣಕ್ಯ ಚಂದ್ರಗುಪ್ತರ ಕಡೆಯವನೇ ಆದ ಬಾಗುರಾಯಣನು ಮಲಯಕೇತುವಿನ ಆಪ್ತನಂತೆ ನಟಿಸಿ, ಅವನನ್ನು ಅಪಾಯದಿಂದ ಪಾರುಮಾಡುವುದಾಗಿ ಹೇಳಿ, ಪರ್ವತರಾಜ್ಯದ ರಾಜಧಾನಿಗೆ ಅವನೊಡನೆ ಪಲಾಯನ ಮಾಡುವನು. ಅಮಾತ್ಯ ರಾಕ್ಷಸನು ತನ್ನ ಪತ್ನೀಪುತ್ರರನ್ನು ರಹಸ್ಯವಾಗಿ ತನ್ನ ಮಿತ್ರ ಚಂದನದಾಸನ ಮನೆಯಲ್ಲಿಟ್ಟು ಮಲಯಕೇತುವಿನ ಬಳಿಗೆ ಹೋಗಿ ಅವನ ಮಂತ್ರಿಯಾಗುವನು. ಚಾಣಾಕ್ಷನಾದ ಚಾಣಕ್ಯನು ಆ ರಹಸ್ಯವನ್ನು ಭೇದಿಸಿ, ಗರ್ಭಿಣಿಯಾದ ರಾಕ್ಷಸನ ಪತ್ನಿಯ ಹೆರಿಗೆಗೆ ತನ್ನ ಕಡೆಯ ಸೂಲಗಿತ್ತಿಯನ್ನು ಕಳುಹಿಸಿ ರಾಕ್ಷಸ ಪತ್ನಿಯ ಬೆರಳಿನಲ್ಲಿದ್ದ ರಾಕ್ಷಸನ ಮುದ್ರೆಯುಂಗುರವನ್ನು ಅವಳಿಂದ ತರಿಸಿಕೊಳ್ಳುತ್ತಾನೆ. ಕೌಮುದೀ ಮಹೋತ್ಸವ ಸಂಬಂಧವಾಗಿ ಮಂತ್ರಿ ಚಾಣಕ್ಯನು ಚಂದ್ರಗುಪ್ತನೊಡನೆ ಕಪಟ ಕಲಹ ಮಾಡುವನು. ಅಮಾತ್ಯ ರಾಕ್ಷಸನು ತನ್ನ ಗೂಢಚಾರರಿಂದ ಆ ಕಲಹದ ಸುದ್ದಿಯನ್ನೂ, ಚಾಣಕ್ಯನು ಮಂತ್ರಿತ್ವವನ್ನು ಬಿಟ್ಟನೆಂಬ ಸುದ್ದಿಯನ್ನು ಕೇಳಿ, ಅವು ನಿಜವೆಂದು ನಂಬಿ, ಮಲಯಕೇತು ಸೈನ್ಯದೊಡನೆ ಹೋಗಿ ಪಾಟಲೀಪುತ್ರ ನಗರವನ್ನು ಮುತ್ತುವುದಕ್ಕೆ ಅದೇ ಸಮಯವೆಂದು ಸಲಹೆ ಹೇಳುತ್ತಾನೆ. ಸೈನ್ಯವೂ ಸಿದ್ಧವಾಗುತ್ತದೆ. ಅಷ್ಟರಲ್ಲಿ ಚಾಣಕ್ಯನು ರಾಕ್ಷಸನ ಮುದ್ರೆಯುಂಗುರದ ಸಹಾಯದಿಂದಲೇ ಭೇದೋಪಾಯದ ಬಲೆಯನ್ನು ಬೀಸಿ, ಬಾಗುರಾಯಣನ ನೆರವಿನಿಂದ ಅಮಾತ್ಯ ರಾಕ್ಷಸನಿಗೂ ಮಲಯಕೇತುವಿಗೂ ವಿರೋಧ ಹುಟ್ಟಿ ಅಮಾತ್ಯ ರಾಕ್ಷಸನು ಚಂದ್ರಗುಪ್ತನ ಮಂತ್ರಿಯಾಗಲು ಮತ್ತು ಮಲಯಕೇತುವನ್ನು ಶತ್ರುಗಳ ವಶಪಡಿಸಲು ಒಳಸಂಚು ನಡೆಸುತ್ತಿರುವಂತೆ ಸಂದೇಹವುಂಟಾಗುವಂತೆ ಮಾಡುವನು. ವಿಷಕನ್ಯೆಯನ್ನು ಕಳುಹಿಸಿ ಪರ್ವತೇಶ್ವರನ ಮರಣಕ್ಕೆ ಕಾರಣನಾದವನೂ ಅಮಾತ್ಯ ರಾಕ್ಷಸನೇ ಎಂದು ಮಲಯಕೇತುವಿಗೆ ದೃಢಪಡುವಂತೆಯೂ ಯುಕ್ತಿಯನ್ನು ಹೂಡುವನು. ಮಲಯಕೇತು ಕುಪಿತನಾಗಿ, ಅಮಾತ್ಯರಾಕ್ಷಸನನ್ನು ನಿಂದಿಸಿ ತನ್ನ ರಾಜ್ಯದಿಂದ ತೊಲಗಬೇಕೆಂದು ಆಜ್ಞೆ ಮಾಡುವನು. ಅಮಾತ್ಯ ರಾಕ್ಷಸನ ಪತ್ನೀಪುತ್ರರಿಗೆ ಆಶ್ರಯ ಕೊಟ್ಟ ಅಪರಾಧಕ್ಕಾಗಿ ಚಾಣಕ್ಯನು ವರ್ತಕ ಚಂದನದಾಸನನ್ನು ಸೆರೆಯಲ್ಲಿಡಿಸಿರುವುದಾಗಿಯೂ, ಅವನನ್ನು ಮರಣದಂಡನೆಗೆ ಗುರಿಪಡಿಸುವುದಾಗಿಯೂ ಆ ವೇಳೆಗೆ ಅಮಾತ್ಯರಾಕ್ಷಸನಿಗೆ ಅವನ ಕಡೆಯವರಿಂದ ಸುದ್ದಿ ಬಂದಿರುವುದು. ಸರ್ವಾರ್ಥ ಸಿದ್ಧಿ ಮಹಾರಾಜನು ಮೃತಪಟ್ಟ ಸಂಗತಿಯೂ ಅವನಿಗೆ ತಿಳಿದಿರುವುದು. ಅವನು ದುಃಖಿತನಾಗಿ ಪಾಟಲೀಪುತ್ರ ನಗರಕ್ಕೆ ಬಂದು, ಚಂದನದಾಸನನ್ನು ಬಿಡುಗಡೆಮಾಡಿ ಅವನಿಗೆ ಪ್ರತಿಯಾಗಿ ತನಗೇ ಮರಣದಂಡನೆಯನ್ನು ವಿಧಿಸಬೇಕೆಂದು ಚಾಣಕ್ಯನನ್ನು ಪ್ರಾರ್ಥಿಸುವನು. ಅಮಾತ್ಯ ರಾಕ್ಷಸನು ಚಂದ್ರಗುಪ್ತ ಚಕ್ರೇಶ್ವರನ ಮಹಾ ಪ್ರಧಾನನಾಗಲು ಸಮ್ಮತಿಸಿದರೆ, ಚಂದನದಾಸನನ್ನು ಬಿಡುಗಡೆ ಮಾಡುವುದಾಗಿ ಚಾಣಕ್ಯನು ತಿಳಿಸಿದುದನ್ನು ಕೇಳಿ ಆಶ್ಚರ್ಯಚಕಿತನಾಗಿ ಅವನು ಅದಕ್ಕೆ ಸಮ್ಮತಿಸುವನು. ಚಾಣಕ್ಯನ ಆಜ್ಞೆಯಂತೆ ಚಂದನದಾಸನಿಗೆ ಮಂಗಳಸ್ನಾನವಾಗಿ ಕನಕಾಭಿಷೇಕವು ನೆರವೇರಿ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಅವನು ತನ್ನ ಮನೆಗೆ ಹಿಂತಿರುಗುವನು. ಅಮಾತ್ಯ ರಾಕ್ಷಸನ ಸಂತೋಷ ಕೃತಜ್ಞತೆಗಳಿಗೆ ಪಾರವೇ ಇಲ್ಲದಂತಾಗುವುದು. ಧೂರ್ತರೂ ಪಾಪಿಗಳೂ ಆಗಿದ್ದ ನವನಂದರನ್ನು ನಿಗ್ರಹಿಸಿ, ಧರ್ಮಾತ್ಮನೂ ವಿನೀತನೂ ಆದ ಚಂದ್ರಗುಪ್ತನಿಗೆ ಸಿಂಹಾಸನವನ್ನು ದೊರೆಯಿಸಿ, ಅಮಾತ್ಯರಾಕ್ಷಸನನ್ನು ಅವನ ಮಹಾ ಪ್ರಧಾನನಾಗಿರುವಂತೆ ಒಪ್ಪಿಸಿ ತಪಸ್ಸಿಗೆ ತೆರಳುವ ಉದ್ದೇಶದಿಂದ ತಾನು ವರ್ತಿಸಿದುದಾಗಿ ಚಾಣಕ್ಯನು ತಿಳಿಸುವನು; ಅಮಾತ್ಯ ರಾಕ್ಷಸನಿಗೆ ವಿಧೇಯನಾಗಿ ವರ್ತಿಸಬೇಕೆಂದು ಚಂದ್ರಗುಪ್ತನಿಗೆ ತಿಳಿಸುವನು; ಚಾಣಕ್ಯನಲ್ಲಿ ಅಮಾತ್ಯ ರಾಕ್ಷಸನಿಗೆ ಅಪಾರವಾದ ಪ್ರೀತಿ ಗೌರವಗಳು ಹುಟ್ಟುವುವು. ಚಂದ್ರಗುಪ್ತನ ಪಟ್ಟಾಭಿಷೇಕವು ವೈಭವ ವಿಜೃಂಭಣೆಯಿಂದ ನೆರವೇರಿದ ಮೇಲೆ ಚಾಣಕ್ಯನು ಅವನನ್ನು ಹರಸಿ ತಪಸ್ಸಿಗೆ ತೆರಳುವನು. ಇದು ಕಥಾಸಾರಾಂಶ; ಧೂರ್ತರೂ ಧರ್ಮಭ್ರಷ್ಟರೂ ಆದ ನವನಂದರ ನಿಗ್ರಹದ ಮತ್ತು ಸಾತ್ವಿಕನೂ ಧರ್ಮಪಾರಾಯಣನೂ ಆದ ಚಂದ್ರಗುಪ್ತನ ವಿಜಯದ ಮನೋಹರ ಚಿತ್ರ.

ಪಾತ್ರ ಪೋಷಣವೂ ಚಿತ್ತಾಕರ್ಷಕವಾಗಿದೆ. ಮುಖ್ಯ ಪಾತ್ರಗಳು ಭಾರತದ ಇತಿಹಾಸದಲ್ಲಿ ಬೆಳಗುತ್ತಿರುವ ಉದ್ದಾಮ ಪಾತ್ರಗಳು. ಕೌಟಿಲ್ಯನ—ಎಂದರೆ ಚಾಣ

ಕ್ಯನ—ಮೇಧಾಶಕ್ತಿಯೂ ಅರ್ಥಶಾಸ್ತ್ರವೂ ಪ್ರಪಂಚದಲ್ಲೇ ಖ್ಯಾತಿಯನ್ನು ಪಡೆದಿವೆ. ಅಮಾತ್ಯ ರಾಕ್ಷಸನಿಗೂ ಚಾಣಕ್ಯನಿಗೂ ಇರುವ ಸಾದೃಶ್ಯ ವೈದೃಶ್ಯಗಳು ಗಮನಾರ್ಹ. ಇಬ್ಬರೂ ದೈವಭಕ್ತರು, ಮಹಾ ಮೇಧಾವಿಗಳು, ಕರ್ತವ್ಯನಿಷ್ಠರು, ಆಶ್ರಿತಾಭಿಮಾನಿಗಳು, ರಾಜಕೀಯದ ಚದುರಂಗದಾಟದಲ್ಲಿ ನಿಸ್ಸೀಮರು, ಕಾರ್ಯಸಾಧನೆಗಾಗಿ ಕುಟಿಲೋಪಾಯಗಳನ್ನು ಹೂಡುವುದರಲ್ಲಿ ಸಮರ್ಥರು. ಅವರಿಬ್ಬರೂ ಗುಣ ಪಕ್ಷಪಾತಿಗಳು; ಶತ್ರು ಪಕ್ಷಗಳಿಗೆ ಸೇರಿದ್ದೂ ವೈಯಕ್ತಿಕ ದ್ವೇಷವಿಲ್ಲದೆ ಅವರು ಪರಸ್ಪರವಾಗಿ ಒಬ್ಬರನ್ನೊಬ್ಬರು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಶ್ಲಾಘಿಸುವುದನ್ನು ಯಾರಾದರೂ ಮೆಚ್ಚಲೇಬೇಕು. ಅಮಾತ್ಯ ರಾಕ್ಷಸನ ಪ್ರಭುನಿಷ್ಠೆಯೂ, ನವನಂದರಿಂದ ತನಗೆ ಲಭಿಸುವ ಸನ್ಮಾನಾದಿ ಪ್ರಯೋಜನಗಳನ್ನು ಬಿಡಲಾರದ ಲೋಭವೂ ಅವನ ಕುಟಿಲೋಪಾಯಗಳನ್ನು ಹೂಡಲು ಕಾರಣ. ಅವರು ಘೋರ ಪಾತಕಿಗಳೆಂಬುದನ್ನು ತಿಳಿದೂ ಅವನು ಅವರ ಪಕ್ಷವನ್ನು ವಹಿಸುತ್ತಾನೆ. ಚಾಣಕ್ಯನಾದರೋ ತನ್ನನ್ನು ಮರೆಹೊಕ್ಕ ಚಂದ್ರಗುಪ್ತನಿಗೆ ಆಗಿರುವ ಅನ್ಯಾಯ, ತನಗೆ ಆದ ಅಪಮಾನ ಇವುಗಳ ಸೇಡಿಗಾಗಿ ಮತ್ತು ಪಾಪಿಗಳಾದ ನವನಂದರನ್ನು ನಿಗ್ರಹಿಸಿ ಧರ್ಮನಿರತನಾದ ಚಂದ್ರಗುಪ್ತನನ್ನು ಸಿಂಹಾಸನಕ್ಕೇರಿಸುವುದಕ್ಕಾಗಿ ಯತ್ನವಿಲ್ಲದೆ ಕುಟಿಲೋಪಾಯಗಳನ್ನು ಹೂಡುತ್ತಾನೆ. ಅವನ ನಿಸ್ಪೃಹ ಸ್ವಭಾವವು ಅಭಿನಂದನ ಯೋಗ್ಯ. ಚಕ್ರಾಧಿಪತ್ಯದ ಮಹಾಪ್ರಧಾನನಾಗಿದ್ದೂ ಅವನು ಗುಡಿಸಿಲಿನಲ್ಲಿ ವಾಸವಾಗಿರುತ್ತಾನೆ; ತನ್ನ ಪದವಿಯನ್ನು ಅಮಾತ್ಯ ರಾಕ್ಷಸನಿಗೆ ವಹಿಸಿ ತಪಸ್ಸಿಗೆ ತೆರಳುತ್ತಾನೆ. ಚಂದನದಾಸ, ಮಿತ್ರನ ಹೆಂಡತಿ ಮಕ್ಕಳನ್ನು ರಕ್ಷಿಸುವುದಕ್ಕಾಗಿ ಮರಣದಂಡನೆಗೂ ಸಿದ್ಧನಾದ ಮಹಾತ್ಯಾಗಿ; ಉಳಿದ ಪಾತ್ರಗಳೂ ಯಥೋಚಿತವಾಗಿ ಚಿತ್ರಿತವಾಗಿವೆ.

ಶ್ರೇಷ್ಠ ಕಾದಂಬರಿಯಲ್ಲಿ ಯಾವ ಯಾವ ಲಕ್ಷಣಗಳಿರಬೇಕೆಂಬ ಆಧುನಿಕ ರಚನಾ ತಂತ್ರದ ದೃಷ್ಟಿಯಿಂದ ಪರಿಶೀಲಿಸಿದರೆ, ಮುದ್ರಾ ಮಂಜೂಷದಲ್ಲಿ ಕೆಲವು ಲೋಪದೋಷಗಳು ಕಂಡುಬರುವುದೇನೋ ನಿಜವೇ. ಆದರೆ ಅದು ಕನ್ನಡ ಕಾದಂಬರಿ ಪ್ರವರ್ತಕರಲ್ಲೊಬ್ಬನ ಕೃತಿಯೆಂಬುದನ್ನು ನಾವು ಮರೆಯಬಾರದು; ಇಂದಿನದನ್ನು ಅಂದಿನದಕ್ಕೆ ಅನ್ವಯಿಸುವುದು ಉಚಿತವೂ ಅಲ್ಲ. ಮುದ್ರಾಮಂಜೂಷದಲ್ಲಿ ಸಂಭಾಷಣೆಗಳು ಸರಿಯಾದ ಪ್ರಮಾಣದಲ್ಲಿಲ್ಲದಿರಬಹುದು; ಪವಾಡಗಳಂಥ ಘಟನೆಗಳು ಅಲ್ಲಲ್ಲಿ ಅಳವಟ್ಟಿರಬಹುದು; ಇತರ ನ್ಯೂನಾತಿರೇಕಗಳೂ ಇರಬಹುದು. ಆದಾಗ್ಯೂ, ಕಥಾ ಸಂವಿಧಾನ ನಾನಾ ಘಟನೆಗಳೂ, ಓದುಗರ ಕುತೂಹಲವನ್ನು ಕೆರಳಿಸುವ ವೈಖರಿ, ಪಾತ್ರಗಳ ಸುಸಂಗತ ಚಿತ್ರಣ, ನಿರರ್ಗಳವಾಗಿ ಹರಿಯುವ ವಿದ್ವತ್ಪೂರ್ಣ ಭಾಷಾ ಪ್ರವಾಹ ಮನೋಹರವಾದ ವರ್ಣನೆಗಳು ಮುಂತಾದವುಗಳಿಂದ ಶೋಭಿಸುತ್ತಿರುವ ಮುದ್ರಾಮಂಜೂಷ ಉದ್ಗ್ರಂಥ; ಹಿಂದಿನ ಶತಮಾನದ ಕನ್ನಡ ಕಾದಂಬರಿ ಪ್ರವರ್ತಕ ಕೆಂಪು ನಾರಾಯಣ ವಿರಚಿತವಾಗಿ ಅಂದಿನಿಂದ ಇಂದಿನವರೆಗೂ ಅಸಂಖ್ಯಾತ ವಿದ್ವಾಂಸರ ಮೆಚ್ಚಿಕೆಗೆ ಪಾತ್ರವಾಗಿರುವ ಶ್ರೇಷ್ಠ ಕೃತಿ. (ಆಕಾಶವಾಣಿ ಕೃಪೆಯಿಂದ)

## ಪರಿಷತ್ತಿನ ಸದಸ್ಯರಲ್ಲಿ ವಿನಂತಿ

೧೯೬೨ನೇ ಸಾಲಿನ ಪರಿಷತ್ತಿನ ಸದಸ್ಯತ್ವದ ಚಂದಾ ಡಿಸೆಂಬರ್ ೩೧ನೇ ತಾರೀಖಿಗೆ ಮುಗಿಯಿತು. ೧೯೬೩ರ ಪರಿಷತ್ತಿನ ಸದಸ್ಯತ್ವದ ಚಂದಾ ಆರು ರೂಪಾಯಿಗಳನ್ನು ದಯೆಯಿಟ್ಟು ಈ ಕೂಡಲೇ ಪರಿಷತ್ತಿಗೆ ಕಳಿಸಿ ನೆರವು ನೀಡಬೇಕೆಂದು ವಿನಯದಿಂದ ವಿನಂತಿಸುತ್ತೇವೆ.

ಅನ್ನದಾನಯ್ಯ ಪುರಾಣಿಕ
ಕೆ. ಎಂ. ಕೃಷ್ಣರಾವ್
ಗೌರವ ಕಾರ್ಯದರ್ಶಿಗಳು

# ಯೋಧ ಗಾಥ *

ಶ್ರೀ ಕಯ್ಯಾರ ಕಿಞ್ಞಣ್ಣ ರೈ

[ಒಬ್ಬ ತರುಣಯೋಧ, ಉತ್ತರಕ್ಕೆ ಧವಳಗಿರಿಯೆತ್ತರಕ್ಕೆ ನಾಡಗಡಿ ಗುಡಿ ಕಾಯಲು ಹೋಗಿದ್ದನು. ಒಳಗೆ ಸ್ವಾತಂತ್ರ್ಯದ ಬೆಂಕಿ; ಹೊರಗೆ ಕೊರೆವ ಛಳಿ. ಆತನ ನಿಲುವನ್ನು ನಕ್ಷತ್ರ ಸೂರ್ಯಚಂದ್ರರೂ ಈಕ್ಷಿಸುತ್ತಿದ್ದರು. ದಿವದಗಂಗೆ ಇಳಿದುಬಂದು ಆತನ ಮೈಮನಗಳನ್ನು ಪ್ರೋಕ್ಷಿಸುತ್ತಿತ್ತು. ಅಂತು ಆ ಯೋಧ ಗಡಿ ಕಾಯುತ್ತಾ ಶತಪಥ ತಿರುಗುತಿದ್ದಾಗ, ಅನತಿದೂರದಲ್ಲಿ ಓರ್ವ ಬೌದ್ಧ ಸನ್ಯಾಸಿ ಕಾಣಬಂದನು. 'ಬುದ್ಧಂ ಶರಣಂ ಗಚ್ಛಾಮಿ' ಎಂಬ ವಾಣಿ ಆ ಸನ್ಯಾಸಿಯ ಮುಖದಿಂದ ಕೇಳಿದ್ದೇ, ತರುಣ ಯೋಧನು, ಆತನಿಗೆ ಮಣಿದನು. ವಂಚಕನಾದ ಸ್ವಾಮಿ ಯೋಧನ ಬೆನ್ನಿಗೆ ಇರಿದನು. ಉರಿದೆದ್ದ ಯೋಧನು ಕೈಯ್ಯ ಕೋವಿಯಿಂದ ಆ ಹಗೆಯನ್ನು ಸುಟ್ಟು 'ಜಯ ಭಾರತಂ....ಯುದ್ಧಂ ಶರಣಂ ಗಚ್ಛಾಮಿ' ಎಂದು ಉದ್ಘೋಷಿಸಿ ಸ್ವರ್ಗ ಸೋಪಾನವೇರಿದನು.

ಈ ಯೋಧನ ತಾಯಿ, ತಾಯ್ನೆಲದಲ್ಲಿ ಹಳೆಯ ಗುಡಿಸಲು ಒಂದರಲ್ಲಿ ವಾಸವಾಗಿದ್ದಾಳೆ. ತನ್ನ ಕಂದನು ಗೆದ್ದು ಬರುವನೆಂದೇ ನಂಬಿದ್ದಾಳೆ. ತನ್ನ ಹಟ್ಟಿಯ ದನದ ಕರು ಸತ್ತುಹೋಗಿರಲು, ಅದರ ಬಳಿ ಹೋಗಿ ತಾಯ್ದನದ ಕಣ್ಣೀರು ಒರೆಸುತ್ತಿದ್ದಾಳೆ. ಅವಳಿಗೆ ಆಗ ಮೂಹತ್ತು ವರ್ಷಗಳ ಹಿಂದಿನ ನೆನಪು ಒಂದೊಂದೇ ಬಂದುವು; "ಸ್ವಾಮಿ ಸೆರಗನ್ನು ಹಿಡಿದು ಈ ಗುಡಿಸಲಿಗೆ ಬಂದೆನು; ಈ ದನದ ತಾಯ್ದನವನ್ನು ಕರೆದು ಸ್ವಾಮಿಗೆ ಹಾಲನ್ನ ಉಣ್ಣಿಸಿದೆನು. ಗಾಂಧಿ ಸ್ವಾತಂತ್ರ್ಯ ಸಮರಕ್ಕೆ ಕರೆದರು; ಗಾಂಧಿದೇವರ ಕರೆಗೆ ತನ್ನ ದೇವರು ಓ ಗೊಟ್ಟರು. ಸ್ವಾಮಿಯ ಹಣೆಗೆ ಕುಂಕುಮವಿಟ್ಟು ಕಳುಹಿಸಿದೆ. ಬಳಸಿ ಕಾಲುಹಿಡಿದು ತೊದಲುವ ಕಂದನನ್ನು ಎತ್ತಿ ಮುದ್ದಾಡಿ ನನ್ನ ಕೈಗಿತ್ತರು. ಕಂದನನ್ನು ಎದೆಗೊತ್ತಿ ಮುತ್ತಿಕ್ಕಿದೆನು. ಸ್ವಾಮಿ ಹೊರಳಿ ನೋಡದೆ ಹೊರಟೇ ಹೋದರು. ಸಂಜೆಯ ಸಮಯ ಸತ್ಯಾಗ್ರಹ ಸಮರದಲ್ಲಿ ಹಿಡಿದ ಬಾವುಟ ಬಿಡದೆ ಮಡಿದರೆಂಬ ಸುದ್ದಿ ಬಂತು. ಮುಂದೆ ಮಗುವೆ ಮೂಜಗವೆಂದು ಮುದ್ದಾಗಿ ಆತನನ್ನು ಸಾಕಿದೆನು; ಅವರದೇ ಪ್ರತಿಬಿಂಬವಾಗಿ ಆತನು ಬಳೆದು ನನ್ನೆತ್ತರವನ್ನು ಮೀರಿನಿಂತನು. ಪುನಃ ಕಾಳಗದ ಕರೆಬಂತು; ಉತ್ತರದ ಗಡಿ ಕಾಯಲು ನನ್ನ ಕಂದನು ಹೋಗಿದ್ದಾನೆ...." ಈ ರೀತಿಚಿಂತಿಸುತ್ತಿದ್ದಾಕೆ ಅಲ್ಲಿಯೇ ಮೈಮರೆತು ಒರಗಿದಳು. ಅದೇ ಹಸು ಮೊಗಚಾಚಿ ತನ್ನ ಅಮೃತ ರಸನೆಯಿಂದ ಅವಳನ್ನು ನೆಕ್ಕಿತು.

ನಾಲ್ಕು ದಿನಗಳ ಹಿಂದೆ,ಕವಿ, ಗಡಿ ಕಾಯುವ ಯೋಧರಿಗೆ ನೆರವು ನೀಡಿರಿಯೆಂದು ಕೇಳುತ್ತಾ ಅದೇ ಗುಡಿಸಲಿಗೆ ಹೋಗಿದ್ದ. ನಮ್ಮ ಯೋಧರ ಸಾಹಸವನ್ನು ವರ್ಣಿಸುತ್ತಿದ್ದಾಗ, ಆಕೆ ಬೆರಗಾಗಿ ಕೇಳುತ್ತಿದ್ದಳು. ಕೊನೆಗೆ ಒಂದು ನಿಟ್ಟುಸಿರು ಬಿಟ್ಟು ಗುಡಿಸಲಿನ ಒಳಹೋಗಿ ಮರಳಿ ಬಂದು ಒಂದು ಹಳೆಯ ಬಟ್ಟೆಯಲ್ಲಿ ಸುತ್ತಿರುವ ಗಂಟನ್ನು ಬಿಚ್ಚಿದಳು. ಅದರಲ್ಲಿ ಗಿಳಿಯೋಲೆ, ಮೂಗುತಿ, ನತ್ತು, ತಾಳಿ ಇವೆಲ್ಲಾ ಇದ್ದುವು. 'ಪುಣ್ಯಾತ್ಮರೇ, ನನಗೆ ನನ್ನ ಮಗುವನ್ನು ಒಮ್ಮೆ ಕಂಡಂತೆ ಆಯಿತು. ಅವನೇ ನನ್ನ ಸಂಪತ್ತು; ಈ ಸೊತ್ತನ್ನು ಕೊಳ್ಳಿರಿ' ಎಂದು ಆಭರಣಗಳನ್ನೆಲ್ಲಾ ಕವಿಯ ಕೈಗೆ ಇತ್ತಳು.

ಆಕೆಯ ಕಥೆಯನ್ನು ಕೇಳಿ ರೋಮಾಂಚನವಾಯಿತು; ದೇಹ ಕಂಪಿಸಿತು; ಆ ತಪಸ್ವಿನಿಗೆ ಕವಿ ಮಣಿದನು; ಆಕೆಯ ಸ್ವಾಮಿಯನ್ನು ಸ್ಮರಿಸಿದನು. ಅವರಾ 'ಅಭಿಮನ್ಯು ಪುತ್ರ'ನನ್ನೂ ಕೊಂಡಾಡಿದನು. ಇದು ಈ ಯೋಧಗಾಥ ಎಂಬ ಕವನದ ಸಂದರ್ಭ-ಸಾರಾಂಶ.]

ಇದು ಯೋಧರ ಗಾಥ,  
ಕವಿ ಕಲ್ಪಿತ ಗೀತ,  
ಬಾಷ್ಪಾಗ್ನಿ ಸ್ರೋತ!  
ಜಯಭಾರತನೂತ ॥ ಪಲ್ಲವಿ ॥

I

ಹಿಮಗಿರಿಯ ಶಿರದಲ್ಲಿ ಧವಳದೀಧಿತಿ ಚೆಲ್ಲಿ-  
ತಾಯ ಹರಕೆಯ ಹೊತ್ತು ಹಿಗ್ಗಿ ನಡೆದೆ;

* ದಿನಾಂಕ ೨೪-೨-೬೪ ರಂದು ಮಂಗಳೂರಲ್ಲಿ ಭಾರತ ಸರಕಾರದ ಪ್ರಚಾರ ಶಾಖೆಯವರು ಏರ್ಪಡಿಸಿದ್ದ ಕವಿಸಮ್ಮೇಳನದಲ್ಲಿ ಹಾಡಿದುದು.

ಉತ್ತರೋತ್ತರ ಹೋಗಿ, ಎತ್ತರೆತ್ತರ ಸಾಗಿ-
ಬಾನಾಡಿ ಬಾವುಟವ ನೆಗ್ಗಿ ಹಿಡಿದೆ!

ಲಕ್ಷ ನಕ್ಷತ್ರಾಕ್ಷಿ ಸೂರ್ಯಚಂದ್ರಮ ಸಾಕ್ಷಿ
ಅನಿಮಿಷೋನ್ಮೇಷದಲಿ ವೀಕ್ಷಿಸುತಿರೆ;
ದಿವದಿಂದಿಳಿದ ಗಂಗೆ ಪಾವನ ಜಲ ತರಂಗೆ
ನಿನ್ನ ಮೈಮನಗಳಂ ಪ್ರೋಕ್ಷಿಸುತಿರೆ;

ಅಂತರಂಗದಿ ಶಿಖಿಯು ಬಹಿರಂಗ ಹಿಮ ಸಖಿಯು
ಶೀತೋಷ್ಣ ಸುಖದುಃಖಸಮರ ಸಂಪತ್ತಿ;
'ಕಾಯಕವೆ ಕೈಲಾಸ ಮರಣವೇ ಮಾನವಮಿ'
ಎಂದು ಗಡಿಗುಡಿ ಕಾದೆ ಶತಪಥಂ ಸುತ್ತಿ.

ಅದೋ ಅಲ್ಲಿ ಸನ್ಯಾಸಿ! ಬೌದ್ಧ ವಸನದ ವೇಷಿ,
ಕೇಳಿಸಿತು ವಾಣಿ 'ಬುದ್ಧಂ ಶರಣಂ ಗಚ್ಛಾಮಿ'
ಹೆದೆಗೆ ಬಿಲ್ ಮಣಿವಂತೆ ತಲೆವಾಗಿ ನೀನಿಂತೆ,
ಇರಿದನಹ ಬೆನ್ನಿಂದೆ ವಂಚಕ ಸ್ವಾಮಿ!

'ಜಯಭಾರತಂ ಜಯತು ಜಯಭಾರತಂ'—ಎದ್ದೆ,
ಢಂಢಣಂ ಮೊಳಗಿತ್ತೈ ಕೈಯ ಕೋವಿ!
ಹಗೆಯನ್ನು ದಗೆಯನ್ನು ಸುಟ್ಟುರುಹಿ ನೀಬಿದ್ದೆ!
ಘೋಷಿಸುತ ಮಂತ್ರ 'ಯುದ್ಧಂ ಶರಣಂ ಗಚ್ಛಾಮಿ!'

ಬುದ್ಧನಿಗೆ ಶರಣೆಂದು, ಧರ್ಮಕ್ಕೆ ಶರಣೆಂದು,
ಭಾರತದ ದನಿಗೆ ಮಾರ್ದನಿಸಿತ್ತು ಚೀನ;
ಯುದ್ಧವೇ ಶರಣೆಂದು, ಮೋಸವೇ ಶರಣೆಂದು,
ಶಿಷ್ಯ ಕಲಿಸಿದ ಗುರುಗೆ—ತಿರುಗುಬಾಣ!

ಮೋಸತಿಳಿಸಿದ ಮಂತ್ರ, ವಂಚಕನ ತಿರುತಂತ್ರ,
ವೀರರ್ಗೆ ಶೂರರ್ಗೆ ಯಿದೆ ರಣಾಹ್ವಾನಂ!
ನಿನ್ನ ಜೀವಿತ ಶಿಖಿಯು ಹಿಮವು ತಣಿಸಲು ಸುಖಿಯ
ರಂಭೆ ಕರೆದಳೆ? ಏರ್ದೆ ಸ್ವರ್ಗಸೋಪಾನಂ!

## II

ನೀನಾರೆನುತ ಜನರು ಗುರುತಿಸಲರಿಯ ದಿಹರು
ನಾಬಲ್ಲೆ ನಿನ್ನ ಕಥೆ ಮರೆಯಲೊಲ್ಲೆ:
ಎನ್ನ ತುಳು ನಾಡಿನಲಿ ಎನ್ನ ಕನ್ನಡದಲ್ಲಿ
ಎನ್ನ ಕೇರಳದಲ್ಲಿ-ತಾಯ್ನೆಲದೊಳಲ್ಲೆ-

ಒಂದು ಹಳೆ ಗುಡಿಸಲಲಿ ಹಡೆದಮ್ಮನಿಹಳಲ್ಲಿ
ಗೆದ್ದು ಬರುವನು ಕಂದನೆಂದೆ ನಂಬಿ;

ಕರು ಸತ್ತುಹೋದ ಹಟ್ಟಿಯ ದನದ ಕಣ್ಣೀರ
ಒರೆಸುತಿರುವಳು ಬಾಷ್ಪ ತುಂಬಿತುಂಬಿ.

ಮೂಹತ್ತು ವರ್ಷಗಳ ಕೆಳಗೆ ಯೀ ಗುಡಿಸಲಿಗೆ
ಸ್ವಾಮಿ ಸೆರಗಂ ಹಿಡಿದೆ ಬಿಡದೆ ಬಂದೆ;
ಈ ತಂಗಿ ತುಂಗೆಯಾ ತಾಯ್ ಗಂಗೆಯಂ ಕರೆದು
ಹಾಲುಣಿಸಿ ನಾನವರ ತಣಿಸುತಿದ್ದೆ!

ಇಳಿದುಬಂದರೆ-ಗಾಂಧಿದೇವರೀ ತಾಯ್ನೆಲಕೆ?
ನಮ್ಮನೆತ್ತರಿಸೆ ಬಂಧನವೆಲ್ಲ ಬಿಡಿಸೆ;
ಆ ದೇವ ಕರೆದಾಗ ಯೀ ದೇವ ಹೊರಡಲ್ಕೆ
ಕುಂಕುಮವ ತೊಡಿಸಿದೆನು-ಸ್ವಾಮಿ ಹಣೆಗೆ.

ಬಳಸಿ ಕಾಲ್ಪಿಡಿದು ತೊದಲುವ ಕಂದ ಚಂದ್ರಮನ
ಎತ್ತಿ ತಲೆಮೂಸಿ ಕೊಟ್ಟರು ಯೆನ್ನ ಕೈಗೆ;
ಎದೆಗೊತ್ತಿ ಹಿಡಿದಪ್ಪಿ ನಾ ಮುತ್ತನಿಕ್ಕಿದೆನು
ಮೊಲೆ ಹಾಲಿನಿಂ ದೊಡ್ಡೆರವಕೆ!

ಹೊರಟೆಹೋದರು ಸ್ವಾಮಿ-ಕೊರಳುದ್ದ ಮಾಡಿದೆನು,
ಹೊರಳಿ ನೋಡಲೆಯಿಲ್ಲ-ಮರಳಲಿಲ್ಲ;
ನೇಸರಿಳಿಯುವ ಹೊತ್ತು-ಸಿಡಿಲ ಸುದ್ದಿಯು ಬಂತು:
ಹಿಡಿದಬಾವುಟ ಬಿಡದೆ ಮಡಿದರಲ್ಲ!

ಮಾನಸ ಸರೋವರಕೆ ಮೋಹ ಸಕ್ಕರೆ ಬೆರಸಿ
ಶಿಶುರಾಜ ಹಂಸನಂ ತೇಲಿಸಿದೆನು;
ಬಳೆದು ನಿಂದನು ಕಂದ-ಅವರದೇ ರೂಪಿಂದ
ಮಗುವೆ ಮೂಜಗವೆಂದು ಮುದ್ದಿಸಿದೆನು!

ತುಂಬ ಹರೆಯದ ತರುಣ, ಮೀಸೆ ಮೂಡಿವ ವದನ
ಎತ್ತರದಿಯೆನ್ನನ್ನೆ ಮೀರಿನಿಂದ;
ಕರೆಬಂತು ಕಾಳಗಕೆ ಹೊತ್ತು ಹೋದನು ಹರಕೆ
ಉತ್ತರದ ಗಡಿಗಾಗಿ ನಡೆದ ಕಂದ!

ಇಂತು ಚಿಂತಿಸಿ ಮೈಯ ಮರೆದು ನೆಲಕೊರಗಿದಳು,
ನೀಳ್ದ ಮೊಗದಿಂಬಾಗಿ ಹಸು ಮೂಸಿತು;
ಬೆಂದೊಡಲ ಬೇಗೆಯನು ತಣಿಸೆ ನಾಲಿಗೆ ಚಾಚಿ,
ಅಮೃತ ರಸದಿಂದವಳ ಮಿದುನೆಕ್ಕಿತು!

## III

ನಾಲ್ಕುದಿನಗಳ ಹಿಂದೆ ಗಡಿಕಾವ ಯೋಧರಿಗೆ
ನೆರವು ನೀಡಿರಿಯೆಂದು ಕೇಳಿ ಬಂದು-

ಅದೆ ಗುಡಿಸಲಂ ಸೇರ್ದೆ ಆತಾಯ ಬಳಿ ಸಾರ್ದೆ
ನಮ್ಮ ಯೋಧರ ಸಾಸ ಹೇಳುವಂದು-

ಬೆರಗಾಗಿ ಕೇಳುತಿದ್ದಳು ತಾಯಿ, ಕೊನೆಗೊಮ್ಮೆ
ನಿಟ್ಟುಸಿರು ಬಿಟ್ಟು ಒಳಹೋಗಿ ಮರಳಿ,
ಹಳೆಯ ಪಟ್ಟೆಯ ಬಟ್ಟೆಯಲಿ ಸುತ್ತಿಕಟ್ಟಿರುವ
ಗಂಟು ಬಿಚ್ಚಿದಳಾಕೆ-ಸುರುಳಿ ಸುರುಳಿ!

ಗಿಳಿಯೋಲೆ, ಮೂಗುತಿಯು, ನತ್ತು, ತಾಳಿಯು-ಇತ್ತು
ಹಣೆಗೊತ್ತಿ ಮೊಗವೆತ್ತಿ ನುಡಿದಳಿಂತು:
'ಪುಣ್ಯವಂತರೆ! ಎನಗೆ ಮಗುವ ಕಂಡಂತಾಯ್ತು
ಅವನೆನ್ನ ಸಂಪತ್ತು-ಕೊಳ್ಳಿರೀ ಸೊತ್ತು!'

ಕೇಳ್ದೆನಾಕೆಯ ಕಥೆಯ-ಶೋಕವೇ ವೀರವೇ?
ದೇಹ ಪುಲಕಿತವಾಯ್ತು; ಕಂಪಿಸಿತ್ತು!
ಆ ತಪಸ್ವಿನಿಗೆ ನಾ ಮಣಿದೆನಾಕೆಯ ಸ್ವಾಮಿ-
ಯುಂನೆನೆದೆ-ಸುತನಿಗಭಿಮನ್ಯುಗತಿಯಾಯ್ತು!

IV

ಆ ತಂದೆಯ ಆ ತಾಯಿಯ ಆ ತರುಣನ ತ್ಯಾಗ!
ಕಾಳಗದಲಿ ಕಾಳಿಗೆ ಬಲಿ ಸ್ವಾತಂತ್ರ್ಯವೆ ಯಾಗ!
ಸ್ವಾತಂತ್ರ್ಯಂ ಮೂರಕ್ಷರ ಮೂಲೋಕದ ಸಾರ!
ವೈಕುಂಠದ ಕೈಲಾಸದ ಮುಕ್ತಿಯ ಮಾದ್ವಾರ!
ಇದು ಧರ್ಮವು ಇದು ಕರ್ಮವು ನಡೆಮುಂದಕೆ ಧೀರ!
ಇದು ಭೋಗವು ಇದು ಯೋಗವು ದೌರ್ಬಲ್ಯವು ದೂರ!
ನಾಡಿನ ಗಡಿ ಕಾಯಲು ಹಿಡಿ ನೀ ಕೋವಿಯ ನಿತ್ಯ
ನಾಡುಳಿದರೆ ನೀನುಳಿಯುವೆ ನಾನುಳಿಯುವೆ ಸತ್ಯ.
ಜಯ ನೋವಿಗೆ ಜಯ ಸಾವಿಗೆ ಜಯ ದೇವಿಗೆ ಜಯತು;
ಜಯ ದೇಶಕೆ ಜಯ ಕೋಶಕೆ ಜಯ ಭಾರತ ಜಯತು!
ಓಂ ಯುದ್ಧಕೆ ಓಂ ಯೋಧಗೆ ಓಂ ಕ್ರಾಂತಿಯ ಕಿಡಿಗೆ!
ಓಂ ಬುದ್ಧಗೆ ಓಂ ಬೋಧಕೆ ಓಂ ಶಾಂತಿಯ ನುಡಿಗೆ!
ಇದು ಯೋಧರ ಗಾಥ,
ಕವಿ ಕಲ್ಪಿತ ಗೀತ,
ಬಾಷ್ಪಾಗ್ನಿ ಸ್ರೋತ!
ಜಯಭಾರತಮಾತ.

# ಗ್ರಂಥಾವಲೋಕನ

**ಜೈಮಿನಿ ಭಾರತ ಸಂಗ್ರಹ:** ಸಂಪಾದಕರು: ಶ್ರೀ ದೇ. ಜವರೇಗೌಡರು, ಎಂ.ಎ., ಮೈಸೂರು; ಪ್ರಕಾಶಕರು: ವಯಸ್ಕರ ಶಿಕ್ಷಣ ಸಮಿತಿ, ಮೈಸೂರು; ಸೈಜು ಕ್ರೌ. ೧/೮; ಪುಟಗಳು ೨೩೮ + ೩೪; ಬೆಲೆ ೨ ರೂಪಾಯಿಗಳು.

ಕನ್ನಡಿಗರಿಗೆ ಅತ್ಯಂತ ಪ್ರಿಯವಾದ ಮಹಾಕಾವ್ಯಗಳಲ್ಲಿ ಜೈಮಿನಿ ಭಾರತವೊಂದು. ಹಲವಾರು ಶತಮಾನಗಳಿಂದ ಕನ್ನಡ ನಾಡಿನ ಮೂಲೆಮೂಲೆಗಳಲ್ಲಿಯೂ ಈ ಕಾವ್ಯವನ್ನು ಜನ ಓದಿ, ಓದಿಸಿ ಆನಂದಪಡುತ್ತಿದ್ದಾರೆ. ಜೈಮಿನಿ ಭಾರತವು ಕೇವಲ ಪಂಡಿತರಿಗೇ ಅಲ್ಲ, ಪಾಮರರಿಗೂ ಪ್ರಿಯವಾಗಿರುವುದು ಅದರ ಒಂದು ವೈಶಿಷ್ಟ್ಯವೆನ್ನಬಹುದು.

ಕರ್ಣಾಟಕ ಕವಿಚೈತ್ರವನಚೂತನಾದ ಲಕ್ಷ್ಮೀಶ ಕವಿಯು ಕಾವ್ಯಕಲಾವಿಶಾರದನು. ಆಕರ್ಷಕ ಕಥಾವಸ್ತು, ಮನೋಹರ ಶೈಲಿ, ಸಂಭಾಷಣಾ ಚಮತ್ಕಾರ, ವರ್ಣನಾ ವೈಖರಿ, ದೇಸಿಯ ಬೆಡಗು, ಆಕರ್ಷಕ ಪಾತ್ರ ಸೃಷ್ಟಿ ಇತ್ಯಾದಿ ಶ್ರೇಷ್ಠ ಗುಣಗಳಿಂದ ಜೈಮಿನೀ ಭಾರತವು ನಾಡಿನ ಎಲ್ಲ ರಸಿಕರ ಮನ್ನಣೆಗೂ ಪಾತ್ರವಾಗಿದೆ.

ಈ ಮಹಾಕಾವ್ಯವನ್ನು ೧೯೨೨ ರಲ್ಲಿ ಕೈಲಾಸವಾಸಿ ಕರ್ಣಾಟಕಭಾಷಾರತ್ನಂ ಪಿ. ಆರ್. ಕರಿಬಸವ ಶಾಸ್ತ್ರಿಗಳು ಶುದ್ಧವಾಗಿ ಸಂಪಾದಿಸಿ ಪ್ರಕಟಿಸಿದರು. ಹಾಗೂ ೧೭ ಆಶ್ವಾಸಗಳಿಗೆ ಟೀಕೆಯನ್ನು ಕೂಡ ಬರೆದು ಬೆಳಕಿಗೆ ತಂದರು.

೧೯೫೭ ರಲ್ಲಿ ಮೈಸೂರು ಸರ್ಕಾರದವರು ಶ್ರೀ ದೇವುಡು ನರಸಿಂಹ ಶಾಸ್ತ್ರಿಗಳು ಮತ್ತು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಇವರ ಸಂಪಾದಕತ್ವದಲ್ಲಿ ವಿಸ್ತಾರವಾದ ಪ್ರಸ್ತಾವನೆಯೊಡನೆ ಪ್ರಕಟಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನವರು ೧೯೪೮ ರಲ್ಲಿ ಜೈಮಿನಿ ಭಾರತದ ಕನ್ನಡ ಗದ್ಯಾನುವಾದವನ್ನು ಪ್ರಕಟಿಸಿದರು. ಚಿಕ್ಕಮಗಳೂರು ಕರ್ಣಾಟಕ ಸಂಘದವರು ೧೯೩೩ ರಲ್ಲಿ 'ಕವಿ ಲಕ್ಷ್ಮೀಶ' ಎಂಬ ಪ್ರಶಸ್ತಿ ಗ್ರಂಥವನ್ನು ಪ್ರಕಟಿಸಿದರು. ೧೯೫೪ ರಲ್ಲಿ ಜೈಮಿನಿ ಭಾರತ ಸಂಗ್ರಹ ಎಂಬ ಹೆಸರಿನಲ್ಲಿ ಶ್ರೀ ತ. ಸು. ಶಾಮರಾಯರು ಪ್ರಕಟಿಸಿದರು. ಹಲವಾರು ಮಂದಿ ವಿದ್ವಾಂಸರು ಲಕ್ಷ್ಮೀಶನ ಈ ಕಲಾಕೃತಿಯ ಮೇಲೆ ಸ್ವಾರಸ್ಯವಾದ ಲೇಖನಗಳನ್ನು ಬರೆದರು. ಲಕ್ಷ್ಮೀಶ ವಿರಚಿತವೆನಿಸಿದ ಕೆಲವು ಹಾಡುಗಳು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ (೧೯೨೨) ಪ್ರಕಟವಾದುವು. ಇವೆಲ್ಲವನ್ನೂ ನೋಡಲಾಗಿ ಜೈಮಿನಿ ಭಾರತವು ಕರ್ಣಾಟಕದಲ್ಲಿ ಬಹುಮುಖವಾಗಿ ಜನರಿಗೆ ಬಳಕೆಗೆ ಬಂದಿದೆ ಎಂಬುದನ್ನು ನಾವು ಸುಲಭವಾಗಿ ಅರಿಯಬಹುದು.

ಪ್ರಕೃತ ಜೈಮಿನಿ ಭಾರತ ಸಂಗ್ರಹದಲ್ಲಿ ಪೀಠಿಕೆಯಲ್ಲಿ ಕವಿಕಾವ್ಯ ವಿಚಾರವನ್ನೂ ಅನಂತರ ಕಥಾಸಾರವನ್ನೂ ಕಡೆಯಲ್ಲಿ ಅರ್ಥಕೋಶವನ್ನೂ ಕೊಡಲಾಗಿದೆ. ಪಾತ್ರ ವರ್ಗವನ್ನು ನಿರೂಪಿಸಲಾಗಿದೆ. ಮೂಲಕಾವ್ಯವನ್ನು ೧೭ ಭಾಗಗಳಾಗಿ ವಿಂಗಡಿಸಿ ಕಥಾಸ್ವಾರಸ್ಯಕ್ಕೆ ಲೋಪ ಬರದಂತೆ ಸಂಗ್ರಹಿಸಲಾಗಿದೆ. ಮೂಲ ಜೈಮಿನಿಯಲ್ಲಿ ೩೪ ಸಂಧಿಗಳಿವೆಯೆಂಬುದು ಗಮನಾರ್ಹ. ಮೂಲದಲ್ಲಿ ೧೯೦೭ ಪದ್ಯಗಳಿವೆ. ಈ ಸಂಗ್ರಹದಲ್ಲಿ ೯೧೧ ಪದ್ಯಗಳಿವೆ. ವರ್ಣನಾಭಾಗದ ಪದ್ಯಗಳೂ, ಅನವಶ್ಯವಾದ ಪದ್ಯಗಳೂ ಇಲ್ಲಿ ಬಿಡಲ್ಪಟ್ಟಿವೆ.

ನಾರಿಯರ ಛಲ ಮೆಂತುಟೋ (ಪುಟ ೪೩) ಎಂಬಲ್ಲಿ 'ಛಲ' ಎಂಬ ಪ್ರಯೋಗವು ಸಾಧುವೇ ಎಂಬುದು ಗಮನಾರ್ಹ. ಕಾಗದ, ಮುದ್ರಣ, ರಕ್ಷಾಪತ್ರ ಎಲ್ಲವೂ ಚೆನ್ನಾಗಿವೆ. ವಾಚನಾರ್ಹ ಗ್ರಂಥವಿದು.

**ವಿಚಾರ ವಲಯಗಳು:** ಲೇಖಕರು: ಪ್ರೊ॥ ಸಚ್ಚಿದಾನಂದ ಶಿರೋಡಕರ, ಎಂ.ಎ.; ಪ್ರಕಾಶಕರು: ವಿಕಾಸನ ಪ್ರಕಾಶನ, ಅಂಕೋಲೆ; ಸೈಜು ಕ್ರೌ ೧/೮; ಪುಟಗಳು ೧೨೬; ಬೆಲೆ ರೂ. ೧-೫೦ ನ.ಪೈ.

ಇದೊಂದು ಪ್ರಬಂಧಗಳ ಸಂಗ್ರಹ. ಇದರಲ್ಲಿ (೧) ವಿಚಾರ ವಲಯಗಳು, (೨) ಸುಖೀಜೀವನ, (೩) ಆನಂದ, (೪) ಅಜಾತಶತ್ರು, (೫) ಪುಸ್ತಕಗಳು, (೬) ಪರಿಶ್ರಮದ ಸ್ಥಾನ, (೭) ಮೌನ, (೮) ಧೂಮ್ರವಲಯಗಳು, (೯) ಮೋಡಗಳು, (೧೦) ಮಿತ್ರತ್ವ, (೧೧) ಕಾರ್ಯದ ಕಲೆ ಎಂಬಿಷ್ಟು ಪ್ರಕರಣಗಳಿವೆ.

ಈ ಪ್ರಬಂಧಗಳು ವಾಚನಾರ್ಹವಾಗಿವೆ. ಅನವಶ್ಯ ಶಬ್ದಗಳ ಪ್ರಯೋಗ ಬಹಳವಿದೆ. "ಕಿರಿದರೊಳೆ ಪಿರಿದು ಮರ್ಥಮಂ ನೆರೆಪಲ್‌ಬಲ್ಲ" ಕನ್ನಡಿಗರ ಜಾಣ್ಮೆಯನ್ನು ಈ ಗ್ರಂಥಕಾರರು ನೆನಪಿನಲ್ಲಿಟ್ಟುಕೊಳ್ಳಬೇಕಾಗಿತ್ತು. ಕಾಗದ, ಮುದ್ರಣ, ರಕ್ಷಾಪತ್ರ, ಮಧ್ಯಮವಾಗಿದೆ. ವಿದ್ಯಾರ್ಥಿಗಳೂ ಜನಸಾಮಾನ್ಯರೂ ಓದಲರ್ಹವಾಗಿದೆ.

—'ಶೂಲಪಾಣಿ'

**ಶಚಿ – ಗೇರಿ: ಮೂಲ: ಶ್ರೀ ಭಟ್ಟಿಪ್ರೋಲು ಕೃಷ್ಣಮೂರ್ತಿ; ಅನುವಾದ: ಶ್ರೀಮತಿ ಎಚ್. ಕೆ. ಅನಸೂಯ; ಪ್ರಕಾಶಕರು: ಉಷಾ ಪಬ್ಲಿಕೇಷನ್ಸ್, ಮಲ್ಲೇಶ್ವರಂ, ಬೆಂಗಳೂರು; ಪುಟಗಳು ೧೨೦; ಬೆಲೆ ರೂ. ೧–೫೦ ನ.ಪೈ.**

ಇದೊಂದು ಸಾಮಾಜಿಕ ಕಾದಂಬರಿ. ಮೊದಲನೆಯ ಭಾಗ ಮಾತ್ರ ಪ್ರಕಟವಾಗಿದೆ.

ಮ್ಯಾಜಿಸ್ಟ್ರೇಟ್ ಬಲರಾಂ, ಡಾ|| ಸುದರ್ಶನಂ ಹಾಗೂ ಅವರ ಇಬ್ಬರು ಸುಶಿಕ್ಷಿತ ಕುಮಾರಿಯರು – ಶಚಿ ಮತ್ತು ಗೇರಿ – ಇವರ ಮಧ್ಯೆ ಕತೆ ಹೆಣೆದುಕೊಂಡಿದೆ. ಸಂಗೀತ ಪ್ರೇಮಿ ಬಲರಾಂ ಹಾಗೂ ಶಚಿಯ ತಂಗಿ ಗೇರಿ ಕಾಲೇಜಿನ ಯೂನಿವರ್ಸಿಟಿ ಡೇ' ಕಾರ್ಯಕ್ರಮದಲ್ಲಿ ಸಂಧಿಸಿ ಸ್ನೇಹಿತರಾಗುತ್ತಾರೆ. ಡಾ|| ಸುದರ್ಶನಂ ಅವರ ಪರಿಚಯದ ನಂತರ ಗೇರಿಯ ಪಿಟೀಲು ಪಾಠಕ್ಕೆ ಮೇಸ್ಟ್ರು ಆಗಿ ಬಲರಾಂ ಆ ಮನೆಗೆ ತೀರ ಸಮೀಪದವನಾಗುತ್ತಾನೆ. ಗೇರಿ–ಬಲರಾಂ ಪರಸ್ಪರ ಸ್ನೇಹ ವರ್ಧಿಸುತ್ತದೆ. ಶಚಿಯ ಮನಸ್ಸೂ ಬಲರಾಮನ ಕಡೆಗೇ ವಾಲುತ್ತದೆ. ಸಂದರ್ಭ ಒದಗಿದಾಗ ಅದನ್ನು ವ್ಯಕ್ತಮಾಡುತ್ತಾಳೆ. ಆದರೆ ಬಲರಾಮ ಗೇರಿಯಲ್ಲಿ ಅನುರಕ್ತ. 'ನನ್ನನ್ನು ಮದುವೆಯಾಗುತ್ತೀಯಾ?' ಎಂದು ಕೇಳಿದಾಗ, ಅವನಿಗೆ ಕೇಳಿಸದಂತೆ "....ಈಗ ಬೇಡ" ಅನ್ನುತ್ತಾಳೆ ಗೇರಿ. ಮುಂದೆ ಸೂಚ್ಯವಾಗಿ ತನ್ನ ಒಪ್ಪಿಗೆಯನ್ನು ಬಲರಾಮನಿಗೆ ತಿಳಿಸಬೇಕೆಂದಾಗ ಮಧ್ಯೆ ಶಚಿಯ ಪ್ರವೇಶದಿಂದ ಅದು ಸ್ಪಷ್ಟವಾಗುವುದಿಲ್ಲ.

ಅನಿರೀಕ್ಷಿತ ಘಟನೆಗಳನ್ನು ಎಲ್ಲರೂ ಎದುರಿಸಬೇಕಾಯಿತು. ಪತಿತೆಯಾದ ಶಚಿ ಆತ್ಮಹತ್ಯೆಗೆ ಉದ್ಯುಕ್ತಳಾದಾಗ ಬಲರಾಂ ಕೈಹಿಡಿದು ಅವಳನ್ನು ರಕ್ಷಿಸುವನು. ಯಾವ ಮನಸ್ಸಿನಿಂದ, ಎಂತಹ ಪ್ರಸಂಗದಲ್ಲಿ ಅವಳನ್ನು ಪತ್ನಿಯಾಗಿ ಸ್ವೀಕರಿಸಿದನೋ? ಗೇರಿಯ ಸುತ್ತು ಆವರಿಸಿದ ಒಲುಮೆ ತನ್ನ ಇಡಿಯ ಜೀವನವನ್ನೇ ತೊಡಕಿಗೆ ಈಡು ಮಾಡುವದು ಎಂದು ಆತನಿಗೆ ಹೇಗೆ ಗೊತ್ತಾಗಬೇಕು? ಶಚಿಯ ಮಗು ಪಾರ್ವತಿ ತನಗೆ ಹುಟ್ಟಿದ್ದಲ್ಲ ಎಂಬ ಮಾನಸಿಕ ನೋವಿನಿಂದ ಆತನು ಬಳಲುತ್ತಾನೆ. ತಾನು ತೋರಿದ ಯಾವುದೋ ಒಂದು 'ಅಜಾಗೃತಿ' ಯ ಕಾರಣದಿಂದ ಆಜನ್ಮಪರಿಯಂತ ಬಲರಾಂನಿಗೆ ಎರವಾಗಬೇಕಾಯಿತು ಎಂದು ಗೇರಿ ಕೊರಗುತ್ತಾಳೆ. ಮನಸ್ಸಿಲ್ಲದೆ ತನ್ನನ್ನು ಕೊರಳಿಗೆ ಕಟ್ಟಿಕೊಂಡಿದ್ದಾನೆ ಬಲರಾಂ ಎಂದು ಶಚಿಯ ಸಂಕಟ. ಇಂತಹ ವ್ಯೂಹದಲ್ಲಿ ಕಥೆ ಸುತ್ತಿದೆ. ಎರಡನೆಯ ಭಾಗದಲ್ಲಿ ಈ ಕಥೆ ಪೂರ್ತಿಗೊಳ್ಳಬೇಕು.

ಘಟನಾ ಪ್ರಧಾನ ಕಥೆಯಾದುದರಿಂದ ಓದುಗನ ಕುತೂಹಲ ಕೆರಳುತ್ತದೆ. ಆದರೆ ಸೂಕ್ತ ವಾತಾವರಣ ನಿರ್ಮಾಣ ಮತ್ತು ಪಾತ್ರ ಪರಿಪೋಷಣೆಯಲ್ಲಿ ಓದುಗನಿಗೆ ತೃಪ್ತಿಯಾಗದು. ಸಿನೆಮಾ ಕಥೆಯೊಂದು ಕಾದಂಬರಿ ರೂಪದಲ್ಲಿ ಪ್ರಕಟವಾಗಿದೆ ಎಂದು ಭಾಸವಾದರೆ ತಪ್ಪಲ್ಲ. ಗೇರಿಯ ಪಾತ್ರವೊಂದು ಮಾತ್ರ ನಿಚ್ಚಳವಾಗಿ ಮೂಡಿದೆ. ಸುಶಿಕ್ಷಿತನೂ, ಸುಸಂಸ್ಕೃತನೂ, ಮ್ಯಾಜಿಸ್ಟ್ರೇಟನಾಗಿ ಲೋಕಾನುಭವಿಯಾದ ಬಲರಾಂನ ನಡತೆ ಕೆಲವು ಸಂದರ್ಭಗಳಲ್ಲಿ ಅರ್ಥವಾಗದು. ಡಾ|| ಸುದರ್ಶನಂ ಕೂಡ ಒಂದು ಯಂತ್ರವಿದ್ದಹಾಗೆ. ಮನೋವಿಶ್ಲೇಷಣೆ ಅಪಕ್ವ.

ಪರಭಾಷೆಯಿಂದ ಅನುವಾದಿಸಲ್ಪಡುವ ಕೃತಿಗಳು ಗುಣದಲ್ಲಿ, ರೂಪದಲ್ಲಿ ಮೇಲ್ಮಟ್ಟದಲ್ಲಿರುವದು ಅಪೇಕ್ಷಣೀಯ. ಅಲ್ಲದೆ ಅವು ಇಡಿಯಾಗಿ ಪ್ರಕಟವಾಗಬೇಕು. ಅನಿವಾರ್ಯ ಸಂದರ್ಭಗಳ ಮಾತು ಬೇರೆ.

**—ನೆಂ.**

**ದೂರ ಸರಿದರು:** (ಸಾಮಾಜಿಕ ಕಾದಂಬರಿ) ಲೇಖಕರು: ಎಸ್. ಎಲ್. ಭೈರಪ್ಪ, ಎಂ.ಎ., ಪ್ರಕಾಶಕರು: ಸಾಹಿತ್ಯ ಭಂಡಾರ, ಹುಬ್ಬಳ್ಳಿ; ಪುಟಗಳು: ೩೩೩; ಬೆಲೆ: ಸಾದಾಪ್ರತಿ ರೂ. ೪–೪೦ ನ.ಪೈ. ಕ್ಯಾಲಿಕೋ ಪ್ರತಿ ರೂ. ೫–೫೦ ನ.ಪೈ.

ಇತ್ತೀಚೆಗೆ ಪ್ರಕಟವಾಗಿ, ವಿಮರ್ಶಕರಿಂದ ಮೆಚ್ಚುಗೆ ಗಳಿಸಿದ, ಓದುಗರ ದೃಷ್ಟಿಯಿಂದ, ಎಷ್ಟೋ ಕಾದಂಬರಿಗಳಿಗಿಂತ ಸಾವಿರಪಾಲು ಮೇಲು ಎನ್ನಿಸಿಕೊಂಡ "ಧರ್ಮಶ್ರೀ" ಕಾದಂಬರಿಯನ್ನು ಬರೆದ ಭೈರಪ್ಪನವರ ಹೊಸಕೃತಿ 'ದೂರ ಸರಿದರು'.

ಕನ್ನಡದಲ್ಲಿ ಇಂದು ಸ್ವತಂತ್ರ ಸಾಮಾಜಿಕ ಕಾದಂಬರಿಗಳು ಎರಡು ಬಗೆಯಾಗಿವೆ. ಅತಿರೇಕದ ಕಾಲ್ಪನಿಕ— ಸಾಧ್ಯತೆ ಇರುವ ವಾಸ್ತವಿಕ ಕಾದಂಬರಿಗಳು; ಈ ವಾಸ್ತವಿಕ ಲಕ್ಷಣದ ಕಾದಂಬರಿಗಳ ರಚನೆಗೆ ಮೂಲ ಪ್ರೇರಣೆಗಳು ಇಬ್ಬಗೆಯಾಗಿವೆ. ಅವುಗಳಲ್ಲಿ ಒಂದು, ಕಂಡವರ ಕಂಡು ಕೇಳಿದ ಸಂಗತಿಗಳ 'ಪರಾನುಭವ'ಗಳ ಕಥನ ಚಿತ್ರಣ. ಇನ್ನೊಂದು, ವೈಯುಕ್ತಿಕ ಜೀವನದ ಪಾತ್ರವಿದ್ದು ತಾವೂ ಪಾತ್ರಧಾರಿಗಳೂ ಸೂತ್ರಧಾರಿಗಳೂ ಆದ–ಆಗಿದ್ದ 'ಸ್ವಾನುಭವ'ಗಳ ಕಥನ–ಚಿತ್ರಣ. ಶ್ರೀಯುತರ 'ದೂರ ಸರಿದರು' ಕಾದಂಬರಿಯು ಜಾಡು–ಧಾಟಿಗಳು 'ಸ್ವಾನುಭವ–ಪರಾನುಭವ'ಗಳ ಧಾರಾಳ ಬಳಕೆಯನ್ನು ಪುಟಪುಟದಲ್ಲೂ ಸಾರುತ್ತವೆ. ಈ ಹಿನ್ನೆಲೆಯ ಕಾರಣದಿಂದಲೇನೋ, ಕಾದಂಬರಿಯು ಉದ್ದಕ್ಕೂ ಕತೆಯ ಗತಿ ಸಿನಿಮಾದಂತೆ ನಡೆದ ಕತೆಯಹಾಗೆ ಓಡುತ್ತದೆ. ಈ ಕಾದಂಬರಿಯಲ್ಲಿ ಮೂರು ಪ್ರಧಾನಾಂಶಗಳು ಎತ್ತಿ ಕಾಣುತ್ತವೆ. ಒಂದು ವಿಶ್ವವಿದ್ಯಾನಿಲಯದ ಶಿಕ್ಷಣ–ವಾತಾವರಣಗಳು ವಿಚಾರವಂತ–ಮೇಧಾವಂತ ವಿದ್ಯಾರ್ಥಿನಿಯರನ್ನು ಹೇಗೆ ರೂಪಿಸುತ್ತವೆ, ಬೌದ್ಧಿಕ ಬಲೆಗೂ ವಾಸ್ತವಿಕ ನೆಲೆಗೂ ಹೇಗೆ ವ್ಯಕ್ತಿಯನ್ನು ಸಿಲುಕಿಸುತ್ತಿದೆ ಎಂಬುದು, ಇನ್ನೊಂದು. ನಮ್ಮಲ್ಲಿ ಇಂದು ವ್ಯಕ್ತಿಗಳ ಜೀವನದಲ್ಲಿ ಗೃಹ ವ್ಯಕ್ತಿಗಳು–ಸಾಮಾ

ಜಿಕ ಶಕ್ತಿಗಳು ಹೇಗೆ ತೊಳಲಾಟಕ್ಕೆ ಸಿಲುಕಿಸುತ್ತಿವೆ ಎಂಬುದು. ಇವುಗಳೆಲ್ಲಕ್ಕೂ ಮಿಗಿಲಾಗಿ ವೈಚಾರಿಕತೆ ಹಾಗೂ ಸಹಜಮಾನವ ಜೀವನ ಇವೆರಡರ ನಡುವೆ ತಮ್ಮ ಸುತ್ತ ತಾವೇ ಹೇಗೆ ಇಂದಿನ ಯುವಜನ ತಮ್ಮ ಬಾಳಿನ (ವಿಷಮ) ಬಲೆಯನ್ನು ಹೆಣೆದುಕೊಳ್ಳುತ್ತಿದ್ದಾರೆ ಎಂಬುದು. ಈ ಎರಡು ಸರಣಿಗಳ ಮೂಲಕ—ಸ್ವಾನುಭವ-ಪರಾನುಭವಗಳ ಕಥನ-ವೈಚಾರಿಕತೆ, ಭಾವುಕತೆಗಳ ಮಥನ—ಲೇಖಕರ ಕಾದಂಬರಿ ಬೆಳೆದಿದೆ.

ಸಾಹಿತ್ಯಾಭ್ಯಾಸಿ-ತತ್ತ್ವಶಾಸ್ತ್ರಪ್ರಿಯನಾದ ಆನಂದ, ಬಾಳಿನತುಂಬ ನೋವನ್ನೇ ಉಂಡು ಅಂತರ್ಮುಖಿಯಾಗಿ ಸಮಾಧಾನ ತಂದುಕೊಳ್ಳಲೆತ್ನಿಸುವ ವಿನುತೆ ಇಬ್ಬರು ಕಾಲೇಜಿನಲ್ಲಿ ವಿದ್ಯಾರ್ಥಿಗಳು ಪ್ರೊಫೆಸರರೊಬ್ಬರ ಸತ್ಕಾರದ ಸಂದರ್ಭದಲ್ಲಿನ ಘಟನೆಯಿಂದ ಇಬ್ಬರ ಪರಿಚಯ ಮೊಳಕೆಯೊಡೆದು ಒಬ್ಬರಿಗೊಬ್ಬರು ಅವರಿಗೆ ಅರಿವಿಲ್ಲದೆಯೇ ಆಕರ್ಷಿತರಾಗಿರುತ್ತಾರೆ. ಕಾಲಕ್ರಮೇಣ ಇಬ್ಬರ ಸ್ನೇಹ-ಮದುವೆಯ ಪ್ರಸ್ತಾಪ ಬಂದಾಗ—ವಿನುತೆಯ ತಾಯಿ, ಭಾರಿ ಸಂಬಳ-ತುಂಬಾ ಓದಿದ-ದೊಡ್ಡ ಉದ್ಯೋಗದಲ್ಲಿರುವ ತಮ್ಮ ಜಾತಿಯ-ಒಳಜಾತಿಯ ಗಂಡಿಗೇ ವಿನುತೆಯ ಮದುವೆ ಆಗಬೇಕೆಂದು ನಿರ್ಧರಿಸಿದಾಗ-ಆ ದೃಷ್ಟಿಯಲ್ಲಿ ಅದರಲ್ಲೂ ಜಾತಿಯ ಪ್ರಶ್ನೆಯಲ್ಲಿ ಆನಂದ ವಿನುತೆಯ ಪಾಲಿಗೆ ದೊರಕಲು ಸಾಧ್ಯವಿತ್ತಿಲ್ಲ. ಬೇರೆ ರೀತಿ-ರಿಜಿಸ್ಟರ್ ಮ್ಯಾರೇಜ್-ಇತ್ಯಾದಿ ವಿಧಾನಗಳಿಗೆ ವಿನುತೆ ಒಪ್ಪಲಿಲ್ಲ. ಅವಳು ತನ್ನ ತಾಯಿಯನ್ನು ಬಿಟ್ಟುಕೊಡಲಾರದೆ, ತನ್ನ ತಮ್ಮಂದಿರನ್ನು ಕಡೆಗಣಿಸಲಾರದೆ, ಆದರೆ ಆನಂದನನ್ನು ಬಿಟ್ಟು ಬಾಳಲು ಸಾಧ್ಯವಿಲ್ಲದೆ ತ್ರಿಶಂಕುಸ್ವರ್ಗದಲ್ಲಿ ಸಿಲುಕುತ್ತಾಳೆ. 'ಕೆಲವಾರು ವರ್ಷ ಕಾಯೋಣ' ಎನ್ನುತ್ತಾಳೆ. ಆದರೆ ಅವಳ ಪರಿಹಾರ ಸೂತ್ರ ಆನಂದನನ್ನು ದುಡುಕಿಸಿ, ಉದಾಸೀನ-ದ್ವೇಷ ಬರಿಸಿ, ಬಾಳಿನ ಧ್ಯೇಯ ಆಶೆ ಆಕಾಂಕ್ಷೆಗಳಿಗೆ ತಿಲಾಂಜಲಿಯೀಯುವಂತೆ—ಬೇರೊಬ್ಬ ಹೆಣ್ಣನ್ನು ಮದುವೆ ಆಗುವಂತೆ ಆಗುತ್ತದೆ. ಮದುವೆ ಆದಮೇಲೆ-ಮಗು ಆದಮೇಲೆ-ಒಮ್ಮೆ ವಿನುತೆಯನ್ನು ಕಾಣಲು ಬರುತ್ತಾನೆ ಕಾಣುತ್ತಾನೆ ಹೋಗುತ್ತಾನೆ ಅಷ್ಟೆ. ಆದರೆ ವಿನುತೆ ಹೊರಗಡೆಗೆ ಎಲ್ಲರಂತೆ ಇದ್ದಂತೆ ಕಾಣಿಸಿದರೂ ಒಳಗಡೆ ಅಂತರಂಗದಲ್ಲಿ ದಿನವೂ ದುಃಖದ ಕಣ್ಣೀರಿನಲ್ಲಿ ಕೈತೊಳೆಯುತ್ತಿರುತ್ತಾಳೆ. ಆನಂದ ಬಂದು ಹೋದಮೇಲೆ-ಪುನರ್ವಿವಾಹದ ಪ್ರಶ್ನೆ ಇಲ್ಲದಾದಾಗ-ನೈರಾಶ್ಯದ ಶೂನ್ಯತೆಯಲ್ಲಿ ಮಂಕುಬಡಿದು ದೀನೆಯಾಗಿ-ಟೈಫಾಯ್ಡ್‌ನಿಂದ ಹಾಸಿಗೆ ಹಿಡಿದವಳು ಮೇಲೇಳಲಿಲ್ಲ. ಈ ಕಥೆಯ ಪ್ರವಾಹದೊಂದಿಗೆ ಇನ್ನೂ ಅನೇಕ ಪಾತ್ರಗಳು ಅವುಗಳ ಕತೆಯೂ ಪ್ರಮುಖವಾಗಿಯೇ ಬಂದಿದೆ. ವಿನುತೆಯ ಅಕ್ಕ ವಿಜಯ ಮತ್ತು ಭಾವ ವಾಸನ್, ಆನಂದನ ಮಿತ್ರ ವಸಂತ್ ಅವನ ಪಾಲಿಗೆ ಸಿಕ್ಕಿಯೂ ಸಿಕ್ಕದವಳಾದ ಉಷೆ, ವಸಂತನಿಂದ ತಿರಸ್ಕೃತಳಾಗಿ ಡಾ|| ನರೋತ್ತಮ (!) ರಂಥವರಿಂದ ವಂಚಿತಳಾಗಿ ನಷ್ಟದೃಷ್ಟಿಯಾದ ರಮೆ, ಬಾಳಿನಲ್ಲಿ ವಿಧಿಯ ಕ್ರೂರದವಡೆಗೆ ಸಿಲುಕಿದ ಪರಿಣಾಮವೋ ಏನೋ ಉಳಿದವರ ಪಾಲಿಗೆ ಸಹಾನುಭೂತಿಯ ಮೂರ್ತಿಯಾದ ಮೇಡಂ ವರದಮ್ಮ, ವಿನುತೆ-ಆನಂದರ ನಡುವೆ ಆಶಾನಿರಾಶೆ ಕಣ್ಣುಮುಚ್ಚಾಲೆಗೆ ಸಿಲುಕಿದ ಜಗದಾಂಬಾ ಇವರೆಲ್ಲರ ಕತೆಯೂ, ವಿಚಾರ ಸರಣಿಯೂ ಬಾಳಿನ ನಾನಾ ಮುಖಗಳನ್ನು ಒಂದಲ್ಲ ಒಂದು ರೀತಿ ಪ್ರತಿನಿಧಿಸುತ್ತದೆ ಎನ್ನಬಹುದು.

ಬಾಳಿನಲ್ಲಿ-ಲಕ್ಷಣದಿಂದ-ಸಾಧಿಸಿದ್ದೇನು ಎಂಬ ಪ್ರಶ್ನೆ ಬಂದಾಗ ಉತ್ತರ 'ನ'ಕಾರವೇ. ಏನೋ ಆಗಬೇಕೆಂದು ಹೊರಟರು, ಏನೋ ಆದರು, ಕಾರಣ ಯಾರಿಗೆ ಗೊತ್ತು?

ಲೇಖಕರು ವೈಚಾರಿಕತೆಯ ಬಲದಿಂದ-ಪಾತ್ರಗಳ ಆತ್ಮೀಯ ಪರಿಚಯದಿಂದ ಮನೋವಿಶ್ಲೇಷಣೆಯಿಂದ ಸಮಸ್ಯೆಗೆ ಪರಿಹಾರ ಹುಡುಕಲೆತ್ನಿಸಿದ್ದಾರೆ. ಫಲಕ್ಕಿಂತ ಸಾಹಸ ಮೆಚ್ಚುವಂತದ್ದು. ಕಾದಂಬರಿಯ ಮುಕ್ತಾಯದವರೆಗೆ ತಾನೇತಾನಾಗಿ ಕತೆ ಓಡಿರುವುದೂ ಆಮೇಲೆ ಲೇಖಕರು ಎಲ್ಲರ ಕತೆಗೂ ತಾವೇ ಮುಕ್ತಾಯಗಳನ್ನು ಹಾಕಿದಂತೆಯೂ ಕಾಣುತ್ತದೆ. ಇದರ ಪರಿಣಾಮವೋ ಏನೋ, ವಿನುತೆಯ ಅಂತ್ಯ ಅನ್ಯಾಯ ಎನಿಸುತ್ತದೆ. ಉಳಿದವರ ಬಗ್ಗೆ ಈ ರೀತಿ ಅಂತ್ಯವಂತೂ ಸರಿಯಲ್ಲ ಎನಿಸುತ್ತದೆ. ಇವೆಲ್ಲ ಏನೇ ಇರಲಿ, ಶ್ರೀ ಎಸ್. ಎಲ್. ಭೈರಪ್ಪನವರು, ಬರೆಯುವ ಕಾದಂಬರಿಗಳಲ್ಲಿ ಸಾಕಷ್ಟು ಕತೆ ಇರುತ್ತದೆ, ವಿಚಾರ ಇರುತ್ತದೆ. ಓದಲರ್ಹವಾದ ಕಾದಂಬರಿ ಆಗಿರುತ್ತದೆ ಎಂಬುದು ನಿಜ. ಅವರ ಕಾದಂಬರಿಯು ಓದುಗರ-ವಿಮರ್ಶಕರ ಕಣ್‌ಮನಗಳನ್ನು-ಒಂದಲ್ಲ ಒಂದು ವಿಚಾರಕ್ಕೆ-ಸೆಳೆಯುತ್ತದೆ. ಅನೇಕ ವಿಚಾರಗಳಲ್ಲಿ ಟೊಳ್ಳೆನಿಸಿಕೊಳ್ಳುವ ಕಾದಂಬರಿಗಳೇ ಹೆಚ್ಚಾಗಿ ಬರುತ್ತಿರುವ ಈ ಕಾಲದಲ್ಲಿ ಹಲವಾರು ವಿಚಾರಗಳಲ್ಲಾದರೂ 'ಗಟ್ಟಿ' ಎನ್ನಿಸಿಕೊಳ್ಳುವಂಥ ಕಾದಂಬರಿಗಳ ಸಾಲಿಗೆ ಶ್ರೀಯುತರ ಕಾದಂಬರಿ-ದೂರ ಸರಿದರು-ಸೇರುತ್ತದೆ.

ಕೀರ್ತಿನಾಥ ಕುರ್ತಕೋಟಿಯವರ ಮುನ್ನುಡಿ ಹೊತ್ತು ಬಂದ ಈ ಕಾದಂಬರಿ-ಅಲ್ಲಲ್ಲೇ, ರಸಸ್ಪರ್ಶಿ-ಮರ್ಮಸ್ಪರ್ಶಿ ಘಟನೆ ಸನ್ನಿವೇಶಗಳಿಂದ, ಕತೆ, ವೈಚಾರಿಕತೆಗಳಿಂದ ಕೂಡಿರುವ 'ದೂರ ಸರಿದರು' ಕೃತಿ ವಿಚಾರವಂತ ಓದುಗರೆಲ್ಲರೂ ಓದಲೇಬೇಕಾದ ಕೃತಿ.

—ಜಿ. ಅಶ್ವತ್ಥನಾರಾಯಣ

**ರಾಮೇಶ್ವರ ಕನ್ಯಾಕುಮಾರಿ ದರ್ಶನ** (ದಕ್ಷಿಣ ಭಾರತದಲ್ಲಿಯ ಪ್ರಸಿದ್ಧ ಯಾತ್ರಾಸ್ಥಳಗಳು): ಲೇಖಕರು : ಶ್ರೀ ಹ. ರ. ಪುರೋಹಿತ, ಎಂ.ಎ.; ಸೈಜು ಕ್ರೌನ್ ೧/೮; ಪುಟ ೯೬; ಬೆಲೆ ರೂ. ೧-೨೫ ನ.ಪೈ.

ನಮ್ಮ ಭರತಖಂಡವು ಪುಣ್ಯಭೂಮಿ. ದೇವತೆಗಳೆಲ್ಲರೂ ಇಲ್ಲಿಯೇ ಕರ್ಮಾನುಷ್ಠಾನವನ್ನು ಮಾಡಿ ಪುಣ್ಯಗಳಿಸಿ ಸ್ವರ್ಗಸುಖವನ್ನು ಅನುಭವಿಸುತ್ತಿದ್ದಾರೆಂದು ನಮ್ಮ ಶಾಸ್ತ್ರಗಳು ಹೇಳುತ್ತವೆ. ಅನೇಕ ಮಹರ್ಷಿಗಳು ತಪಸ್ಸನ್ನಾಚರಿಸಿ ಈ ಭೂಮಿಯನ್ನು ಪಾವನಗೊಳಿಸಿದ್ದಾರೆ. ಸಕಲ ಚೇತನಗಳ ಉದ್ದಿಶ್ಯ ಆಮುಷ್ಮಿಕ ಸಾಧನೆ. ಈ ಸಾಧನೆಯ ಸಿದ್ಧಿಗೆ ಶಾಸ್ತ್ರಗಳು ಅನೇಕ ಮಾರ್ಗಗಳನ್ನು ತೋರಿಸಿವೆ. ಅವುಗಳಲ್ಲೆಲ್ಲಾ ಕರ್ಮಯೋಗವೆಂಬುದೇ ಸುಗಮ. ಕರ್ಮಯೋಗವು ಹದಿನೆಂಟು ಭಾಗವುಳ್ಳದ್ದು. "ಕರ್ಮಯೋಗತಪಸ್ತೀರ್ಥ ಜ್ಞಾನ ಯಜ್ಞಾದಿಸೇವನಂ" ಎಂಬುದಾಗಿ ಗೀತೆಯು ಸಾರುತ್ತಿದೆ. ಈ ಯೋಗದಲ್ಲಿ ತೀರ್ಥಯಾತ್ರೆಯು ಅತ್ಯಂತ ಸುಲಭವೂ ಸುಖಪ್ರದವೂ ಆಗಿದೆ. ಪುರಾಣಗಳಲ್ಲಿ ಸಾವಿರಾರು ತೀರ್ಥಗಳ ಮತ್ತು ಕ್ಷೇತ್ರಗಳ ಪ್ರಶಂಸೆ ಬಹಳವಾಗಿವೆ. ಪ್ರತಿಯೊಬ್ಬನೂ ತನ್ನ ಜೀವಿತ ಕಾಲದಲ್ಲಿ ಕ್ಷೇತ್ರಾಟನ ಮಾಡಬೇಕೆಂಬ ವಿಧಿಯೂ ಇದೆ. ಕೂಪಕೂರ್ಮದಂತೆ ಒಂದೇ ಕಡೆ ಇರುವವನಿಗೆ ಯಾತ್ರೆಯು ಯಾತನೆಯಾಗುವುದು. ಅವರ ಸೌಕರ್ಯಕ್ಕಾಗಿ ಶ್ರೀಮಾನ್ ಪುರೋಹಿತರು ಜನತೆಯ ಉಪಯೋಗಕ್ಕಾಗಿ ದಕ್ಷಿಣದ ತಮ್ಮ ಯಾತ್ರೆಯ ಅನುಭವವನ್ನೂ, ಆ ಪ್ರಸಿದ್ಧ ಕ್ಷೇತ್ರಗಳ ಇತಿಹಾಸವನ್ನೂ, ಪ್ರತಿ ಸಾತ್ವಿಕನೂ ಆಯಾ ಸ್ಥಳಗಳಲ್ಲಿ ಮಾಡಬೇಕಾದ ಕರ್ತವ್ಯಗಳನ್ನೂ, ದರ್ಶನೀಯ ಸ್ಥಳಗಳನ್ನೂ, ಪ್ರಸಿದ್ಧ ತೀರ್ಥಗಳನ್ನೂ ಬಹಳ ಹೃದಯಂಗಮವಾಗಿ ವಿವರಿಸಿ ಉಪಕರಿಸಿದ್ದಾರೆ. ಸಾಧ್ಯವಿದ್ದಷ್ಟು ಆಯಾ ಸ್ಥಳಗಳ ಚಿತ್ರವನ್ನೂ ಈ ಸಣ್ಣ ಹೊತ್ತಿಗೆಯಲ್ಲಿ ಸೇರಿಸಿದ್ದಾರೆ. ಈ ಗ್ರಂಥವನ್ನು ಓದಿದಕೂಡಲೆ ಆಯಾ ಸ್ಥಳಗಳ ಚಿತ್ರಗಳು ಮನಸ್ಸಿಗೆ ತಟ್ಟಿ ಅವುಗಳನ್ನು ನೋಡಬೇಕೆಂಬ ಕುತೂಹಲವುಂಟಾಗುತ್ತದೆ. ಇವರ ಬದರೀಕೇದಾರನಾಥ ದರ್ಶನ ಮತ್ತು ಈ ಗ್ರಂಥಗಳೆರಡೂ ಯಾತ್ರಿಕರು ಸಂಗ್ರಹಿಸಿಡಬೇಕಾದ ಪುಸ್ತಕಗಳು. ವಿಷಯಗಳು ಸಪ್ರಮಾಣವಾದ ಮತ್ತು ಗಂಭೀರವಾದ ಶೈಲಿಯಿಂದ ವರ್ಣಿತವಾಗಿವೆ. ಪೂಜ್ಯ ದಿವಾಕರ ರಂಗರಾಯರು ಮುನ್ನುಡಿ ಬರೆದು ಹರಸಿರುವುದರಿಂದ ಈ ಗ್ರಂಥಕ್ಕೆ ಇನ್ನೂ ಹೆಚ್ಚಿನ ಪ್ರಾಶಸ್ತ್ಯ ದೊರೆತಿದೆ. ಗ್ರಂಥಕರ್ತರ ಶ್ರಮ ಸಾರ್ಥಕವಾಗಿದೆ.

—ಸುದರ್ಶನ

**ಸಪ್ತಸ್ವರ–ಸಪ್ತವರ್ಣ** (ಸಹಜ ಸಾಮಾಜಿಕ ನಾಟಕ): ಲೇಖಕರು: ಶ್ರೀಮಣಿ; ಪ್ರಕಾಶಕರು: ವಿಜಯ ಪ್ರಕಾಶನ, ನಂ. ೫೨, ಮನವಾರ್ತೆಪೇಟೆ, ಬೆಂಗಳೂರು-೨; ಆಕಾರ ಕ್ರೌನ್ ೧/೮; ಪುಟಗಳು ೬೪; ಬೆಲೆ ಒಂದು ರೂಪಾಯಿ.

'ಪ್ರತಿದಿನವೂ, ಪ್ರತಿಕ್ಷಣದಲ್ಲೂ ನಡೆಯುತ್ತಿರುವ ಅನೇಕಾನೇಕ ಜಗನ್ನಾಟಕಗಳಲ್ಲಿ ಒಂದು ಭಾಗ ಈ ನಾಟಕ' ಎಂದು ಲೇಖಕರೇ ತಿಳಿಸಿದ್ದಾರೆ. ಕಿರುಗತೆಯ ರೂಪದಲ್ಲಿದ್ದ ಇದು ಈಗ ನಾಟಕರೂಪವನ್ನು ತಳೆದಿದೆ. ಇದರಲ್ಲಿ ಏಳು ಪಾತ್ರಗಳಿವೆ. ಶ್ರೀಮಂತನೂ ಮುಂಗೋಪಿಯೂ ಆದ ಶ್ಯಾಮರಾಯರಿಗೆ ಸಂಗೀತ ಕಲೋಪಾಸಕಳಾದ ಶಾರದ ಎಂಬ ಏಕಮಾತ್ರ ಪುತ್ರಿ ಇರುತ್ತಾಳೆ. ಇವಳು ಚಿತ್ರಕಲಾವಿದನಾದ ಮೂರ್ತಿ ಎಂಬಾತನನ್ನು ಪ್ರೇಮಿಸಿ, ಮದುವೆಯಾಗಲು ಇಚ್ಛಿಸುತ್ತಾಳೆ. ಆದರೆ ತಂದೆಗೆ ಇದು ಇಷ್ಟವಿಲ್ಲದೆ ಶ್ರೀಮಂತನಾದ ಡಾ|| ರಾಜುವನ್ನು ಮದುವೆಯಾಗೆಂದು ಮಗಳನ್ನು ಬಲಾತ್ಕರಿಸುತ್ತಾನೆ. ಶಾರದಳಿಗೆ ಡಾಕ್ಟರಲ್ಲಿ ಪ್ರೇಮವಿರುವುದಿಲ್ಲ. ತಾಯಿ ಸೀತಮ್ಮನಿಗೆ ಮಗಳ ಮೇಲೆ ಮಮತೆ. ಗಂಡನ ವಿರುದ್ಧ ಮಾತನಾಡಲು ಧೈರ್ಯ ಸಾಲದು. ಆದರೂ ಮೂರ್ತಿಯ ಪರವಾಗಿಯೇ ಮಾತನಾಡುತ್ತಾಳೆ. ಈ ಮಧ್ಯೆ ಮೂರ್ತಿ ಒಂದು ಕಾರಿನ ಅಪಘಾತಕ್ಕೆ ಸಿಕ್ಕಿ ಡಾ|| ರಾಜುವಿನ ಆಸ್ಪತ್ರೆಗೆ ಬರಬೇಕಾಗುತ್ತದೆ. ಮೂರ್ತಿಯ ಗೆಳೆಯ ಮೋಹನ ಮೂರ್ತಿಯನ್ನು ಬದುಕಿಸಿಕೊಡಬೇಕೆಂದು ಡಾಕ್ಟರಲ್ಲಿ ಪ್ರಾರ್ಥಿಸುತ್ತಾನೆ. ರಾಜುವಿನ ಮನಸ್ಸು ಹೊಯ್ದಾಡಲಾರಂಭಿಸುತ್ತದೆ. 'ಮೂರ್ತಿಯನ್ನು ಉಳಿಸಿದರೆ ಶಾರದೆ ನನಗೆ ಸಿಕ್ಕುವುದಿಲ್ಲ. ಮೂರ್ತಿ ಇಲ್ಲವಾದರೆ ಶಾರದೆ ವಿಧಿಯಿಲ್ಲದೆ ತನ್ನನ್ನೇ ಮದುವೆಯಾಗುವಳು' ಎಂದು ಆಲೋಚಿಸಿ, ಮೂರ್ತಿಯ ವಿಚಾರದಲ್ಲಿ ಉದಾಸೀನನಾಗಿದ್ದುಬಿಡುತ್ತಾನೆ. ಇದರ ಪರಿಣಾಮವಾಗಿ ಮೂರ್ತಿ ಸಾವನ್ನಪ್ಪುತ್ತಾನೆ. ಇದನ್ನು ತಿಳಿದ ಶಾರದೆ ಅಲ್ಲಿಗೆ ಬಂದು, ಮೂರ್ತಿಯ ಪಕ್ಕದಲ್ಲಿಯೇ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಈ ಕಥಾವಸ್ತುವನ್ನುಳ್ಳ ಈ ನಾಟಕ, ಇಂದಿನ ಸಮಾಜಕ್ಕೆ ಅನುಗುಣವಾಗಿದೆ. ಅಭಿನಯಿಸುವುದಕ್ಕೂ ಕನ್ನಡಿಗರ ಪ್ರೋತ್ಸಾಹಕ್ಕೂ ಅರ್ಹವಾಗಿದೆ.

—ಬ. ನ. ಸುಂ.

# ಪರಿಷತ್ತಿನ ಸುದ್ದಿಗಳು

## ಗಮಕ ಪರೀಕ್ಷೆಗಳ ಫಲಿತಾಂಶ

**೧೯೬೩ನೇ ಜನವರಿ ಮತ್ತು ಫೆಬ್ರವರಿ ತಿಂಗಳಲ್ಲಿ ನಡೆದ ಗಮಕ ಪ್ರವೇಶ ಪರೀಕ್ಷೆಗಳ ಫಲಿತಾಂಶ.**

### ಮೊದಲನೆಯ ತರಗತಿ

೭, ೮, ೨೧, (೨೨,—೩೧) ೨೬; (೪೧,—೫೧) ೫೬, ೫೯, ೬೧.

### ಎರಡನೆಯ ತರಗತಿ

೧, ೧೦, ೧೧, ೧೩, ೧೫, ೧೮, ೨೦, ೨೩, ೨೪, ೨೭, ೨೮, ೩೦, ೩೨, ೩೪, ೩೫, ೩೮, ೩೯, ೪೦, ೪೨, ೫೪, ೬೦, ೬೪, ೭೩, ೭೪, ೭೬, ೭೭, ೭೯, ೮೦, ೮೧, ೮೩, ೮೫, ೮೮.

### ಮೂರನೆಯ ತರಗತಿ

೯, ೧೪, ೧೬, ೧೭, ೧೯, ೨೫, ೩೭, ೪೩, ೪೫, ೪೭, ೫೦, ೫೨, ೫೩, ೫೫, ೫೭, ೬೨, ೬೫, ೭೫, ೮೨, ೮೪, ೮೬, ೮೭, ೮೯.

**ತಡೆದು ಹಿಡಿದಿದ್ದ ಹಾಸನ ಕೇಂದ್ರದ ಪರೀಕ್ಷಾ ಫಲಿತಾಂಶ.**

### ಮೊದಲನೆಯ ತರಗತಿ

೬೭, ೬೮.

### ಎರಡನೆಯ ತರಗತಿ

೬೬, ೬೯, ೭೧.

### ಮೂರನೆಯ ತರಗತಿ

೭೧, ೭೨.

೧೯೬೩ನೇ ಸಾಲಿನ ಗಮಕ ಪರೀಕ್ಷೆಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ ಕೇಂದ್ರದ ಶ್ರೀ ಎ. ಸತ್ಯೇಶಾಚಾರ್ಯ ಎಂಬ ವಿದ್ಯಾರ್ಥಿಯು (ಕ್ರಮಾಂಕ ೭) ಮೊದಲನೆಯ ತರಗತಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಲ್ಲಿ ಪ್ರಥಮ ಸ್ಥಾನವನ್ನು ಪಡೆದಿರುತ್ತಾರೆ.

## ಸಾಹಿತ್ಯ ಪರೀಕ್ಷೆಗಳ ಫಲಿತಾಂಶ

**೧೯೬೩ನೆಯ ಫೆಬ್ರವರಿ ೧೬ ಮತ್ತು ೧೭ನೇ ತಾರೀಖುಗಳಲ್ಲಿ ಕರ್ನಾಟಕದ ನಾನಾ ಕೇಂದ್ರಗಳಲ್ಲಿ ನಡೆದ ಸಾಹಿತ್ಯ ಪರೀಕ್ಷೆಗಳ ಫಲಿತಾಂಶ.**

### ಕಾವ ಪರೀಕ್ಷೆ

#### ಮೊದಲನೆಯ ತರಗತಿ

ಯಾರೂ ಇಲ್ಲ.

#### ಎರಡನೆಯ ತರಗತಿ

೩, ೧೨, ೧೪.

#### ಮೂರನೆಯ ತರಗತಿ

೧೧, ೨೩, ೨೮, ೩೦, ೬೩, ೩೯, ೪೨, ೫೪, ೫೬.

### ಜಾಣ ಪರೀಕ್ಷೆ

#### ಮೊದಲನೆಯ ತರಗತಿ

ಯಾರೂ ಇಲ್ಲ.

#### ಎರಡನೆಯ ತರಗತಿ

೮೧, ೧೭೫.

#### ಮೂರನೆಯ ತರಗತಿ

೬೨, ೬೩, ೬೫, ೬೬, ೬೭, ೬೮, ೬೯, ೭೦, ೭೨, ೭೪, ೭೫, ೭೬, ೭೭, ೭೯, ೮೦, ೮೨, ೮೩, ೮೪, ೮೫, ೮೬, ೮೮, ೮೯, ೯೦, ೯೨, ೯೪, ೯೫, ೯೮, ೯೯, ೧೧೩, ೧೪೪, ೧೬೦, ೧೭೧, ೧೭೨, ೧೭೪, ೧೭೬, ೧೭೭, ೧೭೯, ೧೮೦, ೧೮೧, ೧೮೩, ೧೮೪, ೧೮೫, ೧೮೬, ೧೮೭, ೧೮೮, ೧೮೯, ೧೯೧, ೧೯೨, ೧೯೬, ೧೯೭, ೧೯೮, ೧೯೯, ೨೦೦, ೨೦೧, ೨೦೨, ೨೦೪, ೨೦೫, ೨೦೬, ೨೦೭, ೨೦೮, ೨೧೦, ೨೧೧, ೨೧೨, ೨೧೩, ೨೧೪, ೨೧೫, ೨೧೬, ೨೧೭, ೨೧೮, ೨೧೯, ೨೨೫, ೨೨೬, ೨೬೦, ೨೬೫, ೨೭೦, ೨೭೧, ೨೭೨, ೨೭೬, ೨೭೮, ೨೮೬, ೨೮೭, ೨೯೪, ೩೦೪.

ಅನ್ನದಾನಯ್ಯ ಪುರಾಣಿಕ
ಕೆ. ಎಂ. ಕೃಷ್ಣರಾವ್
ಗೌ॥ ಕಾರ್ಯದರ್ಶಿಗಳು

## ಕನ್ನಡ ಸಾಹಿತ್ಯ ಪರೀಕ್ಷೆಗಳು ೧೯೬೪

### ತಿಳುವಳಿಕೆ

೧೯೬೪ನೇ ಸಾಲಿನಿಂದ ಸಾಹಿತ್ಯ ಪರೀಕ್ಷೆಗಳನ್ನು ನಡೆಸುವ ಎಲ್ಲಾ ಕೇಂದ್ರಗಳಿಗೂ ಆಯಾ ಸ್ಥಳೀಯರಲ್ಲದ ಪರಿಷತ್ತಿನ ಪ್ರತಿನಿಧಿಗಳನ್ನು ಪರೀಕ್ಷೆಗಳ ಮೇಲ್ವಿಚಾರಕರಾಗಿ ಕಳುಹಿಸಬೇಕೆಂದು ತೀರ್ಮಾನಿಸಲಾಗಿದೆ. ಎಲ್ಲಾ ಕೇಂದ್ರದ ವ್ಯವಸ್ಥಾಪಕರು ಈ ವಿಷಯವನ್ನು ದಯವಿಟ್ಟು ಗಮನಿಸಬೇಕಾಗಿ ಕೋರಿದೆ.

## ಪರಿಷತ್ತಿನ ಕಾರ್ಯಕಾರಿ ಸಮಿತಿ ಸಭೆ

ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರೀ ಸಮಿತಿಯು ಇದೇ ಏಪ್ರಿಲ್ ತಿಂಗಳು ೨೧ ನೆಯ ತಾರೀಖು ಗೋಕರ್ಣದಲ್ಲಿ ಸೇರುತ್ತದೆ. ಈ ಸಂದರ್ಭದಲ್ಲಿ ಕಾರ್ಯಸಮಿತಿಯ ಸದಸ್ಯರು ಯಲ್ಲಾಪುರ, ಮಂಚಿಕೇರಿ, ಸಿರಸಿ, ಕುಮಟ, ಗೋಕರ್ಣ, ಅಂಕೋಲ, ಕಾರವಾರ, ಗೋವ ಮುಂತಾದ ಸ್ಥಳಗಳಲ್ಲಿ ಅಲ್ಲಿನ ಮಹಾಜನರು ಏರ್ಪಡಿಸುವ ಸಾರ್ವಜನಿಕ ಸಭೆಗಳಲ್ಲಿ ಕನ್ನಡ ಸಾಹಿತ್ಯದ ವಿವಿಧ ಮುಖಗಳನ್ನು ಕುರಿತು ಉಪನ್ಯಾಸ ಮಾಡುತ್ತಾರೆ.

## ವಸಂತ ಸಾಹಿತ್ಯೋತ್ಸವ

ವಸಂತ ಸಾಹಿತ್ಯೋತ್ಸವವು ಇದೇ ಏಪ್ರಿಲ್ ೧೩, ೧೪, ೧೫ ನೇ ತಾರೀಖುಗಳಲ್ಲಿ ನಡೆಯುವಂತೆ ಏರ್ಪಡಿಸಲಾಗಿದೆ. ಪರಿಷತ್ತಿನ ಮಾನ್ಯ ಸದಸ್ಯರೂ ಮತ್ತು ನಾಡು ನುಡಿಗಳ ಅಭಿಮಾನಿಗಳೆಲ್ಲರೂ ಸಮಾರಂಭಗಳಿಗೆ ದಯಮಾಡಿಸಿ ಪರಿಷತ್ತಿನೊಡನೆ ಸಹಕರಿಸಬೇಕಾಗಿ ಕಾರ್ಯದರ್ಶಿಗಳು ಕೋರುತ್ತಾರೆ.

## ಯುಗಾದಿ ಉತ್ಸವ

ಮಾರ್ಚಿ ದಿನಾಂಕ ೨೬ ರಂದು ಸಂಜೆ ಶ್ರೀ ಶೋಭಕೃತು ಸಂವತ್ಸರದ ಯುಗಾದಿ ಉತ್ಸವವನ್ನು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಪದ್ಧತಿಯಂತೆ ಆಚರಿಸಲಾಯಿತು. ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಅಧ್ಯಕ್ಷತೆ ವಹಿಸಿದ್ದರು. ಪಾನಕ ವಿನಿಯೋಗ, ಪಂಚಾಂಗ ಶ್ರವಣ, ವರ್ಷಫಲಕಥನ, ದೇವರನಾಮುಗಳು ಇತ್ಯಾದಿ ಕಾರ್ಯಕ್ರಮುಗಳೇರ್ಪಟ್ಟಿದ್ದವು.

---

## ಕನ್ನಡ ಸಾಹಿತ್ಯ ಪರಿಷತ್ತಿನ ಅಭಿಮಾನಿಗಳು



ಬೆಂಗಳೂರು ಕಾರ್‌ಪೊರೇಷನ್ನಿನ ಮೇಯರ್
ಶ್ರೀ ಕೆ. ಎಂ. ನಂಜಪ್ಪನವರು



ಡೆಪ್ಯುಟಿ ಮೇಯರ್
ಶ್ರೀಮತಿ ಪಿ. ಆರ್. ಜಯಲಕ್ಷಮ್ಮನವರು

# ಉತ್ತಮ ಗ್ರಂಥಗಳಿಗೆ ಸರ್ಕಾರದ ಬಹುಮಾನ

ರಾಜ್ಯ ಸರ್ಕಾರವು ೧೯೬೨ ರಲ್ಲಿ ರಚಿತವಾದ ಉತ್ತಮ ಗ್ರಂಥಗಳೆಂದು ಪರಿಗಣಿಸಿ ಈ ಕೆಳಗಿನ ಗ್ರಂಥಗಳಿಗೆ ತಲಾ ೫೦೦ ರೂಪಾಯಿ ಬಹುಮಾನವನ್ನಿತ್ತಿದೆ.

**ಕವನ :** ಪ್ರಥಮ ಬಹುಮಾನ ಶ್ರೀ ಸಣಕಲ್ ಈಶ್ವರ ಅವರ 'ಬಟ್ಟೆ' ಸಂಕಲನಕ್ಕೂ, ದ್ವಿತೀಯ ಬಹುಮಾನವು ಎಸ್. ಎಸ್. ಮರುಳಯ್ಯ ಅವರ 'ಕೆಂಗನ ಕಳ್ಳು' ಸಂಕಲನಕ್ಕೂ, ಮೂರನೇ ಬಹುಮಾನವು ಶ್ರೀ ಬಿ. ಎ. ಸನದಿ ಅವರ 'ಟಾಜಮಹಲ್' ಸಂಕಲನಕ್ಕೂ ದೊರೆತಿದೆ.

**ನಾಟಕ :** ಪ್ರಥಮ ಬಹುಮಾನ ಶ್ರೀ ಬಿ.ಡಿ. ಕಾಮತ್ ಅವರ 'ಹೃದಯ ದೇಗುಲ' ನಾಟಕಕ್ಕೂ, ದ್ವಿತೀಯ ಬಹುಮಾನ ಶ್ರೀ ಎಂ. ಗೋವಿಂದಪೈ ಅವರ 'ಚಿತ್ರಭಾನು' ನಾಟಕಕ್ಕೂ, ತೃತೀಯ ಬಹುಮಾನವು ಶ್ರೀ ಸಿದ್ದಯ್ಯ ಪುರಾಣಿಕರ 'ರಜಥರೇಖೆ' ನಾಟಕಕ್ಕೂ ದೊರೆತಿದೆ.

**ಕಾದಂಬರಿ :** ಪ್ರಥಮ ಬಹುಮಾನವು ಭಾರತಿ ಸುತರ 'ಹುಲಿಯ ಬೋನು' ಕಾದಂಬರಿಗೂ, ದ್ವಿತೀಯ ಬಹುಮಾನವು ಶ್ರೀ ಕೆ. ಜಿ. ನಾಗರಾಜು ಅವರ 'ದೊಡ್ಡ ಸಂಕಣ್ಣ ನಾಯಕ' ಕಾದಂಬರಿಗೂ, ತೃತೀಯ ಬಹುಮಾನವು ಶ್ರೀ ನಿರಂಜನ ಅವರ 'ಹೆಣ್ಣಾಗಿ ಕಾಡಿತ್ತು ಮಾಯೆ' ಕಾದಂಬರಿಗೂ ದೊರೆತಿದೆ.

**ಸಣ್ಣ ಕಥೆಗಳು :** ಪ್ರಥಮ ಬಹುಮಾನವು ಶ್ರೀ ಸಮೇತನಹಳ್ಳಿ ರಾಮರಾಯರ 'ಸ್ವರ್ಗಸ್ವಪ್ನ' ಸಂಕಲನಕ್ಕೂ, ದ್ವಿತೀಯ ಬಹುಮಾನವು ಶ್ರೀ ನಾರಾಯಣ ಸಂಗಮರ 'ರಬೀಂದ್ರನಾಥ ಠಾಕೂರರ ಇಪ್ಪತ್ತೊಂದು ಕಥೆಗಳು' ಸಂಕಲನಕ್ಕೂ, ತೃತೀಯ ಬಹುಮಾನವು ಶ್ರೀ ರಾಮತನಯರ 'ನಾ ನಿನ್ನ ನೆನೆದಾಗ' ಸಂಕಲನಕ್ಕೂ ದೊರೆತಿದೆ.

**ಗದ್ಯ ಕೃತಿಗಳು :** (ಪ್ರಬಂಧ, ಜೀವನ ಚರಿತ್ರೆ ಹಾಗೂ ವ್ಯಂಗ್ಯ ಬರಹಗಳು) ಪ್ರಥಮ ಬಹುಮಾನ ಶ್ರೀ ಎಂ. ಜಿ. ನಂಜುಂಡಾರಾಧ್ಯರ 'ಶ್ರೀ ಶಿವರಾತ್ರಿ ಶಿವಾಚಾರ್ಯ', ದ್ವಿತೀಯ ಬಹುಮಾನವು ಶ್ರೀ ಆರ್. ವೈ. ಧಾರವಾಡಕರ್ ಅವರ 'ಆರು ಪ್ರಬಂಧಗಳ ಸಂಕಲನಕ್ಕೂ,' ತೃತೀಯ ಬಹುಮಾನವು ಶ್ರೀ ಬಿ. ಜಿ. ಎಲ್. ಸ್ವಾಮಿ ಅವರ 'ಅಮೆರಿಕದಲ್ಲಿ ನಾನು' ಪುಸ್ತಕಕ್ಕೂ ದೊರೆತಿದೆ.

**ವಿಮರ್ಶೆ, ಭಾಷಾಶಾಸ್ತ್ರ, ಕಾವ್ಯಮೀಮಾಂಸೆ, ಛಂದಸ್ಸು ಮತ್ತು ವ್ಯಾಕರಣ ಗ್ರಂಥಗಳು :** ಪ್ರಥಮ ಬಹುಮಾನ ಶ್ರೀ ಕುವೆಂಪುರವರ 'ರಸೋವೈಸಃ' ಗ್ರಂಥಕ್ಕೂ, ದ್ವಿತೀಯ ಬಹುಮಾನವು ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 'ಸಾಹಿತ್ಯ ರಶ್ಮಿ' ಗ್ರಂಥಕ್ಕೂ, ತೃತೀಯ ಬಹುಮಾನವು ಶ್ರೀ ಎ. ಎನ್. ಮೂರ್ತಿರಾಯರ 'ಷೇಕ್ಸ್‌ಪಿಯರ್' ಗ್ರಂಥಕ್ಕೂ ದೊರೆತಿದೆ.

**ಸಂಶೋಧನ ಪ್ರಕಟನೆ, ಕಾವ್ಯ ಸಂಪಾದನೆ, ವಿಚಾರ ಸಾಹಿತ್ಯ, ನಿಘಂಟು ಹಾಗೂ ವಸ್ತುಕೋಶ ಗ್ರಂಥಗಳು :** ಪ್ರಥಮ ಬಹುಮಾನವು ಶ್ರೀ ಎಸ್. ಅನಂತನಾರಾಯಣರಾಯರ ಹೊಸಗನ್ನಡದ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ ಗ್ರಂಥಕ್ಕೂ, ದ್ವಿತೀಯ ಬಹುಮಾನವು ಶ್ರೀ ಎಂ. ಚಿದಾನಂದಮೂರ್ತಿ ಅವರ 'ಶೂನ್ಯ ಸಂಪಾದನೆ' ಯನ್ನು ಕುರಿತ ಪ್ರಬಂಧಕ್ಕೂ, ತೃತೀಯ ಬಹುಮಾನವು ಶ್ರೀ ಬಿ. ಡಿ. ಗಣಪತಿ ಅವರ 'ಕೊಡಗು ಮತ್ತು ಕೊಡವರು' ಗ್ರಂಥಕ್ಕೂ ದೊರೆತಿದೆ.

**ಮಕ್ಕಳ ಸಾಹಿತ್ಯ ಮತ್ತು ಜಾನಪದ ಸಾಹಿತ್ಯ :** ಪ್ರಥಮ ಬಹುಮಾನವು ಶ್ರೀ ಎಸ್. ಪ್ರಹಲ್ಲಾದರಾಯರ 'ಮಿಂಚುಳ್ಳಿ' ಗ್ರಂಥಕ್ಕೂ, ದ್ವಿತೀಯ ಬಹುಮಾನವು ಶ್ರೀ ಎಸ್. ಎಸ್. ನಾಯಕ್ ಅವರ 'ಜನಪದ ರಸಗಂಗೆ' ಗ್ರಂಥಕ್ಕೂ, ತೃತೀಯ ಬಹುಮಾನವು ಶ್ರೀ ಆನಂದರ 'ಈಸೋಪನ ನೀತಿಕಥೆಗಳು' ಗ್ರಂಥಕ್ಕೂ ದೊರೆತಿದೆ.

**ಸ್ತ್ರೀ ಲೇಖಕಿಯರಿಗೆ ವಿಶೇಷ ಬಹುಮಾನ :** ಪ್ರಥಮ ಬಹುಮಾನವು ಶ್ರೀಮತಿ ಪದ್ಮ ರವರ 'ರಸವಿರಸ' ಗ್ರಂಥಕ್ಕೂ, ದ್ವಿತೀಯ ಬಹುಮಾನವು ಶ್ರೀಮತಿ ಎಂ. ಕೆ. ಜಯಲಕ್ಷ್ಮಿ ಅವರ 'ಸಂಸಾರ ಸಮರ' ಗ್ರಂಥಕ್ಕೂ, ತೃತೀಯ ಬಹುಮಾನವು ಶ್ರೀಮತಿ ಸಿ. ಎಸ್. ಜಯಲಕ್ಷ್ಮೀದೇವಿ ಅವರ 'ಶುಭವೃಷ್ಟಿ' ಗ್ರಂಥಕ್ಕೂ ದೊರೆತಿದೆ.

# ಕನ್ನಡದ ಸುದ್ದಿಗಳು

**ಬೆಂಗಳೂರು**

ಏಪ್ರಿಲ್ ದಿನಾಂಕ ೫ ರಂದು ಸಂಜೆ 'ಶರಣಸಾಹಿತ್ಯ' ಮಾಸ ಪತ್ರಿಕೆಯ ರಜತೋತ್ಸವ ಸಂಚಿಕೆ ಪ್ರಕಾಶನ ಮತ್ತು ಮೈಸೂರು ರಾಜ್ಯಪಾಲರ ಭಾವಚಿತ್ರ ಅನಾವರಣ ಮಹೋತ್ಸವ ನಡೆಯಿತು. ಅರ್ಥಮಂತ್ರಿ ಶ್ರೀ ಬಿ. ಡಿ. ಜತ್ತಿಯವರು ಪ್ರಕಾಶನ ಗೋಳಿಸಿದರು. ರಾಜ್ಯಪಾಲರ ಭಾವಚಿತ್ರವನ್ನು ವಿಧಾನಪರಿಷತ್ತಿನ ಅಧ್ಯಕ್ಷ ಶ್ರೀ ಜಿ. ವಿ. ಹಳ್ಳಿಕೇರಿಯವರು ಅನಾವರಣ ಮಾಡಿದರು. ಈ ಸಮಾರಂಭಕ್ಕೆ ಮೈಸೂರು ಮುಖ್ಯ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿಗಳಾದ ಶ್ರೀ ಟಿ. ಎನ್. ಮಲ್ಲಪ್ಪನವರು ಅಧ್ಯಕ್ಷತೆ ವಹಿಸಿದ್ದರು.

ದಿನಾಂಕ ೩೧-೩-೬೩ನೆಯ ಭಾನುವಾರ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ಸಭಾಂಗಣದಲ್ಲಿ ಒಂದು "ಕಿರಿಯ ಕವಿಗಳ ಮೇಳ"ವನ್ನು ಶ್ರೀ ಕೆ. ನಟರಾಜ್ ಮತ್ತು ಶ್ರೀ ಆರ್. ಅಮರೇಂದ್ರ ಅವರುಗಳು ಏರ್ಪಡಿಸಿದ್ದರು. ಶ್ರೀ ಹೀ. ಚಿ. ಶಾಂತವೀರಯ್ಯನವರು ಉಪನ್ಯಾಸಕರಾಗಿಯೂ, ಶ್ರೀ ನಾರಾಯಣ ಸಂಗಮ ಅವರು ಅಧ್ಯಕ್ಷರಾಗಿಯೂ ಆಗಮಿಸಿದ್ದರು. ಕಿರಿಯ ಕವಿಗಳಾದ ಶ್ರೀ ಶಾಂತರಾಜು, ನಾ. ಕೃ. ಸತ್ಯನಾರಾಯಣ, ಮೊ. ಮಹದೇವಶಾಸ್ತ್ರೀ, ನಾಗರಾಜು, ಎಸ್. ದಿವಾಕರ್ ಮತ್ತು ಕುಮಾರಿ ಎಲ್. ಎಸ್. ಪರಿಮಳಾ ಅವರು ತಮ್ಮ ತಮ್ಮ ಕವಿತೆಗಳನ್ನು ವಾಚನ ಮಾಡಿದರು.

ದಿನಾಂಕ ೨೮-೩-೬೩ ರಂದು ಸಾಹಿತ್ಯ ಕುಟೀರದ ಆಶ್ರಯದಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು "ಕರ್ನಾಟಕವೂ ಸಂಸ್ಕೃತ ವಾಙ್ಮಯವೂ" ಎಂಬ ವಿಷಯವಾಗಿ ಭಾಷಣ ಮಾಡಿದರು.

ದಿನಾಂಕ ೨೩-೩-೬೩ ರಂದು ಬೆಂಗಳೂರು ನ್ಯಾಷನಲ್ ಹೈಸ್ಕೂಲಿನಲ್ಲಿ ಸಾಹಿತಿಗಳ ಸಂದರ್ಶನ ಕಾರ್ಯಕ್ರಮ ನಡೆದು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ, ಶ್ರೀ ಕೆ. ಎಸ್. ಧರಣೇಂದ್ರಯ್ಯ, ಶ್ರೀ ಅರ್ಚಕ ವೆಂಕಟೇಶ್, ಶ್ರೀ ಹಿ. ಮ. ನಾಗಯ್ಯ ಭಾಗವಹಿಸಿ ವಿದ್ಯಾರ್ಥಿಗಳನ್ನು ಕುರಿತು ಮಾತುಕತೆ ನಡೆಸಿದರು.

**ಭದ್ರಾವತಿ**

ದಿನಾಂಕ ೧೭-೩-೬೩ ರಂದು ಭದ್ರಾವತಿ ಕರ್ನಾಟಕ ಸಂಘದವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರನ್ನು ಬರಮಾಡಿಕೊಂಡು ಮಾನ್ಯ ಅರ್ಥಮಂತ್ರಿ ಶ್ರೀ ಬಿ. ಡಿ. ಜತ್ತಿಯವರ ಅಧ್ಯಕ್ಷತೆಯಲ್ಲಿ ಸನ್ಮಾನಿಸಿದರು. ಶ್ರೀ ಶಾಸ್ತ್ರಿಗಳ ೪೦ ವರ್ಷದ ಸಾಹಿತ್ಯ ಸೇವೆಯನ್ನು ಪ್ರಶಂಸಿಸಿ, ೧,೦೦೧ ರೂ. ಸಂಭಾವನೆಯಿತ್ತರು.

**ಧಾರವಾಡ**

ಕನ್ನಡ ಲೇಖಕ ಶ್ರೀ ಎಂ. ಜಿ. ವಿರೂಪಾಕ್ಷನ್‌ರವರು ಮಾರ್ಚಿ ೨೧ ರಂದು ಕ್ಯಾನ್ಸರ್ ಬೇನೆಯಿಂದ ತಮ್ಮ ೫೨ನೇ ವಯಸ್ಸಿನಲ್ಲಿ ನಿಧನರಾದರು.

**ಪುಣೆ**

ಸ್ಥಳೀಯ ಕನ್ನಡದ ಸಂಘದ ಸಭೆಯು ಮಾರ್ಚಿ ೨೪ರಂದು ಇಲ್ಲಿಯ ಫರ್ಗೂಸನ್ ಕಾಲೇಜಿನ ಭವನದಲ್ಲಿ ನಡೆಯಿತು.

ನೂತನ ಸಾಲಿನ ಅಧಿಕಾರಿ ವರ್ಗಕ್ಕೆ ಈ ಕೆಳಕಂಡವರು ಆಯ್ಕೆಯಾದರು.

ಡಾ॥ ಡಿ. ಆರ್. ರಾವ್ (ಅಧ್ಯಕ್ಷ), ಡಾ॥ ಕೆ. ಶ್ಯಾಮರಾವ್ (ಉಪಾಧ್ಯಕ್ಷ), ಶ್ರೀ ಆರ್. ವಾಸುದೇವರಾವ್ ಮತ್ತು ಎಸ್. ಎನ್. ಲಕ್ಷ್ಮಣ್ (ಕಾರ್ಯದರ್ಶಿಗಳು).

ಸಂಘದ ಕಟ್ಟಡಕ್ಕೆ ಡಾ॥ ಟಿ. ಆರ್. ರಾವ್ ಅವರು ೫೦೦ ರೂ. ಶ್ರೀ ಎ. ಎ. ವಿ. ಆಚಾರ್ಯ ಅವರು ೨,೦೦೦ ರೂ. ಮತ್ತು ಶ್ರೀ ಹೆಚ್. ಎಸ್. ಲಕ್ಷ್ಮೀಶ್ವರ್ ಅವರು ೧,೦೦೦ ರೂ. ಗಳನ್ನು ದಾನ ಮಾಡಿದರು.

**ದೆಹಲಿ**

ದಿನಾಂಕ ೩೧-೩-೬೩ ರಂದು ದೆಹಲಿಯ ವಿಜ್ಞಾನ ಭವನದಲ್ಲಿ ಪಂಡಿತ ನೆಹರೂರವರ ಹಸ್ತದಿಂದ ದಿವಂಗತ ದೇವುಡು ಶಾಸ್ತ್ರಿಗಳ ಸಾಹಿತ್ಯ ಅಕಾಡಮಿ ಪ್ರಶಸ್ತಿಯನ್ನು ಅವರ ಧರ್ಮಪತ್ನಿಯವರು ಸ್ವೀಕರಿಸಿದರು.

---

## ಪರಿಷತ್ ಅಧ್ಯಕ್ಷರಿಗೆ ಸನ್ಮಾನ



ಭದ್ರಾವತಿ ಕರ್ನಾಟಕ ಸಂಘದವರು ಮಾರ್ಚಿ ೧೭ ರಂದು ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರನ್ನು ಸನ್ಮಾನಿಸಿದಾಗ ತೆಗೆದ ಚಿತ್ರ. ಈ ಸಂದರ್ಭದಲ್ಲಿ ಅರ್ಥಮಂತ್ರಿ ಶ್ರೀ ಬಿ. ಡಿ. ಜತ್ತಿಯವರು ಭಾಷಣ ಮಾಡುತ್ತಿರುವುದನ್ನು ಚಿತ್ರದಲ್ಲಿ ಕಾಣಬಹುದು.

# ಸಂಪಾದಕೀಯ

## ಕೃಷ್ಣಾ ನೀರಿನಲ್ಲಿ ಕರ್ನಾಟಕಕ್ಕೆ ನ್ಯಾಯವಾದ ಪಾಲು ದೊರೆಯಲಿ

ಕೃಷ್ಣಾ ಗೋದಾವರಿ ನದಿಗಳ ನೀರಿನ ಹಂಚಿಕೆಯ ವಿಚಾರದಲ್ಲಿ ಕೇಂದ್ರ ನೀರಾವರಿ ಸಚಿವ ಶ್ರೀ ಹಫೀಜ್ ಅಹಮದ್ ಇಬ್ರಾಹಿಂ ಅವರು ಮಾರ್ಚಿ ೨೩ರಂದು ಲೋಕ ಸಭೆಯಲ್ಲಿ ನೀಡಿದ ಹೇಳಿಕೆಯನ್ನು ಕುರಿತು ಚರ್ಚಿಸಿದ ಮೈಸೂರು ಮತ್ತು ಮಹಾರಾಷ್ಟ್ರ ವಿಧಾನ ಸಭಾ ಸದಸ್ಯರು ಆ ಬಗ್ಗೆ ತಮ್ಮ ತೀವ್ರ ಅಸಮ್ಮತಿಯನ್ನು ವ್ಯಕ್ತ ಪಡಿಸಿದ್ದಾರೆ. ತಮ್ಮ ನ್ಯಾಯವಾದ ಹಕ್ಕಿನ ಸುಮಾರು ಎರಡರಷ್ಟು ನೀರನ್ನು ಪಡೆದ ಆಂಧ್ರ ಪ್ರದೇಶವು ಕೇಂದ್ರದ ತೀರ್ಮಾನವನ್ನು ಪ್ರತಿಭಟನೆಯೊಂದಿಗೆ ಒಪ್ಪಿಕೊಂಡಿರುವುದು ಇಲ್ಲಿ ಗಮನಾರ್ಹ. ಕೇಂದ್ರವು ಗುಲ್ಹಾಟಿ ಸಮಿತಿಯ ವರದಿಯ ಆಧಾರದ ಮೇಲೆ ಈ ತೀರ್ಮಾನಕ್ಕೆ ಬಂದಿದೆ ಎಂದೂ, ಮತ್ತು ಪ್ರಸ್ತುತ ಹಂಚಿಕೆಯು ತಾತ್ಕಾಲಿಕ ಸ್ವರೂಪದ್ದು ಎಂದೂ ಹೇಳಲಾಗಿದೆ. ತೀರ್ಮಾನ ಯಾವ ಸ್ವರೂಪದ್ದೇ ಆಗಿರಲಿ, ಅದು ಕನ್ನಡಿಗರ ಹಿತವನ್ನು ಅಲಕ್ಷಿಸಿದೆ ಎಂಬುದು ಸುಸ್ಪಷ್ಟ.

ಸದ್ಯದ ಹಂಚಿಕೆಯ ಪ್ರಕಾರ ಕೃಷ್ಣಾ ನದಿಯ ನೀರಿನ ಸರಾಸರಿ ಪ್ರಮಾಣವಾದ ೧೮೦೦ ಸಾವಿರ ದಶಲಕ್ಷ ಘನ ಅಡಿ ನೀರಿನಲ್ಲಿ ಮೈಸೂರಿಗೆ ೬೦೦ (ಶೇ. ೩೩), ಆಂಧ್ರಕ್ಕೆ ೮೦೦ (ಶೇ. ೪೫) ಮತ್ತು ಮಹಾರಾಷ್ಟ್ರಕ್ಕೆ ೪೦೦ (ಶೇ. ೨೨) ಸಾವಿರ ದಶಲಕ್ಷ ಘನ ಅಡಿಗಳಷ್ಟು ನೀರು ದೊರೆತಿದೆ. ಶೇಕಡ ೪೬ ರಷ್ಟು ನೀರು ಪಡೆಯಬೇಕಾಗಿದ್ದ ಮೈಸೂರಿಗೆ ಶೇಕಡ ೩೩ ರಷ್ಟು ನೀರನ್ನೂ, ಶೇಕಡ ೨೮ ರಷ್ಟು ನೀರು ಪಡೆಯಬೇಕಾಗಿದ್ದ ಆಂಧ್ರಕ್ಕೆ ಶೇಕಡ ೪೫ ರಷ್ಟು ನೀರನ್ನೂ ಮತ್ತು ಶೇಕಡ ೨೬ ರಷ್ಟು ನೀರು ಪಡೆಯಬೇಕಾಗಿದ್ದ ಮಹಾರಾಷ್ಟ್ರಕ್ಕೆ ಶೇಕಡ ೨೨ ರಷ್ಟು ನೀರನ್ನೂ ಹಂಚ ಲಾಗಿದೆ. ಪ್ರಸ್ತುತ ಹಂಚಿಕೆಯಲ್ಲಿ ಮೈಸೂರಿಗಾಗಿರುವ ಅನ್ಯಾಯ ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ. ಸುಮಾರು ೧೧೦೦ ಸಹಸ್ರ ದಶಲಕ್ಷ ಘನ ಅಡಿಗಳಷ್ಟು ನೀರು ಪಡೆಯುವ ಹಕ್ಕನ್ನು ಪಡೆದ ಮೈಸೂರಿಗೆ ಕೇವಲ ೬೦೦ ಸಾವಿರ ದಶಲಕ್ಷ ಘನ ಅಡಿ ನೀರು ಹಂಚಿರುವುದು ಶುದ್ಧ ಅನ್ಯಾಯ, ಎಂದು ಯಾರಾದರೂ ಹೇಳಬಹುದು. ಮೈಸೂರಿಗಾಗಿರುವ ಈ ಅನ್ಯಾಯವನ್ನು ನಮ್ಮ ಶಾಸಕರು ಸ್ಪಷ್ಟಪಡಿಸಿದ್ದಾರೆ. ಮಾಜಿ ಸಚಿವರಾದ ಶ್ರೀ ಚೆನ್ನ ಬಸಪ್ಪನವರೂ ಮತ್ತು ಶ್ರೀ ಅಣ್ಣಾರಾವ್ ಗಣಮುಖಿ ಯವರೂ ಅಂಕಿ ಸಂಖ್ಯೆಗಳನ್ನಿತ್ತು ಕೇಂದ್ರದ ಇಂದಿನ ತೀರ್ಪನ್ನು ಒಪ್ಪಿಕೊಳ್ಳಕೂಡದೆಂದೂ ಮತ್ತು ನದಿ ನೀರಿನ ವಿವಾದವನ್ನು ಪಂಚಾಯ್ತಿಗೆ ಒಪ್ಪಿಸಿ ನ್ಯಾಯ ಪಡೆಯ ಬೇಕೆಂದೂ ಸಲಹೆ ನೀಡಿದ್ದಾರೆ. ಸರ್ಕಾರವೂ ಕೂಡ ಅನ್ಯಾಯದ ಅಂಶಗಳನ್ನು ಒಪ್ಪಿಕೊಂಡು ನ್ಯಾಯವಾದ ಪಾಲು ಪಡೆಯಲು ಶಕ್ತಿಮೀರಿ ಶ್ರಮಿಸುವ ಆಶ್ವಾಸನ ವನ್ನಿತ್ತಿದೆ. ಸರ್ಕಾರವು ಯಾವುದೇ ತೆರನಾದ ದಾಕ್ಷಿಣ್ಯಕ್ಕೆ ಅಥವಾ ಒತ್ತಾಯಕ್ಕೆ ಸಿಲುಕಿ ರಾಜ್ಯದ ಹಿತಕ್ಕೆ ಧಕ್ಕೆ ಯನ್ನುಂಟುಮಾಡಬಹುದಾದ ತೀರ್ಪನ್ನು ಒಪ್ಪಿಕೊಂಡರೆ ಕರ್ನಾಟಕದ ಮುಂದಿನ ಪೀಳಿಗೆಯ ಶಾಪಕ್ಕೆ ಗುರಿಯಾಗ ಬೇಕಾದೀತು, ಎಂದು ಎಚ್ಚರಿಸಿದ ಶಾಸಕರೆಲ್ಲರೂ ಅಭಿ ನಂದನಾರ್ಹರು.

೧೯೫೧ರ ಒಪ್ಪಂದ ಅಸಿಂಧು ಹಾಗೂ ಏಕಪಕ್ಷೀಯ ವಾದುದು ಎಂಬ ಮೈಸೂರಿನ ವಾದಕ್ಕೆ ಮನ್ನಣೆ ದೊರೆ ತಿರುವುದು ಸಂತಸದ ಸಂಗತಿ. ಈ ಸತ್ಯವನ್ನು ಒಪ್ಪಿ ಕೊಂಡ ಕೇಂದ್ರಸರ್ಕಾರ ಮೈಸೂರಿನ ಬೇಡಿಕೆಯನ್ನು ಪೂರ್ಣವಾಗಿ ಒಪ್ಪಿಕೊಳ್ಳಬೇಕಾಗಿತ್ತು. ಹಾಗೆ ಮಾಡದೆ ಆಂಧ್ರಕ್ಕೆ ಹೆಚ್ಚು ನೀರು ನೀಡಿರುವುದು ಕರ್ನಾಟಕದ ಹಕ್ಕನ್ನು ಚ್ಯುತಿಗೊಳಿಸಿದಂತಾಗಿದೆ. “ಮೈಸೂರು ರಾಜ್ಯ ದಲ್ಲಿ ಅತ್ಯಂತ ಹೆಚ್ಚು ಜಲಾನಯನ ಪ್ರದೇಶವಿದೆ, ಹೆಚ್ಚು ಜನಸಂಖ್ಯೆಯಿದೆ, ಹೆಚ್ಚು ಸಾಗುವಳಿ ಜಮೀನು ಇದೆ. ಹೆಚ್ಚು ಬಾರಿ ಕ್ಷಾಮ ಬರುತ್ತದೆ. ಬಯಲಿನಲ್ಲಿ ನೀರಾವರಿಗೆ ಬಂದಿರುವ ವಿಸ್ತೀರ್ಣ ಅತ್ಯಂತ ಕಡಿಮೆ. ಪರಿಸ್ಥಿತಿ ಹೀಗಿದ್ದರೂ ಮೈಸೂರಿಗೆ ಕೃಷ್ಣಾನದಿ ನೀರಿನಲ್ಲಿ ಶೇಕಡ ೩೩ ರಷ್ಟನ್ನು (೬೦೦ ಸ. ದ. ಲ. ಘ. ಅಡಿ) ಕೊಡಲಾಗಿದೆ. ಆದರೆ ಆಂಧ್ರದಲ್ಲಿ ಅತ್ಯಂತ ಹೆಚ್ಚು ಪ್ರಮಾಣದಲ್ಲಿ ನೀರಾವರಿ ಅಭಿವೃದ್ಧಿ ಆಗಿದೆ. ಜನಸಂಖ್ಯೆ ಕಡಿಮೆ ಇದೆ. ಕ್ಷಾಮಕ್ಕೆ ಸಿಲುಕುವ ಪ್ರದೇಶವೂ ಕಡಿಮೆ. ಆದರೆ ನ್ಯಾಯದ ಹೆಸರಿನಲ್ಲಿ ಆಂಧ್ರಕ್ಕೆ ಶೇಕಡಾ ೪೫ ರಷ್ಟು (೮೦೦ ಸ. ದ. ಲ. ಘ. ಅಡಿ) ನೀರನ್ನು ಕೊಡಲಾಗಿದೆ.

ಇದು ಅತ್ಯಂತ ವಿಷಾದಕರವಲ್ಲದೆ, ಇದನ್ನು ನ್ಯಾಯ ಎಂದು ಯಾರು ಕರೆಯಬಲ್ಲರು?" ಎಂದು ಮಾಜಿ ಲೋಕೋಪಯೋಗಿ ಸಚಿವ ಶ್ರೀ ಎಚ್. ಎಂ. ಚೆನ್ನ ಬಸಪ್ಪನವರು ಕೇಳಿರುವುದು ಔಚಿತ್ಯಪೂರ್ಣವಾಗಿದೆ. ಈಗ ಹಂಚಲಾಗಿರುವ ೬೦೦ ಸಹಸ್ರ ದಶಲಕ್ಷ ಘನ ಅಡಿ ನೀರಿನಲ್ಲಿ ಪಂಚವಾರ್ಷಿಕಯೋಜನೆ, ನೀರು ಸರಬರಾಜು, ಕೈಗಾರಿಕಾ ಅಭಿವೃದ್ಧಿ ಮೊದಲಾದುವುಗಳಲ್ಲಿ ಉಪಯೋಗವಾಗಬೇಕಾದ ನೀರಿನ ಪ್ರಮಾಣವನ್ನು ವಜಾ ಮಾಡಿದ ಮೇಲೆ ಮುಂದಿನ ಹದಿನೈದು ವರ್ಷಗಳಲ್ಲಿ ಅಭಿವೃದ್ಧಿ ಕಾರ್ಯಗಳಿಗಾಗಿ ಉಳಿಯುವ ನೀರು ಎಂದರೆ ಕೇವಲ ೧೭೩ ಸಹಸ್ರ ದಶಲಕ್ಷ ಘನ ಅಡಿ ಮಾತ್ರ. ಈ ನೀರು ೨೨೬ ಸ. ದಶಲಕ್ಷ ಘ. ಅಡಿ ನೀರನ್ನು ಬಳಸುವ ಕೃಷ್ಣಾ ಮೇಲ್ದಂಡೆ ಯೋಜನೆಯೊಂದಕ್ಕೇ ಸಾಕಾಗಲಾರದು. ಮಲಪ್ರಭಾ, ಘಟಪ್ರಭಾ, ಭೀಮಾ, ತುಂಗಭದ್ರ ಮೊದಲಾದ ಯೋಜನೆಗಳಿಗೂ ನೀರು ಬೇಕು. ರಾಜ್ಯದ ಆ ಭಾಗದ ನೀರಾವರಿ ಕಾರ್ಯಗಳ ಅಭಿವೃದ್ಧಿಗೆ ಸುಮಾರು ೫೭೦ ಸಹಸ್ರ ದಶಲಕ್ಷ ಘನ ಅಡಿ ನೀರು ಅಗತ್ಯವಾಗಿದೆ. ಕೇಂದ್ರವು ಕಾಯ್ದಿರಿಸಿದ ಸುಮಾರು ೨೫೦ ಸಾವಿರ ದಶಲಕ್ಷ ಘನ ಅಡಿ ನೀರನ್ನು ಕರ್ನಾಟಕ ಒಂದಕ್ಕೆ ಕೊಟ್ಟರೂ ಈ ರಾಜ್ಯದ ಅಗತ್ಯವನ್ನು ಅದು ಪೂರೈಸಲಾರದು. ಪರಿಸ್ಥಿತಿ ಹೀಗಿರುವಾಗ ನಮ್ಮ ಮುಖ್ಯ ಮಂತ್ರಿಗಳು ೧೫ ಸಹಸ್ರ ದಶಲಕ್ಷ ಘನ ಅಡಿ ನೀರನ್ನು ಮದರಾಸಿಗೆ ಕೊಡುವುದಾಗಿ ಹೇಳಿದ್ದಾರೆ. ಮದರಾಸಿಗೆ ೧೧೫ ಮೈಲಿ ದೂರದಲ್ಲಿರುವ ಪೆನ್ನಾರ್ ನದಿ ಮದರಾಸಿನ ಅಗತ್ಯವನ್ನು ಪೂರೈಸುವಾಗ ೪೦೦ ಮೈಲಿ ದೂರದಲ್ಲಿರುವ ಕೃಷ್ಣಾನದಿಯಿಂದ ನೀರು ಕೊಡು ಎಂದು ಕೇಳುವುದಾಗಲೀ ಅಥವಾ ನೀಡುವೆವೆಂದು ಹೇಳುವುದಾಗಲೀ ಸಮಂಜಸವೆನಿಸದು. ಕೃಷ್ಣಾನದಿ ನೀರಿನ ವಿವಾದದಲ್ಲಿ ಮದರಾಸಿಗೆ ನೀರು ಪೂರೈಸುವ ಪ್ರಶ್ನೆ ಅಪ್ರಾಸಂಗಿಕ, ಅನಗತ್ಯ.

ಕೃಷ್ಣಾನದಿ ಬಯಲಿನಲ್ಲಿ ಎಲ್ಲೆಲ್ಲೂ ನೀರು. ಆದರೆ ನೀರಾವರಿಗೆ ಮಾತ್ರ ನೀರಿಲ್ಲ. ಕಾರಣ ಆ ಪ್ರದೇಶ ಕ್ಷಾಮದ ತವರು. ಹೀಗಿದೆ ಕರ್ನಾಟಕದ ಪರಿಸ್ಥಿತಿ. ರಾಜ್ಯ ಸರ್ಕಾರವು ನ್ಯಾಯವಾಗಿ ದೊರೆಯಬೇಕಾದ ಪಾಲನ್ನು (ಅಂದರೆ ಸು. ೧,೧೦೦ ಸಹಸ್ರ ದಶಲಕ್ಷ ಘನ ಅಡಿ ನೀರನ್ನು) ಪಡೆಯಲು ಸರ್ವ ಪ್ರಯತ್ನಗಳನ್ನೂ ಮಾಡಬೇಕು. ಕೃಷ್ಣಾನದಿ ಮೇಲ್ದಂಡೆಯ ಯೋಜನೆ, ಘಟಪ್ರಭಾ, ಮಲಪ್ರಭಾ, ಭೀಮಾ, ತುಂಗಭದ್ರಾ (ಮೇಲ್ಮಟ್ಟದ ನಾಲೆ) ಮೊದಲಾದ ನೀರಾವರಿ ಕಾರ್ಯಗಳನ್ನು ಕೂಡಲೇ ಪ್ರಾರಂಭಿಸಬೇಕು. ಶಾಸನ ಸಭೆಯ ಒಳಗೂ ಹೊರಗೂ ಜನತಾ ಪ್ರತಿನಿಧಿಗಳು ಮತ್ತು ತಜ್ಞರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಕೇಂದ್ರವು ಗಮನಿಸಿ ಮೈಸೂರಿಗಾಗಿರುವ ಅನ್ಯಾಯವನ್ನು ಶೀಘ್ರ ಸರಿಪಡಿಸಬೇಕೆಂದು ನಾವು ವಿನಂತಿಸುತ್ತೇವೆ. ಕೇಂದ್ರ ಸರಕಾರವು ಕರ್ನಾಟಕವನ್ನು ಅನೇಕ ಮಹತ್ವದ ಸಂದರ್ಭಗಳಲ್ಲಿ ಕಡೆಗಣಿಸಿದೆ. ಈ ಪ್ರಸಂಗದಲ್ಲಿಯೂ ಕಡೆಗಣಿಸಿ ಕನ್ನಡಿಗರ ನ್ಯಾಯವಾದ ಬೇಡಿಕೆಯನ್ನು ತಳ್ಳಿಹಾಕದಿರಲಿ. ಕೃಷ್ಣಾ ನೀರಿನಲ್ಲಿ ಕರ್ನಾಟಕಕ್ಕೆ ನ್ಯಾಯವಾದ ಪಾಲು ದೊರೆಯಲಿ.

---



ಸಂಪಾದಕರು: ಶ್ರೀ ಅನ್ನದಾನಯ್ಯ ಪುರಾಣಿಕ, ಬಿ.ಕಾಮ್., ಎಲ್ಎಲ್.ಬಿ. ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ. ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು–೧೮

# ಸಾದರ ಸ್ವೀಕಾರ

* ನವಲಿಂಗ ಸಾಹಿತ್ಯ: ಲೇಖಕರು: ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ.; ಸೈಜು ೧/೮ ಕ್ರೌನ್; ಪುಟ ೧೧೦; ಬೆಲೆ ರೂ. ೧-೫೦ ನ.ಪೈ.

* ರತಿ ಕಲ್ಯಾಣ (ಯಕ್ಷಗಾನ): ಸಂಪಾದಕರು: ಶ್ರೀ ಸುಂದರರಾವ್ ಕುಂಬಳೆ; ಪ್ರಕಾಶಕರು: ಶ್ರೀ ಡಿ. ವಿ. ಹೊಳ್ಳ, ಕುಂದಾಪುರ; ಸೈಜು ೧/೮ ಕ್ರೌನ್; ಪುಟ ೯೮; ಬೆಲೆ ರೂ. ೧.

ಶ್ರೀ ಬಿಲ್ಲಮರಾಜನ ಪುರಾಣವು: ಲೇಖಕರು: ವಿದ್ವಾನ್ ಚಂದ್ರಶೇಖರ ಶಾಸ್ತ್ರಿಗಳು, ಜ್ಯೋತಿಪುರ; ಪ್ರಕಾಶಕರು: ಡಾಕ್ಟರ್ ಜಿ. ಎಸ್. ಹಿರೇಮಠ, ಮುದಗಲ್ಲು; ಸೈಜು ೧/೮ ಡೆಮ್ಮಿ; ಪುಟ ೨೬೮; ಬೆಲೆ ರೂ. ೫.

ದರ್ಶನ (ವಿವೇಕವರ್ಧಿನೀ ಪ್ರೌಢಶಾಲೆಯ ೧೯೬೩-೬೪ರ ವರದಿ): ರಾಜಾಜಿನಗರ, ಬೆಂಗಳೂರು-೧೦; ಸೈಜು ೧/೮ ಫುಲ್ ಸ್ಕೇಪ್; ಪುಟ ೬೩; ಬೆಲೆ ರೂ. ೧.

ಇಂದಿರಾಬಾಯಿ: ಲೇಖಕರು: ಶ್ರೀ ಗುಲವಾಡಿ ವೆಂಕಟರಾಯರು; ಪ್ರಕಾಶಕರು: ಕನ್ನಡ ಪ್ರಪಂಚ ಪ್ರಕಾಶನ, ಕದ್ರಿ, ಮಂಗಳೂರು-೨; ಸೈಜು ೧/೮ ಕ್ರೌನ್; ಪುಟ ೨೫೯; ಬೆಲೆ ರೂ. ೩.

* ರಾಮೇಶ್ವರ ಕನ್ಯಾಕುಮಾರಿ ದರ್ಶನ: ಲೇಖಕರು: ಶ್ರೀ ಹ. ರಾ. ಪುರೋಹಿತ, ಎಂ.ಎ.; ಸೈಜು ೧/೮ ಕ್ರೌನ್; ಪುಟ ೯೬; ಬೆಲೆ ರೂ. ೧-೫೦ ನ.ಪೈ.

ಶ್ರೀ ಬಿ. ಬಿ. ಶಾಸ್ತ್ರಿ, ಸದರನ್ ರೈಲ್ವೆ, ವಿದ್ಯಾರಣ್ಯಪುರಂ, ಮೈಸೂರು-೪, ಇವರು ಈ ಕೆಳಗೆ ಕಂಡ ಪುಸ್ತಕಗಳನ್ನು ಸಾದರ ಸ್ವೀಕಾರಕ್ಕಾಗಿ ಕಳುಹಿಸಿದ್ದಾರೆ.

ಜ್ಯೋತಿಷ ಭವಿಷ್ಯರತ್ನ, ಶ್ರೀ ನವಗ್ರಹ ಪೀಡಾ ಪರಿಹಾರ ಸ್ತೋತ್ರವು, ಸುಬ್ರಹ್ಮಣ್ಯೇಶ್ವರ ಅಷ್ಟೋತ್ತರ ಶತನಾಮಾವಳಿ, ರಾಷ್ಟ್ರಧ್ವಜ, ಶಿವಾಷ್ಟೋತ್ತರ ಶತನಾಮಾವಳಿ, ಶ್ರೀ ಪರಮೇಶ್ವರನ ೧೦೮ ಸ್ತೋತ್ರಗಳು, ಯಾಗಮರ್ಮ ಅಷ್ಟಗ್ರಹಕೂಟ ನವಗ್ರಹ ಸ್ತೋತ್ರ, ಅಧ್ಯಾತ್ಮ ಶಾಸ್ತ್ರ, ತಬ್ಬಲಿ ಹೆಣ್ಣು, ಭಗವದ್ಗೀತಾಮೃತ ಸಾರ, ಶ್ರೀ ಗೌರೀ ಅಷ್ಟೋತ್ತರ ಶತನಾಮಾವಳಿ ಸ್ತೋತ್ರಾವಳಿ, ಶ್ರೀ ಚೌತೀ ಗಣೇಶಷ್ಟೋತ್ತರ ಶತನಾಮಾವಳಿ, ದೇವರು, ಪರಶಿವ ಸ್ತೋತ್ರಾವಳಿ, ಶಿವ ಜೀವಾತ್ಮ ನಿವೇದನ, ಪಂಪಾನಗರ, ಶ್ರೀ ಕೃಷ್ಣಾರ್ಜುನರ ಧರ್ಮಸಂವಾದವೆಂಬ ಗೀತಾಮೃತ, ಶ್ರೀ ಶಿವಭಕ್ತಿ ಸಾರವು, ಭಾಗವತೋತ್ತಮ ವಿದುರನೀತಿ, ಶನಿದೇವರ ಅಷ್ಟೋತ್ತರವು.

* ಬಾಳೆ ಬೇಸಾಯ: ಲೇಖಕರು: ಶ್ರೀ ಸಿಂಪಿ ಲಿಂಗಣ್ಣ; ಪ್ರಕಾಶಕರು: ಶ್ರೀ ಅರವಿಂದ ಗ್ರಂಥಾಲಯ, ಚಡಚಣ; ಸೈಜು ೧/೮ ಕ್ರೌನ್; ಪುಟ ೧೩೦; ಬೆಲೆ ರೂ. ೧-೫೦ ನ.ಪೈ.

* ಶಿಕ್ಷಣ ಪ್ರದೀಪ: ಲೇಖಕರು: ಶ್ರೀ ಹೆಚ್. ಜಿ. ರಾಮಯ್ಯಂಗಾರ್, ಬಿ.ಎ.,ಬಿ.ಟಿ.; ಸೈಜು ೧/೮ ಕ್ರೌನ್; ಪುಟ ೧೬೭; ಬೆಲೆ ರೂ. ೩.

* ಪಂಚಗಂಗಾ: ಲೇಖಕರು: ಶ್ರೀ ಬೆಟಗೇರಿ ಕೃಷ್ಣಶರ್ಮಾ; ಪ್ರಕಾಶಕರು: ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೧೩೦; ಬೆಲೆ ರೂ. ೧-೫೦ ನ.ಪೈ.

ಜೈಮಿನಿ ಭಾರತ ಸಂಗ್ರಹ: ಸಂಪಾದಕರು: ಶ್ರೀ ದೇ. ಜವರೇಗೌಡ; ಪ್ರಕಾಶಕರು: ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು; ಸೈಜು ೧/೮ ಕ್ರೌನ್; ಪುಟ ೨೩೮ + ೩೪; ಬೆಲೆ ರೂ. ೨.

* ಬಾನುಲಿ: ಲೇಖಕರು: ಶ್ರೀ ಚಂದ್ರಶೇಖರ ಪಾಟೀಲ; ಸೈಜು ೧/೮ ಕ್ರೌನ್; ಪುಟ ೮೪ + ೪; ಬೆಲೆ ರೂ. ೧-೫೦ ನ.ಪೈ.

ಶ್ರೀ ಕೈವಾರ ರಾಜಾರಾಯರಿಂದ ಈ ಕೆಳಗೆ ನಮೂದಿಸಿರುವ ಗ್ರಂಥಗಳು ಪರಿಷತ್ತಿನ ಸರಸ್ವತಿ ಭಂಡಾರಕ್ಕೆ ಉಚಿತವಾಗಿ ಕೊಡಲ್ಪಟ್ಟವೆ:

೧. ಅಪ್-ಟು-ಡೇಟ್ ಅಮ್ಮಯ್ಯ
೨. ಮದುವೆಯವರಾರು ಅಥವಾ ಸಪ್ತಪದಿ
೩. ನವಚದುರಂಗ
೪. ಅಮ್ಮಯ್ಯನ ಆಟಂಬಾಂಬ್ ಮತ್ತು ಪ್ರಮೀಳೆಯ ಪಾರ್ಲಿಮೆಂಟ್
೫. ವಾಸಂತಿಯ ತಂತ್ರ ಮತ್ತು ಸಿಂಧೀ ಡ್ರೆಸ್
೬. ಗಂಡನಿಗಾಗಿ ಗುದ್ದಾಟ
೭. ಭಾರತರತ್ನ ಜವಾಹಿರ್.

* ಏಳಿ ಎದ್ದೇಳಿ: ಲೇಖಕರು: ಶ್ರೀ ರಂ. ರಾ. ನಿಡಗುಂದಿ, ಗುರುಕುಲ, ಕುಕನೂರು; ಸೈಜು ೧/೮ ಫುಲ್‌ಸ್ಕೇಪ್; ಪುಟ ೨೫; ಬೆಲೆ ೨೫ ನ.ಪೈ.

ಶೋಭನ ನಾಮ ಸಂವತ್ಸರದ ಸುರಪುರದ ಶ್ರೀ ಭುವನೇಶ್ವರೀ ಪಂಚಾಂಗ: ಸಂಪಾದಕರು: ಶ್ರೀ ಎಂ. ಆರ್. ಬುದ್ಧಿವಂತಶೆಟ್ಟಿ, ಬುಕ್ ಸೆಲರ್, ರಂಗಂಪೇಟೆ, (Via) ಯಾದಗಿರಿ, ಸೆಂಟ್ರಲ್ ರೈಲ್ವೆ; ಪುಟ ೯೮; ಬೆಲೆ ರೂ. ೧.

ಮಾದರ ಚೆನ್ನ: ಲೇಖಕರು: ಶ್ರೀ ಸ್ವಾಮಿ ಮಹಾಮನೆ; ಪ್ರಕಾಶಕರು: ಮಹಾಮನೆ ಪ್ರಕಟನಾಲಯ, ಮೈಸೂರು-೪; ಸೈಜು ೧/೮ ಕ್ರೌನ್; ಪುಟ ೩೮; ಬೆಲೆ ರೂ. ೧.

ವಿಚಾರ ವಲಯಗಳು: ಲೇಖಕರು: ಪ್ರೊ॥ ಸಚ್ಚಿದಾನಂದ ಶಿರೋಡಕರ; ಪ್ರಕಾಶಕರು: ವಿಕಾಸ ಪ್ರಕಾಶನ, ಅಂಕೋಲೆ (ಉ. ಕ.); ಸೈಜು ೧/೮ ಕ್ರೌನ್; ಪುಟ ೧೨೬; ಬೆಲೆ ರೂ. ೧-೫೦ ನ.ಪೈ.

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತವೆ.

Reg. No. B. G. 4—April 1963
Licensed to Post without pre-payment. License No 1

# ಕನ್ನಡ ನುಡಿ ಬೆಳ್ಳಿಯ ಸಂಚಿಕೆ

## ಕನ್ನಡಿಗರಿಗೆ ಸಾಹಿತ್ಯ ಪರಿಷತ್ತಿನ ಉತ್ತಮ ಕೊಡುಗೆ

**ಕನ್ನಡ ಸಾಹಿತ್ಯದ ವಿವಿಧ ಮುಖಗಳ ಕಾಲು ಶತಮಾನದ ಬೆಳವಣಿಗೆಯ ವಿಹಂಗಮ ನೋಟ!**
**ಕನ್ನಡ ನಾಡಿನ ಸುಪ್ರಸಿದ್ಧ ಸಾಹಿತಿಗಳು ಉಣಬಡಿಸುವ ಸಾಹಿತ್ಯದ ರಸದೂಟ!**

## ಬೆಳ್ಳಿ ಸಂಚಿಕೆಯ ವೈಶಿಷ್ಟ್ಯಗಳು!!

ಸುಪ್ರಸಿದ್ಧ ಸಾಹಿತಿಗಳಾದ ಸರ್ವಶ್ರೀ ತೀ. ನಂ. ಶ್ರೀ., ಡಿ. ಎಲ್. ಎನ್., ತಿ. ತಾ. ಶರ್ಮ, ರಂ. ಶ್ರೀ. ಮುಗಳಿ, ಬಿ. ಎಸ್. ಶಾಸ್ತ್ರೀ, ಸು. ರಾಮರಾವ್, ಅ. ನ. ಕೃ., ಎಂ. ಮರಿಯಪ್ಪ ಭಟ್ಟ, ಎಸ್. ಎಸ್. ಮಾಳವಾಡ, ಆರ್. ಸಿ. ಹಿರೇಮಠ, ಎಂ. ವಿ. ಸೀತಾರಾಮಯ್ಯ, ಸಿದ್ಧಯ್ಯ ಪುರಾಣಿಕ, ಜಿ. ವೆಂಕಟಸುಬ್ಬಯ್ಯ, ಎನ್. ಕೆ. ಕುಲಕರ್ಣಿ, ಗ. ಸ. ಹಾಲಪ್ಪ, ಸುಂಕಾಪುರ, ಚೆನ್ನವೀರ ಕಣವಿ, ವೃಷಭೇಂದ್ರಸ್ವಾಮಿ, ದೇಶಿಕಾಚಾರ್ಯ, ಆರ್. ಎಲ್. ನರಸಿಂಹಯ್ಯ, ಬಿ. ಎಚ್. ಶ್ರೀಧರ, ಎಲ್. ಎಸ್. ಶೇಷಗಿರಿರಾವ್, ಕೆ. ಗೋಪಾಲಕೃಷ್ಣರಾವ್, ಎನ್. ಬಸವಾರಾಧ್ಯ, ಜಿ. ವರದರಾಜರಾವ್, ಕೆ. ನರಸಿಂಹ ಮೂರ್ತಿ, ಕೆ. ಎಂ. ಕೃಷ್ಣರಾವ್, ಚಂದ್ರಶೇಖರ ಐತಾಳ, ಅ. ರಾ. ಮಿತ್ರ, ವೆಂಕಟೇಶಯ್ಯ, ಶಾಂತ ವೀರಯ್ಯ, ಚೌಡಪ್ಪ ರೆಡ್ಡಿ, ಕುಮಾರಿ ಚಿ. ನ. ಮಂಗಳ, ಶ್ರೀಮತಿ ಶಾಂತಾದೇವಿ ಮಾಳವಾಡ, ಮೊದಲಾದ ವರ ವಿದ್ವತ್‌ಪೂರ್ಣ ಲೇಖನಗಳಿಂದಲೂ, ಮತ್ತು ಸಂಸ್ಕೃತಿ ಹಾಗೂ ಕಲಾವೈಭವವನ್ನು ಪ್ರತಿಬಿಂಬಿಸುವ ಚಿತ್ರಗಳಿಂದಲೂ ಶೋಭಿಸುವುದು ಬೆಳ್ಳಿ ಸಂಚಿಕೆ.

**ಆಕಾರ ಕ್ರೌನ್ ೧/೪ ಪುಟಗಳು ಸು. ೧೫೦ ಬೆಲೆ ರೂ. ೨-೦೦**

**ಪರಿಷತ್ತಿನ ಸದಸ್ಯರಿಗೂ** ಮತ್ತು ಪುಸ್ತಕ ವ್ಯಾಪಾರಿಗಳಿಗೂ ಪರಿಷತ್ತಿನ ಇತರ ಪ್ರಕಟಣೆಗಳಿಗೆ ನೀಡಲಾಗುತ್ತಲಿರುವ ಶೇಕಡಾ ೨೫ ರಂತೆ ರಿಯಾಯಿತಿಯನ್ನು ನೀಡಲಾಗುವುದು.

## ಜಾಹೀರಾತುಗಳನ್ನು ಕೊಡಲು ವ್ಯಾಪಾರಿಗಳಿಗೆ ಇದು ಶ್ರೇಷ್ಠ ಮಾಧ್ಯಮ

**ಜಾಹೀರಾತು ದರಗಳು :**

**ರಕ್ಷಾಪುಟಗಳು:**
ಕೊನೆಯ ಪುಟ: ೨೫೦ ರೂ. (ವರ್ಣಗಳಲ್ಲಿ)
೨ ಮತ್ತು ೩ ಪುಟ: ೨೦೦ ರೂ. (ವರ್ಣಗಳಲ್ಲಿ)

**ಒಳಪುಟಗಳು:**
ಪೂರ್ಣಪುಟ: ೧೨೫ ರೂ.
ಅರ್ಧಪುಟ: ೭೫ ರೂ.
ಕಾಲುಪುಟ: ೪೫ ರೂ.

ಮುಂಗಡ ಹಣ ಕಳುಹಿಸಿ ನಿಮ್ಮ ಪ್ರತಿಯನ್ನು ಕಾಯ್ದಿರಿಸಿಕೊಳ್ಳಿ

ವಿವರಗಳಿಗೆ ಬರೆಯಬಹುದು

**ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮.**

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಬೆಂಗಳೂರು-೧೮.





# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೬]    ಸಂಪಾದಕರು: ಅನ್ನದಾನಯ್ಯ ಪುರಾಣಿಕ, ಬಿ.ಕಾಮ್., ಎಲ್‌ಎಲ್.ಬಿ.    [ಸಂಚಿಕೆ ೫


## ವಸಂತ ಸಾಹಿತ್ಯೋತ್ಸವ



ಪರಿಷತ್ತು ಏರ್ಪಡಿಸಿದ್ದ ವಸಂತ ಸಾಹಿತ್ಯೋತ್ಸವವನ್ನು ಮೈಸೂರು ಪ್ರಧಾನ ನ್ಯಾಯಾಸ್ಥಾನದ ಮುಖ್ಯ ನ್ಯಾಯಾಧೀಶರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಏ. ೧೪ ರಂದು ಆರಂಭಮಾಡಿದರು. ಗೃಹಮಂತ್ರಿ ಶ್ರೀ ಆರ್. ಎಂ. ಪಾಟೀಲರು ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದಲ್ಲಿ ತೆಗೆದ ಚಿತ್ರವಿದು. ಇದರಲ್ಲಿ ಈ ಈರ್ವರು ಮಹನೀಯರನ್ನೂ, ಪರಿಷತ್ ಅಧ್ಯಕ್ಷರನ್ನೂ, ಅಂದಿನ ಭಾಷಣಕಾರರಲ್ಲೊಬ್ಬರಾದ ಪ್ರಾಧ್ಯಾಪಕ ಶ್ರೀ ಸ. ಸ. ಮಾಳವಾಡರು ಭಾಷಣಮಾಡುತ್ತಿರುವುದನ್ನೂ ಕಾಣಬಹುದು.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

# ವಿಷಯ ಸೂಚಿಕೆ







ಸಂಪುಟ ೨೬ ] ಮೇ ೧೯೬೩ [ ಸಂಚಿಕೆ ೫

## "ಮೊಳಗಲಿ ಮೊದಲೇ ರಣಭೇರಿ"

ಶ್ರೀ ಐ. ಎಂ. ಮುತ್ತಣ್ಣ

೧

ಏಳಿರಿ ನಡೆಯಿರಿ ನಾಡಿನ ಗೆಳೆಯರೆ
ಕೈದುಗಳೇರಿಸಿ ನಡೆಯಿರಿದೊ
ಹಿಮರಾಜನ ಸನಿಹದೆ ಸುಳಿಯುತ ಬರುತಿಹ
ವೈರಿಗಳನು – ಇದೆ ಬಡಿಯಿರಿದೊ
ಎದ್ದೇಳಿರಿ ಕನ್ನಡಿಗರೆ!
ಭಾರತ ಕಡುಗಲಿ ಸೋದರರೆ!!

೨

ಮರೆತೆವು ನಾವೇ ನಮ್ಮೀ ದೇಶವ
ಬಳಸುತ ನಿಂತಿಹ ವೈರಿಗಳ
ಹಿಗ್ಗಿದೆವೊ ನಾವ್ ಸ್ವಾತಂತ್ರ್ಯದ ಬೆರಗಲಿ
ಬೀರುತ ಹೆಮ್ಮೆಯ ಬಲ್ಮೆಗಳ;
ಉಬ್ಬಿದೆವೊ ಆಲಸ್ಯದಲಿ,
ದೇಶದ ಭದ್ರತೆ ಮರೆಯುತಲಿ!

೩

ಧಾವಿಸಿದರು ಆ ಹಿಮವತ್ಪರ್ವತ
ಗೋಡೆಯ ಕೆಡಹುತ ಚೀನಿಜನ;
ನುಗ್ಗಿದರಿಕ್ಕಡೆ ಕಣಿವೆಗಳಿರುಕಲಿ
ಬಿರುಕನು ಬಿಡಿಸುತ ವೈರಿಗಣ!
ಬಂದರು ಧಾವಿಸಿ ಎದ್ದೇಳಿ,
ಎಚ್ಚೆತ್ತೇಳಿರಿ – ಇದೊ ಕೇಳಿ!

೪

ಉತ್ತರ ಪಶ್ಚಿಮ ರಾಷ್ಟ್ರಗಳಾ ಜನ
ಒಬ್ಬರಿಂದೊಬ್ಬರು ಸಾಲಾಗಿ,
ವರ್ಷಸಹಸ್ರವೀ ತೆರದಲಿ ಬಂದರು
ಬಂದರು ಸುಲಿದರು ಎಡೆಸಾಗಿ;
ಯವನರು ಹೂಣ ಮಂಗೋಲರದೊ!
ಮೊಗಲರು ಆಂಗ್ಲರು – ಚೀನಿಯರೊ!

೫

ಭಾರತ ಅಂದಿಗು ಇಂದಿಗು ಇದೆ ಬಗೆ,
ಏನಿದು ದುರ್ಮ್ಯಾನದ ಪರಿಯೊ,
ಕೆಡಹುತ ಹೆಮ್ಮೆಯ ಪೊಂದುತ ಬಲ್ಮೆಯ
ಒಂದಾಗುತ ಇದೊ ನೀವ್ ನಡೆಯೊ;
ಢಮರಿನ ನಾದಕೆ ಎದ್ದೇಳಿ,
ಕಹಳೆಯ ಕಲರವವನು ಕೇಳಿ!

೬

ಮಾನಸರೋವರ ಗೌರೀ ಶಂಕರ
ಜಡಗಂಗಾದಿ ಕ್ಷೇತ್ರಗಳೊ!
ವೇದಋಷಿಗಣ ಸ್ಫೂರ್ತಿಯ ನೆಲೆ ವನ,
ಭಾರತ ಶಿರದಾ ಮುಕುಟ ವನ!
ಹಿಮಗಿರಿ ತರುಲತೆ ಕ್ಷೇತ್ರವನ!
ಭಾರತ ಸಂಸ್ಕೃತಿ ಪುಣ್ಯ ಬನ!!

೭

ಎದ್ದೇಳಿರೊ ಈ ಧರ್ಮದ ಯುದ್ಧಕೆ,
ಕರ್ಮಭೂಮಿಯಿದ ಪೊರೆಯಲಿಕೆ;
ಸಮತಾವಾದದ ದ್ರೋಹದ ವಾದವ
ಹಿಮಗಿರಿ ತಳದಲಿ ಹೂಳಲಿಕೆ;
ಡಂ ಢಂ ಆರ್ಭಟದಲಿ ಕೆರಳಿ,
ಭೋ ಭೋ ವೆನ್ನುತ ಜೆರಸುತಲಿ!

೮

ಬಿರಸುತ ಕಾದುತ ಹಿಮಗಿರಿ ಉನ್ನತ
ಶೃಂಗಗಳೇರುತ ವೈರಿಗಳ;
ಸದೆ ಬಡಿದಟ್ಟುತ ಜನ ಒಂದಾಗುತ
ಕಾಯುತ ನಾಡನು ಉದ್ದಗಲ;
ಆಸೇತು ಜನ ಏಳಿರಿದೊ,
ಏಳಿರಿ ಹುಮ್ಮಸ ತಾಳಿರಿದೊ!

೯

ನಾಡಿನ ಧರ್ಮವ ದೈವವ ದೇಗುಲ-
ಗಳನಿದೊ ರಕ್ಷಿಸೆ- ಈ ಸಮರ,
ಭಾರತ ಸಂಸ್ಕೃತಿ ಕಲೆಸಿರಿ ವೈಭವ-
ಗಳನಿದೊ ಉಳಿಸಲು ಈ ಸಮರ,
ಸನಾತನ ಚೇತನ ಶಕ್ತಿಗಳ;
ಕರ್ಮಭೂಮಿಯ ತತ್ವಗಳ!

೧೦

ಸಮತಾವಾದದ ವಿಷಮಯ ಗಾಳಿಯು
ಸುಳಿಸುಳಿದಾಡುತ ಬೀಸುವುದು,
ಭಾರತ ಭೂಮಿಯ ಆ ಅಲೆ ಸುಳಿಯಲಿ
ಸಿಕ್ಕಿಸಿ ತೇಲಿಸಿ ಹಾಯುವುದು,
ಬರುತಿದೆ ಎಚ್ಚರ- ಸುಂಟರಗಾಳಿ,
ಹಿಮವತ್ಪರ್ವತದಾಚೆಯಲಿ.

೧೧

ವೈಭವದಾಯುಗದಂದಿನ ಚೀನಾ
ಸಂಸ್ಕೃತಿ ಧರ್ಮಗಳಿಂದಿಲ್ಲ.
ಬೌದ್ಧಿಕ ತತ್ವದ ಸೆಲೆಯಲಿ ಮುಳುಗಿದ
ಅಂದಿನ ರಾಷ್ಟ್ರವದಿಂದಿಲ್ಲ!
ಎಲ್ಲವು ನೀರಸ ನಿರ್ಬಲವು;
ಸಮತಾವಾದದ ಕಹಿಗೆಲುವು!

೧೨

ಆಧುನಿಕಾ ಬಲ ಯಾಂತ್ರಿಕ ಶಕ್ತಿ
ಮಿಲಿಯಾಂತರ ಆ ಜನಶಕ್ತಿ,
ಇದರಿಂ ಕೊಬ್ಬುತ ನ್ಯಾಯವ ದಬ್ಬುತ
ಚೀನಿಯರದೊ ಈ ಕಡುಯುಕ್ತಿ-
ಗಳನಿದೊ ತೋರಲು- ಎದ್ದೇಳಿ!
ನಾಡನು ಕಾಯುವ ಗೆಲುತೋರಿ!!

೧೩

ನಡೆಯಲಿ ಕುರುಕ್ಷೇತ್ರದಾಪರಿ ಯುದ್ಧ
ಅಂಜಿದ ಪಾರ್ಥನು ಮುಗಿಸಿದ ಯುದ್ಧ!
ಧರ್ಮಕ್ಷೇತ್ರವೀ ಭಾರತ ಸಿದ್ಧ
ಅಧರ್ಮವ ತುಳಿವುದೆ ಶತಸ್ಸಿದ್ಧ!
ನಡೆಯಲಿ ಧರ್ಮದ ಯುದ್ಧವಿದು
ಮೆರೆಯಲಿ ದೇಶ ಪ್ರಸಿದ್ಧವಿದು

೧೪

ಧರ್ಮಕೆ ಜಯವೊ ಸತ್ಯಕೆ ನಿಲುವೊ
ಸತ್ವಪರೀಕ್ಷೆಯ ಮಾಡುವಿರಿ.
ಭಾರತ ಬದುಕೊ ಚೀನಿಯ ದುಡುಕೊ
ನ್ಯಾಯವು ಯಾವುದು ನೋಡುವಿರಿ!
ಏಳಿರಿ ಇಂದೀಗಲೆ ರಣಕೆ
ಜನ್ಮಭೂಮಿಯಿದ ಕಾಯಲಿಕೆ!

೧೫

ಜಯಭೇರೀಯದೊ ಮೊಳಗುತ ಕರೆವುದು,
ಜಯವದು ಎಮ್ಮದು - ಇದೊ ಮೊದಲೆ!
ಸತ್ಯಕೆ ನ್ಯಾಯಕೆ ಭಾರತ ಧರ್ಮಕೆ
ಜಯವಲ್ಲದಿನ್ನಾವುದಕೆನ್ನುತಲೆ,
ಮೊಳಗಲಿ ಮೊದಲೇ ರಣಭೇರಿ,
ಅದೆ ಸಂಕೇತವು - ಜಯಭೇರಿ!

# ಇತಿಹಾಸಪ್ರಸಿದ್ಧ ನಗರ ಬನವಾಸಿ

ಶ್ರೀ ಜಿ. ಎನ್. ಹೆಗಡೆ, ಅಲೇಸರ.

'ನೆನೆವುದೆನ್ನ ಮನಂ ವನವಾಸಿ ದೇಶಮಂ' ಎಂದು ಮಹಾಕವಿ ಪಂಪ ಹಾಡಿ ಹೊಗಳಿದ ಬನವಾಸಿಯು ಉತ್ತರ ಕನ್ನಡ ಜಿಲ್ಲೆಯ ಮುಖ್ಯ ಪಟ್ಟಣವಾದ ಶಿರಸಿಯಿಂದ ಹದಿನಾಲ್ಕು ಮೈಲು ದೂರದಲ್ಲಿದೆ. ಇತಿಹಾಸ ಪ್ರಸಿದ್ಧವಾದ ಈ ಕ್ಷೇತ್ರವು ಕದಂಬರ ನಾಡೆಂದು ಪ್ರಸಿದ್ಧವಾಗಿದೆ. ಇಲ್ಲಿಯ ಪ್ರಕೃತಿ ಸೌಂದರ್ಯಕ್ಕೆ ಮರುಳಾದ "ಪಂಪಕವಿ, ಮರಿಕೋಗಿಲೆಯಾಗಿ ಪುಟ್ಟಿ" ಈ ವನದಲ್ಲಿ ಹಾಡಿ ನಲಿಯಬೇಕೆಂದು ಬಯಸಿದ್ದಾನೆ.

೧೪ ನೇ ಶತಮಾನದಲ್ಲಿ ಬನವಾಸಿಯು ವಿಜಯನಗರದ ಆಧಿಪತ್ಯಕ್ಕೆ ಒಳಪಟ್ಟಿತ್ತೆನ್ನುವುದು ಕೆಲ ಐತಿಹಾಸಿಕ ದಾಖಲೆಗಳಿಂದ ಸ್ಥಿರಪಡುತ್ತದೆ. ೧೫ ನೇ ಶತಮಾನದಲ್ಲಿ ಸದಾಶಿವರಾಯನಿಂದ ಬರೆಯಿಸಲ್ಪಟ್ಟ ಶಿಲಾಲೇಖಗಳಿಂದ ಇದು ದೃಢಪಡುತ್ತದೆ.

## ಬನವಾಸಿ– ಸ್ವಾದೆ ಸಂಬಂಧ

ಬನವಾಸಿಯು ಮತ್ತು ಸ್ವಾದೆ ರಾಜಮನೆತನದ ಮಧ್ಯೆ ತೀರಾ ಸಂಪರ್ಕವಿದ್ದಿತು. ಬನವಾಸಿಯು ವಿಜಯನಗರದ ಆಳ್ವಿಕೆಯ ಬಳಿಕ ಸ್ವಾದೆ ರಾಜರ ಆಡಳಿತಕ್ಕೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ. ಒಂದು ದೊಡ್ಡ ಸಭಾಮಂಟಪದಲ್ಲಿ ಕಟ್ಟಲ್ಪಟ್ಟಿರುವ ಶ್ರೀ ಮಧುಕೇಶ್ವರ ದೇವಾಲಯದಲ್ಲಿರುವ ಕಲ್ಲುಮಂಚವೊಂದನ್ನು ಸ್ವಾದೆಯ ರಘುರಾಜರು ಕೆತ್ತಿಸಿ ಕೊಟ್ಟಿದ್ದ ಅದರ ಬಗ್ಗೆ ಸಂಸ್ಕೃತದಲ್ಲಿದ್ದ ಉಲ್ಲೇಖದ ಕನ್ನಡ ಅರ್ಥ ಹೀಗಿದೆ:

ಶ್ರೀ ವಿಭವ ಸಂವತ್ಸರದ ಶಿಶಿರ ಋತು ಮಾಘ ಮಾಸದ ಕೃಷ್ಣ ಪಕ್ಷದ ಶಿವರಾತ್ರಿ ಬುಧವಾರ ಸೋದಾ ರಘುರಾಜರು ಕಲ್ಲು ಪಲ್ಲಂಗವನ್ನು ವಸಂತ ಋತುವಿನಲ್ಲಿ ಜರುಗುವ ರಥೋತ್ಸವ ಕಾಲದಲ್ಲಿ ಉತ್ಸವಮೂರ್ತಿಯನ್ನು ಕೂಡ್ರಿಸಿ ಅಷ್ಟಾವಧಾರ ಪೂಜೆಯನ್ನು ನಡೆಸುವ ಬಗ್ಗೆ ಶ್ರೀ ಜಯಂತೀ ಮಠಾಧೀಶರಾದ ಶ್ರೀ ಮಧುಕೇಶ್ವರ ದೇವರಿಗೆ ಕೊಟ್ಟಿದ್ದು.

ಈ ಮೊದಲು ಜಯಂತೀಪುರವೆಂಬ ಹೆಸರಿನಿಂದ ಬನವಾಸಿ ಕರೆಯಲ್ಪಡುತ್ತಿತ್ತೆನ್ನುವುದಕ್ಕೆ ಇದರಲ್ಲಿ ದಾಖಲೆ ಇದೆ. ಇಂಥಾ ಲೇಖಗಳು ಈ ದೇವಸ್ಥಾನದ ಆವಾರದಲ್ಲಿ ಅನೇಕ ಶಿಲಾ ಇರುತ್ತದೆ.

## ಅಂತರ್‌ರಾಷ್ಟ್ರೀಯ ಖ್ಯಾತಿ

ಬನವಾಸಿಯ ಮಧುಕೇಶ್ವರ ದೇವಾಲಯವು ಪುರಾಣ ಕಾಲದಿಂದಲೂ ಪ್ರಸಿದ್ಧಿ ಪಡೆದಿದೆ. ಪ್ರಾಚೀನ ಕಾಲದ ಶಿಲ್ಪಕಲೆಯ ವೈಭವಕ್ಕೆ ಈ ದೇವಾಲಯ ಒಂದು ಅತ್ಯುತ್ತಮ ಕುರುಹಾಗಿದೆ. ಕನ್ನಡ ನಾಡಿನ ಇತಿಹಾಸ ಪ್ರಸಿದ್ಧವಾದ ಸ್ಥಳಗಳಲ್ಲಿ ಬನವಾಸಿಯೂ ಒಂದಾಗಿದೆ.

೧೦ ನೇ ಶತಮಾನದ ಅರಬ್ ಪ್ರವಾಸಿ ಅಲ್ ಬರೂನಿ ಎನ್ನುವವರು ಬನವಾಸಿಯನ್ನು ಸಂದರ್ಶಿಸಿದ್ದು ತಮ್ಮ ಪ್ರವಾಸೀ ಗ್ರಂಥದಲ್ಲಿ ಅವರು ಬನವಾಸಿಯ ಆ ಕಾಲದ ವೈಖರಿಯನ್ನು ಉಲ್ಲೇಖಿಸಿದ್ದಾರೆ!

ಅರಬ್ ಪ್ರವಾಸಿಗರಲ್ಲಿ ಪ್ರಸಿದ್ಧರಾದ ಇಬ್ನ್ ಬತೂತ್ ಎಂಬವರ ಕಾಲದಲ್ಲಿಯೂ ಬನವಾಸಿ ಸಾಕಷ್ಟು ಪ್ರಖ್ಯಾತಿ ಪಡೆದಿತ್ತೆಂದು ತೋರುತ್ತದೆ. (ಇಬ್ನ ಬತೂತ್‌ರು ತಮ್ಮ "ರಿಹ್ಲಾ"ದಲ್ಲಿ ಉಲ್ಲೇಖಿಸಿರುವ "ಹೇಲಿ" ಹುಲೇಕಲ್ ಆಗಿರಬಹುದೆ?) ಈಜಿಪ್ಟ್‌ನ ಪ್ರವಾಸಿ ಪ್ಲೋರಿಮಿಯವರೂ ೧೦ ನೇ ಶತಮಾನದ ಪೂರ್ವಾರ್ಧದಲ್ಲಿ ಬನವಾಸಿಯನ್ನು ಸಂದರ್ಶಿಸಿದ ಬಗ್ಗೆ ಅವರ ಗ್ರಂಥದಲ್ಲಿ ಉಲ್ಲೇಖವಿದೆ.

## ಮಯೂರವರ್ಮನ ಕಾಲದಲ್ಲಿ

ಹುಬ್ಬಾಸಿಕನ ತರುವಾಯ ಆಳಿದ ವೀರಬಾಹು ಬಹಳ ಪರಾಕ್ರಮಿಯಾಗಿದ್ದ. ಆತನ ದರ್ಪ ಚಂಡಬಾಹು ಹಾಗೂ ಮಯೂರವರ್ಮನ ಮೇಲೆ ಬಹಳವಾಗಿ ಬಿದ್ದಿದ್ದಿತು. ವೀರಬಾಹು ಬಹಳ ಪರಾಕ್ರಮಿಯಾಗಿದ್ದನಲ್ಲದೆ ಈಗಿನ ದೇವಿಮನೆ ಘಟ್ಟದ ಮಾರ್ಗದಲ್ಲಿ (ಕುಮಟಾ ಶಿರಸಿ ರಸ್ತೆ) ಇರುವ ದೇವಿ ಮೂರ್ತಿ ಅವನ ಆರಾಧ್ಯ ದೇವರಾಗಿತ್ತು. ಆತ ಮಹಾನ್ ದೇವಿ ಭಕ್ತನೂ ಆಗಿದ್ದನು. ಆ ಕಾಲದಲ್ಲಿ ವೀರಬಾಹುವಿನ ಪರಾಕ್ರಮ ನೋಡಿ ಚಂಡವರ್ಮ ಹಾಗೂ ಮಯೂರವರ್ಮರಿಬ್ಬರೂ ದಿಗಿಲು ಬಿದ್ದು ತಮ್ಮ ಮುಂದಿನ ನಿಲುವೇನು ಎಂದು ಕುರಿತು ವಿಚಾರ ವಿನಿಮಯ ಮಾಡುವ ಬಗ್ಗೆ ತಮ್ಮ ತಮ್ಮ ಮಂತ್ರಿಮಂಡಲಗಳನ್ನು ಕೂಡಿಸಿ ಚರ್ಚೆ ಮಾಡಿದರು. ಮಯೂರವರ್ಮ ಹಾಗೂ ಚಂಡಬಾಹು ಇವರಲ್ಲಿ ಸ್ನೇಹದ ಒಪ್ಪಂದ ಅಂಗೀಕರಿಸಲ್ಪಟ್ಟು ಅವರು ಒಬ್ಬರಿಗೊಬ್ಬರು ದಾಳಿಯ ಕಾಲದಲ್ಲಿ ಪರಸ್ಪರ ಸಹಾಯ

ಮಾಡತಕ್ಕದ್ದೆಂದು ನಿಶ್ಚಯಿಸಿಯಾಯಿತು. ಹೀಗೆ ಕೆಲವು ಕಾಲ ಎಲ್ಲವೂ ನೆಮ್ಮದಿಯಿಂದ ಸಾಗಿತು. ಎಲ್ಲಾ ಕಡೆಯಲ್ಲೂ ಜನರ ಜೀವನದಲ್ಲಿ ಶಾಂತಿ, ಸುವ್ಯವಸ್ಥೆ ಗೋಚರಿಸುತ್ತಿತ್ತು.

ಹೀಗಿರುವಾಗ ಒಂದು ದಿವಸ ಮಯೂರವರ್ಮನ ಓಲಗಕ್ಕೆ ಉತ್ತರ ದಿಕ್ಕಿನಿಂದ ತೇಜಸ್ವಿಯಾಗಿ ಮಹಾನ್ ಪುರುಷರೊಬ್ಬರು ಅಕಸ್ಮಾತ್ತಾಗಿ ಪ್ರವೇಶಿಸಿದರು. ರಾಜನು ಗೌರವದಿಂದ ಅವರಿಗೆ ಸ್ವಾಗತ ಬಯಸಿ ತನ್ನ ಅತಿಥಿಯಾಗಿ ಉಳಿಯಬೇಕೆಂದು ಪ್ರಾರ್ಥಿಸಿದನು. ಅದಕ್ಕೆ ಆಗಂತುಕರು ಒಪ್ಪಿಗೆ ನೀಡಿ ರಾಜನ ಅರಮನೆಯಲ್ಲಿ ರಾಜನ ಆತಿಥ್ಯದಲ್ಲಿ ಕೆಲಕಾಲ ಉಳಿದರು. ಹೀಗೆ ಅವರ ಉಪಚಾರದಲ್ಲಿ ಯಾವ ಅಭ್ಯಂತರವೂ ಇಲ್ಲದೆ ನಡೆಯುತ್ತ ಬಂದು ರಾಜರಲ್ಲಿ ಹಾಗೂ ಆ ತೇಜಸ್ವಿಯಾದ ಅತಿಥಿ ಮಹಾನ್ ಪುರುಷರಲ್ಲಿ ಸ್ನೇಹ ಬೆಳೆಯಿತು. ಕೆಲವು ದಿವಸಗಳ ಬಳಿಕ ರಾಜನು ಕುಶಲ ಸಂಭಾಷಣೆಗಳ ಮಧ್ಯೆ ತನ್ನ ಸುಖದುಃಖಗಳನ್ನು ಅತಿಥಿಯೊಂದಿಗೆ ಹೇಳಿಕೊಳ್ಳಲಾಗಿ “ರಾಜನೇ ನೀನು ನನ್ನ ಮೊದಲನೇ ಸಲಹೆ ಕೇಳುವದಾದರೆ ನಿನ್ನ ರಾಜ್ಯದಲ್ಲಿ ಬ್ರಾಹ್ಮಣರನ್ನು ತಂದು ನಿನ್ನ ಕುಲದೇವರಾದ ಮಧುಕೇಶ್ವರ ಅರ್ಚನೆಯ ಕಾರ್ಯವನ್ನು ನಡೆಸು. ಹಾಗೂ ರಾಜಕೀಯದಲ್ಲಿ ಆಗಾಗ ಅವರ ಸಲಹೆ ಪಡೆದುಕೋ. ನಿನ್ನ ಎಲ್ಲಾ ಮನಃಕ್ಲೇಶಗಳೂ ದೂರಾಗಿ ನೆಮ್ಮದಿ ಆಗುತ್ತದೆ” ಎಂದು ಹೇಳಿದನು. ಆಗ ರಾಜನು “ಸ್ವಾಮಿಾ, ತಾವು ಕೊಡಿಸಿದ ಅಪ್ಪಣೆಯನ್ನು ಶಿರಸಾ ವಹಿಸುತ್ತೇನೆ” ಎಂದು ವಚನವಿತ್ತನು.

## ಬ್ರಾಹ್ಮಣರ ಆಗಮನ

ಆ ನಂತರ ರಾಜನು ತನ್ನ ಅತಿಥಿಯಾಗಿದ್ದಂತಹ ಬ್ರಹ್ಮಾನಂದರನ್ನು ಬೀಳ್ಕೊಟ್ಟು, ತಾನು ಉತ್ತರ ದಿಕ್ಕಿಗೆ ಪರಿವಾರ ಸಮೇತ ಪಯಣ ಹೊರಟು ನರ್ಮದಾ ತೀರಕ್ಕೆ ಬಂದು ಅಲ್ಲಿದ್ದ ಬ್ರಹ್ಮವೃಂದವನ್ನು ಪ್ರಾರ್ಥಿಸಲಾಗಿ ಕೆಲ ಕುಟುಂಬದವರು ರಾಜನ ಸಂಗಡ ಹೊರಡಲಿಕ್ಕೆ ಒಪ್ಪಿ ಪಯಣ ಹೊರಟರು. ಹೀಗೆ ರಾಜನು ಕೆಲವೇ ದಿವಸಗಳಲ್ಲಿ ತನ್ನ ರಾಜಧಾನಿಯಾದ ಬನವಾಸಿಗೆ ಬ್ರಾಹ್ಮಣರಿಂದೊಡಗೂಡಿ ಆಗಮಿಸಿದ ನಂತರ ಆ ಬ್ರಾಹ್ಮಣ ಕುಟುಂಬಗಳಿಗೆ ಕಾತೊಳ್ಳಿ ಎಂಬ ಭತ್ತ ಬೆಳೆಯುವ ಗ್ರಾಮವನ್ನು ಉಂಬಳಿಯಾಗಿ ಕೊಟ್ಟು ನೆಲೆಸುವಂತೆ ಮಾಡಿದನು. ಹೀಗೆ ಮಯೂರವರ್ಮನ ರಾಜ್ಯದ ರಾಜಧಾನಿಯಾಗಿದ್ದ ಬನವಾಸಿಯಲ್ಲಿ ಬ್ರಾಹ್ಮಣ ಕುಟುಂಬಗಳು ನೆಲೆಸಿದ ನಂತರ ಮಯೂರವರ್ಮನು ತನ್ನ ರಾಜ್ಯವಿಸ್ತರಣೆ ಹಾಗೂ ಅಭಿವೃದ್ಧಿಯತ್ತ ತೀವ್ರ ಗಮನ ಪೂರೈಸುತ್ತಿದ್ದನು. ರಾಜಧಾನಿಯಾದ ಬನವಾಸಿಯ ಊರ್ಜಿತ ಹಾಗೂ ವಿಸ್ತರಣೆಯ ಕಾರ್ಯದಲ್ಲಿ ಮಯೂರವರ್ಮನು ಬಹಳ ಆಸಕ್ತಿ ತೋರಿದನು. ಆಗಿನ ರಾಜಧಾನಿ ಬನವಾಸಿ ಹರದಾರಿ ಅಂದರೆ ಆರು ಮೈಲು ಸುತ್ತಲೂ ಹಬ್ಬಿತ್ತು. ಮುತಾಳಕೊಪ್ಪ, ಮಧುರಹಳ್ಳಿ, ಕನಕಾಪುರ ಇತ್ಯಾದಿ ಹೆಸರುಗಳುಳ್ಳ ಈಗಿನ ಹಳ್ಳಿಗಳು ಆಗಿನ ಕದಂಬರ ಕಾಲದ ರಾಜಧಾನಿಯಾದ ಬನವಾಸಿ ಶಹರಕ್ಕೆ ಇದ್ದ ಹೆಸರುಗಳಾಗಿವೆ. ಮುತಾಳಕೊಪ್ಪ ಅಂದರೆ ಮುತ್ತುಗಳನ್ನು ಮಾರುವ ಪೇಟೆ; ಮಧುರಹಳ್ಳಿ ಜೇನುತುಪ್ಪ ಮಾರುವ ಹಳ್ಳಿ. ಕನಕಾಪುರ ಬಂಗಾರ ಮಾರುವ ಸರಾಫ ಕಟ್ಟಿ. ಇವೆಲ್ಲಾ ಇವತ್ತಿಗೂ ಕುರುಹುಗಳು ಕಾಣಸಿಗುತ್ತವೆ. ಮತ್ತು ಎರಡು ಹರದಾರಿ ಅಂದರೆ ಬನವಾಸಿ ರಾಜಧಾನಿಯಿಂದ ೬ ಮೈಲಿಗೆ ಹೊರಸುತ್ತಿನ ಕೋಟೆ ಇದ್ದಿತು. ಈಗಲೂ ಅಲ್ಪಸ್ವಲ್ಪ ಅದರ ಕುರುಹು ನೋಡಸಿಗುತ್ತದೆ. ಅದರಂತೆ ಈಗಿನ ಮಧುಕೇಶ್ವರ ದೇವಸ್ಥಾನ ಮತ್ತು ಸುತ್ತಲೂ ಇದ್ದ ಮನೆಗಳ ಹೊರಬದಿಗೆ ಕೋಟೆ ಇದ್ದು, ಆ ಕೋಟೆಯ ಸುತ್ತಲೂ ವರದಾ ನದಿ ನೀರು ಬರುವಂತೆ ಖಂದಕ ಇದ್ದುದು ಸಹ ನೋಡಸಿಗುತ್ತದೆ.

## ಬನವಾಸಿಯ ಶಿಲಾಲೇಖದಲ್ಲಿ ಗೋವಾ

ಬನವಾಸಿಯಲ್ಲಿ ಇಂದು ಲಭ್ಯವಿರುವ ಕೆಲ ಶಿಲಾ ಲೇಖಗಳಲ್ಲಿ ವಿಜಯನಗರ ಮತ್ತು ಗೋವೆಗೆ ಸಂಬಂಧಿಸಿದಂತೆ ಕೆಲವು ಉಲ್ಲೇಖಗಳಿವೆ. ಈ ಕೆಳಗೆ ಕೊಡುವ ಮೊದಲ ಈ ಶಿಲಾಲೇಖವು ಶ್ರೀ ಮಧುಕೇಶ್ವರ ದೇವಸ್ಥಾನದ ಮುಖಮಂಟಪದ ಕಲ್ಲಿನಲ್ಲಿ ಕೆತ್ತಿಸಲಾಗಿದ್ದು ಇದು ವಿಜಯನಗರದ ಬುಕ್ಕರಾಯನ ಕಾಲದಲ್ಲಿ ಬರೆಸಲ್ಪಟ್ಟಿತೆಂದು ಹೇಳಲಾಗುತ್ತದೆ.

“ದಾನಪಾಲಿನ ಯೋರ್ಮಧ್ಯೆ ದಾನಾಚ್ಛ್ರೇ
ಯೋ ಪಾಲನಂ।
ದಾನಾತ್ ಸ್ವರ್ಗಮವಾಪ್ನೋತಿ ಪಾಲ
ನಾತ ಚ್ಯುತಂದಪದಂ॥
ಸಾಮಾನ್ಯೋಯಂ ಧರ್ಮಸೇತುರ್ನೃಪಾ
ಣಾಂ ಕಾಲೇ ಕಾಲೇ ಪಾಲನಿಯೋಭವದ್ಭಿ
ಸರ್ವಾನ್ ಏತಾನ್ ಭಾವಿನೀ ಪಾರ್ಥಿವೃಂ
ದಾನ ಭೂಯೋ ಭೂಯೋ ಯಾಚತೇ
ರಾಮಚಂದ್ರಃ॥
ಪ್ರಬುದ್ಧ ದೇವರಾಜಸ್ಯ ಕುಮಾರೇಣ
ಮುರಾರಿಣಾ ಲಿಖಿತಂ ಶಾಸನಮಿದಂ
ಮಧುಕೇಶ್ವರಸನ್ನಿದೌ ಶ್ರೀ। ಶ್ರೀ।
ಶ್ರೀ ನಮಸ್ತುಂಗ ಶಂಭವೇ॥

ಸ್ವಸ್ತಿ ಸಮಸ್ತದಿಗ್ಗತ ಪಂಚಮಹಾಶಬ್ದ ರಾಜಾಧಿರಾಜ ರಾಜ ಪರಮೇಶ್ವರ ತುರುಷ್ಕರಾಯ ಶಿರಃಕಂದುಕ ಕ್ರೀಡಾ ವಿನೋದ ಮಗಧರಾಯ ಮಾನಮರ್ದನ. ಆಂಧ್ರರಾಯ ಗಂಧ ಸಿಂಧುರ ಪಂಚಾನನ ಮಾಳವರಾಯ ಕಾಳೋರುಗ ಜಾತಿ ವೈತೇಯ ಬರ್ಬರೆ ರಾಯ ಚಕುಡುಬ್ಬಲಿಕರಣ ಕಾಂತೇಯ ಹಮ್ಮಿರ ರಾಯಾಂಧಕಾರ ನಿರ್ಮೂಲನ ಪುಮಃ ಕಿರಣ ಗೂರ್ಜರರಾಯ ಭೂರ್ಜಪಾದ ಸ್ವೋರ್ಜಿತ ಕಠಾರ ಕುಠಾರ ಚೋಳರಾಯ ಹೇಳಾಪಹರಣ ಬಾಳಲೋಚನ ಚೇರರಾಯ ವೀರಕುಂಜರ ಚಾರುಕಂಠೀರವ ಖರ್ಪರರಾಯ ಸರ್ಪರಾಜ ದರ್ಪೋಚ್ಚಾಟನ ಶಕುಂತಾಧಿಪ ನೇಪಾಳರಾಯ ಕೋಪಾಗ್ನಿನೇತ್ರ ಚತುಷ್ಟ ಮುದ್ರ ಮುದ್ರಾಂಕಿತ ನಿಜ ಶಾಸನ ಪಾಕಶಾಸನ ಪ್ರಮುಖದಿಗ್ದೇವತಾ ಮಧ್ಯಮ ಲೋಕ ಪಾಲ ಶ್ರೀಮದ್ ಬುಕ್ಕರಾಯ ಧನಾಧಿನಾಥ ತನೂಭವಸ್ವ ಕರವಿನಿಹಿತ ಶಾರ್ದೂಲ ಮೃಗ ಮೃಗಯಾ ವಿನೋದನ ಶ್ರೀ ಹರಿಹರೇಶ್ವರ ಹಸ್ತಿನಾಪುರಿಯಲ್ಲಿ [ಆನೆಗುಂದಿ] ಸುಖ ಸಂಕಥಾ ವಿನೋದದಿಂ ಪೃಥ್ವಿರಾಜ್ಯಂ ಗೈಯುತ್ತ ಮಿರಲು ತತ್‌ಪಾದ ತದ್ದೋಪಜೀವಿ ಶ್ರಮದಗಿರ ಕುಚ ಕಲಶ ಕುಂಕುಮಾಂಕಿತ ಲಸಿತ ವಕ್ಷಸ್ಥಲ ಚರಣಸರಸೀರುಗಲೋ ಉಂಭಮಾನ ಮತ್ತ ಮಧುಕರ ಶ್ರೈವಾಗನುವಾರಿಧಿವರ್ಧನ ಸುಧಾಕರ ಸ್ವಾಮಿಕಾರ್ಯ ಧುರಂಧರ ಆಂಜನೇಯ ದುರಾ ಮಾತ್ಯ ದುರ್ಮಯ ದುಃವಸನ ನಿಃಶೇಷಿಕೃತ ಭೀಮಸೇನ ಅಪ್ರತಿಹತ ಶಕ್ತಿಧರ ಅತರ್ಕಿತ ಪ್ರತಾಪ ರುಗ್ಯಜು ಸ್ಸಾಮಾಥರ್ವ ವೇದ ವೇದಾಂಗ ಕುಜಲಪಶ್ಚಿಮಪಾರಾವಾರ ಕಲಿತ **ಗೋವಾ ನಗರ ವಿರಾಜಮಾನರು** ಚಿರಸಿಂಹಾಸನ ಕುಂತಲ ವಿಶಯ ರಮ್ಯಮಾನ ಗೋಮಂತ ಶಿಖರಿ ಸಂನ್ನಿವೇಶ ವನವಾಸಿ ಪ್ರಮುಖ ದ್ವಾದಶಸಹಸ್ರಜನಪದೋಪೇತ ರಾಜ್ಯ ಗಿರಿ ಶಿಖರ– ಸಿಂಹ. . . .”

ಇದರ ಮುಂದೆ ಬರೆದಿರುವುದು ಹಾಳುಮಾಡಲ್ಪಟ್ಟಿದೆ. ಈ ಶಿಲಾಲೇಖವನ್ನು ನೋಡಿದರೆ ಗೋವಾ ಪ್ರಾಂತದಲ್ಲಿ ಆ ಕಾಲಕ್ಕೆ ಇದ್ದ ಅರಸನು ಇದನ್ನು ಬರೆಸಿರಬಹುದೆ ಎಂದೂ ತೋರುತ್ತದೆ. ಇವತ್ತಿಗೂ ಮಧುಕೇಶ್ವರ ದೇವರ ಬಂಗಾರದ ಮುಖ ಮಂಟಪವು ಗೋವೆಯಲ್ಲಿ ಹಾಲಿ ಇದ್ದ ಸೋಂದಾ ಅರಸರ ವಂಶಜರ ಹತ್ತಿರ ಉಂಟೆಂದು ಹೇಳುತ್ತಾರೆ. **ಗೋವಾ ಪ್ರಾಂತ ನಮ್ಮ ಕರ್ನಾಟಕದಲ್ಲೇ ಇದ್ದ ಬಗ್ಗೆ ಈ ಲೇಖನವು ಸಮರ್ಥನೆ ನೀಡುವುದಿಲ್ಲವೆ?**

## ಭಾವೈಕ್ಯದ ವಿಚಾರ

ವಿಜಯನಗರದ ಮೂಲಪುರುಷ ಶೈಲಂಕನಾಥನ ಮಗ ಸಂಗಮರಾಜನಿಗೆ ನಾಲ್ಕು ಜನ ಮಕ್ಕಳು. ಅದರಲ್ಲಿ ನಾಲ್ಕನೆಯವನಾದ ಮಾರಪದೊರೆ ೧೨ನೇ ಶತಮಾನದ ಉತ್ತರಾರ್ಧದಲ್ಲಿ ಆಳಿದವನು. ಈ ದೊರೆ ಅಷ್ಟೊಂದು “ಹಿಂದುಳಿದ” ಕಾಲದಲ್ಲೇ ರಾಷ್ಟ್ರೀಯ ಐಕ್ಯತೆಯನ್ನು ಮನ ಗಂಡಿದ್ದನೆಂದು ತೋರುತ್ತದೆ. ಈ ಕೆಳಗೆ ಕೊಟ್ಟಿರುವ ತಾಮ್ರಶಾಸನದ ಚಿತ್ರವನ್ನು ಗಮನಿಸಿದರೆ ಮಾರಪ ದೊರೆಯು ಭೂದಾನ ಕೊಡುವಾಗ ಅನುಸರಿಸಿದ ವಿಧಾನ, ಇದರಲ್ಲಿ ಬರುವ ಕೇರಳ, ಆಂಧ್ರ, ಮಹಾರಾಷ್ಟ್ರ ಮತ್ತು ಕರ್ನಾಟಕದ ಬ್ರಾಹ್ಮಣ ಮನೆತನಗಳಿಗೆ ಸೇರಿದ ವ್ಯಕ್ತಿಗಳು, ಧರ್ಮ, ನೀತಿ, ಮತ್ತು ಪುಣ್ಯಕ್ಷೇತ್ರಗಳ ಸಂರಕ್ಷಣೆಯಲ್ಲಿ ಆತನಿಗಿದ್ದಿದ್ದ ಅಗಾಧವಾದ ಕಳಕಳಿ ಆ ರಾಜನಲ್ಲಿದ್ದ ಮತ್ತು ಆ ಕಾಲದಲ್ಲಿದ್ದ ಸಂಸ್ಕೃತಿಯ ಪ್ರತಿಬಿಂಬವಲ್ಲವೇ?

ಈ ಪುರಾತನ ನಗರದ ಇತಿಹಾಸ ಸುಮಾರು ೨೦ ರಿಂದ ೨೨ ಶತಮಾನಗಳಷ್ಟು ಪೂರ್ವದ್ದಾಗಿದೆ. ೧೮ ನೇ ಶತಮಾನದ ಉತ್ತರಾರ್ಧದಲ್ಲಿ ಇಲ್ಲಿ ೨೦೦೦ ಜನಸಂಖ್ಯೆ ನೆಲೆಸಿದ್ದರಂತೆ! ಈಗಿನ ಜನಸಂಖ್ಯೆಯ ಪ್ರಮಾಣದ ಹೆಚ್ಚಳದಿಂದಲೂ, ಆಧುನಿಕ ಸಾಧನ, ಸಾಮಗ್ರಿಗಳ ಉಪಯೋಗದಿಂದಲೂ ಈ ಸಂಖ್ಯಾಪ್ರಮಾಣ ಅಷ್ಟೇನೂ ಮಹತ್ವದ್ದಲ್ಲದಿದ್ದರೂ ೧೮ ನೇ ಶತಮಾನದ ಕರ್ನಾಟಕದ ಚರಿತ್ರೆಯ ಚೌಕಟ್ಟಿನಲ್ಲಿಟ್ಟು ನೋಡಿದರೆ ಬನವಾಸಿ ಆ ಕಾಲಕ್ಕೆ ಎಷ್ಟು ದೊಡ್ಡ ನಗರ ವಾಗಿದ್ದಿರಬೇಕೆನ್ನುವದನ್ನು ಊಹಿಸಬಹುದು.

## ಅಂದು ಮತ್ತು ಇಂದು

ಬನವಾಸಿ ಒಂದು ಯಾತ್ರಾಸ್ಥಳವೆಂದು ಪರಿಗಣಿಸಲ್ಪಟ್ಟಿದೆ. ಇಲ್ಲಿಯ ಶ್ರೀ ಮಧುಕೇಶ್ವರ ದೇವಾಲಯವು ಐತಿಹಾಸಿಕ ಪ್ರಸಿದ್ಧವಾದುದು. ಈ ಶಿಲ್ಪಕಲಾ ಶಿರೋಮಣಿ ಜಕ್ಕಣಾಚಾರ್ಯನಿಂದ ನಿರ್ಮಿಸಲ್ಪಟ್ಟಿದೆಯೆಂದು ಹೇಳಲಾಗುತ್ತಿರುವ ಈ ದೇವಾಲಯವು ಪ್ರೇಕ್ಷಕರಲ್ಲಿ ಆನಂದವನ್ನು, ಭಕ್ತಿಯನ್ನು ಮೂಡಿಸುತ್ತದೆ. ಇಲ್ಲಿಯ ಕೆತ್ತನೆಯ ಕೆಲಸಗಳು, ಕಲ್ಲುಮೂರ್ತಿಗಳು “ಕೂಗುತಿದೆ ಕಲ್ಲು! ಕಿವಿವೆತ್ತ ಕಿವುಡರಿರ ಕೇಳಿ ಆ ಸೊಲ್ಲು” ಎಂಬ ಕವಿಯ ಸಾಲುಗಳನ್ನು ನೆನಪಿಗೆ ತರುತ್ತಿವೆ.

‘ವಾನವಾಸಿ, ವೈಜಯಂತಿ, ಜಯಂತಿ, ಎಂಬ ಹೆಸರಿನಿಂದ ಪ್ರಾಚೀನ ಕಾಲದಲ್ಲಿ ಬನವಾಸಿ ಮೆರೆದಿದ್ದಿತು. ಕೋಟೆ ಕೊತ್ತಲಗಳಿಂದಲೂ, ಮಂತ್ರಿ ಮಾಗಧರಿಂದಲೂ, ರಾಜವೀಧಿಗಳಿಂದಲೂ, ಸುತ್ತಲ ವನಸಿರಿಗಳಿಂದಲೂ ರಾರಾಜಿಸುತ್ತಿದ್ದ ಪಂಪನ ಆ “ಪೂತ ಪೊಬಳ್ಳಿ”ಗಳ ಕೋಗಿಲೆಯ ಇಂಪು ಗಾನದಿಂದ ಬೆಳದಿಂಗಳ ರಾತ್ರಿಯಲಿ ಇಂದ್ರನಗರಿಯಂತೆ ಕಂಗೊಳಿಸುತ್ತಿದ್ದ ಆ ‘ವನವಾಸಿ’

ಇಂದು 'ವನವಾಸಿ' ಎಂಬ ಪದದ ಕೋಮಲತೆಯನ್ನು ಕಳೆದುಕೊಂಡು ಅದರ ಇನ್ನೊಂದು ಕಠೋರ ಅರ್ಥದಲ್ಲಷ್ಟೆ ನಿಜವಾದ ವನಪ್ರದೇಶವಾಗಿ ಗತಕಾಲದ ವೈಭವವನ್ನು ನೆನೆಸಿ ಕಣ್ಣೀರು ಮಿಡಿಯುತ್ತ ಲಿದೆ– ಇಂದು. ನಮ್ಮನ್ನು ಕಂಡೊಡನೆ ಆ ಪ್ರಾಚೀನ ಶಿಲ್ಪಮೂರ್ತಿಗಳು ಜೀವ ತಳೆದು ತಮ್ಮ ದುರ್ದೆಸೆಯನ್ನು ಹೇಳಿದುಕೊಳ್ಳಲು ಹಾತೊರೆಯುತ್ತವೇನೋ ಎಂಬಂತೆ ಭಾಸವಾಗುತ್ತಲಿದೆ ಇಂದು. ಇಕ್ಕಟ್ಟಾದ ಅಲ್ಲಿಯ ಬೀದಿಗಳು, ಕೆಂಧೂಳಿಯನ್ನೆಬ್ಬಿಸುತ್ತಿರುವ ಅಲ್ಲಿಯ ರಸ್ತೆ, ಮಣ್ಣಿನದಿಯಲ್ಲಿ ಹೂತುಹೋಗಿರುವ ಎಷ್ಟೋ ಸುಂದರ ಶಿಲ್ಪಕೃತಿಗಳು ತಮಗೆ ಪ್ರಾಪ್ತವಾದ ದುರ್ಗತಿಯ ಕರುಣ ಕಥೆಯನ್ನು ನೆನೆಸುತ್ತ ಕಂಬನಿ ಮಿಡಿಯುತ್ತಿರುವಂತೆ ಭಾಸವಾಗುತ್ತದೆ. ಸ್ವರ್ಗೀಯ ಸನ್ನಿವೇಶವನ್ನು ಸೃಷ್ಟಿಸುತ್ತಿದ್ದ ಸುತ್ತಮುತ್ತಲ ವನ ತರುಲತೆಗಳು ಪೂತ ಪೂಬಳ್ಳಿಗಳು ಇಂದು ಬರಿಯ ಕಾಡುಪ್ರದೇಶವೆಂಬಂತೆ ಗೋಚರವಾಗುತ್ತಲಿದೆ. ಅದೃಷ್ಟ ಎನ್ನುವದು ಮನುಷ್ಯನಿಗೂ ಇರುವಂತೆ ಮಣ್ಣಿಗೂ ಇರಬಹುದೆನ್ನುವದಾದರೆ ಬನವಾಸಿಯ ಮಣ್ಣಿಗೆ ಈ ದುರದೃಷ್ಟವೆಂಬ ಪದ ಚೆನ್ನಾಗಿಯೇ ಅನ್ವಯಿಸುತ್ತದೆ. ಅಂದು ಮರಿ ಕೋಗಿಲೆಯಾಗಿಯಾದರೂ, ಕವಿ ಪಂಪ ಅಲ್ಲಿ ಹಾರಾಡಲು ಬಯಸಿದ್ದರೆ ಇಂದಿನ ಕವಿಗಳಿಗೆ ಬಸ್ಸಿನಲ್ಲಿ ಹೋಗಿಯಾದರೂ ಆ ಊರಲ್ಲಿ ಒಂದು ದಿವಸ ನೆಲೆಸುವದು ತಲೆ ಚಿಟ್ಟು ಹಿಡಿಸಬಹುದೇನೋ! .... ಅಂತೂ ಕಾಲ ಚಕ್ರದ ದವಡೆಗೆ ಸಿಲುಕಿ ಭೂಮಿ ಪ್ರದೇಶಗಳೇ ಹೀಗೆ ಮಾಪಾಡಾಗಬಹುದಾದರೆ ಅದರ ಸುಳಿವಿಗೆ ಸಿಕ್ಕ ಮನುಷ್ಯನ ಆಚಾರ ವಿಚಾರಗಳು ಬದಲಾಗುವದೇನೋ ಅಷ್ಟೊಂದು ಸೋಜಿಗವೆನಿಸಿಕೊಳ್ಳಲಾರದು. ಕಾಲಾಯ ತಸ್ಮೈ ನಮಃ!

ಬನವಾಸಿಯ ಕೀರ್ತಿ ಎಷ್ಟು ದೂರ ಹಬ್ಬಿತ್ತೆನ್ನುವದಕ್ಕೆ ಮತ್ತೊಂದು ಚಾರಿತ್ರಿಕ ಉದಾಹರಣೆ ಇದೆ. ಮಹಾ ಚಕ್ರವರ್ತಿಯಾದ ಅಶೋಕ ಬೌದ್ಧಧರ್ಮ ಪ್ರಸಾರಕ್ಕಾಗಿ ರಕ್ಷಿತಾ ಎಂಬ ಬೌದ್ಧ ಭಿಕ್ಷುಕನೊಬ್ಬನನ್ನು ಬನವಾಸಿಗೆ ಕಳುಹಿಸಿ ಕೊಟ್ಟಿದ್ದನೆನ್ನುವದು ಆ ಕಾಲದಲ್ಲಿ ಈ ಕ್ಷೇತ್ರಕ್ಕಿದ್ದ ಮಹತ್ತಿಕೆಯನ್ನು ತೋರಿಸುವದಿಲ್ಲವೆ! ....

ಆದರೆ ಇಂದು ....!

ಕೋಟೆ–ಪೇಟೆಗಳು ಮೆರೆದಿತ್ತೆಂಬರು
ರಾಜ್ಯಾಧೀಶರ ಕಾಲದೊಳು
ಬೇಟೆಯಾಡಲಿಕೆ ತಕ್ಕದಾಗಿಹುದು
ಪ್ರಜಾರಾಜ್ಯಾಡಳಿತದೊಳು

—ಎಂದು ಬನವಾಸಿಯ ಕುರಿತು ಕವಿ ಹಾಡಿದುದು ಅದರ ಇಂದಿನ ಯಥಾರ್ಥ ಚಿತ್ರಣವಾಗಿದೆ ಎನ್ನಬಹುದು.

['ಯುಗವಾಣಿ'ಯಿಂದ]

---

# ಉಡುತಡಿಯ ಮಹಾದೇವಿಯಕ್ಕನ ರಗಳೆ - ವಿಮರ್ಶೆ

## ಲೇಖಾಂಕ (೪)

ಶ್ರೀ ಶಾಂತಯ್ಯ ಕೆಂಪಯ್ಯಮಠ

(೧೯೬೩ ರ ಸೆಪ್ಟೆಂಬರ್ ಸಂಚಿಕೆಯಿಂದ ಮುಂದುವರಿದುದು)

"ಹರಪೂಜಾಸ್ತೋಮವೋ ಧೂರ್ಜಟಿಯ ಪರಮ
ಭಕ್ತ್ಯಂಗನಾ ಮೂರ್ತಿಯೋ ಶಂ।
ಕರಪಾರ ಜ್ಞಾನವಲ್ಲೀ ಕುಸುಮ ವಿಸರಮೋ
ಸರ್ವಸೌಂದರ್ಯ ರೂಪೋ।
ವರ ವೈರಾಗ್ಯ ಪ್ರದೀಪಾಂಕುರಮೋ ಬಗೆ ಎನಲ್
ಪೂಜೆಯಾನಂದದಿಂ ಸಾ।
ದರ ದಿಂದೊಪ್ಪಿರ್ದಳಾಹಾ ಉಡುತಡಿಯ
ಮಹಾದೇವಿಯಾಶ್ಚರ್ಯದಿಂದಂ ॥"

"ಭಕ್ತಿ" "ಸಾಕಾರ ಪೂಜೆ"ಗೆ ಅಗ್ರಸ್ಥಾನ ಕೊಟ್ಟ ಮಹಾಕವಿ ಹರಿಹರನಿಗೆ ಮಹಾದೇವಿಯಕ್ಕಳ ಪೂಜೆಯ ಚಿತ್ರ ಬರೆಯುವಲ್ಲಿ ಅನಂತ ಉತ್ಸಾಹ. "ಹರ ಪೂಜಾಸ್ತೋಮವೋ" "ಧೂರ್ಜಟಿಯ ಪರಮ ಭಕ್ತ್ಯಂಗನಾ ಮೂರ್ತಿಯೋ" "ಶಂಕರಪಾರಜ್ಞಾನ ವಲ್ಲೀ ಕುಸುಮ ವಿಸರವೋ" "ವೈರಾಗ್ಯ ಪ್ರದೀಪಾಂಕುರವೋ" ಎಂಬ ಪದಪುಂಜಗಳು ಅಕ್ಕನವರ ಅನುಪಮ ವ್ಯಕ್ತಿತ್ವಕ್ಕೆ, ಕವಿಯ ಅನ್ಯಾದೃಶ ಶೈಲಿಗೆ ಅಚ್ಚ ನಿದರ್ಶನಗಳಾಗಿವೆ. ಏಕಾಗ್ರಚಿತ್ತದಿಂದ ತ್ರಿಕರ್ಣಪೂರ್ವಕವಾಗಿ ಮಹಾದೇವಿಯಕ್ಕ ತನ್ನ ಜೀವನ ಪುಷ್ಪವನ್ನು ಚನ್ನಮಲ್ಲಿಕಾರ್ಜುನನ ಅಡಿದಾವರೆಗಳಲ್ಲಿ ಭಕ್ತಿಪುರಸ್ಸರದಿಂದ ಅರ್ಪಿಸುತ್ತಾಳೆ.

"ಹೊಳೆವ ಕೆಂಜೆಡೆಗಳ, ಮಣಿ ಮಕುಟದ, ಒಪ್ಪುವ ಸುಲಿಪಲ್ಲ, ನಗೆಮೊಗೆದ, ಕಂಗಳ ಕಾಂತಿಯಿಂ, ಈರೇಳು ಭುವನಮಂ ಬೆಳಗುವ ದಿವ್ಯಸ್ವರೂಪನ ಕಂಡೆ ನಾನು. ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು. ಗಂಡ ಗಂಡರನೆಲ್ಲ ಹೆಂಡ ಹೆಂಡಿರಾಗಿ ಆಳುವ ಗರುವನ ಕಂಡೆ ನಾನು. ಜಗದಾದಿಶಕ್ತಿಯೊಳು ಬೆರಸಿ ಒಡನಾಡುವ ಪರಮಗುರು ಚನ್ನಮಲ್ಲಿಕಾರ್ಜುನನ ನಿಲುವ ಕಂಡು ಬದುಕಿದೆನು" ಎಂದು ಗೀತಮಂಪಾಡಿ* (ವಚನವನ್ನು ಹಾಡಿ) ತನ್ನ ನಲ್ಲನನ್ನೊಲಿಸಲು ಜೀವನವನ್ನೇ ಮುಡಿಪಿಡುತ್ತಾಳೆ. ಅನುಭವವೇ ಅನುಕಂಪಪೂರ್ಣ ಮೃದುನುಡಿಗಳಾಗಿ–ಅಮೃತವಾಣಿ ರಸಸ್ಯಂದಿಯಾಗಿ ಗೀತಾರೂಪದಿಂದ ಪ್ರವಹಿಸಿದೆ. ಅಕ್ಕನವರ ಪೂಜಾನಿಷ್ಠೆ ವೈರಾಗ್ಯ ಪೆರ್ಮೆಯ ಪ್ರತೀತಿಗೆ ಶರಣಸಂಕುಳ ಆನಂದಾತಿರೇಕದಿಂದ ಅವರ ದರ್ಶನಾಕಾಂಕ್ಷಿಗಳಾಗಿ ತಂಡೋಪತಂಡದಿಂದ ಬರುತ್ತಾರೆ. ಕೌಶಿಕನ ರಾಜಾಂಗಣ ಶರಣಸಮೂಹದಿಂದ ಕಿಕ್ಕಿರಿಯುತ್ತದೆ.

"ರುದ್ರಾಕ್ಷಿ ಬನಮಂ ಬಳಸಿ ನಿಂದಂತೆ,
ಚಂದ್ರಮಂಡಲದ ಬೀಡು ಬಿಟ್ಟಂತೆ, ಬೆಳಗಿನ
ಬಳಗ ಒಬ್ಬುಳಿಸಿದಂತೆ, ಪುಣ್ಯದ ಮೊತ್ತ ಒತ್ತರಿಸಿದಂತೆ
ಭಾಗ್ಯದ ಬೆಳೆ ಫಲವಾದಂತೆ"—.

ಮಡಿವಂತಿಕೆಯ ಮಹಾವೀರನಾದ ಹರಿಹರನು ನಿಚ್ಚ ಮಾಹೇಶ್ವರರ ಶಕ್ತಿಯ ಪ್ರದರ್ಶನ ಅಚ್ಚಳಿಯದಂತೆ ಮಾಡಿದ್ದಾನೆ. ಮಹಾದೇವಿಯಕ್ಕನವರು ಮಹಾರಾಣಿಯೆಂಬ ಲೌಕಿಕತೆಯನ್ನು ಮರೆತು ಅವರ ದರ್ಶನಮಾತ್ರದಿಂದಲೇ ಹಿಗ್ಗಿ ಹೊರೆಯೇರಿ ಕಿಂಕರತೆಯಾಂತು ಸರ್ವವಿಧದ ಸೇವೆಗೆ ಟೊಂಕ ಕಟ್ಟುತ್ತಾರೆ. ಶರಣರ ಗೋಷ್ಠಿ ಸಿದ್ಧಗೊಳ್ಳುತ್ತದೆ. ಚಿರಂತನ ತತ್ವಗಳ ಚರ್ಚೆಗೆ ಆರಂಭವಾಗುತ್ತದೆ.

"ಭಕ್ತಿಯ ಬೀಜಂಗಳಂತಿರ್ದ ಪುರಾತನರ ಗೀತಂಗಳಂ
ಚಿತ್ತಭೂಮಿ-
ಯೊಳ್ ಬಿತ್ತಿ ಆನಂದಾಶ್ರುಗಳ ನೆರೆದು, ಪುಳಕದ
ಗೊಬ್ಬರಮನಿಕ್ಕಿ,

---

*ರಗಳೆಯುದ್ದಕ್ಕೂ ಅಲ್ಲಲ್ಲಿ ಬರುವ "ಗೀತಮಂಪಾಡಿ" ಎಂಬ ಶಬ್ದಗುಚ್ಛ ಅಕ್ಕನವರು ಹಾಡಿದ ಅನುಭವಪೂರ್ಣ ವಚನಗಳನ್ನು ನಿರ್ದೇಶಿಸುತ್ತದೆ. ಈ ವಚನಗಳಿಂದ ಅಕ್ಕನವರು ಶ್ರೇಷ್ಠವಾದ ವೀರಶೈವವನ್ನು ಚೆನ್ನಾಗಿ ತಿಳಿದಿದ್ದರೆಂದು ವ್ಯಕ್ತವಾಗುತ್ತದೆ. ಏಳು ಶೈವಭೇದಗಳಲ್ಲಿ "ಮಹಾಶೈವ"ವೂ ಒಂದೆಂದೂ ಅವರು ಅಲಿಂಗಿಗಳು ಮುಟ್ಟಿದ ಅನ್ನವನ್ನು ಉಣ್ಣುತ್ತಿದ್ದರೆಂದು ತಿಳಿದುಬರುತ್ತದೆ. ಅಕ್ಕನವರು ಮಹಾಶೈವರೆಂದೂ ಕೌಶಿಕನೊಡನೆ ಒಗೆತನ ಅಸಂಭವನೀಯವಲ್ಲವೆಂದೂ ಅಭಿಪ್ರಾಯ ಪ್ರಕಟವಾಗಿದೆ. ಕವಿ ತಾನು ಸ್ಥಾವರಲಿಂಗದಲ್ಲಿ ಭಕ್ತಿಯುಳ್ಳವನಾಗಿದ್ದುದರಿಂದ ಅಕ್ಕನವರು ಕಲ್ಯಾಣಕ್ಕೆ ಹೋದದ್ದನ್ನು ಕೈಬಿಟ್ಟಿದ್ದಾನೆ. ಆದರೆ ಅವರ ವಚನಗಳಿಂದ ಪ್ರಭಾವಿತನಾದದ್ದು ಅಲ್ಲಲ್ಲಿ ಕಂಡುಬರುತ್ತದೆ.

—ಉಡುತಡಿಯ ಮಹಾದೇವಿಯಕ್ಕನ ರಗಳೆಯ ಪೀಠಿಕೆ ಪುಟ ೧೦. ಅಕ್ಕನವರ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ಅರಿಯುವ ಹವ್ಯಾಸದಿಂದ ಅವರ ವಚನಗಳನ್ನು ಉದ್ಧರಿಸಲಾಗಿದೆ.

ಶಿವಜ್ಞಾನ ಶಶಿರವಿಗಳಿಂ ಬೆಳೆಯಿಸಿ, ಪ್ರಸಂಗ
ಕುಸುಮಮನಲರ್ಚಿಸಿ,
ಪರಿಣಾಮ ಫಲಮಂನೆಯ್ದಿ, ಗೀತಕಳೆ ವೃಕ್ಷಫಳರಸಮಂ
ಸವಿಸವಿದಾಗ-
ಳಾಗಳಿನ. . . . "

ಪುರಾತನರ ಗೀತೆಗಳ ಮಾನಸಕೃಷಿ ಅತ್ಯದ್ಭುತವೂ ಅತಿ ರಮ್ಯವೂ ಆಗಿದೆ. ಭಕ್ತಿಯ ಬೀಜ ಚಿತ್ತಭೂಮಿಯಲ್ಲಿ ಬಿತ್ತಿ ಆನಂದಾಶ್ರುಗಳನೆರೆದು ರೋಮಾಂಚನದ ಗೊಬ್ಬರ ಹಾಕಿ ಬೆಳೆಯಿಸುವ ಪರಿಣಾಮ ಫಲರಸಾಸ್ವಾದನೆ ಪುಣ್ಯದ ರಾಜಮಾರ್ಗವಾಗಿದೆ. ಮಹಾದೇವಿಯಕ್ಕಳ ಜೀವನರಥ ಈ ಮಾರ್ಗದ ಗುಂಟ ಸಾಗಿದೆ.

"ಮಹಾದೇವಿಯರ ಮನದನುರಾಗ ಪಿಳಿದಂತೆ
ಪ್ರಭಾಕರಂ ಪಶ್ಚಿಮವಾರ್ಧಿ–
ಯೊಳಿಳಿಯೆ, ಮನದುಮ್ಮಳಂ ಕವಿದಂತೆ ತಮಂ ಕವಿಯೆ..."

ಮಹಾದೇವಿಯವರು ಹಗಲು ಕಂಡುಂಡ ಆನಂದಾನುಭವ, ನಿತ್ಯಸುಖ ನಿಶಾರಾಣಿ ಅಪಹರಿಸುತ್ತಾಳೆ. ಸೂರ್ಯಕಾಂತಿಗೆ ಸರಿಸಾಟಿಯಾದ ಅವಳ ಮನದನುರಾಗ ಪಶ್ಚಿಮಾಂಬುಧಿಯಲ್ಲಿಳಿಯುತ್ತದೆ. ಮನದುಮ್ಮಳದ ಪ್ರತೀಕವೆಂಬಂತೆ ತಮೋಸ್ತೋಮ ಎಲ್ಲೆಡೆಯೂ ಮುಸುಕುತ್ತದೆ. ಕಾಮ ಸಾಮ್ರಾಜ್ಯದ ಸಾಮ್ರಾಜ್ಞಿಯಾದ ನಿಶಾರಮಣಿ ಆಕರ್ಷಣೀಯ ಪರಿಸರದ ನಿರ್ಮಾಣ ಮಾಡಿ ಚಿತ್ತಚಾಂಚಲ್ಯಕ್ಕೆ ಆಹ್ವಾನ ನೀಡುತ್ತಾಳೆ. ಕೌಶಿಕನ ಮನಸ್ಸಿನಲ್ಲಿ ಮನ್ಮಥ ತನ್ನ ವಿಚಾರ ಸಾಮ್ರಾಜ್ಯ ಸ್ಥಾಪಿಸುತ್ತಾನೆ. ಅಕ್ಕನವರು ವಿಷಮಪಾತ್ರಾಭಿನಯಕ್ಕೆ ಸನ್ನದ್ಧರಾಗುತ್ತಾರೆ. ರಾತ್ರಿಯನ್ನು ಕಷ್ಟಕರವಾಗಿ ಕಳೆದು ಶಿವಜ್ಞಾನ ಪ್ರಭೆಯನ್ನು ಪಸರಿಸುವ ಸೂರ್ಯೋದಯದ ನಿರೀಕ್ಷಣೆ ಮಾಡುತ್ತಾರೆ. ಆಧ್ಯಾತ್ಮಿಕ ತತ್ವಗಳ ಜನನ, ಪೋಷಣೆ, ಪಕ್ವತೆ ಸಮಾಜದ ನೈಜ ಪರಿಸರದಲ್ಲಿ ಸಾಧ್ಯವಾದರೆ ಹೆಚ್ಚು ಉಪಯುಕ್ತ. ಸಮಾಜ ಬಿಟ್ಟು ಬೆಟ್ಟ ಗುಹೆಗಳಲ್ಲಿ ಜರುಗುವ ಸಿದ್ಧಿ ಅಲ್ಲಾವುದ್ದೀನನ ಅದ್ಭುತ ದೀಪದ ಪ್ರಭಾವಕ್ಕೆ ಗುರಿಯಾದಂತೆ. ಮಹಾದೇವಿಯಕ್ಕನವರು ಸಾಮಾನ್ಯ ಮನೆತನದಲ್ಲಿ ಜನಿಸಿ ರೂಪಸಂಪನ್ನತೆಯಿಂದ ಕೌಶಿಕನಿಗೆ ಆಕರ್ಷಿತಳಾಗಿ, ಗುಣಸಂಪನ್ನತೆಯಿಂದ ಚನ್ನಮಲ್ಲಿಕಾರ್ಜುನನ ಅಡಿದಾವರೆಯ ಭೃಂಗಿಯಾಗಿ ನಿತ್ಯಜೀವನದ ಹೋರಾಟಕ್ಕೆ ಕಂಕಣಬದ್ಧರಾಗುತ್ತಾರೆ. ಸಮಾಜದಲ್ಲಿ ಉನ್ನತ ಆದರ್ಶ ಪ್ರಸ್ಥಾಪಿಸುತ್ತ ಲೌಕಿಕ ಮತ್ತು ಪಾರಮಾರ್ಥಿಕದ ಮಧ್ಯೆ ಸುವರ್ಣ ಸೇತುವೆಯನ್ನು ನಿರ್ಮಿಸಲು ಹೃದಯವಂತಿಕೆಯಿಂದ ಶ್ರಮಿಸುತ್ತಾರೆ. ಲೋಕದ ಸ್ತುತಿ ನಿಂದೆಗಳನ್ನು ಸಹನೆಯಿಂದ ನಂಜುಂಡ ಶಿವನಂತೆ, ಮನದಲ್ಲಿ ತಾಳಿ ಶಾಂತಿ ಮತ್ತು ಸಮಾಧಾನಕ್ಕೆ ದಿವ್ಯ ಸಂಕೇತವಾಗುತ್ತಾರೆ.

"ಬೆಟ್ಟದ ಮೇಲೊಂದು ಮನೆಯಮಾಡಿ
ಮೃಗಂಗಳಿಗಂಜಿದಡೆಂತಯ್ಯ!
ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆ
ತೆರೆಗಳಿಗಂಜಿದಡೆಂತಯ್ಯ!
ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ
ನಾಚಿದಡೆಂತಯ್ಯ,
ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯ, ಲೋಕದೊಳಗೆ
ಹುಟ್ಟಿದ
ಬಳಿಕ ಸ್ತುತಿ ನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ
ಸಮಾಧಾನಿಯಾಗಿರಬೇಕು."

ಧೀರಮನಸ್ಕರಾಗಿ ಸಮಾಜದ ಕಟು ಟೀಕೆಯನ್ನೆದುರಿಸುತ್ತಾರೆ. ಆದರೂ ಅಕ್ಕನವರ ಜೀವನದಲ್ಲಿ ದಿವಾರಾತ್ರಿಗಳ ತುಮುಲಯುದ್ಧ ಸತತವಾಗಿ ಜರುಗುತ್ತದೆ.

ಒಂದು ದಿನ ಮಹಾದೇವಿಯಕ್ಕನವರು ಮರೆದೊರಗಿದಾಗ ದೂರ ದೇಶದಿಂದ ಹಲವು ಮಾಹೇಶ್ವರರು ಅರಸನ ಅರಮನೆಯ ಮಹಾದ್ವಾರಕ್ಕೆ ಬಂದು ನಿಲ್ಲುವರು. ಮೂರ್ಖ ಕೌಶಿಕ ತನ್ನ ರಾಣಿ ವಿಶ್ರಮಿಸಲೆಂಬ ಭ್ರಮೆಯಿಂದ, "ದೇವಿಯರ್ ಸುಖನಿದ್ರೆಯೊಳಿರ್ಕೆ, ಪೋಗು ಪೋಗು ಸಮಯವಿಲ್ಲ ಸಮಯವಿಲ್ಲೆಂದು . . . . ಗಜರಿ ಗರ್ಜಿಸಿ ನುಡಿಯೆ . . . ." ಅವಸ್ಥಾತ್ರಯಂಗಳಲ್ಲಿಯೂ ಚನ್ನಮಲ್ಲಿಕಾರ್ಜುನನ ನೆನಹು ನೆಲೆಗೊಂಡಿರುವ ಮಹಾದೇವಿಯಕ್ಕನವರಿಗೆ ನಿದ್ರಾಭಂಗವಾಗುತ್ತದೆ. "ಕೆಟ್ಟೆ ಕೆಟ್ಟೆನದಾರನೆಂದೆಪೆ? ಶಿವಭಕ್ತರನೆ? ಬೆಂದೆ ಬೆಂದೆ ಶಿವ ಶಿವಾ ಸುಡು ಸುಡು ಕೆಟ್ಟ ಭವಿಯೆ ಫಡಫಡ ಪಚ್ಚಪಸಿಯ ಪಾತಕನೆ ನಿನ್ನ ಸಂಗದಿಂ ಭಕ್ತರ ನಿಂದೆಯಂ ಕೇಳ್ವಂತಾದುದಿನ್ನೇವೆ ನಿನ್ನೇವೆನೆನುತ್ತಳುವುದುಂ." ಅಚಲ ನಂಬುಗೆಯನ್ನುಳ್ಳ ಶಿವಶರಣರನ್ನು ಕೆಡೆ ನುಡಿದುದಕ್ಕಾಗಿ ದುಃಖ ನಿರ್ಭರತೆಯಿಂದ ಮರುಗುವರು. ತನ್ನಿಂದ ಶಿವಶರಣರ ಮಾನ ಭಂಗವಾದುದಕ್ಕೆ ಕೆಮ್ಮನೆ ಕೊರಗುವರು. ವಿಪರೀತವಾದ ಪ್ರತಿಕ್ರಿಯೆಯನ್ನು ಕಂಡು ಕೌಶಿಕ ವಿಹ್ವಲಗೊಳ್ಳುತ್ತಾನೆ. ಮುಂದುಗಾಣದೆ ಮೂರರಲ್ಲೊಂದು ತಪ್ಪನ್ನು ಮನ್ನಿಸಬೇಕೆಂದು ಅಂಗಲಾಚುತ್ತಾನೆ. ಮೂರು ತಪ್ಪುಗಳ ಪ್ರಸ್ತಾಪ ಕಾವ್ಯಕ್ಕೆ ಜನತಾಂತರ್ದೃಷ್ಟಿಯನ್ನುಂಟುಮಾಡಿದೆ. ತಪ್ಪು ಮಾಡದ ಮಾನವನೇ ಇಲ್ಲ. ತಪ್ಪು ಮಾಡದವ ಮಾನವನಲ್ಲ—ದೇವಾಂಶದ

ಸಾಕ್ಷಾತ ಪ್ರತಿನಿಧಿ. ಕೇವಲ ಉದರಂಭರಣಕ್ಕಾಗಿ ಜೀವಿಸುವುದು ಪಶುತ್ವದ ಲಕ್ಷಣ. ತಪ್ಪನ್ನು ತಿದ್ದಿಕೊಂಡು ಜೀವನದ ಅಮರತ್ವಕ್ಕೆ ಮಾರ್ಗ ಮಾಡಿಕೊಳ್ಳುವುದೇ ಪರಮೋಚ್ಚಧ್ಯೇಯ. ಅದುವೆ ಮಾನವಧರ್ಮ. ಇದನ್ನುಳಿದಲ್ಲಿ ಜೀವನ ಅಧೋಗತಿಯ ಆಳ ಪ್ರಪಾತಕ್ಕೆ ಧುಮುಕುತ್ತದೆ. ಕೌಶಿಕನಿಗೆ ಮೂರು ತಪ್ಪುಗಳ ಕಟ್ಟಳೆ ಹಾಕಿದ್ದು ಔಚಿತ್ಯ ಪೂರ್ಣವಾಗಿದೆ. ಮಹಾದೇವಿಯಕ್ಕನವರು ಒಂದು ತಪ್ಪನ್ನು ಮನ್ನಿಸಿ ನಿತ್ಯ ನೇಮ ಸಂಪನ್ನೆಯರಾಗುತ್ತಾರೆ. ಮಾಹೇಶ್ವರರ ಸೇವೆಯಲ್ಲಿ ಮಗ್ನಮಾನಸಳಾದ ಮಹಾದೇವಿಯಕ್ಕನವರಿಗೆ ಒಂದು ಸಲ ಹತ್ತು ಸಹಸ್ರ ಹೊನ್ನು ಬೇಕಾಗುತ್ತದೆ; ಅರಸನು ವೈಹಾಳಿಯಲ್ಲಿರಲು, ಭಾಂಡಾರಿಗಳು ಹಣ ಕೊಡಲು ಶಂಕಿಸುತ್ತಾರೆ. ಆಶಾರಹಿತೆ ಲೋಕಹಿತಾಸಕ್ತೆಯಾದ ಮಹಾದೇವಿಯವರು ಮೈಮೇಲಿನ ವಜ್ರಕಂಕಣ, ಮುತ್ತಿನೋಲೆ, ಹೊನ್ನಿನಾಭರಣಗಳೆಲ್ಲವನ್ನೂ ಶರಣರಿಗೆ ಕೊಟ್ಟು ಸನ್ಮಾನಿಸುತ್ತಾಳೆ.

ಮತ್ತೊಂದು ದಿನದ ಸುಪ್ರಭಾತ ಸಮಯದಲ್ಲಿ ಮಹಾದೇವಿಯವರು ನಿರ್ಮಲೀಕೃತಗಾತ್ರೆಯರಾಗಿ, ಆನಂದ ಭರಿತ ಮಾನಸರಾಗಿ, ಉಲ್ಲಾಸಪೂರಿತ ಹೃದಯವುಳ್ಳವರಾಗಿ ಚನ್ನಮಲ್ಲಿಕಾರ್ಜುನನ ಅರ್ಚನೆಗೆ ಅಣಿಗೊಳ್ಳುತ್ತಾರೆ. ಧಮನಿ ಧಮನಿಗಳಲ್ಲಿಯೂ ವೈರಾಗ್ಯದ ಅರುಣ ಜಲ ಪ್ರವಹಿಸುತ್ತಿರಲು, ರೋಮರೋಮಗಳಲ್ಲಿಯೂ ತ್ಯಾಗದ ಸುಳುಹು ದೃಗ್ಗೋಚರವಾಗುತ್ತಿರಲು—ಮಹಾದೇವಿಯಕ್ಕನವರು ಸಾಕ್ಷಾತ ವೈರಾಗ್ಯದಧಿದೇವತೆಯಂತೆ ಪ್ರತ್ಯಕ್ಷರಾಗಿದ್ದಾರೆ. ಆದರೆ ಕೌಶಿಕನ ಕಲ್ಪನೆಯ ಕಪಟನೋಟ ವಿಪರೀತ ಚಿತ್ರವನ್ನು ಕಾಣುತ್ತದೆ.

“ ಅನಂಗನಂ ಸನ್ಮಾಂಗನಂ ಮಾಡಲೆಂದು ರತಿದೇವಿ
ಶಿವನಂ ಪೂಜೆಗೆಯ್ದು
ಬೇಡಿಕೊಳಲ್ ಬಂದಳೋ, ಧರ್ಮರಾಜನಂ
ರೊಪ್ಪಗೊಳಿಸಲೆಂದು ಭಾನುಜಾ
ದೇವಿ ದೇವಾರ್ಚನೆಗೆ ನಿಂದಳೋ, ಬಾಳಲೋಚನದಿಂ
ಕಾಮನನುರುಪಿ
ದುಪನರಿದಾತನಂ ಬಿಟ್ಟು ಶಿವನಂ ಪೊರ್ದಿ
ಬರ್ದುಕುವೆನೆಂದು ಪಂಚಬಾಣಂಗಳ್
ಸಂದು ಹೆಣ್ಣಂದಮಂ ತ್ತೈಗೊಂಡು ಲಿಂಗಾರ್ಚನೆಗೆ
ನಿಂದುವೋ, ವಲ್ಲಭನಪ್ಪ
ಶಶಿಯಂ ಬೇಡಿ ರೋಹಿಣಿ ದೇವಿ ಶಿವಧ್ಯಾನದಿಂ
ಶಿವನ ಮುಂದೆ ನಿಂದಳೋ
……………”.

“ ರೂಪಿಂಗೆ ಕೌತುಕಂಗೊಂಡು ಜವ್ವನಕ್ಕೆ ಜಾಣಳಿದು,
ನೋಟದೊಳಳುಕಿ,
ಸುಕುಮಾರತೆಯೊಳ್ ಸಿಲುಕಿ, ಸಿಂಗರದೊಳ್
ಬಿದ್ದು . . . ಆಲಿಂಗನಕ್ಕೆ
ಲವಲವಿಸಿ . . . ಚಿತ್ತಂ ಚಿಗುರ್ತು, ಕೆತ್ತುವಧರದಿಂ,
ಕಂಪಿಸುವ
ಕೈಗಳಿಂ, ತವಕಿಸುವ ತೋಳ್ಗಳಿಂ, ಲಂಘಿಸುವಂಗದಿಂ,
ಸಟ್ಟದಿಟ್ಟಯಿಂ,
ಪರಿತಂದು ತನ್ನ ಪುಣ್ಯದ ಫಲವ
ನಪ್ಪುವಂತಾಲಿಂಗಿಸಲೊಡಂ . . .”.

ಕೌಶಿಕನ ಮನಸ್ಸಿನಲ್ಲಿ ಕಾಮೋದ್ದೀಪನೆಗೊಳಿಸುವ ಭಾವಗಳು ಅಲೆಅಲೆಯಾಗಿ ಹೊರಹೊಮ್ಮಿವೆ. ವಾಚಕರ ಮನಸ್ಸಿನಲ್ಲಿ ಪವಿತ್ರತಮ ಭಾವಗಳು ತೆರೆತೆರೆಯಾಗಿ ಹೊರಚಿಮ್ಮುತ್ತವೆ. ವರ್ಣನೆಯ ವೈಚಿತ್ರ್ಯ ವಿಸ್ಮಯ ಮೂಕರನ್ನಾಗಿ ಮಾಡುತ್ತದೆ.

ಭಾವಗಳೇ ಕ್ರಿಯಾರೂಪ ತಾಳಿ ಕೌಶಿಕನ ವಿಲಾಸ ಪ್ರಪೂರ್ಣ ಕೃತ್ಯ, ವಾಕ್ಪಟದ ಮೇಲೆ ಕಂಡಂತೆ ಸುಸ್ಪಷ್ಟವಾಗಿ ಗೋಚರಿಸುತ್ತದೆ. ವರ್ಣನೆಗೆ ನೈಜತೆಯ ಸಂಸರ್ಗದಿಂದ ಅವರ್ಣನೀಯ ಸೊಬಗುಂಟಾಗಿದೆ. ಭಾವಗಳ ಸೃಷ್ಟಿ, ವಿಕಾಸ, ಪೋಷಣೆಯ ಕಾರ್ಯ ಸಂದರ್ಭಕ್ಕನುಗುಣವಾಗಿ ಜರುಗಿಸಿ, ವರ್ಣನೆಯನ್ನು ರಸವತ್ತಾಗಿಯೂ, ಪರಿಣಾಮದಾಯಕವಾಗಿಯೂ ಮಾಡುವಲ್ಲಿ ಮಹಾಕವಿ ಹರಿಹರ ಅಗ್ರಗಣ್ಯ. ಭಕ್ತಿಭಾವವನ್ನು ಉದ್ರೇಕಿಸಲು ಸಮರ್ಥಶೀಲನಾದ ಕವಿ, ಶೃಂಗಾರವನ್ನೂ ಅಷ್ಟೇ ಸ್ಫುಟವಾಗಿ, ಭಾವಪ್ರದವಾಗಿ, ಅರ್ಥಪೂರ್ಣವಾಗಿ ಕೆರಳಿಸಲು ಸ್ವತಃ ಸಿದ್ಧ.

ಆಲಿಂಗನದಿಂದ ದಿಗ್‌ಭ್ರಮೆಗೊಂಡ ಮಹಾದೇವಿ “ಎಲೆಲೆ ಭವಿಯೆ ಶಿವಾರ್ಚನೆಯ ಸಮಯದೊಳು ಮುಟ್ಟುವರೆ? “ ಛೀ ಛೀ ” ಪೊಲ್ಲದುದನು ಗೆಯ್ದೆ ಶಿವಪೂಜಾ ಸುಖಮನರಿಯದ ಮಾನಸಗುರಿಯೆ! ಮಾಣ್ಮಾಣಿಂದಿನೊಳೆರಡುಂ ತಪ್ಪುಂ ಪೋದುವದಕ್ಕೇನೆನುತ್ತ . .” ಅಕ್ಕನವರ ಮತ್ತು ಕೌಶಿಕನ ನಿತ್ಯನೇಮಗಳ ಅಂತರ ಭೂಮ್ಯಾಕಾಶಗಳಿಗೂ ಮೀರಿದ್ದೆಂದು ತಿಳಿಯದಿರದು. “ಶಿವಪೂಜಾ ಸುಖಮನರಿಯದ ಮಾನಸ ಗುರಿಯೆ!” ಎಂಬ ವಾಕ್ಯ ಕೌಶಿಕನ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿದಿದೆ. ಜಗತ್ತಿನ ಸುಖ ದುಃಖಗಳ ಪ್ರತಿನಿಧಿಗಳೆಂಬಂತೆ ಅಕ್ಕನವರ ಮತ್ತು ಕೌಶಿಕನ ಪಾತ್ರ ನಿರೂಪಣೆಯಾಗಿದೆ. ಚನ್ನಮಲ್ಲಿಕಾರ್ಜುನನ ಹಂಬಲ, ಅರ್ಚನೆ, ಕಾಣ್ಕೆಯ ನಿತ್ಯ ಸುಖ ಅಕ್ಕನವರದಾಗಿದೆ. ಸಿದ್ಧಿಯ ಬಲದಿಂದ ಜೀವನ

ಗಂಭೀರವಾಗಿ ಪ್ರವಹಿಸುವ ಗಂಗಾಸಲಿಲವಾಗಿದೆ. ಮಣ್ಣು, ಮಿಸುನಿ, ಮಾನಿನಿಯರ ಮೋಹಜಾಲಕ್ಕೆ ಸಿಲುಕಿ ಒದ್ದಾಡುವ ಮಾನಸ ಗುರಿಯ ಪಾಡು ಕೌಶಿಕನದಾಗಿದೆ. ಜೀವನ, ಮೋಸದ ಮರ್ಮದಿಂದ ವಿನಾಶ ಪ್ರಪಾತಕ್ಕೆ ಬೀಳುವ ದುಃಖಪರಂಪರೆಯ ಭೋರ್ಗರೆವ ಜಲಪಾತವಾಗಿದೆ.

ಕೊನೆಗೊಮ್ಮೆ ಮಹಾದೇವಿಯಕ್ಕನವರು ವಿಷಮ ಸಂಸಾರ ಸುಳಿಯಿಂದ ಮುಕ್ತರಾಗುವ ಕಾಲ ಸನ್ನಿಹಿತವಾಗುತ್ತದೆ. ಮಗದೊಂದು ದಿನ ಕೌಶಿಕನು ಮಹಾದೇವಿಯವರೂ ಸಂಸಾರ ಸುಖ ಶ್ರಾಂತಿಯಿಂದ ಬಳಲಿ ಪವಡಿಸಿದ್ದಾಗ, ಮಹಾದೇವಿಯಕ್ಕನವರ ಆರಾಧ್ಯ ದೇವರು "ಭೋಂಕನೆ ಬರೆ" ಅಕ್ಕನವರು "ಗಳಿಲನೆ ಕಂಡು", ದುಕೂಲಮಂ ಭಯರಸಮನುಟ್ಟೆರ್ದ ಪರಿಯೊಳೆದ್ದು ಮಂಚದಿಂದುರವಣಿಸುತ್ತಿಳಿದು, ಗುರುವಿನ ಶ್ರೀಪಾದಕ್ಕೆ ಹುಟ್ಟಿದ ಮಾರ್ಗದಿಂದಷ್ಟಾಂಗ ಪ್ರಣತೆಯರಾಗುತ್ತಾರೆ. ಗುರುವರ್ಯರು ಕಣ್ಮುಚ್ಚಿಕೊಂಡು ದುಕೂಲದೆಚ್ಚರಿಕೆಯುಂಟುಮಾಡುತ್ತಾರೆ. ನಾಚಿಕೆಯಿಂದ ಬೆರಗಾಗಿ, ಅವಸರದಿಂದ ಸೀರೆಗಾಗಿ ಕೈ ಹಾಕುತ್ತಾರೆ. ಆದರೆ ಮತ್ತೊಂದು ಕೈ ಸೀರೆಯನ್ನು ಕಸಿದುಕೊಳ್ಳುತ್ತದೆ. ಕೌಶಿಕ ಕೋಪಾಟೋಪದಿಂದ "ತೆಗೆ ತೆಗೆ ನಿನಗೇನತ್ಯಂತ ಭಕ್ತೆಗೆ, ಮಿಗಿರಿದ ವಿರಕ್ತೆಗೆ, ಸೀರೆಯೇಕೆಂದು . . . ." ಗಜರಿ ಗರ್ಜಿಸಿ ನುಡಿಯಲು, ಅಕ್ಕನವರು "ಆಹಾ ಮೂರು ತಪ್ಪುಂ ತೀರ್ದುದೆನ್ನಿಚ್ಛೆ ಸಾರ್ದುದು . . . . ಬರ್ದುಂಕಿದೆ ಬರ್ದುಂಕಿದೆನೆನುತ್ತಾಶಾರಹಿತೆ, ಕೇಶಾಂಬರೆಯಾಗಿ . . . . ಹೊರಡುತ್ತಾರೆ. ಅಕ್ಕನವರ ರುದ್ರ ಪಾತ್ರಾಭಿನಯ ಮುಕ್ತಾಯವಾಗಿ ಭವ್ಯ ಪಾತ್ರಾಭಿನಯಕ್ಕೆ ನಾಂದಿಯಾಗುತ್ತದೆ. ಇದುವರೆಗೆ ಬಾಳಿದ ಜೀವನ ನಿರ್ಜೀವವಾದುದು, ನಿಸ್ಸತ್ವವಾದುದು, ನಿಸ್ತೇಜವಾದುದೆಂಬ ಭಾವವನ್ನು "ಬರ್ದುಂಕಿದೆ" "ಬರ್ದುಂಕಿದೆ"ನೆಂಬ ಶಬ್ದ ಸಮುದಾಯ ಪ್ರತಿಧ್ವನಿಸುತ್ತಿದೆ. ಅಕ್ಕನವರ ಜೀವನದ ಈ ಘಟನೆ ಸಹಜವೆಂಬಂತೆ ಕಾಣುವುದಿಲ್ಲ. "ಭೋಂಕನೆ ಬರೆ"—ಗುರುದೇವರು ಅರಮನೆಯ ಮಹಾದ್ವಾರದಿಂದ ನೇರವಾಗಿ ಶಯ್ಯಾಗೃಹಕ್ಕೆ ಬಂದುದು ಆಶ್ಚರ್ಯವೇ ಸರಿ. ಮಹಾದೇವಿಯಕ್ಕನವರು "ಗಳಿಲನೆ ಕಂಡು" ದೂ ಅಷ್ಟೇ ಆಶ್ಚರ್ಯಕರವಾಗಿದೆ. ಜಿಜ್ಞಾಸುಗಳಿಗೆ ಇಲ್ಲಿ ಸಂಶೋಧಿಸಲು ತುಂಬಾ ಆಸ್ಪದವಿದೆ. ಈ ವಿಚಾರವನ್ನು ಬದಿಗಿಟ್ಟು ಮುಂದೆ ವಿಮರ್ಶಿಸಲಾಗಿದೆ.

ಮಹಾದೇವಿಯಕ್ಕನವರ ಅಂತರಂಗ ಬಹಿರಂಗ ಜೀವನ ಚನ್ನಮಲ್ಲಿಕಾರ್ಜುನನ ಧ್ಯಾನ ನೆನಹು ಚಿಂತನೆಗಳಿಗೆ ಮೀಸಲಾಗಿದೆ. ತೋರಿಕೆಗೆ ಲೌಕಿಕಕ್ಕೆ ಕೌಶಿಕನೊಡನೆ ಒಗೆತನ ಗಂಟುಬಿದ್ದಿದೆ. ಕೋತಿಗೆ ಕಳ್ಳು ಕುಡಿಸಿದಂತೆ ಕೌಶಿಕನ ಕಾಮುಕ ವಿಚಾರ, ವರ್ತನೆ, ಅವ್ಯಾಹತವಾಗಿ ಜರುಗುತ್ತದೆ. ಅಕ್ಕನವರೊಡನೆ ಮಾಡಿದ ಕರಾರುಗಳೆಲ್ಲವನ್ನತಿಕ್ರಮಿಸುತ್ತಾನೆ. ಮೂರು ತಪ್ಪುಗಳ ಆಘಾತಕ್ಕೆ ಗುರಿಯಾಗುತ್ತಾನೆ. ಮಹಾದೇವಿಯಕ್ಕನವರು ನೂರಾರು ಕಷ್ಟ ಪರಂಪರೆಗಳನ್ನು ವಿಷಮ ಸನ್ನಿವೇಶಗಳನ್ನು ಸ್ಥಿತಪ್ರಜ್ಞಳಂತೆ ಎದುರಿಸಿ ಜಯಶೀಲರಾಗುತ್ತಾರೆ. ಈ ಬಗೆಯ ಮನಃ ಪರಿಪಾಕದಿಂದೊಡಗೂಡಿ ಕೌಶಿಕನ ಸಹವಾಸದಿಂದ ಬಸವಳಿದು ಬೆಂಡಾಗಿ ಮಲಗಿರಲು, ಆಕಸ್ಮಿಕವಾಗಿ ಆರಾಧ್ಯ ದೇವರು ಆಗಮಿಸುತ್ತಾರೆ. ತಕ್ಷಣ ಎಚ್ಚತ್ತು ಭಯಭೀತರಾಗಿ ಮೊದಲು ಗುರುವಿನ ಶ್ರೀಚರಣಕ್ಕೆರುಗುತ್ತಾರೆ. ತಪಿತಸ್ಥ ಸೇವಕ ಒಡೆಯನ ಆಕಸ್ಮಿಕಾಗಮನದಿಂದ ಬಿಲ್ಲುಂ ಬೆರಗಾಗಿ ಸಂವರಿಸುವಂತೆ. "ಭಯರಸಮನುಟ್ಟೆರ್ದ ಪರಿಯೊಳೆದ್ದು" ಎಂದು ಕವಿವರ್ಯನು ಸಮರ್ಥಿಸಿದ್ದಾನೆ. ಸಹಜಭಾವಕ್ಕೆ ಸತ್ಯದನುಲೇಪ ಕೊಟ್ಟಂತಾಗಿದೆ. "ಹುಟ್ಟಿದ ಮಾರ್ಗದಿಂದಷ್ಟಾಂಗ ಪ್ರಣತೆಯಾದಳು" ಎಂಬ ಭಾವ ಕವಿಯ ಆಧ್ಯಾತ್ಮಿಕ ಪ್ರಜ್ಞೆಗೆ ಕಳಶವಿಟ್ಟಂತಾಗಿದೆ. ಚಿತ್ತವನ್ನು ಒಂದೇ ಧ್ಯೇಯದತ್ತ ಕೇಂದ್ರೀಕರಿಸಿದ ಮೇಲೆ ಅದರತ್ತ ಮುನ್ನುಗ್ಗಲು ಎಲ್ಲ ಎಡರುಗಳನ್ನು ದಾಂಟಿ ನಿಲ್ಲಬೇಕಾಗುತ್ತದೆ. ಚನ್ನಮಲ್ಲಿಕಾರ್ಜುನನಲ್ಲಿ ಲೀನಗೊಂಡ (ದೇವರಲ್ಲಿ) ಮನಸ್ಸು ಆತನ ದಿವ್ಯ ಸಾನಿಧ್ಯಕ್ಕೆ ಸೇರಲು ಎಲ್ಲ ವಿಧದಿಂದ ಸದಾ ಹವಣಿಸುತ್ತದೆ. ತನುವಿನಾಶೆಯನ್ನು ತ್ಯಜಿಸಬೇಕಾದುದು ಈ ಸಾಧನೆಯ ಮಹತ್ವಪೂರ್ಣ ಹೆಜ್ಜೆ. ದಿಗಂಬರ ಜೈನರು ಈ ತತ್ವವನ್ನು ಕಾರ್ಯರಂಗಕ್ಕಿಳಿಸುದುದು ಶಾಸ್ವತ ಸಾಕ್ಷಿ. ಹುಟ್ಟಿದ ರೀತಿಯಲ್ಲಿಯೇ ಭೂ ಮಾತೆಯ ಮಡಿಲಲ್ಲಿ ಮಲಗುವುದು ಖಚಿತ. ಮಹಾದೇವಿಯಕ್ಕನವರ ತೋರಿಕೆಯ ತನುವಿನ ಬಾಳ್ವೆ, ಹುಟ್ಟಿದ ಮಾರ್ಗದಿಂದ ಶ್ರೀಗುರುವಿನ ಶ್ರೀಚರಣಕ್ಕೆರಗಿದಾಗ ಲಯವಾಗುತ್ತದೆ. ಪುನರ್ಜನ್ಮ ಪ್ರಾಪ್ತವಾಗುತ್ತದೆ. ಆತ್ಮದ ಬಾಳ್ವೆ ಆರಂಭವಾಗುತ್ತದೆ. ಆತ್ಮ ಹೆಣ್ಣು ಅಲ್ಲ, ಗಂಡು ಅಲ್ಲ, ಹೊದಿಕೆ ರಕ್ಷಣೆಗಳ ಆವಶ್ಯಕತೆ ಇಲ್ಲವೇ ಇಲ್ಲ. ಲೋಕದ ಕಣ್ಣಿಗೆ ದೇಹವನ್ನು ಹೊತ್ತು ಆತ್ಮ ತನ್ನ ಚರಮ ಗುರಿಯತ್ತ ಧಾವಿಸುತ್ತದೆ.

ಅಕ್ಕನವರ ಜೀವನದ ದಿವ್ಯ ಇತಿಹಾಸದ ಭವ್ಯ ಅಧ್ಯಾಯ ಆರಂಭವಾಗುತ್ತದೆ.

* * *

" ಒದೆದು ಸಮಸ್ತ ರಾಜ್ಯ ಸುಖವುಂ ಸುಖದಿಂ
ಬಿಸುಟ್ಟಲ್ಪಭೋಗ ಸಂ ।
ಪದವನೆ ನೂಂಕಿ ಸಂಸೃತಿಯು ದಂಡುಗಮುಂ
ಬಿದಿದಾರ್ಗೆಸೆಯೆಂಬಿವಂ ।
ವಿದಳಿಸಿ ಕಾಮ ಮತ್ತ ಗಜ ಮಸ್ತಕವಾಮದ ಸಡಿಲ್ದಿ ಮಾ ।
ಣದೆ ಮಹಾದೇವಿ ಯಾಹ ಪೊರಮಟ್ಟಳನೂನ ವಿರಕ್ತಿ
ಭಕ್ತಿಯಿಂ ॥

ಕೌಶಿಕನ ಸಕಲರಾಜ್ಯ ಸುಖ ಸಂಪತ್ತನ್ನು ತೃಣೀಕರಿಸಿ, ಕ್ಷಣಭಂಗುರವಾದ ಸಂಸಾರ ಭೋಗವನ್ನು ಹಿಮ್ಮೆಟ್ಟಿಸಿ, ಕಷ್ಟಪರಂಪರೆಯನ್ನೂ ಆಶಾವಿತತಿಯನ್ನೂ ಬುಡಮೇಲು ಮಾಡಿ, ಕಾಮ ಮತ್ತು ಗಜ ಮಸ್ತಕದ ಗರ್ವರಸವನ್ನು ಇಳಿತೆಯ್ದು, ಮಹಾದೇವಿಯಕ್ಕನವರು ಭಕ್ತಿ, ತ್ಯಾಗ, ವೈರಾಗ್ಯ ಸಮ್ಯಜ್ಞಾನಕ್ಕೆ ಜೀವಂತ ಸಾಕ್ಷಿಯಾಗಿ, ರಾಗರಹಿತೆಯಾಗಿ, ಆಧ್ಯಾತ್ಮಿಕ ತೇಜದ ಪರಿವೇಷದಿಂದಲಂಕೃತರಾಗಿ, ಕೇಶಾಂಬರ ಧಾರೆಯರಾಗಿ, ಶೈವ ಸಾಮ್ರಾಜ್ಯದ ಸಾಮ್ರಾಜ್ಞಿಯರಾಗಿ ದಿಗ್ವಿಜಯಕ್ಕೆ ಹೊರಟಂತೆ ಪರಿಶೋಭಿಸುತ್ತಾರೆ.

" ಹಸಿವಾದಡೆ ಭಿಕ್ಷಾನ್ನಗಳುಂಟು, ತೃಷೆಯಾದೊಡೆ
ಕೆರೆ ಹಳ್ಳ ಬಾವಿ
ಗಳುಂಟು. ಶಯನಕ್ಕೆ ಹಾಳು ದೇಗುಲಗಳುಂಟು.
ಚನ್ನಮಲ್ಲಿಕಾರ್ಜುನಯ್ಯ
ಆತ್ಮ ಸಂಗಾತಕ್ಕೆ ನೀನೆನಗುಂಟು."

ಅನುಭವವಾಣಿ ಅಮೃತ ರಸ ವರ್ಷ ಕರೆದಂತೆ. ವಚನಗಳನ್ನು ಹಾಡಿ ಸಾಹಿತ್ಯ ಸರಸತಿಯನ್ನಲಂಕರಿಸುತ್ತಾರೆ. ಅಕ್ಕನವರ ಮಾಸಲು ಧ್ಯೇಯ ಸುಸ್ಪಷ್ಟವಾಗುತ್ತದೆ. ಮಹಾದೇವಿಯಕ್ಕನವರು ಪುರಾಣದ ಕಟ್ಟುಕಥೆಯಾಗದೆ ನಿತ್ಯಜೀವನದ ಸತ್ಯನಿಕೇತನವಾಗುತ್ತಾರೆ.

ಉಡುತಡಿಯಿಂದ ಹೊರಹೊರಟ ಮಹಾದೇವಿಯವರು :

" ಪುರದ ಪುಣ್ಯಂ ಹೆಣ್ಣು ರೂಪಾಗಿ ಪೋಪಂತೆ
ಪುರದ ಹರಭಕ್ತಿ ಪರ್ವತಕ್ಕೆಯ್ದು ನಡೆವಂತೆ
.......................................................
ನಿಷ್ಠೆ ಪಾದದ ರಕ್ಷೆಯಾಗುತಿರೆ ನಡೆವುತಂ
ಉಟ್ಟ ಕೇಶಾಂಬರಂ ದಟ್ಟಯಿಸಿ ಮೆರೆವುತಂ
ಎಡೆಗೊಂಡ ವೈರಾಗ್ಯವಲ್ಲಿ ಬೆಳುಗೊಡೆಯಾಗೆ
ನಡೆಯಿಸುವ ಸಂಬಳಂ ದೃಢ ಭಕ್ತಿ ತಾನಾಗೆ."

ಧ್ವನಿಯುಕ್ತವಾಗಿಯೂ ಪರಿಣಾಮದಾಯಕವಾಗಿಯೂ ವರ್ಣಿಸಿ ಕವಿವರ್ಯನು ಮಹಾಕವಿಯ ಪಟ್ಟಕ್ಕೆ ಅರ್ಹತೆ ಸಂಪಾದಿಸಿದ್ದಾನೆ. ಸಾಹಿತ್ಯ ಸರಸತಿಗೆ ಹೊಸಬಗೆಯ ಭಾವದೋಲೆಯನ್ನು ತೊಡಿಸಿ ಅವಳ ಕಾಂತಿ ಶೋಭೆ ಹೆಚ್ಚಿಸಿದ್ದಾನೆ. ಧೀಮಂತನಾದ ಹರಿಹರ ಮುಂಬದ ಕವಿಪುಂಗವರ ಮೇಲೆ ಅಚ್ಚಳಿಯದ ಪ್ರಭಾವ ಬೀರಿದ್ದಾನೆ. ಸಾಹಿತ್ಯಕ್ಕೆ ವಿನೂತನ ಕೊಡುಗೆ ಲಭ್ಯವಾಗಿದೆ.

ಸಂಸಾರದ ದಾಸಾನುದಾಸರಾದ ಪುರಜನ, ಪರಿಜನ, ಮಾತಾಪಿತರು ಅಕ್ಕನವರ ತ್ಯಾಗಕ್ಕೆ ಕಳವಳ, ಅನುಕಂಪ, ಉದ್ವೇಗ ವ್ಯಕ್ತಪಡಿಸುವರು. ಅವರನ್ನು ತಡೆಯಲು ಬಗೆಬಗೆಯಾಗಿ ಉಪದೇಶಿಸಿ ಅಂಗಲಾಚುವರು. ಪವಿತ್ರ ಭಾವೋದ್ದೀಪಿತನಾದ ಕವಿವರೇಣ್ಯನು ಅಕ್ಕನವರ ಧೃಡ ಸಂಕಲ್ಪಕ್ಕೆ ಹೂಂಗುಟ್ಟುವನು. ಅವರ ಏಕಾಂಗ ಸ್ಥಿತಿಗೆ ಆಧ್ಯಾತ್ಮ ತೇಜದ ಸ್ಥಿರ ರಕ್ಷಣೆಯನ್ನೊದಗಿಸುವನು. "ಪುರದ ಪುಣ್ಯ" "ಹರಭಕ್ತಿ" ಸಾಕಾರವೆತ್ತು, ನಿಷ್ಠೆ, ವೈರಾಗ್ಯ, ಶಿವಭಕ್ತಿಗಳ ಅಂಗರಕ್ಷಕರೊಡಗೂಡಿ, ಅಕ್ಕನವರು ಶ್ರೀಪರ್ವತಾಭಿಮುಖಿಯಾಗುತ್ತಾರೆ. ವಾಚಕರ ಮನಸ್ಸಿನಲ್ಲಿ ಅವರ ಬಗ್ಗೆ ಪೂಜ್ಯಭಾವ ಊರ್ಧ್ವ ಮುಖಿಯಾಗುತ್ತದೆ. ಶ್ರೀಪರ್ವತದ ನಿಸರ್ಗ ರಮಣೀಯತೆ ಅಕ್ಕನವರ ಶುಭಾಗಮನಕ್ಕೆ ಸುಸ್ವಾಗತ ಕೋರುತ್ತದೆ. ವಾಯು, ಪಲ್ಲವ, ಖಗಸಂಕುಳ ಸುಮಧುರವಾದ ಆನಂದದಾಯಕವಾದ ವಾತಾವರಣ ಕಲ್ಪಿಸುತ್ತವೆ. ಅಕ್ಕನವರಾದರೋ ಚನ್ನಮಲ್ಲಿಕಾರ್ಜುನನ ಧ್ಯಾನಾಧೀನರಾಗಿ, ಎಲ್ಲೆಡೆಯೂ ಅವನ ಸುಳುಹಿಗಾಗಿ ತವಕಿಸುತ್ತ, ದರ್ಶನಕ್ಕಾಗಿ ಹಾತೊರೆಯುತ್ತಾರೆ. ಹೃದಯಾಂತರಾಳದಿಂದ ಹೊರಹೊಮ್ಮಿದ ದೀನವಾಣಿ ಅವನ ಅನ್ವೇಷಣೆಗೆ ಉಪಕ್ರಮಿಸುತ್ತದೆ.

" ಚಿಲಿ ಮಿಲಿ ಎಂದೋಡುವ ಗಿಳಿಗಳಿರಾ, ನೀವು ಕಾಣಿರೆ,
ನೀವು ಕಾಣಿರೆ ?
ಸರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೆ,
ನೀವು ಕಾಣಿರೆ ?
ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೆ,
ನೀವು ಕಾಣಿರೆ ?
ಕೊಳನ ತಡಿಯೊಳಾಡುವ ಹಂಸಗಳಿರಾ, ನೀವು ಕಾಣಿರೆ,
ನೀವು ಕಾಣಿರೆ ?
ಗಿರಿಗಂಹ್ವರದೊಳಾಡುವ ನವಿಲುಗಳಿರಾ, ನೀವು ಕಾಣಿರೆ,
ನೀವು ಕಾಣಿರೆ ?
ಚನ್ನಮಲ್ಲಿಕಾರ್ಜುನನೆಲ್ಲಿರ್ದಹನೆಂದು ನೀವು ಹೇಳಿರೆ.

ಒಲವಿನವಾಣಿ ಪಿಯೂಷಪಾನ ಮಾಡಿಸುತ್ತದೆ. ಕರ್ಣಕಮನೀಯವಾಗಿ ಜೀವನ ಪುನೀತವಾಗುತ್ತದೆ. "ಶರಣಸತಿ ಲಿಂಗಪತಿ" ಎಂಬ ಭಾವ ಬಲಿದು ಚನ್ನ ಮಲ್ಲಿಕಾರ್ಜುನನ ದಿವ್ಯ ಸನ್ನಿಧಿಗೆ ಆತ್ಮಾರ್ಪಣೆ ಮಾಡಿ ಅಕ್ಕನವರು ತಮ್ಮ ಸಿದ್ಧಿಯ ದಿಶೆಯಲ್ಲಿ ಮಹತ್ವಪೂರ್ಣ ಹಂತಕ್ಕೆ ಬಂದು ನಿಲ್ಲುತ್ತಾರೆ. ಮಲ್ಲಿನಾಥನ ದರ್ಶನ ಲಾಭದಿಂದ ಶ್ರೀಶೈಲದಲ್ಲಿ ಚಿತ್ತ ನೆಲೆಗೊಳ್ಳುತ್ತದೆ. ಪ್ರತಿನಿತ್ಯ ಲತಾಮಂಟಪ, ಪುಷ್ಪವಾಟಿ, ಗುಹೆ, ತಿಳಿಗೊಳ, ಬಾಳೆ, ಸಹಕಾರ, ನದೀತೀರ ಎಲ್ಲೆಡೆಯೂ ಮಲ್ಲಿನಾಥನ ಪೂಜೆ ಮಾಡುವ ಮಹಾದೇವಿಯಕ್ಕನವರು ದೃಗ್ಗೋಚರವಾಗುತ್ತಾರೆ. ಶಿವಕವಿ ಹರಿಹರನ ಪವಿತ್ರ ನೇತ್ರಾಂಬುಜಗಳಿಗೆ ಪವಿತ್ರತಮ ಶ್ರೀಶೈಲ ಪ್ರದೇಶದ ಅಣುರೇಣು ತೃಣ ಕಾಷ್ಠಗಳಲ್ಲಿಯೂ ಶಿವಾಂಶ ದರ್ಶನೀಯವಾಗಿದೆ.

ಮುದ್ದುಮಗಳ ಮೇಲಿನ ಸಾಂಸಾರಿಕ ವ್ಯಾಮೋಹದಿಂದ ತಾಯ್ತಂದೆಯರು ಬಂದು ಅವರನ್ನು ಪುನಃ ಮಾಯಾಜಾಲಕ್ಕೆ ಸೆಳೆಯುವ ಸಾಹಸ ಮಾಡುತ್ತಾರೆ. ಅವ್ಯಾಜ ಪ್ರೇಮದಿಂದಾಗಿ ಅತೀವ ದುಃಖ ವ್ಯಕ್ತಪಡಿಸುತ್ತಾರೆ. ಮಗಳ ಏಕಾಂತಕ್ಕೆ ಭಯಂಕರದ ಭೂತಗನ್ನಡಿ ಹಿಡಿಯುತ್ತಾರೆ. ಅವರ ಸುಕೋಮಲ ದೇಹ ಕಠಿಣತಮ ಕರ್ಕಶಮಯ ಸನ್ನಿವೇಶಕ್ಕೆ ಸಿಲುಕಿ ಸವೆಯುವುದೆಂದು ನವೆಯುವುದೆಂದು ಅಪಲಾಪಿಸುತ್ತಾರೆ. ಸಕಲ ಸಂಗ ಪರಿತ್ಯಾಗಿಣಿಯಾದ ಮಹಾದೇವಿಯಕ್ಕನವರು ಕೊಟ್ಟ ಉತ್ತರ ಲೋಕೋತ್ತರವಾಗಿದೆ. ತ್ಯಾಗಿಗಳೆಂದು ಹೇಳಿಕೊಳ್ಳುವ ಮಹಾನುಭಾವರಿಗೆ ಮೇಲ್ಪಂಕ್ತಿಯಾಗಿದೆ.

"ಶಿವಭಕ್ತೆಯಾಗಿಯುಂ ಸೀವಿಂತು ನುಡಿವರೇ
ಶಿವಭಕ್ತಿಯೇಕಾಂತಮಂ ಬಿಡಿಸ ಬಗೆವರೇ
ಭವಿಯ ಸಂಗಂ ತಪ್ಪಿ ಭವನ ಸಂಗವನಪ್ಪಿ
ಶಿವಭಕ್ತಿ ರಸಭರಿತ ಸರಣಿಡಿಯ ನಡುವೊಪ್ಪಿ
ಇರ್ಪುದಂ ಕೆಡಿಸುವರು ಮಾತೆ ಪಿತರೆನಗಲ್ಲ."

ಮುಕ್ತಿಸಾಧನೆಗೆ ಅಡ್ಡಿ ಮಾಡುವವರು ನನಗೆ ಮಾತಾಪಿತರಲ್ಲೆಂದು ನಿಷ್ಠುರವಾಗಿ, ನಿರ್ದಾಕ್ಷಿಣ್ಯವಾಗಿ ನುಡಿಯುವರು. ಕೌತುಕಾನ್ವಿತರಾಗಿ ನಿರಾಶೆಯಿಂದ ತಾಯ್ತಂದೆಯರು ಹಿಂತಿರುಗುವರು. ಇತ್ತ ಕೌಶಿಕನು ವಿರಹಾನಲ ದಗ್ಧಮಾನಸನಾಗಿ, ಮನ್ಮಥನ ಪಂಚಶರಹತಿಗೆ ತತ್ತರಿಸಿ ಮಹಾದೇವಿಯರ ಒಗೆತನಕ್ಕೆ ಹಾತೊರೆಯುತ್ತಾನೆ. ಭಸಿತ, ರುದ್ರಾಕ್ಷಿ, ಜಟಾ ಮುಂತಾದ ಶಿವಲಾಂಛನಗಳನ್ನು ಧರಿಸಿ, ತನ್ನಂದದ ನಾಲ್ಕು ಜನ ಕಪಟವೇಷ ಧಾರಿಗಳೊಡನೆ ಶ್ರೀಪರ್ವತಕ್ಕೆ ಬರುತ್ತಾನೆ. ಸುಖದ ಸುಮ್ಮಾನಿಯಾದ ಮಹಾದೇವಿಯರನ್ನು ಕಂಡೊಡನೆ, "ಭಕ್ತನಾದೆಂ ಮಹಾದೇವಿ ಕರುಣಿಪುದೆನಗೆಂದು" ಹಲ್ಲು ಕಿರಿಯುತ್ತಾನೆ. ಕೌಶಿಕನ ವಿಕಳಾವಸ್ಥೆಗೆ ಮಾಯೆಯ ಆಟೋಪಕ್ಕೆ ಮಹಾದೇವಿಯಕ್ಕನವರು ಮನನೊಂದು ವಿಸ್ಮಯಮೂಕರಾಗುತ್ತಾರೆ. ಹೃದಯಾಂತರಾಳದಿಂದ ಅನುಭವೋದ್ಗಾರ ಗೀತೆಯಾಗಿ ಹೊರಚಿಮ್ಮುತ್ತದೆ.

"ಬಿಟ್ಟೆರ್ಪೆನೆಂದೊಡಂ ಬಿಡದು ನಿನ್ನಯ ಮಾಯೆ
ಒಟ್ಟಯಿಸಿ ಬಂದೊಡೊಡವಂದಪ್ಪುದೀ ಮಾಯೆ
.....................................
ಜೋಗಿಗಂ ಜೋಗಿಣಿಯಪಾಯ್ತು ನಿನ್ನಯ ಮಾಯೆ
.....................................
ಗಿರಿಯನೇರಿದೊಡಿರದೆ ಗಿರಿಯನೇರಿತು ಮಾಯೆ
ಪರಿದಡವಿಯ ಪೊಕ್ಕೊಡೊಡನೆ ಪೊಕ್ಕುದು ಮಾಯೆ."

ಮಾಯೆಯನ್ನು ಜಯಿಸಲು ಮಾಡಬೇಕಾದ ಸಾಧನೆಯ ಆಳ ಉದ್ದ ಅಗಲ ಎಲ್ಲವೂ ಮೇಲಿನ ಪದಶ್ರೇಣಿಯಿಂದ ವೇದ್ಯವಾಗುತ್ತದೆ. ಅಜೇಯಳಾದ ಮಾಯೆಯನ್ನು ಲೀಲಾಜಾಲವಾಗಿ ಕೈವಶಮಾಡಿಕೊಂಡ ಮಹಾದೇವಿಯಕ್ಕನವರು,

"ಎಲೆಲೆ ಕೌಶಿಕ ಹೋಗು ನೀನೇಕೆ ನಾನೇಕೆ
.....................................
ತಮವೆತ್ತ ಬೆಳಗೆತ್ತ ಶಿಖಿಯೆತ್ತ ತಂಪೆತ್ತ
ಭ್ರಮೆಯೆತ್ತ ತಿಳಿವೆತ್ತ ಬಿಸಿಲೆತ್ತ ಶಸಿಯೆತ್ತ
.....................................
ಎನ್ನಂತೆ ಬಾಳ್ವುದೆನಗಿಂತಿದೇ ಘನವೆನಗೆ."

ಕಠೋರವಾಗಿ ನುಡಿಯುತ್ತಾರೆ. 'ಹರಭಕ್ತಿ' 'ಮಹಾದೇವಿ' ಎರಡಲ್ಲದೊಂದಾಗಿ ಚನ್ನಮಲ್ಲಿಕಾರ್ಜುನನ ಪೂಜಾನುರುಕ್ತ ಸಂಪನ್ನೆಯರಾಗುತ್ತಾರೆ. ಮೂರ್ಖ ಕೌಶಿಕನು ಶಿವಭಕ್ತರಿಗೆ ಮಠಾಧೀಶರಿಗೆ ಹೊನ್ನಿತ್ತು ಅಕ್ಕನವರನ್ನು ವಶಪಡಿಸಲು ಹವಣಿಸುತ್ತಾನೆ. ಅಕ್ಕನವರ ಅನುಪಮ ಸಿದ್ಧಿ ಶಿಖಿಗೆ ಸಿಕ್ಕು-ಹಂಚಿಕೆ ಭಸ್ಮೀಭೂತವಾಗುತ್ತದೆ. ಮುಖಭಂಗ ಹೊಂದಿ ಕಪಟ ಕೌಶಿಕ ಹಿಂತಿರುಗುತ್ತಾನೆ. ಮಹಾದೇವಿಯಕ್ಕನವರು ಶಿವಭಕ್ತರ ಮಠಾಧಿಪತಿಗಳ ಸ್ತುತಿಗೆ "ಚಲಿಸದಗಲದೆ ಮಿಸುಕದ ಲಸದೊಲವಿಂದಿರ್ದು" ಅವರ ಔದಾರ್ಯಕ್ಕೆ ಮೈಯಿಕ್ಕಿ ನಿತ್ಯನೇಮ ಸಂಪನ್ನೆಯರಾಗಿ ಪರಿಶೋಭಿಸುತ್ತಾರೆ.

ಸಾಧನೆಯ ಅಂತಿಮ ಸೋಪಾನವನ್ನಾರೋಹಿಸಿ ಮಹಾದೇವಿಯಕ್ಕನವರು ಅವ್ಯಾಜ ಪ್ರೇಮದಿಂದ ಅನೂನ ಭಕ್ತಿಯಿಂದ ಚನ್ನಮಲ್ಲಿಕಾರ್ಜುನನಲ್ಲಿ ಮೊರೆಯಿಡುತ್ತಾರೆ.

" ದೇವ ಕರುಣಿಪುದು ಕೈಲಾಸಕ್ಕೆ ಬಟ್ಟೆಯಂ
ದೇವ ಗಿರಿಜೆಯ ಚರಣಮಂ ಕಾಣ್ಬ ನಿಷ್ಠೆಯಂ
ಭವಿಯ ಸಂಗದ ತನುವನಿದನೊಲ್ಲೆ ನಿದನೊಲ್ಲೆ
ನವಯುವಂ ಭೀಭತ್ಸವಿದನೊಲ್ಲೆ ನಾವೊಲ್ಲೆ
.......................................
ಎನಗೆ ದಿವ್ಯಾವಯವಮಂ ದೇವ ಕರುಣಿಪುದು."

ಭಕ್ತರ ನೈಜ ಪ್ರಾರ್ಥನೆ ಸಫಲವಾಗುವುದರಲ್ಲಿ ಸಂದೇಹವಿಲ್ಲ. ದಿವ್ಯ ವಿಮಾನವೊಂದು ಅಕ್ಕನವರ ಅಂತಃಕರುಣಪೂರ್ಣ ಮೊರೆಯ ಪ್ರತಿಫಲವಾಗಿ ಕಾಣಿಸಿಕೊಂಡಿತು. ಸಕಲ ಗಣಾಧೀಶ್ವರರು ನೋಡುತ್ತಿದ್ದಂತೆ ಅಕ್ಕನವರ ಜಡದೇಹ ಕಣ್ಮರೆಯಾಗಿ ಅವರ ತೇಜಃಪುಂಜ ಆತ್ಮ, ವಿಮಾನ ಮಧ್ಯೆ ರಾರಾಜಿಸುವ ಚೈತನ್ಯಪೂರ್ಣ ದೇಹದೊಳಗೆ ಲೀನವಾಯಿತು. ದೇವ ದುಂದುಭಿ ಧ್ವಾನ, ಪುಷ್ಪವೃಷ್ಟಿ, ಜಯಘೋಷದ ಮಧ್ಯೆ ಪುಷ್ಪಕ ವಿಮಾನ ಗಗನತಳಕ್ಕೆ ನೆಗೆಯಿತು. ನಿಖಿಲ ಗಣ ತಿಂತಿಣಿ ವಿಸ್ಮಯ ವಾರಿಧಿಯಲ್ಲಿ ಮುಳುಗಿತು. ಶಿವನು ಕೈಲಾಸದಲ್ಲಿ ಅಕ್ಕನವರ ಕಾರ್ಯಕ್ಷಮತೆಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾನೆ. ಮುನ್ನಿನ ರುದ್ರಕನ್ನಿಕೆಯ ಸ್ಥಾನ ದಯಪಾಲಿಸುತ್ತಾನೆ. ಮಹಾದೇವಿಯಕ್ಕನವರು ಆನಂದ ಭರಿತ ಮಾನಸರಾಗಿ ಪುನಃ ಕೈಲಾಸದೊಳಿಗ ಕೈಕೊಳ್ಳುತ್ತಾರೆ.

ಮಾನವ ಜನ್ಮ ಲಭಿಸುವುದು ಆಕಸ್ಮಿಕ. ಉತ್ಕೃಷ್ಟ ಧ್ಯೇಯಸಿದ್ಧಿಗಾಗಿ ನಿತ್ಯ ಮೌಲ್ಯಗಳ ಸಾಧನೆಯ ಬಲದಿಂದ ಹೆಣಗುವುದರಲ್ಲಿಯೇ ಜೀವನದ ಸಾರ್ಥಕ್ಯವಿದೆ. ಸಂಸಾರದ ಯಾಂತ್ರಿಕ ಜೀವನದಲ್ಲಿ, ವಿಷಯೋಪಭೋಗದಲ್ಲಿ, ಸೃಷ್ಟಿಯ ಜನಕನನ್ನು ಅರಿತು ಅವನ ಅಗಾಧ ಶಕ್ತಿಯ ಪರಿಜ್ಞಾನ ಪಡೆದು, ಭಯ ಭಕ್ತಿಯಿಂದಾರಾಧಿಸುವುದರಲ್ಲಿಯೇ ಜೀವನದ ಅಮರತ್ವದ ರಹಸ್ಯ ಹುದುಗಿದೆ. ಮಹಾಕವಿ ಹರಿಹರ ಈ ರಗಳೆಯನ್ನು ಬರೆದು ಕನ್ನಡ ನಾಡು ನುಡಿಗೆ ಮಹದುಪಕಾರ ಮಾಡಿದ್ದಾನೆ. ಶೈಲಿ ಜೀವನದ ಪ್ರತೀಕವೆಂಬಂತೆ ತನ್ನ ಜೀವನದ ದಿನಚರಿಯನ್ನು ತಾನು ಬರೆದೆಲ್ಲ ರಗಳೆಗಳಲ್ಲಿ ಪ್ರತಿಬಿಂಬಿಸಿರುವನು. ಈ ರಗಳೆಯಿಂದ ಮಹಾದೇವಿಯಕ್ಕನವರ ಜೀವನ ಚರಿತ್ರೆ ಮತ್ತು ಹರಿಹರನ ವ್ಯಕ್ತಿತ್ವದ ಸ್ಪಷ್ಟ ಚಿತ್ರಣ ಲಭಿಸುತ್ತದೆ. ಇದುವೆ ಇದರ ಔಚಿತ್ಯ.

---

# ಕನ್ನಡ ಕಂದಮ್ಮನ – ಪ್ರೇಮಪಲ್ಲವಿ

ಲೇ : ಎಸ್. ಎಸ್. ಪರಿಮಳ

ಕನ್ನಡಮ್ಮ ನಿನ್ನ ಗುಡಿ ಗೋಪುರದಡಿ
ಇರಲಿ ಸದಾ ಎನ್ನ ದೀನ ಮಸ್ತಕಮುಡಿ
ಚಿಗುರುತಿರಲಲ್ಲೆ ಎನ್ನಪ್ರೇಮದಾ ಕುಡಿ
ನಂದದೆಲ್ಲೆ ಬೆಳಗಲಿ ಸದಾ ನಿನ್ನ ಕೀರ್ತಿಕುಡಿ ೧

ಕನ್ನಡಮ್ಮ ನಿನ್ನ ಸಗ್ಗಗರಿಮೆಯ ಗುಡಿಯು
ಮೇರು ಮಂದರದ ನಿನ್ನ ಮಕುಟ ಮುಡಿಯು
ಕೀರ್ತಿಸೊಡರಿನ ಉಜ್ವಲ ಮೊನಚ ಕುಡಿಯು
ಪ್ರೀತಿಸಾಗರದಾಗರ ಕನ್ನಡಮ್ಮನ ಅಡಿಯು ೨

ಕನ್ನಡ ಕೋಟೆಯಿಂತುಂಬಿಹುದು ಜಗವು
ಬರುತಿಹುದು ನಿನ್ನೆಡೆಗೆ ಕನ್ನಡದ ಮಗುವು
ಮಮತೆಯಿಂ ನೋಡು ಪ್ರೀತಿದೀಪ್ತಿಯ ಮೊಗವು
ಅರ್ಪಿಸುತಿದೆ ನಿನ್ನಡಿಗೆ ನಾಗಮಲ್ಲಿಗೆಯ ನಗುವು ೩

ಕನ್ನಡಾಂಬೆ ನಿನ್ನ ಅಕ್ಕರೆಯನುಡಿ ಸಕ್ಕರೆ ಕಲ್ಲು
ಸೋರುತಿಹುದು ಜೇನ ಸೋನೆಯ ಸವಿ ಸೊಲ್ಲು
ಸಿರಿಸೊಬಗಿನಲಿ ನಿನಗಸಮಾನವು ಕಾಮನ ಬಿಲ್ಲು
ಕನ್ನಡ ಕಂದ ಬಾರೋ–ಅಮ್ಮನಡಿಗೆ ಹೂಚೆಲ್ಲು ೪

ಕನ್ನಡಕಂದ ಹಿಡಿದೋಡಬೇಡ ಅನ್ಯರ ಸೆರಗ
ಆಲಿಸುತಿಹುಳು ಕನ್ನಡಮ್ಮ ನಿನ್ನ ಮನದ ಕೊರಗ
ಮೈಮರಿಸಿತೆನಿನ್ನ ಮೃಗಜಾಲದ ಮೆರಗ–?
ಬಾಡಿಸದೆ ಅರ್ಪಿಸು ಕನ್ನಾಡಾಂಬೆಗೆ ನಿನ್ನ
ಬಾಳ ಬೆರಗ ೫

ಕನ್ನಡಮಾತೆ ಬಿಡೆನೆಂದಿಗೂ ನಿನ್ನ ಕೋಮಲ ಚರಣ
ತೋಡಿಕೊಂಬೆ ಸದಾ ನಿನ್ನಲೆನ್ನ ಹೃದಯ ಹಗರಣ
ಮೂಡಿಸಿ ಬೆಳಗಿಸು ಎನ್ನಲಿ ಸದಾ ಆಶಾಕಿರಣ
ಬಿಡೆನು ನಿನ್ನ ಬೆನಟ್ಟಿ ಬಂದರು ಮುಪ್ಪು ಮರಣ ೬

ಆಲಿಸೇ ಕನ್ನಡ ಜನನಿ ಎನ್ನ ಪ್ರೇಮ ಪ್ರಲಾಪ
ಎನ್ನ ವಿನಯ ವಂದನೆ ಆಗದಿರಲಿ ವ್ಯರ್ಥ ವಿಲಾಪ
ಎಂದಿಗಾಗ್ವುದೋ ನಿನ್ನೊಡನೆ ಸೌಭಾಗ್ಯದ ಸಲ್ಲಾಪ
ಅರಣ್ಯ ರೋದನವಾಗಿಸದೇ ಆಲಿಸೆನ್ನಾತ್ಮದಾಲಾಪ ೭

ನಿನ್ನ ಗೀತಗುಚ್ಛಗಳೆಗಿಹುದು ಹಿಮಗಿರಿಯ ಗರಿಮೆ
ಎಂತುಪಾಡಿ ಬಣ್ಣಿಸಲಿ ನಿನ್ನ ಸೊಂಪಸೊಲ್ಲ ಹಿರಿಮೆ
ಕನ್ನಡಿಗರೇ ಎಚ್ಚೆತ್ತು ಕೇಳಿ ಕನ್ನಡಮ್ಮನ ಮಹಿಮೆ
ನೀಡುತಿಹಳು ಎಮಗಾಗಿ ಅಮೃತದಾ ಒಲುಮೆ
ನಲುಮೆ ೮

# ಗ್ರಂಥಾವಲೋಕನ

**ಯುದ್ಧಗೀತೆಗಳು : ಸಂಪಾದಕರು ಮತ್ತು ಪ್ರಕಾಶಕರು: ಶ್ರೀ ಹೆಚ್. ಎಸ್. ರೇಣುಕಾ ಪ್ರಸಾದ್, ಬೆಂಗಳೂರು. ಆಕಾರ ಕ್ರೌನ್ ೧/೮; ಪುಟಗಳು ೩೮; ಬೆಲೆ ೭೫ ನ. ಪೈ.**

ಮೈಸೂರು ಸರ್ಕಾರದ ಗೃಹಸಚಿವರಾದ ಶ್ರೀ ಆರ್. ಎಂ. ಪಾಟೀಲರ ಮುನ್ನುಡಿಯೊಡನೆ ಹೊರಬಂದಿರುವ ಈ ಕವನ ಸಂಗ್ರಹ ಸಮಯೋಚಿತವಾಗಿದೆ. ಉತ್ಸಾಹೀ ತರುಣರಾದ ಶ್ರೀ ರೇಣುಕಾ ಪ್ರಸಾದ್‌ರವರು ಸ್ತುತ್ಯರ್ಹರು. ಈ ಕವನಸಂಗ್ರಹವನ್ನು ಎಲ್ಲ ಕನ್ನಡಿಗರೂ, ಮುಖ್ಯವಾಗಿ ಗಮಕಿಗಳು, ಹಾಡುಗಾರರು ಹೆಚ್ಚು ಹೆಚ್ಚಾಗಿ ಬಳಸಲು ಯತ್ನಿಸಬೇಕು. ಕನ್ನಡ ಜನತೆ ಜಾಗೃತರಾಗಬೇಕು. ಅನೇಕ ಗಣ್ಯ ವ್ಯಕ್ತಿಗಳು ಈ ಪುಸ್ತಕಕ್ಕೆ ಶುಭ ಕೋರಿ ಸಂದೇಶಗಳನ್ನು ಕಳುಹಿಸಿದ್ದಾರೆ.

ಇಂದಿನ ಪರಿಸ್ಥಿತಿ ಆಶಾದಾಯಕವಾಗಿಲ್ಲ. ಎಲ್ಲೆಲ್ಲೂ ಜನತೆಯಲ್ಲಿ ಯುದ್ಧಭೀತಿ ಮೂಡಿದೆ. ಚೀಣ ಭಾರತಕ್ಕೆ ಉದ್ದೇಶಪೂರ್ವಕವಾಗಿಯೇ ದ್ರೋಹ ಮಾಡಿದೆ. ಇಂಥ ಸಮಯದಲ್ಲಿ ಜನತೆಯನ್ನು ಹುರಿದುಂಬಿಸುವಂಥ ಯಾವ ಕಾರ್ಯವೇ ಆಗಲಿ ಸ್ತುತ್ಯಾರ್ಹ. ಹಾಗೂ ಸ್ವಾಗತಾರ್ಹ. ಈ ಸಂಗ್ರಹದಲ್ಲಿ ಅನೇಕ ಹೆಸರಾಂತ ಕವಿಗಳು ಕವನಗಳನ್ನು ಬರೆದಿರುತ್ತಾರೆ. ಶ್ರೀ ಕುವೆಂಪುರವರ ನುಡಿ ಹೀಗಿದೆ :—

> 'ಸೋದರ ಸೋದರಿಯರೆ ಮೇಲೇಳಿ
>         ಕರೆಯುತ್ತಿಹಳದೊ ರಣಕಾಳಿ
>   ದೇಶಪ್ರೇಮಾವೇಶವ ತಾಳಿ
>         ಖಳ ವೈರಿಯ ಸೀಳಿ'

ಇದನ್ನು ನಾವೆಲ್ಲರೂ ಗಮನಿಸಬೇಕು.

ಶ್ರೀ ಗೋವಿಂದ ಪೈಗಳ ಕವನದ ಶೀರ್ಷಿಕೆಯೇ ಆದರ್ಶವಾಗಿದೆ—'ರಾಹುವನು ತೊಲಗಿಸಿ ಕೇತುವನು ತಂದೆ.' ಅವರು ಹೇಳುವ ಮಾತುಗಳು ಅರ್ಥಪೂರ್ಣವಾಗಿದೆ. ಇಲ್ಲಿ ಗಮನಿಸಿ:—

> "ಏತರೀತೆರಿಗೆ? ಈ ವೆಚ್ಚವೀಸಾಲ!
> ಜಗದೆತ್ತಿಗೆ ಹೇರೆ ಹೇರುಗಳ ಹಿಂದೆ
> ಇಂತಪವ್ಯಯಿಸೆ ದೇಶದ ಧನಕೆ ಕಾಲ!
> ರಾಹುವನು ತೊಲಗಿಸಿದೆ ಕೇತುವನು ತಂದೆ."

ಕಾವ್ಯಾನಂದರು ಹಾಡಿರುವಂತೆ 'ಊರೂರೂ ಕಿತ್ತೂರಾಗಬೇಕು. ಮನೆ ಮನೆಯೂ ದುರ್ಗವಾಗಬೇಕು.' ಶ್ರೀ ಗೋಪಾಲಕೃಷ್ಣರಾಯರು ಸಾರುತ್ತಿದ್ದಾರೆ—"ಇಡು ಹೆಜ್ಜೆ, ಬಿಡು ಲಜ್ಜೆ, ನುಗ್ಗಿ ನಡೆ ಮುಂದೆ, ಹೊಡೆದಟ್ಟು ಚೀಣರನು ಇಂದೆ ಗಡಿಯಿಂದೆ" ಎಂದು. ಶ್ರೀ ಅರ್ಚಿಕ ವೆಂಕಟೇಶರು ತೀರ್ಪನ್ನು ಕೊಟ್ಟಿದ್ದಾರೆ—"ಅಂತಿಮ ಜಯ ನಮ್ಮದು" ಎಂದು. ಶ್ರೀ ನಾರಾಯಣ ಸಂಗಮರು ಸಂದೇಶವನ್ನು ಸಾರಿದ್ದಾರೆ—"ಯದ್ಧದುಂಧುಭಿ ಮೊಳಗಿತೆದ್ದೇಳಿರಿ" ಎಂದು. ಇವರ ವೀರವಾಣಿ ಆಕರ್ಷಕವಾಗಿದೆ. ಹಿರಿಯರಾದ ಶ್ರೀ ಶಿವಮೂರ್ತಿ ಶಾಸ್ತ್ರಿಗಳು 'ಬೆಂಕಿ ಹಿಮಗಿರಿಯೊಳಗೆ ಛಿಟಛಿಟಲ್ ಎನ್ನುತಿದೆ! ಸಂಕಟವ ಕಾಲವಿದು ಕನ್ನಡಿಗ ಖಡ್ಗವಿದೆ! ನುಗ್ಗಿ ಬರುತಿಹನಲ್ಲಿ ಪೀತರಾಕ್ಷಸನಿಂದು| ಬಗ್ಗು ಬಡಿಯುವುದವನ ಸೊಂಟ ಮುರಿಯುವ ತನಕ|| ಎಂದು ಹೇಳಿ ಕನ್ನಡಿಗರಿಗೆಲ್ಲ ಸ್ಫೂರ್ತಿ ಹರಿಸಿದ್ದಾರೆ.

ಶ್ರೀ ಬಿ. ಎಂ. ಇದಿನಬ್ಬರವರು 'ಚೀನೀಯರೇ ತೊಲಗಿರಿ' ಎಂದು ಒತ್ತಿ ಒತ್ತಿ ಹೇಳುತ್ತಿದ್ದಾರೆ. ಶ್ರೀ ಬಿಸ್ರಾರವರು 'ಬಂಗಾರ ಕೊಡುಬಾರ ತಂಗಿ' ಎಂದು ಬಂಗಾರವನ್ನು ಕೇಳಿದ್ದಾರೆ.

ಕಟ್ಟಕಡೆಯದಾಗಿ ಶ್ರೀ ಗಂಗವ್ವ ವಾಲಿಯವರು—'ಜಯ ನಮ್ಮದು ಕೊನೆಗೆ' ಎಂದು ಧೈರ್ಯದಿಂದ ಹೇಳುತ್ತ ನಮಗೆಲ್ಲಾ ನವಸ್ಫೂರ್ತಿ ನೀಡಿದ್ದಾರೆ. 'ಹೆಮ್ಮೆಯಿಂದ ನಡೆಯಿರಿ' ಎಂದು ಎಚ್ಚರಿಸಿರುವವರು—ಶ್ರೀ ತಿರುಕರವರು. ಹೀಗೆ ಎಲ್ಲ ಕವಿಗಳೂ ಅರ್ಥಪೂರ್ಣವಾಗಿ ಕವನಗಳನ್ನು ರಚಿಸಿ ಕನ್ನಡಿಗರ ಮುಂದಿಟ್ಟಿದ್ದಾರೆ. ಇನ್ನೂ ಕೆಲವರ ಕವಿತೆಗಳನ್ನು ಸೇರಿಸಬಹುದಾಗಿತ್ತು. ಒಟ್ಟಿನಲ್ಲಿ ಈ ಕವನಸಂಗ್ರಹ ಉತ್ತಮ ಗ್ರಂಥವಾಗಿದೆ. ಎಲ್ಲ ಕನ್ನಡಿಗರ ಬೆಂಬಲ ಅತ್ಯವಶ್ಯಕ.

**ಬೋಲಬುಗುರಿ : (ಕವನ ಸಂಗ್ರಹ) ಲೇಖಕರು : ಹೊಸಮನಿ ಸಂಗಮೇಶ; ಪ್ರಕಾಶಕರು: ಸಾಹಿತ್ಯ ಭಾಂಡಾರ, ಯರನಾಳ, ವಿಜಾಪುರ; ಪುಟಗಳು ೨೨; ಬೆಲೆ ೫೦ ನ.ಪೈ.**

ಸುಪ್ರಸಿದ್ಧ ಕವಿಗಳಾದ ಶ್ರೀ ಸಿದ್ದಯ್ಯ ಪುರಾಣಿಕ ಅವರ ಮುನ್ನುಡಿಯೊಡನೆ ಪ್ರಕಟವಾಗಿರುವ ಈ ಚಿಕ್ಕ ಹೊತ್ತಿಗೆ ಮಕ್ಕಳಿಗೆ ಅತ್ಯಂತ ಪ್ರಿಯವಾಗಿದೆ. ಮಕ್ಕಳಿಗಾಗಿಯೇ ರಚಿಸಲ್ಪಟ್ಟ ಈ ಕವನಗಳು ಮಕ್ಕಳ ಮನಸ್ಸನ್ನು ಆಕರ್ಷಿಸುವಂತಿವೆ. ಇದರಲ್ಲಿ ೨೦ ಕವನಗಳಿವೆ.

ಕವನಗಳ ಪಕ್ಕದಲ್ಲಿಯೇ ಚಿತ್ರಗಳೂ ಇರುವುದು ಶ್ಲಾಘನೀಯವಾಗಿದೆ. 'ಬೆಂಗಳೂರ ಬೋರ್ಡಿಂಗ್' ಎಂಬ ಕವನಕ್ಕೆ ಶೀರ್ಷಿಕೆ ಬದಲಾಯಿಸಿದ್ದಿದ್ದರೆ ಚೆನ್ನಾಗಿರುತ್ತಿತ್ತು. "ಕಿರಿಕಿರಿ ಮಾಡದಿರು' ಎಂಬ ಕವನಕ್ಕೂ ಅದರ ಬದಿಯಲ್ಲಿರುವ ಎಳೆಯ ಮಕ್ಕಳ ಚಿತ್ರಕ್ಕೂ ಸಂಬಂಧವಿದ್ದಂತೆಯೇ ಇಲ್ಲ. ಸಾಧ್ಯವಾದರೆ ಇನ್ನೂ ಸ್ವಲ್ಪ ದೊಡ್ಡವರಾದ ಬಾಲಕರ ಚಿತ್ರಗಳನ್ನು ಬಳಸಬೇಕು. ತೀರಾ ಎಳೆಯ ಶಿಶುಗಳು ಮಾತನಾಡುವಷ್ಟು ಶಕ್ತರೇ—ಎಂಬುದನ್ನು ಸ್ವಲ್ಪ ಗಮನಿಸಬೇಕು. 'ದೇವನ ಮಾಟದ ಗೊಂಬೆಗಳು' ಎಂಬ ಕವನ ಬಹು ಸೊಗಸಾಗಿದೆ. ಲೇಖಕರು ಕನ್ನಡಿಗರ ಪ್ರೋತ್ಸಾಹಕ್ಕೆ ಅರ್ಹರಾಗಿದ್ದಾರೆ.

—ಬ. ನ. ಸುಂ.

**ಭಗವಾನ್ ರಾಮಾನುಜ:** ಲೇಖಕರು: ಶ್ರೀವತ್ಸ; ಪ್ರಕಾಶಕರು: ಸುದರ್ಶನಂ ಕಂಪೆನಿ, ಅವೆನ್ಯೂ ರಸ್ತೆ, ಬೆಂಗಳೂರು–೨; ಬೆಲೆ ಎರಡು ರೂಪಾಯಿಗಳು.

ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ, ಬಸವೇಶ್ವರ—ಮೊದಲಾದ ಮತಾಚಾರ್ಯರ ಜೀವನ ಚರಿತ್ರೆಗಳನ್ನು ಬರೆಯುವವರಿಗೆ ಈ ಕಾಲದಲ್ಲಿ 'ಎಂಟೆದೆ' ಇರಬೇಕು! ಏಕೆಂದರೆ ಅಂತಹ ಲೇಖಕರು ಒಂದು ಕಡೆ ಪವಾಡ ಪವಿತ್ರವಾದಿಗಳ, ಇನ್ನೊಂದು ಕಡೆ ಐತಿಹಾಸಿಕ ಸತ್ಯಪ್ರೇಮಿಗಳ ಅಪ್ರಿಯವನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಆದರೆ ಈ 'ಆಚಾರ್ಯಗಣ'ದವರೆಲ್ಲ ವಿಭೂತಿ ಪುರುಷರು; ಭಾರತದ ಅಪೂರ್ವ ಪ್ರತಿಭಾ ಸಂಕೇತಗಳು. ಆ ವಿಭೂತಿಗಳು ಆಯಾ ಮತ–ಪಂಥದವರ ಮಿಾಸಲು ಒಡವೆಯಲ್ಲ; ಅವರು ಭಾರತೀಯರೆಲ್ಲರ ಒಡವೆ; ಸಂಸ್ಕೃತಿಯ ಅಧ್ಯಯನದಲ್ಲಿ ಆಸಕ್ತಿ, ವಿಭೂತಿ ಮರ್ಯಾದೆಯಲ್ಲಿ ಆದರ, ಇರುವ ದೇಶವಿದೇಶೀಯರೆಲ್ಲರ ಸಂಪತ್ತು. ಈ ಕಾರಣದಿಂದಾಗಿ ಭಾರತದ ಪ್ರೌಢಜೀವನದ, ಸಾಂಸ್ಕೃತಿಕ ವ್ಯವಸಾಯ ಜೀವನದ, ಎಲ್ಲ "ಕೃತಕೃತ್ಯ"ರ ಪರಿಚಯವೂ ಎಲ್ಲರಿಗೂ ಆಗಬೇಕು.

ರಾಮಾನುಜಾಚಾರ್ಯರು ಭಾರತದ ಮಹಾವಿಭೂತಿಗಣದಲ್ಲಿ ಒಬ್ಬರೆಂಬುದರಲ್ಲಿ ಯಾವ ಸಂಶಯವೂ ಇಲ್ಲ; ಯಾರೂ ಪ್ರಶ್ನೆಮಾಡುವ ಹಾಗಿಲ್ಲ. ಅವರು ವ್ಯವಸ್ಥೆಗೊಳಿಸಿದ ಶ್ರೀವೈಷ್ಣವದ, ಅವರು ಪ್ರತಿಪಾದಿಸಿದ ವಿಶಿಷ್ಟಾದ್ವೈತದ, ಕ್ಷೇತ್ರದಲ್ಲಿ ಅವರು ಅದ್ವಿತೀಯರು. ದಾರ್ಶನಿಕರಾಗಲಿ, ಸಾಹಿತಿಗಳಾಗಲಿ, ಕಲಾವಿದರಾಗಲಿ, ರಾಜನೀತಿ ವಿಶಾರದರೇ ಆಗಲಿ–ಒಬ್ಬರನ್ನು ಇನ್ನೊಬ್ಬರೊಂದಿಗೆ ಹೋಲಿಸಿ

"ಅವರಿಗಿಂತ ಇವರು ದೊಡ್ಡವರು;
ಇವರಿಗಿಂತ ಅವರು ಸಣ್ಣವರು;
ಮೂವರೊಂದಿಗೆ ತೂಗಿದಾಗ ಇಬ್ಬರೂ
ಗಣನಾರ್ಹರಲ್ಲ"

ಈ ಧೋರಣೆಯಲ್ಲಿ ಬರೆಯುವುದು ಅವಿನಯ ಮಾತ್ರವಲ್ಲ, ಅವಿವೇಕ. ಒಬ್ಬರನ್ನು ಇನ್ನೊಬ್ಬರೊಂದಿಗೆ ಹೋಲಿಸಿ ಜ್ಞಾನಕ್ಕೆ, ಅನುಭವಕ್ಕೆ, ಪ್ರತಿಭೆಗೆ, ಬೆಲೆ ಕಟ್ಟಲಾಗದು; ಅದು ಸಾಧುವಲ್ಲ.

ನಮ್ಮ ದೌರ್ಭಾಗ್ಯ. ಕ್ರಿಸ್ತಶಕ ೧೧–೧೨ನೆ ಶತಮಾನದಲ್ಲಿ ದೀರ್ಘಕಾಲ ಮಹಾಚೈತನ್ಯಪೂರ್ಣ ಜೀವನ ನಡೆಸಿ, ಶ್ರೀವೈಷ್ಣವ ಮಧುರ ವಿಪ್ಲವಕ್ಕೆ ಕಾರಣಭೂತರೆನಿಸಿದ್ದ, ರಾಮಾನುಜಾಚಾರ್ಯರ ಜೀವನ ವಿಚಾರ ಕುರಿತು ನಿಕರವಾದ ಒಂದಂಶವೂ ಗೊತ್ತಿಲ್ಲ. ಗೊತ್ತಿರುವ ಅಷ್ಟಿಷ್ಟೂ ಪವಾಡ ಮುದ್ರಾಂಕಿತ. ರಾಮಾನುಜಾಚಾರ್ಯರಿದ್ದ ಕಾಲ ದಕ್ಷಿಣ ಭಾರತದ ಇತಿಹಾಸದಲ್ಲಿ ಮಹತ್ವದ ಕಾಲ. ಜೈನ–ಶೈವ–ವೈಷ್ಣವ ಪಂಥಿಗಳ ಮುಮ್ಮುಖದ ಹೋರಾಟಕ್ಕೆ ಸಿಕ್ಕಿ ಸಮಾಜವು ಒಂದು ಬಗೆಯ 'ಕರ್ಕಶ ಸಂಸ್ಕಾರ'ಕ್ಕೆ ಸಿಕ್ಕಿದ ಕಾಲ. ಆಯಾ ಪಂಥ ಪಕ್ಷಪಾತಿಗಳು ತಮ್ಮ ತಮ್ಮ ಮತಾಚಾರ್ಯವನ್ನು ಕುರಿತು "ಎಲ್ಲ ಮಹತ್ತನ್ನು, ಎಲ್ಲ ಜಯವನ್ನು" ಅಪೇಕ್ಷಿಸಿ, ಉತ್ಪ್ರೇಕ್ಷಿಸಿ, ಪವಾಡ ಪ್ರಧಾನ ಪುರಾಣ ಶೈಲಿಯಲ್ಲಿ, ಬರೆಯುವುದರಲ್ಲೇನೂ ಆಶ್ಚರ್ಯವಿಲ್ಲ. ಪುರಾಣಗಳ ಮಾತು ಹಾಗಿರಲಿ ಪವಾಡಗಳಂತೂ ಅಂಧಶ್ರದ್ಧಾ ವ್ಯವಸಾಯಕ್ಕೆ ಉತ್ತಮ ಗೊಬ್ಬರ.

ರಾಮಾನುಜಾಚಾರ್ಯರು ಪೂರ್ಣ 'ವಿಚಾರ ಸ್ವಾತಂತ್ರ್ಯವಾದಿ'ಗಳೆಂದು ಕಂಡುಬರುತ್ತದೆ. ವಿಶಾಲ ಹೃದಯರೂ, ಮಾನವಕುಲ ಪ್ರೇಮಿಗಳೂ, ಎಂಬುದು ಸ್ಪಷ್ಟವಾಗಿದೆ.

"ಭಗವದ್ಭಕ್ತನಿಗೆ ಜಾತಿ
ಮತಗಳ ಗೊಂದಲವಿಲ್ಲ."

* * *

"ಕರುಣೆಯಿಂದ, ದಯೆಯ
ದೃಷ್ಟಿಯಿಂದ, ಚಂಡನೂ ಕೂಡ
ಉತ್ತಮ ಬ್ರಾಹ್ಮಣನಾಗಬಲ್ಲ."

* * *

"ಅಷ್ಟಾಕ್ಷರೀ ರಹಸ್ಯಮಂತ್ರ
ಭಗವಂತನ ದಿವ್ಯವಾಣಿ, ಪಾ
ಮರರ ಉದ್ಧಾರಕ್ಕಲ್ಲದಿದ್ದರೆ
ಅದರ ಸಾರ್ಥಕ್ಯವೆಂತು?"

* *

ಇಂತಹ ಮಾತುಗಳ ಹಿಂದಿನ ಮನೋಧರ್ಮ, ಸಂಸ್ಕಾರ, ಆದರ್ಶಗಳುಳ್ಳ, ವಿಭೂತಿಪುರುಷನ ನಿಜವಾದ ಜೀವನಕಥೆ ಬರೆಯಲು ಅವಶ್ಯಕವಾದ ಸಂಶೋಧನಾಕಾರ್ಯ ಶ್ರದ್ಧಾನ್ವಿತರು ಹಲವರು ಅವಶ್ಯಕ.

ಶ್ರೀವತ್ಸರು ಶ್ರದ್ಧಾಳು ಶ್ರೀವೈಷ್ಣವರಾಗಿ, 'ಪ್ರಪನ್ನಾಮೃತ' ವನ್ನೇ ಪ್ರಧಾನವಾಗಿ ಆಧಾರವಾಗಿಟ್ಟುಕೊಂಡು ಈ ಪುಸ್ತಕವನ್ನು ಬರೆದಿದ್ದಾರೆ. ಲಭ್ಯವಾದೆಲ್ಲ ಅಂಶಗಳನ್ನೂ ಸಂಗ್ರಹ ಮಾಡಿದ್ದಾರೆ. ಆದರೆ ಅವುಗಳ 'ಸಂಭವಾಸಂಭವ' ಆಗಲಿ, 'ಸತ್ಯಾಸತ್ಯತೆ' ಕುರಿತಾಗಲಿ ಪರೀಕ್ಷೆ ಮಾಡುವ ಗೋಜಿಗೇ ಅವರು ಹೋಗಿಲ್ಲ. ಅವರು ಉದ್ದೇಶ್ಯಪಡದ, ಮಾಡದ, ಕೆಲಸ ಕುರಿತು ಟೀಕೆ ಮಾಡುವುದು ಸರಿಯಲ್ಲ. ಮಾಡಿರುವ ಕೆಲಸವನ್ನು ಶ್ರದ್ಧೆ, ಆಸಕ್ತಿ, ಉತ್ಸಾಹದಿಂದ ಮಾಡಿದ್ದಾರೆ. ಅಚ್ಚು ಮಾಡಿಸುವಾಗ, ಕರಡು ಪ್ರತಿಗಳನ್ನು ತಿದ್ದುವಾಗ, ಎಚ್ಚರಿಕೆ ತೋರಿಸಬೇಕಾಗಿತ್ತು. ಐದು ಪುಟಗಳ 'ಸಂಸ್ಕೃತ ಶ್ಲೋಕಗಳ ಶುದ್ಧಾಶುದ್ಧ ಪತ್ರಿಕೆ' ಯೂ ಅಪೂರ್ಣ! ಹೀಗಾಗಬಾರದು. ಕನ್ನಡದಲ್ಲಿ ಬರುವ ಇಂತಹ ಪುಸ್ತಕಗಳು ಎತ್ತಿ ಕಣ್ಣಿಗೊತ್ತಿಕೊಳ್ಳುವಂತೆ, ನಯನ ಮನೋಹರವಾಗಿಯೂ, ಹೃದಯಾಕರ್ಷಕವಾಗಿಯೂ, ಇರಬೇಕು.

— ತಿ. ತಾ. ಶರ್ಮ

**ಶಿಕ್ಷಣ ಪ್ರದೀಪ:** ಬರೆದವರು: ಶ್ರೀ ಹೆಚ್. ಜೆ. ರಾಮಯ್ಯಂಗಾರ್, ಬಿ.ಎ., ಬಿ.ಟಿ., ಡಿ.ಬಿ.ಇ.; ಪ್ರಕಾಶಕರು; ಶ್ರೀಕಂಠೇಶ್ವರ ಪ್ರೆಸ್ ಮತ್ತು ಬುಕ್ ಡಿಪೋ, ಮಹಾತ್ಮ ಗಾಂಧಿ ರಸ್ತೆ, ತುಮಕೂರು; ಪುಟ ೩೧೩; ಸೈಜು ಕ್ರೌನ್ ೧/೮; ಬೆಲೆ ೩ ರೂಪಾಯಿ.

'ಶಿಕ್ಷಣ ಪ್ರದೀಪ' ವಿದ್ಯಾಭ್ಯಾಸ ಕ್ಷೇತ್ರದಲ್ಲಿ ದಾರಿದೀಪವೆಂದೇ ಹೇಳಬಹುದು. ಬಹಳ ದಿನಗಳಿಂದಲೂ ಉಳಿದಿದ್ದ ಕೊರತೆಯನ್ನು ಹೋಗಲಾಡಿಸಿ ಶ್ರೀ ರಾಮಯ್ಯಂಗಾರ್ ಅವರು ಈ ಪ್ರದೀಪವನ್ನು ರಚಿಸಿ, ಕನ್ನಡಿಗರಿಗೆ ಮಹೋಪಕಾರ ಮಾಡಿದ್ದಾರೆ. ಸರಕಾರದವರು ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರುವ ಹೊತ್ತಿಗೆ ಸರಿಯಾಗಿ ಈ ಹೊತ್ತಿಗೆ ಹೊರಬಂದುದು ಸ್ತುತ್ಯಾರ್ಹವಾಗಿದೆ. ಶಿಕ್ಷಣಕ್ಕೆ ಸಂಬಂಧಿಸಿದ ಅಭ್ಯಾಸವನ್ನು ಆಳವಾಗಿ ಮಾಡಿ ಈ ಗ್ರಂಥವನ್ನು ರಚಿಸಿದ್ದಾರೆ. ಶಿಕ್ಷಕರಿಗೆ ಇದೊಂದು ಕೈಪಿಡಿಯಾಗಿದೆ. ಕನ್ನಡ ಭಾಷೆಯಲ್ಲಿ ಬಹಳ ದಿನಗಳಿಂದ ಇದ್ದ ಕೊರತೆಯನ್ನು ತಕ್ಕಮಟ್ಟಿಗೆ ಅಯ್ಯಂಗಾರ್ ಅವರು ನಿವಾರಿಸಲು ಪ್ರಯತ್ನಿಸಿದ್ದಾರೆ. ಶಿಕ್ಷಣ ತತ್ವ, ಶಿಕ್ಷಣ ವಿಧಾನ ಮತ್ತು ಶಿಕ್ಷಣ ಸಂವಿಧಾನವನ್ನು ಕನ್ನಡಿಗರು ಕನ್ನಡದಲ್ಲಿ ಅರ್ಥ ಮಾಡಿಕೊಳ್ಳುವ ಕಾಲ ಬಂತು ಈ ಗ್ರಂಥದಿಂದ.

ಮೊದಲನೆಯ ಭಾಗದಲ್ಲಿ ಶಿಕ್ಷಣ ಸ್ವರೂಪದ ಸಿದ್ಧಾಂತ ಮತ್ತು ಗುರಿಗಳನ್ನು ಹನ್ನೆರಡು ಪ್ರಕರಣಗಳಲ್ಲಿ ವಿವರವಾಗಿ ಚರ್ಚಿಸಿದ್ದಾರೆ. ಎರಡನೆಯ ಭಾಗದಲ್ಲಿ ಶೈಕ್ಷಣಿಕ ಚಟುವಟಿಕೆಗೆ ಬಹಳ ಆದ್ಯತೆ ನೀಡಿದ್ದಾರೆ. ಈ ಗ್ರಂಥದಲ್ಲಿ ಉಕ್ತವಾಗಿರುವ ಶಿಕ್ಷಣ ಸ್ವರೂಪ, ವಿದ್ಯಾ ಇಲಾಖೆಯಲ್ಲಿ ಬೇರೂರಿದರೆ ನಾಡಿಗೆ ನಾಂದಿಯ ಕುರುಹು ಆಗುವುದರಲ್ಲಿ ಸಂಶಯವಿಲ್ಲ.

ಆರು ಅನುಬಂಧಗಳಲ್ಲಿ ವಿವಿಧ ವಿಷಯಗಳು ಬಂದಿವೆ. ಕೆಲವು ವಿಷಯಗಳು ಆಚರಣೆಯಲ್ಲಿ ತರಲು ಅಸಾಧ್ಯವಾಗಬಹುದು ಎಂಬುದು ಯೋಚಿಸತಕ್ಕ ವಿಷಯ.

ಶ್ರೀ ರಾಮಯ್ಯಂಗಾರ್ ಅವರು ಕನ್ನಡಕ್ಕೆ 'ಕ್ರಿಯಾತ್ಮಕ ಶಿಕ್ಷಣ, ವಿಶ್ವದ ದರ್ಶನ, ಸಾರ್ವತ್ರಿಕ ಪ್ರಾರ್ಥನೆ, ಕರ್ನಾಟಕ ದರ್ಶನ ಮತ್ತು ಭಾರತೀಯ ಸ್ವಾತಂತ್ರ್ಯ ಚಳುವಳಿ' ಗ್ರಂಥಗಳನ್ನು ರಚಿಸಿ ಕನ್ನಡಿಗರಿಗೆ ಚಿರಪರಿಚಿತರಾಗಿದ್ದಾರೆ. ಅವರಿಂದ ಇನ್ನೂ ಅತಿಶಯವಾದ ಸೇವೆ ಕನ್ನಡಿಗರಿಗೆ ಲಭಿಸಲಿ, ಶಿಕ್ಷಣ ಕ್ಷೇತ್ರಕ್ಕೆ ಮತ್ತಷ್ಟು ಹೆಚ್ಚಿನ ಗ್ರಂಥಗಳು ಅವರಿಂದ ಬರಲಿ ಎಂದು ಕನ್ನಡಿಗರು ಭುವನೇಶ್ವರಿಯನ್ನು ಪ್ರಾರ್ಥಿಸಿಕೊಳ್ಳೋಣ.

— ಹೀ. ಚಿ. ಶಾಂತವೀರಯ್ಯ

**ಯಕ್ಷಗಾನ ರತಿಕಲ್ಯಾಣ:** ಅರ್ಥಬರೆದವರು: ಸುಂದರರಾವ್, ಕುಂಬಳೆ; ಪ್ರಕಾಶಕರು: ಡಿ. ವಿ. ಹೊಳ್ಳ, ಕುಂದಾಪುರ; ಪುಟಗಳು: ೯೯; ಬೆಲೆ: ಒಂದು ರೂಪಾಯಿ.

ಕನ್ನಡ ನಾಡಿನ ಮುಖ್ಯ ಕಲೆಗಳಲ್ಲೊಂದಾದ ಯಕ್ಷಗಾನ ಸಾಹಿತ್ಯ ಪ್ರಸಂಗಗಳಲ್ಲಿ ಇದೂ ಒಂದು. ಈ ಪ್ರಸಂಗಕ್ಕೆ ಅರ್ಥ ಬರೆದವರಾದ ಶ್ರೀಮಾನ್ ಸುಂದರ ರಾವ್, ಕುಂಬಳೆ—ಅವರು ಯಕ್ಷಗಾನ ರಂಗಭೂಮಿಯಲ್ಲಿ ಪಾತ್ರ ವಹಿಸುತ್ತಿರುವ ಉತ್ತಮ ಕಲಾವಿದರೆಂದು ಅವರ ಗುರುಗಳೂ, ಈ ಕೃತಿಯ ಪ್ರಕಾಶಕರೂ ಆದ ವಿದ್ವಾನ್ ಶ್ರೀ ಡಿ. ವಿ. ಹೊಳ್ಳರವರು ವ್ಯಕ್ತಪಡಿಸಿರುವುದನ್ನು ನೋಡಿದರೆ ಶ್ರೀಯುತರು ದ್ವಿಮುಖವಾಗಿ ಕಲೋಪಾಸನೆ ಮಾಡುತ್ತಿರುವುದರಿಂದ ಒಂದಕ್ಕೊಂದು ಪೋಷಕವಾಗಲು ಸಾಧ್ಯವಿದೆಯೆನ್ನಲಡ್ಡಿಯಿಲ್ಲ.

ಪಾಂಡವರು ಯುದ್ಧದಲ್ಲಿ ಗೆದ್ದು ರಾಜ್ಯಸುಖವನ್ನನುಭವಿಸುವ ಕಾಲದಲ್ಲಿ ಅತ್ತ ಶ್ರೀ ಕೃಷ್ಣ ಪರಮಾತ್ಮನು

ದ್ವಾರಕಾನಗರದಲ್ಲಿ ಲೋಕ ಕಲ್ಯಾಣಾರ್ಥವಾಗಿ ಯೋಚಿಸುತ್ತಾ ಸಾಂಸಾರಿಕನಾಗಿ ಸಂಸಾರದಲ್ಲಿದ್ದವರಿಗೆಲ್ಲ ಆದರ್ಶಪ್ರಾಯನಾಗಿರುವುದೇ ಗೃಹಸ್ಥರ ಮಾರ್ಗ' ಎಂದುಕೊಂಡು ತನ್ನ ಕೌಟುಂಬಿಕ ಜೀವನದ ಬಗ್ಗೆ ಹೆಮ್ಮೆ ಪಟ್ಟುಕೊಳ್ಳುತ್ತಾನೆ. ಹೀಗಿರುವಾಗ ರುಕ್ಮಿಣೀದೇವಿಯು ಮಗನಾದ ಪ್ರದ್ಯುಮ್ನನ ಲಗ್ನ ವಿಚಾರದ ಬಗ್ಗೆ ಸ್ವಾಮಿಯಲ್ಲಿ ಪ್ರಸ್ತಾಪಿಸುತ್ತಾಳೆ. ಅದಕ್ಕುತ್ತರವಾಗಿ ಪ್ರಭುವು 'ಎಂಟೇ ಎಂಟು ದಿನಗಳಲ್ಲಿ ನಮ್ಮ ಕುಲ ಶೀಲಕ್ಕೊಪ್ಪುವ ಕನ್ಯಾರತ್ನವು ಯಾವಲೋಕದಲ್ಲಿದ್ದರೂ ಹುಡುಕಿ ತಂದು ಮದುವೆ ಮಾಡುವೆ' ನೆಂದು ಭರವಸೆಯಿಯಾಯುತ್ತಾನೆ.

ಆಗ ರುಕ್ಮಿಣೀದೇವಿಯು 'ಯಾವುದೇ ಕಾರಣದಿಂದ ಮದುವೆ ನಡೆಯದೇ ಹೋದರೆ ನಾನೂ ಮತ್ತು ಹದಿನಾರು ಸಾವಿರ ಸ್ತ್ರೀಯರೂ ನಿಮ್ಮ ಸೇವೆಯಿಂದ ದೂರವಾಗುವುದು ನಿಶ್ಚಯ' ಎಂದು ಪ್ರತಿಜ್ಞೆಮಾಡಿ ಹೋಗುತ್ತಾಳೆ.

ಆದರೆ ಎಲ್ಲಿ ಹುಡುಕಿದರೂ ಯೋಗ್ಯ ಕನ್ಯೆ ದೊರೆಯದೆ ಸ್ವಾಮಿಗೆ ಚಿಂತೆಯುಂಟಾಗಿ ಕಡೆಗೆ ತಂಗಿ ದ್ರೌಪದಿಯನ್ನು ಸ್ಮರಿಸುತ್ತಾನೆ. ಆಕೆಯಾದರೋ ಸಜ್ಜನೆಯಲ್ಲಿ ಪತಿಯೊಂದಿಗಿದ್ದುದರಿಂದ ಒಂದೆಡೆ ಪತಿಭಕ್ತಿ ಮತ್ತೊಂದೆಡೆ ದೈವಭಕ್ತಿ ಹೀಗೆ—ಡೋಲಾಯಮಾನಳಾಗಿ ಚಿಂತಿಸಿದರೂ ಅಣ್ಣನ ದರ್ಶನಾಶೀರ್ವಾದಗಳನ್ನು ಪಡೆದು ವಿಷಯವೇನೆಂದು ತಿಳಿಯುತ್ತಾಳೆ. ಆದರೆ ಅಷ್ಟೇ ರೀತಿಯಲ್ಲಿ ಕಾರ್ಯ ಮಾಡಲಾಗದೆಂದು ಶಂಕಿಸಿ, ಕಡೆಗೆ ಪರಮಾತ್ಮನ ಧೈರ್ಯದ ಮಾತುಗಳಿಂದ ಉತ್ತೇಜಿತಳಾಗುತ್ತಾಳೆ.

ಹಾಗೆ ಹುಡುಕ ಹೊರಟವಳು ಅನೇಕ ಕಡೆ ಸುತ್ತಿ ಕಡೆಗೆ 'ಕಮಲಾವತೀ' ಪಟ್ಟಣದಲ್ಲಿನ ಭೂಪನನ್ನು ಕಷ್ಟದಿಂದ ಭೇಟಿಮಾಡಿ, ಆ ಕಮಲ ಭೂಪನಿಗೆ ತಾನು ಯಾರೆಂಬುದನ್ನೂ ತಾ ಬಂದ ಕಾರ್ಯಕಾರಣವನ್ನೂ ವಿವರಿಸುತ್ತಾಳೆ. ಆದರಾದೊರೆಯು ಮೊದಲು ಮಾತು ಕೊಟ್ಟು ಅನಂತರದಲ್ಲಿ 'ಗೋವಳನ ಮಗನಿಗೆ ಹೆಣ್ಣು ಕೊಡುವುದಿಲ್ಲ' ವೆಂದು ವಾದಮಾಡುತ್ತಾನೆ.

ಆ ವೇಳೆಗೆ ಅವನ ಮಗಳಾದ ಸ್ವಯಂ 'ರತಿ'ಯೇ ಬಂದು ತನ್ನನ್ನು ಕೃಷ್ಣಸ್ವಾಮಿಯ ಮಗನಿಗೆ ಕೊಟ್ಟು ಮದುವೆ ಮಾಡುವುದು ಲೇಸೆಂದುಸುರುತ್ತಾಳೆ. ಸಂದರ್ಭೋಚಿತವಾಗಿ ಹೇಳಿದ ಮಗಳ ಮಾತಿಗೊಡಂಬಟ್ಟು ರಾಜನು ದ್ರೌಪದಿಯ ಕ್ಷಮೆ ಕೇಳುತ್ತಾನೆ.

ಆಗ ಈ ಸಂಗತಿಯನ್ನು ಅಣ್ಣ ಕೃಷ್ಣನಿಗೆ ತಿಳಿಸಿ ಪತಿಸಾನ್ನಿಧ್ಯ ಸೇರಲು ಬರುತ್ತಿದ್ದ ದ್ರೌಪದಿಯನ್ನು ಮಾರ್ಗಮಧ್ಯದಲ್ಲಿಯೇ ಸಂಧಿಸಿದ ಪಾರ್ಥನು ಕೋಪದಿಂದ ಕೊಲ್ಲಲುದ್ಯುಕ್ತನಾಗುತ್ತಾನೆ.

ಆ ಧ್ವನಿಗೇಳಿ ಹೊರಬಂದ ಭೀಮಸೇನನ ಮಾತಿನಂತೆ ಅಗ್ನಿ ಪರೀಕ್ಷೆಯಲ್ಲಿ ಉತ್ತೀರ್ಣಳಾದ ಪತ್ನಿಯನ್ನು ಒಳಗೆ ಕರೆದು ಅರ್ಜುನನು ವಿಷಯವನ್ನೆಲ್ಲಾ ತಿಳಿದುಕೊಳ್ಳುತ್ತಾನೆ.

ಕೃಷ್ಣನು ರುಕ್ಮಿಣಿಗೆ ವಿಷಯ ತಿಳಿಸಿ, ಗರುಡನಿಗೆ ಎಲ್ಲ ರಾಜರನ್ನೂ ಆಹ್ವಾನಿಸಲು ಕಳುಹಿಸಿ, ಬಂದವರನೆಲ್ಲಾ–ವಿಶೇಷವಾಗಿ ಪಾಂಡವರನ್ನು–ಮರ್ಯಾದೆಯಿಂದ ಇದಿರ್ಗೊಳ್ಳುತ್ತಾನೆ.

ಹೀಗೆ ಇವರೆಲ್ಲ ದಿಬ್ಬಣದೊಂದಿಗೆ ಹೋಗುತ್ತಿರಲು ಮಾರ್ಗಮಧ್ಯೆಯಿದ್ದ ದೊಡ್ಡ ಕಾಡಿನ ಅಧಿಪತಿಯಾದ 'ಮೇಘಾಸುರ' ನು ಅದೇನೆಂದು ನೋಡಲು ಕಳುಹಿಸಿದ ಅವನ ತಂಗಿ 'ಮೇಘಸ್ತನಿ' ಯು ಕೃಷ್ಣನಿಂದ ಹತಳಾಗಲು ಆ ರಾಕ್ಷಸನೇ ಮುಂದೆ ಬಂದು ತಂಗಿಯ ಗತಿಯನ್ನೇ ಹೊಂದುತ್ತಾನೆ.

ಇತ್ತ ರತಿ-ಮನ್ಮಥರ ಮದುವೆ ನೆರವೇರುತ್ತಿದ್ದಂತೆಯೇ ಅತ್ತ ಕಮಲಭೂಪನ ಸೋದರಳಿಯನೂ ಮದ್ರದೇಶಾಧಿಪತಿಯೂ ಆದ ಕೌಂಡ್ಲಿಕನು ಈ ವಿಚಾರವನ್ನು ಕೇಳಿ ಕಮಲಾವತೀ ಪಟ್ಟಣಕ್ಕೆ ಬಂದು ಯುದ್ಧಮಾಡಿ ಕೃಷ್ಣಾದಿಗಳನ್ನೆಲ್ಲ ಸೋಲಿಸುತ್ತಾನೆ. ಕಡೆಗೆ ದ್ರೌಪದಿಯೇ ಚಂಡಿಕೆಯ ರೂಪಿನಿಂದ ಅವನನ್ನು ಸಂಹರಿಸಿ ಹನುಮಂತನಿಂದ ಸಂಜೀವಿನೀ ಔಷಧ ತರಿಸಿ ಎಲ್ಲರನ್ನೂ ಎಚ್ಚರಿಸುತ್ತಾಳೆ.

ಒಟ್ಟಿನಲ್ಲಿ ಇಂತಹ ಯಕ್ಷಗಾನ ಪ್ರಸಂಗಗಳನ್ನು ಪ್ರಕಟಗೊಳಿಸುವುದು ಯುಕ್ತ ಕಾರ್ಯವೇ ಸರಿ.

—ಕೆ. ಪಿ. ಶಿವಲಿಂಗಯ್ಯ

# ಪರಿಷತ್ತಿನ ಸುದ್ದಿಗಳು

## ಉತ್ತರ ಕನ್ನಡ ಜಿಲ್ಲೆ ಹಾಗೂ ಗೋವಾಗಳಿಗೆ ಪರಿಷತ್ತಿನ ಪ್ರಮುಖರ ಭೇಟಿ

ದಿನಾಂಕ ೨೧-೪-೬೩ ನೇ ದಿನ ಪ್ರಸಿದ್ಧ ಕ್ಷೇತ್ರವಾದ ಗೋಕರ್ಣದಲ್ಲಿ ಸಾಹಿತ್ಯ ಪರಿಷತ್ತಿನ ಕಾರ್ಯಕಾರೀ ಸಮಿತಿಯ ಸಭೆಯು ಸೇರಿ ಅನೇಕ ಮಹತ್ವದ ವಿಷಯಗಳ ಬಗೆಗೆ ನಿರ್ಣಯಗಳನ್ನು ಕೈಗೊಂಡಿತು. ಈ ಸಂದರ್ಭದಲ್ಲಿ ಜಿಲ್ಲೆಯ ಅನೇಕ ಸ್ಥಳಗಳಿಗೆ ಪರಿಷತ್ತಿನ ಅಧ್ಯಕ್ಷರೂ ಮತ್ತು ಸದಸ್ಯರೂ ಭೇಟಿ ಕೊಟ್ಟರು.

ದಿನಾಂಕ ೧೯-೪-೬೩ ನೇ ದಿನ ಹುಬ್ಬಳ್ಳಿಯಿಂದ ಯಲ್ಲಾಪುರ ಮಾರ್ಗವಾಗಿ ಮಂಚಿಕೇರಿಗೆ ಬಂದು ಅಲ್ಲಿಯ ಶ್ರೀ ರಾಜರಾಜೇಶ್ವರಿ ಹೈಸ್ಕೂಲಿನ ಹಳೆಯ ವಿದ್ಯಾರ್ಥಿಗಳು ಏರ್ಪಡಿಸಿದ್ದ ಸಭೆಯಲ್ಲಿ ಭಾಗವಹಿಸಲಾಯಿತು. ಬಾಲಿಕೆಯರಿಂದ ಸ್ವಾಗತ ಗೀತೆಯೊಡನೆ ಪ್ರಾರಂಭವಾದ ಕಾರ್ಯಕ್ರಮ, ವಿದ್ಯಾರ್ಥಿ ಸಂಘದ ಅಧ್ಯಕ್ಷ ಶ್ರೀ ಜಿ. ಜಿ. ಹೆಗ್ಗಡೆ ಅವರ ಸ್ವಾಗತ ಭಾಷಣ, ಶ್ರೀ ಎಮ್. ಎಸ್. ಹೆಗ್ಗಡೆ ಅವರ ಪರಿಷತ್ತಿನ ಅಧ್ಯಕ್ಷರು ಹಾಗೂ ಸದಸ್ಯರ ಪರಿಚಯ ಭಾಷಣ ಮುಂತಾದುವು ಶ್ರೀ ಗಣಪತಿ ಭಟ್ಟರ ಹಿರಿಯತನದಲ್ಲಿ ಆರಂಭವಾಯಿತು. ಕಾರ್ಯಕ್ರಮಕ್ಕೆ ಸುತ್ತಲಿನ ಹಳ್ಳಿಗಳಿಂದಲೂ ಅನೇಕ ಜನರು ಆಗಮಿಸಿದ್ದರು. ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳೂ, ಶ್ರೀಗಳಾದ ಪ್ರೊ|| ಜಿ. ವೆಂಕಟಸುಬ್ಬಯ್ಯ, ಡಾ|| ಕೆ. ಎಂ. ಕೃಷ್ಣರಾವ್, ಮತ್ತು ಶ್ರೀ ವಿ. ಬಿ. ನಾಯಕ್ ಅವರುಗಳೂ 'ಕನ್ನಡ ಸಾಹಿತ್ಯದ ಪರಂಪರೆ' ಎಂಬುದರ ಬಗೆಗೆ ಮಾತನಾಡಿದರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಹಾಣಸಿಗಿ ಗಣಪತಿ ಭಟ್ಟರು–"**ನಮಗೆ ಇಂದು ಅಗತ್ಯವಾದ ಸಾಹಿತ್ಯ**" ಎಂಬ ವಿಷಯವಾಗಿ ಮಾತನಾಡಿ ಇಂತಹ ಸಂದರ್ಭ ಮಂಚಿಕೇರಿಗೆ ದೊರಕಿದ ಬಗೆಗೆ ಸಂತೋಷ ವ್ಯಕ್ತಪಡಿಸಿದರು. ಸಾಹಿತ್ಯ ಪರಿಷತ್ತಿನ ಪರವಾಗಿ ಗೌ|| ಕಾರ್ಯದರ್ಶಿಗಳಾದ ಶ್ರೀ ಅನ್ನದಾನಯ್ಯ ಪುರಾಣಿಕ ಅವರೂ, ಸ್ಥಾನಿಕರಾಗಿ ಶ್ರೀ ಭಟ್ ಅವರೂ ಉಪಕಾರ ಸ್ಮರಿಸಿದರು. ಆ ದಿನ ಸಂಜೆ ಪರಿಷತ್ತಿನ ಅಧ್ಯಕ್ಷರ ಮತ್ತು ಸದಸ್ಯರ ಗೌರವಾರ್ಥ ಕುಂದರಗಿಯ ಶ್ರೀ ಸುಬ್ರಾಯ ಹೆಗಡೆ ಅವರು ಭೋಜನಕೂಟವೇರ್ಪಡಿಸಿದ್ದರು. ಅಲ್ಲಿ ಭಾಗವಹಿಸಿ ಆ ದಿನ ಕುಂದರಗಿಯಲ್ಲಿಯೇ ಉಳಿದುಕೊಳ್ಳಲಾಯಿತು.

ದಿನಾಂಕ ೨೦-೪-೬೩ ರಂದು ಕುಂದರಗಿಯ ಮಹಾಜನರನ್ನು ಕಂಡು ಮಾತಾಡಿ, ಪ್ರಸಿದ್ಧ ಸ್ಥಳವಾದ ಕೋಟೆಮನೆಗೆ ಹೋಗಿ ಅಲ್ಲಿಯ ಶ್ರೀಮಾತಾ ಸಂಸ್ಕೃತ ಪಾಠಶಾಲೆಗೆ ಸಂದರ್ಶನ ನೀಡಿ ವಿದ್ಯಾರ್ಥಿಗಳ ಪ್ರವಚನ ಕೇಳಿ ಮುಂದೆ ಇತಿಹಾಸ ಪ್ರಸಿದ್ಧವಾದ ಸ್ವಾದಿಗೆ ತೆರಳಲಾಯಿತು. ಆ ದಿನ ಸ್ವಾದಿಯಲ್ಲಿ ಐತಿಹಾಸಿಕ ಹಳೆಯ ಸ್ಮಾರಕಗಳನ್ನು ನೋಡಿಕೊಂಡು, ಅಲ್ಲಿರುವ ಎಲ್ಲ ಪ್ರಸಿದ್ಧ ಮಠಗಳನ್ನೂ ಸಂದರ್ಶಿಸಿ ಮಧ್ಯಾಹ್ನಕ್ಕೆ ಶ್ರೀ ಸ್ವರ್ಣವಲ್ಲಿ ಮಠಕ್ಕೆ ಹೋಗಲಾಯಿತು. ಊಟ, ವಿಶ್ರಾಂತಿ ಮುಗಿಸಿ ಶ್ರೀಮತ್ ಸರ್ವಜ್ಞೇಂದ್ರ ಸರಸ್ವತೀ ಸ್ವಾಮಿಗಳವರ ದರ್ಶನ ಪಡೆದು ಶಿರಸಿಗೆ ತೆರಳಲಾಯಿತು.

ಅಲ್ಲಿ ಸಂಜೆ ೬ ಗಂಟೆಗೆ ಶ್ರೀ ಮಾರಿಕಾಂಬಾ ದೇವಾಲಯದ ವಿಶ್ವಸ್ತ ಮಂಡಳಿಯವರು ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಭಾಗವಹಿಸಲಾಯಿತು. ಪರಿಷತ್ತಿನ ಅಧ್ಯಕ್ಷರನ್ನೂ ಮತ್ತು ಸದಸ್ಯರನ್ನೂ ಮಂಡಲಿಯ ಅಧ್ಯಕ್ಷರು ಸ್ವಾಗತಿಸಿದರು. ಶ್ರೀ ಕುಂದರಗಿ ಅವರು ಪರಿಚಯ ಮಾಡಿಕೊಟ್ಟರು. ಶಿರಸಿಯ ಆರ್ಟ್ಸ ಮತ್ತು ಸೈನ್ಸ್ ಕಾಲೇಜಿನ ಪ್ರಿನ್ಸಿಪಾಲ ಶ್ರೀ ಲಿಂಗೇಶ ಶರ್ಮಾ ಅವರು ಅಧ್ಯಕ್ಷತೆ ವಹಿಸಿದ್ದರು. ಆಸ್ಥಾನ ವಿದ್ವಾಂ, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಶ್ರೀ ವಿ. ಬಿ. ನಾಯಕ್, ಡಾ|| ಕೆ. ಎಂ. ಕೃಷ್ಣರಾವ್, ಪ್ರೊ|| ಜಿ. ವೆಂಕಟಸುಬ್ಬಯ್ಯ, ಶ್ರೀ ಎಚ್. ಎಸ್. ರೇಣುಕಾಪ್ರಸಾದ್ ಅವರುಗಳು ಕನ್ನಡ ಸಾಹಿತ್ಯದ ವಿವಿಧ ಮುಖಗಳಬಗೆಗೆ ಮಾತನಾಡಿದರು. ದೇವಸ್ಥಾನದ ವ್ಯವಸ್ಥಾಪಕ ಶ್ರೀ ಬೈಲೂರ ಅವರು ಉಪಕಾರ ಸ್ಮರಿಸಿದರು. ಎಲ್ಲರಿಗೂ ದೇವಸ್ಥಾನದವರೇ ಉಪಹಾರದ ವ್ಯವಸ್ಥೆ ಮಾಡಿದ್ದರು.

ದಿನಾಂಕ ೨೧-೪-೬೩ರಂದು "**....ನೆನೆವುದೆನ್ನ ಮನಂ ಬನವಾಸಿ ದೇಶಮಂ**" ಎಂದು ಹಾಡಿದ ಮಹಾಕವಿಯ ಕ್ಷೇತ್ರವಾದ ಬನವಾಸಿಗೆ ತೆರಳಿ ಅಲ್ಲಿ ಎಲ್ಲ ನೋಡಿಕೊಂಡು ಕುಮಟೆಯ ಮೂಲಕ ಗೋಕರ್ಣಕ್ಕೆ ತೆರಳಲಾಯಿತು. ಕಾರ್ಯಸಮಿತಿಯಲ್ಲಿ ಭಾಗವಹಿಸಿ ಕಾರ್ಯಕಲಾಪಗಳನ್ನು ನಡೆಸಿದ ನಂತರ ಗೋಕರ್ಣ ಕ್ಷೇತ್ರದ ಮಹಾಜನರನ್ನು ಕರೆದು ಅವರೊಂದಿಗೆ ಪರಿಷತ್ತಿನ ಪರ ಉಪಹಾರ ನಡೆಸಲಾಯಿತು. ಇದರಲ್ಲಿ ಪರಸ್ಪರ ಪರಿಚಯವಾದುದಲ್ಲದೆ ಪರಿಷತ್ತಿನ ಬಗೆಗೆ ಕ್ಷೇತ್ರದ ಮಹಾಜನತೆಯಲ್ಲಿ ಗೌರವ-ಆದರ ಬರುವಂತಾಯಿತು.

ರಾತ್ರೆ ಗೋಕರ್ಣದ "ಸಾಹಿತ್ಯ ಸೇವಾ ಕಲಾಸಂಘ"ದವರು ಪರಿಷತ್ತಿನ ಸದಸ್ಯರ ಗೌರವಾರ್ಥ ಯಕ್ಷಗಾನ ತಾಳ

ಮುದ್ದಳೆಯ ಕಾರ್ಯಕ್ರಮವನ್ನು ಬಹು ಸುಂದರವಾಗಿ ನಡೆಸಿದರು. ಜಿಲ್ಲೆಯ ಪ್ರಸಿದ್ಧ ಯಕ್ಷಗಾನ ಕಲಾವಿದರುಗಳಾದ ಶ್ರೀ ರಾಜಾರಾಮ ಚಿತ್ರಗೇಮಠ, ಶ್ರೀ ವತ್ಸಲ ಜೋಷಿ ಅವರು, ಶ್ರೀ ಬೈಲಕೇರಿ, ಶ್ರೀ ಪನ್ನಿ ಕೃಷ್ಣ ಭಟ್ಟರು, ಶ್ರೀ ಜಿ. ಜಿ. ಶಾಸ್ತ್ರಿ ಮೊದಲಾದವರು ಭಾಗವಹಿಸಿ ಕಾರ್ಯಕ್ರಮವನ್ನು ಬಹು ಯಶಸ್ವಿಯಾಗಿ ನಡೆಸಿದರು.

ದಿನಾಂಕ ೨೨-೪-೬೩ ರಂದು ಗೋಕರ್ಣ ಗ್ರಾಮ ಪಂಚಾಯಿತಿಯವರು ಪರಿಷತ್ತಿನ ಅಧ್ಯಕ್ಷರನ್ನೂ ಸದಸ್ಯರನ್ನೂ ಬರಮಾಡಿಕೊಂಡು ಗೌರವಿಸಿದರು. ಅದೇ ಮಧ್ಯಾಹ್ನ ೪-೩೦ ಗಂಟೆಗೆ ಪರಿಷತ್ತಿನ ಪರ ಸಾರ್ವಜನಿಕ ಉಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸಿತ್ತು. ಪ್ರಸಿದ್ಧ ಹಿರಿಯ ಸಾಹಿತಿಗಳಾದ ಶ್ರೀ ಗೌರೀಶ ಕಾಯ್ಕಿಣಿ ಅವರು ಸ್ವಾಗತಿಸಿದರು. ಜಿಲ್ಲೆಯ ಸದಸ್ಯರಾದ ಶ್ರೀ ಎಲ್. ಎಸ್. ಹೆಗಡೆ ಕುಂದರಗಿ ಅವರು ಪರಿಷತ್ತಿನ ಕಾರ್ಯಕ್ರಮಗಳ ಬಗೆಗೆ ವಿವರಣೆ ನೀಡಿ, ಎಲ್ಲರ ಪರಿಚಯ ಮಾಡಿಕೊಟ್ಟರು. ಕುಮಟೆಯ ಕೆನರಾ ಕಾಲೇಜಿನ ಪ್ರಾಧ್ಯಾಪಕ ಶ್ರೀ ಕೆ. ಜಿ. ಶಾಸ್ತ್ರಿ ಅವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಶ್ರೀ ವಿ. ಬಿ. ನಾಯಕ್, ಪ್ರೊ|| ಜಿ. ವೆಂಕಟಸುಬ್ಬಯ್ಯ ಅವರುಗಳು ಮಾತನಾಡಿದರು. ಶ್ರೀ ಜಯರಾಮ ಶರ್ಮ ದೇವತೆ ಅವರು ನಾಗರಿಕರ ಪರವಾಗಿಯೂ, ಡಾ|| ಕೆ. ಎಂ. ಕೃಷ್ಣರಾಯರು ಪರಿಷತ್ತಿನ ಪರವಾಗಿಯೂ ಉಪಕಾರ ಸ್ಮರಿಸಿದರು.

ಸಂಜೆ ಶ್ರೀ ಜಯಭದ್ರಕಾಳಿ ಯಕ್ಷಗಾನ ಕಲಾಸಂಘದವರು ತಮ್ಮ ವಾರ್ಷಿಕೋತ್ಸವವನ್ನು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರ ಹಿರಿತನದಲ್ಲಿ ನಡೆಸಿದರು. ರಾತ್ರೆ ನಡೆದ ಈ ಯಕ್ಷಗಾನ ಪ್ರಯೋಗಕ್ಕೆ ಸಹಸ್ರಾರು ಜನ ಕಿಕ್ಕಿರಿದು ನೆರೆದಿದ್ದರು. ಬಹು ರಮ್ಯವಾಗಿ ನಡೆದ ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ ಪ್ರಸಿದ್ಧರಾದ ನಾಲ್ಕು ಜನ ಕಲಾವಿದರಿಗೆ ಪ್ರಶಸ್ತಿ ದಯಪಾಲಿಸಲಾಯಿತು. ಈ ವಿಚಾರದಲ್ಲಿ ಕಲಾವಿದರ ಪರಿಚಯ ವಿವರಗಳನ್ನು ಪರಿಷತ್ತಿಗೆ ಕಳುಹಿಸಿಕೊಡಲು ಶ್ರೀ ಗೌರೀಶ ಕಾಯ್ಕಿಣಿ ಅವರಿಗೆ ಕೇಳಿಕೊಳ್ಳಲಾಯಿತು.

ದಿನಾಂಕ ೨೩-೪-೬೩ ರಂದು ಬೆಳಿಗ್ಗೆ ಗೋಕರ್ಣದ ಕರ್ನಾಟಕ ಸಂಘದ ಸದಸ್ಯರು ಪರಿಷತ್ತಿನ ಅಧ್ಯಕ್ಷರನ್ನೂ ಸದಸ್ಯರನ್ನೂ ಬರಮಾಡಿಕೊಂಡು ಗೌರವಿಸಿದರು. ಅದೇ ದಿನ ಅಂಕೋಲೆಯ ಮಾರ್ಗವಾಗಿ ಜಿಲ್ಲಾ ಮುಖ್ಯಸ್ಥಳವಾದ ಕಾರವಾರಕ್ಕೆ ಭೇಟಿ ಕೊಡಲಾಯಿತು. ಅಲ್ಲಿನ ಪ್ರಮುಖರುಗಳಾದ ಶ್ರೀ ಕಾಮತ, ಶ್ರೀ ಸಭಾಯಿತ, ಶ್ರೀ ಚಿತ್ರಾಲ, ಶ್ರೀ ಪೈ ಮೊದಲಾದವರೊಡನೆ ಅನೇಕ ವಿಚಾರಗಳ ಬಗೆಗೆ ಮಾತನಾಡಲಾಯಿತು. ಸಂಜೆ ರೋಟರಿ ಕ್ಲಬ್ಬಿನವರು ಏರ್ಪಡಿಸಿದ್ದ ಸಾರ್ವಜನಿಕ ಸಭೆಯಲ್ಲಿ ಭಾಗವಹಿಸಿ ಭಾಷಣ ಮಾಡಲಾಯಿತು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಪ್ರೊ|| ಜಿ. ವೆಂಕಟಸುಬ್ಬಯ್ಯ, ಡಾ|| ಕೆ. ಎಂ. ಕೃಷ್ಣರಾವ್ ಅವರುಗಳು ಮಾತನಾಡಿದರು. 'ನಾಗರಿಕ' ಸಂಪಾದಕರಾದ ಶ್ರೀ ವಾಲಗಳ್ಳಿ ಹಾಗೂ ಶ್ರೀ ನಾ. ಸು. ಹೆಗಡೆ ಅವರು ಪರಿಚಯ ಮಾಡಿಕೊಟ್ಟರು. ಈ ಸಭೆಗೆ ಜಿಲ್ಲಾ ಡೆಪ್ಯುಟಿ ಕಮಿಷನರ್ ಶ್ರೀ ವರದನ್, ಪ್ರಸಿದ್ಧ ಅಧಿಕಾರಿ ಶ್ರೀ ಮಹಿಷಿ, ಪ್ರಸಿದ್ಧ ಇತಿಹಾಸಕಾರರಾದ ಶ್ರೀ ಮಾಂಜರೇಕರ್, ಶ್ರೀ ಸಭಾಯಿತ ಮೊದಲಾದವರು ಆಗಮಿಸಿದ್ದರು. ರೋಟರಿ ಪ್ರೆಸಿಡೆಂಟ್ ಶ್ರೀ ಚಿತ್ರಾಲ ಅವರು ಅಧ್ಯಕ್ಷತೆ ವಹಿಸಿದ್ದ ಈ ಸಭೆಗೆ ಕಾರವಾರ ಕನ್ನಡಿಗರು ಬಹುಸಂಖ್ಯೆಯಲ್ಲಿ ಆಗಮಿಸಿದ್ದರು. ಶ್ರೀ ಅನ್ನದಾನಯ್ಯ ಪುರಾಣಿಕ ಅವರು ಪರಿಷತ್ತಿನ ಪರವಾಗಿಯೂ ಅಡ್ವೋಕೇಟ್ ಶ್ರೀ ಸಭಾಯಿತ ಅವರು ರೋಟರಿ ಹಾಗೂ ನಾಗರಿಕರ ಪರವಾಗಿಯೂ ಉಪಕಾರ ಸ್ಮರಿಸಿದರು.

ದಿನಾಂಕ ೨೪-೪-೬೩ ರಂದು ಬೆಳಿಗ್ಗೆ ಪರಿಷತ್ತಿನ ಸಕಲ ಸದಸ್ಯರನ್ನು ಶ್ರೀ ಕಾಮತ್ ಅವರು ತಮ್ಮ ಮನೆಗೆ ಕರೆದು ಉಪಹಾರವನ್ನಿತ್ತು ಗೌರವಿಸಿದರು. ಶ್ರೀ ಸಭಾಯಿತ ಹಾಗೂ ಶ್ರೀ ಚಿತ್ರಾಲ ಅವರೂ ಕೂಡ ತಮ್ಮ ಮನೆಗೆ ಕರೆದುಕೊಂಡು ಹೋಗಿ ಗೌರವಿಸಿ ಪರಿಷತ್ತಿಗೆ ಆಜೀವ ಸದಸ್ಯರಾಗಿ ಉಪಕರಿಸಿದರು. ನಂತರ ರಾಜ್ಯದ ಪ್ರಸಿದ್ಧ ಉದ್ದಿಮೆಗಳಲ್ಲಿ ಒಂದಾದ ಕಾರವಾರದ ಸಹಕಾರೀ ನೌಕಾ ನಿರ್ಮಾಣದ ಕೇಂದ್ರಕ್ಕೆ ಭೇಟಿ ಕೊಡಲಾಯಿತು. ಶ್ರೀ ಪೈ ಅವರು ಸಕಲರನ್ನೂ ಬರಮಾಡಿಕೊಂಡು ಕಾರ್ಯಾಚರಣೆಗಳ ಬಗೆಗೆ ವಿವರಣೆ ನೀಡಿದರು.

ಅದೇ ದಿನ ಮಧ್ಯಾಹ್ನ, ಸದಾಶಿವಗಡ ಮೇಲಿಂದ ಗೋವಕ್ಕೆ ತೆರಳಲಾಯಿತು. ಗೋವ ರಾಜ್ಯದಲ್ಲಿನ ಪ್ರಸಿದ್ಧ ಸ್ಥಳವಾದ ಮಡಗಾಂವದ ಮೇಲಿಂದ ರಾಜಧಾನಿ ಸ್ಥಳವಾದ ಪಂಜಿಮಕ್ಕೆ ಹೋಗಿ ಅಲ್ಲಿ ವಾಸ್ತವ್ಯ ಮಾಡಲಾಯಿತು. ಅನೇಕ ಮಹತ್ವದ ಸ್ಥಳಗಳನ್ನು ಸಂದರ್ಶಿಸಿ ೨೫-೪-೬೩ ರ ಸಂಜೆಗೆ ಹುಬ್ಬಳ್ಳಿ ತಲುಪಿ ಬೆಂಗಳೂರಿಗೆ ಪ್ರಯಾಣ ಮಾಡಲಾಯಿತು. ಈ ಸಂಚಾರದಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳೂ, ಶ್ರೀಗಳಾದ ಡಾ|| ಕೃಷ್ಣರಾವ್, ಅ. ಪುರಾಣಿಕ, ಜಿ. ವೆಂಕಟಸುಬ್ಬಯ್ಯ, ಎಚ್. ಎಸ್. ರೇಣುಕಪ್ರಸಾದ್, ವಿ. ಬಿ. ನಾಯಕ್, ರಾ. ಗು. ಜೋಷಿ, ಎಲ್. ಎಸ್. ಹೆಗಡೆ ಮತ್ತು ಜಿ. ಶ್ರೀನಿವಾಸ್ ಅವರುಗಳು ಭಾಗವಹಿಸಿದ್ದರು.

ಒಟ್ಟಿನಲ್ಲಿ ಈ ಸಂಚಾರದಲ್ಲಿ ಅನೇಕ ಕಾರವಾರದ ಇತಿಹಾಸ ಪ್ರಸಿದ್ಧ ಸ್ಥಳಗಳನ್ನು, ತೀರಪ್ರದೇಶಗಳನ್ನೂ ಪರಿಷತ್ತಿನವರು ಸಂದರ್ಶಿಸಿದಂತಾಯಿತು.

## ಸೇಲಂ ಜಿಲ್ಲೆಯಲ್ಲಿ ಪರಿಷತ್ತಿನ ಅಧ್ಯಕ್ಷರ ಸಂಚಾರ

ಇದೇ ಏಪ್ರಿಲ್ ೨೮-೪-೬೩ ಮತ್ತು ೨೯-೪-೬೩ ನೇ ತಾರೀಖುಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಮೈಸೂರು ರಾಜ್ಯದ ಗಡಿಯಲ್ಲಿರುವ ಟೀಪುಸುಲ್ತಾನನ ಕಾಲದಲ್ಲಿ ಬಾರಾಮಹಲ್ ಎಂದು ಪ್ರಖ್ಯಾತಿಯನ್ನು ಪಡೆದಿದ್ದ ಸೇಲಂ ಜಿಲ್ಲಾ ಕನ್ನಡ ಪ್ರದೇಶಗಳನ್ನು ಖುದ್ದಾಗಿ ತಿಳಿದು ನೋಡಲು ಸಂಚರಿಸಿದರು.

ತಾ|| ೨೮-೪-೬೩ ರಂದು ಅಧ್ಯಕ್ಷರು ಹೊಸೂರು, ಡೆಂಕಣಿಕೋಟೆ ಮತ್ತು ಕೆಲಮಂಗಲಗಳನ್ನು ಸಂದರ್ಶಿಸಿ ಅಲ್ಲಿನ ಪ್ರಮುಖರನ್ನು ಕಂಡು ಮಾತುಕತೆ ನಡೆಸಿದರು. ತಾ|| ೨೯-೪-೬೩ ರಂದು ಸೂಳಗಿರಿ, ಕೃಷ್ಣಗಿರಿ ಮತ್ತು ಕಾವೇರಿಪಟ್ಟಣಗಳನ್ನು ಸಂದರ್ಶಿಸಿದರು.

ತಾ|| ೨೯ರ ಸಂಜೆ ಕಾವೇರಿಪಟ್ಟಣದಲ್ಲಿ ನಡೆದ ಶ್ರೀ ಬಸವೇಶ್ವರ ಜಯಂತಿ ಸಮಾರಂಭವನ್ನು ಉದ್ಘಾಟಿಸಿದರು. ಈ ಸಮಾರಂಭಕ್ಕೆ ಕೃಷ್ಣಗಿರಿ, ಮಾರಂಡಹಳ್ಳಿ, ಈರೋಡು ಮೊದಲಾದ ಕಡೆಯ ಕನ್ನಡದ ಅಭಿಮಾನಿಗಳು ಬಹಳವಾಗಿ ಸೇರಿದ್ದರು.

ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಈ ಸಂಚಾರದಲ್ಲಿ ಈ ಪ್ರದೇಶದಲ್ಲಿ ಕನ್ನಡ-ತೆಲುಗು-ತಮಿಳು ಮೂರೂ ಭಾಷೆಗಳು ಜನರ ಬಳಕೆಯಲ್ಲಿರುವುದನ್ನು ಮನಗಂಡರು. ಪ್ರಾಯಣ ೧೦೦ ಕ್ಕೆ ೩೫ ರಂತೆ ತೆಲುಗು, ೪೦ ರಂತೆ ಕನ್ನಡ, ೨೫ ರಂತೆ ತಮಿಳು ಈ ಭಾಗದಲ್ಲಿ ಬಳಕೆಯಲ್ಲಿದೆ ಎಂಬುದನ್ನು ಅವರು ಜನರಲ್ಲಿ ವಿಚಾರ ವಿನಿಮಯ ಮಾಡಿದ್ದರಿಂದ ಮನಗಂಡರು.

ಮದರಾಸು ಸರ್ಕಾರದವರು ತೆಲುಗು ಮತ್ತು ತಮಿಳು ಭಾಷೆಗಳಿಗೆ ಕೊಡುವ ಪ್ರೋತ್ಸಾಹವನ್ನು ಕನ್ನಡಕ್ಕೆ ಕೊಡದಿರುವುದು, ಆ ಭಾಗದ ಜನರ ಅಸಂತೋಷಕ್ಕೆ ಕಾರಣವಾಗಿದೆ ಎಂಬುದು ಪರಿಷತ್ತಿನ ಅಧ್ಯಕ್ಷರ ಗಮನಕ್ಕೆ ಬಹಳವಾಗಿ ಬಂದಿದೆ. ಇದಕ್ಕಾಗಿ ಸೇಲಂ ಜಿಲ್ಲಾ ಕನ್ನಡಿಗರ ಸಮ್ಮೇಳನವು ಹೊಸೂರಿನಲ್ಲಿ ಕ್ಷಿಪ್ರದಲ್ಲಿಯೇ ಸೇರಬೇಕೆಂದು ಅಧ್ಯಕ್ಷರು ಸಲಹೆ ಮಾಡಿದ್ದಾರೆ. ಹೊಸೂರು ತಾಲ್ಲೂಕಿನ ಗುಮ್ಮಳಾಪುರದಲ್ಲಿ ಹೊರತು ಇನ್ನೆಲ್ಲಿಯೂ ಕನ್ನಡ ಶಾಲೆಗಳಿಲ್ಲ ಎಂಬುದು ಅಧ್ಯಕ್ಷರ ಗಮನಕ್ಕೆ ಬಂದಿದೆ. ಸೇಲಂ ಜಿಲ್ಲೆಯಲ್ಲಿ ಕನ್ನಡವನ್ನು ಉಳಿಸಲು ಮತ್ತು ಬೆಳೆಸಲು ಕನ್ನಡ ಸಾಹಿತ್ಯ ಪರಿಷತ್ತಿಗಿಂತ ಗಡಿನಾಡು ಕ್ರಿಯಾಸಮಿತಿಯವರು, ಮುಖ್ಯವಾಗಿ ಮೈಸೂರು ಸರ್ಕಾರದವರು ಹೆಚ್ಚಿನ ಆಸಕ್ತಿ ವಹಿಸಬೇಕೆಂಬುದು ಪರಿಷತ್ತಿನ ಅಧಿಕಾರಿಗಳ ಅಭಿಪ್ರಾಯವಾಗಿದೆ. ಹೊಸೂರಿನಲ್ಲಿ ಕ್ಷಿಪ್ರದಲ್ಲಿಯೇ ನಡೆಯುವ ಕನ್ನಡಿಗರ ಸಮ್ಮೇಳನದಲ್ಲಿ ಈ ವಿಷಯವು ಕೂಲಂಕಷವಾಗಿ ಚರ್ಚೆಯಾಗಲಿದೆಯೆಂದು ಅಧ್ಯಕ್ಷರು ತಿಳಿಸಿದರು.

ಕನ್ನಡದ ಹಿತದೃಷ್ಟಿಯಿಂದ ಸಾಹಿತ್ಯ ಪರಿಷತ್ತಿನವರು ಕಳೆದ ವರ್ಷ ಕೊಡಗು ಮತ್ತು ಸೊಲ್ಲಾಪುರ ಜಿಲ್ಲೆಗಳಲ್ಲಿಯೂ ಈ ವರ್ಷ ಕಾರವಾರ, ಗೋವ ಮತ್ತು ಸೇಲಂ ಜಿಲ್ಲೆಗಳಲ್ಲಿಯೂ ಪ್ರವಾಸಮಾಡಿ ಕನ್ನಡ ಬಹಳ ದುಃಸ್ಥಿತಿಯಲ್ಲಿರುವುದನ್ನು ಮನಃಗಂಡಿದ್ದಾರೆ. ಈ ವಿಷಯಕ್ಕಾಗಿ ಇನ್ನೂ ಹೆಚ್ಚಿನ ಪ್ರಸಾರಕಾರ್ಯವನ್ನು ಕೈಗೊಳ್ಳಬೇಕೆಂಬುದು ಪರಿಷತ್ತಿನ ಹೆಬ್ಬಯಕೆಯಾಗಿದೆ.

## ಪರಿಷತ್ತಿನಲ್ಲಿ ವಸಂತ ಸಾಹಿತ್ಯೋತ್ಸವ

ಪದ್ಧತಿಯಂತೆ ಈ ವರ್ಷವೂ ವಸಂತ ಸಾಹಿತ್ಯೋತ್ಸವ ಸಮಾರಂಭವು ಯಶಸ್ವಿಯಾಗಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಜರುಗಿತು. ಏಪ್ರಿಲ್ ದಿನಾಂಕ ೧೩, ೧೪ ಮತ್ತು ೧೫ ರಂದು ಈ ಉತ್ಸವ ಏರ್ಪಟ್ಟಿದ್ದಿತು. ಮೈಸೂರು ಪ್ರಧಾನ ನ್ಯಾಯಾಸ್ಥಾನದ ಮುಖ್ಯ ನ್ಯಾಯಾಧೀಶರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಈ ಉತ್ಸವವನ್ನು ಉದ್ಘಾಟಿಸಿದರು.

### ಮೊದಲನೆ ದಿನದ ಕಾರ್ಯಕಲಾಪ

ಮೊದಲನೆಯ ದಿನದ ಕಾರ್ಯಕ್ರಮಕ್ಕೆ ಗೃಹಮಂತ್ರಿಗಳಾದ ಶ್ರೀ ಆರ್. ಎಂ. ಪಾಟೀಲರು ಅಧ್ಯಕ್ಷರಾಗಿದ್ದರು. ದೇವತಾ ಪ್ರಾರ್ಥನೆಯ ತರುವಾಯ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಸ್ವಾಗತ ಭಾಷಣ ಮಾಡಿ ವಸಂತ ಸಾಹಿತ್ಯೋತ್ಸವದ ಉದ್ದಿಶ್ಯವನ್ನು ತಿಳಿಸಿದರು.

ಆಮೇಲೆ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಉತ್ಸವದ ಉದ್ಘಾಟನೆ ಮಾಡಿ, ಪರಿಷತ್ತಿಗೆ ಶ್ರೀ ಡಿ. ವಿ. ಗುಂಡಪ್ಪನವರು ಉಪಾಧ್ಯಕ್ಷರಾಗಿ ಬಂದಮೇಲೆ ಈ ವಸಂತ ಸಾಹಿತ್ಯೋತ್ಸವ ಕಾರ್ಯಕ್ರಮ ಆರಂಭಿಸಿದ್ದು ಪರಿಷತ್ತಿನ ಇತಿಹಾಸದಲ್ಲಿ ತುಂಬಾ ಮಹತ್ವದ್ದೆಂದು ತಿಳಿಸಿದರು. ಪರಿಷತ್ತಿನ ಕರ್ತವ್ಯವನ್ನು ಕುರಿತು ಮಾತನಾಡುತ್ತಾ, ಪರಿಷತ್ತಿನ ಕಾರ್ಯಕಲಾಪಗಳು ಜನಜೀವನಕ್ಕೆ ನಿಕಟ ಸಂಬಂಧವಿರುವಂತೆ ಮಾಡಲು ಸಾಹಿತ್ಯ, ಸಂಸ್ಕೃತಿ ಹಾಗೂ ಮನರಂಜನ ಕಾರ್ಯಕ್ರಮಗಳು ಪರಿಣಾಮಕಾರಿಯಾದವೆಂದೂ ಹೇಳಿದರು. ತಮ್ಮ

ಭಾಷಣವನ್ನು ಮುಂದುವರೆಸಿ, "ಕರ್ನಾಟಕದಲ್ಲಿ ಮಾನಸಿಕ ಏಕೀಕರಣ ಸಾಧಿಸುವುದರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಮಹತ್ವದ ಕಾರ್ಯ ಮಾಡಬೇಕಾಗಿದ್ದು, ಅದನ್ನು ಮಾಡುತ್ತದೆಂದು ಹಾರೈಸುತ್ತೇನೆ" ಎಂದು ನುಡಿದರು.

ಅನಂತರ ದಿವಂಗತ ಶ್ರೀ ಬಿ. ಎನ್. ದಾತಾರ್ ಮತ್ತು ದೇವುಡು ಅವರ ಭಾವಚಿತ್ರದ ಅನಾವರಣ ಮಾಡಿದರು.

ಕುಮಾರಿ ಶ್ಯಾಮಲಾ, ಜಿ. ಭಾವೆ ಮತ್ತು ಅವರ ಸಂಗಡಿಗರಿಂದ ಸಂಗೀತವಾದವಾದ ಮೇಲೆ ಪ್ರಾಧ್ಯಾಪಕ ಶ್ರೀ ಸ. ಸ. ಮಾಳವಾಡ ಮತ್ತು ಪ್ರಾಧ್ಯಾಪಕ ಶ್ರೀ ಮರಿಯಪ್ಪ ಭಟ್ಟರು ಭಾಷಣ ಮಾಡಿದರು.

ತರುವಾಯ ಅಧ್ಯಕ್ಷ ಶ್ರೀ ಆರ್. ಎಂ. ಪಾಟೀಲರು ಮಾತನಾಡಿ, ಸಾಹಿತ್ಯ ಬೆಳೆಯಬೇಕು ಎಂಬ ಮನಸ್ಸಿನವರು ತಾವೆಂದು ಹೇಳಿ ಇಂದಿನ ತುರ್ತು ಪರಿಸ್ಥಿತಿಯಲ್ಲಿ ಸಾಹಿತಿಗಳು ವೀರರಸದ ಕಾವ್ಯವನ್ನು ಉತ್ಪತ್ತಿ ಮಾಡಬೇಕು ಎಂದು ಕೋರಿದರು.

ಪರಿಷತ್ತಿನ ಕಾರ್ಯದರ್ಶಿಗಳೊಬ್ಬರಾದ ಡಾ|| ಕೆ. ಎಂ. ಕೃಷ್ಣರಾಯರು ವಂದನಾರ್ಪಣ ಮಾಡಿದರು. ಇಲ್ಲಿಗೆ ಇಂದಿನ ಕಾರ್ಯ ಮುಗಿಯಿತು.

## ಎರಡನೆ ದಿನದ ಕಾರ್ಯಕ್ರಮ

ಎರಡನೆ ದಿನ ಅಂದರೆ ಏ. ದಿನಾಂಕ ೧೪ ರಂದು ಪ್ರಾತಃಕಾಲ ಸಾಹಿತ್ಯ ಗೋಷ್ಠಿ ಏರ್ಪಟ್ಟಿತ್ತು. ಮಾಜಿ ಮಂತ್ರಿ ಶ್ರೀ ಕಡಿದಾಳ್ ಮಂಜಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಇದೇ ಸಂದರ್ಭದಲ್ಲಿ ನಾಟಕರತ್ನ ಶ್ರೀ ಗುಬ್ಬಿ ವೀರಣ್ಣನವರ ಭಾವಚಿತ್ರ ಅನಾವರಣ ಸಮಾರಂಭವೂ ನಡೆಯಿತು. ಇದನ್ನು ಪರಿಷತ್ತಿನ ಅಧ್ಯಕ್ಷರು ಆಗಮಾಡಿಸಿದರು. ಕನ್ನಡ ಕಾವ್ಯಗಳು ಎಂಬ ವಿಚಾರವಾಗಿ ಡಾ|| ಕೆ. ಎಂ. ಕೃಷ್ಣರಾಯರೂ, ಕನ್ನಡ ಭಾವಗೀತೆಗಳು ಎಂಬ ಬಗ್ಗೆ ಶ್ರೀ ಅರ್ಚಿಕ ವೆಂಕಟೇಶ ಅವರೂ, ವಚನ ಸಾಹಿತ್ಯದ ಬಗ್ಗೆ ಶ್ರೀ ಜೀರಿಗೆಕಟ್ಟೆ ಬಸಪ್ಪನವರೂ, ಸಣ್ಣ ಕತೆಗಳ ಬಗ್ಗೆ ಶ್ರೀ ಕೆ. ನರಸಿಂಹಮೂರ್ತಿ ಅವರೂ ಮತ್ತು ಮಹಿಳಾ ಸಾಹಿತ್ಯ ಕುರಿತು ಶ್ರೀಮತಿ ಸೀತಮ್ಮ ಬೇಲಿ ಅವರೂ ಭಾಷಣ ಮಾಡಿದರು. ವಂದನಾರ್ಪಣೆಯೊಡನೆ ಕಾರ್ಯಕ್ರಮವು ಕೊನೆಗೊಂಡಿತು.

ಇದೇ ದಿವಸ ಸಂಜೆ ಮಹಿಳಾ ಕಾರ್ಯಕ್ರಮದ ವ್ಯವಸ್ಥೆಯಾಗಿತ್ತು. ವಿಧಾನಸಭಾ ಸದಸ್ಯೆಯರಾದ ಶ್ರೀಮತಿ ರತ್ನಮ್ಮ ಮಾಧವರಾವ್ ಅವರು ಇಂದಿನ ಕಾರ್ಯಕ್ರಮಕ್ಕೆ ಅಧ್ಯಕ್ಷರಾಗಿದ್ದರು. ವ್ಯವಸ್ಥಾಪಕರಾದ ಶ್ರೀಮತಿ ಕೆ. ಟಿ. ಬನಶಂಕರಮ್ಮನವರು ಸ್ವಾಗತ ಭಾಷಣ ಮಾಡಿದರು.

ವಿಧಾನ ಪರಿಷತ್ತಿನ ಉಪಾಧ್ಯಕ್ಷಿಣಿ ಶ್ರೀಮತಿ ಎಂ. ಅರ್. ಲಕ್ಷ್ಮಮ್ಮನವರು, ಮಹಾರಾಣಿ ಕಾಲೇಜಿನ ಶ್ರೀ ಚ. ಸುಂದರೇಶನ್ ಅವರು 'ವಚನಕಾರ್ತಿ ಲಿಂಗಮ್ಮ' ಎಂಬ ವಿಷಯವಾಗಿ, ಶ್ರೀಮತಿ ನಿರ್ಮಲಾ ಇನಾಂದಾರ್ ಅವರು 'ಸ್ತ್ರೀಯರು ಮತ್ತು ನಾಟಕ' ವಿಚಾರವಾಗಿ ಭಾಷಣ ಮಾಡಿದರು.

ವ್ಯವಸ್ಥಾಪಕರಲ್ಲೊಬ್ಬರಾದ ಶ್ರೀಮತಿ ಲಲಿತಾ ಅವರು ವಂದನಾರ್ಪಣ ಮಾಡಿದರು.

## ಮೂರನೇ ದಿನದ ಕಾರ್ಯಕ್ರಮ

ಏ. ದಿನಾಂಕ ೧೫ ರಂದು ಸಂಜೆ ಮೂರನೇ ದಿನದ ಕಾರ್ಯಕ್ರಮ ಮೇಯರ್ ಶ್ರೀ ಕೆ. ಎಂ. ನಂಜಪ್ಪನವರ ಅಧ್ಯಕ್ಷತೆಯಲ್ಲಿ ಜರುಗಿತು. ಪ್ರಾರ್ಥನಾನಂತರ ಪರಿಷತ್ತಿನ ಅಧ್ಯಕ್ಷರು ಸ್ವಾಗತ ಭಾಷಣ ಮಾಡಿದರು. ಡೆಪ್ಯುಟಿ ಮೇಯರ್‌ರವರಾದ ಶ್ರೀಮತಿ ಪಿ. ಆರ್. ಜಯಲಕ್ಷ್ಮಮ್ಮ ಅವರು ನಾಟಕ ಶಿರೋಮಣಿ ಎ. ವಿ. ವರದಾಚಾರ್ಯರು ಮತ್ತು ಶ್ರೀ ಸುಬ್ಬಯ್ಯನಾಯಿಡು ಅವರ ಭಾವಚಿತ್ರಗಳನ್ನ ಅನಾವರಣ ಮಾಡಿದರು. ನಾಟಕರತ್ನ ಶ್ರೀ ಗುಬ್ಬಿ ವೀರಣ್ಣನವರು ಈ ಸಮಾರಂಭದಲ್ಲಿ ಭಾಷಣಮಾಡಿ, ಜನತೆ ರಂಗಭೂಮಿಯ ಕಲಾವಿದರಿಗೆ ಪ್ರೋತ್ಸಾಹ ನೀಡಬೇಕೆಂದು ಪ್ರಾರ್ಥಿಸಿದರು.

ನಟಿ ಶ್ರೀಮತಿ ಬಿ. ಜಯಮ್ಮ ಅವರಿಂದ ವಚನ ಗಾಯನ, ಶ್ರೀಮತಿ ಅನ್ನಪೂರ್ಣ ರಘುಪತಿಶಾಸ್ತ್ರಿ, ಅವರಿಂದ ಕಾವ್ಯವಾಚನ, ಶ್ರೀ ಮತ್ತು ಶ್ರೀಮತಿ ಶ್ರೀನಿವಾಸ ಅಯ್ಯಂಗಾರ್ಯರಿಂದ ವೀಣಾವಾದನ ನಡೆಯಿತು.

ಶ್ರೀ ಎಸ್. ಕೆ. ಕುಲಕರ್ಣಿಯವರು ಭಾಷಣ ಮಾಡಿದರು. ಕಲಾ ಕೇಂದ್ರದವರಿಂದ "ನಂಜನ ನಂಜು" ಎಂಬ ನಾಟಕ ಪ್ರದರ್ಶನವಿತ್ತು. ವಂದನಾರ್ಪಣ ಮತ್ತು ರಾಷ್ಟ್ರಗೀತೆಯೊಡನೆ ಇಂದಿನ ಸಮಾರಂಭವು ಮುಕ್ತಾಯಗೊಂಡಿತು.

---

# ವಸಂತ ಸಾಹಿತ್ಯೋತ್ಸವ



ಏಪ್ರಿಲ್ ದಿನಾಂಕ ೧೪ ರಂದು ಮಹಿಳಾ ಕಾರ್ಯಕ್ರಮ ಏರ್ಪಟ್ಟಿದ್ದಾಗ ತೆಗೆದ ಚಿತ್ರ. ವಿಧಾನ ಪರಿಷತ್ತಿನ ಉಪಾಧ್ಯಕ್ಷಿಣಿ ಶ್ರೀಮತಿ ಎಂ. ಆರ್. ಲಕ್ಷಮ್ಮನವರು ಮಾತನಾಡುತ್ತಿದ್ದಾರೆ. ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀಮತಿ ರತ್ನಮ್ಮ ಮಾಧವರಾವ್ ಇವರ ಬಲಗಡೆ ಕುಳಿತಿದ್ದಾರೆ.

## ವರದಾಚಾರ್ – ಸುಬ್ಬಯ್ಯನಾಯಿಡು ಭಾವಚಿತ್ರ ಅನಾವರಣ



ಏಪ್ರಿಲ್ ದಿನಾಂಕ ೧೫ ರಂದು ಬೆಂಗಳೂರು ಕಾರ್ಪೊರೇಷನ್ ಡೆಪ್ಯುಟಿ ಮೇಯರ್ ಶ್ರೀಮತಿ ಪಿ. ಆರ್. ಜಯಲಕ್ಷಮ್ಮನವರು ನಾಟಕ ಶಿರೋಮಣಿ ಎ. ವಿ. ವರದಾಚಾರ್ ಮತ್ತು ಸುಬ್ಬಯ್ಯನಾಯಿಡು ಅವರ ಭಾವಚಿತ್ರ ಅನಾವರಣ ಮಾಡುವ ಸಂದರ್ಭದಲ್ಲಿ ತೆಗೆದ ಚಿತ್ರ. ಶ್ರೀಮತಿಯವರು ಮಾತನಾಡುತ್ತಿದ್ದಾರೆ. ಚಿತ್ರದಲ್ಲಿ ಮೇಯರ್ ಶ್ರೀ ಕೆ. ಎಂ. ನಂಜಪ್ಪನವರು ಮತ್ತು ನಾಟಕರತ್ನ ಶ್ರೀ ಗುಬ್ಬಿ ವೀರಣ್ಣನವರು ಇವರನ್ನು ಕಾಣಬಹುದು.

# ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.

## ಸಾಹಿತ್ಯ ಪರೀಕ್ಷೆಗಳ ಪಠ್ಯಪುಸ್ತಕಗಳ ಪಟ್ಟಿ, ೧೯೬೪

### ಕಾವ ಪರೀಕ್ಷೆ ೧೯೬೪

**I ಪದ್ಯ ಮತ್ತು ವ್ಯಾಕರಣ (ಪತ್ರಿಕೆ I)**

**ಪದ್ಯ:** ಕನ್ನಡ ಬಾವುಟ ಬೆಲೆ: ೨-೦೦
(ಪರಿಷತ್ತಿನ ಪ್ರಕಟನೆ)

೧. ಎರಡನೆಯ ತೆನೆ:

(i) ಕನ್ನಡ ನಾಡಿನ ಚೆಲುವು ಪುಟ ೧೭-೧೯

(ii) ಬಸವಣ್ಣ ಧರ್ಮದ ಕೆಚ್ಚು ಪುಟ ೩೮-೪೨

(iii) ದಾಸರ ಪದಗಳು ಪುಟ ೫೪-೬೧

೨. ಮೂರನೆಯ ತೆನೆ ಪೂರ್ತಿ ಪುಟ ೭೩ ರಿಂದ ೮೩ ಪೂರ್ತಿ

೩. ಗಮಕ ಕಾವ್ಯಮಂಜರಿ: ಪುಟ ೪೧ ರಿಂದ ಪೂರ್ತಿ. (ಪರಿಷತ್ತಿನ ಪ್ರಕಟಣೆ)
ಬೆಲೆ: ೧-೦೦

**ವ್ಯಾಕರಣ**

(ಆಯಾ ಪ್ರಾಂತಗಳ ಪ್ರೌಢಶಾಲೆಗಳಿಗೆ ನಿಯಮಿತವಾಗಿರುವ ವ್ಯಾಕರಣ)

**II ಗದ್ಯ ಮತ್ತು ಪ್ರಬಂಧ ರಚನೆ (ಪತ್ರಿಕೆ II)**

೧. ರಾಮಾಚಾರಿಯ ನೆನಪು ಪು. ತಿ. ನ.
ಪ್ರಕಾಶಕರು: ಕಾವ್ಯಾಲಯ,
ಮೈಸೂರು ಬೆಲೆ: ೧-೫೦

೨. ಆಧುನಿಕ ಗದ್ಯ ಸಾಹಿತ್ಯ: ಭಾಗ I
(ಪರಿಷತ್ತಿನ ಪ್ರಕಟಣೆ) ಬೆಲೆ: ೨-೫೦

೩. ಭಗೀರಥ: ಅನ್ನದಾನಯ್ಯ ಪುರಾಣಿಕ.
ಶ್ರೀ ಗೌರೀ ಶಂಕರ ಬುಕ್ ಡಿಪೋ
ದೇವರಾಜ ಮಾರ್ಕೆಟ್, ಮೈಸೂರು.
ಬೆಲೆ: ೧-೫೦

**III ಚರಿತ್ರೆ ಮತ್ತು ಲಲಿತಕಲೆ (ಪತ್ರಿಕೆ III)**

೧. ಕರ್ನಾಟಕ ಸಂಸ್ಕೃತಿ: (ದೇವುಡು)
ಶಾರದಾ ಪ್ರಕಟನಾಲಯ, ಅರಳೇಪೇಟೆ
ಬೆಂಗಳೂರು-೨ ಬೆಲೆ: ೩-೦೦

೨. ಕನ್ನಡ ನಾಡಿನ ಚರಿತ್ರೆ, ಭಾಗ III "ಕಲೆ"
(ಪರಿಷತ್ತಿನ ಪ್ರಕಟಣೆ) ಬೆಲೆ: ೧-೨೫

---

### ಜಾಣ ಪರೀಕ್ಷೆ ೧೯೬೪

**I ಪದ್ಯ ಮತ್ತು ನಾಟಕ (ಪತ್ರಿಕೆ I)**

೧. ಕಾವ್ಯ ಸೌರಭ: ಬೆಲೆ: ೨-೦೦
(ಪರಿಷತ್ತಿನ ಪ್ರಕಟಣೆ)

೨. ಕನ್ನಡ ಬಾವುಟ

(i) ಎರಡನೆಯ ತೆನೆ ಪುಟ ೨೧ ರಿಂದ ೩೦ ಮತ್ತು ೪೩ ರಿಂದ ೫೩.

(ii) ನಾಲ್ಕನೆ ತೆನೆ ಪುಟ ೮೭ ರಿಂದ ೧೨೧

೩. ಹೊಳಪು-ಝಳಪು:
ಪ್ರಕಾಶಕರು: ಕರ್ನಾಟಕ ಸಂಘ
ಗೌ|| ಆರ್ಟ್ಸ್ ಮತ್ತು ಸೈಯಿನ್ಸ್
ಕಾಲೇಜು, ಬೆಂಗಳೂರು.

೪. ಮೂರು ಸ್ಪರ್ಧಾ ನಾಟಕಗಳು ಬೆಲೆ ೨-೭೫
(ಪರಿಷತ್ತಿನ ಪ್ರಕಟಣೆ)

**II ಗದ್ಯ ಮತ್ತು ಪ್ರಬಂಧ (ಪತ್ರಿಕೆ II)**

೧. ಕರ್ನಾಟಕ ಸಂದರ್ಶನ:
ಪುಟ ೩೪೯ ರಿಂದ ೪೪೪
ಬಿ. ಶಿವಮೂರ್ತಿ ಶಾಸ್ತ್ರಿಗಳು, ಶರಣ
ಸಾಹಿತ್ಯ ಕಾರ್ಯಾಲಯ, ೧೮೦,

ರಂಗಸ್ವಾಮಿ ಗುಡಿ ಬೀದಿ,
ಬೆಂಗಳೂರು-೨ ಬೆಲೆ: ೫-೦೦

೨. ರಸ-ವಿರಸ: ಶ್ರೀಮತಿ ಪದ್ಮ ಎಮ್. ಶೆಣೈ
ಬೆಲೆ: ೨-೫೦

Pais Hill, Lalbaugh
Mangalore-3

೩. ಗೊಮ್ಮಟ ದರ್ಶನ: ಡಾ|| ಕೆ. ಎಂ. ಕೃಷ್ಣ ರಾವ್, ಸುರಚಿ ಪ್ರಕಾಶನ, ಸರಸ್ವತೀ ಪುರಂ, ಮೈಸೂರು-೫ ಬೆಲೆ: ೨-೦೦

೪. ಸಾಹಿತ್ಯೋಪಾಸನ: ಡಾ|| R. S. ಮುಗುಳಿ ಉಷಾ ಸಾಹಿತ್ಯ ಮಾಲೆ, ಮೈಸೂರು.
ಬೆಲೆ: ೨-೨೫

೫. ಜೇಮ್ಸ್ ಎಬ್ರಹಾಂ ಗಾರ್ಫೀಲ್ಡ್‌ನ ಚರಿತ್ರೆ, (ಪರಿಷತ್ತಿನ ಪ್ರಕಟಣೆ) ಬೆಲೆ: ೧-೦೦

## III ವ್ಯಾಕರಣ, ಛಂದಸ್ಸು, ಅಲಂಕಾರ ಶಾಸ್ತ್ರ (ಪತ್ರಿಕೆ III)

೧. ವ್ಯಾಕರಣ: ಹಳಗನ್ನಡ ವ್ಯಾಕರಣ.

೨. ಛಂದಸ್ಸು: ಗಣಗಳು, ಪ್ರಾಸಗಳು, ವೃತ್ತಗಳು, ಶಾರ್ದೂಲ, ಮತ್ತೇಭ, ಉತ್ಪಲ, ಚಂಪಕ, ಸ್ರಗ್ಧರೆ, ಮಹಾಸ್ರಗ್ಧರೆ, ಮಾಲಿನಿ ಕಂದ, ಆರು ಷಟ್ಪದಿಗಳು, ರಗಳೆಗಳು, ಸಾಂಗತ್ಯ, ದ್ವಿಪದಿ, ತ್ರಿಪದಿ, ಸೀಸಪದ್ಯ, ಆಧುನಿಕ ಭಾವಗೀತೆಗಳಲ್ಲಿ ಬರುವ ಛಂದಸ್ಸು.

೩. ಅಲಂಕಾರ: ಶಬ್ದಾಲಂಕಾರ, ಅರ್ಥಾಲಂಕಾರಗಳಲ್ಲಿ ಉಪಮೆ, ರೂಪಕ, ಉತ್ಪ್ರೇಕ್ಷೆ, ಅತಿಶಯೋಕ್ತಿ, ಅರ್ಥಾಂತರನ್ಯಾಸ, ಶ್ಲೇಷೆ, ವಿರೋಧಾಭಾಸ, ರಸ, ಕವಿ ಸಮಯ, ಕಾವ್ಯ ಸ್ವರೂಪ, ಕಾವ್ಯದ ಗುಣಗಳು ಮತ್ತು ದೋಷಗಳು.

—ಮೈಸೂರು ವಿಶ್ವ ವಿದ್ಯಾನಿಲಯದಿಂದ ಪ್ರಕಟವಾದ "ಕನ್ನಡ ಕೈಪಿಡಿ" ಯಲ್ಲಿ ಬರುವ ಭಾಗಗಳನ್ನು ಬೋಧಿಸಬೇಕು.
ಬೆಲೆ: ೨-೫೦

## IV ಸಾಹಿತ್ಯ ಚರಿತ್ರೆ ಮತ್ತು ಸಂಸ್ಕೃತಿ (ಪತ್ರಿಕೆ IV)

೧. ಕನ್ನಡ ನಾಡಿನ ಚರಿತ್ರೆ, ಭಾಗ II, (ಪರಿಷತ್ತಿನ ಪ್ರಕಟಣೆ) ಬೆಲೆ: ೨-೦೦

೨. ಕನ್ನಡ ಸಂಸ್ಕೃತಿ: ಯಂ. ಮರಿಯಪ್ಪ ಭಟ್ಟ, ಪ್ರಕಾಶಕರು: ಕರ್ನಾಟಕ ಸಂಘ, ಮದರಾಸು ವಿಶ್ವವಿದ್ಯಾಲಯ. ಬೆಲೆ: ೧-೨೫

ಜೊತೆಗೆ ಈ ಕೆಳಗೆ ಕಾಣಿಸಿರುವ ಕವಿಗಳ ಪರಿಚಯ ಹೊಂದಿರಬೇಕು:

೧. ಪಂಪ, ರನ್ನ, ಒಂದನೇ ನಾಗವರ್ಮ, ನಾಗಚಂದ್ರ, ನಯಸೇನ, ನೇಮಿಚಂದ್ರ, ಜನ್ನ, ಆಂಡಯ್ಯ.

೨. ಬಸವಣ್ಣ, ಮಹಾದೇವಿ ಅಕ್ಕ, ಹರಿಹರ, ರಾಘವಾಂಕ, ನಿಜಗುಣಶಿವಯೋಗಿ, ಚಾಮರಸ, ವಿರೂಪಾಕ್ಷ, ಗುಬ್ಬಿ ಮಲ್ಲಣಾರ್ಯ ಷಡಕ್ಷರಿ, ಸರ್ವಜ್ಞ, ಬಸವಪ್ಪಶಾಸ್ತ್ರಿ.

೩. ಕಂತಿ, ದುರ್ಗಸಿಂಹ, ರುದ್ರಭಟ್ಟ, ನಾರಣಪ್ಪ, ಕನಕದಾಸರು, ಪುರಂದರದಾಸರು, ಜಗನ್ನಾಥದಾಸರು, ಚಿಕುಪಾಧ್ಯಾಯ, ಲಕ್ಷ್ಮೀಶ, ಹೊನ್ನಮ್ಮ.

೪. ನೃಪತುಂಗ, ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ, ಸಾಳ್ವ, ತಿರುಮಲಾರ್ಯ.

[ಉಪಾಧ್ಯಾಯರು ಈ ಭಾಗಗಳನ್ನು ಹೇಳಿಕೊಡಬೇಕಾದಾಗ ಡಾ|| ರಂ. ಶ್ರೀ. ಮುಗಳಿ ಅವರ "ಕನ್ನಡ ಸಾಹಿತ್ಯ ಚರಿತ್ರೆ", ಶ್ರೀ ಆರ್. ನರಸಿಂಹಾಚಾರ್ಯರ "ಕರ್ನಾಟಕ ಕವಿಚರಿತೆ"–ಕನ್ನಡ ಕೈಪಿಡಿ ಭಾಗ II, ಪ್ರೊ|| ಧಾರವಾಡಕರ್ ಅವರ "ಕನ್ನಡ ಭಾಷಾ ಶಾಸ್ತ್ರ", ಮತ್ತು ಡಾ|| ಕರ್ಕಿಯವರ "ಛಂದೋ ವಿಕಾಸ" ಇವುಗಳನ್ನೂ ಆಧಾರವಾಗಿ ಅವಲೋಕನ ಮಾಡಬೇಕು.]

ಅನ್ನದಾನಯ್ಯ ಪುರಾಣಿಕ
ಕೆ. ಎಂ. ಕೃಷ್ಣರಾವ್
ಗೌರವ ಕಾರ್ಯದರ್ಶಿಗಳು

# ಕನ್ನಡದ ಸುದ್ದಿಗಳು

**ಬೆಂಗಳೂರು**

ದಕ್ಷಿಣ ಅಮೇರಿಕದ ಈಕ್ವಿಡಾರ್ ರಾಜ್ಯದ ಸಾಹಿತ್ಯ ಮತ್ತು ಸಂಸ್ಕೃತಿ ಶಾಖೆಯ ಮುಖ್ಯಾಧಿಕಾರಿ ಮಿಸ್ಟರ್ ಜೆ. ಇ. ಅಡಂ ಅವರು ತಮ್ಮ ಸಾಂಸ್ಕೃತಿಕ ನಿಯೋಗ ಪ್ರವಾಸದ ಅಂಗವಾಗಿ ಏಪ್ರಿಲ್ ದಿನಾಂಕ ೧೩ರಂದು ಶನಿವಾರ ಮಧ್ಯಾಹ್ನ ೨ ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿಗೆ ಭೇಟಿ ಇತ್ತಿದ್ದರು. ಪರಿಷತ್ತಿನ ಪರವಾಗಿ ಗೌ॥ ಕಾರ್ಯದರ್ಶಿಗಳಾದ ಡಾ॥ ಕೆ. ಎಂ. ಕೃಷ್ಣ ರಾಯರು ಅವರನ್ನು ಸ್ವಾಗತಿಸಿ, ಆ ಸಮಯದಲ್ಲಿ ಪರಿಷತ್ತಿನಲ್ಲಿ ಸಮಾವೇಶವಾಗಿದ್ದ ಕನ್ನಡ ನಿಘಂಟು ಸಂಪಾದಕ ಸಮಿತಿಯ ಸದಸ್ಯರನ್ನು ಅವರಿಗೆ ಪರಿಚಯ ಮಾಡಿಕೊಟ್ಟು ಕನ್ನಡ ಸಾಹಿತ್ಯ ಪರಿಷತ್ತಿನ ಉಗಮ ಸಾಧನೆಗಳನ್ನು ಕುರಿತು ಅತಿಥಿಗಳಿಗೆ ಹೇಳಿ ಹೂಮಾಲೆಯನ್ನರ್ಪಿಸಿದರು.

ಪ್ರೊ. ಡಿ. ಎಲ್. ನರಸಿಂಹಾಚಾರ್ಯರು ಪರಿಷತ್ತಿನ ವಿಚಾರವನ್ನು ಮತ್ತು ಪರಿಷತ್ತು ಕೈಗೊಂಡಿರುವ ನಿಘಂಟು ಸಂಪಾದನ ಕಾರ್ಯ ವಿವರವನ್ನೂ ಅತಿಥಿಗಳ ಗಮನಕ್ಕೆ ತಂದುಕೊಟ್ಟರು. ನಿಘಂಟಿನ ಮಾದರಿ ಪುಟಗಳನ್ನೂ, ಶಬ್ದಸಂಗ್ರಹ ಪಟ್ಟಿಕೆಗಳನ್ನೂ ಗ್ರಂಥಸೂಚಿಯನ್ನೂ ತೋರಿಸಲಾಯಿತು. ಪರಿಷತ್ತಿನ ನೂತನ ಕಟ್ಟಡ, ಅಚ್ಚುಕೂಟದ ವಿಸ್ತರಣ, ರಂಗಮಂದಿರ, ಗ್ರಂಥ ಭಂಡಾರಗಳನ್ನು ಅತಿಥಿಗಳಿಗೆ ತೋರಿಸಲಾಯಿತು.

ಬಸವನಗುಡಿಯ ದಿವ್ಯನಾಮ ಭಜನ ಸಭೆಯ ಆಶ್ರಯದಲ್ಲಿ ಮೇ ದಿನಾಂಕ ೫ ರಂದು ಭಾನುವಾರ ಸಂಜೆ ಸಾಂಸ್ಕೃತಿಕ ಕಾರ್ಯಕ್ರಮವೇರ್ಪಡಿಸಲಾಗಿತ್ತು. ಸೋಸಲೆ ಶ್ರೀ ವ್ಯಾಸರಾಯ ಮಠದ ಶ್ರೀಗಳವರು ಅಧ್ಯಕ್ಷತೆ ವಹಿಸಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಕಾರ್ಯದರ್ಶಿಗಳಾದ ಶ್ರೀ ಕೆ. ಗೋಪಾಲಕೃಷ್ಣರಾಯರು ಬರೆದಿರುವ 'ತಿರುಪತಿ ಯಾತ್ರೆ' ಪುಸ್ತಕದ ಉದ್ಘಾಟನೆಯನ್ನು ಶ್ರೀಗಳವರು ನಡೆಸಿದರು. ಇದೇ ಸಂದರ್ಭದಲ್ಲಿ ಕವಿಗೋಷ್ಠಿಯು ನಡೆಯಿತು. ಶ್ರೀಗಳಾದ ನಾರಾಯಣ ಸಂಗಮ, ಹೆಮ್ಮಿಗೆ ದೇಶಿಕಾಚಾರ್, ಶ್ರೀ ಎಸ್. ಜಿ. ಕುಲಕರ್ಣಿ, ಶ್ರೀ ವೆಂಕಟಾದ್ರಿಶರ್ಮ, ಶ್ರೀ ಎಂ. ವಿ. ಸೀತಾರಾಮಯ್ಯ ಮುಂತಾದವರು ತಮ್ಮ ಕವಿತೆಗಳನ್ನು ಪಠಿಸಿದರು. ಶ್ರೀಗಳವರು ಮಾತನಾಡುತ್ತಾ, ಕವಿಗಳ ಪರಿಚಯವಾದದ್ದು ತಮಗೆ ಸಂತೋಷವನ್ನುಂಟುಮಾಡಿದೆ ಎಂದೂ ಶೀಘ್ರದಲ್ಲೇ ತಮ್ಮ ಸಂಸ್ಥಾನದಲ್ಲಿ ಕವಿಗೋಷ್ಠಿಯೊಂದನ್ನು ಏರ್ಪಡಿಸಲು ನಿಶ್ಚಯಿಸಿರುವುದಾಗಿಯೂ ತಿಳಿಸಿದರು.

ಕಲಾವಿದರ ಕೇಂದ್ರ ಸಂಘದಾಶ್ರಯದಲ್ಲಿ ಏಪ್ರಿಲ್ ದಿನಾಂಕ ೧೬ರಂದು ಲಾ ಕಾಲೇಜಿನಲ್ಲಿ ನಾಟಕ ಶಿರೋಮಣಿ ಎ. ವಿ. ವರದಾಚಾರ್ಯರ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು. ನಾಟಕರತ್ನ ಶ್ರೀ ಜಿ. ಎಚ್. ವೀರಣ್ಣನವರು ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದಲ್ಲಿ ಹಿರಿಯ ಸಾಹಿತಿ ಶ್ರೀ ವಿ. ಸೀತಾರಾಮಯ್ಯನವರು ಶ್ರೀ ವರದಾಚಾರ್ಯರ ಅಭಿನಯ ಕಲೆ ಕುರಿತು ಮಾತನಾಡಿದರು.

ದಿನಾಂಕ ೮-೫-೬೩ರಂದು ಸಂಜೆ ೬ ಗಂಟೆಗೆ ಶಶಿಕಲಾವಿದರು ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ತಮ್ಮ ಸಂಸ್ಥೆಯ ಏಳನೆಯ ವಾರ್ಷಿಕೋತ್ಸವವನ್ನು ಏರ್ಪಡಿಸಿದ್ದರು. ಡಾ॥ ಎಂ. ವಿ. ಕೃಷ್ಣರಾಯರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಇ. ಆರ್. ಸೇತೂರಾಂ ಅವರಿಂದ ಉಪನ್ಯಾಸ ನಡೆಯಿತು. ಸುಪ್ರಸಿದ್ಧ ಲೇಖಕರಾದ ಶ್ರೀ ಬಿ. ಪುಟ್ಟಸ್ವಾಮಯ್ಯ, ಪರ್ವತವಾಣಿ ಮತ್ತು ಕಲಾವಿದರಾದ ಶ್ರೀ ನಾಣಿ ಅವರು ಸನ್ಮಾನಿಸಲ್ಪಟ್ಟರು.

ಕನ್ನಡ ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯರೂ, ಸಹಕಾರ ಕ್ಷೇತ್ರದಲ್ಲಿ ಅಗ್ರಗಣ್ಯರೂ ಆದ ಶ್ರೀ ತಿಂಡಲ್ ವೆಂಕಟಸುಬ್ಬಯ್ಯನವರು ಸಲ್ಲಿಸಿದ ಸಹಕಾರ ಸೇವೆಯ ಸಲುವಾಗಿ ಸಿಟಿ ಕೋ-ಆಪರೇಟಿವ್ ಬ್ಯಾಂಕ್ ಆವರಣದಲ್ಲಿ ಅವರ ಭಾವಚಿತ್ರವನ್ನು ಸಹಕಾರ ಸಂಘಗಳ ರಿಜಿಸ್ಟ್ರಾರ್ ಅವರು ಸ್ವಲ್ಪ ದಿನಗಳ ಹಿಂದೆ ಅನಾವರಣ ಮಾಡಿದರು.

**ಮಳವಳ್ಳಿ**

ತಾ॥ ೧೬-೪-೬೩ರಂದು ಮಳವಳ್ಳಿಯಲ್ಲಿ ಆರೋಗ್ಯ ಸಚಿವರಾದ ಡಾ॥ ಕೆ. ನಾಗಪ್ಪ ಆಳ್ವರ ಅಧ್ಯಕ್ಷತೆಯಲ್ಲಿ ಪರಿಷದಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳಿಗೆ ಸಾರ್ವಜನಿಕ ಸನ್ಮಾನವಾಗಿ ೨೫೦ ರೂ. ಗಳನ್ನು ಅರ್ಪಿಸಲಾಯಿತು. ಮಾನ್ಯ ಮಂತ್ರಿಗಳು, ಶ್ರೀ ವೀರಭದ್ರ ಶಿವಾಚಾರ್ಯರು, ಹಲಗೂರು ಸುಬ್ಬಯ್ಯನವರು, ನವಪ್ರಪಂಚದ ಶ್ರೀ ನಾಗರಾಜು ಶ್ರೀ ಶಾಸ್ತ್ರಿಗಳವರ ೪೦ ವರ್ಷಗಳ ಸೇವೆಯನ್ನು ಪ್ರಶಂಸಿ ಭಾಷಣ ಮಾಡಿದರು.

**ಅಜ್ಜಂಪುರ**

ತಾ॥ ೨-೫-೬೩ ರಂದು ಅಜ್ಜಂಪುರದಲ್ಲಿ ಕಲಾಸೇವಾ ಸಂಘದವರ ಶ್ರೀ ರಂಗಮಂದಿರದ ಉದ್ಘಾಟನೆಯೂ ಸಂಗೀತ, ನಾಟಕ, ನೃತ್ಯ, ಚಿತ್ರಕಲಾ ಸಮ್ಮೇಳನವೂ ಮಾಸ್ಟರ್ ಹಿರಿಣ್ಣಯ್ಯನವರ ನೇತೃತ್ವದಲ್ಲಿ ನಡೆದುವು.

**ಧನುಗೂರು**

ತಾ॥ ೧೭-೪-೬೩ ರಂದು ಮಹಾಕವಿ ಷಡಕ್ಷರದೇವರ ಜನ್ಮಸ್ಥಳವಾದ ಧನುಗೂರನ್ನು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಸಂದರ್ಶಿಸಿದರು. ಅಲ್ಲಿ ಮಹಾಕವಿಯ ಮಠ, ಇಷ್ಟ ದೈವ ಗೌರೀಶ್ವರ ದೇವಾಲಯ, ಇತರ ವೀರಭದ್ರಾದಿ ದೇವಾಲಯಗಳು ಹಲಸಳ್ಳಿ ಗವಿ ಮೊದಲಾದುವನ್ನು ಶಾಸ್ತ್ರಿಗಳು ಅವಲೋಕಿಸಿದರು.

**ಮುಂಬಯಿ**

ಏಪ್ರಿಲ್ ತಿಂಗಳ ೨೧ ಮತ್ತು ೨೨ರಂದು ಇಲ್ಲಿನ ಕರ್ನಾಟಕ ಸಂಘ ಸಾಂಸ್ಕೃತಿಕ ಕಾರ್ಯಕ್ರಮವನ್ನೇರ್ಪಡಿಸಿತ್ತು. ಈ ಸಂದರ್ಭದಲ್ಲಿ ಬೆಂಗಳೂರಿನ ಸನಾತನ ಕಲಾಕ್ಷೇತ್ರದವರು ಉತ್ತಮ ನಾಟ್ಯ ಪ್ರದರ್ಶನ ಮಾಡಿದರು. ಕನ್ನಡ ಸಾಹಿತ್ಯ ಕೂಟದವರು ವಸಂತ ಸಾಹಿತ್ಯೋತ್ಸವವನ್ನು ನಡೆಸಿದರು. ಇದಕ್ಕೆ ಶ್ರೀ ಮಾಹುಲಿ ಗೋಪಾಲಾಚಾರ್ಯರು ಅಧ್ಯಕ್ಷತೆ ವಹಿಸಿದ್ದರು. 'ಮಾತೃದೇವೋ ಭವ' ಎಂಬ ಸಾಮಾಜಿಕ ನಾಟಕ ಪ್ರದರ್ಶನವೂ ನಡೆಯಿತು.

# ಸಂಪಾದಕೀಯ

**ಕೇಂದ್ರದ ಆಡಳಿತ ಭಾಷೆ**

ಭಾರತ ಸಂವಿಧಾನ (Constitution)ದ ೩೪೩(೧)ನೆಯ ಅನುಚ್ಛೇದ(Article)ವು ದೇವನಾಗರಿ ಲಿಪಿಯ ಹಿಂದಿಯು ಭಾರತ (ಒಕ್ಕೂಟ)ದ ಆಡಳಿತ ಭಾಷೆ (Official language) ಎಂದು ಸ್ಪಷ್ಟಪಡಿಸುತ್ತದೆ. ಅದೇ ಅನುಚ್ಛೇದದ ಎರಡನೆಯ ಕಲಂ (Clause) ೧೯೬೫ರ ಜನವರಿ ೨೬ರವರೆಗೆ ಇಂಗ್ಲೀಷ್ ಆಡಳಿತ ಭಾಷೆಯಾಗಿರಲು ಅವಕಾಶವನ್ನಿತ್ತಿದೆ. ಮೂರನೆಯ ಕಲಂ ೧೯೬೫ರ ನಂತರವೂ ಇಂಗ್ಲಿಷ್ ಆಡಳಿತ ಭಾಷೆಯಾಗಿ ಮುಂದುವರಿಯುವಂತೆ ಶಾಸನಮಾಡುವ ಅಧಿಕಾರವನ್ನು ಸಂಸತ್ತಿ (Parliament)ಗೆ ನೀಡುತ್ತದೆ. ಸಂವಿಧಾನದ ೩೪೩ರಿಂದ ೩೫೧ರವರೆಗಿನ ಅನುಚ್ಛೇದಗಳು ಒಕ್ಕೂಟ (Union)ದ ಆಡಳಿತ ಭಾಷೆಗೆ ಸಂಬಂಧಿಸಿವೆ.

೧೯೬೫ರ ನಂತರ ಸಂವಿಧಾನರೀತ್ಯಾ ಹಿಂದೀ ಕೇಂದ್ರದ ಆಡಳಿತ ಭಾಷೆಯಾಗಿ ಬಿಡುತ್ತದೆ, ಎಂಬ ಮಾತು ಹಿಂದೀಯೇತರ ಜನರ ಮನಸ್ಸಿನಲ್ಲಿ ಶಂಕಾ ಭಯಗಳನ್ನುಂಟುಮಾಡಿತು. ಹಿಂದಿಯನ್ನು ಕಡ್ಡಾಯವಾಗಿ ಹೊರಿಸಬೇಡಿ, ಎಂದು ಆ ಜನ ಕೂಗತೊಡಗಿದ್ದು ಸಹಜವಾದುದೇ. ಎರಡು ವರ್ಷಗಳ ಹಿಂದೆ ಭಾರತದ ಪ್ರಧಾನಿ ನೆಹರೂ 'ಹಿಂದೀಯೇತರರು ಒಪ್ಪುವತನಕ ಹಿಂದೀ ಭಾರತದ ಆಡಳಿತ ಭಾಷೆಯಾಗಲಾರದು' ಎಂಬಾಶಯದ ಆಶ್ವಾಸನವನ್ನಿತ್ತು ರಾಷ್ಟ್ರದಲ್ಲಿ ಉಂಟಾಗಿದ್ದ ಭಾಷಾ ಗೊಂದಲವನ್ನು ಕೆಲಮಟ್ಟಿಗೆ ಶಮನಗೊಳಿಸಿದರು. ೧೯೬೫ ಸಮೀಪಿಸುತ್ತಿದೆ. ದೇಶದಲ್ಲಿ ಆಡಳಿತ ಭಾಷಾ ಜಗಳ ಪುನಃ ತಲೆದೋರಿದೆ.

ಒಕ್ಕೂಟ (Union)ದ ಆಡಳಿತ ಭಾಷೆಯ ಸ್ಥಾನವನ್ನು ಸದ್ಯಕ್ಕಂತೂ ಇಂಗ್ಲೀಷು ಪಡೆದಿದೆ. ಇನ್ನೆರಡು ವರ್ಷಗಳಲ್ಲಿ ಆ ಸ್ಥಾನವನ್ನು ಹಿಂದೀ ಆಕ್ರಮಿಸುತ್ತದೆ. ಹಿಂದೀ ಆ ಸ್ಥಾನವನ್ನು ಪಡೆಯಲು ಸಮರ್ಥವಾಗಿದೆಯೆ? ಹಿಂದೀಯೇತರರು ಈ ಬದಲಾವಣೆಯನ್ನು ಸ್ವಾಗತಿಸುತ್ತಾರೆಯೆ? ಶಾಸನ ಬಲದಿಂದ ಈ ಕಾರ್ಯವನ್ನು ಸಾಧಿಸಲು ಸಾಧ್ಯವಾದೀತೆ? ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರವಾಗಿ ಕೇಂದ್ರ ಸರ್ಕಾರವು ಸಂಸತ್ತಿನ ಪ್ರಸ್ತುತ ಅಧಿವೇಶನದಲ್ಲಿ ಆಡಳಿತ ಭಾಷಾ ವಿಧೇಯಕ (Official Languages Bill)ವನ್ನು ಮಂಡಿಸಿದೆ. ಲೋಕಸಭೆಯ ಒಪ್ಪಿಗೆಯನ್ನು ಪಡೆದ ಈ ವಿಧೇಯಕವು ರಾಜ್ಯಸಭೆಯ ಒಪ್ಪಿಗೆಯನ್ನು ಪಡೆಯುವುದರಲ್ಲಿ ಸಂದೇಹವೇ ಇಲ್ಲ.

ಈ ವಿಧೇಯಕವು ಸಂವಿಧಾನದ ೩೪೩ (೩) ಅನುಚ್ಛೇದಕ್ಕನುಗುಣವಾಗಿದೆ. ೧೯೬೫ನೇ ಜನವರಿ ೨೬ರ ನಂತರ ಹಿಂದೀ ಒಕ್ಕೂಟ (ಕೇಂದ್ರ)ದ ಆಡಳಿತ ಭಾಷೆಯಾಗುವುದು. ಅದರ ಜೊತೆಗೆ ಇಂಗ್ಲೀಷ್ ಸಹಭಾಷೆಯಾಗಿ ಉಳಿಯುವುದು. ಈ ವ್ಯವಸ್ಥೆ ೧೯೬೫ರವರೆಗೆ ಮುಂದುವರಿಯುವುದು, ನಂತರ ಸಂಸತ್ತು ಒಂದು ಸಮಿತಿಯನ್ನು ನೇಮಿಸುವುದು. ಆ ಸಮಿತಿಯ ವರದಿಯನ್ನು ಸಂಸತ್ತು ಚರ್ಚಿಸುವುದು. ರಾಜ್ಯಗಳ ಅಭಿಪ್ರಾಯಗಳನ್ನು ಈ ವಿಷಯದಲ್ಲಿ ಪಡೆದು ರಾಷ್ಟ್ರಾಧ್ಯಕ್ಷರು ಅಂತಿಮ ತೀರ್ಮಾನವನ್ನು ಕೈಕೊಳ್ಳುವರು-ಇವು ಪ್ರಕೃತ ವಿಧೇಯಕದ ಮುಖ್ಯಾಂಶಗಳು.

ಪ್ರಸ್ತುತ ವಿಧೇಯಕವನ್ನು ಕುರಿತು ಸಂಸತ್ತಿನಲ್ಲೂ ಮತ್ತು ಹೊರಗೂ ಅನುಕೂಲ ಹಾಗೂ ಪ್ರತಿಕೂಲ ಅಭಿಪ್ರಾಯಗಳು ಪ್ರಕಟವಾಗಿವೆ. ಹೀಗೆ ಪ್ರಕಟವಾಗಿರುವ ಅಭಿಪ್ರಾಯಗಳನ್ನು ಮೂರು ವರ್ಗಗಳಲ್ಲಿ ವಿಂಗಡಿಸಬಹುದಾಗಿದೆ. ಹಿಂದೀ ಉಗ್ರವಾದಿಗಳು ಇಂಗ್ಲೀಷ್ ಬಳಕೆ ೧೯೬೫ರ ನಂತರ ನಿಂತುಬಿಡಬೇಕು ಎನ್ನುತ್ತಾರೆ. ಇಂಗ್ಲೀಷ್ ಸಹಭಾಷೆಯಾಗಿ ಮುಂದುವರಿಯುವುದು ಈ ಜನಕ್ಕೆ ಇಷ್ಟವಿಲ್ಲ; ಹಿಂದೀ ಉಗ್ರ ವಿರೋಧಿಗಳು ೧೯೬೫ರ ನಂತರವೂ ಇಂಗ್ಲಿಷೇ ಆಡಳಿತ ಭಾಷೆಯಾಗಿ ಮುಂದುವರಿಯಲಿ; ಹಿಂದೀಯೇತರರು ಒಪ್ಪುವತನಕ ಹಿಂದಿಯನ್ನು ಕಡ್ಡಾಯವಾಗಿ ಹೇರಕೂಡದು ಎಂದು ವಾದಿಸುತ್ತಾರೆ. ಈ ಜನ ಇಂಗ್ಲೀಷಿನಿಂದಲೇ ಮೋಕ್ಷವೆಂದು ಭಾವಿಸುತ್ತಾರೆ. ಇಂದಿಲ್ಲ ನಾಳೆ ಭಾರತದ ಭಾಷೆಯೊಂದು ಕೇಂದ್ರದ ಭಾಷೆಯಾಗಲೇ ಬೇಕು. ಬಹು ಸಂಖ್ಯಾತರ ಭಾಷೆಯಾದ ಹಿಂದಿಗೆ ಆ ಸ್ಥಾನವನ್ನು ಸಂವಿಧಾನದ ಮೂಲಕ ನಾವು ಕೊಟ್ಟಿದ್ದೇವೆ. ಆದರೆ

ಕಾಲವಿಂದು ಪಕ್ವವಾಗಿಲ್ಲ. ಹಿಂದೀಯೇತರರು ಈ ಪರಿವರ್ತನೆಗೆ ಇನ್ನೂ ಸಿದ್ಧರಾಗಿಲ್ಲ. ಅವಲ್ಲದೆ ಹಿಂದೀ ಭಾಷೆಯು ಕೂಡ ಪ್ರಬುದ್ಧ ಸ್ಥಿತಿಗೆ ಬಂದಿಲ್ಲ. ರಾಷ್ಟ್ರೀಯ ಐಕಮತ್ಯದ ದೃಷ್ಟಿಯಿಂದ ೧೯೬೫ ರ ನಂತರವೂ ಕೆಲವು ವರ್ಷ ಇಂಗ್ಲೀಷ್ ಭಾಷೆ ಕೇಂದ್ರದ ಆಡಳಿತ ಭಾಷೆಯಾಗಿ ಮುಂದುವರಿಯಲಿ, ಎಂದು ಹಲವರ ಅಭಿಪ್ರಾಯ. ಈ ಜನ ಮಧ್ಯಮಾರ್ಗಕ್ಕೆ ಸೇರಿದವರು. ಕೇಂದ್ರ ಸರ್ಕಾರದ ಮತ್ತು ಆಡಳಿತ ಪಕ್ಷದ ಅಭಿಪ್ರಾಯವು ಕೂಡ ಇದೇ ಆಗಿದೆ. ಭಾಷಾವಿಧೇಯಕವು ಕೂಡ ಇದೇ ಆಶಯವನ್ನೊಳಗೊಂಡಿದೆ.

ಇಂಗ್ಲೀಷ್ ಬಳಕೆಯನ್ನು ವಿರೋಧಿಸುವ ಜನವಾಗಲೀ ಅಥವಾ ಹಿಂದೀ ಬಳಕೆಯನ್ನು ವಿರೋಧಿಸುವ ಜನವಾಗಲೀ ಸಮಸ್ಯೆಗೆ ಸೂಕ್ತ ಪರಿಹಾರವನ್ನು ಸೂಚಿಸಲಾರರು. ಶ್ರೀ ರಾಜಗೋಪಾಲಾಚಾರಿ, ಶ್ರೀ ಸಿ. ಪಿ ರಾಮಸ್ವಾಮಿ ಅಯ್ಯರಂತಹ ಮೇಧಾವಿಗಳು ಇಂಗ್ಲೀಷ್ ಒಕ್ಕೂಟದ ಆಡಳಿತ ಭಾಷೆಯಾಗಿ ಮುಂದುವರಿಯಲಿ, ಎಂದು ವಾದಿಸುತ್ತಿದ್ದಾರೆ. ಈ ವಾದವನ್ನು ಖಂಡಿಸುವ ಹಿರಿಯರೂ ಇದ್ದಾರೆ. "ಇಂಗಿ ಹೋಗುತಿದೆ ಇಂಗ್ಲೀಷಿನ ಮರಭೂಮಿಯಲಿ ನಿನ್ನ ಮಕ್ಕಳ ಶಕ್ತಿ-ಬುದ್ಧಿ-ಪ್ರತಿಭಾ" ಎಂದು ಕನ್ನಡದ ಮಹಾಕವಿ ಕುವೆಂಪು ಅವರ ಕವಿವಾಣಿ ಇಂಗ್ಲೀಷಿನ ಉಕ್ಕಿನ ಬಲೆಯ ರಹಸ್ಯವನ್ನು ಹೊರಗೆಡಹಿದೆ. ಇಂಗ್ಲೀಷಿನ ಪ್ರಯೋಜನವನ್ನು ಅಲ್ಲಗಳೆಯುವುದಸಾಧ್ಯ. ಅಂತ್ರರಾಷ್ಟ್ರೀಯ ಭಾಷೆಯ ಸ್ಥಾನವನ್ನು ಪಡೆದಿರುವ ಇಂಗ್ಲೀಷ ಭಾಷಾಜ್ಞಾನ ಅಗತ್ಯವಾದುದೇ. ಆದರೆ ಅದಕ್ಕೆ ರಾಷ್ಟ್ರಭಾಷಾ ಸ್ಥಾನವನ್ನು ನೀಡುವುದು ಭಾಷಾದಾಸ್ಯವೆನಿಸೀತು. ಹಿಂದೀ ಆ ಸ್ಥಾನವನ್ನಲಂಕರಿಸಲು ಕೆಲವು ವರ್ಷಗಳು ಬೇಕು; ಹಿಂದೀಯೇತರರು ಆ ಭಾಷೆಯನ್ನು ತಿಳಿದುಕೊಳ್ಳಲು ಸಮಯ ಬೇಕು, ಎನ್ನುವ ಕಾರಣಗಳಿಂದ ಇಂಗ್ಲೀಷ ಬಳಕೆಯನ್ನು ಕೆಲವು ಕಾಲ ಉಳಿಸಿಕೊಳ್ಳಬೇಕಾದುದು ಅನಿವಾರ್ಯ. ಈ ದೃಷ್ಟಿಯಿಂದ ಇಂಗ್ಲೀಷೇ ಆ ಪಟ್ಟವನ್ನು ಕೆಲವು ವರ್ಷಗಳವರೆಗೆ ಅಲಂಕರಿಸುವುದನ್ನು ಎಲ್ಲ ವಿವೇಕಿಗಳೂ ಒಪ್ಪಿಕೊಳ್ಳುತ್ತಾರೆ. ಆದರೆ ಇಂಗ್ಲೀಷು ಎಲ್ಲ ಕಾಲದಲ್ಲೂ ಆಡಳಿತಭಾಷೆಯಾಗಿ ಉಳಿಯಲಿ ಎಂಬ ವಾದ ಸಂವಿಧಾನವಿರೋಧಿ, ಕುಹಕ, ಕುತ್ಸಿತ ತನಗಳಿಂದ ಕೂಡಿದ್ದು. ಸ್ವತಂತ್ರ ರಾಷ್ಟ್ರದ ಜನ ಪರಕೀಯ ಆಡಳಿತವನ್ನು ಹೇಗೆ ಸಹಿಸುವುದಿಲ್ಲವೋ ಹಾಗೆ ಪರಕೀಯ ಭಾಷೆಯ ಒಡೆತನವನ್ನೂ ಸಹಿಸುವುದಿಲ್ಲ; ಸಹಿಸಲೂ ಬಾರದು. ಹಿಂದೀ ರಾಷ್ಟ್ರಭಾಷೆ (National language) ಎಂದು ಹೇಳುವುದು ಯಥಾರ್ಥವಾದುದಲ್ಲ- ಆಡಳಿತಭಾಷೆ ಬೇರೆ, ರಾಷ್ಟ್ರಭಾಷೆ ಬೇರೆ. ಸಂವಿಧಾನದ ೮ನೆಯ ಅನುಸೂಚಿಯಲ್ಲಿ ಉಲ್ಲೇಖಿತವಾದ ಎಲ್ಲಾ ಭಾಷೆಗಳೂ ರಾಷ್ಟ್ರಭಾಷೆಗಳೇ. ಹಿಂದೀ ರಾಷ್ಟ್ರ ಭಾಷೆಯಾಗುವುದಾದರೆ ಕನ್ನಡವು ರಾಷ್ಟ್ರಭಾಷೆ ಏಕಾಗಬಾರದು ? ಕಾರಣ ಹಿಂದಿಯೊಂದೇ ರಾಷ್ಟ್ರಭಾಷೆ ಎಂಬ ವಾದ ಹುರುಳಿಲ್ಲದ್ದು. ಅದು ನಿಲ್ಲಬೇಕು.

ಹಿಂದೀ ಹೃಷ್ಟಪುಷ್ಟವಾಗಿ ಬೆಳೆಯಬೇಕು. ಅದರ ಬೆಳವಣಿಗೆಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಆದ್ಯಗಮನ ನೀಡಬೇಕೆಂಬ ಮಾತು ಯುಕ್ತವಾದುದು. ಆದರೆ ಇನ್ನಿತರ ಪ್ರಾದೇಶಿಕ ಭಾಷೆಗಳನ್ನು ಬಲಿಗೊಟ್ಟು ಅದನ್ನು ಬೆಳೆಸಕೂಡದು. ಎಲ್ಲಾ ಪ್ರಾದೇಶಿಕ ಭಾಷೆಗಳ ಬೆಳವಣಿಗೆಗೂ ಸರ್ಕಾರದ ಸಹಾಯ ಹಾಗೂ ಪ್ರೋತ್ಸಾಹ ಅತ್ಯಗತ್ಯ. ಹಿಂದೀ ಎಲ್ಲಾ ಪ್ರಾದೇಶಿಕ ಭಾಷೆಗಳಲ್ಲಿರುವ ಉತ್ತಮಾಂಶಗಳನ್ನು ಒಳಗೊಳ್ಳಬೇಕು. ಆ ಭಾಷೆಯ ಶ್ರೀಮಂತಿಕೆಯ ಹೆಚ್ಚಳಕ್ಕೆ ಈ ಕ್ರಮ ಅಗತ್ಯ. ಅದು ಸರಳವೂ ಹಾಗೂ ಸತ್ವಶಾಲಿಯೂ ಆಗಬೇಕಾದರೆ ಸೋದರ ಭಾಷೆಗಳಿಂದ ಸ್ನೇಹ ಕಾಣಿಕೆಯನ್ನು ಪಡೆಯಲೇಬೇಕು. ಅದು ಪ್ರತಿಸ್ಪರ್ಧಿಯಾಗಿ ಬೆಳೆಯದೆ ಪರಮ ಮಿತ್ರನಾಗಿ ಬೆಳೆದು ತನ್ನ ಜೊತೆಗೆ ಎಲ್ಲಾ ಭಾಷೆಗಳನ್ನೂ ಕರೆದೊಯ್ಯಬೇಕು. ಹಿಂದೀವಾದಿಗಳು ಈ ಮಾತನ್ನು ಗಮನಿಸಬೇಕು. ಕೇಂದ್ರ ಸರ್ಕಾರವಾದರೂ ಭಾರತದ ಎಲ್ಲಾ ಭಾಷೆಗಳನ್ನೂ ಒಂದೇ ದೃಷ್ಟಿಯಿಂದ ನೋಡಿ, ಅವುಗಳ ಅಭಿವೃದ್ಧಿಗೆ ನೆರವಾಗಬೇಕು. ಭಾರತ ಸರ್ಕಾರದ ಶಾಸನಗಳು, ಘೋಷಣೆಗಳು, ಪ್ರಕಟನೆಗಳು ಹದಿನಾಲ್ಕು ಭಾಷೆಗಳಲ್ಲೂ ಪ್ರಕಟವಾಗುವಂತೆ ವ್ಯವಸ್ಥೆಯಾಗಬೇಕು. ಅಖಿಲ ಭಾರತಮಟ್ಟದ ಪಾರಿಭಾಷಿಕ ಹಾಗೂ ತಾಂತ್ರಿಕ ಶಬ್ದಕೋಶಗಳು ಸಿದ್ಧವಾಗಬೇಕು. ಹೀಗೆ ಭಾಷೆಗಳ ಪರಸ್ಪರ ಸಹಾಯ ಹಾಗೂ ಸಂಪರ್ಕಗಳಿಂದ ಭಾಷಾ ಸಮಸ್ಯೆಯ ನಿವಾರಣೆಯಾದೀತೆಂದು ನಾವು ನಂಬುತ್ತೇವೆ.

ಹಿಂದೀ ಆಡಳಿತ ಭಾಷೆಯಾಗುವುದನ್ನು ವಿರೋಧಿಸುವ ಜನ ಹಿಂದೀ ಕಲಿಯಲು ಶ್ರಮಿಸಬೇಕು. ಭಾಷೆ ಒಂದು ಜನಾಂಗ ಅಥವಾ ಒಂದು ಪ್ರದೇಶದ ಸೊತ್ತಲ್ಲ. ಕಳೆದ ಹದಿಮೂರು ವರ್ಷಗಳಲ್ಲಿ ಹಿಂದೀ ಅಭ್ಯಾಸ ಹಿಂದೀಯೇತರ ಪ್ರದೇಶಗಳಲ್ಲಿ ಹೆಚ್ಚಾಗಿ ಬೆಳೆದಿಲ್ಲ. ದಕ್ಷಿಣ ಭಾರತೀಯರಿಗೆ ಹಿಂದೀ ಕಲಿಯಲು ಕಷ್ಟವಾದೀತೆಂದು ನಮಗನ್ನಿಸು

ವುದಿಲ್ಲ. ಅವರು ಮನಸ್ಸು ಮಾಡಿದರೆ ಹಿಂದೀ ಭಾಷೆಯವರಾದ ಜನರನ್ನು ಪಾಂಡಿತ್ಯದಲ್ಲಿ ಬಹು ಬೇಗನೆ ಸರಿತೂಗಬಲ್ಲರು. ಇದೇ ರೀತಿಯಾಗಿ ಹಿಂದೀಭಾಷೆಯನ್ನಾಡುವ ಜನ ದಕ್ಷಿಣದ ಒಂದು ಭಾಷೆಯನ್ನು ಕಡ್ಡಾಯವಾಗಿ ಕಲಿಯಬೇಕು. ಈ ವ್ಯವಸ್ಥೆಯನ್ನು ಉತ್ತರದ ಕೆಲವು ರಾಜ್ಯಗಳು ಕೈಗೊಂಡಿರುವುದು ಸಂತಸದ ಸುದ್ದಿ. ಇತ್ತೀಚೆಗೆ ತ್ರಿಭಾಷಾ ಸೂತ್ರವು ಹೊರಬಿದ್ದಿದೆ. ಅದರ ಪ್ರಯೋಜನವನ್ನು ಕುರಿತು ಈಗಲೇ ಹೇಳುವುದು ಕಷ್ಟ.

ಭಾರತ ಸರ್ಕಾರವು ತಂದಿರುವ ಆಡಳಿತಭಾಷಾ ವಿಧೇಯಕವು ಸಮಯೋಚಿತವೂ ಹಾಗೂ ಸ್ವಾಗತಾರ್ಹವೂ ಆಗಿದೆ ಎಂದು ನಮ್ಮ ಮತ. ಅದನ್ನು ವಿರೋಧಿಸುವುದಕ್ಕಿಂತಲೂ ಅದರಲ್ಲಡಗಿದ ರಾಷ್ಟ್ರಹಿತವನ್ನು ಒಪ್ಪಿಕೊಳ್ಳುವುದು ವಿವೇಕವೆನಿಸುವುದು.

## ಸಾಹಿತ್ಯ ಹಾಗೂ ಕಲಾಸಂಸ್ಥೆಗಳಿಗೆ ನೀಡುವ ಸಹಾಯದಲ್ಲಿ ಕಡಿತವಾಗದಿರಲಿ.

ಹಿಂದೆ ರಾಜಮಹಾರಾಜರುಗಳಿಂದ ಪೋಷಿಸಲ್ಪಟ್ಟ ಸಾಹಿತ್ಯ ಹಾಗೂ ಕಲೆಗಳಿಗೆ ಇಂದಿನ ಪ್ರಜಾಸರ್ಕಾರವೇ ಮಹಾ ಪೋಷಕ. ಅವುಗಳ ಪೋಷಣೆ ಮತ್ತು ಬೆಳವಣಿಗೆ ಸರ್ಕಾರದ ಪ್ರಮುಖ ಕರ್ತವ್ಯಗಳಲ್ಲಿ ಒಂದು. ತುರ್ತುಪರಿಸ್ಥಿತಿಯ ಪರಿಣಾಮ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಮೇಲೆ ಆಗದು ಎಂದು ಪ್ರಧಾನಿ ನೆಹರೂ ಅವರು ಸಾಹಿತ್ಯ ಅಕಾಡೆಮಿಯ ಸನ್ಮಾನ ಸಮಾರಂಭದಲ್ಲಿ ಹೇಳಿರುವುದು ಸ್ವಾಗತಾರ್ಹ ಸಂಗತಿ. ಆದರೆ ನಮ್ಮ ರಾಜ್ಯ ಸರ್ಕಾರವು ಬಹುದಿನಗಳಿಂದಲೂ ನಡೆದುಕೊಂಡು ಬಂದ ಸಾಹಿತ್ಯ, ಸಂಸ್ಕೃತಿ ಪ್ರಚಾರ ಶಾಖೆಯನ್ನು ವಿಸರ್ಜಿಸಿ ಅದನ್ನು ವಿದ್ಯಾ ಇಲಾಖೆಯ ಒಂದು ಭಾಗವನ್ನಾಗಿ ಮಾಡಿರುವುದು ವಿಷಾದನೀಯ. ಆ ಶಾಖೆಯು ಚೆನ್ನಾಗಿ ಕಾರ್ಯಮಾಡದಿದ್ದರೆ ದಕ್ಷರಾದ ಅಧಿಕಾರಿಗಳನ್ನು ನೇಮಿಸಿ ಅದನ್ನು ಸರಿಪಡಿಸುವುದು ಸ್ತುತ್ಯಕ್ರಮವಾಗಬಹುದಾಗಿತ್ತು. ಹಾಗೆ ಮಾಡದೆ ಆ ಶಾಖೆಯನ್ನೇ ಮೊಟಕುಗೊಳಿಸಿದ್ದು ನಿಜವಾಗಿಯೂ ಖಂಡನೀಯ ಕ್ರಮ. ಉಳಿತಾಯವನ್ನು ಬಯಸುವ ಸರ್ಕಾರದ ಕಣ್ಣಿಗೆ ಈ ಇಲಾಖೆಯೇ ಕಂಡಿದ್ದು ಸಾಹಿತ್ಯ ಮತ್ತು ಕಲೆಗಳ ದೌರ್ಭಾಗ್ಯವೇ ಸರಿ. ಸಾಹಿತ್ಯ ಸಂಸ್ಥೆಗಳಿಗೆ, ವಿಶ್ವಕೋಶಕ್ಕೆ ಮತ್ತು ಕನ್ನಡ ಕೋಶಕ್ಕೆ ನೀಡಲಾಗುತ್ತಿದ್ದ ಸಹಾಯಧನವನ್ನೂ ಈ ವರ್ಷ ಮೊಟಕುಗೊಳಿಸಲಾಗಿದೆ ಎಂಬ ಸುದ್ದಿಯುಂಟು. ಇದು ನಿಜವಾಗಿದ್ದರೆ ಇದಕ್ಕಿಂತಲೂ ಅನುಚಿತ ಕ್ರಮ ಇನ್ನೊಂದಿರಲಾರದು. ಸಾಹಿತ್ಯ ಸಂಸ್ಕೃತಿಗಳ ಮಹತ್ವವನ್ನರಿಯದಿರುವುದು, ಅವುಗಳ ಪ್ರಸಾರ ಹಾಗೂ ಬೆಳವಣಿಗೆಗೆ ನೀಡಲಾಗುತ್ತಿರುವ ಸಹಾಯವನ್ನು ಕಡಮೆಮಾಡುವುದು ಸರ್ಕಾರಕ್ಕೆ ಶೋಭಿಸದ ಮಾತು. ಉಳಿತಾಯದ ಮಾರ್ಗಗಳು ಹಲವುಂಟು. ಸಾಹಿತ್ಯದ ಮೇಲೆ ಈ ಭೀಮಗದೆಯೇಕೆ ? ಸರ್ಕಾರ ತನ್ನ ನೀತಿಯನ್ನು ಸರಿಪಡಿಸಿಕೊಂಡು ಮೊದಲಿನಂತೆ ಸಹಾಯ, ಪ್ರೋತ್ಸಾಹವನ್ನು ನೀಡುವುದೆಂದು ನಾವು ನಂಬುತ್ತೇವೆ.

## ಕೈ|| ಎಂ. ಜಿ. ವಿರೂಪಾಕ್ಷನ್

ಕೆಲವು ದಿನಗಳ ಹಿಂದೆ ಧಾರವಾಡದಲ್ಲಿ ಲಿಂಗೈಕ್ಯರಾದ ಶ್ರೀ ಎಂ. ಜಿ. ವಿರೂಪಾಕ್ಷನ್ ಶರಣ ಸಂಸ್ಕೃತಿಯ ಸಾಕಾರ ಸ್ವರೂಪರಾಗಿದ್ದರು. ಸದ್ದು ಗದ್ದಲಗಳಿಲ್ಲದೆ, ಎಲೆಯ ಮರೆಯ ಕಾಯಂತೆ ನಾಡು ನುಡಿಗಳಿಗೆ ಅನುಪಮವಾದ ಸೇವೆಯನ್ನು ಸಲ್ಲಿಸಿದ ಶ್ರೀ ವಿರೂಪಾಕ್ಷನ್ ಧಾರವಾಡದ ಪ್ರಮುಖ ವ್ಯಕ್ತಿಯಾಗಿದ್ದರು; ಪ್ರಚಂಡ ಶಕ್ತಿಯಾಗಿದ್ದರು. ಕರ್ನಾಟಕ ವಿಶ್ವವಿದ್ಯಾಲಯ, ಕರ್ನಾಟಕ ವಿದ್ಯಾವರ್ಧಕ ಸಂಘ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಸರ್ವಧರ್ಮ ಸಮ್ಮೇಳನ, ಶಿವಾನುಭವ ಸಂಸ್ಥೆ ಶ್ರೀ ಮುರುಘಾಮಠ, ಶ್ರೀ ಬಸವನಾಳ ಸ್ಮಾರಕ ಸಮಿತಿ, ಆಕುಂಶ ಕಾರ್ಯಾಲಯ—ಮೊದಲಾದ ಸಂಸ್ಥೆಗಳಿಗೆ ಶ್ರೀ ವಿರೂಪಾಕ್ಷನ್ನರು ಸಲ್ಲಿಸಿದ ಸೇವೆ ಮರೆಯದಂತಹುದು. ಶ್ರೀ ಬಸವನಾಳ ಸ್ಮಾರಕ ಸಂಪುಟ ಅವರ ಕತೃತ್ವಶಕ್ತಿ ಹಾಗೂ ಜನಪ್ರಿಯ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ. ಶ್ರೀ ವಿರೂಪಾಕ್ಷನ್ ಸರಳ ಹಾಗೂ ಶುಭ್ರಜೀವಿ, ಸದ್ಗುಣ ಸಂಪನ್ನ, ಕಾಯಕ ಯೋಗಿ, ಸಂಘಟನಾ ಚತುರ, ಸಿದ್ಧ ಲೇಖಕ, ಪ್ರಸಿದ್ಧ ಕಾರ್ಯಕರ್ತ. ಶ್ರೀ ಬಸವನಾಳರ ಗರಡಿಯಲ್ಲಿ ಪಳಗಿದ ಈ ಮಲ್ಲ ಇನ್ನೂ ಹಲವಾರು ಕಣಗಳಲ್ಲಿ ವಿಕ್ರಮಗಳನ್ನು ಸ್ಥಾಪಿಸಬಹುದಾಗಿತ್ತು. ಕಷ್ಟ ನಿಷ್ಠುರಗಳ ಮೂಸೆಯಲ್ಲಿ ಕರಗಿ ಕಾಳಿಕೆ ನೀಗಿ ಅಪರಂಜಿಯಂತೆ ಬಹುಕಾಲ ಬೆಳಗಬಹುದಾಗಿತ್ತು. ಆದರೆ ಈಶ್ವರನಿಗೆ ಇದು ಬೇಡವಾಯ್ತು. ತನ್ನೆಡೆಗೆ ಕರೆದುಕೊಂಡ.

ಶ್ರೀ ವಿರೂಪಾಕ್ಷನ್ನರ ಅಗಲುವಿಕೆಯಿಂದ ತುಂಬಿ ಬರಲಾದ ಹಾನಿಯುಂಟಾಗಿದೆ. 'ಕನ್ನಡ ನುಡಿ' ಅವರಿಗೆ ಶ್ರದ್ಧಾಂಜಲಿಗಳನ್ನು ಸಲ್ಲಿಸುತ್ತದೆ; ಅವರಿಂದ ಸೇವೆ ಸೇವೆ ಪಡೆದ ಸಂಸ್ಥೆಗಳು, ಸ್ನೇಹಿತರು ಅವರಿಗೆ ಸೂಕ್ತ ಗೌರವವನ್ನು ಸಲ್ಲಿಸಬೇಕೆಂದು ಸೂಚಿಸುತ್ತದೆ.

ಸಂಪಾದಕರು: ಶ್ರೀ ಅನ್ನದಾನಯ್ಯ ಪುರಾಣಿಕ, ಬಿ.ಕಾಮ್., ಎಲ್ಎಲ್.ಬಿ. ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ. ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು—೧೮

# ಸಾದರ ಸ್ವೀಕಾರ

**ವೀರಶೈವ ಆಚಾರ ಮತ್ತು ವಿಚಾರ:** ಲೇಖಕರು: ಪಂಡಿತ ಬಸವರಾಜ ಶರ್ಮಾ ವಿದ್ವಾನ್; ಪ್ರಕಾಶಕರು: ಕಾಳೂರು ಮಠದ ಮಹಾಬಲೇಶ್ವರ ಶಾಸ್ತ್ರಿಗಳ ಮಕ್ಕಳು, ಬಳ್ಳಾರಿ; ಸೈಜು ೧/೮ ಕ್ರೌನ್; ಪುಟ ೧೪೩; ಬೆಲೆ ರೂ. ೩.

*** ದೂರ ಸರಿದರು:** ಲೇಖಕರು: ಶ್ರೀ ಎಲ್. ಎಸ್. ಬೈರಪ್ಪ; ಪ್ರಕಾಶಕರು: ಸಾಹಿತ್ಯ ಭಂಡಾರ, ಹುಬ್ಬಳ್ಳಿ; ಸೈಜು ೧/೮ ಕ್ರೌನ್, ಪುಟ ೩೩೩; ಬೆಲೆ ರೂ. ೪-೪೦ ನ.ಪೈ.

*** ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರ ರಸ (ಕರ್ನಾಟಕ ವಿಶ್ವವಿದ್ಯಾನಿಲಯ ಗ್ರಂಥಮಾಲೆ):** ಲೇಖಕರು: ಡಾ॥ ಕೆ. ಕೃಷ್ಣಮೂರ್ತಿ; ಸೈಜು ೧/೮ ಫುಲ್‌ಸ್ಕೇಪ್; ಪುಟ ೯೦; ಬೆಲೆ ೨೫ ನ.ಪೈ.

*** ಯೋಜನೆಯ ಕಥೆಗಳು (ಭಾಗ ೧):** ಲೇಖಕರು: ಶ್ರೀ ಬ. ನ. ಸುಂದರರಾವ್; ಸೈಜು ೧/೮ ಡೆಮ್ಮಿ; ಪುಟ ೫೬; ೮೦ ನ.ಪೈ.

**Anna** (The Life Story of Deva Rao Shivaram Ubhayakar): By: Sharada Prabhakar; Size 1/8 Crown; Pages 1C8; Price Rs. 2.

*** ಹೃದಯ ಸೆಳೆದ ನೇತ್ರ:** ಲೇಖಕರು: ಶ್ರೀ ಕುಮುದಪ್ರಿಯ; ಪ್ರಕಾಶಕರು: ಶ್ರೀ ಸುಬ್ರಹ್ಮಣ್ಯೇಶ್ವರ ಬುಕ್ ಡಿಪೋ, ಬೆಂಗಳೂರು; ಸೈಜು ೧/೮ ಕ್ರೌನ್; ಪುಟ ೧೦೧; ಬೆಲೆ ರೂ. ೧-೫೦ ನ.ಪೈ.

*** ವಚನವಲ್ಲರಿ:** ಲೇಖಕರು: ಶ್ರೀ ಜ.ಚ.ನಿ.; ಪ್ರಕಾಶಕರು: ಭ್ರಮರಾಂಬಾ ಬಳಗ, ಅಕ್ಕಿಪೇಟೆ, ಬೆಂಗಳೂರು-೨; ಸೈಜು ೧/೮ ಕ್ರೌನ್; ಪುಟ ೧೯೯+೪; ಬೆಲೆ ರೂ. ೪.

**ವಿಜಯ ದುಂದುಭಿ (ವೀರರಸ ಕವನ ಸಂಕಲನ):** ಪ್ರಕಾಶಕರು: ಶ್ರೀ ಸಂ ಮುತ್ತುರಾಯ ಧಾರವಾಡಕರ; ಸೈಜು ೧/೮ ಕ್ರೌನ್; ಪುಟ ೧೫೬; ಬೆಲೆ ರೂ. ೨.

**ಇಂದಿನ ಚೀನಾ:** ಅನುವಾದಕರು: ಡಾ॥ ಎಸ್. ಚಂದ್ರಶೇಖರ್; ಸೈಜು ೧/೮ ಕ್ರೌನ್; ಪುಟ ೨೦೮; ಬೆಲೆ ರೂ. ೨-೬೨ ನ.ಪೈ.

*** ಹಾಲಕೇರಿಯ ಅನ್ನದಾನೀಶ ನಾಮಾವಳಿಯು:** ಲೇಖಕರು: ಶ್ರೀ ಮಹಾರುದ್ರಪ್ಪ ಮಹಾಲಿಂಗಪ್ಪ ಮಿರ್ಜಿ; ಸೈಜು ೧/೮ ಡೆಮ್ಮಿ; ಪುಟ ೧೧.

**ಭಗವಾನ್ ರಾಮಾನುಜ:** ಲೇಖಕರು: ಶ್ರೀವತ್ಸ; ಪ್ರಕಾಶಕರು: ಸುದರ್ಶನಂ ಅಂಡ್ ಕಂಪೆನಿ, ಬೆಂಗಳೂರು-೨; ಸೈಜು ೧/೮ ಕ್ರೌನ್; ಪುಟ ೨೪೫+೮; ಬೆಲೆ ರೂ. ೨.

**ತೀರ್ಥಂಕರ ಮಹಾವೀರ:** ಲೇಖಕರು: ಶ್ರೀ ಮಿರ್ಜಿ ಅಣ್ಣಾರಾಯರು; ಪ್ರಕಾಶಕರು: ಮಿಂಚಿನಬಳ್ಳಿ ಕಾರ್ಯಾಲಯ; ಸೈಜು ೧/೮ ಕ್ರೌನ್; ಪುಟ ೧೫೬: ಬೆಲೆ ರೂ. ೨.

*** ತಾಯಿಯ ಹೃದಯ:** ಲೇಖಕರು: ಶ್ರೀ ಸು. ಕೃಷ್ಣಮೂರ್ತಿ; ಪ್ರಕಾಶಕರು: ಕರ್ನಾಟಕ ಕಲಾಸಂಘ, ವಿಶ್ವೇಶ್ವರಪುರಂ. ಸೈಜು ೧/೮ ಫುಲ್‌ಸ್ಕೇಪ್; ಪುಟ ೮೮: ಬೆಲೆ ರೂ. ೧.

*** ಏಳಿ ಎದ್ದೇಳಿ:** ಲೇಖಕರು: ಶ್ರೀ ರಂ. ರಾ. ನಿಡಗುಂದಿ; ಪ್ರಕಾಶಕರು: ಶ್ರೀ ಭೀ. ರಂ. ಕುಲಕರ್ಣಿ, ನಿಡಗುಂದಿ; ಸೈಜು ೧/೮ ಫುಲ್‌ಸ್ಕೇಪ್; ಪುಟ ೨೫; ಬೆಲೆ ೩೦ ನ.ಪೈ.

ಮದ್ರಾಸ್ ಶಾಖೆಯ ಯುನೈಟೆಡ್ ಇನ್ಫರ್ಮೇಷನ್ ಸರ್ವಿಸ್‌ನವರು ಈ ಕೆಳಗೆ ಕಂಡ ಪುಸ್ತಕಗಳನ್ನು ಉಚಿತವಾಗಿ ಕಳುಹಿಸಿಕೊಟ್ಟಿದ್ದಾರೆ. ಅವರಿಗೆ ಪರಿಷತ್ತು ಅನಂತ ಧನ್ಯವಾದವನ್ನು ಅರ್ಪಿಸುತ್ತದೆ. **ಪವಿತ್ರಾತ್ಮ:** ಅನುವಾದಕರು: ಶ್ರೀ ಎಂ.ಎಲ್.ಬಿ. ಪ್ರಕಾಶಕರು: ಸ್ಟ್ಯಾಂಡರ್ಡ್ ಬುಕ್ ಡಿಪೊ, ಬೆಂಗಳೂರು-೨; ಸೈಜು ೧/೮ ಕ್ರೌನ್; ಪುಟ ೨೬೨; ಬೆಲೆ ರೂ. ೩.

**ಜಾರ್ಜ್ ವಾಷಿಂಗ್‌ಟನ್:** ಅನುವಾದಕರು: ಸತ್ಯಪ್ರಿಯ; ಪ್ರಕಾಶಕರು: ವಾಹಿನಿ ಪ್ರಕಾಶನ, ಜಯಚಾಮರಾಜ ರಸ್ತೆ, ಬೆಂಗಳೂರು-೨; ಸೈಜು ೧/೮ ಕ್ರೌನ್; ಪುಟ ೧೫೨; ಬೆಲೆ ರೂ. ೨.

**ಕ್ರಾಂತಿಕಾರಿ ಯುಗದಲ್ಲಿ ಧರ್ಮ:** ಅನುವಾದಕರು: ಶ್ರೀ ಎಸ್. ಎನ್. ಮಲ್ಲ; ಪ್ರಕಾಶಕರು: ಸ್ಟ್ಯಾಂಡರ್ಡ್ ಬುಕ್ ಡಿಪೊ, ಬೆಂಗಳೂರು-೨; ಸೈಜು ೧/೮ ಕ್ರೌನ್; ಪುಟ ೧೮೪; ಬೆಲೆ ರೂ. ೩.

**ಅಮೆರಿಕದ ಕಾರ್ಮಿಕ ವರ್ಗದ ಕಥೆ:** ಅನುವಾದಕರು: ಶ್ರೀ ಖಾದ್ರಿ ಶಾಮಣ್ಣ; ಪ್ರಕಾಶಕರು: ಪ್ರಗತಿ ಪ್ರಕಟನಾಲಯ; ಬೆಂಗಳೂರು-೯; ಸೈಜು ೧/೮ ಕ್ರೌನ್; ಪುಟ ೨೫೬; ಬೆಲೆ ರೂ. ೩.

---

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತದೆ.

Reg. No. B. G. 4—May 1963

Licensed to Post without pre-payment. License No 1

# ಕನ್ನಡ ನುಡಿ ಬೆಳ್ಳಿಯ ಸಂಚಿಕೆ

## ಕನ್ನಡಿಗರಿಗೆ ಸಾಹಿತ್ಯ ಪರಿಷತ್ತಿನ ಉತ್ತಮ ಕೊಡುಗೆ

**ಕನ್ನಡ ಸಾಹಿತ್ಯದ ವಿವಿಧ ಮುಖಗಳ ಕಾಲು ಶತಮಾನದ ಬೆಳವಣಿಗೆಯ ವಿಹಂಗಮ ನೋಟ!**
**ಕನ್ನಡ ನಾಡಿನ ಸುಪ್ರಸಿದ್ಧ ಸಾಹಿತಿಗಳು ಉಣಬಡಿಸುವ ಸಾಹಿತ್ಯದ ರಸದೂಟ!**

## ಬೆಳ್ಳಿ ಸಂಚಿಕೆಯ ವೈಶಿಷ್ಟ್ಯಗಳು!!

ಸುಪ್ರಸಿದ್ಧ ಸಾಹಿತಿಗಳಾದ ಸರ್ವಶ್ರೀ ತೀ. ನಂ. ಶ್ರೀ., ಡಿ. ಎಲ್. ಎನ್., ತಿ. ತಾ. ಶರ್ಮ, ರಂ. ಶ್ರೀ. ಮುಗಳಿ, ಬಿ. ಎಸ್. ಶಾಸ್ತ್ರೀ, ಸು. ರಾಮರಾವ್, ಅ. ನ. ಕೃ., ಎಂ. ಮರಿಯಪ್ಪ ಭಟ್ಟ, ಎಸ್. ಎಸ್. ಮಾಳವಾಡ, ಆರ್. ಸಿ. ಹಿರೇಮಠ, ಎಂ. ವಿ. ಸೀತಾರಾಮಯ್ಯ, ಸಿದ್ಧಯ್ಯ ಪುರಾಣಿಕ, ಜಿ. ವೆಂಕಟಸುಬ್ಬಯ್ಯ, ಎಸ್. ಕೆ. ಕುಲಕರ್ಣಿ, ಗ. ಸ. ಹಾಲಪ್ಪ, ಸಾಂಕಾಪುರ, ಚೆನ್ನವೀರ ಕಣವಿ, ವೃಷಭೇಂದ್ರಸ್ವಾಮಿ, ದೇಶಿಕಾಚಾರ್ಯ, ಆರ್. ಎಲ್. ನರಸಿಂಹಯ್ಯ, ಜಿ. ಎಚ್. ಶ್ರೀಧರ, ಎಲ್. ಎಸ್. ಶೇಷಗಿರಿರಾವ್, ಕೆ. ಗೋಪಾಲಕೃಷ್ಣರಾವ್, ಎಸ್. ಬಸವಾರಾಧ್ಯ, ಜಿ. ವರದರಾಜರಾವ್, ಕೆ. ನರಸಿಂಹಮೂರ್ತಿ, ಕೆ. ಎಂ. ಕೃಷ್ಣರಾವ್, ಚಂದ್ರಶೇಖರ ಐತಾಳ, ಅ. ರಾ. ಮಿತ್ರ, ವೆಂಕಟೇಶಯ್ಯ, ಶಾಂತವೀರಯ್ಯ, ಚೌಡಪ್ಪ ರೆಡ್ಡಿ, ಕುಮಾರಿ ಚಿ. ನ. ಮಂಗಳ, ಶ್ರೀಮತಿ ಶಾಂತಾದೇವಿ ಮಾಳವಾಡ, ಮೊದಲಾದವರ ವಿದ್ವತ್ಪೂರ್ಣ ಲೇಖನಗಳಿಂದಲೂ, ಮತ್ತು ಸಂಸ್ಕೃತಿ ಹಾಗೂ ಕಲಾವೈಭವವನ್ನು ಪ್ರತಿಬಿಂಬಿಸುವ ಚಿತ್ರಗಳಿಂದಲೂ ಶೋಭಿಸುವುದು ಬೆಳ್ಳಿ ಸಂಚಿಕೆ.

**ಆಕಾರ ಕ್ರೌನ್ ೧/೪** ಪುಟಗಳು ಸು. ೧೫೦ ಬೆಲೆ ರೂ. ೨-೦೦

**ಪರಿಷತ್ತಿನ ಸದಸ್ಯರಿಗೂ** ಮತ್ತು ಪುಸ್ತಕ ವ್ಯಾಪಾರಿಗಳಿಗೂ ಪರಿಷತ್ತಿನ ಇತರ ಪ್ರಕಟಣೆಗಳಿಗೆ ನೀಡಲಾಗುತ್ತಲಿರುವ ಶೇಕಡಾ ೨೫ ರಂತೆ ರಿಯಾಯಿತಿಯನ್ನು ನೀಡಲಾಗುವುದು.

## ಜಾಹೀರಾತುಗಳನ್ನು ಕೊಡಲು ವ್ಯಾಪಾರಿಗಳಿಗೆ ಇದು ಶ್ರೇಷ್ಠ ಮಾಧ್ಯಮ

**ಜಾಹೀರಾತು ದರಗಳು :**

**ರಕ್ಷಾಪುಟಗಳು:**
ಕೊನೆಯ ಪುಟ: ೨೫೦ ರೂ. (ವರ್ಣಗಳಲ್ಲಿ)
೨ ಮತ್ತು ೩ ಪುಟ: ೨೦೦ ರೂ. (ವರ್ಣಗಳಲ್ಲಿ)

**ಒಳಪುಟಗಳು:**
ಪೂರ್ಣಪುಟ: ೧೨೫ ರೂ.
ಅರ್ಧಪುಟ: ೭೫ ರೂ.
ಕಾಲುಪುಟ: [illegible] ರೂ.

ಮುಂಗಡ ಹಣ ಕಳುಹಿಸಿ ನಿಮ್ಮ ಪ್ರತಿಯನ್ನು ಕಾದಿಟ್ಟು ಕೊಳ್ಳಿ —

ವಿವರಗಳಿಗೆ ಬರೆಯಿರಿ:

**ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮.**

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಬೆಂಗಳೂರು-೧೮.




# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೬] ಸಂಪಾದಕರು: ಅನ್ನದಾನಯ್ಯ ಪುರಾಣಿಕ, ಬಿ.ಕಾಮ್., ಎಲ್‌ಎಲ್.ಬಿ. [ಸಂಚಿಕೆ ೬

ಬಿ. ಎಂ. ಶ್ರೀ. ಅಚ್ಚುಕೂಟದ ನೂತನ ಕಟ್ಟಡ–ನಿಘಂಟು ಮುದ್ರಣ ಆರಂಭೋತ್ಸವ ಚಿತ್ರಗಳು.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

# ವಿಷಯ ಸೂಚಿಕೆ





# ಕನ್ನಡನುಡಿ



ಸಂಪುಟ ೨೬ ] ಜೂನ್ ೧೯೬೩ [ ಸಂಚಿಕೆ ೬

## ಜಯ ಧರ್ಮದ ಕಡೆಗೆ

ಲೇ: ಶ್ರೀ ವಿಷ್ಣುಮೂರ್ತಿ, ಕಾರ್ಗಲ್

ಜಯ ನಮ್ಮದು ಜಯ ನಮ್ಮದು
ಜಯ ನಮ್ಮದು ಕೊನೆಗೆ.
ಜಯ ಧೈರ್ಯದ ಜಯ ಶೌರ್ಯದ
ಜಯ ಧರ್ಮದ ಕಡೆಗೆ ॥ ೧ ॥

ಚೀಣಾಸುರ ಸಂಹಾರಕೆ
ಉತ್ಸಾಹದ ಕರೆಗೆ.
ಓ ಗೊಡುತಲಿ ಹೋರಾಡುವ
ಭಾರತ ಯೋಧರಿಗೆ. ॥ ೨ ॥

ಉತ್ಸಾಹೀ ಯುವ-ಯುವತಿಯ-
ರೆಲ್ಲರ ಗುರಿಯೆಡೆಗೆ.
ಉತ್ಸಾಹದ ಕೆಚ್ಚೆದೆಯಲಿ
ಮುನ್ನುಗ್ಗುವ ಧೀರರಿಗೆ ॥ ೩ ॥

ಚೀಣಾಸುರ ದಾಹಾಗ್ನಿಯು
ಬಹು ನಾಲಿಗೆ ಚಾಚಿ.
ಭಸ್ಮಾಸುರನಂತಾಗಿದೆ
ಹಿಮಗಿರಿಯನು ಬಾಚಿ. ॥ ೪ ॥

ತಾಯ್ನಾಡಿನ ಘನತೆಗೆ
ಕುಂದಿದು ಚೀಣರ ಆಕ್ರಮಣ.
ಎದುರಾಳಿಯನೆದುರಿಸೆ
ಬಂದಿಹುದಾಮಂತ್ರಣ. ॥ ೫ ॥

ಸಮರೋತ್ಸಾಹವು ತಲೆದೋರಿದೆ
ಭಾರತ ಪುತ್ರರಲಿ.
ಎದೆಗುಂದದೆ ಹೋರಾಡುವ
ಭಾರತ ಯೋಧರಲಿ. ॥ ೬ ॥

ಎಲ್ಲೆಲ್ಲಿಯು ಹೊರ ಹೊಮ್ಮಿದೆ
ತ್ಯಾಗದ ಸಿರಿ ಮಳೆಯು.
ಎಲ್ಲೆಲ್ಲಿಯು ಸುರಿಯುತ್ತಿದೆ
ಹೊನ್ನಿನ ಹಿರಿ ಮಳೆಯು. ॥ ೭ ॥

ದುಡಿ ರೈತನೆ ಕಡಿ ಮಣ್ಣನು
ಬೆಳೆ ಬೆಳೆಯಲಿ ಹೊನ್ನಾಗಿ.
ಇಳೆ ಬೆಳಗಲಿ ಹೊಳೆ ಹರಿಯಲಿ
ರಾಷ್ಟ್ರಕೆ ನೆರವಾಗಿ. ॥ ೮ ॥

ದುಡಿ ಕಾರ್ಮಿಕ, ದುಡಿ ಸೇವಕ
ವೇಳೆಗೆ ಸಮನಾಗಿ.
ಉಳಿತಾಯದ ಸದುಪಾಯವ-
ನರಿಯಲಿ ಉದ್ಯೋಗಿ. ॥ ೯ ॥

ಶಿಲ್ಪಿಯ ಕಲೆ ಕಾವ್ಯದ ನೆಲೆ
ವೀರರ ಕಥೆ ಸಾರಿ.
ಹಾಡುತ್ತಿವೆ ಹೊಗಳುತ್ತಿವೆ
ರಣ ಕಹಳೆಯ ಭೇರಿ. ॥ ೧೦ ॥

ರಣರಂಗದಿ ಜಯ ಭೇರಿಯು
ಬಾರಿಸೆ ತುತ್ತೂರಿ.
ಯೋಧನ ಸಿಡಿ ಗುಂಡಿಗೆ
ಚೀಣಾಸುರ ಗೋರಿ. ॥ ೧೧ ॥

ಜಯ ನೆಹರು, ಜಯ ವಡೆಯರ್
ಜಯ ರಾಷ್ಟ್ರ ಪಿತಾಮಹಗೆ.
ನವಯುವಕರ ಉತ್ಸಾಹದಿ
ಅಪಜಯವಿಲ್ಲೆಮಗೆ. ॥ ೧೨ ॥

ಜಯ ದಿವ್ಯದ ಜಯ ಭವ್ಯದ
ಕವಚವು ನಮ್ಮೆದೆಗೆ.
ಜಯ ಭಾರತಿ ಜಯ ಸಂಸ್ಕೃತಿ
ಧರ್ಮವೆ ಜಯ ನಿನಗೆ. ॥ ೧೩ ॥

ಜಯ ನಮಗೆ, ಜಯ ನಮಗೆ
ಖಂಡಿತ ಜಯ ನಮಗೆ.
ಜಯ ಧೈರ್ಯದ ಜಯ ಶೌರ್ಯದ
ಜಯ ಧರ್ಮದ ಕಡೆಗೆ. ॥ ೧೪ ॥

# ಕನ್ನಡ ಕಾದಂಬರಿ ಪ್ರವರ್ತಕರು

## ಎಂ. ಎಸ್. ಪುಟ್ಟಣ್ಣನವರು

ಲೇ : ಶ್ರೀ ಡಿ. ವಿ. ಗುಂಡಪ್ಪನವರು

ಶ್ರೀಮಾನ್ ಎಂ. ಎಸ್. ಪುಟ್ಟಣ್ಣನವರು ದಿವಂಗತರಾಗಿ ಮೂವತ್ತು ವರ್ಷಗಳ ಮೇಲಾಗಿದ್ದರೂ ಅವರ ವ್ಯಕ್ತಿ ಪ್ರಭಾವ ಅವರನ್ನು ಕಂಡಿದ್ದವರ ಪಾಲಿಗೆ ಕೊಂಚವೂ ಮಾಸದೆ ಸ್ಫುಟವಾಗಿದೆ. ಪರಿಶುದ್ಧವಾದ ಶೀಲ, ನಿಃಸ್ಪೃಹವಾದ ಅಧಿಕಾರ ನೀತಿ, ಕೃತ್ರಿಮವಿಲ್ಲದ ದೇಶಾಭಿಮಾನ, ಮಾತು ನಡತೆಯಲ್ಲಿ ಖಂಡಿತ, ನವುರಾದ ಕುಚೋದ್ಯ, ಕೊಂಚ ಮುಂಗೋಪ, ಮೃದುವಾದ ಅಂತರಂಗ–ಇವು ಅವರ ಮುಖ್ಯ ವ್ಯಕ್ತಿಲಕ್ಷಣಗಳು. ಇವು ಅವರ ಸಾಹಿತ್ಯ ಕೃತಿಯಲ್ಲಿ ಪ್ರತಿಬಿಂಬಿತವಾಗಿವೆ.

### ಮೊದಲ ಸಾಲಿಗೆ ಸೇರಿದ ವ್ಯಕ್ತಿ

ಅವರ ಸಾಹಿತ್ಯಾಸಕ್ತಿ ಸಹಜವಾದದ್ದು. ಯೂನಿವರ್ಸಿಟಿ ವಿದ್ಯಾವಂತರಲ್ಲಿ ಕನ್ನಡದ ಸೇವೆಗೆ ಮುಂದೆ ಬಂದವರ ಪೈಕಿ ಮೊದಲ ಸಾಲಿಗೆ ಸೇರಿದವರು ಅವರು. ಅವರ ಸಾಹಿತ್ಯಕಾರ್ಯ ಐದು ಬಗೆಯಾದದ್ದು: (೧) ಶಾಲಾಗ್ರಂಥ, (೨) ದೇಶಚರಿತ್ರೆ, (೩) ಜೀವನ ಚರಿತ್ರೆಗಳು, (೪) ಇಂಗ್ಲೀಷ್ ಮೊದಲಾದ ಭಾಷೆಗಳಿಂದ ಅನುವಾದಗಳು, (೫) ಸ್ವತಂತ್ರ ಕಲ್ಪನೆಗಳನ್ನು ಜ್ಞಾಪಕಕ್ಕೆ ತಂದುಕೊಳ್ಳೋಣ. ಅವುಗಳಲ್ಲಿ ಮುಖ್ಯವಾದುವು ನಾಲ್ಕು ಕಥಾ ಪ್ರಬಂಧಗಳು–ಅಥವಾ ಕಾದಂಬರಿ—

(೧) ಮಾಡಿದ್ದುಣ್ಣೋ ಮಹಾರಾಯ (೧೯೧೫)
(೨) ಪೇಟೇ ಮಾತೇನಜ್ಜಿ (೧೯೨೭)
(೩) ಮುಸುಗ ತೆಗೆಯೇ ಮಾಯಾಂಗನೆ (೧೯೨೮)
(೪) ಅವರಿಲ್ಲದ ಊಟ ಅಥವಾ
ಕೊಂಬೆಗೆ ರೆಂಬೆ ಸೇರಿತು (೧೯೨೯-೩೦)

ಕಥಾವಸ್ತುವಿನಲ್ಲಿಯೂ ಭಾಷಾ ಶೈಲಿಯಲ್ಲಿಯೂ ಪುಟ್ಟಣ್ಣನವರು ಅಚ್ಚ ಮೈಸೂರಿಗರು. ವಸ್ತು ಬಹುಮಟ್ಟಿಗೆ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದ–ಇಂದಿಗೆ ನೂರು ವರ್ಷಗಳ ಹಿಂದಿನ–ಸಮಾಜ ಅಂದಿನ ಸಾಮಾನ್ಯ ಜೀವಿತೋದ್ದೇಶಗಳು; ಆಗಿನ ನಂಬಿಕೆ ಕುರುಡು ನಂಬಿಕೆಗಳು; ಅಂದಿನ ಕುಟುಂಬಗಳ ತೊಡಕುಗಳು; ಗೃಹಚ್ಛಿದ್ರಗಳು; ಆ ಕಾಲದ ಪುಂಡರು; ಅಂದಿನ ರಾಜಕೀಯ; ಅಂದಿನ ಹಾಸ್ಯವಿನೋದ; ಅಂದಿನ ಪೂರ್ವಾಚಾರ ಶ್ರದ್ಧೆ; ಅಂದಿನ ನೀತಿ ನಿಷ್ಠೆ–ಇವೆಲ್ಲ ಓದುಗರ ಕಣ್ಣೆದುರಿಗೆ ಎದ್ದು ನಿಲ್ಲುವಂತೆ ಕಥೆ ಹೇಳಬಲ್ಲ ಚಾತುರ್ಯ ಪುಟ್ಟಣ್ಣನವರದು. ಕಥೆಯ ಒಳಗಡೆ ಪಾಠವೂ ಉಂಟು. ವಿದ್ಯಾಭ್ಯಾಸಕ್ರಮ, ಜಾತಿ ವ್ಯವಸ್ಥೆ, ಸಂಪ್ರದಾಯ ವಿಶ್ವಾಸ, ರಾಜಾಧಿಕಾರ ನೀತಿ–ಮೊದಲಾದ ಪ್ರಶ್ನೆಗಳನ್ನು ಕುರಿತ ಚರ್ಚೆಗಳೂ ಅಲ್ಲಲ್ಲಿ ಕಥಾಂಗವಾಗಿ ಬರುತ್ತವೆ. ಮಾನವ ಸನ್ನಿವೇಶ ವರ್ಣನೆಗಳೂ ವ್ಯಕ್ತಿ ಚಿತ್ರಗಳೂ ಸ್ವಾರಸ್ಯಕರವಾಗಿವೆ. ಒಟ್ಟಿನಲ್ಲಿ ಆಗಣ ಜನ ಸರಳ ಜೀವಿಗಳಾಗಿ, ದೇವರನ್ನು ನಂಬಿಕೊಂಡು, ದೊರೆತಷ್ಟರಿಂದ ಸಂತುಷ್ಟರಾಗಿ, ಹೊರಗಣ ಐಶ್ವರ್ಯಕ್ಕಿಂತ ಒಳಗಣ ನೆಮ್ಮದಿ ದೊಡ್ಡದೆಂದು ಎಣಿಸಿದ್ದರೆಂದು ತೋರುತ್ತದೆ. ಈಗ ಒಂದೆರಡು ಮಾದರಿಗಳನ್ನು ನೋಡೋಣ.

**ಮಾಡಿದ್ದುಣ್ಣೋ ಮಹಾರಾಯ**: ಇದು ಚಾಮರಾಜನಗರದ ಬಳಿಯ ಸಂಜೆವಾಡಿ ಗ್ರಾಮದ ಸದಾಶಿವ ದೀಕ್ಷಿತರ ಸುತ್ತ ಹಚ್ಚಿದ ಕಥೆ. ಅಲ್ಲಿಯ ಉಪಾಧ್ಯಾಯ ನಾರಪ್ಪಯ್ಯ ಒರಟು ಮನುಷ್ಯ; ಹಿಂದುಮುಂದು ನೋಡದೆ ಹುಡುಗರಿಗೆ ಹಿಂಸೆ ಇಟ್ಟ ಹೊರತು ಅವರು ವಿದ್ಯೆ ಕಲಿಯಲಾರರೆಂದು ನಂಬಿದ್ದ. ಅವನ ಕ್ರೂರತನಕ್ಕೆ ಪ್ರತೀಕಾರವೆಂದು ಕೆಲವರು ಶಿಷ್ಯರು ಅವನು ಮುಳ್ಳು ಹಳ್ಳದೊಳಕ್ಕೆ ಬೀಳುವಂತೆ ಕೃತ್ರಿಮ ಏರ್ಪಡಿಸಿದ್ದರು. ಆ ದುರವಸ್ಥೆಯಿಂದ ಅವನನ್ನು ಪಾರುಮಾಡಿ ನಾಲ್ಕಾರು ತಿಂಗಳು ಅವನನ್ನು ಮನೆಯಲ್ಲಿರಿಸಿಕೊಂಡು ಆರೈಕೆ ಮಾಡಿದವರು ಸದಾಶಿವ ದೀಕ್ಷಿತರು. ಹೀಗೆ ಕಾಪಾಡಿದ್ದರ ಜೊತೆಗೆ ಉಪಾಧ್ಯಾಯ ನೀತಿ ಕ್ರೂರತನವಾಗಬಾರದೆಂದೂ ಅವರು ನಾರಪ್ಪಯ್ಯನಿಗೆ ತಿಳಿವಳಿಕೆ ಹೇಳಿದರು. ಇದು ತಪ್ಪಾಯಿತು. ನಾರಪ್ಪಯ್ಯ ಊರಿನ ಪುಂಡು ಪಾಳಯಕ್ಕೆ ಸೇರಿಕೊಂಡು ಅವರಿಂದ ದೀಕ್ಷಿತರ ಸೊಸೆಗೆ ಕೇಡು ಮಾಡಿಸಬೇಕೆಂದು ಸನ್ನಾಹ ಮಾಡಿದ. ಆಕೆ ತನ್ನ ಬಲ ಅತ್ತೆಯ ಕಾಟವನ್ನು ಸಹಿಸಬೇಕಾಗಿತ್ತು.

ಅವರ ಜೊತೆಗೆ ತನ್ನ ಮಾನವನ್ನೂ ವ್ರತವನ್ನೂ ಕಾಪಾಡಿಕೊಳ್ಳಲು ಬಹು ಕಷ್ಟ ಸಹಿಸಿದಳು. ಕಡೆಗೆ ಅಮಾಸೆ ಯೆಂಬ ಕಳ್ಳ ಪಡೆಯವನೊಬ್ಬನು ಪೋಲೀಸರಿಗೆ ತನ್ನ ಪೂರ್ವಕಥೆಯನ್ನು ಹೇಳಿಕೊಂಡಾಗ ಸಂಗತಿಯೆಲ್ಲ ಹೊರಕ್ಕೆ ಬಂತು. ಕಳ್ಳರಿಗೂ ನಾರಪ್ಪಯ್ಯನಿಗೂ ಬಂದೀಖಾನೆಯಾಯ್ತು. ಅಮಾಸೆ ಸಹಜವಾಗಿ ಒಳ್ಳೆಯವನು, ಬಾಲ್ಯದ ಕೆಲವು ಸಂದರ್ಭಗಳಿಂದ ದುಷ್ಟ ಸಹವಾಸಕ್ಕೆ ತಳ್ಳಲ್ಪಟ್ಟಿದ್ದವನು. ಕಡೆಗೆ ಅವನು ತನ್ನ ಪೂರ್ವ ಸ್ನೇಹಿತರು ಬಂದೀಖಾನೆಗೆ ಹೋಗುತ್ತಿದ್ದದ್ದನ್ನು ಕಂಡಾಗ-" ಮಾಡಿದ್ದುಣ್ಣೋ ಮಹಾರಾಯ " ಎಂದು ಹೇಳಿದ. ಈ ಕಥಾ ಸಂದರ್ಭದಲ್ಲಿ ಬರುತ್ತವೆ, ಅನೇಕ ಸ್ವಾರಸ್ಯ ತುಂಬಿದ ಘಟನೆಗಳು. ಪ್ರಾರಂಭದಲ್ಲಿಯೇ ಸುಬೇದಾರ ನಾರಮಣರಾಯ, ಅವನ ಕೊಯ ಮುತ್ತೂರು ಕನ್ನಡ, ಅವನ ಹೆಂಡತಿ ಮಕ್ಕಳ ಲಂಚದ ಚಾಳಿ. ಆಮೇಲೆ ಆ ಪ್ರದೇಶದ ತೊರೆಯರಿಗೂ ಉಪ್ಪ ಲಿಗರಿಗೂ ಇದ್ದ ಜಾತಿ ವೈಷಮ್ಯ, ಅವರ ದೊಂಬಿ ದಾಂಧಲೆ, ಇಲ್ಲವೆ ಒಂದು ಮೆರವಣಿಗೆಯ ವರ್ಣನೆ.

" ಮದುಮಕ್ಕಳು ಕೂತಿರುವ ಪಲ್ಲಕ್ಕಿ, ಇದರ ಹಿಂದೆ ಬೇಕಾದ ಒಡವೆಗಳನ್ನಿಟ್ಟು, ಬಗೆಬಗೆ ಸೀರೆಗಳನ್ನುಟ್ಟು, ಬೇಕುಬೇಕಾದ ಸಿಸ್ತುಗಳನ್ನು ಮಾಡಿಕೊಂಡು, ಕನ್ನಡಿ, ಕಳಸ, ಸುತ್ತು ವೀಳೆಯ, ತೆಂಗಿನಕಾಯಿ, ಬಾಳೆಹಣ್ಣು- ಈ ಬಗೆ ತಟ್ಟೆಗಳನ್ನು ಹಿಡಿದು, ಹಾಡುಗಳನ್ನು ಹಾಡುತ್ತಾ ಬರುವ ತೊರಕಿಯರ ಸಂಘ, ಇವರ ಹಿಂದೆ ಸಾಧಾರಣ ಬಟ್ಟೆಗಳನ್ನೂ ಕಂಬಳಿಗಳನ್ನೂ ಹೊದ್ದು ಬರುತ್ತಾ ಇರುವ ಗಂಡಸರ ಹೆಚ್ಚಾದ ಗುಂಪು, ಇವುಗಳಲ್ಲೆಲ್ಲಾ ಒರಟುಒರಟಾದ ಸೌಂದರ್ಯವನ್ನು ತೋರುತ್ತಿದ್ದಾಗ್ಗೂ ಮುಡಿದಿರುವ ಚೆಂಡುಮಲ್ಲಿಗೆ ಹೂವಿನ ವಾಸನೆ, ಕೈಯೆಣ್ಣೆಯ ಮಣುಕು ವಾಸನೆ, ನೀರುಳ್ಳಿ ಬೆಳ್ಳುಳ್ಳಿಯ ವೆಗಟುವಾಸನೆ, ಇದೆಲ್ಲವನ್ನೂ ಮುಚ್ಚುತ್ತಾ ಇರುವ ಬೆವರು ವಾಸನೆ-ಇವುಗಳು ತುಂಬಿದ್ದ ಕಾರಣ ಇಂದುಗಮಲನ್ನು ಎಂದಿಗೂ ಅರಿಯದವರ ಮೂಗು ಆಗಾಗ್ಯೆ ಸೊಟ್ಟಸೊಟ್ಟನಾಗುತ್ತಿತ್ತು.

ಹೀಗೆಯೇ ಅತ್ತೆಯ ಕಾಟ, ಅಜ್ಜಿಯ ಪೇಚಾಟ, ರಾಜಾಸ್ಥಾನದ ನಕಲೀ ನಾರಣಪ್ಪನ ಚೇಷ್ಟೆ, ಮಹಾರಾಜರ ವಿದ್ವದಭಿಮಾನ, ಅವರ ಸ್ನೇಹ ಸುಲಭತೆ, ಔದಾರ್ಯ, ವಿನೋದ-ಇವುಗಳ ದೃಶ್ಯಗಳಿವೆ. ಒಟ್ಟಿನಲ್ಲಿ ಜೀವಕಳೆ ತುಂಬಿದ್ದ ಸಮಾಜದ ಛಾಯಾಚಿತ್ರ ಈ ಕಾದಂಬರಿ.

**ಮುಸುಗ ತೆಗೆಯೇ ಮಾಯಾಂಗನೆ :** ಇದು ಪತ್ತೇದಾರಿ ಕಥೆಯಂತೆ ಕುತೂಹಲಕಾರಿಯಾದದ್ದು. ಬ್ರಿಟಿಷರ ಆಕ್ರಮಣದಿಂದ ಮೈಸೂರು ರಾಜ್ಯವನ್ನು ಬಿಡಿಸಿ ಪುನಃ ರಾಜರ ಕೈಗೆ ಸೇರಿಸಬೇಕೆಂಬ ಯೋಚನೆಗೆ ಬ್ರಿಟಿಷ್ ಸರದಾರರನ್ನು ಅನುಕೂಲಪಡಿಸಿಕೊಳ್ಳಬೇಕೆಂಬ ಉಪಾಯ ಪ್ರಯತ್ನ ಈ ಕಥೆಯ ಹಿನ್ನೆಲೆಯಲ್ಲಿದೆ. ಆದರೆ ಇಲ್ಲಿಯ ಮುಖ್ಯ ಪ್ರಸಂಗದ ಪಾತ್ರಗಳು ಒಂದು ಕಡೆ ನಾಗರತ್ನಾ ಸಾನಿಯೆಂಬ ವೇಶ್ಯೆ ; ರಾಜಸೇವಕನಾದ ದೇಪಣ್ಣನೆಂಬ ವಿಟ ; ಬಸಪ್ಪನೆಂಬ ಪೈಪೋಟಿ ವಿಟ. ಇನ್ನೊಂದು ಕಡೆ ಇಂಗ್ರೇಜಿ ಹಯಾತ್ ಸಾಬಿಯೂ ಚಾಂದಬೀಬಿಯೂ ಸೇರಿ ಮಾಡಿದ ಜವಾಹಿರಿ ವ್ಯಾಪಾರ-ಶ್ರೀರಂಗಪಟ್ಟಣದ ಯುದ್ಧದಲ್ಲಿ ಕಾದಿದ ಹನುಮಂತರಾವ್ ಎಂಬ ಮರಾಠಾ ಸಿಪಾಯಿ, ದುರ್ಗಾಬಾಯಿ ಎಂಬ ಮರಾಠೀ ವೀರ ಯುವತಿ-ಇವರಿಬ್ಬರ ಅನ್ಯೋನ್ಯಾಕರ್ಷಣೆ, ಗುಂಡಲು ಪೇಟೆಯ ಅಪ್ರಮೇಯ್ಯಂಗಾರಿ ಎಂಬ ದೇಪಣ್ಣನ ಗುಮಾಸ್ತೆಯ ಸ್ವಾಮಿಭಕ್ತಿ-ಇವು ಮುಖ್ಯ ಸಂಗತಿಗಳು. ಅಪ್ರಮೇಯನೇ ಕಥಾನಾಯಕನೆನ್ನಬಹುದು. ಅವನ ಬುದ್ಧಿವಂತಿಕೆ, ಸಾಹಸ, ಸ್ವಾಮಿನಿಷ್ಠೆಗಳಿಂದಲೇ ದೇಪಣ್ಣನ ಮೇಲೆ ಬಂದಿದ್ದ ಖೂನಿಯ ಆಪಾದನೆ ನಿರ್ಮೂಲವಾಗಿಹೋಗಿ, ಆತನ ಮೇಲೆ ಸುಳ್ಳು ತಪ್ಪು ಹೊರಿಸಿದ್ದ ವಂಚಕರಿಗೆ ದಂಡನೆಯಾಯಿತು. ಕಥೆಯ ಬಂಧನದ ಚಮತ್ಕಾರವೂ ಬಸಪ್ಪನಿಗೆ ಸೂಳೆಯ ಮನೆಯಲ್ಲಿ ಬಂದ ಅವಸ್ಥೆಗಳ ಚಿತ್ರಣವೂ ಕಡೆಯಲ್ಲಿ ಗಂಜಾಮಿನ ಮುಸುರೆ ಚೆನ್ನಿಯ ಮಗಳು ಮಾಯಾಂಗನೆ ದುರ್ಗಿಯ ಮುಸುಕು ತೆಗೆಸಿದಾಗ ಅವಳು ಸಿಪಾಯಿ ದುರ್ಗಾಬಾಯಿಯಲ್ಲವೆಂದು ರುಜುವಾತಾದದ್ದೂ ಮನೋರಂಜಕವಾಗಿವೆ.

**ಕೊಂಬೆಗೆ ರೆಂಬೆ ಸೇರಿತು :** ನೆರಹಳ್ಳಿಯ ರಾಮಸ್ವಾಮಯ್ಯಂಗಾರ್ಯರ ಆಶ್ರಯಕ್ಕೆ ಚಿಕ್ಕಂದಿನಲ್ಲಿ ಬಂದು ಸೇರಿ ಅವರ ಪೋಷಣೆಯಿಂದ ಬೆಳೆದ ಮಲ್ಲನು ಬಾಗಲೂರಿನಲ್ಲಿದ್ದ ಅವರ ಮಗಳು-ಅಳಿಯ-ಮೊಮ್ಮಗು ಇವರನ್ನು ನೆರಹಳ್ಳಿಗೆ ಕರತರಲು ಗಾಡಿ ತೆಗೆದುಕೊಂಡು ಹೋದವನು ಅಲ್ಲಿಂದ ಹಿಂದಿರುಗಿ ಬರುವಾಗ ಕತ್ತಲು ಹೊತ್ತಿನಲ್ಲಿ ಕಾಡಿನ ಕಡೆ ಬಂಡಿ ತಿರುಗಿಸಿ, ಜ್ವರ ಬಂದು ನರಳುತ್ತಿದ್ದ ಆ ನರಸಿಂಹಾಚಾರಿಯನ್ನು ಹಾಗೆಯೇ ಬಿಟ್ಟು, ಜಾನಕಮ್ಮನ ಮೈಯಮೇಲಿನ ಒಡವೆಗಳನ್ನು ಕಿತ್ತುಕೊಂಡು, ಆಕೆಯನ್ನು ಹಾಳುಬಾವಿಗೆ ತಳ್ಳಿ ಆಕೆಯ ಮೇಲೆ ದೊಡ್ಡ ಬಂಡೆ ಕವಿಸಬೇಕೆಂದು ಒಂದು ಕಲ್ಲಿಗೆ

ಕೈಯಿಟ್ಟಾಗ ಹಾವು ಕಚ್ಚಿ ಅಲ್ಲಿಯೇ ಬಿದ್ದದ್ದೂ, ದಾರಿ ಹೋಕರು ಅವನನ್ನು ಬದುಕಿಸಿದ ಮೇಲೆ ಅವನು ಓಡಿ ಹೋಗಿ ವೇಷ ಬದಲಾಯಿಸಿಕೊಂಡು ಎಲ್ಲೆಲ್ಲೋ ದುಷ್ಟ ಸಹವಾಸಗಳಿಂದ ಜೀವಿಸಿದ್ದೂ ಇತ್ತ ನರಸಿಂಹಾ ಚಾರಿಯೂ ಆತನ ಪತ್ನೀ ಪುತ್ರರೂ ಹೇಗೋ ಬದುಕಿಕೊಂಡರೂ, ಆತನೂ ಆಕೆಯೂ ಬೇರೆ ಬೇರೆ ಕಡೆ ಇದ್ದು ಪರಸ್ಪರ ವರ್ತಮಾನ ತಿಳಿಯದೆ ಸಂಕಟಪಟ್ಟದ್ದೂ ರಾಮಸ್ವಾಮಯ್ಯಂಗಾರ್ಯರ ಬಹುಕಾಲದ ಹುಡುಕಾಟದಿಂದ ಆ ದಂಪತಿಗಳಿಗೂ ಮಗನಿಗೂ ಪುನಸ್ಸಮಾಗಮವಾದದ್ದೂ, ಆ ದುಷ್ಟನಿಗೆ ತಕ್ಕ ಶಾಸ್ತಿಯಾದದ್ದೂ ಈ ಕಾದಂಬರಿಯ ವಸ್ತು. ರಂಗನಾಥನೂ ನರಸಿಂಹಾ ಚಾರಿಯೂ ಒಬ್ಬರನ್ನೊಬ್ಬರು ಗುರ್ತು ಹಿಡಿದು ಅಂಗೀಕರಿಸಿದಾಗ ರೆಂಬೆಕೊಂಬೆಗೆ ಸೇರಿತು. ಇದರಲ್ಲಿ ಮನುಷ್ಯನ ಮನಸ್ಸೂ ವರ್ತನೆಯೂ ಸಂದರ್ಭಗಳಿಂದ ಹೇಗೆ ಹೇಗೆ ಮಾರ್ಪಡಬಹುದು; ಆಗ ತಪ್ಪುದಾರಿಯಿಂದ ತನ್ನನ್ನು ಕಾಪಾಡಿಕೊಳ್ಳಬೇಕಾದರೆ ಮನುಷ್ಯ ಎಂಥ ಜಾಗರೂಕತೆಯಿಂದ ತನ್ನ ವಿವೇಕವನ್ನು ಉಳಿಸಿಕೊಳ್ಳಬೇಕು-ಎಂಬುದನ್ನು ಈ ಕಾದಂಬರಿ ದೃಷ್ಟಾಂತಪಡಿಸುತ್ತದೆ.

ಪುಟ್ಟಣ್ಣನವರ ಕಾದಂಬರಿಗಳು ಇಂಗ್ಲಿಷ್ ನಾವೆಲ್‌ಗಳಂತೆ ಪ್ರತ್ಯಕ್ಷ ಜೀವನ ಚಿತ್ರಗಳು. ಕಥಾಬಂಧದಲ್ಲಿಯೂ ಕಥನರೀತಿಯಲ್ಲಿಯೂ ಪಾತ್ರಕಲ್ಪನೆಯಲ್ಲಿಯೂ ಅವರು ಸಮರ್ಥರು. ಕನ್ನಡ ಕಾದಂಬರೀಕಾರರಿಗೆ ಆದರ್ಶಪ್ರಾಯರು ಎಂದು ಅವರ ರಚನೆಗಳಿಂದ ಸಿದ್ಧವಾಗುತ್ತದೆ.

(ಆಕಾಶವಾಣಿ ಕೃಪೆಯಿಂದ)

---

## ಕೋಗಿಲೆಗೆ*

ಶ್ರೀ ಆರ್. ರಾಚಪ್ಪ

ಓ ಉಲ್ಲಾಸದಾಗಂತುಕ ಕೇಳಿದೆನು,
ನಿನ್ನ ದನಿಗೇಳಿ ಉಲ್ಲಸಿತನಾದೆ;
ಓ ಕೋಕಿಲ! ನಿನ್ನ ಹಕ್ಕಿಯೆನಲೇನು?
ಇಲ್ಲ—, ಅಲೆಯುಲಿ ಎನಲೇ? ೧

ಪಚ್ಚೆ ಗರುಕೆ ಮೇಲೆ ಮಲಗಿರಲು ನಾನು
ದೂರದಿಂದಲೊಮ್ಮೆ ಬಳಿಯಿಂದೊಮ್ಮೆ
ಬೆಟ್ಟದಿಂದ ಬೆಟ್ಟದೆಡೆಗೆ ಹರಿದಾಡುವಂತಿರಲು
ನಿನ್ನ ಕುಹೂ ಕುಹೂ ದನಿ ಕೇಳುತಿಹೆನು ೨

ಅಲರು ರವಿರಶ್ಮಿಗಳ ಕಣಿವೆಯೊಂದಕೆ
ಮರ್ಮರಗಳಹುತಿದ್ದರೂ,
ಭಾವನೈಕಮಯಕಾಲಗಳ ಕಥೆಯನೊಂದನು
ತಂದಿತ್ತೆ ನೀನೆನ್ನಬಳಿಗೆ. ೩

ಮೂರು ಸ್ವಾಗತವು ನಿನಗೆ, ವಸಂತನರಗಿಣಿಯೇ;
ಆದರೀಗಲೂ ನೀ ನೆನಗೆ
ಹಕ್ಕಿಯಲ್ಲ, ಕಾಣದೊಂದು ವಸ್ತು, ಧ್ವನಿಮಾತ್ರ;
ಸೋಜಿಗ! ರಹಸ್ಯ!! ೪

ಬಾಲ್ಯದಲ್ಲಿ, ಶಾಲೆ ದಿನಗಳಂದು ನನ್ನ,
ಪೊದರುಮರೆ ಆಗಸವಲಿ, ಇಂತೆ
ಸಹಸ್ರಹಾದಿಗಳೊಳಗಲ್ಲಿ ಹುಡುಕಿ ಅಲೆವಂತೆ
ಮಾಡ್ದ ಇನಿದನಿಯನೇ ಸವಿದಿಹೆನಿಂದೂ. ೫

ಕಾಡಿನಲಿ, ಹಸಲೆಮೇಲಲ್ಲಿ ನಿನ್ನ ಅರಸಿ
ಆಗಲಾಗ ಅಲೆದಾಡಿದೆನಲ್ಲ;
ಈಗಲೂ ನೀನು ಪ್ರೇಮದೊಂದು ಉಲಿ, ಭರವಸೆ,
ಇನ್ನೂ ಹಾಗೆ ಕಾಣೆ ನೀನೆನಗೆ. ೬

ಬೆಳೆದು ನಾನು ಮಾನವ, ಈಗಲೂ ಕೇಳುತಿಹೆ
ಹಸರು ನೆಲದ ಮೇಲೆ ವೈಚಲ್ಲಿ
ಬಾಲ್ಯದಾನಂದಘಳಿಗೆ ಸಿಗುವಲ್ಲಿಗೆ-ನನ್ನದಾಗುವಲ್ಲಿಗೆ-
ದನಿಯನೊಂದನೆ ಆಲಿಸುವೆ. ೭

ಓ ಧನ್ಯಪಕ್ಷೀ ನಾವಿರುವಭುವಿ ಇವಳು
ಅಸ್ಥಿರೆ, ತನ್ನತನ ನೀಗಿ
ಮಾಂತ್ರಿಕಳಾಗಿ ತೋರುತಿಹಳು, ನಿನ್ನಾಧ್ವನಿ ಸ್ವರ್ಗ
ತಕ್ಕ ಮನೆ ನಿನಗೆ. ೮

---

* ವರ್ಡ್ಸ್‌ವರ್ತ್ ಕವಿಯ 'To the Cuckoo' ಎಂಬ ಕವನದ ಭಾವಾನುವಾದ.

# ಗ್ರಂಥಾವಲೋಕನ

**ಲೇಖಕರು :** ಶ್ರೀ ವೆಲ್ಲಾಲ ಸತ್ಯಂ; ಪ್ರಕಾಶಕರು: ಆನಂದ ಪ್ರಕಾಶನ, ಸುಲ್ತಾನ್‌ಪೇಟೆ, ಬೆಂಗಳೂರು-೨; ಆಕಾರ ಕಿರೀಟ ಅಷ್ಟದಳ; ಪುಟ ೧೮೨; ಬೆಲೆ ರೂ. ೨.

ಮಾನವನ ಉಳಿವು ಅಳಿವುಗಳ ಬಗ್ಗೆ, ಜನನ ಮರಣಗಳ ಬಗ್ಗೆ, ಸ್ವರ್ಗ ನರಕಗಳ ಬಗ್ಗೆ, ಎಲ್ಲಕ್ಕೂ ಮಿಗಿಲಾಗಿ ದೈವತ್ವದ ಬಗ್ಗೆ ಬರೆದಿರುವ ಪುಸ್ತಕಗಳು ಬಹಳ ಕಡಮೆಯೆಂದೇ ಹೇಳಬೇಕು. ಅದರಲ್ಲಿಯೂ ಕಾದಂಬರಿ ರೂಪದಲ್ಲಿ ಇಂಥ ವಿಚಾರಗಳನ್ನು ಸವಿಸ್ತಾರವಾಗಿ ವರ್ಣಿಸಿರುವುದಂತೂ ತೀರಾ ಅಪರೂಪ. ಇಂಥ ಕೆಚ್ಚೆದೆಯ ಸಾಹಸವನ್ನು ಈ ಪುಸ್ತಕದ ಲೇಖಕರಾದ ಶ್ರೀ ವೆಲ್ಲಾಲ ಸತ್ಯಂರವರು ಮಾಡಿರುತ್ತಾರೆ. ಈ ಕಾದಂಬರಿಯಲ್ಲಿ ನಾವು ಕಾಣುವುದು ಭಾರತೀಯರ ಧರ್ಮಶಾಸ್ತ್ರವನ್ನಲ್ಲ—ಪಾಶ್ಚಾತ್ಯ ಧರ್ಮದ ಸ್ವರೂಪವನ್ನು. ಇದಕ್ಕೆ ಕಾರಣ ಸ್ವಯಂವೇದ್ಯವಾಗಿದೆ. ಇದು ಆಂಗ್ಲ ಕಾದಂಬರಿಯ ಅನುವಾದವಷ್ಟೆ. ಲೇಖಕರ ಮಾತಿನಲ್ಲಿಯೇ ಹೇಳುವುದಾದರೆ—"ಈ ಕೃತಿಯ ರಚನೆಗೆ ಪ್ರೇರಣೆಯನ್ನು ಕೊಟ್ಟದ್ದು 'ಮೇರಿ ಕಾರಿಲಿ'ಯವರ 'ದಿ ಸೋಲ್ ಆಫ್ ಲಲಿತ್' ಎಂಬ ಕಾದಂಬರಿ."

ದೈವಸಾಕ್ಷಾತ್ಕಾರಕ್ಕೆ ಮುಖ್ಯವಾಗಿ ಇರಬೇಕಾದದ್ದು ಅಖಂಡ ವಿಶ್ವಾಸ, ಅಚಲ ನಂಬಿಕೆ, ಅನನ್ಯ ಭಕ್ತಿ; ಆದರೆ ವಿಜ್ಞಾನಿಗೆ ಪ್ರತ್ಯಕ್ಷವೇ ಪ್ರಮಾಣ. ಅದೇ ಅವನ ಊರುಗೋಲು. ಇದರ ನೆರವಿನಿಂದಲೇ ಬ್ರಹ್ಮಜ್ಞಾನ ಪಡೆಯುವುದು ಕಷ್ಟಕರವೇ ಸರಿ. ಆದರೂ ಸಹ ತನ್ನದೇ ಆದ ರೀತಿಯಲ್ಲಿ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದ ಪಂಡಿತನೊಬ್ಬನ ರಮ್ಯಕತೆಯೇ ಈ 'ಮಹಾಪ್ರಯೋಗ'. ಈ ಕಾದಂಬರಿಯಲ್ಲಿ ಎದ್ದುಕಾಣುವ ಮುಖ್ಯ ಪಾತ್ರವೆಂದರೆ ಶಾಸ್ತ್ರಿಗಳದ್ದು.

ನಾವೆಲ್ಲರೂ ಶಾಸ್ತ್ರಿಗಳೆಂದರೆ ಧರ್ಮದಲ್ಲಿ ಶ್ರದ್ಧೆಯಿರುವವರೆಂದೂ ಆಚಾರಶೀಲರೆಂದೂ ಭಾವಿಸದ್ದೇವೆ. ಆದರೆ ಇಲ್ಲಿ ಬರುವ ಶಾಸ್ತ್ರಿಗಳು ಅಂಥವರಲ್ಲ. ಇವರು ವಿಜ್ಞಾನ ಪ್ರಯೋಗ ಮಂದಿರದಲ್ಲಿ ಸಂಶೋಧನೆ ನಡೆಸುವ ವಿಜ್ಞಾನಿಗಳು. ಆದ್ದರಿಂದ ಓದುಗರು ಸ್ವಲ್ಪ ತಡವರಿಸಬೇಕಾಗುತ್ತದೆ.

ನಾವು ಗಮನಿಸಬೇಕಾದ ಇನ್ನೊಂದು ವಿಷಯವೆಂದರೆ—ಇಲ್ಲಿ ಕಾಣುವ ಇಬ್ಬರು ಸ್ತ್ರೀ ಪಾತ್ರಗಳ ವಿಚಿತ್ರ ವರ್ತನೆ. ಒಬ್ಬಳು ಯುವತಿ. ಹೆಸರು—ರೂಪಾ—ಎಂದು. ಇವಳು ಎದ್ದು ಓಡಾಡಿದ ಪ್ರಸ್ತಾಪವೇ ಇಲ್ಲ. ಇವಳು ಸತ್ತಿರುವಳೋ ಬದುಕಿರುವಳೋ ಎಂಬ ಸಂದೇಹ ಮೂಡುತ್ತದೆ. ಇದೇ ಈ ಕಾದಂಬರಿಯ ವೈಶಿಷ್ಟ್ಯ. ಮತ್ತೊಬ್ಬಳು ಮುದುಕಿ. ಹೆಸರು—ದೇವಕಿ—ಎಂದು. ಇವಳು ಕಿವುಡಾಗಿರುವ ಪ್ರಯುಕ್ತ ಎಲ್ಲವನ್ನೂ ಬರೆದು ತಿಳಿಸಬೇಕು.

ಇವೆಲ್ಲಕ್ಕಿಂತಲೂ ಮತ್ತೊಂದು ವಿಚಿತ್ರವೆಂದರೆ—ಶಾಸ್ತ್ರಿಗಳ ತಮ್ಮನೆಂದು ಹೇಳಲ್ಪಟ್ಟಿರುವ 'ಜ್ಯೋತಿ' ಎಂಬ ಯುವಕನು ಅಡಿಗೆ ಭಟ್ಟನಾಗಿದ್ದುಕೊಂಡು, ಸಂಗೀತ ಕಲೋಪಾಸಕನಾಗಿ ಕಂಗೊಳಿಸುತ್ತಿರುವುದು. ಇವನು ವೀಣೆಯನ್ನು ನುಡಿಸುವುದರಲ್ಲಿ ಅಗ್ರಗಣ್ಯ, ಅಷ್ಟೇ ಅಲ್ಲದೆ ಇವನೊಬ್ಬ ಸ್ವಪ್ನಜೀವಿ. ಯಾವಾಗಲು ಇವನು ಕನಸುಗಳನ್ನೇ ಕಾಣುತ್ತಿರುತ್ತಾನೆ. ಅಲ್ಲದೆ ಆ ಕನಸುಗಳು ಸತ್ಯವೆಂದೇ ನಂಬಿರುತ್ತಾನೆ. ತಾನು ಕಂಡ ಕನಸುಗಳನ್ನು ಧ್ವನಿ, ಚಿತ್ರ, ಶಬ್ದರೂಪಗಳಲ್ಲಿ ಹೊರಗೆಡಹುವ ಗುಣ ಇವನಿಗೆ ಸ್ವಾಭಾವಿಕವಾಗಿಯೇ ಬಂದಿದೆ. ಇವನು ಕವಿಯೂ ಹೌದು, ಅಂದಮೇಲೆ ಇವನು ಈ ಕಾದಂಬರಿಯಲ್ಲಿ ಅಡಿಗೆಯವನಾಗಿ, ವೈಣಿಕನಾಗಿ, ಕವಿಯಾಗಿ, ಕಲೋಪಾಸಕನಾಗಿ ಕಾಣಿಸಿಕೊಂಡಿದ್ದಾನೆ. 'ಜ್ಯೋತಿ' ಶಾಸ್ತ್ರಿಗಳ ಮನೆಬಿಟ್ಟು ಎಂದೂ ಹೊರಗೆ ಹೋದವನಲ್ಲ. ಅವನಿಗೆ ಊಟ ತಣಕೂಟವೆಂದರೆ ಏನೆಂಬುದೇ ತಿಳಿಯದು. ಒಮ್ಮೆ ಶಾಸ್ತ್ರಿಗಳನ್ನು ಹಾಗೆಯೇ ಕೇಳುತ್ತಾನೆ. ಈ ಕಾದಂಬರಿಯ ಲೇಖಕರೂ ಸಹ ಒಮ್ಮೊಮ್ಮೆ ಕವಿಯಾಗಿ ಕೆಲವು ವರ್ಣನೆಗಳನ್ನು ನಮ್ಮ ಮುಂದೆ ಇಟ್ಟಿರುತ್ತಾರೆ. ಉದಾಹರಣೆಗೆ:—ಜ್ಯೋತಿ ಹಾಡಿದ ಒಂದು ಕವನ—

"ಕೇಳುತ್ತಾರೆಯೆ ನಿನ್ನ ಬಳಿ ನಾ ತಂದಿರುವೆ ಬಲು ದುಗುಡವ  
ಕರುಣೆಯಿಂದಲಿ ನೋಡು, ಕಳುಹೈಸಾಂತ್ವನದ  
ಚೆಲು ಕಿರಣವ

ಅಲ್ಲಿ ಆಗಸದಲ್ಲಿ ಭೂನಾಕಗಳ ಮಧ್ಯದಿ ತೇಲುವೆ  
ಎನ್ನ ವಿಧಿಯನು ಅರಿತಿರುವೆ ನೀನೆಂದು ಮೌನವ  
ತ್ಯಜಿಸುವೆ ?

ಕಾಲದಾಸಂಕೋಲೆ, ದೇಹದಾಪಂಜರವು, ಮೇಣ್
ಮರಣದ
ಕಾಳಛಾಯೆಯು ಕವಿದ ಆತ್ಮಕೆ ಮುಕ್ತಿಪದವೇ ಕಾಣದ?
ಏಕೆ? ಎಲ್ಲಿಂ? ಹೇಗೆ? ಆತ್ಮವು ಎಂದು ಬಂದಿತು ಇಲ್ಲಿಗೆ
ದಿವ್ಯಲೋಕಗಳಿರಲು? ಇಲ್ಲಿನ ವಾಸದಾ ಕೊನೆ ಎಂದಿಗೆ?
ನಿಮಿಷ ಯುಗವಾಗಿಹುದು, ನೋವಿನ ನೆಲೆಯ
ಜೀವನ ಬೇಸರ
ನನಗೆ ಹಿಂದೆಯು ಅಳುವು ಮುಂದೆಯು ಅಳುವು!
ಏನಿದು ಈ ತೆರ?
ಕವಿಯ ಕೃತಿ, ಗಾಯಕನ ಗೀತವು, ಕಲೆಯಕಾರನ ಚಿತ್ರವು,
ಪೂರ್ಣವಲ್ಲವು! ಎಲ್ಲವೂ ಬರಿಗನಸಿನಂತೆ ಅಪೂರ್ಣವು!"

ಈ ಕಾದಂಬರಿಯಲ್ಲಿ ಚರ್ಚಿಸಲ್ಪಟ್ಟಿರುವ ವೇದಾಂತ ಮೇಲ್ಮಟ್ಟದ್ದಾಗಿದೆ. ಶಾಸ್ತ್ರಿಗಳ ವಾದಸರಣಿ ಅಮೂಲ್ಯ ವಾಗಿದೆ. ಅವರ ವಾದ ಹೀಗಿದೆ—ತಾನು ಮಾಡಿದ ಸುಕೃತ, ಆರ್ಜಿಸಿದ ಜ್ಞಾನ ಎಂದಿಗೂ ವ್ಯರ್ಥವಾಗುವು ದಿಲ್ಲ. ಮೃತ್ಯುವಿನ ದವಡೆಯಲ್ಲಿರುವವನೂ ಸಹ ಜ್ಞಾನಾರ್ಜನೆಯ ಕಾರ್ಯವನ್ನು ನಿಲ್ಲಿಸಕೂಡದು. 'ಅಜರಾಮರವತ್ಪ್ರಾಜ್ಞಃ ವಿದ್ಯಾಮರ್ಥಂಚ ಸಾಧ ಯೇತ್' ಎಂಬ ನುಡಿ ಸಹಜವೆಂದೇ ಇವರ ಭಾವನೆ.

ಈ ಶಾಸ್ತ್ರಿಗಳು ಕಡೆಗೆ ರೂಪಳ ದೆಸೆಯಿಂದಲೇ ಜ್ಞಾನ ವನ್ನು ಪಡೆಯುತ್ತಾರೆ. ಮೊದಲು ಅವಳನ್ನು ಮೋಹಿಸ ಹೋಗಿ ತಬ್ಬಿಬ್ಬಾಗುತ್ತಾರೆ. ಅನಂತರ ಒಬ್ಬ ಯತಿಯ ಉಪದೇಶದಿಂದಾಗಿ ಸದ್ಧರ್ಮ ಸುಜ್ಞಾನಗಳು ಲಭಿಸು ತ್ತವೆ. ಈ ಕಾದಂಬರಿಯಲ್ಲಿ ರೂಪಳ ಜನನ, ಜೀವನ ರೀತಿ ಮತ್ತು ಮರಣ—ಇವುಗಳು ಬಹು ವಿಚಿತ್ರವಾಗಿ ಕಾಣುತ್ತವೆ. ಒಟ್ಟಿನಲ್ಲಿ ಇದೊಂದು ಹೊಸ ಪ್ರಯೋಗ. ಶೈಲಿ ಚೆನ್ನಾಗಿದೆ. ಅಲ್ಲಲ್ಲಿ ಕೆಲವು ವ್ಯಾಖ್ಯಾನಗಳು ಓದು ಗರಿಗೆ ಸ್ವಲ್ಪ ಬೇಸರವನ್ನು ತರುತ್ತವೆ. ಇದನ್ನು ಮುಂದಿನ ಮುದ್ರಣದಲ್ಲಿ ಸರಿಪಡಿಸಬಹುದು. ಈ ಹೊಸರೀತಿಯ ಕಾದಂಬರಿಗೆ ಕನ್ನಡಿಗರ ಪ್ರೋತ್ಸಾಹ ಅತ್ಯಗತ್ಯ. ಈ ಲೇಖಕರಿಗೆ ಉಜ್ವಲ ಭವಿಷ್ಯವಿದೆ.

—ಬ. ನ. ಸುಂ

ಚಾರುದತ್ತ: ಗ್ರಂಥಕರ್ತರು: ಆಸ್ಥಾನ ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯ; ಪ್ರಕಾಶಕರು: ಪ್ರಬೋಧ ಪುಸ್ತಕಮಾಲೆ, ಬಸವೇಶ್ವರ ರಸ್ತೆ, ಮೈಸೂರು; ಆಕಾರ: ಕಿರೀಟ ಅಷ್ಟದಳ; ಪುಟಗಳು ೧೩೨; ಬೆಲೆ ರೂ. ೨

ಬಹಳ ಹಿಂದೆ ಭಾಸಮಹಾಕವಿಯು ಕೇವಲ ನಾಲ್ಕು ಅಂಕಗಳಲ್ಲಿ ಬರೆದಿದ್ದ ವೇಶ್ಯೆಯ ವಸಂತಸೇನೆ ಮತ್ತು ಚಾರುದತ್ತರ ಕಥೆಯನ್ನು ಶೂದ್ರಕ ಕವಿಯು ಹತ್ತು ಅಂಕಗಳವರೆಗೆ ವಿಸ್ತರಿಸಿ ನಾಟಕವನ್ನು ಪೂರ್ಣಗೊಳಿಸಿ ದನು. ಇದಾದ ಬಳಿಕ ಆಸ್ಥಾನ ಕವಿ ನಂಜನಗೂಡು ಸುಬ್ಬಾಶಾಸ್ತ್ರಿಗಳು ನಾಟಕ ರೂಪದಲ್ಲಿ ಕನ್ನಡಕ್ಕೆ ಅನು ವಾದ ಮಾಡಿರು. ಈಗ ಈ ಪುಸ್ತಕವು ಮೈಸೂರು ಸರ್ಕಾರದವರಿಂದ ಪ್ರಕಟಿಸಲ್ಪಟ್ಟಿದೆ. ಮೇಲ್ಕಂಡ ಆಸ್ಥಾನ ಕವಿ ನಂಜನಗೂಡು ಸುಬ್ಬಾಶಾಸ್ತ್ರಿಗಳ ಮೊಮ್ಮಕ್ಕಳಾದ ಆಸ್ಥಾನ ವಿದ್ವಾನ್ ಶ್ರೀಕಂಠ ಶಾಸ್ತ್ರಿ ಗಳು ಮುನ್ನುಡಿ ಬರೆದು ಇದುವರೆವಿಗೂ ಹಸ್ತಪ್ರತಿಯಲ್ಲೇ ಉಳಿದಿದ್ದ ಈ ನಾಟಕವನ್ನು ಬೆಳಕಿಗೆ ತಂದಿರುವುದು ಸ್ತುತ್ಯರ್ಹವಾಗಿದೆ. ಈ ಕನ್ನಡ ನಾಟಕವನ್ನು ಓದಿ, ಅಭಿನಯವನ್ನು ಪರಾಮರ್ಶಿಸಿ ಅಂದಿನ ಪ್ರಭುಗಳಾಗಿದ್ದ ಕರ್ಣಾಟಕ, ನಾಟಕ ನಿರ್ಮಾಪಕರಾದ ಶ್ರೀ ಚಾಮ ರಾಜೇಂದ್ರ ಒಡೆಯರ್ ಬಹದ್ದೂರ್‌ರವರು ಅತ್ಯಂತ ಸಂತುಷ್ಟರಾಗಿ ಆಸ್ಥಾನ ಕವಿ, ಸುಬ್ಬಾಶಾಸ್ತ್ರಿಗಳಿಗೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿ ಸೂಕ್ತ ಬಹುಮಾನವನ್ನು ಕೊಟ್ಟು ಗೌರವಿಸಿದರು.

ಈಗ ಇದೇ ಪುಸ್ತಕದ ಆಧಾರದ ಮೇಲೆ ಇಂದಿನ ಕಾಲಸ್ಥಿತಿಗನುಗುಣವಾಗಿ ಆಸ್ಥಾನ ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯರು ನಾಟಕ ರೂಪದಿಂದ ಕಾದಂಬರಿ ರೂಪಕ್ಕೆ ಪರಿವರ್ತನಗೊಳಿಸಿ "ಚಾರುದತ್ತ" ಎಂಬ ಹೆಸರಿನಿಂದ ಪ್ರಕಟಗೊಳಿಸಿ ಕನ್ನಡಿಗರಿಗೆ ಮಹದುಪಕಾರ ಮಾಡಿದ್ದಾರೆ. ಸ್ವತಃ ವಿದ್ವಾಂಸರಾದ ಶ್ರೀ ಆರಾಧ್ಯರು ಮೂಲನಾಟಕಕ್ಕೆ ಧಕ್ಕೆ ಬಾರದಂತೆ ಕಥಾಸನ್ನಿವೇಶ ಗಳನ್ನೂ, ಪಾತ್ರನಿರೂಪಣೆಗಳನ್ನೂ, ಅಲ್ಲಲ್ಲಿ ಸೂಕ್ತ ರೀತಿಯಲ್ಲಿ ಮಾರ್ಪಡಿಸಿದ್ದಾರೆ. ಈ ಬಗ್ಗೆ ಇವರು ಸಂಶೋಧನಾ ಕಾರ್ಯವನ್ನು ಕೈಗೊಂಡು ಬಿಟ್ಟು ಹೋಗಿದ್ದಂತಹ ಸಂಗತಿಗಳನ್ನು ಸೇರಿಸಿ, ವಾಚಕರಿಗೆ ರಸದೌತಣವನ್ನು ನೀಡಿದ್ದಾರೆ. ಉದಾಹರಣೆಗೆ ವಸಂತ ಸೇನೆ, ಚಾರುದತ್ತನ ಪರಿಚಾರಿಕೆಯಾದ ರದನಿಕೆ ಮತ್ತು ವಸಂತಸೇನೆಯ ಪರಿಚಾರಿಕೆಯಾದ ಮದನಿಕೆ, ಹಾಗೂ ಶರ್ವಿಳಕನ ಪೂರ್ವವೃತ್ತಾಂತ ಬಹಳ ಸ್ವಾರಸ್ಯವಾಗಿವೆ ಮತ್ತು ಸಮಯೋಚಿತವಾಗಿವೆ. ಎಲ್ಲಕ್ಕೂ ಮಿಗಿಲಾಗಿ ರಾಜಕೀಯ ಕ್ರಾಂತಿಕಾರನಾದ ಆರ್ಯಕನ ಕಥಾನಿರೂಪಣೆ ಅಮೂಲ್ಯವಾಗಿದೆ.

ಆದರೆ ಅ. ನ. ಕೃ., ಕಾರಂತ, ಕೃಷ್ಣಮೂರ್ತಿ ಪುರಾ ಣಿಕ ಮೊದಲಾದವರ ಕಾದಂಬರಿಗಳನ್ನು ಓದಿದ ಜನಕ್ಕೆ ಈ ಕಾದಂಬರಿ ಅಷ್ಟಾಗಿ ಹಿಡಿಸದು ಎನ್ನಲು ಸಂಕೋಚ

ವಾಗುತ್ತದೆ. ಕಾದಂಬರಿಯನ್ನು ಒಮ್ಮೆ ಕೈಗೆ ತೆಗೆದು ಕೊಂಡರೆ ಅದು ಮುಗಿಯುವವರೆಗೂ ಅದನ್ನು ಕೆಳಗಿಳಿಸ ಕೂಡದು. ಹೀಗಿದ್ದರೆ ಮಾತ್ರ ಅದು ವಾಚಕರ ಮನಸ್ಸನ್ನು ಸೂರೆಗೊಳ್ಳುತ್ತದೆ. ಇದಕ್ಕೆ ಬೇಕಾದುದು ಉತ್ಕೃಷ್ಟವಾದ ಶೈಲಿ ಮತ್ತು ಘಟನೆಗಳ ಜೋಡಣೆ. ಮುಂದೆ ಏನಾಯಿತು ಎಂಬ ಕುತೂಹಲ ಮೂಡಬೇಕು. ಆಗಲೇ ಕಾದಂಬರಿಯ ಮಹತ್ವ ವೇದ್ಯವಾಗುವುದು. ಪ್ರಕೃತ ಈ ಕೃತಿಯಲ್ಲಿ ವರ್ಣನೆಗಳು ತೀರ ಹಳೆಯಕಾಲದ್ದಾಗಿವೆ; ಕೆಲವೆಡೆಗಳಲ್ಲಿ ಭೂತಕಾಲದಲ್ಲಿ ಆರಂಭವಾಗಿ ವರ್ತಮಾನಕಾಲದಲ್ಲಿ ಮುಕ್ತಾಯಗೊಂಡಿವೆ. (ಪುಟಗಳು ೫೬; ೬೪; ೭೧; ೮೧). ಇವರ ಶೈಲಿ ಯಾದರೋ ತೀರಾ ಹಳೆಯಕಾಲದ್ದು. ಚಂದಣದ ಗೊಂಬೆಗಳಿಗೆ ಆಧುನಿಕ ಉಡುಪುಗಳನ್ನು ತೊಡಿಸಿದಂತೆ ಭಾಸವಾಗುತ್ತದೆ. ಆದ್ದರಿಂದ ವರ್ಣನೆ ಮತ್ತು ನಿರೂಪಣೆ ಇನ್ನೂ ಸ್ವಲ್ಪ ಸುಧಾರಿತವಾಗಬೇಕು. ಸಾಧ್ಯವಾದರೆ ವಸಂತಸೇನೆಯನ್ನು ವೇಶ್ಯೆಯೆಂದು ಪರಿಗಣಿಸದೇ ಇರುವಂತೆ ಮಾಡಬೇಕು. ಇವಳು ವೇಶ್ಯಾವಂಶದಲ್ಲಿ ಹುಟ್ಟಿದರೂ ತಾನು ಮಾತ್ರ ಆ ವೃತ್ತಿಯನ್ನು ಅವಲಂಬಿಸಲಿಲ್ಲ. ಆದ್ದರಿಂದ ಪದೇ ಪದೇ ಅವಳನ್ನು ವೇಶ್ಯೆ, ಸೂಳೆ, ಎಂದು ಸಂಬೋಧಿಸುವುದು ಅನುಚಿತವಾಗಿದೆ.

ಮುನ್ನುಡಿಕಾರರಾದ ಶ್ರೀ ಕೆ. ಎಸ್. ಧರಣೇಂದ್ರಯ್ಯನವರು ಈ ಕೃತಿಯನ್ನು ಬಹಳವಾಗಿ ಕೊಂಡಾಡಿ ಹಾರೈಸಿದ್ದಾರೆ. ಅವರು—"ವಸಂತಸೇನೆ-ಚಾರುದತ್ತರ ಕಥೆ, ಭಾರತೀಯ ಸಾಹಿತ್ಯದಲ್ಲಿ ತುಂಬಾ ಹಳೆಯದು. ವಸಂತಸೇನೆ ವೇಶ್ಯೆಯಾದರೂ ವಧುವೆನಿಸಿದಳು. ಚಾರುದತ್ತ ಶ್ರೀಮಂತನಾದರೂ ಬಡವರಿಗಾಗಿ ಬಡವನಾದನು. ಈ ನಾಯಕ ನಾಯಕಿಯರ ಜೀವನರಹಸ್ಯದ ಹಿನ್ನೆಲೆ ಮನಶ್ಯಾಸ್ತ್ರ ಹಾಗೂ ಧಾರ್ಮಿಕ, ಸಾಮಾಜಿಕ ಶಾಸ್ತ್ರಗಳ ಪವಿತ್ರ ವಿಚಾರ ಪರಿಶೋಧಿತವಾಗಿ ಪ್ರಕೃತ ಚಾರುದತ್ತನಲ್ಲಿ ನೂತನ ರೂಪ ತಳೆದಿದೆ" ಎಂದು ತಿಳಿಸಿದ್ದಾರೆ.

ಈ ಕೃತಿಯಿಂದ ಕನ್ನಡ ಲೋಕಕ್ಕೆ ಹೆಚ್ಚಿನ ಉಪಕಾರವಾಗಿದೆ ಎನ್ನಬಹುದು. ಸ್ವತಂತ್ರ ಭಾರತದ ಬಾಲಕರಿಗಾಗಿ ಈ ಪುಸ್ತಕವನ್ನು ಲೇಖಕರು ರಚಿಸಿದ್ದಾರೆಂದು ನಾವು ಸುಲಭವಾಗಿ ಊಹಿಸಬಹುದು. ಆದರೆ ಈ ವೇಶ್ಯಾಸಂಬಂಧವಾದ ಪ್ರಣಯ ಕಥೆ ಬಾಲಕರ ನೈತಿಕ ಅಭಿವೃದ್ಧಿಗೆ ಎಷ್ಟರಮಟ್ಟಿಗೆ ನೆರವಾಗುವುದು ಎಂಬುದು ಸ್ವಲ್ಪ ಸಂದೇಹಕರವಾಗಿದೆ. ವೇಶ್ಯೆ, ವಿಟ, ಜೂಜು, ಕಳುವು, ಕೊಲೆ, ಭಗ್ನಪ್ರಣಯ ಮುಂತಾದ ವಿಚಾರಗಳನ್ನು ಎಷ್ಟೇ ಗಂಭೀರವಾಗಿ ಬರೆದರೂ ಮಕ್ಕಳ ಮನಸ್ಸಿನಮೇಲೆ ದುಷ್ಪರಿಣಾಮವಾಗುವುದು ಸಹಜವೇ ಸರಿ.

ಈ ಕಾದಂಬರಿಯಲ್ಲಿ ಕಂಡುಬರುವ ನ್ಯಾಯಾಧಿಪತಿಗಳ ಪಾತ್ರ ತೀರಾ ಸಪ್ಪೆಯಾಗಿದೆ. "ನ್ಯಾಯದ ಅಧಿಪತಿ ಎಂದರೆ ಸಾಕ್ಷಾತ್ ಧರ್ಮದೇವತೆ"—ಎಂದು ಲೇಖಕರೇ ತಿಳಿಸಿದ್ದಾರೆ. ಆದರೆ ಅದರಂತೆ ವಿಚಾರಣೆಯನ್ನು ಸರಿಯಾಗಿ ನಿರ್ವಹಿಸದೆ ತಬ್ಬಿಬ್ಬಾಗಿ ತೀರ್ಪು ಕೊಟ್ಟ ನ್ಯಾಯಾಧಿಪತಿಯ ಪಾತ್ರ ಹೆಚ್ಚಿನ ಮಹತ್ವವನ್ನು ಪಡೆದಿಲ್ಲ.

ಕೆಲವು ವರ್ಷಗಳ ಕೆಳಗೆ ತೆರೆಯಮೇಲೆ ಬಂದಿದ್ದ "ವಸಂತಸೇನೆ" ಎಂಬ ಕನ್ನಡ ಚಿತ್ರದಲ್ಲಿ ಸುಪ್ರಸಿದ್ಧ ನಟ ದಿವಂಗತ ಸುಬ್ಬಯ್ಯನಾಯ್ಡುರವರು 'ಚಾರುದತ್ತ'ನಾಗಿಯೂ, ಸುಪ್ರಸಿದ್ಧ ನಟಿ ಶ್ರೀಮತಿ ಲಕ್ಷ್ಮೀಬಾಯಿಯವರು 'ವಸಂತಸೇನೆ'ಯಾಗಿಯೂ, ಹೆಸರಾಂತ ನಟ ಶ್ರೀ ನಾಗೇಂದ್ರರಾಯರು 'ಶಕಾರ'ನಾಗಿಯೂ, ಅಭಿನಯಿಸಿ ಕನ್ನಡಿಗರ ಮೆಚ್ಚುಗೆಯನ್ನು ಗಳಿಸಿದ್ದರು. ಈ ಚಿತ್ರವನ್ನು ನಾನು ಅನೇಕ ಸಲ ನೋಡಿದ್ದೇನೆ. ಇದರಲ್ಲಿ ಕಂಡುಬರುವ ದೃಶ್ಯಗಳಿಗೂ, ಈ ಕಾದಂಬರಿಯಲ್ಲಿ ಕಂಡುಬರುವ ವರ್ಣನೆಗಳಿಗೂ ಅತ್ಯಂತ ಸಾಮೀಪ್ಯವಿದೆ ಎಂದು ನನ್ನ ಭಾವನೆ. ಈ ಗ್ರಂಥದಲ್ಲಿ 'ರಂಡೆ', 'ಷಂಡ', 'ತಲೆ ಹಿಡಿಕಿ' ಮುಂತಾದ ಅಶ್ಲೀಲ ಪದಗಳು ಮತ್ತು ವ್ಯರ್ಥವಾದ ಅಥವಾ ವ್ಯಂಗ್ಯವಾದ ವರ್ಣನೆ ಮತ್ತು ಸಂಭಾಷಣೆಗಳು ಅಲ್ಲಲ್ಲಿ ಎದ್ದು ಕಾಣುತ್ತವೆ. ಇವುಗಳನ್ನು ಮುಂದಿನ ಮುದ್ರಣದಲ್ಲಾದರೂ ಸರಿಪಡಿಸುವುದು ಅಗತ್ಯ. ಅಲ್ಲದೆ ಕೆಲವು ಕಡೆ ಮುದ್ರಣ ದೋಷಗಳೂ ಇವೆ. ಒಟ್ಟಿನಲ್ಲಿ ಕನ್ನಡ ಬಾಂಧವರು ಓದಬೇಕಾದ ಪುಸ್ತಕವೆಂದು ಧಾರಾಳವಾಗಿ ಹೇಳಬಹುದು.

—'ವನವಿಹಾರಿ'

**ವಿಜ್ಞಾನ ಪರಿಚಯ ಅಥವಾ ಆಕಾಶ ಪುರಾಣ: ಲೇಖಕರು:** ಬಿ. ಹನುಮಂತಯ್ಯ ಗೌಡ; ಪ್ರಕಾಶಕರು: ಸರ್ವೋದಯ ಎಜ್ಯುಕೇಷನ್ ಸೊಸೈಟಿ, ೩೭೬, ಹತ್ತನೆಯ ಕ್ರಾಸ್, ಎರಡನೆಯ ಬ್ಲಾಕ್, ಜಯನಗರ, ಬೆಂಗಳೂರು-೧೧; ಪುಟಗಳು viii+೧೮೪; ಬೆಲೆ ರೂ. ೩

ಶಾಸ್ತ್ರ ಸಾಹಿತ್ಯ ಕನ್ನಡದಲ್ಲಿ ಬೆಳೆಯಬೇಕಾಗಿದೆ. ಕನ್ನಡ ಸಾಹಿತ್ಯದ ಟಂಕಸಾಲೆಯಲ್ಲಿ ಪಾರಿಭಾಷಿಕ ಶಬ್ದಗಳ ಚಲಾವಣೆ ಹೆಚ್ಚಬೇಕಾಗಿದೆ. ಈ ದೃಷ್ಟಿಯಿಂದ

ಇಂಥ ಪುಸ್ತಕಗಳನ್ನು ಈ ಶತಮಾನದಲ್ಲಿ ಸ್ವಾಗತಿಸಬೇಕಾಗಿದೆ. ಕುವೆಂಪು, ಡಿವಿಜಿ, ಮಾಸ್ತಿ, ಇತ್ಯಾದಿ ಹಿರಿಯರ ಆಶೀರ್ವಾದವನ್ನು ಮುನ್ನುಡಿಯು ಒಳಗೊಂಡಿದೆ.

ಈ ಪುಸ್ತಕದಲ್ಲಿರುವ ವಿವಿಧ ವಿಷಯಗಳ ವಿಸ್ತಾರವನ್ನು ಪುಟಗಳ ಮೂಲ ಮಾನದಲ್ಲಿ ಅಳೆದು ಗಾತ್ರವನ್ನು ಅಂಕಗಣಿತದ ರೀತ್ಯಾ ಹೇಳುವುದಾದರೆ, ಆಕಾಶ: ಭೂಮಿ: ನೀರು: ಇತರ ವಿಚಾರಗಳು:: ೨:೨:೧:೧ ಎಂಬ ಅನುಪಾತದಿಂದ ಸೂಚಿಸಬಹುದು. ಅಂದರೆ, ಆಕಾಶದ ಬಗ್ಗೆ ವರ್ಣನೆ ಕೇವಲ ಈ ಪುಸ್ತಕದ ಮೂರನೆಯ ಒಂದರಷ್ಟು. ಆದುದರಿಂದ ಈ ಪುಸ್ತಕದ ಹೆಸರು ಉಚಿತವಾಗಿಲ್ಲ. ಮೇಲಾಗಿ, ವಿಜ್ಞಾನದ ವಿಚಾರಗಳನ್ನೊಳಗೊಂಡ ಪುಸ್ತಕಕ್ಕೆ 'ಪುರಾಣ' ಎಂಬ ಮಾತು ಸಲ್ಲ.

ವೈಜ್ಞಾನಿಕ ಗ್ರಂಥಕ್ಕಿರಬೇಕಾದ ಗುಣಗಳು ಮುಖ್ಯವಾಗಿ ಮೂರು—(೧) ವಿಷಯದ ಸ್ಪಷ್ಟತೆ, (೨) ನೇರವಾದ ನಿರೂಪಣಾ ಕ್ರಮ, (೩) ಸರ್ವಸಮ್ಮತವಾದ ಪಾರಿಭಾಷಿಕ ಶಬ್ದಗಳ ಬಳಕೆ. ವಿಷಯ ಗ್ರಹಣದಲ್ಲಿ ಖಚಿತತೆ ಇದ್ದು, ಸಾಕಷ್ಟು ಭಾಷಾ ಪ್ರಭುತ್ವವಿದ್ದಾಗ ಲೇಖಕನಿಗೆ ನೇರವಾದ ನಿರೂಪಣಾಕ್ರಮವು ಸಿದ್ಧಿಸುತ್ತದೆ. ಆದುದರಿಂದ, ಎರಡನೆಯದು ಮೊದಲನೆಯದರ ಫಲಿತಾಂಶ. ಮೂರನೆಯದೂ ಸಹ ಎರಡನೆಯದಕ್ಕೆ ಸಹಕಾರಿ. ಈ ಮೂರೂ ದೃಷ್ಟಿಗಳಿಂದಲೂ ಈ ಗ್ರಂಥ ಚೆನ್ನಾಗಿದೆ. ಆದರೂ ಕೆಲವು ದೋಷಗಳಿಲ್ಲದಿಲ್ಲ.

"ಸಾಗರದ ನೀರಿನಲ್ಲಿ ಶೇಕಡ ೩·೫ ರಂತೆ ಲೋಹ ಸಂಬಂಧವಾದ ಲವಣಗಳು, ಶೇಕಡ ೭೫ರಂತೆ ಸೋಡಿಯಂ ಎಂಬ ಲವಣವೂ ಇರುವುವು". (ಪು. ೧೫೨). ಸೋಡಿಯಂ ಕ್ಲೋರೈಡೂ ಸಹ ಲೋಹಲವಣವೇ. ಆದ್ದರಿಂದ ಈ ವಾಕ್ಯವು ಸರಿಯಲ್ಲ. ೧೯೬ ನೆಯ ಪುಟದಲ್ಲಿ 'ಅಣುಶಕ್ತಿ' ಯು ಅಕ್ಷದ ಮೇಲಿನ ಎಲೆಕ್ಟ್ರಾನ್‌ಗಳ ಚಲನೆಯಿಂದ ಮಾತ್ರ ಉಂಟಾಗುತ್ತದೆಯೇನೋ ಎಂಬ ಭ್ರಾಂತಿಯನ್ನುಂಟುಮಾಡುವ ವಾಕ್ಯಸರಣಿಯಿದೆ. ವಸ್ತುಸ್ಥಿತಿ ಹೀಗಿಲ್ಲ. ಬೇರೆ ಬೇರೆ ಪಥ (Level) ಗಳಲ್ಲಿ ಸುತ್ತುತ್ತಿರುವ ಎಲೆಕ್ಟ್ರಾನ್‌ಗಳ ಪೈಕಿ ಒಂದನ್ನು ಕೇಂದ್ರಕ್ಕೆ ಸನಿಹವಾದ ಪಥದಿಂದ ಕೇಂದ್ರಕ್ಕೆ ಹೆಚ್ಚು ದೂರದಲ್ಲಿರುವ ಪಥಕ್ಕೆ ಸಾಗಿಸಿದರೆ ಅಕ್ಷಗತ ಶಕ್ತಿಗಳ ವ್ಯತ್ಯಾಸದಿಂದ (Difference in energy levels) ಪರಮಾಣು ಶಕ್ತಿ ಬಿಡುಗಡೆಯಾಗುತ್ತದೆ. ಹೀಗೆ ಪರಮಾಣುವಿನ ಕೇಂದ್ರದಲ್ಲಿರುವ ನ್ಯೂಟ್ರಾನ್ ಮತ್ತು ಅದರ ಸುತ್ತಲೂ ಪಥದಲ್ಲಿ ಸುತ್ತುತ್ತಿರುವ ಎಲೆಕ್ಟ್ರಾನ್‌ಗಳ ನಡುವಣ ಗುರುತ್ವಾಕರ್ಷಣ ಶಕ್ತಿಯೇ ಪರಮಾಣು ಶಕ್ತಿಯ ಮೂಲ.

ಪಾರಿಭಾಷಿಕ ಶಬ್ದಗಳ ಬಳಕೆ ಅನೇಕ ಕಡೆ ಚೆನ್ನಾಗಿದೆ; ಕನ್ನಡದ ಜಾಯಮಾನಕ್ಕೂ ಒಗ್ಗುತ್ತವೆ. ಆದರೆ, ಕೆಲವೆಡೆ ರೂಢವಾದ ಶಬ್ದಗಳನ್ನು ಬಿಟ್ಟು ಹೆಚ್ಚು ಪ್ರಚಲಿತವಲ್ಲದ ಪದಗಳನ್ನು ಬಳಸಿರುವುದು ಸಲ್ಲ. 'ಆಟಂ'ನ್ನು ಅಣುವೆಂದಿರುವುದು ಸರಿಯಲ್ಲ, 'ಪರಮಾಣು' ವೆನ್ನಬೇಕು. 'Nebular hypothesis' (ಪು. ೭೦) ಎಂಬೆಡೆ Hypothesis ಎಂಬುದಕ್ಕೆ 'ಕಲ್ಪನೆ' ಎಂಬ ಭಾಷಾಂತರಕ್ಕಿಂತಲೂ 'ವಾದ' ಎಂಬುದೇ ಪ್ರಚಲಿತ. ಮರದ ಕಾಂಡಗಳಲ್ಲಿ ವರ್ಷಕ್ಕೊಂದರಂತಾಗುವ ಸುತ್ತುಗಳಿಗೆ 'Thickness' ಎಂದು ಇಂಗ್ಲೀಷಿನಲ್ಲಿ ಕರೆಯುವುದು ನಿಜವಾದರೂ ಅದಕ್ಕೆ 'ಸಾಂದ್ರತೆ' ಎಂಬ ಭಾಷಾಂತರ ತಪ್ಪು. ಸಾಂದ್ರತೆ ಎಂಬುದು ಇಂಗ್ಲೀಷಿನ Density ಗೆ ಸಮಾನಾರ್ಥ ಬೋಧಕ. 'Thickness' ಗೆ 'ಮಂದ' ಎಂಬ ಪದ ಬಹುಶಃ ಸರಿಯಾದೀತೇನೋ. Magnetism ಗೆ 'ಆಯಸ್ಕಾಂತತ್ವ' ವು 'ಸೂಜಿಗಲ್ಲು ಶಕ್ತಿ' ಗಿಂತ ಹೆಚ್ಚು ಪ್ರಚಲಿತ. "ಆಯಃಕಾಂತದಿಂದ ಕೂಡಿದ ಚಂಡಮಾರುತಗಳು" ಎಂಬ ಶಬ್ದಪುಂಜ 'Magnetic storm' ಗೆ ಸರಿಯಾದ ಭಾಷಾಂತರವಲ್ಲ. 'Neutralise' ಎಂಬುದಕ್ಕೆ 'ಬರಡು ಮಾಡಿ' ಬದಲು 'ತಟಸ್ಥವನ್ನಾಗಿಸಿ' ಚೆನ್ನು. 'Rocket' ಎಂಬರ್ಥದಲ್ಲಿ 'ಬಾಲಗ್ರಹ' ಸರಿಯಾದ ಶಬ್ದವಲ್ಲ. 'ರಾಕೆಟ್' ಎಂದೇ ಅಂದರೂ ತಪ್ಪಲ್ಲ, 'ಕ್ಷಿಪಣಿ' ಎನ್ನುವುದೇ ಹೆಚ್ಚು ಬಳಕೆ. 'ಪೆನಂಬ್ರ (Penumbra)' ಕ್ಕೆ 'ಖಂಡಛಾಯಾ ಪ್ರದೇಶ' ಎಂಬ ಪ್ರಯೋಗಸಿದ್ಧವಾದ ಶಬ್ದವಿದೆ, ಇದನ್ನು ಬಳಸಿಲ್ಲ; ಅಥವಾ 'ಪೆನಂಬ್ರ' ಶಬ್ದವನ್ನು ಸ್ಪಷ್ಟವಾಗಿ ವಿವರಿಸಿಯೂ ಇಲ್ಲ. 'ನೀಲವರ್ಣದ ನಕ್ಷತ್ರ' ಮತ್ತು 'ಕೆಂಪುವರ್ಣದ ನಕ್ಷತ್ರ' (ಪು. ೬೦)—ಇವುಗಳ ಬದಲು 'ವರ್ಣದ' ಶಬ್ದವನ್ನು ಅಧ್ಯಾಹಾರ ಮಾಡಿ 'ನೀಲ ನಕ್ಷತ್ರ' ಮತ್ತು 'ಕೆಂಪು ನಕ್ಷತ್ರ' ಇವುಗಳನ್ನು ಧೈರ್ಯವಾಗಿ ಬಳಸಬಹುದು. 'ವರ್ಣದ' ಎಂಬ ಶಬ್ದದ ಲೋಪದಿಂದ ಉಂಟಾಗುವ ಸಮಾಸ-ಶಕ್ತಿ ಅಪಾರ—ಇಷ್ಟೇ ಅಲ್ಲ, 'ಪಾರಿಭಾಷಿಕತೆ' ಹೆಚ್ಚಿತೇ ವಿನಃ ಕಡಿಮೆಯಾಗುವುದಿಲ್ಲ.

ಧೂಮಕೇತುಗಳು ಕಂಡಾಗ ಅನಾಹುತಗಳಾಗುತ್ತಿರುವುದು ಕೇವಲ ಕಾಕತಾಳೀಯವೆನ್ನುವುದನ್ನು ಒಪ್ಪಲು

ಸಾಕಷ್ಟು ನಿದರ್ಶನಗಳನ್ನು ಲೇಖಕರು ಕೊಟ್ಟಿಲ್ಲ. ಜ್ಯೋತಿಷ್ಯವೂ ಸಹ ಒಂದು ವಿಜ್ಞಾನ. ಇದರಲ್ಲಿ ಸಂಶೋಧನೆಗಳು ಆಧುನಿಕ ದೃಷ್ಟಿಯಿಂದಲೂ ಹೆಚ್ಚು ಹೆಚ್ಚು ನಡೆಯಬೇಕಾಗಿದೆ, ಎಂಬುದು ಈ ಸಮೀಕ್ಷಕನ ಅಭಿಪ್ರಾಯ.

ಪುಟ ೨೫ ರಲ್ಲಿ ಚಂದ್ರನ ಸುತ್ತಲೂ ವಾಯು ಮಂಡಲವಿದ್ದರೆ, ಹಗಲು ರಾತ್ರಿಗಳ ಖರತ್ವದಲ್ಲಿ ಹೆಚ್ಚು ವ್ಯತ್ಯಾಸವಾಗುತ್ತಿರಲಿಲ್ಲ; ಈಗ ಚಂದ್ರನ ಖರತ್ವದಲ್ಲಿ ಹಗಲು ರಾತ್ರಿಗಳಲ್ಲಿ ಹೆಚ್ಚು ವ್ಯತ್ಯಾಸವಾಗುತ್ತಿದೆಯಾದ್ದರಿಂದ ಚಂದ್ರನ ಸುತ್ತ ವಾಯುಮಂಡಲವಿಲ್ಲ—ಈ ತೀರ್ಮಾನದ ಹಿನ್ನೆಲೆಯಲ್ಲಿರುವ ತರ್ಕ ದೋಷಯುಕ್ತ. ಇದನ್ನೇ 'Begging the question' ಎನ್ನುವುದು.

ಮನುಷ್ಯನ ಶರೀರದ ಒಳಗಡೆ ಇರುವ ಅನೇಕ ಕೋಶಗಳಲ್ಲಿಯೂ ವಾತಾವರಣದ ಗಾಳಿಯು ಪ್ರವೇಶಿಸಿ, ಶರೀರದ ಒಳಗೂ ಹೊರಗೂ ಒಂದೇ ರೀತಿಯ ಒತ್ತಡವನ್ನುಂಟುಮಾಡುತ್ತದೆ. ಆದುದರಿಂದ ಗಾಳಿಯ ಅಪಾರ ಭಾರದ ಅರಿವು ನಮಗಾಗಲಾರದು. ಜನ್ಮದಾರಭ್ಯ ಅದಕ್ಕೊಳಗಾಗಿ ಬೆಳೆಯುವುದೇ ಇದಕ್ಕೆ ಕಾರಣವಲ್ಲ.

ನದಿಗಳು ಸಮುದ್ರವನ್ನು ಸೇರುವಾಗ ಡೆಲ್ಟ (Delta) ಗಳು ಹೇಗೆ ಉಂಟಾಗುತ್ತವೆ ಎಂಬುದನ್ನು ವಿವರಿಸಿ, ಭೂಮಿಯು ಗ್ರೀಕ್ ವರ್ಣಮಾಲೆಯ △ ಡೆಲ್ಟಾ ಎಂಬ ಅಕ್ಷರವನ್ನು ಹೋಲುವುದರಿಂದ, ಇದಕ್ಕೆ ಈ ಹೆಸರು ಎಂದಿದ್ದಾರೆ. ಗ್ರೀಕ್ ವರ್ಣಮಾಲೆಯ ಪರಿಚಯವಿರುವ ಕನ್ನಡಿಗರ ಸಂಖ್ಯೆ ವಿರಳ; ಆದುದರಿಂದ ಆ ಗುರುತನ್ನು ಬರೆದು ತೋರಿಸಿದರೆ ಚೆನ್ನು.

ಏರೋಪ್ಲೇನು, ಕ್ಲೋರೈಡ್, ಸೈಕ್ಲೋನ್, ಪ್ಲೀಡಿಸ್, ಲಾಪ್ಲೇಸ್—ಇವನ್ನು ನೋಡಿದಾಗ ಲೇಖಕರಿಗೆ ಳಕಾರದ ಮೇಲೆ ಅಧಿಕ ಪ್ರೇಮವಿದೆಯೆಂಬುದಾಗಿ ತೋರುತ್ತದೆ. ಫ್ರೆಂಚ್ ಭಾಷೆಯು 'ಲ' ಕಾರದ ಉಚ್ಚಾರಣೆಯ ಸೌಂದರ್ಯಕ್ಕೆ ಹೆಸರಾಂತಿದೆ. ಫ್ರೆಂಚ್ ಭಾಷೆಯ ಹೆಸರಾದ ಲಾ ಪ್ಲಾಸ್ (La place) ನಲ್ಲಿ 'ಳ' ಕಾರ ಬರುವುದು ಸರಿಯಲ್ಲ. "ನ್ಯೂನಾತಿರೇಖ" (ಪು. ೩೩)—ಕೊನೆಯ ಅಕ್ಷರ ಮಹಾಪ್ರಾಣವಾಗಿರುವುದು ಬಹುಶಃ ಮುದ್ರಣ ದೋಷ.

"ಶರೀರದ ಶಾಖವನ್ನು ಹೊರಗೆ ಬಿಡದೆ, ಹೊರಗಿನ ಶೈತ್ಯವನ್ನು ಒಳಗೆ ಸೇರಿಸದೆ ಇರುವ ಕಂಬಳಿಯ ಹೊದಿಕೆಯಂತೆ ವಾತಾವರಣವು ಭೂಗೋಳವನ್ನು ಆವರಿಸುವುದು" (ಪುಟ ೧೧೯), "ಚಂದ್ರನ ಬಾಗಿರುವ ಭಾಗವನ್ನೇ ಒಂದು ಬಿಲ್ಲೆಂದು ಭಾವಿಸುವುದಾದರೆ, ಸೂರ್ಯನು ಅದರ ಬಾಣಕ್ಕೆ ಯಾವಾಗಲೂ ಎದುರಾಗಿರುವನೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು" (ಪುಟ ೨೫)—ಇಂಥಾ ವಾಕ್ಯಗಳು ಈ ಪುಸ್ತಕದಲ್ಲಿ ಅನೇಕವಿವೆ. ಇದು ಲೇಖಕರಿಗಿರುವ ವಿಚಾರದ ಮೇಲಿನ ವಿಚಾರ ಮತ್ತು ಭಾಷಾ ಪ್ರಭುತ್ವ, ಕ್ಲಿಷ್ಟ ವಿಚಾರಗಳನ್ನು ಸರಳವಾಗಿ ವಿವರಿಸುವ ಜಾಣ್ಮೆ ತೋರಿಸುತ್ತವೆ. ಇವರಿಂದ ಇನ್ನೂ ಒಳ್ಳೆಯ ಪುಸ್ತಕಗಳು ಬರಲಿ. ಕನ್ನಡಿಗರ ವಿಜ್ಞಾನ ಪಿಪಾಸೆಯು ಬೆಳೆಯಲಿ.

ಇದರಲ್ಲಿನ ನಕ್ಷೆಗಳ ಪೈಕಿ ಕೆಲವು ಎಲ್ಲಿರಬೇಕೋ ಅಲ್ಲಿಲ್ಲ. ನಕ್ಷೆಯಲ್ಲಿರುವ ವಿವರಣೆಗಳು ಇಂಗ್ಲಿಷಿನಲ್ಲಿರುವುದಕ್ಕಿಂತ ಕನ್ನಡದಲ್ಲಿರುವುದು ಹೆಚ್ಚು ಪರಿಣಾಮಕಾರಿ ಮತ್ತು ಕರ್ನಾಟಕದ ಪ್ರಾಂತೀಯ ಅವಶ್ಯಕತೆ.

—ಕಂ. ಸು. ವೆಂಕಟಾದ್ರಿ ಶರ್ಮ

**ಮೋಕ್ಷಮಂಜರಿ** (ಭಜನಾಗೀತಗಳು) :—ರಚಯಿತರು: ಕೀರ್ತನಾಗ್ರೇಸರ ಭದ್ರಗಿರಿ ಅಚ್ಯುತದಾಸ್; ಪ್ರಕಾಶಕರು: ದಾಸಾಶ್ರಮ ಪಬ್ಲಿಕೇಶನ್ಸ್, ೧೬೪, ೫ನೇ ಬ್ಲಾಕ್, ರಾಜಾಜಿನಗರ ಬೆಂಗಳೂರು-೧೦; ಪುಟ : ೨೮.

ಬುದ್ಧಿಪ್ರಧಾನವಾದ ಆಚಾರ್ಯ ಸಾಹಿತ್ಯಕ್ಕಿಂತ ಜನಸಾಮಾನ್ಯರಿಗೆ, ಹೃದಯ ಪ್ರಧಾನವಾದ ಸಂತ ಸಾಹಿತ್ಯವೇ ವೈದೀಕ ಜ್ಞಾನವನ್ನುಂಟುಮಾಡುತ್ತದೆ—ಎಂಬೀ ದಿಸೆಯಲ್ಲಿ ರಚಿತವಾಗಿರುವ ಹಾಡುಗಳ ಮೂಲಕ ಮೋಕ್ಷ ಪಡೆಯಲು ಅನುವು ದೊರೆಯಬಲ್ಲುದೆಂಬುದೇ ಕೃತಿಕಾರರ ಆಶಯವಾಗಿ ತೋರುತ್ತದೆ.

ಶ್ರೀ ವೇದವ್ಯಾಸಸ್ತುತಿಯೇ ಮೊದಲಾಗಿ ಸುಮಾರು ೪೮ ಸ್ತೋತ್ರರೂಪವಾದ ಹಾಡುಗಳಿವೆ. ಎಲ್ಲವೂ ಸುಲಭವಾಗಿ ತಿಳಿಯುವಂತಹವು. ಸಾಮಾನ್ಯವಾಗಿ 'ಮೂಲ ನಾರಾಯಣ' ಎಂಬ ಅಂಕಿತವಿರುತ್ತದೆ.

ಕರಣಗಳಿಲ್ಲವನಾಳು (ಪು. ೬), ಯಾರು ತನ್ನವರಿಲ್ಲಾ (ಪು.೧೨), ಹೇಮಕಾಮಗಳ ತ್ಯಾಗವೇ ವ್ರತವು (ಪು.೧೭), ಭಜನೆಯು ಭವರೋಗವ ಅಂಜಿಪುದು (ಪು. ೨೦)—ಈ ಉಕ್ತಿಗಳು ವಿಚಾರಾರ್ಹವಾಗಿ ಮನಂಬುಗುವಂತಿವೆ.

—ಪಂಡಿತ ಕೆ. ಪಿ. ಶಿವಲಿಂಗಯ್ಯ

# ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದ ನೂತನ ಕಟ್ಟಡದ ಪ್ರವೇಶೋತ್ಸವ

## ಕನ್ನಡ-ಕನ್ನಡ ನಿಘಂಟು ಮುದ್ರಣಾರಂಭ

ಒಂದೇ ಧರ್ಮ ಮತ್ತು ಸಂಸ್ಕೃತಿಗಳಿಂದ ಸ್ಫೂರ್ತಿಗೊಂಡಿರುವ ಭಾರತೀಯ ಭಾಷೆಗಳು ಪರಸ್ಪರ ಪೋಷಕವಾಗುವಂತೆ ಭಾವೈಕ್ಯವನ್ನು ಸಾಧಿಸುವ ಕಾರ್ಯದಲ್ಲಿ ನಮ್ಮ ರಾಷ್ಟ್ರದ ವಿದ್ವಾಂಸರು ಹೆಚ್ಚು ಹೆಚ್ಚಾಗಿ ಪ್ರಯತ್ನಿಸಬೇಕೆಂದು ರಾಜ್ಯಪಾಲ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಅವರು ಜೂನ್ ೧೦ರ ಬೆಳಿಗ್ಗೆ ಕನ್ನಡ ಸಾಹಿತ್ಯ ಪರಿಷತ್ತಿನ "ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ"ದ ನೂತನ ಕಟ್ಟಡ ಮತ್ತು ಕನ್ನಡ-ಕನ್ನಡ ನಿಘಂಟಿನ ಮುದ್ರಣ ಕಾರ್ಯವನ್ನು ಪ್ರಾರಂಭಿಸುತ್ತ ನುಡಿದು, ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಏಳಿಗೆಗಾಗಿ ಕಂಕಣ ಕಟ್ಟಿರುವ ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಾಲಿನ ಹೆಬ್ಬಯಕೆಯನ್ನು ನೆರವೇರಿಸುವುದರಲ್ಲಿ ನಿರತವಾಗಬೇಕೆಂದು ಸೂಚಿಸಿದರು.

ಇದೇ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾ ಮಠಾಧೀಶ್ವರರಾದ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶ್ರೀ ಶಿವಕುಮಾರ ಸ್ವಾಮಿಗಳು, ಮಣಿಪಾಲದ ಕುಲಪತಿಗಳಾದ ಶ್ರೀ ಟಿ. ಎಂ. ಎ. ಪೈ ಅವರ ಭಾವಚಿತ್ರವನ್ನು ಅನಾವರಣ ಮಾಡಿದರು.

ವಿದ್ಯಾಮಂತ್ರಿ ಶ್ರೀ ಎಸ್. ಆರ್. ಕಂಠಿಯವರು ಈ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

ಶ್ರೀಮತಿ ಲೀಲಾವತಿ ಮುನ್ಷಿ, ಡಾ|| ಟಿ. ಎಂ. ಎ. ಪೈ, ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಶ್ರೀ ಟಿ. ಟಿ. ಶರ್ಮ, ಶ್ರೀ ಎಚ್. ಸಿದ್ದವೀರಪ್ಪ, ಮೇಯರ್ ಶ್ರೀ ಕೆ. ಎಂ. ನಂಜಪ್ಪ, ಡೆಪ್ಯುಟಿ ಮೇಯರ್ ಶ್ರೀಮತಿ ಪಿ. ಆರ್. ಜಯಲಕ್ಷಮ್ಮ ಮೊದಲಾದವರು ಈ ಸಮಾರಂಭಕ್ಕೆ ಆಗಮಿಸಿದ್ದರು.

ಶ್ರೀಮನ್ಮಹಾರಾಜರು ದಯಮಾಡಿಸುತ್ತಲೇ ಅವರನ್ನು ಪರಿಷತ್ತಿನ ಅಧ್ಯಕ್ಷರೂ, ಗೌರವಕಾರ್ಯದರ್ಶಿಗಳೂ, ಗೌರವ ಕೋಶಾಧಿಕಾರಿಗಳೂ ಮತ್ತು ಇತರರೂ ಆದರಪೂರ್ವಕವಾಗಿ ಸ್ವಾಗತಿಸಿ ಗೌರವಿಸಿದರು. ಸುಮಂಗಲಿಯರು ಆರತಿ ಎತ್ತಿದರು.

ತರುವಾಯ ಶ್ರೀಮನ್ಮಹಾರಾಜರು ನೂತನ ಕಟ್ಟಡದ ಬಳಿ ಬಂದು ಪ್ರವೇಶೋತ್ಸವ ಸಂಬಂಧದ ಶಿಲಾಶಾಸನದ ಅನಾವರಣ ಮಾಡಿದರು.

ನೂತನ ಕಟ್ಟಡದೊಳಕ್ಕೆ ಶ್ರೀಮನ್ಮಹಾರಾಜರು ಪ್ರವೇಶ ಮಾಡಿದೊಡನೆ, ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದ ವ್ಯವಸ್ಥಾಪಕರಾದ ಶ್ರೀ ಕೆ. ಜೀವಣ್ಣರಾಯರು ಅವರಿಗೆ ತುರಾಯಿಯನ್ನು ಅರ್ಪಿಸಿದರು. ಗೌರವ ಮೇಲ್ವಿಚಾರಕರಾದ ಶ್ರೀ ಜಿ. ಶ್ರೀನಿವಾಸನ್ನರು ನೂತನ ಮುದ್ರಣ ಯಂತ್ರದ ಬಳಿ ಕರೆದೊಯ್ದು ಕನ್ನಡ-ಕನ್ನಡ ನಿಘಂಟಿನ ಮುದ್ರಣ ಕಾರ್ಯವನ್ನು ಆರಂಭಿಸುವಂತೆ ಶ್ರೀಮನ್ಮಹಾರಾಜರನ್ನು ಕೋರಿದರು. ಶ್ರೀಮನ್ಮಹಾರಾಜರು ಹರ್ಷಧ್ವನಿಗಳ ಮಧ್ಯೆ ಮುದ್ರಣಯಂತ್ರವನ್ನು ನಡೆಸಿ ಮುದ್ರಣ ಆರಂಭ ಮಾಡಿದರು.

ಈ ಕಾರ್ಯ ಮುಗಿದಮೇಲೆ ಶ್ರೀಮನ್ಮಹಾರಾಜರು ಕೃಷ್ಣರಾಜ ಪರಿಷನ್ಮಂದಿರಕ್ಕೆ ದಯಮಾಡಿಸಿ ಮುಂದಿನ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು.

ಕಾರ್ಯಕ್ರಮವು ಗಾನಮಂದಿರದ ವಿದ್ಯಾರ್ಥಿನಿಯರಿಂದ ಹರಿಹರ, ಕುಮಾರವ್ಯಾಸ, ರಾಘವಾಂಕ ಮೊದಲಾದ ಕನ್ನಡ ಕವಿಗಳ ಕೃತಿಗಳಿಂದ ವಾಚನವಾದ ನಂತರ, ಕುಮಾರಿ ಪದ್ಮಾ ಅವರು 'ಉದಯವಾಗಲಿ ನಮ್ಮ ಚಲುವ ಕನ್ನಡ ನಾಡು' ಎಂಬ ಗೀತೆಯನ್ನು ಹಾಡಿದರು.

ಪಂಡಿತ ಹೆಮ್ಮಿಗೆ ದೇಶಿಕಾಚಾರ್ಯರು ರಚಿಸಿದ ಸ್ವಾಗತ ಗೀತೆಗಳನ್ನು ಶ್ರೀ ಅಶ್ವತ್ಥನಾರಾಯಣ ಶಾಸ್ತ್ರಿಗಳವರು ಪಠಿಸಿದರು. ಆಮೇಲೆ ಶ್ರೀಮತಿ ಚನ್ನಮ್ಮ ಅವರಿಂದ ಸಂಗೀತ ಕಛೇರಿ ನಡೆಯಿತು.

ಬಳಿಕ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಸಮಾರಂಭಕ್ಕೆ ಎಲ್ಲರನ್ನೂ ಸ್ವಾಗತಿಸಿ, ಪರಿಷತ್ತು ಕೈಕೊಂಡಿರುವ ಕೆಲವು ಮಹಾಕಾರ್ಯಗಳನ್ನು

ವಿವರಿಸಿ ಅದರಲ್ಲಿ ಮುಖ್ಯವಾದ ಕನ್ನಡ–ಕನ್ನಡ ನಿಘಂಟು ವಿನ ಬಗ್ಗೆ ಇದುವರೆಗೆ ನಡೆದ ಕೆಲಸವನ್ನು ವಿವರಿಸಿದರು. ಪರಿಷತ್ತಿನ ಕೆಲಸಗಳಿಗೆ ಸರಕಾರ ಮತ್ತು ಸಾರ್ವಜನಿಕರು ಕೊಡುತ್ತಿರುವ ಬೆಂಬಲಕ್ಕಾಗಿ ಕೃತಜ್ಞತೆಗಳನ್ನರ್ಪಿಸಿದರು.

### ಶುಭ ಸಂದೇಶಗಳು

ಸಮಾರಂಭವು ಯಶಸ್ವಿಯಾಗಲೆಂದು ಹಾರೈಸಿ ಈ ಮಹನೀಯರು ಶುಭ ಸಂದೇಶಗಳನ್ನು ಕಳುಹಿಸಿದ್ದರು :

ಸುತ್ತೂರಿನ ಶ್ರೀ ವೀರಸಿಂಹಾಸನ ಮಠಾಧೀಶ್ವರರು, ಧಾರವಾಡದ ಶ್ರೀ ಮೃತ್ಯುಂಜಯ ಸ್ವಾಮಿಗಳವರು, ಮೈಸೂರಿನ ಶಿಲ್ಪಸಿದ್ಧಾಂತಿ ಶ್ರೀ ಮಹದೇವ ಸ್ವಾಮಿಗಳವರು, ಶ್ರೀ ಕೆಂಗಲ್ ಹನುಮಂತಯ್ಯನವರು, ರಾಜಸೇವಾಸಕ್ತ ಶ್ರೀ ಸಿ. ಕೆ. ವೆಂಕಟರಾಮಯ್ಯನವರು, ಶ್ರೀ ತೀ. ನಂ. ಶ್ರೀಕಂಠಯ್ಯನವರು, ಶ್ರೀ ಡಿ. ಎಲ್. ನರಸಿಂಹಾಚಾರ್ಯರು, ಸುರತ್ಕಲ್ಲಿನ ಶ್ರೀ ವಾಸುದೇವರಾಯರು, ಹುಬ್ಬಳ್ಳಿಯ 'ಕನ್ನಡಿಗ' ಸಂಪಾದಕರಾದ ಶ್ರೀ ಮೋದಿಯವರು, ಸಾಂಗ್ಲಿಯ ವಿಲ್ಲಿಂಗ್‌ಡನ್ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ರಂ. ಶ್ರೀ. ಮುಗಳಿಯವರು, ಮೈಸೂರು ಸರ್ಕಾರದ ಗೃಹಖಾತೆ ಸಚಿವರಾದ ಶ್ರೀ ಆರ್. ಎಂ. ಪಾಟೀಲ ಅವರು ಮತ್ತು ಸುರತ್ಕಲ್ಲಿನ ವಿದ್ವಾನ್ ಶ್ರೀ ಕೆ. ವೆಂಕಟರಾಯಾಚಾರ್ಯರು.

### ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದ ಸಂಕ್ಷಿಪ್ತ ವರದಿ

ತರುವಾಯ ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದ ಗೌರವ ಮೇಲ್ವಿಚಾರಕರಾದ ಶ್ರೀ ಜಿ. ಶ್ರೀನಿವಾಸನ್ನರು ಅಚ್ಚುಕೂಟದ ಈ ವರದಿಯನ್ನೋದಿದರು :

"ಕನ್ನಡ ಸಾಹಿತ್ಯ ಪರಿಷತ್ತಿನ ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದ ಸಂಕ್ಷಿಪ್ತ ವರದಿಯನ್ನು ತಮ್ಮ ಅವಗಾಹನೆಗೆ ತರಲು ಸಂತೋಷವೆನಿಸುತ್ತದೆ.

"ಹಿರಿಯ ಕನ್ನಡ ಸಾಹಿತಿಗಳೂ, ಪರಿಷತ್ತಿನ ಸರ್ವತೋಮುಖ ಪ್ರಗತಿಗಾಗಿ ತನುಮನಧನಗಳಿಂದ ದುಡಿದವರೂ ಆದ ದಿವಂಗತ ಬಿ. ಎಂ. ಶ್ರೀಕಂಠಯ್ಯನವರಿತ್ತ ೬,೦೦೦ ರೂಪಾಯಿಗಳ ದಾನದ ಫಲವಾಗಿ ೧೯೪೦ ರಲ್ಲಿ ಈ ಅಚ್ಚುಕೂಟವು ಸ್ಥಾಪಿತವಾಯಿತು. ಪ್ರಾರಂಭದಲ್ಲಿ ಅಚ್ಚುಕೂಟಕ್ಕೆ ಸ್ವತಂತ್ರವಾದ ಕಟ್ಟಡವಿರಲಿಲ್ಲ. ಇದ್ದ ಚಿಕ್ಕ ಕಟ್ಟಡದಲ್ಲಿಯೇ ಕೆಲವು ಸುಧಾರಣೆಗಳನ್ನು ಮಾಡಿ ಅಚ್ಚಿನ ಕಾರ್ಯವನ್ನು ಪ್ರಾರಂಭಿಸಲಾಯಿತು. ಪರಿಷತ್ತಿನ ಮುಖಪತ್ರಿಕೆಯಾದ 'ಕನ್ನಡ ನುಡಿ' ಮತ್ತು 'ಸಾಹಿತ್ಯ ಪರಿಷತ್ ಪತ್ರಿಕೆ' ಹಾಗೂ ಪರಿಷತ್ತಿನ ಎಲ್ಲ ಪ್ರಕಟಣೆಗಳು ಈ ಅಚ್ಚುಕೂಟದಲ್ಲಿಯೇ ಮುದ್ರಣವಾಗಲು ಅನುಕೂಲವಾಯಿತು. ಪರಿಷತ್ತಿಗೆ ಸ್ವತಂತ್ರವಾದ ಅಚ್ಚುಕೂಟವನ್ನು ಒದಗಿಸಿಕೊಟ್ಟ ದಿವಂಗತ ಬಿ. ಎಂ. ಶ್ರೀಕಂಠಯ್ಯನವರ ಉಪಕಾರವನ್ನು ಈ ಸುಸಂದರ್ಭದಲ್ಲಿ ಸ್ಮರಿಸುವುದು ನಮ್ಮ ಪವಿತ್ರ ಕರ್ತವ್ಯವಾಗಿದೆ.

"ಪರಿಷತ್ತಿನ ಅಚ್ಚಿನ ಕಾರ್ಯವು ಹೆಚ್ಚಿದಂತೆ ಅಚ್ಚುಕೂಟದ ಅಭಿವೃದ್ಧಿಯಾಗತೊಡಗಿತು. ೧೯೬೧ ರಲ್ಲಿ ಪರಿಷತ್ತು ಸರಕಾರದೊಂದಿಗೆ ಕನ್ನಡ ನಿಘಂಟಿನ ವಿಚಾರದಲ್ಲಿ ಮಾಡಿಕೊಂಡ ಒಪ್ಪಂದದ ಪ್ರಕಾರ ಕನ್ನಡ ನಿಘಂಟಿನ ಮುದ್ರಣದ ಹೊಣೆಯನ್ನು ಪರಿಷತ್ತು ವಹಿಸಿಕೊಳ್ಳಬೇಕಾಯಿತು. ಅಲ್ಲಿಂದ ಪರಿಷತ್ತು ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದ ವಿಸ್ತರಣ ಕಾರ್ಯವನ್ನು ಕೈಗೊಂಡಿತು. ರಾಜ್ಯಸರಕಾರದ ಔದಾರ್ಯ ಹಾಗೂ ಪ್ರೋತ್ಸಾಹದಿಂದ ಸುಮಾರು ೩೦ ಸಹಸ್ರ ರೂ. ಬೆಲೆ ಬಾಳುವ ನವೀನ ಮುದ್ರಣ ಯಂತ್ರವನ್ನೂ ಹಾಗೂ ೨೫ ಸಹಸ್ರ ರೂ. ಬೆಲೆ ಬಾಳುವ ಇತರ ಅಚ್ಚಿನ ಯಂತ್ರೋಪಕರಣಗಳನ್ನೂ ಕೊಳ್ಳಲಾಯಿತು. ಇಂದಿನ ಸಂತೋಷದ ಸಂದರ್ಭದಲ್ಲಿ ಪರಿಷತ್ತಿಗೆ ನೆರವು ನೀಡಿದ ರಾಜ್ಯ ಸರಕಾರಕ್ಕೂ ಪರಿಷತ್ತಿನ ಅಭಿವೃದ್ಧಿ ಕಾರ್ಯದಲ್ಲಿ ವಿಶೇಷ ಆಸಕ್ತಿ ವಹಿಸಿ ನಾನಾ ವಿಧವಾದ ಸಲಹೆ ಸೂಚನೆಗಳನ್ನಿತ್ತು ನಮ್ಮನ್ನು ಪ್ರೋತ್ಸಾಹಿಸಿದ ಮಾಜಿ ಶಿಕ್ಷಣ ಸಚಿವರಾದ ಶ್ರೀ ಅಣ್ಣಾರಾವ್ ಗಣಮುಖಿ ಅವರಿಗೂ, ಮಾಜಿ ಮುಖ್ಯಮಂತ್ರಿಗಳೂ ಹಾಗೂ ಇಂದಿನ ಹಣಕಾಸಿನ ಸಚಿವರಾದ ಶ್ರೀ ಬಿ. ಡಿ. ಜತ್ತಿ ಅವರಿಗೂ, ಮಾಜಿ ಹಣಕಾಸಿನ ಸಚಿವರಾದ ಶ್ರೀ ಟಿ. ಮರಿಯಪ್ಪನವರಿಗೂ ಪರಿಷತ್ತು ತನ್ನ ಹಾರ್ದಿಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಇಂದಿನ ಸಮಾರಂಭದ ಅಧ್ಯಕ್ಷರಾದ ಮಾನ್ಯ ಶ್ರೀ ಎಸ್. ಆರ್. ಕಂಠಿಯವರು ಪರಿಷತ್ತಿನ ಪ್ರಗತಿ ಕಾರ್ಯದಲ್ಲಿ ವಿಶೇಷ ಆಸಕ್ತಿ ವಹಿಸಿರುವರೆಂದು ತಿಳಿಸಲು ನಮಗೆ ಹೆಮ್ಮೆಯೆನಿಸುತ್ತದೆ. ಬೆಲೆ ಬಾಳುವ ಇತರ ನೂತನ ಮುದ್ರಣ ಯಂತ್ರವನ್ನು ಸ್ಥಾಪಿಸಲು ಸುಮಾರು ೩೦ ಸಹಸ್ರ ರೂಪಾಯಿಗಳ ಹೊಸಕಟ್ಟಡವನ್ನು ಕಟ್ಟಿಸಲಾಗಿದೆ. ಕಟ್ಟಡದ ನಿಧಿಗೆ ಮುಂದೆ ಕಾಣಿಸಿದ ಮಹನೀಯರು ಉದಾರವಾಗಿ ಧನಸಹಾಯ ಮಾಡಿದ್ದಾರೆ.

| | | ವಾಗ್ದಾನ | ಪಾವತಿ |
|---|---|---|---|
| ಶ್ರೀಗಳಾದ— | | | |
| ೧. | ಕೆ. ಎಂ. ನಂಜಪ್ಪನವರು, ಮೇಯರ್, ಬೆಂಗಳೂರು ಕಾರ್ಪೋರೇಷನ್ | ರೂ. ೧,೦೦೧ | ೨೫೦ |
| ೨. | ನಾಟಕರತ್ನ ಜಿ. ಎಚ್. ವೀರಣ್ಣನವರು, ನೆಹರೂ ನಗರ, ಬೆಂಗಳೂರು | .... ೧,೦೦೧ | ೨೫೧ |
| ೩. | ಖೋಡೆ ಈಶ್ವರಸಾ ಅವರು, ವ್ಯಾಪಾರಿಗಳು, ಬೆಂಗಳೂರು | .... ೧,೦೦೧ | ೧,೦೦೧ |
| ೪. | ಜಿ. ಶ್ರೀನಿವಾಸನ್ ಅವರು, ಮಾಲೀಕರು, ಓರಿಯಂಟ್ ಪ್ರೆಸ್, ಬೆಂಗಳೂರು | .... ೧,೦೦೧ | ೨೫೦ |
| ೫. | ಕೆ. ಎಚ್. ಶ್ರೀನಿವಾಸನ್ ಅವರು, ನಿವೃತ್ತ ಅಧಿಕಾರಿಗಳು, ಬೆಂಗಳೂರು | .... ೨೫೦ | ೨೫೦ |
| ೬. | ಟಿ. ಎನ್. ನಂಜುಂಡಪ್ಪನವರು, ಕರ್ನಾಟಕ ಪ್ರೆಸ್, ಬೆಂಗಳೂರು | .... ೨೫೦ | ೨೫೦ |
| ೭. | ವಸುದೇವ ಭೂಪಾಲಂ ಅವರು | .... ೨೫೦ | ೨೫೦ |
| ೮. | ಕೆ. ಎಸ್. ಈಶ್ವರರಾಯರು | .... ೧,೦೦೧ | ೨೫೦ |

## ವಾಗ್ದಾನ ಮಾಡಿರುವ ಮಹನೀಯರು

| | | |
|---|---|---|
| ಶ್ರೀಗಳಾದ— | | |
| ೧. | ಉಡುಪಿಯ ಅದಮಾರು ಮಠಾಧೀಶರು | ರೂ. ೧,೦೦೧ |
| ೨. | ಡಿ. ಮಲ್ಲಿಕಾರ್ಜುನಯ್ಯನವರು | .... ೧,೦೦೧ |
| ೩. | ದೊಡ್ಡಮೇಟಿಯವರು | .... ೧೦೦ |
| ೪. | ಎಂ. ನಂಜಪ್ಪನವರು | .... ೨೫೦ |
| ೫. | ಆರ್. ಗಂಗಪ್ಪನವರು | .... ೨೫೦ |

"ಈ ಎಲ್ಲ ಮಹನೀಯರಿಗೂ ಈ ಸಂದರ್ಭದಲ್ಲಿ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಪರಿಷತ್ತು ಕೈಗೊಂಡಿರುವ ನೂತನ ಕಟ್ಟಡಗಳ ನಿರ್ಮಾಣ ಕಾರ್ಯ ಸಂಪೂರ್ಣವಾಗಲು ಸುಮಾರು ೧ ಲಕ್ಷ ರೂ. ಗಳಾದರೂ ಬೇಕಾಗುತ್ತದೆ. ನೂತನ ಕಟ್ಟಡದ ಪ್ರಾರಂಭೋತ್ಸವವನ್ನು ಮತ್ತು ಕನ್ನಡ ನಿಘಂಟಿನ ಮುದ್ರಣದ ಪ್ರಾರಂಭ ಕಾರ್ಯವನ್ನು ತಮ್ಮ ಅಮೃತ ಹಸ್ತದಿಂದ ನೆರವೇರಿಸಲು ನಮ್ಮ ಪ್ರಾರ್ಥನೆಯ ಮೇರೆಗೆ ಇಲ್ಲಿಗೆ ದಯಮಾಡಿಸಿರುವ ಜನಪ್ರಿಯ ರಾಜ್ಯಪಾಲರಾದ ಶ್ರೀಮನ್ ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರೂ ರಾಜ್ಯಸರಕಾರವೂ ಹಾಗೂ ಮಹಾಜನರೂ ಉದಾರವಾಗಿ ನೆರವು ನೀಡಿ ಪರಿಷತ್ತಿನ ಅಭಿವೃದ್ಧಿಗೆ ಕಾರಣರಾಗಬೇಕೆಂದು ಪ್ರಾರ್ಥಿಸುತ್ತೇವೆ."

### ಬಿನ್ನವತ್ತಳೆ ಸಮರ್ಪಣ

ಪರಿಷತ್ತಿನ ಕಾರ್ಯದರ್ಶಿಗಳಲ್ಲೊಬ್ಬರಾದ ಶ್ರೀ ಅನ್ನದಾನಯ್ಯ ಪುರಾಣಿಕ್ ಅವರು ರಾಜ್ಯಪಾಲರಿಗೆ ಸಾಹಿತ್ಯ ಪರಿಷತ್ತಿನ ಪರವಾಗಿ ಬಿನ್ನವತ್ತಳೆಯನ್ನರ್ಪಿಸಿದರು.

### ಡಾ|| ಮಾಧವ ಪೈ ಭಾವಚಿತ್ರ ಅನಾವರಣ

ಅನಂತರ ಶ್ರೀ ಸಿದ್ಧಗಂಗಾ ಮಠದ ಶ್ರೀ ಶಿವಕುಮಾರ ಸ್ವಾಮಿಗಳು ಡಾ|| ಟಿ. ಎಂ. ಎ. ಪೈ ಅವರ ಭಾವಚಿತ್ರವನ್ನು ಅನಾವರಣ ಮಾಡಿದರು. ಆ ಸಂದರ್ಭದಲ್ಲಿ ಮಾತನಾಡುತ್ತ ಸ್ವಾಮಿಗಳವರು, ಇಂದು ಭಾರತದಲ್ಲಿ ಪ್ರಾಚೀನ ಆಧ್ಯಾತ್ಮ ಸಂಸ್ಕೃತಿಗಳ ಆಧಾರದ ಮೇಲೆ ಜನಶಕ್ತಿಯನ್ನು ಪ್ರಜ್ವಲಿಸುವ ಅಗತ್ಯವನ್ನು ವಿವರಿಸಿದ ರಲ್ಲದೆ, ಮಾನವ ಪ್ರಯತ್ನಗಳಿಂದ ಎಂತಹ ಅದ್ಭುತ ಕಾರ್ಯವನ್ನು ಮಾಡಬಹುದೆಂಬುದನ್ನು ಪ್ರತ್ಯಕ್ಷವಾಗಿ ತೋರಿಸಿಕೊಟ್ಟ ಮಹಾವ್ಯಕ್ತಿ ಡಾ|| ಮಾಧವ ಪೈ ಅವರ ಉದಾಹರಣೆ ಎಲ್ಲರಿಗೂ ಆದರ್ಶವಾಗಲಿ ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಮಾನ್ಯ ವಿದ್ಯಾಮಂತ್ರಿ ಶ್ರೀ ಕಂಠಿಯವರು ಪರಿಷತ್ತಿನ ಚಟುವಟಿಕೆಗಳನ್ನು ಪ್ರಶಂಸಿಸಿ ತುರ್ತು ಪರಿಸ್ಥಿತಿಯಲ್ಲಿ, ಇಂತಹ ಕಾರ್ಯಗಳಿಗೆ ಹೆಚ್ಚು ಸಹಾಯ ಮಾಡಲು ಸಾಧ್ಯವಿಲ್ಲವೆಂಬುದನ್ನು ಸಾರ್ವಜನಿಕರು ಗಮನಿಸಿ ತಾವೇ ಮುಂದೆ ಬಂದು ಸಹಾಯ ಮಾಡಬೇಕೆಂದು ಸೂಚಿಸಿದರು.

ಪರಿಷತ್ತಿನ ಕಾರ್ಯದರ್ಶಿ ಶ್ರೀ ಕೆ. ಎಂ. ಕೃಷ್ಣರಾಯರಿಂದ ವಂದನಾರ್ಪಣೆಯಾದ ನಂತರ ಸಮಾರಂಭವು ರಾಷ್ಟ್ರಗೀತೆಯೊಡನೆ ಮುಕ್ತಾಯವಾಯಿತು.

ಇದೇ ಸಂಧರ್ಭದಲ್ಲಿ ಅಚ್ಚುಕೂಟದ ಕಟ್ಟಡ ನಿಧಿಗೆ ಸಹಾಯ ಮಾಡಿದ ಮಹನೀಯರಿಗೆ ಹಾರಹಾಕಿ ಗೌರವಿಸಲಾಯಿತು.

# ಸ್ವಾಗತ ಪದ್ಯಗಳು

ಶ್ರೀಯುತನಖಿಲಪ್ರಭು ನಿ
ರ್ಮಾಯಂ, ನಿಶ್ಶೇಷಭುವನನಿಖಿಲವ್ಯಾಪಾ
ರಾಯತಮೂಲಂ ಕರುಣಾ
ತೋಯಧಿ ನಮಗೊಸೆಗೆ ಸರ್ವಮಂಗಳ ನಿಲಯಂ ॥ ೧ ॥

ಸ್ವಾಗತಂ ನಿಮಗೆ ರಾಜವತಂಸಾ
ಸ್ವಾಗತಂ ಯದುಕುಲಾಂಬುಜ ಹಂಸಾ
ಸ್ವಾಗತಂ ಜನಮನಃಪ್ರಿಯ ಭೂಪಾ
ಸ್ವಾಗತಂ ಸುಜಯಚಾಮಮಹೀಪಾ ॥ ೨ ॥

ಸುಸ್ವಾಗತಂ ಪ್ರಜಾ ಸ
ರ್ವಸ್ವದ ರಕ್ಷಕರೆ ಸಕಲಜನಹಿತಚಿಂತಾ
ಭಾಸ್ವತ್ಸುಯೋಗಸಕ್ತ್ಯಯಿ
ನಸ್ವಪ್ನರೆ ಸಹೃದಯಾರ್ಯ ಸಚಿವೋತ್ತಮರೇ ॥ ೩ ॥

ವೃ ॥ ಸತತಂ ಲೋಕಹಿತೈಕಚಿಂತನಪರಂ, ವಿದ್ಯಾವಿದಾಲಂಬನಂ
ವ್ರತಿ, ನೈಮಿತ್ತಿಕನಿತ್ಯಕರ್ಮನಿರತಂ, ದೈವಾರ್ಯ ಪೂಜಾಪ್ರಿಯಂ,
ಕೃತಕೃತ್ಯಾತ್ಮಕನಾದೆಯೈ ನೃಪತಿ ನೀಂ ವಿಖ್ಯಾತ ತತ್ವಜ್ಞನು
ನ್ನತರಿನ್ನರ್ ಬರೆ ಧನ್ಯಮಂತನುಗೃಹೀತಂ ಮೇಣ್ ಕೃತಾರ್ಥಂ ಗೃಹಂ ॥ ೪ ॥

ವೃ ॥ ಗುಣಮಂ ಕಂಡೊಡೆ ಮೆಚ್ಚದಿರ್ಪ ಬಗೆಯೇಂ ಸಾಮಾನ್ಯಮೇ ನಿಮ್ಮ ಸ
ದ್ಗುಣದಿಂದಂ ಬಗೆ ಮಾಱುವೋಗೆ ಜನತಾಸಂದೋಹಮಾನಂದದಿಂ
ಮಣಿಗುಂ ; ಕಂಡೊಡೆ ಆದಿನಂ ಶುಭದಿನಂ ತನ್ನೊಂದು ಸೌಭಾಗ್ಯಮೆಂ
ದೆಣಿಕುಂ ; ಹಿಗ್ಗಿಯರಲ್ದ ಕಣ್ಗಳಿವೆ ದಲ್ ಪ್ರೇಕ್ಷಾಯುತರ್ ಸಾಕ್ಷಿಗಳ್ ॥ ೫ ॥

ವೃ ॥ ಕೃಷ್ಣಕ್ಷ್ಮಾಪತಿ ನಟ್ಟು ನೀರೆಱೆದುದೀ ಸಾಹಿತ್ಯ ವಿದ್ವನ್ಮನ
ಸ್ತೃಷ್ಣಾಶಾಮಕ ಸೌಖ್ಯದಾಯಕ ಸಮುಜ್ಜ್ಯಾಭೂರುಹಂ ; ಮತ್ತೆ ವ
ರ್ಧಿಷ್ಣುತ್ವಂಬಡೆದತ್ತು ನಿಮ್ಮೊಲವಿನಿಂ ಸಚ್ಛಾಯವಿಸ್ತಾರಿ ಭ್ರಾ
ಜಿಷ್ಣುಶ್ರೀಫಲಮಾಗಿ ಪೆರ್ಮೆವಡೆದತ್ತಸ್ಮತ್ಪ್ರಿಯ ಶ್ರೀನಿಧೀ ॥ ೬ ॥

ಸಾಧಿತಮೇಕೀಕರಣಂ,
ವೇಧಾವಾರಣದಿನೊಲ್ದುದಂತಃಕರಣಂ,
ಬಾಧಕಬಾಧ್ಯವಿಭಾವನೆ
ಬೋಧದೆ ಮಱೆಯಾಗಲಾಯ್ತು ಕುಶಲಾವರಣಂ. ॥ ೭ ॥

ವೃ ॥ ಉತ್ಸಾಹಂ ಮಿಗೆ, ಚಿತ್ತಶುದ್ಧಿಸಲಿಲಂತೇಕೀಕೃತಿ ಶ್ರೀಸುಖಂ
ಸತ್ಸಾಂಗತ್ಯದಿನುತ್ತಮೋತ್ತಮಮೆನಲ್ ಪ್ರಾಪ್ತಿಸುಗೆಂದೊಲ್ದು ವಿ
ದ್ವತ್ಸಾಜನ್ಯದಿನೀ ನಿಘಂಟುರಚನಾ ವ್ಯಾಪಾರಮಂ ಕೊಂಡೆಪ್ಪೈ
ವಾತ್ಸಲ್ಯಂ ಭವದೀಯಮಾಯ್ತು, ನೆಗಳ್ದಿನ್ನಾರಂಭ ಕಲ್ಯಾಣಮುಂ ॥ ೮ ॥

ವೃ || ಮಿಂಚಿನವೇಗದಿಂದೆ ಮಜಿಯಾಗುತುಮಿರ್ಪ ಪುರಾತನೋಕ್ತಿಯಾ
ಸಂಚಯುಮೆಲ್ಲಮಂ ತಡೆದಕೋಶ್ಯಮಹಾನಿಧಿಯಾಗೆ ಕಾಪಿಡಲ್
ಪೊಂಚಿದೆವಿಂತು ನಿಮ್ಮ ನೆರವಿಂ ಬಗೆ ಕೂಡುವ ಯೋಗಮಾದುದೈ
ತಾಂ ಚಿರಮೆಮ್ಮಸೇತು ಸರಸಂ ಜನಕಕ್ಕೆ ತೃಷಾನಿವಾರಕಂ || ೯ ||

ವೃ || ಅನಘಶ್ರೀ ನಿಜಹಸ್ತದಿಂ ಶುಭಸಮಾರಂಭಂ ನೆಗಟ್ಟುತ್ತಮಂ
ಜನನಾಥಾಗ್ರಣಿ ಮೇಣ್ ಕೃತಾರ್ಥಮೆನಿಕೀ ಸಂಸ್ಥಾವರಂ ಶಂಕರಂ
ವಿನುತಶ್ರೀನಿಧಿ ಮಂಗಳೈಕನಿಧಿಯಾ ಲೋಕೇಶ್ವರಂ ಸರ್ವರಂ
ಮನಮೊಲ್ದೋವುಗೆ ಸಂಶ್ರಿತಾಮರಕುಜಂ ಭದ್ರಂ ಶುಭಂ ಮಂಗಳಂ || ೧೦ ||

ಸ್ವಾಗತಮೊಡನಾಡಿಗಳೇ
ಸ್ವಾಗತಮೊಡನೋದಿ ಬಳೆದ ಬಳೆವಣ್ಣದಿರೇ
ಸ್ವಾಗತಮಕ್ಕಂದಿರೆ ಸು
ಸ್ವಾಗತಮೆಲ್ಲರ್ಗೆ ಸಕಲವಿಧ ಬಂಧುಗಳೇ || ೧೧ ||

ಜಯಿಸು ಭುವನಭೂಷಾಭೂತೆ ಕರ್ಣಾಟವಾಣೀ
ಜಯಿಸು ಜಗದಶೇಷವ್ಯಾಪಕಾದರ್ಶ ರಾಣೀ
ಜಯಿಸು ಭರತಧಾತ್ರೀರಮ್ಯ ಸೌಭಾಗ್ಯಮೂರ್ತೀ
ಜಯಿಸು ಯದುಕುಲೋರ್ವೀನಾಥ ಸಂಭಾವಿತಾರ್ಥೀ || ೧೨ ||

ಬೆಂಗಳೂರು
೧೦-೬-೧೯೬೩.

**ಹೆಮ್ಮಿಗೆ ದೇಶಿಕಾಚಾರ್ಯ.**

## ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದ ನೂತನ ಕಟ್ಟಡದ ಪ್ರವೇಶೋತ್ಸವ ಮತ್ತು ಕನ್ನಡ-ಕನ್ನಡ ನಿಘಂಟು ಮುದ್ರಣ ಆರಂಭೋತ್ಸವ.



ಜೂನ್ ದಿನಾಂಕ ೧೦ ರಂದು ಶ್ರೀಮನ್ಮಹಾರಾಜರು ನೆರವೇರಿಸಿದಾಗ ತೆಗೆದ ಚಿತ್ರಗಳು: (೧) ಅಚ್ಚುಕೂಟದಲ್ಲಿ ಮುದ್ರಣ ಆರಂಭ. ಮುದ್ರಣ ಯಂತ್ರದ ಪಕ್ಕದಲ್ಲಿ ನಿಂತಿದ್ದಾರೆ ಶ್ರೀಮನ್ಮಹಾರಾಜರು, ಸಿದ್ಧಗಂಗಾ ಮಠಾಧೀಶ್ವರರು, ಶ್ರೀ ಕಂಠಿ ಮತ್ತು ಇತರರು. (೨) ಮುಂದಿನ ಕಾರ್ಯಕ್ರಮದ ಚಿತ್ರ: ಶ್ರೀಮತಿ ಲೀಲಾವತಿ ಮುನ್ಷಿ, ಶ್ರೀ ಸಿದ್ಧಗಂಗಾ ಮಠಾಧೀಶ್ವರರು, ಶ್ರೀಮನ್ಮಹಾರಾಜರು ಮತ್ತು ಶ್ರೀ ಎಸ್. ಆರ್. ಕಂಠಿಯವರನ್ನು ಈ ಚಿತ್ರದಲ್ಲಿ ಕಾಣಬಹುದು. ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಸ್ವಾಗತ ಭಾಷಣ ಮಾಡುತ್ತಿದ್ದಾರೆ.

# ಶ್ರೀಮನ್ಮಹಾರಾಜರಿಗೆ ಅರ್ಪಿಸಿದ ಬಿನ್ನವತ್ತಳೆ

**ಮೈಸೂರಿನ ರಾಜರ್ಷಿಗಳೆ,**

ಎರಡು ಕೋಟಿ ಐವತ್ತು ಲಕ್ಷ ಕನ್ನಡಿಗರ ಮಮತೆಯ ಮಂದಿರವೆನಿಸಿರುವ, ಕನ್ನಡ ಸರಸ್ವತಿಯ ಕರುಮಾಡವೆನಿಸಿರುವ, ಕರ್ಣಾಟಕದ ಜನತಾ ವಿಶ್ವವಿದ್ಯಾನಿಲಯವೆಂಬ ಮಿಗಿಲಾದ ಕೀರ್ತಿ ಗೌರವಗಳಿಗೆ ಪಾತ್ರವಾಗಿರುವ, ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ ಮತ್ತು ಲಲಿತಕಲೆಗಳ ಸರ್ವಾಂಗೀಣ ಪ್ರಗತಿಗಾಗಿ ಕಂಕಣ ಕಟ್ಟಿರುವ, ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀಕೃಷ್ಣರಾಜ ಪರಿಷನ್ಮಂದಿರಕ್ಕೆ, ಮಹಾದಾರ್ಶನಿಕರೂ, ರಾಜರ್ಷಿಪುಂಗವರೂ, ಕರ್ಣಾಟಕ ರತ್ನಸಿಂಹಾಸನಾಧೀಶ್ವರರೂ, ವಿಶಾಲ ಮೈಸೂರು ರಾಜ್ಯಪಾಲರೂ, ಭಾರತ ಸಂಗೀತ ನಾಟಕ ಅಕಾಡೆಮಿಯ ಅಧ್ಯಕ್ಷರೂ ಆದ ತಮ್ಮನ್ನು, ಪರಿಷತ್ತಿನ ಅಧ್ಯಕ್ಷರು ಮತ್ತು ಸದಸ್ಯರ ಪರವಾಗಿ ಅತ್ಯಂತ ಪ್ರೀತಿ ವಿಶ್ವಾಸಗಳಿಂದ ಸ್ವಾಗತಿಸುತ್ತಿದ್ದೇವೆ.

ಮೈಸೂರಿನ ರಾಜಮನೆತನದವರು, ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಅಭಿವರ್ಧಕರೂ, ಕವಿಜನ ಪೋಷಕರೂ ಎಂಬ ಕೀರ್ತಿಯನ್ನು ಗಳಿಸಿರುವುದು ಇತಿಹಾಸ ಪ್ರಸಿದ್ಧವಾಗಿದೆ. ಕವಿಶ್ರೇಷ್ಠರಾದ ಶ್ರೀ ಹಿರಿಯ ಚಾಮರಾಜ ಒಡೆಯರೂ (೧೬೧೭-೧೬೩೭), ವಿಖ್ಯಾತರಾದ ಚಿಕ್ಕದೇವರಾಜ ಒಡೆಯರೂ (೧೬೭೩-೧೭೦೪), ಪ್ರಖ್ಯಾತರಾದ ಮುಮ್ಮಡಿ ಕೃಷ್ಣರಾಜ ಒಡೆಯರೂ (೧೭೯೯-೧೮೬೮) ಸ್ವಯಂ ಕವಿಗಳೆನಿಸಿ, ಹಲವಾರು ಕೃತಿಗಳನ್ನು ರಚಿಸಿ ಮತ್ತು ವಿದ್ವಾಂಸರನ್ನು ಪ್ರೋತ್ಸಾಹಿಸಿ, ಕನ್ನಡ ಮತ್ತು ಸಂಸ್ಕೃತ ಸಾಹಿತ್ಯ ಪ್ರಪಂಚಕ್ಕೆ ಮಹೋಪಕಾರ ಮಾಡಿರುತ್ತಾರೆ. ಪುಣ್ಯಶ್ಲೋಕರೂ, ತಮ್ಮ ಪಿತಾಮಹರೂ ಆದ ಶ್ರೀ ಚಾಮರಾಜ ಒಡೆಯರೂ, ತಮ್ಮ ಪೂಜ್ಯ ದೊಡ್ಡಪ್ಪಂದಿರಾದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರೂ, ತಮ್ಮ ಪೂಜ್ಯ ಪಿತೃವರ್ಯರಾದ ಶ್ರೀ ಯುವರಾಜ ಕಂಠೀರವ ನರಸಿಂಹರಾಜ ಒಡೆಯರೂ, ರಾಜಬಂಧುಗಳಾದ ಶ್ರೀ ದಿವಾನ್ ಸರ್ ಕಾಂತರಾಜ ಅರಸರೂ ಕನ್ನಡ ನಾಡು ನುಡಿಗಳಿಗೆ ಮಹೋಪಕಾರ ಮಾಡಿದ್ದಾರೆ. ಮೈಸೂರು ರಾಜಮನೆತನಕ್ಕೆ ಸೇರಿದ ಶ್ರೀ ಕಳಲೆ ನಂಜರಾಜರೂ, ಶ್ರೀ ಅಳಿಯ ಲಿಂಗರಾಜರೂ, ರಾಜಕವಿಭೂಷಣ ಶ್ರೀ ಲಿಂಗರಾಜ ಅರಸರೂ ಕನ್ನಡದಲ್ಲಿ ಹಲವಾರು ಮಹದ್ಗ್ರಂಥಗಳನ್ನು ರಚಿಸಿ ನಾಡು ನುಡಿಗಳಿಗೆ ಉಪಕಾರ ಮಾಡಿದ್ದಾರೆ.

೧೯೧೫ ರಲ್ಲಿ ಬೆಂಗಳೂರು ನಗರದಲ್ಲಿ ಸ್ಥಾಪಿತವಾದ ಕನ್ನಡ ಸಾಹಿತ್ಯ ಪರಿಷತ್ತಿಗೆ, ಆಳಿದ ಪ್ರಭುವರ್ಯರಾದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರೂ, ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರೂ, ದಿವಾನ್ ಸರ್ ಎಂ. ಕಾಂತರಾಜ ಅರಸರೂ ಮಹಾಪೋಷಕರಾಗಿ, ಗೌರವಾಧ್ಯಕ್ಷರಾಗಿ, ಉದಾರ ದಾನಿಗಳಾಗಿ, ಪರಿಷತ್ತಿನ ಉದ್ಧಾರಕರಾಗಿ ಕೀರ್ತಿಭಾಜನರಾಗಿದ್ದಾರೆ. ಮಹಾಪ್ರಭುಗಳಾದ ತಾವು ಕೂಡ ಪರಿಷತ್ತಿನ ಗೌರವಾಧ್ಯಕ್ಷರಾಗಿ (೧೯೪೦) ಮಹಾ ಪೋಷಕರಾಗಿ ನಮಗೆ ಮಾರ್ಗದರ್ಶಕರಾಗಿದ್ದೀರಿ.

ಕನ್ನಡ ಸಾಹಿತ್ಯ ಪರಿಷತ್ತು ೧೯೧೫ ರಲ್ಲಿ ನಾಡಿನ ಹಿರಿಯರನೇಕರ ದೂರದೃಷ್ಟಿ ಮತ್ತು ದೇಶಾಭಿಮಾನಗಳ ಫಲವಾಗಿ ಜನ್ಮ ತಾಳಿತು. ದಿವಂಗತರಾದ ಎಚ್. ವಿ. ನಂಜುಂಡಯ್ಯನವರು, ಕರ್ಪೂರ ಶ್ರೀನಿವಾಸರಾಯರು, ಬೆಳ್ಳಾವೆ ವೆಂಕಟನಾರಣಪ್ಪನವರು, ಬಿ. ಎಂ. ಶ್ರೀಕಂಠಯ್ಯನವರು ಮೊದಲಾದ ಮಹಾನುಭಾವರ ಸತತ ಪ್ರಯತ್ನ, ಸಾಹಿತ್ಯಾಭಿಮಾನಗಳ ಫಲವಾಗಿ ಪರಿಷತ್ತು ಕ್ರಮಕ್ರಮವಾಗಿ ಅಭಿವೃದ್ಧಿಗೊಂಡು ಕನ್ನಡ ನಾಡು ನುಡಿಗಳ ಏಳಿಗೆಗಾಗಿ ಶ್ರಮಿಸುತ್ತಾ ಬಂದಿದೆ. ಇಂದು ನಮ್ಮ ಮುಂದೆ ಕಂಗೊಳಿಸುವ ವಿಶಾಲ ಮೈಸೂರು ಅಥವಾ ಕರ್ಣಾಟಕ ರಾಜ್ಯದ ಸ್ಥಾಪನೆಯ ಕೀರ್ತಿ ಬಹುಮಟ್ಟಿಗೆ ಕನ್ನಡ ಸಾಹಿತ್ಯ ಪರಿಷತ್ತಿಗೆ ಸಲ್ಲತಕ್ಕದ್ದೆಂದು ಎಲ್ಲರೂ ಒಪ್ಪಿಕೊಂಡಿದ್ದಾರೆ. ಪರಿಷತ್ತು ಪ್ರಾಚೀನ ಗ್ರಂಥ ಪ್ರಕಟಣೆ, ಸಾಹಿತ್ಯ ಪ್ರಸಾರ, ಗಮಕ ಪರೀಕ್ಷೆಗಳು, ನಾಟಕ ಪ್ರದರ್ಶನ ಮತ್ತು ಪ್ರಕಟಣೆ, ಕನ್ನಡ ನಿಘಂಟು ರಚನೆ, ಕಾವ, ಜಾಣ, ಸಾಹಿತ್ಯ ಪರೀಕ್ಷೆಗಳ ಸಂಚಾಲನೆ, ಭಾಷಣಕಲಾ ಶಿಕ್ಷಣ, ವಸಂತ ಸಾಹಿತ್ಯೋತ್ಸವ, ಸಾಹಿತ್ಯ ಸಮ್ಮೇಳನಗಳು, ವಿಶೇಷೋಪನ್ಯಾಸಗಳು, ಕನ್ನಡ ನುಡಿ (ಮಾಸಿಕ), ಸಾಹಿತ್ಯ ಪರಿಷತ್ಪತ್ರಿಕೆ (ಷಾಣ್ಮಾಸಿಕ), ಸರಸ್ವತೀ ಪುಸ್ತಕ ಭಂಡಾರ ಮತ್ತು ವಾಚನಾಲಯ, "ಬಿ. ಎಂ. ಶ್ರೀಕಂಠಯ್ಯ

ಅಚ್ಚುಕೂಟ" ಮುಂತಾದ ಚಟುವಟಿಕೆಗಳ ನಿರ್ವಹಣೆ ಹೀಗೆ ಬಹುಮುಖವಾಗಿ ತನ್ನ ಕಾರ್ಯವನ್ನು ನೆರವೇರಿಸುತ್ತಿದೆ. ಇವೆಲ್ಲಕ್ಕೂ ಮಿಗಿಲಾಗಿ ಪರಿಷತ್ತು, ಕಾಸರಗೋಡು, ತಾಳವಾಡಿ, ನೀಲಗಿರಿ, ಹೊಸೂರು, ರಾಯದುರ್ಗ, ಮಡಕಶಿರ, ಆದವಾನಿ, ಅಕ್ಕಲಕೋಟೆ, ಜತ್ತ, ಸೊಲ್ಲಾಪುರ ಮತ್ತು ಗೋವ ಮೊದಲಾದ ಕನ್ನಡದ ಗಡಿ ಪ್ರದೇಶಗಳಲ್ಲಿ, ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗಳ ರಕ್ಷಣೆಗಾಗಿ ಪ್ರಸಾರ ಕಾರ್ಯಗಳನ್ನು ಕೈಗೊಂಡು ಆ ಗಡಿ ಪ್ರದೇಶದಲ್ಲಿ ಕನ್ನಡವನ್ನು ಉಳಿಸಲು, ಬಳಸಲು ಶ್ರಮಿಸುತ್ತಿದೆ.

ಕನ್ನಡ ಸಾಹಿತ್ಯ ಪರಿಷತ್ತು ಎರಡೂವರೆ ಕೋಟಿ ಕನ್ನಡಿಗರ ಹಿತದ ಸಲುವಾಗಿ, ಪ್ರಾಚೀನತಮವೂ, ಆಹ್ಲಾದದಾಯಕವೂ ಆದ ಕನ್ನಡ ಸಾಹಿತ್ಯದ ಏಳಿಗೆಯ ನಿಮಿತ್ತವಾಗಿ ಮಾಡಬೇಕಾದ ಕೆಲಸ ಬಹಳವಾಗಿದೆ. ಪರಿಷತ್ತು ಅಪ್ರಕಟಿತವಾಗಿರುವ ಅಸಂಖ್ಯಾತ ಕನ್ನಡ ಶಿಲಾಶಾಸನ, ತಾಮ್ರಶಾಸನಗಳನ್ನೂ, ಪ್ರಾಚೀನ ಗ್ರಂಥಗಳನ್ನೂ ಸಂಗ್ರಹಿಸಿ, ಸಂಪಾದಿಸಿ ಪ್ರಕಟಿಸಬೇಕಾಗಿದೆ. ಇತಿಹಾಸ ಸಂಪತ್ತಿನಿಂದ ಕಂಗೊಳಿಸುತ್ತಿರುವ, ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಯಾದವ, ವಿಜಯನಗರ, ಕೆಳದಿ, ಮೈಸೂರು ಮೊದಲಾದ ಕನ್ನಡ ರಾಜ ಮನೆತನಗಳ ಅಮೂಲ್ಯವಾದ ಚರಿತ್ರೆಯನ್ನು ಸಂಗ್ರಹಿಸಿ ಓರಣವಾಗಿ, ಸುಂದರವಾಗಿ, ಸುಸ್ಪಷ್ಟವಾಗಿ ಪ್ರಕಟಿಸಬೇಕಾಗಿದೆ. ಮುದ್ರಿತ ಮತ್ತು ಅಮುದ್ರಿತ ಕನ್ನಡ ಗ್ರಂಥಗಳ ನಾಮಸೂಚಿಯೊಂದನ್ನು ಸಂಪಾದಿಸಿ ಪ್ರಕಟಿಸಬೇಕಾಗಿದೆ. ಎಲ್ಲಕ್ಕೂ ಹೆಚ್ಚಾಗಿ ಪರಿಷತ್ತಿನಂತಹ ಮಹಾಸಂಸ್ಥೆಯ ಆಶ್ರಯದಲ್ಲಿ ಒಂದು **ಸಂಶೋಧನಾ ಕೇಂದ್ರ** ಇರುವುದು ಅಗತ್ಯವಾಗಿದೆ. ಪರಿಷತ್ತಿನ ಹಾಗೂ ನಾಗರಿಕರ ಉಪಯೋಗಕ್ಕಾಗಿ ಪರಿಷತ್ತಿನ ಆವರಣದಲ್ಲಿ ಒಂದು ಉತ್ತಮ ಸಭಾಭವನವೂ, ಅತಿಥಿಗೃಹವೂ ಆಗಬೇಕಾಗಿದೆ. ಕೈಗೊಂಡಿರುವ ಕನ್ನಡ-ಕನ್ನಡ ಕೋಶದ ಕೆಲಸ ನಿರ್ವಿಘ್ನವಾಗಿ ಮುಂದುವರಿಯಬೇಕಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿಗೂ, ದಿಲ್ಲಿ, ಮುಂಬಯಿ, ಮದರಾಸು, ಹೈದರಾಬಾದು, ಕಲ್ಕತ್ತ, ಬನಾರಿಸ್, ಗ್ವಾಲಿಯರ್, ಅಹಮದ್‌ನಗರ, ಹರಿದ್ವಾರ, ಜಬ್ಬಲ್‌ಪುರ ಮೊದಲಾದ ಸ್ಥಳಗಳಲ್ಲಿರುವ ಕರ್ಣಾಟಕ ಸಂಘಗಳಿಗೂ ಇರುವ ಮಧುರಸಂಬಂಧ ಇನ್ನೂ ಹೆಚ್ಚು ಹೆಚ್ಚಾಗಿ ಬಲಗೊಳ್ಳಬೇಕಾಗಿದೆ. ಈ ಎಲ್ಲ ಕಾರ್ಯಗಳ ನಿರ್ವಹಣೆಗಾಗಿ ಪರಿಷತ್ತಿಗೆ ಹೆಚ್ಚಿನ ಆರ್ಥಿಕ ಸಂಪತ್ತು ಒದಗಬೇಕಾಗಿದೆ. **ಮಹಾಪ್ರಭುಗಳಾದ ತಾವೂ,** ಮೈಸೂರು ಸರ್ಕಾರದವರೂ, ಕರ್ಣಾಟಕದ ಮಹಾಜನಗಳೂ ಕನ್ನಡ ಸಾಹಿತ್ಯ ಪರಿಷತ್ತಿಗೆ ಈ ಮಹತ್ಕಾರ್ಯಗಳಿಗಾಗಿ ಉದಾರವಾಗಿ ಧನಸಹಾಯ ಮಾಡಿ ಕನ್ನಡದ ಮುನ್ನಡೆಗೆ ನೆರವಾಗಬೇಕೆಂದು ಪ್ರಾರ್ಥಿಸುತ್ತೇವೆ.

ಕನ್ನಡದ ಏಳಿಗೆಗಾಗಿ ಬಹುಮುಖವಾಗಿ ಪ್ರಯತ್ನಿಸಿ, ಪರಿಷತ್ತಿನ ಅಭಿವೃದ್ಧಿಗಾಗಿ ಹಲವಾರು ವರ್ಷಗಳಿಂದ ಶ್ರಮಿಸಿ, ಪರಿಷತ್ತಿನಲ್ಲಿ ಒಂದು ಸ್ವತಂತ್ರವಾದ ಅಚ್ಚುಕೂಟವನ್ನು ಸ್ಥಾಪಿಸಿ ಪುಣ್ಯಶ್ಲೋಕರೆನಿಸಿರುವ ದಿ|| ಬಿ. ಎಂ. ಶ್ರೀಕಂಠಯ್ಯನವರ ಸ್ಮಾರಕವಾದ "ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ"ದ ನೂತನ ಕಟ್ಟಡದ ಪ್ರವೇಶೋತ್ಸವವನ್ನೂ, ಪರಿಷತ್ತು ಕೈಗೊಂಡಿರುವ ಕನ್ನಡ-ಕನ್ನಡ ನಿಘಂಟಿನ ಮುದ್ರಣದ ಪ್ರಾರಂಭಕಾರ್ಯವನ್ನೂ **ಮಹಾಪ್ರಭುಗಳಾದ** ತಾವು ಇಂದು ಕೃಪೆಮಾಡಿ ತಮ್ಮ ಅಮೃತಹಸ್ತದಿಂದ ನಡೆಸಿಕೊಡಬೇಕೆಂದು ಪ್ರಾರ್ಥಿಸುತ್ತೇವೆ.

ಜಗಜ್ಜನನೀಜನಕರಾದ ಶ್ರೀ ಶ್ರೀಕಂಠ ಚಾಮುಂಡಾಂಬಿಕೆಯರು ಜನಪ್ರಿಯ ರಾಜ್ಯಪಾಲರಾದ ತಮಗೂ ತಮ್ಮ ಕುಟುಂಬ ವರ್ಗದವರಿಗೂ ಇತೋಪ್ಯತಿಶಯವಾದ ಆಯುರಾರೋಗ್ಯ ಭಾಗ್ಯಗಳನ್ನು ಕೊಟ್ಟು ಕಾಪಾಡಲೆಂದು ಪ್ರಾರ್ಥಿಸುತ್ತೇವೆ.

**|| ಚಿರಮಭಿವರ್ಧತಾಂ ಯದುಸಂತಾನ ಶ್ರೀಃ ||**

**ಬೆಂಗಳೂರು**
**೧೦-೬-೧೯೬೩**

ಇಂತು ತಮ್ಮ ಕೃಪಾಪಾತ್ರರಾದ,
**ಪರಿಷತ್ತಿನ ಅಧ್ಯಕ್ಷರು ಮತ್ತು ಸದಸ್ಯರು**

---

# ಶ್ರೀಮನ್ಮಹಾರಾಜರ ಭಾಷಣ

ಪೂಜ್ಯ ಸ್ವಾಮಿಗಳವರೇ, ಸಭಾಧ್ಯಕ್ಷರಾದ ಶ್ರೀಮಾನ್ ಎಸ್. ಆರ್. ಕಂಠಿಯವರೇ, ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳೇ, ಮಹಿಳೆಯರೇ ಮತ್ತು ಮಹನೀಯರೇ,

ಸಮಗ್ರ ಕರ್ಣಾಟಕದ ಪ್ರೀತಿ ಗೌರವಗಳಿಗೆ ಪಾತ್ರವಾಗಿರುವ, ನಮಗೆ ಚಿರಪರಿಚಿತವೆನಿಸಿರುವ ಕನ್ನಡ ಸಾಹಿತ್ಯ ಪರಿಷತ್ತು ಈ ದಿನ ನಮ್ಮನ್ನು ಆಹ್ವಾನಿಸಿ "ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ"ದ ನೂತನ ಕಟ್ಟಡದ ಪ್ರಾರಂಭೋತ್ಸವವನ್ನು ನೆರವೇರಿಸುವ ಸಂತೋಷವನ್ನು ನಮಗೆ ಉಂಟುಮಾಡಿದುದಕ್ಕಾಗಿ ನಾವು ಕೃತಜ್ಞರಾಗಿದ್ದೇವೆ. ಇದೇ ಸಂದರ್ಭದಲ್ಲಿ ಪರಿಷತ್ತಿನವರು ಮಮತೆಯಿಂದ ನಮಗೆ ಸಮರ್ಪಿಸಿರುವ ಬಿನ್ನಹ ಪತ್ರಿಕೆಯಲ್ಲಿ ನಮ್ಮ ಮತ್ತು ನಮ್ಮ ಮನೆತನದ ಹಿರಿಯರ ವಿಷಯವಾಗಿ ಆಡಿರುವ ಸವಿಮಾತುಗಳಿಂದ ನಮಗೆ ಆನಂದವಾಗಿದೆ. ಸಾಹಿತ್ಯದಲ್ಲಿ ಆಸಕ್ತಿಯೂ, ಕಲಾಭಿಮಾನವೂ, ವಿದ್ವಜ್ಜನ ಪ್ರೋತ್ಸಾಹವೂ ನಮಗೆ ವಂಶಪಾರಂಪರ್ಯವಾಗಿ ಬಂದ ಆಸ್ತಿ ಎಂದು ನಾವು ತಿಳಿದಿದ್ದೇವೆ. ನಮ್ಮ ಹಿರಿಯರು ಮಾಡಿದ ಸಾಹಿತ್ಯ ರಚನೆ, ಕೊಟ್ಟ ವಿದ್ವತ್ ಪ್ರೋತ್ಸಾಹ ಮತ್ತು ನೆರವೇರಿಸಿದ ಕಲಾವೈಭವ ಮುಂತಾದುವು ಇಂದಿಗೂ ನಮಗೆ ಸ್ಫೂರ್ತಿಯನ್ನುಂಟು ಮಾಡುತ್ತಿವೆ. ಅವರಂತೆಯೇ ಆ ಕ್ಷೇತ್ರಗಳಲ್ಲಿ ಸಾಕಷ್ಟು ಪ್ರೋತ್ಸಾಹವನ್ನು ನೀಡಿ ನಮ್ಮ ನಾಡಿನ ಮತ್ತು ಸಂಸ್ಕೃತಿಯ ಸೇವೆಯನ್ನು ಮಾಡಬೇಕೆಂದಿರುವುದು ನಮ್ಮ ಹೆಬ್ಬಯಕೆಯಾಗಿದೆ.

ಕನ್ನಡ ಭಾಷೆಯು ಭಾರತ ಪ್ರಭುತ್ವದಿಂದ ಮನ್ನಣೆಯನ್ನು ಪಡೆದ ಹದಿನಾಲ್ಕು ಭಾಷೆಗಳಲ್ಲಿ ಒಂದಾಗಿದೆ. ಪ್ರಾಚೀನತೆ ಮತ್ತು ಪ್ರೌಢಿಮೆಗಳಲ್ಲಿ ಕನ್ನಡವು ಭಾರತದಲ್ಲಿಯೇ ಹೆಸರಾಗಿದೆ. ಸುಮಾರು ೧,೫೦೦ ವರ್ಷಗಳಿಂದ ಅನೇಕ ರಾಜಮನೆತನಗಳ ಮಾತೃಭಾಷೆಯಾಗಿ ಗೌರವಾನ್ವಿತವೆನಿಸಿದೆ. ವಿದ್ವಾಂಸರು ಹೇಳುತ್ತಿರುವಂತೆ ಸಂಸ್ಕೃತ ಮತ್ತು ತಮಿಳನ್ನು ಬಿಟ್ಟರೆ ಕನ್ನಡವೇ ಭಾರತದಲ್ಲಿ ಅತ್ಯಂತ ಪ್ರಾಚೀನತಮವೆನಿಸಿದೆ. ಪ್ರಾಯೇಣ ಕನ್ನಡ ಸಾಹಿತ್ಯದ ಅಭಿವೃದ್ಧಿಯು ಕರ್ಣಾಟಕ ರಾಜಮನೆತನಗಳಿಂದ ಮಿಗಿಲಾಗಿ ಆಗಿದೆ ಎಂದು ತಿಳಿಯಬಹುದು. ನಮ್ಮ ಪೂಜ್ಯ ಹಿರಿಯರು ಶ್ರೀ ಚಿಕ್ಕದೇವರಾಜ ಒಡೆಯರೂ, ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರೂ ಕನ್ನಡಕ್ಕೆ ಮಿಗಿಲಾದ ಸೇವೆಯನ್ನು ಸಲ್ಲಿಸಿರುವರೆಂದು ನಾವು ಸ್ಮರಿಸಿಕೊಂಡು ಸ್ಫೂರ್ತಿ ಪಡೆಯುತ್ತಿದ್ದೇವೆ. ಭಾರತೀಯ ಭಾಷೆಗಳೆಲ್ಲವೂ ಭರತಮಾತೆಯ ದಿವ್ಯ ಕಂಠವನ್ನು ಅಲಂಕರಿಸಿರುವ ಹೂವಿನ ಮಾಲೆಯಂತೆ ಕಂಗೊಳಿಸುತ್ತಿವೆ ಎಂದು ಹಿರಿಯರೊಬ್ಬರು ಹೇಳಿರುತ್ತಾರೆ. ಒಂದೇ ಧರ್ಮ ಮತ್ತು ಸಂಸ್ಕೃತಿಗಳಿಂದ ಸ್ಫೂರ್ತಿಗೊಂಡಿರುವ ಭಾರತೀಯ ಭಾಷೆಗಳು ಪರಸ್ಪರ ಪೋಷಕವಾಗುವಂತೆ ಭಾಷೈಕ್ಯವನ್ನು ಸಾಧಿಸುವ ಕಾರ್ಯದಲ್ಲಿ ನಮ್ಮ ರಾಷ್ಟ್ರದ ವಿದ್ವಾಂಸರು ಹೆಚ್ಚು ಹೆಚ್ಚು ಪ್ರಯತ್ನಿಸಬೇಕೆಂದು ನಾವು ಹೇಳಬಯಸುತ್ತೇವೆ. ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಏಳಿಗೆಗಾಗಿ ಕಂಕಣ ಕಟ್ಟಿರುವ ಮತ್ತು ಇದಕ್ಕಾಗಿ ಮೈಸೂರು ಅರ್ಧ ಶತಮಾನದಿಂದ ಬಗೆ ಬಗೆಯಾಗಿ ಪ್ರಯತ್ನಿಸುತ್ತಿರುವ ಕನ್ನಡ ಸಾಹಿತ್ಯ ಪರಿಷತ್ತು ಈ ನಮ್ಮ ಹೆಬ್ಬಯಕೆಗಳನ್ನು ನಿರ್ವಹಿಸುವುದರಲ್ಲಿ ನಿರತವಾಗುವುದೆಂದು ನಾವು ನಂಬಿರುತ್ತೇವೆ.

ಸುವರ್ಣ ಮಹೋತ್ಸವಕ್ಕೆ ಸನ್ನಿಹಿತವಾಗಿರುವ ಕನ್ನಡ ಸಾಹಿತ್ಯ ಪರಿಷತ್ತು ಕಳೆದ ನಲವತ್ತೆಂಟು ವರ್ಷಗಳಲ್ಲಿ ಸಾಧಿಸಿರುವ ಕಾರ್ಯವು ಅಪಾರವಾದುದು. ವಿಶಾಲ ಮೈಸೂರು ರಾಜ್ಯದ ರಚನೆಗೆ ಪರಿಷತ್ತು ಮಾಡಿರುವ ಕಾರ್ಯವು ಸ್ಮರಣಾರ್ಹವಾದುದು. ಪರಿಷತ್ತು ಈಗ ಕೈಗೊಂಡಿರುವ ಕಾರ್ಯಗಳಿಗೂ, ಮುಂದೆ ಕೈಗೊಳ್ಳಲಿರುವ ಕಾರ್ಯಗಳಿಗೂ ಸರ್ಕಾರದಿಂದಲೂ, ಸಾರ್ವಜನಿಕರಿಂದಲೂ ಹೆಚ್ಚು ಧನಸಹಾಯವನ್ನು ನಿರೀಕ್ಷಿಸುವುದು ನ್ಯಾಯವಾಗಿದೆ.

ಸಮಾಜದ ಉನ್ನತಿಗೂ, ಸಾಹಿತ್ಯದ ಉನ್ನತಿಗೂ ನಿಕಟವಾದ ಬಾಂಧವ್ಯ ಉಂಟೆಂಬುದನ್ನು ಎಲ್ಲರೂ ಅರಿತಿರಬೇಕು. ಆದರಲ್ಲಿಯೂ ಹೊಣೆಗಾರಿಕೆಯುಳ್ಳ ಮಹನೀಯರು ಈ ವಿಚಾರವನ್ನು ಇನ್ನೂ ಹೆಚ್ಚಾಗಿ ಗಮನಿಸಬೇಕಾದುದು ಅಗತ್ಯ. ಯಾವ ನುಡಿ ಏಳಿಗೆಯಾಗಬೇಕಾದರೂ ಅದಕ್ಕೆ ಸರಿಯಾದ ಒಂದು ಶಬ್ದಕೋಶ ಅತ್ಯಗತ್ಯ. ಅಂತೆಯೇ ಕನ್ನಡಕ್ಕೂ ಒಂದು ಉತ್ತಮವಾದ ಶಬ್ದಕೋಶ, ಒಂದು ಆಧಾರಭೂತವಾದ ವಸ್ತುಕೋಶ ಇವುಗಳ ಅಗತ್ಯ ಬಹಳವಾಗಿದೆ. ಇದರ

ನಿರ್ವಹಣೆಗೆ ನಮ್ಮ ಸರ್ಕಾರದವರು ಹೆಚ್ಚು ನೆರವಾಗುವರೆಂದು ನಾವು ನಂಬುತ್ತೇವೆ.

ಪರಿಷತ್ತು ತಾನು ಕೈಗೊಂಡು ನಡಸುತ್ತಿರುವ ಬಹು ಮುಖವಾದ ಕಾರ್ಯಕಲಾಪಗಳಲ್ಲಿ "ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ"ದ ನಿರ್ವಹಣೆ ಬಹು ಮುಖ್ಯವಾಗಿದೆ. ಇತ್ತೀಚೆಗೆ ಪರಿಷತ್ತು ಸರ್ಕಾರದೊಡನೆ ಮಾಡಿಕೊಂಡಿರುವ ಕರಾರಿಗನುಗುಣವಾಗಿ ಕನ್ನಡ-ಕನ್ನಡ ಕೋಶದ ಅಚ್ಚಿನ ಕಾರ್ಯವನ್ನು ಕೈಗೊಂಡುದರಿಂದ ಅಚ್ಚುಕೂಟವನ್ನು ವಿಸ್ತರಿಸಬೇಕಾದುದು ಅಗತ್ಯವೂ, ಅನಿವಾರ್ಯವೂ ಆಗಿದೆ. ಅದಕ್ಕಾಗಿಯೇ ಅಚ್ಚುಕೂಟದ ವಿಸ್ತರಣಕಾರ್ಯ ನಡೆದು ನೂತನ ಕಟ್ಟಡ ನಿರ್ಮಾಣವಾಗಿದೆ. ಈ ಅಚ್ಚುಕೂಟಕ್ಕೆ ಕನ್ನಡನಾಡು ನುಡಿಗಳ ಹಿರಿಮೆಗರಿಮೆಗಳಿಗಾಗಿಯೇ ತಮ್ಮ ಜೀವಿತವನ್ನು ಮುಡುಪು ಮಾಡಿದ್ದ ದಿವಂಗತ ಬಿ. ಎಂ. ಶ್ರೀಕಂಠಯ್ಯನವರ ಹೆಸರಿಟ್ಟಿರುವುದು ಸೂಕ್ತವಾಗಿದೆ.

ಕರ್ಣಾಟಕ ರಾಜ್ಯೋದಯವಾದ ಮೇಲೆ ಪರಿಷತ್ತು ಉತ್ಸಾಹಶಾಲಿಗಳಾದ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ನೇತೃತ್ವದಲ್ಲಿ ಅನೇಕ ಉಪಯುಕ್ತವಾದ ಮತ್ತು ಪ್ರಗತಿಪರವಾದ ಕೆಲಸಗಳನ್ನು ನೆರವೇರಿಸುತ್ತಿರುವುದು ಎಲ್ಲರ ಮೆಚ್ಚುಗೆಗೂ ಪಾತ್ರವಾಗಲು ಅರ್ಹವಾಗಿದೆ. ಯಾವ ಪ್ರತಿಫಲವೂ ಇಲ್ಲದೆ ಕೇವಲ ನಾಡು ನುಡಿಗಳ ಮೇಲಿನ ಅಭಿಮಾನದಿಂದ ಪರಿಷತ್ತಿನವರು ಸೇವೆ ಸಲ್ಲಿಸುತ್ತಿರುವುದು ಸ್ತೋತ್ರಾರ್ಹವಾಗಿದೆ.

ಈ ಸಂದರ್ಭದಲ್ಲಿ ಪರಿಷತ್ತಿನ ಅಚ್ಚುಕೂಟದ ಬಡಾವಣೆಯ ನೂತನ ಕಟ್ಟಡದ ಪ್ರಾರಂಭೋತ್ಸವವನ್ನು ನಾವು ಸಂತೋಷದಿಂದ ನೆರವೇರಿಸುತ್ತೇವೆ. ಇದರಿಂದ ಇತೋಽಪ್ಯತಿಶಯವಾಗಿ ನಾಡು ನುಡಿಗಳಿಗೆ ಪರಿಷತ್ತಿನ ಮೂಲಕ ಸೇವೆ ನಡೆಯಲೆಂದು ಹಾರೈಸುತ್ತೇವೆ.

॥ ಸಿರಿಗನ್ನಡಂ ಗೆಲ್ಗೆ-ಬಾಳ್ಗೆ ॥

---

## ವಕ್ತೃತ್ವ ತರಗತಿಗಳು

ತಾ|| ೧೭-೫-೬೩ ರ ಸಂಜೆ ಪರಿಷನ್ಮಂದಿರದಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಕೆನರಾ ಇಂಡಸ್ಟ್ರಿಯಲ್ ಅಂಡ್ ಬ್ಯಾಂಕಿಂಗ್ ಸಿಂಡಿಕೇಟ್‌ನ ಅಧ್ಯಕ್ಷರೂ, ಮಣಿಪಾಲ ಕಾಲೇಜಿನ ಸ್ಥಾಪಕರೂ, ಕನ್ನಡ ಸಾಹಿತ್ಯ ಪರಿಷತ್ತಿನ ಉಜ್ವಲ ಹಿತೈಷಿಗಳೂ ಆದ ಡಾ|| ಟಿ. ಎಂ. ಎ. ಪೈ ಅವರು ಸಾಹಿತ್ಯ ಪರಿಷತ್ತು ಪಾಶ್ಚಾತ್ಯ ದೇಶಗಳಲ್ಲಿರುವಂತೆ ಚೆನ್ನಾಗಿ ಮಾತನಾಡಬಲ್ಲ ತರುಣರನ್ನು ತಯಾರು ಮಾಡಲು ತರಗತಿಗಳನ್ನು ನಡೆಸಬೇಕೆಂದೂ, ಅವರಿಗೆ ಮಾತುಗಾರಿಕೆಯ ಗುಟ್ಟುಗುರಿಗಳನ್ನು ತಿಳಿಸಬೇಕೆಂದೂ, ಇದಕ್ಕಾಗಿ ಶಿಕ್ಷಣದ ಅಗತ್ಯ ಉಂಟೆಂದೂ ತಿಳಿಸಿದರು. ಸಾಹಿತ್ಯ ಪರಿಷತ್ತು ಅಂತಹ ತರಗತಿಗಳನ್ನು ನಡೆಸುವುದಾದರೆ ತಮ್ಮ ಮಣಿಪಾಲದ ಅಕ್ಯಾಡೆಮಿಯಿಂದ ಪ್ರತಿ ವರ್ಷ ಪರಿಷತ್ತಿಗೆ ೧,೦೦೦ ರೂಪಾಯಿಗಳನ್ನು ೫ ವರ್ಷದ ಕಾಲ ಕೊಡುವುದಾಗಿ ವಾಗ್ದಾನಮಾಡಿದರು. ಅವರ ಆ ವಾಗ್ದಾನವನ್ನು ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಸ್ವಾಗತಿಸಿ ಜೂನ್ ತಿಂಗಳಿಂದಲೇ ಅಂತಹ ತರಗತಿಗಳನ್ನು ಪ್ರಾರಂಭಿಸುವುದಾಗಿ ಭರವಸೆಯಿತ್ತರು. ಪರಿಷತ್ತಿನಲ್ಲಿ ಇಂತಹ ತರಗತಿಗಳನ್ನು ಪ್ರಾರಂಭಿಸುವುದರ ಬಗ್ಗೆ ಈಗಾಗಲೇ ಪ್ರಯತ್ನ ನಡೆದಿದೆ. ಅಪೇಕ್ಷೆಯುಳ್ಳ ಕನ್ನಡ ತರುಣರು ಪರಿಷತ್ತಿನ ಗೌರವ ಕಾರ್ಯದರ್ಶಿಗಳನ್ನು ಸಂದರ್ಶಿಸಿ ಈ ತರಗತಿಗಳ ಲಾಭವನ್ನು ಪಡೆದುಕೊಳ್ಳಬಹುದು.

## ಸಂತಾಪ ಸೂಚಕ ಸಭೆ

ಕನ್ನಡ ನಾಡು ನುಡಿಗಳ ಹಿರಿಯ ಅಭಿಮಾನಿಗಳೂ, ಕರ್ಣಾಟಕ ಏಕೀಕರಣ ಧುರೀಣರೂ, ವಿಖ್ಯಾತ ವಿದ್ವಾಂಸರೂ, 'ಲಿಂಗಾಯತ್ ಗೆಜೆಟ್' ಪತ್ರಿಕೆಯನ್ನು ಸ್ಥಾಪಿಸಿ ಕೆಲಕಾಲ ನಡೆಸಿದವರೂ, ಪ್ರಮುಖ ನ್ಯಾಯವಾದಿಗಳೂ, ಬೆಂಗಳೂರು ಕನ್ನಡ ಹಿತರಕ್ಷಕ ಸಂಘದ ಅಧ್ಯಕ್ಷರೂ ಆಗಿದ್ದ ಬ್ಯಾರಿಸ್ಟರ್ ಎಂ. ಎಸ್. ಸರ್ದಾರ್, ಬಿ.ಎ. (ಆಕ್ಸನ್) ಅವರು ದಿನಾಂಕ ೧೫-೫-೬೩ ರಂದು ಸೊಲ್ಲಾಪುರದ ತಮ್ಮ ನಿವಾಸದಲ್ಲಿ ನಿಧನರಾದುದರಿಂದ, ದಿವಂಗತರ ಆತ್ಮಕ್ಕೆ ಶಾಂತಿಯನ್ನು ಕೋರಲು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ೨೦-೫-೬೩ ರಂದು ಸಂತಾಪ ಸೂಚಕ ಸಭೆಯನ್ನು ಏರ್ಪಡಿಸಿತ್ತು. ಮೈಸೂರು ಹೈಕೋರ್ಟಿನ ನಿವೃತ್ತ ಶ್ರೇಷ್ಠ ನ್ಯಾಯಾಧೀಶರಾದ ಶ್ರೀಮಾನ್ ಜಿ. ಪರಮಶಿವಯ್ಯನವರು ಸಭಾಧ್ಯಕ್ಷತೆ ವಹಿಸಿದ್ದರು. ಆಸ್ಥಾನ ವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳೂ, ಮೈಸೂರು ಹೈಕೋರ್ಟು ಅಡ್ವೊಕೇಟರಾದ ಶ್ರೀ ಡಿ. ಎಸ್. ಹುಲ್ಲೂರ್, ಎಲ್‌ಎಲ್.ಬಿ., ಅವರೂ ದಿವಂಗತರ ವಿಷಯವಾಗಿ ಮಾತನಾಡಿದರು. ದುಃಖಸೂಚಕ ನಿರ್ಣಯವನ್ನು ಮಾಡಲಾಯಿತು.

# ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಡಾ|| ಟಿ. ಎಂ. ಎ. ಪೈ ಅವರು

ದಿನಾಂಕ ೧೭-೫-೬೩ ನೇ ಶುಕ್ರವಾರ ಸಂಜೆ ಕನ್ನಡ ಸಾಹಿತ್ಯ ಪರಿಷತ್ತಿಗೆ ಮಣಿಪಾಲಿನ ವಿವಿಧ ಕಾಲೇಜುಗಳ ಸಂಸ್ಥಾಪಕರೂ, ಕೆನರಾ ಇಂಡಸ್ಟ್ರಿಯಲ್ ಮತ್ತು ಬ್ಯಾಂಕಿಂಗ್ ಸಿಂಡಿಕೇಟಿನ ಸೂತ್ರಧಾರಿಗಳೂ ಆದ ಶ್ರೀ ಟಿ. ಎಂ. ಎ. ಪೈ ಅವರು ಭೇಟಿಕೊಟ್ಟರು. ಪರಿಷತ್ತಿಗೆ ಬಂದಕೂಡಲೇ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳೂ, ಕಾರ್ಯದರ್ಶಿಗಳಾದ ಶ್ರೀ ಅನ್ನದಾನಯ್ಯ ಪುರಾಣಿಕರೂ, ಡಾ|| ಕೆ. ಎಂ. ಕೃಷ್ಣರಾಯರೂ, ಖಜಾಂಚಿಗಳಾದ ಶ್ರೀ ಜಿ. ಶ್ರೀನಿವಾಸನ್‌ರವರೂ, ವ್ಯವಸ್ಥಾಪಕರಾದ ಶ್ರೀ ಬ. ನ. ಸುಂದರರಾಯರೂ, ಶ್ರೀ ಎಂ. ವಾಸುದೇವಮೂರ್ತಿಯವರೂ ಸ್ವಾಗತಿಸಿದರು. ಈ ಸಮಾರಂಭಕ್ಕೆ ಡಾ|| ಮಾಸ್ತಿ ವೆಂಕಟೇಶ ಐಯ್ಯಂಗಾರ್ಯರೂ, ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳೂ, ಪ್ರೊ|| ಡಿ. ಎಲ್. ನರಸಿಂಹಾಚಾರ್ಯರೂ, ಡಾ|| ರಂ. ಶ್ರೀ ಮುಗಳಿಯವರೂ, ರಾಜಸೇವಾಸಕ್ತ ಶ್ರೀ ಡಿ. ಸಿ. ಸುಬ್ಬರಾಯಪ್ಪನವರೂ, ಪ್ರೊ|| ಎಂ. ಮರಿಯಪ್ಪ ಭಟ್‌ರವರೂ, ಪತ್ರಿಕೋದ್ಯಮಿಗಳಾದ ಶ್ರೀ ಟಿ. ಟಿ. ಶರ್ಮರವರೂ, ಶ್ರೀ ಜಿ. ಚಂದ್ರಶೇಖರ ಐತಾಳ್‌ರವರೂ, 'ನಿರಂಜನ'ರವರೂ ಮುಂತಾದ ಅನೇಕ ವಿದ್ವಾಂಸರೂ, ಶ್ರೀ ಕೆ. ಎಸ್. ಈಶ್ವರರಾವ್, ಶ್ರೀ ವೆಂಕಟರಮಣಪ್ಪ ಮೊದಲಾದ ವರ್ತಕರೂ, ಪತ್ರಿಕಾ ಪ್ರತಿನಿಧಿಗಳೂ, ಮಹಿಳೆಯರೂ, ಮಹನೀಯರೂ ದಯಮಾಡಿಸಿದ್ದರು. ನ್ಯಾಯಮೂರ್ತಿಗಳಾದ ಶ್ರೀ ಮಳಿಮಠ್‌ರವರು ಸಭಾಧ್ಯಕ್ಷತೆ ವಹಿಸಿದ್ದರು. ದೇವತಾ ಪ್ರಾರ್ಥನೆಯಾದ ಬಳಿಕ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಸ್ವಾಗತ ಭಾಷಣ ಮಾಡಿ ಶ್ರೀ ಟಿ. ಎಂ. ಎ. ಪೈ ಅವರ ಪರಿಚಯ ಮಾಡಿಕೊಟ್ಟರು. ಶ್ರೀ ದಿವಾಕರ್‌ರವರಿಂದ ಪ್ರಾರ್ಥನೆಯಾದ ಬಳಿಕ ಡಾ|| ಪೈ ಅವರು ಸುಮಾರು ಒಂದೂವರೆ ಘಂಟೆಗಳ ಕಾಲ ಭಾಷಣಮಾಡಿ, ಇಂದಿನ ಜನಜೀವನದ ಸಮಸ್ಯೆಗಳು, ನಿರುದ್ಯೋಗ, ತೆರಿಗೆಗಳ ಅವಾಂತರ, ಶಿಕ್ಷಣ ಸಂವಿಧಾನ, ಸಾಹಿತ್ಯ ಸೃಷ್ಟಿ ಮೊದಲಾದ ವಿಷಯಗಳನ್ನು ಕುರಿತು ಚರ್ಚೆ ನಡೆಸಿದರು. ಇವರ ಈ ವಿಚಾರಪೂರಿತ ಭಾಷಣದಲ್ಲಿ ಕಂಡುಬಂದ ಅತ್ಯಂತ ಮುಖ್ಯಾಂಶವೆಂದರೆ ಅತಿ ಶೀಘ್ರದಲ್ಲಿಯೇ ಲಕ್ಕವಳ್ಳಿ ಭದ್ರಾಶಯದ ಬಳಿ 'ಲೇಕ್‌ಸಿಟಿ ಯೂನಿವರ್ಸಿಟಿ' ಎಂಬ ವಿದ್ಯಾಪೀಠವನ್ನು ಸ್ಥಾಪಿಸುವುದು. ಇದಕ್ಕೆ ಸರ್ಕಾರದವರಿಂದ ಹತ್ತು ಸಾವಿರ ಎಕರೆಗಳಷ್ಟು ಜಮೀನನ್ನು ಅಪೇಕ್ಷಿಸಿ, ಉಳಿದ ಯಾವ ಸೌಕರ್ಯಗಳನ್ನೂ ಸರ್ಕಾರವನ್ನು ಕೇಳದೆ ಸ್ವತಃ ಕಲ್ಪಿಸಿಕೊಳ್ಳುವುದಾಗಿ ತಿಳಿಸಿದರು. ಅಲ್ಲದೆ ವಿಶ್ವವಿದ್ಯಾನಿಲಯದ ಬಗ್ಗೆ ಅನೇಕ ವಿವರಣೆಗಳನ್ನೂ ನೀಡಿದರು. ಹಾಗೆಯೇ ಮುಂದುವರಿದು–"ನಮ್ಮ ನಾಡಿನಲ್ಲಿ ವಿದ್ಯಾವಂತರ ಸಂಖ್ಯೆ ಹೆಚ್ಚಾಗಬೇಕು. ಕಡ್ಡಾಯ ಶಿಕ್ಷಣವೆಂದರೆ ಕೇವಲ ಪ್ರಚಾರ ಶಿಕ್ಷಣವಾಗಬಾರದು. ಉಪಾಧ್ಯಾಯರಾದವರಿಗೆ ಸಂಬಳವನ್ನು ಹೆಚ್ಚಾಗಿ ಕೊಟ್ಟು, ವಿದ್ಯಾರ್ಥಿಗಳಿಗೆ ಉಪಾಹಾರದ ವ್ಯವಸ್ಥೆ ಮಾಡಿ, ಅನಂತರ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರಬೇಕು," ಎಂದು ಹೇಳಿದರು. ತೆರಿಗೆಗಳ ಬಗ್ಗೆ ಹೇಳುತ್ತಾ–"ಇಂದಿನ ಪ್ರಜಾಸರ್ಕಾರದಲ್ಲಿ ಎಲ್ಲ ಜವಾಬ್ದಾರಿಯೂ ಪ್ರಜೆಗಳ ಮೇಲೆಯೇ ಬಿದ್ದಿರುತ್ತದೆ. ಅಲ್ಲದೆ ಸಾಲದ ಹೊರೆಯೂ ಪ್ರಜೆಗಳ ಮೇಲೆಯೇ ಬೀಳುತ್ತದೆ. ಇಷ್ಟೆಲ್ಲಾ ಆದಮೇಲೆ ತೆರಿಗೆಗಳನ್ನು ತೆರುವ ಭಾರವೂ ಪ್ರಜೆಗಳ ಮೇಲೇ ಬಿದ್ದಿದೆ. ಆದ್ದರಿಂದ ಪ್ರಜೆಗಳನ್ನು ಈ ಕಷ್ಟಗಳಿಂದ ಪಾರುಮಾಡಬೇಕಾದದ್ದು ನಿಮ್ಮ ಕರ್ತವ್ಯ" ಎಂದು ತಿಳಿಸಿದರು. ಸಾಹಿತ್ಯದ ವಿಷಯವಾಗಿ ಮಾತನಾಡುತ್ತಾ–"ಬರೆದದ್ದೆಲ್ಲಾ ಸಾಹಿತ್ಯವಲ್ಲ. ಪದ್ಯಗಳನ್ನು ರಚಿಸುವಾಗ ಪ್ರಾಸಕ್ಕಾಗಿ ಒದ್ದಾಡಿ, ಕಡೆಗೆ ಅನಾವಶ್ಯಕವಾದ ವಿಷಯಗಳಿಗೆ ಪ್ರಾಸಗಳನ್ನು ಕೂಡಿಸುತ್ತಾ ಹೋಗುವುದು ಹಾಸ್ಯಾಸ್ಪದವಾಗುತ್ತದೆ" ಎಂದು ಹೇಳಿ, ಒಂದೆರಡು ಉದಾಹರಣೆಗಳನ್ನು ಕೊಟ್ಟರು. ಮುಂದುವರಿದು "ಕಾರವಾರ, ಮಲ್ಪೆ, ಮಂಗಳೂರು—ಈ ಸ್ಥಳಗಳಲ್ಲಿ ಅತಿ ಜರೂರಾಗಿ ಬಂದರುಗಳು ಸಿದ್ಧವಾಗಬೇಕು. ಈ ಬಗ್ಗೆ ಸರ್ಕಾರದವರು ತೀವ್ರ ಗಮನ ಕೊಡಬೇಕು. ಹಿಂದೆ ಮೈಸೂರು ರಾಜ್ಯದ ದಿವಾನರುಗಳಾಗಿದ್ದ ಸರ್ ಎಂ. ವಿಶ್ವೇಶ್ವರಯ್ಯ ಮತ್ತು ಸರ್. ಎಂ. ಮಿರ್ಜಾ ಇಸ್ಮಾಯಿಲ್‌ರವರು ಭಟ್ಕಲ್ ಬಂದರಿಗಾಗಿ ಎಷ್ಟು ಶ್ರಮಪಟ್ಟರೂ ಸಹ ಅಂದಿನ ಸರ್ಕಾರದವರು ಒಪ್ಪದೇ ಹೋದರು. ಈಗಲಾದರೂ ಅದನ್ನು ಇಂದಿನ ಕರ್ನಾಟಕ ರಾಜ್ಯದವರು ಅಭಿವೃದ್ಧಿಗೆ ತರುವರೆಂದು ನಂಬಿರುತ್ತೇನೆ"

ಎಂದು ತಿಳಿಸಿದರು. ಮುಂದುವರಿದು–"ಕರಾವಳಿ ಅಭಿವೃದ್ಧಿಯಾಗಬೇಕೆಂಬ ಇಚ್ಛೆ ಪ್ರತಿಯೊಬ್ಬ ನಾಗರಿಕನಿಗೂ ಇರಬೇಕು. ಅದರಲ್ಲಿಯೂ ಬೆಂಗಳೂರು ನಗರ ವಾಸಿಗಳಾದ ನೀವು ಈ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ತೋರಿಸಬೇಕು" ಎಂದರು. ಇವರ ಭಾಷಣದ ಇನ್ನೊಂದು ವಿಶೇಷ ವಿಷಯವೆಂದರೆ–ಪರಿಷತ್ತಿನ ಆಶ್ರಯದಲ್ಲಿ, ಭಾಷಣ ಮಾಡುವ ಕಲೆಯನ್ನು ಅಭಿವೃದ್ಧಿಗೊಳಿಸಲು ತಾವು ಪ್ರತಿವರ್ಷವೂ ಒಂದು ಸಾವಿರ ರೂಪಾಯಿಗಳ ಪ್ರಕಾರ ೫ ವರುಷಗಳು ಕೊಡುವುದಾಗಿ ತಿಳಿಸಿದ್ದು.

ತರುವಾಯ ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳು ಭಾಷಣ ಮಾಡಿ, ಶ್ರೀ ಪೈ ಅವರನ್ನು 'ಆಧುನಿಕ ವಿಶ್ವಾಮಿತ್ರ' ನೆಂದು ಹೊಗಳಿ, ಪೈ ಅವರ ನಾನಾ ವಿಧವಾದ ಉದ್ಯಮಗಳನ್ನು ವಿವರಿಸಿದರು. ಅಲ್ಲದೆ ಶ್ರೀ ಪೈ ಅವರು ಪ್ರತಿ ವರ್ಷವೂ ಸಾವಿರ ರೂಪಾಯಿ ದಾನ ಕೊಡುವ ಬಗ್ಗೆ ಮತ್ತು ಈ ಬಗ್ಗೆ ಪರಿಷತ್ತು ಶ್ರಮಿಸಬೇಕೆಂದು ವಿನಂತಿ ಮಾಡಿಕೊಂಡ ಸಂಗತಿಯನ್ನು ಪ್ರಸ್ತಾಪಿಸಿ, ಶ್ರೀ ಶಾಸ್ತ್ರಿಗಳು ಡಾ|| ಪೈ ಅವರನ್ನು ಮನಸಾರೆ ವಂದಿಸಿದರು.

ಅನಂತರ ಸಭಾಧ್ಯಕ್ಷತೆ ವಹಿಸಿದ್ದ ಶ್ರೀ ಮಳಿಮಠ್ ರವರು ಭಾಷಣಮಾಡಿ, ಡಾ|| ಪೈಗಳ ಶ್ಲಾಘನೀಯ ಉದ್ಯಮಗಳೆಲ್ಲ ಯಶಸ್ವಿಯಾಗಲೆಂದು ಹಾರೈಸಿದರು. ಶ್ರೀ ಅನ್ನದಾನಯ್ಯ ಪುರಾಣಿಕರು ವಂದನಾರ್ಪಣೆ ಮಾಡಿದರು. ರಾಷ್ಟ್ರಗೀತೆಯೊಂದಿಗೆ ಸಭೆ ಮುಗಿಯಿತು.

---

## ಪರಿಷತ್ತಿಗೆ ಡಾ|| ಟಿ. ಎಂ. ಎ. ಪೈ ಅವರ ಭೇಟಿ



ಮಣಿಪಾಲದ ಕುಲಪತಿಗಳಾದ ಡಾ|| ಟಿ. ಎಂ. ಎ. ಪೈ ಅವರು ಕನ್ನಡ ಸಾಹಿತ್ಯ ಪರಿಷತ್ತಿಗೆ ಮೇ ದಿನಾಂಕ ೧೭ ರಂದು ಭೇಟಿಕೊಟ್ಟು ಭಾಷಣ ಮಾಡುತ್ತಿದ್ದಾಗ ತೆಗೆದ ಚಿತ್ರ. ಇದರಲ್ಲಿ ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳು, ಪರಿಷತ್ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಡಾ|| ಟಿ. ಎಂ. ಎ. ಪೈ ಇವರನ್ನೂ ಸಭಾಧ್ಯಕ್ಷತೆ ವಹಿಸಿದ್ದ ನ್ಯಾಯಮೂರ್ತಿ ಶ್ರೀ ಮಳಿಮಠ್ ಇವರನ್ನೂ ನೋಡಬಹುದು.

# ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡದ ಸ್ಥಾನಮಾನ

## ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಹೇಳಿಕೆ

ಕರ್ನಾಟಕ ರಾಜ್ಯಲಕ್ಷ್ಮಿಯ ಎರಡು ನೇತ್ರಗಳಂತೆ ಪರಿಶೋಭಿಸುತ್ತಿರುವ ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ರಾಜ್ಯದ ಭಾಷೆಯಾದ ಕನ್ನಡಕ್ಕೆ ಇರುವ ಸ್ಥಾನಮಾನವೇನೆಂಬುದನ್ನು ಈಗ ನಾವೆಲ್ಲರೂ ಗಮನಿಸಬೇಕಾಗಿದೆ. ನಮಗೆ ತಿಳಿದಿರುವ ಮಟ್ಟಿಗೆ ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ವಾರಕ್ಕೆ ನಾಲ್ಕು ಗಂಟೆಗಳ ಕಾಲ ಕನ್ನಡವನ್ನು ಬೋಧಿಸಲಾಗುತ್ತಿದೆ. ಆದರೆ ಈ ಅವಧಿಯನು ಕಡಮೆ ಮಾಡುವ ಬಗೆಗೆ ತಾ|| ೧-೬-೬೩ ರ ದಿನ ಬೆಂಗಳೂರಿನಲ್ಲಿ ಕೂಡಲಿರುವ ಮೈಸೂರು ವಿಶ್ವವಿದ್ಯಾನಿಲಯದ ಅಕೆಡೆಮಿಕ್ ಕೌನ್ಸಿಲ್ ಪರಿಶೀಲಿಸಲಿದೆಯೆಂದು ನಮಗೆ ತಿಳಿದುಬಂದಿದೆ. ವಿಷಯ ನಿಜವಾಗಿದ್ದರೆ ಇದು ಬಹಳ ದುಃಖಕರವಾದ ಮತ್ತು ಅವಮಾನಕರವಾದ ಸಂಗತಿ ಎಂದು ಹೇಳಬೇಕಾಗಿದೆ. ನಮ್ಮ ನೆರೆಯ ರಾಜ್ಯಗಳಾದ ಮದರಾಸು ಮತ್ತು ಕೇರಳ ವಿಶ್ವವಿದ್ಯಾನಿಲಯಗಳಲ್ಲಿ ವಾರಕ್ಕೆ ೬ ಗಂಟೆಗಳ ಕಾಲ ಪ್ರಾದೇಶಿಕ ಭಾಷೆಗಳ ದ್ವಿತೀಯ ಭಾಗದ ಬೋಧನೆಗೆ ಅವಕಾಶವಿದೆಯೆಂದು ನಮಗೆ ತಿಳಿದುಬಂದಿದೆ.

ಭಾರತದಲ್ಲಿ ಭಾಷಾವಾರು ರಾಜ್ಯಗಳು ಉದಯವಾಗಿವೆ. ಪ್ರಜಾಪ್ರಭುತ್ವದ ಹಿತದೃಷ್ಟಿಯಿಂದ ದೇಶಭಾಷೆಗಳ ಅಭಿವೃದ್ಧಿ ಅಗತ್ಯವಾಗಿದೆ. ಪ್ರಾದೇಶಿಕ ಭಾಷೆಗಳಿಗೆ ಶಾಲಾ ಕಾಲೇಜುಗಳಲ್ಲಿ, ಹೆಚ್ಚಿನ ಪ್ರಾಮುಖ್ಯತೆ ಕೊಡಬೇಕೆಂಬ ವಾದ ಎಲ್ಲೆಲ್ಲಿಯೂ ಇದೆ. ಕನ್ನಡವು ರಾಜ್ಯದ ಆಡಳಿತ ಭಾಷೆಯಾಗುವುದು ಖಂಡಿತ ಎಂದು ನಮ್ಮ ಸರ್ಕಾರದವರು ಮೇಲಿಂದ ಮೇಲೆ ಹೇಳುತ್ತಿದ್ದಾರೆ. ಇವೆಲ್ಲಕ್ಕೂ ಮಿಗಿಲಾಗಿ ಕನ್ನಡವು ಭಾರತದ ೨೪ ರಾಷ್ಟ್ರೀಯ ಭಾಷೆಗಳಲ್ಲಿ ಒಂದಾಗಿದೆ. ಸುಮಾರು ೨,೦೦೦ ವರ್ಷಗಳಷ್ಟು ಪ್ರಾಚೀನತಮವೆನಿಸಿದೆ. ಸುಪ್ರೌಢವಾದ ಸಾಹಿತ್ಯದಿಂದ ಕಂಗೊಳಿಸುತ್ತಿದೆ. ಪರಿಸ್ಥಿತಿಯು ಹೀಗೆ ನಿಚ್ಚಳವಾಗಿದ್ದು ಜನತೆಗೆ ಮಾರ್ಗದರ್ಶನ ಮಾಡಬೇಕಾದ ವಿಶ್ವವಿದ್ಯಾನಿಲಯಗಳು ಕನ್ನಡ ವ್ಯಾಸಂಗದ ಪುನರ್ ವ್ಯವಸ್ಥೆಯಿಂದ ಕನ್ನಡಕ್ಕೆ ದೊರೆತಿರುವ ಕಾಲಾವಕಾಶವನ್ನು ಕಡಮೆ ಮಾಡುವುದು ಸರ್ವಥಾ ನ್ಯಾಯವಲ್ಲ.

ತಾ|| ೧೩-೧೦-೬೩ ರ ದಿನ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರನೇಕರನ್ನೊಳಗೊಂಡ ಉಪನ್ಯಾಸ ಮಾಲೆಯನ್ನು ನಡೆಸಿ ಪರಿಷತ್ತು ಜನತೆಗೆ ಮಾರ್ಗದರ್ಶನವನ್ನು ಮಾಡಿದೆ. ನಮ್ಮ ಘನ ಸರ್ಕಾರದವರೂ ವಿಶ್ವವಿದ್ಯಾನಿಲಯದ ಅಧಿಕಾರಿಗಳೂ ಪರಿಷತ್ತಿನ ಈ ಮನವಿಯನ್ನು ಪರಿಶೀಲಿಸಿರುವರೆಂದು ನಂಬುತ್ತೇವೆ.

ಕನ್ನಡ ಭಾಷೆ ತಲೆಯೆತ್ತಿ ನಿಲ್ಲಬೇಕಾದ ಮತ್ತು ಕನ್ನಡ ಸಾಹಿತ್ಯ ಸರ್ವಾಂಗ ಸುಂದರವಾಗಿ ಬೆಳೆಯಬೇಕಾದ ಈ ಕಾಲದಲ್ಲಿ ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯದ ಆಡಳಿತ ವರ್ಗದವರು ಈಗಿರುವ ಪಾಠಪ್ರವಚನಗಳ ಅವಧಿಯನ್ನು ಯಾವರೀತಿಯಿಂದಲೂ ಕಡಮೆ ಮಾಡಬಾರದೆಂದು ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ನಾನು ಪ್ರಾರ್ಥಿಸುತ್ತೇನೆ. ಇದು ಕನ್ನಡಿಗರ ಕರುಳಿನ ಕೂಗು ಎಂದು ತಿಳಿಯಬೇಕು.

ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳು ಪ್ರಚಾರೋಪನ್ಯಾಸ ಮತ್ತು ಗ್ರಂಥ ಪ್ರಕಟಣೆಯ ಕಾರ್ಯಗಳನ್ನು ಕೈಗೊಂಡು ಕನ್ನಡಕ್ಕೆ ತಕ್ಕಷ್ಟು ಸೇವೆಯನ್ನು ಸಲ್ಲಿಸುತ್ತಿವೆ ಎಂಬುದನ್ನು ನಾವು ಮನಗಂಡಿದ್ದೇವೆ. ಆದರೆ ಪಾಠಪ್ರವಚನಗಳ ಕಾಲದ ಅವಧಿಯನ್ನು ಕಡಮೆ ಮಾಡುವುದರಿಂದ ಈ ಮಹಾಸಂಸ್ಥೆಗಳು ಕನ್ನಡಕ್ಕೂ, ಕನ್ನಡ ನಾಡಿಗೂ ಅನ್ಯಾಯವನ್ನೂ ಅಪಚಾರವನ್ನೂ ಎಸಗಿದಂತಾಗುತ್ತದೆ ಎಂದು ನಾನು ವಿಧಿಯಿಲ್ಲದೆ ಹೇಳಬೇಕಾಗುತ್ತದೆ. ಶ್ರೀ ಭುವನೇಶ್ವರಿಯು ಅನುಗ್ರಹಿಸಲಿ.

---

## ಸಾಹಿತ್ಯ ಪರೀಕ್ಷೆಗಳ ಪಠ್ಯಪುಸ್ತಕಗಳ ಪಟ್ಟಿ–೧೯೬೪

### ತಿದ್ದುಪಡಿ

### ಕಾವ ಪರೀಕ್ಷೆ–೧೯೬೪

**II ಗದ್ಯ ಮತ್ತು ಪ್ರಬಂಧ ರಚನೆ (ಪತ್ರಿಕೆ II)**

೧. ರಾಮಾಚಾರಿಯ ನೆನಪು: ಪು. ತಿ. ನ.
ಪ್ರಕಾಶಕರು: ಕನ್ನಡ ಕವಿ ಕಾವ್ಯಮಾಲೆ,
ರಾಮ ಐಯ್ಯರ್ ರಸ್ತೆ, ಮೈಸೂರು–೪.

೩. ಭಗೀರಥ: (ಅನ್ನದಾನಯ್ಯ ಪುರಾಣಿಕ)
ಇದಕ್ಕೆ ಬದಲಾಗಿ – **ಸೌಂದರ್ಯದ ಸಾನ್ನಿಧ್ಯದಲ್ಲಿ:** ಜಿ. ಸಿ. ಐತಾಳ,
ಶ್ರೀ ಸರಸ್ವತೀ ಲಾಡ್ಜ್, ೫೨, ಗಾಂಧಿನಗರ,
ಬೆಂಗಳೂರು–೯. ಬೆಲೆ: ೧–೫೦

# ಸಂಪಾದಕೀಯ

## ಶ್ರೀಮನ್ಮಹಾರಾಜರ ಅಮೃತೋಪದೇಶ

"ಭಾರತೀಯ ಭಾಷೆಗಳೆಲ್ಲವೂ ಭರತಮಾತೆಯ ದಿವ್ಯ ಕಂಠವನ್ನು ಅಲಂಕರಿಸಿರುವ ಹೂವಿನ ಮಾಲೆಯಂತೆ ಕಂಗೊಳಿಸುತ್ತಿವೆ ಎಂದು ಹಿರಿಯರೊಬ್ಬರುಹೇಳಿರುತ್ತಾರೆ. ಒಂದೇ ಧರ್ಮ ಮತ್ತು ಸಂಸ್ಕೃತಿಯಿಂದ ಸ್ಫೂರ್ತಿಗೊಂಡಿರುವ ಭಾರತೀಯ ಭಾಷೆಗಳು ಪರಸ್ಪರ ಪೋಷಕವಾಗುವಂತೆ ಭಾವೈಕ್ಯವನ್ನು ಸಾಧಿಸುವ ಕಾರ್ಯದಲ್ಲಿ ನಮ್ಮ ರಾಷ್ಟ್ರದ ವಿದ್ವಾಂಸರು ಹೆಚ್ಚು ಹೆಚ್ಚು ಪ್ರಯತ್ನಿಸಬೇಕೆಂದು ನಾವು ಹೇಳಬಯಸುತ್ತೇವೆ" ಎಂದು ಮೈಸೂರಿನ ರಾಜ್ಯಪಾಲರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರು ಈ ತಿಂಗಳು ೧೦ನೇ ತಾರೀಖು ಕನ್ನಡ ಸಾಹಿತ್ಯ ಪರಿಷತ್ತಿನ "ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ"ದ ನೂತನ ಕಟ್ಟಡದ ಪ್ರವೇಶೋತ್ಸವ ಹಾಗೂ ಕನ್ನಡ-ಕನ್ನಡ ನಿಘಂಟಿನ ಮುದ್ರಣದ ಪ್ರಾರಂಭೋತ್ಸವವನ್ನು ನೆರವೇರಿಸುತ್ತ ಅಪ್ಪಣೆ ಕೊಡಿಸಿದ ಅಮೃತ ವಾಕ್ಯಗಳು ಇಂದು ವಿದ್ವಾಂಸರು ನಿರ್ವಹಿಸಬೇಕಾಗಿರುವ ಕರ್ತವ್ಯವನ್ನು ಸೂಚಿಸುತ್ತಿವೆ. ಭಾಷೆ ಹಾಗೂ ಜಾತಿಗಳ ಹೆಸರಿನಲ್ಲಿ ನಡೆದಿರುವ ಕಲಹಗಳು, ವಿವಾದಗಳು ಭಾರತದ ಅಂತಃಶಕ್ತಿಯನ್ನು ನಿರ್ವೀರ್ಯಗೊಳಿಸಿ ರಾಷ್ಟ್ರದ ಐಕಮತ್ಯವನ್ನು ಭಗ್ನಗೊಳಿಸುವುವೆಂಬ ಭಯ ವಿವೇಕಿಗಳಲ್ಲಿ ಉಂಟಾಗಿರುವುದು ಸಹಜವಾಗಿದೆ. ರಾಜಕೀಯ ಚದುರಂಗದಾಟದಲ್ಲಿ ತೊಡಗಿರುವ ನಾಯಕರಿಂದ ಈ ಬೃಹತ್ ಸಮಸ್ಯೆಯ ಪರಿಹಾರ ಅಸಂಭವ, ಎಂಬ ನಂಬಿಕೆಯು ಬಲಗೊಳ್ಳತೊಡಗಿದೆ. ರಾಜಕಾರಣಿ ಭಾವೈಕ್ಯವನ್ನು ಸಾಧಿಸಲಾರ – ಎಂಬ ಸತ್ಯವು ಸ್ಪಷ್ಟವಾಗತೊಡಗಿದೆ. ರಾಷ್ಟ್ರವನ್ನು ಇಂದು ಆಕ್ರಮಿಸಿರುವ, ಅನೈಕಮತ್ಯ ಎಂಬ ಮಹಾ ಮಾರಿಯಿಂದ ಕಾಪಾಡಿ ಭಾವೈಕ್ಯವನ್ನು ನೆಲೆಗೊಳಿಸಲು ರಾಷ್ಟ್ರದ ವಿದ್ವಾಂಸರೇ ಸಮರ್ಥರು ಎಂಬ ಸತ್ಯ ಸಂದೇಶವನ್ನು ದಾರ್ಶನಿಕರೂ, ವಿದ್ವನ್ಮಣಿಗಳೂ, ರಾಷ್ಟ್ರ ನಾಯಕರೂ ಆದ ಶ್ರೀಮನ್ಮಹಾರಾಜರು ನೀಡಿರುವುದು ಕಾಲೋಚಿತವೂ ಹಾಗೂ ಸ್ವಾಗತಾರ್ಹವೂ ಆಗಿದೆ. ಶ್ರೀಮನ್ಮಹಾರಾಜರ ಹೆಬ್ಬಯಕೆಯನ್ನು ನೆರವೇರಿಸುವುದು ಸಾಹಿತ್ಯ ಸಂಸ್ಥೆಗಳ ಕರ್ತವ್ಯವಾಗಿದೆ.

ಶ್ರೀಮನ್ಮಹಾರಾಜರು ತಮ್ಮ ಭಾಷಣದಲ್ಲಿ, "ಸಾಹಿತ್ಯದಲ್ಲಿ ಆಸಕ್ತಿಯೂ, ಕಲಾಭಿಮಾನವೂ, ವಿದ್ವಜ್ಜನ ಪ್ರೋತ್ಸಾಹವೂ ನಮಗೆ ವಂಶಪಾರಂಪರ್ಯವಾಗಿ ಬಂದ ಆಸ್ತಿ ಎಂದು ನಾವು ತಿಳಿದಿದ್ದೇವೆ . . . ಅವರಂತೆಯೇ ಆ ಕ್ಷೇತ್ರಗಳಲ್ಲಿ ಸಾಕಷ್ಟು ಪ್ರೋತ್ಸಾಹವನ್ನು ನೀಡಿ, ನಮ್ಮ ನಾಡಿನ ಮತ್ತು ಸಂಸ್ಕೃತಿಯ ಸೇವೆಯನ್ನು ಮಾಡಬೇಕೆಂದಿರುವುದು ನಮ್ಮ ಹೆಬ್ಬಯಕೆಯಾಗಿದೆ" ಎಂದು ನಿರೂಪಿಸಿರುವುದು ಅವರ ಹಿರಿಮೆ ಹಾಗೂ ಮಹಾವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ. ಅರಸೊತ್ತಿಗೆಯನ್ನು ನಿರ್ಮೂಲ ಮಾಡಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಿ ಪ್ರಜಾಪ್ರತಿನಿಧಿಗಳಾಗಿ ಅಧಿಕಾರ ಸೂತ್ರವನ್ನು ವಹಿಸಿಕೊಂಡಿರುವ ರಾಷ್ಟ್ರನಾಯಕರು, ವಿದ್ವಜ್ಜನ ಪ್ರೋತ್ಸಾಹವೂ ಸಂಸ್ಕೃತಿಯ ಸೇವೆಯೂ ಪ್ರಜಾ ಸರ್ಕಾರದ ಪ್ರಮುಖ ಕರ್ತವ್ಯವೆಂಬುದನ್ನು ಮನಗಾಣಬೇಕು. ಶ್ರೀಮನ್ಮಹಾರಾಜರು ಅಪ್ಪಣೆ ಕೊಡಿಸಿರುವಂತೆ ಸಮಾಜದ ಉನ್ನತಿಗೂ, ಸಾಹಿತ್ಯದ ಉನ್ನತಿಗೂ ನಿಕಟವಾದ ಬಾಂಧವ್ಯವುಂಟೆಂಬುದನ್ನು ಅರಿತುಕೊಳ್ಳಬೇಕು. ಸಾಹಿತ್ಯ ಮತ್ತು ಕಲಾಭಿವೃದ್ಧಿಯನ್ನು ಕಡೆಗಣಿಸಿ ರಾಷ್ಟ್ರಪ್ರಗತಿಯನ್ನು ಸಾಧಿಸುವುವೆಂಬ ಹಗಲುಗನಸಿನಿಂದ ನಮ್ಮ ನಾಯಕರು ಎಚ್ಚತ್ತುಕೊಳ್ಳಬೇಕು. ರಾಷ್ಟ್ರದಲ್ಲಿ ಭಾವೈಕ್ಯವನ್ನು ಸ್ಥಾಪಿಸಲು ವಿದ್ವಾಂಸರೇ ಶಕ್ತರು, ಎಂಬ ಸತ್ಯವನ್ನು ಕಂಡುಕೊಳ್ಳಬೇಕು. ಕೇವಲ ಮದ್ದುಗುಂಡುಗಳಿಂದಲೇ ರಾಷ್ಟ್ರ ರಕ್ಷಿಸಬಲ್ಲೆವೆಂಬ ಮೂಢ ನಂಬಿಕೆಯಿಂದ ದೂರಾಗಬೇಕು. ಹೀಗಾದಾಗ ರಾಷ್ಟ್ರವು ಪರಕೀಯ ಆಕ್ರಮಣವನ್ನು ಎದುರಿಸಲು ಸಮರ್ಥವಾದೀತು, ಅಂತಃಕಲಹಗಳಿಂದ ಅದು ಮುಕ್ತವಾದೀತು.

ರಾಷ್ಟ್ರದಲ್ಲಿ ಭಾವೈಕ್ಯ ಸಾಧನೆಯ ಪ್ರಯತ್ನ ನಡೆದಿಲ್ಲವೆಂತಲ್ಲ. ರಾಷ್ಟ್ರೀಯ ಕವಿಸಮ್ಮೇಳನ, ಭಾವೈಕ್ಯ ಸಮ್ಮೇಳನ, ಆಕಾಶವಾಣಿ ಕಾರ್ಯಕ್ರಮಗಳು ಇತ್ಯಾದಿಗಳು ಆಗಾಗ್ಗೆ ನಡೆಯುತ್ತಲೇ ಬಂದಿವೆ. ಈ ಸಮ್ಮೇಳನಗಳಿಗೆ ಪ್ರತಿನಿಧಿಗಳನ್ನು ಆಯ್ಕೆ ಮಾಡುವಾಗ, ಸಮ್ಮೇಳನಗಳನ್ನು ನಡೆಸುವಾಗ, ಸ್ವಾರ್ಥ, ಸ್ವಜನ ಪಕ್ಷಪಾತಗಳು ಮೇಲುಗೈಯಾಗಿ ಮೂಲೋದ್ದೇಶವೇ ಬಲಿಯಾದ ಸಂದರ್ಭಗಳು ಇಲ್ಲದಿಲ್ಲ. ವಿದ್ವಜ್ಜನ ಪ್ರೋತ್ಸಾಹದ ಕಾರ್ಯದಲ್ಲಿಯೂ

ಸ್ವಾರ್ಥಿಗಳ ಕೈವಾಡ ಇಲ್ಲವೆಂತಲ್ಲ; ತಮಗೆ ಪ್ರಿಯರಾದ ವರಿಗೆ ಪ್ರೋತ್ಸಾಹ ಪ್ರಶಸ್ತಿಗಳು—ಇಂಥ ಕುಹಕ ಕುತಂತ್ರಗಳಿಂದ ಸಾಹಿತ್ಯ ಕಲಾರಂಗಗಳು ಕಲುಷಿತವಾದರೆ ದೇಶದ ಭವಿಷ್ಯ ಭಯಾನಕವಾಗುತ್ತದೆ, ಎಂದು ಹೇಳಬಹುದು. ರಾಷ್ಟ್ರದ ಹಿತದೃಷ್ಟಿಯಿಂದ ಸಾಹಿತ್ಯ ಹಾಗೂ ಕಲಾಕ್ಷೇತ್ರಗಳನ್ನು ಜಾತೀಯತೆ ಹಾಗೂ ಪ್ರಾಂತೀಯತೆಗಳೆಂಬ ಪೆಡಂಭೂತದಿಂದ ರಕ್ಷಿಸುವುದು ಭಾರತೀಯರ ಕರ್ತವ್ಯವಾಗಿದೆ. ಸಾಹಿತ್ಯ ಹಾಗೂ ಕಲಾ ರಂಗಗಳು ಯಾವುದೇ ಒಂದು ಕೋಮಿನ ಸ್ವತ್ತಾಗಬಾರದು. ಅಲ್ಲಿ ಎಲ್ಲರಿಗೂ ಉಚಿತವಾದ ಅವಕಾಶ ಹಾಗೂ ಪ್ರೋತ್ಸಾಹ ದೊರೆಯುವಂತಾಗಬೇಕು.

ದೇಶದ ಇತ್ತೀಚಿನ ಘಟನೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಮನನೊಂದ ಶ್ರೀಮನ್ಮಹಾರಾಜರು, ರಾಷ್ಟ್ರದ ವಿದ್ವಾಂಸರು ರಾಷ್ಟ್ರೀಯ ಭಾವೈಕ್ಯವನ್ನು ಸಾಧಿಸಲು ಸನ್ನದ್ಧರಾಗಬೇಕೆಂದು ಆಶಿಸಿದ್ದಾರೆ. ಒಳ್ಳೆಯದನ್ನು ನೋಡುವ, ಕೇಳುವ, ಹೇಳುವ, ಪ್ರೋತ್ಸಾಹಿಸುವ ಮನೋಧರ್ಮ ನಮ್ಮಲ್ಲಿ ಜಾಗೃತಗೊಂಡರೆ ಭಾವೈಕ್ಯ ಸಾಧನೆಯ ಕಾರ್ಯ ಸುಗಮವಾದೀತು.

ಕರ್ನಾಟಕ ರಾಜ್ಯೋದಯವಾದ ಮೇಲೆ ಇಂದಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ನೇತೃತ್ವದಲ್ಲಿ ಪರಿಷತ್ತು ಸಾಧಿಸಿರುವ ಉಪಯುಕ್ತವಾದ ಮತ್ತು ಪ್ರಗತಿಪರವಾದ ಕೆಲಸಗಳು ಶ್ರೀಮನ್ಮಹಾರಾಜರಿಗೆ ತೃಪ್ತಿಯನ್ನುಂಟುಮಾಡಿರುವುದು ಸಂತಸದ ಸಂಗತಿ. ಕಳೆದ ಮೂರು ವರ್ಷಗಳಲ್ಲಿ ಅನೇಕ ಮಹತ್ಕಾರ್ಯಗಳು ಜರುಗಿವೆ. ಕನ್ನಡ–ಕನ್ನಡ ನಿಘಂಟಿನ ವಿಚಾರದಲ್ಲಿ ಪರಿಷತ್ತು ರಾಜ್ಯ ಸರ್ಕಾರದೊಂದಿಗೆ ೧೯೬೧ ರಲ್ಲಿ ಮಾಡಿಕೊಂಡ ಒಪ್ಪಂದ, ಸುಮಾರು ೬೦ ಸಹಸ್ರ ರೂಪಾಯಿ ಬೆಲೆಬಾಳುವ "ಬಿ.ಎಂ. ಶ್ರೀಕಂಠಯ್ಯ ನೂತನ ಅಚ್ಚುಕೂಟ" ಸುಮಾರು ೩೦ ಸಹಸ್ರ ರೂಪಾಯಿ ಬೆಲೆ ಬಾಳುವ ನವೀನ ಕಟ್ಟಡ, ಸರಸ್ವತೀ ಪುಸ್ತಕ ಭಂಡಾರದ ಬೆಳವಣಿಗೆ, ಕನ್ನಡ - ಕನ್ನಡ ನಿಘಂಟಿನ ಮುದ್ರಣಾರಂಭ, ಗಡಿ ಪ್ರದೇಶಗಳಲ್ಲಿ ಕನ್ನಡ ಪ್ರಚಾರ, ಹೊಸದತ್ತಿಗಳ ಸಂಪಾದನೆ– ಇವೇ ಮೊದಲಾದವುಗಳು ಕಳೆದ ಮೂರು ವರುಷಗಳ ಅವಧಿಯಲ್ಲಿ ಜರುಗಿದ ಗಣನೀಯ ಕೆಲಸಗಳು. ಸರ್ಕಾರ ಹಾಗೂ ಸಾರ್ವಜನಿಕರ ಪ್ರೋತ್ಸಾಹ ದೊರೆತರೆ ಇನ್ನೂ ಅನೇಕ ಕಾರ್ಯಗಳನ್ನು ಸಾಧಿಸಲು ಸಾಧ್ಯವಿದೆ. ನಾಡಿನ ಸಾಹಿತಿಗಳು, ಕಲಾವಿದರು, ವಿದ್ವಾಂಸರು ಪರಿಷತ್ತಿನ ಅಭಿವೃದ್ಧಿ ಕಾರ್ಯದಲ್ಲಿ ಸಹಕರಿಸಬೇಕು. ಪರಿಷತ್ತಿನ ಅಧಿಕಾರಿಗಳೊಂದಿಗೆ ಕಲೆತು ಕಾರ್ಯ ಮಾಡಬೇಕು. ಪರಿಷತ್ತಿನ ಹಿತೈಷಿಗಳು ಈ ಕಾರ್ಯ ಮಾಡುತ್ತ ಬಂದಿರುವುದು ಸಮಾಧಾನದ ವಿಷಯ. ಕೆಲವು ಜನ ಮಹನೀಯರು ಪರಿಷತ್ತಿನಿಂದ ದೂರವಿರುವ ಅಭ್ಯಾಸವನ್ನು ಬೆಳಸಿಕೊಂಡಿರುವುದು ದುಃಖದ ಸಂಗತಿ. ಅವರು ಇನ್ನಾದರೂ ತಮ್ಮ ನೀತಿಯನ್ನು ಬದಲಾಯಿಸಿಕೊಂಡು ಪರಿಷತ್ತಿನ ಮೂಲಕ ನಾಡು ನುಡಿಗಳ ಸೇವೆಯನ್ನು ಮಾಡುವುದು ವಿಹಿತವೆಂದು ನಾವು ಸೂಚಿಸದೆ ಇರಲಾರೆವು. ಪರಿಷತ್ತನ್ನು ಟೀಕಿಸುವುದೇ ತಮ್ಮ ನೀತಿ ಎಂದು ಭಾವಿಸಿ ಮಿಥ್ಯಾರೋಪಗಳನ್ನು ಮಾಡುವುದರಲ್ಲಿ ನಿರತರಾದ ಸ್ನೇಹಿತರು ಸತ್ಯದ ಮುಖಕ್ಕೆ ಮಸಿ ಬಳಿಯುವ ಕಾರ್ಯವನ್ನು ನಿಲ್ಲಿಸಿ ರಚನಾತ್ಮಕ ಸಲಹೆ ಸೂಚನೆಗಳನ್ನು ನೀಡಲು ಮುಂದೆ ಬರಲಿ. ಸರ್ಕಾರವು ಸಾಹಿತ್ಯ ಹಾಗೂ ಕಲಾಭಿವೃದ್ಧಿ ಕಾರ್ಯಗಳಿಗೆ ಹೆಚ್ಚು ಹೆಚ್ಚು ಸಹಾಯ ಪ್ರೋತ್ಸಾಹಗಳನ್ನು ನೀಡಲಿ. ತುರ್ತು ಪರಿಸ್ಥಿತಿಯ ನೆಪ ಮುಂದೆ ಮಾಡಿ ತನ್ನ ಕರ್ತವ್ಯದಿಂದ ಜಾರಿಕೊಳ್ಳದಿರಲಿ. ಕನ್ನಡದ ಕಲೆ ಹಾಗೂ ಸಾಹಿತ್ಯಕ್ಕೆ ಸಂಬಂಧಿಸಿದ ಎಲ್ಲಾ ಕಾರ್ಯಗಳನ್ನೂ ಸಾಹಿತ್ಯ ಪರಿಷತ್ತಿಗೆ ಒಪ್ಪಿಸಿ ಅವುಗಳಿಗೆ ಅಗತ್ಯವಾದ ನೆರವನ್ನು ನೀಡಲಿ.

ಪರಿಷತ್ತನ್ನು ನಡೆಸುತ್ತಿರುವ ವ್ಯಕ್ತಿಗಳಿಗಿಂತಲೂ ಪರಿಷತ್ತು ದೊಡ್ಡದು ಮತ್ತು ಶಾಶ್ವತವಾದುದು. ಅದನ್ನು ಬೆಳೆಸುವ ಹೊಣೆ ಎರಡೂವರೆ ಕೋಟಿ ಕನ್ನಡಿಗರಿಗೆ ಸೇರಿದೆ. ವೈಯಕ್ತಿಕ ಭಿನ್ನಾಭಿಪ್ರಾಯ, ದ್ವೇಷ, ಮತ್ಸರಗಳಿಗೆ ಈ ಸಂಸ್ಥೆಯ ಹಿತ ಬಲಿಯಾಗದಂತೆ ಕನ್ನಡಿಗರು ನೋಡಿಕೊಳ್ಳುವರೆಂದು ನಾವು ನಂಬಿದ್ದೇವೆ. ಕನ್ನಡ ಭಾಷೆ, ಸಾಹಿತ್ಯ, ಕಲೆ ಮತ್ತು ಸಂಸ್ಕೃತಿಯ ಅಭಿವೃದ್ಧಿ ಕಾರ್ಯಗಳಲ್ಲಿ ತನ್ನ ಪಾತ್ರವೇನೆಂಬುದನ್ನು ಅರಿತು ಪ್ರತಿಯೊಬ್ಬ ಕನ್ನಡಿಗನೂ ವರ್ತಿಸಿದರೆ ಶ್ರೀಮನ್ಮಹಾರಾಜರ ಹೆಬ್ಬಯಕೆ ಈಡೇರುವುದರಲ್ಲಿ ಸಂದೇಹವೇ ಇಲ್ಲ. ಆ ಸುಸಮಯ ಬೇಗ ಸನ್ನಿಹಿತವಾಗಲೆಂದು ನಾವು ಹಾರೈಸುತ್ತೇವೆ.

**ಡಾ. ಸಂಗಮೇಶ್ವರ ಸರದಾರರಿಗೆ ಸುವರ್ಣ ಪದಕ**

ರಾಯಚೂರಿನ ಸುಪ್ರಸಿದ್ಧ ದಂತವೈದ್ಯರೂ, ನಗರಸಭೆಯ ಉಪಾಧ್ಯಕ್ಷರೂ, ಅಖಿಲ ಭಾರತ ದಂತಸಂಸ್ಥೆಯ ಮಾಜಿ ಉಪಾಧ್ಯಕ್ಷರೂ, ಮೈಸೂರು ರಾಜ್ಯ ಶಾಖೆಯ ಮಾಜಿ ಅಧ್ಯಕ್ಷರೂ, ಕನ್ನಡ ನಾಡು ನುಡಿಗಳ ಉಜ್ವಲ ಅಭಿಮಾನಿಗಳೂ ಆದ ಡಾ. ಸಂಗಮೇಶ್ವರ ಸರದಾರರಿಗೆ ಅಮೇರಿಕೆಯ ವಾಷಿಂಗ್‌ಟನ್ನಿನ ಇಂಟರ್ ನ್ಯಾಷನಲ್

ಕಾಲೇಜ್ ಆಫ್ ಡೆಂಟಿಸ್ಟ್ಸ್ ಸಂಸ್ಥೆಯು ಎಫ್. ಆಯ್. ಸಿ. ಡಿ. ಎಂಬ ಗೌರವ ಪದವಿಯನ್ನೂ ಮತ್ತು ಸುವರ್ಣ ಪದಕವನ್ನೂ ನೀಡಿರುವುದು ಕನ್ನಡಿಗರಿಗೆ ಹೆಮ್ಮೆ ಹರ್ಷಗಳ ವಿಷಯವಾಗಿದೆ. ಡಾ. ಸರದಾರರು ಇಂಥ ಗೌರವವನ್ನು ಪಡೆದ ಪ್ರಥಮ ಕನ್ನಡಿಗರು. ಡಾ. ಸಂಗಮೇಶ್ವರರು ಉತ್ಸಾಹಿ ತರುಣರು, ನಿಷ್ಕಾಮ ಕರ್ಮಿಗಳು, ಸಮರ್ಥ ವೈದ್ಯರು, ನಿಗರ್ವಿಗಳು, ಕರ್ತವ್ಯದಕ್ಷರು, ಸಾಹಿತ್ಯ ಪ್ರೇಮಿಗಳು. ಅವರಿಗೆ ಉಜ್ವಲ ಭವಿಷ್ಯವಿದೆ.

ಅಂತರ್ರಾಷ್ಟ್ರೀಯ ಗೌರವವನ್ನು ಪಡೆದ ಕನ್ನಡಿಗರಾದ ಡಾ. ಸಂಗಮೇಶ್ವರರಿಗೆ "ನುಡಿ" ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

## ಕಂಬನಿ

ಬ್ಯಾರಿಸ್ಟರ್ ಎಂ. ಎಸ್. ಸರದಾರರು ನಮ್ಮನ್ನಗಲಿದರು. ಬ್ಯಾ. ಸರದಾರರು ಹಿರಿಯ ಕನ್ನಡಿಗರು. ಕಳೆದ ೪೦ ವರ್ಷಗಳಿಂದಲೂ ನಾಡ ಏಕೀಕರಣಕ್ಕಾಗಿ, ಸಮಾಜದ ಉತ್ಕರ್ಷೆಗಾಗಿ, ತನುಮನ ಧನಗಳಿಂದ ದುಡಿದ ಬ್ಯಾ. ಸರದಾರರು ನಾಡಿನ ಪ್ರಮುಖ ವ್ಯಕ್ತಿಯಾಗಿದ್ದರು. "ತುಂಬಿದುದು ತುಳಕದು ನೋಡಾ" ಎಂಬ ಜಾಣ್ನುಡಿ ಬ್ಯಾ. ಸರದಾರರಿಗೆ ಪೂರ್ಣವಾಗಿ ಅನ್ವಯಿಸುವುದು. ನಿರಹಂಕಾರ, ನಿರಾಡಂಬರ, ನಿಷ್ಕಾಮಕರ್ಮಗಳಿಗೆ ಹೆಸರಾದ ಬ್ಯಾ. ಸರದಾರರು ಕೆಲವು ಕಾಲ ನ್ಯಾಯಮೂರ್ತಿಗಳಾಗಿ ನ್ಯಾಯಾಂಗಕ್ಕೆ ಅನುಪಮ ಸೇವೆ ಸಲ್ಲಿಸಿದರು. ಏಕೀಕರಣದ ನಂತರ ಅವರು ಬೆಂಗಳೂರಿಗೆ ಬಂದು ನ್ಯಾಯವಾದಿ (Advocate) ಯಾಗಿ ಬಾಳಿದರು. ಸಾಹಿತ್ಯ ಪರಿಷತ್ತಿನೊಂದಿಗೆ ಅವರು ನಿಕಟವಾದ ಸಂಬಂಧವನ್ನಿರಿಸಿಕೊಂಡಿದ್ದರು. ಅಂತೆಯೇ ಕಳೆದ ತಿಂಗಳು ಪರಿಷತ್ತು ದುಃಖಸೂಚಕ ಸಭೆಯನ್ನು ಏರ್ಪಡಿಸಿ ಸರದಾರರಿಗೆ ಬಾಷ್ಪಾಂಜಲಿಗಳನ್ನು ಸಲ್ಲಿಸಿತು. ಬ್ಯಾ. ಸರದಾರರ ಮರಣವು ಕರ್ಣಾಟಕಕ್ಕೆ ತುಂಬಿಬರಲಾರದ ಹಾನಿ.

ಇದೇ ತಿಂಗಳು ೧೨ ನೇ ತಾರೀಖು ನಿವೃತ್ತ ಅಧಿಕಾರಿಗಳೂ, ಗಣ್ಯ ಸಮಾಜ ಸೇವಕರೂ, ಪ್ರಮುಖ ವ್ಯಕ್ತಿಗಳೂ ಆದ ಶ್ರೀ ಡಿ. ಆರ್. ಚನ್ನರುದ್ರಯ್ಯನವರು ಲಿಂಗೈಕ್ಯರಾದರು. ಶ್ರೀ ಚನ್ನರುದ್ರಯ್ಯನವರು ಪರೋಪಕಾರಿಗಳೂ, ಅಜಾತಶತ್ರುಗಳೂ, ಸಮರ್ಥ ಅಧಿಕಾರಿಗಳೂ, ನಿಷ್ಕಾಮ ಕರ್ಮಿಗಳೂ, ವಿನೀತರೂ ಆದ ವ್ಯಕ್ತಿಗಳೆಂದು ಪ್ರಸಿದ್ಧರಾಗಿದ್ದರು. ಅವರು ಕನ್ನಡ ಸಾಹಿತ್ಯ ಪ್ರೇಮಿಗಳೂ, ಗಮಕಿಗಳೂ ಮತ್ತು ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯರೂ ಆಗಿದ್ದರು. ಅವರು ಅನೇಕ ಸಂಘ ಸಂಸ್ಥೆಗಳೊಂದಿಗೆ ಸಂಪರ್ಕವಿರಿಸಿಕೊಂಡಿದ್ದರು. ಅವರಿಂದ ಇನ್ನೂ ಅನೇಕ ಮಹತ್ಕಾರ್ಯಗಳು ಜರುಗಬೇಕಾಗಿತ್ತು. ಅವರ ನಿಧನದಿಂದ ಸಮಾಜಕ್ಕೆ ಬಹಳ ನಷ್ಟವಾಯಿತು. ಈ ಈರ್ವ ಹಿರಿಯ ಕನ್ನಡಿಗರಿಗೆ "ನುಡಿ" ಶ್ರದ್ಧಾಂಜಲಿಗಳನ್ನು ಸಲ್ಲಿಸುತ್ತದೆ.

---



ಸಂಪಾದಕರು: ಶ್ರೀ ಅನ್ನದಾನಯ್ಯ ಪುರಾಣಿಕ, ಬಿ.ಕಾಮ್., ಎಲ್ಎಲ್.ಬಿ. ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ. ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು-೧೮

# ಸಾದರ ಸ್ವೀಕಾರ

**ಇಲಿನಾಯ್‌ನಲ್ಲಿ ಲಿಂಕನ್:** ಅನುವಾದಕರು: ಶ್ರೀ ಎಂ. ರಾಮಮೂರ್ತಿ; ಪ್ರಕಾಶಕರು: ಪ್ರಗತಿ ಪ್ರಕಟನಾಲಯ; ಸೈಜು ೧/೮ ಕ್ರೌನ್; ಪುಟ ೧೪೨; ಬೆಲೆ ರೂ. ೨–೫೦ ನ.ಪೈ.

*** ಹಿಮಗಿರಿಯ ಮುಡಿಯಲ್ಲಿ:** ಲೇಖಕರು: ಶ್ರೀ ಬಿ. ಎ. ಸನದಿ; ಪ್ರಕಾಶಕರು: ಚೇತನ ಪ್ರಕಾಶನ, ಬೆಳಗಾಂವಿ; ಸೈಜು ೧/೮ ಕ್ರೌನ್; ಪುಟ ೪೬; ಬೆಲೆ ೮೦ ನ.ಪೈ.

**ಪ್ರಹ್ಲಾದ ಚರಿತಂ ನಾಮ ನಾಟಕಂ** (ಸಂಸ್ಕೃತ ನಾಟಕ–ದೇವನಾಗರಿ ಲಿಪಿ): ಲೇಖಕರು: ಶ್ರೀ ಶ್ರೀಮತ್ಸ್ವರ್ಣಜ್ಞ್ಲೇಂದ್ರಯತಿ ವಿರಚಿತ; ಸೈಜು ೧/೮ ಕ್ರೌನ್; ಪುಟ ೨೨; ಬೆಲೆ ೨೫ ನ.ಪೈ.

*** ಶ್ರೀ ನವಿಲುಗುಂದ ಗವಿಮಠದ ಪುಣ್ಯಮೂರ್ತಿ:** ಲೇಖಕರು: ಶ್ರೀ ಎಸ್. ಎಸ್. ಭೂಸನೂರ್ಮಠ, ಕೊಣ್ಣೂರ (ನರಗುಂದ); ಪ್ರಕಾಶಕರು: ಶ್ರೀ ಆರ್. ಎಂ. ಕಳ್ಳಿ ಕೊಂಕಣಪ್ಪ; ಸೈಜು ೧/೮ ಫುಲ್‌ಸ್ಕೇಪ್; ಪುಟ ೫೬; ಬೆಲೆ ೨೫ ನ.ಪೈ.

**ವಿಭೂತಿ ವೈಷ್ಣವ** (ವಿಚಾರಾತ್ಮಕ ನಗೆ ನಾಟಕ): ಲೇಖಕರು: ಶ್ರೀ ಗೋ. ಅ. ನಾರಾಯಣ; ಪ್ರಕಾಶಕರು: ಜಯಲಕ್ಷ್ಮಿ ಪ್ರಕಾಶನ, ಬೆಂಗಳೂರು–೩; ಸೈಜು ೧/೮ ಫುಲ್‌ಸ್ಕೇಪ್; ಪುಟ ೭೪; ಬೆಲೆ ರೂ. ೧–೨೫ ನ.ಪೈ.

**ಶ್ರೀ ಸ್ವರ್ಣವಲ್ಲೀ ದರ್ಶನ:** ಲೇಖಕರು: ಶ್ರೀ ತಡ್ಡಲಸೆ ವಿಘ್ನೇಶ್ವರ ಶರ್ಮಾ; ಸೈಜು ೧/೮ ಫುಲ್‌ಸ್ಕೇಪ್; ಪುಟ ೨೪; ಬೆಲೆ ೨೫ ನ.ಪೈ.

**ದೇವರ ದಾಸಿಮಯ್ಯ:** ಲೇಖಕರು: ಶ್ರೀ ಆರ್. ನ್ಯಾತ್ಮಂಜಯ; ಪ್ರಕಾಶಕರು: ಶ್ರೀ ವೀರಶೈವ ಸದ್ಧರ್ಮವರ್ಧಿನೀ ಸಂಘ; ಸೈಜು ೧/೮ ಕ್ರೌನ್; ಪುಟ ೨೦; ಬೆಲೆ ೨೫ ನ.ಪೈ.

**ಭಕ್ತಿವಿಲಾಸ:** ಲೇಖಕರು: ಶ್ರೀ ಹಿಮಾಲಯಾ ರಾಜರ್ಷಿ ಬಾಲಸನ್ಯಾಸಿಯವರು; ಪ್ರಕಾಶಕರು: ಶ್ರೀ ಪರಾಶಕ್ತಿ ಆಶ್ರಮ, ಬೆಂಗಳೂರು; ಸೈಜು ೧/೮ ಕ್ರೌನ್; ಪುಟ ೩೨.

**ಷಡ್ಗುಣಗಳು:** ಲೇಖಕರು: ಶ್ರೀ ಹಿಮಾಲಯಾ ರಾಜರ್ಷಿ ಬಾಲಸನ್ಯಾಸಿಯವರು; ಪ್ರಕಾಶಕರು: ಶ್ರೀ ಪರಾಶಕ್ತಿ ಆಶ್ರಮ, ಬೆಂಗಳೂರು; ಸೈಜು ೧/೮ ಕ್ರೌನ್; ಬೆಲೆ ೫೦ ನ.ಪೈ.

**Conscience:** By Rajarishi Balasanyasi; Size 1/8 Crown; Pages 43; Price Re. 1.

**Bharatiya Samskrith Vidyapith Souvenir,** 1963; Chamarajpet, Bangalore-18.

**ಸರ್ಕಸ್:** (ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ); ಲೇಖಕರು: ಶ್ರೀ ಮಾಲಿ; ಅನುವಾದಕರು: ಶ್ರೀ ಕೆ. ಎಸ್. ಕರುಣಾಕರನ್; ಪ್ರಕಾಶಕರು: ಗೀತಾ ಬುಕ್ ಹೌಸ್, ಕೃಷ್ಣಮೂರ್ತಿಪುರಂ, ಮೈಸೂರು; ಸೈಜು ೧/೮ ಡೆಮ್ಮಿ; ಪುಟ ೯೫; ಬೆಲೆ ರೂ. ೧–೧೦ ನ.ಪೈ.

*** ಜೇಡಬಲೆಯ ಜಾಲಗಳು** (ಸಣ್ಣ ಕತೆಗಳ ಸಂಕಲನ): ಅನುವಾದಕರು: ಶ್ರೀ ಶಿವಾನಂದ ಜೋಶಿ; ಪ್ರಕಾಶಕರು: ಶ್ರೀ ಅರವಿಂದ ಗ್ರಂಥಾಲಯ, ಚಡಚಣ, ವಿಜಾಪುರ ಜಿಲ್ಲೆ: ಸೈಜು ೧/೮ ಕ್ರೌನ್; ಪುಟ ೧೨೯; ಬೆಲೆ ರೂ. ೧–೫೦ ನ.ಪೈ.

*** ನಾರದ ಜ್ಞಾನೋದಯ:** ಲೇಖಕರು: ಶ್ರೀ ಸವ್ಯಸಾಚಿ; ಪ್ರಕಾಶಕರು: ಭಾರ್ಗವ ಪ್ರಕಾಶನ, ಹಿರೇಮಗಳೂರು; ಸೈಜು ೧/೮ ಕ್ರೌನ್; ಪುಟ ೨೨; ಬೆಲೆ ೫೦ ನ.ಪೈ.

*** ಸಚಿತ್ರ ಬಾಲಬಂಧು:** ಲೇಖಕರು: ಶ್ರೀ ಸವ್ಯಸಾಚಿ; ಪ್ರಕಾಶಕರು: ಭಾರ್ಗವ ಪ್ರಕಾಶನ; ಸೈಜು ೧/೮ ಕ್ರೌನ್; ಪುಟ ೬೪; ಬೆಲೆ ೮೦ ನ.ಪೈ.

*** ಮನೋಲಹರಿ:** ಲೇಖಕರು: ಶ್ರೀ ಮದಗೊಂಡಹಳ್ಳಿ ಸುಂದರರಾಜ್; ಪ್ರಕಾಶಕರು: ಭಾರ್ಗವ ಪ್ರಕಾಶನ, ಹಿರೇಮಗಳೂರು; ಸೈಜು ೧/೮ ಕ್ರೌನ್; ಪುಟ ೬೦; ಬೆಲೆ ರೂ. ೧.

**ಶ್ರೀ ಕನ್ಯಕಾಪರಮೇಶ್ವರೀ ಪ್ರತಿಷ್ಠಾಪನಾ ಮಹೋತ್ಸವದ ಸವಿನೆನಪಿನ ಪ್ರಕಟನೆ:** ತಾ॥ ೧೦–೫–೧೯೬೩; ಪ್ರಕಾಶಕರು: ಆರ್ಯವೈಶ್ಯಮಂಡಲಿ, ವಿಶ್ವೇಶ್ವರಪುರಂ, ಬೆಂಗಳೂರು; ಪುಟ ೧೮೮.

*** ನಮ್ ಅಳ್ಳೀ ನಾಟ್ಕ:** ಲೇಖಕರು: ಶ್ರೀ ಸಿ. ಎಸ್. ವಿ. ಮೂರ್ತಿ; ಸೈಜು ೧/೮ ಕ್ರೌನ್; ಬೆಲೆ ೫೦ ನ.ಪೈ.

**ಹೃದಯ ಗೀತೆ:** ಲೇಖಕರು: ಡಾ॥ ಬಿ. ಈ. ಶೇಷಾದ್ರಿ, ಎಂ.ಡಿ.ಎಚ್.; ಪ್ರಕಾಶಕರು: ಭಾವ ಪ್ರಕಾಶನ, ಬಲಮುರಿ (ಕೊಡಗು); ಸೈಜು ೧/೮ ಫುಲ್‌ಸ್ಕೇಪ್; ಪುಟ ೩೬; ಬೆಲೆ ೫೦ ನ.ಪೈ.

*** ಮಹಾರಾಜ ಶ್ರೀ ಸ್ವಾತಿ ತಿರುನಾಳರ ಕೃತಿಗಳು ೧:** ಲೇಖಕರು: ಸಂಗೀತವಿದ್ವಾನ್ ಎಂ. ಆರ್. ಶಂಕರಮೂರ್ತಿ; ಪ್ರಕಾಶಕರು: ಗುರುಗುಹಗಾನನಿಲಯ, ಬೆಂಗಳೂರು–೨೦; ಪುಟ ೩೦; ಬೆಲೆ ರೂ. ೧.

---

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತದೆ.

Reg. No. B. G. 4—June 1963

Licensed to Post without pre-payment. License No 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಬೆಂಗಳೂರು–೧೮.



ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೬] ಸಂಪಾದಕರು: ಅನ್ನದಾನಯ್ಯ ಪುರಾಣಿಕ, ಬಿ.ಕಾಮ್., ಎಲ್‌ಎಲ್.ಬಿ. [ಸಂಚಿಕೆ ೭

★  ★

ಶ್ರೀ ಪುರಂದರದಾಸರು

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

# ವಿಷಯ ಸೂಚಿಕೆ



ಮುಖಚಿತ್ರ : ಶ್ರೀ ಪುರಂದರದಾಸರು

ಪಡಿಯಚ್ಚು : 'ಸುಬೋಧ' ಕೃಪೆಯಿಂದ.




ಸಂಪುಟ ೨೬ ]        ಜುಲೈ ೧೯೬೩        [ ಸಂಚಿಕೆ ೬

## " ನಾವೃತ್ತಪತ್ರ "

ಶ್ರೀ ಕರ್ಣಂ ವಿರೂಪಾಕ್ಷಗೌಡ, ನವಲಿ

" ಸತ್ಯವೇನೈ ಮನುಜ ನಾನಿಂದು ವೃದ್ಧ
ನನ್ನ ಕಹಳೆಯ ದನಿಯೆ ಜಾಗತಿಕ ಯುದ್ಧ;
ನನ್ನ ನೋಡಿದರುಂಟು ಎದೆಯಲ್ಲಿ ಒರತೆ.
ಎನಿತೊ ಶತಮಾನಗಳ ಭಾರತಿಯ ಚರಿತೆ;
ಆಳ್ವರಸ ಚಕ್ರಾಧಿಪತಿ ಮತ್ತೆ ಜನರ.
ಹುಟ್ಟು ಸಾವುಗಳವರ ಮತ, ಪಂಥ ಸಮರ;
ಮೆತ್ತಿಹುದು ಸುಖದುಃಖವೆನ್ನ ಪುಟದೊಳಗೆ,
ಆದರೂ ನಾಮೌನ ನಾಯೆಲ್ಲ ಬಗೆಗೆ;
ಕಣ್ಣಿಟ್ಟು ಎನ್ನೊಡಲನೀಕ್ಷಿಸಿದರಲ್ಲಿ,
ಬರಿಯ ಕಲೆಗಳ ಗುರುತು ನೋಡುವಿರೊ-ನಿಲ್ಲಿ;
ಧಂಗೆಗಳು ಧಂಗೆಗಳು ನೆತ್ತರಿನ ಹೊಳೆಯು,
ಕೂಗುಗಳು ಕೇಕೆಗಳು ಬರಸಿಡಿಲ ಮಳೆಯು;
ಎದೆಯೊಡೆದು ಗುಂಡುಗಳು ಹಾರಿದಾ ನಾದ,
ಎದೆ ಕುದಿದು ಗಂಡುಗಳು ಕಾದಿದಾ ಮೋದ;
'ಪರಕೀಯ' 'ಪರತಂತ್ರ' ವೆಂಬುದನು ಕಳೆಯೆ,
'ಸ್ವಾತಂತ್ರ್ಯ ಸಾಮ್ರಾಜ್ಯ' ವೆಂಬುದನು ಕಳೆಯೆ;
ಎನಿತೆಲ್ಲ ಸಾವುಗಳು ಸೋಲುಗೆಲವುಗಳು,
ಮುಳುಗಿಹವು ಮಾಸಿದಾ ಎನ್ನ ಪುಟಗಳೊಳು;
ನನ್ನ ಜೀವನಕಂದು ತಾರುಣ್ಯವಿತ್ತು,
ನಾನಿತ್ತ ಸ್ಫೂರ್ತಿಯೋ-ನಿಮಗೇನು ಗೊತ್ತು;
ನಾವೃದ್ಧನಿಂದೆಂದು ಹಿಂದುಳಿಯಲಾರೆ,
ಬಿಸಿರಕ್ತ ಕುದಿದೇಳ್ವ ಚೇತನದ ಧಾರೆ;
ನನ್ನ ಘೋಷದ ಧನಿಗೆ ಓಗೊಟ್ಟು ಏಳು,
ರಾಜ್ಯ ಸಾಮ್ರಾಜ್ಯಗಳ ಕಟ್ಟಿಸಲೆ ಬಾಳು."

# ಕನ್ನಡದ ಕಾವ್ಯಬ್ರಹ್ಮ ಗೋವಿಂದ ಪೈ

ಲೇ : ಶ್ರೀ ಮ. ವಿ. ನಾಯಕ

ಇದು ಹದಿನೈದು ವರ್ಷಗಳ ಹಿಂದಿನ ಮರೆಯಲಾಗದ ಘಟನೆ, ಅಪೂರ್ವ ಅನುಭವ.

ಸ್ಥಳ—ಮಾತುಂಗಾದಲ್ಲಿನ ಕನ್ನಡ ಮುದ್ರಣಾಲಯ. ಸಾಯಂಕಾಲದ ಇಳಿಹೊತ್ತು. ಖದ್ದರಿನ ಅಡ್ಡ ಮುಂಡು. ಖದ್ದರಿನ ಅರ್ಧ ಕೈಯ ಬಿಳಿ ಶರಟು. ಬಿಳಿ ಕೂದಲು. ಹುಲುಸಾಗಿ ಬೆಳೆದ ನೆರೆತ ತುಂಬು ಮೀಸೆಯ ಅಪರಿಚಿತ ವ್ಯಕ್ತಿ ಅನಿರೀಕ್ಷಿತವಾಗಿ ಎದುರಿಗೆ ಮೆಟ್ಟಿಲುಗಳನ್ನೇರಿ ಬರುವುದು ಕಾಣುತ್ತಲೇ ಅಲ್ಲಿ ಕುಳಿತಿದ್ದವರ ಮುಖದ ಮೇಲೆ ಪ್ರಶ್ನಾರ್ಥಕ ಚಿಹ್ನೆ ತಮಗರಿಯದಂತೆಯೇ ಮೂಡಿದ್ದಿರಬೇಕು. ಪ್ರಾಯಶಃ ಆ ವ್ಯಕ್ತಿ ಕೂಡಾ ಆ ಕ್ಷಣವೇ ಅದನ್ನು ಗುರುತಿಸಿದ್ದಿರಬೇಕು.

"ನಾನು—ಗೋವಿಂದ ಪೈ."

ಆ ವ್ಯಕ್ತಿಯಾಡಿದ ಆ ಮಾತು, ಆ ಕ್ಷಣ—ಮನಸ್ಸಿನ ವಿಚಾರ ಚಕ್ರಕ್ಕೆ ಕೀಲಿ ಕೊಟ್ಟಂತಾಗಿ ಕೂಡಲೇ ಗಿರ್ರೆಂದು ತಿರುಗತೊಡಗಿತು.

ನಗು ಮುಖ, ಸಹಜ ಸ್ವರ, ನಮ್ರ ಮಾತು, ಸಾದಾ ಉಡುಪು, ಸರಳ ವ್ಯಕ್ತಿ, ಕರ್ನಾಟಕದ ಖ್ಯಾತ ಕವಿ, ಸಮರ್ಥ ಸಂಶೋಧಕರೆನ್ನಿಸಿದ ಹಿರಿಯ ಸಾಹಿತಿ ಶ್ರೀಮಾನ್ ಗೋವಿಂದ ಪೈ, ಮಂಜೇಶ್ವರ, ಎಂಬವರು ಇವರೇ ಏನು?

ನಿಜ. ಆ ಹೆಸರನ್ನು ಕೇಳಿ ಅರಿಯದ ಓದದ ಕನ್ನಡ ಸಾಹಿತ್ಯಪ್ರಿಯನಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಆದರೆ ಪತ್ರಿಕೆಗಳಲ್ಲಿ ಪ್ರಕಟವಾದ ಅದರ ಬಿಡಿ ಕವನಗಳನ್ನು ಓದಿರುವವರು ಕಡಿಮೆ. ಅವರ ಸಂಶೋಧನಾತ್ಮಕ ಬರಹಗಳನ್ನು ಓದುವವರು ಮತ್ತೂ ಕಡಿಮೆ. ಶ್ರೀಯುತರನ್ನು ವ್ಯಕ್ತಿಶಃ ಕಂಡು ಮಾತನಾಡಿಸಿ ಪರಿಚಯಾನುಭವ ಪಡೆದವರ ಸಂಖ್ಯೆ ಇನ್ನೂ ಕಡಿಮೆ.

ಇದಕ್ಕೆ ಕಾರಣ ಪೈಗಳವರು ತಮ್ಮ ಮಂಜೇಶ್ವರದ ಮನೆ ಬಿಟ್ಟು ವಿಶೇಷವಾಗಿ ಹೊರಗೆ ಸಂಚರಿಸುವವರಲ್ಲ. ಅಂದ ಮೇಲೆ ಅವರನ್ನು ಕಣ್ಣಾರೆ ಕಾಣ ಬಯಸುವವರು ಅವರಿದ್ದಲ್ಲಿಗೇನೇ ಹೋದರೆ ಸಾಧ್ಯ, ಸಂಭವ. ಅಂತಿರುವಾಗ ಅವರೇ ಸ್ವತಃ ತಮ್ಮೊಡನೆ ಪತ್ರವ್ಯವಹಾರ ನಡೆಸಿದ ಸಂಪಾದಕರನ್ನು ಕಾಣಲು ಬರುವುದೆಂದರೆ....ಕನಸೋ ನೆನಸೋ ಎಂಬುದನ್ನು ನಿರ್ಧರಿಸಲೆನ್ನುವಂತೆ ತಮ್ಮನ್ನು ತಾವೇ ಚಿವುಟಿಕೊಳ್ಳುವಂತಾಯಿತು.

ಕ್ಷಣ ಕಾಲ ಅಷ್ಟೆ. ಸನ್ಮಾನ್ಯ ಅತಿಥಿಯನ್ನು ಒಳಕ್ಕೆ ಬರಮಾಡಿಕೊಂಡುದಾಯಿತು. ಉಭಯ ಕುಶಲ ಪ್ರಶ್ನೆಯೊಂದಿಗೆ ಮೊದಲಾದ ಮಾತುಕತೆ ವಿಷಯದ ಎಡೆತಡೆಯಿಲ್ಲದೆ ನಿರರ್ಗಳವಾಗಿ ಮುಂದುವರಿಯಿತು. ಬಿಡುವಿನ ವೇಳೆಯಾಗುತ್ತಲೇ ಅವರು ಎದ್ದು ನಿಂತರು. ಎಲ್ಲರೂ ತುಂಬಿದ ಹೃದಯದಿಂದ ಬೀಳ್ಕೊಟ್ಟರು. ಅವರಾದರೋ ತುಂಬು ಮನಸ್ಸಿನಿಂದ ಹರಸಿ ಹೊರ ಹೋದರು.

ಅವರನ್ನು ಕಂಡುದು ನಾನು ಅದೇ ಮೊದಲು. ಆ ಕಾರಣವೇ ನನಗೆ ಅಂದಿನ ಮಾತುಕತೆಯಲ್ಲಿ ಭಾಗವಹಿಸಲಾಗಲಿಲ್ಲ. ಕೇವಲ ಶ್ರಾವಕನ ಪಾತ್ರ ವಹಿಸಿದ್ದೆ. ಆದರೆ ನನ್ನ ಅಂತರಾಳದಲ್ಲಿ ಮಾತ್ರ ಅವರನ್ನು ಮಾತನಾಡಿಸಬೇಕೆಂಬ ಲವಲವಿಕೆ ಮೂಡಿತು.

ಇದಾಗಿ ಕೆಲವೇ ತಿಂಗಳುರುಳಿರಬಹುದು; ನನಗೆ ಊರಿಗೆ ಹೋಗಬೇಕಾಗಿ ಬಂತು. ಮಂಗಳೂರಿಗೆ ಹೋದ ಬಳಿಕ ಮಂಜೇಶ್ವರಕ್ಕೆ ಹೋಗದೆ ಮುಂಬಯಿಗೆ ಮರಳುವುದೇ?

ನಾನು ಪೈಯವರನ್ನು ಕಂಡು ಮಾತನಾಡಿಸಿದೆ; ಅವರ ಮಾತುಗಳನ್ನು ಮನತುಂಬ ಆಲಿಸಿದೆ. ಆ ಬಳಿಕ ಅವರನ್ನು ಕಂಡು ಮಾತನಾಡಿಸಬಹುದಾದ ಸಂದರ್ಭವನ್ನು ನಾನೆಂದೂ ಕಳೆದುಕೊಳ್ಳಲಿಚ್ಛಿಸಲಿಲ್ಲ. ಅಂತಿದೆ ಅವರ ಮಾತಿನ ಮೋಡಿ ಮೋಜು, ರಸಾನುಭವ—ಸವಿದಷ್ಟೂ ಸವಿ!

ಪೈಯವರನ್ನು ಖುದ್ದಾಗಿ ಭೇಟಿ ಮಾಡಿ ವ್ಯಕ್ತಿಶಃ ಪರಿಚಯಾನುಭವವನ್ನು ಪಡೆಯಬೇಕೆನ್ನುವವರು 'ಕವಿ ಸಿಂಹದ ಗುಹೆಗೆ' ಗೆ ಹೋಗಲು ಅಂಜುವ ಕಾರಣವಿಲ್ಲ. ಪರಿಚಯ ಪತ್ರವನ್ನೂ ಒಯ್ಯಬೇಕೆಂದಿಲ್ಲ. ನಿಮಗೆ ಅವರ ನಗುಮೊಗದ ಸ್ವಾಗತ ಸಿಕ್ಕಿಯೇ ಸಿಕ್ಕುತ್ತದೆ, ಅದು ಖಂಡಿತ.

"ತಾನು ಕವಿ—ರಾಷ್ಟ್ರ ಕವಿ! ಪ್ರಸಿದ್ಧ ಸಂಶೋಧಕ! ಹಲವು ಭಾಷೆಗಳನ್ನರಿತ ಬ್ರಹ್ಮ!" ಎಂಬ ಅಹಂಭಾವದ ನಡೆ ಇಲ್ಲವೆ ನುಡಿಯನ್ನು ಯಾರೂ ಅವರಲ್ಲಿ ಕಾಣಲೊಲ್ಲರು. ಅವರ ನಿಗರ್ವ, ನಿರಹಂಭಾವದ ನಡೆ ಇಲ್ಲವೆ ನುಡಿಯನ್ನು ಯಾರೂ ಅವರಲ್ಲಿ ಕಾಣಬಲ್ಲರು. ಅವರು ನಿಗರ್ವಿ, ನಿರಹಂಭಾವದ ವ್ಯಕ್ತಿ! ಅವರದು ನಿಸ್ವಾರ್ಥ ಪ್ರವೃತ್ತಿ, ದಾಕ್ಷಿಣ್ಯ ಪ್ರಕೃತಿ! ಎಂದೇ ಅವರು ಯಾರ ಮನಸ್ಸನ್ನೂ ನೋಯಿಸರು, ಮನ ಬಿಚ್ಚಿಯೇ ಮಾತನಾಡುವರು, ಆತ್ಮೀಯತೆಯಿಂದ ಮಾತನಾಡಿಸುವರು; ಸಮಾನಸ್ಕಂಧರಾಗಿ ನಡೆದು ನುಡಿಯುವರು.

## ಸಂತಸದ ಸುದ್ದಿ

ಪಾರ್ತಿ ಸುಬ್ಬ, ಮುದ್ದಣ (ನಂದಳಿಕೆ ಲಕ್ಷ್ಮೀನಾರಾಯಣ), ಎಂ. ಎನ್. ಕಾಮತ್ ಮೊದಲಾದವರ ವಿಚಾರ ನೆತ್ತಿರಿ; ಕನ್ನಡದಲ್ಲಿ ಪ್ರಕಟವಾದ ಮೊತ್ತಮೊದಲಿನ ಸ್ವತಂತ್ರ ಕಾದಂಬರಿ ಯಾವುದು? ಕಾದಂಬರಿಕಾರ ಯಾರು? ಸಣ್ಣ ಕತೆಗಳ ಮೂಲ ಪುರುಷರು ಪಂಜೆಯವರೇನು? ಧರ್ಮಸ್ಥಳದ ಶಿವಲಿಂಗಕ್ಕೆ ಮಂಜುನಾಥ ಎಂಬ ಹೆಸರು ಹೇಗೆ ಬಂತು? ಕನ್ನಡದ ಹಳೆಯ ನಾಟಕಕಾರ ಯಾರು?—ಮುಂತಾಗಿ ಪ್ರಶ್ನಿಸಿರಿ; ಕಂಡಿತ—'ಖಂಡಿತ ಅಪೂರ್ವ—ಅಪರೂಪ ಮೊದಲಾದ ಶಬ್ದಗಳ ಉತ್ಪತ್ತಿ ಹೇಗೆ, ಅರ್ಥಯಾವುದು? ಎಂದೆಲ್ಲ ಸಂದೇಹಗಳನ್ನು ಮುಂದು ಮಾಡಿರಿ—ತಮಗೆ ತಿಳಿದುದನ್ನೆಲ್ಲ ತಿಳಿಸಲು ಅವರು ಹಿಂದು ಮುಂದು ನೋಡರು, ತಿಳಿಯಾಗಿಯೇ ತಿಳಿಸುವರು. ಅವರ ಬರಹಗಳಲ್ಲಿ ಕಾಣಿಸಿಕೊಳ್ಳುದ ರಸಿಕತೆ, ತಿಳಿಹಾಸ್ಯಗಳ ಹೊಸ ಪರಿಚಯ ನಿಮಗಾಗುವುದರಲ್ಲಿ ಸಂದೇಹವಿಲ್ಲ.

ಅವರ ಬರಹಗಳೆಂದೆ, ಅಲ್ಲವೆ? ಅವರು ಬರೆದುದೆಲ್ಲ ಅಚ್ಚಾಗಲಿಲ್ಲ. ಅಚ್ಚಾದುದೆಲ್ಲವೂ ಪುಸ್ತಕರೂಪವಾಗಿ ಪ್ರಕಟವಾಗಿಲ್ಲ. ಬರೆದುದರಲ್ಲಿ ಬಹು ಭಾಗ ವಾರ ಪತ್ರಿಕೆ, ಮಾಸ ಪತ್ರಿಕೆ, ತ್ರೈಮಾಸಿಕ ಮತ್ತು ವಿಶೇಷಾಂಕಗಳಲ್ಲಿ ಹಂಚಿ ಹರಡಿವೆ. ಹೊತ್ತಿಗೆಯಾಗಿ ಹೊರ ಬಂದ ಕೃತಿಗಳ ಸಂಖ್ಯೆ ಕೈಗಳ ಬೆರಳೆಣಿಕೆಗೂ ಮೀರುತ್ತಿಲ್ಲ. ಹಾಗೆ ಹೊರ ಬಂದ ಕೃತಿಗಳೆಲ್ಲವೂ ಈಗ ದೊರೆಯುವುದಿಲ್ಲ, ಎಂದೇ ಎಲ್ಲ ಕೃತಿಗಳನ್ನು ಪುನಹ ಮುದ್ರಿಸಬೇಕು, ಬಿಡಿ ಬರಹಗಳನ್ನು ಕಲೆಹಾಕಿ ಹೊಸ ಹೊತ್ತಿಗೆಗಳಾಗಿ ಪ್ರಕಟಿಸಬೇಕು; ಎಲ್ಲ ಬರಹಗಳದೊಂದು ಸೂಚಿ (Bibliography) ಯನ್ನು ಸಿದ್ಧಗೊಳಿಸಬೇಕು ಎಂಬ ಸೂಚನೆ ಸಹಜವಷ್ಟೆ ಅಲ್ಲ, ಅತ್ಯಾವಶ್ಯಕ. ಆದರೆ ಆ ಬಗ್ಗೆ ಅವರು ಎಳ್ಳಷ್ಟೂ ಉತ್ಸುಕತೆಯನ್ನು ತೋರಿಸಲೊಲ್ಲರು.

"ತೋಟವಾವುದನೂ ತಮ್ಮನುಪಥದಿ ಕಂಡು.

ಕ್ಷಣಮೆರಗಲಾ ತೋಟದಹುದೆ ಗಿಳಿವಿಂಡು."

ಎಂದು ಹಾಡಿದಂತೆ ಅವರು ನಿಸ್ಪೃಹತೆಯಿಂದ ನಗೆಯಲ್ಲಿ ಮಾತು ತೇಲಿಬಿಡುತ್ತಾರೆ, ವಿರೋಧಿಸಿದ್ದೂ ಇದೆ. ಆದರೆ ಈಚಿಗೆ ಶ್ರೀ ಆರ್. ಕೆ. ಪ್ರಭು ಅವರಂತಹ ಸನಿಯದ ಸ್ನೇಹಿತರ ಸತತ ಪ್ರಯತ್ನ, ಬಲವಂತಕ್ಕೆ ಕೈಯುಸಾ ತಮ್ಮ ಆಕ್ಷೇಪವನ್ನು ಬದಿಗೆ ಸರಿಸಿದ್ದಾರೆ. ಶ್ರೀ ಕೂಡಲಿ ಚಿದಂಬರಂ ಅವರು ಪ್ರಕಾಶನ ಕೆಲಸಕ್ಕೆ ಟೊಂಕಕಟ್ಟಿದ್ದಾರೆ. ಇದಾಗಲೇ ಎರಡು ಹೊಸ ಹೊತ್ತಿಗೆಗಳು ಬೆಳಕು ಕಂಡಿವೆ ಇದು ಸಂತಸದ ಸುದ್ದಿಯಲ್ಲವೇನು?

## ಮೇರು ಕೃತಿ

ಅವರ ಕೃತಿಗಳು: ತುಳುನಾಡಿನ ವೇಣೂರಲ್ಲಿಯ ಗೋಮಟೇಶ್ವರನ ಮಸ್ತಕಾಭಿಷೇಕಕ್ಕೆ ಕರೆ ಬಂದ ಪ್ರಯುಕ್ತ ರಚಿಸಿದ ೩೫ ವೃತ್ತಗಳುಳ್ಳ ಪ್ರಾಸರಹಿತ ಕೃತಿ—'ಶ್ರೀ ಗೊಮ್ಮಟ ಜಿನಸ್ತುತಿ" ೧೯೨೮ ರಲ್ಲಿ ಪ್ರಕಟವಾಯಿತು.

೧೯೩೦ ರಲ್ಲಿ ಪ್ರಕಟವಾದ 'ಗಿಳಿವಿಂಡು' ಇದೀಗ ಮತ್ತೆ ಬೆಳಕು ಕಂಡಿದೆ. ಇದಕ್ಕೆ, ಶ್ರೀ ಜಿ. ಪಿ. ರಾಜರತ್ನಂ ಅವರೇ ಕಾರಣಕರ್ತರು. ಅದೊಂದು ಕವಿತಾ ಸಂಕಲನ. ಇದರಲ್ಲಿ ಕಿರುಕವಿತೆಗಳೂ ಅನುವಾದಿತ ಕವನಗಳೂ ಚತುರ್ದಶಪದಿಗಳೂ ಉಮರ ಖಯ್ಯಾಮನ ೫೦ ಪದ್ಯಗಳ ಕನ್ನಡ ರೂಪಾಂತರಗಳೂ ಇವೆ. 'ಹೊಲೆಯನು ಯಾರು?' ಎಂಬ, ಕನ್ನಡದಲ್ಲಿ ಪ್ರಾಸರಹಿತವಾಗಿ ರಚಿಸಿದ ಮೊತ್ತಮೊದಲನೇ ಸ್ವತಂತ್ರ ಕವಿತೆ (೧೯೧೧) ಹಾಗೂ ಪಾಶ್ಚಾತ್ಯ ಸಾಹಿತ್ಯದಲ್ಲಿನ 'Sonnet' ಮಾದರಿಯಲ್ಲಿ ಬರೆದ ಮೊತ್ತ ಮೊದಲನೇ ಚತುರ್ದಶಪದಿಯೆನಿಸಿದ 'ಕವಿತಾವತಾರ' ಇರುವುದು ಈ ಸಂಕಲನದಲ್ಲಿ. 'ಗೊಲ್ಗೊಥಾ'—ಇದು ೩೭೭ ಪಂಕ್ತಿಗಳ ಪುಟ್ಟಹೊತ್ತಿಗೆ, ಮೇರು ಕೃತಿ! ಯೇಸುವಿನ ಕಡೆಯ ದಿನದ ಚಿತ್ರಣವೇ ಈ ಕಾವ್ಯದ ಗುರಿ! ಯೇಸುವನ್ನು ಶಿಲುಬೆಗೆ ಹಾಕಿದ ಸ್ಥಳ ಊರ ಹೊರಗಿನ ಗೊಲ್ಗೊಥಾ ಎಂಬ ಗಿರಿ ಎಂದೇ ಆ ಕೃತಿಗೆ ಹೆಸರು.

ಮಹಾಭಾರತದ ಆದಿಪರ್ವದಲ್ಲಿ ಏಕಲವ್ಯನ ಕಥೆಯನ್ನೇ ಕಥಾವಸ್ತುವನ್ನಾಗಿರಿಸಿ ಬರೆದ ನಾಲ್ಕು ನೋಟಗಳುಳ್ಳ ನಾಟಕವೇ 'ಹೆಬ್ಬೆರಳು;' ಬುದ್ಧನ ಕೊನೆಯ ದಿನದ ಕುರಿತಾದ ಖಂಡಕಾವ್ಯ—'ವೈಶಾಖಿ.'

ಕವಿ ಆಯ್ದುಕೊಂಡ ವಸ್ತು, ಬರವಣಿಗೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದವರಿಗೆ ಆಂಗ್ಲ ಕವಿ ಷೆಲ್ಲಿಯ 'Our sweetest songs are those that tell of saddest thoughts' ಎಂಬ ಮಾತು ಮನವರಿಕೆಯಾಗದಿರದು.

ಇತ್ತೀಚೆಗೆ ಎರಡು ಕೃತಿಗಳು ಪ್ರಕಟವಾಗಿವೆ. ಒಂದು—'ಶ್ರೀ ಕೃಷ್ಣ ಚರಿತ್ರೆ.' ಇದು ನವೀನಚಂದ್ರ ಸೇನ ಎಂಬವರ ಶ್ರೀ ಕೃಷ್ಣ ಚರಿತ್ರಾತ್ಮಕವಾದ 'ರೈವತಕ' 'ಕುರುಕ್ಷೇತ್ರ' ಮತ್ತು 'ಪ್ರಭಾಸ' ಎಂಬ ಅಪ್ರತಿಮವಾದ ಮೂರು ಬಂಗಾಳಿ ಕಾವ್ಯಗಳಿಂದ ಹಲವು ಸರ್ಗಗಳನ್ನು ಆಯ್ದು ಕನ್ನಡಿಸಿದ ಗದ್ಯ ಲೇಖ. ಇನ್ನೊಂದು 'ಚಿತ್ರಭಾನು'—

೧೯೪೨ರ ರಾಜಕೀಯ ಆಂದೋಲನವನ್ನು ಚಿತ್ರಿಸುವ ದುರಂತ ನಾಟಕ.

ಗಾಂಧೀಜಿಯ ಕೊನೆಯ ದಿನಗಳ ಕುರಿತಾದ 'ಕವನ ದೇಹಲಿ' ಮತ್ತು ಕೃಷ್ಣನ ಕೊನೆಯ ದಿನವನ್ನು ಚಿತ್ರಿಸುವ ಖಂಡಕಾವ್ಯ 'ಪ್ರಭಾಸ'—ಇವೆರಡು ಇವತ್ತಿಗೂ ಪೂರ್ತಿಯಾಗಿ ಬರೆದುದಿಲ್ಲ. ಅವರ ಜೀವನ, ಸಾಹಿತ್ಯ ಜೀವನಗಳ ಅನುಭವಗಳನ್ನು ಅರಿಯಲೆತ್ನಿಸುವವರು 'ಕಂನಾಡ ಸಾಹಿತ್ಯಜ್ಞರ ಆತ್ಮಕಥನ' ದಲ್ಲಿನ ಮೊದಲ ಹದಿನಾರು ಪುಟಗಳು ಮತ್ತು 'ಮುತ್ತು ಹವಳ' ದಲ್ಲಿನ ಹದಿನಾರು ಪುಟಗಳ 'ಬರಹಗಾರನ ಹಣೆಬರಹ'ಗಳನ್ನು ಮರೆಹೊಗಬೇಕು, ಅವುಗಳಿಂದಲೇ ತೃಪ್ತಿ ತಾಳಬೇಕು.

ಇದಾವುದರ ಕುರಿತೂ ಅವರನ್ನು ಬಲವಂತ ಮಾಡುವಂತಿಲ್ಲ. ಈ ಕುರಿತು ಈ ಮೊದಲೇ ಹೀಗೆ ಹೇಳಿದ್ದಾರೆ:—

"ಈಗ ನಾನು ಇಮ್ಮಡಿ ಜೋಬನಾಗಿದ್ದೇನೆ. ಮಾಡಬೇಕಾಗಿದ್ದ ಎಷ್ಟೋ ಕೆಲಸ ಮಾಡದೆ ಹೋಯಿತು, ಇಲ್ಲವೆ ಮೋಸವಾಯಿತು. ಆದರೆ ಅಂದಿನ ಪಶ್ಚಾತ್ತಾಪ ನನಗೆ ಇಂದಿಲ್ಲ. ಏಕೆಂದರೆ ನಾನು ಜನ್ಮಾಂತರದಲ್ಲಿ ತುಂಬ ನಂಬುಗೆಯುಳ್ಳವ; ಆ ನಂಬುಗೆ ದಿನ ಹೋದಂತೆ ಹೆಚ್ಚುತ್ತಲಿದೆ. ಹಿಂದಿನ ಜನ್ಮಗಳಲ್ಲಿ ಹಾಡಿ ನಿಲ್ಲಿಸಿದ ಹಾಡು ಅಲ್ಲಿಂದ ಸಾಗಿ ಈ ಜನ್ಮದಲ್ಲಿ ಹಾಡಿಸುತ್ತದೆ. ಇಲ್ಲಿಂದ ಮುಂದರಿಸಿ ಮುಂದಣ ಜನ್ಮದಲ್ಲಿಯೂ ಹಾಡಿಸಬೇಕು; ಹೀಗೆಯೇ ಸಾಗು ಸಾಗುತ್ತ ಮುಂದೆ ಯಾವುದೋ ಒಂದು ಜನ್ಮದಲ್ಲಿ ಅದು ಪೂರ್ಣತಾವಾಗಬೇಕು. ಅದುವರೆಗೆ ಜಂಪು ಹತ್ತಿದವನು ಬಾಜಿಸುವ ವೀಣೆಯಂತೆ ಬಿಟ್ಟುಬಿಡುತ್ತ ನನ್ನನ್ನು ನುಡಿಸುತ್ತಿರಬೇಕು ಎಂದೇ ನನ್ನ ನಂಬುಗೆ.

"ನಾನು ಹಾಡಿಸುತ್ತಿರುವುದು ತುಲಸೀದಾಸನೆಂದಿರುವಂತೆ ಬರೇ 'ಸ್ವಾಂತಃ ಸುಖಾಯ'. ನನ್ನ ಕೈಯಲ್ಲಿ ಲೆಕ್ಕಣಿಕೆ ಹೇಗೋ ಹಾಗೆ ವಿಧಾತನ ಕೈಯಲ್ಲಿ ನಾನು ಎಂದಷ್ಟೇ ಬಲ್ಲೆ. ಆನಂದಮಯವಾದ ಆತನ ಹುಡುಗಾಟದಲ್ಲಿ ಅಂತಃ ಸುಖವೇ ನನ್ನ ಸಾಧನೆ; ಕವಿತಾಮಾರ್ಗದಲ್ಲಿ ಅದೇ ನನ್ನ ಪ್ರಚೋದನೆ. ಅದನ್ನು ಬಿಟ್ಟು, ಬೇರೆ ಪ್ರಚೋದನ ಶಕ್ತಿಯನ್ನು ನಾನರಿಯೆ. ಮನಸ್ಸು 'ರಮ್ಯಾಣಿ ವೀಕ್ಷ್ಯ ಮಧುರಾಂಶ ನಿಶಮ್ಯ ಶಬ್ದಾನ್ ಪರ್ಯುತ್ಸುಕೀ ಭವತಿ' ಹಾಗೆ ಮನ ಕದಡಿದಾಗ ಎಂದೋ ಬಿಲಿವಿಕ್ಕಿಯಂತೆ ಚಿಲಿಮಿಲಿಸುತ್ತೇನೆ. ಭೇದವಿಷ್ಟೆ, ಹಕ್ಕಿ ನೊಂದಾಗ ಹಾಡದು. ನಾನು ಹೆಚ್ಚಾಗಿ ಹಾಡುವುದು ನೊಂದಾಗ. ಅದೂ ಆ ನೋವನ್ನು ಮರೆಸುವಂತೆ ಮನ ಮೆಚ್ಚಿಸಲೇ ಹೊರತು, 'ಅಂತಸುಖಾಯ'ವೇ ವಿನಾ ಪರರನ್ನು ಮೆಚ್ಚಿಸಲಲ್ಲ—

—ಇದು ಅಕ್ಷರಶಃ ನಿಜ. ಪೈಯವರಿಗೆ ಪ್ರಚಾರವೂ ಬೇಕಿಲ್ಲ. ಪದವಿಯೂ ಬೇಕಾಗಿಲ್ಲ. ಹಿಂದೆ ಮದರಾಸು ಸರಕಾರ ಅವರನ್ನು 'ಕನ್ನಡದ ರಾಷ್ಟ್ರ ಕವಿ' ಎಂದು ನಿರ್ಣಯಿಸಿದ ಸೂಚನೆಯನ್ನು ಒಪ್ಪಿಸಲು ಆಪ್ತೇಷ್ಟರು ಪಟ್ಟ ಪಾಡು ಅನುಭವಿಸಿದವರೇ ಬಲ್ಲರು. ಎರಡು ಸಲ ಬೇಡವೆಂದು ತಪ್ಪಿಸಿಕೊಂಡ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷ ಪದವಿಯನ್ನು ೧೯೫೦ ರಲ್ಲಿ ಅವರಿಗೊಪ್ಪಿಸುವುದು ಎಷ್ಟು ಕಠಿಣ ಸಾಧ್ಯವೆಂದು ಅಂದಿನ ಪರಿಷತ್ತಿನ ಹೊಣೆ ಹೊತ್ತವರು ಎಂದಿಗೂ ಮರೆಯಲಾರರು. ಅಷ್ಟೇ ಏಕೆ? ಅವರಿಗೊಂದು ಸನ್ಮಾನ ಗ್ರಂಥವನ್ನು ಅರ್ಪಿಸುವ ವಿಚಾರದ ಪ್ರಸ್ತಾಪ ಸೂಚನೆಗಳನ್ನು ಅವರು ತೀವ್ರವಾಗಿ ವಿರೋಧಿಸಿದ್ದಾರೆ; 'ನಾನು ಜೀವಂತ ಇರುವ ತನಕ ಬೇಡ, ಇದಕ್ಕೆ ಸರ್ವಥಾ ನನ್ನ ಒಪ್ಪಿಗೆಯಿಲ್ಲ. ಒಪ್ಪುವುದೂ ಇಲ್ಲ' ಎಂದು ಸ್ಪಷ್ಟವಾಗಿ ಸಾರಿದ್ದಾರೆ.

## ೮೦ರ ಅಸಾಮಾನ್ಯ ವ್ಯಕ್ತಿ

ಪೈಯವರದು ಮಂಗಳೂರಿನ ಹೆಸರಾಂತ ಮನೆತನ, ಸಾಹುಕಾರ ಬಾಪ್ಪೈ-ಮನೆತನ. ಆದರೆ ಅವರು ಹುಟ್ಟಿದ್ದು ಬೆಳೆದದ್ದು, ಈಗ ಇರುವುದು ಮಂಜೇಶ್ವರದಲ್ಲಿ—ತಮ್ಮ ತಾಯಿಯವರ ತವರು ಮನೆಯಲ್ಲಿ. ಅವರ ಹೆಸರಿಗೆ ಮೊದಲು ಬರುವ 'ಎಂ' ಇಲ್ಲವೆ 'ಮಂ' ಅಂದರೆ ಮಂಗಳೂರು ವಿನಹ ಮಂಜೇಶ್ವರ ಅಲ್ಲ. ಇದನ್ನು ಅವರು ಒಪ್ಪಿಯೂ ಇದ್ದಾರೆ.

ಇದೇ ಮಾರ್ಚಿ ಮಾಹೆಯ ಇಪ್ಪತ್ತೊಂದನೇ ದಿನಾಂಕಕ್ಕೆ ಶ್ರೀ ಎಂ. ಗೋವಿಂದ ಪೈಯವರಿಗೆ ಎಂಭತ್ತು ವರ್ಷ ತುಂಬಿತು. ಇವರಂತಹ ಪ್ರತಿಭಾಶಾಲಿಯಾದ ಕವಿ, ಸಮರ್ಥ ಸಂಶೋಧಕ ಹಾಗೂ ಅಸಾಮಾನ್ಯ ವಕ್ತಿ ಕನ್ನಡಕ್ಕೆ ಕನ್ನಡ ಜನತೆಗೆ ಕನ್ನಡ ನಾಡಿಗೆ ಬೇಕು. ಇಂತಹವರಿಂದ ಪಡೆಯಬಹುದಾದ ಪ್ರಯೋಜನಗಳೆಲ್ಲವನ್ನೂ ತಕ್ಕ ರೀತಿಯಲ್ಲಿ ಪಡೆಯುವ ಸುಯೋಗ, ಆ ಭಾಗ್ಯ ನಮ್ಮೆಲ್ಲರ ಪಾಲಿಗೆ ಬರಲಿ, ಶ್ರೀದೇವರು ಶ್ರೀಯುತರಿಗೆ ದೀರ್ಘಾಯುಷ್ಯ ಆರೋಗ್ಯ ಭಾಗ್ಯಗಳನ್ನೀಯಲಿ ಎಂದು ಹಾರೈಸೋಣವೇ?

'ಕಂಠೀರವ'

# ಶ್ರೀ ಪುರಂದರದಾಸರ ೪೦೦ ವರ್ಷಗಳ ಉತ್ಸವವು ಕರ್ನಾಟಕದಲ್ಲೆಲ್ಲಾ ನಡೆಯಲಿ

## ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಬಿನ್ನಹ

ಕರ್ನಾಟಕ ಸಾಹಿತ್ಯ ಚರಿತ್ರೆಯಲ್ಲಿ, ಹಾಗೂ ಕರ್ನಾಟಕದ ಉಜ್ವಲೇತಿಹಾಸದಲ್ಲಿ ಇಮ್ಮಡಿ ಪುಲಿಕೇಶಿ, ಚಾಲುಕ್ಯ ವಿಕ್ರಮ, ನೃಪತುಂಗದೇವ, ಆದಿಪಂಪ, ಬಸವೇಶ್ವರ, ಆನಂದ ತೀರ್ಥ, ಹರೀಶ್ವರ, ಲಕ್ಷ್ಮೀಶ, ವಿದ್ಯಾರಣ್ಯ, ಕುಮಾರವ್ಯಾಸ, ಪುರಂದರದಾಸರು, ಕನಕದಾಸರು, ಸರ್ವಜ್ಞಮೂರ್ತಿ, ಮೊದಲಾದ ಮಹಾನುಭಾವರು ನಕ್ಷತ್ರಗಳಂತೆ ಕಂಗೊಳಿಸುತ್ತಿದ್ದಾರೆ. ಇಂತಹವರ ನಾಮಸ್ಮರಣೆಯನ್ನು ಮಾಡುವುದು, ಇವರ ಜಯಂತಿ ಹಾಗೂ ಉತ್ಸವಗಳನ್ನು ನಡೆಸುವುದು ಕನ್ನಡ ನಾಡು ನುಡಿಗಳ ಹಿತದೃಷ್ಟಿಯಿಂದ ಅಗತ್ಯ. ಇಂತಹ ಉತ್ಸವಗಳನ್ನು ನಡೆಸುವುದು ಕನ್ನಡ ನಾಡು ನುಡಿಗಳ ಹಿತದೃಷ್ಟಿಯಿಂದ ಅಗತ್ಯ. ಇಂತಹ ಉತ್ಸವಗಳಿಂದ ಕನ್ನಡಿಗರಿಗೆ ತಮ್ಮ ಕುಲ ನೆಲೆಗಳ ಅರಿವೂ ತಮ್ಮ ಸಾಹಿತ್ಯ ಸಂಸ್ಕೃತಿಗಳ ಹಿರಿಮೆಗರಿಮೆಗಳೂ ಹೆಚ್ಚು ಹೆಚ್ಚು ಮನವರಿಕೆಯಾಗಿ ಅದರಿಂದ ಜನಜೀವನದಲ್ಲಿ ಹೆಚ್ಚಿನ ಸ್ಫೂರ್ತಿಯುಂಟಾಗಲು ಕಾರಣವಾಗುತ್ತದೆ. ಕನ್ನಡ ಸಾಹಿತ್ಯ ಪರಿಷತ್ತು ಸುಮಾರು ೪೮ ವರ್ಷಗಳಿಂದ ಇಂತಹ ಮಹಾ ಪುರುಷರ ಹಾಗೂ ಮಹಾ ಕವಿಗಳ ಉತ್ಸವವನ್ನು ನಡೆಸುವ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸುತ್ತಾ ಬಂದಿದೆ. ಇದು ಪರಿಷತ್ತಿನ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿದೆ. ಕನ್ನಡ ನಾಡು ನುಡಿಗಳ ಏಳಿಗೆಗೆ ಸಹಾಯವಾಗಿದೆ.

ಈಗಾಗಲೇ ಕನ್ನಡಿಗರು ಆದಿಪಂಪ, ಲಕ್ಷ್ಮೀಶ, ಹರೀಶ್ವರ, ರಾಘವಾಂಕ, ಮೊದಲಾದ ಮಹಾ ಕವಿಗಳ ಜಯಂತಿಯನ್ನು ಆಚರಿಸುತ್ತಾ ಬಂದಿದ್ದಾರೆ. ಬಸವ ಜಯಂತಿ, ಪ್ರಭು ಜಯಂತಿ, ಅಕ್ಕನ ಹುಣ್ಣಿಮೆಗಳು ನಾಡಿನಲ್ಲಿ ನಡೆಯುತ್ತಿವೆ. ಕನ್ನಡಿಗರ ವಿಖ್ಯಾತ ಸಾಮ್ರಾಜ್ಯವೆನಿಸಿದ ವಿಜಯನಗರದ ೬೦೦ ವರ್ಷಗಳ ಉತ್ಸವವನ್ನು ಪಂಪಾ ಕ್ಷೇತ್ರದಲ್ಲಿ ೧೯೩೬ ರಲ್ಲಿ ಕನ್ನಡ ಜನ ವೈಭವದಿಂದ ಆಚರಿಸಿದ್ದಾರೆ. ಅಂತೆಯೇ ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಯಾದವ, ಹೊಯ್ಸಳ ಮೊದಲಾದ ರಾಜ್ಯ ಸಾಮ್ರಾಜ್ಯಗಳ ಉತ್ಸವವನ್ನು ಕನ್ನಡಿಗರು ಆಚರಿಸುವುದು ಅಗತ್ಯವಾಗಿದೆ. ಜನತೆಗೆ ಸಂಸ್ಕೃತಿಯ ಅರಿವು, ಇತಿಹಾಸದ ಪರಿವೆ, ತನ್ನತನದ ಹಿರಿಮೆ ಮನದಟ್ಟಾಗಲು ಇಂತಹ ಉತ್ಸವಗಳು ಕರ್ನಾಟಕದಲ್ಲಿ ಮೇಲಿಂದ ಮೇಲೆ ನಡೆಯುವುದು ಅಗತ್ಯ. ಇದನ್ನೇ ಜನತೆಯ ಸಾಂಸ್ಕೃತಿಕ ಜೀವನ ಎಂದು ಹೇಳಬಹುದು. ಈ ಸಮಾರಂಭಗಳು ರಾಷ್ಟ್ರೀಯತೆಗೆ ಅನುಗುಣವಾಗಿಯೇ ಇರುತ್ತವೆ ಎಂಬುದು ಇಲ್ಲಿ ಗಮನಾರ್ಹವಾಗಿದೆ.

ಪ್ರಕೃತ ೧೯೬೪ ರಲ್ಲಿ, ಕರ್ನಾಟಕದ ಚರಿತ್ರೆಯಲ್ಲಿಯೂ ಕನ್ನಡ ಸಾಹಿತ್ಯದ ಇತಿಹಾಸದಲ್ಲಿಯೂ ವಿಖ್ಯಾತರೆನಿಸಿರುವ ಶ್ರೀ ಪುರಂದರದಾಸರ ೪೦೦ ವರ್ಷಗಳ ಜಯಂತಿಯನ್ನು ನಾಡಿನ ತುಂಬ ಆಚರಿಸಬೇಕೆಂಬ ಪ್ರಯತ್ನ ನಡೆದಿದೆ. ಇದಕ್ಕಾಗಿ ಬೆಂಗಳೂರು, ಧಾರವಾಡ ಮತ್ತು ಹೊಸಪೇಟೆಗಳಲ್ಲಿ ಸಂಘ ಸಂಸ್ಥೆಗಳು ಸ್ಥಾಪನೆಯಾಗಿವೆ. ಪುರಂದರದಾಸರ ಸಾಹಿತ್ಯದ ಪ್ರಸಾರ, ಪುರಂದರದಾಸರ ಸ್ಮಾರಕಗಳ ಜೀರ್ಣೋದ್ಧಾರ, ಪುರಂದರದಾಸರ ಸಾಹಿತ್ಯವನ್ನು ಭಾರತದ ಇತರ ಭಾಷೆಗಳಲ್ಲಿ ಭಾಷಾಂತರಿಸುವುದು—ಇವು ಮೇಲೆ ಕಂಡ ಸಂಘ ಸಂಸ್ಥೆಗಳ ಮುಖ್ಯೋದ್ದೇಶಗಳಾಗಿವೆ. ಸಮಗ್ರ ಕರ್ನಾಟಕದ ಹಿತದೃಷ್ಟಿಯಿಂದ ಈ ಪ್ರಯತ್ನವು ಸ್ವಾಗತಾರ್ಹವಾಗಿದೆ.

ಶ್ರೀ ಪುರಂದರದಾಸರು ನಾರದರ ಅವತಾರವೆಂದು ಪ್ರಸಿದ್ಧರಾಗಿದ್ದಾರೆ. ಸುಮಾರು ಕ್ರಿ. ಶ. ೧೪೮೦ ರಲ್ಲಿ ಇವರು ಅಂದಿನ ಕರ್ನಾಟಕದ (ಇಂದಿನ ಮಹಾರಾಷ್ಟ್ರದ) ಪುರಂದರಗಡದಲ್ಲಿ ವರದಪ್ಪನಾಯಕ ಎಂಬ ಭಾಗವತರ ಮಗನಾಗಿ ಜನಿಸಿದರು. ಇವರ ಹುಟ್ಟು ಹೆಸರು ಕೃಷ್ಣಪ್ಪ ನಾಯಕ ಎಂದು. ಇವರು ಆಗರ್ಭ ಶ್ರೀಮಂತರು. ಚಿನ್ನ ಬೆಳ್ಳಿಯ ವ್ಯಾಪಾರಗಾರರಾಗಿದ್ದರು. ಇವರಿಗೆ ಲಕ್ಷ್ಮೀಬಾಯಿ ಎಂಬ ಸಾಧ್ವೀಮಣಿಯು ಪತ್ನಿ ಎನಿಸಿದಳು. ಅನಂತರ ಭಗವಂತನ ಕೃಪೆಯೇ ಎಂಬಂತೆ ಕೆಲವು ದೈವಿಕ ಘಟನೆಗಳು ನಡೆದು ಅವರಿಗೆ ಸಂಸಾರದಲ್ಲಿ ಜಿಹಾಸೆ ಹುಟ್ಟಿ ವೈರಾಗ್ಯವನ್ನು ವಹಿಸಿದರು. ಅನಂತರ ಅವರು ಪಂಪಾ ಕ್ಷೇತ್ರಕ್ಕೆ ಬಂದು ಮಹಾತ್ಮರಾದ ಶ್ರೀ ವ್ಯಾಸರಾಯಸ್ವಾಮಿಗಳ ಶಿಷ್ಯರಾದರು. ಪಂಡರಾಪುರದ

ಪಾಂಡುರಂಗನ ಭಕ್ತರೆನಿಸಿದರು. ದಾಸಕೂಟದಲ್ಲಿ ಅಗ್ರ ಗಣ್ಯರೆನಿಸಿದರು. ಸಮಗ್ರ ಭಾರತವನ್ನು ವಿಶೇಷವಾಗಿ ಕರ್ಣಾಟಕವನ್ನು ಸುತ್ತಿ ಧರ್ಮೋಪದೇಶಮಾಡಿದರು. ಕನ್ನಡ ಜನರಲ್ಲಿ ದೈವಭಕ್ತಿ, ಧರ್ಮ ಶ್ರದ್ಧೆ, ಸಮನ್ವಯ ಬುದ್ಧಿ ಮೊದಲಾದ ಸದ್ಗುಣಗಳನ್ನು ಪ್ರಚಾರಮಾಡಿದರು. ಕನ್ನಡ ಸಾಹಿತ್ಯದಲ್ಲಿ ಉಪನಿಷತ್ತಿಗೆ ಸದೃಶವೆನಿಸಿದ ಹಾಡುಗಳನ್ನೂ, ಉಗಾಭೋಗಗಳನ್ನೂ, ಸುಳಾದಿಗಳನ್ನೂ ರಚಿಸಿದರು. ಕನ್ನಡ ಜನತೆಯಲ್ಲಿ ನವಚೈತನ್ಯವನ್ನುಂಟು ಮಾಡಿದರು. "ಪುರಂದರ ವಿಠಲ" ಎಂಬ ಅಂಕಿತದಿಂದ ಅಪಾರ ಸಾಹಿತ್ಯವನ್ನು ರಚಿಸಿ ಕನ್ನಡ ವಾಙ್ಮಯಕ್ಕೆ ಹೆಚ್ಚಿನ ಚೈತನ್ಯವನ್ನುಂಟುಮಾಡಿದರು. "ದಾಸರೆಂದರೆ ಪುರಂದರದಾಸರಯ್ಯ" ಎಂದು ದಾಸಕೂಟದ ಮುನಿಗಳಿಂದ ಶ್ಲಾಘಿಸಲ್ಪಟ್ಟರು. ಅವರ ಕೃತಿ ರಚನೆಗಳಿಂದ ಕರ್ಣಾಟಕ ಸಂಗೀತಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆಯಿತು. ಅವರ ಉಪದೇಶದಿಂದ ಕನ್ನಡಿಗರಲ್ಲಿ ಧರ್ಮ ಸಮನ್ವಯದ ಬುದ್ಧಿ ಬಳೆಯಿತು. ಈ ಎಲ್ಲ ಕಾರಣಗಳಿಂದ ಶ್ರೀ ಪುರಂದರದಾಸರು ಓರ್ವ ಮಹಾಪುರುಷರೆಂದು ಪರಿಗಣಿಸಲ್ಪಟ್ಟಿರುವರು.

ಶ್ರೀ ಪುರಂದರದಾಸರ ಸ್ಮಾರಕಗಳು ಇಂದಿಗೂ ಅವರ ಧಾರ್ಮಿಕ ತೇಜಸ್ಸನ್ನು ಸಾರಿ ಹೇಳುತ್ತಿವೆ. ಪಂಡರಾಪುರದ ಶ್ರೀ ಪಾಂಡುರಂಗ ವಿಠಲ ದೇವಾಲಯದಲ್ಲಿ "ಪುರಂದರ ದಾಸರ ಕಂಭ" ಎಂಬ ಒಂದು ಸ್ಮಾರಕವಿದೆ. ಅಲ್ಲಿ ದಾಸರು ದಿನವೂ ಕೂತು ದೇವರನ್ನು ಭಜಿಸುತ್ತಿದ್ದಂತೆ ಐತಿಹ್ಯವಿದೆ. ಹಂಪೆಯಲ್ಲಿ "ಪುರಂದರದಾಸರ ಮಂಟಪ" ಎಂಬ ಸ್ಮಾರಕವಿದೆ. ದಾಸರ ಭೌತಿಕದೇಹ ಅಲ್ಲಿಯೇ ಮರೆಯಾಯಿತೆನ್ನುತ್ತಾರೆ. ಪುರಂದರಗಡದಲ್ಲಿ ದಾಸರ ಸ್ಮಾರಕ ಏನಿದೆ ಎಂದು ನಮಗೆ ತಿಳಿದುಬಂದಿಲ್ಲ. ಇವನ್ನೆಲ್ಲಾ ಜೀರ್ಣೋದ್ಧಾರ ಗೊಳಿಸುವುದು ಸಮಗ್ರ ಕರ್ಣಾಟಕಕ್ಕೆ ಸೇರಿದ ಕೆಲಸವಾಗಿದೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ "ನೆಪೋಲಿಯನ್, ಷೇಕ್ಸ್‌ಪಿಯರ್, ವಾಷಿಂಗ್‌ಟನ್, ಟಾಲ್‌ಸ್ಟಾಯ್" ಮೊದಲಾದ ರಾಷ್ಟ್ರೀಯ ಪುರುಷರ ಸ್ಮಾರಕಗಳಿಗೆ ಹೆಚ್ಚಿನ ಗೌರವ ಉಂಟೆಂಬುದನ್ನು ನಾವು ಇಲ್ಲಿ ಸ್ಮರಣೆಗೆ ತಂದುಕೊಳ್ಳಬಹುದು.

ಈಗಾಗಲೇ ಪುರಂದರದಾಸರ ಕೃತಿಗಳು ಹಿಂದೀ ಭಾಷೆಯಲ್ಲಿ ಅನುವಾದವಾಗಿವೆ. ಅಂತೆಯೇ ಈ ಶ್ರೇಷ್ಠ ಕೃತಿಗಳು ಭಾರತದ ಇನ್ನಿತರ ಭಾಷೆಗಳಿಗೂ ಅನುವಾದವಾಗುವುದು ಅಗತ್ಯ. ಕನ್ನಡದಲ್ಲಿ "ಪುರಂದರದಾಸರ ಕೃತಿಗಳು" ಶುದ್ಧವೂ, ಸುಂದರವೂ ಆಗಿ ಪ್ರಕಟವಾಗುವುದು ಅಗತ್ಯ. ಈ ಮಹಾತ್ಮರು ದಕ್ಷಿಣಕಾಶಿ ಎನಿಸಿದ ಹಂಪೆಯಲ್ಲಿ ಕ್ರಿ. ಶ. ೧೫೬೪ ರಲ್ಲಿ ಭಗವಂತನ ಪಾದಾರವಿಂದವನ್ನು ಸೇರಿದರೆಂದು ತಿಳಿದುಬಂದಿದೆ. ಆದ್ದರಿಂದಲೇ ೧೯೬೪ ಜನವರಿ ತಾ|| ೧೪ ರಲ್ಲಿ ಇವರ ೪೦೦ ವರ್ಷಗಳ ಉತ್ಸವ ಆಚರಿಸಬೇಕಾಗಿದೆ.

ಶ್ರೀ ಪುರಂದರದಾಸರ ೪೦೦ ವರ್ಷಗಳ ಈ ಉತ್ಸವದ ಆಚರಣೆಯಿಂದ ಕನ್ನಡ ಸಾಹಿತ್ಯದ ಪ್ರಸಾರ ಅಧಿಕವಾಗುತ್ತದೆ. ಪರ್ಯಾಯವಾಗಿ ಕನ್ನಡಿಗರಲ್ಲಿ ಧರ್ಮ ಜಾಗೃತಿ ಅಧಿಕವಾಗುತ್ತದೆ. ಕರ್ಣಾಟಕ ಸಂಗೀತ ಕಳೆಗೊಳ್ಳುತ್ತದೆ. ಕನ್ನಡಿಗರಲ್ಲಿ ನಾಡು ನುಡಿಗಳ ಅಭಿಮಾನ ಅಧಿಕವಾಗುತ್ತದೆ. ಇದನ್ನೆಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನವರು ಪ್ರಕಟಿಸಿರುವ ಹರಿದಾಸ ಸಾಹಿತ್ಯ, ಹರಿದಾಸ ಕೃತಿ ಮಂಜರಿ ಮೊದಲಾದ ಗ್ರಂಥಗಳಲ್ಲಿ ಮಹಾಜನರು ಸುಲಭವಾಗಿ ಅರಿಯಬಹುದು.

ನಮ್ಮ ರಾಷ್ಟ್ರದಲ್ಲಿ ಅಧಿಕಾರ, ಐಶ್ವರ್ಯಗಳಿಗೆ ಅಗ್ರ ತಾಂಬೂಲ ದೊರೆತಿರುವ ಈ ಕಾಲದಲ್ಲಿ ಜನರನ್ನು ಆಧ್ಯಾತ್ಮಿಕದಕಡೆ ತಿರುಗಿಸುವ ಹಾಗೂ ಭಕ್ತಿ, ಜ್ಞಾನ, ವೈರಾಗ್ಯ ಭಾವನೆಗಳನ್ನು ಜನಮನದಲ್ಲಿ ಪ್ರಚೋದಿಸುವ, ಕನ್ನಡ ನಾಡು ನುಡಿಗಳ ಮೇಲಿನ ಮಮತೆಯನ್ನು ಹುರಿದುಂಬಿಸುವ ಶ್ರೀ ಪುರಂದರದಾಸರ ೪೦೦ ವರ್ಷಗಳ ಜಯಂತಿ ಉತ್ಸವವು ನಾಡಿನ ತುಂಬಾ ವೈಭವದಿಂದ ನಡೆಯುವಂತಾಗಲೆಂದು ಕನ್ನಡ ಸಾಹಿತ್ಯ ಪರಿಷತ್ತು ರಾಷ್ಟ್ರದ ಜನತಾ ಜನಾರ್ಧನನನ್ನು ಕುರಿತು ಪ್ರಾರ್ಥಿಸುತ್ತದೆ.

|| ಸಿರಿಗನ್ನಡಂ ಗೆಲ್ಗೆ–ಬಾಳ್ಗೆ ||

---

# ಕರ್ಣಾಟಕದಲ್ಲಿ ವಕ್ತೃತ್ವ ಕಲೆ

## ಪರಿಷತ್ತಿನಲ್ಲಿ ತರಗತಿಗಳ ಪ್ರಾರಂಭ

## ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಹೇಳಿಕೆ

ಸ್ವತಂತ್ರ ಭಾರತದಲ್ಲಿ ಕರ್ಣಾಟಕ ರಾಜ್ಯವು ಹಲವಾರು ಕಾರಣಗಳಿಂದ ಗಣ್ಯತೆಯನ್ನು ಪಡೆದಿದೆ. ಕನ್ನಡಿಗರು ಚಿತ್ರ, ಶಿಲ್ಪ, ನೃತ್ಯ, ಸಂಗೀತ, ಕಾವ್ಯ ಕಲೆಗಳಲ್ಲಿ ನಿಷ್ಣಾತರಾಗಿರುವಂತೆಯೇ ಗಮಕ ಹಾಗೂ ಭಾಷಣ ಕಲೆಯಲ್ಲಿಯೂ ಪ್ರತಿಭಾನ್ವಿತರೆನಿಸಿದ್ದಾರೆ. ಕರ್ಣಾಟಕದ ಮಹಾಕವಿಯಾದ ನೃಪತುಂಗನು ಕನ್ನಡಿಗರ ಗುಣಸಂಪತ್ತನ್ನು ಹೇಳುವಾಗ ಕವಿರಾಜಮಾರ್ಗದಲ್ಲಿ—(ಕ್ರಿ. ಶ. ೮೧೪–೮೭೭).

ಕಂದ ॥ ಪದನರಿದು ನುಡಿಯಲುಂ ನುಡಿ ।
ದುದನರಿದಾರಯಲುಮಾರ್ಪರಾ ನಾಡವರ್ಗಳ್ ।
ಚದುರರ್ ನಿಜದಿಂ ಕುರಿತೋ ।
ದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್ ॥
ಕುರಿತವರಲ್ಲದೆ ಮತ್ತಂ ।
ಪೆರರುಂ ತಂತಮ್ಮ ನುಡಿಯೊಳೆಲ್ಲಂ ಜಾಣರ್ ।
ಕಿರುವಕ್ಕಳುಮಾ ಮೂಗರು ।
ಮುಂಪಲ್ಕರಿವರ್ ವಿವೇಕಮಂ ಮಾತುಗಳಂ ॥

—ಎಂದು ಹೇಳಿ,

ಕಂದ ॥ ಕುರಿವಂತು ಪೆರರ ಬಗೆಯಂ ।
ತೆರೆದಿರೆ ಪೆರ್ಗರಿಪಲಾರ್ಪವಂರ ಮಾತರಿವಂ ।
ಕಿರಿದರೊಳೆ ಪಿರಿದುಮರ್ಥಮು ।
ನಂಿಪಲ್ ನೆರೆವಾತನಾತನಿಂದಂ ನಿಪುಣಂ ॥

—ಎಂದು ಕನ್ನಡಿಗರ ಮಾತುಗಾರಿಕೆಯ ಲಕ್ಷಣವನ್ನು ನಿರೂಪಿಸಿದ್ದಾನೆ.

ವಿಶಾಲವೂ ವಿಚಿತ್ರವೂ ಆದ ಈ ಸೃಷ್ಟಿಯಲ್ಲಿ ಮಾನವನು ಅವನಲ್ಲಿರುವ ಅಮೋಘವೂ, ಆತ್ಮಾಂಶೀಭೂತವೂ ಎನಿಸಿದ ಆಲೋಚನಾ ಶಕ್ತಿ, ಮಾತನಾಡುವ ಶಕ್ತಿ ಮತ್ತು ಸಂತೋಷಪಡುವ ಶಕ್ತಿ ಇವುಗಳಿಂದ ಮಿಗಿಲೆನಿಸಿದ್ದಾನೆ. ಮಾನವನ ಪ್ರಗತಿಗೆ ಈ ಮೂರು ಗುಣಗಳು ಮುಖ್ಯಕಾರಣವೆನಿಸಿವೆ. ಮನುಷ್ಯನ ಲೋಕವ್ಯವಹಾರವು ಬಹುಮಟ್ಟಿಗೆ ಮಾತಿನ ಮೂಲಕವಾಗಿ ನಡೆಯುವುದರಿಂದ ಮಾತು ಮನುಷ್ಯನ ಯೋಗ್ಯತೆಗೆ ನಿದರ್ಶನವೆನಿಸಿರುವುದರಿಂದ ನಮ್ಮ ಮನಸ್ಸಿನ ಭಾವನೆಗಳನ್ನು ಇತರರಿಗೆ ತಿಳಿಸಲು ಮಾತು ಮುಖ್ಯ ಸಾಧನವಾದುದರಿಂದ, ಜೀವನದಲ್ಲಿ ವಿಜಯವನ್ನು ಪಡೆಯಬೇಕೆಂದು ಆಶಿಸುವವರು ಮಾತುಗಾರಿಕೆಯ ಗುಟ್ಟುಗುರಿಗಳನ್ನು ತಿಳಿಯುವುದು ಅಗತ್ಯ. ಮಾತನಾಡುವ ಜನರಲ್ಲಿ ವಾಗ್ಮಿಯು ಮಿಗಿಲಾದವನೆಂದು ನಮ್ಮ ಶಾಸ್ತ್ರಜ್ಞರು ಹೇಳಿದ್ದಾರೆ. ಸಂಸ್ಕೃತ ಸುಭಾಷಿತಕಾರರು

ಶತೇಷು ಜಾಯತೇ ಶೂರಃ ಸಹಸ್ರೇಷುಚ ಪಂಡಿತಃ ।
ವಕ್ತಾ ದಶ ಸಹಸ್ರೇಷು—

—ಎಂದು ಹೇಳಿ, ಹುಟ್ಟಿದವರಲ್ಲಿ ಹತ್ತುಸಾವಿರಕ್ಕೆ ಒಬ್ಬನು ವಾಗ್ಮಿಯಾದಾನು ಎಂದು ಹೇಳಿದ್ದಾರೆ. ಅಂತೆಯೇ ಇನ್ನೊಬ್ಬ ಕವಿಯು

"ದಾತೃತ್ವಂ ಪ್ರಿಯವಕ್ತೃತ್ವಂ ಧೀರತ್ವಂ ಉಚಿತಜ್ಞತಾ"

—ಎಂಬ ಈ ನಾಲ್ಕು ಗುಣಗಳು ಮನುಷ್ಯನಲ್ಲಿ ಶ್ರೇಷ್ಠವಾದುವುಗಳೆಂದು ಹೇಳಿದ್ದಾನೆ. ಮಹಾಕವಿಯಾದ ಭರ್ತೃಹರಿಯು "ಸರಸಿ ವಾಕ್ಪಟುತಾ"—ಅಂದರೆ ಸಭೆಗಳಲ್ಲಿ ಚಮತ್ಕಾರವಾಗಿ ಸ್ವಾರಸ್ಯವಾಗಿ ಮಾತನಾಡುವ ಗುಣವು ಸಜ್ಜನರಿಗೆ ಸಹಜವಾದುದು ಎಂದು ಹೇಳಿದ್ದಾನೆ. ಕನ್ನಡ ಸಾಹಿತ್ಯದ ತಿರುಳಿನಂತಿರುವ ಶಿವಶರಣರ 'ವಚನ ವಾಙ್ಮಯ', ಹರಿದಾಸರ ಭಕ್ತಿಸಾಹಿತ್ಯ ಇವುಗಳಲ್ಲಿ ನಾವು ನಮ್ಮ ಜನರ ಕಲಾಭಿಜ್ಞತೆಯನ್ನು ಕಾಣಬಹುದು. ಶರಣಶ್ರೇಷ್ಠರಾದ ಬಸವಣ್ಣನವರು

"ನುಡಿದರೆ ಮುತ್ತಿನಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗಮೆಚ್ಚಿ ಅಹುದೆನಬೇಕು"

—ಎಂದು ಹೇಳಿದ್ದಾರೆ.

ಪ್ರಜಾಪ್ರಭುತ್ವದ ಇಂದಿನ ದಿವಸಗಳಲ್ಲಿ ಲೋಕಸಭೆ, ರಾಜ್ಯಸಭೆ, ಶಾಸನಸಭೆ ಮೊದಲಾದುವುಗಳಲ್ಲಿ ಚೆನ್ನಾಗಿ ಮಾತನಾಡುವ ವಾಗ್ಮಿಗಳಿಗೆ ಹೆಚ್ಚಿನ ಮನ್ನಣೆ ಇದೆ. ಅಂತೆಯೇ ಹೊಣೆಗಾರಿಕೆಯುಳ್ಳ ಮಾನ್ಯ ಮಂತ್ರಿಗಳೇ ಮೊದಲಾದ ಜನತಾ ಮುಖಂಡರಿಗೆ ವಾಗ್ಮಿತ್ವವು ಸಿದ್ಧವಾಗಿದ್ದರೆ ಅವರ ಜನಪ್ರಿಯತೆಯೂ, ಕಾರ್ಯಸಿದ್ಧಿಯೂ ಮಿಗಿಲಾಗಿ ಉಂಟಾಗುತ್ತದೆ. ಧರ್ಮಬೋಧಕರು, ಉಪಾ

ಧ್ಯಾಯರು, ಸಮಾಜಸುಧಾರಕರು ಮೊದಲಾದವರಿಗೆಲ್ಲ ವಾಗ್ಮಿತ್ವವು ಕಾಮಧೇನುವಿನಂತೆ ಎಂದು ಹೇಳಬಹುದು.

ಭಾರತದ ರಾಜಕಾರಣದಲ್ಲಿ ಅಗ್ರಗಣ್ಯರೆನಿಸಿರುವ ಲೋಕಮಾನ್ಯ ತಿಲಕ್, ಸುಭಾಷ್‌ಚಂದ್ರ ಭೋಸ್, ಸರೋಜಿನೀದೇವಿ, ಶ್ರೀನಿವಾಸಶಾಸ್ತ್ರೀ, ಎಸ್. ಸತ್ಯಮೂರ್ತಿ, ಸಿ. ಆರ್. ರೆಡ್ಡಿ ಮೊದಲಾದವರೆಲ್ಲರೂ ವಿಖ್ಯಾತ ವಾಗ್ಮಿಗಳಾಗಿದ್ದರು ಎಂಬುದು ಇಲ್ಲಿ ಗಮನಾರ್ಹವಾಗಿದೆ. ಹಿಂದೂ ದೇಶದ ಧರ್ಮತತ್ವಗಳನ್ನು ವಿಶ್ವದಲ್ಲಿ ಸಾರಿ ಹೇಳಿದ ಸ್ವಾಮಿ ವಿವೇಕಾನಂದರು ಕೂಡ ನಮ್ಮ ಭಾರತದ ಒಬ್ಬ ವಿಖ್ಯಾತ ವಾಗ್ಮಿಗಳು.

ಕರ್ಣಾಟಕದಲ್ಲಿ ಕಳೆದ ದಶಮಾನಗಳಲ್ಲಿ ಕೀರ್ತಿಶೇಷರಾದ ಏ. ಎಸ್. ಸುಬ್ಬರಾವ್, ಎಂ. ವೆಂಕಟಕೃಷ್ಣಯ್ಯ, ಪಂಡಿತ ತಾರಾನಾಥ, ಮುದವೀಡು ಕೃಷ್ಣರಾವ್, ಬಿ. ಎಂ. ಶ್ರೀಕಂಠಯ್ಯ, ಕೆ. ಎಚ್. ರಾಮಯ್ಯ, ಡಾ॥ ಎಂ. ಎಚ್. ಕೃಷ್ಣ, ಎಂ. ಆರ್. ಶ್ರೀನಿವಾಸಮೂರ್ತಿ, ರೆ॥ ಉತ್ತಂಗಿ, ದೇವುಡು ನರಸಿಂಹಶಾಸ್ತ್ರೀ ಮೊದಲಾದ ವಾಗ್ಮಿಗಳು ಜನಿಸಿ, ತಮ್ಮ ವಾಗ್ಮಿತ್ವದ ಬಲದಿಂದ ನಮ್ಮ ನಾಡಿನ ಸರ್ವಾಂಗೀಣ ಪ್ರಗತಿಗೆ ನೆರವಾಗಿದ್ದಾರೆ. ಈಗಲೂ ನಮ್ಮ ಗಣ್ಯ ಸಾಹಿತಿಗಳನೇಕರ ಕೀರ್ತಿಗೆ ಕಾರಣ ಅವರ ಭಾಷಣಕಲಾ ಸಾಮರ್ಥ್ಯ.

ಕನ್ನಡ ಸಾಹಿತ್ಯ ಪರಿಷತ್ತು ಗಮಕಕಲೆ, ಗಾನಕಲೆ, ಲೇಖನಕಲೆ, ನಾಟಕಕಲೆ, ಕವನಕಲೆ ಮೊದಲಾದುವುಗಳನ್ನು ನಮ್ಮ ತರುಣರಲ್ಲಿ ಅಭಿವೃದ್ಧಿಗೊಳಿಸಲು ಸುಮಾರು ಅರ್ಧ ಶತಮಾನದಿಂದ ಬಗೆಬಗೆಯ ಕಾರ್ಯಕ್ರಮಗಳನ್ನು ಕೈಗೊಂಡಿದೆ. ಈಗ ಮಣಿಪಾಲದ ಮಹಾಂತರಾದ ಡಾ॥ ಮಾಧವ ಪೈ ಅವರ ದೇಶಾಭಿಮಾನದ ಫಲವಾಗಿ ಪರಿಷತ್ತು ಕನ್ನಡ ತರುಣರಲ್ಲಿ ಭಾಷಣಕಲೆಯನ್ನು ಅಭಿವೃದ್ಧಿಪಡಿಸುವ ತರಗತಿಗಳನ್ನು ಪ್ರಾರಂಭಿಸಲು ಪ್ರೇರಣೆಗೊಂಡಿದೆ. ದಿನಾಂಕ ೧೦-೭-೧೯೬೩ ರ ಸಂಜೆ ಈ ತರಗತಿಗಳ ಪ್ರಾರಂಭೋತ್ಸವವು ನಾಡಿನ ಹಿರಿಯ ಸಾಹಿತಿಗಳಾದ ಡಾ॥ ಮಾಸ್ತಿ ವೆಂಕಟೇಶ ಐಯಂಗಾರ್ ಅವರ ಶುಭಾಶಯದೊಡನೆ ನಡೆಯುತ್ತದೆ. ಭಾಷಣಕಲೆಯ ಗುಟ್ಟುಗುರಿಗಳಾದ, ವಿಷಯ, ವಿಭಾಗ ಮತ್ತು ಸಾಹಿತ್ಯ ಎಂಬ ವಿಚಾರಗಳನ್ನು ಕುರಿತು ವಿಖ್ಯಾತರಾದ ಮೂರು ಮಂದಿ ವಿದ್ವಾಂಸರು ವಿದ್ಯಾರ್ಥಿಗಳಿಗೆ ಪಾಠ ಹೇಳಲು ಒಪ್ಪಿರುತ್ತಾರೆ. ವಾರಕ್ಕೊಮ್ಮೆ ಗಣ್ಯ ವಾಗ್ಮಿಗಳಿಂದ ಭಾಷಣವೂ, ತಿಂಗಳಿಗೊಮ್ಮೆ ವಿದ್ಯಾರ್ಥಿಗಳಿಂದ ಚರ್ಚಾಕೂಟವೂ ನಡೆಯುತ್ತದೆ. ಆರು ತಿಂಗಳ ಕಾಲ ಈ ತರಗತಿಯಲ್ಲಿ ಭಾಗವಹಿಸಿ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ 'ಕನ್ನಡ ವಾಗ್ಮಿ' ಎಂಬ ಪ್ರಶಸ್ತಿ ಪತ್ರವು ಪರಿಷತ್ತಿನಿಂದ ದೊರೆಯುವುದು. ಬೆಂಗಳೂರು ನಗರದ ಮತ್ತು ಕನ್ನಡ ನಾಡಿನ ಉತ್ಸಾಹಿಗಳಾದ ವಿದ್ಯಾರ್ಥಿಗಳು ಈ ಸಂದರ್ಭದ ಸದುಪಯೋಗವನ್ನು ಮಾಡಿಕೊಳ್ಳುವರೆಂದು ನಂಬಲಾಗಿದೆ.

॥ ಸಿರಿಗನ್ನಡಂ ಗೆಲ್ಗೆ-ಬಾಳ್ಗೆ ॥

---

## ಪರಿಷತ್ತಿನ ಸುದ್ದಿಗಳು

### ಪರಿಷತ್ತಿನ ಸರ್ವ ಸದಸ್ಯರ ವಾರ್ಷಿಕ ಸಭೆ

ಕನ್ನಡ ಸಾಹಿತ್ಯ ಪರಿಷತ್ತಿನ ಸರ್ವ ಸದಸ್ಯರ ವಾರ್ಷಿಕ ಸಭೆಯು ಇದೇ ತಿಂಗಳು ೨೮ ನೇ ತಾ॥ (೨೮-೭-೧೯೬೩) ಭಾನುವಾರ ಬೆಳಿಗ್ಗೆ ೯ ಗಂಟೆಗೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ೧೯೬೨ ನೇ ವಾರ್ಷಿಕ ವರದಿ, ಲೆಖ್ಖಾಚಾರ-ಇವನ್ನು ಪರಿಶೀಲಿಸಲು ಸೇರುವುದು. ಅಲ್ಲದೆ ಪರಿಷತ್ ಅಧ್ಯಕ್ಷರ ಮತ್ತು ಕಾರ್ಯ ಸಮಿತಿ ಸದಸ್ಯರ ಚುನಾವಣೆಯೂ ಅಂದೇ ನಡೆಯುವುದು.

### ಶ್ರೀ ತೂಬಗೆರೆ ನಂಜಪ್ಪನವರ ದತ್ತಿ ಪ್ರಬಂಧ ಸ್ಪರ್ಧೆ-೧೯೬೨

ಮಹಾಕವಿ ವಿರೂಪಾಕ್ಷ ಪಂಡಿತನ "ಚನ್ನಬಸವ ಪುರಾಣ" ದ ಮೇಲೆ ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಮೂರು ಪ್ರಬಂಧಗಳು ಮಾತ್ರ ಬಂದಿದ್ದುವು. ಶ್ರೀ ಅಮ್ಮೆಂಬಳ ವಾಸುದೇವ ನಾವಡ, ಮಂಗಳೂರು ಮತ್ತು ಶ್ರೀ ಹೀ. ಚಿ. ಶಾಂತವೀರಯ್ಯ, ಬೆಂಗಳೂರು, ಈ ಇಬ್ಬರ ಪ್ರಬಂಧಗಳು ಸಮಾನ ಯೋಗ್ಯತೆ ಉಳ್ಳವುಗಳೆಂದು ತೀರ್ಪುಗಾರರು ಅಭಿಪ್ರಾಯ ಪಟ್ಟದ್ದರಿಂದ ಬಹುಮಾನದ ಹಣವನ್ನು ಇಬ್ಬರಿಗೂ ಸಮನಾಗಿ ಹಂಚಲಾಯಿತು.

### ತಿದ್ದುಪಡಿ

ಜೂನ್ ತಿಂಗಳ ಕನ್ನಡ ನುಡಿಯ ಗ್ರಂಥಾವಲೋಕನದ ಭಾಗದಲ್ಲಿ ಶ್ರೀ ವೆಲ್ಲಾಲ ಸತ್ಯಂ ಅವರ ಪುಸ್ತಕದ ಹೆಸರು ಕೈ ಬಿಟ್ಟು ಹೋಗಿದೆ. ಅವರ ಪುಸ್ತಕದ ಹೆಸರು '**ಮಹಾಪ್ರಯೋಗ**' ಎಂದಿರಬೇಕು.

# ಗ್ರಂಥಾವಲೋಕನ

**ಪಂಜರವಳ್ಳಿಯ ಪಂಜು : ಲೇಖಕರು : ಶ್ರೀ ಕಡಿದಾಳ್ ಮಂಜಪ್ಪ. ಪ್ರಕಾಶಕರು : ಜಿ. ಎಸ್. ವಿಶ್ವ ಮತ್ತು ಕಂಪೆನಿ, ಅವಿನ್ಯೂ ರಸ್ತೆ, ಬೆಂಗಳೂರು–೨; ೮ಕ್ರಾ ಕ್ರೌನ್ ಅಷ್ಟದಳ; ಪುಟಗಳು ೧೬+೨೩೨., ಬೆಲೆ ರೂ. ೩.**

ಅನೇಕ ವರ್ಷಗಳಿಂದ ಮೈಸೂರು ದೇಶದ ರಾಜಕೀಯದಲ್ಲಿ ಮುಖ್ಯಪಾತ್ರವನ್ನು ವಹಿಸಿದವರೂ ಮಾಜಿ ಸಚಿವರೂ ಆದ ಶ್ರೀ ಕಡಿದಾಳ್ ಮಂಜಪ್ಪನವರು ರಚಿಸಿರುವ ರಾಜಕೀಯ ಕಾದಂಬರಿ ಪಂಜರವಳ್ಳಿಯ ಪಂಜು. ಭಾರತದ ಸ್ವಾತಂತ್ರ್ಯೋತ್ತರ ದಿನಗಳಲ್ಲಿ ದೇಶದಲ್ಲಿ ನಡೆಯುತ್ತಿರುವ ಅನ್ಯಾಯಗಳನ್ನು ಸಾಹಿತ್ಯದಲ್ಲಿ ಎತ್ತಿ ತೋರಿಸುವ ಇದೊಂದು ಬಗೆ ಈಗ ಕನ್ನಡ ಕಾದಂಬರೀ ಸಾಹಿತ್ಯದಲ್ಲಿ ಕಾಣುತ್ತಿದೆ.

"ಸಾಹಿತಿ ಆಗಬೇಕೆಂಬ ಆಕಾಂಕ್ಷೆಯಿಂದ ಈ ಕಾರ್ಯಕ್ಕೆ ಕೈಹಾಕಲಿಲ್ಲ; ನಾನಾ ಕಾರಣಗಳ ದೆಸೆಯಿಂದ ಬರೆಯಬೇಕೆಂಬ ಒತ್ತಡ ಮನಸ್ಸಿನಲ್ಲಿ ಹೆಚ್ಚಿದ್ದರಿಂದ ಬರೆದಿದ್ದೇನೆ" ಎಂದು ಪ್ರಸ್ತಾವನೆಯಲ್ಲಿ ಲೇಖಕರು ಹೇಳಿಕೊಂಡಿದ್ದಾರೆ. "ಆ ಬರೆಯಬೇಕೆಂಬ ಒತ್ತಡ"ವೇ ನಿಜವಾದ ಸಾಹಿತ್ಯಕ್ಕೆ ಮೂಲ. ಹಾಗೆ ಬಂದ ಕೃತಿಯೇ ಸಾಹಿತ್ಯವಾಗಲು ಅರ್ಹವಲ್ಲವೆ? ಪ್ರಜಾಪ್ರಭುತ್ವದ ಹಿರಿಮೆ, ಸಮಾಜವಾದದ ಅಗತ್ಯಗಳನ್ನು ಪ್ರಸ್ತಾಪಿಸಿ, ಕಾಂಗ್ರೆಸ್ಸಿನ ಧ್ಯೇಯಧೋರಣೆಗಳನ್ನು ಹೊಗಳಿ, ಅದರಲ್ಲಿ ಅಲ್ಲಲ್ಲಿ ಸೇರಿರುವ ದುಷ್ಟ ಶಕ್ತಿಗಳನ್ನು ಈ ಕೃತಿಯಲ್ಲಿ ಖಂಡಿಸಲಾಗಿದೆ. ಇಲ್ಲಿ ಬಂದಿರುವ ಪಾತ್ರಗಳು ಕಾಲ್ಪನಿಕ ವ್ಯಕ್ತಿಗಳು ಎಂದು ಲೇಖಕರು ಹೇಳಿಕೊಂಡಿದ್ದರೂ, ಸಮಾಜದ ಪ್ರತಿಬಿಂಬ ಸಾಹಿತ್ಯ ಎಂಬ ಮಾತು ಇಲ್ಲಿ ಸತ್ಯವಾಗಿದೆ.

"ಪಂಜರವಳ್ಳಿಯ ಪಂಜು" ಮೂರು ತಲೆಮಾರಿನ ಕತೆ. ಗಿರಿಯಪ್ಪ ಗೌಡರು, ಅವರ ಮಗ ಸಿದ್ದಣ್ಣ, ಆತನ ಮಗ ಮೋಹನ, ಈ ಮೂವರೂ ಒಳ್ಳೆಯವರಾಗಿ, ಸಾತ್ವಿಕ ಬಾಳನ್ನು ಬದುಕಲು ಹೋಗಿ ಹೇಗೆ ಸಮಾಜದ ಕ್ರೌರ್ಯಕ್ಕೆ ತುತ್ತಾಗಿ ದುರಂತವನ್ನೈದಿದರು ಎಂಬ ದಾರುಣ ಚಿತ್ರ ಈ ಕಾದಂಬರಿಯಲ್ಲಿದೆ. ಈ ವ್ಯಕ್ತಿಗಳೊಂದಿಗೆ ಈರಮ್ಮ ಚನ್ನಮ್ಮ ಇವರ ಗೋಳಿನ ಕತೆಯೂ ಸೇರಿಕೊಂಡಿದೆ. ಗಿರಿಯಪ್ಪಗೌಡರು ಆಸ್ತಿಗೆ ಒಡೆಯರಾಗಬೇಕಾಗಿದ್ದವರು ತಮ್ಮನ ಕ್ರೌರ್ಯಕ್ಕೆ ಬಲಿಯಾಗಿ ಗೇಣೀದಾರರಾಗಿ ಬಡತನದ ಗೋಳನ್ನು ಅನುಭವಿಸಿ ಮನೆಯ ಹುಲಿಗೆ ಸಿಕ್ಕಿ ತೊಳಲುತ್ತಿದ್ದವರು ಮಲೆನಾಡಿನ ಕಾಡಿನಲ್ಲಿ ನಿಜವಾದ ಹುಲಿಯ ಬಾಯಿಗೇ ಸಿಕ್ಕಿ ಅದರ ತುತ್ತಾದರು. ಅವರ ಮಗ ಸಿದ್ದಣ್ಣ ಗೌರವಯುತ ಬಾಳನ್ನು ದುಡಿಮೆಯಿಂದ ಕಷ್ಟಪಟ್ಟು ನಡೆಸಿದರೂ, ಹೊಟ್ಟೆಕಿಚ್ಚಿನ ಮೊಟ್ಟೆಗಳ ಹಿಡಿತಕ್ಕೆ ಸಿಕ್ಕಿ ಜರ್ಝರಿತನಾದನು. ಅವನ ಮಗ ಮೋಹನ ಆದರ್ಶ ಕಾಂಗ್ರೆಸ್ ಕಾರ್ಯಕರ್ತನಾದರೂ ಸ್ವಾತಂತ್ರ್ಯ ಬಂದ ಅನಂತರದ ಕಾಂಗ್ರೆಸ್ ಸಂಸ್ಥೆಯ ದುಷ್ಟ ಶಕ್ತಿಗಳು ಅವನನ್ನು ಬಲಿ ತೆಗೆದುಕೊಂಡವು. ಅಗಾಧ ಜನಸ್ತೋಮ ಅವನ ಕಡೆಗಿದ್ದರೂ, ಮೋಹನ ತನ್ನ ದೇಶ ಸೇವೆಯನ್ನು ಮುಂದುವರಿಸಲಾಗದೆ ಅಕಾಲ ಮರಣಕ್ಕೆ ತುತ್ತಾಗಬೇಕಾಯಿತು. ಸತ್ಯ–ಅಸತ್ಯ, ಧರ್ಮ–ಅಧರ್ಮ, ಆಸ್ತಿಕ–ನಾಸ್ತಿಕಗಳ ಘರ್ಷಣೆ ಈ ಕಾದಂಬರಿಯಲ್ಲಿ ಯಥೇಚ್ಛವಾಗಿ ನಡೆದಿದೆ. ಆಸ್ತಿಕರೂ ಸಮಾಜದ ನಡೆವಳಿಕೆಗಳನ್ನು ನೋಡಿ ನಾಸ್ತಿಕರಾಗುವಂತಹ ಸಂದರ್ಭಗಳಿವೆ. ಧರ್ಮಕ್ಕೆ ಜಯ, ಸತ್ಯವೇ ಜಯಿಸುವುದು ಎಂಬ ಮಾತುಗಳು ನಿಜವೇ ಎಂಬ ಪ್ರಶ್ನೆ ಇಲ್ಲಿ ಹಲವು ವ್ಯಕ್ತಿಗಳ ತಲೆಯನ್ನು ಕೊರೆದಿದೆ. ಮೋಹನನ ತಲೆ ಈ ಸಮಸ್ಯೆಯಿಂದ ತುಂಬ ಕಾದು ಕೊನೆಗೆ ಧರ್ಮಕ್ಕೇ ಜಯ ಎಂಬ ಸಿದ್ಧಾಂತಕ್ಕೆ ಆತ ಬರುತ್ತಾನೆ. ನಮ್ಮೆದುರಿಗೆ ನಡೆಯುವ ಘಟನೆಗಳು, ನಮ್ಮ ಈ ಜನ್ಮದಲ್ಲಿ ನಾವು ಇರುವ ರೀತಿ–ಇವುಗಳ ಆಧಾರದಿಂದಲೇ ಈ ಪ್ರಶ್ನೆಯನ್ನು ಇಲ್ಲಿ ಚರ್ಚಿಸಲಾಗಿದೆ. ಆದರೆ ಹಿಂದೂ ದರ್ಶನ ಇದಕ್ಕೆ ಬೇರೆ ರೀತಿಯಲ್ಲಿ ಉತ್ತರ ಕೊಟ್ಟಿದೆ. ಜನ್ಮಾಂತರ ತತ್ತ್ವ ಈ ಪ್ರಶ್ನೆಗೆ ಸರಿಯಾದ ಉತ್ತರ. ಜನ್ಮಜನ್ಮಗಳಲ್ಲಿ ಜೀವ ಮಾಡುವ ಒಳ್ಳೆಯ ಮತ್ತು ಕೆಟ್ಟ ಕರ್ಮಗಳು ಫಲಿಸಬೇಕಲ್ಲವೆ? ಈಗ ನಾವು ಧರ್ಮವನ್ನೇ ಅನುಸರಿಸುತ್ತ ಒಳ್ಳೆಯವರೇ ಆಗಿರಬಹುದು. ಆದರೆ ನಮಗೆ ಈಗ ಆಗುವ ತೊಂದರೆಗಳಿಗೆ ಕಾರಣ ಬೇರೆಯೇ ಇರುತ್ತದೆ. ಮೇಲಾಗಿ ಧರ್ಮ ಎಂಬುದು ಬಹು ಸೂಕ್ಷ್ಮವೂ ಅಹುದು. ಧರ್ಮನಿರತರಿಗೆ ಸಾತ್ವಿಕರಿಗೆ ಕೆಟ್ಟುದಾದರೆ ಅದನ್ನು ಬೇರೆ ರೀತಿಯಲ್ಲಿ ಈ ಸಿದ್ಧಾಂತದ ಬೆಳಕಿನಲ್ಲಿ ಅರ್ಥ ಮಾಡಿದರೆ ಸಮಸ್ಯೆ ಸುಲಭವಾಗಿ ಪರಿಹಾರವಾಗಬಹುದು. ಒಳ್ಳೆಯದಕ್ಕೆ–ಕೆಟ್ಟದ್ದಕ್ಕೆ ಫಲ ಉಂಟು. ಈಗಲೋ ಆವಾಗಲೋ ಫಲ ಮಾತ್ರ ತಪ್ಪಿದುದಲ್ಲ.

ಈ ಕಾದಂಬರಿಯಲ್ಲಿ ಬಂದಿರುವ ಪಾತ್ರಗಳು ಸ್ವಾಭಾವಿಕವಾಗಿವೆ. ನಮ್ಮ ಸಮಾಜದಲ್ಲಿ ಇಂತಹ ಪಾತ್ರಗಳು ಜೀವಂತವಾಗಿ ಅನೇಕ ಕಡೆ ವಿಜೃಂಭಿಸುತ್ತಿವೆ ಎಂಬುದರಲ್ಲಿ ಸಂದೇಹವೇ ಇಲ್ಲ. ಧರ್ಮದ ಬ್ರೇಕಿಲ್ಲದ ಇಂದಿನ ಜೀವನದಲ್ಲಿ ಇಂತಹ ಘಟನೆಗಳು ಅತಿ ಸಾಮಾನ್ಯವಾಗುವ ದುಸ್ಥಿತಿಗೆ ದೇಶ ಇಳಿದಿದೆ ಎಂಬುದು ವಿಷಾದಕರವಾದರೂ ಸತ್ಯವಾದ ಸಂಗತಿ. ಆದರೆ ಇದು ಸರಿಹೋಗುವುದು ಹೇಗೆ ಎಂಬುದೇ ದೊಡ್ಡ ಪ್ರಶ್ನೆ. "ನಿಜವಾದ ಬೆಣ್ಣೆ ಕಡೆದರೆ ಬೆಣ್ಣೆ ಬಂದೀತು; ಸುಣ್ಣದ ನೀರನ್ನು ಕಡೆಯುವುದು ಕಣ್ಣಿಗೆ ಹಿತವಲ್ಲ"—ಎಂಬ ಶ್ರೀ ದ. ರಾ. ಬೇಂದ್ರೆಯವರ ಮುನ್ನುಡಿಯಲ್ಲಿನ ಮಾತು ಧ್ವನಿಪೂರ್ಣವಾಗಿದೆ. ಆದರೂ ನಮ್ಮ ಆಸೆ ಚನ್ನಮ್ಮ ಸಿದ್ದಣ್ಣ ಮೋಹನ ಗಿರಿಯಪ್ಪಗೌಡರಂತಹವರಿಗೆ ಸಮಾಜದಲ್ಲಿ ಒಳ್ಳೆಯ ಸ್ಥಾನ ಇರಬೇಕು–ಬರಬೇಕು ಎಂದು. ಅದಕ್ಕೆ ಅದು ಆಗಗೊಡದವರ ಹೃದಯ ಪಲ್ಲಟವಾಗಬೇಕು. ಸಾಹಿತ್ಯದಿಂದ ಆ ಕೆಲಸ ಎಷ್ಟರಮಟ್ಟಿಗೆ ಸಾಧನೆಯಾಗುತ್ತದೆ ಈಗ?

ಆಯಾ ದೇಶದ ಪ್ರಚಲಿತ ಸಮಸ್ಯೆಯನ್ನು ಎತ್ತಿಕೊಂಡು ಎದೆಗುದಿಯಿಂದ ಮೂಡಿ ಬಂದಿರುವ ಒಂದು ಕಾದಂಬರಿ ಶ್ರೀ ಮಂಜಪ್ಪನವರ ಪಂಜರವಳ್ಳಿಯ ಪಂಜು.

"ಶಿಷ್ಟ ಶಿಕ್ಷಣ ದುಷ್ಟ ಪರಿಪಾಲನ" ಇಲ್ಲಿ ಚೆನ್ನಾಗಿ ನಡೆದಿದೆ. ಅತ್ತಿಗೆ ಗೌರಮ್ಮನ, ಮೈದುನ ಕಾಳೇಗೌಡನ ಕ್ರೌರ್ಯ ಔದಾಸೀನ್ಯಗಳ ಹಿನ್ನೆಲೆಯಲ್ಲಿ ಈರಮ್ಮನ ಕರುಣಾಮಯ ಚಿತ್ರ ಮೂಡಿಬಂದಿದೆ. ಸಿದ್ದಣ್ಣನ ದುಃಖಮಯ ಜೀವನ, ಅವನಿಗಾದ ಅನ್ಯಾಯ, ದೇವರಲ್ಲಿ ಅವನ ಮೊರೆ, ಅದಕ್ಕೆ ಅಂತರ್ವಾಣಿಯ ಉತ್ತರ (೮೩–೮೪), ಮೋಹನನ ವಿಚಾರಲಹರಿ (೮೮–೮೯) ಗಳು ಗಮನಾರ್ಹವಾಗಿವೆ.

ದೇವದಾಸಿ (ಸೂಳೆ) ಪತಿವ್ರತೆಗೆ ಉಪದೇಶಮಾಡುವ ಕಾಲ ಇದು. ಸಂಸ್ಕೃತಿ ಹೀನರಾದ ಜನ ಏನು ಮಾಡಲೂ ಹೇಸರು.—ಹೂವಿಯ ಕರುಣ ಕತೆಯಲ್ಲೂ, ಗಿರಿಯಪ್ಪನ ಬವಣೆಯಲ್ಲೂ ಚೆನ್ನಾಗಿ ಇದು ಕಂಡುಬರುವುದು. "ಸತ್ಯವಂತರ ಪಾಲಿಗೆ ಕಷ್ಟವೇ ಹೊರತು ಸುಖವಿಲ್ಲ" (೧೬೪) ಎಂಬ ತೀರ್ಮಾನಕ್ಕೆ ಬಹು ಜನರನ್ನು ನೂಕುವಂತಹ ಸನ್ನಿವೇಶಗಳು ಇಲ್ಲಿ ಚಿತ್ರಿತವಾಗಿವೆ.

ಶೇಕ್ದಾರರ ಹೃದಯ ಪರಿವರ್ತನೆಯ ಕತೆ, ಗಿರಿಯಪ್ಪಗೌಡರ ಸಾವಿನ ಕತೆಗಳು ಇನ್ನೂ ಸ್ವಾರಸ್ಯವಾಗಿ ನಿರೂಪಣೆಯಾಗಬೇಕಾದಂತಹವು. ಮಲೆನಾಡಿನ ಜನರ ಕಷ್ಟ ಸಹಿಷ್ಣುತೆ, ಬೇಟೆಯ ಸಾಹಸಮಯ ಜೀವನ ಇಲ್ಲಿ ಚೆನ್ನಾಗಿ ಚಿತ್ರಿತವಾಗಿವೆ. ಮಲೆನಾಡ ಜೀವನವನ್ನು ಕುರಿತಾದ ಈ ಕಾದಂಬರಿ ಕನ್ನಡ ನುಡಿ ಭಂಡಾರಕ್ಕೆ ಹಲವು ಶಬ್ದಗಳನ್ನು ಕಾಣಿಕೆ ಕೊಟ್ಟಿದೆ—ಅಕ್ಕಿಯ ಭೋಜ, ಸೀಮೆ ಧಾರಣೆ, ಹುಲಿ (ಬಡ್ಡಿ ಎಂಬ ಅರ್ಥದಲ್ಲಿ), ಮದೆ, ಆಸ್ಗಾರ, ಕುಲ್ಮಾರೆ, ಸರಕಲು, ತೆಣೆ, ಎಣೆ, ಗೊರಬಿ, ಬಂದಾನ ಮೊದಲಾದುವು ಇದಕ್ಕೆ ಉದಾಹರಣೆಗಳು.

ಕಾದಂಬರಿಯ ಹಲವು ಅಧ್ಯಾಯಗಳ ಹೆಸರುಗಳು ಇನ್ನೂ ಸಣ್ಣದಾಗಿದ್ದು ಹೆಚ್ಚು ಅರ್ಥ ಬೋಧಕವಾಗಿ ಇರಬೇಕಾಗಿತ್ತು. "ಮೋಹನನ ಜನನ ಮತ್ತು ವಿದ್ಯಾಭ್ಯಾಸ" ಎಂಬುದು ಒಂದು ಕಾದಂಬರಿಯಲ್ಲಿ ಬಹು ನೀರಸವಾದ ಅಧ್ಯಾಯ ಶೀರ್ಷಿಕೆ. ಹಾಗೆಯೇ ಅಧ್ಯಾಯ ಎರಡರ ಹೆಸರು ತುಂಬ ದೊಡ್ಡದು—ವಿವರಣಾತ್ಮಕವಾದುದು. "ಮನೆ ಮುರುಕ ಬೆಳ್ಳೇಗೌಡ" ಎಂಬ ಶೀರ್ಷಿಕೆ ಚೆನ್ನಾಗಿದ್ದರೂ ಅವನ ಮನೆಮುರುಕತನ ಅಲ್ಲಿ ಸಾಕಷ್ಟು ಸ್ಪಷ್ಟವಾಗಿ ಬಂದಿಲ್ಲ. ಈ ಕಾದಂಬರಿಯ ಮತ್ತೊಂದು ದೋಷವೆಂದರೆ ಉಪನ್ಯಾಸಗಳ ಸುರಿಮಳೆ. ಕೆಲವು ಶೀರ್ಷಿಕೆಗಳೂ ಉಪನ್ಯಾಸಗಳಂತೆಯೇ ಇವೆ! ಉದಾ. ೨, ೧೩, ೧೬.

ಅಸತ್ಯ ಅಸಭ್ಯ ವ್ಯವಹಾರ ನಡೆಸುತ್ತಿರುವ ಮಂದಿ ಇದರಿಂದ ನೀತಿಯನ್ನು ಕಲಿತು ಶುದ್ಧ ವ್ಯವಹಾರಕ್ಕೆ ಅವಕಾಶ ಕೊಡುವಂತಾದರೆ ಈ ಸಾಹಿತ್ಯ ಸೃಷ್ಟಿ ಸಾರ್ಥಕವಾಗುತ್ತದೆ. ಹಾಗೆ ಆಗಲಿ ಎಂಬುದೇ ಶುದ್ಧ ಹೃದಯರ ಹಾರೈಕೆ.

ತಮ್ಮ ಜೀವನದ ಅನುಭವದಿಂದ ಪ್ರಚೋದಿತರಾಗಿ ಕಾದಂಬರಿಯೊಂದನ್ನು ರಚಿಸಿ ಕನ್ನಡದ ಸೇವೆಯನ್ನು ಚೆನ್ನಾಗಿ ಮಾಡಿರುವ ಶ್ರೀ ಕಡಿದಾಳ್ ಮಂಜಪ್ಪನವರು ಅಭಿನಂದನಾರ್ಹರು. ಅವರ ಲೇಖನಿಯಿಂದ ಇನ್ನೂ ರಸಭರಿತವಾದ ಸಾಹಿತ್ಯ ಹೊರಬರಲಿ ಎಂದು ಹಾರೈಸುತ್ತೇವೆ.

—ಕೆ. ಎಂ. ಕೃ.

**ತಾಯಿಯ ಹೃದಯ :** ಲೇಖಕರು : ಸು. ಕೃ. ಮೂರ್ತಿ ; ಪ್ರಕಾಶಕರು : ಕರ್ನಾಟಕ ಕಲಾಸಂಘ, ನಂ. ೧೧೦, ಮಹಾರಾಷ್ಟ್ರ ಮಹಿಳಾ ವಿದ್ಯಾಲಯ ರೋಡ್, ವಿಶ್ವೇಶ್ವರಪುರಂ, ಬೆಂಗಳೂರು-೪; ಪುಟ ೮೮.

ಇದೊಂದು ಕಿರು ಕಾದಂಬರಿ. ಲೇಖಕರೇ ಅರಿಕೆ ಮಾಡಿಕೊಂಡಿರುವಂತೆ ಇದು ಅವರ ಮೊದಲನೆಯ ಕಾದಂಬರಿಯಾದ್ದರಿಂದ ಹಲಕೆಲವು ದೋಷಗಳು ಗೋಚರವಾಗುವುದು ಸ್ವಾಭಾವಿಕವೇ ಸೈ.

ವಿಹಾರಾರ್ಥವಾಗಿ (ಪು. ೯) ಪಶುವಿನ ಕರವು (೧೩) ಬರ್ತಿನೆ (೧೭) ಸ್ತ್ರೀಮೋಹದಿಂದ ಬಂಧಿತನಾಗಿದ್ದ ರಂಗ

ನಿಗೆ, ನಿರ್ದೇಶಕರು ಹೇಳಿದ್ದನ್ನು ಮರೆತ (೭೬) ವ್ಯಂಗತೆ . . . ಪ್ರತಿಬಿಂಭ (೭೭)—ಇವು ಆ ಪೈಕಿ ಕೆಲವು.

ಕೃತಿ ಚಿಕ್ಕದಾದರೂ ಉದಾತ್ತ ಧ್ಯೇಯದಿಂದೊಡಗೂಡಿದ 'ಕಥೆ' ಯೆನಿಸಿದೆ. ಆ ಕಥಾವಸ್ತುವಾದರೂ ಮೇಲಿಂದಮೇಲೆ 'ತಾಯಿಯ ಹೃದಯ' ವೆಂಬ ಕೃತಿಯ ಹೆಸರನ್ನೇ ಮಿಡಿಯುವುದು ಅಭಿವ್ಯಕ್ತವಾಗುತ್ತದೆ.

ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡು, ಅಣ್ಣನ ಕೆಂಗಣ್ಣುಗಳಿಗೇ ಹೆದರುತ್ತಾ ಇದ್ದ ಶಾಲಾ ಬಾಲಕ 'ರಂಗ' ನಿಗೆ ತಾಯಿ ಸಾವಿತ್ರಮ್ಮನವರ ಮಾತೃಪ್ರೇಮವೊಂದೇ ಆಸರೆಯಾಗಿರುತ್ತದೆ. ಆಕಸ್ಮಿಕವಾಗಿ ಸಿನಿಮಾದಲ್ಲಿನ ಪಾತ್ರವೊಂದನ್ನು ನೋಡಿದ ರಂಗನು ಅದಕ್ಕೆ ಮಾರುಹೋಗಿ, ತಾನೂ ಒಬ್ಬ ದೊಡ್ಡ ಕಲಾವಿದನಾಗಬೇಕೆಂಬ ಹೆಬ್ಬಯಕೆಯನ್ನಿಟ್ಟುಕೊಂಡು ಅಂತೇ ಎಲ್ಲರನ್ನೂ ಬಿಟ್ಟು ಮದರಾಸಿಗೆ ಓಡಿಹೋಗಿ ಖ್ಯಾತ ಕಲಾವಿದನಾದ ಪ್ರಸಂಗ ಈ ಕಾದಂಬರಿಯ 'ವಸ್ತು'.

'ಮಗನು ತಾಯಿಯನ್ನು ಕಾಶಿಗೆ ಕಳುಹಿಸುವ ದೃಶ್ಯ ಚಿತ್ರಣವಾಗಬೇಕು' ಎಂದು ನಿರ್ದೇಶಕರಾದ ರಾಮರಾಯರು ಆಜ್ಞಾಪಿಸಿದಾಗ—ರಂಗನಿಗೆ ತಾನು ತನ್ನ ಜೊತೆ ನಾಯಕಿಯ ಪಾತ್ರ ವಹಿಸಿದ್ದ ಹೆಣ್ಣಿಗೆ ಸೋತ ಸಂದರ್ಭದಲ್ಲಿ ಕೂಡ ತಾಯಿಗೆ—'ಕಾಶೀಯಾತ್ರೆಗೆ ಕಳುಹಿಸುವೆನೆಂದು'—ಹಿಂದೆ ಕೊಟ್ಟಿದ್ದ ಮಾತು ಸ್ಮರಣೆಗೆ ಬಂದು—ತಾಯಿಯನ್ನು ತಕ್ಷಣ ನೋಡಬೇಕೆಂಬಾಸೆ ನಿಮಿರಿ ನಿಲ್ಲುವುದು.

ಮಗನ ಚಿಂತೆಯಲ್ಲಿಯೇ ಸೊರಗಿ ಹಾಸಿಗೆ ಹಿಡಿದಿದ್ದ ತಾಯಿ, ರಂಗನನ್ನು ಗುರುತಿಸಿ ಆಲಿಂಗಿಸಿದವರು ಮತ್ತೆ ಕಣ್ಣು ತೆರೆಯಲೇ ಇಲ್ಲ. 'ತಾಯಿಯ ಹೃದಯವಿಲ್ಲದ' ದೇಹದ ಮೇಲೆ ರಂಗ ಬಿದ್ದು ಅಳತೊಡಗಿದ ದೃಶ್ಯ ನಿಜಕ್ಕೂ ಯುಕ್ತ ಅಂತ್ಯವೆನಿಸುತ್ತದೆ.

ಶ್ರೀ ಮೂರ್ತಿಯವರ ಲೇಖನಿ ಇನ್ನೂ ಒಳ್ಳೆಯ ಕೃತಿಗಳನ್ನು ಬೆಳಕಿಗೆ ತರಲಿ.

—ಪಂಡಿತ ಕೆ. ಪಿ. ಶಿವಲಿಂಗಯ್ಯ

**ಶ್ರೀ ನವಿಲುಗುಂದ ಗವಿಮಠದ ಪುಣ್ಯಮೂರ್ತಿ**: ಲೇಖಕರು: ಎಸ್. ಎಸ್. ಭೂಸರೆಡ್ಡಿ, ಕೊಣ್ಣೂರ (ನರಗುಂದ); ಪ್ರಕಾಶಕರು: ಆರ್. ಎಮ್. ಕಳ್ಳಿಯವರ, ಕೊಂಕಣಕೊಪ್ಪ (ಬದಾಮಿ) ; ಪುಟಗಳು ೫೬+vii ; ಬೆಲೆ ೨೫ ನ.ಪೈ.

ಈ ಪುಟ್ಟ ಹೊತ್ತಗೆ ೨೬-೪-೧೯೬೩ ರಂದು ಬಸವ ಜಯಂತಿಯ ಪುಣ್ಯದಿನ ನವಿಲುಗುಂದದಲ್ಲಿ ನಡೆದ ಸರ್ವಧರ್ಮ ಪರಿಷತ್ತಿನಲ್ಲಿ ಪ್ರಕಟವಾಗಿದೆ. ಇದಕ್ಕೆ ಕರ್ಣಾಟಕ ವಿಶ್ವವಿದ್ಯಾಲಯದ ಡಾ॥ ಹಿರೇಮಲ್ಲೂರ ಈಶ್ವರನ್ ಅವರ ವಿಚಾರಪೂರ್ಣ ಮುನ್ನುಡಿ ಇದೆ. ಈ ಸಣ್ಣ ಗ್ರಂಥದಲ್ಲಿ ಮುಖ್ಯವಾಗಿ ಆದರ್ಶ ಯೋಗಿಪುಂಗವರಾದ ಗವಿಮಠಾಧ್ಯಕ್ಷ ಶ್ರೀ ನಿ. ಪ್ರ. ಸ್ವ. ಗಳಾದ **ಬಸವಲಿಂಗ ಮಹಾಸ್ವಾಮಿಗಳ** ಜೀವನಪರಿಚಯ ಹಾಗೂ ಅವರು 'ಸಕಲ ಜೀವಾತ್ಮರಿಗೆ ಲೇಸನೆ ಬಯಸಿ' ಸಾಧಿಸಿದ ಮಹತ್ಕಾರ್ಯಗಳ ಪಕ್ಷಿನೋಟವಿದೆ. "ಶ್ರೀ ಗಳವರ ಜೀವನ ಪುಣ್ಯ ಜೀವನ, ಗಣ್ಯ ಜೀವನ, ಸಫಲ ಜೀವನ, ಪಾವನ ಜೀವನ. ಈ ಆದರ್ಶ ಜೀವನ ಕನ್ನಡಿಗರಿಗೆ ಸ್ಫೂರ್ತಿದಾಯಕವಾಗಲಿ" ಎಂಬ ಮಹೋದ್ದೇಶವಿದೆ ಲೇಖಕರಿಗೆ.

ಆರಂಭದಲ್ಲಿ ಸಮಾಜದ ಸಾಮಾನ್ಯ ವ್ಯಕ್ತಿಯಾದ ಅವರು ಹೇಗೆ ಲೋಕಕಲ್ಯಾಣ ಬಯಸುವ ಸರ್ವಧರ್ಮ ಸಮನ್ವಯಾಚಾರ್ಯರೆನಿಸಿ ನಾಡಿನ ಶಕ್ತಿಯಾದರು ಎನ್ನುವುದನ್ನು ಲೇಖಕರು ತಮ್ಮ ಶಕ್ತಿಯುತ ಶೈಲಿಯಲ್ಲಿ ಮನಗಾಣಿಸಿದ್ದಾರೆ. ಪ್ರತಿ ಪರಿಚ್ಛೇದದ ಕೊನೆಯಲ್ಲಿ ಶರಣರ ಸೂಳ್ನುಡಿಗಳನ್ನು ಕೋದಿರುವುದು ಪುಸ್ತಕಕ್ಕೆ ಹೆಚ್ಚು ಶೋಭೆಯನ್ನಿತ್ತಿದೆ. "ಕನ್ನಡನಾಡು ಮಹಾ ವಿಭೂತಿಗಳ, ಮಹಾನುಭಾವರ, ಯೋಗಿತಿಲಕರ, ತಪಸ್ವಿಗಳ, ಮಹರ್ಷಿಗಳ ಜನ್ಮಭೂಮಿ." ಮಾನವ ಕುಲಕೋಟಿಯ ಉದ್ಧಾರಕ್ಕೆ ಅವಿರತವಾಗಿ ಶ್ರಮಿಸುತ್ತಿರುವ ಅಂತಹ ಮಹಾನುಭಾವರ ಚರಿತ್ರೆಯನ್ನು ನಾವು ತಿಳಿದಿರಬೇಕಾದುದು ಅತ್ಯಗತ್ಯ. ಈ ಪುಸ್ತಕದ ಬೆಲೆಯೂ ಕಡಿಮೆ ಇದ್ದು ಎಲ್ಲರೂ ಕೊಂಡು ಓದಲು ತಕ್ಕುದಾಗಿದೆ.

**ಹೃದಯಗೀತೆ**: ಲೇಖಕರು: ಡಾ॥ ಬಿ. ಈ. ಶೇಷಾದ್ರಿ, ಎಂ.ಡಿ.ಎಚ್.; ಪ್ರಕಾಶಕರು: ಭಾವಪ್ರಕಾಶನ, ಬಲಮುರಿ (ಕೊಡಗು) ; ಪುಟಗಳು ೨೪+೨ ; ಬೆಲೆ ೫೦ ನ. ಪೈ.

ಈ ಪುಟ್ಟ ಪುಸ್ತಕದಲ್ಲಿ ಲೇಖಕರ ಹೃದಯದಿಂದ ಮಿಡಿದ ಇಪ್ಪತ್ತನಾಲ್ಕು ಭಾವಗೀತೆಗಳಿವೆ. ಇದರಲ್ಲಿರುವ ಭಾವಗೀತೆಗಳು, ಲೇಖಕರೇ ಸೂಚಿಸಿರುವಂತೆ ನವ್ಯ ಕಾವ್ಯ ಜಾತಿಗೆ (New School of Poetry) ಸೇರಿದವು.

ಇದರಲ್ಲಿ

"ಪ್ರೇಮಾಮೃತಪಾನಕೆ ಮೋಡಿಸಿ ನಾ ದಿನಕಾಯುತಿಹೆ"

"ಕಟ್ಟಳೆ ಬೇಡ ಕಟ್ಟುಗಳೂ ಬೇಡ
ಇದ್ದರೆ ಸಾಕೊಂದೆ ಸಲ್ಮೆಯ ಮೊಡ
ಇರದಿದ್ದರೆ ಹಿಃ ಜೀವ ನೀನಿರಲೇಬೇಡ"

ಎಂದೂ

" ಜೀವನವು ನಾಲ್ದಿವಸ
ಹೂವಿನಂದ
ಅದರಲ್ಲಿ ವಿಹರಿಸುವ
ದುಂಬಿಯಂದ "

ಎಂಬ ಉನ್ನತ ಧ್ಯೇಯದ ಗೀತೆಗಳು ಕೆಲವಿದ್ದರೆ

" ಕತ್ತಲ ಕಾಮಿನಿಯು ಕುಂಕುಮವನೆಸೆದಿಹುದು
ಅದೊ! ಅವಳಾನನದ ಮಿರಿಮಿರಿ ಮೆರೆದಿಹುದು "

ಎಂಬ ಪ್ರಕೃತಿವರ್ಣನೆಯ ಜುಳುಕೂ ಉಂಟು.

" ನೀಲಿ ಕಡಲಿನ ಓಡ
ಓಡುವುದನು ನೀ ನೋಡ
ಆ ಓಡವನೇರಿ
ಬಗೆ ಜಗವನು ನೀ ನೋಡ "

ಎಂಬ ಲಯಬದ್ಧವಾದ ಗೀತೆ ಸೊಗಸಾಗಿದೆ.

" ಓಲೆ " ಎಂಬ ಕವನದಲ್ಲಿ ಚೀಣೀಯರ ಧಾಳಿಯನ್ನು ಕುರಿತು ವಿಶ್ಲೇಷಿಸುತ್ತಾ

" ಬಲ್ಲರೇನವರುಗಳು
ಸತ್ಯಕಿಹ ಶಕ್ತಿಯನು। ಪೂರ್ತಿಯಾಗಿ "

ಎಂದು ಪ್ರಶ್ನಿಸಿ

" ಧರ್ಮಕ್ಕೆ ಜಯವೆಂಬ
ಸತ್ಯಕ್ಕೆ ಜಯವೆಂಬ। ನುಡಿ ಖಂಡಿತ "

ಎಂದು ಸಾರಿದ್ದಾರೆ.

' ವಿರಹಿಯ ಹಾಡು ', ' ನಿನ್ನ ನೆನಪು ', ಕರುಣೆ ಬಾರದೆ ', ' ನಿನ್ನ ಪ್ರೇಮ ಪಾಶ ', ' ನಿನ್ನ ದೊಲಿಮೆ ನನಗೆ ಸಾಕು ', ' ಬಲಿಯಾದೆ ನಾನು '—ಮೊದಲಾದ ಕವನಗಳಲ್ಲಿ ಶೃಂಗಾರ ರಸ ಹರಿದಿದೆ. ಲೇಖಕರ ಸ್ವಾನುಭವ ಪೂರ್ಣವಾದ ಹೃದಯಗೀತೆ ಇಲ್ಲಿ ಮಿಡಿದಿದೆ.

' ಮೊರೆ ', ' ಓ ತಂದೆ ನೀನು ಬಂದೆ ' ಈ ಕವನಗಳು ಪ್ರಾರ್ಥನಾರೂಪದ ಭಕ್ತಿಗೀತೆಗಳು.

" ನವವರ್ಷದ ಹಾಡು " ಎಂಬ ಕವನದಲ್ಲಿ

" ಏತಕೆ ತುಂಬಿದೆ ದ್ವೇಷ ಮೃದು ಹೃದಯದೊಳಿಲ್ಲೀಗ ? "

ಎಂದು ಪ್ರಶ್ನಿಸಿ

" ಓ ಲೋಗರೆ ನಿಮ್ಮಲ್ಲಿ
ನಾವಿದ ಹೇಳುವೆವೀಗ
ದ್ವೇಷವು ನಂದಲಿ ನಿಮ್ಮ
ಸರಿ ಕಣ್ತೆರಿನೊಳೀಗ "

ಎಂದು ಹಾರೈಸಿದ್ದಾರೆ.

ಇವು ಲೇಖಕರ ಹೃದಯವೀಣೆಯಿಂದ ಮಿಡಿದ ರಾಗದ ಕೆಲವು ಉದಾಹರಣೆಗಳು. ಸಹೃದಯರ ವಾಚನಕ್ಕೆ ತಕ್ಕುವಾಗಿವೆ. ಈ ಪುಸ್ತಕಕ್ಕೆ ಇನ್ನು ಸ್ವಲ್ಪ ಕಡಿಮೆ ಬೆಲೆ ಇಟ್ಟಿದ್ದರೆ ಹೆಚ್ಚು ಜನ ಕೊಂಡು ಓದಲು ಅನುಕೂಲವಾಗುತ್ತಿತ್ತೇನೋ ಎನ್ನಿಸುತ್ತದೆ.

—ಟಿ. ಆರ್. ಮಹದೇವಯ್ಯ

---

# ಕನ್ನಡ ಸಾಹಿತ್ಯ ಪರಿಷತ್ತು

## ಭಾಷಣಕಲಾ ಶಿಕ್ಷಣ ತರಗತಿಗಳು

ಇತ್ತೀಚೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಭಾಷಣ ಕಲಾ ಶಿಕ್ಷಣ ಸಮಿತಿಯ ಸಭೆ ನಡೆಯಿತು.

ಭಾಷಣ ಕಲಾ ಶಿಕ್ಷಣ ತರಗತಿಗಳು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಜುಲೈ ಹತ್ತನೇ ತಾರೀಖಿನಿಂದ ಆರಂಭವಾಗುವುವು. ಈ ತರಗತಿಗಳಿಗೆ ಸೇರುವ ಅಭ್ಯರ್ಥಿಗಳು ಎಸ್. ಎಸ್. ಎಲ್. ಸಿ. ಅಥವ ಅದಕ್ಕೆ ಮೇಲ್ಪಟ್ಟ ಯಾವ ಪರೀಕ್ಷೆಗಳಲ್ಲಾದರೂ ಉತ್ತೀರ್ಣರಾಗಿರಬೇಕು. ಅಥವಾ ಕನ್ನಡ, ಸಂಸ್ಕೃತ ಪರೀಕ್ಷೆಗಳಲ್ಲಿ ವಿದ್ವಾನ್ ಪದವಿ ಪಡೆದಿರುವವರಾದರೂ ಸೇರಬಹುದು.

ಈ ತರಗತಿಗಳಿಗೆ ಸೇರಲಿಚ್ಛಿಸುವವರು ಪ್ರವೇಶ ಶುಲ್ಕ ಒಂದು ರೂ. ಮತ್ತು ತಿಂಗಳಿಗೊಮ್ಮೆ ಒಂದು ರೂ. ಚಂದಾ ಕೊಡಬೇಕಾಗುವುದು. ಈ ತರಗತಿಗಳು ಆರು ತಿಂಗಳ ಕಾಲ ನಡೆಯುವುವು. ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಕನ್ನಡವಾಗ್ಮಿ ಎಂಬ ಪ್ರಶಸ್ತಿಯನ್ನು ಕೊಡಲಾಗುವುದು. ಅರಿತ, ನುರಿತ ವಿದ್ವಾಂಸರು ಪಾಠ ಪ್ರವಚನಗಳನ್ನು ವಾರಕ್ಕೆ ಮೂರು ದಿನ ನಡೆಸಿಕೊಡುವರು. ಅರ್ಜಿಗಳನ್ನು ಸಲ್ಲಿಸಲು ಜುಲೈ ೮ ನೇ ತಾರೀಖು ಕೊನೆಯ ದಿನವಾಗಿತ್ತು. ತರಗತಿಗಳನ್ನು ಆರಂಭಿಸುವ ಮುನ್ನ ನಡೆಯುವ ಪೂರ್ವಭಾವಿ ತನಿಖೆಯಲ್ಲಿ ಜಯಗಳಿಸಿದವರಿಗೆ ಪ್ರವೇಶ ದೊರೆಯುವುದು. ಹೆಚ್ಚಿನ ವಿವರಗಳಿಗೆ ಪರಿಷತ್ತಿನೊಡನೆ ವ್ಯವಹರಿಸಬಹುದು.

---

# ಕನ್ನಡದ ಸುದ್ದಿಗಳು

**ಬೆಂಗಳೂರು**

ಮಲ್ಲೇಶ್ವರದ ಸರಸ್ವತಿ ಕಲಾನಿಕೇತನದ ವಾರ್ಷಿಕೋತ್ಸವದ ಅಧ್ಯಕ್ಷತೆ ವಹಿಸಿ ಸುಪ್ರಸಿದ್ಧ ಕವಿಗಳಾದ ಶ್ರೀ ಪು. ತಿ. ನರಸಿಂಹಾಚಾರ್ಯರು ವಾರ್ಷಿಕೋತ್ಸವದ ಸ್ಮಾರಕ ಸಂಚಿಕೆಯಾದ 'ನಿವೇದನ' ವನ್ನು ಪ್ರಕಟಪಡಿಸಿದರು. "ರಾಜ್ಯದಲ್ಲಿ ಕನ್ನಡಕ್ಕೆ ಅಗ್ರಸ್ಥಾನ ದೊರೆಯಬೇಕು" ಎಂದು ಈ ಸಮಾರಂಭದಲ್ಲಿ ಅವರು ತಿಳಿಸಿದರು.

ಕರ್ನಾಟಕ ಮತ್ತು ಹಿಂದೂಸ್ತಾನಿ ಸಂಗೀತದಲ್ಲಿ ಹೆಚ್ಚಿನ ವ್ಯಾಸಂಗಕ್ಕಾಗಿ ಒಂದು ವರ್ಷದ ಕಾಲಕ್ಕೆ ವಿದ್ಯಾರ್ಥಿವೇತನವನ್ನು ರಾಜ್ಯದ ಸಂಗೀತ ನಾಟಕ ಅಕಾಡಮಿಯವರು ಕೊಡಲು ನಿರ್ಧರಿಸಿ, ಅಭ್ಯರ್ಥಿಗಳಿಂದ ಅರ್ಜಿ ಕೋರಿದ್ದಾರೆ. ಕರ್ನಾಟಕ ಸಂಗೀತಕ್ಕೆ ೮; ಹಿಂದೂಸ್ಥಾನಿ ಸಂಗೀತಕ್ಕೆ ೪, ಹೀಗೆ ವಿದ್ಯಾರ್ಥಿ ವೇತನಗಳನ್ನು ಕೊಡಲಾಗುವುದು.

ಶ್ರೀ ಪುರಂದರದಾಸರ ನಾಲ್ಕನೆಯ ಶತಮಾನೋತ್ಸವ ಸಮಿತಿಯವರು ಇತ್ತೀಚೆಗೆ ಪತ್ರಿಕಾ ಸಮ್ಮೇಳನವೊಂದನ್ನು ಕರೆದು ಈತನಕ ನಡೆಸಿರುವ ಕಾರ್ಯಕಲಾಪವನ್ನೂ ಮುಂದೆ ನಡೆಸಬೇಕೆಂದಿರುವ ಕಾರ್ಯವನ್ನೂ ವಿವರಿಸಿ ಕನ್ನಡಿಗ ಮಹಾಜನರು ಸಂಪೂರ್ಣ ಸಹಕಾರ ನೀಡಬೇಕೆಂದು ಕೋರಿದರು.

ಜೂನ್ ದಿನಾಂಕ ೩೦ ರಂದು ರಾಜಾಜಿನಗರದಲ್ಲಿ ಶ್ರೀ ಭದ್ರಗಿರಿ ಕೇಶವದಾಸರು ಕಟ್ಟಲಿರುವ ಶ್ರೀ ಪುರಂದರವಿಠಲ ಮಂದಿರದ ಶಂಕುಸ್ಥಾಪನಾ ಮಹೋತ್ಸವವನ್ನು ಉಡುಪಿಯ ಶ್ರೀ ಪೇಜಾವರ ಮಠಾಧೀಶರು ನೆರವೇರಿಸಿದರು. ಈ ಸಮಾರಂಭದಲ್ಲಿ ವಿಧಾನ ಸಭಾಧ್ಯಕ್ಷ ಶ್ರೀ ವೈಕುಂಠಬಾಳಿಗ ಅವರು ಅಧ್ಯಕ್ಷರಾಗಿದ್ದರು. ಶ್ರೀ ಸುಬೋಧ ರಾಮರಾಯರು, ಶ್ರೀ ಪಿ. ಎಚ್. ಕೃಷ್ಣರಾಯರು, ಪ್ರೊ|| ಎಸ್. ಕೆ. ರಾಮಚಂದ್ರರಾಯರು, ಶ್ರೀ ವಿ. ಎಸ್. ಕೃಷ್ಣಯ್ಯರ್, ಶ್ರೀ ಡಿ. ಆರ್. ರಾಮಯ್ಯ, ಶ್ರೀ ಕೆ. ಸಂಪದ್ಗಿರಿರಾಯರು, ಶ್ರೀ ಹಂಡೆ ಗುರುರಾಜದಾಸರು ಮುಂತಾದವರು ಶ್ರೀ ಪುರಂದರದಾಸರ ಮಹಿಮೆ, ಸಾಹಿತ್ಯಸೇವೆ ಇತ್ಯಾದಿ ವಿಚಾರಗಳ ಬಗ್ಗೆ ಮಾತನಾಡಿದರು.

ಬೆಂಗಳೂರಿನ ಡ್ಯಾಲಿ ಮೆಮೋರಿಯಲ್ ಭವನದಲ್ಲಿ ಮೇ ೨೮ ರಂದು ಸಂಜೆ ಕರ್ನಾಟಕ ಕವಿ ಚರಿತ್ರೆ ರಚನಕಾರರಾದ ಶ್ರೀ ಆರ್. ನರಸಿಂಹಾಚಾರ್ಯರ ಭಾವಚಿತ್ರ ಅನಾವರಣ ಸಮಾರಂಭವು ನಡೆಯಿತು. ಮಿಥಿಕ್ ಸೊಸೈಟಿಯವರು ಇದನ್ನು ಏರ್ಪಡಿಸಿದ್ದರು.

ರಾಜ್ಯದ ಹಣಕಾಸಿನ ಸಚಿವ ಶ್ರೀ ಬಿ. ಡಿ. ಜತ್ತಿಯವರು ಭಾವಚಿತ್ರವನ್ನು ಅನಾವರಣ ಮಾಡಿದರು. ಈ ಸಮಾರಂಭದಲ್ಲಿ ಶ್ರೀ ನರಸಿಂಹಾಚಾರ್ಯರನ್ನು ಕುರಿತು ಶ್ರೀಮತಿ ಎಂ. ಆರ್. ಲಕ್ಷಮ್ಮ, ಶ್ರೀಗಳಾದ ಟಿ. ಟಿ. ಶರ್ಮ, ಜಿ. ವೆಂಕಟಸುಬ್ಬಯ್ಯ, ಅ. ನ. ಕೃಷ್ಣರಾವ್, ಬಿ. ಶಿವಮೂರ್ತಿ ಶಾಸ್ತ್ರಿಗಳು, ಡಾ|| ಶೇಷಾದ್ರಿ ಮತ್ತು ಆರ್. ತಿರುನಾರಾಯಣ ಅಯ್ಯಂಗಾರ್ ಇವರುಗಳು ಭಾಷಣ ಮಾಡಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರಾಗಿದ್ದ ಶ್ರೀ ಕೆ. ವೆಂಕಟಾಚಲಯ್ಯ ಎಂಬುವರು ವೆಲ್ಲೂರಿನಲ್ಲಿ ಕಳೆದ ತಿಂಗಳು ನಿಧಿವರರಾದರು.

**ಚಳ್ಳಕೆರೆ**

ಮೇ ದಿನಾಂಕ ೧೩ ರಂದು ಇಲ್ಲಿ ನಡೆದ ಪುರಜನರ ಸಭೆಯಲ್ಲಿ ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಮಂದಿರವನ್ನು ನಿರ್ಮಿಸಬೇಕೆಂದೂ ಒಂದು ಸಂಭಾವನಾ ಗ್ರಂಥವನ್ನು ಪ್ರಕಟಿಸಬೇಕೆಂದೂ ತೀರ್ಮಾನಿಸಲಾಯಿತು. ಸಂಭಾವನಾ ಗ್ರಂಥಕ್ಕೆ ಡಾ|| ಕುವೆಂಪು ಅವರು ಸಂಪಾದಕರಾಗಲು ಸಮ್ಮತಿಸಿದ್ದಾರೆಂದು ತಿಳಿದುಬಂದಿದೆ.

**ಹಾಸನ**

ಮೇ ೩೦ ರಂದು ಸಂಜೆ ಇಲ್ಲಿನ ಮಿತ್ರ ವೃಂದದ ಆಶ್ರಯದಲ್ಲಿ ಗಮಕ ಮತ್ತು ಸಾಹಿತ್ಯ ತರಗತಿಗಳನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಆರಂಭಿಸಿದರು. ಸಂಘದ ಅಧ್ಯಕ್ಷರಾದ ಶ್ರೀ ಜ್ಯಾಲನಯ್ಯನವರು ಸ್ವಾಗತ ಭಾಷಣ ಮಾಡಿದರು.

**ಬನಹಟ್ಟಿ**

ಸುಪ್ರಸಿದ್ಧ ಸಾಮಾಜಿಕ ಕಾರ್ಯಕರ್ತರೂ, ಕನ್ನಡ ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯರೂ ಆಗಿದ್ದ ಶ್ರೀ ಚನ್ನಮಲ್ಲಪ್ಪ ಚನ್ನವೀರಪ್ಪ ಅಬಕಾರ ಇವರು ಮೇ ದಿನಾಂಕ ೧೨ ರಂದು ನಿಧನರಾದರು. ಜಮಖಂಡಿ ಸಂಸ್ಥಾನದಲ್ಲಿ ಮರಾಠಿಗೆ ಪ್ರತಿಯಾಗಿ ಕನ್ನಡ ಚಳುವಳಿ ಹೂಡಿದವರು. ೧೯೪೯ರಲ್ಲಿ ರಬಕವಿಯಲ್ಲಿ ಸೇರಿದ್ದ ೩೧ ನೇ ಕನ್ನಡ ಸಾಹಿತ್ಯ ಸಮ್ಮೇಳನ ಜರುಗಲು ಇವರು ಕಾರಣಕರ್ತರಾಗಿದ್ದರು. ಇಲ್ಲಿ ಕರ್ನಾಟಕ ಸಂಘದ ವಾಚನಾಲಯ, ಕರ್ನಾಟಕ ಪುಸ್ತಕ ಮಂದಿರ – ಇವನ್ನು ಸ್ಥಾಪಿಸಿ ಕನ್ನಡದ ಬಗ್ಗೆ ಮಮತೆಯನ್ನು ಬೆಳಸಿದವರು.

**ಮದ್ರಾಸು**

ಇಲ್ಲಿನ ಆಯನಾವರಂ ಕನ್ನಡ ಸಂಘದ ಏಳನೇ ವಾರ್ಷಿಕೋತ್ಸವ ಇತ್ತೀಚೆಗೆ ನಡೆಯಿತು. ಸುಪ್ರಸಿದ್ಧ ಸಾಹಿತಿಗಳಾದ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು ಮುಖ್ಯ ಅತಿಥಿಗಳಾಗಿದ್ದರು. ಈ ಸಂದರ್ಭದಲ್ಲಿ ಅವರು ಮಾತನಾಡುತ್ತಾ, "ಕನ್ನಡಿಗರು ಕನ್ನಡ ಭಾಷೆಗೆ ಪ್ರಾಮುಖ್ಯಸ್ಥಾನ ನೀಡಬೇಕು. ಅದು ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯ. ಕನ್ನಡವು ಕರ್ನಾಟಕ ರಾಜ್ಯದ ರಾಜಭಾಷೆಯಾಗಬೇಕು" ಎಂದು ಮುಂತಾಗಿ ಹೇಳಿದರು. ಇಂದಿನ ಸಮಾರಂಭಕ್ಕೆ ಪ್ರೆಸಿಡೆನ್ಸಿ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಬಿ. ಜಿ. ಎಲ್. ಸ್ವಾಮಿಯವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ತಿ. ನಂ. ಶ್ರೀಕಂಠಯ್ಯನವರು ಈ ಸಮಾರಂಭದಲ್ಲಿ ಭಾಗವಹಿಸಿದ್ದು, ಹೊರನಾಡಿನ ಕನ್ನಡಿಗರು ಕನ್ನಡ ನುಡಿಯ ಸಂಸ್ಕೃತಿಯ, ಕಲೆಯ ಸೇವೆಯಲ್ಲಿ ತೊಡಗಿರುವುದನ್ನು ಶ್ಲಾಘಿಸಿದರು.

**ದೆಹಲಿ**

ಹೊಸದಾಗಿ ಓದು ಕಲಿತವರಿಗೆ ಉಪಯುಕ್ತವಾಗುವ ಪುಸ್ತಕಗಳನ್ನು ಬರೆಯುವವರಿಗೆ ಉತ್ತೇಜನ ನೀಡುವ ಯೋಜನೆಯಂತೆ, ಎಂಟನೇ ಬಹುಮಾನ ಸ್ಪರ್ಧೆಯಲ್ಲಿ 'ಮಾದರಚೆನ್ನ' ಎಂಬ ಕನ್ನಡ ಪುಸ್ತಕದ ಲೇಖಕರಾದ ಸ್ವಾಮಿಮಹಾಮನೆ ಅವರಿಗೆ ೫೦೦ ರೂಪಾಯಿಗಳ ಬಹುಮಾನ ದೊರೆತಿದೆ.

# ಸಂಪಾದಕೀಯ

## ೧. ಶಿಕ್ಷಣ ಸಮಸ್ಯೆ

ರಾಷ್ಟ್ರವು ಇಂದು ಎದುರಿಸುತ್ತಲಿರುವ ಬೃಹತ್ ಸಮಸ್ಯೆಗಳಲ್ಲಿ ಶಿಕ್ಷಣ ಸಮಸ್ಯೆಯು ಹೆಚ್ಚು ಗಂಭೀರ ಸ್ವರೂಪದ್ದಾಗಿದೆ. ಅರಿವಿನ ಅಭಾವವು ಅಳಿಯುವ ತನಕ ದೇಶಾಭ್ಯುದಯವು ಆಗಸ ಕುಸುಮವೇ ಸರಿ. ಭಾರತದಂತಹ ವಿಶಾಲ ರಾಷ್ಟ್ರದ ಮಕ್ಕಳಿಗೆಲ್ಲ ಶಿಕ್ಷಣದ ಸೌಲಭ್ಯಗಳನ್ನು ಒದಗಿಸುವುದು ಸಾಮಾನ್ಯವಾದ ಕಾರ್ಯವಲ್ಲ. ಈ ದಿಸೆಯಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಕಾರ್ಯಪ್ರವೃತ್ತವಾಗಿ ಗಣನೀಯ ಪ್ರಗತಿಯನ್ನು ಸಾಧಿಸಿರುವುದು ಗಮನಾರ್ಹ ಸಂಗತಿಯಾಗಿದೆ.

ದೇಶದ ಜನಸಂಖ್ಯೆಯು ಹೆಚ್ಚಿದಂತೆ ಈ ಸಮಸ್ಯೆಯ ಸ್ವರೂಪವು ಗಂಭೀರವಾಗತೊಡಗಿದೆ. ಭಾರತದ ಸಂವಿಧಾನದ ನಿರ್ದೇಶದಂತೆ ೧೪ ವರ್ಷದವರೆಗಿನ ಮಕ್ಕಳಿಗೆಲ್ಲ ಉಚಿತ ಮತ್ತು ಕಡ್ಡಾಯದ ಶಿಕ್ಷಣ ದೊರೆಯಬೇಕು. ಈ ಮಹಾನ್ ಗುರಿ ಸಾಧನೆಯು ಅಲ್ಪ ಅವಧಿಯಲ್ಲಿ ಸಾಧ್ಯವಾಗಲಾರದೆಂಬುದನ್ನು ಅರಿತ ಸರ್ಕಾರವು ಕ್ರಮ ಕ್ರಮವಾಗಿ ಅದನ್ನು ಸಾಧಿಸುವ ಯೋಜನೆಗಳನ್ನು ರೂಪಿಸಿಕೊಂಡಿದೆ. ತೃತೀಯ ಯೋಜನಾವಧಿಯಲ್ಲಿ ೬ ರಿಂದ ೧೧ ವರ್ಷದವರೆಗಿನ ವಿದ್ಯಾರ್ಥಿಗಳಿಗೆ ಉಚಿತ ಮತ್ತು ಕಡ್ಡಾಯದ ಪ್ರಾಥಮಿಕ ಶಿಕ್ಷಣ ನೀಡುವ ಗುರಿ ಮುಟ್ಟಬೇಕೆಂದು ನಿರ್ಧರಿಸಿದೆ. ಈ ವಯಸ್ಸಿನ ಮಕ್ಕಳೆಲ್ಲರಿಗೂ ಶಿಕ್ಷಣ ನೀಡಲು ಲಕ್ಷ ಸಂಖ್ಯೆಯಲ್ಲಿ ಶಾಲೆಗಳು ಶಿಕ್ಷಕರು ಬೇಕು. ಪಠ್ಯ ಪುಸ್ತಕಗಳು, ಗ್ರಂಥಭಂಡಾರ, ಕ್ರೀಡಾ ಸೌಕರ್ಯಗಳೂ ಬೇಕು. ಇವೆಲ್ಲವನ್ನೂ ನಿರ್ದಿಷ್ಟ ಅವಧಿಯಲ್ಲಿ ಸಮರ್ಪಕ ರೀತಿಯಲ್ಲಿ ಒದಗಿಸುವುದು ಸಾಧ್ಯವಾಗಬಹುದೆ? ಕಳೆದ ಕೆಲವು ವರ್ಷಗಳ ಅನುಭವದಿಂದ ಹೇಳುವುದಾದರೆ ಇದು ಸಾಧ್ಯವಾಗಲಾರದು. ಇಂದಿನ ಆಮೆ ವೇಗದಿಂದ ನಡೆದರೆ ಬರುವ ಹತ್ತು ವರ್ಷಗಳಲ್ಲಿಯೂ ಈ ಗುರಿಯನ್ನು ಮುಟ್ಟಲು ಶಕ್ಯವಾಗಲಾರದು.

ಭಾರತದ ಮಕ್ಕಳಿಗೆಲ್ಲ ಶಿಕ್ಷಣದ ಸೌಕರ್ಯವನ್ನು ಒದಗಿಸುವುದು ಸರ್ಕಾರದ ಆದ್ಯ ಕರ್ತವ್ಯ. ನಿಜ. ಈ ಕಾರ್ಯವನ್ನು ಸಾರ್ವಜನಿಕರ ಸಹಕಾರವಿಲ್ಲದೆ ಸರ್ಕಾರ ಪೂರೈಸಲಾರದು. ಮಕ್ಕಳಿಗೆಲ್ಲ ಶಿಕ್ಷಣ ನೀಡಬೇಕು; ಆ ಶಿಕ್ಷಣವು ಅವರ ಭವಿಷ್ಯ ಬಾಳಿಗೆ ಸಹಾಯಕವಾಗಿರಬೇಕು. ಇವೆರಡೂ ಒಂದೇ ನಾಣ್ಯದ ಎರಡು ಮುಖಗಳು. ನಮ್ಮ ದೇಶದಲ್ಲಿಂದು ಶಿಕ್ಷಣ ನೀಡುವ ಅವಸರದಲ್ಲಿ ಎರಡನೆಯ ಅಂಶವನ್ನು ಕಡೆಗಣಿಸಿದ್ದು ಕಂಡುಬರುತ್ತಲಿದೆ. ಇದು ದುರದೃಷ್ಟಕರ ಸಂಗತಿ. ನಾಯಿಕೊಡೆಗಳಂತೆ ಶಾಲೆಗಳು ಹುಟ್ಟಿಕೊಂಡ ಮಾತ್ರಕ್ಕೆ ಶಿಕ್ಷಣದ ಸಮಸ್ಯೆ ಇತ್ಯರ್ಥವಾಯಿತೆಂದು ಭಾವಿಸುವುದು ತಪ್ಪು. ಮಕ್ಕಳ ಭವಿಷ್ಯ ಜೀವನವನ್ನು ರೂಪಿಸುವಂತಹ, ರಾಷ್ಟ್ರಕ್ಕೆ ಪ್ರಯೋಜನಕಾರಿಯಾಗುವಂತಹ ಶಿಕ್ಷಣ ದೊರೆಯುವುದು ಅಗತ್ಯವಾಗಿದೆ. ಓದು ಬರೆಹ ಕಲಿಸುವುದು ಮಾತ್ರ ಶಿಕ್ಷಣದ ಉದ್ದೇಶವಲ್ಲ. ಮಾನವತೆಯ ಮೌಲ್ಯಗಳನ್ನು ಬೋಧಿಸಿ ರಾಷ್ಟ್ರದ ಸತ್ಪ್ರಜೆಯಾಗುವಂತೆ ವಿದ್ಯಾರ್ಥಿಗೆ ತರಬೇತಿ ನೀಡುವುದೇ ಶಿಕ್ಷಣದ ಮೂಲ ಗುರಿ. ದುರ್ದೈವದಿಂದ ನಮ್ಮ ನಾಯಕರ ಗಮನ ಮೂಲಗುರಿಯತ್ತ ಹೆಚ್ಚಾಗಿ ಹರಿದಿಲ್ಲ. ಎಂಥ ಮಾದರಿಯದೇ ಆಗಲಿ ಒಟ್ಟಿನಲ್ಲಿ ಮಕ್ಕಳಿಗೆ ಶಿಕ್ಷಣ ದೊರೆತರೆ ಸಾಕು, ಎನ್ನುವ ಮನೋಧರ್ಮ ಮಾರಕವಾದುದು. ಅದು ತೊಲಗಿದಷ್ಟೂ ದೇಶಕ್ಕೆ ಕ್ಷೇಮ.

ನಮ್ಮ ದೇಶದ ಶಿಕ್ಷಣವ್ಯವಸ್ಥೆ ಇನ್ನೂ ಪ್ರಯೋಗಾವಸ್ಥೆಯಲ್ಲಿದೆ. ಏಕರೂಪದ, ನಿಶ್ಚಿತಸ್ವರೂಪದ ಶಿಕ್ಷಣ ವ್ಯವಸ್ಥೆಯು ಮೂಡಿ ಬರಬೇಕಾಗಿದೆ. ನಮ್ಮ ಸರ್ಕಾರ ಮತ್ತು ಶಿಕ್ಷಣ ತಜ್ಞರು ಮಕ್ಕಳ ಮನಸ್ಸು, ವಯೋಧರ್ಮ, ಮತ್ತು ರಾಷ್ಟ್ರದ ಅಗತ್ಯತೆಗಳನುಗುಣವಾದ ಶಿಕ್ಷಣದ ಯೋಜನೆಯನ್ನು ಸಿದ್ಧಪಡಿಸಲು ಇನ್ನೂ ಸಮರ್ಥರಾಗಿಲ್ಲ. ಶಿಕ್ಷಣದ ಹೊಣೆ ಮುಖ್ಯವಾಗಿ ರಾಜ್ಯಸರ್ಕಾರಗಳಿಗೆ ಸೇರಿದ್ದು. ರಾಜ್ಯಸರ್ಕಾರಗಳು ತಮಗೆ ಸರಿದೋರಿದ ದಾರಿಯಲ್ಲಿ ಕಾರ್ಯ ಪ್ರವೃತ್ತವಾಗಿವೆ. ಹೀಗಾಗಿ ರಾಷ್ಟ್ರೀಯ ಸ್ವರೂಪದ ಯೋಜನೆಯು ಇಲ್ಲದಾಗಿದೆ. ಮೊನ್ನೆ ಹೊಸದಿಲ್ಲಿಯಲ್ಲಿ ಸಮಾವೇಶನಾದ ರಾಜ್ಯ ಶಿಕ್ಷಣ ಶಾಖೆಗಳ ಕಾರ್ಯದರ್ಶಿಗಳ ಪರಿಷತ್ತು ಶಿಕ್ಷಣ ಕ್ಷೇತ್ರವು ಎದುರಿಸಲಿರುವ ಸಮಸ್ಯೆಯೆಡೆಗೆ ಸರ್ಕಾರದ ಮತ್ತು ಸಾರ್ವಜನಿಕರ ಗಮನ ಸೆಳೆದಿದೆ. ಶಿಕ್ಷಣ ಶಾಖೆಯ ಬಾಬುಗಳಿಗೆ ಇಂದು ನಿಗದಿಯಾಗಿರುವ ಹಣವು ಸಾಲದೆಂದೂ, ಅದು ಇನ್ನೂ ಹೆಚ್ಚಬೇಕೆಂದೂ ಈ ಪರಿಷತ್ತು ಶಿಫಾರಸು ಮಾಡಿವೆ. ತೃತೀಯ ಯೋಜನೆಯಲ್ಲಿ ಶಿಕ್ಷಣಕ್ಕಾಗಿ ನಿಗದಿಯಾದ ಹಣದಲ್ಲಿ ಕಡಿತ ಮಾಡಕೂಡದೆಂಬುದು ಕೇಂದ್ರ ಸರ್ಕಾರದ ನೀತಿಯೂ ಆಗಿದೆ.

ಆದರೆ ಕೆಲವು ರಾಜ್ಯ ಸರ್ಕಾರಗಳು ಶಿಕ್ಷಣಕ್ಕಾಗಿ ನಿಗದಿಯಾದ ಹಣದಲ್ಲಿಯೇ ಕಡಿತ ಮಾಡಿವೆ. ಇಂಥ ರಾಜ್ಯಗಳ ಪಟ್ಟಿಯಲ್ಲಿ ನಮ್ಮ ಸರ್ಕಾರವೂ ಸೇರಿಕೊಂಡಿರುವುದು ಶೋಚನೀಯ ಸಂಗತಿ. ೧೯೬೨–೬೩ ರಲ್ಲಿ ಶಿಕ್ಷಣಕ್ಕಾಗಿ ಸುಮಾರು ೨೧ ಕೋಟಿ ರೂಪಾಯಿಗಳನ್ನು ತೆಗೆದಿರಿಸಿದ ರಾಜ್ಯಸರ್ಕಾರವು ೧೯೬೩–೬೪ ರಲ್ಲಿ ಕೇವಲ ೧೯ ಕೋಟಿ ರೂಪಾಯಿಗಳನ್ನು ಮಾತ್ರ ತೆಗೆದಿರಿಸಿದೆ. ಕಡ್ಡಾಯದ ಹಾಗೂ ಉಚಿತ ಪ್ರಾಥಮಿಕ ಶಿಕ್ಷಣವನ್ನು ಜಾರಿಯಲ್ಲಿ ತಂದಿರುವ ಸರ್ಕಾರವು ಸುಮಾರು ೨ ಕೋಟಿ ರೂಪಾಯಿಗಳನ್ನು ಈ ವರ್ಷ ಕಡಿತ ಮಾಡಿರುವುದು ಸಖೇದಾಶ್ಚರ್ಯವನ್ನುಂಟು ಮಾಡಿವೆ. ಈ ಕ್ರಮವು ಕೇಂದ್ರದ ನೀತಿಗೆ ವಿರೋಧವಾಗಿದೆ. ಪ್ರತಿ ವರ್ಷವೂ ಪ್ರಾಥಮಿಕ ಶಾಲೆಗಳಿಗೆ ಸೇರುವ ವಿದ್ಯಾರ್ಥಿಗಳ ಸಂಖ್ಯೆ ಸುಮಾರು ಎರಡು ಲಕ್ಷದಷ್ಟು ಹೆಚ್ಚುತ್ತದೆ. ಇದಕ್ಕಾಗಿ ಕನಿಷ್ಠ ಐದುಸಾವಿರ ಜನ ಶಿಕ್ಷಕರಾದರೂ ಬೇಕಾಗುತ್ತಾರೆ. ಐದು ಸಾವಿರ ಶಾಲೆಗಳನ್ನಾದರೂ ಹೊಸದಾಗಿ ಪ್ರಾರಂಭಿಸಬೇಕಾಗುತ್ತದೆ. ಇದೇ ಪ್ರಕಾರವಾಗಿ ಮಾಧ್ಯಮಿಕ ಹಾಗೂ ಉಚ್ಚಶಿಕ್ಷಣ ಪಡೆಯುವವರ ಸಂಖ್ಯೆಯೂ ಹೆಚ್ಚುವುದು ಸಹಜವಾದುದೇ. ವಸ್ತುಸ್ಥಿತಿ ಹೀಗಿರುವಾಗ ತೃತೀಯ ಯೋಜನೆಯಲ್ಲಿ ಶಿಕ್ಷಣಕ್ಕಾಗಿ ನಿಗದಿಯಾದ ಹಣದಲ್ಲಿಯೇ ಕೇಂದ್ರವು ಕಡಿತ ಮಾಡಿರುವುದು ವಿವೇಕಿಗಳು ಒಪ್ಪದ ಮಾತು. ವಿದ್ಯಾರ್ಥಿಗಳ ಶಿಕ್ಷಣದ ಅಗತ್ಯತೆಗಳನ್ನು ಪೂರೈಸುವುದು ಸರ್ಕಾರದ ಪ್ರಥಮ ಕರ್ತವ್ಯ. ಅದನ್ನು ನೆರವೇರಿಸುವುದರಲ್ಲಿಯೇ ಅದರ ಶ್ರೇಯಸ್ಸು ಹಾಗೂ ದೇಶದ ಕಲ್ಯಾಣವು ಅಡಕವಾಗಿವೆ ಎಂದು ನಾವು ಭಾವಿಸುತ್ತೇವೆ. ಈ ವರ್ಷ ಹಣ ಕಡಿಮೆ ಮಾಡಿದುದರ ಪರಿಣಾಮ ಸಾಹಿತ್ಯ ಮತ್ತು ಕಲಾಭಿವೃದ್ಧಿ ಕಾರ್ಯಗಳ ಮೇಲೆ ಆಗದೇ ಇಲ್ಲ. ಕನ್ನಡ ನಿಘಂಟು, ಕನ್ನಡ–ಕೋಶದ ರಚನಾಕಾರ್ಯಗಳ ಮೇಲೆ ಬಲವಾದ ಏಟು ಬಿದ್ದು ಅವು ನಿಂತುಹೋಗುವ ಪ್ರಸಂಗ ಪ್ರಾಪ್ತವಾಗಿದೆ. ಸಾಹಿತ್ಯ ಮತ್ತು ಕಲಾಭಿವೃದ್ಧಿಯೂ ಸರ್ಕಾರದ ಕರ್ತವ್ಯಗಳಲ್ಲೊಂದಾಗಿದೆ. ಈ ಕರ್ತವ್ಯವನ್ನು ಯಾವುದೇ ಕಾರಣಗಳಿಗಾಗಿ ಕಡೆಗಣಿಸುವುದು ಸಮಂಜಸವೆನಿಸಲಾರದು. ಸರ್ಕಾರವು ಇನ್ನಿತರ ಅಮುಖ್ಯ ಬಾಬುಗಳ ವೆಚ್ಚವನ್ನು ಕಡಮೆ ಮಾಡಿ ಶಿಕ್ಷಣದ ಬಾಬಿಗೆ ಇನ್ನೂ ಅಧಿಕ ಹಣವನ್ನು ಒದಗಿಸಬೇಕೆಂದು ನಾವು ಸೂಚಿಸಬಯಸುತ್ತೇವೆ.

ಇದೇ ಸಂದರ್ಭದಲ್ಲಿ ಇನ್ನೊಂದು ಮುಖ್ಯ ಅಂಶವನ್ನು ಸರ್ಕಾರದ ಗಮನಕ್ಕೆ ತರಲಿಚ್ಛಿಸುತ್ತೇವೆ. ಶಿಕ್ಷಣಕ್ಷೇತ್ರವು ರಾಜಕೀಯದಿಂದ ಪೂರ್ಣ ಮುಕ್ತವಾಗಿರಬೇಕು. ಇಂದಿನ ವಿದ್ಯಮಾನಗಳನ್ನು ಪರಿಶೀಲಿಸಿದರೆ ಶಿಕ್ಷಣಕ್ಷೇತ್ರದಲ್ಲಿ ರಾಜಕೀಯ ಕೈವಾಡವಿರುವುದು ಕಂಡುಬರುತ್ತದೆ. ಅಯೋಗ್ಯರು, ಸಂಧಿಸಾಧಕರು, ಸ್ವಾರ್ಥಿಗಳು ಈ ಪವಿತ್ರಕ್ಷೇತ್ರದಲ್ಲಿ ಕಾಲಿರಿಸಿ ಅದರ ಘನತೆ ಹಾಗೂ ಪಾವಿತ್ರತೆಗಳನ್ನು ಹಾಳುಮಾಡಲು ಖಂಡಿತ ಅವಕಾಶವಿರಕೂಡದು. ಸಮರ್ಥರೂ, ಕರ್ತವ್ಯ ನಿಷ್ಠರೂ, ಸಚ್ಚರಿತ್ರರೂ ಆದ ವಿದ್ವನ್ಮಣಿಗಳಿಗೆ ಈ ಕ್ಷೇತ್ರ ಮೀಸಲಾಗಿರಬೇಕು. ಯಾರು ಬೇಕಾದರೂ ಇಲ್ಲಿ ಪ್ರವೇಶಿಸಬಹುದೆಂಬ ಮಾತು, ಹಳೆಯದಾಗಿ ಸಮರ್ಥರೂ ಮತ್ತು ಸಚ್ಚರಿತ್ರರಿಗೆ ಮಾತ್ರ ಇಲ್ಲಿ ಅವಕಾಶ ಉಂಟೆಂಬ ಮಾತು ಶಾಸನವಾಗಬೇಕು. ಈ ಕ್ಷೇತ್ರದ ಆಡಳಿತದಲ್ಲಿಯೂ ಆಮೂಲಾಗ್ರ ಬದಲಾವಣೆಯಾಗಬೇಕು. ಶಿಕ್ಷಣದ ಸೂತ್ರಗಳನ್ನರಿಯದ ಅಧಿಕಾರಿಗಳ ಸ್ಥಳದಲ್ಲಿ ಈ ಕ್ಷೇತ್ರದಲ್ಲಿ ಬಹು ವರ್ಷಗಳಿಂದಲೂ ಸೇವೆ ಸಲ್ಲಿಸಿದ ಶಿಕ್ಷಣವೇತ್ತರ ನೇಮಕವಾಗುವುದು ಅಗತ್ಯ.

ರಾಜ್ಯದ ಇಂದಿನ ಶಿಕ್ಷಣ ಸಚಿವರು ಸುಧಾರಣೆಗಳಿಗೆ ಹೆಸರಾಗಿದ್ದಾರೆ. ಅವರು ಈ ಕ್ಷೇತ್ರದ ಶುದ್ಧೀಕರಣಕ್ಕಾಗಿ ಕಂಕಣ ಕಟ್ಟಿದ್ದಾರೆ. ಏಕರೂಪದ ಶಾಸನ, ನಿಯಮಗಳನ್ನು ಜಾರಿಗೆ ತರುವುದರಲ್ಲಿ ಸಮರ್ಥರಾಗಿದ್ದಾರೆ. ಅವರ ಅಧಿಕಾರಾವಧಿಯಲ್ಲಿ ನಮ್ಮ ರಾಜ್ಯದ ಶಿಕ್ಷಣ ಸಮಸ್ಯೆಯು ಪೂರ್ಣ ಪರಿಹಾರವಾಗುವುದೆಂದು ನಾವು ಆಶಿಸುತ್ತೇವೆ.

## ೨. ಮಹಾರಾಷ್ಟ್ರ ಸರ್ಕಾರದ ಮಲತಾಯಿ ನೀತಿ

ಮಹಾರಾಷ್ಟ್ರದಲ್ಲಿ ಬಾಳುತ್ತಿರುವ ಕನ್ನಡಿಗರನ್ನು ಮಲಮಕ್ಕಳಂತೆ ಕಾಣುತ್ತಿರುವ ಮಹಾರಾಷ್ಟ್ರ ಸರ್ಕಾರವು ಅವರ ಹಿತಾಸಕ್ತಿಗಳನ್ನು ಕಡೆಗಣಿಸಿದೆ. ಕನ್ನಡ ಮಕ್ಕಳಿಗೆ ಕನ್ನಡದಲ್ಲಿ ಶಿಕ್ಷಣ ವ್ಯವಸ್ಥೆಯನ್ನು ಮಾಡುವ ತನ್ನ ಕರ್ತವ್ಯದಲ್ಲಿ ಸೋತಿದೆ. ಮಹಾರಾಷ್ಟ್ರದ ಸರ್ಕಾರದ ಈ ವರ್ತನೆಯು ಸಂವಿಧಾನ ವಿರೋಧಿಯಾಗಿದೆ ಎಂದು ನಮ್ಮ ಮತ. ಭಾಷ ಅಲ್ಪಸಂಖ್ಯಾತರ ಹಿತರಕ್ಷಣೆ ರಾಜ್ಯ ಸರ್ಕಾರದ ಕರ್ತವ್ಯಗಳಲ್ಲೊಂದಾಗಿದೆ. ಭಾರತ ಸಂವಿಧಾನದ ೨೯ ಮತ್ತು ೩೦ ನೇ ಅನುಚ್ಛೇದಗಳ ಪ್ರಕಾರ ಭಾಷಾ ಅಲ್ಪಸಂಖ್ಯಾತರಿಗೆ ತಮ್ಮ ಲಿಪಿ, ಭಾಷೆ, ಸಂಸ್ಕೃತಿಗಳನ್ನು ರಕ್ಷಿಸಿಕೊಳ್ಳುವ ಮೂಲಭೂತ ಅಧಿಕಾರಗಳಿವೆ. ಸಂವಿಧಾನದ ೩೫೦-ಅ ಅನುಚ್ಛೇದವು ಭಾಷಾ ಅಲ್ಪಸಂಖ್ಯಾತರ ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿ ಶಿಕ್ಷಣದ ವ್ಯವಸ್ಥೆ ಮಾಡುವುದು ರಾಜ್ಯ ಸರ್ಕಾರದ

ಕೆಲಸವಾಗಿದೆ, ಎಂದು ಘೋಷಿಸುತ್ತಿದೆ. ಮಹಾರಾಷ್ಟ್ರ ಸರ್ಕಾರವು ಕನ್ನಡಿಗರ ವಿಷಯದಲ್ಲಿ ನಡೆದುಕೊಳ್ಳುವ ರೀತಿ ನೀತಿಗಳನ್ನು ನೋಡಿದರೆ ಅದು ಸಂವಿಧಾನದ ನಿರ್ದೇಶವನ್ನು ಅಲಕ್ಷಿಸಿದೆ ಎಂಬುದು ಸ್ಪಷ್ಟವಾಗುತ್ತಿದೆ. ಇದು ಸರ್ಕಾರಕ್ಕೆ ಶೋಭಿಸದ ಮಾತು.

ಶಿಕ್ಷಣದ ವ್ಯವಸ್ಥೆಯಲ್ಲಿ ತಾರತಮ್ಯಭಾವನೆ ಇರಕೂಡದು. ಅಲ್ಲಿ ಎಲ್ಲ ಮಕ್ಕಳಿಗೂ ಸಮಾನಾವಕಾಶಗಳಿರಬೇಕು. ಮರಾಠಿ ಮಗುವಿಗೆ ಶಿಕ್ಷಣದ ಎಲ್ಲಾ ಸೌಲಭ್ಯಗಳೂ ಉಂಟು; ಆದರೆ ನೆರೆಮನೆಯ ಕನ್ನಡ ಮಗುವಿಗೆ ಅವು ಹೆಚ್ಚಾಗಿಲ್ಲ ಎನ್ನುವುದು ಧರ್ಮವಿರೋಧಿ ಮಾತು. ಮರಾಠಿ ಮಕ್ಕಳ ಶಿಕ್ಷಣ ವಿಷಯದಲ್ಲಿ ತೋರುವ ಆಸಕ್ತಿಯನ್ನೇ ಕನ್ನಡ ಮಕ್ಕಳ ವಿದ್ಯಾಭ್ಯಾಸದ ಬಗ್ಗೆಯೂ ತೋರುವುದು ಸರ್ಕಾರದ ಧರ್ಮವಾಗಿದೆ. ಕನ್ನಡ ಮಕ್ಕಳಿಗೆ ಬೇಕಾದ ಶಾಲೆಗಳು, ಪಠ್ಯ ಪುಸ್ತಕಗಳು, ತರಬೇತಾದ ಶಿಕ್ಷಕರು, ಇನ್ನಿತರ ಶಿಕ್ಷಣದ ಸೌಲಭ್ಯಗಳನ್ನು ಒದಗಿಸುವುದು ಮಹಾರಾಷ್ಟ್ರ ಸರ್ಕಾರದ ಕರ್ತವ್ಯವಾಗಿದೆ. ತನ್ನ ಈ ಕರ್ತವ್ಯವನ್ನು ಪಾಲಿಸುವಂತೆ ನಮ್ಮ ರಾಜ್ಯ ಸರ್ಕಾರವು ಅದನ್ನು ಒತ್ತಾಯಪಡಿಸಲಿ. ಮಹಾರಾಷ್ಟ್ರ ಸರ್ಕಾರವು ಕನ್ನಡಿಗರು ವಾಸಿಸುವ ಪ್ರದೇಶಗಳ ಅಭಿವೃದ್ಧಿಕಾರ್ಯದಲ್ಲಿಯೂ ಹೆಚ್ಚು ಆಸಕ್ತಿ ವಹಿಸಿಲ್ಲವೆಂಬ ದೂರು ಬೇರೇ ಇದೆ. ಕನ್ನಡಿಗರ ನಿಯೋಗಗಳನ್ನು ಮಹಾರಾಷ್ಟ್ರದ ಮಂತ್ರಿಗಳು ಗೌರವಯುತವಾಗಿ ಸ್ವಾಗತಿಸುವುದಿಲ್ಲ ಮತ್ತು ಅವರ ಬೇಡಿಕೆಗಳಿಗೆ ಲಕ್ಷ್ಯಗೊಡುವುದಿಲ್ಲವೆಂಬ ಆರೋಪಗಳು ಇಲ್ಲದಿಲ್ಲ. ಈ ಪರಿಸ್ಥಿತಿ ದೂರಾಗಬೇಕು. ಮಹಾರಾಷ್ಟ್ರದಲ್ಲಿ ವಾಸಿಸುವ ಕನ್ನಡಿಗರು ಭಾರತೀಯರಲ್ಲವೆ? ಅವರು ಮಹಾರಾಷ್ಟ್ರದ ಪ್ರಜೆಗಳಲ್ಲವೆ? ಅವರಿಗೆ ತಮ್ಮ ಹಿತರಕ್ಷಣೆಯ ಹಕ್ಕಿಲ್ಲವೆ? ಮಹಾರಾಷ್ಟ್ರದ ಸರ್ಕಾರವು ಮಲತಾಯಿ ಧೋರಣೆಯನ್ನು ಬಿಟ್ಟು ಕನ್ನಡಿಗರನ್ನು ಪ್ರೀತಿ ವಿಶ್ವಾಸಗಳಿಂದ ಕಂಡು ಅವರ ಕುಂದುಕೊರತೆಗಳನ್ನು ನಿವಾರಿಸಲು ಪ್ರಯತ್ನಿಸಬೇಕೆಂದು ನಾವು ನಮ್ರತೆಯಿಂದ ಸೂಚಿಸುತ್ತೇವೆ.

---

ಸಂಪಾದಕರು: ಶ್ರೀ ಅನ್ನದಾನಯ್ಯ ಪುರಾಣಿಕ,ಬಿ.ಕಾಮ್., ಎಲ್‌ಎಲ್.ಬಿ. ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ. ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು—೧೮

# ಸಾದರ ಸ್ವೀಕಾರ

**ಷೇಕ್ಸ್‌ಪಿಯರ್** (ಪೂರ್ವಭಾಗ): ಲೇಖಕರು: ಶ್ರೀ ಎ. ಎನ್. ಮೂರ್ತಿರಾವ್; ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯ; ಸೈಜು ೧/೮ ಡೆಮ್ಮಿ; ಪುಟ ೪೩೦; ಬೆಲೆ ರೂ. ೭-೭೫ ನ.ಪೈ.

**ಅಂತರಾಂಶ ಕಲನವಿನ್ಯಾಸ (Differential Calculus):** ಲೇಖಕರು: ಶ್ರೀ ಬಿ. ಸೀತಾರಾಮ ಶಾಸ್ತ್ರಿ; ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯ; ಸೈಜು ೧/೮ ಕ್ರೌನ್; ಪುಟ ೪೧೦ + ೨೯; ಬೆಲೆ ರೂ. ೮-೫೦ ನ.ಪೈ.

**ರೈತನ ಸಮಾಜ:** ಲೇಖಕರು: ಶ್ರೀ ಡಿ. ಕೃಷ್ಣಯ್ಯಂಗಾರ್; ಸೈಜು ೧/೮ ಕ್ರೌನ್; ಪುಟ ೧೭೫ + ೯; ಬೆಲೆ ರೂ. ೧-೭೫ ನ.ಪೈ.

**ಮೈಸೂರ ಮಲ್ಲಿಗೆ:** ಲೇಖಕರು: ಶ್ರೀ ಕೆ. ಎಸ್. ನರಸಿಂಹಸ್ವಾಮಿ; ಸೈಜು ೧/೮ ಕ್ರೌನ್; ಪುಟ ೭೬; ಬೆಲೆ ರೂ. ೧-೫೦ ನ.ಪೈ.

**ಸ್ವಪ್ನದ ಮಂತ್ರಿಗಳು** (ರಾಜಕೀಯ ನಾಟಕ): ಲೇಖಕರು: ಶ್ರೀ ಹೆಚ್. ರಾಮಕೃಷ್ಣರಾವ್; ಸೈಜು ೧/೮ ಫುಲ್‌ಸ್ಕೇಪ್; ಪುಟ ೯೯; ಬೆಲೆ ರೂ. ೧-೫೦ ನ.ಪೈ.

**ಗೀತಾಕುಂಜ:** ಲೇಖಕರು: ಶ್ರೀ ಕೃ. ಲಿಂಗೋಪಂತ್ ಬಾದಾಮಿ; ಸೈಜು ೧/೮ ಕ್ರೌನ್; ಪುಟ ೩೨; ಬೆಲೆ ೧೨ ನ.ಪೈ.

**ಪರಿವರ್ತನೆ:** ಲೇಖಕರು: ಶ್ರೀ ನಂದನ; ಪ್ರಕಾಶಕರು: ಶ್ರೀ ಬದರಿ ಪ್ರಕಾಶನ, ೩೪, II ಮೇನ್ ರಸ್ತೆ, ಬೆಂಗಳೂರು-೧೮; ಸೈಜು ೧/೮ ಕ್ರೌನ್; ಪುಟ ೮೦; ಬೆಲೆ ೭೩ ನ.ಪೈ.

**ಗೋಕುಲ ನಿರ್ಗಮನ** (ಗೀತ ರೂಪಕ): ಲೇಖಕರು: ಶ್ರೀ ಪು. ತಿ. ನರಸಿಂಹಾಚಾರ್; ಪ್ರಕಾಶಕರು: ಕಾವ್ಯಾಲಯ; ಸೈಜು ೧/೮ ಕ್ರೌನ್; ಪುಟ ೬೨; ಬೆಲೆ ರೂ. ೧.

**ಬೃಂದಾವನ:** ಲೇಖಕರು: ಶ್ರೀ ಮೈ. ಶೇ. ಅನಂತಪದ್ಮನಾಭರಾವ್; ಸೈಜು ೧/೮ ಕ್ರೌನ್; ಪುಟ ೫೮.

**ಕರ್ನಾಟಕದ ರಾಜಕೀಯ ಪರಿವರ್ತನೆ:** ಲೇಖಕರು: ಶ್ರೀ ಹೆಚ್. ರಾಮಕೃಷ್ಣರಾವ್; ಸೈಜು ೧/೮ ಕ್ರೌನ್; ಪುಟ ೧೪೪; ಬೆಲೆ ರೂ. ೨.

**ಮಣಿವಚನಗಳು:** ಲೇಖಕರು: ಶ್ರೀ ಷ. ಬ್ರ. ಘ. ಚ. ಚೆನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು; ಪ್ರಕಾಶಕರು: ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಲಿ, ಮೂರು ಸಾವಿರ ಮಠ, ಹುಬ್ಬಳ್ಳಿ; ಸೈಜು ೧/೮ ಕ್ರೌನ್; ಪುಟ ೪೦೪; ಬೆಲೆ ರೂ. ೪.

* **ಬಿಲ್ವಬಿನ್ನಾಣ:** ಲೇಖಕರು: ಶ್ರೀ ಜ.ಚ.ನಿ., ಗೂಳೂರು; ಸೈಜು ೧/೮ ಕ್ರೌನ್; ಪುಟ ೫೫; ಬೆಲೆ ೭೫ ನ.ಪೈ.

* **ತಾಯಿಯುಹರು:** ಲೇಖಕರು: ಶ್ರೀ ಸಿಂಪಿ ಲಿಂಗಣ್ಣ; ಪ್ರಕಾಶಕರು: ಶ್ರೀ ಅರವಿಂದ ಗ್ರಂಥಾಲಯ; ಸೈಜು ೧/೮ ಕ್ರೌನ್; ಬೆಲೆ ರೂ. ೧-೫೦ ನ.ಪೈ.

ಈ ಕೆಳಗೆ ನಮೂದಿಸಿರುವ ಹಿಂದೀ ಗ್ರಂಥಗಳು ಭಾರತ ಸರ್ಕಾರದ ಸಾಹಿತ್ಯ ಅಕಾಡೆಮಿಯವರಿಂದ ಪ್ರಕಟಿಸಲ್ಪಟ್ಟು ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಪಬ್ಲಿಕೇಶನ್ಸ್, ಹಿಂದಿ ಸೆಕ್ಷನ್, ಬೆಂಗಳೂರು, ಇವರ ಮೂಲಕ ಪರಿಷತ್ತಿನ ಸರಸ್ವತೀ ಭಂಡಾರಕ್ಕೆ ಉಚಿತವಾಗಿ ಕೊಡಲ್ಪಟ್ಟಿರುವುದನ್ನು ಪರಿಷತ್ತು ಕೃತಜ್ಞತೆಯಿಂದ ಸ್ವೀಕರಿಸಿದೆ:-

೧. ದಾದಾ ಕಹಾ ಥಿ, ೨. ಏಶಿಯಾಕೆ ದುರ್ಗಂ ಭೂಖಂಡೋಂ ಮೇರ, ೩. ಕಾಲೆ ಸಾಗರಕೀ ಗೋದ್ ಮೇರಿ, ೪. ಪರಶುರಾಮ್‌ಕೀ ಚುನೀಹುಯಿ ಕಹಾನಿಯಾ, ೫. ಅನ್ವೇಷ ಔರ್ ಆವಿಷ್ಕಾರ್, ೬. ಮಿಾಠೀಕಾನೆ, ೭. ಖಂಡಿತ್‌ಪೂಜಾ, ೮. ಸುಂದರ್‌ರಸ್, ೯. ಸಾಹಸ್‌ಕೆ ಪುತ್‌ಲೇ, ೧೦. ಅಲಕನಂದಾ ಮಂದಾಕಿನೀಕೆ ದೋ ತೀರ್ಥ್, ೧೧. ಭಾರತೀಯ ಏಕತಾಕೀ ಕಹಾನಿ, ೧೨. ಹಮಾರೇ ದೇಶಕೀ ನದೀಯಾ, ೧೩. ಗಂಗೋತ್ರಿ ದರ್ಶನ್, ೧೪. ಸಂಘರ್ಷ ಔರ್ ಸಮಿಾಕ್ಷಾ, ೧೫. ಇತ್ಯಾದಿ, ೧೬. ಯೇಭೀ ಹೋತಾ ಹೈ, ೧೭. ಸುಹಾಗ್‌ಕೆ ನೂಪುರ್, ೧೮. ಪಶ್ಚಿಮ್ ಭಾರತಕೀ ಲೋಕ್ ಕಥಾ ಏ, ೧೯. List of Technical Terms in Hindi. (Two Books).

**ಉತ್ತರ ರಾಮ ಕಥೆ** (ಉತ್ತರ ವಿಭಾಗ): ಲೇಖಕರು: ಶ್ರೀ ನಾರಾಯಣ ಕವಿ; ಪ್ರಕಾಶಕರು: ವಿಜಯ ಸಾಹಿತ್ಯಮಾಲೆ, ಸುರತ್ಕಲ್ಲು, ದ.ಕ.; ಸೈಜು ೧/೮ ಕ್ರೌನ್; ಪುಟ ೧೬೮; ಬೆಲೆ ರೂ. ೨.

* **ಶ್ರೀ ಶ್ರೀನಿವಾಸ ಲೀಲಾ ವಿಲಾಸಂ:** ಲೇಖಕರು: ಶ್ರೀ ಆಸೂರಿಕೆ ರಾಮಸ್ವಾಮಯ್ಯಂಗಾರ್, ಕೋಳಗುಂದ; ಪ್ರಕಾಶಕರು: ಶ್ರೀ ಬಿ. ಎಸ್. ಎಸ್. ಕೌಶಿಕ್; ಸೈಜು ೧/೮ ಡೆಮ್ಮಿ; ಪುಟ ೧೨೨; ಬೆಲೆ ರೂ. ೩.

**ಕನ್ನಡ ಸಣ್ಣ ಕತೆಗಳು** (ಸಾಹಿತ್ಯ ಅಕಾಡೆಮಿ): ಸಂಪಾದಕರು: ಶ್ರೀ ಎಲ್. ಎಸ್. ಶೇಷಗಿರಿರಾವ್; ಪ್ರಕಾಶಕರು: ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪೆನಿ ಲಿಮಿಟೆಡ್, ಬೆಂಗಳೂರು; ಸೈಜು ೧/೮ ಕ್ರೌನ್; ಪುಟ ೩೧೮; ಬೆಲೆ ರೂ. ೪-೫೦ ನ.ಪೈ.

**ಪಂಜರವಳ್ಳಿಯ ಪಂಜು:** ಲೇಖಕರು ಮತ್ತು ಪ್ರಕಾಶಕರು: ಶ್ರೀ ಕಡಿದಾಳ್ ಮಂಜಪ್ಪ; ಸೈಜು ೧/೮ ಕ್ರೌನ್; ಪುಟ ೨೩೨; ಬೆಲೆ ರೂ. ೩.

* **ಬಾಲರಕ್ಷೆ** (ಪ್ರಥಮ ಪುಸ್ತಕ): ಲೇಖಕರು: ಶ್ರೀ ಕೆ. ಮುಖ್ಯಪ್ರಾಣ ಉಪಾಧ್ಯಾಯ; ಬೆಲೆ ೪೦ ನ.ಪೈ.

* **ಶ್ರೀಕನ್ನೇಶ್ವರ ಸುಪ್ರಭಾತ** (ದಂಡಕ): ಲೇಖಕರು: ಕವಿ ಲಕ್ಷ್ಮೀಶ ರಂಗನಾಥ ಅರಸು; ಪ್ರಕಾಶಕರು: ಕನ್ನೇಶ್ವರ ಸ್ಮಾರಕ ಪ್ರಕಟಣಾಲಯ; ಸೈಜು ೧/೮ ಕ್ರೌನ್; ಪುಟ ೨೬; ಬೆಲೆ ರೂ. ೧-೨೫ ನ.ಪೈ.

---

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತದೆ.

# ವಿಷಯ ಸೂಚಿಕೆ






ಸಂಪುಟ ೨೬ ] ಆಗಸ್ಟ್ ೧೯೬೩ [ ಸಂಚಿಕೆ ೮

# ಜನಿಸಿತದುವೆ ಪ್ರೀತಿಯು

ಲೇ. : ಎನ್. ಎಸ್. ಪರಿಮಳ

ದೂರದೂರದಾದಿಯಲ್ಲಿ
ಭೂಮಿವ್ಯೋಮ ಸೇರುವಲ್ಲಿ
ಏನೋ ಒಂದು ಜನಿಸಿತು
ಭವ್ಯ ರೂಪ ಪಡೆಯಿತು ೧

ಚುಕ್ಕಿ ಮೂಡಿ ಬೆಳಗುವಲ್ಲಿ
ಹಕ್ಕಿ ಕೂಡಿ ಹಾಡುವಲ್ಲಿ
ಏನೋ ಒಂದು ಕಂಡಿತು
ಮನಕೆ ಮುದವ ಬೀರಿತು ೨

ಮೋಡ ಮೂಡಿ ಆಡುವಲ್ಲಿ
ಕಾಡು ನಾಡು ಸೇರುವಲ್ಲಿ
ಏನೋ ಒಂದು ಗೂಡಿತು
ಹೃದಯ ಹಕ್ಕಿ ಹಾಡಿತು ೩

ಅಲೆಯು ಅಲೆಯು ಮೊರೆತದಲ್ಲಿ
ನೆಲೆಯಿಲ್ಲದ ಆಳದಲ್ಲಿ
ಏನೋ ಒಂದು ಮೂಡಿತು
ಕಣ್ಣ ಮರೆಸಿ ಆಡಿತು ೪

ಹೂವು ನಗುವು ಚೆಲ್ಲುವಲ್ಲಿ
ನಲವು ಒಲವು ಚಿಮ್ಮುವಲ್ಲಿ
ಏನೋ ಒಂದು ಹೊಳೆಯಿತು
ಹೊಳವು ಹೆಚ್ಚಿ ಬೆಳಗಿತು ೫

ಬಿರುಕು ಮುರುಕು ಮುಚ್ಚುವಲ್ಲಿ
ಹರಕು,ಹುಳುಕು ಇಲ್ಲದಲ್ಲಿ
ಏನೋ ಒಂದು ಹುಟ್ಟಿತು
ಬಾಳ ಗುಡಿಯು ಕಟ್ಟಿತು ೬

ಭಾವ ಭಾವ ಬೆಸುಗೆಯಲ್ಲಿ
ಜೀವ ಜೀವ ಹೆಣಿಗೆಯಲ್ಲಿ
ಏನೋ ಒಂದು ಹುಟ್ಟಿತು
ಹೃದಯ ದ್ವಾರ ತಟ್ಟಿತು ೭

ಸೀಮೆ ಸೀಮೆ ಸೇರುವಲ್ಲಿ
ನೇಮ ನಿಯಮ ಇಲ್ಲದಲ್ಲಿ
ಏನೋ ಒಂದು ಅರಳಿತು
ಹೃದಯ ಸುಮವು ನಕ್ಕಿತು ೮

ಹೃದಯ ಹೃದಯ ಸೇರುವಲ್ಲಿ
ಸದಯ ಸದೆಯ ಬೆರೆಯುವಲ್ಲಿ
ಏನೋ ಒಂದು ಜನಿಸಿತು
ಬಾಳ ಗುಟ್ಟು ತಿಳಿದಿತು ೯

ಕೊಂಕು ಕುಹಕ ಇಲ್ಲದಲ್ಲಿ
ಡೊಂಕು ಬಿಂಕ ಇಲ್ಲದಲ್ಲಿ
ಏನೋ ಒಂದು ಮೂಡಿತು
ಹೃದಯ ಗೂಡು ಸೇರಿತು ೧೦

ಕಲ್ಪವೃಕ್ಷವಿರುವುದಲ್ಲಿ
ಅಲ್ಪಸ್ವಲ್ಪ ವಿಲ್ಲದಲ್ಲಿ
ಏನೋ ಒಂದು ಹಾಡಿತು
ಹೃದಯವನ್ನೇ ಕಾಡಿತು ೧೧

ಹೃದಯದಂತರಾಳದಲ್ಲಿ
ಉದಯ ಗಗನ ಅರುಣದಲ್ಲಿ
ಜನಿಸಿತದುವೆ ಪ್ರೀತಿಯು
ಎನ್ನ ಬಾಳ ಗೀತಿಯು ೧೨

# ತಾಂಬೂಲ

ಸಂಗ್ರಾಹಕ : ಎಸ್. ಎಸ್. ಬ್ಯಾತನಾಳ
(ಮೂಲಲೇಖಕರು : ಡಾ. ಪಿ.ಕೆ. ಗೋಡೆ)

## ೧. ಶಾಸನಗಳಲ್ಲಿ ತಾಂಬೂಲ

ಭಾರತೀಯರಲ್ಲಿ ತಾಂಬೂಲ ತಿನ್ನುವ ಸಂಪ್ರದಾಯ ಸುಮಾರು ೨,೦೦೦ ವರುಷಗಳಿಂದ ನಡೆದುಬಂದಿದೆಯೆಂದು ಸಾಹಿತ್ಯಕ ಆಧಾರಗಳಿಂದ ಹೇಳಬಹುದಾದರೂ ಶಾಸನಗಳಲ್ಲಿ ಕ್ರಿ. ಶ. ೧೦೦೦ ಕ್ಕೆ ಪೂರ್ವದಲ್ಲಿ ಆಧಾರಗಳಿಲ್ಲ. ಕ್ರಿ. ಶ. ೪೭೩ರ ಶಾಸನವೊಂದರಲ್ಲಿ ತಾಂಬೂಲದ ಉಲ್ಲೇಖ ಪ್ರಪ್ರಥಮವಾಗಿ ಕಾಣುತ್ತಿದೆ. ಕ್ರಿ. ಶ. ೪೭೩ರ 'ಮುಂಡಸೂರ ಸಿಲ್ಕ ವೀವರ್ಸ' ಶಾಸನದಲ್ಲಿ "ತಾರುಣ್ಯ ಕಾನ್ತ್ಯುಪಚಿತೋऽಪಿ ಸುವರ್ಣಾ ಹಾರ| ತಾಂಬೂಲ-ಪುಷ್ಪವಿಧಿನಾ ಸಮಲಂಕೃತೋಪಿ..." ಎಂದು ಸ್ತ್ರೀಯರು ವಿಶೇಷತಃ ತರುಣಿಯರು ಉಳಿದ ವಸ್ತ್ರಾಲಂಕಾರಗಳ ಜೊತೆಗೆ ತಾಂಬೂಲ ತಿಂದು ತಮ್ಮ ತುಟಿಗಳನ್ನು ಕೆಂಪಾಗಿರಿಸುತ್ತಿದ್ದರೆಂಬುದು ಗಮನಾರ್ಹ. ಇಂದು ತುಟಿಗಳಿಗೆ ಹಚ್ಚುವ ಬಣ್ಣ ಸುಧಾರಿತ ಪಟ್ಟಣಗಳಲ್ಲಿ ಉಪಯೋಗವಾಗುತ್ತಿದ್ದರೂ ಹಳ್ಳಿಗಳಲ್ಲಿ ತಾಂಬೂಲ ಪದ್ಧತಿಯೇ ಪ್ರಚಲಿತವಿದೆ. ಗುಪ್ತ ಅರಸರ ಕಾಲದಲ್ಲಿ ಜಾವಾ, ಸುಮಾತ್ರಾ ಮುಂತಾದ ದಕ್ಷಿಣ ದ್ವೀಪಗಳೊಡನೆ ಸಮುದ್ರ ವ್ಯಾಪಾರ ಸಂಬಂಧದ ಪರಿಣಾಮವಾಗಿ ತಾಂಬೂಲವು ಭಾರತಕ್ಕೆ ಬಂದಿರಬೇಕೆಂದು ಸಂಶೋಧಕರ ಮತ; ಚರಕಸಂಹಿತಾ, ಕಾರ್ಶ್ಯಪಸಂಹಿತಾ, ಸಶ್ರುತಸಂಹಿತಾ ಮತ್ತು ಕಾಲಿದಾಸನ ಕೃತಿಗಳಲ್ಲಿ ಬರುವ ತಾಂಬೂಲ ಮತ್ತು ಅದರ ಘಟಕಗಳ ಉಲ್ಲೇಖ ಮೇಲಿನ ಹೇಳಿಕೆಯನ್ನು ಪುಷ್ಟೀಕರಿಸುವುವು. ವರಾಹಮಿಹಿರನ (ಕ್ರಿ. ಶ. ೪೯೦) ಬೃಹತ್‌ಸಂಹಿತಾದಲ್ಲಿಯೂ ತಾಂಬೂಲದ ಪ್ರಸ್ತಾಪವಿದೆ.

'ಧನಿಕ'ದ ನಗರ ಶಾಸನದಲ್ಲಿ (ಕ್ರಿ. ಶ. ೬೮೫) "... ದತ್ತಾಂಗ (ಗೇ) ಪಿ ಜಲಾದಿದ್ರತಾ ತನುತರೇ ಕರ್ಪೂರ-ಧೂಲೀಧರಾ| ... ತ (ತಾ)ಂಬೂಲ ರಾಗ ರಹಿತಾ ..." ಎಂಬಲ್ಲಿ ಕರ್ಪೂರ, ತಾಂಬೂಲಗಳನ್ನು ಹೇಳಿದ್ದು, ವೈರಿಗಳಿಂದ ಪೀಡಿತರಾದ ಸ್ತ್ರೀಯರ ತುಟಿಗಳ ತಾಂಬೂಲದ ಕೆಂಪುರಾಗ ಮಸಳಿಸಿತೆಂದು ವರ್ಣನೆಯಿದೆ. ದಕ್ಷಿಣ ಕನ್ನಡ ಜಿಲ್ಲೆಯ ಕ್ರಿ. ಶ. ೭೫೦-೭೦ರ ಶಾಸನದಲ್ಲಿ 'ಅಡಕೆಯ' ಎಂಬ ಪದವಿದೆ. ಸುಮಾರು ನಾಲ್ಕು ಶತಮಾನಗಳಿಂದ ಮರಾಠಿಯಲ್ಲಿ ಬಳಕೆಗೆ ಬಂದ 'ಅಡ್ಕಿತ್ತಾ' ಕನ್ನಡದ 'ಅಡಕೊತ್ತು'ನಿಂದಲೇ ಬಂದಿರಬೇಕು. ಬಳ್ಳಾರಿ ಜಿಲ್ಲೆಯ ಕ್ರಿ. ಶ. ೯೮೦ ರ ಶಾಸನದಲ್ಲಿ 'ತಾಂಬೂಲಂ'ಎಂದಿದೆ. ಸುಮಾರು ೧೫೦೦ ವರುಷಗಳಿಂದ ದಕ್ಷಿಣಕನ್ನಡವು ಅಡಿಕೆ, ವಿಳೇದೆಲೆಗಳಿಗಾಗಿ ಪ್ರಸಿದ್ಧವಾಗಿದೆ. ೧ನೆಯ ಜಗದೇಕಮಲ್ಲದೇವನ ಆಳಿಕೆಯ ಗದಗ ತಾಲೂಕು ಹೊಸೂರಗ್ರಾಮದ ಕ್ರಿ. ಶ. ೧೦೨೮ ರ ಶಾಸನದಲ್ಲಿ ಆಯ್ಚಗಾವುಂಡನು ಒಂದು ಬಸದಿಯನ್ನು ಕಟ್ಟಿಸಿ ತನ್ನ ಹೆಂಡತಿಯ ಸ್ಮಾರಕವಾಗಿ ಒಂದು ಅಡಕೆ ತೋಟವನ್ನು ದತ್ತಿಕೊಟ್ಟನೆಂದಿದೆ. ಕ್ರಿ. ಶ. ೧೦೨೮ ರಿಂದ ಕ್ರಿ. ಶ. ೧೯೨೫ರವರೆಗೂ ಅನೇಕ ಕರ್ಣಾಟಕದ ಶಾಸನಗಳಲ್ಲಿ ಅಡಕೆ, ವಿಳೇದೆಲೆಗಳ ತೋಟಗಳನ್ನು ದೇವಸ್ಥಾನಗಳಿಗೆ ದತ್ತಿಯಿತ್ತ ಉಲ್ಲೇಖಗಳು ದೊರೆಯುತ್ತಿವೆ.

ಹಿಂದೂಗಳಲ್ಲಿ ಇಂದಿಗೂ ಧಾರ್ಮಿಕ ಮತ್ತು ಮಂಗಲಕಾರಕ ಸಮಾರಂಭಗಳಲ್ಲಿ ಅಡಕೆ, ತೆಂಗಿನ ಕಾಯಿಗಳನ್ನು ಉಪಯೋಗಿಸುವ ರೂಢಿ ನಮಗೆಲ್ಲ ಪರಿಚಿತವಾಗಿದೆ. ಈ ಪದ್ಧತಿ ಎಂದಿನಿಂದ ಪ್ರಾರಂಭವಾಯಿತೆಂಬ ಸಂಶೋಧನೆಯೂ ಮನರಂಜಕವಾಗಿದೆ. ಕ್ರಿ. ಶ. ೧೩೦೦ಕ್ಕಿಂತ ಪೂರ್ವದಲ್ಲಿಯೇ ಭಾರತದಲ್ಲಿ ಅಡಿಕೆ ವಿಳೇದೆಲೆಗಳ ಉದ್ಯೋಗ ತುಂಬಾ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂದು ಶಾಸನಾಧಾರಗಳಿಂದ ತಿಳಿಯುತ್ತದೆ.

## ೨. ಪರದೇಶಗಳಲ್ಲಿ ತಾಂಬೂಲ

(ಕ್ರಿ. ಶ. ೬೫೦ ರಿಂದ ಕ್ರಿ. ಶ. ೧೯೦೦)

ಸಿಲೋನದಲ್ಲಿ ತೆಂಗಿನ ಮರಗಳು ಅಂಕುಡೊಂಕಾಗಿಯೂ, ಅಡಿಕೆ ಮರಗಳು ನೀಟಾಗಿಯೂ ಬೆಳೆಯುವುದಕ್ಕೆ ಒಂದು ದಂತಕತೆ ಇದೆ. ಆರ್ಥರ್, ಎ. ಪೆರೆರಾ ಅವರು ತಮ್ಮ 'Glimpses of Singhalese Social Life' ಎಂಬ ಗ್ರಂಥದಲ್ಲಿ ಹೀಗೆ ಹೇಳುವರು : "ಬೆರವಾಯಾ ಪಂಥದ ಒಬ್ಬ ಜ್ಯೋತಿಷಿ ಒಬ್ಬ ಅರಸನಿಗೆ ಇಂಥ ದಿನ, ಇಂಥ ಗಳಿಗೆಯ ಸುಮುಹೂರ್ತದಲ್ಲಿ ಏನನ್ನು ಬಿತ್ತಿದರೂ ಬೆಳೆಯುವುದೆಂದನು. ಅರಸನು ಆ

ಮುಹೂರ್ತಕ್ಕೆ ಸರಿಯಾಗಿ ಜ್ಯೋತಿಷಿಯ ತಲೆಯನ್ನೇ ಕತ್ತರಿಸಿ ಬಿತ್ತಿದನು. ಅದು ಅಂಕುಡೊಂಕಾದ ತೆಂಗಿನ ಮರವಾಗಿ ಬೆಳೆಯಿತು. ಇದರಿಂದ ಕೌತುಕನಾದ ಅರಸ ತನ್ನ ತಲೆಯನ್ನೇ ಕತ್ತರಿಸಿ ಹೂಳಿಸಿದ. ಅದು ನೀಟಾದ ಅಡಿಕೆ ಮರವಾಯಿತು."

ಕ್ರಿ. ಶ. ೧೭೯೨-೯೩ ರ 'Account of the Kingdom of Nepal' ಎಂಬ ಗ್ರಂಥದಲ್ಲಿ, "ನೇಪಾಳದ ಕಾಯಿದೆ ಪ್ರಕಾರ ಯಾರು ಅರಮನೆಯ ಗೋಡೆಯನ್ನು ತಮ್ಮ ಕೈಯಿಂದ ಮುಟ್ಟುವರೋ ಅವರಿಗೆ ಯಾವುದೇ ಬಗೆಯ ಪ್ರಾಣಭಯವಿರಲಿಲ್ಲ. ಆದರೂ 'ನ್ಯೂ ಆರ್ಸ'ರು ಅರಸನ ಸಮ್ಮುಖದಲ್ಲಿಯೇ ಹಲವಾರು ಪರದೇಶೀಯರನ್ನೂ, ಮಹಮ್ಮದೀಯರನ್ನೂ ಕೊಂದರು. 'Neuars' ರು ಹಿಂದೂಸ್ತಾನದಲ್ಲಿ 'ವೀಳೇದೆಲೆ' ಎಂದು ಕರೆಯುವ ಎಲೆಯಲ್ಲಿ ವಿಷವನ್ನು ಮಡಿಚಿ ಕೊಡುತ್ತಿದ್ದರು. ಮಹಮ್ಮದೀಯರು ಈ ಸಂಚನ್ನರಿತು ಅರಸನಿಗೆ ಸೂಚಿಸಲು ಅವನು ಒಂದು ಕುರಿಗೆ ಅಂಥ ಎಲೆ ತಿನಿಸಲು ಅದು ಸತ್ತಿತು . . ." ಎಂದು ಹೇಳಲಾಗಿದೆ. ಇದರಿಂದ ಕ್ರಿ. ಶ. ೧೭೯೨ ಕ್ಕೆ ಮೊದಲು ನೇಪಾಳದ ಅರಮನೆಯಲ್ಲಿ ತಾಂಬೂಲ ತಿನ್ನುವ ಪದ್ಧತಿ ಇತ್ತೆಂದು ಹೇಳಬಹುದು.

ವಿಲಿಯಮ್ ಮಾರ್ಸ್ಡನ್‌ರು ಸುಮಾತ್ರಾದಲ್ಲಿ ೧೮ ನೆಯ ಶ. ಮಾ. ದ ಉತ್ತರಾರ್ಧದಲ್ಲಿ ಅಡಿಕೆ ಬೆಳೆಯುವ ಮತ್ತು ತಿನ್ನುವ ರೂಢಿ ಇತ್ತೆಂದು ಹೇಳಿದ್ದಾರೆ. ದಕ್ಷಿಣ ಅಮೇರಿಕೆಯ ಜನರು 'ಕೋಕಾ' ಮತ್ತು 'ಮಂಬೀ' ಅಗಿದರೆ, ಪೌರ್ವಾತ್ಯರು ಮಲಾಯಾ ಭಾಷೆಯ 'ಸೀರೀ' ಮತ್ತು 'ಪೆಸಂಗ' ಗಳನ್ನು ಜಗಿಯುವರು. ಸುಮಾತ್ರಾದಲ್ಲಿ ಅತಿಥಿಗಳಿಗೆ ಎಲೆ-ಅಡಿಕೆ ಕೊಡುವರು. ತಾಂಬೂಲ ಇಡಲು ಶ್ರೀಮಂತರು ಬೆಳ್ಳಿ ಡಬ್ಬಿ, ಸಾಮಾನ್ಯರು ಹಿತ್ತಾಳೆಯ ಅಥವಾ ಬೆತ್ತದ ಡಬ್ಬಿಯನ್ನು ಉಪಯೋಗಿಸುತ್ತಾರೆ. ತಾಂಬೂಲ ವಿನಿಮಯ ಗೌರವ ಸೂಚಕವೆಂಬ ಸಾಮಾಜಿಕ ಕಲ್ಪನೆ ಸುಮಾತ್ರಾ ಜನರಲ್ಲಿದೆ. 'ಸೀರೀ' ಎಲೆಗೆ ಸ್ವಲ್ಪ ಸುಣ್ಣ ಹಚ್ಚಿ, ಅದರಲ್ಲಿ 'ಪೆನಂಗ' ಕಾಯಿಯನ್ನಿಟ್ಟು ಮಡಿಚಿ ಹಾಕಿಕೊಳ್ಳುವರು. ಸುಣ್ಣದ ಬದಲು 'ಗಂಬೀರ' ಎಂಬ ಗಿಡದ ಎಲೆಗಳಿಂದ ತಯಾರಿಸಿದ ದ್ರವವನ್ನು ಉಪಯೋಗಿಸುವರು. ಎಲೆ-ಅಡಿಕೆಯ ಜೊತೆಗೆ ತಂಬಾಕನ್ನೂ ತಿನ್ನುವ ರೂಢಿ ಇದೆ. ಚಿಕ್ಕ ಮಕ್ಕಳೂ ಸಹ ತಾಂಬೂಲ ತಿನ್ನುವರು. ಇದರಿಂದ ಹಲ್ಲುಗಳ ಮೇಲಾಗಲಿ, ಪ್ರಕೃತಿಯ ಮೇಲಾಗಲಿ ಅನಿಷ್ಟಕರ ಪರಿಣಾಮ ಕಂಡುಬಂದಿರುವುದಿಲ್ಲ. ತಂಬಾಕು ಮಿಶ್ರಿತ ತಾಂಬೂಲದ ಚಟವಿಲ್ಲದವರಿಗೆ ತಲೆತಿರುಗುವುದು; ನಾಲಿಗೆಯ ರುಚಿ ಕೆಡುವುದು. 'ರಮಝಾನ' ಉಪವಾಸದ ಅವಧಿಯಲ್ಲಿ ಮಾತ್ರ ಮುಸಲ್ಮಾನರು ತಾಂಬೂಲ ತ್ಯಜಿಸುವರು. ಗಂಡಸರು-ಹೆಂಗಸರು ಬಾಲ್ಯದಲ್ಲಿಯೇ ತಾಂಬೂಲ ತಿನ್ನಲು ಕಲಿಯುವರು. ಹಲ್ಲುಗಳು ಬಿದ್ದುಹೋದಾಗ ತಾಂಬೂಲ ಕುಟ್ಟಿ ಮುದ್ದೆಮಾಡಿ ಸೇವಿಸುವರು. ಸುಣ್ಣದಲ್ಲಿ ವಿಷ ಬೆರೆಸುವುದೂ ಉಂಟೆಂದು ತೋರುವುದು. ಅಂತೆಯೇ ಅಪರಿಚಿತರಲ್ಲಿ ಹೋದಾಗ ಅವರಿತ್ತ ಎಲೆಯನ್ನು ಕೈಯಿಂದ ಒರೆಯಿಸಿ ತಮ್ಮಲ್ಲಿದ್ದ ಸುಣ್ಣವನ್ನೇ ಹಚ್ಚಿಕೊಳ್ಳುವ ರೂಢಿ ಸುಮಾತ್ರಾ ಜನರಲ್ಲಿ ಸಾಮಾನ್ಯವಾಗಿದೆ. ತಾಂಬೂಲದೊಡನೆ ತಂಬಾಕು ಹಾಕುವ ಪದ್ಧತಿ ಹಿಂದೂಸ್ತಾನದಲ್ಲಿಯೂ ಪ್ರಾರಂಭವಾಗಿದೆ.

'ಬತೂತಾ' ಎಂಬ ಪ್ರವಾಸಿಕನು ಬೇರೆಬೇರೆ ದೇಶಗಳಲ್ಲಿಯ ತಾಂಬೂಲ ಸಂಪ್ರದಾಯವನ್ನು ವಿವರಿಸಿದ್ದಾನೆ. ಅರೇಬಿಯಾದ 'ಧೋಪಾರ'ದ ನಿವಾಸಿಗಳು ಅಡಿಕೆ-ಎಲೆಗಳನ್ನು ಬೆಳೆಯುವರು. ಸುಣ್ಣವನ್ನೂ ಉಪಯೋಗಿಸುವರು. ಭಾರತದಲ್ಲಿ ಸಾಮಾಜಿಕ, ಧಾರ್ಮಿಕ ವ್ಯವಹಾರಗಳಲ್ಲಿ ತಾಂಬೂಲಕ್ಕೆ ವಿಶೇಷ ಸ್ಥಾನವಿದೆ. ತಾಂಬೂಲ ಗೌರವಸೂಚಕ: ಅತಿಥಿಗಳಿಗೆ ತಾಂಬೂಲ ಕೊಡದಿದ್ದರೆ ಅಪಮಾನಕರ. 'ಮೊಗ್ದಿಶಿಯಾ'ದ ಸುಲ್ತಾನನು ಬತೂತಾನ ಸ್ವಾಗತಕ್ಕೆ ೧೦ ಎಲೆ, ಅಡಿಕೆಗಳನ್ನು ಕಳಿಸಿದನಂತೆ. ಬತೂತಾನು ಮಾಲದೀವ ದ್ವೀಪಕ್ಕೆ ಹೋದಾಗ ಅಲ್ಲಿಯ ಸುಲ್ತಾನಾಳು ಅಡಿಕೆ, ಗುಲಾಬಿ ಬಣ್ಣದ ನೀರುಗಳನ್ನು ಕೊಟ್ಟು ಗೌರವಿಸಿದಳು. ಬರ್ಮಾದೇಶದ ಅರಕನ್ ಪ್ರದೇಶದ ಜನಾಂಗ ಅಡಿಕೆ-ವಿಳೇದೆಲೆಗಳನ್ನು ಹೆಚ್ಚಾಗಿ ಬೆಳೆಯುವರು.

'ಬತೂತಾ' (ಕ್ರಿ. ಶ. ೧೩೦೪-೧೩೬೮) ಅವರ ಪ್ರವಾಸ ಚರಿತ್ರೆಯಿಂದ ಅರೇಬಿಯಾ, ಮಾಲದೀವ ದ್ವೀಪ, ಸುಮಾತ್ರಾ, ಜಾವಾ, ಬರ್ಮಾ ಮೊದಲಾದ ಹಿಂದೂಸ್ತಾನದ ನೆರೆಯ ರಾಷ್ಟ್ರಗಳಲ್ಲಿ ಕ್ರಿ. ಶ. ೧೪ ನೆಯ ಶ. ಮಾ. ದ ಪೂರ್ವಾರ್ಧದಲ್ಲಿ ತಾಂಬೂಲವು ಬಳಕೆಯಲ್ಲಿತ್ತೆಂದು ಖಚಿತವಾಗಿ ತಿಳಿಯುತ್ತಿದೆ.

ಇಟಾಲಿಯನ್ ಪ್ರವಾಸಿ ಟೆವ್ಹರ್ನಿಯರ್ ಪಶ್ಚಿಮ ಜಾವಾದ ಬಂಟಮ್‌ದ ಅರಸು ತಾಂಬೂಲ ತಿನ್ನುವುದನ್ನು ಹೀಗೆ ವರ್ಣಿಸಿರುವರು: "ಅರಸನ ಬಲಕ್ಕೆ ಒಬ್ಬ ಕರಿಯ ಹೆಂಗಸು ಒಂದು ಕಲಬತ್ತನ್ನಿಟ್ಟುಕೊಂಡು

ಎಲೆಗಳನ್ನು ಕುಟ್ಟುತ್ತಿರುವಳು; ಅದಕ್ಕೆ ಅಡಿಕೆ ಸೇರಿಸುವಳು. ಮಿಶ್ರಣವು ಚೆನ್ನಾಗಿ ತಯಾರಾದೊಡನೆ ತಾಯಂದಿರು ಮಕ್ಕಳಿಗೆ ತುತ್ತುಹಾಕುವಂತೆ ಅರಸನ ಬೆನ್ನಮೇಲೆ ಒಂದು ಕೈಯನ್ನಿಟ್ಟು, ಇನ್ನೊಂದು ಕೈಯಿಂದ ತಾಂಬೂಲವನ್ನು ಅವನ ಬಾಯಲ್ಲಿ ಹಾಕುತ್ತಾಳೆ. ಅರಸನಿಗೆ ಹಲ್ಲುಗಳಿಲ್ಲ; ಹಲ್ಲುಗಳೆಲ್ಲವೂ ಬೀಳುವಷ್ಟು ಮಟ್ಟಿಗೆ ತಂಬಾಕು ತಿನ್ನುವನು.

ಜಾವಾದಲ್ಲಿ ಕ್ರಿ. ಶ. ೧೭ ನೆಯ ಶ. ಮಾ. ದ ಮಧ್ಯದಲ್ಲಿಯೇ ತಾಂಬೂಲವು ರೂಢಿಯಲ್ಲಿದ್ದಿತು.

ಮತ್ತೊಬ್ಬ ಇಟಾಲಿಯನ್ ಪ್ರವಾಸಿಗ 'ಮಾನುಚ್ಚಿ,' "ಔರಂಗಜೇಬನು ಪರ್ಶಿಯಾಕ್ಕೆ ಕಳಿಸಿದ ರಾಯಭಾರಿಯು ತಾನು ಇಸ್ಫಹಾನ್ ಪಟ್ಟಣಕ್ಕೆ ತಲುಪುವ ವೇಳೆಗೆ ಎಲೆ-ಅಡಿಕೆಗಳು ದೊರೆಯುವಂತೆ ಏರ್ಪಾಡು ಮಾಡಿಕೊಂಡಿದ್ದನು. ತಾಂಬೂಲದ ರಸ ಹೊಟ್ಟೆಗೆ ಹಿತಕಾರಿ. ಪರ್ಶಿಯಾದಲ್ಲಿ ಇಂಥ ಎಲೆ ದೊರೆಯುತ್ತಿಲ್ಲ" ವೆಂದು ಹೇಳಿದ್ದಾನೆ. ಔರಂಗಜೇಬನ ಮುಸಲ್ಮಾನ ರಾಯಭಾರಿಯು ತಾಂಬೂಲ ಚಟ ಬೆಳೆಸಿಕೊಂಡುದೂ, ಪರ್ಶಿಯಾದಲ್ಲಿ ಸಿಗದ್ದರಿಂದ ತಾನೇ ಮುಂಚಿತವಾಗಿ ವ್ಯವಸ್ಥೆ ಮಾಡಿಕೊಂಡುದೂ ಗಮನಾರ್ಹ. ಕ್ರಿ. ಶ. ೧೪ ನೆಯ ಶ. ಮಾ. ದ ಮಧ್ಯದಲ್ಲಿಯೇ 'ಯೆಮೆನ್' ದಲ್ಲಿ ಎಲೆ-ಅಡಿಕೆ ಬೆಳೆಯುವ ವ್ಯವಸಾಯವೂ, ಅರಬರಿಗೆ ಅದರ ಚಟವೂ ಇದ್ದರೂ ಕ್ರಿ. ಶ. ೧೭ ನೆಯ ಶ. ಮಾ. ದ ಮಧ್ಯಕಾಲದಲ್ಲಿ ಪರ್ಶಿಯದಲ್ಲಿ ತಾಂಬೂಲದ ಸುಳಿವೇ ಕಾಣದಿರುವುದು ನಿಜವಾಗಿಯೂ ಆಶ್ಚರ್ಯಕರವಾಗಿದೆ.

"ನಿಕೋಬಾರ ದ್ವೀಪಗಳಲ್ಲಿ ಎಲೆ-ಅಡಿಕೆಗಳ ತೋಟಗಳು ಹಬ್ಬಿವೆ. ಮನೆಗೆ ಬಂದ ಧಾರ್ಮಿಕ ಆಚಾರ್ಯರು ಮೊದಲು ತಮ್ಮ ಕೈಕಾಲುಗಳನ್ನು ತೊಳೆದುಕೊಂಡು ಒಳಗೆ ಪ್ರವೇಶಿಸಿದೊಡನೆ ಅವರಿಗೆ ಬೇಕಾಗುವಷ್ಟು ಸಕ್ಕರೆ-ನೀರು ಮತ್ತು ತಾಂಬೂಲ-'ಪಿನ್-ಲಾಂಗ'-ಕೊಡುವರು. ಯಜಮಾನನು ಮೊದಲೇ 'ಪಿನ್-ಲಾಂಗ' 'ಮುಸ್ತಕಾ' ದಿಂದ ತಯಾರಿಸಿದ ಸುವಾಸಿತ ತೈಲ, ಪಟ್ಟೆಯಲ್ಲಿ ಒಂದು ಎಲೆಯಲ್ಲಿ ಅಡ್ಕೆಗಳನ್ನು ಸಿದ್ಧಪಡಿಸಿರುವನು. (ಅತಿಥಿಗಳಿಗೆ ತಾಂಬೂಲ ಸೇವನೆಯ ನಂತರ ಅತ್ತರನ್ನು ಹಚ್ಚುವ ರೂಢಿ ಇಂದಿಗೂ ಮಹಾರಾಷ್ಟ್ರದಲ್ಲಿದೆ. ದಕ್ಷಿಣಸಮುದ್ರದ ದ್ವೀಪಗಳಲ್ಲಿ ಕ್ರಿ. ಶ. ೬ ನೆಯ ಶ. ಮಾ. ದಲ್ಲಿಯೇ ಈ ಸಂಪ್ರದಾಯವಿರುವುದನ್ನು ಲಕ್ಷಿಸಬೇಕು) ತಾಂಬೂಲದಲ್ಲಿ ಕರ್ಪೂರ ಮತ್ತು 'ಬಾರೋಸ್' ಗಳನ್ನು ಸೇರಿಸುವರು." ಎಂದು ಚೀನಾ ಪ್ರವಾಸಿ ಇತ್ಸಿಂಗ (ಕ್ರಿ. ಶ. ೬೭೧-೬೯೫) ಬರೆದಿರುವನು.

ತಾಂಬೂಲದಲ್ಲಿ ಕರ್ಪೂರದ ಉಪಯೋಗ 'ಮೃಚ್ಛಕಟಿಕ' ದಲ್ಲಿ "ದೀಯತೇ ಗಣಿಕಾಕಾಮುಕಯೋಃ ಸಕರ್ಪೂರಂ ತಾಂಬೂಲಮ್" ಎಂಬಲ್ಲಿಯೂ ದೊರೆಯುವದು. ನಂದಿಪುರಾಣ: "ಕರ್ಪೂರಾದೇಶ್ಚ ಭಾಂಡಾನಿ ತಾಂಬೂಲಾಯತನಂ ತಥಾ." ಶಂಕರಾಚಾರ್ಯರ 'ಸೌಂದರ್ಯಲಹರಿ': "ವಿಶಾಖೇಂದ್ರೋಪೇಂದ್ರೈಃ ಶಶಿವಿಶದ ಕರ್ಪೂರಶಕಲಾ। ವಿಲೀಯನ್ತೇ ಮಾತಸ್ತವ ವದನ ತಾಂಬೂಲ ಕವಲಾಃ॥" ಮೊದಲಾದ ಉಲ್ಲೇಖಗಳು ಉಪಲಬ್ಧವಿವೆ.

ಮೇಲಿನ ಆಧಾರಗಳು ಡಾ|| ಪಿ. ವ್ಹಿ. ಕಾಣೆ ಅವರು ತಮ್ಮ 'ಧರ್ಮಶಾಸ್ತ್ರದ ಇತಿಹಾಸ' ವೆಂಬ ಗ್ರಂಥದಲ್ಲಿ ತಾಂಬೂಲ ತಿನ್ನುವ ಪದ್ಧತಿ, ದಕ್ಷಿಣಭಾರತದಲ್ಲಿ ಕ್ರಿ. ಶ. ಪ್ರಾರಂಭದಲ್ಲಿಯೇ ಇದ್ದು ಕ್ರಮೇಣ ಉತ್ತರಕ್ಕೂ ಈ ಚಟ ಹಬ್ಬಿತೆಂಬ ಹೇಳಿಕೆಗೆ ಪೂರಕವಾಗಿವೆ. ಪ್ರಾಚೀನ 'ಗ್ರಹಸೂತ್ರ' ಗಳಲ್ಲಿ ತಾಂಬೂಲದ ಸೂಚನೆ ಕಾಣದಿದ್ದರೂ, 'ಲಘುಹಾರೀತ,' ವರಾಹಮಿಹಿರ, ರಘುವಂಶ ಮೊದಲಾದುವುಗಳಲ್ಲಿ ತಾಂಬೂಲದ ಉಲ್ಲೇಖದೊರೆಯುವುದೆಂದು ಡಾ|| ಕಾಣೆ ಅವರು ಅಭಿಪ್ರಾಯಪಟ್ಟಿರುವರು. ಡಾ|| ವ್ಹಿ. ಎಸ್. ಅಗ್ರವಾಲ ಅವರು ಗುಪ್ತರ ಆಳಿಕೆಯ ಪ್ರಾರಂಭದಲ್ಲಿ ತಾಂಬೂಲ ಬಳಕೆಗೆ ಬಂದಿತೆಂದೂ, ಪೌರ್ವಾತ್ಯ ದ್ವೀಪಗಳೊಡನೆ ಭಾರತದ ಸಾಂಸ್ಕೃತಿಕ ಸಂಬಂಧದ ಮೂಲಕ ನಮಗೆ ವೀಳೇದೆಲೆಯ ಪರಿಚಯವಾಯಿತೆಂದೂ ಹೇಳುವರು. ಕ್ರಿ. ಶ. ೧-೨ ನೆಯ ಶತಮಾನಗಳಲ್ಲಿಯೇ ಮಲಾಯೇಶಿಯಾಕ್ಕೆ ಹಿಂದುಗಳು ವಸತಿ ಹೋಗಿದ್ದರೆಂದು ಇತಿಹಾಸದ ಆಧಾರಗಳಿವೆ.

## ೩. ಹಿಂದು ಧರ್ಮಶಾಸ್ತ್ರ ಮತ್ತು ತಾಂಬೂಲ ಭೋಗ

ಸಾಮಾನ್ಯ ಮನುಷ್ಯನಿಗೆ ತಾಂಬೂಲವು ಭೋಗವಸ್ತು. ಸನ್ಯಾಸಿಗಳು, ವಿಶಿಷ್ಟ ಬಗೆಯ ಧಾರ್ಮಿಕ ವ್ರತ ಆಚರಿಸುವವರು ತಾಂಬೂಲ ಸೇವಿಸಬಾರದೆಂದು ಧರ್ಮಶಾಸ್ತ್ರ ಪ್ರತಿಬಂಧ ಹಾಕಿದೆ. ಗಾಗಾಭಟ್ಟನು (ಕ್ರಿ. ಶ. ೧೬೨೦-೧೬೮೫) ಎಂಟುಬಗೆಯ ಭೋಗ್ಯ ವಸ್ತುಗಳಲ್ಲಿ ತಾಂಬೂಲವನ್ನೂ ಹೇಳಿರುವನು.

ಸುಗಂಧ ವನಿತಾವಸ್ತ್ರಂ ಗೀತ ತಾಂಬೂಲ ಭೋಜನಮ್।
ಶಯ್ಯಾ ಚಕುಸುಮಂ ಚೈವ ಭೋಗಾಷ್ಟಕ
ಮುದಾಹೃತಮ್॥

ಚಾಲುಕ್ಯರಾಜ ಸೋಮೇಶ್ವರ (ಕಿ. ಶ. ೧೧೩೦) ವಿರಚಿತ 'ಮಾನಸೋಲ್ಲಾಸ' ದಲ್ಲಿಯೂ ಅಷ್ಟಭೋಗಗಳಲ್ಲಿ ತಾಂಬೂಲವನ್ನು ಹೇಳಲಾಗಿದೆ. ಅರಮನೆಯಲ್ಲಿ ತಾಂಬೂಲಾಧಿಕಾರಿಯೊಬ್ಬನಿರುತ್ತಿದ್ದನು. ವನವಾಸಿ ಮೊದಲಾದ ಸ್ಥಳಗಳಿಂದ ಆ ಅಧಿಕಾರಿ ಅಡಕೆಯನ್ನು ಸಂಗ್ರಹಿಸುವುದು ಅವನ ಕೆಲಸ. ಅಡಕೆಕಾಯಿಯ ತುದಿಯನ್ನು ಕತ್ತರಿಸಿ ನೆರಳಿನಲ್ಲಿ ಒಣಗಿಸಬೇಕು. ಅರಸನ ತಾಂಬೂಲಕ್ಕೆ ಅಡಕೆ ಚಿಟ್ಟ ನಾಲ್ಕರಲ್ಲಿ ಒಂದುಭಾಗ, ತುಂಬು ತುದಿಗಳನ್ನು ತೆಗೆದ ೫೦ ಹಳದಿಬಣ್ಣ ಬಂದ ವೀಳೇದೆಲೆ, ಮುತ್ತಿನಸಿಂಪು, ಈಶಾವಾಸ ಕರ್ಪೂರ, ಕಸ್ತೂರಿ ಮತ್ತಿನ್ನಿತರ ಸುವಾಸಿತ ದ್ರವ್ಯಗಳನ್ನು ಉಪಯೋಗಿಸುತ್ತಿದ್ದರು.

ಶಹಜಹಾನನ (ಕ್ರಿ. ಶ. ೧೬೨೮-೫೮) ಆಶ್ರಯದಲ್ಲಿದ್ದ ಜಗನ್ನಾಥ ಪಂಡಿತರಾಜನು ತನ್ನ ರಸಗಂಗಾಧರದಲ್ಲಿ "... ಬ್ರಹ್ಮಚಾರಿಣೋ ಯತೇಶ್ಚ ತಾಂಬೂಲ ಚರ್ವಣಮ್" ಎಂದು ಅನೌಚಿತ್ಯವೆಂದು ಸಾರಿರುವನು. ಶಿವಪುರಾಣದಲ್ಲಿ "ಸುಖಶಯ್ಯಾಸನಂ ವಸ್ತ್ರಂ ತಾಂಬೂಲಂ ಸ್ನಾನಮಂತನಮ್| ದಂತಕಾಷ್ಠಂ ಸುಗಂಧಂ ಚ ಬ್ರಹ್ಮಚರ್ಯಸ್ಯ ದೂಷಣಮ್" ಎಂದಿದೆ. ವಿದ್ಯಾರ್ಥಿಗೆ ಭೋಗ್ಯವಸ್ತುಗಳು ಸಲ್ಲವು.

ಅಗ್ನಿಪುರಾಣದಲ್ಲಿ ಉಪವಾಸ ಆಚರಿಸುವವನು ತಾಂಬೂಲಸೇವನೆ, ಮೇಲಿಂದ ಮೇಲೆ ನೀರು ಕುಡಿಯುವುದು, ಹಗಲಿನಲ್ಲಿ ನಿದ್ರೆ, ಲೈಂಗಿಕ ಸುಖಗಳನ್ನು ತ್ಯಜಿಸಬೇಕೆಂದು ಸ್ಪಷ್ಟವಾಗಿದೆ.

ಸ್ಮೃತಿಕಾರ ಆಶ್ವಲಾಯನನು "ವಿದ್ಯಾಕಾಮೋऽನಿಶಂ ರಾತ್ರೌ ತಾಂಬೂಲಂ ನತು ಭಕ್ಷಯೇತ್| ತಥಾ-ಪಾಂತುತ್ವಂ ದಂತದೌರ್ಬಲ್ಯ ಮಷಿರೋಗಂ ಬಲಕ್ಷಯಮ್| ಕರೋತಿ ಮುಖರೋಗಾಂಶ್ಚ ತಾಂಬೂಲಮತಿಸೇವನಾತ್" ಎಂದು ತಾಂಬೂಲದ ಅತಿಸೇವನೆಯಿಂದಾಗುವ ಅನಿಷ್ಟ ಪರಿಣಾಮಗಳನ್ನು ಹೇಳಿ ಎಚ್ಚರಿಸಿದ್ದಾನೆ.

ಸ್ಮೃತಿಕಾರ ವಶಿಷ್ಠನು "ಯತಿಶ್ಚ ಬ್ರಹ್ಮಚಾರೀ ಚ ವಿಧವಾ ಚ ರಜಸ್ವಲಾ| ಪ್ರತ್ಯೇಕಂ ಮಾಂಸತುಲ್ಯಂ ಸ್ಯಾನ್ಮೇಲನ ಸುರಯಾ ಸಮಮ್" ಯತಿ, ಬ್ರಹ್ಮಚಾರಿ, ವಿಧವೆ, ಮುಟ್ಟಾದವಳು ತಾಂಬೂಲ ಸೇವಿಸಿದರೆ ಮಾಂಸಭಕ್ಷಣ, ಸೆರೆಸೇವನೆಮಾಡಿದಂತೆಂದು ಖಂಡಿಸಿದ್ದಾನೆ.

ಪಿತೃಗಳ ಶ್ರಾದ್ಧ ಮಾಡುವವನು ದಂತಧಾವನ, ತಾಂಬೂಲ, ಕ್ಷೌರ, ಅಭ್ಯಂಜನ, ರತಿಸುಖ, ಭೋಜನ, ಪರಾನ್ನಗಳನ್ನು ಸ್ವೀಕರಿಸಬಾರದೆಂದು 'ಇತಿಹಾಸೋಪನಿಷತ್' ನಲ್ಲಿ ಪ್ರತಿಬಂಧಿಸಲಾಗಿದೆ. ಮಾರ್ಕಾಂಡೇಯ, ಹೇಮಾದ್ರಿ, ಜಾಬಾಲಿ, ಬೃಹನ್ನಾರದೀಯ, ವಿಷ್ಣುರಹಸ್ಯ ಮೊದಲಾದ ಗ್ರಂಥಕಾರರು ಮತ್ತು ಕೃತಿಗಳಲ್ಲಿ ಮೇಲೆ ಹೇಳಿದಂತೆ ಧರ್ಮಶಾಸ್ತ್ರವು ತಾಂಬೂಲ ಚರ್ವಣವನ್ನು ನಿರಾಕರಿಸಿದುದನ್ನು ಉದ್ಧರಿಸಲಾಗಿದೆ.

ನಿತ್ಯಶ್ರಾದ್ಧ, ಹುಣ್ಣಿಮೆದಿನ ಶ್ರಾದ್ಧ, ಕೃಷ್ಣಪಕ್ಷದಲ್ಲಿ ಶ್ರಾದ್ಧ ಮಾಡುವವನು ತಾಂಬೂಲ ಸ್ವೀಕರಿಸಬಹುದೆಂದು 'ಆಚಾರರತ್ನ' ದಲ್ಲಿ, ಮತ್ತು ಶಾತಾತಪನು ಹೇಳುವರು. "ನಿತ್ಯಶ್ರಾದ್ಧೇ ತ್ವಮಾಶ್ರಾದ್ಧೇ ಶ್ರಾದ್ಧೇ ಚಾಪರಪಕ್ಷಕೇ| ತಾಂಬೂಲ ಚರ್ವಣೋ ದೋಷೋನೇತಿ ಶಾತಾತಪೋऽಬ್ರವೀತ್|" 'ಆಚಾರರತ್ನ' ದಲ್ಲಿ 'ಮಹಾಯಶ' ನಾದವನು ದಶಮಿ ತಿಥಿಯಿಂದ ಮೂರು ದಿವಸ ತಾಂಬೂಲ ಮತ್ತು ರತಿಸುಖಗಳನ್ನು ತ್ಯಜಿಸಬೇಕೆಂದಿದೆ.

ಧರ್ಮಶಾಸ್ತ್ರದ ತಾಂಬೂಲದ ವಿಷಯವಾಗಿರುವ ಮೇಲೆ ಹೇಳಿದ ನಿರ್ಬಂಧಗಳಲ್ಲದೆ, ಅಸುರ ಪದ್ಧತಿಯ ವಿವಾಹಸಮಾರಂಭದಲ್ಲಿ ಅಡಿಕೆ ಕೊಡಬಹುದು; ಪ್ರತಿದಿನ ಪಿತೃಯಜ್ಞ ಮಾಡುವವನು ತಾಂಬೂಲ ತಿನ್ನಬಹುದು; ಪಿತೃಗಳಿಗೆ ಅರ್ಪಿಸುವ ಪಿಂಡದ ಜೊತೆ ತಾಂಬೂಲ ಇಡಬೇಕು; ಗೃಹಸ್ಥಾಶ್ರಮಿಯು ತಾಂಬೂಲ ಸೇವನೆಯ ನಂತರವೇ ತನ್ನ ಸತಿಯನ್ನು ಕೂಡಬೇಕು; ಏಕಾದಶೀ ಉಪವಾಸಮಾಡುವವನು ಹಗಲು ನಿದ್ರೆ, ತಾಂಬೂಲ, ಸ್ತ್ರೀಸಂಗ, ಹೀನಜಾತಿಯೊಡನೆ ಸಂಭಾಷಣೆ, ನೀರುಗಳನ್ನು ಸೇವಿಸಬಾರದು; ಮೊದಲಾದ ನಿರ್ಬಂಧಗಳನ್ನು, ಅಪವಾದಗಳನ್ನು, ಕ್ರಿ. ಶ. ೧೧೫೦-೧೨೦೦ ರಲ್ಲಿದ್ದ ಶ್ರೀಧರನು 'ಸ್ಮೃತ್ಯಾರ್ಥಸಾರ' ದಲ್ಲಿ ಹೇಳಿರುವನು.

ಮೇಲಿನ ಆಧಾರಗಳನ್ನು ಸಮಾಲೋಚಿಸಿದಾಗ ತಾಂಬೂಲಭೋಗದ ಬಗೆಗಿರುವ ಹಿಂದೂ ಧರ್ಮಶಾಸ್ತ್ರದ ನೀತಿರೀತಿಗಳ ಸ್ವರೂಪ ವಿದಿತವಾಗುತ್ತಿದೆ. ಗೃಹಸ್ಥಧರ್ಮ ಜೀವನದಲ್ಲಿ ಸುಖೋಪಭೋಗಕಾಲ. ಅಂತೆಯೇ ನಮ್ಮ ಧರ್ಮಶಾಸ್ತ್ರ ಗೃಹಸ್ಥನಿಗೆ ಕಟುವಾದ ಕಟ್ಟಳೆಗಳನ್ನು ಹೇರಿಲ್ಲ. ನಮ್ಮ ದೇಶದಲ್ಲಿ ತಾಂಬೂಲದ ಬಗೆಗಿರುವ ಧಾರ್ಮಿಕ, ಸಾಮಾಜಿಕ ಸಂಪ್ರದಾಯ-ನಂಬುಗೆಗಳು ಸಂಶೋಧಕನ ಕುತೂಹಲ ಕೆರಳಿಸುತ್ತಿವೆ.

(ಮುಂದುವರಿಯುವುದು)

# ಕನ್ನಡಿಗರಿಬ್ಬರಿಗೆ ಉನ್ನತ ಸ್ಥಾನ

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ
ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರಿಂದ

## ೧. ಮೈಸೂರಿನ ನೂತನ ರಾಜ್ಯಪಾಲರು

ತಾ|| ೭-೮-೬೩ ರ ದಿನ ವಿದೇಶ ಯಾತ್ರೆಯನ್ನು ಕೈಗೊಂಡಿರುವ ಮೈಸೂರಿನ ರಾಜ್ಯಪಾಲರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ ಸ್ಥಾನದಲ್ಲಿ ಮೈಸೂರು ಹೈಕೋರ್ಟಿನ ಶ್ರೇಷ್ಠ ನ್ಯಾಯಾಧೀಶರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರು ನೂತನ ರಾಜ್ಯಪಾಲರಾಗಿ ರಾಷ್ಟ್ರಪತಿ ಡಾ|| ರಾಧಾಕೃಷ್ಣನ್ ಅವರಿಂದ ನಿಯಮಿತರಾಗಿರುವರೆಂಬ ಸುದ್ದಿಯನ್ನು ಕೇಳಿ ಕರ್ಣಾಟಕ ರಾಜ್ಯದ ಎಲ್ಲ ಜನರಿಗೂ ಅಪಾರ ಸಂತೋಷವಾಗಿದೆ. ರಾಜ್ಯಪಾಲರ ರಜಾ ಕಾಲಗಳಲ್ಲಿ ಆಯಾ ರಾಜ್ಯದ ಶ್ರೇಷ್ಠನ್ಯಾಯಾಧೀಶರು ತಾತ್ಕಾಲಿಕ ರಾಜ್ಯಪಾಲರನ್ನಾಗಿ ಮಾಡುವುದು ಭಾರತ ರಾಷ್ಟ್ರದ ಒಂದು ಸಂಪ್ರದಾಯವೇ ಆಗಿದೆ. ಪ್ರಕೃತ ರಾಜ್ಯಪಾಲರಾಗಿ ನಿಯಮಿತರಾಗಿರುವ ಮಾನ್ಯ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಈ ಪದವಿಗೆ ಸರ್ವವಿಧದಿಂದಲೂ ಅರ್ಹರಾಗಿದ್ದಾರೆ.

ಮಾನ್ಯ ಶ್ರೀ ನಿಟ್ಟೂರು ಶ್ರೀನಿವಾಸರಾಯರು ನ್ಯಾಯಶಾಸ್ತ್ರ ವಿಶಾರದರಾಗಿ ಕನ್ನಡ ನಾಡು ನುಡಿಗಳ ಉಜ್ವಲಾಭಿಮಾನಿಗಳಾಗಿ, ದೈವ ಭಕ್ತಿ, ದೇಶ ಭಕ್ತಿ, ನ್ಯಾಯನಿಷ್ಠೆ, ಸತ್ಯಸಂಧತೆ ಮೊದಲಾದ ಉದಾತ್ತ ಗುಣಗಳಿಂದ ವಿಭೂಷಿತರಾಗಿ ಸಮಗ್ರ ಕರ್ಣಾಟಕದ ಪ್ರೀತಿ ಗೌರವಗಳಿಗೆ ಪಾತ್ರರಾಗಿದ್ದಾರೆ. ಅವರು ತಮ್ಮ ಇಡೀ ಜೀವಮಾನದಲ್ಲಿ ಕನ್ನಡ ಸಾಹಿತ್ಯ ಸಂಸ್ಕೃತಿಗಳ ಏಳಿಗೆಗಾಗಿ ಬಹಳವಾಗಿ ಶ್ರಮಿಸಿದ್ದಾರೆ. ಈ ಮಹನೀಯರು ಹಲವು ಕಾಲ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಸಮಿತಿಯ ಸದಸ್ಯರಾಗಿದ್ದು ಮಹೋಪಕಾರ ಮಾಡಿದ್ದಾರೆ. ಸತ್ಯಶೋಧನ ಪುಸ್ತಕ ಭಂಡಾರವನ್ನು ಸ್ಥಾಪಿಸಿ ಕನ್ನಡ ಸಾಹಿತ್ಯದ ಉನ್ನತಿಗೆ ನೆರವಾಗಿದ್ದಾರೆ. ಎಲ್ಲಕ್ಕೂ ಮಿಗಿಲಾಗಿ ಅಜಾತಶತ್ರುಗಳಾಗಿ ಕರ್ಣಾಟಕದ ಹಿತೈಷಿಗಳೆನಿಸಿ ಎಲ್ಲರ ಮನ್ನಣೆಗೂ ಪಾತ್ರವೆನಿಸಿದ್ದಾರೆ. ಕನ್ನಡ ನಾಡಿನ ಸಮಗ್ರ ಪರಿಚಯವನ್ನು ಪಡೆದಿದ್ದಾರೆ. ಆದುದರಿಂದ ಇವರ ನೇತೃತ್ವದಲ್ಲಿ ಮೈಸೂರು ಸರ್ಕಾರಕ್ಕೂ ಒಳ್ಳೆಯ ಸಲಹೆಗಳು ಪ್ರಾಪ್ತವಾಗಿ ದೇಶೋನ್ನತಿಗೆ ನೆರವಾಗುವುದೆಂದು ನಂಬಬಹುದು.

## ೨. ಮೈಸೂರು ಹೈಕೋರ್ಟಿನ ನೂತನ ಶ್ರೇಷ್ಠ ನ್ಯಾಯಾಧೀಶರು

ಪ್ರಕೃತ ಮೈಸೂರು ಹೈಕೋರ್ಟಿನ ನ್ಯಾಯಮೂರ್ತಿಗಳಾಗಿರುವ ಶ್ರೀ ಹೆಚ್. ಹೊಂಬೇಗೌಡರು, ಶ್ರೀ ನಿಟ್ಟೂರು ಶ್ರೀನಿವಾಸರಾಯರ ಅನಂತರ ಮೈಸೂರು ಹೈಕೋರ್ಟಿನ ಶ್ರೇಷ್ಠ ನ್ಯಾಯಾಧೀಶರಾಗಿ ರಾಷ್ಟ್ರಪತಿ ಡಾ|| ರಾಧಾಕೃಷ್ಣನ್ ಅವರಿಂದ ನಿಯಮಿತರಾಗಿರುವುದು ಕನ್ನಡಿಗರೆಲ್ಲರ ಮಿಗಿಲಾದ ಸಂತೋಷಕ್ಕೆ ಕಾರಣವೆನಿಸಿದೆ. ನ್ಯಾಯಮೂರ್ತಿ ಶ್ರೀ ಹೊಂಬೇಗೌಡರು ನೇಗಿಲಯೋಗಿಯ ಮನೆತನದಲ್ಲಿ ಜನಿಸಿದ ನಿರ್ಮಲ ಚಿತ್ತರು. ನ್ಯಾಯಶಾಸ್ತ್ರ ಪರಿಣತರು. ದೈವಭಕ್ತಿ ಮತ್ತು ದೇಶಭಕ್ತಿಗಳಿಂದ ಕಂಗೊಳಿಸುತ್ತಿರುವವರು. ವಿನಯ, ದಾಕ್ಷಿಣ್ಯ, ಔದಾರ್ಯ, ಸತ್ಯಸಂಧತೆ ಮೊದಲಾದ ಉದಾತ್ತ ಗುಣಗಳಿಂದ ಕೂಡಿರತಕ್ಕವರು. ಕನ್ನಡ ನಾಡು ನುಡಿಗಳ ಹಾಗೂ ಸಾಹಿತ್ಯ ಪರಿಷತ್ತಿನ ಹಿತೈಷಿಗಳು. ವಿಶಾಲ ಮೈಸೂರು ರಾಜ್ಯದ ಸಮಗ್ರ ಪರಿಚಯವನ್ನುಳ್ಳವರು. ಇಂತಹ ಮಹನೀಯರು ಮೈಸೂರು ಹೈಕೋರ್ಟಿನ ಶ್ರೇಷ್ಠ ನ್ಯಾಯಾಧೀಶರೆನಿಸಿರುವುದು ಎಲ್ಲರಿಗೂ ಸಂತೋಷವನ್ನುಂಟುಮಾಡಿರುವುದು ಸಹಜವಾಗಿಯೇ ಇದೆ.

ವಿಶಾಲ ಮೈಸೂರು ರಾಜ್ಯದ ನೂತನ ರಾಜ್ಯಪಾಲರಾದ ಜನಪ್ರಿಯ ಮಾನ್ಯ ಶ್ರೀ ನಿಟ್ಟೂರು ಶ್ರೀನಿವಾಸರಾಯರಿಗೂ ಮೈಸೂರು ಹೈಕೋರ್ಟಿನ ಶ್ರೇಷ್ಠ ನ್ಯಾಯಾಧೀಶರಾಗಿರುವ ಮಾನ್ಯ ಶ್ರೀ ಹೆಚ್. ಹೊಂಬೇಗೌಡರಿಗೂ ನಾಡದೇವಿ ಶ್ರೀ ಭುವನೇಶ್ವರಿಯು ಸಕಲ ವಿಧವಾದ ಸನ್ಮಂಗಳಗಳನ್ನು ಉಂಟುಮಾಡಲೆಂದು ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಪ್ರಾರ್ಥಿಸುತ್ತೇನೆ. ಇಂತಹ ಉತ್ತಮ ತೀರ್ಮಾನವನ್ನು ಕೈಗೊಂಡ ನಮ್ಮ ಪ್ರಭುತ್ವದವರು ವಂದನಾರ್ಹರು.

# ಕನ್ನಡ ಸಾಹಿತ್ಯ ಪರಿಷತ್ತಿನ ಸಕಲ ಸದಸ್ಯರ ವಾರ್ಷಿಕ ಸಭೆ

**ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರ ಹೇಳಿಕೆ**

ತಾ|| ೨೮-೭-೬೩ ನೆಯ ಬೆಳಿಗ್ಗೆ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ನಡೆದ ೪೭ ನೆಯ ವರ್ಷದ ಸಕಲ ಸದಸ್ಯರ ಸಭೆಯ ವಿಷಯವಾಗಿ ಈಗಾಗಲೇ ಪತ್ರಿಕೆಗಳಲ್ಲಿ ಹಲವಾರು ಸುದ್ದಿಗಳು, ಹೇಳಿಕೆಗಳು ಪ್ರಕಟವಾಗಿವೆ. ಪರಿಷತ್ತಿನ ಅಧ್ಯಕ್ಷ ಪದವಿಗೆ ಓರ್ವ ಉಮೇದುವಾರರಾಗಿದ್ದ ಶ್ರೀ ಟಿ. ಟಿ. ಶರ್ಮರ ಹೇಳಿಕೆ ಕೂಡ ಪತ್ರಿಕೆಗಳಲ್ಲಿ ಬಂದಿದೆ. ಇಂತಹ ಸಂದರ್ಭದಲ್ಲಿ ಪರಿಷದಧ್ಯಕ್ಷನಾಗಿ ಅಂದಿನ ಸಭೆಯ ಅಧ್ಯಕ್ಷನಾಗಿ ಕಾರ್ಯಕಲಾಪಗಳನ್ನು ನಡೆಸಿದ ನಾನು ನಿಜಸ್ಥಿತಿ ಏನೆಂಬುದನ್ನು ಸಾರ್ವಜನಿಕರಿಗೆ ಲಿಖಿತ ಮೂಲಕವಾಗಿ ತಿಳಿಸುವುದು ಅಗತ್ಯವೆಂದು ಭಾವಿಸಿದ್ದೇನೆ.

೧. ತಾ|| ೨೮-೭-೬೩ ರ ಬೆಳಿಗ್ಗೆ ೯½ ಗಂಟೆಗೆ ಸೇರಿದ ಸಭೆಗೆ ಪರಿಷತ್ತಿನ ಸದಸ್ಯರೇ ಅಲ್ಲದೆ ಪರಿಷತ್ ಸದಸ್ಯರಲ್ಲದ ಕನ್ನಡ ಚಳುವಳಿ ಹೆಸರಿನ ಕೆಲವು ತರುಣರು ಪರಿಷನ್ಮಂದಿರಕ್ಕೆ ನುಗ್ಗಿ ಘಟನಾತ್ಮಕವಾಗಿ ಸೇರಿದ ಆ ಸಭೆಯ ಕಾರ್ಯಕಲಾಪಗಳು ನಡೆಯದ ಹಾಗೆ ರೋಷಾವೇಶದಿಂದ ಕೂಗಾಡಿ ಸಭೆಯ ಕಾರ್ಯಗಳನ್ನು ನಡೆಸಲು ಅಡಚಣೆಮಾಡಿದರು. ಆ ಕಾರ್ಯದಲ್ಲಿ ಶ್ರೀ ಶರ್ಮರು ಚಳುವಳಿಗಾರರಿಗೆ ಬೆಂಬಲವಾಗಿದ್ದರೆಂಬುದು ವಿಷಾದಕರ. ಹಿರಿಯರಾದ ಶ್ರೀ ಶರ್ಮರು ಪರಿಷತ್ತಿನ ವರದಿಯು 'ಸುಳ್ಳಿನ ಕಂತೆ' ಎಂದು ಹೇಳ ಹೊರಟಿದ್ದು ಇನ್ನೂ ವಿಷಾದಕರ ಎಂದು ನಾನು ಹೇಳಬೇಕಾಗುತ್ತದೆ. ಸಕಲ ಸದಸ್ಯರ ಸಭೆಯಿಂದ ಚುನಾಯಿತರಾಗಿರುವ ಕಾರ್ಯಕಾರಿ ಸಮಿತಿಯವರಿಂದ ಒಪ್ಪಿಗೆಯಾಗಿರುವ ವರದಿ ಹಾಗೂ ಸರಕಾರದ ಅಂಗೀಕಾರಪಡೆದ ಲೆಕ್ಕ ಪರಿಶೋಧಕರಿಂದ ಒಪ್ಪಿಗೆಯಾದ ಲೆಕ್ಕಪತ್ರ ಇವು 'ಸುಳ್ಳಿನ ಕಂತೆ' ಆಗುವುದಾದರೆ ೧೯೪೪ ನೆಯ ವರ್ಷದಲ್ಲಿ ಶ್ರೀ ಶರ್ಮರು ಪರಿಷತ್ತಿನ ಅಧ್ಯಕ್ಷರಾಗಿ ನಡೆಸಿದ ಕಾರ್ಯಕಲಾಪಗಳ ವರದಿಯು 'ನಿಜದ ಸಂತೆ' ಆಗುವುದು ಹೇಗೆ? ಎಂಬುದು ನನ್ನ ಪ್ರಶ್ನೆ. ಚುನಾವಣೆಯಲ್ಲಿ ಓರ್ವ ಉಮೇದುವಾರರಾಗಿದ್ದ ಶ್ರೀ ಶರ್ಮರು ಸಭೆಯ ಕಾಲದಲ್ಲಿ ಬಹುಕಾಲವನ್ನು ಬಳಸಿಕೊಂಡು ಅಡಿಗಡಿಗೆ ಎದ್ದುನಿಂತು ನನ್ನನ್ನು ನಿಂದಿಸುವುದರಲ್ಲಿ ಬಹುಕಾಲ ಕಳೆದರು. ಇತರರಿಗೆ ಮಾತನಾಡಲು ಅವಕಾಶವಿಲ್ಲದಂತೆ ಮಾಡಿದರು.

೨. ಸಭೆ ಬೆಳಗಿನ ಹನ್ನೊಂದೂವರೆ ಗಂಟೆಯಲ್ಲಿ ಶ್ರೀ ಶರ್ಮರ ಗುಂಪಿನವರು ಮಾಡಿದ ಗಡಿಬಿಡಿಯ ಪರಿಣಾಮವಾಗಿ ಮಧ್ಯಾಹ್ನ ಮೂರು ಗಂಟೆಗೆ ಮುಂದುವರಿಸಲ್ಪಟ್ಟಿತು. ಪರಿಷತ್ ಸದಸ್ಯರಲ್ಲದವರು ಬೆಳಿಗ್ಗೆ ನುಗ್ಗಿ ಬಂದ ಹಾಗೆ ಮಧ್ಯಾಹ್ನ ಒಳಗೆಬರಲು ಅವಕಾಶವಿಲ್ಲದಂತೆ ಪರಿಷತ್ತಿನಿಂದ ಗುರುತಿನ ಚೀಟಿಗಳನ್ನು ಕೊಡುವುದರ ಮೂಲಕ ಚಳುವಳಿಕಾರರನ್ನು ತಡೆಯಲಾಯಿತು ಆದರೂ ಚುನಾವಣೆಯ ನಿಮಿತ್ತವಾಗಿಯೇ ಒಂದೆರಡು ದಿನ ಮುಂಚಿತವಾಗಿ ಪರಿಷತ್ತಿಗೆ ಸದಸ್ಯರಾಗಿದ್ದ ಕೆಲವು ತರುಣರು ಶ್ರೀ ಅ. ನ. ಕೃಷ್ಣರಾಯರು ಅಧ್ಯಕ್ಷ ಚುನಾವಣೆಗೆ ಸ್ಪರ್ಧಿಸಲು ಪರಿಷತ್ತಿನವರು ಅವಕಾಶ ಕೊಡಬೇಕೆಂದು ಒತ್ತಾಯಮಾಡಿದರು. ಪರಿಷತ್ತಿನ ಘಟನೆ ೨೫ ರ ಪ್ರಕಾರ ಚುನಾವಣೆಯ ತಾರೀಖಿಗೆ ಆರು ತಿಂಗಳ ಮೊದಲು ಸದಸ್ಯರಲ್ಲದವರು ಮತಕೊಡುವ ಅಥವಾ ಚುನಾವಣೆಗೆ ನಿಲ್ಲುವ ಅವಕಾಶವಿಲ್ಲವೆಂದೂ, ಘಟನೆಯನ್ನು ಮೀರಿ ನಡೆಯಲು ನಮಗೆ ಅಧಿಕಾರವಿಲ್ಲವೆಂದೂ ಹೇಳಲಾಯಿತು. ಇದು ಅನೇಕಮಂದಿ ಆವೇಶದಿಂದಿದ್ದ ತರುಣರಿಗೆ ನಿರಾಶೆಯನ್ನೂ, ಕೋಪವನ್ನೂ ಉಂಟುಮಾಡಿತು. ಶ್ರೀ ಕೃಷ್ಣರಾಯರು ತಾ|| ೨೫-೭-೬೩ ರಂದು ಪರಿಷತ್ತಿನ ಸದಸ್ಯರಾದರು.

೩. ಸಭೆನಡೆಯುತ್ತಿದ್ದ ಕಾಲದಲ್ಲಿ ಶ್ರೀ ಶರ್ಮರು ಮೂರು ನಿರ್ಣಯಗಳನ್ನು ಸಭೆಯ ಮುಂದಿಡಬೇಕೆಂದು ಒತ್ತಾಯ ಮಾಡಿದರು. ಆ ವಿಷಯಗಳನ್ನು ಸಭೆಯ ಮುಂದೆ ತರಲು ಅವು ಕ್ರಮಬದ್ಧವಾಗಿಲ್ಲದಿದ್ದುದರಿಂದ ಹಾಗೂ ಸಭೆಯಲ್ಲಿ ತುಂಬಾ ಗಲಾಟೆ ನಡೆಯುತ್ತಿದ್ದುದರಿಂದಸಾಧ್ಯವಾಗಲಿಲ್ಲ. ಅಲ್ಲದೆ ಈ ನಿರ್ಣಯಗಳನ್ನು ಶ್ರೀ ಶರ್ಮರು ಸಭೆಯ ಮುಂದೆ ತರಲಿಲ್ಲ; ಇತರರು ಯಾರೂ ಅನುಮೋದಿಸಲಿಲ್ಲ.

೪. ಮಧ್ಯಾಹ್ನದ ಮೇಲೆ ಸಭೆಯಲ್ಲಿ ಪರಿಷತ್ತಿನ ವರದಿ

ಮತ್ತು ಲೆಕ್ಕಪತ್ರಗಳನ್ನು, ಶ್ರೀ ಬಿ. ಎನ್. ಗುಪ್ತರು ಸಭೆ ಒಪ್ಪಬಹುದೆಂದು ಸೂಚಿಸಿ, ಶ್ರೀ ಆರ್. ಅನಂತರಾಮನ್ ಅವರು ಅದನ್ನು ಅನುಮೋದಿಸಿದ ಪ್ರಕಾರ ಸಭೆಯು ಬಹುಸಂಖ್ಯಾತ ಸದಸ್ಯರ ಅನುಮೋದನೆಯನ್ನು ಪಡೆಯಿತು. ಆ ಸಮಯದಲ್ಲಿ ಶ್ರೀ ಶರ್ಮರು ಅವರ ಗುಂಪಿನವರು ಗಲಾಟೆ ಮಾಡುತ್ತಿದ್ದರು. ಅಧ್ಯಕ್ಷರು ಎಷ್ಟು ವಿಧವಾಗಿ ಕೇಳಿಕೊಂಡರೂ ಸಭೆಯಲ್ಲಿ ಶಾಂತಿ ಬರಲಿಲ್ಲ. ಆದ್ದರಿಂದ ಸಭೆಯ ಬಹುಮತದಂತೆ ವರದಿ ಮತ್ತು ಲೆಕ್ಕಪತ್ರಗಳು ಒಪ್ಪಿಗೆಯಾಯಿತು. ಅದನ್ನು ಸಭೆಯಲ್ಲಿ ಘೋಷಿಸಲಾಯಿತು. ಅದನ್ನು ಶ್ರೀ ಶರ್ಮರು ಕೇಳಿಸಿಕೊಳ್ಳದಿದ್ದರೆ ತಪ್ಪು ನಮ್ಮದಲ್ಲ.

೫. ಪರಿಷತ್ತಿನ ನೂತನ ವರ್ಷದ ಚುನಾವಣೆಯ ತಿಳಿವಳಿಕೆ ಪತ್ರದಲ್ಲಿ ಸೂಚಿಸಿದ್ದ ಪ್ರಕಾರ ನಿಯಮ ೨೫ ರ ಆಧಾರದ ಮೇಲೆ ನಡೆಯಬೇಕಾಗಿತ್ತು. ಆದರೆ ಶ್ರೀ ತಿರುನಾರಣಯ್ಯಂಗಾರ್ ಮೊದಲಾದ ಸದಸ್ಯರು ೧೯೬೧ ನೆಯ ಸೊಸೈಟಿ ಆಕ್ಟಿನ ಪ್ರಕಾರ ಚುನಾವಣೆ ನಡೆಯಬೇಕೆಂದೂ, ಈಗಿರುವ ಪರಿಷತ್ತಿನ ನಿಯಮವು ತುಂಬಾ ಹಳೆಯದೆಂದೂ ವಾದಿಸಿದರು. ಸಭೆಯ ಬಹುಸಂಖ್ಯಾತರು ಅದಕ್ಕೆ ತಮ್ಮ ಅನುಮತಿಯನ್ನಿತ್ತರು. ಗಲಭೆ ನಡೆಯುತ್ತಲೇ ಇತ್ತು. ಮುಂದೆ ಸಭೆ ನಡೆಸುವುದು ಅಸಾಧ್ಯವೆಂದು ಕಂಡುಬಂದ ಪ್ರಕಾರ ನಾನು ಸಂಜೆ ೬ ಗಂಟೆಗೆ ಯತ್ನವಿಲ್ಲದೆ "ವರದಿ ಮತ್ತು ಲೆಕ್ಕಪತ್ರಗಳು ಅಂಗೀಕೃತವಾಗಿವೆ; ಚುನಾವಣೆಯನ್ನು ಮುಂದುವರಿಸಲಾಗಿದೆ" ಎಂದು ಹೇಳಿ ಸಭೆಯನ್ನು ಬರಕಾಸ್ತು ಮಾಡಿದೆನು.

೬. ತಾ|| ೨೭-೭-೬೩ ರ ದಿನ ಹಲವು ಚಳುವಳಿಕಾರರು ನಾಳಿನ ಸಭೆಯ ವೇಳೆಗೆ ಪರಿಷತ್ತಿಗೆ ನುಗ್ಗಿ ಸಭೆ ನಡೆಯದಂತೆ ಮಾಡಲು ಸಜ್ಜುಗೊಂಡಿದ್ದಾರೆ ಎಂಬ ಸುದ್ದಿ ಪರಿಷತ್ತಿಗೆ ಬಂದಿತ್ತು. ಮರುದಿನ ಬೆಳಿಗ್ಗೆ ನಡೆಯಲೇಬೇಕಾಗಿದ್ದ ವಾರ್ಷಿಕ ಸಭೆಗೆ ಬಂದುಹೋಗುವ ಜನಗಳ ಕ್ಷೇಮ ಚಿಂತನೆ ಮತ್ತು ವಾಹನಗಳ ವ್ಯವಸ್ಥೆ ಇವುಗಳಿಗಾಗಿ ಪೋಲೀಸಿನವರ ರಕ್ಷಣಾವ್ಯವಸ್ಥೆಯನ್ನು ಕೇಳಲಾಗಿತ್ತು. ಅದರಂತೆ ಪೋಲೀಸಿನವರು ಬಂದು ಪರಿಷತ್ತಿನ ಹೊರಗಡೆ ಕಾವಲು ಕಾಯುತ್ತಿದ್ದುದು ನಿಜ. ತಾ|| ೨೮ ರ ಬೆಳಿಗ್ಗೆ ಮತ್ತು ಮಧ್ಯಾಹ್ನ ನಡೆದ ಚಳುವಳಿಕಾರರ ಗೊಂದಲವನ್ನು ಗಮನಿಸಿದರೆ ಪೋಲೀಸರ ಆಗಮನ ಅಗತ್ಯವಾಗಿತ್ತು ಎಂಬುದು ಸಿದ್ಧವಾಗುತ್ತದೆ. ಬೆಂಗಳೂರಿನಲ್ಲಿ ಹಲವಾರುಕಡೆ ನಡೆಯುವ ಕನ್ನಡ ಚಳುವಳಿಯ ಸಭೆಗಳಿಗೆ ಕೂಡ ಈಗ ಪೋಲೀಸಿನವರು ಬಂದು ರಕ್ಷಣೆ ಕೊಡುತ್ತಿರುವುದು ಎಲ್ಲರಿಗೂ ತಿಳಿದಿದೆ. ಪ್ರಭುತ್ವದ ಅಂಗವಾಗಿ ನಡೆಯುವ ಶಾಸನ ಸಭೆ ಮತ್ತು ಲೋಕಸಭೆಗಳು ನಡೆಯುವ ಕಾಲದಲ್ಲಿ ಕೂಡ ಪೋಲೀಸರ ರಕ್ಷಣೆ ಅನಿವಾರ್ಯ ಎಂಬುದನ್ನು ನಾವು ಮನಗಂಡಿರುತ್ತೇವೆ. ಉದ್ರೇಕದಿಂದ ಕನ್ನಡ ಚಳುವಳಿ ತರುಣರು ಅಶಾಂತಿ ಕಾರ್ಯದಲ್ಲಿ ತೊಡಗದಿರಲಿ ಎಂಬುದೇ ಪೋಲೀಸರನ್ನು ಕರೆಸಿದ ಮುಖ್ಯೋದ್ದೇಶವಾಗಿತ್ತು. ಇದು ಅನುಚಿತವೆಂದು ನಾನು ಭಾವಿಸುವುದಿಲ್ಲ. ದೇವರ ದಯೆಯಿಂದ ಪೋಲೀಸಿನವರ ನೆರವನ್ನು ಪಡೆಯುವ ಅವಕಾಶ ಅಂದು ಪರಿಷತ್ತಿಗೆ ಪ್ರಾಪ್ತವಾಗಲಿಲ್ಲ.

೭. ಪರಿಷತ್ತಿನ ಏಳುವರ್ಷಗಳ ಕಾರ್ಯಕಲಾಪಗಳನ್ನೂ, ಪರಿಷತ್ತಿನಲ್ಲಿ ನಡೆದಿರುವ ಪ್ರಗತಿಯ ಕಾರ್ಯಗಳನ್ನೂ ಮಾನ್ಯ ಸದಸ್ಯರಿಗೂ, ಮಹಾಜನರಿಗೂ, ಪ್ರತಿಪಡಿಸುವುದು ನನ್ನ ಕರ್ತವ್ಯವಾಗಿತ್ತು. ಆದ್ದರಿಂದಲೇ ತಾ|| ೨೫-೭-೬೩ ರ ದಿನ ಸಂಜೆ ಪರಿಷತ್ತಿನಲ್ಲಿ ಪತ್ರಿಕಾಗೋಷ್ಠಿ ಕರೆದು ನನ್ನ ಸೇವಾವಧಿಯಲ್ಲಿ ನಡೆದ ಕಾರ್ಯಕಲಾಪಗಳ ವರದಿ ಕೊಟ್ಟಿದ್ದೇನೆ. ಇಂತಹ ಹಲವು ಕಾರ್ಯಕಲಾಪಗಳನ್ನು ಶ್ರೀ ಟಿ. ಟಿ. ಶರ್ಮರು ತಾವು ಅಧ್ಯಕ್ಷರಾಗಿದ್ದ ೧೯೫೮ ನೆಯ ವರ್ಷದಲ್ಲಿ ನಡೆಸಿರುವರೆಂಬುದನ್ನು ಆ ವರ್ಷದ ವರದಿಯಲ್ಲಿ ಈಗಲೂ ನಾವು ಓದಬಹುದು. ಅದನ್ನು ಅವರು ಮರೆತಿದ್ದರೆ ಅದು ನನ್ನ ಅಪರಾಧವಲ್ಲ. ತಮ್ಮ ಉಮೇದುವಾರಿಕೆಯ ಬಿಸಿಯಲ್ಲಿ ಇತ್ತೀಚೆಗೆ ಪರಿಷತ್ತು ನಡೆಸಿದ ಎಲ್ಲ ಕಾರ್ಯಗಳೂ ಶ್ರೀ ಶರ್ಮರ ಗಮನಕ್ಕೆ ಬರದಿದ್ದರೆ ಅದು ಕೇವಲ ದುರದೃಷ್ಟದ ಸಂಗತಿ. ಪರಿಷತ್ತಿನ ಎಲ್ಲ ಲೆಕ್ಕಪತ್ರಗಳನ್ನೂ ಚಂದಾದಾರರ ಪಟ್ಟಿಯನ್ನೂ ಮುಂದಾಗಿಯೇ ಸ್ವತಃ ಶ್ರೀ ಶರ್ಮರವರು ಪರಾಂಬರಿಸಿದ್ದರು.

೮. ಸರ್ಕಾರದ ಅಪಾರ ಧನ (ಸುಮಾರು ೫೦,೦೦೦ ರೂ.ಗಳ) ವ್ಯಯದಲ್ಲಿ ೪ ವರ್ಷಗಳ ಸುದೀರ್ಘವಾದ ಅವಧಿಯಲ್ಲಿ ಸುಮಾರು ೨೦೦ ಪುಟದ ಸ್ವಾತಂತ್ರ್ಯ ಸಂಗ್ರಾಮದ ಕಥೆಯನ್ನು ಬರೆದ ಶ್ರೀ ಶರ್ಮರಿಂದ ನಾನು ಪ್ರಾಮಾಣಿಕತೆಯ ಪಾಠವನ್ನು ಕಲಿಯಬೇಕಾಗಿಲ್ಲ. ಪರಿಷತ್ತಿನ ಏಳು ವರ್ಷಗಳ ಲೆಕ್ಕಪತ್ರಗಳು, ಆಡಿಟ್ ವರದಿಗಳು ಅದರ ಪ್ರಮಾಣಿಕತ್ವಕ್ಕೆ ನಿದರ್ಶನವಾಗಿವೆ. ಹಿಂದಿನ ಆರುವರ್ಷಗಳ ಅವಧಿಯಲ್ಲಿ ಪ್ರಾಮಾಣಿಕವೆನಿಸಿದ್ದ ಲೆಕ್ಕಪತ್ರಗಳು ಈ ವರ್ಷ ಮಾತ್ರ ಅಪ್ರಾಮಾಣಿಕವಾಗಿ ಕಾಣಲು ಕಾರಣ ನನಗೆ ತಿಳಿಯದಾಗಿದೆ. ಪ್ರಾಯೇಣ

ಶ್ರೀ ಶರ್ಮರ ಉಮೇದುವಾರಿಕೆ ಇದಕ್ಕೆ ಕಾರಣವಾಗಿರಬಹುದೆ?

೯. ತಾ|| ೨೮-೭-೬೩ ರ ದಿನ ಪರಿಷತ್ತಿನಲ್ಲಿ ನಡೆಯುವ ಸಕಲ ಸದಸ್ಯರ ಸಭೆಗೆ ಬೆಂಗಳೂರಿನವರೇ ಅಲ್ಲದೆ ಹುಬ್ಬಳ್ಳಿ, ಧಾರವಾಡ, ಶಿರಸಿ, ಕಾರವಾರ, ಚಿತ್ರದುರ್ಗ, ಶಿವಮೊಗ್ಗ, ಮೈಸೂರು, ಚನ್ನಪಟ್ಟಣ, ರಾಮನಗರ, ಬೆಳಗಾಂವಿ, ಮದರಾಸು ಮೊದಲಾದ ಬೇರೆ ಬೇರೆ ಸ್ಥಳಗಳಿಂದ ಮಾನ್ಯ ಸದಸ್ಯರನೇಕರು ಆಗಮಿಸಿದ್ದರು. ಅಂದು ಬಂದ ಜನರಲ್ಲಿ ಮುಕ್ಕಾಲುಪಾಲು ಜನ ನಾನು ಮತ್ತೆ ಅಧ್ಯಕ್ಷನಾಗಬೇಕೆಂದು ಬಯಸಿ ನನ್ನ ಪರವಾಗಿ ಮತ ಕೊಡಲು ಸಿದ್ಧರಾಗಿದ್ದರು. ಆದರೆ ಅನಿರೀಕ್ಷಿತವಾದ ಗಲಭೆಯ ಕಾರಣಗಳಿಂದ ಸಭೆ ನಡೆಸಲಾಗಲಿಲ್ಲವೆಂದು ನಾನು ಮಹಾಜನರಲ್ಲಿ ಬಿನ್ನೈಸಬೇಕಾಗಿದೆ. ಪರಿಷತ್ತಿನ ಕ್ಷೇಮ ಚಿಂತನೆಗಾಗಿ ಅಂದು ಬಂದ ಸ್ಥಳ ಮತ್ತು ಪರಸ್ಥಳದ ಮಾನ್ಯ ಸದಸ್ಯರ ಕ್ಷಮೆಯನ್ನು ನಾನು ಕೇಳಬೇಕಾಗಿದೆ. ಇವರುಗಳ ಪರಿಷತ್ತಿನ ಮೇಲಿನ ಪ್ರೇಮವು ನಿಜಕ್ಕೂ ಶ್ಲಾಘ್ಯವಾಗಿದೆ.

೧೦. ಕನ್ನಡ ಸಾಹಿತ್ಯ ಪರಿಷತ್ತು ಸಮಗ್ರ ಕನ್ನಡಿಗರಿಗೆ ಸೇರಿದ ಸಂಸ್ಥೆ. ಅದಕ್ಕೆ ಸಾಹಿತಿಗಳಾದ ಯಾರಾದರೂ ಅಧ್ಯಕ್ಷರಾಗಿ ನಿಲ್ಲಲು ಅವಕಾಶವಿದೆ. ಪ್ರಜಾಪ್ರಭುತ್ವದ ಇಂದಿನ ದಿವಸಗಳಲ್ಲಿ ಇದು ಸಹಜವಾದುದೇ ಆಗಿದೆ. ನಾನು ಮುಂದೆಯೂ ಅಧ್ಯಕ್ಷನಾಗಬೇಕೆಂದು ಬಹುಮಂದಿ ಬಯಸಿದುದರಿಂದ ಮತ್ತೆ ಉಮೇದುವಾರನಾಗಿದ್ದೆನು. ನನ್ನ ಸೇವೆ ಆಗತ್ಯವಿಲ್ಲವೆಂದು ಜನ ಹೇಳಿದರೆ ನಾನು ಸಂತೋಷವಾಗಿ ಒಪ್ಪಿಕೊಳ್ಳುತ್ತೇನೆ. ಪರಿಷತ್ತಿನಲ್ಲಿ ಶಾಶ್ವತವಾಗಿ ನೆಲೆಗೊಳ್ಳಬೇಕೆಂಬ ಆಸೆ ನನಗಿಲ್ಲ. ಅಲ್ಲಿ ನಾನು ಸ್ವಂತಕ್ಕೆ ಸಾಧಿಸಬೇಕಾದ ಪುರುಷಾರ್ಥವೂ ಇಲ್ಲ. ಕನ್ನಡದ ಅಭಿಮಾನಿಗಳಾದ ಮತ್ತು ವಿದ್ವನ್ಮಣಿಗಳಾದ ಮಾನ್ಯ ಮಿತ್ರರು ಮುಂದೆ ಅಧ್ಯಕ್ಷರಾಗುವುದಾದರೆ ನಾನು ತುಂಬಾ ಸಂತೋಷಪಡುತ್ತೇನೆ. ನಾನು ಓರ್ವ ಸಾಮಾನ್ಯ ಸದಸ್ಯನಾಗಿದ್ದು ನನ್ನ ಸೇವೆಯನ್ನು ಸಲ್ಲಿಸಲು ಸಿದ್ಧನಾಗಿದ್ದೇನೆ. ವ್ಯಕ್ತಿಗಿಂತ ಸಂಸ್ಥೆ ದೊಡ್ಡದು ಎಂಬ ತತ್ವವನ್ನು ನಾನು ಮನಗಂಡಿದ್ದೇನೆ.

೧೧. ಚುನಾವಣೆಗೆ ಸಂಬಂಧಪಟ್ಟ ಹೊಸ ನಿಯಮವನ್ನು ನೂತನ ಸೊಸೈಟಿ ಅಕ್ಟಿಗನುಗುಣವಾಗಿ ರಚಿಸಿ ಅದಕ್ಕೆ ಪರಿಷತ್ತಿನ ಕಾರ್ಯ ಸಮಿತಿಯವರ ಒಪ್ಪಿಗೆ ಪಡೆದು ಸೊಸೈಟಿ ರಿಜಿಸ್ಟ್ರಾರರ ಅಂಗೀಕಾರವನ್ನು ಪಡೆದು ಮತ್ತೊಂದು ಸಕಲ ಸದಸ್ಯರ ಸಭೆಯನ್ನು ಕರೆದು ಅದಕ್ಕನುಗುಣವಾಗಿ ಮುಂದಿನ ಚುನಾವಣೆಯನ್ನು ನಡೆಸಲು ಪರಿಷತ್ತು ಸಿದ್ಧಗೊಳ್ಳುತ್ತಿದೆ.

೧೨. ತಾ|| ೨೮-೭-೬೩ ರ ಬೆಳಿಗ್ಗೆ ಮತ್ತು ಮಧ್ಯಾಹ್ನ ನಡೆದ ಗಲಭೆ ಯಾರಿಗೂ ಮಾನತರುವಂಥದಲ್ಲ. ಅಂತಹ ಗಲಭೆಗೆ ಪರಿಷತ್ತಿನಲ್ಲಿ ಅವಕಾಶವೇ ಇರಲಿಲ್ಲ. ಚುನಾವಣೆಯಲ್ಲಿ ಬಹುಮತ ಪಡೆದವರು ಅಧ್ಯಕ್ಷರಾಗಲು ಅಲ್ಲಿ ಅವಕಾಶವಿತ್ತು. ಅಂತಹ ಪ್ರಸಂಗ ಅಲ್ಲಿ ಬರದಿದ್ದುದು ವಿಷಾದಕರ. ಇಂದಿನ ಅಧ್ಯಕ್ಷರಿಗೆ ಬಂದ ತೊಂದರೆ ತಾಪತ್ರಯಗಳು ಮುಂದಿನ ಅಧ್ಯಕ್ಷರಿಗೆ ಬರದಂತೆ ನೋಡಿಕೊಳ್ಳುವುದು ಕನ್ನಡಾಭಿಮಾನಿಗಳೆಲ್ಲರ ಕರ್ತವ್ಯವಲ್ಲವೆ?

ಸುಮಾರು ಅರ್ಧ ಶತಮಾನದಷ್ಟು ಪ್ರಾಚೀನವೆನಿಸಿದ, ಸಮಗ್ರ ಕರ್ಣಾಟಕದ ಸಾಹಿತ್ಯ ಸಂಸ್ಕೃತಿಗಳ ಸೇವೆಗಾಗಿ ನಾಡ ಹಿರಿಯರಿಂದ ಸ್ಥಾಪನೆಯಾಗಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಘನತೆ ಗೌರವಗಳನ್ನೂ ಸತ್ಸಂಪ್ರದಾಯಗಳನ್ನೂ ಕಾಪಾಡುವ ವಿಷಯದಲ್ಲಿ ಕನ್ನಡ ಬಾಂಧವರೆಲ್ಲರೂ ಸಹಕರಿಸಬೇಕೆಂದು ವಿನಯದಿಂದ ಪ್ರಾರ್ಥಿಸುತ್ತೇನೆ.

---

# ಗ್ರಂಥಾವಲೋಕನ

**ಮಾದರ ಚೆನ್ನ : ಕ್ರೌನ್ ೧/೮ ; ಪುಟ ೩೮ ; ಬೆಲೆ ೧ ರೂ.**
ಲೇಖಕರು : ಶ್ರೀ ಸ್ವಾಮಿ ಮಹಾಮನೆ, ಮೈಸೂರು.

ಶಿವಶರಣರ ಚರಿತ್ರೆಯಲ್ಲಿ ಮಾದರ ಚೆನ್ನಯ್ಯನಿಗೆ ಹೆಚ್ಚಿನ ಮನ್ನಣೆಯಿದೆ. ಬಸವೇಶ್ವರ ವಚನಗಳಲ್ಲಿ ಈತನ ಹೆಸರು ಮೇಲಿಂದ ಮೇಲೆ ಬಂದಿದೆ. ಹರೀಶ್ವರ ಕವಿಯು ಈ ಶರಣನನ್ನು ಕುರಿತು ಒಂದು ರಗಳೆ ಕಾವ್ಯ ಬರೆದಿದ್ದಾನೆ. ಈತನು ೧೧ನೇ ಶತಕದಲ್ಲಿ ಕಂಚಿಯಲ್ಲಿ ರಾಜೇಂದ್ರ ಚೋಳನ ಅರಮನೆಯಲ್ಲಿ ಊಳಿಗದಲ್ಲಿದ್ದನೆಂದು ತಿಳಿದುಬಂದಿದೆ. ಶಿವನು ಇವನ ಭಕ್ತಿಗೆ ಮೆಚ್ಚಿ ಇವನ ಮನೆಗೆ ಜಂಗಮನಾಗಿ ಬಂದು ಅಂಬಲಿಯನ್ನು ಊಟಮಾಡಿದಂತೆ ಹೇಳಲಾಗಿದೆ. ಪ್ರಕೃತ ಗ್ರಂಥವು ಈ ಮಹಾ ಶರಣನನ್ನು ಕುರಿತುದೇ ಆಗಿದೆ.

ಇದು ಒಂದು ಕಿರು ನಾಟಕ. ಆಕಾಶವಾಣಿಯಲ್ಲಿ ಪ್ರಸಾರವಾಗಿದೆ. ನವ ಅಕ್ಷರಸ್ಥರಿಗಾಗಿ ಪುಸ್ತಕಗಳನ್ನು ರಚಿಸುವ ಕೇಂದ್ರ ಶಿಕ್ಷಣ ಮಂತ್ರಿ ಶಾಖೆಯಿಂದ ನಡೆಸಿದ ಸ್ಪರ್ಧೆಯಲ್ಲಿ ಇದಕ್ಕೆ ಬಹುಮಾನ ಬಂದಿದೆ. ಈ ನಾಟಕದಲ್ಲಿ ಪಾರ್ವತಿ, ಪರಮೇಶ್ವರ, ಬಸವಣ್ಣ, ಚೆನ್ನ, ರಾಜೇಂದ್ರ ಚೋಳ, ರಾಣಿ ಎಂಬ ಪಾತ್ರಗಳು ಬಂದಿವೆ. ಚೆನ್ನಯ್ಯನ ಮಹಿಮಾವಳಿಯನ್ನು ಬಸವಣ್ಣ ನಿರೂಪಿಸುತ್ತಾನೆ. ಚೆನ್ನಯ್ಯನಿಗೆ ಸಂಬಂಧಪಟ್ಟ ಮೂರು ಚಿತ್ರಗಳಿವೆ. ಮಕ್ಕಳೂ ವಯಸ್ಕ ಅಕ್ಷರಸ್ಥರೂ ಓದಲು ಅರ್ಹವಾಗಿದೆ.

ಶ್ರೀ ಸ್ವಾಮಿ ಮಹಾಮನೆ ತಮ್ಮದೇ ಆದ ಶೈಲಿಯಲ್ಲಿ ಇದುವರೆಗೆ ಇಪ್ಪತ್ತು ಪುಸ್ತಕ ಬರೆದಿದ್ದಾರೆ. ಇವರ ಕೃತಿಗಳು ಮಹಾ ಜನರ ಪ್ರೋತ್ಸಾಹಕ್ಕೆ ಅರ್ಹವಾಗಿವೆ.

**—ಶೂಲಪಾಣಿ.**

---

**ಪಿನಾಕಿನಿ:** ಲೇಖಕರು : ಶ್ರೀ ಸಮೇತನಹಳ್ಳಿ ರಾಮರಾಯ: ಪ್ರಕಾಶಕರು : ರಾಸ ಪ್ರಕಾಶನ ; ಪುಟಗಳು ೭೦ ; ಬೆಲೆ : ಒಂದೂವರೆ ರೂಪಾಯಿ.

ಇದರಲ್ಲಿ ಪ್ರಕಟವಾಗಿರುವ ಐದು ನಾಟಕಗಳಿಗೆ 'ಪಿನಾಕಿನಿ' ಎಂಬ ಶೀರ್ಷಿಕೆಯಿತ್ತಿರುವ ಔಚಿತ್ಯದ ಬಗ್ಗೆ ಲೇಖಕರು ತಮ್ಮದೇ ಆದ ವಿವರಣೆ ಇತ್ತಿರುವರು. ಈ ಪುಸ್ತಕಕ್ಕೂ ಆ ಶೀರ್ಷಿಕೆಗೂ ಯಾವ ಬಾಹ್ಯ ಸಂಬಂಧವಿಲ್ಲದಿದ್ದರೂ ದಕ್ಷಿಣ ಪಿನಾಕಿನಿ ನದಿ, ಅವರ ಬಾಳು ಮತ್ತು ಜೀವನ ಇವೆರಡರ ಮೇಲೆ ಬೀರಿದ ಮಹತ್ತರ ಪ್ರಭಾವದ ಫಲವೇ ಈ ಶೀರ್ಷಿಕೆ ಎಂದು ವಿವರಣೆ ಇತ್ತಿದ್ದಾರೆ ಪ್ರಸ್ತಾವನೆಯಲ್ಲಿ.

ಈ ಐದು ನಾಟಕಗಳಲ್ಲಿ ಪ್ರಥಮವಾದ "ಊರ್ವಶೀ ಪ್ರಸಂಗ": ಅರ್ಜುನನನ್ನು ಕಂಡು ಮೋಹಗೊಂಡ ಊರ್ವಶಿಯು ಅವನನ್ನು ವಿಚಲಿತನನ್ನಾಗಿ ಮಾಡಲಾರದೆ, ಕ್ರುದ್ಧಳಾಗಿ ಅವನಿಗೆ ಶಾಪ ಕೊಡುವ ಒಂದು ಪ್ರಸಂಗ ;

"ಶುಭ್ರ ಶೀಲೆ ಅಹಲ್ಯೆ": ದೇವರಾಜ ಇಂದ್ರನಿಂದ ಭ್ರಷ್ಟಗೊಳಿಸಲ್ಪಟ್ಟ ಅಹಲ್ಯೆ ತನ್ನ ಪತಿ ಗೌತಮರು ಪುನಃ ತನ್ನನ್ನು ಸ್ವೀಕರಿಸಲು ಸಿದ್ಧರಾಗಿದ್ದರೂ, ತಾನಾಗಿಯೇ ಶಿಕ್ಷೆಯನ್ನು ಸ್ವಾಗತಿಸಿದ ಪತಿವ್ರತೆಯ ಒಂದು ಚಿತ್ರ ;

"ಸ್ವೀಕಾರ" : ಹೊಯ್ಸಳ ಮಹಾರಾಜನ ಆಸ್ಥಾನದಲ್ಲಿ ನಡೆದ ನೃತ್ಯ ಸ್ಪರ್ಧೆಯಲ್ಲಿ ರಾಣಿಗೆ ಎದುರಾಗಿ ಸ್ಪರ್ಧಿಸಿ ಕೊನೆಯಲ್ಲಿ ರಾಜನಿಂದ ದತ್ತಕವಾಗಿ ಸ್ವೀಕರಿಸಲ್ಪಡುವ ಯುವಕನ ಒಂದು ಸುಂದರ ರೂಪಕ ;

"ಅಸ್ತಮಾನ" : ವಿಜಯನಗರದ ಮಹಾ ಸಾಮ್ರಾಜ್ಯದ ಕುಬೇರ ವೈಭವದ ಅವನತಿಯ ಒಂದು ದುರಂತ ಚಿತ್ರ ;

ಕೊನೆಯದಾಗಿ "ಸೀತಾ ದರ್ಶನ" : ಸೀತೆಯನ್ನು ಸ್ವೀಕರಿಸುವ ಮೊದಲು ರಾಮನು ತಂದೊಡ್ಡುವ ಅಗ್ನಿಪರೀಕ್ಷೆಯ ಒಂದು ದೃಶ್ಯ ;

ಇವು ಈ ಸಂಕಲನದ ನಾಟಕಗಳ ಮುಖ್ಯ ವಸ್ತುಗಳು. ಶ್ರೀ ರಾಮರಾಯರು ನುರಿತ ಲೇಖಕರು. ನಾಟಕಗಳನ್ನು ಓದುತ್ತಾ ಓದುತ್ತಾ ನಮಗರಿಯದಂತೆಯೇ ಕಣ್ಣಂಚಿನಲ್ಲಿ ನೀರೂಡುವುದು, ಹುಬ್ಬುಗಳು ಬಿಗಿಯುವುವು, ಹಣೆಯಲ್ಲಿ ನಿರಿಗೆಗಳು ಮೂಡುವುವು. ಸಾಕು, ಲೇಖನ

ಉದ್ದಿಶ್ಯ ಫಲಿಸಿತು. ಆದರೂ ಈ ನಾಟಕಗಳು ಮುಖ್ಯ ವಾಗಿ ಶ್ರಾವ್ಯವೇ ಹೊರತು ಇವುಗಳನ್ನು ದೃಶ್ಯವಾಗಿ ಸಲು ವಿಪರೀತ ಶ್ರಮಿಸಬೇಕಾಗುವುದು. ಬಳಸಿಕೊಂಡಿ ರುವ ಭಾಷೆ, ತುಂಬಾ ಸಾಹಿತ್ಯಕ; ಕೆಲವುಕಡೆ ಅತಿ ಜಟಿಲ ವಾಗಿಯೇ ತೋರುವುದು. ಅಥವಾ ಈ ಬಗೆಯ ಕೃತಿ ಗಳಿಗೆ ಅಂತಹ ಭಾಷೆ ಆವಶ್ಯಕವೇನೋ ? ಸರಳವಾದ, ಸುಲಭವಾದ ಮಾತುಗಳು ನಾಟಕದ ಔನ್ನತ್ಯಕ್ಕೆ ಹಿರಿಮೆಗೆ ಕುಂದು ತರಬಹುದೆಂಬ ಶಂಕೆಗೆ ಓದುಗನೇ ಕೃತಿಯನ್ನು ಓದಿ ಸಮಾಧಾನ ಮಾಡಿಕೊಳ್ಳಬೇಕು.

ಒಳ್ಳೆಯ ಕಾಗದ, ಅಚ್ಚುಕಟ್ಟಾದ ಮೇಲು ಹೊದಿಕೆ, ಅಂದವಾದ ತಪ್ಪಿಲ್ಲದ ಮುದ್ರಣ ಈ ಹೊತ್ತಿಗೆಯ ವಿಶೇಷ ಗಳು.

**ಕಲಾರಾಧನೆ** : ಲೇಖಕರು ಮತ್ತು ಪ್ರಕಾಶಕರು: ಶ್ರೀ ಸಮೇತನಹಳ್ಳಿ ರಾಮರಾಯ; ಪುಟಗಳು ೧೩೮ ; ಬೆಲೆ: ಎರಡು ರೂಪಾಯಿ.

ಇದು ಐದು ನಾಟಕಗಳ ಒಂದು ಸಂಕಲನ. 'ರೂವಾರಿ ದಾಸೋಜ', 'ಕಲಾರಾಧನೆ' ಮತ್ತು 'ಹೆಡೆಯ ನೆರಳು' ಇವು ಮೂರೂ ಹೊಯ್ಸಳರ ಕಾಲವನ್ನು ಹಿನ್ನೆಲೆಯಾಗುಳ್ಳ ಶಿಲ್ಪ ಯುಗದ ಚಿತ್ರಗಳು. ನಾಟಕಕಾರರು ಈ ಒಂದೊಂದು ನಾಟಕದ ಉದ್ದಿಶ್ಯ ವಸ್ತು ಬೇರೆ ಬೇರೆ ಎಂದು ಹೇಳಿದರೂ ನಮಗೆ ಈ ಮೂರು ನಾಟಕಗಳೂ ಒಂದೇ ಜಾಡಿನಲ್ಲಿ ಹರಿದಿವೆ ಎಂದು ಎನ್ನಿಸದೇ ಇರದು. 'ಕಣ್ಣೀರ ಹಣ್ಣು' ಬೌದ್ಧ ಕಾಲೀನ ಒಂದು ಪ್ರಸಂಗ ಮತ್ತು 'ಬಂಗಾರದ ಬೆಳಸು' ಪ್ರಸ್ತುತ ಪ್ರಜಾ ಯುಗದ ಒಂದು ಚಿತ್ರ.

ತುಂಬಿದ ಬಸುರಿ ಉತ್ತಮಾ, ತನ್ನ ತೌರೂರಿಗೆ ಹೊರಡುವಾಗ ದಾರಿಯಲ್ಲಿ ತನ್ನ ಪತಿ, ಪುತ್ರ ಮತ್ತು ನವಜಾತ ಶಿಶು ಇವರ ಮೃತ್ಯುವನ್ನು ಕಂಡು, ತನ್ನ ಮಾತಾ-ಪಿತೃಗಳ ಮರಣ ವಾರ್ತೆ ಕೇಳಿ, ಅಸಹ್ಯ ಮಾನಸಿಕಯಾತನೆ ಅನುಭವಿಸಿ, ಕೊನೆಯಲ್ಲಿ ಬುದ್ಧ ಭಗವಾನನ ಸಂದರ್ಶನದಿಂದ ಶಾಂತಿಯನ್ನು ಪಡೆದು, ಆತನ ಶಿಷ್ಯಳಾಗುವ ಒಂದು ಮನೋಹಾರಿಯಾದ ಚಿತ್ರ; ಇದು 'ಕಣ್ಣೀರ ಹಣ್ಣಿನ' ವಸ್ತು.

'ಬಂಗಾರದ ಬೆಳಸು' ಎಂಬುದರಲ್ಲಿ ಸಂಪಿಗೆ ಎಂಬ ತರುಣಿ ನಾಯಕನೆಂಬ ವಿದ್ಯಾವಂತ ತರುಣನನ್ನು ಒಲಿದು ಆದರೂ ಕುಲ, ಪರಂಪರೆ, ರೂಢಿ ಇತ್ಯಾದಿಗಳಿಂದ ಪೀಡಿತಳಾಗಿ, ಅವುಗಳನ್ನು ಜಯಿಸಿ ಫಲಕಾರಿಯಾಗುವ ಒಂದು ಆದರ್ಶ ಚಿತ್ರ.

ನಾಡಿನ ಹೆಗ್ಗಡತಿ ಒಬ್ಬ ರೂವಾರಿಯಲ್ಲಿ ಅನುರಕ್ತಳಾಗಿ, ಆದರೆ ಅವನ ಮನಸ್ಸನ್ನು ಶಿಲ್ಪ ಕಲೆಯಿಂದ ತನ್ನೆಡೆಗೆ ಎಳೆಯಲು ಅಸಮರ್ಥಳಾಗುವ ಒಂದು ಪ್ರಣಯ ಸನ್ನಿವೇಶ 'ರೂವಾರಿ ದಾಸೋಜ'ದಲ್ಲಿ ಚಿತ್ರಿಸಲ್ಪಟ್ಟಿದೆ.

ಮಹಾದಣಾಯಕ ಗಂಗರಾಜರ ಸಾಕುಮಗಳು ಸೋಮಲದೇವಿ ವೇಷ ಮರಿಸಿ, ಸೇಡಿಗಾಗಿ ವಿಷ್ಣುವರ್ಧನನ ಪಟ್ಟದರಸಿ ಶಾಂತಲದೇವಿಯನ್ನು ಕೊಲ್ಲಲು ಮಾಡಿದ ಪ್ರಯತ್ನಗಳು, ಅವಳು ಅನುರಕ್ತಳಾದ ಚಾವಣನೆಂಬ ತರುಣ ರೂವಾರಿಯಿಂದ ಹೇಗೆ ವಿಫಲಗೊಂಡವು ಮತ್ತು ಕೊನೆಯಲ್ಲಿ ಶಾಂತಲದೇವಿಯು ಹೇಗೆ ವಿಪತ್ತಿನಿಂದ ಪಾರಾದಳು ಎಂಬ ವಸ್ತುವನ್ನುಳ್ಳ ಒಂದು ರೂಪಕ, 'ಕಲಾರಾಧನೆ'.

'ಹೆಡೆಯ ನೆರಳು' ಹೊಯ್ಸಳರ ಕೊನೆಯ ದೊರೆಯಾದ ಬಲ್ಲಾಳನ ಒಬ್ಬ ರಾಣಿ ತನ್ನ ಅನೈತಿಕ ಲಂಪಟ ಪ್ರೇಮದ ಫಲವಾಗಿ ಇಬ್ಬರು ತರುಣರ ಮೃತ್ಯುವಿಗೆ ಕಾರಣಳಾದಳೆಂಬ ವಸ್ತುವನ್ನುಳ್ಳ ಒಂದು ದುರಂತ.

ಈ ನಾಟಕಗಳೆಲ್ಲವೂ ಆಗಾಗ್ಗೆ ಆಕಾಶವಾಣಿಯಿಂದ ಪ್ರಸಾರಿತವಾದುವುಗಳು. ಕನ್ನಡ ಜನಪದದ ಅಂದಿನ ಅರಳಿದ ಆ ಹಿರಿಯ ಬಾಳು, ಅದರ ಚೆಲುವು ಒಲವು, ಅದು ಸಾಧಿಸಿದ ಲೋಕ ಕಲ್ಯಾಣ, ಇವುಗಳು ಈ ನಾಟಕಗಳಲ್ಲಿ ಮೂಡಿ ಬಂದಿವೆ. ಓದುಗನಿಗೆ ಇಷ್ಟು ಮಹತ್ತರ ಭಾವನಾಪೂರ್ಣವಾಗಿತ್ತೇ ನಮ್ಮ ನಾಡು ಎಂದು ಎನ್ನಿಸದೇ ಇರದು. ನಮ್ಮ ಕಲೆಗಾರರು ನಮ್ಮ ಕಲ್ಪನೆಗೂ ಮೀರಿದವರು ಎಂಬ ಭಾವನೆ ನಮ್ಮ ಮನಸ್ಸಿನಲ್ಲಿ ಮೂಡುವುದು. ಈ ನಾಟಕಗಳು ರಂಗದ ಮೇಲೆ ಅಳವಡಿಸಿ ಅಭಿನಯಿಸಲು ಯೋಗ್ಯವಿವೆ.

ಅಂದವಾದ ಮುದ್ರಣ, ಹಸನಾದ ಹೊರ ಕವಚ, ಈ ಪುಸ್ತಕವನ್ನು ಜನಪ್ರಿಯವಾಗಿ ಮಾಡುವುದರಲ್ಲಿ ಸಂದೇಹವಿಲ್ಲ.

**—ಕೆ. ಎಸ್. ಸೂಲಿಬೆಲೆ**

# ಪರಿಷತ್ತಿನ ಸುದ್ದಿಗಳು

## ಭಾಷಣ ಕಲಾ ವಿಚಾರ ಗೋಷ್ಠಿ

"ಭಾಷಣ ದೀರ್ಘವಾಗಿರಬಾರದು, ಅಥವಾ ಕೇಳುವವರಿಗೆ ದೀರ್ಘವಾಗಿದೆ ಎಂದೆನಿಸಬಾರದು. ಕೇಳುವವರ ಮುಖದಲ್ಲಿ ಪ್ರಸನ್ನತೆ, ಉಲ್ಲಾಸ ಅಥವಾ ನಗೆ ತಾಂಡವಾಡಬೇಕು. ಹಿಂದೆ ಕವಿ, ಗಮಕಿ, ವಾಗ್ಮಿ, ವಾದಿ—ಎಂಬ ನಾಲ್ಕು ಮಂದಿ ವಿದ್ವಾಂಸರು ನಮ್ಮ ಸಮಾಜದಲ್ಲಿ ಪ್ರಮುಖರೆಂದು ಗಣಿಸಲ್ಪಟ್ಟಿತ್ತು. ಕವಿಯೂ ಬೇಕು—ಅವನು ಬರೆದದ್ದನ್ನು ಹಾಡುವ ಗಮಕಿಯೂ ಬೇಕು. ಅಂತೆಯೇ ಉತ್ತಮ ದರ್ಜೆಯ ವಾಗ್ಮಿಯೂ ಬೇಕು. ಕನ್ನಡ ಸಾಹಿತ್ಯ ಪರಿಷತ್ತಿನವರು ಈ ಭಾಷಣಕಾರರನ್ನು ತರಪೇತುಮಾಡುವ ಕಾರ್ಯ ಶ್ಲಾಘನೀಯವಾದುದು. ಸಾಧ್ಯವಾದರೆ ಇದೇ ರೀತಿಯಲ್ಲಿಯೇ ಕವಿಗಳಿಗೂ ಸಹ ಶಿಕ್ಷಣ ಕೊಟ್ಟರೆ ಬಹಳ ಒಳ್ಳೆಯದು ಎಂದು ನನ್ನ ಅಭಿಪ್ರಾಯ"— ಎಂಬುದಾಗಿ ಸುಪ್ರಸಿದ್ಧ ವಿದ್ವಾಂಸರೂ, ಪ್ರಾಧ್ಯಾಪಕರೂ ಆದ ಶ್ರೀ ತೀ. ನಂ. ಶ್ರೀಕಂಠಯ್ಯನವರು ೨೭-೭-೬೩ರ ಸಂಜೆ ನಡೆದ ಭಾಷಣ ಕಲಾ ವಿಚಾರ ಗೋಷ್ಠಿಯ ಉದ್ಘಾಟನೆ ಮಾಡುತ್ತಾ ತಿಳಿಸಿದರು. ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಅಧ್ಯಕ್ಷತೆ ವಹಿಸಿದ್ದರು.

ಅನಂತರ ಡಾ|| ಆರ್. ಸಿ. ಹಿರೇಮಠ್‌ರವರು ಭಾಷಣ ಮಾಡುತ್ತ—"ಭಾಷಣ ಕಲೆ ಬಹಳ ಶ್ರೇಷ್ಠವಾದದ್ದು, ಅದು ಮಕ್ಕಳನ್ನೂ ಸಹ ಮುಗ್ಧರನ್ನಾಗಿ ಮಾಡುತ್ತದೆ. ಪಾಶ್ಚಾತ್ಯ ದೇಶಗಳಲ್ಲಿ ಇದಕ್ಕಾಗಿ ಬಹಳ ಶ್ರಮಿಸುತ್ತಿದ್ದಾರೆ. ದಿವಂಗತ ಗೋಖಲೆಯವರು ಇಂಗ್ಲೀಷ್ ದಿನಪತ್ರಿಕೆಯನ್ನು ಓದಿ, ಅದನ್ನು ಉಪನ್ಯಾಸ ರೀತಿಯಲ್ಲಿ ತಮ್ಮಷ್ಟಕ್ಕೆ ತಾವೇ ಹೇಳಿಕೊಳ್ಳುತ್ತಾ ದಿನಂಪ್ರತಿ ಅಭ್ಯಾಸ ಮಾಡುತ್ತಿದ್ದರಂತೆ. ಉಪನ್ಯಾಸಕ ಏನನ್ನು ಹೇಳಿದರೂ ಅದು ಅರ್ಥ ಪೂರಿತವಾಗಿರಬೇಕು. ಜಳ್ಳು ಮಾತುಗಳಿರಬಾರದು. ಮುಖ್ಯವಾಗಿ ಉಪನ್ಯಾಸಕನಾದವನು ಮೂರು ವಿಷಯಗಳನ್ನು ಗಮನದಲ್ಲಿಟ್ಟಿರಬೇಕು. ಅವು ಯಾವುವೆಂದರೆ: ಉಪನ್ಯಾಸದ ವಿಷಯ, ಭಾಷೆ ಹಾಗೂ ಶೈಲಿ, ಮತ್ತು ಸತ್ಪರಿಣಾಮ. ಭಾಷಣವನ್ನು ಕೇಳುವವರ ಮೇಲೆ ಯಾವ ಪರಿಣಾಮ ಉಂಟಾಗಿದೆ ಎಂಬುದನ್ನು ಗಮನಿಸಬೇಕು." ಎಂದು ಮುಂತಾಗಿ ಹೇಳಿ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಯಶಸ್ಸು ಕೋರಿದರು.

ಬಳಿಕ ಪ್ರಾ|| ಕೆ. ಜಿ. ಕುಂದಣಗಾರರು ಅನಾರೋಗ್ಯ ನಿಮಿತ್ತ ಹೆಚ್ಚಾಗಿ ಮಾತನಾಡಲಾಗದೆ, ಭಾಷಣ ಕಲಾ ವಿದ್ಯಾರ್ಥಿಗಳಿಗೆ ಕೆಲವು ಹಿತೋಕ್ತಿಗಳನ್ನು ಹೇಳಿದರು. ಮದ್ರಾಸ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾದ ಶ್ರೀ ಎಂ. ಮರಿಯಪ್ಪ ಭಟ್ಟರವರು "ಭಾಷಣಕಾರನಿಗೆ ಶಬ್ದಭಂಡಾರದ ಹೆಚ್ಚು ಅವಶ್ಯಕತೆಯಿದೆ. ಶಬ್ದ ದಾರಿದ್ರ್ಯ ಎಲ್ಲಿಯೂ ಕಾಣಬಾರದು. ಹೇಳಿದ ಮಾತು ಮನಮುಟ್ಟುವಂತಿರಬೇಕು. ಸತತಾಭ್ಯಾಸ, ಜ್ಞಾನಾರ್ಜನೆ, ಶಾಸ್ತ್ರಪರಿಚಯ-ಎಲ್ಲಕ್ಕೂ ಮಿಗಿಲಾಗಿ ವಿಷಯ ಸಂಗ್ರಹ ಅತ್ಯಾವಶ್ಯಕ" ಎಂದು ನುಡಿದು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಶುಭವನ್ನು ಕೋರಿ, ಪರಿಷತ್ತಿನ ಅಧಿಕಾರಿ ವರ್ಗಕ್ಕೆ ಧನ್ಯವಾದಗಳನ್ನರ್ಪಿಸಿದರು.

ಸಭೆಯ ಆರಂಭದಲ್ಲಿ ಕುಮಾರಿ ಇಂದಿರಾರವರಿಂದ ಪ್ರಾರ್ಥನೆಯಾದನಂತರ ಗೌ|| ಕಾ|| ಅನ್ನದಾನಯ್ಯ ಪುರಾಣಿಕರು ಸ್ವಾಗತಭಾಷಣ ಮಾಡಿದರು. ವ್ಯವಸ್ಥಾಪಕರಾದ ಶ್ರೀ ಬ. ನ. ಸುಂದರರಾಯರು ವಂದನಾರ್ಪಣೆ ಮಾಡಿದರು.

## ವಿಚಾರಗೋಷ್ಠಿ

ಬೆಂಗಳೂರಿನ ದಿನಪತ್ರಿಕೆಗಳಲ್ಲೊಂದಾದ ಪ್ರಜಾವಾಣಿಯ ಸಂಪಾದಕರಾದ ಶ್ರೀ ಟಿ. ಎಸ್. ರಾಮಚಂದ್ರರಾಯರು ಇತ್ತೀಚೆಗೆ ಐರೋಪ್ಯ ದೇಶಗಳಲ್ಲಿ ಸಂಚರಿಸಿ ಬಂದಿರುವುದು ಸರಿಯಷ್ಟೆ. ಇವರನ್ನು ಪರಿಷತ್ತಿನವರು ಇದೇ ಜುಲೈ ದಿನಾಂಕ ೧೫ರಂದು ಸಂಜೆ ಆಹ್ವಾನಿಸಿ ಗೌರವಿಸಿದರು. ಶ್ರೀ ರಾಮಚಂದ್ರರಾಯರು ಪತ್ನೀ ಸಮೇತರಾಗಿ ದಯಮಾಡಿಸಿ ಪರಿಷತ್ತಿನಲ್ಲಿ ನಡೆಯುತ್ತಿರುವ ಭಾಷಣಕಲಾ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಭೇಟಿ ಮಾಡಿದರು. ಆ ಸಂದರ್ಭದಲ್ಲಿ ಒಂದು ವಿಚಾರ ಗೋಷ್ಠಿಯನ್ನು ನಡೆಸಲಾಯಿತು. ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಸಭೆಯ ಅಧ್ಯಕ್ಷತೆ ವಹಿಸಿದ್ದರು. ವಿದ್ಯಾರ್ಥಿ ವಿದ್ಯಾರ್ಥಿನಿಯರು ಶ್ರೀ ರಾಮಚಂದ್ರರಾಯರ ವಿದೇಶ ಪ್ರವಾಸದ ಅನುಭವಗಳನ್ನು ತಿಳಿದ ಬಳಿಕ ಅನೇಕ ಪ್ರಶ್ನೆಗಳನ್ನು ಕೇಳಿದರು.

ಬಳಿಕ ಶ್ರೀ ಶಾಸ್ತ್ರಿಗಳು ಒಂದೆರಡು ಮಾತುಗಳನ್ನಾಡಿದ ಮೇಲೆ ಕಾರ್ಯದರ್ಶಿಗಳಾದ ಶ್ರೀ ಕೆ. ಎಂ. ಕೃಷ್ಣರಾಯರು ಪರಿಷತ್ತಿನ ಪರವಾಗಿಯೂ ಚಿ|| ಎಸ್. ರಂಗಸ್ವಾಮಿ ಎಂಬಾತ ವಿದ್ಯಾರ್ಥಿಗಳ ಪರವಾಗಿಯೂ ವಂದನಾರ್ಪಣೆ ಮಾಡಿದರು. ಭಾಷಣಕಲಾ ತರಗತಿಯ ಅಧ್ಯಾಪಕರಾದ ಶ್ರೀ ದೇಶಿಕಾಚಾರ್ಯರೂ, ಶ್ರೀ ಅ. ರಾ. ಮಿತ್ರರವರೂ, ವ್ಯವಸ್ಥಾಪಕರಾದ ಶ್ರೀ ಬ ನ. ಸುಂದರರಾಯರೂ, ಹಾಜರಿದ್ದು ಈ ವಿಚಾರ ಗೋಷ್ಠಿಯನ್ನು ಕಂಡು ಆನಂದಿಸಿದರು.

## ಭಾಷಣಕಲಾ ತರಗತಿಗೆ ಶ್ರೀ ಹೆಚ್. ಎಸ್. ಸೀತಾರಾಂರವರ ಭೇಟಿ

ಮಾಜಿ ಮೇಯರ್‌ರವರಾದ ಶ್ರೀ ಹೆಚ್. ಎಸ್. ಸೀತಾರಾಂರವರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆಯುತ್ತಿರುವ ಭಾಷಣಕಲಾ ತರಗತಿಗೆ ೧೮–೭–೬೩ ರ ಸಂಜೆ ಭೇಟಿಕೊಟ್ಟು "ವಿಶ್ವ ಪರ್ಯಟನ" ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು. ಅನೇಕ ಗಣ್ಯ ವ್ಯಕ್ತಿಗಳೂ, ವಿದ್ಯಾರ್ಥಿ ವಿದ್ಯಾರ್ಥಿನಿಯರೂ ಅತ್ಯಧಿಕ ಸಂಖ್ಯೆಯಲ್ಲಿ ಹಾಜರಿದ್ದರು. ಆರಂಭದಲ್ಲಿ ಕುಮಾರಿ ಹೆಚ್. ಆರ್. ಇಂದಿರರವರು ದೇವತಾ ಪ್ರಾರ್ಥನೆ ಮಾಡಿದರು. ಅನಂತರ ಶ್ರೀ ಬಿ.ಶಿವಮೂರ್ತಿಶಾಸ್ತ್ರಿಗಳು ಉಪನ್ಯಾಸಕರ ಪರಿಚಯ ಮಾಡಿಕೊಟ್ಟರು. ಶ್ರೀ ಸೀತಾರಾಂರವರು ತಮ್ಮದೇ ಆದ ಸರಳ ಶೈಲಿಯಲ್ಲಿ ಬಹು ವಿಚಾರಪೂರಿತವಾದ ಭಾಷಣವನ್ನು ಮಾಡಿ, ಅಮೇರಿಕ ಮೊದಲಾದ ಹೊರ ದೇಶಗಳಲ್ಲಿ ಯಾವ ರೀತಿ ಜನಜೀವನ ಮಾರ್ಪಾಡಾಗಿದೆ ಎಂಬುದನ್ನು ವಿವರಿಸಿದರು. ಉಪನ್ಯಾಸಾನಂತರ ಹಲವು ವಿದ್ಯಾರ್ಥಿಗಳು ಪ್ರಶ್ನೆಗಳನ್ನು ಕೇಳಿದರು. ಶ್ರೀ ಸೀತಾರಾಂರವರು ಬಹು ತಾಳ್ಮೆಯಿಂದ ಸಮಯೋಚಿತವಾದ ಉತ್ತರಗಳನ್ನು ಕೊಟ್ಟರು. ಶ್ರೀ ಬ. ನ. ಸುಂದರರಾಯರು ಪರಿಷತ್ತಿನ ಪರವಾಗಿ ವಂದನೆಗಳನ್ನರ್ಪಿಸಿದರು. ರಾಷ್ಟ್ರಗೀತೆಯೊಡನೆ ಸಭೆ ಮುಗಿಯಿತು.

## ಶ್ರೀಮತಿ ಎಂ. ಆರ್. ಲಕ್ಷಮ್ಮನವರ ಭೇಟಿ

ಭಾಷಣಕಲಾ ಶಿಕ್ಷಣ ತರಗತಿಗೆ ವಿಧಾನ ಪರಿಷತ್ತಿನ ಉಪಾಧ್ಯಕ್ಷಿಣಿಯವರಾದ ಶ್ರೀಮತಿ ಎಂ. ಆರ್. ಲಕ್ಷಮ್ಮನವರು ೨೧–೭–೬೩ ನೇ ಭಾನುವಾರ ಸಂಜೆ ಭೇಟಿ ಇತ್ತು ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನುದ್ದೇಶಿಸಿ ಭಾಷಣ ಮಾಡಿದರು. ಇವರೊಡನೆ ಬೆಳಗಾಂ ಮಹಿಳಾ ವಕೀಲರಾದ ಶ್ರೀಮತಿ ಆಶಾದೇವಿ ಪೋದ್ದಾರ್‌ರವರೂ ಮೈಸೂರಿನ ಶಾರದಾ ವಿಲಾಸ ಕಾಲೇಜಿನ ಗಣಿತ ಶಾಸ್ತ್ರ ಅಧ್ಯಾಪಕಿಯವರಾದ ಶ್ರೀಮತಿ ಎಂ. ಎನ್. ರಾಜಲಕ್ಷ್ಮಿಯವರೂ ದಯಮಾಡಿಸಿದ್ದರು. ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ವ್ಯವಸ್ಥಾಪಕರಾದ ಶ್ರೀ ಬ. ನ. ಸುಂದರರಾಯರು ಸ್ವಾಗತಿಸಿದರು. ಶ್ರೀಮತಿ ಎಂ. ಆರ್. ಲಕ್ಷಮ್ಮನವರು "ಸಮಾಜ ಸೇವೆ" ಎಂಬ ವಿಷಯವಾಗಿಯೂ, ಶ್ರೀಮತಿ ಎಂ. ಎನ್. ರಾಜಲಕ್ಷ್ಮಿಯವರು "ಜ್ಯೋತಿಶ್ಶಾಸ್ತ್ರ" ಎಂಬ ವಿಷಯವಾಗಿಯೂ ಶ್ರೀಮತಿ ಆಶಾ ಪೋದ್ದಾರ್‌ರವರು "ಸ್ತ್ರೀಯರು ಮತ್ತು ಉದ್ಯೋಗ" ಎಂಬ ವಿಷಯವಾಗಿಯೂ ಉಪನ್ಯಾಸಗಳನ್ನು ಮಾಡಿದರು. ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಸಭಾಧ್ಯಕ್ಷತೆ ವಹಿಸಿದ್ದರು.

---

## ಓ ಅಮರ ಜೀವ!

ಶ್ರೀ ಗೋಪಾಲಕೃಷ್ಣ ಹೆಗಡೆ

ಓ ಅಮರ ಜೀವ, ನಿನ್ನ ಪಾವನ ಸ್ಮರಣೆ
ಮಿಡಿದಿರಲಿ ಭಾರತದ ಜನಮನದ ವೀಣೆ,
ನೀ ನಡೆದ ದಾರಿಯಲಿ ಮುಂದಡಿಯನೊಗೆಯದಿಹ
ಹೆಳವರಾವು; ಮುಂದೆಮಗೆ ಗತಿಯೇನು ನೀನೆ ಹೇಳು.
ನಿನ್ನಮರ ತತ್ವಗಳ ಮರೆತು ಮಲೆತಿರುವ
ದುಷ್ಟಾತ್ಮಗಳ ಮೇಳ ನಡೆಸಿಹುದು ಬಯಲಾಟ;
ಸತ್ಯ ಸೋಗಾಗಿಹುದು – ಸಟೆಯೆ ದಿಟವಾಯ್ತು–
ನೀನಿರದ ಭಾರತದಿ ಇರುಳೆ ಹಗಲಾಯ್ತು!

ನೀನೊಂದು ಕರೆಯಿಡಲು ಓಗೊಡುವ ಆ ಕೋಟಿ
ಭಾರತೀಯರಿಗಿಂದು ಯಾವದೋ ಮಬ್ಬು;
ತಮತಮಗೆ ವೈರವಾಚರಿಸಿ ಹೋರಾಡಿ ಕೆಟ್ಟಪರ
ಸಮನಿಸುತ್ತೆಚ್ಚರಿಸಿ ಬೆಳಕುದೋರು!
ದೀನ ಜನರುರಕಿಂದು ತಂಪೆರೆದು ಸಂತವಿಸೆ
ಭಾರತವಲಿನ್ನೊಮ್ಮೆ ಅವತಾರ ತಾಳು!

[ಆಕಾಶವಾಣಿಯ ಕೃಪೆಯಿಂದ]

# ಕನ್ನಡದ ಸುದ್ದಿಗಳು

## ಬೆಂಗಳೂರು

ವಿಶಾಲ ಮೈಸೂರು ರಾಜ್ಯಪಾಲರೂ ಕನ್ನಡ ಸಾಹಿತ್ಯ ಪರಿಷತ್ತಿನ ಮಹಾಪೋಷಕರೂ ಆದ ಶ್ರೀಮನ್ ಮಹಾರಾಜ ಶ್ರೀ ಜಯಚಾಮರಾಜ ಒಡೆಯರು ದಿನಾಂಕ ೭-೮-೬೩ ರಂದು ವಿದೇಶ ಯಾತ್ರೆಯನ್ನು ಕೈಗೊಂಡ ಸಂದರ್ಭದಲ್ಲಿ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಅವರಿಗೆ ಶುಭ ಪ್ರಯಾಣವನ್ನು ಕೋರಿ ಪರಿಷತ್ತಿನ ಪರವಾಗಿ ಫಲಪುಷ್ಪವನ್ನು ಸಮರ್ಪಿಸಿದರು.

ಬೆಂಗಳೂರು ಕಬ್ಬನ್‌ಪೇಟೆಯಲ್ಲಿ ಆ. ೨ ರಂದು ನಡೆದ ಬಹಿರಂಗ ಸಭೆಯಲ್ಲಿ ಅಧ್ಯಕ್ಷತೆವಹಿಸಿದ್ದ ಮೈಸೂರಿನ ಮಾಜಿ ಮುಖ್ಯಮಂತ್ರಿ ಶ್ರೀ ಕೆ. ಹನುಮಂತಯ್ಯನವರು ಮಾತ ನಾಡುತ್ತ ಕನ್ನಡ ನಾಡಿನ ಗತವೈಭವ ಮತ್ತು ಕೀರ್ತಿಯನ್ನು ಪುನರುಜ್ಜೀವನಗೊಳಿಸುವುದೇ ಕನ್ನಡ ಚಳುವಳಿಯ ಉದ್ದೇಶವೆಂದು ಹೇಳಿದರು. ಈ ಸಭೆ ಕನ್ನಡ ಕ್ರಾಂತಿಕಾರಿ ಸಂಯುಕ್ತರಂಗ ಮತ್ತು ಕನ್ನಡ ಯುವಜನ ಸಭೆಯ ಆಶ್ರಯದಲ್ಲಿ ನಡೆಯಿತು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಯವರು ಸಭೆಯನ್ನು ಉದ್ಘಾಟಿಸಿದರು. ನಗರ ಸಭಾ ಸದಸ್ಯ ಶ್ರೀ ಎಸ್. ವೆಂಕಟ ರಾಮ್, 'ನವಪ್ರಪಂಚ'ದ ಸಂಪಾದಕ ಶ್ರೀ ವಾಟಾಳ್ ನಾಗರಾಜ್, ಶ್ರೀ ಕೋಣಂದೂರು ಲಿಂಗಪ್ಪ ಮುಂತಾದವರು ಮಾತನಾಡಿದರು.

ದಿನಾಂಕ ೨೨-೭-೬೩ ನೆಯ ಸೋಮವಾರ ಸಂಜೆ ಬೆಂಗಳೂರು ನಗರದ ನರಸಿಂಹರಾಜ ಕಾಲೋನಿಯಲ್ಲಿ ಲಲಿತಕಲಾ ರಸಿಕರಂಜನಿ ಸಭಾ ಎಂಬ ಸಂಸ್ಥೆಯ ಆರಂಭೋತ್ಸವವು ನಾಡಿನ ಹೆಸರಾಂತ ಕತೆಗಾರರಾದ ಶ್ರೀ ಕೆ. ಗೋಪಾಲಕೃಷ್ಣರಾಯರ ಅಧ್ಯಕ್ಷತೆಯಲ್ಲಿ ನೆರವೇರಿತು.

ಶ್ರೀ ಟಿ. ಜಿ. ಸುಬ್ರಹ್ಮಣ್ಯಂರವರು ಎಲ್ಲರನ್ನೂ ಸ್ವಾಗತಿಸುತ್ತ ಈ ಸಭೆಯ ಸ್ಥಾಪನೆಯ ಉದ್ದೇಶ, ಧ್ಯೇಯ ಮತ್ತು ಆಶಯಗಳನ್ನು ಕುರಿತು ಮಾತನಾಡಿ, ಬೆಂಗಳೂರಿನಂತಹ ಮಹಾನಗರದಲ್ಲಿ ಪ್ರತಿ ವಿಸ್ತರಣದಲ್ಲಿಯೂ ಇಂತಹ ಚಟುವಟಿಕೆಗಳ ಮಹತ್ವವನ್ನು ಕುರಿತು ಪ್ರಸ್ತಾಪಿಸಿದರು. ಕುಮಾರವ್ಯಾಸ ಭಾರತ ಪಠನ, ಭಾಷಣ ಇತ್ಯಾದಿ ಕಾರ್ಯಕ್ರಮಗಳು ನಡೆದವು.

ದಿನಾಂಕ ೨-೮-೬೩ ರಂದು ಬೆಂಗಳೂರಿನಲ್ಲಿ "ಕನ್ನಡದಲ್ಲಿ ಬೋರ್ಡು ಬರೆಯಿರಿ, ರಾಜ್ಯ ಭಾಷೆ ಕನ್ನಡವಾಗಲಿ" ಎಂಬರ್ಥದ ದೊಡ್ಡ ಮೆರವಣಿಗೆ ನಗರದ ಬೀದಿಗಳಲ್ಲಿ, ಶ್ರೀ ಎಂ. ರಾಮಮೂರ್ತಿಗಳ ನೇತೃತ್ವದಲ್ಲಿ ನಡೆಯಿತು.

ನಾಟಕ ಕಲಾಕ್ಷೇತ್ರದಲ್ಲಿ ಶ್ರಮಿಸುತ್ತಿರುವ ಕಲೋಪಾಸಕ ನಾಟಕ ಸಂಸ್ಥೆಗಳಿಗೆ ಪ್ರೋತ್ಸಾಹ ನೀಡುವ ಸಲುವಾಗಿ ರಾಜ್ಯ ಸಂಗೀತ ನಾಟಕ ಅಕಾಡೆಮಿಯು ಪ್ರತಿವರ್ಷವೂ ಒಂದೊಂದು ನಾಟಕ ಸಂಸ್ಥೆಗೆ ೫ ಸಾವಿರ ರೂಪಾಯಿ ಸಹಾಯ ನೀಡಲು ತೀರ್ಮಾನಿಸಿದೆ.

ಕೇಂದ್ರ ಸಂಗೀತ ನಾಟಕ ಅಕಾಡೆಮಿಯವರು ಕನ್ನಡಿಗರಾದ ಶ್ರೀ ಆದ್ಯರಂಗಾಚಾರ್ಯರಿಗೆ (ಶ್ರೀರಂಗ) ನಾಟಕ ರಚನೆಗಾಗಿ ಮತ್ತು ಶ್ರೀ ಬಿ. ದೇವೇಂದ್ರಪ್ಪ ಅವರಿಗೆ, ಕರ್ನಾಟಕ ಸಂಗೀತ ಹಾಡುಗಾರಿಕೆ ಸಲುವಾಗಿ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿದ್ದಾರೆ.

## ಸೊಲ್ಲಾಪುರ

ಕಾಡಾದಿ ಪ್ರಶಾಲೆಯ 'ಕನ್ನಡ ಸಾಹಿತ್ಯ ಸಂಘ'ದ ಅಧ್ಯಕ್ಷರೂ, ಮತ್ತು ಪ್ರಶಾಲೆಯ ಮುಖ್ಯೋಧ್ಯಾಪಕರೂ ಆದ ಶ್ರೀಮಾನ್ ಪಿ. ಯು. ಕೋರೆಯವರ ಆದೇಶದ ಮೇರೆಗೆ ಪ್ರಶಾಲೆಯ ಕನ್ನಡ ವಿಭಾಗದ ವಿದ್ಯಾರ್ಥಿ ಹಾಗೂ ವಿದ್ಯಾರ್ಥಿನಿಯರ ಸರ್ವಸಾಧಾರಣ ಸಭೆಯನ್ನು ಜುಲೈ ೨೯ ರಂದು ಕನ್ನಡ ವಿಭಾಗದ ಪರ್ಯವೇಕ್ಷಕರಾದ ಶ್ರೀ ವಿ.ವಿ. ಕುದರೀಕರರ ಅಧ್ಯಕ್ಷತೆಯಲ್ಲಿ ಕರೆಯಲಾಗಿತ್ತು.

ಶ್ರೀ ಎಸ್. ಆರ್. ಪಿಡಶೆಟ್ಟಿಯವರು ಕಾರ್ಯಾಧ್ಯಕ್ಷರಾಗಿಯೂ, ಶ್ರೀ ಎಸ್. ಎಸ್. ವಸ್ತ್ರದರವರು ಉಪಕಾರ್ಯಾಧ್ಯಕ್ಷರಾಗಿಯೂ, ಶ್ರೀ ಕಲ್ಯಾಣಶೆಟ್ಟಿಯವರು ಕೋಶಾಧ್ಯಕ್ಷರಾಗಿಯೂ ಆಯ್ಕೆಗೊಂಡರಲ್ಲದೆ ಸಹಾಯಕ ಶಿಕ್ಷಕರಾದ ಶ್ರೀ ಒಂಟಿಯವರನ್ನು ಗೌರವಕಾರ್ಯದರ್ಶಿಗಳಾಗಿಯೂ ಆರಿಸಲಾಯಿತು.

## ಹಾಸನ

ದಿನಾಂಕ ೨-೮-೬೩ ರಂದು ಹಾಸನದ ಮಿತ್ರವೃಂದದಲ್ಲಿ "ವಿಜಯದುಂದುಭಿ ವೀರ ಗೀತೆಗಳು" ಕಾರ್ಯಕ್ರಮವನ್ನು ಸಾಹಿತಿಗಳಾದ ಶ್ರೀ ಗೊರೂರ್ ರಾಮಸ್ವಾಮಿ ಅಯ್ಯಂಗಾರ್ ಅವರು ಪ್ರಾರಂಭಿಸಿದರು.

**ಮಂಗಳೂರು**

ಶ್ರೀಮತಿ ಪದ್ಮಾಮೋಹನ ಶೆಣೈ ಅವರು ಬರೆದ ಪ್ರಥಮ ಕಾದಂಬರಿ 'ರಸವಿರಸ' ಕ್ಕೆ ಮೈಸೂರು ಸರ್ಕಾರದವರು ಪುರಸ್ಕಾರವಿತ್ತಿದ್ದಾರೆ.

**ಹರಿದ್ವಾರ**

ಜುಲೈ ೧೯ ರಂದು ಇಲ್ಲಿ ಕರ್ಣಾಟಕ ಧರ್ಮಶಾಲೆಯ ಶಂಕುಸ್ಥಾಪನೆಯ ಮಹೋತ್ಸವವನ್ನು ಉತ್ತರ ಪ್ರದೇಶದ ಮುಖ್ಯಮಂತ್ರಿ ಶ್ರೀ ಸಿ. ಬಿ. ಗುಪ್ತರು ನೆರವೇರಿಸಿದರು. ಈ ಸಮಾರಂಭಕ್ಕೆ ಶ್ರೀ ಎಚ್. ಸಿ. ದಾಸಪ್ಪನವರು ಅಧ್ಯಕ್ಷ ರಾಗಿದ್ದರು. ಧರ್ಮಶಾಲಾ ಸಂಸ್ಥೆಯ ಅಧ್ಯಕ್ಷರಾದ ಲೋಕಸಭೆಯ ಉಪಾಧ್ಯಕ್ಷ ಶ್ರೀ ಎಸ್. ವಿ. ಕೃಷ್ಣಮೂರ್ತಿ ರಾಯರು ಸ್ವಾಗತ ನೀಡಿದರು.

**ಕಾಸರಗೋಡು**

ಇಲ್ಲಿನ ಸರ್ಕಾರಿ ಕಾಲೇಜಿನಲ್ಲಿ ಈ ವರ್ಷದಿಂದ ಬಿ. ಎ. ಪರೀಕ್ಷೆಯ ನಾಲ್ಕನೆ ಭಾಗದಲ್ಲಿ ಕನ್ನಡದ ಅಭ್ಯಾಸಕ್ಕಾಗಿ ಕೇರಳ ಸರ್ಕಾರ ಅಂಗೀಕಾರವಿತ್ತಿದೆ.

**ರಾಮನಗರ**

ಸೆಪ್ಟಂಬರ್ ತಿಂಗಳ ಮೊದಲನೇ ವಾರದಲ್ಲಿ ಕನ್ನಡಿಗರ ಸಮ್ಮೇಳನವನ್ನು ಇಲ್ಲಿ ನಡೆಸಬೇಕೆಂದು ಕ್ರಾಂತಿಕಾರಿ ಪರಿಷತ್ತಿನವರು ನಿರ್ಧರಿಸಿದ್ದಾರೆ. ಇದಕ್ಕಾಗಿ ಸ್ವಾಗತ ಸಮಿತಿಯ ಸ್ಥಾಪನೆ ಆಗಿದೆ. ಶ್ರೀ ಅ. ಸಂಜೀವಪ್ಪನವರು ಅಧ್ಯಕ್ಷರು. ರಾಜ್ಯದಲ್ಲಿ ಡಿ. ಎಂ. ಕೆ. ಚಳುವಳಿ ಹರಡ ದಂತೆ ಮಾಡಲೂ ಮತ್ತು ಕನ್ನಡ ಚಳುವಳಿಗೆ ನೀತಿ ಸೂತ್ರ ರೂಪಿಸಲೂ ಉದ್ದಿಶ್ಯವನ್ನಿಟ್ಟುಕೊಳ್ಳಲಾಗಿದೆ.

**ದೆಹಲಿ**

ನವ ಅಕ್ಷರಸ್ಥರಿಗಾಗಿ ಪುಸ್ತಕ ರಚನೆ ಯೋಜನೆಯ ಪ್ರಕಾರ ನಡೆದ ೯ನೇ ಸ್ಪರ್ಧೆಯಲ್ಲಿ ಮೂವರು ಕನ್ನಡ ಲೇಖಕರ ಪುಸ್ತಕಗಳಿಗೆ ತಲಾ ೫೦೦ ರೂಪಾಯಿಗಳ ಬಹುಮಾನ ಕೊಡಲಾಗಿದೆ.

ಕನ್ನಡ ಲೇಖಕರು ಮತ್ತು ಬಹುಮಾನ ಪಡೆದ ಅವರ ಪುಸ್ತಕಗಳು ಹೀಗಿದೆ: ಶ್ರೀ ಆರ್. ಆರ್. ಕುಪ್ಪಸದ, ಪ್ರಿನ್ಸಿಪಾಲ್, ಶ್ರೀ ಬಸವೇಶ್ವರ ಹೈಸ್ಕೂಲು, ರಾಜಾಜಿ ನಗರ, ಬೆಂಗಳೂರು ("ನಮ್ಮ ನಾಡಿನ ಭಿಕ್ಷುಕರು"); ಶ್ರೀ ಜಿ. ಜ್ಞಾನಾನಂದ, ಕಲಾವಿದ ಮತ್ತು ಪತ್ರಿಕೋ ದ್ಯಮಿ, ಚಿಕ್ಕಬಳ್ಳಾಪುರ ("ಆಕಾಶ ಯಾತ್ರೆ") ಮತ್ತು ಶ್ರೀ ಬಿ. ವರದರಾಜ ಬಾಳಿಗ, ಮಂಗಳೂರು ("ಫಲ ಪುಷ್ಪ").

---

# ಸಂಪಾದಕೀಯ

## ೧. ಸತ್ವಪರೀಕ್ಷಾ ಸಮಯ

ಕಳೆದ ತಿಂಗಳ ೨೮ ರಂದು ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ೪೭ ನೆಯ ವರ್ಷದ ಸಕಲ ಸದಸ್ಯರ ಸಭೆಯ ಕಾರ್ಯಕಲಾಪಗಳನ್ನು ಕುರಿತು ಪರಿಷತ್ತಿನ ಅಧ್ಯಕ್ಷರು ಕೊಟ್ಟ ಹೇಳಿಕೆಯು ಪ್ರಕಟವಾಗಿದೆ. ಸಭೆಯ ನಡೆವಳಿಕೆಗಳನ್ನು ಕುರಿತು ಪ್ರಸ್ತಾಪವು ಇಲ್ಲಿ ಅನಗತ್ಯ. ಆ ದಿನ ಕೆಲವು ಜನ ಮಾನ್ಯ ಸದಸ್ಯರು ನಡೆದುಕೊಂಡ ರೀತಿ ನೀತಿಗಳು ಪರಿಷತ್ತಿನ ಅಭಿಮಾನಿಗಳಿಗೆ ನೋವನ್ನುಂಟು ಮಾಡಿವೆ; ಪರಿಷತ್ತಿನ ಧವಳ ಕೀರ್ತಿಗೆ ಕಲಂಕಪ್ರಾಯವಾಗಿವೆ; ಪರಿಷತ್ತಿನ ಉಚ್ಚ ಸಂಪ್ರದಾಯಗಳಿಗೆ ವಿರೋಧವಾಗಿವೆ. ಈ ಮಾತು ನಮಗೆ ಅತೀವ ವೇದನೆಯನ್ನುಂಟುಮಾಡಿ ಕೆಲವು ನುಡಿಗಳನ್ನಾಡುವಂತೆ ಆಗ್ರಹಪಡಿಸಿದೆ.

ಪರಿಷತ್ತಿನ ಕಾರ್ಯಸಮಿತಿಯು ಅಂಗೀಕರಿಸಿದ ವರದಿ ಮತ್ತು ಲೆಕ್ಕಪತ್ರಗಳನ್ನು ಪರಿಷತ್ತಿನ ಮಾನ್ಯ ಸದಸ್ಯರ ಒಪ್ಪಿಗೆಗಾಗಿ ಮಂಡಿಸಲಾಯಿತು. ವರದಿಯ ಮೇಲೆ ಪ್ರಾರಂಭವಾದ ಚರ್ಚೆ ವೈಯಕ್ತಿಕ ದೋಷಾರೋಪಣೆ ಚುನಾವಣಾ ಭಾಷಣಗಳ ಕಡೆಗೆ ತಿರುಗಿತು. ಶಾಂತ ವಾತಾವರಣದಲ್ಲಿ ಪ್ರಾರಂಭವಾದ ಸಭೆಯು ಕೆಲವು ಜನ ಮಾನ್ಯ ಸದಸ್ಯರ ಉದ್ವೇಗ, ರೋಷ, ಆಟೋಪಗಳ ಫಲವಾಗಿ ಗೊಂದಲಮಯವಾಯಿತು. ಅಧ್ಯಕ್ಷರು ಸಭೆಯ ಕಾರ್ಯಕಲಾಪಗಳನ್ನು ಸುಗಮವಾಗಿ ನಡೆಸಲಾರದಂತಹ ವಾತಾವರಣದ ಸೃಷ್ಟಿಯಾಯಿತು. ಇದು ದುರದೃಷ್ಟದ ಸಂಗತಿ; ಕನ್ನಡಿಗರ ದೌರ್ಭಾಗ್ಯ.

ಲೋಪದೋಷಗಳಿದ್ದರೆ ಎತ್ತಿ ತೋರಿಸಿ ಅವುಗಳನ್ನು ಸರಿಪಡಿಸಿಕೊಳ್ಳುವಂತೆ ಸಲಹೆ ನೀಡಲು ಸರ್ವ ಸದಸ್ಯರಿಗೂ ಅಧಿಕಾರವಿದೆ. ಪರಿಷತ್ತಿನ ನಿಬಂಧನೆಗಳಿಗೆ ತಿದ್ದುಪಡಿ ಸೂಚಿಸುವ ಅಧಿಕಾರವೂ ಅವರಿಗಿದೆ. ಆದರೆ ಇವೆಲ್ಲಕ್ಕೂ ಒಂದು ಕ್ರಮವಿದೆ, ವಿಧಾನವಿದೆ. ಇದಾವುದನ್ನೂ ಗಮನದಲ್ಲಿಟ್ಟುಕೊಳ್ಳದೆ ಸಭೆಯ ಕಾರ್ಯಕಲಾಪಗಳಿಗೆ ಅಡ್ಡಿ ಆತಂಕಗಳನ್ನೊಡ್ಡಿ ಅದನ್ನು ಸಮಾಪ್ತಗೊಳಿಸಲು ಶ್ರಮಿಸಿದ ಮಹನೀಯರು, ಅವರು ಯಾರೇ ಆಗಿರಲಿ, ಸಭ್ಯತೆ, ಸತ್‌ಸಂಪ್ರದಾಯಗಳನ್ನು ಮೀರಿ ನಡೆದು ಕನ್ನಡಿಗರಿಗೆ ಅಪಕಾರ ಮಾಡಿದ್ದಾರೆಂದು ನಮ್ಮ ಅಭಿಪ್ರಾಯ. ಪರಿಷತ್ತಿನಂತಹ ಪವಿತ್ರವೇದಿಕೆಯನ್ನು ವೈಯಕ್ತಿಕ ದ್ವೇಷ ಸಾಧನೆಗಾಗಿ, ಕೆಲವು ಜನ ತರುಣ ಸದಸ್ಯರ ಉತ್ಸಾಹ ಶಕ್ತಿಯನ್ನು ಸ್ವಯಂಲಾಭಕ್ಕಾಗಿ ಬಳಸಿಕೊಳ್ಳಲು ಯತ್ನಿಸಿದ ಮಹನೀಯರು ಪರಿಷತ್ತಿನ ಹಿತೈಷಿಗಳೆ? ಇದು ಗಮನಾರ್ಹ ಪ್ರಶ್ನೆಯಾಗಿದೆ.

ಕಳೆದ ಮೂರು ವರ್ಷಗಳಲ್ಲಿ ಪರಿಷತ್ತು ಸಾಧಿಸಿರುವ ಪ್ರಗತಿಯ ಚಿತ್ರ ಕನ್ನಡಿಗರೆದುರಿಗಿದೆ. ಪರಿಷತ್ತಿನ ಮಹಾಪೋಷಕರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಅವರೂ ಮತ್ತು ಪರಿಷತ್ತಿನ ಹಿರಿಯ ಸದಸ್ಯರೂ, ನಾಡಿನ ಗಣ್ಯ ಮುಖಂಡರೂ ಈ ಸಾಧನೆಯನ್ನು ಮೆಚ್ಚಿ ಪ್ರಶಂಸಿಸಿದ್ದಾರೆ. ಕೆಲವು ಅರಕೆ-ಕೊರತೆಗಳಿರಬಹುದು, ಕೆಲವರು ಕೆಲವು ಸಂದರ್ಭಗಳಲ್ಲಿ ತಪ್ಪಿರಬಹುದು, ಕೆಲವು ಕಾರ್ಯಗಳು ನಿರೀಕ್ಷಿತಫಲ ನೀಡದಿರಬಹುದು. ಇವುಗಳನ್ನು ನಿವಾರಿಸಲು ಸದಸ್ಯರ ಸಲಹೆ ಸಹಕಾರಗಳು ಅತ್ಯಗತ್ಯ. ವಾರ್ಷಿಕ ಸಭೆಯ ಮುಖ್ಯ ಉದ್ದೇಶಗಳಲ್ಲಿ ಅದೂ ಒಂದು. ರಚನಾತ್ಮಕ ಟೀಕೆಗೆ ಸರ್ವದಾ ಸ್ವಾಗತವುಂಟು. ಆ ಟೀಕೆ ತನ್ನ ಎಲ್ಲೆಯನ್ನು ಮೀರಿದಾಗ ದೂಷಣೆಯಾಗುತ್ತದೆ; ಅನರ್ಥಕ್ಕೆ ಕಾರಣವಾಗುತ್ತದೆ. ಟೀಕಾಕಾರರು ದೋಷವನ್ನು ಎತ್ತಿ ತೋರಿಸುವಲ್ಲಿ ತೋರುವ ತವಕವನ್ನೇ ಲೇಸನ್ನು ಎತ್ತಿ ತೋರಿಸುವುದರಲ್ಲಿಯೂ ತೋರಿಸಬೇಕು. ಅಂಥ ವಿಮರ್ಶೆಗೆ ಬೆಲೆಯಿದೆ. ಸಭೆಯ ಕಾರ್ಯಕಲಾಪಗಳನ್ನು ನಡೆಯಗೊಡದಂತೆ ಮಾಡುವುದು ವಿಮರ್ಶೆಯೂ ಅಲ್ಲ; ವೈಧಾನಿಕ ಟೀಕೆಯೂ ಅಲ್ಲ.

ಪರಿಷತ್ತಿನ ಅಭಿವೃದ್ಧಿ ಎಲ್ಲರಿಗೂ ಸೇರಿದ ಕಾರ್ಯ. ಅದನ್ನು ಸಾಧಿಸುವ ಸಾಮರ್ಥ್ಯವುಳ್ಳ ಸಚ್ಚರಿತ್ರರಿಗೆ ಪರಿಷತ್ತಿನ ಅಧ್ಯಕ್ಷಪೀಠ ಮೀಸಲಾಗಿದೆ. ಆ ಪೀಠಾರೋಹಣಕ್ಕಾಗಿ ಪ್ರಯತ್ನಿಸುವವರು ನೇರಮಾರ್ಗವನ್ನು ಅವಲಂಬಿಸಿದರೆ ಅವರಿಗೂ ಗೌರವ, ಪರಿಷತ್ತಿಗೂ ಕೀರ್ತಿ. ಚುನಾವಣೆಯ ಉದ್ದೇಶಕ್ಕಾಗಿ ಸೇರಲಿರುವ ಸಭೆಯು ಹಿಂದಿನ ಸಭೆಯ ಪುನರಾವೃತ್ತಿಯಾಗದಂತೆ ನೋಡಿಕೊಳ್ಳುವುದು ಪ್ರತಿಯೊಬ್ಬರ ಪವಿತ್ರ ಕರ್ತವ್ಯವೆಂದು ನಾವು ಭಾವಿಸುತ್ತೇವೆ. ಪರಿಷತ್ತಿನ ಹಿರಿಯ ಸದಸ್ಯರು ಈ ವಿಷಯದಲ್ಲಿ ನಿರ್ಲಿಪ್ತ ಧೋರಣೆಯನ್ನು

ತಾಳಿ ದೂರ ಉಳಿಯದೆ, ಮುಂದೆ ಬಂದು ಮಾರ್ಗ ದರ್ಶನ ಮಾಡಬೇಕೆಂದೂ, ಪರಿಷತ್ತಿಗೆ ಸಮರ್ಥರೂ, ಸಚ್ಛೀಲರೂ, ಸೇವಾಸಕ್ತರೂ, ಸಾಹಿತ್ಯವರ್ಧಕರೂ ಆದ ಅಧ್ಯಕ್ಷರನ್ನು ಮತ್ತು ಕ್ರಿಯಾಶೀಲ ಕಾರ್ಯಸಮಿತಿಯನ್ನು ಒದಗಿಸಿಕೊಡಲು ಶ್ರಮಿಸಬೇಕೆಂದು ನಾವು ಈ ಮೂಲಕ ಬಿನ್ನವಿಸಿಕೊಳ್ಳುತ್ತೇವೆ.

ಇದು ಸತ್ವಪರೀಕ್ಷಾ ಸಮಯ; ಸಂಸ್ಥೆಯ ಅಳಿವು ಉಳಿವಿನ ಪ್ರಶ್ನೆ. ಐಕಮತ್ಯ ಇಂದು ಅಗತ್ಯ. ಭಿನ್ನಾಭಿಪ್ರಾಯಗಳು, ವೈಯಕ್ತಿಕ ಆಶೆ ಆಕಾಂಕ್ಷೆಗಳನ್ನೂ, ಕುಲ ಪ್ರತಿಷ್ಠೆಯನ್ನೂ ಬದಿಗೊತ್ತಿ, ಎಲ್ಲರೂ ಒಂದಾಗಿ ಸೇರಿ ಪರಿಷತ್ತಿನ ಘನತೆ ಗೌರವಗಳನ್ನು, ಕನ್ನಡ ಭಾಷೆ, ಸಾಹಿತ್ಯ ಕಲೆಗಳ ಮೇಲ್ಮೆಯನ್ನು, ಉಚ್ಚ ಸಂಸ್ಕೃತಿ ಪರಂಪರೆಯನ್ನು ಕಾಪಾಡಲು ಶ್ರಮಿಸಬೇಕೆಂದು ನಾವು ಕಳಕಳಿಯಿಂದ ಕೇಳಿಕೊಳ್ಳುತ್ತೇವೆ. ನಮ್ಮ ಈ ಕೂಗು ಅರಣ್ಯರೋದನವಾಗದೆಂದು ನಂಬುತ್ತೇವೆ.

## ೨. ನೂತನ ರಾಜ್ಯಪಾಲರು ಮತ್ತು ನೂತನ ಶ್ರೇಷ್ಠ ನ್ಯಾಯಾಧೀಶರಿಗೆ ಅಭಿನಂದನೆಗಳು

ನ್ಯಾಯಮೂರ್ತಿಗಳೂ ಮತ್ತು ಪರಿಷತ್ತಿನ ಸದಸ್ಯರೂ ಆದ ಮಾನ್ಯ ಶ್ರೀ ನಿಟ್ಟೂರು ಶ್ರೀನಿವಾಸರಾಯರು ರಾಜ್ಯದ ತಾತ್ಕಾಲಿಕ ರಾಜ್ಯಪಾಲರಾಗಿ ಅಧಿಕಾರ ಸ್ವೀಕರಿಸಿದ್ದಾರೆ. ನ್ಯಾಯಮೂರ್ತಿಗಳು ಮತ್ತು ಪರಿಷತ್ತಿನ ಸದಸ್ಯರೂ ಆದ ಮಾನ್ಯ ಶ್ರೀ ಹೆಚ್. ಹೊಂಬೇಗೌಡರು ಹಂಗಾಮಿ ಶ್ರೇಷ್ಠ ನ್ಯಾಯಾಧೀಶರಾಗಿ ನೇಮಕಗೊಂಡಿದ್ದಾರೆ. ಇದು ಕನ್ನಡಿಗರಿಗೆ ಹೆಮ್ಮೆ ಹರ್ಷಗಳ ಸಂಗತಿ. ಈ ಉಭಯ ಕನ್ನಡ ಸುಪುತ್ರರಿಗೆ 'ಕನ್ನಡ ನುಡಿ'ಯು ಹೃತ್ಪೂರ್ವಕ ಅಭಿನಂದನೆಗಳನ್ನು ಅರ್ಪಿಸುತ್ತದೆ.

ಮಾನ್ಯ ಶ್ರೀ ನಿಟ್ಟೂರು ಶ್ರೀನಿವಾಸರಾಯರ ವಿದ್ವತ್ತು, ಬಹುಮುಖ ಪ್ರತಿಭೆ, ಸಾತ್ವಿಕ ಜೀವನ, ನಾಡು ನುಡಿಗಳ ಪ್ರೇಮ, ಕನ್ನಡಿಗರ ಮನೆಮಾತಾಗಿವೆ. ಅವರ ಸಾಧನೆಯು ಮಹೋನ್ನತವೂ, ಆದರ್ಶಪ್ರಾಯವೂ ಆಗಿದೆ. ಅವರು ನಾಡುನುಡಿಗಳಿಗೆ ಸಲ್ಲಿಸಿದ ಬಹುವಿಧವಾದ ಸೇವೆ ಚಿರಸ್ಮರಣೀಯವಾಗಿದೆ. ನ್ಯಾಯಪ್ರಪಂಚಕ್ಕೆ ಅವರು ನೀಡಿದ ಕೊಡುಗೆ ಅಮೂಲ್ಯವಾಗಿದೆ. ನ್ಯಾಯಸ್ಥಾನದ ಉಚ್ಚ ಪರಂಪರೆಯನ್ನು ಕಾಪಾಡಿದ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ. ಇಂಥವರು ರಾಜ್ಯಪಾಲರಾದುದು ಕನ್ನಡಿಗರ ಸುಕೃತವೆಂದೇ ಹೇಳಬಹುದು. ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜಒಡೆಯರು ಅಲಂಕರಿಸಿದ ಪೀಠದ ಘನತೆ ಗೌರವಗಳನ್ನೂ, ಪವಿತ್ರತೆಯನ್ನೂ, ಅವರು ಮರಳಿ ಬರುವವರೆಗೂ ಮಾನ್ಯ ಶ್ರೀ ನಿಟ್ಟೂರು ಶ್ರೀನಿವಾಸರಾಯರು ರಕ್ಷಿಸಿಕೊಂಡು ಹೋಗುವರೆಂದು ಸಮಸ್ತ ಕನ್ನಡಿಗರೂ ದೃಢವಾಗಿ ನಂಬಿದ್ದಾರೆ.

ಮಾನ್ಯ ಶ್ರೀ ಹೊಂಬೇಗೌಡರು ಮೈಸೂರಿನ ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿ ಅಧಿಕಾರ ವಹಿಸಿಕೊಂಡಿರುವುದು ಕನ್ನಡಿಗರ ಭಾಗ್ಯ ವಿಶೇಷ. ಮಾನ್ಯ ಶ್ರೀ ಹೊಂಬೇಗೌಡರು ತಮ್ಮ ಆಳವಾದ ಪಾಂಡಿತ್ಯ, ಅನುಪಮವಾದ ನ್ಯಾಯವಿತರಣಾ ಪದ್ಧತಿ, ಅಪಾರವಾದ ಲೋಕಾನುಭವ, ಅಪ್ರತಿಮ ನಾಡುನುಡಿಗಳ ಅಭಿಮಾನ, ಅಸೀಮ ಸೇವಾಕಾಂಕ್ಷೆ, ಸರಸ ಸಜ್ಜನಿಕೆ ಹಾಗೂ ನ್ಯಾಯನಿಷ್ಠುರತೆಗಳಿಗೆ ಹೆಸರಾಗಿದ್ದಾರೆ. ಹೆಸರಾಂತ ಮನೆತನದಲ್ಲಿ ಜನಿಸಿ ಅನೇಕ ಹಿರಿಯ ಸ್ಥಾನಗಳನ್ನು ಅಲಂಕರಿಸಿ ಇಂದು ರಾಜ್ಯದ ನ್ಯಾಯಾಂಗದ ಅತ್ಯುನ್ನತ ಪದವಿಯನ್ನು ಪಡೆದ ಅವರ ಜೀವನ ಇತರರಿಗೆ ಸ್ಫೂರ್ತಿದಾಯಕವೂ, ಮಾರ್ಗದರ್ಶಕವೂ ಆಗಿದೆ ಎಂದು ನಾವು ಭಾವಿಸುತ್ತೇವೆ. ಅವರ ಹಿರಿಯತನದಲ್ಲಿ ರಾಜ್ಯದ ನ್ಯಾಯಾಂಗವು ತನ್ನ ಉಚ್ಚ ಸಂಪ್ರದಾಯಗಳನ್ನು ಕಾಪಾಡಿಕೊಂಡು ಮುನ್ನಡೆಯುವುದೆಂದು ನಾವು ನಂಬುತ್ತೇವೆ. ಅವರ ಅಧಿಕಾರಾವಧಿಯಲ್ಲಿ ವಕೀಲ ವರ್ಗವೂ ತನ್ನ ಸ್ಥಾನಮಾನಗಳನ್ನು ಬೆಳಸಿಕೊಂಡು, ಬೆಳಗುವುದೆಂದು ನಾವು ಆಶಿಸುತ್ತೇವೆ.

## ೩. ಹಾರ್ದ ಅಭಿನಂದನೆಗಳು

ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿಗಳನ್ನು ಪಡೆದ ಶ್ರೀ ಬಿ. ದೇವೇಂದ್ರಪ್ಪನವರಿಗೂ, ಶ್ರೀ ಆದ್ಯರಂಗಾಚಾರ್ಯರಿಗೂ ಮತ್ತು ರಾಜ್ಯದ ಸಂಗೀತ ನಾಟಕ ಅಕಾಡೆಮಿಯಿಂದ ಈ ವರ್ಷ ಪುರಸ್ಕೃತರಾದ ಕಲಾವಿದರೆಲ್ಲರಿಗೂ 'ನುಡಿ'ಯು ಹಾರ್ದ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಶ್ರೀ ಬಿ. ದೇವೇಂದ್ರಪ್ಪನವರು ಸುಪ್ರಸಿದ್ಧ ಸಂಗೀತ ವಿದ್ವಾಂಸರು. ಗುರುಮನೆ ಹಾಗೂ ಅರಮನೆಗಳ ವಿಶ್ವಾಸ ಮನ್ನಣೆಗಳಿಗೆ ಪಾತ್ರರಾದವರು. ಪ್ರಮುಖ ಕರ್ನಾಟಕ ಸಂಗೀತಗಾರರ ಪಙ್ತಿಯಲ್ಲಿ ಶ್ರೀ ದೇವೇಂದ್ರಪ್ಪನವರ

ಹೆಸರು ಶೋಭಿಸುತ್ತದೆ. ಎಲ್ಲ ವಿಧಗಳಿಂದಲೂ ಮನ್ನಣೆಗೆ ಪಾತ್ರರಾಗಿರುವ ಶ್ರೀ ದೇವೇಂದ್ರಪ್ಪನವರಿಗೆ ಅಕಾಡೆಮಿಯ ಗೌರವವು ಈ ಸಲ ದೊರೆತಿರುವುದು ಸಹಜವೇ ಆಗಿದೆ. ಕರ್ಣಾಟಕದಲ್ಲಿ ಹಿಂದೂಸ್ತಾನಿ ಸಂಗೀತದಲ್ಲಿ ನಿಷ್ಣಾತರಾದವರು ಹಲವು ಜನರಿದ್ದಾರೆ. ಪಂ|| ಪುಟ್ಟರಾಜ ಗವಾಯಿಗಳು, ಪ್ರೊ|| ಮಲ್ಲಿಕಾರ್ಜುನ ಮನಸೂರ, ಪ್ರೊ|| ಬಸವರಾಜ ರಾಜಗುರು, ಶ್ರೀಮತಿ ಗಂಗೂಬಾಯಿ ಹಾನಗಲ್ ಮೊದಲಾದ ಸಂಗೀತವಿಶಾರದರು ಅಕಾಡೆಮಿಯ ಗೌರವಕ್ಕೆ ಸರ್ವದೃಷ್ಟಿಯಿಂದಲೂ ಅರ್ಹರಾಗಿದ್ದಾರೆ. ಅವರನ್ನು ಗೌರವಿಸಲು ಕೇಂದ್ರ ಸಂಗೀತ ನಾಟಕ ಅಕಾಡೆಮಿಯು ಮುಂದೆ ಬರುವುದೆಂದು ನಾವು ನಂಬುತ್ತೇವೆ.

ಶ್ರೀರಂಗರು ಪ್ರಖ್ಯಾತ ನಾಟಕಕಾರರು, ತ್ರಿಭಾಷಾ ವಿಶಾರದರು, ರಾಯಚೂರ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು, ನಿವೃತ್ತ ಪ್ರಾಧ್ಯಾಪಕರು, ನಿರ್ದೇಶಕರು, ನಟರೂ ಹೌದು. ಶ್ರೀರಂಗರ ಪ್ರತಿಭೆ ಬಹುಮುಖವಾದುದು. ಸಮಾಜವೈದ್ಯ (Social Physician) ರಾಗಿ ಶ್ರೀರಂಗರು ಸಲ್ಲಿಸಿದ ಸೇವೆ ಅಮೂಲ್ಯವಾದುದು. ಅವರ ಒಂದೊಂದು ನಾಟಕವೂ ಸಮಾಜಜೀವನದ ಮೇಲೆ ಹಿಡಿದ 'ಕ್ಷ' ಕಿರಣ. ಕ್ರಾಂತಿಕಾರಕ ಕೃತಿ ರಚನೆಯಲ್ಲಿ ಶ್ರೀರಂಗರದು ಸಿದ್ಧಹಸ್ತ. ಶ್ರೀರಂಗರು ನಡೆದುದೇ ಬಟ್ಟೆ. ಆ ಹಾದಿಯಲ್ಲಿ ಕಲ್ಲು ಮುಳ್ಳುಗಳಿರಲಿ, ಗಿಡಗಂಟೆಗಳಿರಲಿ, ತೆಗ್ಗುದಿನ್ನೆಗಳಿರಲಿ, ಅವೆಲ್ಲವನ್ನೂ ತುಳಿದು ಮುನ್ನುಗ್ಗುವ ಕೆಚ್ಚು, ಪ್ರತಿಭೆ, ಹಟಮಾರಿತನ, ಶ್ರೀರಂಗರ ರಕ್ತಗುಣ. ಇತ್ತೀಚೆಗೆ ಕಾದಂಬರಿ ರಚನೆಗೂ ಕೈಹಾಕಿದ್ದಾರೆ. ವಿಮರ್ಶೆಯನ್ನು ಅವರು ಮರೆತಿಲ್ಲ. ಅವರು ಶ್ರೇಷ್ಠ ನಾಟಕಕಾರರು. ಅಂತೆಯೇ ನಾಟ್ಯಲೇಖನಕ್ಕಾಗಿ ಅವರಿಗೆ ಅಕಾಡೆಮಿ ಪ್ರಶಸ್ತಿ ದೊರೆತಿದೆ. ಇದು ಸಂತಸದ ಸಂಗತಿ.

ಇದೇ ಸಂದರ್ಭದಲ್ಲಿ ದಿ|| 'ಮಾಧವರಾವ್ ಸಪ್ರೆ' ಪುರಸ್ಕಾರವನ್ನು ಪಡೆದ ಶ್ರೀ ಆರ್. ಸಿ. ಭೂಸನೂರಮಠರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಮಧ್ಯಪ್ರದೇಶ ಶಾಸನ ಸಾಹಿತ್ಯ ಪರಿಷತ್ತಿನವರು ಶ್ರೀ ಆರ್. ಸಿ. ಭೂಸನೂರುಮಠರ 'ಭಕ್ತಿ ಭಂಡಾರಿ' ಎಂಬ ನಾಟಕ ಸಂಕಲನಕ್ಕೆ 'ಸಪ್ರೆ' ಪುರಸ್ಕಾರವನ್ನಿತ್ತು ಗೌರವಿಸಿದ್ದಾರೆ. ಶ್ರೀ ಭೂಸನೂರಮಠರು ಇಂದು ಭೋಪಾಲ್ ಆಕಾಶವಾಣಿ ಕೇಂದ್ರದಲ್ಲಿ ಅಧಿಕಾರಿಗಳಾಗಿದ್ದಾರೆ. ಅವರು ಒಳ್ಳೇ ನಾಟಕಕಾರರಾಗಿರುವಂತೆ ಕವಿಗಳೂ ಆಗಿದ್ದಾರೆ. ಚಿಕ್ಕ ವಯಸ್ಸಿನಲ್ಲಿಯೇ ಅನೇಕ ಪಾರಿತೋಷಕಗಳನ್ನು ಸಂಪಾದಿಸಿದ ಶ್ರೀ ಭೂಸನೂರಮಠರು ಒಳ್ಳೇ ವಾಗ್ಮಿಗಳೂ ಹೌದು. ಅವರಿಗೆ ಉಜ್ವಲ ಭವಿಷ್ಯ ಕಾದಿದೆ ಎಂದು ಹೇಳಬಹುದು.

### ೪. ಶ್ರದ್ಧಾಂಜಲಿ

ಪ್ರಸಿದ್ಧ ಕನ್ನಡ ಕಾದಂಬರಿಕಾರರಲ್ಲೊಬ್ಬರಾಗಿದ್ದ ಶ್ರೀಮತಿ ತ್ರಿವೇಣಿ (ಅನಸೂಯ ಶಂಕರ) ಅಕಾಲ ಮೃತ್ಯುವಿಗೆ ತುತ್ತಾದ ಸುದ್ದಿಯು ಕನ್ನಡಿಗರಿಗೆ ಕಿವಿಗೆ ಚುಚ್ಚಿದ ಶೂಲದಂತಾಗಿದೆ. ಒಂದು ದಶಕದಲ್ಲಿ ೨೨ ಕಾದಂಬರಿಗಳನ್ನೂ ಮತ್ತು ಮೂರು ಕಥಾ ಸಂಕಲನಗಳನ್ನೂ ಪ್ರಕಟಿಸಿದ ಶ್ರೀಮತಿ ತ್ರಿವೇಣಿಯವರ ಸಾಹಿತ್ಯ ಸೃಷ್ಟಿಯು ಸಮೃದ್ಧವೂ, ಸತ್ವಶಾಲಿಯೂ ಆಗಿದೆ ಎಂದು ಹೇಳಬಹುದು. ಅವರ ಅಕಾಲ ನಿಧನವು ಕೊಡಗಿನ ದಿ|| ಶ್ರೀಮತಿ ಗೌರಮ್ಮನವರ ನಿಧನವನ್ನು ನೆನಪಿಗೆ ತರುತ್ತದೆ. ಸಮಾಜದ,ಮುಖ್ಯವಾಗಿ ಮಹಿಳಾ ಸಮಸ್ಯೆಗಳ ಸುತ್ತಲೂ ಹೆಣೆದುಕೊಂಡಿರುವ ಅವರ ಕೃತಿಗಳು ಜನಪ್ರಿಯತೆಯ ಜೊತೆಗೆ, ವಿದ್ವಾಂಸರ ಮೆಚ್ಚುಗೆಯನ್ನೂ ಪಡೆದಿವೆ. ಅವರ ಕೃತಿಗಳಾದ 'ತಾವರೆ ಕೊಳ'ಕ್ಕೆ ಅಕಾಡೆಮಿ ಪ್ರಶಸ್ತಿಯೂ, ಮತ್ತು 'ಅವಳ ಮನೆ'ಗೆ ರಾಷ್ಟ್ರ ಪ್ರಶಸ್ತಿಯೂ ದೊರೆತಿರುವುದು ಈ ಮಾತಿಗೆ ಸಾಕ್ಷಿಯಾಗಿವೆ. ಇಂದಿನ ಮಹಿಳಾ ಲೇಖಕರಲ್ಲಿ ಅಗ್ರಸ್ಥಾನವನ್ನು ಸಂಪಾದಿಸಿದ್ದ ಶ್ರೀಮತಿ ತ್ರಿವೇಣಿಯವರ ನಿಧನದಿಂದ ಕಾದಂಬರಿ ಪ್ರಪಂಚಕ್ಕೆ ಅದರಲ್ಲೂ ಮಹಿಳಾಲೋಕಕ್ಕೆ ತುಂಬಿಬರಲಾರದ ಹಾನಿಯುಂಟಾಗಿದೆ. ಮೂವತ್ತೈದನೆಯ ವರ್ಷದಲ್ಲಿಯೇ ಪರಂಧಾಮವನ್ನೈದಿದ ಶ್ರೀಮತಿ ತ್ರಿವೇಣಿಯವರಿಗೆ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತೇವೆ.

---

ಸಂಪಾದಕರು: ಶ್ರೀ ಅನ್ನದಾನಯ್ಯ ಪುರಾಣಿಕ,ಬಿ.ಕಾಮ್., ಎಲ್‌ಎಲ್.ಬಿ. ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ. ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು—೧೮

# ಸಾದರ ಸ್ವೀಕಾರ

ನಿವೇದನ: (ಸ್ಮಾರಕ ಸಂಚಿಕೆ, ೧೯೬೩); ಶ್ರೀ ಸರಸ್ವತೀ ಕಲಾ ನಿಕೇತನ್, ಮಲ್ಲೇಶ್ವರ, ಬೆಂಗಳೂರು.

* ಹೊಳಪು-ಝುಳಪು (ಕವನ ಸಂಕಲನ): ಪ್ರಕಾಶಕರು: ಕರ್ನಾಟಕ ಸಂಘ, ಗೌರ್ನಮೆಂಟ್ ಆರ್ಟ್ಸ ಮತ್ತು ಸೈನ್ಸ್ ಕಾಲೇಜು, ಬೆಂಗಳೂರು; ಸೈಜು ೧/೮ ಕ್ರೌನ್; ಪುಟ ೪೬; ಬೆಲೆ ರೂ. ೧.

ಮಾದರ ಚನ್ನ: ಲೇಖಕರು: ಸ್ವಾಮಿ ಮಹಾಮನೆ; ಪ್ರಕಾಶಕರು: ಮಹಾಮನೆ ಪ್ರಕಟನಾಲಯ, ೨೫೨೬, ಚಾಮುಂಡಿ ಪುರಂ, ಮೈಸೂರು-೪; ಸೈಜು ೧/೮ ಕ್ರೌನ್; ಪುಟ ೩೮; ಬೆಲೆ ರೂ. ೧-೫೦ ನ.ಪೈ.

*ಪರಮಾತ್ಮನ ವರ್ಣಮಾಲಾ ಸ್ತೋತ್ರ: ಲೇಖಕರು ಮತ್ತು ಪ್ರಕಾಶಕರು: ಶ್ರೀ ಬಿ. ಗಂಗಾಧರಶಾಸ್ತ್ರಿ, ೧೦೩೦, ವಿದ್ಯಾ ರಣ್ಯಪುರಂ, ಮೈಸೂರು; ಸೈಜು ೧/೮ ಕ್ರೌನ್; ಪುಟ ೧೦+೧; ಬೆಲೆ ೨೦ ನ.ಪೈ.

**Secret of Perfect Health:** By Sri M. Raja Rao; Price Rs. 2-10 nP.

**Vadiraja's Yasodhara Carita:** Ed.: Sri K. Krishna Moorthy; Size Demy 8 vo; Pages 233; Price Rs. 5.

**The Basaveshvar College Annual,** 1962-63; Bagalkote.

ಈ ಕೆಳಗೆ ಕಾಣಿಸಿರುವ ಐದು ಚಿಕ್ಕ ಗ್ರಂಥಗಳು ವಿಜಯ ಸಾಹಿತ್ಯ ಮಾಲೆ, ಸುರತ್ಕಲ್ (ದ.ಕ.) ಪ್ರಕಾಶಕರಿಂದ ಕಳುಹಿಸಲ್ಪಟ್ಟಿವೆ. ಪರಿಷತ್ತು ಕೃತಜ್ಞತೆಯಿಂದ ಸ್ವೀಕರಿಸಿದೆ:

(೧) ಸ್ವಾತಂತ್ರ್ಯ ಸಂಗ್ರಾಮ (೧೮೫೭ ಲಾವಣಿ).
(೨) ಶ್ರೀ ಚಿತ್ರಾಪುರ ಮಠಾಧೀಶರಾದ ಶ್ರೀ ವಿದ್ಯಾಪೂರ್ಣ ತೀರ್ಥ ಸ್ವಾಮಿಗಳವರ ಚರಿತ್ರೆ.
(೩) ಸ್ವಾಮಿ ವಿವೇಕಾನಂದರ ಜೀವನ ಚರಿತ್ರೆ (ಲಾವಣಿ).
(೪) ಸ್ತೋತ್ರಮಣಿ ಮಾಲಾ.
(೫) ಕಹಳೆ.

ಭಾರತ ಇತಿಹಾಸದ ಪಾಠಗಳು: ಅನುವಾದಕರು: ತ. ಸು. ಶಾಮರಾಯ; ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಸಹಕಾರದಿಂದ ಪ್ರಕಟಿತ); ಸೈಜು ೧/೮ ಕ್ರೌನ್; ಪುಟ ೬೩; ಬೆಲೆ ೭೫ ನ.ಪೈ.

ತತ್ತ್ವನಿರ್ಣಯ: ಅನುವಾದಕರು, ಸಂಪಾದಕರು: ಶ್ರೀ ಎಸ್. ಎಸ್. ರಾಘವಾಚಾರ್, ಎಂ.ಎ., ಡಾ|| ಕೆ. ಎಂ. ಕೃಷ್ಣ ರಾವ್, ಎಂ.ಎ., ಪಿಎಚ್.ಡಿ.; ಪ್ರಕಾಶಕರು ಶ್ರೀ ಜಗನ್ನಾಥ ಪ್ರಕಾಶನ, ಚಾಮರಾಜಪೇಟೆ, ಬೆಂಗಳೂರು-೧೮; ಸೈಜು ೧/೮ ಕ್ರೌನ್; ಪುಟ ೯೯+೫೦; ಬೆಲೆ ರೂ. ೪.

ರಸಚಕ್ರ: ಲೇಖಕರು: ಮೂಲ: ಶ್ರೀ ಶರತ್‌ಚಂದ್ರ ಚಟ್ಟೋಪಾಧ್ಯಾಯ; ಅನುವಾದಕರು: ಶ್ರೀ ಎಸ್. ಎ. ಬುರ್ಲಿ ಪ್ರಕಾಶಕರು: ಪ್ರತಿಭಾ ಗ್ರಂಥಮಾಲೆ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೧೮೩; ಬೆಲೆ ರೂ. ೨.

ನೊರೆ: ಲೇಖಕರು: ಶ್ರೀ ಶೇಷನಾರಾಯಣ; ಪ್ರಕಾಶಕರು: ಪ್ರತಿಭಾ ಗ್ರಂಥಮಾಲೆ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೨೪೪; ಬೆಲೆ ರೂ. ೨-೫೦ ನ.ಪೈ.

ಬಹುಮಾನ (ಮಕ್ಕಳ ಕತೆಗಳು): ಲೇಖಕರು: ಶ್ರೀ ಬಿ. ಎ. ಸನದಿ; ಪ್ರಕಾಶಕರು: ಪ್ರತಿಭಾ ಗ್ರಂಥಮಾಲೆ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೪೪; ಬೆಲೆ ೬೦ ನ.ಪೈ.

ಮಣ್ಣಿನ ಮೂರ್ತಿಗಳು: ಲೇಖಕರು: ಶ್ರೀ ರಾಮವೃಕ್ಷ, ಬೇನಿಪುರಿ; ಅನುವಾದಕರು: ಶ್ರೀ ಎಸ್. ಕೃಷ್ಣ; ಪ್ರಕಾಶಕರು: ಪ್ರತಿಭಾ ಗ್ರಂಥಮಾಲೆ, ಧಾರವಾಡ; ಪುಟ ೧೫೦; ಬೆಲೆ ರೂ. ೨-೫೦ ನ.ಪೈ.

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತದೆ.

Reg. No. B.G. 8—Mysore 1950

Licensed to Post without pre-payment Licence No. 1



# ಭಾರತದಲ್ಲೆಲ್ಲಾ ಪ್ರಸಿದ್ಧಿ ಹೊಂದಿರುವ

## ಮೈಸೂರಿನ ಜನದ ಪ್ರೀತಿಗೆ ಪಾತ್ರವಾದ

ಕಾಡೆಮ್ಮೆ ಗುರುತಿನ



ವಿದ್ಯಾರ್ಥಿಗಳಿಗೆ, ಲೇಖಕರಿಗೆ, ಪ್ರಕಾಶಕರಿಗೆ, ಮುದ್ರಾಪಕರಿಗೆ

ಎಲ್ಲ ರೀತಿಯ ವ್ಯವಹಾರದಲ್ಲಿ

ಬೇಕಾಗುವ

# ಮೈಸೂರು ಕಾಗದ

## ಮೈಸೂರು ಕಾಗದದ ಕಾರ್ಖಾನೆ, ಲಿಮಿಟೆಡ್

ಭದ್ರಾವತಿ. ಬೆಂಗಳೂರು.

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಬೆಂಗಳೂರು




# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೬]

[ಸಂಚಿಕೆ ೯

## ಭಾರತದ ರಾಷ್ಟ್ರಪತಿ



ಡಾ॥ ಎಸ್. ರಾಧಾಕೃಷ್ಣನ್ ಅವರು.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

ಸಂಪುಟ ೨೬ ] ಸೆಪ್ಟೆಂಬರ್ ೧೯೬೩ [ ಸಂಚಿಕೆ ೯

# ವಿಷಯ ಸೂಚಿಕೆ




ಸಂಪುಟ ೨೬ ]　　ಸೆಪ್ಟೆಂಬರ್ ೧೯೬೩　　[ ಸಂಚಿಕೆ ೯

# ಮುಗ್ಧೆ !

ಲೇ : ಗಂಗಾತನಯ

" ರವಿವಾರ ಇಂದಿಲ್ಲ, ಹೋದವರು ಬಂದಿಲ್ಲ,
ಎಲ್ಲಿ ಕುಳಿತರು ಏನೋ ? ಅಲ್ಲಿ ಇಲ್ಲಿ,
ಬಂದು ಗಡಿಬಿಡಿಯಾಟ ನನಗೆಲ್ಲ ನಗೆಕಾಟ
ಬೇಗ ಬರಹೇಳಿದರೂ ಈವರೆಗೂ ಸುಳಿವಿಲ್ಲ "

ಎಂದು ಯೋಚಿಸುತ್ತ ಚಿತ್ತತ್ತ ಕುಳಿತಿತ್ತ
ದಾರಿ ನೋಡುತಲಿಹಳು ಅಡಿಗೆ ಮಾಡುತ್ತ,
ಮೈಯ್ಯೆಲ್ಲ ಕಿವಿಯಾಗಿ ಸದ್ದು ಕೇಳುವಳೊಮ್ಮೆ,
ಮೈಯ್ಯೆಲ್ಲ ಕಣ್ಣಾಗಿ ಎದ್ದು ನೋಡುವಳೊಮ್ಮೆ,
ಎದ್ದರೂ ಕಂಡಿಲ್ಲ, ಸದ್ದು ಕೇಳಲು ಇಲ್ಲ.

ಕಟ್‌ಕಟ್‌ಕಟ್‌ಕಟ್‌ಕಟ್‌ಕಟ್
ಸದ್ದು ಕೇಳಿದಳಾಗ
ಯೋಚನೆಯ ಆಳದಲಿ ಇಳಿದು ತಾನಾಗ,
ಇಣಿಕಿ ನೋಡುವಾಗ,
" ಓ ಬಂದರು ಈಗ ಕೇಳುವೆನು ನಾನೀಗ,
ತಡವೇಕೆ ಮಾಡಿದಿರಿ ಮತ್ತೆ ಗಡಿಬಿಡಿ ಈಗ ? "
ಕದ ತೆರೆದು ಕಂಡಾಗ, ಪೆಚ್ಚು ತಾನಾದಾಗ,
" ಓ ! ನೀವೇ ಬನ್ನಿ, ಅವರಿಲ್ಲ,
ಪೇಟೆಗ್ಹೋದವರು ಈವರೆಗು ಬಂದಿಲ್ಲ "
" ನನಗೆ ಕೊಡಿದರವರು ಡೊಂಬಿವಲಿ ಪೇಟೆಯಲಿ
ಸಾಮಾನು ಬಹಳಿತ್ತು ಅವರ ಕೈಯ್ಯಲ್ಲಿ,
ಮುಂದೆ ಬಂದೆನು ನಾನು ನಿಮಗೆ ಹೇಳುವೆನಿಲ್ಲಿ,
ಬೇಗ ಹೊರಡಿರಿ ಬೇಗ ಬರುವಾಗ ಅವರಿಲ್ಲಿ,
ಸಾಮಾನು ಹೊತ್ತವರ ಬೆವತಿತ್ತು ಮೈಯ್ಯೆಲ್ಲ "

' ಸಾಮಾನು ಬಹಳಿಲ್ಲ, ಆಗವರು ಹೇಳಿಲ್ಲ,
ಆದರೂ ಹೋಗುವೆನು ದಾರಿಯಲಿ ಕೂಡುವೆನು,'
ಎಂದು ಗಡಿಬಿಡಿ ಮಾಡಿ ಸೀರಿ ನಿರಿಗೆಯ ತೀಡಿ
ಹಣೆಗಿದ್ದ ಕುಂಕುಮವ ಅಷ್ಟೆ ಸರಿ ಮಾಡಿ
ಮುಂದಿದ್ದ ಮುಂಗುರುಳ ತೀಡಿ ತೀಡಿ

ತೀಡಿದರೂ ಕೂಡದ ಮುಂಗುರುಳನೆತ್ತಿ ಹಿಡಿದು
' ಇವಕೆಲ್ಲ ಜಿಲ್ಲಾಟ ನನಗೀಗ ಸಂಕಟ '
ಎಂದ್ಹಳಿದು ಅವನೆಲ್ಲ ತೀಡದೇ ಬಿಟ್ಟು,
ಬೇಗ ಹಾಕುತಲಿಹಳು ಬೀಗಕ್ಕೆ ಒಳಗಿಟ್ಟು.

ತನ್ನ ಮರವೆನೆ ಹಳಿದು ಬೀಗ ಹಾಕಿದಳಾಗ,
ನಡೆದು ಬಂದಳು ನನ್ನ ಕೂಡಲೆಂದಾಗ,
ದೂರದಲಿ ಗುರುತಿಸಿದೆ, ಹೊರಟಿಹಳು ಮನದನ್ನೆ,,
ಸೀರಿ ನಿರಿಸೆಯದೆಲ್ಲ ಗಾಳಿಗ್ಹಾರುತಲಿತ್ತು,
ಮುಂಗುರುಳು ಹಟವಾರಿ ಹಣೆಯ ಮುತ್ತುತಲಿತ್ತು
ಹಿಂದುಮುಂದೆನ್ನದೆ ದಾರಿ ಸಾಗುತಲಿತ್ತು
ಬೆಳಗಿನಾ ಮುತ್ತೈದಿ ಹೊರಟಿಹಳೊ ಇವಳೆತ್ತ ?
ಎಂದು ಯೋಚಿಸುವಾಗ ಅವಳ ಕೂಡಿದೆನಾಗ.

" ನಿಮ್ಮ ಸಾಮಾನೆಲ್ಲಿ ಕೊಡಿರಿಲ್ಲಿ ಕೈಯ್ಯಲ್ಲಿ,
ಬೇಗ ನಡೆಯಿರಿ ಬಹಳ ಹೊತ್ತಾಯಿತಲ್ಲಿ,
ಸಾಮಾನು ಬಹಳಂತೆ, ತಡವಾಯಿತಂತೆ
ಈಗ ಹೇಳಿದರವರು ವೃದ್ಧ ಆಚಾರಿಯರು.

ಕೇಳುತಲೆ ನಾ ಬಂದೆ ನಿಮಗೆ ಎದುರಾದೆ "
ಒಂದೆ ಉಸಿರಲಿ ಎಲ್ಲ ಉಸಿರಿದಳು ತೇಕುತಲಿ.
" ತಕ್ಕೊ ಇವೆ ಸಾಮಾನು, ಅಬ್ಬಾ ; ಇದೆ ಗುರುಭಾರ"
ನಟಿಸುತಲಿ ಅವನೆಲ್ಲ ಅವಳ ಕೈಗಿತ್ತೆ.
" ಸಾಮಾನಾ ಬಹಳಿಲ್ಲ, ಗುರುಭಾರ ಇವರೆಲ್ಲ
ಸುಳ್ಳು ಹೇಳಿದರವರು ವೃದ್ಧ ಆಚಾರಿಯರು."
" ಮುಗ್ಧೆ ನೀನೆಂದೇ ' ಮೋಜು ' ಮಾಡಿದರೆಂದೆ."
ಹುಸಿ ಮುನಿಸು ನಟಿಸಿದಳು ಪೆಚ್ಚಾದ ಮೋರೆಯಲಿ,
· ನಗು ಉಕ್ಕಿ ಬಂದಿತ್ತು ತಡೆಯದಲೆ ನಾ ನಕ್ಕೆ.
ಗುಳಿಗಲ್ಲದಲಿ ಮೂಡಿ, ಚೆಂಗುಲಾಬಿಯು ಮೂಡಿ,
ನಾಚಿ ತಲೆ ಬಾಗಿದಳು ಹೆರಳು ಮರೆ ಮಾಡಿ.
ಮನೆಯ ಹತ್ತಿರ ಬಂದು,
" ಸಾಮಾನು ಬಹಳಿತ್ತೆ ? ಅವರ ಮೈ ಬೆವತಿತ್ತೆ ? "

ನಗೆಯಾಡಿ ಕೇಳಿದರು ವೃದ್ಧ ಆಚಾರಿಯರು
ಉಕ್ಕಿ ಬಂದಾನಗೆ ಉಕ್ಕಿ ಹರಿಯಿತು ಮಿಗೆ,
ನೋಡಬೇಕಿತ್ತವಳ ನಗೆ ಮುಖವನಾಗ,
ಮುಗ್ಧಮನಸಿನ ಮುಗ್ಧನಗೆಯರಳಿದಾಗ.

# ತಾಂಬೂಲ

ಸಂಗ್ರಾಹಕ: ಎಸ್. ಎಸ್. ಬ್ಯಾತನಾಳ

(ಮೂಲ ಲೇಖಕರು: ಡಾ. ಪಿ. ಕೆ. ಗೋಡೆ)

[ಆಗಸ್ಟ್ ಸಂಚಿಕೆಯಿಂದ ಮುಂದುವರಿದುದು]

### ೪. ತಾಂಬೂಲದ ಘಟನೆಗಳು

ಹಿಂದುಸ್ತಾನದ ಸಾಮಾನ್ಯವಾಗಿ ಎಲ್ಲ ಪ್ರಾಂತಗಳಲ್ಲಿ ವ್ರತಾಚರಣೆ, ಮದುವೆ-ಮುಂಜಿ ಮೊದಲಾದ ಸಂದರ್ಭಗಳಲ್ಲಿ ಎರಡು ಎಲೆ, ಒಂದು ಅಡಕೆ ಬೆಟ್ಟ ಇಲ್ಲವೆ ಹೋಳುಗಳನ್ನು ಉಪಯೋಗಿಸುವ ರೂಢಿಯುಂಟು. ಎರಡೇ ಎಲೆಗಳನ್ನು ಏಕೆ ಉಪಯೋಗಿಸುವರು? ಇದರ ಹಿನ್ನೆಲೆ, ಕಲ್ಪನೆಗಳಾವುವು? ವಿಚಾರಾರ್ಹ. ಕ್ರಿ. ಶ. ೧೫೨೪ಕ್ಕೂ ಪೂರ್ವದಲ್ಲಿದ್ದ 'ಜ್ಯೋತಿರ್ನಿಬಂಧ'ದಲ್ಲಿ ಕೆಳಗಿನ ವಿವರಗಳಿವೆ.

ವೇದ ಹೇಳದ, ತಾಂಬೂಲ ತಿನ್ನದ, ಹಾಸ್ಯ ಮಾತಾಡದ ಬಾಯಿ ಕೇವಲ ಒಂದು ಹೊದರು. ಬ್ರಾಹ್ಮಣರಿಗೆ ತಾಂಬೂಲ ದಾನಮಾಡುವವನು ಮನ್ಮಥನಂತೆ ದೇಹಕಾಂತಿ ಪಡೆಯುವನು; ಬೇನೆಗಳಿಂದ ಮುಕ್ತನಾಗುವನು. ತಾಂಬೂಲ ದಾನ ಚಿರಕಾಲ ಪ್ರತಿಫಲದಾಯಕ: ಅಡಕೆ ಬ್ರಹ್ಮನಿಗೆ ಪ್ರಿಯ; ವಿಳೇದೆಲೆ ವಿಷ್ಣುವಿಗೆ ಪ್ರಿಯ; ಸುಣ್ಣ ಶಿವನಿಗೆ ಪ್ರಿಯ. ಎಲೆ, ಅಡಕೆ, ಸುಣ್ಣಗಳು ತ್ರಿಮೂರ್ತಿ ಪ್ರಿಯವಸ್ತುಗಳಾದುದರಿಂದ ಅವುಗಳ ದಾನ ಏಳಿಗೆ, ಐಶ್ವರ್ಯಗಳನ್ನು ತರುವುದು. ಅರಸನಿಗೆ ೩೨ ಎಲೆಗಳ; ಸಂಸ್ಥಾನಿಕನಿಗೆ ೨೪ ಎಲೆಗಳ ತಾಂಬೂಲ ಕೊಡಬೇಕು. ಅಳಿಯನಿಗೆ ೧೮ ಎಲೆ; ಪಂಡಿತನಿಗೆ ೧೨ ಎಲೆ; ಮದುಮಗಳಿಗೆ ೧೦ ಎಲೆ; ಉಳಿದವರಿಗೆ ೮ ಎಲೆ; ಸಾಮಾನ್ಯನಿಗೆ ೪ ಎಲೆ; ವೈರಿಗಳಿಗೆ ೬ ಎಲೆಗಳು ಮಾತ್ರ-ಹೀಗೆ ತಾಂಬೂಲ ಕೊಡುವ ನಿಯಮವಿದೆ. ಅಡಕೆಯ ಸಂಖ್ಯೆಯ ಬಗೆಗಿರುವ ಕಲ್ಪನೆ:

ಒಂದು ಅಡಕೆ — ಲಾಭ
ಎರಡು ,, — ಹಾನಿ
ಮೂರು ,, — ಆನಂದ
ನಾಲ್ಕು ,, — ಕಷ್ಟ; ಜಿಪುಣತನ
ಐದು ,, — ದೀರ್ಘಾಯುಷ್ಯ
ಆರು ,, — ಮರಣ

ವಿಳೇದೆಲೆಯ ತುಂಬು ರೋಗಕಾರಕ; ತುದಿ ಪಾಪಮಯ. ಮುದುರಿದ ಅಥವಾ ಸುಕ್ಕಾದ ಎಲೆ ಮಾನವ ಜೀವನವನ್ನೇ ಹಾಳುಮಾಡುವದು. ಎಲೆಯ ನರಗಳು ಬುದ್ಧಿನಾಶಕ. 'ವಿಡಾ' ಮತ್ತು ವಿಳೇದೆಲೆಯನ್ನು ತುದಿ ಮೇಲೆಮಾಡಿ ಹಿಡಿಯಬೇಕು. ತನ್ನ ಹೆಬ್ಬೆರಳಿನಿಂದ ಸುಣ್ಣ ಹಚ್ಚಿ ತಾನೇ ತಿನ್ನುವ ತಾಂಬೂಲ ಸಂಪತ್ತು ಕೊಡುವದು. ವಿಳೇದೆಲೆಯ ತುಂಬು-ತುದಿಗಳನ್ನು, ಎರಡು ಎಲೆ ಮತ್ತು ಸುಣ್ಣವನ್ನು ಎಲೆ ಇಲ್ಲದೆ ಕೇವಲ ಅಡಕೆಯನ್ನು ತಿಂದರೆ ದಾರಿದ್ರ್ಯ ಲಭಿಸುವುದಲ್ಲದೆ, ಮರಣಾನಂತರ ವಿಷ್ಣುದರ್ಶನ ಲಭಿಸದು. ಅಜ್ಞಾನದ ಮೂಲಕ ತರ್ಜನಿ ಬೆರಳಿನಿಂದ ಸುಣ್ಣ ಹಚ್ಚಿಕೊಳ್ಳದೆ ತಾಂಬೂಲ ತಿಂದರೆ ರೌರವ ನರಕವೇ ಗತಿ. ಯಾವ ಬೆರಳಿನಿಂದ ಸುಣ್ಣ ಹಚ್ಚಿದರೆ ಏನು ಫಲ?

೧. ಹೆಬ್ಬೆಟ್ಟು ಬೆರಳು — ದೀರ್ಘಾಯುಷ್ಯ
೨. ತರ್ಜನಿ ,, — ಐಶ್ವರ್ಯ ಅಭಾವ
೩. ಮಧ್ಯಮ ,, — ಮರಣ
೪. ಉಂಗುರದ ,, — ಹಾನಿ
೫. ಕಿರಿ ,, — ದುಃಖ

ಅಜ್ಞಾನದಿಂದ ಎಡಗೈಯಿಂದಾಗಲಿ, ಹೆಂಗಸಿನ ಕೈಯಿಂದಾಗಲಿ ಸುಣ್ಣ ತೆಗೆದುಕೊಂಡರೆ ಅದುವೇ ಅವನ ಸಂಪತ್ತಿನ ಕೊನೆಗಾಲ. ಹೆಬ್ಬೆರಳಿನಿಂದ ಸುಣ್ಣ ಹಚ್ಚಿದರೆ ಕಾರ್ಯಗಳಲ್ಲಿ ಯಶಸ್ಸು. ಉತ್ತಮ ಸ್ತ್ರೀ ಲಾಭ. ವಸ್ತ್ರ ಲಾಭಗಳಾಗುವವು. ಹಗಲಿನಲ್ಲಿ ಮಾತ್ರ ಕಾಚು ತಿನ್ನಬೇಕು. ರಾತ್ರಿ ಕಾಚು ತಿಂದರೆ ದೇವೇಂದ್ರನೂ ಹಾಳಾಗುವನು. ಸ್ವರ್ಗದಲ್ಲಿಯೂ ಸುಲಭಸಾಧ್ಯವಾಗಿರದ ತಾಂಬೂಲದ ಹದಿಮೂರುಗುಣಗಳು:

೧. ಖಾರ ಅಥವಾ ಉತ್ತೇಜನಕ
೨. ಕಹಿ
೩. ಕಾವು (ಉಷ್ಣತೆ)
೪. ಸಿಹಿ

೫. ಕ್ಷಾರ
೬. ರಸಪ್ರತಿಬಂಧ
೭. ವಾತ ನಿರ್ಬಂಧ
೮. ಕೊಳೆ ನಿರ್ಮೂಲನ
೯. ಕಫ ನಿವಾರಣೆ
೧೦. ಕಾಮೋದ್ರೇಕ
೧೧. ಮುಖ ಸೌಂದರ್ಯ
೧೨. ಬಾಯಿ ಸ್ವಚ್ಛತೆ
೧೩. ಬಾಯಿಯ ದುರ್ವಾಸನೆ ಕಳೆಯುವುದು

ಮುಂಜಾವಿನಲ್ಲಿ ಅಡಕೆ, ಮಧ್ಯಾಹ್ನದಲ್ಲಿ ಸುಣ್ಣ, ರಾತ್ರಿ ಎಲೆಗಳ ಪ್ರಮಾಣ ಹೆಚ್ಚಾಗಿ ಸೇವಿಸಿದರೆ ಐಶ್ವರ್ಯ ಹೆಚ್ಚುತ್ತ ಹೋಗುವದು. ಜಾಣನಾದವನು ಅಡಕೆ, ಎಲೆ, ಸುಣ್ಣಗಳನ್ನು ೩ : ೨ : ೧ ಈ ಪ್ರಮಾಣದಲ್ಲಿ ಸೇವಿಸಬೇಕು.

'ಜ್ಯೋತಿರ್ನಿಬಂಧ'ದ ಅರಸನಿಗೆ ೩೨ ಎಲೆಗಳನ್ನು ಕೊಡಬೇಕೆಂಬ ಕಲ್ಪನೆ ಮರಾಠಿ ಜಾನಪದ ಗೀತದಲ್ಲಿಯೂ ಕಾಣುತ್ತಿದೆ.

ಸೋಳಾಸಹಸ್ರ ನಾರೀಕೃಷ್ಣ ಘಾಲಿತೊ ಧಿಂಗಾಣಾ।
ಬತ್ತಿಸ ಪಾನಾಚಾ ವಿಡಾ ಮುಖಾತ ರಂಗಣಾ॥

ವಾಗ್ಭಟನ (ಕ್ರಿ.ಶ. ೬೨೫ ಅಥವಾ ಕ್ರಿ.ಶ.ಸು. ೮೫೦) ವೈದ್ಯಕೀಯ ಗ್ರಂಥ ಅಷ್ಟಾಂಗ-ಸಂಗ್ರಹದಲ್ಲಿ,

ಪಥ್ಯಂ ಸುಪ್ತೋತ್ಥಿತೆ ಭುಕ್ತೆ ವಾಂತೆ ಚ ಮಾನವೆ।
ದ್ವಿಪತ್ರಮೇಕಮ್ ಪೂಗಂ ಚ ಸಚೂರ್ಣ ಖದಿರಂಚತತ್॥

ಎಂದಿದೆ. ಇಂಥ ವೇಳೆಗಳಲ್ಲಿ ಎರಡು ಎಲೆ, ಒಂದು ಅಡಿಕೆ ಬೆಟ್ಟ, ಸುಣ್ಣ, ಕಾಚು ಹಾಕಿಕೊಳ್ಳಬೇಕು.

ಕ್ರಿ. ಶ. ೧೪೧೬ ರ ಪರ್ಶಿಯನ್ ಫರಮಾನ್‌ದಲ್ಲಿ ಸಹಾಜಖಾನ್, ಸುಭೇದಾರನು ಹೀಗೆ ಆಜ್ಞೆಯಿತ್ತಿದ್ದಾನೆ:

೧. ಒಂದು 'ಬಿರಾ' (=ವಿಡಾ. ೧೬ ಎಲೆ; ೫ ಅಡಿಕೆ ಬೆಟ್ಟಗಳುಳ್ಳದು)ವನ್ನು ಪ್ರತಿಯೊಂದು ಹಳ್ಳಿಯವರು ಪ್ರತಿ ವರುಷ ರಾಜಗುರು ಪುರುಷೋತ್ತಮರಾವ್ ಅವರಿಗೆ ಕೊಡಬೇಕು.

೨. ತಮ್ಮ ಮಕ್ಕಳ ಮದುವೆ ನಿಶ್ಚಯ ಕಾರ್ಯದಲ್ಲಿ ೫೦ ಎಲೆ, ೧೦ ಅಡಿಕೆ ಬೆಟ್ಟಗಳುಳ್ಳ 'ಬಿರಾ'ವನ್ನು ಆಮಂತ್ರಣ ಮತ್ತು ಗೌರವ ಸೂಚಕವೆಂದು ಬ್ರಾಹ್ಮಣನಿಗೆ ವಾದ್ಯ ವೈಭವದೊಡನೆ ತಂದು ಕೊಡಬೇಕು.

೩. 'ಟಿಲಾ' (=ತಿಲಕ-ಕುಂಕುಮ) 'ಬಿರಾ' ಮರ್ಯಾದೆಯನ್ನು ಸೂಚಿಸುವವು.

ಇದರಿಂದ ಕ್ರಿ.ಶ. ೧೪೧೬ರಲ್ಲಿ ಠಾಣಾ ಜಿಲ್ಲೆಯಲ್ಲಿ ರಾಜಗುರು ಪುರುಷೋತ್ತಮರಾವ್ ಕಾವಲೆ ಅವರ ಕಾಲದಲ್ಲಿ ಮೇಲಿನ ಸಂಪ್ರದಾಯ ಪ್ರಚಲಿತವಾಗಿತ್ತೆಂದು ತಿಳಿಯುತ್ತದೆ.

## ೫. ತ್ರಯೋದಶ ಗುಣಗಳು

ತಾಂಬೂಲಂ ಕಟುತಿಕ್ತಮುಷ್ಣಾಮಧುರಂ ಕ್ಷಾರಂ
ಕಷಾಯಾನ್ವಿತಂ
ವಾತಘ್ನಂ ಕೃಮಿನಾಶನಂ ಕಫಹರಂ
ದುರ್ಗಂಧಿವಿರ್ನಾಶನಮ್।
ವಕ್ತ್ರಸ್ಯಾಭರಣಂ ವಿಶುದ್ಧಿಕರಣ ಕಾಮಾಗ್ನಿ ಸಂದೀಪನಂ
ತಾಂಬುಲಸ್ಯ ಸಖೇ ತ್ರಯೋದಶಗುಣಾಃ ಸ್ವರ್ಗೇऽಪಿ
ತೇ ದುರ್ಲಭಾಃ॥

—'ಯೋಗರತ್ನಾಕರ'—ಕ್ರಿ.ಶ. ೧೬೯೬ಕ್ಕೂ ಮೊದಲಿನ ಕೃತಿ.

ತಾಂಬೂಲದ ಹದಿಮೂರು ಗುಣಗಳನ್ನು ಹೇಳಿರುವ ಇದೇ ಶ್ಲೋಕ ಹರಿದಾಸ (ಕ್ರಿ.ಶ. ೧೫೫೭) ಕೃತ 'ಪ್ರಸ್ತಾವ ರತ್ನಾಕರ'ದಲ್ಲಿಯೂ, ನರಹರಿ (ಕ್ರಿ.ಶ. ೧೪೫೦) ಕೃತ 'ರಾಜನಿಘಂಟು'ವಿನಲ್ಲಿಯೂ, ಶಿವರಾಜ ಅಥವಾ ಶಿವದಾಸ (ಕ್ರಿ.ಶ. ೧೫೨೪) ಕೃತ ಜ್ಯೋತಿರ್ನಿಬಂಧದಲ್ಲಿಯೂ, ಜಲ್ಹಣ (ಕ್ರಿ.ಶ. ೧೫೨೮) ಕೃತ ಸಂಗ್ರಹ ಕಾವ್ಯ 'ಸೂಕ್ತಿ ಮುಕ್ತಾವಲೀ'ಯಲ್ಲಿಯೂ ಉದಾಹೃತವಾಗಿದೆ. 'ಸೂಕ್ತಿ ಮುಕ್ತಾವಲಿ'ಯಲ್ಲಿ ಸ್ವಲ್ಪ ಬದಲಾವಣೆ ಇದೆ. (೨ನೆಯ ಸಾಲಿನಲ್ಲಿ 'ಕಾಮಾಗ್ನಿ ಸಂದೀಪನಂ' ಎಂಬುದರ ಬದಲು ೩ನೆಯ ಸಾಲಿನ 'ದುರ್ಗಂಧಿವಿರ್ನಾಶನಂ' ಎಂದಿದೆ. ೩ನೆಯ ಸಾಲು ತೀರ ಹೊಸದಾಗಿದೆ. "ಸ್ತ್ರೀ ಸಂಭಾಷಣ ಭೂಷಣಂ ರುಚಿಕರಂ ಶೋಕಸ್ಯ ವಿಚ್ಛೇದಕಂ.")

ತಾಂಬೂಲದಲ್ಲಿ ೧೩ ಗುಣಗಳಿವೆಯೆಂಬ ವಿಚಾರ ಕ್ರಿ. ಶ. ೧೨೦೦ಕ್ಕೂ ಪೂರ್ವದಲ್ಲಿಯೇ ಇರಬೇಕೆಂದು ತಿಳಿಯುತ್ತದೆ. ಈ ವಿಷಯದಲ್ಲಿ ಹೆಚ್ಚಿನ ಸಂಶೋಧನೆ ಆವಶ್ಯಕ.

ವರಾಹಮಿಹಿರನ (ಕ್ರಿ.ಶ. ೫೦೦) 'ಬೃಹತ್ ಸಂಹಿತಾ'ದಲ್ಲಿ:

ಕಾಮಂ ಪ್ರದೀಪಯತಿ ರೂಪಮಭಿವ್ಯನಕ್ತಿ
ಸೌಭಾಗ್ಯಮಾವಹತಿ ವಕ್ತ್ರಸುಗಂಧಿತಾ ಚ।

ಊರ್ಜಂ ಕರೋತಿ ಕಫಜಾಂಶ್ಚ ನಿಹಂತಿರೋಗಾನ್
ತಾಂಬೂಲಮೇವಮುಪರಾಂಶ್ಚ ಗುಣಾನ್ ಕರೋತಿ ॥

ಎಂದು ತಾಂಬೂಲದ ೧೩ ಗುಣಗಳಲ್ಲಿ ಬಹುಸಂಖ್ಯಾತ ಗುಣಗಳು ಕ್ರಿ.ಶ. ೫೦೦ರಲ್ಲಿಯೇ ಹೇಳಲ್ಪಟ್ಟಿವೆ. ಆನಂತರ ಗ್ರಂಥಕರ್ತರಿಗೆ ವರಾಹಮಿಹಿರನ ಗ್ರಂಥವೇ ಮೂಲಾಧಾರವಾಗಿ, ಮುಂದೆ ೧೩ ಗುಣಗಳೆಂದು ಬೆಳೆಯಿಸಿಕೊಂಡಿರಬಹುದೇ? ವಿಚಾರಾರ್ಹ.

## ೬. ಮದುವೆಯಲ್ಲಿ ವಿಳೇದೆಲೆ ಕಡಿಯುವುದು

ನಮ್ಮ ಹಲವಾರು ಸಾಂಪ್ರದಾಯಗಳಲ್ಲಿ ತಾಂಬೂಲವು ವಿಶಿಷ್ಟ ಸ್ಥಾನ ಪಡೆದಿದೆ. ನಿಶ್ಚಯಕಾರ್ಯದಲ್ಲಿ, ಮದುವೆಯಲ್ಲಿ, ಗೌರವ ಭಾವ ವ್ಯಕ್ತಪಡಿಸುವಲ್ಲಿ, ಪ್ರತಿಜ್ಞೆ ಕೈಕೊಳ್ಳುವಲ್ಲಿ, ಪ್ರಣಯದ ಕಾಣಿಕೆಯೆಂತೆ ತಾಂಬೂಲವನ್ನುಪಯೋಗಿಸುವೆವು. ಮಹಾರಾಷ್ಟ್ರದಲ್ಲಿ ವಿವಾಹ ಸಮಾರಂಭದಲ್ಲಿ ಒಂದು ವಿಚಿತ್ರ ಪರಂಪರೆ ಬೆಳೆದು ಬಂದಿದೆ. ವಿವಾಹ ಭೋಜನ ಕಾಲದಲ್ಲಿ ವಧು-ವರರನ್ನು ಎದುರುಬದುರಾಗಿ ಕೂಡಿಸುವರು. ವಿಳೇದೆಲೆಯನ್ನು ಸುತ್ತಿ ವಧುವಿಗೆ ಕೊಡುವರು. ಅವಳು ಆ 'ವಿಡೀ'-(ಸಂ. ವೀಟಿಕಾ) ಯನ್ನು ಮುಂದಿನ ಹಲ್ಲುಗಳಿಂದ ಗಟ್ಟಿಯಾಗಿ ಕಚ್ಚಿ ಹಿಡಿಯುತ್ತಾಳೆ. ನೆರೆದ ಬಳಗ, ಆತಿಥಿಗಳು ಆ ಎಲೆಯ ಸುರುಳಿಯನ್ನು ಬೇರೆಬೇರೆಯಾಗಿ ಕಚ್ಚಿ ಕತ್ತರಿಸಲು ಸನ್ನೆ ಮಾಡುವರು. ವಧೂವರರೂ, ವಿವಾಹಕ್ಕೆ ನೆರೆದ ಜನಸಮೂಹವೂ ಈ ಮೋಜಿನ ಪ್ರಸಂಗದ ಸೊಗಸನ್ನು ಸವಿದು ನಕ್ಕು-ನಲಿಯುವರು. ಸೂಚನೆಯಾದೊಡನೆ 'ವಿಡೀ'ಯನ್ನು ಅವರಿಬ್ಬರೂ ಹಲ್ಲಿನಿಂದ ಕಚ್ಚಿ ತುಂಡರಿಸುತ್ತಾರೆ. 'ವಿಡೀ'ಯ ಇಂಥ ಮನರಂಜಕ ಸನ್ನಿವೇಶ ಮತ್ತೆ ಮತ್ತೆ ಪುನರಾವೃತ್ತಿಯಾಗುತ್ತದೆ. ಭೋಜನ ಕಾಲದಲ್ಲಿಯೂ ಆಹಾರ ಪದಾರ್ಥಗಳನ್ನು ವಧೂ-ವರರು ಬಾಯಲ್ಲಿ ಕಚ್ಚಿಕೊಂಡು ಕಸಿದುಕೊಳ್ಳುವರು. ಆ ವರೆಗೆ ದೂರ ದೂರವಿದ್ದ ಮದುಮಕ್ಕಳ ಮೋರೆಗಳು ಮುತ್ತು ಕೊಡುವಷ್ಟು ಸಮೀಪಕ್ಕೆ ಜನರೆದುರಿಗೇ ಬರುತ್ತವೆ. ಸಾಮಾನ್ಯವಾಗಿ ಹಿಂದೂ ಸಮಾಜದಲ್ಲಿ ಇಂಥ ನಡತೆಗೆ ಅವಕಾಶವಿಲ್ಲ. ಮರಾಠೀ 'ಶಬ್ದಕೋಶ'ದಲ್ಲಿ, "ವಿಡಿ ಕರೂನಿ ಸಮರ್ಪಿ ಮಹಾಸತೀ," "ಲಗ್ನ ಸಮಾರಂಭಾಂತ. ವಧೂವರಾಂಸ ತೋಡಣ್ಯಾಸಾಠೀ ದೇಣ್ಯಾಂತಂ ಯೇಣಾರೀ ಪಾನಾಚೀ ಸುರುಳೀ, ಲವಂಗ, ಖೋಬತ್ಯಾಚೀ ಕಾಚಳೀ" ಮೊದಲಾದುವನ್ನು ಹೇಳಲಾಗಿದೆ. ವಿವಾಹ ಕಾಲದ ವಿಡೀ ಪ್ರಸಂಗದ ಉಲ್ಲೇಖ ಮರಾಠಿ ಸಾಹಿತ್ಯದಲ್ಲಿದೆಯೇ ಎಂಬುದಿನ್ನೂ ತಿಳಿದು ಬಂದಿಲ್ಲ. ಮುಂಬಯಿ ಗ್ಯಾಝೆಟಿಯರ್‌ದಲ್ಲಿ (ಕ್ರಿ.ಶ. ೧೮೮೫), ಮರಾಠಿ-ಇಂಗ್ಲೀಷ ಶಬ್ದಕೋಶದಲ್ಲಿ (ಕ್ರಿ.ಶ. ೧೮೫೭) ಸೂಚನೆಗಳಿವೆ. ಈ ರೂಢಿ ಕ್ರಿ.ಶ. ೧೮೫೭ಕ್ಕೂ ಪೂರ್ವದಲ್ಲಿತ್ತೇ ಎಂಬ ಬಗ್ಗೆ ಸಾಕಷ್ಟು ಆಧಾರಗಳು ದೊರೆತಿರುವುದಿಲ್ಲ. ಪ್ರಣಯಿಗಳಲ್ಲಿ, ಸತಿ-ಪತಿಗಳಲ್ಲಿ ತಾಂಬೂಲವು ಕಾಮೋದ್ರೇಕವನ್ನುಂಟುಮಾಡುತ್ತದೆಂದು ವರಾಹಮಿಹಿರನೇ ಹೇಳಿರುವನು. ತ್ರಯೋದಶ ಗುಣಗಳಲ್ಲಿ ಇದೂ ಒಂದೆಂದು ಮೇಲೆ ನೋಡಿರುವೆವು.

"ಬಾಲಚುಂಬನ ಮಾಲಿಂಗನಂ ಚ; ಜಿಹ್ವಯಾ ಚಾಸ್ಯ ತಾಂಬೂಲ ದಾನಂ"—ವಾತ್ಸ್ಯಾಯನನ ಕಾಮಸೂತ್ರ—ಪ್ರಣಯಿಗಳಲ್ಲಿ ಈ ತಾಂಬೂಲ ಚೇಷ್ಟೆ ನೀತಿಬದ್ಧ; ಕ್ರಮಪ್ರಾಪ್ತವೆಂದೇ ಗ್ರಹಿತ. ಪ್ರಣಯಿಗಳು ಒಬ್ಬರನ್ನೊಬ್ಬರು ತಾಂಬೂಲ ಕೇಳಿ ಬಾಯಿಂದ-ಬಾಯಿಗೆ ವಿನಿಮಯಿಸುವ ಬಗ್ಗೆ ಹಲವಾರು ಆಧಾರಗಳು ದೊರೆಯುತ್ತಿವೆ. ಶ್ರೀಹರ್ಷನು (ಕ್ರಿ.ಶ. ೧೨ನೆಯ ಶ.ಮಾ.) ತನ್ನ ನೈಷಧ ಚರಿತೆಯಲ್ಲಿ ನಳ-ದಮಯಂತಿಯರ ವಿಷಯವಾಗಿ,

" ಜಾಗರ್ತಿ ತತ್ರ ಸಂಸ್ಕಾರಃ ಸ್ವಮುಖಾದ್ಭವದಾನನೇ |
ನಿಕ್ಷಿಪ್ಯಾಯಾಚಿಷಂ ಯತ್ತಾ ನ್ಯಾಯಾತ್ತಾಂಬೂಲ
ಫಾಲಿಕಾಃ ॥ "

ಎಂದಿದ್ದಾನೆ. ಬೆಳಗಿನಲ್ಲಿ, ಊಟದ ಕಾಲದಲ್ಲಿ, ಸ್ತ್ರೀಯ ಜೊತೆಯಲ್ಲಿ, ಅರಮನೆಯಲ್ಲಿ, ಪಂಡಿತರ ಜೊತೆಯಲ್ಲಿ ತಾಂಬೂಲ ಸ್ವೀಕರಿಸದವನು ಪಶುಸಮಾನ.

ಭಾರತೀಯ ಆರ್ಯರಲ್ಲಿ ತಾಂಬೂಲ ಸೇವನೆಯ ಪದ್ಧತಿ ಸುಮಾರು ೨೦೦೦ ವರುಷಗಳ ಹಿಂದೆಯೇ ಇತ್ತೆಂದು ಮೇಲಿನ ವಿಷಯಗಳ ಆಧಾರದಿಂದ ಹೇಳಬಹುದಾಗಿದೆ. ನಮ್ಮ ಸಾಮಾಜಿಕ ಜೀವನದಲ್ಲಿ ಮೂರು 'T' (ಟ)ಗಳು ಸೇರಿಕೊಂಡಿವೆ. ೧. ಟೀ-Tea, ೨. Tobacco-ತಂಬಾಕು. ಇವೆರಡೂ ನಮ್ಮ ದೇಶಕ್ಕೆ ಕ್ರಿ.ಶ. ೧೬೦೦ ನಂತರ ಬಂದವುಗಳು. ಮೂರನೆಯದಾದ ತಾಂಬೂಲ ಮಾತ್ರ ಗುಪ್ತರ ಆಳಿಕೆಯ ಪೂರ್ವದಲ್ಲಿಯೇ ಆಮದಾಗಿದ್ದು ಭಾರತೀಯರ ಜೀವನದಲ್ಲಿ ಸ್ವಾಭಾವಿಕವಾಗಿಯೇ ಹಾಸುಹೊಕ್ಕಾಗಿ ನಿಂತು ಬೆಳೆದುಬಂದದೆ. ಇದರಿಂದ ಭಾರತಕ್ಕೆ ತಾಂಬೂಲವು ಪರದೇಶದಿಂದ ಬಂದಿತೆಂಬ ಕಲ್ಪನೆಯೂ ಬಾರದಂತಾಗಿದೆಂಬಲ್ಲಿ ಸಂದೇಹವಿಲ್ಲ.

## ೭. ತಾಂಬೂಲದಲ್ಲಿ ಸುಣ್ಣ, ಕಾಚು

(ಕ್ರಿ. ಶ. ೧೦೦ರಿಂದ ೧೯೦೦)

ಬಾಯಿಯನ್ನು ಕೆಂಪಾಗಿಸುವ ಸುಣ್ಣ, ಕಾಚುಗಳ ಇತಿಹಾಸ ಕೆಲಮಟ್ಟಿಗೆ ತಿಳಿಯುತ್ತಿದ್ದರೂ, ನಮ್ಮ ಪ್ರಾಚೀನರು ಉಪಯೋಗಿಸುತ್ತಿದ್ದ ಸುಣ್ಣದ ಮಡಕೆಯ ಬಗೆಗೆ ಸಾಹಿತ್ಯಕ ಆಧಾರಗಳು ಸಿಗುತ್ತಿಲ್ಲ. ತಾಂಬೂಲ ದಲ್ಲಿಯ ಸುಣ್ಣ, ಕಾಚು, ಬಾಯಿಯನ್ನು ಕೆಂಪಾಗಿಸುತ್ತಿವೆ. ತಾಂಬೂಲದ ಮುಖ್ಯ ಘಟಕಗಳಾದ ಇವುಗಳ ಇತಿಹಾಸ ವನ್ನು ತಿಳಿದುಕೊಳ್ಳಬೇಕಾದುದು ಅತ್ಯವಶ್ಯ. ರಮ್ಯ ದೇವಭಟ್ಟನು ಚಕ್ರಪಾಣಿನಾಥನ ಕೃತಿ 'ಭಾವೋಪಹಾರ' ದಲ್ಲಿಯ ಶ್ಲೋಕವೊಂದರ ಮೇಲೆ ಬರೆದ ಟಿಪ್ಪಣಿಯಲ್ಲಿ 'ತಾಮ್ರಭವಾ ಮೂಲಂ ಅಖಿಲೋಪರಂಜಕತ್ವಾತ್' ಆದುದರಿಂದಲೇ ತಾಂಬೂಲ ಶಬ್ದ ಬಂತೆಂದು ಹೇಳುವನು. 'ತಾಂಬೂಲ' ಶಬ್ದದ ಉತ್ಪತ್ತಿಯ ಬಗ್ಗೆ ಹೆಚ್ಚಿನ ಅಭ್ಯಾಸ ನಡೆಯಬೇಕಾಗಿದೆ.

ಕ್ರಿ.ಶ. ೧೬೭೭ರಲ್ಲಿದ್ದ ರಘುನಾಥ ಪಂಡಿತನು ತನ್ನ 'ರಾಜವ್ಯವಹಾರ ಕೋಶ'ದಲ್ಲಿ ಸುಣ್ಣಕ್ಕೆ "**ಚೂನಾ** ನಾಮ ಭವೇಚ್ಚೂರ್ಣಮ್" ಎಂದೂ, ಸುಣ್ಣದ ಮಡಕೆಗೆ "**ಚುನಾಲಃ** ಸ್ಯಾತ್ ಚೂರ್ಣಪಾತ್ರಮ್" ಎಂದೂ ಹೇಳುವನು. ಮರಾಠಿ 'ಶಬ್ದಕೋಶ'ದಲ್ಲಿ ಸುಣ್ಣದ ಪಾತ್ರೆಗೆ 'ಚುನಳ, ಚುನಾಳ, ಚುನಾಳೀಂ' ಎಂಬಪದ ಗಳಿದ್ದು ಇವುಗಳ ಮೂಲ ಸಂಸ್ಕೃತದ ಚೂರ್ಣ+ಆಲಯ =ಚೂರ್ಣಾಲಯ=ಚೂರ್ಣಪಾತ್ರ ಇರಬೇಕೆಂದು ಹೇಳಿದ್ದರೂ ಆ ಶಬ್ದಗಳ ಪ್ರಯೋಗಗಳ ಬಗೆಗೆ ಏನನ್ನೂ ಹೇಳುತ್ತಿಲ್ಲ. ಸಂಸ್ಕೃತ ಸಾಹಿತ್ಯದಲ್ಲಿಯೂ 'ಚೂರ್ಣಾ ಲಯ' ಅಥವಾ 'ಚೂರ್ಣಪಾತ್ರ'ಗಳ ಪ್ರಯೋಗ ಈ ವರೆಗೆ ಕಂಡುಬಂದಿಲ್ಲ.

ಇಂಡೋಚಾಯನಾದಲ್ಲಿಯೂ ತಾಂಬೂಲ ತಿನ್ನು ವುದುಂಟು. ಜೇನ್ಸರವರು ಇಂಡೋಚಾಯನಾ ಮತ್ತು ಫಿಲಿಪಾಯಿನ್ಸ ದ್ವೀಪಗಳಲ್ಲಿ ಪ್ರವಾಸಮಾಡಿ ಅಲ್ಲಿಯ ಒಂದು ಸುಣ್ಣದ ಪಾತ್ರೆಯ ಫೋಟೋವನ್ನು ಪ್ರಕಟಿಸಿ, ಅದು ಸುಂಗ (ಕ್ರಿ.ಶ. ೯೬೦-೧೧೨೭) ಅಥವಾ ಮಿಂಗ (ಕ್ರಿ.ಶ. ೧೩೬೮-೧೬೪೪) ಅರಸು ಮನೆತನಗಳ ಕಾಲ ದ್ದೆಂದು ಹೇಳಿದ್ದಾರೆ. ಯಾವ ಅರಸು ಮನೆತನದ ಕಾಲ ದ್ದೆಂದು ಖಚಿತವಾಗಿ ತಿಳಿಯುತ್ತಿಲ್ಲ. ಸುಂಗ ಅರಸರ ಕಾಲದ್ದೆಂದೇ ಗ್ರಹಿಸಿದರೂ ಆ ಮೊದಲು ಇಂಡೋಚೀನಾ ದಲ್ಲಿ ತಾಂಬೂಲದಲ್ಲಿ ಸುಣ್ಣವನ್ನು ಉಪಯೋಗಿಸುವ ಪದ್ಧತಿ ಕ್ರಿ.ಶ. ೯೬೦ರ ಮೊದಲು ಇರಲಿಲ್ಲವೆಂದೇ ಹೇಳ ಬಹುದಾಗಿದೆ.

ಯೂಲ್ ಮತ್ತು ಬರ್ನೆಲ್ (ಕ್ರಿ.ಶ. ೧೯೦೩) ರು ಕ್ರಿ. ಶ. ೧೫೧೧ ರಿಂದ ಕ್ರಿ. ಶ. ೧೬೭೮ರ ವರೆಗಿನ ಕೆಲವು ಸಂದರ್ಭಗಳನ್ನು ವಿವರಿಸಿ ತಾಂಬೂಲದಲ್ಲಿ 'ಚುನಾ', 'ಚುನಮ್', 'ಚಿನಂ'ಗಳನ್ನು ಉಪಯೋಗಿಸುತ್ತಿದ್ದು ದನ್ನೂ, ಸುಣ್ಣವನ್ನು 'oyster shells' ಅಥವಾ 'cockle-shells' ಗಳಿಂದ ತಯಾರಿಸುತ್ತಿದ್ದು ದನ್ನೂ ಸಾಧಾರವಾಗಿ ವಿವರಿಸಿದ್ದಾರೆ. ನಮ್ಮ ದೇಶದ ಕೆಲವು ಭಾಗಗಳಲ್ಲಿ ಸುಣ್ಣ ತಯಾರಿಸುವ ರೀತಿ ಇಂದಿಗೂ ಹೀಗೆಯೇ ನಡೆದುಬಂದಿದೆ. 'ಮಾನಸೋಲ್ಲಾಸ' (ಕ್ರಿ.ಶ. ೧೧೩೦) ದಲ್ಲಿ ಸುಣ್ಣವನ್ನು Pearl-oysters ದಿಂದ ತಯಾರಿಸುವರೆಂದು ಹೇಳಿದೆ.

'ಶಿವಸಂಹಿತಾ' ಮತ್ತು 'ಯೋಗಸಿದ್ಧಾಂತ-ಚಂದ್ರಿಕಾ' ದ ಟೀಕೆಯಲ್ಲಿ ನಾರಾಯಣತೀರ್ಥನು ಯೋಗಾಭ್ಯಾಸಿಯು ಸುಣ್ಣರಹಿತ ತಾಂಬೂಲ ತಿನ್ನಬೇಕೆಂದೂ, ಯೋಗಿಗೆ ತಾಂಬೂಲವೂ ಒಂದು ಮೋಹಕವಾದ ಪ್ರತಿಬಂಧವೆಂದೂ ಹೇಳಲಾಗಿದೆ. ತಾಂಬೂಲದಲ್ಲಿ ಸುಣ್ಣವನ್ನುಪಯೋಗಿ ಸುವ ಬಗೆಗೆ ದೊರೆಯುವ ಅತಿ ಪ್ರಾಚೀನ ಆಧಾರವೆಂದರೆ ವರಾಹಮಿಹಿರನ (ಕ್ರಿ. ಶ. ೫೦೦) 'ಬೃಹತ್ ಸಂಹಿತೆ' ಯಲ್ಲಿ,

"ಯುಕ್ತೇನ ಚೂರ್ಣೇನ ಕರೋತಿ ರಾಗಂ
ರಾಗಕ್ಷಯಂ ಪೂಗಫಲಾತಿರಿಕ್ತಮ್ ।
ಚೂರ್ಣಾಧಿಕಂ ವಕ್ತ್ರವಿಗಂಧಕಾರಿ
ಪತ್ರಾಧಿಕಂ ಸಾಧು ಕರೋತಿ ಗಂಧಮ್ ॥

'ಚರಕಸಂಹಿತಾ' ದಲ್ಲಿ ಮಾತ್ರ ತಾಂಬೂಲದ ಘಟಕ ವಾದ ಸುಣ್ಣದ ಬಗೆಗೆ ಏನನ್ನೂ ಹೇಳಿರುವುದಿಲ್ಲ.

"ಖಾದಿರಃ ಖದಿರೋದ್ಭೂತಃ ತತ್ಸಾರೋ ರಂಗದಃ ಸ್ಮೃತಃ ।
ಜ್ಞೇಯಃ ಖದಿರಸಾರಶ್ಚ ತಥಾರಂಗಃ ಷಡಾಹ್ವಯಃ ॥

ನರಹರಿಯ ರಾಜನಿಘಂಟು (ಕ್ರಿ.ಶ. ೧೪೫೦) ವಿನಲ್ಲಿ ಖದಿರಗಿಡದಿಂದ ತಯಾರಿಸಲ್ಪಟ್ಟ ಖದಿರಸಾರ-ಕಾಚು- ತಾಂಬೂಲದಲ್ಲಿ ಬಣ್ಣವನ್ನು ಹುಟ್ಟಿಸುವುದೆಂದು ಸ್ಪಷ್ಟ ವಾಗಿ ಹೇಳಿದೆ. ಅರ್ಜುನ ಅಥವಾ ಕುಟಜ ವನಸ್ಪತಿಯಿಂದ ತಯಾರಾದ ಸುಣ್ಣದ ಗುಣ-ಧರ್ಮಗಳನ್ನೂ, ಖದಿರ ರಸದ ಉಪಯೋಗವನ್ನೂ ನರಹರಿಯು ವಿವರಿಸಿದ್ದಾನೆ.

ಚೂರ್ಣಾ ಚಾರ್ಜುನವೃಕ್ಷಜಂ ಕಫಹರಂ ಗುಲ್ಮಘ್ನ ಮರ್ಶೋಹ್ವಯಮ್
ಕೋಘಘ್ನಂ ಕುಟಜಂ ಕರಂಜ ಜನಿತಂ ವಾತಾಪಹಂ ರುಚ್ಯದಮ್ ।
ಪಿತ್ತಘ್ನಂ ಜಲಜಂ ಬಲಾಗ್ನಿರುಚಿದಂ ಶೈಲಾಹ್ವಯಂ ಪಿತ್ತದಮ್
ಸ್ಫಾಟಿಕ್ಯಂ ದೃಢದಂತ ಪಂಕ್ತಿಜನನಂ ಶುಕ್ತ್ಯಾದಿಜಂ ರೂಕ್ಷದಮ್ ॥

ತಾಂಬೂಲ ಲಕ್ಷಣವ್ :

> ಪರ್ಣಾಧಿಕ್ಯೇ ದೀಪನೀ ರಂಗದಾತ್ರೀ
> ಚೂರ್ಣಾಧಿಕ್ಯೇ ರೂಕ್ಷದಾ ಕೃಚ್ಛ್ರದಾತ್ರೀ।
> ಸಾರಾಧಿಕ್ಯೇ ಖಾದಿರೇ ಶೋಷದಾತ್ರೀ
> ಚೂರ್ಣಾಧಿಕ್ಯೇ ಪಿತ್ತಕೃತ್ಪೂತಿಗಂಧಾ॥

ಕ್ರಿ. ಶ. ೬-೭ನೆಯ ಶ.ಮಾ.ದ ಅಷ್ಟಾಂಗ ಸಂಗ್ರಹ ದಲ್ಲಿಯೂ ಸುಣ್ಣ, ಕಾಚುಗಳ ಉಲ್ಲೇಖವಿದೆ. ಚರಕ, ವಾಗ್ಭಟ, ಹಾರೀತಾ, ಧನ್ವಂತರೀ ನಿಘಂಟು ಮುಂತಾದವುಗಳಲ್ಲಿ ಹೇಳಿದ ಸುಣ್ಣ-ಕಾಚುಗಳ ವರ್ಣನೆಯಿಂದ ಸುಮಾರು ೨೦೦೦ ವರುಷಗಳಿಂದಲೇ ಇವು ತಾಂಬೂಲದ ಮುಖ್ಯ ಘಟಕಗಳಾಗಿ ಬಳಕೆಯಲ್ಲಿ ಬಂದುವೆಂದು ತಿಳಿಯಬಹುದು. ಕಾಚಿನಲ್ಲಿರುವ ವೈದ್ಯಶಾಸ್ತ್ರದ ಗುಣಧರ್ಮಗಳು ಹೀಗಿವೆ:

"Powerful astringent, stronger than Kino, antiperiodic and digestive. Its action is due to the 'tannic acid' it contains. It is powerful astringent to the mucous membrances, given in dyspepsia attended with pyrosis, and also diarrhoea in children; in dysentery, intermittent fevers and scurvy, as a gargle in hoarseness of voice and soar throat. Locally as a dusting powder, hypertrophied relaxed tonsils, ulcerated and spongy gums and to control passive haemorrhages."

ಶಬ್ದಕೋಶಕಾರ 'ವೈಜಯಂತಿ' (ಕ್ರಿ.ಶ. ೧೦೫೦) ಮತ್ತು 'ಮೇದಿನೀ' (ಕ್ರಿ.ಶ. ೧೨೦೦-೧೨೭೫) "ಸಿತೇ ತು ತಸ್ಮಿನ್ ಕದಿರಃ", 'ಕದರಃ ಖದಿರೇ ಸ್ವೇತೇ' ಎಂದು ಬಿಳಿಕಾಚನ್ನು ಸೂಚಿಸಿರುವರು. ಕಾಚಿನಲ್ಲಿ ಚಂದನ, ಲವಂಗ, ಕಕ್ಕೋಲ, ಜಾತಿಕೋಶ, ಮಂಜಿಷ್ಠಾ, ಘಾತಕೀ, ಏಲಾ (ಯಾಲಕ್ಕಿ) ಇತ್ಯಾದಿಗಳ ಗುಣಧರ್ಮಗಳು ಒಳಕೊಂಡಿರುತ್ತವೆ. ಇವುಗಳಲ್ಲಿ ಕೆಲವನ್ನು ನಾವು ಇಂದಿಗೂ ತಾಂಬೂಲದಲ್ಲಿ ಹಾಕಿಕೊಳ್ಳುವೆವು. ಖದಿರ ಗುಟಿಕಾ-ಕಾಚಿನ ಗುಳಿಗೆಗಳನ್ನೂ ಮಾಡಿಕೊಳ್ಳುತ್ತಿದ್ದರೆಂದು ಮಾನಸೋಲ್ಲಾಸದಲ್ಲಿ ಹೇಳಿದೆ.

ಕ್ರಿ. ಶ. ೧೯೦೩ರ 'ಹಾಬ್‌ಸನ್-ಜಾಬ್‌ಸನ್'ದಲ್ಲಿ ಕಾಚು ಶಬ್ದ ಮೂಲತಃ ದ್ರಾವಿಡ ಭಾಷೆಗಳಾದ ತಮಿಳು-'ಕಾಸು'; ಕನ್ನಡ-'ಕಾಚು'ಗಳಿಂದ ಬಂದಿರಬೇಕೆಂದಿರುವುದು ನಿಜವಾಗಿಯೂ ಗಮನಾರ್ಹವಾಗಿದೆ. ಋಗ್ವೇದದಲ್ಲಿಯೂ ಖಯರ-(ಖದಿರ) ಗಿಡದ ಹೆಸರು ಸಿಗುತ್ತಿದೆ. ಪ್ರಾಚೀನ ಕಾಲದಲ್ಲಿ ಖದಿರ ಗಿಡದಿಂದಲೇ 'ಯಜ್ಞಸ್ತಂಭ'ವನ್ನು ಮಾಡುತ್ತಿದ್ದರೆಂದು ತಿಳಿಯುತ್ತಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೂ ಖದಿರ, ಸೋಮವಲ್ಕ (ಬಿಳಿಯ ಖದಿರ)ಗಳನ್ನು ಕಾಣಬಹುದು. ಹರ್ಥರವರು ಮಿಂಗ್ (ಕ್ರಿ.ಶ. ೧೩೬೮-೧೬೪೪) ಅರಸರ ಕಾಲಕ್ಕೆ ಇಂಡೋಚೀನಾದಲ್ಲಿ ಖದಿರದ ಪರಿಚಯವಿತ್ತೆಂದು ಹೇಳಿದರೆ, ಬರ್ಥೋಲ್ಡ ಲಾಫ್‌ರ್‌ರು ಹರ್ಥರ ಅಭಿಪ್ರಾಯವನ್ನು ಖಂಡಿಸಿ ಖದಿರವು ಚೀನೀಯರಿಗೆ ಗೊತ್ತಿತ್ತೆಂದೂ, ಚೀನಾ ಅದಕ್ಕೆ 'er-ca' ಅಥವಾ 'hai'r-ca' ಎಂಬ ಹೆಸರಿತ್ತೆಂದೂ ಹೇಳುವರು. 'ಸುಶ್ರುತ ಸಂಹಿತಾ'ದಲ್ಲಿ ಖದಿರ ಗಿಡದಿಂದ ಕಾಚನ್ನು ತಯಾರಿಸುವ ವಿಧಾನವನ್ನು ವಿವರವಾಗಿ ಹೇಳಲಾಗಿದೆ. ಖದಿರಾ ಗಿಡ ಕಸುವಿನ ಭೂಮಿಯಲ್ಲಿ ಬೆಳೆಯುವದು. ಮಧ್ಯಮ ವಯಸ್ಸಿನ ಗಿಡದ ಬುಡದಲ್ಲಿ ಸುತ್ತಲೂ ನೆಲವನ್ನು ಅಗಿಯಬೇಕು. ತಾಯಿಬೇರನ್ನು ಹುಡುಕಿ ಆದಕ್ಕೆ ಈಚಲಗಿಡಗಳಿಗೆ ಹಾಕುವಂತೆ ಕಚ್ಚುಹಾಕಬೇಕು. ಆ ಕಚ್ಚಿನಿಂದ ಒಂದು ಬಗೆಯ ರಸ ಒಸರುತ್ತದೆ. ಆ ರಸ ಹಿಡಿಯಲು ಕಬ್ಬಿಣದ ಅಥವಾ ಕಂಚಿನ ಪಾತ್ರೆಯನ್ನು ಕಟ್ಟಬೇಕು. ಆ ಪಾತ್ರೆಯ ಹೊರಮೈಯನ್ನು ಶಗಣಿ ಮತ್ತು ಮಣ್ಣಿನಿಂದ ಮೆತ್ತಬೇಕು. ರಸವು ಪೂರ್ತಿಯಾಗಿ ಬಂದನಂತರ ಕಾಕುಳ್ಳು ಮತ್ತು ಕಟ್ಟಿಗೆಯ ಬೆಂಕಿಯಲ್ಲಿಟ್ಟು ರಸವನ್ನು ಕುದಿಸಬೇಕು. ಆನಂತರ ಕುದಿದ ರಸವನ್ನು ಬೇರೆ ಪಾತ್ರೆಗೆ ಹಾಕಿ ಗಟ್ಟಿಯಾಗಿ ಬಾಯಿಮುಚ್ಚಿಡಬೇಕು. ಈ ವಿವರಣೆಯಿಂದ ನಮ್ಮ ಪೂರ್ವಜರು ವನಸ್ಪತಿಯಿಂದ ಔಷಧಗಳನ್ನು ತಯಾರಿಸುತ್ತಿದ್ದುದನ್ನೂ ಅರಿತುಕೊಳ್ಳಬಹುದು.

ಕ್ರಿ.ಶ. ೧೬೫೦-೧೭೨೫ರಲ್ಲಿ ರಚಿತವಾದ 'ಯೋಗರತ್ನಾಕರ'ದಲ್ಲಿ,

೧. ಪೂಗ (ಅಡಿಕೆ)
೨. ಕರ್ಪೂರ
೩. ಕಸ್ತೂರಿ
೪. ಲವಂಗ
೫. ಸುಮನಸ್ (ಜಾಜೀಕಾಯಿ)
೬. ವೀಳೇದೆಲೆ (ಬಿಳಿ ಮಿಶ್ರಿತ ಹಳದಿ ಬಣ್ಣದ್ದಿರಬೇಕು) ಬಂಗಾಲದ ಎಲೆ ಪ್ರಸಿದ್ಧ
೭. ಖದಿರ (ಕಾಚು)
೮. ಚೂನಮ್ (ಸುಣ್ಣ)

ತಂಬಾಕನ್ನು ಪ್ರತ್ಯೇಕವಾಗಿ ಇಲ್ಲವೆ ತಾಂಬೂಲದಲ್ಲಿ ತಿನ್ನುವರೆಂದೂ ಬೇರೆಡೆಗೆ ಹೇಳಿದೆ. ಮೇಲಿನ ಆಧಾರ ಗಳಿಂದ ತಾಂಬೂಲದಲ್ಲಿ ಸುಣ್ಣ-ಕಾಚುಗಳನ್ನು ಸೇರಿಸುವ ಸಂಪ್ರದಾಯ ಕ್ರಿ.ಶ. ಪ್ರಾರಂಭದಿಂದಲೇ ಪ್ರಾರಂಭವಾಗಿರ ಬೇಕೆಂದು ತಿಳಿಯುವದು.

ಪೆನಿನ್‌ಸುಲಾ (ಐಬೀರಿಯನ್ ದ್ವೀಪ)ದಲ್ಲಿ ಹುಂಗ ವಾಂಗ (ಕ್ರಿ.ಶ.ಪೂ. ೨೨೮೦-೨೫೪) ಅರಸು ಮನೆತನದ ಕಾಲದ ಒಂದು ಕತೆ ತಾಂಬೂಲದ ಹುಟ್ಟನ್ನು ತಿಳಿಸು ತ್ತದೆ. ಹಿಂದಕ್ಕೆ ಕಾನ್-ಲಾಂಗ ಎಂಬ ಅರಸನಿದ್ದನು. ಅವನಿಗೆ ತಾನ್ ಮತ್ತು ಲಾಂಗ ಎಂಬ ಇಬ್ಬರು ಸ್ಫುರ ದ್ರೂಪಿ ಗಂಡುಮಕ್ಕಳು. ಅಣ್ಣ-ತಮ್ಮಂದಿರಲ್ಲಿ ಇಷ್ಟೊಂದು ಏಕರೂಪವಿತ್ತು, ಅಣ್ಣನಾರು? ತಮ್ಮನಾರು? ಎಂದು ಗುರುತಿಸುವುದೇ ಸಾಧ್ಯವಾಗುತ್ತಿರಲಿಲ್ಲ. ೧೭-೧೮ ವಯಸ್ಸಿಗೆ ಅವರಿಬ್ಬರೂ ಪರದೇಶಿಗಳಾದರು. ವಿದ್ಯಾ ಗುರುವನ್ನರಸುತ್ತ ಅಲೆದಾಡಿದರು. ಕೊನೆಗೆ ಒಬ್ಬ ಗುರುವಿನಲ್ಲಿ ವಿದ್ಯಾಭ್ಯಾಸ ಪ್ರಾರಂಭಿಸಿದರು. ಗುರುಪುತ್ರಿ ಲುನ್‌ಹುಯೆನ್‌ಳು ೧೭ ವರ್ಷದ ಸುಂದರ ತರುಣಿ. ತನ್ನ ತಂದೆಯ ಶಿಷ್ಯರಿಬ್ಬರ ರೂಪಕ್ಕೆ ಮರುಳಾಗಿ ಮೋಹ ಗೊಳ್ಳುವಳು. ಆದರೆ ಹಿರಿಯನಾರು? ಕಿರಿಯನಾರು? ಎಂಬುದೇ ಅವಳಿಗೆ ತಿಳಿಯಲಾರದ ಸಮಸ್ಯೆಯಾಗುತ್ತದೆ. ಪರಿಹಾರ ಕಂಡುಹಿಡಿಯಲೆಂದು ಒಂದೇ ಬಟ್ಟಲು ಮಾಂಸದ ಸಾರು; ಎರಡೇ ಕಟ್ಟಿಗೆಯ ತುಣುಕುಗಳನ್ನು ಅವರಿಬ್ಬರೆದುರಿಗೆ ಇಡುತ್ತಾಳೆ. ಕಿರಿಯನು ಅಣ್ಣನ ಮುಂದೆ ಅವನ್ನು ಸರಿಸುವನು. ಕನ್ಯೆಯ ಇಚ್ಛೆಯ ಮೇರೆಗೆ ಅವಳ ತಾಯಿ-ತಂದೆಗಳು ಅಣ್ಣನ ಜೊತೆ ಅವಳ ವಿವಾಹ ಮಾಡುವರು. ನವ ದಂಪತಿಗಳು ಕೆಲಕಾಲ ಸ್ವತಂತ್ರವಾಗಿ ಬೇರೆ ಇರುತ್ತಾರೆ. ತಮ್ಮನು ಬಹುಕಾಲದ ವರೆಗೆ ಅಣ್ಣನನ್ನು ಕಾಣದೆ, ತನ್ನ ಅಣ್ಣನು ಹೆಂಡತಿಯ ಮೋಹಕ್ಕೆ ಬಲಿಯಾಗಿ ತನ್ನನ್ನು ಮರೆತನೆಂದೇ ಭಾವಿಸಿ ತುಂಬಾ ದುಃಖದಿಂದ, ಭಾರವಾದ ಹೃದಯದಿಂದ ತನ್ನ ಊರಿಗೆ ಹೊರಡುವನು. ದಾರಿಯಲ್ಲಿ ಒಂದು ಹಳ್ಳ. ದಾಟಲು ನಾವೆಯಿಲ್ಲ. ತಮ್ಮನು ಆ ಹಳ್ಳದ ದಂಡೆ ಯಲ್ಲಿಯೇ ಕುಳಿತು ಅಣ್ಣನ ವಿರಹದಿಂದ ಬಳಲಿ, ಹಂಬ ಲಿಸಿ ಅತ್ತು ಅತ್ತು ಸತ್ತುಹೋಗುತ್ತಾನೆ. ಅವನ ದೇಹವೇ ಅಡಕೆ ಮರವಾಗಿ ಬೆಳೆಯುವದು.

ಇತ್ತ ಅಣ್ಣನಿಗೆ ತಮ್ಮನು ಬಹುದಿನಗಳಿಂದ ಬರಲಿಲ್ಲ ವೆಂಬ ಚಿಂತೆ. ತಮ್ಮನನ್ನು ಹುಡುಕಲು ಹೆಂಡತಿಯನ್ನು ಬಿಟ್ಟು ಹೊರಡುವನು. ಮೇಲಿನ ಅಡಕೆ ಮರ ನೋಡಿ ದಾಗ (ಅವನಿಗೆ ಏನು ತಿಳಿಯಿತೋ!) ಆ ಮರ ಹತ್ತಿ ಕೆಳಗೆ ಹಾರಿಕೊಂಡು ಸಾಯುವನು. ಅಣ್ಣನ ದೇಹವೇ ಆ ಅಡಕೆ ಮರದ ಬುಡಕ್ಕೆ ಅಂಟಿಕೊಂಡು ದೊಡ್ಡ ಬಂಡೆ ಗಲ್ಲಾಗುವದು.

ತನ್ನ ಗಂಡನು ತಿರುಗಿ ಬಾರದಿರಲು ಚಿಂತಾಕ್ರಾಂತ ಳಾಗಿ ಪತಿಯನ್ವೇಷಣಕ್ಕೆ ಹೊರಡುವಳು. ಮೇಲಿನ ಸ್ಥಳಕ್ಕೆ ಬಂದಾಗ ತನ್ನ ಗಂಡ ಮರಣ ಹೊಂದಿರುವನೆಂದು ಅವಳಿಗೆ ಹೇಗೋ ತಿಳಿಯಿತು. ತತ್‌ಕ್ಷಣವೇ ಆ ಬಂಡೆ ಕಲ್ಲಿಗೆ ಹಾಯ್ದು ಪ್ರಾಣ ಹೋಗುವವರೆಗೆ ಅದನ್ನು ಅಪ್ಪಿ ಕೊಂಡೇ ಸಾಯುವಳು. ಅವಳ ದೇಹವೇ ಬಂಡೆಗಲ್ಲು, ಅಡಕೆ ಮರಗಳಿಗೆ ಹಬ್ಬಿಕೊಂಡು ಬಳ್ಳಿಯಾಗುವದು. ಆ ಬಳ್ಳಿಗೆ ಸುವಾಸನೆಯುಳ್ಳ ಎಲೆಗಳಾಗುತ್ತವೆ. ಇವೇ ವೀಳೇದೆಲೆಗಳು.

ಮೃತರ ಬಂಧುಗಳು ಬಂದು ಗೋಳಾಡುವರು. ಎಲ್ಲರೂ ಸೇರಿ ಮೃತರ ಸ್ಮಾರಕವೆಂದು ಒಂದು ಗುಡಿ ಕಟ್ಟಿಸಿ ಭ್ರಾತೃಪ್ರೇಮ ಮತ್ತು ದಾಂಪತ್ಯ ಪ್ರೇಮಗಳನ್ನು ಹೊಗಳುತ್ತಾರೆ.

ಹುಂಗ ಎಂಬ ಅರಸು ಪ್ರವಾಸಮಾಡುತ್ತ ಶರತ್ಕಾಲ ದಲ್ಲಿ ಈ ಸ್ಥಳಕ್ಕೆ ಬಂದು, ಆ ಮರ, ಆ ಬಂಡೆ, ಆ ಬಳ್ಳಿ ಗಳನ್ನೂ, ಆ ಗುಡಿಯನ್ನೂ ಕಂಡು ಆಶ್ಚರ್ಯಹೊಂದಿ ಅದರ ಇತಿಹಾಸವನ್ನೆಲ್ಲ ತಿಳಿದುಕೊಳ್ಳುವನು. ಆಗ ಆ ಗಿಡದ ಹಣ್ಣು, ಆ ಬಳ್ಳಿಯ ಎಲೆ ತರಿಸುತ್ತಾನೆ. ಅವೆರಡನ್ನೂ ಅಗಿದು ತಿಂದು ಆ ಬಂಡೆಯ ಮೇಲೆ ಉಗುಳಿದಾಗ ಆ ಉಗುಳು ಕೆಂಪು ಬಣ್ಣದ್ದಾಗಿರುತ್ತದೆ. ಬಾಯಿಯೆಲ್ಲ ಘಮ ಘಮ ಸುವಾಸನೆಯಾಗುತ್ತದೆ. ಕಾಯಿ, ಎಲೆ ಗಳನ್ನು ಅರಮನೆಗೆ ತಂದು ಸುಣ್ಣ ಹಚ್ಚಿಕೊಂಡು ತಿನ್ನು ತ್ತಾನೆ. ತಾಂಬೂಲದ ಸವಿಗೆ ಮರುಳಾದ ಅರಸನು ಆ ಗಿಡ-ಆ ಬಳ್ಳಿಗಳನ್ನು ತನ್ನ ಅರಮನೆಯ ಅಂಗಳದಲ್ಲಿಯೇ ಹಚ್ಚಿಸಿ ಬೆಳೆಸುವನು; ರಾಜ್ಯದಲ್ಲೆಲ್ಲ ಅವನ್ನು ಬೆಳೆಸು ವನು. ಈ ಅರಸನೇ ತನ್ನ ದೇಶದಲ್ಲೆಲ್ಲ ವಿವಾಹ ಮತ್ತಿನ್ನಿತರ ಸಮಾರಂಭಗಳಲ್ಲಿ ಅಡಕೆ-ಎಲೆಗಳನ್ನು ಸೇರಿಸಿ ಅತಿಥಿ-ಅಭ್ಯಾಗತರಿಗೆ ಕೊಡಬೇಕೆಂದು ಅಪ್ಪಣೆ ಹೊರಡಿಸಿ ದನು. ಅಂದಿನಿಂದ ಪೆನಿನ್‌ಸುಲಾದಲ್ಲಿ ತಾಂಬೂಲವು ಹುಟ್ಟಿಕೊಂಡಿತು. ಕ್ರಿ. ಶ. ಪೂರ್ವದಲ್ಲಿಯೇ ಇಂಡೋ ಚೀನಾದಲ್ಲಿ ತಾಂಬೂಲ ವಿತರಣೆ ಪ್ರಾರಂಭವಾಯಿತು. ನಮ್ಮಲ್ಲಿಯೂ ಇಂದಿಗೂ ಈ ಪದ್ಧತಿಯನ್ನೇ ಅನುಸರಿಸು ವೆವು. ತಾಂಬೂಲ ವಿತರಣೆಯ ಪದ್ಧತಿ ಭಾರತಕ್ಕೆ ಇಂಡೋಚೀನಾದಿಂದಲೇ ಬಂದಿದೆಯೇ? ವಿಚಾರಾರ್ಹ.

---

# ಗ್ರಂಥಾವಲೋಕನ

**ಹಿಮಗಿರಿಯ ಮಡಿಲಲ್ಲಿ:** ಲೇಖಕರು: ಶ್ರೀ ಬಿ. ಎ. ಸನದಿ, ಬೈಲಹೊಂಗಲ; ಪ್ರಕಾಶಕರು: ಚೇತನ ಪ್ರಕಾಶನ, ಬೆಳಗಾಂವಿ; ಆಕಾರ: ಕ್ರೌನ್ ೧/೮; ಪುಟಗಳು: ೪೬; ಬೆಲೆ: ೮೦ ನ. ಪೈ.

ಚೀಣೀಯರ ಆಕ್ರಮಣವನ್ನೆದುರಿಸಿ ರಣರಂಗದಲ್ಲಿ ಜೀವದ ಹಂಗು ತೊರೆದು ಹೋರಾಡಿದ ಭಾರತೀಯ ವೀರಯೋಧರಿಗೆ ಈ ಗ್ರಂಥವು ಸಮರ್ಪಿತವಾಗಿದೆ. ಮೈಸೂರು ಸರ್ಕಾರದ ವಾರ್ತಾ ಇಲಾಖೆಯ ಮುಖ್ಯಾಧಿಕಾರಿಗಳೂ, ಕನ್ನಡ ಕವಿಯೋಧರೂ, 'ಕಾವ್ಯಾನಂದ' ನಾಮಾಂಕಿತರೂ ಆದ ಶ್ರೀ ಸಿದ್ದಯ್ಯ ಪುರಾಣಿಕರು ಈ ಕವಿತಾ ಸಂಕಲನಕ್ಕೆ ಮುನ್ನುಡಿ ಬರೆದಿದ್ದಾರೆ. ಇದರಲ್ಲಿ ಇಪ್ಪತ್ತೆರಡು ಕವನಗಳಿವೆ. ಎಲ್ಲ ಕವನಗಳೂ ಉನ್ನತ ಮಟ್ಟದಲ್ಲಿವೆ. ಹಾಡಲು, ಓದಲು, ನಲಿಯಲು ಯೋಗ್ಯವಾಗಿವೆ. ಎಲ್ಲಕ್ಕಿಂತ ಮಿಗಿಲಾಗಿ ಈ ಕವನಗಳು ಸ್ಫೂರ್ತಿದಾಯಕವಾಗಿದ್ದು ಯುವಕ ಯುವತಿಯರನ್ನು ಹುರಿದುಂಬಿಸುತ್ತವೆ. ಮುನ್ನುಡಿಕಾರರು "ನನ್ನ ಸಹೋದ್ಯೋಗಿಗಳಾದ ಶ್ರೀ ಬಿ. ಎ. ಸನದಿಯವರೂ ಇನ್ನಿತರ ಕನ್ನಡ ಕವಿಗಳಂತೆ ಈ ಮಾತಿನ ಸತ್ಯತೆಗೆ ಸಾಕ್ಷಿಯಾಗಿ ತಮ್ಮ 'ಹಿಮಗಿರಿಯ ಮಡಿಲಲ್ಲಿ' ಎಂಬ ವೀರ ಗೀತ ಗುಚ್ಛದೊಡನೆ ಮುಂದೆ ಬಂದಿದ್ದಾರೆ. ಅವರಿಗೆ ಅಭಿನಂದನೆಗಳು. ಅವರ ಈ ವೀರಗೀತ ಸಂಗ್ರಹಕ್ಕೆ ಸ್ವಾಗತ-" ಎಂದು ಹೇಳಿರುವ ಮಾತುಗಳನ್ನು ನಾನೂ ಅನುಮೋದಿಸುತ್ತೇನೆ. ಎಲ್ಲ ಕನ್ನಡಿಗರೂ ಈ ಕವನಗಳನ್ನು ಹಾಡಲಿ, ಹವಸಲಿ ಎಂದು ಹಾರೈಸುತ್ತೇನೆ.

೨೬-೧-೬೧ ಎಂಬ ಹೆಸರಿನ ಒಂದು ಕವನವಂತೂ ಹೊಸ ಮಾದರಿಯದಾಗಿದ್ದು ಓದುಗರ ಮನವನ್ನು ಬೇಗನೆ ಆಕರ್ಷಿಸುತ್ತದೆ. ಪುಸ್ತಕದ ಕೊನೆಯಲ್ಲಿ ತಿದ್ದುಪಡಿ ಇದೆ. ಈ ತಿದ್ದುಪಡಿಯನ್ನು ಮುಂದಿನ ಮುದ್ರಣದಲ್ಲಿ ಸರಿಪಡಿಸಿ, ಮುಂದೆ 'ತಿದ್ದುಪಡಿ' ಬಾರದಂತೆ ಮಾಡಿದರೆ ಪುಸ್ತಕದ ಘನತೆ ನೂರ್ಮಡಿ ಹೆಚ್ಚುತ್ತದೆ.

**ಮನೋಲಹರಿ:** ಲೇಖಕರು: ಮದಗೊಂಡಹಳ್ಳಿ ಸುಂದರರಾಜ್; ಪ್ರಕಾಶಕರು: ಭಾರ್ಗವ ಪ್ರಕಾಶನ, ಹಿರೇಮಗಳೂರು, ಚಿಕ್ಕಮಗಳೂರು ಜಿಲ್ಲೆ; ಆಕಾರ: ಕ್ರೌನ್ ೧/೮; ಪುಟಗಳು: ೬೦; ಬೆಲೆ: ರೂ. ೧.

ಇದೊಂದು ಚಿಂತನ ಮಂಥನ ವರ್ಗಕ್ಕೆ ಸೇರಿದ ಹಾಸ್ಯ ಚಟಾಕಿಗಳ ಸಂಗ್ರಹ. ಸುಮಾರು ೭೧ ಚಟಾಕಿಗಳನ್ನು ಲೇಖಕರು ಹಾರಿಸಿ ಕನ್ನಡ ವಾಚಕ ವರ್ಗವನ್ನು ಆನಂದ ಸಾಗರದಲ್ಲಿ ಮುಳುಗಿಸಿದ್ದಾರೆ. ಈ ಲೇಖನಗಳಲ್ಲಿ ಹಾಸ್ಯ, ಗಾಂಭೀರ್ಯ ಹಾಗೂ ಧಾರ್ಮಿಕ ವಿಚಾರಗಳು ಅಡಗಿವೆ. 'ಮಹಾತ್ಮನ ಅವಶ್ಯಕತೆ ಏನಿತ್ತು?' 'ನಮಗಿಂತ ಎಷ್ಟು ಶ್ರೇಷ್ಠ?', 'ಗೂಬೆಯೂ ಸಹ ಮಾನವನನ್ನು ತೆಗಳುವಂತಾಯಿತೆ' 'ನಟನೆ-ಘಟನೆ', 'ಮಿತಿಮೀರಿದರೆ', 'ಬಂಧನದಲ್ಲೂ ಸುಖವಿದೆ', 'ಬರಹಗಾರನಿಗೊಂದು ಸಲಹೆ', 'ವಿಶ್ವ ಸಾಹಿತಿಗಳಿಂದ ಆದ ಪರಿಣಾಮ' 'ದೇವಾ ನೀಕಾಣದ್ದೇ ಒಳಿತಾಯ್ತು', 'ನೋವು-ನಲಿವು' ಮುಂತಾದ ಚುಟಕಗಳು ಬಹಳ ಸ್ವಾರಸ್ಯವಾಗಿವೆ. ಮುದ್ರಣ ಅಂದವಾಗಿದ್ದಷ್ಟು ರಕ್ಷಾಕವಚವು ಅಂದವಾಗಿಲ್ಲ. ಮುಖ್ಯವಾಗಿರಬೇಕಾದ 'ಅನುಕ್ರಮಣಿಕೆ' ಮಾಯವಾಗಿರುವುದು ಒಂದು ದೊಡ್ಡ ಕೊರತೆಯಾಗಿದೆ. ಈ ಲೇಖಕರಿಗೆ ಉಜ್ವಲ ಭವಿಷ್ಯವಿದೆ.

**ಬಾಲ ಬಂಧು (ಸಚಿತ್ರ):** ಲೇಖಕರು: ಸವ್ಯಸಾಚಿ; ಹಿರೇಮಗಳೂರು, ಪ್ರಕಾಶಕರು: ಭಾರ್ಗವ ಪ್ರಕಾಶನ, ಹಿರೇಮಗಳೂರು; ಆಕಾರ: ಕ್ರೌನ್ ೧/೮; ಪುಟಗಳು: ೬೪; ಬೆಲೆ: ೮೦ ನ. ಪೈ.

ಇದರಲ್ಲಿ ಹತ್ತೊಂಭತ್ತು ಸರಳ ಸುಂದರ ನೀತಿ ಕತೆಗಳಿವೆ. ಇವು ಚಿಕ್ಕ ಮಕ್ಕಳಿಗೆ ಯೋಗ್ಯವಾಗಿದ್ದು, ನೀತಿದಾಯಕವಾಗಿಯೂ ಇವೆ. ಇವರಲ್ಲಿರುವ ಪೌರಾಣಿಕ ಹಾಗೂ ಸಾಮಾಜಿಕ ಕತೆಗಳನ್ನು ಶ್ರೀ ಸವ್ಯಸಾಚಿಯವರು ಸ್ವಾರಸ್ಯವಾಗಿ ರಚಿಸಿದ್ದಾರೆ. ಇವರಿಂದ ಇಂಥ ಇನ್ನೂ ಅನೇಕ ಉತ್ತಮ ಕೃತಿಗಳು ಹೊರಬೀಳಲಿ.

**ನಾರದ ಜ್ಞಾನೋದಯ (ಮಕ್ಕಳ ನಾಟಕ):** ನಾಟಕಕಾರರು ಶ್ರೀ ಸವ್ಯಸಾಚಿ; ಗೀತಾ ಸಂಯೋಜನ 'ಕನ್ನಡತಾ ಜಾಣ', ಪ್ರಕಾಶಕರು: ಭಾರ್ಗವ ಪ್ರಕಾಶನ, ಹಿರೇಮಗಳೂರು; ಆಕಾರ: ಕ್ರೌನ್ ೧/೮; ಪುಟಗಳು: ೩೨ ಬೆಲೆ: ೫೦ ನ. ಪೈ.

ಇದೊಂದು ಚಿಕ್ಕ ನಾಟಕ, ಪೌರಾಣಿಕ ಆಧಾರಗಳಿಲ್ಲದ ಭಾವನಾ ಪ್ರಪಂಚದ ಒಂದು ನಾಟಕ. ನಾರದ ಮತ್ತು ಮಕರಂದರ ಸಂಭಾಷಣೆಯಲ್ಲಿ ಅನೇಕ ಅಶ್ಲೀಲ

ಪದಪ್ರಯೋಗಗಳಿವೆ. ಇವುಗಳನ್ನು ತಿದ್ದುವುದೊಳ್ಳೆಯದು. ಮಕ್ಕಳಿಗಾಗಿ ಬರೆದರೂ, ಮಕ್ಕಳು ಅಭಿನಯಿಸಲು ಅರ್ಹತೆ ಸಾಲದು. ಕೃಷ್ಣ ಮತ್ತು ನಾರದರ ಘನತೆಯನ್ನು ಗಾಳಿಯಲ್ಲಿ ತೂರುವಂತಹ ಒಂದೆರಡು ಸನ್ನಿವೇಶಗಳಿವೆ. ಅವುಗಳನ್ನು ಮುಂದಿನ ಮುದ್ರಣದಲ್ಲಾದರೂ ಸರಿಪಡಿಸುವುದೊಳ್ಳೆಯದು.

**ಏಳಿ–ಎದ್ದೇಳಿ** : ಲೇಖಕರು : ರಂ. ರಾ. ನಿಡಗುಂದಿ ; ಗುರುಕುಲ ಕುಕನೂರು, ಪ್ರಕಾಶಕರು : ಭೀ. ರಂ. ಕುಲಕರ್ಣಿ ನಿಡಗುಂದಿ ; ಆಕಾರ : ಫುಲ್ಸ್‌ಕೇಪ್ ೧/೮ ; ಪುಟಗಳು : ೨೪ ಬೆಲೆ : ೩೦ ನ. ಪೈ.

ಇದೊಂದು ವೀರಗೀತೆಗಳ ಸಂಗ್ರಹ. ಓದಲು, ಹಾಡಲು ಯೋಗ್ಯವಾಗಿದೆ. "ಕೇಳಿದವರ ರಕ್ತವನ್ನು ಕುದಿಸುವ ವಿದ್ಯುತ್ತು ಕವನದಲ್ಲಿ ಓತಪ್ರೋತವಾಗಿದೆ. ಕವಿಗಳಲ್ಲಿರಬೇಕಾದ ತೇಜ, ಓಜ, ಪ್ರಸಾರ ಗುಣ, ಸಮಯಸ್ಫೂರ್ತಿ, ಆವೇಗ, ಆವೇಶಗಳು ಈ ಕವಿಯಲ್ಲಿ ನೈಸರ್ಗಿಕವಾಗಿವೆ." ಎಂದು ಶ್ರೀ ಎಂ. ಎಸ್. ಲಠ್ಠೆಯವರು ತಮ್ಮ ಅಭಿಪ್ರಾಯದಲ್ಲಿ ಧಾರಾಳವಾಗಿ ಹೇಳಿದ್ದಾರೆ. ಈ ಮಾತು ಸಹಜವಾಗಿದೆ. ಇಂದು ಚೀಣಾ ದೇಶದವರು ಯುದ್ಧಕ್ಕಾಗಿ ಹವಣಿಸುತ್ತಿರುವ ಸಮಯದಲ್ಲಿ ಇಂಥ ವೀರ ಗೀತೆಗಳಿಂದ ಸ್ಫೂರ್ತಿಪಡೆಯಲು ಸಾಧ್ಯವಿದೆ. ಈ ಕವಿಯ ಲೇಖನಿಯಿಂದ ಇನ್ನೂ ಅನೇಕ ಶ್ರೇಷ್ಠ ಕೃತಿಗಳು ಹೊರಬೀಳಲಿ.

**ಶ್ರೀ ಕೃಷ್ಣಮೂರ್ತಿ ಪುರಾಣಿಕ** (ಜೀವನ ಪರಿಚಯ ಮತ್ತು ಅವರ ಕೃತಿಗಳು): ಲೇಖಕರು: ಶ್ರೀ ಶ್ರೀನಿವಾಸ ಉಡುಪ; ಹೊಸನಗರ, ಪ್ರಕಾಶಕರು: ರಾಮನಾಥ ಪ್ರಕಾಶನ, ಯುವಕ ಸಂಘ, ಮಕ್ಕಿಮನೆ, ತೀರ್ಥಹಳ್ಳಿ, ಆಕಾರ: ಕ್ರೌನ್ ೧/೮ ; ಪುಟಗಳು : ೯೪ ಬೆಲೆ : ರೂ. ೨.

ಶ್ರೀ ಕೃಷ್ಣಮೂರ್ತಿ ಪುರಾಣಿಕರನ್ನು ಕುರಿತು ಬರೆದ ಈ ಪುಸ್ತಕದಲ್ಲಿ ಅವರ ಜೀವನ ಪರಿಚಯವನ್ನೂ, ಅವರ ಕೃತಿಗಳ ವಿಮರ್ಶೆಗಳನ್ನೂ ನಾವು ಕಾಣಬಹುದು. ಆದರೆ ಶ್ರೀ ಉಡುಪರ ಭಾಷೆ, ಶೈಲಿ ಮತ್ತು ನಿರೂಪಣೆಗಳು ನಿರೀಕ್ಷಿಸಿದ ಮಟ್ಟಕ್ಕೇರಿಲ್ಲವೆಂದು ಹೇಳದೆ ವಿಧಿಯಿಲ್ಲ. ಪ್ರತಿ ಪುಟದಲ್ಲಿಯೂ ಮುದ್ರಣದೋಷಗಳು, ವ್ಯಾಕರಣ ದೋಷಗಳು, ಅಶುದ್ಧ ಪದ ಪ್ರಯೋಗಗಳು ಹೇರಳವಾಗಿವೆ. ಅಲ್ಲದೆ ಅಧ್ಯಾಯಗಳು ಇಲ್ಲದಿರುವುದೂ ಸಹ ಒಂದು ಕೊರತೆಯಾಗಿದೆ. ಈ ಪುಸ್ತಕದಲ್ಲಿ ಅರ್ಥವಿಲ್ಲದ ಹಾಗೂ ವ್ಯಾಕರಣ ದೋಷಪೂರಿತವಾದ ವಾಕ್ಯಗಳು ಅಸಂಖ್ಯಾತವಾಗಿವೆ.

ಇನ್ನು ಇವರ ನಿರೂಪಣೆ ಮತ್ತು ಶೈಲಿಗಳನ್ನು ಗಮನಿಸೋಣ. ಆರಂಭದಲ್ಲಿಯೇ ಇವರು ಎಡವಿದ್ದಾರೆ. ಮೊದಲು ಪುರಾಣಿಕರು ಮನೆಯಲ್ಲಿಲ್ಲ ಎಂದು ಹೇಳಹೊರಟವರು, ಸ್ವಲ್ಪ ಹೊತ್ತಿನಲ್ಲಿಯೇ ಪುರಾಣಿಕರು ಬಂದು ತಮ್ಮನ್ನು ಸ್ವಾಗತಿಸಿದರು ಎಂದು ಬರೆದಿದ್ದಾರೆ. ಹಾಗಾದರೆ ಇವರು ಮನೆಗೆ ಹೋದಾಗ ಪುರಾಣಿಕರು ಇದ್ದರೇ, ಇಲ್ಲವೇ ಎಂಬುದು ತಿಳಿಯದಾಗಿದೆ. ಮನೆಯಲ್ಲಿ ಇಲ್ಲದಿದ್ದ ಮೇಲೆ ಸ್ವಾಗತಿಸಿದ್ದು ಹೇಗೆ? (ಪುಟ ೯ ಮತ್ತು ೧೦)

ಕರ್ತೃಪದ ಸ್ತ್ರೀಲಿಂಗವಾಗಿದ್ದು ಕ್ರಿಯಾಪದ ಪುಲ್ಲಿಂಗವಾಗಿರುವುದು, ಕರ್ತೃಪದ ಏಕವಚನವಾಗಿದ್ದು, ಕ್ರಿಯಾಪದ ಬಹುವಚನವಾಗಿರುವುದು–ಇಂಥ ಹಲವಾರು ವ್ಯಾಕರಣ ದೋಷಗಳನ್ನು ನಾವು ಕಾಣಬಹುದು. (ಪುಟ ೧೦, ೩೩, ೩೫, ೪೯, ೮೨ ಇತ್ಯಾದಿ)

ಇಲ್ಲಾ ಮತ್ತು ಆದರೂ ಎಂಬ ಪದಗಳನ್ನು ಸಿಕ್ಕಾಪಟ್ಟೆ ಉಪಯೋಗಿಸಿ, ವಾಕ್ಯದ ಸೊಗಸನ್ನೇ ನಾಶಪಡಿಸಿರುವುದು ಅಲ್ಲಲ್ಲಿ ಕಂಡುಬರುತ್ತದೆ. (ಪುಟ ೧೨ ಮತ್ತು ೧೯.)

ಇಂತಹ ಅಸಂಖ್ಯಾತ ವ್ಯಾಕರಣ ಮತ್ತು ಭಾಷಾ ದೋಷಗಳನ್ನುಳ್ಳ ಪುಸ್ತಕವನ್ನು ಶ್ರೀ ಕೃಷ್ಣಮೂರ್ತಿ ಪುರಾಣಿಕರು ನಿಜವಾಗಿಯೂ ಓದಿದ್ದಾರೆಯೇ ಎಂಬುದು ಒಂದು ಸಂದೇಹವಾಗಿದೆ. ಪ್ರಸಿದ್ಧ ಲೇಖಕರನ್ನು ಕುರಿತು ಬರೆಯಬೇಕಾದರೆ ಆಳವಾದ ಅಧ್ಯಯನ, ನಿರಂತರ ವ್ಯಾಸಂಗ, ಅಪಾರ ಪಾಂಡಿತ್ಯ, ವ್ಯಾಕರಣದಲ್ಲಿ ಪ್ರಾವೀಣ್ಯತೆ ಇವುಗಳನ್ನು ಪಡೆದಿರಬೇಕು. ಇಲ್ಲಿ ಈ ಕೊರತೆಯನ್ನು ಕಾಣಬಹುದು. ಇನ್ನು ಮುಂದಾದರೂ ಲೇಖಕರು ತಮ್ಮ ನ್ಯೂನತೆಗಳನ್ನು ಸರಿಪಡಿಸಿಕೊಂಡು ಓರ್ವ ಪ್ರತಿಭಾವಂತ ಲೇಖಕರಾಗಲಿ ಎಂದು ಮನಸಾರ ಹಾರೈಸುತ್ತೇನೆ.

—ವನವಿಹಾರಿ.

**ಮಹಾರಾಜ ಶ್ರೀ ಸ್ವಾತಿತಿರುನಾಳರ ಕೃತಿಗಳು–೧** : ಕರ್ನಾಟಕ ಸಂಗೀತ ತರಂಗಿಣಿ ಗ್ರಂಥಮಾಲೆ ಪುಸ್ತಕ-೫) : ಗ್ರಂಥಕರ್ತರು ಮತ್ತು ಪ್ರಕಾಶಕರು: ಸಂಗೀತ ವಿದ್ವಾನ್ ಎಂ. ಆರ್. ಶಂಕರಮೂರ್ತಿ ; ಗುರುಗುಹಗಾನನಿಲಯ, ಆಕಾರ: ಕ್ರೌನ್ ೧/೪; ಬೆಂಗಳೂರು–೨೧ ; ಬೆಲೆ : ರೂ. ೧.

ಕರ್ನಾಟಕ ಸಂಗೀತದ, ಹತ್ತೊಂಭತ್ತನೆಯ ಶತಮಾನದ ಪ್ರಸಿದ್ಧ ವಾಗ್ಗೇಯಕಾರರಲ್ಲೊಬ್ಬರೂ, ಪರಮ ಭಕ್ತರೂ, ಅನೇಕ ಭಾಷಾ ಪರಿಣತರೂ ಆಗಿದ್ದ

ತಿರುವಾಂಕೂರು ಮಹಾರಾಜ ಶ್ರೀ ಸ್ವಾತಿತ್ತಿರುನಾಳರ ಪದ್ಮನಾಭಾಂಕಿತವಾದ ಕೃತಿರತ್ನಗಳನ್ನು ಕೇಳಿ ಆನಂದ ಪಡೆಯದ ರಸಿಕರು ಸಂಗೀತಲೋಕದಲ್ಲಿ ಇಲ್ಲವೆಂದರೆ ತಪ್ಪೆನಿಸದು! ಅವರ ಕೃತಿಗಳನ್ನು 'ಶ್ರೀ ಸ್ವಾತಿತ್ತಿರುನಾಳ್ ಸಂಗೀತ ಅಕಾಡಮಿ'ಯು ಸಂಸ್ಕೃತ, ಮಲೆಯಾಳ ಮತ್ತು ತಮಿಳು ಲಿಪಿಯಲ್ಲಿ ಪ್ರಕಟಿಸಿ ಉಪಕಾರ ಮಾಡಿತ್ತೆಂಬ ವಿಷಯವೂ, ಇದೀಗ ಕನ್ನಡ ಭಾಷೆಯಲ್ಲಿ ಪ್ರಕಟವಾಗಲು ಗುರುಗುಹಗಾನನಿಲಯಕ್ಕೆ ಅನುಮತಿ ಕೊಟ್ಟಿತೆಂಬ ಸಂಗತಿಯೂ ಕನ್ನಡ ನಾಡಿನ ಸಂಗೀತ ರಸಿಕ ವೃಂದವು ಮುಖ್ಯವಾಗಿ ಗಮನಿಸತಕ್ಕದ್ದಾಗಿದೆ. ಈ ಪ್ರಯತ್ನದಲ್ಲಿ ಶ್ರೀ ಶಂಕರಮೂರ್ತಿಯವರ ಸೇವಾ ನಿಷ್ಠೆ ಮತ್ತು ಸಾಹಸವನ್ನು ಎಲ್ಲರೂ ಮೆಚ್ಚಲೇಬೇಕು. ಎಂದಿನಂತೆ ಈ ಗ್ರಂಥದಲ್ಲಿಯೂ ಶ್ರೀ ಸ್ವಾತಿತ್ತಿರುನಾಳರ ಜೀವನ ಪರಿಚಯ, ಕೃತಿಗಳ ಸಾಹಿತ್ಯ ಪರಿಚಯ ಇವುಗಳನ್ನು ಮುಂದುಮಾಡಿಕೊಂಡೇ ಆ ಕೀರ್ತನೆಗಳನ್ನು ಹಾಡುವ ಮಾರ್ಗವನ್ನು ತೋರಿಸಿ ಕೊಟ್ಟಿರುವುದಾಗಿದೆ. ಹೀಗೆ ಕನ್ನಡಿಗರಿಗೆ ಸಂಗೀತದ ಗ್ರಂಥಗಳನ್ನು ಪ್ರಕಟಿಸಿ ಅನೇಕ ವಾಗ್ಗೇಯಕಾರರ ಕೃತಿಗಳ ಪರಿಚಯವನ್ನು ಮಾಡಿಕೊಡಲು ಶ್ರಮಿಸುತ್ತಿರುವ ಶ್ರೀ ಶಂಕರಮೂರ್ತಿಯವರ ರೀತಿಯು ಗುರಿ ಮುಟ್ಟುವ ಹೆಜ್ಜೆಯನ್ನನುಸರಿಸಿರುವುದಾಗಿದೆ. ಗುರುಗುಹಗಾನನಿಲಯದ ಈ ಸಾಧನೆ ಹೀಗೆಯೇ ಮುಂದುವರಿದು ಯಶಸ್ವಿಗೊಳ್ಳಲಿ.

**—ರಘುವರ.**

**ಹೃದಯ ಸೆಳೆದ ನೇತ್ರ: ಲೇಖಕರು: ಕುಮುದಪ್ರಿಯ;** ಪ್ರಕಾಶಕರು: ಶ್ರೀ ಸುಬ್ರಹ್ಮಣ್ಯೇಶ್ವರ ಬುಕ್‌ಡಿಪೋ, ೫೬, ರಾಜಾ ಮಾರ್ಕೆಟ್, ಬೆಂಗಳೂರು–೨; ಪುಟಗಳು: ೧೦೧; ಬೆಲೆ: ರೂ. ೧–೫೦ ನ. ಪೈ.

ಹನ್ನೆರಡು ಸಣ್ಣ ಕಥೆಗಳ ಸಂಕಲನ ಈ ಕೃತಿ. ಕಥೆಗಳನ್ನು ಅವಲೋಕಿಸುವ ಮುನ್ನವೇ ಕಾಣ ಸಿಗುವ ಅರ್ಪಣೆ, ಕಟುಸತ್ಯದಿಂದೊಡಗೂಡಿದ ಹೃದಯಾಂತರಾಳದಿಂದ ಹೊರಬಂದ ಕವನವೆನಿಸಿದೆ.

ನೆತ್ತರು ನೆಲನೆಕ್ಕಿತು, ನಿರ್ವಾಸಿತೆ, ಹೃದಯ ಸೆಳೆದ ನೇತ್ರ–ಈ ಕಥೆಗಳು ಇತಿಹಾಸದ ಪ್ರಸಿದ್ಧ ಪುರುಷರ ಮನೋದೌರ್ಬಲ್ಯವೂ, ತತ್ಪರಿಣಾಮವೂ ಅಭಿವ್ಯಕ್ತವಾಗುವ ರೀತಿಯನ್ನು ಚಿತ್ರಿಸುತ್ತವೆ.

'ಚೀಣದ ಹುಡುಗಿ' ಎಂಬುದು ಚೀಣದ ಹುಡುಗಿಯಂತಿರುವ ಚೀಣ ದೇಶವನ್ನು ಪ್ರೇಮದಿಂದ ವಿವಾಹವಾಗ ಬಯಸಿದ ಭಾರತದ ಸಮ್ರಾಟನ ಪತ್ರವನ್ನು ಅಪಾರ್ಥ ಮಾಡಿಕೊಂಡು ಯುದ್ಧಹೂಡಿ ಚೀಣದ ರಾಜಕುಮಾರಿಯು ಬಲಿಯಾದನಂತರವೇ ಶಾಂತಿಯ ಕಹಳೆ ಮೊಳಗುವಂತಾದ ಪ್ರಸಂಗದ ವರ್ಣನೆಯಾಗಿದೆ.

ರಕ್ತಛಾಯೆ, ಉರುಳಿಬಿದ್ದ ಕರುಳು, ಭುಗಿ ಭುಗಿಲೆಂದುರಿಯಿತು, ಅಪ್ಪನ ಶ್ರಾದ್ಧ, ಫೀಜು–ಈ ಕಥಾ ಪ್ರಸಂಗಗಳು ಜೀವನದ ಸಮಸ್ಯೆಗಳನ್ನೆದುರಿಸುವ ದಿಸೆಯಲ್ಲಿ ಹರಿದು ಸಾಮಾಜಿಕ ಪ್ರಜ್ಞೆಯತ್ತ (Social Conciousness) ಓದುಗರ ಗಮನ ಹರಿಸಬಲ್ಲವಾಗಿವೆ.

ಭಗ್ನ ಹೃದಯಿ, ಸ್ವಯಂವರ–ಇವೆರಡೂ ಪ್ರೇಮ ಪ್ರಸಂಗಕ್ಕೆ ಸಂಭಂದಿಸಿದವಾದರೂ ಮೊದಲನೆಯದರಲ್ಲಿ ಏಕ ಪಕ್ಷೀಯವಾದ ಪ್ರೇಮದಿಂದ ಆತ್ಮಹತ್ಯೆಯೊದಗಿದರೆ, ಎರಡನೆಯದರಲ್ಲಿ ಬೇರೆಯವರೊಂದಿಗೆ ನೆರವೇರಬೇಕಾಗಿದ್ದ ಮದುವೆಯು–ಪ್ರೇಮಿಯೊಂದಿಗೇ 'ಸ್ವಯಂವರ'ವಾಗಿ ಜರುಗುವ ರೀತಿ ವಿಶಿಷ್ಟವಾಗಿ ಗೋಚರವಾಗುತ್ತದೆ.

ಕೊನೆಯ ಕಥೆಯಾದ 'ಬದುಕಿಬಂದ ಮಡದಿ' ಎಂಬುದರಲ್ಲಿ ಕುಡಿತದ ಚಟಕ್ಕೆ ಬಿದ್ದ ಕೆಂಚ, ತನ್ನ ಮಡದಿ ತುಂಬು ಗರ್ಭಿಣಿಯೆಂಬುದನ್ನೂ ಲಕ್ಷಿಸದೆ ಅವಳನ್ನು ಪ್ರಜ್ಞೆತಪ್ಪುವಂತೆ ಒದೆದು ಕೆಡಹಿ, ಅವಳ ಮದುವೆಯ ಸೀರೆಯನ್ನು ಕೇವಲ ಐದು ರೂಪಾಯಿಗೆ ಮಾರಿ, ಹೆಂಡ ಕುಡಿಯುತ್ತಿರುವಾಗ ಹೆಂಡತಿ ಬಾವಿಗೆ ಬಿದ್ದಳೆಂಬುದನ್ನು ಕೇಳಿ ಓಡಿಬಂದು ಅವಳ ಮೃತ ದೇಹವೂ ಸಿಕ್ಕದೆ ಪಶ್ಚಾತ್ತಾಪಪಟ್ಟು ಬಾಳನ್ನು ಹಸನು ಮಾಡಿಕೊಳ್ಳುವ ಪ್ರಸಂಗ ಮನೋಜ್ಞವಾಗಿ ಮೂಡಿಬಂದಿದೆ.

ಒಟ್ಟಾರೆ ಹಲವು ಕತೆಗಳಲ್ಲಿ ಚಾರುಮುಖಿ, ಮಾಲತಿ ಮುಂತಾದ ಸ್ತ್ರೀಯರ ಸ್ತ್ರೀತ್ವ ತಲೆಯೆತ್ತಿ ನಿಂತು ದಿಟ್ಟತನದಿಂದ 'ಪ್ರಭು' ವನ್ನೆದುರಿಸುವ ಪ್ರಸಂಗಗಳು 'ಪುನರುಕ್ತಿ' ಯಂತೆ ಕಂಡರೂ ಹೃದಯಂಗಮವಾಗಿ ಚಿತ್ರಿತವಾಗಿವೆ. ಜೊತೆಗೆ ಇಂದಿನ ಸಾಮಾಜಿಕ ಜೀವನದಲ್ಲಿ 'ತುತ್ತನ್ನ–ತುಂಡರಿವೆ' ಗಳಿಗೂ ತೊಂದರೆಯೊದಗಿರುವ ರೀತಿ, ನಿರುದ್ಯೋಗ ಸಮಸ್ಯೆ ಇವುಗಳನ್ನು ಮನಂಬುಗುವ ರೀತಿಯಲ್ಲಿ ರಚಿಸಿರುವ ಕೃತಿಕಾರರು ಅಭಿನಂದನಾರ್ಹರೇ ಸೈ.

**—ಪಂಡಿತ ಕೆ. ಪಿ. ಶಿವಲಿಂಗಯ್ಯ.**

# ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ರಾಷ್ಟ್ರಪತಿಯವರ ವರ್ಧಂತ್ಯುತ್ಸವ

ಸೆ. ದಿನಾಂಕ ೭ರ ಸಂಜೆ ಭಾರತದ ರಾಷ್ಟ್ರಪತಿ ಡಾ॥ ಎಸ್. ರಾಧಾಕೃಷ್ಣನ್‌ರವರ ೭೫ನೆಯ ವರ್ಷದ ವರ್ಧಂತಿ ಉತ್ಸವವು ಶ್ರೀ ಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲೆಯ ಸಭಾಂಗಣದಲ್ಲಿ ನಡೆಯಿತು. ಮೈಸೂರು ರಾಜ್ಯದ ಆರೋಗ್ಯ ಸಚಿವರಾದ ಡಾ॥ ನಾಗಪ್ಪ ಆಳ್ವರವರು ಸಭಾಧ್ಯಕ್ಷತೆ ವಹಿಸಿದ್ದರು. ಆರಂಭದಲ್ಲಿ ಕುಮಾರಿ ಸಿ. ಕೆ. ಪದ್ಮರವರಿಂದ ಪ್ರಾರ್ಥನೆಯಾದ ಬಳಿಕ ಪರಿಷತ್ತಿನ ಕಾರ್ಯದರ್ಶಿಗಳಾದ ಡಾ॥ ಕೆ. ಎಂ. ಕೃಷ್ಣರಾಯರು ಸ್ವಾಗತ ಭಾಷಣ ಮಾಡಿದರು. ಅನಂತರ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಪ್ರಾಸ್ತಾವಿಕ ಭಾಷಣ ಮಾಡಿದರು. ಇದಾದನಂತರ ಶ್ರೀಮತಿ ರಾಜಲಕ್ಷ್ಮಿ ರಾಮಸ್ವಾಮಿ ಮತ್ತು ಮಂಡಲಿಯವರು ದೇವರ ನಾಮಗಳನ್ನು ಹಾಡಿದರು. ಬಳಿಕ ಮೈಸೂರು ಶಾಸನ ಪರಿಷತ್ ಸದಸ್ಯರಾದ ವಿದ್ಯಾವಿಭೂಷಣ ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳು ರಾಷ್ಟ್ರಪತಿಗಳ ಗುಣಗಾನ ಮಾಡಿದರು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ರಾಷ್ಟ್ರಪತಿಗಳು ಇಡೀ ವಿಶ್ವದಲ್ಲೇ ಮಾನ್ಯತೆ ಪಡೆದಿದ್ದಾರೆಂದು ತಿಳಿಸಿದರು. ತರುವಾಯ ರಾಷ್ಟ್ರಪತಿಗಳನ್ನು ಅಭಿನಂದಿಸುವ ನಿರ್ಣಯ ಅಂಗೀಕಾರವಾಯಿತು.

ಪರಿಷತ್ತಿನ ಇನ್ನೊಬ್ಬ ಕಾರ್ಯದರ್ಶಿಗಳಾದ ಶ್ರೀ ಎಸ್. ಶಂಕರಪ್ಪನವರಿಂದ ವಂದನಾರ್ಪಣೆ, ರಾಷ್ಟ್ರಗೀತೆ ಇವುಗಳೊಡನೆ ಸಭೆ ಮುಗಿಯಿತು.

### ನಿರ್ಣಯ

" ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಮತ್ತು ಸದಸ್ಯರೂ ೧೯೬೩ನೇ ಸೆಪ್ಟೆಂಬರ್ ದಿನಾಂಕ ೭ರಂದು ಭರತಖಂಡದ ರಾಷ್ಟ್ರಪತಿಗಳಾದ ಡಾ॥ ಎಸ್. ರಾಧಾಕೃಷ್ಣನ್‌ರವರ ೭೫ನೇ ವರ್ಷ ವರ್ಧಂತಿ ಉತ್ಸವವನ್ನು ಮೈಸೂರು ಸರ್ಕಾರದ ಆರೋಗ್ಯ ಮಂತ್ರಿಗಳಾದ ಡಾ॥ ನಾಗಪ್ಪ ಆಳ್ವ ಅವರ ಅಧ್ಯಕ್ಷತೆಯಲ್ಲಿ ನೆರವೇರಿಸುತ್ತ ಈ ಶುಭ ವರ್ಧಂತಿಯಲ್ಲಿ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಸಲ್ಲಿಸುತ್ತಾರಲ್ಲದೆ ಪರಮಾತ್ಮನು ಅವರಿಗೆ ದೀರ್ಘಾಯುರಾರೋಗ್ಯಗಳನ್ನೂ, ಸುಖ ಸಮೃದ್ಧಿಯನ್ನೂ ದಯೆಪಾಲಿಸಲೆಂದು ನಿರ್ಣಯಿಸುತ್ತದೆ."

---

# ' ತ್ರಿವೇಣಿ ' ಯವರ ನಿಧನ

## ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸಂತಾಪ ಸೂಚಕ ಸಭೆ

ಸುಪ್ರಸಿದ್ಧ ಕನ್ನಡ ಕಾದಂಬರಿಕಾರರಾಗಿದ್ದ ಶ್ರೀಮತಿ 'ತ್ರಿವೇಣಿ'ಯವರ ನಿಧನದ ಪ್ರಯುಕ್ತ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ದಿನಾಂಕ ೧೧-೮-೬೩ನೆಯ ಭಾನುವಾರ ಸಂಜೆ ೬-೩೦ ಘಂಟೆಗೆ ಸಂತಾಪ ಸೂಚಕ ಸಭೆಯು ವಿಜಯ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಶ್ರೀ ಜಿ. ವೆಂಕಟಸುಬ್ಬಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ಸುಪ್ರಸಿದ್ಧ ಲೇಖಕಿಯರೂ, ವೈದ್ಯರೂ ಆದ ಶ್ರೀಮತಿ ಅನುಪಮಾರವರು ಮತ್ತು ಪ್ರಸಿದ್ಧ ಲೇಖಕರಾದ ಶ್ರೀ 'ನಿರಂಜನ'ರವರು ಶ್ರೀಮತಿ 'ತ್ರಿವೇಣಿ'ಯವರ ಬಗ್ಗೆ ಮಾತನಾಡಿದರು.

ಶ್ರೀಮತಿ ಅನುಪಮಾರವರು ಶ್ರೀಮತಿ ' ತ್ರಿವೇಣಿ ' ಯವರ ಜೀವನ ಪರಿಚಯಮಾಡಿಕೊಡುತ್ತ—" ತ್ರಿವೇಣಿಯವರು ಉತ್ತಮ ವಾತಾವರಣವನ್ನು ಕಲ್ಪಿಸಿಕೊಂಡು ಪತಿ ಮತ್ತು ಅತ್ತೆಯವರಿಂದ ಪ್ರೋತ್ಸಾಹವನ್ನು ಪಡೆದು ಲೇಖನ ವ್ಯವಸಾಯದಲ್ಲಿ ತೊಡಗಿದರು"—ಎಂದು ಹೇಳಿದರು. ಮುಂದುವರೆದು ತಮ್ಮ ಸ್ವಂತ ಅನುಭವವನ್ನು ತಿಳಿಸುತ್ತಾ "ಅನೇಕಮಂದಿ ನನ್ನನ್ನು ಹೀಗೆ ಕೇಳಿದ್ದಾರೆ, ಶ್ರೀಮತಿ ತ್ರಿವೇಣಿಯವರೇ ಸ್ವತಃ ಬರೆಯುತ್ತಾರೋ ಅಥವಾ ಅವರ ಯಜಮಾನರು ಬರೆದು ಅವರ ಹೆಸರನ್ನು

ಹಾಕಿಸುತ್ತಾರೆಯೋ ? ಎಂದು. ಇಂತಹ ಪ್ರಶ್ನೆಗಳನ್ನು ಕೇಳಿದಾಗ ನನಗೆ ತುಂಬಾ ವ್ಯಸನವಾಗುತ್ತದೆ. ಏಕೆಂದರೆ ಮಹಿಳೆಯರು ಕಾದಂಬರಿಗಳನ್ನು ಬರೆಯುವ ಶಕ್ತಿಯನ್ನೇ ಹೊಂದಿಲ್ಲವೇ ? ಈ ಬರೆಯುವ ಕಲೆ ಕೇವಲ ಗಂಡಸರಿಗೇ ಮೀಸಲೇನು ? ಎಂದೆನ್ನಿಸುತ್ತದೆ. ಶ್ರೀ ಮತಿ ತ್ರಿವೇಣಿಯವರು ಸ್ವತಃ ವಿದ್ವಾಂಸರಾಗಿದ್ದು, ಅನೇಕ ಗ್ರಂಥಗಳನ್ನು ಚೆನ್ನಾಗಿ ವ್ಯಾಸಂಗಮಾಡಿ ಮನಶ್ಶಾಸ್ತ್ರಕ್ಕೆ ಸಂಬಂಧಪಟ್ಟ ಅನೇಕ ಕತೆ, ಕಾದಂಬರಿಗಳನ್ನು ರಚಿಸಿದ್ದಾರೆ. ಅವರ 'ಬೆಕ್ಕಿನ ಕಣ್ಣು' ಎಂಬ ಕಾದಂಬರಿ ಬಹಳ ಮೆಚ್ಚುಗೆಯನ್ನು ಪಡೆದಿದೆ. ಕಾದಂಬರಿಯಲ್ಲಿ ಬರುವ ಮುಲತಾಯಿಯೊಬ್ಬಳ ಕಣ್ಣು ಬೆಕ್ಕಿನ ಕಣ್ಣಿನಂತೆ ಇದ್ದ•ಪ್ರಯುಕ್ತ ಆ ಮಲತಾಯಿಯ ಮೇಲಿದ್ದ ಸೇಡನ್ನು ಒಂದು ಬೆಕ್ಕಿನ ಮೇಲೆ ಹೇಗೆ ಮಗಳಾದವಳು ತೀರಿಸಿಕೊಳ್ಳುತ್ತಿದ್ದಳು ಎಂಬುದನ್ನು ಬಹು ಸ್ವಾರಸ್ಯವಾಗಿ ವರ್ಣಿಸಿದ್ದಾರೆ. ಇಂತಹ ಒಬ್ಬ ನುರಿತ ಲೇಖಕಿ ಇಷ್ಟು ಚಿಕ್ಕ ವಯಸ್ಸಿನಲ್ಲಿ ತೀರಿಕೊಂಡದ್ದು ತುಂಬಾ ಅನ್ಯಾಯ" ಎಂದು ಹೇಳಿ ಅವರ ಕೃತಿಗಳು ಬಹುಕಾಲ ಉಳಿಯಬಲ್ಲುದು—ಎಂದು ಹಾರೈಸಿದರು.

ತರುವಾಯ ಶ್ರೀ ನಿರಂಜನರವರು ಮಾತನಾಡಿದರು. ಶ್ರೀಮತಿಯವರ ಜೀವನವನ್ನು ಪರಿಚಯಮಾಡಿ ಕೊಡುತ್ತಾ, ಅವರು ಆರಂಭದಲ್ಲಿ ಪ್ರಕಾಶಕರ ಪ್ರೋತ್ಸಾಹವಿಲ್ಲದೆ ಹೇಗೆ ಕಷ್ಟಗಳನ್ನು ಅನುಭವಿಸಿದರೆಂಬುದನ್ನು ವಿವರಿಸಿದರು. ತಾವು ತ್ರಿವೇಣಿಯವರ ಕೃತಿಗಳನ್ನು ಓದಿ ಮೆಚ್ಚಿಕೊಂಡು ಪ್ರಕಟಣೆ ಮಾಡಲು ಸಹಾಯಮಾಡಿದ ವಿವರಗಳನ್ನು ನೀಡಿದರು. "ಆರಂಭದಲ್ಲಿ ಅನುಮಾನಿಸುತ್ತಿದ್ದ ಪ್ರಕಾಶಕರು ಇಂದು ಬೇಕಾದಷ್ಟು ಹಣವನ್ನು ಸಂಪಾದಿಸುತ್ತಿದ್ದಾರೆ"—ಎಂದು ತಿಳಿಸಿದರು. ಮುಂದುವರೆದು "ತ್ರಿವೇಣಿಯವರ ಎಲ್ಲ ಕೃತಿಗಳಲ್ಲಿ ತಮ್ಮ ಪತಿ ಶಂಕರ್ ಅವರ ಪ್ರತಿಭೆ ಎದ್ದು ಕಾಣುತ್ತದೆ. ಅಂದಮೇಲೆ ಪತಿಯಾದ ಶಂಕರ್ ತನ್ನ ಎಲ್ಲ ಜ್ಞಾನ ಮತ್ತು ಪ್ರತಿಭೆಯನ್ನು ಆಕೆಗೆ ಕೊಟ್ಟಿದ್ದರೆಂದರೆ ತಪ್ಪಾಗಲಾರದು" ಎಂದು ಅಭಿಪ್ರಾಯಪಟ್ಟರು. ಮುಂದುವರೆದು "ಶ್ರೀಮತಿ ಅನಸೂಯ ಶಂಕರ್ ಅವರು ಮುತ್ತೈದೆಯ ಸಾವನ್ನಪ್ಪಿದರು. ತಮ್ಮ ಕೃತಿಗಳು ಹೆಚ್ಚು ಬೆಳಕಿಗೆ ಬಂದ ಕಾಲಕ್ಕೆ ಅವರು ತೀರಿಹೋದದ್ದು ತುಂಬಾ ಅನ್ಯಾಯ. ಇದರಂತೆಯೇ ಕೊಡಗಿನ ಗೌರಮ್ಮ ಎಂಬುವವರು ಚಿಕ್ಕಂದಿನಲ್ಲಿಯೇ ತೀರಿಹೋದರು. ಕನ್ನಡ ಸಾಹಿತ್ಯ ಪರಿಷತ್ತಿನವರು ಶ್ರೀಮತಿ ತ್ರಿವೇಣಿಯವರ ಭಾವಚಿತ್ರವನ್ನು ತರಿಸಿ ಆದಷ್ಟು ಕೂಡಲೇ ಅನಾವರಣ ಮಾಡುವುದೊಳ್ಳೆಯದು" ಎಂದು ಸಲಹೆಯನ್ನಿತ್ತರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಜಿ. ವೆಂಕಟಸುಬ್ಬಯ್ಯನವರು ಸಮಯೋಚಿತವಾಗಿ ಮಾತನಾಡಿ, ಕನ್ನಡಿಗರಿಗೆ ಅಪಾರ ದುಃಖವಾಗಿದೆ ಎಂದರು. ಈ ಕೆಳಗೆ ಕಂಡಂತೆ ಸಂತಾಪ ಸೂಚಕ ನಿರ್ಣಯವನ್ನು ಮಂಡಿಸಿದಮೇಲೆ ಎಲ್ಲರೂ ಎದ್ದು ನಿಂತು ಎರಡು ನಿಮಿಷಗಳ ಕಾಲ ಮೌನವನ್ನಾಚರಿಸಿ ಅದನ್ನು ಅಂಗೀಕರಿಸಿದರು.

## ನಿರ್ಣಯ

"ತ್ರಿವೇಣಿ" ಎಂಬ ಕಾವ್ಯನಾಮದಿಂದ ಪ್ರಸಿದ್ಧರೂ, ಅನೇಕ ಕಾದಂಬರಿಗಳನ್ನೂ, ಸಣ್ಣ ಕತೆಗಳನ್ನೂ ರಚಿಸಿ ಜನಪ್ರಿಯ ಬರಹಗಾರರೂ, ಬಹುಸಂಖ್ಯೆಯ ಬಂಧು ಮಿತ್ರರ ಗೌರವಕ್ಕೆ ಪಾತ್ರರೂ, ಮಾನಸಿಕ ಸಂಕ್ಲೇಶಗಳ ವಿಶ್ಲೇಷಣೆಯನ್ನು ವಸ್ತುವಾಗಿ ಉಳ್ಳ ಕಥಾ ಕ್ಷೇತ್ರ ನಿರ್ಮಾಣದಿಂದ ವಿಶಿಷ್ಟ ಕೀರ್ತಿಗೆ ಆಶ್ರಯರೂ, ಓದುಗರಲ್ಲಿ ಸದ್ಭಾವನೆಗಳ ಸಂವರ್ಧನೆಗೆ ಕಾರಣಕರ್ತರೂ ಆಗಿದ್ದ ಶ್ರೀಮತಿ ಅನಸೂಯ ಶಂಕರ್ ಅವರು ನಿಧನ ಹೊಂದಿದುದರಿಂದ ಕನ್ನಡನಾಡು ನುಡಿಗೆ ಅಪಾರ ನಷ್ಟವೂ ಸಹಿಸಲಾರದ ದುಃಖವೂ ಉಂಟಾಗಿದೆ. ಅವರ ಸಾಹಿತ್ಯ ಸೇವೆಯನ್ನು ನೆನಸಿಕೊಂಡು ಕನ್ನಡಿಗರು ಅವರಿಗೆ ಕೃತಜ್ಞರಾಗಿದ್ದಾರೆ.

"ತ್ರಿವೇಣಿ" ಅವರ ಆತ್ಮವು ಶಾಂತಿಯನ್ನು ಪಡೆಯಲೆಂದೂ, ಅವರ ಸೇವಾಸ್ಮರಣೆಯು ಇತರರಿಗೆ ಮಾರ್ಗದರ್ಶಕವಾಗಲೆಂದೂ ಈ ಸಭೆಯು ಹಾರೈಸುತ್ತದೆ.

" ಅವರ ಪತಿಗೂ, ಬಂಧುವರ್ಗಕ್ಕೂ ಈ ವ್ಯಸನವನ್ನು ಸಮಾಧಾನ ಚಿತ್ತದಿಂದ ಸಹಿಸಿಕೊಳ್ಳುವ ಶಕ್ತಿಯನ್ನು ದೇವರು ಕೊಡಲೆಂದು ಈ ಸಭೆಯು ಪ್ರಾರ್ಥಿಸುತ್ತದೆ. "

# ಕನ್ನಡ ಸಾಹಿತ್ಯ ಪರಿಷತ್ತಿನ ಅಧಿಕಾರವರ್ಗದ ಕೆಲವು ಬದಲಾವಣೆಗಳು

ಇದುವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕೋಶಾಧಿಕಾರಿಗಳಾಗಿದ್ದ ಶ್ರೀಮಾನ್ ಜಿ. ಶ್ರೀನಿವಾಸನ್ ಅವರು ತಮ್ಮ ಹಲವು ಅನಿವಾರ್ಯಗಳ ಮೂಲಕ ಪರಿಷತ್ತಿನ ಗೌರವ ಕೋಶಾಧಿಕಾರಿಗಳ ಸ್ಥಾನಕ್ಕೆ ರಾಜೀನಾಮೆಯನ್ನು ಸಲ್ಲಿಸಿರುತ್ತಾರೆ.

ಲ್ಯಾಂಡ್ ಮಾರ್ಟ್ಗೇಜ್ ಬ್ಯಾಂಕ್ ಮತ್ತು ಕರ್ನಾಟಕ ಗಡಿನಾಡು ಕ್ರಿಯಾ ಸಮಿತಿ ಅಧ್ಯಕ್ಷರಾದ ಶ್ರೀ ಆರ್. ಆನಂತರಾಮನ್ ಅವರು ನೂತನ ಕೋಶಾಧಿಕಾರಿಗಳಾಗಿರುವಂತೆ ಪರಿಷತ್ತಿನ ಅಧ್ಯಕ್ಷರು ನೇಮಿಸಿರುತ್ತಾರೆ.

ಶ್ರೀ ಜಿ. ಶ್ರೀನಿವಾಸನ್ ಅವರು ಪರಿಷತ್ತಿನ ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದ ಗೌರವ ಮೇಲ್ವಿಚಾರಕರಾಗಿ ಇನ್ನು ಮುಂದೆಯೂ ಇರಲು ಸಂತೋಷದಿಂದ ಒಪ್ಪಿಕೊಂಡಿರುತ್ತಾರೆ.

ಇದುವರೆಗೆ ಪರಿಷತ್ತಿನ ಓರ್ವ ಗೌರವ ಕಾರ್ಯದರ್ಶಿಗಳಾಗಿದ್ದ ಶ್ರೀ ಅನ್ನದಾನಯ್ಯ ಪುರಾಣಿಕರು ತಮ್ಮ ಹಲವಾರು ಅನಿವಾರ್ಯಗಳಿಂದ ಪರಿಷತ್ತಿನ ಗೌರವ ಕಾರ್ಯದರ್ಶಿಗಳ ಸ್ಥಾನಕ್ಕೂ, 'ಕನ್ನಡ ನುಡಿ' ಸಂಪಾದಕತ್ವಕ್ಕೂ ರಾಜೀನಾಮೆ ಕೊಟ್ಟಿರುತ್ತಾರೆ.

ಪರಿಷತ್ತಿನ ಅಧ್ಯಕ್ಷರು ಅನಿವಾರ್ಯವಾಗಿ ಈ ರಾಜೀನಾಮೆಯನ್ನು ಒಪ್ಪಿಕೊಂಡು ಈ ಸ್ಥಳಗಳಲ್ಲಿ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಎಸ್. ಶಂಕರಪ್ಪ, ಎಂ.ಎ., ಬಿ.ಟಿ., ಅವರನ್ನು ಕಾರ್ಯದರ್ಶಿಗಳನ್ನಾಗಿಯೂ, ಮೈಸೂರು ಸರ್ಕಾರದ ನಿವೃತ್ತ ಮುಖ್ಯ ವಾರ್ತಾಧಿಕಾರಿಗಳಾದ ಶ್ರೀ ಡಿ. ಆರ್. ರಾಮಯ್ಯ ಬಿ.ಎ., ಅವರನ್ನು "ಕನ್ನಡ ನುಡಿ"ಯ ಗೌರವ ಸಂಪಾದಕರನ್ನಾಗಿಯೂ ನಿಯಾಮಕ ಮಾಡಿದ್ದಾರೆ. ಈ ಬದಲಾವಣೆಗಳು ೨೯-೮-೬೩ ರಿಂದ ಜಾರಿಗೆ ಬಂದಿವೆ.

ಅನಿರೀಕ್ಷಿತವಾದ ಈ ಬದಲಾವಣೆಗಳನ್ನು ಈ ಮೂಲಕವಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಸಕಲ ಸದಸ್ಯರಿಗೂ, ಕನ್ನಡ ನಾಡು ನುಡಿಗಳ ಅಭಿಮಾನಿಗಳಿಗೂ ಶ್ರುತಪಡಿಸಲಾಗಿದೆ ಎಂಬುದಾಗಿ ಪರಿಷತ್ತಿನ ಗೌರವ ಕಾರ್ಯದರ್ಶಿಗಳು ತಿಳಿಸುತ್ತಾರೆ.

# ಕನ್ನಡದ ಸುದ್ದಿಗಳು

**ಬೆಂಗಳೂರು**

ಸುಬ್ರಹ್ಮಣ್ಯ ನಗರದಲ್ಲಿರುವ ಕನ್ನಡ ಸಾಹಿತ್ಯಕಲಾಸಂಘದವರು 'ನಾನು ಮೆಚ್ಚಿದ ತ್ರಿವೇಣಿಯವರ ಕಾದಂಬರಿ' ಎಂಬ ವಿಷಯದ ಬಗ್ಗೆ ವಿಮರ್ಶಾ ಪೂರ್ವಕ ಲೇಖನ ಸ್ಪರ್ಧೆಯನ್ನು ಏರ್ಪಡಿಸಿದ್ದಾರೆ. ಲೇಖನಗಳನ್ನು ಸೆಪ್ಟಂಬರ್ ೩೦ ರ ಒಳಗಾಗಿ ವ್ಯವಸ್ಥಾಪಕರಿಗೆ ಕಳುಹಬೇಕಾಗಿರುವುದು.

ಕನ್ನಡ ಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಿಸಿದ ಶ್ರೀ ದ. ಬ. ಕುಲಕರ್ಣಿಯವರು ನಿಧನರಾದ ಬಗ್ಗೆ ಕನ್ನಡ ಅಭಿಮಾನಿಗಳೆಲ್ಲ ಸಂತಾಪವನ್ನು ವ್ಯಕ್ತಪಡಿಸಿದ್ದಾರೆ. ದಿವಂಗತರ ಕುಟುಂಬಕ್ಕೆ ನೆರವಾಗಲು ಪರಿಹಾರನಿಧಿ ಕೂಡಿಸುವ ಯತ್ನವೂ ನಡೆದಿದೆ. ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರು ನಿಧಿ ಸಮಿತಿಯ ಅಧ್ಯಕ್ಷರಾಗಿದ್ದಾರೆ.

ದಿನಾಂಕ ೭-೯-೬೩ ರ ದಿನ ಸಂಜೆ ಬೆಂಗಳೂರು ನಗರದ ಟೌನ್‌ಹಾಲಿನಲ್ಲಿ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಡಾ|| ಎಚ್. ಕೆ. ರಂಗನಾಥ್ ಅವರಿಂದ ವಿರಚಿತವಾದ 'ಜಾಗೃತ ಭಾರತಿ' ಎಂಬ ಕನ್ನಡ ನಾಟಕವನ್ನು ಬೆಂಗಳೂರಿನ ರವಿಕಲಾವಿದರು ಅಭಿನಯಿಸಿದರು.

ಬೆಂಗಳೂರು ರಾಜಧಾನಿಯಲ್ಲಿ ಮಾಸ್ಟರ್ ಹಿರಣ್ಣಯ್ಯನವರ "ಲಂಚಾವತಾರ", ಶ್ರೀ ಚಿಂದೋಡಿ ವೀರಪ್ಪನವರ "ಹಳ್ಳಿಯ ಹುಡುಗಿ", ಶ್ರೀ ಎಂ. ಸಿ. ಮಹದೇವಸ್ವಾಮಿಯವರ "ಸತ್ಯ ಹರಿಶ್ಚಂದ್ರ" ಎಂಬ ಕನ್ನಡ ನಾಟಕಗಳು ಜನಪ್ರಿಯವಾಗಿ ನಡೆಯುತ್ತಿವೆ. "ಲಂಚಾವತಾರ" ಮತ್ತು "ಹಳ್ಳಿಯ ಹುಡುಗಿ" ಶತಮಾನೋತ್ಸವಗಳನು ನಡೆಸಿವೆ.

ದಿನಾಂಕ ೨-೯-೬೩ ರಂದು ಬೆಂಗಳೂರಿನಲ್ಲಿ ಪ್ರಾರಂಭವಾಗಿರುವ ಮೈಸೂರು ಶಾಸನ ಸಭೆಯಲ್ಲಿ ಸರ್ಕಾರದವರು ಕನ್ನಡವು ರಾಜ್ಯದ ಅಧಿಕೃತ ಭಾಷೆಯಾಗಬೇಕು ಎಂಬ ಮಸೂದೆಯನ್ನು ಮಂಡಿಸಿದ್ದರು. ಬಹುವಾಗಿ ಎಲ್ಲ ಸದಸ್ಯರೂ ಈ ನಿರ್ಣಯವನ್ನು ಅನುಮೋದಿಸಿ ಮಾತನಾಡಿದ ಮೇಲೆ ಅದು ಅಂಗೀಕಾರವಾಯಿತು.

ದಿನಾಂಕ ೮-೯-೬೩ ನೆಯ ಭಾನುವಾರ ಉಡುಪಿಯ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಅಧ್ಯಕ್ಷತೆಯಲ್ಲಿ ಕನ್ನಡ ಕವಿ ಶ್ರೀ ಎಸ್. ಲಕ್ಷ್ಮೀನರಸಿಂಹ ಶಾಸ್ತ್ರಿಗಳಿಗೆ ನಟನಕಲಾ ಸಂಘದವರು ಮಾನಪತ್ರವಿತ್ತು ಗೌರವಿಸಿದರು.

ದಿನಾಂಕ ೨೮-೮-೬೩ ರಂದು ಬೆಂಗಳೂರು ರವೀಂದ್ರ ಕಲಾಕ್ಷೇತ್ರದಲ್ಲಿ ಕನ್ನಡ ಥಿಯೇಟರ್ಸ್ ಅವರ "ಸತ್ಯ ಹರಿಶ್ಚಂದ್ರ" ಎಂಬ ನಾಟಕದ ೨೦ ನೆಯ ಪ್ರದರ್ಶನವು ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ ಶಾಸ್ತ್ರಿಗಳು ತಮ್ಮ ಭಾಷಣದಲ್ಲಿ ಕನ್ನಡ ನಾಟಕಗಳಿಗೆ ಸರ್ವತೋಮುಖವಾದ ಪ್ರೋತ್ಸಾಹ ಅಗತ್ಯವೆಂದು ನುಡಿದರು.

ದಿನಾಂಕ ೨೫-೮-೬೩ ರಂದು ಹೊಳಲ್ಕೆರೆಯಲ್ಲಿ "ಗಣಪತಿಯ ಪೂಜೆ ಮತ್ತು ಭಾರತೀಯರು" ಎಂಬ ವಿಷಯವಾಗಿ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ವಿಚಾರಪೂರ್ಣವಾದ ಭಾಷಣವನ್ನು ಮಾಡಿದರು.

ದಿನಾಂಕ ೨೬-೮-೬೩ ರಂದು ಹೊಳಲ್ಕೆರೆಯಲ್ಲಿ ನಡೆದ ಕಡ್ಡಾಯ ಶಿಕ್ಷಣ ಕುರಿತಾದ ಉಪಾಧ್ಯಾಯರ ಸಮ್ಮೇಳನವನ್ನು ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಉದ್ಘಾಟಿಸಿದರು. ಶಾಸನ ಸಭಾ ಸದಸ್ಯರಾದ ಶ್ರೀ ದುಗ್ಗಪ್ಪನವರು ಸಭಾಧ್ಯಕ್ಷತೆ ವಹಿಸಿದ್ದರು.

ದಿನಾಂಕ ೩೧-೮-೬೩ ರಂದು ಶ್ರೀ ಕ್ಷೇತ್ರ ಸಿದ್ಧಗಂಗೆಯ ಸಂಸ್ಕೃತ ಕಾಲೇಜಿನಲ್ಲಿ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು "ಗಣಪತಿ ಪೂಜೆ ಮತ್ತು ವಿದ್ಯಾರ್ಥಿಗಳು" ಎಂಬ ವಿಷಯವಾಗಿ ಸ್ವಾರಸ್ಯವಾದ ಭಾಷಣ ಮಾಡಿದರು.

ದಿನಾಂಕ ೧-೯-೬೩ ರ ಬೆಳಿಗ್ಗೆ ಬೆಂಗಳೂರು ಗುಬ್ಬಿ ನಾಟಕ ಮಂದಿರದಲ್ಲಿ ನಡೆದ ಕನ್ನಡಿಗರ ಸಮ್ಮೇಳನದ ಪ್ರಾರಂಭೋತ್ಸವವನ್ನು ಆಸ್ಥಾನವಿದ್ವಾನ್ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಉದ್ಘಾಟಿಸಿದರು. ಪರಿಷತ್ತಿನ ಗೌರವ ಕೋಶಾಧಿಕಾರಿಗಳಾದ ಶ್ರೀ ಆರ್. ಅನಂತರಾಮ್ ಸಭಾಧ್ಯಕ್ಷತೆ ವಹಿಸಿದ್ದರು. ಶ್ರೀ ಬಾ. ಸು. ಕೃಷ್ಣಮೂರ್ತಿ, ನಾಟಕರತ್ನಂ ಶ್ರೀ ಜಿ. ಎಚ್. ವೀರಣ್ಣ ಮೊದಲಾದವರು ಭಾಷಣ ಮಾಡಿದರು.

**ತುಮಕೂರು**

ಸೆಪ್ಟೆಂಬರ್ ದಿನಾಂಕ ೧ರಂದು ತುಮಕೂರು ಜಿಲ್ಲಾ ಬರಹಗಾರರ ಸಂಘದ ಉದ್ಘಾಟನೆಯನ್ನು ಶ್ರೀ ಆದ್ಯ ರಂಗಾಚಾರ್ಯರು ನೆರವೇರಿಸಿದರು. ಸಿದ್ಧಗಂಗಾ ಮಠಾಧೀಶರಾದ ಶ್ರೀ ಶಿವಕುಮಾರಸ್ವಾಮಿಗಳವರು ಅಧ್ಯಕ್ಷತೆ ವಹಿಸಿದ್ದರು. ಜನಜೀವನಕ್ಕೆ ತಕ್ಕಂತಹ ಸಾಹಿತ್ಯ ನಿರ್ಮಾಣವಾಗಬೇಕಾದುದು ಅಗತ್ಯವೆಂದು ಶ್ರೀ ಆದ್ಯ ರಂಗಾಚಾರ್ಯರು ಹೇಳಿದರು. ಸಾಹಿತಿಯಾದವನು ತನ್ನ ಲೇಖನಿಯಿಂದ ಅದ್ಭುತ ಕಾರ್ಯಗಳನ್ನು ಸಾಧನೆ ಮಾಡಬಲ್ಲನೆಂದು ಅಧ್ಯಕ್ಷರು ತಿಳಿಸಿದರು.

**ಶಿವಮೊಗ್ಗ**

ಇಲ್ಲಿನ ಕನ್ನಡ ಯುವಜನ ಸಂಘದ ಕಾರ್ಯಕಾರಿ ಸಮಿತಿ ಡಾ|| ಸರ್ಜಾ ಚಂದ್ರಶೇಖರಯ್ಯನವರ ಅಧ್ಯಕ್ಷತೆಯಲ್ಲಿ ಇತ್ತೀಚೆಗೆ ಸೇರಿ, ಈಗ ನಡೆಯುತ್ತಿರುವ ವಿಧಾನ ಸಭೆಗಳ ಅಧಿವೇಶನದಲ್ಲಿಯೇ ಮೈಸೂರು ರಾಜ್ಯವನ್ನು ಕರ್ನಾಟಕವೆಂತಲೂ, ಕನ್ನಡವನ್ನು ಆಡಳಿತ ಭಾಷೆ ಎಂತಲೂ ಘೋಷಿಸುವಂತೆ ರಾಜ್ಯಪಾಲರನ್ನೂ ಮತ್ತು ಮುಖ್ಯಮಂತ್ರಿಗಳನ್ನೂ ಒತ್ತಾಯಪಡಿಸಬೇಕೆಂದು ತೀರ್ಮಾನಿಸಿತು.

**ಕುಂದಾಪುರ**

ಕನ್ನಡನುಡಿ, ಸಾಹಿತ್ಯ, ಸಂಸ್ಕೃತಿ, ಕಲೆಗಳ ಅಭಿವೃದ್ಧಿಗಾಗಿ ಕಾರ್ಯನಿರ್ವಹಿಸಲು 'ಕನ್ನಡ ಸಂಘ' ವೊಂದನ್ನು, ಇಲ್ಲಿ ಸ್ಥಾಪಿಸಲಾಯಿತು. ಶ್ರೀ ವಿ. ಕಾಳಿಂಗ ಹೆಬ್ಬಾರ್ ಅವರು ಅಧ್ಯಕ್ಷರಾಗಿಯೂ, ಶ್ರೀ ಗುಂಡ್ಮಿ ಚಂದ್ರಶೇಖರ ಐತಾಳರು ಉಪಾಧ್ಯಕ್ಷರಾಗಿಯೂ ಶ್ರೀ ಪಿ. ನಾರಾಯಣ ಹೇರ್ಳೆ ಅವರು ಕೋಶಾಧಿಕಾರಿಯಾಗಿಯೂ ಶ್ರೀ ಕೆ. ರಾಮಚಂದ್ರಕೊತ್ವಾಲ್ ಮತ್ತು ಶ್ರೀ ಎ. ಶಂಕರನಾರಾಯಣ ಹೆಬ್ಬಾರ್ ಇವರು ಜತೆ ಕಾರ್ಯದರ್ಶಿಗಳಾಗಿಯೂ ಆರಿಸಲ್ಪಟ್ಟರು.

**ನೈವೇಲಿ**

ಸ್ಥಳೀಯ ಕನ್ನಡ ಸಂಘದ ಐದನೆಯ ವಾರ್ಷಿಕ ಸರ್ವಸದಸ್ಯರ ಸಭೆ ಇತ್ತೀಚೆಗೆ ನಡೆದು ಈ ಅಧಿಕಾರ ವರ್ಗವನ್ನು ಆರಿಸಿತು. ಶ್ರೀ ಟಿ. ಶಂಕರರಾವ್ (ಅಧ್ಯಕ್ಷರು). ಶ್ರೀ ಎಸ್. ಎನ್. ಭೀಮರಾವ್ (ಉಪಾಧ್ಯಕ್ಷರು). ಶ್ರೀ ಎ. ಕೆ. ನಾರಾಯಣ್ (ಕೋಶಾಧಿಕಾರಿ). ಶ್ರೀ ಸಿ. ವೆಂಕಟರಾಮನ್ (ಆಡಿಟರ್). ಶ್ರೀ ಆರ್. ಎಸ್. ಅಯ್ಯಂಗಾರ್ (ಕಾರ್ಯದರ್ಶಿ). ಶ್ರೀ ಎಂ. ಕೆ. ಅಚ್ಯುತರಾವ್ (ಸಹಕಾರ್ಯದರ್ಶಿ).

**ಮುಂಬಯಿ**

ಇಲ್ಲಿನ ಕನ್ನಡ ಸಂಘದವರು ಬರುವ ಅಕ್ಟೋಬರ್ ೧೯-೨೦ ರಂದು ನಾಡ ಹಬ್ಬವನ್ನು ಆಚರಿಸಲು ನಿಶ್ಚಯಿಸಿದ್ದಾರೆ. ಕನ್ನಡದ ಹಿರಿಯ ಸಾಹಿತಿಗಳೊಬ್ಬರು ಮುಖ್ಯ ಅತಿಥಿಗಳಾಗಲಿರುವರು. ಈ ಸಂದರ್ಭದಲ್ಲಿ ಒಂದು ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಲಾಗಿದೆ.

**ಕಲಕತ್ತ**

೧೯೨೦ ರಿಂದ ೧೯೫೮ ರ ಅವಧಿಯಲ್ಲಿ ಭಾರತೀಯ ಭಾಷೆಗಳಲ್ಲಿ ಪ್ರಕಟವಾದ ಉತ್ಕೃಷ್ಟ ರಚನಾತ್ಮಕ ಸಾಹಿತ್ಯ ಗ್ರಂಥದ ಲೇಖಕನಿಗೆ ೧ ಲಕ್ಷ ರೂಪಾಯಿ ಮೊತ್ತದ ಪಾರಿತೋಷಕವನ್ನು ಕೊಡಲು ಇಲ್ಲಿಯ ಭಾರತೀಯ ಜ್ಞಾನ ಪೀಠವು ನಿರ್ಧರಿಸಿದೆ.

ಈ ಬಗ್ಗೆ ಸೂಚನೆಗಳನ್ನು ಸ್ವೀಕರಿಸುವ ಅವಧಿಯನ್ನು ಸೆಪ್ಟೆಂಬರ್ ೧೫ ರ ವರೆಗೆ ವಿಸ್ತರಿಸಲಾಗಿದೆ.

ಉತ್ತಮ ಗ್ರಂಥಗಳ ಆಯ್ಕೆಮಾಡುವ ಸಮಿತಿಯಲ್ಲಿ ಕನ್ನಡದ ಪರವಾಗಿ ಶ್ರೀ ಆರ್. ಆರ್. ದಿವಾಕರ್ ಅವರು ಸದಸ್ಯರಾಗಿದ್ದಾರೆ.

**ನವದೆಹಲಿ**

ಸೋವಿಯಟ್ ರಷ್ಯದಲ್ಲಿ ಐದು ಭಾರತೀಯ ಭಾಷೆಗಳ ಶಬ್ದಕೋಶವನ್ನು ಮುಂದಿನ ನಾಲ್ಕು ವರ್ಷಗಳ ಅವಧಿಯಲ್ಲಿ ಪ್ರಕಟಿಸಲು ಏರ್ಪಾಟು ಮಾಡಲಾಗಿದೆ ಎಂದು ಹೇಳಲಾಗಿದೆ. ಈ ಐದು ಭಾಷೆಗಳಲ್ಲಿ ಕನ್ನಡವೂ ಒಂದು.



# ನಮ್ಮ ರಾಷ್ಟ್ರಪತಿ*

(ಶ್ರೀ ಡಿ. ಆರ್. ರಾಮಯ್ಯನವರಿಂದ)

ರಾಷ್ಟ್ರಪತಿ, ದಾಟಲೆಪ್ಪತ್ತೈದು ಬರಿಸಮಂ
ದೊರೆಗಳಾಳಿದ ಸೀಮೆ, ಇದು ಚಕ್ರವರ್ತಿಗಳ್
ಒಳ್ ಕಿರೀಟವ ಧರಿಸಿ ಬಾಳ್ವೆಳಗ ನೀಡಲ್ಕೆ,
ನೀಸಿರ್ಪೆ ಸ್ವಾತಂತ್ರ್ಯ ಭಾರತದ ಚಂದ್ರಮಂ
ಲೋಕವಿಖ್ಯಾತಿಯಂ ಬೆಳಗಿ ಮುನ್ನಂ
ಆದರದಿ ನಮಿಸುವೆವು ಕೀರ್ತಿಪ್ರಸನ್ನಂ—
ಆ ಮೇರು ಪರ್ವತಕೆ ಸಾಟಿಯುಂಟೇ ಬಳಿಕ
ಕನ್ಯಾಕುಮಾರಿಗಂ ಮೇಟಿಯುಂಟೇ ಸಕಲ
ವಿದ್ಯಾಧರಂ ಸಾರ್ವಭೌಮ ನಿನಗಾರು ಎಣೆ
ಭಾರತೀಯರ ಸ್ಫೂರ್ತಿಕಿರಣ ರಾಧಾಕೃಷ್ಣ—
ಆಂಧ್ರ ವಂಗದಿ ಬೆಳೆದು ಮೈಸೂರ ಬಳಿ ಸಂದು,
ತಮಿಳುನಾಡಿನೊಳೆಸೆದು ನೀಸಾರ್ದೆ ಕೇಂದ್ರಮಂ,
ಆದರ್ಶ ಕಲ್ಪತರು ಕಾಮಧೇನುವಿನಂತೆ
ವಾಗ್ದೇವಿಯೊಳುಗುವರ ಸ್ವಾರ್ಥತೆಯ ನೀಗಿ—
ಎಲ್ಲರಿಗೆ ಬೇಕಾಗಿ ಬಲ್ಲವರ ಬೆಳಕಾಗಿ
ಪುಲ್ಲನಾಭನ ಲೀಲೆಯಿಂದೆಸಗಿ ಕರ್ತವ್ಯ
ದರಿವಿನಿಂದರಿಗಳಂ ಗೆಲ್ವದಟು ನಿನಗಿರಲ್
ಬೆಳಗು, ಓ ರಾಷ್ಟ್ರಪತಿ, ಭಾರತದ ಜ್ಯೋತಿ !

---

* ಕನ್ನಡ ಸಾಹಿತ್ಯ ಪರಿಷತ್ತು ಸೆಪ್ಟೆಂಬರ್ ದಿನಾಂಕ ೫ ರಂದು ಆಚರಿಸಿದ ರಾಷ್ಟ್ರಪತಿಯವರ ವರ್ಧಂತಿ ಉತ್ಸವದಂದು ರಚಿಸಿ ಪಠಿಸಿದ ಪದ್ಯವಿದು.

# ಕಣ್ಮರೆಯಾದ ಮೂವರು ವಿದ್ವಾಂಸರಿಗಾಗಿ ಕಂಬನಿ

## ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರಿಂದ

ಕನ್ನಡ ನಾಡಿನಲ್ಲಿ ಇತ್ತೀಚೆಗೆ ಆಪ್ತಬಂಧುಗಳ ವಿಯೋಗದಿಂದ ಬಾಷ್ಪಾಂಜಲಿಯು ತರಂಗಿಣಿ ಹರಿಯುವಂತಾಗಿದೆ. ಜನಪ್ರಿಯ ಕತೆ ಮತ್ತು ಕಾದಂಬರಿಕಾರರಾದ ಕರ್ನಾಟಕ ಮಾತೆಯ ಸುಪುತ್ರಿ ತ್ರಿವೇಣಿಯವರ ದುಃಖದ ಬೆನ್ನು ಹಿಂದೆಯೇ ಮೂರುಮಂದಿ ಕನ್ನಡ ಬಂಧುಗಳ ಮರಣವಾರ್ತೆಯನ್ನು ಕೇಳುವ ದುರದೃಷ್ಟ ಇಂದು ಕನ್ನಡಿಗರಿಗೆ ಪ್ರಾಪ್ತವಾಗಿದೆ. ಒಮ್ಮೊಮ್ಮೆ ಸುಖದಂತೆ ದುಃಖಗಳೂ ಒಂದರ ಹಿಂದೆ ಒಂದರಂತೆ ಬರುವುದೂ ಲೋಕದ ಸ್ವಭಾವವೆಂದು ತೋರುತ್ತದೆ.



**ಗೋವಿಂದ ಪೈ :** ಮಂಜೇಶ್ವರದ ಮಹರ್ಷಿಗಳು, ಕನ್ನಡ ನಾಡುನುಡಿಗಳ ಉಜ್ವಲಾಭಿಮಾನಿಗಳೂ, ಮಾಜಿ ಸಾಹಿತ್ಯ ಸಮ್ಮೇಳನಾಧ್ಯಕ್ಷರೂ (೧೯೪೯–ಬೊಂಬಾಯಿ), ಪ್ರಖ್ಯಾತ ಕವಿಗಳೂ, ವಿಖ್ಯಾತ ಸಂಶೋಧಕರೂ ಆದ ರಾಷ್ಟ್ರಕವಿ ಎಂ. ಗೋವಿಂದ ಪೈ ಅವರು ದಿನಾಂಕ ೬–೯–೬೩ರ ಬೆಳಿಗ್ಗೆ ಮಂಗಳೂರಿನ ತಮ್ಮ ಬಂಧುಗಳ ಗೃಹದಲ್ಲಿ ದಿವಂಗತರಾದರೆಂದು ಕೇಳಿ ಮರುಗದಿರುವ ಕನ್ನಡಿಗರಾರು? ಶ್ರೀ ಗೋವಿಂದ ಪೈ ಅವರು ಕನ್ನಡ ನಾಡಿನ ಮೊದಲ ಸಾಲಿನ ವಿದ್ವಾಂಸರು. ಅವರು ಬರೆದಿರುವ ಕವಿತೆಗಳೂ ಲೇಖನಗಳೂ ಅಸಂಖ್ಯಾತ; ಅವರ ಕವನಸಂಗ್ರಹ 'ಗಿಳಿವಿಂಡು' ೧೯೩೦ರಲ್ಲಿ ಪ್ರಕಟವಾಗಿದೆ. ೧೯೩೮ರಲ್ಲಿ ಅವರು ಬರೆದ ಭಕ್ತಿಗೀತೆ 'ಶ್ರೀ ಗೊಮ್ಮಟ ಜಿನಸ್ತುತಿ' ಅಚ್ಚಾಗಿ ಬೆಳಕುಕಂಡಿದೆ. ಅವರು ಬರೆದಿರುವ 'ಗೊಲ್ಗೊಥಾ' ಒಂದು ಶ್ರೇಷ್ಠ ಕೃತಿ. ಅದು ೧೯೩೬ರಲ್ಲಿ ಪ್ರಕಟವಾಗಿದೆ. 'ಗೊಲ್ಗೊಥಾ' ಮಹಾತ್ಮ ಏಸುವಿನ ಕಡೆಯ ದಿನಗಳ ಕಥೆಯನ್ನೊಳಗೊಂಡಿದೆ. ಪೂಜ್ಯ ಪೈ ರವರ ಮತ್ತೊಂದು ಕೃತಿ 'ವೈಶಾಖೀ' ೧೯೪೬ರಲ್ಲಿ ಬೆಳಕುಕಂಡಿದೆ. ಇದು ಬುದ್ಧನ ಪರಿನಿರ್ವಾಣವನ್ನು ಕುರಿತಾದ ಕಥೆ. ಅನಂತರ ಗೋವಿಂದ ಪೈ ಅವರ 'ಹೆಬ್ಬೆರಳು' ಎಂಬ ಕೃತಿ ಕನ್ನಡಿಗರ ಮನಸ್ಸನ್ನು ಸೆಳೆದಿದೆ. ಇದು ಭಾರತದ ಏಕಲವ್ಯನನ್ನು ಕುರಿತಾದ ಕಥೆ. ಇದು ಕೂಡ ಅವರ ಉತ್ಕೃಷ್ಟವಾದ ಕೃತಿ. ಇದು ೧೯೪೬ರಲ್ಲಿ ಪ್ರಕಟವಾಗಿದೆ. ಮಾನ್ಯ ಪೈ ಅವರ ಹೆಸರಿನಲ್ಲಿ 'ಮೂರು ಉಪನ್ಯಾಸಗಳು' ಎಂಬ ಪುಸ್ತಕವೊಂದು ಪ್ರಕಟವಾಗಿದೆ. ಇದರಲ್ಲಿ ರನ್ನನ ಪರಶುರಾಮ ಚರಿತೆ, ಚಕ್ರೇಶ್ವರ ಚರಿತೆ ಮತ್ತು ಗದಾಯುದ್ಧ ಕಾವ್ಯಗಳ ರಚನಾ ಕಾಲವನ್ನೂ ಬಸವೇಶ್ವರ ಕಾಲನಿರ್ಣಯವನ್ನೂ ಕನ್ನಡ ಸಾಹಿತ್ಯ ಪ್ರಾಚೀನತೆಯನ್ನೂ ಕುರಿತು ವಿದ್ವತ್‌ಪೂರ್ಣವಾಗಿ ಚರ್ಚಿಸಿದ್ದಾರೆ. ಇವರ ಕವಿತೆ ಮತ್ತು ಲೇಖನಗಳು ಕರ್ನಾಟಕದ ಎಲ್ಲ ಚಿಕ್ಕ ದೊಡ್ಡ ಪತ್ರಿಕೆಗಳಲ್ಲಿಯೂ ಪ್ರಕಟವಾಗಿವೆಯೆಂದರೆ ತಪ್ಪಲ್ಲ. ನಮ್ಮ ಶರಣ ಸಾಹಿತ್ಯದಲ್ಲಿಯೇ ಇವರು ಬಸವೇಶ್ವರ ಕಾಲನಿರ್ಣಯ, ಹರಿಹರ ರಾಘವಾಂಕರ ಕಾಲನಿರ್ಣಯ, ರೇವಣ ಸಿದ್ಧೇಶ್ವರ ಕಾಲವಿಚಾರ, ಮಾತೃಭೂಮೀಶ್ವರಾಷ್ಟಕ, ಉದ್ದಂಡ ಷಟ್ಪದಿಯನ್ನು ಕುರಿತು ಈ ಮೊದಲಾದ ಬಹಳ ಬೆಲೆಯುಳ್ಳ ಲೇಖನಗಳನ್ನು ಬರೆದಿದ್ದಾರೆ. ಪ್ರಬುದ್ಧ ಕರ್ನಾಟಕ, ಪರಿಷತ್ಪತ್ರಿಕೆಗಳಲ್ಲಿಯೂ ಇವರ ಲೇಖನಗಳು ಅಚ್ಚಾಗಿವೆ. ಇವರ ವಿಷಯವನ್ನು ಕುರಿತು ಶ್ರೀ ಜಿ. ಪಿ. ರಾಜರತ್ನಂ ಅವರು ೧೯೪೯ರಲ್ಲಿ ಕವಿ ಗೋವಿಂದ ಪೈ ಎಂಬ ಪುಟ್ಟ ಗ್ರಂಥವೊಂದನ್ನು ಪ್ರಕಟಿಸಿದ್ದಾರೆ. ಒಟ್ಟಿನಲ್ಲಿ ಶ್ರೀ ಗೋವಿಂದ ಪೈ ಅವರಿಂದ ಕನ್ನಡ ನಾಡು ನುಡಿಗೆ ಆಗಿರುವ ಉಪಕಾರ ಮಿಗಿಲಾದುದು.

ಕವಿ ಗೋವಿಂದ ಪೈ ಅವರು ದೈವಭಕ್ತಿ, ದೇಶಭಕ್ತಿ, ಸ್ನೇಹಪರತೆ, ಸತ್ಯಸಂಧತೆ, ವಿನಯಪರತೆ, ಮೊದಲಾದ ಸದ್ಗುಣಗಳಿಗೆ ಭಂಡಾರದಂತಿದ್ದವರು. ಬಹು ಭಾಷಾ

ಪಂಡಿತರು, ಬಹುಶಾಸ್ತ್ರ ಕೋವಿದರು. ಕರ್ನಾಟಕದಲ್ಲಿ ಆಗಿ ಹೋದ ಡಾ|| ಆರ್. ಶಾಮಶಾಸ್ತ್ರಿ, ಪೂಜ್ಯ ಆರ್. ನರಸಿಂಹಾಚಾರ್ಯ, ಪೂಜ್ಯ ಎಂ. ಶಾಮರಾವ್ ಇವರ ಮಾಲೆಯಲ್ಲಿ ಪರಿಗಣಿಸಲರ್ಹರಾದವರು. ಮಾನ್ಯ ಎಂ. ಗೋವಿಂದ ಪೈ ಅವರ ಕವಿತೆಗಳನ್ನೂ ಲೇಖನಗಳನ್ನೂ ಒಟ್ಟಿಗೆ ಸಂಗ್ರಹಿಸಿ ಒಂದು ಸಂಪುಟವಾಗಿ ಪ್ರಕಟಿಸಿದರೆ ಜನತೆಗೆ ಉಪಕಾರವಾಗುತ್ತದೆ. ಮರಣಕಾಲದಲ್ಲಿ ಪೈ ಅವರಿಗೆ ೮೧ ವರ್ಷಗಳಾಗಿದ್ದಿತೆಂದು ತಿಳಿದುಬರುತ್ತದೆ. ಇದು ಅವರ ತುಂಬು ಜೀವನದ ಒಂದು ನಿದರ್ಶನವೆನ್ನಬಹುದು.

**ದಿವಂಗತ ದ. ಬಾ. ಕುಲಕರ್ಣಿ:** ದಿ|| ದ. ಬಾ. ಕುಲಕರ್ಣಿಯವರು ಧಾರವಾಡದ ತರುಣ ಸಾಹಿತಿಗಳು. ಇವರ ಜನನ ತಾ|| ೨೬-೩-೧೯೧೬ರಲ್ಲಿ. ಇವರ ಹುಟ್ಟೂರು ಬೆಳಗಾಂ ಜಿಲ್ಲಾ, ರಾಮದುರ್ಗ ತಾಲ್ಲೂಕು, ಮುನೇನಕೊಪ್ಪ. ಅವರ ಮರಣ ತಾ|| ೧೧-೮-೧೯೬೩ರಲ್ಲಿ. ಒಟ್ಟು ಜೀವಿತಕಾಲ ೪೭ ವರ್ಷಗಳು ಮಾತ್ರ.



ಇವರು ಧಾರವಾಡದಲ್ಲಿ ಕೇವಲ ಸಾಹಿತಿಗಳೇ ಅಲ್ಲದೆ ಪುಸ್ತಕ ವ್ಯಾಪಾರಿಗಳಾಗಿಯೂ ಇದ್ದರು. ಇವರಿಗೆ ಇಂಗ್ಲೀಷ್, ಮರಾಠಿ ಮೊದಲಾದ ಭಾಷೆಗಳ ಪರಿಚಯವೂ ಇತ್ತು. ಇವರು ಬರೆದಿರುವ ಗ್ರಂಥಗಳು: ೧. ನಾನು ಕಂಡ ಗೌರಮ್ಮ (೧೯೩೯); ೨. ಹಕ್ಕಿನೋಟ (೧೯೪೫); ೩. ಹಾಸುಹೊಕ್ಕು – ಸಣ್ಣಕತೆಗಳ ಸಂಗ್ರಹ (೧೯೫೦); ೪. ಪರಿಹಾರ (ಕಾದಂಬರಿ) (೧೯೫೧); ೫. ದೀಪದಾನ (ಸಂಪಾದಿತ) (೧೯೫೨-೫೩); ೬. ಕಪ್ಪು ಹುಡುಗಿ (ಸಣ್ಣ ಕತೆಗಳು, ೧೯೫೬); ೭. ಸಾವಧಾನ (ಪ್ರಬಂಧಗಳು, ೧೯೬೦); ೮. ಸೀಮಾ ಪುರುಷರು (೧೯೬೨); ೯. ಸ್ಮೃತಿ ಚಿತ್ರಗಳು (ಮರಾಠಿಯಿಂದ ಅನುವಾದಿಸಲ್ಪಟ್ಟುದು)—ಇವರ ಗ್ರಂಥಮಾಲೆಯ ಹೆಸರು ಲಲಿತ ಸಾಹಿತ್ಯಮಾಲೆ. ಇವರ ಮರಣವು ಅನಿರೀಕ್ಷಿತವೂ ಅಕಾಲಿಕವೂ ಎಂದು ಹೇಳಲಾಗಿದೆ. ಧಾರವಾಡದ 'ಜಯಂತಿ'ಯಲ್ಲಿ ೧೯೬೩ ನೇ ಸೆಪ್ಟೆಂಬರ್‌ನಲ್ಲಿ ಇವರನ್ನು ಕುರಿತಾದ ಒಂದು ವಿಶೇಷ ಸಂಚಿಕೆ ಪ್ರಕಟವಾಗಿದೆ. ಸರಸ ಸಾಹಿತಿಗಳಾದ ಇವರ ವಿಯೋಗದಿಂದ ಧಾರವಾಡದಲ್ಲಿ ಒಬ್ಬ ಉತ್ತಮ ಕನ್ನಡ ಕಾರ್ಯಕರ್ತರು ಇಲ್ಲದಂತಾಯಿತು.

**ದಿ|| ಪಂಡಿತ ಗಂಜಾಂ ತಿಮ್ಮಣ್ಣಯ್ಯನವರು:** ಇವರು ಮೈಸೂರಿನ ಪ್ರಖ್ಯಾತ ಕನ್ನಡ ಸಂಸ್ಕೃತ ವಿದ್ವಾಂಸರು. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸದಸ್ಯರೂ ಬೆಂಗಳೂರು ವಿಜಯ ಕಾಲೇಜಿನ ಕನ್ನಡ ಪ್ರಾಧ್ಯಾಪಕರೂ ಆದ ಶ್ರೀ ಜಿ. ವೆಂಕಟಸುಬ್ಬಯ್ಯನವರ ಪೂಜ್ಯ ತಂದೆಯವರು. ಈ ಮಹನೀಯರು ವಿಧಿನಿಯಮದಂತೆ ಸುಮಾರು ತಮ್ಮ ೮೪ನೆಯ ವಯಸ್ಸಿನಲ್ಲಿ ಮೈಸೂರಿನ ಸ್ವಗೃಹದಲ್ಲಿ ಪರಮಾತ್ಮನ ಪಾದಾರವಿಂದವನ್ನು ಸೇರಿದರು. ಘನ ವಿದ್ವಾಂಸರಾದ ಇವರು ಮೈಸೂರು ರಾಜ್ಯದ ಹಲವು ಪ್ರೌಢಶಾಲೆಗಳಲ್ಲಿಯೂ ಮೈಸೂರಿನ ಟ್ರೈನಿಂಗ್ ಕಾಲೇಜಿನಲ್ಲಿಯೂ ಉಪಾಧ್ಯಾಯರಾಗಿದ್ದು ೧೯೩೪ರಲ್ಲಿ ನಿವೃತ್ತರಾದರು.



ಇವರ ಸ್ಥಳ ಶ್ರೀರಂಗಪಟ್ಟಣದ ಸಮೀಪದಲ್ಲಿರುವ ಗಂಜಾಂ. ಇವರು ಬ್ರಾಹ್ಮಣರಲ್ಲಿ ವೈದಿಕ ಮನೆತನಕ್ಕೆ ಸೇರಿದವರು.

ವಿದ್ವತ್ ಪ್ರಪಂಚದಲ್ಲಿಯೇ ಕಾಲ ಕಳೆದವರು. ಆದುದರಿಂದಲೇ ಇವರಿಗೆ ಜೀವನದಲ್ಲಿ ಪಾಂಡಿತ್ಯವು ಹಾಸುಹೊಕ್ಕಾಗಿತ್ತು.

ದಿ॥ ಗಂಜಾಂ ತಿಮ್ಮಣ್ಣಯ್ಯನವರಿಗೆ ಸಂಸ್ಕೃತ ಪುರಾಣಗಳನ್ನೆಲ್ಲಾ ಕನ್ನಡಕ್ಕೆ ತರ್ಜುಮೆ ಮಾಡಬೇಕೆಂಬ ಹೆಬ್ಬಯಕೆ ಇತ್ತು. ಆದಕ್ಕಾಗಿಯೇ ಪುರಾಣ ಕಥಾವಳಿ ಎಂಬ ಮಾಸಿಕವನ್ನು ಪ್ರಾರಂಭಿಸಿದರು. ಶಿವಮಹಾಪುರಾಣ, ಗಣೇಶ ಪುರಾಣ ಇವುಗಳನ್ನೆಲ್ಲ ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದರು. ಸಂಸ್ಕೃತ ವಿಷ್ಣುಪುರಾಣವನ್ನು ಕನ್ನಡಕ್ಕೆ ಅನುವಾದಿಸಿದರು. ದಕ್ಷಿಣಾಮೂರ್ತಿ ಸ್ತೋತ್ರಕ್ಕೆ ಮತ್ತು ಶ್ರೀ ರುದ್ರಮಂತ್ರಕ್ಕೆ ಕನ್ನಡದಲ್ಲಿ ಟೀಕೆಯನ್ನು ಬರೆದರು. ಸಂಸ್ಕೃತ ಚಂಪೂರಾಮಾಯಣವನ್ನು ಅನುಸರಿಸಿ ಕನ್ನಡದಲ್ಲಿ ರಘುವೀರ ಚರಿತೆ ಎಂಬ ಗ್ರಂಥವನ್ನು ಬರೆದರು. ಸಾಹಿತ್ಯ ಸಂಸ್ಕೃತಿಗಳ ಅಭಿಮಾನಿಗಳೂ ದೈವಭಕ್ತಿ ಸಂಪನ್ನರೂ ಆದ ಇವರ ವಿಯೋಗವು, ಅವರ ತುಂಬಿದ ಕುಟುಂಬಕ್ಕೇ ಅಲ್ಲದೇ ಕನ್ನಡ ನಾಡಿಗೇ ಹೆಚ್ಚಿನ ನಷ್ಟವನ್ನುಂಟು ಮಾಡಿದೆಯೆಂದು ಹೇಳಬಹುದು.

ಈ ಮೇಲೆ ಕಂಡ ಮೂರು ಮಂದಿ ಕನ್ನಡ ನಾಡಿನ ಗಣ್ಯ ಸಾಹಿತಿಗಳ ವಿಯೋಗವು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಿಗೂ ಸದಸ್ಯರಿಗೂ ಅಪಾರವಾದ ದುಗುಡವನ್ನುಂಟು ಮಾಡಿದೆ. ಈಶ್ವರೇಚ್ಛೆಗೆ ಉಪಾಯವಿಲ್ಲ. 'ಜಾತಸ್ಯ ಮರಣಂ ಧ್ರುವಂ'. ಈ ಮೂರು ಮಂದಿ ಮಹನೀಯರ ಪವಿತ್ರಾತ್ಮಗಳಿಗೆ ಭಗವಂತನು ಶಾಂತಿಯನ್ನೀಯಲಿ. ವಿಯೋಗಿಗಳಾದ ಅವರ ಬಂಧುಮಿತ್ರರ ಮನಸ್ಸಿಗೆ ಸಮಾಧಾನವನ್ನುಂಟುಮಾಡಲಿ ಎಂದು ವಿನಮ್ರಪೂರ್ವಕವಾಗಿ ಪ್ರಾರ್ಥಿಸುತ್ತೇನೆ.



---

# ಮೂವರು ಸಾಹಿತಿಗಳ ನಿಧನ

## ಕನ್ನಡ ಸಾಹಿತ್ಯ ಪರಿಷತ್ತಿನ ಸಂತಾಪ

ಈಚೆಗೆ ನಿಧನಹೊಂದಿದ ಮೂವರು ಸಾಹಿತಿಗಳ ಬಗ್ಗೆ ಸಂತಾಪವನ್ನು ಸೂಚಿಸಲು ಸೆ. ದಿನಾಂಕ ೧೩ರ ಸಂಜೆ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಸಭೆ ನಡೆಯಿತು. ಆರೋಗ್ಯ ಮಂತ್ರಿಗಳಾದ ಮಾನ್ಯ ಡಾ|| ಕೆ. ನಾಗಪ್ಪ ಆಳ್ವ ಅವರು ಅಧ್ಯಕ್ಷತೆ ವಹಿಸಿದ್ದರು.

ಪರಿಷತ್ತಿನ ಕಾರ್ಯದರ್ಶಿಗಳಾದ ಡಾ|| ಕೆ. ಎಂ. ಕೃಷ್ಣ ರಾವ್ ಅವರು ಪ್ರಾರಂಭದಲ್ಲಿ ಸಭೆಯ ಉದ್ದಿಶ್ಯವನ್ನು ವಿವರಿಸಿದರು. ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ದಿ|| ಗೋವಿಂದ ಪೈ ಅವರ ಜೀವನ ಮತ್ತು ಸಾಹಿತ್ಯಗಳ ವಿಚಾರವಾಗಿ ಮಾತನಾಡಿದರು. ಹಾಗೂ ಅವರ ಸರಳ ಆದರ್ಶ ನಡೆನುಡಿಗಳನ್ನು ಸ್ಮರಣೆಗೆ ತಂದರು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಶ್ರೇಷ್ಠ ಸಾಹಿತಿಗಳಾದ ಶ್ರೀ ಗೋವಿಂದ ಪೈ ಅವರು, ತರುಣ ಸಾಹಿತಿ ಶ್ರೀ ದ. ಬಾ. ಕುಲಕರ್ಣಿ, ಹಿರಿಯರಾದ ಪಂಡಿತ ಗಂಜಾಂ ತಿಮ್ಮಣ್ಣಯ್ಯನವರು ಈ ಮೂವರು ಕಣ್ಮರೆಯಾದ ಬಗ್ಗೆ ಅನುತಾಪ ವ್ಯಕ್ತಪಡಿಸಿದರು. ಶ್ರೀ ಎನ್. ಕೆ. ಕುಲಕರ್ಣಿಯವರು ದಿವಂಗತ ದ. ಬಾ. ಕುಲಕರ್ಣಿಯವರು ಪುಸ್ತಕ ವ್ಯಾಪಾರಿಗಳಾಗಿ ಪ್ರಕಾಶಕರಾಗಿ, ಸಾಹಿತಿಗಳಾಗಿ ದುಡಿಯುತ್ತಿದ್ದುದನ್ನು ವಿಶದಪಡಿಸಿ, ಜೀವನದ ನಡುವಿನಲ್ಲಿ ಬೆಳೆಯುತ್ತಿದ್ದ ಸಂಸಾರವನ್ನು ಬಿಟ್ಟುಹೋದ ಕರುಣಾಜನಕ ಚಿತ್ರವನ್ನು ಮುಂದೆ ತಂದು ಅವರ ಬರಹಗಳನ್ನು ಇನ್ನಾದರೂ ಪ್ರಕಟಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟರು.

ಮಾನ್ಯ ಡಾ|| ನಾಗಪ್ಪ ಆಳ್ವ ಅವರು ದಿವಂಗತ ಗೋವಿಂದ ಪೈ ಅವರ ಸಾಹಿತ್ಯ ಸಾಧನೆ, ಸೌಜನ್ಯಗಳನ್ನು ಕುರಿತು ಹೇಳಿ, ಅವರ ಸನ್ಮಾನಕ್ಕಾಗಿ ಏರ್ಪಡಿಸಿದ್ದ ದಿನಕ್ಕೆ ಮೊದಲಾಗಿಯೇ ಅವರು ದೈವಾಧೀನರಾದ ವಿಷಯ ಪ್ರಸ್ತಾಪಿಸಿದರು.

ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ನಿಧನರಾದ ಮೂವರ ಭಾವಚಿತ್ರಗಳನ್ನು ಸಂಬಂಧೀಕರು ಪರಿಷತ್ತಿಗೆ ಕೊಟ್ಟು ಉಪಕಾರವೆಸಗಬೇಕು. ಡಾ|| ಆಳ್ವರಂತಹ ಮಹನೀಯರ ನೆರವು ದೊರೆಯುವುದಾದರೆ ದಿ|| ಗೋವಿಂದ ಪೈ ಅವರ ಎಲ್ಲ ಬರಹಗಳ ಒಂದು ಸಂಕಲನವನ್ನು ಪರಿಷತ್ತು ಪ್ರಕಟಿಸುವ ಸಾಹಸ ಮಾಡುವದು ಸಾಧ್ಯವಾಗಬಹುದು ಎಂದು ಸೂಚಿಸಿದರು. ನಿಧನರಾದ ಮೂವರೂ ಸಾಹಿತಿಗಳ ಬಗ್ಗೆ ಸಂತಾಪ ಸೂಚಕ ನಿರ್ಣಯಗಳನ್ನು ಶ್ರೀ ಬ. ನ. ಸುಂದರರಾಯರು ಓದಿದರು. ಅವು ಅಂಗೀಕಾರವಾದುವು. ನಿರ್ಣಯಗಳನ್ನು ಅವರವರ ಆಪ್ತರಿಗೆ ಕಳಿಸತಕ್ಕದೆಂದು ತೀರ್ಮಾನವಾಯಿತು.

### ನಿರ್ಣಯಗಳು

೧. ಕರ್ಣಾಟಕದ ಸುಪ್ರಸಿದ್ಧ ಇತಿಹಾಸ ಸಂಶೋಧಕರೂ, ಕವಿಶ್ರೇಷ್ಠರೂ, ಬಹು ಭಾಷಾಪಿಶಾರದರೂ, ನಾಡು ನುಡಿಗಳ ಉಜ್ವಲಾಭಿಮಾನಿಗಳೂ, ೩೪ ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರೂ ಆದ ಪೂಜ್ಯ ಎಂ. ಗೋವಿಂದ ಪೈ ಅವರು ದಿನಾಂಕ ೬-೯-೬೩ ನೆಯ ಶುಕ್ರವಾರ ಮಂಗಳೂರಿನಲ್ಲಿ ನಮ್ಮನ್ನಗಲಿ ಹೋದರೆಂದು ಕೇಳಿ ನಮಗೆಲ್ಲಾ ತುಂಬ ದುಃಖ ಉಂಟಾಗಿದೆ. ಶ್ರೀಯುತರ ಕಾವ್ಯರಾಶಿಯೂ, ಸಂಶೋಧನ ಸಾಮಗ್ರಿಯೂ ನಮ್ಮ ಬಳಿ ಇರುವುದು ನಮಗೊಂದು ಸಮಾಧಾನವಾಗಿದೆ. ಅವರ ಜೀವನವು ಮಾರ್ಗದರ್ಶಕವಾಗಲೆಂದೂ, ಅವರ ಆತ್ಮಕ್ಕೆ ಶಾಂತಿ ದೊರೆಯಲೆಂದೂ, ಅವರ ಬಂಧುವರ್ಗಕ್ಕೆ ಈ ದುಃಖವನ್ನು ಸಹಿಸುವ ಚಿತ್ತಸ್ಥೈರ್ಯಗಳನ್ನು ದಯಪಾಲಿಸಲೆಂದೂ ಈ ಸಭೆಯು ಭಗವಂತನನ್ನು ಪ್ರಾರ್ಥಿಸುತ್ತದೆ.

೨. ಧಾರವಾಡದ ದ. ಬಾ. ಕುಲಕರ್ಣಿಯವರಂತಹ ಉತ್ಸಾಹೀ ತರುಣರೂ, ಕತೆಗಾರರೂ, ಪ್ರಬಂಧಕಾರರೂ, ಸಾಹಿತ್ಯಪ್ರಸಾರನಿರತರೂ ಆಗಿದ್ದು ಅವರು ಪೂರ್ವ ವಯಸ್ಸಿನಲ್ಲಿಯೇ ತೀರಿಕೊಂಡರೆಂದು ಕೇಳಿ ನಮಗೆ ತುಂಬಾ ವ್ಯಸನವಾಗಿದೆ. ಅವರ ಆತ್ಮಕ್ಕೆ ಶಾಂತಿ ದೊರಕಲೆಂದೂ, ಅವರ ಬಂಧು ಬಳಗಕ್ಕೆ ಈ ದುಃಖವನ್ನು ಸಹಿಸುವ ಚಿತ್ತಸ್ಥೈರ್ಯವನ್ನು ದಯಪಾಲಿಸಲೆಂದೂ ಈ ಸಭೆಯು ಭಗವಂತನನ್ನು ಪ್ರಾರ್ಥಿಸುತ್ತದೆ.

೩. ಪಂಡಿತವರ್ಯರೂ, ಪುರಾಣ ಗ್ರಂಥಗಳನ್ನು ಕನ್ನಡಕ್ಕೆ ತರುವುದರಲ್ಲಿ ಸದಾ ನಿರತರೂ, ಆದರ್ಶ ಅಧ್ಯಾಪಕರೂ ಆಗಿದ್ದ ಗಂಜಾಂ ತಿಮ್ಮಣ್ಣಯ್ಯನವರು ಇದೇ ಸೆಪ್ಟೆಂಬರ್ ದಿನಾಂಕ ೭ ನೇ ಶನಿವಾರ ಇಹಲೋಕವನ್ನು ತ್ಯಜಿಸಿದರೆಂದು ನಮಗೆ ಅಪಾರ ದುಃಖವುಂಟಾಗಿದೆ. ಅವರ ಆತ್ಮಕ್ಕೆ ಶಾಂತಿ ದೊರಕಲೆಂದೂ, ಅವರ ಬಂಧುಬಳಗಕ್ಕೆ ಈ ದುಃಖವನ್ನು ಸಹಿಸುವ ಚಿತ್ತಸ್ಥೈರ್ಯಗಳನ್ನು ದಯಪಾಲಿಸಲೆಂದೂ ಈ ಸಭೆಯು ಭಗವಂತನನ್ನು ಪ್ರಾರ್ಥಿಸುತ್ತದೆ.

# ಸಂಪಾದಕೀಯ

## ೧. ನಮ್ಮ ರಾಷ್ಟ್ರಪತಿಗೆ ಶುಭಾಶಯ

ಆಚಾರ್ಯಪುರುಷ ದಾರ್ಶನಿಕಶ್ರೇಷ್ಠ ಡಾ|| ರಾಧಾಕೃಷ್ಣನ್ ಅವರಿಗೆ ಸೆಪ್ಟೆಂಬರ್ ೫ನೇ ತಾರೀಖು ಗುರುವಾರಕ್ಕೆ ಎಪ್ಪತ್ತೈದು ವರ್ಷಗಳು ತುಂಬಿದುವು. ಹತ್ತು ವರ್ಷಗಳ ಕಾಲ ಉಪರಾಷ್ಟ್ರಪತಿಗಳಾಗಿ ಭಾರತದ ಕೀರ್ತಿ ಪ್ರತಿಷ್ಠೆಗಳನ್ನು ಬೆಳಗಿದ ಅನುಪಮ ತತ್ವಜ್ಞಾನಿ ಡಾ|| ರಾಧಾಕೃಷ್ಣನ್ ಅವರು ಸ್ವತಂತ್ರ ಭಾರತದ ದ್ವಿತೀಯ ರಾಷ್ಟ್ರಪತಿಯಾಗಿ ೧೯೬೨ನೇ ಮೇ ೧೩ರಂದು ಡಾ|| ರಾಜೇಂದ್ರ ಪ್ರಸಾದರ ತರುವಾಯ ಆ ಉನ್ನತ ಸ್ಥಾನವನ್ನು ಅಲಂಕರಿಸಿದರು. ಇವರು ಕೇವಲ ತತ್ವಜ್ಞಾನಿಯೇ ಅಲ್ಲ; ರಾಜನೀತಿ ವಿಶಾರದರು, ಶಿಕ್ಷಣ ಶಾಸ್ತ್ರ ಪರಿಣತರು, ಪ್ರಭಾವ ಪೂರ್ಣ ವಾಗ್ಮಿಗಳು ; ಮತ್ತು ಲಲಿತಕಲೆಗಳ ಪರಿಜ್ಞಾನದ ಜೊತೆಗೆ ವ್ಯವಹಾರ ಕುಶಲರಾದ ಮಹನೀಯರು ಇವರು. ಸ್ವಾಮಿ ವಿವೇಕಾನಂದರ ಸ್ಫೂರ್ತಿಯುತ ಭಾಷಣಗಳನ್ನು ಕೇಳಿ, ತಾನೂ ಒಬ್ಬ ಹಿಂದು ಎಂದು ಹೆಮ್ಮೆಯಿಂದ ಹಿಂದೂ ಧರ್ಮದ ಬಗ್ಗೆ ಆಗುತ್ತಿದ್ದ ಅಪಪ್ರಚಾರಗಳನ್ನು ನಿರ್ಮೂಲ ಮಾಡಲು ಅಪ್ರತಿಮ ದಾರ್ಶನಿಕರಾಗಿ ಸೇವೆ ಸಲ್ಲಿಸಿದ ಧರ್ಮನಿಷ್ಠರಿವರು.

ಡಾ|| ರಾಧಾಕೃಷ್ಣನ್‌ರವರು ೧೮೮೮ರ ಸೆಪ್ಟೆಂಬರ್ ೫ ರಂದು ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯಲ್ಲಿರುವ ತಿರುತ್ತಣಿ ಗ್ರಾಮದಲ್ಲಿ ಜನಿಸಿದರು. ಆದರೆ ಅವರನ್ನು ಮೊಟ್ಟ ಮೊದಲು ಗುರುತಿಸಿದ್ದು ಬಂಗಾಳ, ಕಲ್ಕತ್ತಾ ವಿಶ್ವವಿದ್ಯಾನಿಲಯದವರು. ಐದನೇ ಕಿಂಗ್‌ಜಾರ್ಜ್ ತತ್ವಜ್ಞಾನದ ಪ್ರಾಧ್ಯಾಪಕರಾಗಿದ್ದರು. ಆದರೆ ಬೇರೆ ಬೇರೆ ಕಾರಣಗಳಿಗಾಗಿ ಆಂಧ್ರ, ತಮಿಳುನಾಡು, ಮೈಸೂರು ರಾಜ್ಯಗಳವರು ಅವರನ್ನು ತಮ್ಮವರೇ ಎಂದು ಅಭಿಮಾನಪಟ್ಟುಕೊಳ್ಳುತ್ತಾರೆ. ಆದರೆ ನಿಜವಾಗಿಯೂ ಅವರು ಭಾರತೀಯರು. ಅವರಲ್ಲಿ ಪ್ರಾಂತೀಯ ಭಾವನೆಗಳಿಲ್ಲ.

ಡಾ|| ರಾಧಾಕೃಷ್ಣನ್ ಅವರು ಮದರಾಸು ಕ್ರಿಶ್ಚಿಯನ್ ಕಾಲೇಜಿನಲ್ಲಿ ೧೯೦೯ರಲ್ಲಿ ಎಂ.ಎ. ಪದವೀಧರರಾಗಿ, ೧೯೧೭ರ ವರೆಗೆ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದರು. ೧೯೧೮ರಿಂದ ೧೯೨೧ರ ವರೆಗೆ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ವೇದಾಂತದ ಪ್ರಾಧ್ಯಾಪಕರಾಗಿದ್ದರು. ಈ ಸಮಯದಲ್ಲಿಯೇ ಅವರು ತಮ್ಮ ಪ್ರಥಮ ಎರಡು ಉದ್ಗ್ರಂಥಗಳನ್ನು ಬರೆದರು. "The Philosophy of Rabindranath Tagore" ಮತ್ತು "The Reign of Religion in Contemporary Philosophy". ಇವೆರಡು ಪುಸ್ತಕಗಳು ಡಾ|| ರಾಧಾಕೃಷ್ಣನ್‌ರವರ ಹೆಸರನ್ನು ಬೆಳಕಿಗೆ ತಂದುವು. ತರುವಾಯ ಕಲ್ಕತ್ತ ವಿಶ್ವವಿದ್ಯಾನಿಲಯದ ಉಪಕುಲಪತಿ ಸರ್ ಅಶುತೋಷ್ ಮುಖರ್ಜಿ ಅವರು ಇವರನ್ನು ಆಹ್ವಾನಿಸಿ ವೇದಾಂತದ ಪ್ರಾಧ್ಯಾಪಕರಾಗಿ ಸ್ಥಾನವನ್ನು ಕೊಟ್ಟರು. ಡಾ|| ರಾಧಾಕೃಷ್ಣನ್‌ರವರು ೧೯೨೧ರಿಂದ ೨೦ ವರ್ಷಗಳ ಕಾಲ ಈ ಅಧಿಕಾರವನ್ನು ನಿರ್ವಹಿಸಿದರು. ಕಲ್ಕತ್ತೆಗೆ ಬಂದ ಮೂರು ವರ್ಷಗಳೊಳಗಾಗಿ "Indian Philosophy" ಎಂಬ ತಮ್ಮ ಅಮೋಘ ಕೃತಿಯನ್ನು ಪ್ರಕಟಿಸಿದರು. ೧೯೩೧ರಲ್ಲಿ ಆಂಧ್ರ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ ನಿಂತರು. ೧೯೪೮ರಲ್ಲಿ ಭಾರತ ಸರ್ಕಾರವು ನೇಮಿಸಿದ ವಿಶ್ವವಿದ್ಯಾಲಯ ಗ್ರಾಂಟ್ಸ್ ಸಮಿತಿಗೆ ಡಾ|| ರಾಧಾಕೃಷ್ಣನ್ ಅವರನ್ನು ಅಧ್ಯಕ್ಷರನ್ನಾಗಿ ಮಾಡಿತು. ತರುವಾಯ ಅವರು ರಷ್ಯಾದ ರಾಯಭಾರಿಗಳಾಗಿ, ಉಪರಾಷ್ಟ್ರಪತಿಗಳಾಗಿ ಭಾರತದ ಕೀರ್ತಿಧ್ವಜವನ್ನು ದೇಶವಿದೇಶಗಳಲ್ಲಿ ಸ್ಥಾಪಿಸಿದ್ದಾರೆ. ಇಂದು ನಮ್ಮ ಮೆಚ್ಚಿನ ರಾಷ್ಟ್ರಪತಿಗಳಾಗಿ ಕಂಗೊಳಿಸುತ್ತ ಭಾರತದ ಅಪಾರವಾದ ಸಂಪತ್ ಸಾಧನೆಗಳಿಗೆ ಬೆಂಬಲವನ್ನು ನೀಡಿರುತ್ತಾರೆ. ಪರಮಾತ್ಮನು ಇವರಿಗೆ ದೀರ್ಘಾಯುರಾರೋಗ್ಯಗಳನ್ನಿತ್ತು ಅವರ ಅಮೂಲ್ಯವಾದ ಸೇವೆಯು ಭಾರತೀಯರಿಗೆ ಲಭ್ಯವಾಗುವಂತೆ ಕರುಣಿಸಲೆಂದು ಹಾರೈಸುತ್ತೇವೆ.

## ೨. ಕನ್ನಡ ನಮ್ಮ ರಾಜ್ಯದ ಆಡಳಿತ ಭಾಷೆಯಾಯಿತು

ಕನ್ನಡ ಭಾಷೆಯನ್ನು ಮೈಸೂರು ರಾಜ್ಯದ ಸರ್ಕಾರಿ ಉದ್ದೇಶಗಳಿಗಾಗಿ ಬಳಸಬೇಕಾದ ಭಾಷೆಯನ್ನಾಗಿ ಅಂಗೀಕರಿಸುವುದಕ್ಕೂ, ರಾಜ್ಯದ ವಿಧಾನ ಮಂಡಲದ ಕಾರ್ಯಕಲಾಪಗಳನ್ನು ಮಾತ್ರ ನಡೆಸಲು ಇಂಗ್ಲೀಷ್ ಭಾಷೆಯ ಬಳಕೆಯನ್ನು ಈಗಿನಂತೆಯೇ ಮುಂದುವರಿಸುವುದಕ್ಕೂ, ಅವಕಾಶ ಕಲ್ಪಿಸುವ ಮಸೂದೆಯೊಂದನ್ನು (The Mysore Official Languages Bill 1963) ಇದೇ ತಿಂಗಳು ೩ನೇ ತಾರೀಖು ಮಂಗಳವಾರದಂದು ಮೈಸೂರು ವಿಧಾನಸಭೆಯಲ್ಲಿ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪನವರು ಮಂಡಿಸಿ

ದರು. ಮಸೂದೆಯ ಉದ್ದೇಶಗಳನ್ನು ವ್ಯಕ್ತಪಡಿಸುತ್ತಾ ಮುಖ್ಯಮಂತ್ರಿಗಳವರು ಈ ರೀತಿ ತಿಳಿಸಿದರು: "ರಾಜ್ಯದಲ್ಲಿ ಕನ್ನಡವನ್ನು ರಾಜ್ಯಭಾಷೆಯಾಗಿ ಬಳಸುವ ವಿಚಾರದಲ್ಲಿ ಸಲಹೆಗಳನ್ನು ಒಪ್ಪಿಸಲು ರಾಜ್ಯಸರ್ಕಾರದವರು ೧೯೫೪ ರಲ್ಲಿ ಸಮಿತಿಯೊಂದನ್ನು ನೇಮಕ ಮಾಡಿದರು. ಆ ಸಮಿತಿಯ ಸಲಹೆಗಳನ್ನು ಪರಿಶೀಲಿಸಿದ ತರುವಾಯ ಕನ್ನಡ ಭಾಷೆಯನ್ನು ರಾಜ್ಯದ ಆಡಳಿತ ಭಾಷೆಯಾಗಿ ಮಾಡುವ ಉದ್ದೇಶವನ್ನು ಕಾರ್ಯಗತ ಮಾಡಲು ಅನೇಕ ಕ್ರಮಗಳನ್ನು ಕೈಗೊಳ್ಳಲಾಯಿತು. ಈ ಕಾರ್ಯನೀತಿಯನ್ನು ಮುಂದುವರಿಸಿ ಸಂವಿಧಾನದ ೩೪೫ ನೆಯ ಅನುಚ್ಛೇದದ ಮೇರೆಗೆ ಕನ್ನಡ ಭಾಷೆಯನ್ನು ರಾಜ್ಯದಲ್ಲಿ ಸರ್ಕಾರಿ ಉದ್ದೇಶಗಳಿಗಾಗಿ ಬಳಸತಕ್ಕ ಭಾಷೆಯಾಗಿ ಅಂಗೀಕರಿಸಲು ಅವಕಾಶ ಕಲ್ಪಿಸಿ ಶಾಸನ ನಿರ್ಣಯ ಮಾಡಬೇಕೆಂದು ಈಗ ಉದ್ದೇಶಿಸಲಾಗಿದೆ."

"ಸಂವಿಧಾನದ ೨೧೦ ನೆಯ ಅನುಚ್ಛೇದದ (೨) ನೆಯ ಕ್ಲಾಜಿನ ಮೇರೆಗೆ, ರಾಜ್ಯದ ವಿಧಾನ ಮಂಡಲದವರು ಕಾನೂನಿನ ಮೂಲಕ ಅನ್ಯಥಾ ಅವಕಾಶ ಕಲ್ಪಿಸಿದ್ದ ಹೊರತು, ಸಂವಿಧಾನವು ಪ್ರಾರಂಭವಾದ ಹದಿನೈದು ವರ್ಷಗಳ ಅವಧಿಯು ಮುಗಿದ ನಂತರ, ಎಂದರೆ ೧೯೬೫ ನೆಯ ಇಸವಿ ಜನವರಿ ೨೬ ನೇ ದಿನಾಂಕದ ತರುವಾಯ, ರಾಜ್ಯದ ವಿಧಾನ ಮಂಡಲದ ಕಾರ್ಯಕಲಾಪಗಳನ್ನು ನಡೆಸಲು ಇಂಗ್ಲಿಷ್ ಭಾಷೆಯ ಬಳಕೆಯನ್ನು ಇಟ್ಟಿರತಕ್ಕದ್ದಲ್ಲ. ಆದರೆ, ರಾಜ್ಯ ವಿಧಾನಮಂಡಲದ ಕಾರ್ಯಕಲಾಪಗಳನ್ನು ನಡೆಸಲು ಕನ್ನಡ ಮತ್ತು ಹಿಂದಿ ಭಾಷೆಗಳ ಜೊತೆಗೆ ಇಂಗ್ಲಿಷ್ ಭಾಷೆಯ ಬಳಕೆಯನ್ನೂ ಮುಂದುವರಿಸಿಕೊಂಡು ಬರುವುದು ಅವಶ್ಯಕವೆಂದು ಭಾವಿಸಲಾಗಿದೆ."

—ಹೀಗೆ ಮಸೂದೆಯ ಉದ್ದೇಶಗಳನ್ನು ವಿವರಿಸಿದ ಬಳಿಕ ಮುಖ್ಯಮಂತ್ರಿಗಳು ತಮ್ಮ ಪ್ರಸ್ತಾವನಾ ಭಾಷಣದಲ್ಲಿ– "ಕನ್ನಡವನ್ನು ಅಧಿಕೃತ ಭಾಷೆಯನ್ನಾಗಿ ಮಾಡಲು ಕೆಲವು ತೊಂದರೆಗಳಿದ್ದರೂ ಹೆಚ್ಚುಕಾಲ ಮುಂದಕ್ಕೆ ಹಾಕಬಾರದೆಂಬ ಭಾವನೆಯಿಂದ ಈ ಅಧಿಕೃತ ಭಾಷಾ ಮಸೂದೆಯನ್ನು ತರಲಾಗಿದೆ" ಎಂದರು. ಇದು ಒಪ್ಪತಕ್ಕ ಮಾತು.

ಮಸೂದೆಯನ್ನು ವಿಧಾನಸಭೆಯ ಸಕಲ ಸದಸ್ಯರೂ ಸ್ವಾಗತಿಸಿದರು. ಒಬ್ಬರು ಸದಸ್ಯರು ಮಾತ್ರ ಮಸೂದೆಯನ್ನು ತಂದಿರುವುದು ಸಕಾಲವಲ್ಲವೆಂತಲೂ, ತುರ್ತು ಪರಿಸ್ಥಿತಿಯಲ್ಲಿ ಇದನ್ನು ತರಬಾರದಾಗಿತ್ತೆಂದೂ ಅಭಿಪ್ರಾಯಪಟ್ಟರೇ ವಿನಾ ಮಸೂದೆಯನ್ನು ನೇರವಾಗಿ ವಿರೋಧಿಸಲಿಲ್ಲ. ಮಸೂದೆಯು ಸಭೆಯಲ್ಲಿ ಸರ್ವಾನುಮತದಿಂದ ೫ ನೇ ತಾರೀಖು ಗುರುವಾರ ಅಂಗೀಕೃತವಾಯಿತು. ಕನ್ನಡ ಸಾಹಿತ್ಯ ಪರಿಷತ್ತಿನ ಬಹುದಿನದ ಕನಸು ನನಸಾಯಿತು.

ಶ್ರೀಮಾನ್ ದೊಡ್ಡಮೇಟಿ ಅನ್ನದಾನಪ್ಪನವರು ಅಧಿಕೃತ ಭಾಷಾ ಮಸೂದೆಯನ್ನು ಸ್ವಾಗತಿಸಿದರಾದರೂ, ಸರ್ಕಾರದವರನ್ನು ಪೂರ್ಣವಾಗಿ ಅಭಿನಂದಿಸಲಾರೆನೆಂದು ನುಡಿದುದು ಗಮನಾರ್ಹವಾಗಿದೆ. ರಾಜ್ಯಕ್ಕೆ ಕನ್ನಡ ಸಂಸ್ಕೃತಿಯ ಪ್ರತೀಕವಾದ 'ಕರ್ನಾಟಕ' ಎಂಬ ಹೆಸರನ್ನಿಡುವವರೆಗೆ ಸರ್ಕಾರವನ್ನು ಪೂರ್ಣವಾಗಿ ಅಭಿನಂದಿಸುವುದಿಲ್ಲವೆಂಬ ಅವರ ಅಭೀಷ್ಟಸಿದ್ಧಿಯು ಅತಿ ಶೀಘ್ರದಲ್ಲುಂಟಾಗಲೆಂದು ನಾವು ಹಾರೈಸುತ್ತೇವೆ.

ಕನ್ನಡ ಸಾಹಿತ್ಯ ಪರಿಷತ್ತು ೧೯೧೩ ರಲ್ಲಿ ಸ್ಥಾಪನೆಯಾದಂದಿನಿಂದ ನಿರಂತರವಾಗಿ, ನಿರರ್ಗಳವಾಗಿ, ಪರಂಪರಾಗತವಾಗಿ ಸಮ್ಮೇಳನಗಳಲ್ಲೂ, ಸಮಾರಂಭಗಳಲ್ಲೂ ಸಾರುತ್ತಿದ್ದ ಅಮರವಾಣಿ ಕನ್ನಡಿಗರಿಗೆಲ್ಲ ಗೊತ್ತಿದೆ. ಅದರಂತೆ ೧೯೫೬ ರ ನವೆಂಬರ್ ೧ ರಲ್ಲಿ ಕನ್ನಡ ಭೂಭಾಗಗಳನ್ನೊಳಗೊಂಡ ವಿಶಾಲ ಮೈಸೂರು ರೂಪುಗೊಂಡು ಕರ್ನಾಟಕ ಪ್ರಾಂತ ನಿರ್ಮಾಣಕ್ಕೆ ನಾಂದಿಯಾಯಿತು. ಈಗ ೧೯೬೩ನೇ ಸೆಪ್ಟೆಂಬರ್ ೫ ರಲ್ಲಿ ಕನ್ನಡ ಅಧಿಕೃತ ಭಾಷಾ ಮಸೂದೆಯು ಕಾನೂನಾಗಿ ರೂಪುಗೊಳ್ಳಲು ಸಮ್ಮತಿಯನ್ನು ಪಡೆದಿದೆ. ಮೊದಲು ರೆವಿನ್ಯೂ, ವ್ಯವಸಾಯ, ವಿದ್ಯಾಭ್ಯಾಸ, ಸಹಕಾರ, ಎಕ್ಸೈಜು, ಅರಣ್ಯ ಮತ್ತು ಪೋಲೀಸ್ ಇಲಾಖೆಗಳಲ್ಲಿ ಕನ್ನಡ ಭಾಷೆಯನ್ನು ಆಡಳಿತ ವ್ಯವಹಾರ ಭಾಷೆಯನ್ನಾಗಿ ತರುವ ಸಂಭವವಿದೆ. ಈ ಮಹತ್ಕಾರ್ಯ ಸಾಧನೆಗೆ ಅನುಕೂಲವಾಗುವಂತೆ ಘನ ಸರ್ಕಾರದವರು ಪಾರಿಭಾಷಿಕ ಶಬ್ದಗಳನ್ನು ಬೆಳೆಸಬೇಕು. ಕನ್ನಡ ಟೈಪ್‌ರೈಟರ್ ಯಂತ್ರವನ್ನು ಹೆಚ್ಚಾಗಿ ಬಳಸಬೇಕು. ಕನ್ನಡ ಶೀಘ್ರಲಿಪಿಯನ್ನು ಪ್ರಯೋಗಿಸಬೇಕು. ಕನ್ನಡ ವಸ್ತುಕೋಶ ಮತ್ತು ಶಬ್ದಕೋಶಗಳನ್ನು ಶೀಘ್ರದಲ್ಲಿ ಸಿದ್ಧಪಡಿಸಬೇಕು. ಇದಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಸಲಹೆ ಸಹಾನುಭೂತಿಯನ್ನು ನೇರವಾಗಿ ಪಡೆಯಬೇಕು.

## ಕನ್ನಡಿಗರೀರ್ವರಿಗೆ ಕೇಂದ್ರ ಪ್ರಶಸ್ತಿ

ಕೇಂದ್ರ ಸಂಗೀತ ನಾಟಕ ಅಕಾಡೆಮಿಯವರು ಕನ್ನಡ ನಾಡಿನ ಜನಪ್ರಿಯ ನಾಟಕ ಕರ್ತರಾದ "ಶ್ರೀರಂಗ" (ಪ್ರೊಫೆಸರ್ ಆರ್. ವಿ. ಜಾಗೀರದಾರ) ಅವರಿಗೂ, ಸಂಗೀತ ವಿದ್ವನ್ಮಣಿ ಶ್ರೀ ಬಿ. ದೇವೇಂದ್ರಪ್ಪನವರಿಗೂ ಪ್ರಶಸ್ತಿಯನ್ನು ದಯಪಾಲಿಸಿರುವುದು ಕನ್ನಡ ಜನತೆಗೆ ಅಪಾರ ಸಂತೋಷವನ್ನುಂಟುಮಾಡಿದೆ.



ಕರ್ನಾಟಕದಲ್ಲಿ ನಾಟಕಗಳ ಕೊರತೆ ಹಳಗನ್ನಡ ಕಾಲದಿಂದಲೂ ಇದೆ. ಇಂದಿಗೂ ರಂಗಭೂಮಿಗೆ ಯೋಗ್ಯವಾದ, ಜನಸಾಮಾನ್ಯರಿಗೆ ಗ್ರಾಹ್ಯವಾಗುವಂತಹ ಸಮಯೋಚಿತವಾದ ಸಂಗೀತಮಿಶ್ರ ಚಿಕ್ಕ ಅಥವಾ ದೊಡ್ಡ ನಾಟಕಗಳು ವಿರಳ. ವಿಜ್ಞಾನ ಸಂಶೋಧನ ಕ್ಷೇತ್ರವು ವಿಸ್ತಾರವಾಗಿ ಬೆಳೆಯತೊಡಗಿದಂತೆ ಸಾಹಿತ್ಯ ಸ್ವರೂಪವೂ ಬದಲಾಗುತ್ತಿದೆ. ಶ್ರೀರಂಗರ ನಾಟಕಗಳೆಲ್ಲವೂ ರಂಗಭೂಮಿಯನ್ನು ಕಣ್ಣು ಮುಂದಿಟ್ಟುಕೊಂಡು ಬರೆದುವೇ ಆಗಿವೆ. ಕೈಲಾಸಂರ ತರುವಾಯ ಇಂದಿನ ಕರ್ನಾಟಕ ರಂಗಭೂಮಿಗೆ ಶ್ರೀರಂಗರೇ ಆಚಾರ್ಯಸ್ಥಾನವನ್ನು ಅಲಂಕರಿಸಿದ್ದಾರೆ. "ಶ್ರೀರಂಗ" ಎಂಬ ಲೇಖನದಿಂದ ಖ್ಯಾತರಾಗಿರುವ ಶ್ರೀ ಆದ್ಯ ರಂಗಾಚಾರ್ಯರು ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಬಹಳಕಾಲ ಕೆಲಸ ಮಾಡಿದರು. ತರುವಾಯ ತಮ್ಮ ಉದ್ಯೋಗಕ್ಕೆ ರಾಜೀನಾಮೆಯಿತ್ತು ರಂಗಭೂಮಿಯ ಮೇಲೆ ನಾಟಕ ಲೇಖನಗಳಿಂದ ಅಖಂಡವಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರು ಕೆಲವುಕಾಲ ಬೆಂಗಳೂರು ಆಕಾಶವಾಣಿಯ ಕಲಾನಿರ್ಮಾಪಕ ಶಾಖೆಯಲ್ಲಿ ಸೇವೆ ಸಲ್ಲಿಸಿದ್ದಾರೆ. ಇಂತಹ ನಾಟಕಕಲಾವತಂಸರಾದ 'ಶ್ರೀರಂಗ' ಅವರಿಗೆ ಕೇಂದ್ರ ಸಂಗೀತ ನಾಟಕ ಅಕಾಡೆಮಿಯವರು ಇತ್ತಿರುವ ಗೌರವವು ಯುಕ್ತವೂ, ಸೂಕ್ತವೂ ಆಗಿದೆ.

ಶ್ರೀಮಾನ್ ಬಿ. ದೇವೇಂದ್ರಪ್ಪನವರು ಕರ್ನಾಟಕ ಸಂಗೀತಗಾರರಲ್ಲಿ ಅಗ್ರಸ್ಥಾನವನ್ನು ಪಡೆದಿದ್ದಾರೆ. ಗಂಭೀರವಾದ ಇವರ ಸಂಗೀತವು ಮನಮೋಹಕವಾಗಿರುತ್ತದೆ. ಭಾರತ ಸರ್ಕಾರವು ಚೀಣಾಕ್ಕೆ ಕಳುಹಿಸಿದ್ದ ಸಾಂಸ್ಕೃತಿಕ ನಿಯೋಗದಲ್ಲಿ ಶ್ರೀ ದೇವೇಂದ್ರಪ್ಪನವರೂ ಹೋಗಿ, ತಮ್ಮ ಸಂಗೀತ ಸೌರಭವನ್ನು ಬೀರಿ ಬಂದಿದ್ದಾರೆ. ಇವರು ಹಾಡುಗಾರಿಕೆಯಲ್ಲಿ ಮಾತ್ರವೇ ಅಲ್ಲದೆ, ತಂತೀ ವಾದ್ಯದಲ್ಲಿಯೂ ನಿಷ್ಣಾತರಾಗಿದಾರೆ. ಭಾರತ ಸರ್ಕಾರದವರು ಇಂತಹ ಪ್ರತಿಭಾವಂತರನ್ನು ಗೌರವಿಸಿರುವುದು ಕರ್ನಾಟಕ ಸಂಗೀತಕ್ಕೆ ಹೆಚ್ಚಿನ ಘನತೆಯನ್ನು ತಂದಿರುತ್ತದೆ.



## ಕಂಬನಿ

**ಕಣ್ಮರೆಯಾದ ಕನ್ನಡ ಕಾವ್ಯಸಿಂಧು ಗೋವಿಂದ ಪೈ**

ಕನ್ನಡ ಕಾವ್ಯಸಿಂಧು ಗೋವಿಂದ ಪೈಯವರು ಕಣ್ಮರೆಯಾದರು. ಕನ್ನಡಿಗರ ಭಾಗ್ಯರತ್ನವೊಂದು ಉರುಳಿತು. ೧೯೬೩ ಮಾರ್ಚಿ ೨೩ ದಿನಾಂಕಕ್ಕೆ ಅವರಿಗೆ ಎಂಭತ್ತು ವರ್ಷ ತುಂಬಿತ್ತು. ಆದರೆ ಇದೇ ತಿಂಗಳು ೬ನಾಂಕ ೬ಕ್ಕೆ ಅವರು ನಮ್ಮನ್ನಗಲುವರೆಂಬುದನ್ನು ನಂಬುವುದಾದರೂ ಹೇಗೆ?

ಪೈಗಳವರದು ಮಂಗಳೂರಿನ ಹೆಸರಾಂತ ಮನೆತನ; ಸಾವುಕಾರ ಬಾಪ್ಪೈ ಮನೆತನ. ಆದರೆ ಅವರು ಹುಟ್ಟಿದ್ದು, ಬೆಳೆದದ್ದು, ಈಗ ಇದ್ದದ್ದು ಮಂಜೇಶ್ವರದಲ್ಲಿ; ತಮ್ಮ ತಾಯಿಯವರ ತವರುಮನೆಯಲ್ಲಿ.

ಪೈಗಳವರ ಸಾಹಿತ್ಯಸೃಷ್ಟಿ ಮಹೋನ್ನತವಾದದ್ದು; ಬಹುಮುಖವಾದದ್ದು. ಇವೆಲ್ಲಕ್ಕಿಂತ ಅವರಿಗೆ ಕನ್ನಡ ದೇಶಾಭಿಮಾನ ಅಗಾಧವಾಗಿತ್ತು. ಒಮ್ಮೆ ದಿವಂಗತ ದ. ಬಾ. ಕುಲಕರ್ಣಿಯವರು ಕಂಡು ಭಾಷಾ ಪ್ರಾಂತಗಳ ವಿಂಗಡನೆಯ ಮಾತನ್ನೆತ್ತಿದಾಗ—“ ಚಂದ್ರಗಿರಿ ಹೊಳೆಯೀಚೆಯ ನಾಡು ಅದೆಂತು ಕೇರಳವಾದೀತು ? ಮಂಜೇಶ್ವರ ಎಂದೆಂದಿಗೂ ದಕ್ಷಿಣ ಕನ್ನಡ ಜಿಲ್ಲೆ ” ಎಂದು ಭಾವಾವೇಶದಿಂದ ನುಡಿದರು. ಈಗಲಾದರೂ ಇವರ ದಿವ್ಯವಾಣಿ ಕಾರ್ಯಗತವಾಗಲಿ.

ಪೈಗಳವರಿಗೆ ಪದವಿಯೂ ಬೇಕಾಗಿರಲಿಲ್ಲ. ಪ್ರಚಾರವೂ ಬೇಕಾಗಿರಲಿಲ್ಲ. ಹಿಂದೆ ಮದರಾಸು ಸರ್ಕಾರದವರು ಅವರನ್ನು “ಕನ್ನಡದ ರಾಷ್ಟ್ರಕವಿ” ಎಂದು ನಿರ್ಣಯಿಸಿದ ಸೂಚನೆಯನ್ನು ಒಪ್ಪಿಸಲು ಅಪ್ಪೇಪ್ಪರು ಪಟ್ಟಪಾಡು ಅನುಭವಿಸಿದವರೇ ಬಲ್ಲರು. ಎರಡು ಸಲ ಬೇಡವೆಂದು ತಪ್ಪಿಸಿಕೊಂಡ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷ ಪದವಿಯನ್ನು ೧೯೫೦ರಲ್ಲಿ ಅವರಿಗೊಪ್ಪಿಸುವುದು ಎಷ್ಟು ಕಠಿಣಸಾಧ್ಯವೆಂದು ಅಂದಿನ ಕನ್ನಡ ಸಾಹಿತ್ಯ ಪರಿಷತ್ತಿನ ಹೊಣೆಹೊತ್ತವರು ಎಂದಿಗೂ ಮರೆಯಲಾರರು. ಅವರಿಗೊಂದು ಸನ್ಮಾನ ಗ್ರಂಥವನ್ನು ಅರ್ಪಿಸುವ ವಿಚಾರದ ಪ್ರಸ್ತಾಪ ಸೂಚನೆಗಳನ್ನು ಅವರು ತೀವ್ರವಾಗಿ ವಿರೋಧಿಸಿದ್ದಾರೆ.

ಅವರ ಮೊದಲನೆಯ ಕೃತಿ ತುಳುನಾಡಿನ ವೇಣೂರಲ್ಲಿಯ ಗೊಮ್ಮಟೇಶ್ವರನ ಮಸ್ತಕಾಭಿಷೇಕಕ್ಕೆ ಕರೆಬಂದ ಪ್ರಯುಕ್ತ ರಚಿಸಿದ ೩೫ ವೃತ್ತಗಳುಳ್ಳ ಪ್ರಾಸರಹಿತ ಕೃತಿ “ ಶ್ರೀ ಗೊಮ್ಮಟ ಜಿನಸ್ತುತಿ ” ೧೯೨೪ ರಲ್ಲಿ ಪ್ರಕಟವಾಯಿತು. ೧೯೩೦ ರಲ್ಲಿ “ ಗಿಳಿವಿಂಡು ” ಎಂಬ ಕವಿತಾ ಸಂಕಲನ ಬೆಳಕು ಕಂಡಿತು. ಪಾಶ್ಚಾತ್ಯ ಸಾಹಿತ್ಯದಲ್ಲಿನ “ Sonnet ” ಮಾದರಿಯಲ್ಲಿ ಬರೆದ ಮೊತ್ತಮೊದಲನೆಯ ಚತುರ್ದಶಪದಿಯೆನಿಸಿದ “ ಕವಿತಾವತಾರ ” ಇರುವುದು ಈ ಸಂಕಲನದಲ್ಲಿ. “ ಗೊಲ್ಗೊಥಾ ”— ಇದು ೩೬೬ ಪಂಗ್ತಿಗಳ ಮೇರುಕೃತಿ. ಯೇಸುವಿನ ಕಡೆಯ ದಿನದ ಚಿತ್ರಣವೇ ಈ ಕಾವ್ಯದ ಗುರಿ. ಮಹಾಭಾರತದ ಆದಿಪರ್ವದಲ್ಲಿ ಏಕಲವ್ಯನ ಕಥೆಯನ್ನೇ ಕಥಾವಸ್ತುವನ್ನಾಗಿರಿಸಿ ಬರೆದ ನಾಲ್ಕು ನೋಟಗಳುಳ್ಳ ನಾಟಕವೇ “ ಹೆಬ್ಬೆರಳು ”. ಬುದ್ಧನ ಕೊನೆಯ ದಿನದ ಖಂಡಕಾವ್ಯ “ ವೈಶಾಖಿ ”. ಇತ್ತೀಚೆಗೆ “ ಶ್ರೀಕೃಷ್ಣಚರಿತ್ರೆ ” ಎಂಬ ಗದ್ಯ ಲೇಖನವೂ, “ ಚಿತ್ರಭಾನು ” ಎಂಬ ಹೆಸರಿನಲ್ಲಿ ೧೯೪೨ರ ರಾಜಕೀಯ ಆಂದೋಲನವನ್ನು ಚಿತ್ರಿಸುವ ದುರಂತ ನಾಟಕವೂ ಪ್ರಕಟವಾಗಿವೆ.

ಇಂತಹ ಪ್ರತಿಭಾಶಾಲಿಯಾದ ಕವಿಯೂ ಸಮರ್ಥ ಸಂಶೋಧಕರೂ ಆಗಿದ್ದ ಅಸಾಮಾನ್ಯ ವ್ಯಕ್ತಿ ನಮ್ಮನ್ನಗಲಿ ಅತೀವ ದುಃಖಕ್ಕೀಡುಮಾಡಿದ್ದಾರೆ. ಭಗವಂತನು ಅವರ ಆತ್ಮಕ್ಕೆ ಚಿರಶಾಂತಿಯನ್ನೀಯಲೆಂದು ಹಾರೈಸುತ್ತೇವೆ.

## ದಿವಂಗತ ದ. ಬಾ. ಕುಲಕರ್ಣಿಯವರು

ಜನಪ್ರಿಯ ತರುಣ ಸಾಹಿತಿಯೂ, ಧಾರವಾಡದ “ ಲಲಿತ ಸಾಹಿತ್ಯ ಮಾಲೆ ”ಯ ಪ್ರಕಾಶಕರೂ ಆದ ದತ್ತಾತ್ರೇಯ ಬಾಳಕೃಷ್ಣ ಕುಲಕರ್ಣಿಯವರು ತಮ್ಮ ೪೪ ನೆಯ ವಯಸ್ಸಿನಲ್ಲಿ ನಮ್ಮನ್ನಗಲಿ ಕನ್ನಡನಾಡನ್ನು ದುಃಖಸಾಗರದಲ್ಲಿ ಮುಳುಗಿಸಿದ್ದಾರೆ. ಇತ್ತೀಚೆಗೆ ಇವರು “ಜಯಂತಿ” ಮಾಸ ಪತ್ರಿಕೆಯಲ್ಲಿ ಗೋವೆಯ ಹೋರಾಟದ ಹಿನ್ನೆಲೆಯುಳ್ಳ “ ಚಲತ್ ” ಕಾದಂಬರಿಯೊಂದನ್ನು ಧಾರಾವಾಹಿಯಾಗಿ ಪ್ರಕಟಿಸುತ್ತಿದ್ದರು. ಮರಣ ಹೊಂದುವ ದಿನ ಇದರ ಭಾಗವೊಂದನ್ನು ಬರೆಯುತ್ತಿದ್ದರಂತೆ. ಆಗ ಒಮ್ಮೆಲೇ ಲೇಖನಿ ಕೈಜಾರಿ ಬಿದ್ದಾಗ ಇದೇಕೆ ಹೀಗಾಯಿತು ಎಂದು ಅಲ್ಲಿಗೇ ಬಿಟ್ಟರಂತೆ. ಆದರೆ ದೈವಸಂಕಲ್ಪ ಬೇರೆಯಾಗಿತ್ತು.

ದ. ಬಾ. ಕುಲಕರ್ಣಿಯವರು ಇಂಗ್ಲಿಷ್ ಓದಿದವರಲ್ಲ. ಅದಕ್ಕಾಗಿ ಕೊರಗುತ್ತಲೂ ಇರಲಿಲ್ಲ. ಅವರ ಕೃತಿಗಳಲ್ಲಿ ಕನ್ನಡದ ಮಣ್ಣಿನ ಕಂಪು ಸೂಸುತ್ತಿರುತ್ತದೆ. “ ಪರಿಹಾರ ” ಎಂಬ ಕಾದಂಬರಿ, “ ಹಾಸು ಹೊಕ್ಕು ”, “ಕಪ್ಪು ಹುಡುಗಿ”, “ ನಾಳಿನ ಕನಸು ” ಎಂಬ ಕಥಾಸಂಗ್ರಹಗಳು, “ ಸಾವಧಾನ ” ಎಂಬ ಪ್ರಬಂಧ, “ ಪುಂಜ ” ಮತ್ತು “ ಹಕ್ಕಿನೋಟ ” ಇವು ಇವರ ಸಾಹಿತ್ಯ ಸೃಷ್ಟಿಗೆ ಸಾಕ್ಷಿಯಾಗಿವೆ. “ ಲಕ್ಷ್ಮೀಬಾಯಿ ಟಿಳಕ ” ಎಂಬವರ ಆತ್ಮಚರಿತ್ರೆಯನ್ನೂ ಮರಾಠಿಯಿಂದ ಕನ್ನಡಕ್ಕೆ ಅನುವಾದ ಮಾಡಿದ್ದಾರೆ.

ದ. ಬಾ. ಕುಲಕರ್ಣಿಯವರು ಯೋಗ್ಯ ಕೃತಿಗಳನ್ನು ಪ್ರಕಟಿಸಿ ಪ್ರಕಾಶಕ್ಕೆ ತರುತ್ತಿದ್ದರು. ೧೯೩೫ಕ್ಕೆ ಹಿಂದೆಯೇ ಬಗಲಲ್ಲಿ ಚೀಲವನ್ನು ಜೋತಾಡಿಸಿಕೊಂಡು ಪುಸ್ತಕ ವ್ಯಾಪಾರದ ನೆಲದಲ್ಲಿ ಕನ್ನಡ ನಾಡಿನ ಬಹುಭಾಗವನ್ನು ಸುತ್ತಿದರು. ಕೇವಲ ಮುಲ್ಕೀ ಪರೀಕ್ಷೆ ಪಾಸು ಮಾಡಿದ ಅವರಿಗೆ ಜೀವನವೇ, ಕನ್ನಡ ನಾಡೇ ಒಂದು ವಿದ್ಯಾಲಯವಾಗಿತ್ತು.

ದ. ಬಾ. ಅವರದು ಒಳ್ಳೆಯ ಮನ; ದೃಢವಾದ ಮನ. ನಾಡಿನ ನಾಲ್ದೆಸೆಗಳ ಗಾಳಿ ಬೆಳಕುಗಳನ್ನು ಕಂಡು ಉಂಡು ಬೆಳೆದ ಮನ. ಇಂತಹ ತರುಣ ಸಾಹಿತಿಯು ಕನ್ನಡಿಗರನ್ನು ಅಗಲಿ ಅಪಾರ ದುಃಖಕ್ಕೆ ಈಡುಮಾಡಿದ್ದಾರೆ. ದೇವರು ಇವರ ಆತ್ಮಕ್ಕೆ ಶಾಂತಿಯನ್ನೀಯಲೆಂದು ಹಾರೈಸುತ್ತೇವೆ.

## ದಿವಂಗತ ಪಂಡಿತ ಗಂಜಾಂ ತಿಮ್ಮಣ್ಣಯ್ಯನವರು

ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹಕ ಸಮಿತಿಯ ಸದಸ್ಯರೂ ಮಾಜಿ ಕಾರ್ಯದರ್ಶಿಗಳೂ ಆದ ಪ್ರೊಫೆಸರ್ ಜಿ. ವೆಂಕಟಸುಬ್ಬಯ್ಯನವರ ಪಿತೃವರ್ಯರಾದ ಪಂಡಿತ ಗಂಜಾಂ ತಿಮ್ಮಣ್ಣಯ್ಯನವರು ಇದೇ ೭ ನೆಯ ತಾರೀಖು ದೈವಾಧೀನರಾದರೆಂದು ತಿಳಿಸಲು ವಿಷಾದಿಸುತ್ತೇವೆ. ಶ್ರೀರಂಗಪಟ್ಟಣದ ಬಳಿ ಇರುವ ಗಂಜಾಂ ಎಂಬ ಊರಿನಲ್ಲಿ ಹುಟ್ಟಿದ ಶ್ರೀ ತಿಮ್ಮಣ್ಣಯ್ಯನವರು ವೈದಿಕ ಕುಟುಂಬಕ್ಕೆ ಸೇರಿದವರು. ಬಾಲ್ಯದಲ್ಲಿ ಮನೆತನದ ವಿದ್ವತ್ತಿನ ಆಶ್ರಯದಲ್ಲಿ ಬೆಳೆದು ಮೈಸೂರಿನ ಟ್ರೈನಿಂಗ್ ಕಾಲೇಜಿನಲ್ಲಿ ಪಂಡಿತ ಪರೀಕ್ಷೆಗೆ ಕುಳಿತು ಪಂಡಿತ ಪದವಿಯನ್ನು ಪಡೆದರು. 'ಅಶೋಕ ವಿಜಯ ನಾಟಕ'ದ ಪರಮಿ ಪದ್ಮನಾಭಯ್ಯನವರು, 'ಜೈನಧರ್ಮ ಪರಿಭಾಷೆಯ' ಮಹದೇವ ಪ್ರಭಾಕರ ಪೂಜಾರರು ಇವರ ಸಹಾಧ್ಯಾಯಿಗಳಾಗಿದ್ದರು. ಪ್ರೊ|| ಎಂ. ಹಿರಿಯಣ್ಣನವರು, ಮೈಸೂರು ಸೀತಾರಾಮ ಶಾಸ್ತ್ರಿಗಳು ಮುಂತಾದ ಮಹಿಮಾವಂತರಾದ ಉಪಾಧ್ಯಾಯರ ದಿವ್ಯ ಸನ್ನಿಧಿಯಲ್ಲಿ ವಿದ್ಯಾರ್ಜನೆ ಮಾಡಿದ ಇವರಿಗೆ ಆ ಮಹನೀಯರ ಜೀವನಕ್ರಮವೇ ಮಾರ್ಗದರ್ಶಕವಾಗಿತ್ತು.

ಬಳಿಕ, ಉಪಾಧ್ಯಾಯ ವೃತ್ತಿಯನ್ನು ಅವಲಂಬಿಸಿ ಮೈಸೂರು ದೇಶದ ಅನೇಕ ಕಡೆಗಳಲ್ಲಿ ಹೈಸ್ಕೂಲುಗಳಲ್ಲಿಯೂ, ಮೈಸೂರಿನ ಗಂಡಸರ, ಹೆಂಗಸರ ಟ್ರೈನಿಂಗ್ ಕಾಲೇಜುಗಳಲ್ಲಿಯೂ ಸೀನಿಯರ್ ಪಂಡಿತರಾಗಿದ್ದು ೧೯೩೮ರಲ್ಲಿ ನಿವೃತ್ತಿ ಹೊಂದಿದರು.

ಸಂಸ್ಕೃತ ಮತ್ತು ಕನ್ನಡಗಳಲ್ಲಿ ಇವರಿಗೆ ಅಪಾರ ಪಾಂಡಿತ್ಯವಿದ್ದರೂ ಎಲೆಯಮರೆಯ ಕಾಯಿಯಂತೆ ಇವರು ಬಾಳಿದರು. ಸಂಸ್ಕೃತದ ಎಲ್ಲ ಪುರಾಣಗಳನ್ನೂ ಕನ್ನಡಕ್ಕೆ ಅನುವಾದ ಮಾಡುವ ಉದ್ದೇಶದಿಂದ 'ಪುರಾಣ ಕಥಾವಳಿ' ಎಂಬ ಮಾಸಪತ್ರಿಕೆಯನ್ನು ಪ್ರಾರಂಭ ಮಾಡಿದರು. ಅದರಲ್ಲಿ 'ಶಿವಮಹಾಪುರಾಣ'ವು ಧಾರಾವಾಹಿಯಾಗಿ ಪ್ರಕಟವಾಯಿತು. ಆ ಬಳಿಕ ಗಣೇಶ ಪುರಾಣದ ಕಥೆಯನ್ನು ಸಂಗ್ರಹಿಸಿ ಪ್ರಕಟ ಮಾಡಿದರು. ಶ್ರೀ ಜಯಚಾಮರಾಜೇಂದ್ರ ವಡೆಯರು ಉತ್ತೇಜನ ಕೊಟ್ಟು ಪ್ರಕಟಿಸಿದ ಗ್ರಂಥಮಾಲೆಯಲ್ಲಿ ಅನೇಕ ಗ್ರಂಥಗಳಿಗೆ ಶ್ರೀಯುತರ ಸಹಾಯವಿದ್ದಿತು. ಅಲ್ಲದೆ ವಿಷ್ಣುಪುರಾಣವೆಂಬ ಗ್ರಂಥವನ್ನು ಸಂಪೂರ್ಣವಾಗಿ ಅನುವಾದ ಮಾಡಿದರು. ದಕ್ಷಿಣಾಮೂರ್ತಿ ಸ್ತೋತ್ರಕ್ಕೆ ಕನ್ನಡ ಟೀಕೆ, ಸಂಸ್ಕೃತ ಚಂಪೂ ರಾಮಾಯಣವನ್ನು ಅನುಸರಿಸಿ ಬರೆದ 'ರಘುವೀರ ಚರಿತೆ', ವೇದಮಂತ್ರವಾದ 'ರುದ್ರ'ಕ್ಕೆ ಕನ್ನಡ ಟೀಕೆ ಮುಂತಾದುವು ಇವರ ಇತರ ಗ್ರಂಥಗಳು.

ತುಂಬು ಜೀವನವನ್ನು ನಡೆಸಿದ ಶ್ರೀಯುತರು ಸದ್ಗುಣಿಗಳೂ ಜನಪ್ರಿಯರೂ ಆಗಿದ್ದರು. ಪ್ರೊ|| ಜಿ. ವೆಂಕಟಸುಬ್ಬಯ್ಯನವರು ಈ ವಿದ್ವಾಂಸರ ಹಿರಿಯ ಮಗ. ದಿವಂಗತರಿಗೆ ಇನ್ನೂ ಆರು ಜನ ಗಂಡು ಮಕ್ಕಳೂ ಇಬ್ಬರು ಹೆಣ್ಣು ಮಕ್ಕಳೂ, ಪತ್ನಿಯೂ ಇದ್ದಾರೆ. ದಿವಂಗತರ ಆತ್ಮಕ್ಕೆ ದೇವರು ಶಾಂತಿಯನ್ನು ನೀಡಲೆಂದು ಪ್ರಾರ್ಥಿಸುತ್ತೇವೆ.

## ಶ್ರೀ ಡಿ. ಆರ್. ರಾಮಯ್ಯನವರಿಗೆ ಪತ್ನಿ ವಿಯೋಗ

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಕಾರ್ಯದರ್ಶಿಗಳೂ ಮೈಸೂರು ಸರ್ಕಾರದ ವಾರ್ತಾ ಇಲಾಖೆಯ ನಿವೃತ್ತ ಡೈರೆಕ್ಟರೂ ಆದ ಶ್ರೀ ಡಿ. ಆರ್. ರಾಮಯ್ಯನವರ ಧರ್ಮಪತ್ನಿ ಶ್ರೀಮತಿ ಆರ್. ಕಾಮಾಕ್ಷಮ್ಮನವರು ಆಗಸ್ಟ್ ೧೭ ಶ್ರಾವಣ ಶನಿವಾರ ರಾತ್ರಿ ೧೦-೩೦ಕ್ಕೆ ನಮ್ಮನ್ನಗಲಿ ಪರಂಧಾಮವನ್ನೈದಿದರು. ಶ್ರೀಮತಿಯವರು ೧೯೩೮ ರಿಂದ ೧೯೫೦ ರ ವರೆಗೆ ೧೨ ವರ್ಷಗಳ ಕಾಲ ಮಹಾರಾಷ್ಟ್ರ ಮಹಿಳಾ ವಿದ್ಯಾಲಯದ ಮುಖ್ಯೋಪಾಧ್ಯಾಯಿನಿಯಾಗಿ ಸೇವೆ ಸಲ್ಲಿಸಿದರು. ಇವರಿಗೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲೂ ಪರಿಚಯವಿತ್ತು. ಕಿಟಲ್ ಶಬ್ದಕೋಶದ ಸಹಾಯದಿಂದ ವರ್ಣಮಾಲೆಯ ಕ್ರಮದಲ್ಲಿ ಕನ್ನಡ ಗಾದೆಗಳನ್ನು ಸಂಗ್ರಹಿಸಿದ್ದರು. 'ಸರಸ ಸುಗುಣ' 'ಜೀವನ ಶಕ್ತಿ'—ಇವೆರಡು ಸಣ್ಣ ಕಥೆಗಳನ್ನು ಪ್ರಕಟನೆಗೆ ಸಿದ್ಧಗೊಳಿಸಿದ್ದರು. ಆದರ್ಶ ಗೃಹಿಣಿಯಾಗಿ ಬೆಳಗುತ್ತಿದ್ದ ಈ ಸಾಧ್ವೀಮಣಿಯು ೧೯೬೧ ರಿಂದ ಕ್ಯಾನ್ಸರ್ ವ್ಯಾಧಿಯಲ್ಲಿದ್ದು ತಮ್ಮ ೫೮ನೇ ವಯಸ್ಸಿನಲ್ಲಿ ನಿಧನರಾದುದು ಕನ್ನಡ ಸಮಾಜಕ್ಕೆ ಅಪಾರ ನಷ್ಟವುಂಟಾಗಿದೆ. ದಿವಂಗತರಿಗೆ ಇಬ್ಬರು ಪುತ್ರಿಯರೂ, ಒಬ್ಬ ಪುತ್ರನೂ ಇದ್ದಾರೆ. ಇವರ ಏಕಮಾತ್ರ ಪುತ್ರ ಶ್ರೀ ಡಿ. ಆರ್. ರಂಗಸ್ವಾಮಿ ಬಿ.ಇ. ಪದವೀಧರರಾಗಿ ಭಾರತ್ ಎಲೆಕ್ಟ್ರಾನಿಕ್ಸ್ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ದಿವಂಗತರ ಆತ್ಮಕ್ಕೆ ಚಿರಶಾಂತಿಯುಂಟಾಗಲಿ. ಇವರ ಕುಟುಂಬವರ್ಗಕ್ಕೆ ಈ ಅಗಲಿಕೆಯನ್ನು ಸಹಿಸುವ ಶಕ್ತಿಯನ್ನು ಪರಮಾತ್ಮನು ಕೊಟ್ಟು ಕಾಪಾಡಲಿ.

ಸಂಪಾದಕರು: ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು-೧೮




# ಸಾದರ ಸ್ವೀಕಾರ

ಹೊಂಬಾಳೆ: ತಿಪಟೂರು ಶ್ರೀ ವಿದ್ಯಾಪೀಠ ಪ್ರೌಢಶಾಲೆಯ ೧೯೬೩ ನೆಯ ವಾರ್ಷಿಕ ಸಂಚಿಕೆ; ಸಂಪಾದಕರು: ಶ್ರೀ ಎಸ್. ಕೆ. ರಾಜಶೇಖರ್.

ಕಲ್ಪತರು: ತಿಪಟೂರು ಕಲ್ಪತರು ಕಾಲೇಜಿನ ೧೯೬೩ ನೇ ವಾರ್ಷಿಕ ಸಂಚಿಕೆ; ಸಂಪಾದಕರು: ಶ್ರೀ ಜೆ. ಆರ್. ಮಹಲಿಂಗಯ್ಯ.

*ಬಿಳಿಯ ಹಾಳೆಯ ಮೇಲೆ (ಕವನ ಸಂಕಲನ): ಲೇಖಕರು: ಶ್ರೀ ಕೆ. ವಿರೂಪಾಕ್ಷಗೌಡ; ಪ್ರಕಾಶಕರು: ಕೊಟ್ಟೂರೇಶ ಪ್ರಕಾಶನ, ಹಗರಿಬೊಮ್ಮನಹಳ್ಳಿ; ಸೈಜು ೧/೮ ಕ್ರೌನ್; ಪುಟ ೪೫; ಬೆಲೆ ೭೫ ನ.ಪೈ.

ನವೀನ ನಾಟಕಗಳು: ಲೇಖಕರು: ಶ್ರೀ ಶ್ರೀನಿವಾಸ ಉಪಾಧ್ಯಾಯ: ಪ್ರಕಾಶಕರು: ದೀನಬಂಧು ಪ್ರಕಾಶನ, ಬೆಂಗಳೂರು–೪; ಸೈಜು ೧/೮ ಕ್ರೌನ್; ಪುಟ ೫೬; ಬೆಲೆ ರೂ. ೧.

ಪ್ರಕಾಶ: ಸ್ವಾತಂತ್ರ್ಯೋತ್ಸವದ ವಿಶೇಷಾಂಕ ೧೯೬೩, ಉಡುಪಿ; ಬೆಲೆ ೫೦ ನ.ಪೈ.

ನವಯುಗ: ಸ್ವಾತಂತ್ರ್ಯದಿನೋತ್ಸವ ಸಂಚಿಕೆ ೧೯೬೩, ಉಡುಪಿ ಬೆಲೆ ೨೫ ನ.ಪೈ.

ಲೋಕಸೇವಾಸಂಘದ ದ್ವಿತೀಯ ಮಹಾಧಿವೇಶನದ ಸ್ವೀಕೃತ ಗೊತ್ತುವಳಿಗಳು: ಹುಬ್ಬಳ್ಳಿ ೧೯೬೧.

ಭಾರತ ಸ್ವಾತಂತ್ರ್ಯಕ್ಕೆ ಕೊಪ್ಪಳ ನಾಡಿನ ಕಾಣಿಕೆ: ೧೫ನೇ ಆಗಸ್ಟ್ ೧೯೪೯; ಲೇಖಕರು: ಶ್ರೀ ಸೀರೂರ ವೀರಭದ್ರಪ್ಪ, ಕೊಪ್ಪಳ; ಪ್ರಕಾಶಕರು: ವಿಶ್ವನಾಥ ವಾಚನಾಲಯ, ಕೊಪ್ಪಳ; ಸೈಜು ೧/೮ ಕ್ರೌನ್; ಪುಟ ೧೯; ಬೆಲೆ ೫೦ ನ.ಪೈ.

ಪಕ್ಷಾತೀತ ಪ್ರಜಾಪ್ರಭುತ್ವ (ಅದರ ಅವಶ್ಯಕತೆ ಮತ್ತು ಸ್ವರೂಪ): ಲೇಖಕರು: ಗೋರಾ; ಅನುವಾದಕರು: ಕುಮಾರಿ ಶಶಿಕಲಾ ಹಂಜಿ ಸುನಂದಾ, ಅದವಾನಿ; ಪ್ರಕಾಶಕರು: ಕರ್ನಾಟಕ ಲೋಕಸೇವಾ ಸಂಘ; ರಾಯಚೂರು; ಸೈಜು ೧/೮ ಕ್ರೌನ್; ಪುಟ ೬೩; ಬೆಲೆ ರೂ. ೧.

ವಿನೋದ: ೧೨ನೇ ವಾರ್ಷಿಕದ ವಿಶೇಷ ಸಂಚಿಕೆ ೧೯೬೩; ಪುಟ ೨೭೧; ಬೆಲೆ ರೂ. ೧.

ಸಂಘಟಿತ ಪ್ರಜಾಪ್ರಭುತ್ವ: ಲೇಖಕರು: ಬಾಪು ಶಿರಹಟ್ಟಿ; ಸೈಜು ೧/೮ ಕ್ರೌನ್; ಪುಟ ೧೮; ಬೆಲೆ ೩೫ ನ.ಪೈ.

ಜನತಾ ಸ್ವರಾಜ್ಯ (Swaraj for the People): ಲೇಖಕರು: ಶ್ರೀ ಜಯಪ್ರಕಾಶ್ ನಾರಾಯಣ್; ಅನುವಾದಕರು: ಲೋಕಸೇವಾಸಂಘ, ರಾಯಚೂರು; ಸೈಜು ೧/೮ ಕ್ರೌನ್; ಬೆಲೆ ೫೦ ನ.ಪೈ.

ಕಂಠೀರವ: ಸ್ವಾತಂತ್ರ್ಯ ಸಂಚಿಕೆ ೧೯೬೩, ಮಂಗಳೂರು.

ದ್ರುಪದ ನಂದಿನಿ: ಲೇಖಕರು: ಕೆ. ಎಂ. ಕೃಷ್ಣರಾವ್; ಪ್ರಕಾಶಕರು: ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು; ಸೈಜು ೧/೮ ಕ್ರೌನ್; ಪುಟ ೧೪೦; ಬೆಲೆ ರೂ. ೨–೨೫ ನ.ಪೈ.

ವೀರಭೂಮಿ (ಮಾಸಪತ್ರಿಕೆ): ಸಂಪಾದಕರು ಮತ್ತು ಪ್ರಕಾಶಕರು: ಶ್ರೀ ಎಸ್. ವೆಂಕಟರಾಜ, ಉಡುಪಿ, ದ. ಕ; ಸಂಪುಟ ೧, ಸಂಚಿಕೆ ೧, ೧೫–೮–೬೩; ವಾರ್ಷಿಕ ಚಂದಾ ರೂ. ೪.

*ಜಾರು ಬಂಡೆ: ಲೇಖಕರು: ಶ್ರೀ ಪ. ಸು. ಭಟ್ಟ, ಎಂ.ಎ., ಪ್ರಕಾಶಕರು: ವಸಂತಪ್ರಕಾಶನ, ಗಾಂಧಿ ಬಜಾರ್, ಬೆಂಗಳೂರು–೪; ಸೈಜು ೧/೮ ಕ್ರೌನ್; ಪುಟ ೧೧೮; ಬೆಲೆ ರೂ. ೧–೫೦.

ಕೈಲಾಸ (ಸೆಪ್ಟೆಂಬರ್ ೧೯೬೩ರ ಮಾಸಪತ್ರಿಕೆ): ಸಂಪಾದಕರು: ಎಸ್. ಎಸ್. ಸೀತಾರಾಮಶಾಸ್ತ್ರಿ, ೨೨ ಕಬ್ಬನ್‌ರೋಡು, ಬೆಂಗಳೂರು–೧; ವಾರ್ಷಿಕ ಚಂದಾ ರೂ. ೯.

*ಭಲೆ ಅಳಿಯ (ಒಂದು ಸಾಮಾಜಿಕ ನಾಟಕ): ಲೇಖಕರು: ಪಂಡಿತ ಕೆ. ಪಟ್ಟಾಭಿರಾಮಯ್ಯ; ಪ್ರಕಾಶಕರು: ಸುದರ್ಶನಂ ಅಂಡ್ ಕಂಪೆನಿ, ಬೆಂಗಳೂರು; ಸೈಜು ೧/೮ ಕ್ರೌನ್; ಪುಟ ೫೫.

*ಶರೀಫರ ಜನಪ್ರಿಯ ಪದಗಳು: ಸಂಪಾದಕರು: ಡಾ॥ ಡಿ. ಎಸ್. ಕರ್ಕಿ, ತಲ್ಲೂರ ರಾಯನಗೌಡರು; ಪ್ರಕಾಶಕರು: ಶ್ರೀ ಶರೀಫ ಸಾಹಿತ್ಯ ಸಮಿತಿ, ಶಿಶುನಿನಾಳ; ಸೈಜು ೧/೮ ಕ್ರೌನ್; ಪುಟ ೮೨; ಬೆಲೆ ರೂ. ೧.

ಒಂದು ಯುಗಾದಿ ಕಥೆ (ದಕ್ಷಿಣ ಭಾಷಾ ಸಂಸ್ಥೆ ಪ್ರಕಟನೆ): ಲೇಖಕರು: ಲದ್ಮೀರ್ ಮದಿನ್ ಸೇವ್; ಅನುವಾದಕರು: ಶ್ರೀ ಮರಿಯಪ್ಪ ಭಟ್ಟ; ಪ್ರಕಾಶಕರು ಪ್ರಗತಿ ಪ್ರಕಟನಾಲಯ, ಬೆಂಗಳೂರು–೯; ಪುಟ ೬೦; ಸೈಜು ೧/೮ ಕ್ರೌನ್; ಬೆಲೆ ೭೫ ನ.ಪೈ.

ಹೈದ್ರಾಬಾದಿನ ಹತ್ಯಾಕಾರಿ (ದಕ್ಷಿಣ ಭಾಷಾ ಸಂಸ್ಥೆ ಪ್ರಕಟನೆ): ಲೇಖಕರು: ಕನ್ನೆತ್ ಆಂಡರ್ಸನ್; ಅನುವಾದಕರು: ಶ್ರೀ ಈಶ್ವರಭಟ್ಟ; ಪ್ರಕಾಶಕರು: ಕನ್ನಡ ಪ್ರಪಂಚ ಪ್ರಕಾಶನ, ಕದ್ರಿ, ಮಂಗಳೂರು–೨; ಸೈಜು ೧/೮ ಕ್ರೌನ್; ಪುಟ ೧೪೮; ಬೆಲೆ ರೂ. ೧–೫೦ ನ.ಪೈ.

---

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತವೆ.

Reg. No. B. G. 4—September 1963

Licensed to Post without pre-payment. Licence No 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಬೆಂಗಳೂರು-೧೮.






ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೬] ಸಂಪಾದಕರು: ಡಿ. ಆರ್. ರಾಮಯ್ಯ, ಬಿ.ಎ. [ಸಂಚಿಕೆ ೧೦

## ರಾಷ್ಟ್ರಾಧ್ಯಕ್ಷರ ಸಂದರ್ಶನ



ಕನ್ನಡ ಸಾಹಿತ್ಯ ಪರಿಷತ್ತಿಗೆ ಅ॥ ದಿನಾಂಕ ೯ ರಂದು ರಾಷ್ಟ್ರಾಧ್ಯಕ್ಷರು ಸಂದರ್ಶನವಿತ್ತಾಗ ತೆಗೆದ ಚಿತ್ರ.
ರಾಷ್ಟ್ರಾಧ್ಯಕ್ಷರು ರಾಜ್ಯಪಾಲರೊಡನೆ ಆಗಮಿಸುತ್ತಿದ್ದಾರೆ; ಪರಿಷತ್ತಿನ ಅಧ್ಯಕ್ಷರು ಮತ್ತು
ಗೌರವ ಕಾರ್ಯದರ್ಶಿಗಳು ಸ್ವಾಗತಿಸಿ ಸಭಾಭವನಕ್ಕೆ ಕರೆದೊಯ್ಯುತ್ತಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

# ವಿಷಯ ಸೂಚಿಕೆ







ಸಂಪುಟ ೨೬ ] ಅಕ್ಟೋಬರ್ ೧೯೬೩ [ ಸಂಚಿಕೆ ೧೦

# ಜಗತ್ತು

ಶ್ರೀ ಕೆ. ರತನ್

ಯಾರದು ಈ ಕೃತಿ ಯಾರದು ಈ ಕೃಪೆ,
ಸಹಸ್ರ ಬಣ್ಣದ ಸಂಗಮದೀಕೃತಿ,
ಯಾರಿಗೆ ಹೊಳೆಯಿತು ಯಾರಿಗೆ ತಿಳಿಯಿತು,
ಯಾವುದು ಕಾರಣ ಇದು ನಿರ್ಮಾಣಕೆ.

ಓ! ಹೋ! ಅವನ ಸಂಗಾಟಕೆ,
ಈ ಜಂಝಾಟವು ಇರಲೆಂದಿರಿಸಿದನು,
ಸೂತ್ರಧಾರನು ಅವನಿರುವಾಗ ಈ,
ಮೂರ್ಖ ಶತಮೂರ್ಖರಿಗೇಕದರಚಿಂತೆ.

ಈ ಸಂಸಾರವು ತಿಳಿಯದು ಇದನು,
ಆ ಸಂಸಾರಿಯು ತಿಳಿಸನು ಅದನು,
ಆರಿಗೆ ಧೈರ್ಯವು ಕೇಳಲು ಅವನನು,
ಯಾರಿಗೆ ಶೌರ್ಯವು ಹಿಡಿಯಲು ಅವನನು.

ತಿಳಿಯದು ಸಂಸಾರವು ಯಾರದು ಇದು ಎಂದು,
ಬಲು ಪುಳಕಿತಗೊಳುವದು ಇದು ನಮ್ಮದೆಂದು,
ಈ ದಿನಕರನ ಕಾಂತಿಯು ಎಲ್ಲಿಯದು,
ಚಂದ್ರನ ಜಳಜಳಿಸುವ ಪ್ರಕಾಶವೆಲ್ಲಿಯದು.

---

# ಕನ್ನಡ ನಾಡಿನ ಭವ್ಯ ಸಂಸ್ಕೃತಿ*

ಲೇ: ಎಸ್. ಮೀರಾ

ಭಾರತದ ಮಿಕ್ಕೆಲ್ಲ ಭಾಗಗಳೂ ಪರಕೀಯರ ಆಕ್ರಮಣಗಳಿಂದ ಪ್ರಭಾವ ಬೀರಲ್ಪಟ್ಟವು. ಆದರೆ ಕನ್ನಡ ದೇಶಕ್ಕೆ ಹೆಚ್ಚು ಧಾಳಿಗಳೇ ಇಲ್ಲ. ಧಾಳಿಗಳು ಇದ್ದರೂ ಸಹ ಜನರ ಸಂಸ್ಕೃತಿಯ ಬುಡವನ್ನೇ ಅಲುಗಿಸುವಂತಹವುಗಳಲ್ಲ. ಇದೀಗ ಕನ್ನಡ ನಾಡಿನ ಸಂಸ್ಕೃತಿಯ ಒಂದು ವೈಶಿಷ್ಟ್ಯ.

ಜನಜೀವನ, ನಡೆನುಡಿ, ಲೌಕಿಕದ ಮಟ್ಟ, ಸಂಗೀತ ಸಾಹಿತ್ಯ ಜ್ಞಾನದ ಆಳ ಮತ್ತು ಭಕ್ತಿ ವೈರಾಗ್ಯದ ರೀತಿ ನೀತಿಗಳು ಇವುಗಳ ಸಾರ ಸಂಗ್ರಹವೇ ಸಂಸ್ಕೃತಿ. ಸಂಸ್ಕೃತಿಯನ್ನು ಕುರಿತು ಕೇವಲ ಒಬ್ಬ ಮನುಷ್ಯನು ಯಾವ ಪ್ರಭಾವವನ್ನೂ ಬೀರಲಾರ. ಆದರೆ ಕೆಲವಾರು ಜನರ ಜೀವನದಿಂದ ಸಂಸ್ಕೃತಿ ರೂಪುಗೊಳ್ಳುತ್ತದೆ. ಹೀಗೆ ಸಂಸ್ಕೃತಿ ರೂಪುಗೊಳ್ಳಬೇಕಾದರೆ, ಕಾಲಾವಕಾಶ ಹೆಚ್ಚಾಗಿ ಬೇಕು. ಅನೇಕ ವೇಳೆ ಹತ್ತಾರು ವರ್ಷಗಳೂ ಬೇಕಾಗುವುದು. ಇಂಥ ಸಂಸ್ಕೃತಿಯನ್ನು ದೊಡ್ಡದು ಚಿಕ್ಕದು ಎಂದು ಪರಿಗಣಿಸಬಾರದು. ಕೇವಲ ಯಾವುದು ಶ್ರೇಷ್ಠ, ಪ್ರಾಚೀನ, ಉತ್ತಮವೆಂದು ಹೋಲಿಸಿ ಹೇಳಬಹುದು. ಯಾವ ದೇಶವೇ ಆಗಲಿ, ಜನತೆಯೇ ಆಗಲಿ, ಯಾವುದೇ ರೀತಿಯ ಸಂಸ್ಕೃತಿಯನ್ನು ಹೊಂದದೇ ಇರುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ಮಿಕ್ಕ ಕೆಳಗಿನ ದರ್ಜೆಯ ಪ್ರಾಣಿಗಳಿಗಿಂತಲೂ ಮಾನವನಿಗೇ ಹೆಚ್ಚು ಸಂಸ್ಕೃತಿಯಿರುವುದರಿಂದ, ಅವನು ಉತ್ತಮ ಗತಿಯನ್ನು ಸಾಧಿಸಲು ಅರ್ಹನಾಗಿದ್ದಾನೆ.

## ಹೊಯ್ಸಳ ರಾಜ್ಯ

ಹೊಯ್ಸಳ ರಾಜನಾದ ವಿಷ್ಣುವರ್ಧನನ ಕಾಲದಲ್ಲಿ, ಸಂಸ್ಕೃತಿಯು ಶಿಲ್ಪಕಲೆ, ನೃತ್ಯ ಮತ್ತು ಭಕ್ತಿಮಾರ್ಗದಲ್ಲಿ ಅತ್ಯುತ್ತಮ ರೂಪು ಹೊಂದಿತು. ಬೇಲೂರಿನ ಶ್ರೀ ಚೆನ್ನಕೇಶವನ ದೇವಾಲಯದಲ್ಲಿ ಸ್ವರ್ಗದ ದೇವತೆಗಳನ್ನೂ ಅವರ ವಿವಿಧ ಭಂಗಿಗಳಲ್ಲಿ ಕೆತ್ತಿದ್ದಾರೆ. ಜೀವವೊಂದಿಲ್ಲವೇ ವಿನಾ ಇವುಗಳನ್ನು ಕಲೆಯಲ್ಲಿ ಮೀರಿಸುವುದೇ ಅಸಾಧ್ಯ. ಅಷ್ಟೇ ಅಲ್ಲದೆ ಜನರು ಹೇಗೆ ದಾನಧರ್ಮದಲ್ಲಿ ಶ್ರದ್ಧೆಯುಳ್ಳವರಾಗಿದ್ದರು ಮತ್ತು ಅದೇ ರೀತಿ ನಡೆಯುತ್ತಿದ್ದರು ಎಂಬುದನ್ನೂ ಸಹ ಅಲ್ಲಿನ ಶಿಲ್ಪಶಾಸ್ತ್ರವು ಹೊರಗೆಡವುತ್ತದೆ. ವಿಷ್ಣುವರ್ಧನನು ಜನ್ಮದಿಂದ ಜೈನಮತಕ್ಕೆ ಸೇರಿದವನಾದರೂ, ಶ್ರೀ ರಾಮಾನುಜಾಚಾರ್ಯರ ಸದ್ಬೋಧನೆಯಿಂದ, ಶ್ರೀ ವೈಷ್ಣವ ಮತವನ್ನು ಅವಲಂಬಿಸಿದನು. ಆದರೆ ಜೈನ ಮತವನ್ನು ನಶಿಸಲು ಬಿಡದೆ, ಎಲ್ಲ ಮತಗಳಿಗೂ, ನಂಬಿಕೆಗಳಿಗೂ ಒಂದೇ ತೆರನಾದ ಸನ್ಮಾನತೆಯನ್ನೂ, ಪ್ರೋತ್ಸಾಹವನ್ನೂ ಕಲ್ಪಿಸಿದನು. ವಿದ್ವಾಂಸರಿಗೆ ಪ್ರೋತ್ಸಾಹವಿತ್ತನು. ಅಭಿನವ ಪಂಪನೆಂದು ವಿಖ್ಯಾತನಾದ ನಾಗಚಂದ್ರನೂ, ಅಸಾಮಾನ್ಯ ಕವಿಯಿತ್ರಿಯಾದ ಕಂತಿಯೂ ಇವನ ಆಸ್ಥಾನದಲ್ಲೇ ಇದ್ದರು. ರಾಮಾಯಣವನ್ನು ಒಂದು ವಿಶಿಷ್ಟ ರೂಪದಲ್ಲಿ ರಚಿಸಿ ಮಹಾತ್ಮನಾದ ಪಂಪನನ್ನೂ ಮೀರಿಸಲು ಪ್ರಯತ್ನಪಟ್ಟು, ಈ ನಾಗಚಂದ್ರನು 'ರಾಮಚಂದ್ರ ಪುರಾಣ' ಮತ್ತು 'ಮಲ್ಲಿನಾಥ ಪುರಾಣ' ವೆಂಬ ಶ್ರೇಷ್ಠ ಗ್ರಂಥಗಳನ್ನು ರಚಿಸಿದ್ದಾನೆ. ವಿಷ್ಣುವರ್ಧನನ ಪಟ್ಟದರಸಿಯಾದ ಶಾಂತಲಾದೇವಿ ಸ್ವಯಂ ಪಂಡಿತಳಾಗಿದ್ದಳು. ಇವಳು ಉತ್ತಮ ಮಟ್ಟದ ಸಂಗೀತಗಾರಳೂ, ನೃತ್ಯಗಾತಿಯೂ ಆಗಿದ್ದಳು. ಇವಳ ಸವತಿಯಾದ ಜಪ್ಪಲೆಯು ಅಶ್ವವಿದ್ಯೆಯಲ್ಲಿ ನಿಪುಣಳಾಗಿದ್ದಳು. ರಾಜನಾದ ವಿಷ್ಣುವರ್ಧನನು ತನ್ನ ಪತ್ನಿಯರೊಡನೆ ಅನೇಕ ವೇಳೆ ರಾಜ್ಯದ ಹಿತಚಿಂತನೆಯನ್ನು ಕುರಿತು ಚರ್ಚಿಸುತ್ತಿದ್ದನು. ಇದರಿಂದ ಆ ಕಾಲದಲ್ಲಿ ಹೆಂಗಸರು ಎಷ್ಟು ಲೋಕಾನುಭವಿಗಳಾಗಿದ್ದರು ಮತ್ತು ಮರ್ಯಾದೆಗೆ ಪಾತ್ರರಾಗಿದ್ದರು ಎಂಬುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಅದೂ ಅಲ್ಲದೆ ಆ ಕಾಲದಲ್ಲಿ ನೃತ್ಯಶಾಸ್ತ್ರವು ರಾಣಿಯರಿಂದಲೂ ಶಾಸ್ತ್ರೋಕ್ತವಾಗಿ ಅಭ್ಯಾಸ ಮಾಡಲ್ಪಡುತ್ತಿತ್ತು ಮತ್ತು ರಾಜ ಮಹಾರಾಜರಿಂದಲೂ ಕೂಡ ಹೆಚ್ಚು ಪ್ರೋತ್ಸಾಹವೂ ಕೊಡಲ್ಪಡುತ್ತಿತ್ತು.

## ವಿಜಯನಗರ ಚಕ್ರಾಧಿಪತ್ಯ

ಹದಿನಾಲ್ಕನೇ ಶತಮಾನದ ಆದಿಯಲ್ಲಿ ಈ ವೈಭವಪೂರ್ಣವಾದ ಹೊಯ್ಸಳ ರಾಜ್ಯವು ವಿಜಯನಗರ ಸಾಮ್ರಾಜ್ಯದೊಡನೆ ಲೀನವಾಯಿತು. ಮುಸಲ್ಮಾನರ

---

* ಬೆಂಗಳೂರು ಮಲ್ಲೇಶ್ವರ ಶ್ರೀ ಸರಸ್ವತೀ ಕಲಾನಿಕೇತನದ ಆಶ್ರಯದಲ್ಲಿ ಏರ್ಪಡಿಸಿದ್ದ ಸಾಹಿತ್ಯ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದ ಲೇಖನ.

ಧಾಳಿಯನ್ನು ತಡೆದು ಕನ್ನಡದ ದೀವಟಿಗೆಯನ್ನು ದೇದೀಪ್ಯಮಾನವಾಗಿ ಪ್ರಕಾಶಿಸಲು ವಿಜಯನಗರವನ್ನು ಹಕ್ಕಬುಕ್ಕರು ಮಹಾತ್ಮರಾದ ವಿಜಯ ವಿದ್ಯಾರಣ್ಯರ ಸಹಾಯದಿಂದಾಗಿ ಸ್ಥಾಪಿಸಿದರು. ಹಿಂದೂ ಧರ್ಮದ ಹೆಗ್ಗುರುತುಗಳಾದ ದೇವಾಲಯಗಳನ್ನೂ, ಪುಣ್ಯತೀರ್ಥಗಳನ್ನೂ ಮಲಿನಮಾಡಿ ಮುಸ್ಲಿಮರು ಜನರ ಆಗ್ರಹಕ್ಕೆ ಪಾತ್ರರಾಗಿದ್ದರು. ಅವರ ಮೇಲಿನ ದ್ವೇಷದಿಂದಲಾದರೂ ಸ್ವಲ್ಪಕಾಲ ಐಕ್ಯತೆಯಿಂದ ಇದ್ದು ಈ ಭವ್ಯ ರಾಜ್ಯವನ್ನು ಸ್ಥಾಪಿಸಿದರು. ಈ ರಾಜ್ಯವನ್ನು ಆಳಿದ ಮುಖ್ಯರಾದವರಲ್ಲಿ ಕೃಷ್ಣದೇವರಾಯರೂ ಒಬ್ಬರು. ಅವರ ಕಾಲದಲ್ಲಿ ಮೋಸಗಳೇ ಇರಲಿಲ್ಲ ಎಂಬುದಕ್ಕೆ ನಿದರ್ಶನವಾಗಿ ಪ್ರವಾಸಿಗನಾದ ಅಬ್ದುರ್ ರಜಾಕನು ಹೇಳಿರುವುದು: "ವಿಜಯನಗರ ರಾಜ್ಯದ ಬೀದಿಗಳಲ್ಲಿ ವಜ್ರ, ವೈಢೂರ್ಯ ಮೊದಲಾದ ನವರತ್ನಗಳನ್ನು ರಾಶಿ ರಾಶಿಯಾಗಿ ವ್ಯಾಪಾರ ಮಾಡುತ್ತಿದ್ದರು" ಎಂದು.

ಕನ್ನಡಿಗರು ಹಿಂದಿನ ಕಾಲದಿಂದಲೂ ನಾವಿಕರಾಗಿದ್ದರು. ಕೃಷ್ಣದೇವರಾಯರ ಕಾಲದಲ್ಲಿ ಅರೇಬಿಯಾದವರೆವಿಗೂ ಹಡಗಿನಲ್ಲಿ ಪ್ರಯಾಣ ಮಾಡುತ್ತಿದ್ದರು. ಅಲ್ಲಿಂದ ಕುದುರೆಗಳನ್ನು ಕೊಂಡು ತಂದು, ತಮ್ಮಲ್ಲಿದ್ದ ಶ್ರೇಷ್ಠವಾದ ಗಂಧದ ಮರದ ವಸ್ತುಗಳನ್ನೂ ಮತ್ತು ಸಾಂಬಾರ ಪದಾರ್ಥಗಳನ್ನೂ ಪರದೇಶದವರಿಗೆ ಕೊಡುತ್ತಿದ್ದರು. ಮುಂದೆ, ಎಂದರೆ ಸುಮಾರು ಅರವತ್ತು ವರ್ಷಗಳ ನಂತರ, ಈ ನೌಕಾಬಲವು ಮಾಲ್ಡೀವ್ ಮತ್ತು ಲಾಕ್ಡೀವ್ ದ್ವೀಪಗಳನ್ನೂ ಸಹ ವಶಪಡಿಸಿಕೊಂಡಿತು. ಇದಲ್ಲದೆ, ಪರ್ಶಿಯಾ ದೇಶದವರೊಡನೆಯೂ ನಿಕಟಸಂಬಂಧವಿತ್ತೆಂದು ತಿಳಿದು ಬರುತ್ತದೆ. ಇದರಿಂದ ಕೇವಲ ಉತ್ತರ ಹಿಂದೂಸ್ಥಾನದವರು ಮಾತ್ರವಲ್ಲ ಇತರ ದೇಶಗಳೊಡನೆ ವ್ಯಾಪಾರ ನಡೆಸುತ್ತಿದ್ದದ್ದು, ಆದರೆ ಕನ್ನಡ ರಾಜ್ಯವೂ ಸಹ ಬಹಳ ಮುಂದುವರೆದಿತ್ತು ಎಂದು ಗೊತ್ತಾಗುತ್ತದೆ. ಕನ್ನಡಿಗರು ಮಲಯಾ, ಸಿಂಹಳ, ಬರ್ಮಾ ಮುಂತಾದ ಪೂರ್ವ ದೇಶಗಳೊಡನೆಯೂ ವ್ಯಾಪಾರ ಸಂಬಂಧವನ್ನು ಬೆಳೆಸಿದ್ದರಂತೆ. ಇದೇ ಕಾಲದಲ್ಲಿ ಯುರೋಪಿನಲ್ಲಿ ಮತೀಯ ಕಲಹಗಳು ದಿನನಿತ್ಯ ವಾಗಿದ್ದವು. ಆದರೆ ಕನ್ನಡ ದೇಶದಲ್ಲಿ ಮತೀಯ ತಾಳ್ಮೆ ಇದ್ದು, ಯಾವ ಮತವನ್ನಾದರೂ ಅವಲಂಬಿಸಬಹುದಾಗಿತ್ತು. ಇದರಿಂದ ಕನ್ನಡಿಗರು ಎಷ್ಟು ಸುಸಂಸ್ಕೃತರಾಗಿದ್ದರು ಎಂಬುದು ಭಾಸವಾಗುತ್ತದೆ.

## ಹತ್ತೊಂಭತ್ತನೆಯ ಶತಮಾನ

ಕೇವಲ ವಿಜಯನಗರ ರಾಜರ ಕಾಲದಲ್ಲಿ ಮಾತ್ರವಲ್ಲ, ಆದರೆ ಅದರ ನಂತರ ಎಂದರೆ ಸುಮಾರು ಹತ್ತೊಂಭತ್ತನೇ ಶತಮಾನದ ಆದಿಯಲ್ಲಿಯೂ ಕೂಡ ಕನ್ನಡ ರಾಜ್ಯವು ಭವ್ಯವಾಗಿತ್ತು. ಆಗ ಚೆನ್ನಮ್ಮನೆಂಬುವಳು ಕಿತ್ತೂರಿನ ರಾಣಿಯಾಗಿ ಆಳುತ್ತಿದ್ದಳು. ಸಿಂಹಾಸನಕ್ಕೆ ಉತ್ತರಾಧಿಕಾರಿಗಳು ಇಲ್ಲದೇ ಹೋದ ಕಾರಣದಿಂದ ಆಕೆ ದತ್ತು ಸ್ವೀಕಾರ ಮಾಡಬೇಕಾಗಿ ಬಂತು. ಆದರೆ ದತ್ತು ಸ್ವೀಕಾರಕ್ಕೆ ಬ್ರಿಟಿಷ್ ಸರ್ಕಾರದವರು ಒಪ್ಪದೇ ಹೋದ್ದರಿಂದ ಯುದ್ಧ ಮಾಡಬೇಕಾಗಿ ಬಂತು. ಕಿತ್ತೂರಿನ ಚೆನ್ನಮ್ಮ ತಾನೆ ಸೈನ್ಯಕ್ಕೆ ನಾಯಕಳಾಗಿ ಬ್ರಿಟಿಷರನ್ನು ಹಿಮ್ಮೆಟ್ಟಿಸಿದಳು. ಆದರೆ ಸ್ವಜನರ ಮೋಸದಿಂದ ಸತ್ತಳು. ಕೇವಲ ಅರಮನೆಯ ಭೋಗಗಳಲ್ಲಿ ಸುಖಪಡುವುದು ಮಾತ್ರವಲ್ಲದೆ ರಣರಂಗದಲ್ಲಿಯೂ ಹೆಂಗಸರು ಹೋರಾಡಬಲ್ಲರು ಎಂದು ತೋರಿಸಿಕೊಟ್ಟ ಕಿತ್ತೂರಿನ ಚೆನ್ನಮ್ಮ ಮುಂತಾದವರು ಕನ್ನಡದ ಜನತೆಗೆ ಹೆಮ್ಮೆ ಉಂಟು ಮಾಡಿಸತಕ್ಕವರು.

## ಭಕ್ತಿಭಂಡಾರ

ಕೇವಲ ರಾಜರಾಣಿಯರು ಮಾತ್ರವಲ್ಲದೆ, ಅನೇಕ ಮಹಾತ್ಮರೂ, ಮಹಾತ್ಮೆಯರೂ ಕೂಡ ಕನ್ನಡ ಸಂಸ್ಕೃತಿಯ ಉನ್ನತಿಯಲ್ಲಿ ಪಾಲ್ಗೊಂಡಿದ್ದಾರೆ. ಇವರಲ್ಲಿ ಹೆಚ್ಚು ಮಂದಿ ಭಕ್ತಿ ಮಾರ್ಗವನ್ನು ಅನುಸರಿಸಿಯೇ ಸದ್ಗತಿಯನ್ನು ಪಡೆದರು. ಇವರ ಪೈಕಿ ಶಿವಭಕ್ತರಾದ 'ಭಕ್ತಿ ಭಂಡಾರಿ' ಬಸವಣ್ಣನವರು ಮೊದಲಿಗರು. ಇವರು ಮೊದಲಿಂದ ನಡೆದುಬಂದ, ಬ್ರಾಹ್ಮಣ ಶೂದ್ರರೆಂಬ ಜಾತಿಭೇದಗಳನ್ನು ತೊಡೆದು, 'ಹುಟ್ಟಿನಿಂದ ಜಾತಿಯಿಂದ ಯಾರೂ ದೊಡ್ಡರಾಗುವುದಿಲ್ಲ, ಯೋಗ್ಯತೆ ಮತ್ತು ನಡೆ ನುಡಿಗಳಿಂದ ಮಾತ್ರ ದೊಡ್ಡವರಾಗುತ್ತಾರೆ, ಕೊಲುವವನೇ ಮಾದಿಗ, ಹೊಲಸ ತಿಂಬವನೇ ಹೊಲೆಯ, ಸಕಲ ಜೀವಾತ್ಮರಿಗೆ ಲೇಸ ಬಯಸುವವನೇ ಕುಲಜನು' ಎಂದು ಉಪದೇಶಿಸಿದರು. ಒಂದು ಕಾಗೆಯನ್ನು ಕರೆದು ಕಾಳು ಕೊಟ್ಟರೆ ಅದು ಹೇಗೆ ಮಿಕ್ಕ ಸುತ್ತಮುತ್ತಲ ಕಾಗೆಗಳನ್ನು ಕರೆದು ಹಂಚಿಕೊಳ್ಳುತ್ತದೆಯೋ ಹಾಗೆಯೇ ಮನುಷ್ಯನೂ ಸಹ ತನಗೆ ಸಿಕ್ಕಿದ್ದನ್ನು ಎಲ್ಲರೊಡನೆಯೂ ಹಂಚಿಕೊಳ್ಳಬೇಕೆಂದು ಬಸವೇಶ್ವರರು ನುಡಿದಿದ್ದಾರೆ.

ಮಹಾತ್ಮೆಯರ ಪೈಕಿ ಅಕ್ಕಮಹಾದೇವಿಯೊಬ್ಬಳು. ಇವಳು ತನ್ನನ್ನು ಮದುವೆಯಾಗಿದ್ದ ಕೌಶಿಕನೆಂಬ ರಾಜನನ್ನು ತಿರಸ್ಕರಿಸಿ, ಮಲ್ಲಿಕಾರ್ಜುನನನ್ನು ಹುಡುಕುತ್ತಾ ಶ್ರೀಶೈಲಕ್ಕೆ ಹೋದಳು. ಅಲ್ಲಿ ಹೋದಾಗ ಅವಳು ಕಂಡ ಮೃಗಪಕ್ಷಿಗಳನ್ನೆಲ್ಲಾ, ಚೆನ್ನಮಲ್ಲಿಕಾರ್ಜುನನನ್ನು ನೀವು

ಕಂಡಿರೇ, ನೀವು ಕಂಡಿರೇ? ಅವನೆಲ್ಲಿಹನು? ಎಂದು ಮುಗ್ಧತೆಯಿಂದ ಮಾತಾಡಿಸಿದಳು. ಕೊನೆಗೆ ಅವಳ ಭಕ್ತಿಗೆ ಮೆಚ್ಚಿ ದೇವರು ಪ್ರತ್ಯಕ್ಷವಾದಾಗ, ಅವಳು ತನ್ನ ಜೀವನವು ಅಂದು ಸಾರ್ಥಕವಾಯಿತೆಂದು ಪರಿಗಣಿಸಿದಳು.

ಭಕ್ತಿಗಿಂತ ಹೆಚ್ಚಾಗಿ ವಿದ್ಯೆಯನ್ನೇ ಆಶ್ರಯಿಸಿದ್ದ ಸಂಚಿ ಹೊನ್ನಮ್ಮನು ಚಿಕ್ಕದೇವರಾಯನ ಆಸ್ಥಾನವನ್ನು ಅಲಂಕರಿಸಿದವಳು. ಈಕೆಯು 'ಹದಿಬದೆಯ ಧರ್ಮ' ಎಂಬ ಕಾವ್ಯವನ್ನು ಬರೆದು, ಹೆಣ್ಣಿಗೆ ಯಾವ ಸ್ಥಾನ ಕೊಡಬೇಕು, ಜಗತ್ತಿನಲ್ಲಿ ಅವಳು ಗಂಡಸಿಗಿಂತ ಕೀಳಾದವಳಲ್ಲ ಎಂದು ನಿರೂಪಿಸಿದ್ದಾಳೆ. 'ಹೆಣ್ಣು ಮಗುವು ಹುಟ್ಟಿದರೆ ಬೇಸರವೇಕೆ? ಅವಳೂ ವಂಶವನ್ನು ಬೆಳಗಿಸಲು ಸಾಧ್ಯ? ಜನ್ಮ ಕೊಟ್ಟವಳೇ ಹೆಣ್ಣಾಗಿರುವುದರಿಂದ, ಹೆಂಗಸರನ್ನು ಕಡೆಗಾಣದಿರಿ' ಎಂದು ನುಡಿದಿದ್ದಾಳೆ.

ಭಕ್ತಿಯನ್ನು ರಸವತ್ತಾದ ಹಾಡಿನ ರಚನೆಗಳಲ್ಲಿ ಪುರಂದರದಾಸರು ಜನರ ಮನಗಳಲ್ಲಿ ಆಳವಡಿಸಿದ್ದಾರೆ. ಆದರೆ ಇವರು ಮೊದಲು ಲೋಭಿಗಳಾಗಿದ್ದು ನಂತರ ಜ್ಞಾನೋದಯವನ್ನು ಹೊಂದಿದರಂತೆ. ಇವರಂತೆಯೇ ಹರಿದಾಸರಾದವರಲ್ಲಿ ಕನಕದಾಸರೂ ಒಬ್ಬರು. ಇವರು ತಮ್ಮ ಗುರುಗಳಿಗೂ, ಸಹಪಾಠಿಗಳಿಗೂ,' "ದೇವರು ಸರ್ವವ್ಯಾಪಿ. ನಾವು ಮಾಡುವ ಎಲ್ಲ ಕೃತ್ಯಗಳನ್ನೂ ಅವನು ಪರೀಕ್ಷಿಸುತ್ತಾನೆ. ನುಡಿಯುವ ಎಲ್ಲ ಶಬ್ದಗಳನ್ನೂ ಆಲಿಸುತ್ತಾನೆ. ಆ ಪರಮಾತ್ಮನಿಂದ ಯಾವ ರಹಸ್ಯವೂ ಸಾಧ್ಯವಿಲ್ಲ" ಎಂದು ವಿಶದಪಡಿಸಿದರು. ಇವರು ಒಂದು ಸಲ ಉಡುಪಿ ಶ್ರೀಕೃಷ್ಣನ ದೇವಾಲಯಕ್ಕೆ ಹೋದರು. ಆದರೆ ಇವರನ್ನು ದೇವರ ದರ್ಶನಕ್ಕೆ ಬಿಡಲಿಲ್ಲ. ಆಗ ಹಿಂಬದಿಯಿಂದ ಶ್ರೀಕೃಷ್ಣನನ್ನು ಕುರಿತು ಭಕ್ತಿಪರವಶರಾದಾಗ ಆ ಭಗವಂತನೇ ಇವರೆಡೆಗೆ ತಿರುಗಿದನಂತೆ. ಇದರಿಂದ ಆ ಕಾಲದಲ್ಲಿ ಜನರಿಗೆ ಎಷ್ಟು ಭಕ್ತಿ ಇತ್ತು ಮತ್ತು ಅವರ ಪ್ರಭಾವವೆಷ್ಟಿತ್ತು ಎಂಬುದು ಅರಿವಾಗುವುದು.

### ಸಂಗೀತ ಸಾಹಿತ್ಯ

ಇನ್ನು ವಚನ ಸಾಹಿತ್ಯ ರೂಪದಲ್ಲಿ ಕನ್ನಡ ಸಂಸ್ಕೃತಿಗೆ ಕಳೆ ಕೊಟ್ಟವರ ಪೈಕಿ ಹರಿಹರನೂ ಒಬ್ಬನು. ಇವನು ರಾಜಮರ್ಯಾದೆಗಳನ್ನೂ, ಭೋಗಗಳನ್ನೂ ತಿರಸ್ಕರಿಸಿ ಕೇವಲ ಸಾಮಾನ್ಯ ಜನರ ನಡುವೆ ಇದ್ದು, ಅವರ ಜೀವನವನ್ನು ಕುರಿತು ಅನೇಕ ಪದ್ಯಗಳನ್ನು ರಚಿಸಿದ್ದಾನೆ.

ಸಂಗೀತ ಸಾಹಿತ್ಯದಲ್ಲಿ ಹೆಸರುವಾಸಿಯಾದ ತ್ಯಾಗರಾಜರೂ, ಮುತ್ತುಸ್ವಾಮಿ ದೀಕ್ಷಿತರೂ, ಶಾಮಾಶಾಸ್ತ್ರಿಗಳೂ ಕರ್ಣಾಟಕ ಸಂಗೀತಕ್ಕೆ ಹೊಸ ಜನ್ಮವನ್ನೇ ದಯಪಾಲಿಸಿದರು. ತ್ಯಾಗರಾಜರು ತೆಲುಗಿನಲ್ಲಿಯೂ, ದೀಕ್ಷಿತರು ಸಂಸ್ಕೃತದಲ್ಲಿಯೂ ಮತ್ತು ಶ್ಯಾಮಾಶಾಸ್ತ್ರಿಗಳು ಕನ್ನಡದಲ್ಲಿಯೂ ರಚಿಸಿದ್ದಾರೆ. ಇವರಲ್ಲದೆ ಇಂದಿನ ಶ್ರೀ ವಾಸುದೇವಾಚಾರ್ಯರು ಮುಂತಾದವರಿಗೆ ಕನ್ನಡದ ರಾಜಮನೆತನದವರು ಪ್ರೋತ್ಸಾಹವನ್ನಿತ್ತಿದ್ದಾರೆ.

### ನಮ್ಮ ಕರ್ತವ್ಯ

ಇಷ್ಟು ಉತ್ತಮವಾದ ಸಂಸ್ಕೃತಿಯನ್ನು ಹೊಂದಿರುವುದು ಕನ್ನಡಿಗರ ಪುಣ್ಯವೇ ಸರಿ. ಇಂದಿನ ಕನ್ನಡಿಗರ ಕರ್ತವ್ಯವೇನಂದರೆ, ಕೇವಲ ಹಿಂದಿನದನ್ನು ನೆನೆದರೆ ಮಾತ್ರ ಸಾಲದು. ಆ ಸಂಸ್ಕೃತಿಗೆ ಕಳಂಕ ತರದೆ ಮತ್ತಷ್ಟು ಉತ್ತಮ ಪಡಿಸುವುದಕ್ಕೆ ಪ್ರಯತ್ನಿಸಬೇಕು. ಇಂದು ದೇಶಗಳ ನಡುವೆ ಸ್ನೇಹಪರತೆಯನ್ನು ಬೆಳೆಸುವುದಕ್ಕಾಗಿ ಕೇವಲ ಸಾಂಸ್ಕೃತಿಕ ನಿಯೋಗಗಳನ್ನು ಕಳುಹಿಸಿದರೆ ಮಾತ್ರ ಸಾಲದು.

ನಮ್ಮ ದೇಶದ ರಾಜ್ಯಪಾಲರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರು, ವಿದೇಶಗಳಿಗೆ ಪ್ರಯಾಣ ಬೆಳಸಿ, ಅಲ್ಲಿ ನಮ್ಮ ದೇಶದವರ ಕಲೆ, ಸಾಹಿತ್ಯ, ಯೋಚನಾಪರತೆ ಮತ್ತು ಸಂಸ್ಕೃತಿಯ ಮೇಲೆ ಭಾಷಣ ಮಾಡುತ್ತಿರುವುದು ಶ್ಲಾಘನೀಯವಾಗಿದೆ.

ಕನ್ನಡಿಗರ ಹೊಂಗನಸಾಗಿದ್ದ ಕನ್ನಡದ ಐಕ್ಯತೆ ಹಿಂದಿನ ಸಂಸ್ಕೃತಿಯು ಮುಂದಿನ ಸಂಸ್ಕೃತಿಗೆ ಪ್ರೋತ್ಸಾಹದ ನೆರಳಾಗಬೇಕು. ಅಂದೇ ಕನ್ನಡ ನಾಡಿನ ಭವ್ಯ ಸಂಸ್ಕೃತಿಯು ನಿಜವಾದ ಪರಿಪೂರ್ಣತೆಯನ್ನು ಹೊಂದುವುದು.

ಆದ್ದರಿಂದ ಪ್ರತಿಯೊಬ್ಬ ಕನ್ನಡಿಗನೂ ತನ್ನ ದೇಶದ ಸಂಸ್ಕೃತಿಯ ಹಿರಿಮೆಗಾಗಿ ತನು, ಮನ, ಧನವೆಲ್ಲವನ್ನೂ ಅರ್ಪಿಸಬೇಕು.

---

# ಅನುತಾಪ ಮತ್ತು ವೇದನೆ

( ಒಂದು ವಿಚಾರ ಪ್ರಬಂಧ )

ಲೇ : ಎಸ್. ಕೆ. ರಮಾದೇವಮ್ಮ

ಮಾನವನ ಜೀವನದ ಮೊಗ್ಗು ಬಲಿತು ಪರಿಪೂರ್ಣವಾಗಿ ವಿಕಾಸಗೊಳ್ಳಬೇಕಾದರೆ, ಅದು ದುಃಖಾನುಭವದ ಬಿಸಿಲನ್ನು ಉಣ್ಣಬೇಕು; ಅನುತಾಪದ ಅಗ್ನಿರಸವನ್ನು ಕುಡಿದು ಕುಡಿದು ಬೆಳೆಯಬೇಕು. "ಕಷ್ಟಪಟ್ಟರೆ ಫಲವುಂಟು" "ಕೈ ಕೆಸರಾದರೆ ಬಾಯಿ ಮೊಸರಾದೀತು" ಎಂಬ ಗಾದೆಯ ಸತ್ಯವನ್ನು ನಮ್ಮ ನಿತ್ಯಜೀವನದಲ್ಲಿ ಕಾಣುತ್ತೇವೆ. ಮಂತ್ರವಾದಿಯು ತನ್ನ ಕೋಲನ್ನು ಬಡಿದು, ತಾನು ಬಯಸಿದ ವಸ್ತುಗಳನ್ನು ಪಡೆಯುವಂತೆ, ನಾವಂತೂ ನೆನಸಿದೊಡನೆಯೇ ಸುಖವನ್ನು ಪಡೆಯುವುದೇನೂ ಸಾಧ್ಯವಿಲ್ಲ. ಹಾಗೆ ಎಲ್ಲರಿಗೂ ಕೂತೆಡೆಯೇ ಆಕಾಶವನ್ನು ಮುಟ್ಟುವುದು ಸಾಧ್ಯವಾಗುವುದಾಗಿದ್ದರೆ, ನಾವೆಲ್ಲಾ ದೇವತೆಗಳೇ ಆಗಿರುತ್ತಿದ್ದೆವು.

ಮನುಷ್ಯನಾಗಿ ಹುಟ್ಟಿದಮೇಲೆ, ಮನುಷ್ಯ ಜೀವನದ ಕಷ್ಟ–ಸುಖಗಳೆರಡನ್ನೂ ಅರಿತಿರಬೇಕು. ಯಾವುದೊಂದರ ಅನುಭವವಿಲ್ಲದಿದ್ದರೂ ನಾವು ಜೀವನವನ್ನು ಪೂರ್ತಿಯಾಗಿ ಅರ್ಥಮಾಡಿಕೊಳ್ಳಲು ಆಗುವುದಿಲ್ಲ. ಕಷ್ಟವನ್ನು ಕಂಡರಿಯದೆ, ಕೇವಲ ಸುಖದಲ್ಲೇ ಬೆಳೆದ ಮನುಷ್ಯನಾದರೋ, ಕೇವಲ ಭೋಗಿಯಾಗಿಬಿಡುತ್ತಾನೆ. ಆದರೆ ಆ ಸುಖವು ಪೂರ್ತಿಯಾಗಿ ಪಕ್ವವಾಗಿರುವುದಿಲ್ಲ. ಅದರಂತೆ; ಸುಖವನ್ನು ಕಂಡರಿಯದೆ ಕೇವಲ ದುಃಖದಲ್ಲೇ ಬೆಳೆದ ವ್ಯಕ್ತಿಯಾದರೋ ಕೇವಲ ಸಿಡುಕುಮೋರೆಯವನಾಗುತ್ತಾನೆ. (ಎಂದರೆ He will become a cynic) ಆದ್ದರಿಂದ ಸುಖ–ದುಃಖಗಳೆರಡೂ ಆವಶ್ಯಕ. ಆದುದರಿಂದ ನಾವು ಸುಖವನ್ನು ಎಷ್ಟು ಸಂತೋಷದಿಂದ ಆಲಂಗಿಸಿಕೊಳ್ಳುವೆವೋ, ಅದೇ ರೀತಿ ಕಷ್ಟವನ್ನು ಸಂತೋಷದಿಂದಲೇ ಆಲಂಗಿಸಿಕೊಳ್ಳುವುದನ್ನೂ ಕಲಿಯಬೇಕು.

"ನಾವೇ ಏಕೆ ಸ್ವತಃ ಕಷ್ಟಗಳನ್ನು ಅನುಭವಿಸಬೇಕು? ಇನ್ನೊಬ್ಬರು ಅನುಭವಿಸಿದ ಕಷ್ಟವನ್ನು ನೋಡಿದರೆ ತಿಳಿಯುವುದಿಲ್ಲವೇ?" ಎನ್ನಬಹುದು. ಆದರೆ ಅದು ಹಾಗಲ್ಲ. ಕೇಳಿದ ಕಷ್ಟಕ್ಕಿಂತ ಸ್ವತಃ ಅನುಭವಿಸಿದ ಕಷ್ಟ ಇನ್ನೂ ಆಳವಾಗಿರುತ್ತದೆ. ಸುಪ್ರಸಿದ್ಧ ಇಂಗ್ಲೀಷ್ ಮಹಾಕವಿ ಕೀಟ್ಸ್ ಹೇಳಿರುವಂತೆ "Heard melodies are sweet but those unheard are sweeter" ಎಂಬುದನ್ನು ಗಮನಿಸಬಹುದು. ದೊಡ್ಡವರು ಹೇಳುವಂತೆ: "ನಿಮ್ಮ ತಲೆಗೆ ಕಷ್ಟ ತಗಲಬೇಕೇ ಹೊರತು, ಇನ್ನೊಬ್ಬರು ಹೇಳಿದರೆ ತಿಳಿಯುವುದಿಲ್ಲ" ಎಂದು. ಇದು ಸಹಜವಾದದ್ದೇ. ಕೊಡಲಿಯ ಪೆಟ್ಟು ತಿಂದವನಿಗೇ ಅದರ ರುಚಿ ತಿಳಿಯುತ್ತದೆಯೇ ಹೊರತು, ಎಲ್ಲರಿಗೂ ತಿಳಿಯುತ್ತದೆಯೇ? ಭೋಗ ಸಾಮ್ರಾಜ್ಯದಲ್ಲಿ ತೇಲಿ ಮುಳುಗುವವನೆದುರಿಗೆ– ಕಷ್ಟದ ರುಚಿಯನ್ನೇ ಕಂಡರಿಯದವನೆದುರಿಗೆ–'ನನಗೆ ಕಷ್ಟ' ಎಂದರೆ ಅವನು ನಂಬುತ್ತಾನೆಯೇ? ಕಿವುಡನ ಮುಂದೆ ಕಿನ್ನರಿ ಬಾರಿಸಿದಂತಾಗುತ್ತದೆ. ಆದ್ದರಿಂದ ಜೀವನವನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲು ಕಷ್ಟಾನುಭವ ಆವಶ್ಯಕ.

ಎರಡನೆಯದಾದರೋ ಅನುತಾಪ. ಇದೂ ಸಹ ಜೀವನದ ವಿಕಾಸಕ್ಕೆ ತುಂಬಾ ಸಹಾಯ ಮಾಡುತ್ತದೆ. ತಪ್ಪು ಮಾಡುವುದೇನೋ ಮಾನವ ಸಹಜವಾದ ಗುಣ. ಹುಟ್ಟುತ್ತಲೇ ಮಹಾತ್ಮನಾಗುವುದು ಯಾವ ವ್ಯಕ್ತಿಗೂ ಸಾಧ್ಯವಿಲ್ಲ. ಅದರಲ್ಲೂ ಯೌವ್ವನದಲ್ಲಿ ಮಾನವನು 'ಇದು ಸರಿ, ಇದು ತಪ್ಪು' ಎಂಬ ಪರಿಜ್ಞಾನವಿಲ್ಲದೆ ಮುನ್ನುಗ್ಗಿ ತಪ್ಪುಮಾಡುತ್ತಾನೆ. ಆದರೆ ಆ ತಪ್ಪನ್ನು– ಆ ಪಾಪವನ್ನು – ಅನುತಾಪದಿಂದ (Repentance) ಹೋಗಲಾಡಿಸಿಕೊಳ್ಳಬಹುದು.

ಜೀವನದ ಪರಿಪೂರ್ಣ ವಿಕಸನಕ್ಕೆ ಅನುತಾಪದ ಬೆಂಕಿ ಮತ್ತು ಅಪರಾಧದ ಪೆಟ್ಟುಗಳು ಅವಶ್ಯಕ. ಯಾವ ಜೀವವು ಕಷ್ಟವನ್ನು ಅನುಭವಿಸುತ್ತದೆಯೋ ಅದು ಮುಂದೆ ಬರತಕ್ಕ ಸುಖವನ್ನು ಇಮ್ಮಡಿಯಾಗಿ ಅನುಭವಿಸುತ್ತದೆ. ನೋವಿನ ಹಿಂದೆ ಒಂದು ಆಪ್ಯಾಯಮಾನವಾದ ಸುಖವಿರುತ್ತದೆ.

ಅನುತಾಪ ಮತ್ತು ವೇದನೆಯನ್ನು ನಮ್ಮ ನಿತ್ಯಜೀವನದಲ್ಲೂ ನೋಡುತ್ತೇವೆ. ಇದು ಎಷ್ಟೋ ಜನರ ಜೀವನಧಾರೆಯಲ್ಲೇ ಮಾರ್ಪಾಟನ್ನುಂಟುಮಾಡಿದೆ. ಎಷ್ಟೋ ಜನ ಮಹಾತ್ಮರುಗಳ ಜೀವನವು ಉದಾಹರಣೆಗೆ ಸಿಗುತ್ತದೆ. ನಮ್ಮ ಕಣ್ಣೆದುರಿಗೇ ಇದ್ದು ಪ್ರಖ್ಯಾತರಾಗಿ ಅಳಿದ

ಮಹಾತ್ಮಾ ಗಾಂಧೀಯವರನ್ನು ತೆಗೆದುಕೊಳ್ಳೋಣ; ಅವರೇ ತಮ್ಮ ಆತ್ಮಕಥೆಯಲ್ಲಿ ತಾವು ಹೇಗೆ ಪಾಪಮಾರ್ಗಗಳಲ್ಲಿ ಕಾಲಿಟ್ಟಿದ್ದರು ಮತ್ತು ಅದಕ್ಕಾಗಿ ಪಶ್ಚಾತ್ತಾಪಗೊಂಡು ಅದರಿಂದ ಹೇಗೆ ಪಾರಾದರು ಎಂಬುದನ್ನು ತಿಳಿಸಿದ್ದಾರೆ. ಕಳ್ಳತನವನ್ನು ಮಾಡಿದ್ದಾರೆ; ಸುಳ್ಳು ಹೇಳಿದ್ದಾರೆ. ಎಲ್ಲಾ ಮಾಡಿದ್ದಾರೆ. ಆದರೆ ತಾವು ಮಾಡಿದ್ದು ತಪ್ಪೆಂದು ತಿಳಿದನಂತರ ಅದನ್ನೆಲ್ಲಾ ಬಿಟ್ಟುಬಿಟ್ಟರು. ಒಂದು ಸಲ ಹಾಗೆ ಅನುತಾಪದ ಬೆಂಕಿಯಿಂದ ಬೆಂದನಂತರ, ಅವರು ಪುನಃ ಎಂದಿಗೂ ತಪ್ಪು ಮಾಡಲಿಲ್ಲ. ಅದಕ್ಕೆ ಬದಲು "ಬುದ್ಧದೇವ" ಮತ್ತು "ಏಸುಕ್ರಿಸ್ತ"ರಂತೆ ಒಂದು ಅವತಾರವೆಂದು ಜಗತ್ಪ್ರಖ್ಯಾತರಾದರು.

ಪುರಾಣ ಗ್ರಂಥಗಳಿಂದ ಉದಾಹರಣೆಗಳನ್ನು ಕೊಡಹೋದರೂ ಬೇಕಾದಷ್ಟು ದೃಷ್ಟಾಂತಗಳು ಸಿಗುತ್ತವೆ. ಯಾವ ವಾಲ್ಮೀಕಿ ಮಹರ್ಷಿಗಳು "ಆದಿಕವಿ"ಗಳೆಂದು ಪ್ರಸಿದ್ಧರಾಗಿದ್ದರೋ, ಅವರು ಹಿಂದೆ ಒಬ್ಬ ಸಾಧಾರಣ ಬೇಡನಂತೆ ಕಳ್ಳತನ ದರೋಡೆಗಳಿಂದ ಜೀವನೋಪಾಯವನ್ನು ನಡೆಸುತ್ತಿದ್ದರು. ಸಪ್ತಋಷಿಗಳ ಬೋಧನೆಯಿಂದ ಇದ್ದಕ್ಕಿದ್ದಂತೆಯೇ ತಾವು ಮಾಡುತ್ತಿರುವುದು ತಪ್ಪು ಎಂದು ತಿಳಿದು, ಅದಕ್ಕಾಗಿ ಪಶ್ಚಾತ್ತಾಪಪಟ್ಟರು. ಅನಂತರ ಮನಸ್ಸಿನ ಆ ಕುದಿಯೇ ಅವರ ವ್ಯಕ್ತಿತ್ವವನ್ನು ಬದಲಾಯಿಸಲು ಸಹಾಯಮಾಡಿತು. ಸ್ವಾಭಾವಿಕವಾಗಿ ಹರಿದು ಬಂದ ಕಣ್ಣೀರು ಕಳಂಕವನ್ನೆಲ್ಲಾ ಕೊಚ್ಚಿಕೊಂಡು ಹೋಯಿತು.

ಇದೇ ರೀತಿಯಾದ ಮಾರ್ಪಾಟನ್ನು ಪತಿವ್ರತಾ ಶಿರೋಮಣಿಯೆಂದು ಪ್ರಸಿದ್ಧಳಾಗಿರುವ – ಗೌತಮ ಮಹರ್ಷಿಗಳ ಹೆಂಡತಿ – ಅಹಲ್ಯಾದೇವಿಯ ಜೀವಮಾನದಲ್ಲೂ ನೋಡುತ್ತೇವೆ. ಯಾವುದೋ ಒಂದು ವಿಷಗಳಿಗೆಯಲ್ಲಿ ಏನೋ ಒಂದು ವಿಧವಾದ ಕುರುಡು ಮೋಹದಿಂದ ಇಂದ್ರನಲ್ಲಿ ಅನುರಕ್ತಳಾದಳು. ಆದರೆ ತತ್‌ಕ್ಷಣವೇ ತಾನು ಮಾಡಿದ್ದು ತಪ್ಪೆಂದು ತಿಳಿದು, ನಿದ್ರಾಹಾರಗಳಿಲ್ಲದೆ ಶಿಲೋಪಾದಿಯಲ್ಲಿ ಕಾಲವನ್ನು ಕಳೆದಳು. ಆ ವೇದನೆಯೇ ಶ್ರೀರಾಮಚಂದ್ರನ ಪಾದಸ್ಪರ್ಶದ ಸೌಭಾಗ್ಯವನ್ನು ಪಡೆದು ಪಾಪದಿಂದ ಮುಕ್ತಿಹೊಂದಲು ಸಹಾಯಮಾಡಿತು.

ಇತಿಹಾಸರೀತಿಯಲ್ಲೂ ಅನೇಕ ಉದಾಹರಣೆಗಳನ್ನು ಕೊಡಬಹುದು. ಉದಾಹರಣೆಗೆ ಧರ್ಮಸಾಮ್ರಾಟನೆಂದು ಪ್ರಸಿದ್ಧನಾಗಿರುವ ಅಶೋಕ ಚಕ್ರವರ್ತಿಯು, ಕಳಿಂಗ ಯುದ್ಧವನ್ನು ಮಾಡಿ ಲಕ್ಷಾಂತರ ಜನರನ್ನು ಕೊಂದನು. ಹಾಗೆ ಕೊಂದ ನಂತರವೇ ಅವನಿಗೆ ತಾನು ಮಾಡಿದ ಅಪರಾಧ ತಿಳಿದಿದ್ದು. ಹಾಗೆ ತಿಳಿದಮೇಲೆ ಅವನು ಎಂದಿಗೂ ಯುದ್ಧಮಾಡಲಿಲ್ಲ. ಹಿಂಸಾಕಾರ್ಯವನ್ನೇ ಬಿಟ್ಟನು ಮತ್ತು "ಧರ್ಮಪ್ರಭು" ಎನಿಸಿದನು.

ಈ ಉದಾಹರಣೆಗಳಿಂದ "ಮನುಷ್ಯತ್ವ"ದಿಂದ "ದೈವತ್ವ"ಕ್ಕೆ ಏರಲು ಅನುತಾಪ ಮತ್ತು ವೇದನೆ ಎಷ್ಟರಮಟ್ಟಿಗೆ ಸಹಾಯಮಾಡುತ್ತದೆ ಎಂಬುದೂ, ಜೀವನದ ಪರಿಪೂರ್ಣ ವಿಕಾಸಕ್ಕೆ ಇವುಗಳ ಆವಶ್ಯಕತೆ ಏನೆಂಬುದೂ ತಿಳಿದುಬರುತ್ತದೆ. ಪ್ರಸಿದ್ಧನಾದ ಇಂಗ್ಲೀಷ್ ಕವಿ ರಾಬರ್ಟ್ ಬ್ರೌನಿಂಗ್ ಹೇಳಿರುವಂತೆ "Oh, God, give me trouble" ಎಂದು ಪ್ರಾರ್ಥಿಸಬೇಕು. ಮತ್ತೊಬ್ಬ ಆಂಗ್ಲ ಮಹಾಕವಿಯ ವಚನದಂತೆ "Our sweetest songs are those that tell us of saddest thoughts" ಆದ್ದರಿಂದ ಮನುಷ್ಯನು ಯಾವಾಗಲೂ ಕಷ್ಟದಿಂದ ದೂರವಾಗಲು ಯತ್ನಿಸಬಾರದು. ಏಕೆಂದರೆ, ನಮ್ಮ ಜೀವನದಲ್ಲಿ ಅನುತಾಪ ಮತ್ತು ವೇದನೆಯ ಸ್ಥಾನವು ಮಹತ್ತರವಾದುದು.

---

# ಪ್ರಾಯಶ್ಚಿತ್ತ*

## ( ಒಂದು ಭವಿತವ್ಯದ ಕಥೆ )

ಲೇ: ದಿವಂಗತ ಆರ್. ಕಾಮಾಕ್ಷಮ್ಮ

೧

ಬಹಳ ಹಿಂದಿನ ಮಾತು; ಶ್ರೀದೇವಿ ತಾತನ ಬಳಿ ಕಥೆ ಹೇಳೆಂದು ಕೇಳಿದಾಗ ತಾತ ಹೇಳಿದ್ದು: “ಮಗು, ಕಥೆಯನ್ನು ಕೇಳಬೇಡ. ನಿಜವಾಗಿ ನಡೆದುದನ್ನೇ ಹೇಳುವೆನು ಕೇಳು. ಸರ್ವಶಕ್ತನಾದ ಪರಮೇಶ್ವರನ ಮಹಿಮೆಯನ್ನು ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ. ಆ ಶಕ್ತಿ ಏನೆಂದು ತಿಳಿಯದಿದ್ದರೂ ಇದೆ ಎಂದು ನಾವು ನಂಬಿದ್ದೇವೆ. ಅದು ನಿಜವೂ ಅಹುದು. ಆತನು ತನ್ನ ಸೃಷ್ಟಿಯಲ್ಲಿರುವ ಎಲ್ಲಾ ಸ್ಥಿರಚರ ವಸ್ತುಗಳ ಮೇಲೂ ತನ್ನ ಪ್ರಭಾವವನ್ನು ಹೇಗೆ ಉಪಯೋಗಿಸುತ್ತಾನೆ ಎಂಬುದಕ್ಕೆ ನನಗೆ ತಿಳಿದ ಒಂದು ಸಂಗತಿಯನ್ನು ತಿಳಿಸುತ್ತೇನೆ, ಮಗು. ಇದರಿಂದ ನೀನು ತಿಳಿದುಕೊಳ್ಳಬೇಕಾದುದು ಬಹಳವಿದೆ. ನಿನ್ನ ಈ ಜನ್ಮವನ್ನೇ ಪೂರ್ತಿಯಾಗಿ ಇದ ಕ್ಕೋಸ್ಕರ ಮುಡುಪಾಗಿಟ್ಟು, ಅದನ್ನು ಸಾಧಿಸಿ ಶ್ರೀ ಗುರು ಕೃಪೆಗೆ ಪಾತ್ರಳಾಗಬೇಕೆಂಬುದೇ ನನ್ನ ಕೊನೆಯ ಆಶೆಯಾಗಿದೆ. ಮಗು, ನಿನ್ನಿಂದ ನಾನು ಬಹಳ (I expect something great from you) ಸಾಧಿಸಬೇಕಾಗಿದೆ. ನನ್ನ ಮಾತಿಗೆ ವಿರುದ್ಧ ಹೋಗಬೇಡ, ನನ್ನ ಮಾತಿನಲ್ಲಿ ನಂಬಿಕೆಯಿಡು. ಕಾರ್ಯವನ್ನು ಸಾಧಿಸಬಹುದು. ಮನಸ್ಸಿಗಿಂತ ದೊಡ್ಡದು ಜಗತ್ತಿನಲ್ಲಿ ಬೇರೊಂದಿಲ್ಲ. ನಾ . . . .”

ಶ್ರೀದೇವಿಗೆ ತಾತನ ಮಾತುಗಳೊಂದೂ ಅರ್ಥವಾಗದೆ, ಸುಮ್ಮನೆ ಭ್ರಾಂತಳಾಗಿ – “ತಾತ! ಇದೇನು, ನೀವು ಹೇಳುವುದೊಂದೂ ಅರ್ಥವಾಗುವುದಿಲ್ಲವಲ್ಲ. ನನಗೆ ಯಾವಾಗಲೂ ನನ್ನ ಅಮ್ಮ ಬುದ್ಧಿವಾದವನ್ನು ಕಥೆಯ ಮೂಲಕ ಹೇಳಿ ಚೆನ್ನಾಗಿ ಮನದಟ್ಟಾಗುವಂತೆ ಮಾಡುವುದು ಆಕೆಯ ಪದ್ಧತಿ. ಅದು ನಮ್ಮ ಮನೆಯವರಿಗೆಲ್ಲರಿಗೂ ರೂಢಿಯಾಗಿದೆ. ಆದುದರಿಂದ ಕಥೆ ಕೇಳುವವರನ್ನು ಕಂಡರೆ ಕೇಳಬೇಕೆಂಬ ಕುತೂಹಲ ನನಗೆ ಬಹಳ. ಆದುದರಿಂದಲೇ ನಿಮ್ಮನ್ನು ಕಥೆ ಕೇಳಿದೆನು ತಾತಾ” ಎಂದಳು.

“ಶ್ರೀದೇವಿ, ನೀನು ಕೇಳುವುದು ಸರಿ, ನಾನು ಹೇಳುವುದೂ ಸರಿ. ಅಲ್ಲದೆ ನೀನು ಕೇಳದಿದ್ದರೂ ಹೇಳಬೇಕಾದ ಕೆಲವು ಮಾತುಗಳನ್ನು ಹೇಳುವೆನು ಕೇಳು”:

“ರಂಗರಾಯ ಉತ್ತಮ ಪಂ[illegible]ದ ಒಬ್ಬ ಸದ್ಗೃಹಸ್ಥ. ಈತನಿಗೆ ರಂಗನಾಥನೊಬ್ಬನೇ ಪುತ್ರ. ರಂಗರಾಯ ಒಂದು ದಿನ ತನ್ನ ಜಮೀನಿನಲ್ಲಿ ಕೆಲಸ ಮಾಡುತ್ತಿದ್ದಾಗ ಯಾರೋ ಒಬ್ಬ ಅಪರಿಚಿತ ವ್ಯಕ್ತಿ ಅಲ್ಲಿಗೆ ಬಂದು, ಆತನನ್ನು ಕುರಿತು ಹೀಗೆ ಹೇಳಿದನಂತೆ: “ಈ ನಿನ್ನ ಸದ್ವಂಶದಲ್ಲಿ ನಿನ್ನ ಮಗನ ಕಾಲವಾದ ಬಳಿಕ ನಿನ್ನ ಮೊಮ್ಮಗನ ಕಾಲಕ್ಕೆ ಒಂದು ದಿವ್ಯಜ್ಯೋತಿಯನ್ನು ನೋಡುವ ಸುಯೋಗ ನಿನಗಿದೆ.”

—ಅಪರಿಚಿತನ ಮಾತು ರಂಗರಾಯನಿಗೆ ಅರ್ಥವೇ ಆಗಲಿಲ್ಲ. ಕೆಲಸವನ್ನು ಅಲ್ಲಿಗೇ ಬಿಟ್ಟ. ಅದೇ ಪಕ್ಕದ ಹೊಲದಲ್ಲಿ ಕೆಲಸ ಮಾಡುತ್ತಿದ್ದ ತನ್ನ ಮಗ ರಂಗನಾಥನನ್ನು ಕರೆದು – “ನಡೆ, ಮನೆಗೆ ಹೋಗೋಣ. ಈ ದಿನ ಒಂದು ಸುದಿನ. ಈಗ ಯಾರೋ ಒಬ್ಬ ಅಪರಿಚಿತ ವ್ಯಕ್ತಿ–ಪೂರ್ಣ ಗಂಭೀರ ಮುಖಮುದ್ರೆ, ತೇಜಸ್ಸು ಮತ್ತು ಕಾಂತಿಯಿಂದ ಕೂಡಿದವನು ಈ ನಮ್ಮ ವಂಶದಲ್ಲಿ ನಿನ್ನ ಮಗನ ಕಾಲಕ್ಕೆ ಒಂದು ದಿವ್ಯಜ್ಯೋತಿ ನೋಡುವ ಯೋಗವಿದೆ ಎಂದು ಹೇಳಿ ಹೋದ. ಆತನ ಮಾತನ್ನು ನಂಬತಕ್ಕದ್ದು. ಆತನನ್ನು ನೋಡಿದಾಗಿನಿಂದ ನನ್ನಲ್ಲೇ ಏನೋ ಒಂದು ವಿಧವಾದ ಮಾನಸಿಕ ಬದಲಾವಣೆಯೇ ಆದ ಹಾಗಿದೆ. ನಡೆ, ಮನೆಗೆ ಹೋಗಿ ದೇವರಿಗೆ ದೀಪ ಹೊತ್ತಿಸಿ ನಮಸ್ಕರಿಸಿ ಆ ಸುದಿನವನ್ನು ನೆನೆಯೋಣ.” ಎಂದು, ಮಗನನ್ನು ಕರೆದುಕೊಂಡು ಮನೆಗೆ ಹೊರಟ.

ಅನಿರೀಕ್ಷಿತವಾಗಿ ತಂದೆ ಮಕ್ಕಳಿಬ್ಬರೂ ಮನೆಗೆ ಬಂದುದನ್ನು ಕಂಡು ಅತ್ತೆ ಸೊಸೆಯರಿಬ್ಬರೂ ಭ್ರಾಂತರಾದರು. ಕಾರಣ ತಿಳಿಯಲು, ಅತ್ತೆ ಬಾಗಿಲಿಗೆ ಬಂದು ಕೇಳಿದಳು. ರಂಗರಾಯ ಕೆಲವು ಗಂಡಸರಂತೆ ಕೋಪಗೊಳ್ಳದೆ, ತನ್ನ ಹೆಂಡತಿಯೇ ಮನೆಯ ಸರ್ವಸ್ವವೆಂದು ತಿಳಿದು – “ಈ ದಿನ ನಮ್ಮ ವಂಶ ಪುನೀತವಾಯಿತು.

*ದಿವಂಗತ ಆರ್. ಕಾಮಾಕ್ಷಮ್ಮನವರು ಶ್ರೀ ಡಿ. ಆರ್. ರಾಮಯ್ಯನವರ ಧರ್ಮಪತ್ನಿ. ಇವರು ‘ಪ್ರಾಯಶ್ಚಿತ್ತ’, ‘ಸಂಗುಣಳ ಸುಖ’, ‘ಯಾವುದು ಸರಿ’ ಎಂಬ ಸಣ್ಣ ಕಥೆಗಳನ್ನೂ, ಕನ್ನಡ ಗಾದೆಗಳ ಸಂಕಲನವನ್ನೂ ಬಿಟ್ಟು ಹೋಗಿದ್ದಾರೆ. ಇದೀಗ “ಪ್ರಾಯಶ್ಚಿತ್ತ” ವನ್ನು ಇಲ್ಲಿ ಕೊಟ್ಟಿದೆ. —ಸಂ.

ನಿನ್ನ ಮೊಮ್ಮಗನ ಕಾಲಕ್ಕೆ ನಾನೊಂದು ದಿವ್ಯಜ್ಯೋತಿ ನೋಡುವ ಯೋಗವಿದೆಯಂತೆ. ಅದರ ಫಲ ನಿನಗೂ ಇದೆ." ಎಂದನು.

ರಂಗರಾಯನ ವಂಶ ಬಹಳ ಹೆಸರುವಾಸಿಯಾದುದು. ಸತ್ಯಕ್ಕೆ ಎದ್ದುಕಾಣುವ ಕೆಲವು ಗುಣಗಳು ಈ ವಂಶದಲ್ಲಿದ್ದುವು. ರಂಗರಾಯನ ತಂದೆ ತಾತಂದಿರು ಸತ್ಯಕ್ಕೆ ಹೆಸರಾದವರು. ಇವರನ್ನು ಕುರಿತು ಮಾತಾಡುವಾಗ ಜನರು–"ಸತ್ಯ ಹರಿಶ್ಚಂದ್ರ ಎಂದು ಹೆಸರಾದ ದೊರೆ ಇದ್ದನಂತೆ. ಇಲ್ಲಿ ಅದಕ್ಕೆ ಸಮವಾದ ವಂಶವೇ ಇದೆಯಲ್ಲ. ಈ ವಂಶದಲ್ಲಿ ಸತ್ಯವಲ್ಲದೇ ಬೇರೆ ಯಾವುದಕ್ಕೂ ಸ್ಥಾನವೇ ಇಲ್ಲ." ಎಂಬುದು ಎಲ್ಲರ ಮನೆಮಾತಾಗಿತ್ತು. ಊರಿನಲ್ಲಿ ಯಾವ ದೂರು ಬಂದರೂ ಈ ವಂಶೀಯರು ನ್ಯಾಯಾಧೀಶರಂತೆ ನಡೆಯುತ್ತಿದ್ದರು. ಇವರು ಹೇಳಿದ ಮೇಲೆ ಮರುಮಾತೇ ಇಲ್ಲ. ಇವರು ದೊರೆಗಳಲ್ಲ; ಯಜಮಾನರಲ್ಲ. ಯಾವ ವಿಧವಾದ ಒಂದು ಅಂತಸ್ತೂ ಇವರಿಗಿಲ್ಲ. ಆದರೂ ಎಲ್ಲರಿಗೂ ಇವರೇ ಬೇಕು. ಇದು ಸತ್ಯದ ಶಕ್ತಿ.

ಈ ವಂಶದಲ್ಲಿ ಇನ್ನೊಂದು ವಿಚಿತ್ರವನ್ನು ರಂಗರಾಯ ಕಂಡಿದ್ದ. ತನ್ನ ಪೂರ್ವಿಕರು ಹೇಳುತ್ತಿದ್ದುದುಂಟು ಒಬ್ಬ ತಂದೆಗೆ ಒಬ್ಬನೇ ಮಗನೆಂದು. ಅದು ಈತನಿಗೂ ಗೊತ್ತು. ರಂಗರಾಯ ಅವರ ತಂದೆಗೆ ಒಬ್ಬನೇ ಮಗ. ಅವರ ತಂದೆ ಅವರ ತಾತನಿಗೆ ಒಬ್ಬನೇ ಮಗ. ಈಗ ತನಗೂ ರಂಗನಾಥ ಒಬ್ಬನೇ ಮಗ. ಇನ್ನು ದಿವ್ಯಜೋತಿಯನ್ನು ಕಾಣಬೇಕಾಗಿರುವ ಕಾಲಕ್ಕೆ ಅವನ ಮೊಮ್ಮಗ, ಅವನೂ ಅವನ ತಂದೆಗೆ ಏಕಮಾತ್ರ ಪುತ್ರನಾಗುವುದು ದಿಟ.

ರಂಗರಾಯನಿಗೆ ತನ್ನ ಮೊಮ್ಮಗನ ಕಾಲದ ಬೆಳಕಿನ ಕಿರಣಗಳನ್ನು ಆಗಲೇ ಕಾಣುವಂತೆ ಹಂಬಲ. ಸೂರ್ಯ ಹುಟ್ಟುವ ಮೊದಲೇ ಕತ್ತಲು ಮಾಯವಾಗುವಂತೆ ಮೊಮ್ಮಗನ ಕಾಲದ ಕಿರಣಗಳನ್ನು ಕಾಣುವುದರಲ್ಲಿ ಕಾತುರಪಡುತ್ತಿದ್ದ. ಇದನ್ನು ನೋಡುತ್ತಿದ್ದ ಕೆಲವರು ಈತನ ಈ ಹೊಸ ಚರ್ಯೆಗಳನ್ನು ಕಂಡು ಅರ್ಥಮಾಡಿಕೊಳ್ಳದೆ, ತಮ್ಮ ತಮ್ಮಲ್ಲಿ ರಂಗರಾಯನಲ್ಲಿ ಕಂಡುಬಂದಿರುವ ಬದಲಾವಣೆಯ ವಿಚಾರವಾಗಿ ಸುಮ್ಮನೆ ಮಾತನಾಡಿಕೊಳ್ಳುತ್ತಿದ್ದರು. ಯಾವ ದಿನ ತನ್ನ ಜಮೀನಿನಲ್ಲಿ ಅಪರಿಚಿತನನ್ನು ಕಂಡನೋ ಆ ದಿನದಿಂದಲೇ ಅವನ ಜೀವನದಲ್ಲಿ ಮಾರ್ಪಾಡಾಯಿತು. ಇನ್ನು ಅವನು ಒಬ್ಬ ಸಾಮಾನ್ಯ ಜಮೀನು ಮಾಡುವವನಲ್ಲ. ಪುತ್ರನೆಂದರೆ ಪುತ್ ಎಂಬ ನರಕವನ್ನು ತಪ್ಪಿಸುವವನು, ಆತನೇ ತನ್ನ ಏಕಮಾತ್ರ ಪುತ್ರ ರಂಗನಾಥ. ಅಲ್ಲದೆ ತನಗೆ ದಿವ್ಯಜ್ಯೋತಿ ತೋರಿಸುವ ಆತನ ಭಾಗ್ಯದ ದೇವರು ರಂಗನಾಥನ ಮಗ!

೨

ರಂಗರಾಯನಿಗೆ ಸ್ತ್ರೀಯರನ್ನು ಕಂಡರೆ ಅಪಾರ ಗೌರವ. ಪ್ರಪಂಚದ ಉಳಿವು ಸ್ತ್ರೀಯರಿಂದ ಎಂದು ನಂಬಿದ್ದನು. ಆದಿಶಕ್ತಿಯೇ ಸ್ತ್ರೀ ಸ್ವರೂಪ. ಇಂತಹ ಸ್ತ್ರೀ ಸ್ವರೂಪಗಳನ್ನು ಸೃಷ್ಟಿಮಾಡಿ ಮನುಷ್ಯರ ಸಹವಾಸಿಗಳಾಗಿ ಕೊಟ್ಟಿರುವ ಭಗವಂತನ ಉದ್ದೇಶವನ್ನು ಸದಾ ಯೋಚಿಸುವನು. ಮೊದಲೇ ಒಳ್ಳೆಯ ವಂಶಸ್ಥ. ಜೊತೆಗೆ ವಾತಾವರಣವು ಒಳ್ಳೆಯದೇ ಆಗಿ, ಕೊನೆಯಲ್ಲಿ ಕೈ ಹಿಡಿದ ಸಂಗಾತಿಯೂ ಕೂಡ ಆತನ ಮಾರ್ಗದರ್ಶಿನಿಯಾದರೆ ಕೇಳಬೇಕೆ!

ಪ್ರತಿದಿನವೂ ದೇವರ ಕೆಲಸವೆಂದೇ ಎಲ್ಲಾ ದಿನಚರಿಯನ್ನೂ ಮಾಡುವನು. ಇದೆಲ್ಲಾ ದೇವರ ಅನುಗ್ರಹ, ಆತನ ಇಚ್ಛೆಯೇ ಹೊರತು ಬೇರೆಯಿಲ್ಲ, ನಮ್ಮ ಕರ್ತವ್ಯದಲ್ಲಿ ಸ್ವಲ್ಪವೂ ದೋಷವಿಲ್ಲದೆ ಮುಗಿಸಿ ಮುಕ್ತರಾಗಬೇಕೆಂಬುದೇ ಈತನ ಆಶೆಯಾಗಿತ್ತು. ಹೀಗೆ ಅನೇಕ ದಿನಗಳೂ, ಅನೇಕ ತಿಂಗಳುಗಳೂ, ಕೊನೆಗೆ ಅನೇಕ ವರ್ಷಗಳೂ ಕಳೆದುವು. ಮನೆಯಲ್ಲಿ ತನಗೆ ಬುದ್ಧಿ ಬಂದಾಗಿನಿಂದ ಒಂದು ದಿನವಾದರೂ ತಾಯಿ ತಂದೆಯರಲ್ಲಾಗಲಿ, ತಂದೆ ಮಕ್ಕಳಲ್ಲಾಗಲಿ ಅಥವಾ ತಾಯಿ ಮಕ್ಕಳಲ್ಲಾಗಲಿ—ಅದೂ ಅಲ್ಲದೆ ಅವರಲ್ಲಿಗೆ ಬಂದು ಹೋಗುವವರಲ್ಲಿಯಾಗಲಿ ಭಿನ್ನಾಭಿಪ್ರಾಯವೇ ಬಂದುದಿಲ್ಲ. ಆದರಿಂದಲೇ ಈ ಊರಿನಲ್ಲಿ ಎಲ್ಲಾ ಕೆಲಸಗಳಿಗೂ ಇವರನ್ನೇ ಕೋರುವ ಪದ್ಧತಿಯಾಗಿದ್ದಿತು.

ಮಗ ರಂಗನಾಥನು ಇನ್ನು ಚಿಕ್ಕವಯಸ್ಸಿನಲ್ಲಿರುವಾಗಲೇ ಒಳ್ಳೆಯ ಕುಲಸ್ಥರ ಮನೆಯಿಂದ ಒಂದು ಹೆಣ್ಣುಮಗಳನ್ನು ತಂದು ಮದುವೆಯಾಯಿತು. ಈಗ ಸಂಸಾರವೆಂದರೆ ಇವರು ನಾಲ್ವರಲ್ಲದೆ, ಬೇರೆ ಯಾರೂ ಇರಲಿಲ್ಲ. ನೋಡುವವರಿಗೆಲ್ಲಾ ದೃಷ್ಟಿತಾಕುವ ರೀತಿಯಲ್ಲಿ ಇತ್ತು ಈ ಸಂಸಾರ. ಯಾವುದಕ್ಕೂ ಕುಂದುಕೊರತೆ ಇಲ್ಲದೆ, ಹೀಗೆ ದಿನಗಳು ಕಳೆದಂತೆಲ್ಲಾ ರಂಗರಾಯನ ಅನುಭವವು ಹಣ್ಣಾಗುತ್ತಾ ಬರುತ್ತಿತ್ತು.

ಹೀಗಿರಲು ಒಂದು ದಿನ ರಂಗನಾಥನಿಗೆ ಅವರ ವಂಶದ ಪದ್ಧತಿ ಪ್ರಕಾರ ಒಂದೇ ಗಂಡುಮಗುವಾಯಿತು. ರಂಗ

ರಾಯನ ಆನಂದಕ್ಕೆ ಪಾರವೇ ಇಲ್ಲ. ಈ ನನ್ನ ಮೊಮ್ಮಗನಿಂದ ನನಗೆ ದೈವಸಾನ್ನಿಧ್ಯ ದೊರಕುವುದೆಂದು ಹಿಗ್ಗಿದ. ಅದು ಹುಟ್ಟಿದ ಗಳಿಗೆಯಲ್ಲೇ ಆಗಬಹುದು ಅಥವಾ ಆತನ ಜೀವಮಾನದಲ್ಲಿ ಯಾವುದಾದರೊಂದು ದಿನ ಆಗಬಹುದು. ಆದರೂ ಅದಕ್ಕಾಗಿ ಕಾಯಬೇಕು, ಬೇಡಬೇಕು . . . ಅಂತು ಇಂದಿನಿಂದ ಮುಂದೆ ಯಾವ ದಿನವಾದರೂ ಆಗಬಹುದು. ದಿನ ಪ್ರಾರಂಭವಾಯಿತು ಎಂಬ ಭರವಸೆಯ ಸಂತೋಷದಲ್ಲಿ ಮುಳುಗಿ ಹೋದ. ಮಗುವು ದಿನೇ ದಿನೇ ಬೆಳೆಯುತ್ತಾ ಬರುವುದನ್ನು ಕಂಡ ಆ ಊರಿನವರೆಲ್ಲರೂ ಈ ಮಗು ಸಾಮಾನ್ಯ ಮಗುವಿನಂತೆಯೇ ಕಾಣುವುದಿಲ್ಲ. ಮುಂದೆ ಇದರಿಂದ ಮನೆಗೂ ಮಾತೃಭೂಮಿಗೂ ಏನೋ ಸುಕೃತ ಲಭಿಸಬಹುದು ಎಂದು ಹೇಳುತ್ತಿದ್ದುದನ್ನು ರಂಗರಾಯ ಕೇಳದೆ ಇರುತ್ತಿರಲಿಲ್ಲ. ಆದರೂ ಅವನಿಗೆ ಮಾತ್ರ ಗೊತ್ತು, ಏನನ್ನು ಆ ಮಗುವಿನಿಂದ ನಿರೀಕ್ಷಿಸುತ್ತಿದ್ದೇನೆಂದು. ಆದರೆ ಇದನ್ನು ಯಾರಿಗೂ (Public) ತಿಳಿಸಿರಲಿಲ್ಲ. ತಾನೇ ಅದನ್ನು ಅನುಭವಿಸಿ ಅದು ಸತ್ಯವಾದ ಮೇಲೆ ಜಗತ್ತಿಗೆ ಸಾರಬೇಕೆಂದು ಬಯಸಿದ್ದನು. ಇದು ತನ್ನ ಪ್ರಿಯಪತ್ನಿ, ಮಗ ಮತ್ತು ಸೊಸೆ ಇವರಿಗೆ ಮಾತ್ರ ಗೊತ್ತು.

ಮಗುವು ಹೀಗೆ ಬೆಳೆಯುತ್ತಿರಲು, ಕೆಲವು ವರ್ಷಗಳು ಕಳೆದುವು. ಮಗುವಿಗೆ ಐದು ವರ್ಷ ತುಂಬುವ ವೇಳೆಗೆ ಒಂದು ದಿನ ಕೆಲಸ ಮುಗಿಸಿಕೊಂಡು ಮನೆಗೆ ಬಂದು ವಿಶ್ರಾಂತಿ ತೆಗೆದುಕೊಳ್ಳುತ್ತ ಹಾಗೆಯೇ ಮಲಗಿ ನಿದ್ರೆ ಹೋಗಿದ್ದ ರಂಗರಾಯನಿಗೆ ಒಂದು ಕನಸು ಕಂಡಂತಾಯಿತು. ಹೆದರಿ ನಿದ್ರೆಯಿಂದ ಎದ್ದು, ಎಷ್ಟು ಬೇಗ ಇದನ್ನು ತನ್ನ ಹೆಂಡತಿಗೆ ಹೇಳಲಿ ಎಂದು ತವಕಪಡುತ್ತ ಮಗನು ಮನೆಯಲ್ಲಿ ಇಲ್ಲದ ಒಂದು ಸಂದರ್ಭವನ್ನು ನೋಡುತ್ತಿದ್ದನು. ಮನಸ್ಸಿನಲ್ಲಿ ಬಹಳ ಬೇಸರ, ವ್ಯಸನ, ಏನು ಮಾಡಲೂ ತಿಳಿಯದು. ಈಗಾಗಲೇ ಅನೇಕ ವರ್ಷಗಳಿಂದ ಒಂದು ಬೆಳಕನ್ನು ನೋಡಲು ಸಂತೋಷದಿಂದ ಕಾಯುತ್ತಿದ್ದನೋ ಅದೇ ಬೇಡವೆನಿಸುವ ಒಂದು ಸಂದರ್ಭವನ್ನು ಕನಸಿನಲ್ಲಿ ಕಂಡ. ಆತನ ಮನಸ್ಸು ತಳಮಳಗೊಂಡಿತು. ತನ್ನ ಹೆಂಡತಿಗೆ ಹೇಳಬೇಕೋ ಬೇಡವೋ ಎಂಬ ಒಂದು ಯೋಚನೆ ಬಂತು. ಆದರೆ ತನ್ನ ನಿಜ ಪತ್ನಿಗೆ ತಿಳಿಯದ ವಿಷಯವೇ ಜೀವನದಲ್ಲಿ ಒಂದೂ ಇರಕೂಡದು; ಒಳ್ಳೆಯದಾಗಲಿ ಕೆಟ್ಟದ್ದಾಗಲಿ ಅದು ಅವಳಿಗೆ ತಿಳಿಯಲೇಬೇಕು: ಅದಕೋಸ್ಕರವೇ ಭಗವಂತನು ಅಂತಹ ಒಂದು ಜಾತಿಯನ್ನು ಸೃಷ್ಟಿಸಿ ಮನುಷ್ಯನ ಸುಖಕ್ಕಾಗಿಯೇ ಶಾಂತಿಗಾಗಿಯೇ ಇಟ್ಟಿರುವನು ಎಂದು ನಂಬಿದ್ದನು. ಇಂದಿಗೂ ಹೆಂಡತಿಗೆ ವಿಷಯಗಳನ್ನು ತಿಳಿಸದೆ ಬಚ್ಚಿಟ್ಟು ಅವಳಿಗೆ ದ್ರೋಹಿಯಾಗಬಾರದೆಂದು ನಿರ್ಧರಿಸಿ, ಅವಳಲ್ಲಿಗೆ ಹೋಗಿ ತನ್ನ ಕನಸನ್ನು ಹೇಳಿಕೊಂಡನು. ಈಗ ಆಕೆಯ ಮನಸ್ಸಿನ ಮೇಲೆ ಆದ ಪರಿಣಾಮವನ್ನು ನಾವು ಗಮನಿಸಬೇಕು.

ರತ್ನಮ್ಮನೆಂದು ಆಕೆಯ ಹೆಸರು. ಹೆಸರಿಗೆ ತಕ್ಕಂಥ ಗುಣ. ರಂಗರಾಯನು ರತ್ನ ಎಂದು ಕರೆಯುವ ವಾಡಿಕೆ. ಅದು ಆಕೆಗೆ ಅನ್ವರ್ಥನಾಮವಾಗಿತ್ತು. ಈ ಗುಣವನ್ನು ಕಂಡು ಹೆಸರಿಟ್ಟರೋ, ಹೆಸರನ್ನು ನೋಡಿ ಗುಣ ಬಂದಿತೋ ತಿಳಿಯದು. ಅಂತು ಆಕೆ ಒಂದು ರತ್ನ. ಸದಾ ತನ್ನ ಪತಿ, ತನ್ನ ಯಜಮಾನ, ತನ್ನ ಮಗ, ತನ್ನ ಸೊಸೆ ಈಗ ಜೊತೆಗೆ ತನ್ನ ಮೊಮ್ಮಗ ಇವರುಗಳಿಗೆ ದೇವರಲ್ಲಿ ಒಳ್ಳೆಯದನ್ನು ಕೋರುವುದೇ ಇವಳ ಮೊದಲ ಕರ್ತವ್ಯವಾಗಿತ್ತು. ನಿಜ, ಪ್ರತಿ ಮನೆಯಲ್ಲೂ ಪ್ರತಿಯೊಬ್ಬ ಗೃಹಿಣಿಯೂ ತನ್ನ ಮನೆಯ ಚಿಂತೆಯನ್ನು ರತ್ನಳ ಹಾಗೆ ಮಾಡಿದರೆ, ಪ್ರತಿ ಮನೆಯೂ ರತ್ನಳ ಮನೆಯ ಹಾಗಿದ್ದರೆ, ಪ್ರಪಂಚದಲ್ಲಿ ಆಗಿಂದಾಗ್ಗೆ ಜನ್ಮತಾಳುವ ಮಹಾನುಭಾವರಿಗೆ ಕರ್ತವ್ಯವೇ ಇಲ್ಲವಾಗುತ್ತದೆ. "ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ"– ಆಗ ಮಹಾಪುರುಷರೆನಿಸಿಕೊಳ್ಳುವವರ ಸಂಖ್ಯೆಯೂ ಜಾಸ್ತಿ. ಮನೆ ಮಠಗಳು ಅಧೋಗತಿಗೆ ಹೋಗುತ್ತಿರುವುದೂ ಜಾಸ್ತಿ!

ಅದು ಹಾಗಿರಲಿ. ರಂಗರಾಯನು ಮನಸ್ಸನ್ನು ಸಮಾಧಾನಕ್ಕೆ ತಂದುಕೊಂಡು ಪತ್ನಿಯೊಡನೆ ರಾತ್ರಿ ಕಂಡ ಕನಸನ್ನು ಹೇಳುತ್ತಾನೆ. "ರತ್ನಾ, ನಿನ್ನೆ ರಾತ್ರಿ ಕನಸಿನಲ್ಲಿ ಒಂದು ಕೆಟ್ಟ ದೃಶ್ಯವನ್ನು ಕಂಡೆ. ಅದರಿಂದ ನನ್ನ ಮನಸ್ಸಿಗೆ ಬಹಳ ಬೇಸರವಾಗಿದೆ. ಇದರ ಪರಿಣಾಮ ಏನೋ ನಾನರಿಯೆ. ಅದಕೋಸ್ಕರ ನಾನು ಮರುಗುವುದೂ ಇಲ್ಲ. ಯಾಕೆಂದರೆ ಅದನ್ನು ಸತ್ಯವಲ್ಲ, ಕನಸು ಎಂದುಕೊಂಡರಾಯಿತು ಎಂದು ಸಮಾಧಾನ ಮಾಡಿಕೊಂಡಿರುತ್ತೇನೆ. ಆದರೂ ಮನಸ್ಸು ಮಾತ್ರ ಆ ನಿಮಿಷದಿಂದ ನಡಗುತ್ತಿದೆ. ನಿನ್ನಲ್ಲಿ ಹೇಳಿಕೊಳ್ಳದೆ ಇರಲಾರೆ. ಜಮಿನಿನ ಬಳಿ ನಡೆದ ಒಂದು ಚಮತ್ಕಾರವನ್ನು ನಿನ್ನಲ್ಲಿ ಹೇಳಿ ಜೀವನದಲ್ಲಿ ಬಹು ದೂರವಿರುವ ಬೆಳಕನ್ನು ನೋಡಬೇಕೆಂಬ ಬಯಕೆಯಿಂದ ದಿನಗಳನ್ನು ಬಹಳ ಸಂತೋಷದಿಂದ ಕಳೆಯುತ್ತಿದ್ದ ನಾನು ಈಗ ಕಂಡ ಕನಸಿನಿಂದ ಮರುಗುತ್ತಿದ್ದೇನೆ. ಮೊದಲನೆಯದಾದರೂ ಯಾರೋ

ಅಪರಿಚಿತರು ಪ್ರತ್ಯಕ್ಷವಾಗಿ ಕಂಡು ಹೇಳಿದ ಮಾತು. ಅದು ನಿಜವಾಗಬೇಕಾದರೆ ಅದಕ್ಕೆ ಇನ್ನು ಎಷ್ಟು ವರುಷಗಳು ಕಾಯಬೇಕೊ! ಅಥವಾ ನಮ್ಮ ಆಯುಸ್ಸು ಅಲ್ಲಿಯವರೆಗೆ ಇದೆ ಎಂಬುದಕ್ಕಾದರೂ ಏನು ಭರವಸೆ? ಅದು ಒಂದು ವಿಷಯ. ಇದು ಕನಸು, ಇದನ್ನು ನಿಜ ಅಥವಾ ಸುಳ್ಳು ಎಂಬುದನ್ನು ಕಾದು ನೋಡಬೇಕು. ಇನ್ನೇನೂ ಇಲ್ಲ, ಕನಸು ಇಷ್ಟೆ. ನಿನ್ನ ಮೊಮ್ಮಗನಿಗೆ ತಾಯಿ ತಂದೆಗಳನ್ನು ಉಳಿಸಿಕೊಳ್ಳುವ ಯೋಗವಿಲ್ಲವೆಂದು ಕನಸು ಕಂಡೆ. ಮುಂದೆ ಬರುವ, ನಾವು ನಿರೀಕ್ಷಿಸಿಕೊಂಡಿರುವ ಆ ಶುಭ ದಿನವನ್ನು ನೋಡಲು ತಾಯಿ ತಂದೆಯರಿಗೆ ಯೋಗವಿಲ್ಲದ ಪಕ್ಷಕ್ಕೆ ಅದರ ಸಂತೋಷವನ್ನು ಅನುಭವಿಸಲು ತಕ್ಕವರಾದವರು ಜಗತ್ತಿನಲ್ಲಿ ಬೇರೆ ಯಾರಿದ್ದಾರೆ!" ಎನ್ನುವಷ್ಟರೊಳಗೆ ತಾಯಿಯ ಕರುಳು ಅಲ್ಲೇ ಕಡಿದಂತಾಯಿತು. ಭಗವಂತನ ಸೃಷ್ಟಿಯ ವೈಖರಿಯನ್ನು ಇಲ್ಲಿ ನಾವು ನೋಡುತ್ತೇವೆ, ತಾಯಿ ಮಕ್ಕಳ ಸಂಬಂಧದ ಬೆಲೆಯನ್ನ! ಅದು ಹೇಗೆ ಎಂಬುದನ್ನು ವಿವರಿಸಲು ಮನುಷ್ಯರಿಂದ ಸಾಧ್ಯವಿಲ್ಲ. ಪ್ರಪಂಚದಲ್ಲಿ ಎಷ್ಟು ಜನರು ಎಷ್ಟು ಕಷ್ಟಗಳನ್ನು ಅನುಭವಿಸುತ್ತಿದ್ದಾರೆ. ಆದರೆ ಆ ಕಷ್ಟದ ಆಳತೆಯನ್ನು ಸಂಬಂಧದ ಮೂಲಕ ಅಳೆಯಬೇಕು. ತಾಯಿ ಮಕ್ಕಳ ಸಂಬಂಧ, ಪತಿ ಪತ್ನಿಯರ ಸಂಬಂಧ, ಸ್ನೇಹದ ಸಂಬಂಧ, ಬಾಂಧವ್ಯದ ಸಂಬಂಧ.... ಇವುಗಳಲ್ಲಿ ಹಿರಿಯರು ಹೇಳಿರುವಂತೆ "ಪುತ್ರಶೋಕಂ ನಿರಂತರಂ." ಇದಕ್ಕೆ ಮಿಗಿಲಾದ ಶೋಕ ಬೇರೊಂದಿಲ್ಲ ಪ್ರಪಂಚದಲ್ಲಿ!

ರತ್ನಳನ್ನು ಪುನಃ ಸಮಾಧಾನಕ್ಕೆ ತರುವುದು ರಂಗರಾಯನಿಗೆ ಬಹಳ ಕಷ್ಟವಾಯಿತು. ಆದರೂ ಆತನಿಗೆ ಗೊತ್ತು ಸ್ತ್ರೀ ಸ್ವಭಾವ; ಅದರಲ್ಲೂ ರತ್ನಳ ಸ್ವಭಾವ. ಅದಕ್ಕೆ ತಕ್ಕಂತೆ ಅವಳನ್ನು ಸಮಾಧಾನ ಮಾಡಿ ಕನಸನ್ನು ತಮ್ಮಲ್ಲಿಯೇ ಇಟ್ಟುಕೊಳ್ಳಬೇಕೆಂದೂ, ಇದು ಯಾವ ರೀತಿಯಲ್ಲೂ ತಮ್ಮ ಮಗನಿಗಾಗಲಿ ಸೊಸೆಗಾಗಲಿ ತಿಳಿಯಕೂಡದೆಂದೂ ನಿರ್ಧಾರ ಮಾಡಿಕೊಂಡರು.

೩

ರಂಗರಾಯರ ಪುತ್ರ–ರಂಗನಾಥನ ವಿಚಾರವಾಗಿ ಇಲ್ಲಿ ಹೇಳಲು ಹೆಚ್ಚು ಏನೂ ಇಲ್ಲ. ಆದರೆ ಆತನನ್ನು ಗಮನಿಸಿದವರು ಆತನ ಗುಣಗಳನ್ನೂ ಗಮನಿಸದೇ ಇರಲಿಲ್ಲ. ಚಿಕ್ಕಮಗುವಿನಿಂದಲೂ ಈತನ ಗುಣಗಳನ್ನು ನೇರವಾಗಿ ರಂಗರಾಯನು ನೋಡುತ್ತಿದ್ದನು. ತಂದೆ ಎಂದರೆ ಭಕ್ತಿ ಗೌರವ; ತಾಯಿ ಎಂದರೆ ಪ್ರೀತಿ, ವಿಶ್ವಾಸ. ಇವುಗಳನ್ನು ನೋಡಿದರೆ ನಾಟಕದಲ್ಲಿ ಕಲಿತು ಆಡುವವರೂ ತಪ್ಪಬಹುದೇ ವಿನಾ ರಂಗನಾಥನು ತಪ್ಪುತ್ತಿರಲಿಲ್ಲ. ತನ್ನ ಊರಿನಲ್ಲಿ ಮಕ್ಕಳು ಕೊಡುವ ತೊಂದರೆಗಳನ್ನು ಅನುಭವಿಸುತ್ತಿದ್ದ ತಾಯಿ ತಂದೆಗಳು "ದೇವರು ನಮಗೇಕೆ ರಂಗರಾಯನಿಗೆ ಕೊಟ್ಟಿರುವ ಹಾಗೆ ಮಕ್ಕಳನ್ನು ಕೊಡಲಿಲ್ಲವೆಂದು ನೊಂದುಕೊಳ್ಳುತ್ತಿದ್ದರು. ಅಂಥಾ ವಿಧೇಯನಾದ ಕುಮಾರ. ಒಂದು ದಿನವಾದರೂ ತಾಯಿ ತಂದೆಯರ ಮಾತಿಗೆ ವಿರೋಧವಾಗಿ ಹೋದವನಲ್ಲ. ತಂದೆಗಂತೂ ತನ್ನ ಮಗನಲ್ಲಿ ಸಂಪೂರ್ಣವಾದ ಪ್ರೇಮ; ತಾಯಿ ರತ್ನಳಂತೂ ತನ್ನ ಮಗನನ್ನು ನೋಡಿ ಇದರ ಮುಂದೆ ಸ್ವರ್ಗವೇ ಬೇಡವೆಂಬ ಭಾವನೆಯಲ್ಲಿರುತ್ತಿದ್ದಳು.

ಹೀಗಿರುವಲ್ಲಿ, ರತ್ನಕ್ಕೆ ಮೆರಗು ಕೊಟ್ಟಂತೆ ರಂಗನಾಥನಿಗೆ ದೊರಕಿದ ಕುಟುಂಬವಾದರೊ ಅಂಥಾ ಅಪರೂಪವಾದ ನಿಧಿಯಂತೆ ಇದ್ದಳು. ಅವಳೇ ದಿನಮಣಿ. ಸ್ತ್ರೀಯರಿಗೆ ಸಹಜವಾಗಿ ಇರಬೇಕಾದ ಆಶೆ ಎಂಬುದು ಎಳ್ಳಷ್ಟೂ ಇರಲಿಲ್ಲ. ಪರಿಪೂರ್ಣವಾದ ತೃಪ್ತಿ ಆಕೆಯ ಮುಖದ ಮೇಲೆ ತಾಂಡವವಾಡುತ್ತಾ, ಅದರಿಂದ ಉತ್ಪನ್ನವಾದ ಕಾಂತಿಯನ್ನು ಅವರ ಸಂಸಾರದಲ್ಲಿ ಚೆಲ್ಲುತ್ತಿತ್ತು. ಬೇಕು ಎನ್ನುವವರಿಗೆ ಏನೂ ಇಲ್ಲ; ಬೇಡವೆನ್ನುವವರಿಗೆ ಸರ್ವಸ್ವವನ್ನೂ ಕೊಡುವುದು ಭಗವಂತನ ಒಂದು ಕುಚೋದ್ಯ. ಅಂತು ರಂಗನಾಥನ ಕುಟುಂಬ ಅತ್ತೆ ಮಾವಂದಿರಿಗೂ ಗಂಡನಿಗೂ ಅಚ್ಚುಮೆಚ್ಚಿನ ವ್ಯಕ್ತಿಯಾಗಿ ಮನೆಗೆ ಬೆಳಕಾಗಿದ್ದಳು. ಸೊಸೆಯನ್ನು ಕಾಣದೆ ರತ್ನಳು ಒಂದು ಗಳಿಗೆಯೂ ಇರಲಾರಳು. ಹೀಗೆ ದಿನಗಳು ಕಳೆದುವು.

ರಂಗನಾಥನ ಧ್ಯೇಯ ಕಾಯಕವೇ ಕೈಲಾಸವೆಂಬುದು. ತಂದೆ ತಾಯಂದಿರಿಗೆ ಯಾವರೀತಿ ಕೆಲಸ ಮಾಡಿ ತೃಪ್ತಿಗೊಳಿಸಬೇಕೋ ಆ ರೀತಿಯಲ್ಲಿ ಕೆಲಸವೇ ದೇವರೆಂದು ತಿಳಿದು ಮಾಡುತ್ತಿದ್ದವನು. ದಿನಗಳು ಕಳೆಯುತ್ತಿವೆ; ಖುದ್ದು ನಾರದರಿಂದಲೇ ತಿಳಿದ ಸತ್ಯವಾನನ ವಿಷಯದಲ್ಲಿ ಸಾವಿತ್ರಿಯು ಮರುಗಿ ಮುಂದಿನ ದಿನಗಳಿಗೆ ಸಿದ್ಧಳಾಗುತ್ತಿದ್ದಹಾಗೆ ರಂಗರಾಯನು ಕನಸಿನಲ್ಲಿ ಕಂಡ ರಂಗನಾಥನ ವಿಷಯಕ್ಕೆ ಮರುಗಿ ಕೆಲವು ವೇಳೆ ಕನಸೆಂದು ಧೃಡಮಾಡಿಕೊಂಡರೂ, ಮತ್ತೊಂದು ವೇಳೆ ಏನು ಅನಾಹುತವೋ ಎಂದು ಮರುಗಿ ಜ್ಯೋತಿ ಇಲ್ಲದ ಜೀವದಂತೆ ಬೆಂಡಾಗಿ ಹೋದ. ರತ್ನಳಿಗೆ ರಂಗರಾಯನು ಸಮಾಧಾನ ಹೇಳಲು ಧೈರ್ಯವನ್ನೇ ಮತ್ತೆ ಮಾಡಲಿಲ್ಲ. ಇಬ್ಬರೂ ಕೂಡಿ ತಮ್ಮ ಏಕಮಾತ್ರ

ಪುತ್ರ ಮತ್ತು ಸೊಸೆಗೆ ಆಯುಸ್ಸನ್ನು ಭಗವಂತನಲ್ಲಿ ಕೋರುವುದರಲ್ಲಿಯೇ ಕಾಲವನ್ನು ಕಳೆಯಲು ಪ್ರಾರಂಭಿಸಿದರು.

ತಂದೆ ತಾಯಂದಿರ ದಿನಚರಿಯಲ್ಲಿ ಬದಲಾವಣೆಯನ್ನು ಮಗ ಸೊಸೆಯರಿಬ್ಬರೂ ಕಾಣದೆ ಇರಲಿಲ್ಲ. ಕೇಳಲು ಧೈರ್ಯವಿಲ್ಲದೆ ಪ್ರತಿಯೊಂದು ಕ್ಷಣದಲ್ಲಿಯೂ ಅವರನ್ನು ತೃಪ್ತಿಪಡಿಸಲು ಮಾಡುತ್ತಿದ್ದ ಪ್ರಯತ್ನಗಳು ಇವರಿಗೆ ಹುಣ್ಣಿನ ಮೇಲೆ ಉರಿ ತಾಗಿದಂತೆ, ಎದೆ ಬಡಿದು ಹೋಗುತ್ತಿತ್ತು.

ರಂಗನಾಥನ ಮಗ ಶ್ರೀರಂಗನು ಪೂರ್ಣಚಂದ್ರನಂತೆ ಬಳೆಯುತ್ತಿದ್ದಾನೆ. ಐದನೆಯ ವರ್ಷದ ಹುಟ್ಟು ಹಬ್ಬವನ್ನು ಮನಃಪೂರ್ತಿಯಾಗಿ ಮಾಡಿದರು. ಪಾಪ! ಭಗವಂತನು ಈ ಐದು ವರ್ಷಗಳ ಮಗನ ಆಟಪಾಟಗಳನ್ನು ನೋಡುವಷ್ಟು ಪುಣ್ಯವನ್ನು ಮಾತ್ರ ತಾಯಿಗೆ ಕೊಟ್ಟಿದ್ದನೋ ಏನೋ ಅನ್ನುವಹಾಗೆ ಒಂದು ದಿನ ಕಾರಣವಿಲ್ಲದೆ ಕಾಲು ಜಾರಿ ಬಿದ್ದು, ಅದೇ ನೆಪವಾಗಿ ಕೆಲವೇ ದಿನಗಳಲ್ಲಿ ತನ್ನ ಮುದ್ದು ಮಗು, ನೆಚ್ಚಿನ ಗಂಡ, ಅತ್ತೆ ಮಾವಂದಿರನ್ನು ಬಿಟ್ಟು ಪರಲೋಕಕ್ಕೆ ಹೋಗಿಯೇ ಬಿಟ್ಟಳು ದಿನಮಣಿ!

ರಂಗರಾಯನಿಗೆ ಈಗ ಕನಸು ದಿಟವೆನಿಸಿತು. ತನ್ನ ನೆಚ್ಚಿನ ಸೊಸೆಯು ತನ್ನ ಮನೆಯ ಜ್ಯೋತಿ ಎಂದು ತಿಳಿದಿದ್ದ. ಭಗವಂತನ ರೀತಿ ನೀತಿಗಳು ಅವನಿಗೆ ಅರ್ಥವಾಗಲಿಲ್ಲ. ತಾನು ಮಾಡಿದ ಯಾವ ಪಾಪಕ್ಕಾಗಿ ಈ ಪ್ರಾಯಶ್ಚಿತ್ತವನ್ನು ದೇವರು ಕೊಟ್ಟನೆಂದು ಅರಿವಾಗಲಿಲ್ಲ. ಇನ್ನು ತನ್ನ ಮನೆಯ ಜ್ಯೋತಿ ನಂದಿಹೋಯಿತು. ಇದು ಕನಸಲ್ಲ. ಒಂದಲ್ಲ ಒಂದು ದಿನ ಇನ್ನೊಂದು ಭಾಗದ ಕನಸು ನಡೆದೇ ಹೋಗುತ್ತದೆ ಎಂಬುದೂ ಸಿದ್ಧಾಂತವಾಯಿತು. ಇದು ಕನಸಲ್ಲ, ಭಗವಂತನು ತನಗೆ ತಿಳಿಯ ಹೇಳಿರುತ್ತಾನೆ – ಇನ್ನು ಮುಂದೆ ಮೊಮ್ಮಗನ ಕಾಲಕ್ಕೆ ತನ್ನ ಕರ್ತವ್ಯವೇನು ಎಂದು ಸಿದ್ಧಪಡಿಸಿಕೊಳ್ಳುವುದಕ್ಕೆ ಎಂದು ಅರಿತ. ತನ್ನ ಜೀವನದಲ್ಲಿ ಈತನಿಗೆ ಸುಮಾರು ೫೦ ವರ್ಷಗಳು ಸಂತೋಷದಿಂದ ಕಳೆದಿರಬಹುದು. ಒಂದು ಕಷ್ಟ ಕಂಡವನಲ್ಲ; ಇನ್ನು ಪ್ರಾರಂಭವಾಯಿತು ರಂಗರಾಯನ ಚಿಂತೆ, ಯೋಚನೆಗಳು ಜೀವನದಲ್ಲಿ! ಇತ್ತ ರಂಗನಾಥನ ವಿಷಯ ಮತ್ತು ರತ್ನಳ ಗತಿ ಹೇಳಬೇಕಾಗಿಯೇ ಇಲ್ಲ. ರತ್ನಳು ಇನ್ನು ಬದುಕಲು ಇಷ್ಟಪಡಲಿಲ್ಲ. ಸಂಸಾರದಲ್ಲಿ ಸುಖಪಡುವ ವಯಸ್ಸಿನಲ್ಲಿ ತನ್ನ ಗಂಡ ಮತ್ತು ಮುದ್ದು ಮಗುವನ್ನು ಬಿಟ್ಟುಹೋದ ಸೊಸೆಯನ್ನು ನೆನೆದುಕೊಂಡರೆ ಇನ್ನೂ ತಾನು ಇಲ್ಲಿಯೇ ಇರುವೆನಲ್ಲಾ, ಸೊಸೆಯನ್ನು ನೋಡುವುದು ಯಾವಾಗ ಎಂದು ಹಂಬಲಿಸುವಳು. ಇನ್ನೊಂದು ಕಡೆ ತಾನೂ ಸೊಸೆಯ ದಾರಿಯನ್ನು ಹಿಡಿದರೆ ತನ್ನ ಪತಿ, ಮಗ, ಇವರುಗಳ ಗತಿಯನ್ನು ಯೋಚಿಸುವಳು. ಮನೆಯಲ್ಲಿ ಮತ್ತೆ ಬೇರೆ ಸ್ತ್ರೀಯರೇ ಇಲ್ಲ. ತಾನೂ ಹೋದರೆ ಇವರ ಊಟ ಉಪಚಾರಗಳನ್ನು ನೋಡುವವರು ಯಾರು! ಏನು ಮಾಡಲೂ ದಿಕ್ಕು ತೋರದು. ಈ ಗೊಂದಲದಲ್ಲಿ ಕೆಲವು ದಿನಗಳು ಕಳೆದುವು. ಕೊನೆಗೆ ಉಳಿದುದು ಒಂದೇ ಮಾರ್ಗ, ಮಗನಿಗೆ ಮತ್ತೆ ಲಗ್ನ ಮಾಡುವುದು. ಇದನ್ನು ಮಾಡುವವರು ಯಾರು–ಆಗುವವರು ಯಾರು. ಯಾರು ಪ್ರಯತ್ನ ಪಟ್ಟರೂ ಅದು ಆಗದ ಕೆಲಸವಾಗಿ ಹೋಯಿತು. ರಂಗನಾಥನು ಜಡಭರತ. ಯಾವುದನ್ನೂ ಮನಸ್ಸಿಗೆ ತೆಗೆದುಕೊಳ್ಳದೆ ದಿನನಿತ್ಯದ ಕೆಲಸಗಳನ್ನು ಯಂತ್ರದಂತೆ ಮಾಡಿಕೊಂಡು ತಾನೂ ಶಾಶ್ವತ ವಿಶ್ರಾಂತಿ ತೆಗೆದುಕೊಳ್ಳಲು ಸಮಯ ನೋಡುತ್ತಿದ್ದ. ಈ ತೊಂದರೆಗಳ ಮಧ್ಯೆ ಮೊಮ್ಮಗ ಶ್ರೀರಂಗನ ಭಾರವೆಲ್ಲಾ ರಂಗರಾಯನ ಮೇಲೆ ಬಿತ್ತು. ತನಗೆ ತಾಯಿಯಿಲ್ಲವೆಂಬುದೇ ಗೋಚರವಾಗದ ಹಾಗೆ ತಾತ ಅಜ್ಜಿಯರು ಸಲಹುತ್ತಾ ಬಂದರು. ಮುಂದೆ ಐದು ವರ್ಷಗಳಲ್ಲಿ ರಂಗನಾಥನೂ ಪತ್ನಿಯನ್ನು ಹಿಂಬಾಲಿಸಿದ. ಅಲ್ಲಿಗೆ ರಂಗರಾಯನ ಕನಸು ಪೂರ್ಣವಾಯಿತು!

ಪ್ರತಿ ರಾತ್ರಿಯೂ ಕನಸುಗಳ ತೊಂದರೆ ನಮಗೆ ಅಷ್ಟಿಷ್ಟಲ್ಲ. ನನ್ನ ಕನಸು, ನಿಮ್ಮ ಕನಸು, ಇತರರ ಕನಸು, ಇವುಗಳನ್ನು ನಾವು ದಿನಪ್ರತಿಯೂ ಕೇಳುತ್ತಲೇ ಇರುತ್ತೇವೆ. ಅವುಗಳೆಲ್ಲಾ ಸತ್ಯದ ಸಂಗತಿ! ಇದು ಕನಸಲ್ಲ, ಬಹುಶಃ ಏನೋ ದೇವವಾಣಿಯಿರಬಹುದು. ಈಗಿನ ಕಾಲದಲ್ಲಿ ಅದನ್ನೆಲ್ಲಾ ನಂಬತಕ್ಕುದಲ್ಲವಾದರೂ, ಈಗ ಕಣ್ಣೆದುರಿಗೇ ನಡೆದಿದೆ. ಇದನ್ನು ಏನೆಂದಾದರೂ ಹೇಳಬಹುದು!

ಆದರೆ ಪ್ರಪಂಚದಲ್ಲಿ ನಡೆಯುತ್ತಿರುವುದೆಲ್ಲ ದೇವರಿಂದ ಮೊದಲು ತಿಳಿಯಹೇಳಿ ಆಗುವುದಿಲ್ಲ. ಹಾಗೆ ಆಗಿದ್ದರೆ ಹೇಗಿರುತ್ತಿತ್ತೋ ಜೀವನ.

ಶ್ರೀರಂಗನಿಗಂತೂ, ತನ್ನ ಜೀವನದಲ್ಲಿ ಈಗ ಆಗಿರುವ ಬದಲಾವಣೆಯ ಅರಿವೇ ಇಲ್ಲ. ತಾನು ತಾಯಿ ತಂದೆಯಿಲ್ಲದ ಕೂಸು ಎಂಬರಿವಿಲ್ಲ. ತಾಯಿ ತಂದೆಯರನ್ನು ಕಾಣದ ಶ್ರೀರಂಗನು ಮುಂದೆ ತನ್ನ ಪ್ರೀತಿಯನ್ನು ತಾತ

ಅಜ್ಜಿಯರಲ್ಲಿ ನೂರ್ಮಡಿಯಾಗಿ ಮಾಡಿ, ಅವರು ಸದಾ ಇವನ ಚಿಂತೆಯಲ್ಲಿ ಕಾಲ ನೀಗುವ ಹಾಗೆ ಮಾಡಿದ.

ಪ್ರಪಂಚದಲ್ಲಿ ದಿನಂಪ್ರತಿ ಹುಟ್ಟುವವರು ಎಷ್ಟು ಮಂದಿ, ಸಾಯುವವರು ಎಷ್ಟು ಮಂದಿ? ಹುಟ್ಟಿದ ಮೇಲೆ ಸಾಯಲೇಬೇಕು. ಆದರೆ ಹಿಂದು ಮುಂದಾಗುವ ವ್ಯತ್ಯಾಸ ದಿಂದ ನೋವು ಹೆಚ್ಚು ಕಡಿಮೆ ಅಷ್ಟೆ. ಅಲ್ಲದೆ ಯಾವುದೂ ನಿಲ್ಲುವುದಿಲ್ಲ. "Men may come and men may go ; but life goes on for ever." ಇದೀಗ ಪ್ರಪಂಚದ ನಡೆವಳಿಕೆ.

ಐವರಿದ್ದ ಸಂಸಾರದಲ್ಲಿ ಮುಂದೆ ಮೂವರ ಜೀವನ ಪ್ರಾರಂಭವಾಯಿತು. ಇದು ಒಂದು ಸಂಸಾರ – ತಾತ, ಅಜ್ಜಿ, ಮೊಮ್ಮಗ. ಈಗ ಮೊಮ್ಮಗ ಎಂಬ ತಳಹದಿಯ ಮೇಲೆ ಕಟ್ಟಬೇಕಾಗಿದೆ ರಂಗರಾಯನ ಅರಮನೆಯನ್ನ. ಇದು ಯಾವ ರೀತಿಯ ಕಟ್ಟಡವಾಗುತ್ತದೆಯೋ ನೋಡ ಬೇಕು. ತಮ್ಮ ಸಂಸಾರಕ್ಕೆ ಸಾಕಾಗುವಷ್ಟು ಸಾಗುವಳಿ ಯನ್ನು ಮಾಡಿಸಿಕೊಂಡು ಹೆಚ್ಚಿನದಕ್ಕೆ ಆಸೆಪಡದೆ ಶ್ರೀರಂಗನ ಭವಿಷ್ಯವನ್ನು ರೂಪು ಮಾಡುವುದರಲ್ಲಿ ಯಾವಾಗಲೂ ಭಗವಂತನನ್ನು ಬೇಡುತ್ತಾ, ಆತನನ್ನು ಒಬ್ಬ ನೆಚ್ಚಿನ ಭಕ್ತನನ್ನಾಗಿ ಮಾಡಿಕೊಂಡು ತಮ್ಮ ಮಾರ್ಗವನ್ನು ಸುಲಭ ಮಾಡುವಂತೆ ರಂಗರಾಯ ಸದಾ ದೇವರಲ್ಲಿ ಬೇಡುತ್ತಿದ್ದ.

ಹೀಗೆ ಕೆಲವು ಕಾಲ ಕಳೆಯಿತು. ಶಾಲೆಯಲ್ಲಿ ಶ್ರೀರಂಗನು ಉಪಾಧ್ಯಾಯರ ಮೆಚ್ಚಿನ ಬಾಲಕನಾಗಿದ್ದನು. ಈತನ ಗುಣಗಳನ್ನೂ ಲಕ್ಷಣಗಳನ್ನೂ ಕಂಡ ಉಪಾ ಧ್ಯಾಯರು ಮುಂದೆ ಈತನು ಏನಾಗುತ್ತಾನೋ ಎಂದು ತಮ್ಮ ತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಸಹಪಾಠಿ ಗಳಿಗಾದರೋ ಎಲ್ಲರಿಗೂ ಬೇಕು ಶ್ರೀರಂಗ. ಇವನಿಲ್ಲದ ಸ್ಥಳವಿಲ್ಲ. ಇವನಿಗೆ ಬೇಡದ ಜನರಿಲ್ಲ. ಹೀಗೆ ಕಳೆದುವು ದಿನಗಳು.

೪

ಹೀಗಿರುವಲ್ಲಿ ಒಂದು ದಿನ ಪದ್ಧತಿ ಪ್ರಕಾರ ರಂಗ ರಾಯ ತನ್ನ ಜಮೀನಿನಲ್ಲಿ ಕೆಲಸ ಮಾಡಿ ಊಟ ಮುಗಿಸಿಕೊಂಡು ಮಧ್ಯಾಹ್ನ ಸ್ವಲ್ಪಹೊತ್ತು ವಿಶ್ರಾಂತಿ ತೆಗೆದುಕೊಳ್ಳುತ್ತಿರುವಾಗ ಈಗಾಗಲೇ ಅನೇಕ ವರ್ಷಗಳ ಹಿಂದೆ ಕಂಡ ಅದೇ ಅಪರಿಚಿತನು ಅವನನ್ನು ಸಂಧಿಸಿ– "ನಾನು ಯಾರೆಂದು ತಿಳಿದಿರಬಹುದು. ನೀನೀಗ ಪುಣ್ಯ ವಂತ. ನೀನು ಈ ಜನ್ಮದಲ್ಲಿ ನಿನ್ನ ಮೊಮ್ಮಗನಿಂದ ಸಕಾಲದಲ್ಲಿ ಒಂದು ದಿವ್ಯ ಜೋತಿಯನ್ನು ನೋಡುವುದ ರಲ್ಲಿರುವಿಯಲ್ಲವೇ? ಇದರಲ್ಲಿ ನಿನಗೆ ನಂಬಿಕೆ ಇರುವು ದಲ್ಲವೇ? ಅಲ್ಲದೆ ನನ್ನನ್ನು ನೀನು ಯಾರು ಎಂದು ಪತ್ತೆ ಮಾಡಬೇಡ. ಈಗ ನಾನು ಬಂದಿರುವ ವಿಷಯವನ್ನು ತಿಳಿಸುವೆನು ಕೇಳು. ಪ್ರಪಂಚದಲ್ಲಿ ಯಾರೂ ಹೀಗೆ ಬಂದು ಮುಂದೆ ನಡೆಯುವ ವಿಷಯವನ್ನು ತಿಳಿಸುವುದೂ ಇಲ್ಲ. ಹಾಗೆ ನಡೆಯುವುದೂ ಇಲ್ಲ. ಆದರೆ ನಿನ್ನ ಈ ಒಂದು ಸಂದರ್ಭದಲ್ಲಿ ಇದು ಆಗಬೇಕಾಗಿದೆ. ಉತ್ತಮ ರಿಗೆ, ಸತ್ಯವಂತರಿಗೆ, ನಿಷ್ಠಾವಂತರಿಗೆ, ಗುರುಭಕ್ತರಿಗೆ –ಒಟ್ಟಿನಲ್ಲಿ ದೈವಕೃಪೆಯನ್ನು ಪಡೆದವರಿಗೆ ಹೀಗೆ ಮುಂದಿನ ಮಾರ್ಗದ ನೆರಳು ಕಾಣುವುದನ್ನು ಅನೇಕ ಸಂದರ್ಭ ಗಳಲ್ಲಿ ನಾವು ನೋಡಿದ್ದೇವೆ. ಅವುಗಳನ್ನೆಲ್ಲಾ ಈಗ ಹೇಳಿ ಅದರಿಂದ ನಿನಗೆ ನಂಬಿಕೆಯನ್ನು ಹುಟ್ಟಿಸಲು ಇಲ್ಲಿಗೆ ನಾನು ಬಂದಿಲ್ಲ. ಆದರೆ ಇದಕ್ಕೆಲ್ಲಾ ನೀನು ಅರ್ಹನು. ನೀನು ಕನಸು ಎಂದು ಹೇಳಿಕೊಂಡ ವಿಚಾರವೂ ಕೂಡ ನನಗೆ ತಿಳಿದ ವಿಚಾರವಾಗಿತ್ತು. ಅದನ್ನು ನೀನು ಬೇರೆ ರೀತಿಯಲ್ಲಿ ತಿಳಿದೆ. ಈಗ ನಾನು ಹೇಳುವುದೆಂದರೆ ನಿನ್ನ ಮೊಮ್ಮಗನು ದೇವಾಂಶ ಪುರುಷನು. ಯಾವುದೋ ಒಂದು ತಪ್ಪಿಗಾಗಿ ಶಾಪಗ್ರಸ್ತನಾಗಿ ಜನ್ಮ ತಾಳಿದ್ದಾನೆ. ಶಾಪ ವಿಮೋಚನೆಯಾಗಬೇಕು ನೀನು ಆತನಿಂದ ನೋಡ ಬೇಕಾದ ಜ್ಯೋತಿಯನ್ನು ನೋಡಲು!"

ರಂಗರಾಯನಿಗೆ ಪ್ರಾಣವೇ ಹೋದ ಹಾಗೆ ಆಯಿತು. ಈ ಅಪರಿಚಿತನು ಹೇಳುವುದೊಂದೂ ಅರ್ಥವಾಗಲಿಲ್ಲ. ಆತನನ್ನು ಯಾರೆಂದು ಕೇಳಲು ಶಕ್ತನಲ್ಲ. ತಕ್ಷಣ ಭಗ ವಂತನಲ್ಲಿ ಮೊರೆಯಿಟ್ಟ. ದೇವರೇ ನೀನಿರುವುದು ಸತ್ಯ ವಾದರೆ ಈ ಜನ್ಮದಲ್ಲಿ ಮುಂದೆ ಆಗುವ ಸಂದರ್ಭಗಳನ್ನು ತಿಳಿಸಿ ಮಾಡಬೇಡ. ಅದು ಬಹಳ ನೋವಿನ ಜೀವನ ವಾಗುವುದು. ತಿಳಿಯದೇ ಒಂದೇ ಗುರಿಯಿಂದ ಜೀವನ ದಲ್ಲಿ ದಿನಗಳನ್ನು ಕಳೆಯುವುದರಲ್ಲಿ ಇರುವ ಸುಖ ತಿಳಿದು ನಡೆಯುವುದರಲ್ಲಿ ಇರಲಾರದು. ಪರಮಾತ್ಮ, ಒಳ್ಳೆಯ ದಾದರೂ ಸರಿ, ಕೆಟ್ಟದ್ದಾದರೂ ಸರಿ, ತಿಳಿಸಬೇಡ ಗುರುವೇ ಎಂದು ಭಕ್ತಿಯಿಂದ ಮೊರೆಯಿಟ್ಟ. ಆದರೆ ದೇವರು ನಾವು ಹೇಳಿದ ಹಾಗೆ ಕೇಳುವ ವ್ಯಕ್ತಿಯಲ್ಲ, ಅದೊಂದು ಶಕ್ತಿ. ಅದು ನಡೆಯಬೇಕಾದ ಹಾಗೆ ನಡೆದೇ ಬಿಡುತ್ತದೆ.

ಇತ್ತ ಈ ಅಪರಿಚಿತನು ತನ್ನ ಮಾತನ್ನು ಮುಂದು ವರಿಸಿದ. "ನೀನು ನಿನ್ನ ಮೊಮ್ಮಗನ ಮೂಲಕ ಜ್ಯೋತಿ ಯನ್ನು ನೋಡುವಿಯಲ್ಲ ಆ ವೇಳೆಗೆ ಮತ್ತೆ ನಾನು ನಿನ್ನನ್ನು ನೋಡುವೆನು. ಅದುವರೆಗೂ ನೀನು ನಿನ್ನ

ಮೊಮ್ಮಗನನ್ನು ಭಗವಂತನೇ ನಿನ್ನ ಮೊಮ್ಮಗನ ರೂಪದಲ್ಲಿ ಬಂದಿರುವನೆಂದು ತಿಳಿದು, ಆತನನ್ನು ಚೆನ್ನಾಗಿ ಆದರ ಪ್ರೀತಿಯಿಂದ ಸಾಕು. ತಾಯಿಯಿಲ್ಲದ ಮಗು. ಒಂದು ಮಾತನ್ನು ನೆನಪಿನಲ್ಲಿಡು, ನಿನ್ನ ಮೊಮ್ಮಗನ ಶಾಪವೇನೆಂಬುದನ್ನು ಅರಿತು ಅವನನ್ನು ಸದಾ ದೇವರ ಧ್ಯಾನದಲ್ಲಿ ಮಗ್ನನಾಗಿರುವಂತೆ ಮಾಡುವುದು ನಿನ್ನ ಕರ್ತವ್ಯ."



ಲೇಖಕಿಯರು

"ಈತನು ಹಿಂದಿನ ಜನ್ಮದಲ್ಲಿ ಉತ್ತರದೇಶದಲ್ಲಿ ಪರ್ವತ ಸಮಾದ್ರಿಯ ಪ್ರದೇಶದಲ್ಲಿ ಬ್ರಾಹ್ಮಣ ವರ್ಣದಲ್ಲಿ ಜನ್ಮವೆತ್ತಿದ್ದನು. ಬಾಲ್ಯದಲ್ಲಿ ವಿನಯ ವಿವೇಕಾದಿಯುತನಾಗಿದ್ದು, ಕ್ರಮಗತ ವಿದ್ಯಾವ್ಯಾಸಂಗಿಯಾಗಿ ರಾಜಾಲಯದಲ್ಲಿ ಕೋಶ ಮತ್ತು ಗುಪ್ತದೇಶೀಯ ವಿಷಯ ಗ್ರಾಹೀ ಅಧಿಕಾರಿಯಾದನು. ಜನೋಪಯೋಗಕರವಾದ ಸತ್ಕಾರ್ಯಗಳನ್ನು ನಡೆಯಿಸಿದನು. ಸದಾ ಪರೋಪಕಾರಿಯಾಗಿದ್ದು, ರಾಜಾಲಯದಿಂದ ವಿತ್ತಾಪಹಾರಿಯಾಗಿ ದೈವಿಕವಾದ ಸತ್ಯ ಮಾರ್ಗಗಳಿಗೆ ಆ ಧನವನ್ನು ಉಪಯೋಗಿಸಿದನು. ಆದರೆ ರಾಜಮಿತ್ರನೆಂಬ ಗರ್ವದಿಂದ ವರ್ಣಾಶ್ರಮ ಧರ್ಮವಿರೋಧವಾದ ಸುರಾ, ಸ್ತ್ರೀ ವ್ಯಸನಾದಿಯುತನಾಗಿದ್ದನು. ರಾಜಸ್ತ್ರೀ ವರ್ಗ ಭೋಗಾದಿಯುತನೂ ಆದನು. ಅತಿವಿಳಂಬ ವಿವಾಹಿತನಾಗಿ ಯೋಗ್ಯರೀತಿಯಿಂದ ದಾಂಪತ್ಯ ಜೀವನವನ್ನು ನಡೆಯಿಸಿ ಪ್ರತಿಭಾಶಾಲಿಗಳಾದ ಮಕ್ಕಳನ್ನು ಪಡೆದನು. ಅತಿ ದೈವ ಭಕ್ತಯುತನಾಗಿದ್ದು, ಯಾತ್ರಾಸಿದ್ಧಿ ಸುನದೀ ಸ್ನಾನ ಇತ್ಯಾದಿಗಳನ್ನು ನಡೆಯಿಸಿದನು. ವೃದ್ಧಾಪ್ಯದಲ್ಲಿ ಸದ್ಗುರು ಆಶ್ರಯಾದಿಗಳನ್ನು ಹೊಂದಿದನು. ಬಹುಕಾಲ ಬಾಳಿ ಗತಾಸುವಾದನು.

"ಈ ಭವದಲ್ಲಿ ಕ್ಷೇಯ ವರ್ಣದಲ್ಲಿ ಸದ್ವಂಶದಲ್ಲಿ ಜನ್ಮವೆತ್ತಿದ್ದಾನೆ. ಗತಭವದಲ್ಲಿ ನಡೆಯಿಸಿದ ಅಮಿತಪುಣ್ಯ ಕ್ರಿಯಾ ಪ್ರಭಾವಗಳಿಂದ ಈ ಭವದಲ್ಲಿ ಉತ್ತಮ ಉದ್ಯೋಗಪದವ್ಯಾದಿಯುತನೂ, ಭಾಗ್ಯಶಾಲಿಯೂ ಸುಖಿಯೂ ಆಗುವನು. ಗತಭವದ ಪತ್ನಿಯೇ ಈ ಭವದಲ್ಲಿಯೂ ಪತ್ನಿಯಾಗುವಳು. ಆದರೆ, ಆತನು ಹಿಂದೆ ತನ್ನ ಧರ್ಮಪತ್ನಿಯ ಮನಸ್ಸನ್ನು ನೋಯಿಸಿದ ಪ್ರಯುಕ್ತ ಅದನ್ನು ಕಂಡ ಸ್ತ್ರೀಶಕ್ತಿಯಾದ ಪರಮೇಶ್ವರನ ಅರ್ಧಾಂಗಿ ಪಾರ್ವತಿ ಹೀಗೆ ಶಾಪಕೊಟ್ಟಳು—"ನೀನು ಹೇಗೆ ಸ್ತ್ರೀಹೃದಯವನ್ನು ನೋಯಿಸಿರುವೆಯೋ ಹಾಗೆಯೇ ನಿನ್ನ ಮನಸ್ಸು ನೋಯಲಿ" ಎಂದು. ಅದನ್ನು ತಿಳಿದ ಆತನ ಪತ್ನಿ ಪಾರ್ವತಿಯಲ್ಲಿ ಮೊರೆಯಿಟ್ಟಳು. ಪಾರ್ವತಿ ಶಾಪ ಪರಿಹಾರವಾಗಲು ಸಾಧ್ಯವಿಲ್ಲವೆಂದು ತಿಳಿಸಿ "ನಿನ್ನಂಥ ಸತ್ಯವಂತಳ ಕೈ ಹಿಡಿದ ಆತನು ಈ ಪ್ರಾಯಶ್ಚಿತ್ತದ ನಂತರ ಗುರುಕೃಪೆಗೆ ಪಾತ್ರನಾಗಿ ನಿನ್ನನ್ನು ಧರ್ಮದೇವತೆಯಂತೆ ಭಾವಿಸಿ, ಈ ಲೋಕದಲ್ಲಿಯೇ ದೇವರ ಅಂಶವನ್ನು ತೋರಿಸಿ, ತಾನೂ ತನ್ನ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳುತ್ತಾನೆ."

ತಾತನ ಕಥೆ ಕೇಳುತ್ತಿದ್ದ ಶ್ರೀದೇವಿಗೆ ಜ್ಞಾನೋದಯವಾಗಿತ್ತು. ಪ್ರಾಯಶ್ಚಿತ್ತದ ಪರಿಚಯವೂ ಲಭಿಸಿತ್ತು. ತಾತನ ಕಥೆಯೂ ಮುಗಿದಿತ್ತು.

# ಗ್ರಂಥಾವಲೋಕನ

**ಹೊಳಪು–ಝುಳಪು** ಕವನಸಂಕಲನ: ಪ್ರಕಾಶಕರು: ಕರ್ನಾಟಕ ಸಂಘ, ಗೌರ್ನ್ಮೆಂಟ್ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜು, ಬೆಂಗಳೂರು ೧; ಸೈಜು: ಕ್ರೌನ್ ೧/೮; ಪುಟಗಳು: ೪೬; ಬೆಲೆ: ರೂ. ೧.

ನಮ್ಮ ನಾಡು ಚೀನೀ ದುರಾಕ್ರಮಣಕ್ಕೆ ತುತ್ತಾದಾಗಿನಿಂದ ನಾಡಿನ ಜನ ತಮ್ಮ ಭಿನ್ನತೆ, ಭೇದಗಳನ್ನು ಮರೆತು, ನಾನಾ ರೀತಿಯಾಗಿ ಸಮರಸಿದ್ಧತೆ ಸಹಾಯ ಮಾಡತೊಡಗಿದ್ದಾರೆ. ದೇಶದ ನಾನಾ ಭಾಗಗಳಲ್ಲಿ ಕವಿಗಳೂ ಕೂಡ ತಮ್ಮ ತಮ್ಮ ಭಾಷೆಗಳಲ್ಲಿ ಕವಿತೆಗಳನ್ನೂ ವೀರಗೀತೆಗಳನ್ನೂ ರಚಿಸಿ ಜನಜಾಗೃತಿಯನ್ನುಂಟು ಮಾಡಿದ್ದಾರೆ. ಮೇಲ್ಕಂಡ ಕರ್ನಾಟಕ ಸಂಘದ ಆಶ್ರಯದಲ್ಲಿ, ಹಿರಿಯ ಕವಿ ಡಾ|| ಮಾಸ್ತಿಯವರ ಅಧ್ಯಕ್ಷತೆಯಲ್ಲಿ ನಾಡಿನ ಹಲವಾರು ಸುಪ್ರಸಿದ್ಧ ಕವಿಗಳು ರಚಿಸಿದ ಮತ್ತು ವಾಚಿಸಿದ ಕವಿತೆಗಳ ಸಂಕಲನವೇ ಪ್ರಸ್ತುತ ಕೃತಿ. ಈ ಕವಿ ಸಮ್ಮೇಳನದ ಸಂಕ್ಷಿಪ್ತ 'ಬಾನುಲಿ ವರದಿ' ಕೂಡ ಈಗಾಗಲೇ ಆಕಾಶವಾಣಿಯಿಂದ ಪ್ರಸಾರವಾಗಿದೆ.

ಈ ಸಂಕಲನದಲ್ಲಿ ೨೨ ಕವಿತೆಗಳಿವೆ, ಸರ್ವಶ್ರೀ ವಿ.ಸೀ., ಪು.ತಿ.ನ., ಕೆ. ಎಸ್. ನರಸಿಂಹಸ್ವಾಮಿ, ಜಿ. ಪಿ. ರಾಜರತ್ನಂ, ಎಮ್. ವೀ. ಸೀತಾರಾಮಯ್ಯ, ಎಲ್. ಗುಂಡಪ್ಪ, ಕೆ. ಗೋಪಾಲಕೃಷ್ಣರಾಯ, ಕ. ವೆಂ. ರಾಜಗೋಪಾಲ್ ಇತ್ಯಾದಿ ಅನೇಕ ಪ್ರಸಿದ್ಧ ಕವಿಗಳು ರಚಿಸಿದ, ವಾಚನ ಮಾಡಿದ ಕವಿತೆಗಳು ಇವೆ.

ಆದರೂ ಎಲ್ಲಾ ಕವಿತೆಗಳೂ ತಮ್ಮ ಗುರಿಯನ್ನು ಸಾಧಿಸಿವೆಯೇ? ಅವೆಲ್ಲವೂ ಜನಜಾಗೃತಿಯನ್ನುಂಟು ಮಾಡುವಷ್ಟು ಪೌರುಷ ಹೊಂದಿವೆಯೇ? ಅದನ್ನು ನಾವು ಧೈರ್ಯವಾಗಿ ಹೇಳುವಂತಿಲ್ಲ. ಒಂದು ಕವಿತೆ ಸಂಸ್ಕೃತದಲ್ಲಿ ರಚಿಸಲ್ಪಟ್ಟು ಅದರ ಕನ್ನಡ ಅನುವಾದವನ್ನು ಕೊಡಲಾಗಿದೆ. ಮತ್ತೆ ಕೆಲವು ಭಾಷಾಂತರಗಳು. ಕೆಲವು ಏಳಿ, ಎದ್ದೇಳಿ ಜಾತಿಗೆ ಸೇರಿದ ಕವಿತೆಗಳು. ಕೆಲವು ಕವಿತೆಗಳು ಇನ್ನೂ ಹಿಂದಿ ಚೀನೀಯರ ಭ್ರಾತೃವಾತ್ಸಲ್ಯದ ಹಳೇ ರಾಗವನ್ನೇ ಹಾಡುತ್ತಿವೆ. 'ಪ್ರಶ್ನೆ'? ಯಂಥ ಕೆಲವು ಉತ್ತಮ ಕವಿತೆಗಳೂ ಇವೆ. ಕೆಲವು ಉದಾಹರಣೆಗಳಿಂದ ಓದುಗನು ತನ್ನ ಸ್ವಂತ ನಿರ್ಧಾರಕ್ಕೆ ಬರಬಹುದು.

"ಧರ್ಮಬಂಧುಗಳು ನಾವು; . . . ಬಂಧು ಬಂಧುವ ಕೊಂದು ಸಮಾಧಿಗಳು ನುಡಿಯಬೇಕೆ?

"ಪಶ್ಚಿಮದ ಬುಕ್ಕಿಂದ ಕಾಪಿ ಹೊಡಿ ಚಿಂತಿಲ್ಲ . . . ಯುದ್ಧ ಪ್ರೇಮಗಳಲ್ಲಿ ಎಲ್ಲವೂ ಸರಿ"

"ಭಾರತಮಾತೆಯ ವೀರ ಸುಪುತ್ರರೆ; ಕೋರುವೆ ನಿಮಗೆ ಜಯ" || ಪ ||.

(ರಾಗ ಹಂಸಧ್ವನಿ.) (ತಾಳ ಚತುರಶ್ರ ತ್ರಿಪುಟ.) (ಆದಿ).

"ಏಳು ಮೇಲೆ ಊದು ಕಹಳೆ ಬರಲಿ ಎಲ್ಲರೂ"

"ವೈಯೆ? ಕೈಯೆ? ಕೈದೆ? ಮನವೇ, ಧನವೇ ಇನ್ನಾವಿವೆ?

ನಾಡಿಗೆ, ಸೇವೆಗೆ, ಗಡಿಗೆ, ತಾಯಿಯ ಪಾದದ ಎಡೆಗೆ?"

**ನಮ್ಮ ಹಳ್ಳೀನಾಟ್ಕ**: ಲೇಖಕರು: ಶ್ರೀ ಸಿ. ಎಸ್. ವಿ. ಮೂರ್ತಿ; ಸೈಜು: ಕ್ರೌನ್ ೧/೮; ಬೆಲೆ: ೫೦ ನ.ಪೈ.

ಈ ಪುಟ್ಟ ಪುಸ್ತಕದಲ್ಲಿ ಹಳ್ಳಿಯ ಕೆಲವು ಉತ್ಸಾಹಿಗಳು ತಮ್ಮ ಊರ ಜಾತ್ರೆಯ ಸಂದರ್ಭದಲ್ಲಿ ನಾಟಕ ಆಡಬಯಸಿ, ಪಟ್ಟಪಾಡು ಬಹಳ ಹೃದಯಂಗಮವಾಗಿಯೂ ಹಾಸ್ಯಭರಿತವಾಗಿಯೂ ನಿರೂಪಿಸಲ್ಪಟ್ಟಿದೆ.

ಊರಗೌಡರು ನಾಟಕಕ್ಕೆ ತರುಣರನ್ನು ಕಲೆಹಾಕಿದ್ದು, ನಾಟಕದ ಪಾತ್ರಗಳ ಹಂಚಿಕೆ, ನಾಟಕದ ಪ್ರಾರಂಭ, ಪಾತ್ರಧಾರಿಗಳ ಫಜೀತಿ, ಕೊನೆಯಲ್ಲಿ ಊರ ಗೌಡರಿಗೆ ದುರಂತ ಸಂಭವಿಸಿ, ನಾಟಕವನ್ನು ಮುಗಿಸಲಾರದೇ ಅರ್ಧಕ್ಕೇ ನಿಲ್ಲಿಸಿದ್ದು ಇವೇ ನಾಟಕದ ವಸ್ತು.

ಪೂರ್ತಿಯಾಗಿ ಗ್ರಾಮ್ಯ ಭಾಷೆಯನ್ನೇ ಉಪಯೋಗಿಸಿ, ಅದರ ವೈಪರೀತ್ಯ ಮತ್ತು ವಿಚಿತ್ರಗಳನ್ನು ವಿವರಿಸಿ ನಮ್ಮನ್ನು ನಗುವಿನ ಕಡಲಲ್ಲಿ ಮುಳುಗಿಸುತ್ತಾರೆ ಲೇಖಕರು. ನಾಟಕದಲ್ಲಿ ಅಷ್ಟಾಗಿ ಘಟನೆಗಳು ಇಲ್ಲದಿದ್ದರೂ, ಹಳ್ಳಿಭಾಷೆ ಬಹಳ ಸುಂದರವಾಗಿ ಚಿತ್ರಿಸಲ್ಪಟ್ಟು ನಾಟಕ ಮನರಂಜನೆಯನ್ನುಂಟುಮಾಡುತ್ತದೆ. ಅಭಿನಯಿಸಲು ತಕ್ಕುದಾದ ನಾಟಕ. ಕೇವಲ ಮನರಂಜನೆಯನ್ನೇ ಉದ್ದಿಶ್ಯವಾಗುಳ್ಳ ವಿಲಾಸೀ ಕಲಾವಿದರಿಗೆ ಇದು ಬಹಳ ಅನುಕೂಲವಾದ ನಾಟಕ.

—**ಕೆ. ಎಸ್. ಸೂಲಿಬೆಲೆ**

೧. ವಿಷವೃಕ್ಷ: ಮೂಲ: ಬಂಕಿಮಚಂದ್ರ ಚಟರ್ಜಿ; ಅನುವಾದಕರು: ಬಿ. ವೆಂಕಟಾಚಾರ್ಯ; ಪ್ರಕಾಶಕರು: ಬೆಂಗಳೂರು, ಸಾಹಿತ್ಯಮಂದಿರ; ಬೆಲೆ: ರೂ. ೩-೫೦ ನ.ಪೈ.

ವಿಷವೂ ಅಮೃತವೂ ದೈವದ ಕೊಡುಗೆ. ಸಸ್ಯ-ವೃಕ್ಷಾದಿಗಳಲ್ಲಿ ಪರ್ವತಾರಣ್ಯದ ಮಧ್ಯದಲ್ಲಿ, ನದಿ-ಸಾಗರದ ಉದರದಲ್ಲಿ, ಪ್ರಾಣಿಮಾತ್ರಗಳ ಶರೀರದಲ್ಲಿ ವಿಷವನ್ನಾಗಲಿ, ಅಮೃತವನ್ನಾಗಲಿ ಪಡೆಯಬಹುದು. ಆದರೆ ಬಂಕಿಮಚಂದ್ರರ 'ವಿಷವೃಕ್ಷ'ದ ಬೀಜವು ಬಾಹ್ಯ ಪ್ರಪಂಚಕ್ಕಾಗಲಿ, ವಿಜ್ಞಾನ ದೃಷ್ಟಿಗಾಗಲಿ ಬೀಳದಂಥದು. ಮಾನವನ ಹೃದಯದಲ್ಲಿಯೇ ಅದರ ಹುಟ್ಟು, ಬೆಳವಣಿಗೆ. ಅದರ ಫಲಭೋಗವನ್ನು ಆ ವ್ಯಕ್ತಿ, ಸಂಬಂಧಪಟ್ಟ ಸಂಸಾರದವರು ಉಣ್ಣಬೇಕು. ಇದರ ಚರಿತ್ರೆಯನ್ನು ರಸಿಕ ಕಲಾವಿದನೇ ಹೇಳಬೇಕು.

ನಾಗೇಂದ್ರನು ಸುಶಿಕ್ಷಿತ ಜಮೀನುದಾರ; ಸುಖ ಸಮೃದ್ಧ ಸಂಸಾರ. ಕೊರತೆ, ಅಭಾವ, ದುಃಖ ಎಂಬುದೇ ಅವನಿಗೆ ಅರಿಯದು. ಸೂರ್ಯಮುಖಿ ಅವನ ಹೆಂಡತಿ. ಸುಖಮಯ ದಾಂಪತ್ಯ ಜೀವನ. ಒಮ್ಮೆ ಈತನು ಕಾರ್ಯಾರ್ಥವಾಗಿ ಕಲಕತ್ತೆಗೆ ಹೊರಟಾಗ ಮಳೆ ಗಾಳಿಯ ಆರ್ಭಟದಲ್ಲಿ ಸಿಕ್ಕು ಒಂದು ಹಳ್ಳಿಯಲ್ಲಿ ಆಶ್ರಯ ಸ್ಥಾನ ಪಡೆದನು. ಆಗ ಕುಂದನಂದಿನಿಯೆಂಬ ಪ್ರಾಪ್ತ ವಯಸ್ಕ ಸುಂದರಿಯನ್ನು ಸಂಧಿಸಿ, ದಿಕ್ಕಿಲ್ಲದ ಅವಳ ಗತಿಯಿಂದ ಮನಕರಗಿ, ಔದಾರ್ಯ ಪರೋಪಕಾರ ಬುದ್ಧಿಯಿಂದ ಸ್ವಗ್ರಾಮಕ್ಕೆ ಕರೆದೊಯ್ದನು. ಕಾಲಾಂತರದಲ್ಲಿ ಸೂರ್ಯಮುಖಿಯ ತಮ್ಮನೊಂದಿಗೆ ಅವಳ ವಿವಾಹವಾಯಿತು. ಕುಂದನಂದಿನಿಯು ವಿಧವೆಯಾಗಿ ನಾಗೇಂದ್ರನ ಮನೆಯಲ್ಲಿಯೇ ನೆಲೆಸಿದಳು.

ದಿನಕಳೆದಂತೆ ನಾಗೇಂದ್ರನು ಅವಳ ವಿಚಾರದಲ್ಲಿ ಮೋಹಪರವಶನಾದನು. ಅವನ ಸ್ವಭಾವದಲ್ಲಿ, ನಡತೆಯಲ್ಲಿ ವಿಶೇಷ ಪರಿವರ್ತನೆ ಆಯಿತು. ಕುಂದನಂದಿನಿ ಇಲ್ಲದೆ ಬದುಕಲಾರೆ ಎನ್ನುವಷ್ಟರಮಟ್ಟಿಗೂ ಮನಸ್ಸು ಹೋಯಿತು. ಸೂರ್ಯಮುಖಿಗೆ ಇದು ಗೊತ್ತಾಗಿ, ಪತಿಯೇ ತನ್ನ ಸೌಭಾಗ್ಯ ಎಂದು ನಂಬಿದ್ದ ಆಕೆ, ಕುಂದನಂದಿನಿಯೊಂದಿಗೆ ಪತಿಯ ವಿವಾಹ ಏರ್ಪಡಿಸಿ ತಾನು ಮನೆಬಿಟ್ಟು ಕಣ್ಮರೆಯಾದಳು.

ಕುಂದನಂದಿನಿಯೂ ನಾಗೇಂದ್ರನಲ್ಲಿ ಅನುರಕ್ತಳು. ಆದರೂ ವಿವಾಹದ ನಂತರ ನಾಗೇಂದ್ರನ ಭ್ರಮನಿರಸನವಾಗಲು ಹೆಚ್ಚುಕಾಲ ಬೇಕಾಗಲಿಲ್ಲ. ತಾನು ಸೂರ್ಯಮುಖಿಯಿಲ್ಲದೆ ಜೀವಿಸುವುದು ಸಾಧ್ಯವಿಲ್ಲ ಎಂಬ ಭಾವನೆ ಮತ್ತೆ ಪ್ರಬಲವಾಯಿತು. ಶೋಧಕ್ಕೆ ಎಷ್ಟೋ ಪ್ರಯತ್ನಪಟ್ಟದ್ದಾಯಿತು. ತಾನೇ ದೇಶಾದ್ಯಂತ ತಿರುಗಿ ನಿರಾಶನಾಗಿ ಹಿಂತಿರುಗಿದ. ಇತ್ತ ಸೂರ್ಯಮುಖಿಯಾದರೂ ಊರೂರು ಅಲೆದು, ಶಾರೀರಕ ಬಳಲಿಕೆಯಿಂದ ಕಷ್ಟ ಸಹಿಸಿ, ಉದಾರಿಗಳನೇಕರ ನೆರವಿನಿಂದ ಆರೋಗ್ಯವನ್ನು ಪಡೆದು, ಪತಿದರ್ಶನದ ಹಂಬಲದಿಂದ ಸ್ವಗ್ರಾಮಕ್ಕೆ ಬಂದಳು. ಪತಿ-ಪತ್ನಿಯ ಮಿಲನದಿಂದ ಹೊಸಜೀವನ ಆರಂಭವಾಯಿತು.

ನಾಗೇಂದ್ರನು ತನ್ನನ್ನು ಅಲಕ್ಷಿಸುತ್ತಿದ್ದಾನೆ ಎಂಬ ಭಾವನೆಯಿಂದ ಜುಗುಪ್ಸೆಗೊಂಡ ಕುಂದನಂದಿನಿ ವಿಷ ಸೇವನೆಯಿಂದ ಪ್ರಾಣ ನೀಗಿದಳು. ನಾಗೇಂದ್ರ-ಸೂರ್ಯಮುಖಿಯರ ಸಂಸಾರ ಮತ್ತೆ ಆನಂದಮಯವಾಯಿತು.

ಇದಿಷ್ಟು ಸಂಕ್ಷೇಪದಲ್ಲಿ ಕತೆಯ ಹಂದರ. ದೇವೇಂದ್ರ, ಹೀರಾದಾಸಿ, ಕಮಲಮಣಿ, ಶ್ರೀಶಚಂದ್ರ ಈ ಕಥೆಯ ಬೆಡಗನ್ನು ತುಂಬಿದ್ದಾರೆ. ಕಮಲಮಣಿ-ಸೂರ್ಯಮುಖಿ ಹಾಗೂ ನಾಗೇಂದ್ರ-ಶ್ರೀಶಚಂದ್ರರ ವಾತ್ಸಲ್ಯ-ಪ್ರೀತಿ ಈ ಸಂಸಾರದಲ್ಲಿ ನೆಲೆಗೊಂಡ ಸರಸಕೇಂದ್ರವಾಗಿದೆ.

ರಾಗ-ದ್ವೇಷಾದಿಗಳಿಗೆ ಆತ್ಮವು ಬಲಿಯಾದಾಗ ವಿಷ ಬೀಜ ಬಿತ್ತಿದಂತೆ. ವಾತಾವರಣ, ಸನ್ನಿವೇಶ, ಅನಿರೀಕ್ಷಿತ ಪ್ರಸಂಗಗಳು ನೆರವಾಗಿ ಈ ಬೀಜಕ್ಕೆ ರಸಪೋಷಣೆ ಒದಗಿಸುತ್ತವೆ. ಏನೊಂದು ಜಾಗರೂಕತೆ ವಹಿಸಿದರೂ ಆಗುವುದನ್ನು ಹೇಗೆ ತಪ್ಪಿಸುವುದು? ಅಥವಾ ಹೀಗೆಯೇ ಆಗುತ್ತದೆ ಎಂದು ಗಣಿತದ ಖಚಿತ ಉತ್ತರವನ್ನು ಯಾರು ಹೇಳಬಲ್ಲರು? ದಿಕ್ಕುಗೇಡಿಯಾದ ಕುಂದನಂದಿನಿಯನ್ನು ಮನೆಯಲ್ಲಿ ತಂದಿರಿಸಿಕೊಂಡದ್ದು ತನ್ನ ಸಂಸಾರಕ್ಕೆ ಮುಳುವಾಗಬಹುದು ಎಂದು ನಾಗೇಂದ್ರನು ಹೇಗೆ ತಿಳಿಯಬೇಕು? ಅವನಾಗಲಿ, ಕುಂದನಂದಿನಿಯಾಗಲಿ ಹೀಗೆ 'ಮಾಡಬಾರದಿತ್ತು' ಎಂದು ಬೆರಳುಮಾಡಿ ತೋರಿಸುವುದು ಸುಲಭವಲ್ಲ. ಅಷ್ಟು ಸಹಜ ಸುಂದರವಾಗಿದೆ ಸನ್ನಿವೇಶ ರಚನೆ.

"ಕ್ಷೇತ್ರಭೇದದಿಂದ, ಪಾತ್ರವಿಶೇಷದಿಂದ" ವಿಷವೃಕ್ಷದ ಫಲಗಳಲ್ಲಿ ವಿವಿಧ ರೀತಿ ಇದೆ. ಯಾವುದೋ ಕ್ಷಣದ ಮಾನಸಿಕ ದುರ್ಬಲತೆಯಿಂದ ನಾಗೇಂದ್ರನಿಗಾದ ಕ್ಷಣಿಕ ದುಃಖ, ಕುಂದನಂದಿನಿಯ ಅಕಾಲಿಕ ಅಂತ್ಯ, ರೋಗಾದಿ

ಗಳಲ್ಲಿ ದೇವೇಂದ್ರನ ಅಹರ್ನಿಶ ಬಳಲಿಕೆಯನ್ನೂ, ಸಾಯುವ ಕಾಲದಲ್ಲಿಯೂ ಹೀರೆಯಿಂದ ಆತನು ಸಹಿಸಬೇಕಾಗಿ ಬಂದ ಅವಮಾನವನ್ನೂ ಈ ಫಲಭೇದದಿಂದ ಗುರುತಿಸಬಹುದು. ಹೀರೆ ಅಥವಾ ದೇವೇಂದ್ರನಿಗೆ ಆತ್ಮಹನನದ ಫಲಗಳೇ ಏಕೆ? ದೇವೇಂದ್ರನಿಗೆ ಮೋಹಿತಳಾಗಿ ತನ್ನ ಪ್ರೇಮಾರ್ಪಣೆಯಲ್ಲಿ ಹೀರೆ ಮಾಡಿದ ತಪ್ಪೇನು? ದೇವೇಂದ್ರನಾದರೂ ಅಂಥ ನರಕಾನುಭವದಲ್ಲಿ ಬಿದ್ದುದು ಹೇಗೆ? ಅವನ ಹೆಂಡತಿ ಹೇಮುವತಿಯ ನಡತೆಯೇ ಕಾರಣವಲ್ಲವೇ? ಅಂದಮೇಲೆ ಒಳ್ಳೆಯದು ಕೆಟ್ಟದ್ದು ಯಾರ ಹೊಣೆ? ವ್ಯಕ್ತಿ ಎಷ್ಟರಮಟ್ಟಿಗೆ ಸ್ವತಂತ್ರನು?

ದಾಂಪತ್ಯ ಜೀವನದ ವಿಷಮತೆ ಎಲ್ಲಿ? ವಿಷಫಲದಿಂದ ಪರಾವೃತ್ತನಾಗುವುದು ಹೇಗೆ? ಮೊದಲಾದ ಪ್ರಶ್ನೆಗಳು "ವಿಷವೃಕ್ಷವು ಯಾವುದು" ಮತ್ತು "ಹರಘೋಷಾಲನು ಬರೆದ ಉತ್ತರ" ಎಂಬ ಪರಿಚ್ಛೇದಗಳಲ್ಲಿ ವಿವೇಚಿತವಾಗಿವೆ. ಈ ವಿವೇಚನೆಯ ರೀತಿ, ಶೈಲಿ ನಿತ್ಯನೂತನವಾದುದು. ಬಂಕಿಮಚಂದ್ರರ ಕೃತಿ ಓದಿ ಮರೆಯತಕ್ಕವಲ್ಲ. ಅದರಲ್ಲಿಯೂ ವೆಂಕಟಾಚಾರ್ಯರ ಸುರಸ, ಸಂಸ್ಕೃತಬಂಧದ ಶೈಲಿ, ಓದುಗರಿಗೆ ರಸದೌತಣ. ಇಲ್ಲಿಯ ಪಾತ್ರಗಳು ಕೇವಲ ಸಜೀವವಲ್ಲ; ಚೇತನಮಯ, ಪ್ರಭಾವಪೂರ್ಣ. ನಾಗೇಂದ್ರ, ಸೂರ್ಯಮುಖಿಯರಂಥ ಗುಣರೂಪ ಸಂಪನ್ನರ ಮಾತು ಇರಲಿ, ದೇವೇಂದ್ರ ಹೀರಾದಾಸಿಯಂಥ ಸುರಾಚಾರಿ, ದುಃಶೀಲರೂ, ಓದುಗರ ಸಹಾನುಭೂತಿ ಕರುಣೆಗೆ ಪಾತ್ರರಾಗುತ್ತಾರೆ. ಈ ಕೃತಿಯ ಭಾಷಾಂತರದಿಂದಾಗಿ ಕನ್ನಡ ಕಾದಂಬರಿಗೆ ಬಹುಮೂಲ್ಯ ಕಾಣಿಕೆಯನ್ನು ವೆಂಕಟಾಚಾರ್ಯರು ಕೊಟ್ಟಿದ್ದಾರೆ.

**೨. ಅಡವಿಯ ಹುಡುಗಿ:** ಮೂಲ: ಬಂಕಿಮ ಚಂದ್ರ ಚಟರ್ಜಿ; ಅನುವಾದಕರು: ಬಿ. ವೆಂಕಟಾಚಾರ್ಯ; ಪ್ರಕಾಶಕರು: ಬೆಂಗಳೂರು, ಸಾಹಿತ್ಯ ಮಂದಿರ; ಬೆಲೆ: ರೂ. ೧-೫೦ ನ.ಪೈ.

ನಾಗರಿಕ ಪ್ರಪಂಚಕ್ಕೆ ಎರವಾಗಿ ಕಳ್ಳ-ಕಾಕರ ಮಧ್ಯೆ ಅನೇಕ ವರ್ಷ ಬಾಳಿ-ಬೆಳೆದು ಒಂದುದಿನ ಆಕಸ್ಮಿಕವಾಗಿ ನಗರಕ್ಕೆ ಹಿಂತಿರುಗಿ ಪುನರ್ಜನ್ಮ ಪಡೆದ ಒಬ್ಬ ಸುಕುಮಾರಿಯ ಕಥೆ ಈ ಕಾದಂಬರಿಯಲ್ಲಿ ವರ್ಣಿತವಾಗಿದೆ. ಯೋಗಿಂದ್ರನಾಥ ಚಟ್ಟೋಪಾಧ್ಯಾಯರ ವಂಗ ಪುಸ್ತಕದ ಭಾಷಾಂತರ. 'ವಿಷವೃಕ್ಷ'ದಂತೆ ಪುನರ್ಮುದ್ರಣ ಪಡೆಯಲಿಲ್ಲವಾದುದರಿಂದ ಅಡವಿಯ ಹುಡುಗಿ ಅಷ್ಟಾಗಿ ಪರಿಷ್ಕರಣ ಹೊಂದಿದವಳಲ್ಲವೆಂದು ಮೇಲೆಯೇ ಅನಿಸುವದು. ಶಬ್ದ, ಮಾತುಗಳಲ್ಲಿ ಅನೇಕ ಕಡೆಗೆ ಅಪಕ್ವತೆ ಭಾಸವಾಗುತ್ತದೆ. ಪಳಗಿದ ಕೈ ಕೊಡುವ ರಸಾನುಭವ ಅಷ್ಟಾಗಿ ಆಗುವುದಿಲ್ಲ.

ಮೂಲತಃ ಇದರ ಮಟ್ಟವೂ ಅಷ್ಟು ಎತ್ತರವಾದುದಲ್ಲ. ಚಲಚ್ಚಿತ್ರ ಕಥೆಯ ಮಾದರಿಯಲ್ಲಿ ಓಟವಿದೆ. ಇಲ್ಲಿಯ ಪ್ರಕಾಶಚಂದ್ರ ಪ್ರಭಾವತಿ ಪಾತ್ರರಚನೆಯಲ್ಲಿ ಅಪೂರ್ಣತೆ ಎದ್ದು ಕಾಣುತ್ತದೆ. ಹೇಮುವತಿಯ ಕಡೆಗೆ ಲೇಖಕರು ಲಕ್ಷ್ಯವನ್ನು ಕೇಂದ್ರೀಕರಿಸಿದ್ದಾರೆ. ಆದರೆ ಅಡವಿಯ ಹುಡುಗಿಯ ಸ್ವಭಾವ ಚಿತ್ರಣ ರಮ್ಯವಾಗಿದೆ.

ವೆಂಕಟಾಚಾರ್ಯರ ಕೃತಿಗಳು ಇದುವರೆಗೆ ದುರ್ಲಭವೆನಿಸಿದ್ದವು. 'ಸಾಹಿತ್ಯ ಮಂದಿರ'ವು ಮತ್ತೆ ಅವನ್ನು ಬೆಳಗಿಗೆ ತರುವ ನಿರ್ಧಾರ ಮಾಡಿದೆ. ಇದು ಕನ್ನಡಿಗರ ಪುಣ್ಯ. ಪುಟ್ಟಣ್ಣ, ಗಳಗನಾಥ ಅವರ ಹಲವಾರು ಕೃತಿಗಳು, 'ವಾಗ್ದೇವಿ', 'ಇಂದಿರಾಬಾಯಿ' ಮೊದಲಾದ ಆರಂಭದ ಕಾದಂಬರಿಗಳು ಈಗಾಗಲೇ ಪ್ರಕಟವಾಗಿವೆ. 'ಗಳಗನಾಥ' ಎಂಬ ಕೃತಿ-ಪರಿಚಯಾತ್ಮಕ ಪುಸ್ತಕವು ಧಾರವಾಡ ರಂಗ-ಮಂಗ-ರಂಜನೋದ್ಯಾನದಿಂದ ಹಲವು ವರ್ಷದ ಹಿಂದೆ ಹೊರಬಂದಿದೆ. ವೆಂಕಟಾಚಾರ್ಯರ ಪರಿಚಯಕ್ಕೆ ಹತ್ತು ಪುಟದ ಒಂದು ಪುಸ್ತಿಕೆಗಿಂತ ಹೆಚ್ಚೇನೂ ಬಂದಿಲ್ಲ. ಬರುವ ಜೂನ್ ತಿಂಗಳಿಗೆ ಅವರು ಪುಣ್ಯಸ್ಮರಣೀಯರಾಗಿ ೫೦ ವರ್ಷ. ಅವರ ಕೃತಿಗಳೆಲ್ಲವನ್ನೂ ಪುನರ್ಮುದ್ರಿಸುವುದಲ್ಲದೆ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ವೆಂಕಟಾಚಾರ್ಯರು ನೀಡಿದ ಕಾಣ್ಕೆಗೆ ಸಂಬಂಧಪಟ್ಟ ವ್ಯಕ್ತಿ-ಕೃತಿಪರಿಚಯಾತ್ಮಕ ಪುಸ್ತಕವೊಂದನ್ನು ಪ್ರಕಟಿಸಬೇಕು. ಇವಕ್ಕೆಲ್ಲ ಕನ್ನಡ ವಾಚಕವೃಂದದ ಸಹಕಾರ ಲಭಿಸಲಿ.

—ವೆಂ.

**ನವೀನ ನಾಟಕಗಳು:** ಕರ್ತೃ: ಕೆ. ಶ್ರೀನಿವಾಸ ಉಪಾಧ್ಯಾಯ; ಪ್ರಕಾಶಕರು: ದೀನಬಂಧು ಪ್ರಕಾಶನ, ೧೧೫, ೫ನೇ ಮಾಡಲ್‌ಹೌಸ್ ಬೀದಿ, ಬೆಂಗಳೂರು-೪; ಸೈಜು: ಕ್ರಾನ್ ೧/೮, ಪುಟಗಳು; ೬೦; ಬೆಲೆ: ರೂ. ೧.

ಕನ್ನಡ ನಾಟಕಗಳ ಸುಗ್ಗಿಯಾದ ಕಾಲ ಒಂದಿತ್ತು. ಏಕೋ ಇಂದು ನಾಟಕಗಳಿಗೆ ಪ್ರಾಶಸ್ತ್ಯ ಕಡಿಮೆಯಾಗುತ್ತಿದೆ. ನಾಟಕ ಕಂದಿ ಕುಂದದಂತೆ ಎಚ್ಚರ ವಹಿಸಿ

ಮತ್ತೊಮ್ಮೆ ಚೇತನಗೊಳಿಸಬೇಕಾದದ್ದು ಕನ್ನಡಿಗರ ಕರ್ತವ್ಯ. ಇಂತಹ ಸಂದರ್ಭದಲ್ಲಿ ಶ್ರೀ ಕೆ. ಶ್ರೀನಿವಾಸ ಉಪಾಧ್ಯಾಯರು 'ನವೀನ ನಾಟಕಗಳನ್ನು' ರಚಿಸಿ ನವ ಹುರುಪನ್ನು ತರಲೆತ್ನಿಸಿದ್ದಾರೆ. ಇದು ಅವರ ಮೊದಲ ನಾಟಕ ಕೃತಿ. ಅವರೇ ತಿಳಿಸಿರುವಂತೆ 'ನವೀನ ನಾಟಕಗಳು' ವಸ್ತು, ವಸ್ತುವಿನ ವಿನ್ಯಾಸ, ಶೈಲಿ, ಪಾತ್ರನಿರೂಪಣೆಯಲ್ಲಿ ನವೀನತೆಯನ್ನು ತಾಳಿವೆ. ಉಪಾಧ್ಯಾಯ ವೃತ್ತಿಯಲ್ಲಿರುವ ಉಪಾಧ್ಯಾಯರು ತಮ್ಮ ಆಳವಾದ ಅನುಭವವನ್ನು ಸ್ಪಷ್ಟವಾಗಿ ಈ ನಾಟಕಗಳಲ್ಲಿ ಪ್ರತಿಬಿಂಬಿಸಿದ್ದಾರೆ.

ಇತಿಹಾಸದ ಅಂಶವನ್ನು ನಾಟಕೀಯವಾಗಿ ಪರಿವರ್ತಿಸಿ ಜನತೆಗೆ ಉಪಕಾರ ಮಾಡಿದ್ದಾರೆ. 'ಎರಡನೆ ಪಾನಿಪತದ ಯುದ್ಧ' ದಲ್ಲಿ ಬರುವ ಐತಿಹಾಸಿಕ ಪಾತ್ರಗಳಾದ, ಅಕ್ಬರ್, ಬೈರಾಮ್ ಖಾನ್, ಹೇಮು, ಮುಂತಾದ ಪಾತ್ರಗಳು ಚೊಕ್ಕತನದಿಂದ ಬಂದಿವೆ. ಚರಿತ್ರೆಯನ್ನು ಚರಿತ್ರೆಯಾಗಿ ಹೇಳಿದರೆ ಬೇಸರ ಬರುವ ವಸ್ತು, ನಾಟಕೀಯವಾಗಿ ಬಂದು ಸಹೃದಯರ ಮನವನ್ನು ಆಕರ್ಷಿಸಿದೆ.

'ನರಕದಲ್ಲಿ ಇತಿಹಾಸ ಉವಾಚ' ಸ್ವಕಲ್ಪಿತ ಕಲ್ಪನೆಯ ನಾಟಕ. ಸಮಾಜದ ಸೇವಕರಾದ, ಡಾಕ್ಟರ್, ಇಂಜಿನಿಯರ್, ಹೋಟೆಲ್ ಮಾಲಿಕ ಮತ್ತು ಹಿಸ್ಟರಿ ಮೇಸ್ಟ್ರು ಅವರುಗಳ ಪ್ರತಿಚ್ಛಾಯೆಯನ್ನು ಇಲ್ಲಿ ಕಾಣಬಹುದು. ಈ ನಾಟಕ ಸ್ವಾರಸ್ಯವಾಗಿದೆ. ಸಮಾಜದ ಲೋಪದೋಷಗಳನ್ನು ಸೂಚ್ಯಾಂಶದಲ್ಲಿ ತೋರಿಸುತ್ತದೆ. ಕೊನೆಯದಾದ 'ಸರ್ಟಿಫಿಕೇಟ್ಸ್ ಕಾನ್ಫರೆನ್ಸ್' ನಾಟಕದಲ್ಲಿ, ವಿದ್ಯಾವಿಕ್ರಯವಾಗುತ್ತಿರುವ ಮತ್ತು ಪದವಿಗಳ ಕಚ್ಚಾಟವಿರುವ ಈ ಕಾಲದಲ್ಲಿ ಇದನ್ನು ರಚಿಸಿ ಮೇಲ್ಮೆಯನ್ನು ಪಡೆದಿದ್ದಾರೆ. ಉಪಾಧ್ಯಾಯರು, ಬಿ.ಎ., ಬಿ.ಎಸ್‌ಸಿ., ಬಿ.ಕಾಂ., ಎಂ.ಬಿ.ಬಿ.ಎಸ್., ಬಿ.ಇ., ಬಿ.ಎಲ್., ಪದವಿಗಳು ಮಿಸ್, ಎಸ್.ಎಸ್.ಎಲ್.ಸಿ. ಯನ್ನು ವರಿಸಲು ಸ್ಪರ್ಧೆ ನಡೆಸಿರುವುದು, ಅಲ್ಲದೆ ಪ್ರತಿ ಪದವಿಗಳೂ ತಮ್ಮ ಮೇಲ್ಮೆಯನ್ನು ಕೊಚ್ಚಿಕೊಳ್ಳುವುದೂ, ಕಡೆಯಲ್ಲಿ ಎಲ್ಲ ಪದವಿಗಳೂ 'ನೇಗಿಲ ಯೋಗಿಗೆ ತಲೆ ಬಗ್ಗಿಸಿರುವುದು' ವಿಶಿಷ್ಟವಾದ ರೀತಿಯಲ್ಲಿ ಪ್ರತಿಪಾದಿತವಾಗಿವೆ. ಯಾವ ಪದವಿಯೂ ಮೇಲು ಕೀಳು ಎಂಬುದಿಲ್ಲ. ಎಷ್ಟೇ ಪದವೀಧರನಾದರೂ 'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯವೇ ಲೇಸು' ಎಂಬ ತತ್ವಕ್ಕೆ ಶರಣಾಗಿ ಮೇಟಿಯಿಂದ ದೇಶದ ರಾಟೆ ನಡೆಯುತ್ತದೆಯೆಂಬುದನ್ನು ತಿಳಿಯಬೇಕು. ಸಾರ್ವಕಾಲಿಕವಾದ ಸತ್ಯವನ್ನೇ ನಾಟಕಕಾರರು ಚಿತ್ರಿಸಿದ್ದಾರೆ.

ಮೂರು ನಾಟಕಗಳೂ ವೈವಿಧ್ಯತೆಯಿಂದ ಕೂಡಿದ್ದರೂ, ಪಾತ್ರಕ್ಕೆ ಸರಿಯಾದ ಶೈಲಿಯ ಪೋಷಣೆ ಕೊರತೆಯಾದಂತೆ ತೋರುತ್ತದೆ. ಪಾತ್ರಗಳ ನಿರೂಪಣೆಯಲ್ಲಿಯೂ ಕುಂಠಿತ ಕಂಡು ಬರುತ್ತದೆ. ಉಪಾಧ್ಯಾಯರ ಈ ಕೃತಿ ಜನಪ್ರಿಯವಾಗುವುದರಲ್ಲಿ ಸಂದೇಹವಿಲ್ಲ. ಅವರಿಂದ ಅನೇಕ ಇಂತಹ ಕೃತಿಗಳನ್ನು ರಚಿಸಲು ಶ್ರೀ ಭುವನೇಶ್ವರಿಯು ಶಕ್ತಿಯನ್ನೀಡಲೆಂದು ಪ್ರಾರ್ಥಿಸಿ, 'ನವೀನ ನಾಟಕಗಳು' ಜನತೆಯಲ್ಲಿ ನವೀನತೆಯನ್ನುಂಟು ಮಾಡಿದರೆ ಅದು ಉಪಾಧ್ಯಾಯರಿಗೆ ನವೀನತೆಯುಂಟು ಮಾಡಿದಂತೆ ಎಂದು ಹೇಳಬಯಸುತ್ತೇನೆ.

—ಹೀ. ಚಿ. ಶಾಂತವೀರಯ್ಯ

**ಹಾಲಕೇರಿಯ ಅನ್ನದಾನೀಶ ನಾಮಾವಳಿಯು:** ಲೇಖಕರು: ಶ್ರೀ ಮಹಾರುದ್ರಪ್ಪ ಮಹಾಲಿಂಗಪ್ಪ ಮಿರ್ಜಿ (ಪುರಾತನರ ಕಂದ); ಪ್ರಕಾಶಕರು: ಶ್ರೀ ಗುರುಸಿದ್ದಪ್ಪ ಮಹಾಲಿಂಗಪ್ಪ ಮಿರ್ಜಿ, ಬಿ.ಎ., ಎಲ್‌ಎಲ್.ಬಿ., ಅಡ್ವೋಕೇಟರು, ಶ್ರೀ ವಿರೂಪಾಕ್ಷಪ್ಪ ಮಹಾರುದ್ರಪ್ಪ, ಮಿರ್ಜಿ, ಬಿ.ಎ.; ಪುಟ: ೧೧+೪.

ಈಗಾಗಲೇ ಹಲವು ಮಂದಿ ಮಹಾನುಭಾವರ, ಪುಣ್ಯಶ್ಲೋಕರ ನಾಮಾವಳಿಗಳನ್ನು ರಚಿಸಿ, ತನ್ಮೂಲಕ ಆ ಕಾರಣಿಕರ ಜೀವನಚರಿತ್ರೆ ಹಾಗೂ ಬೋಧನೆಗಳನ್ನು ಓದುಗರಿಗೆ ಮನಗಾಣಿಸಿರುವ ಶ್ರೀಮಾನ್ ಮ. ಮ. ಮಿರ್ಜಿಯವರು 'ಕನ್ನಡ ನುಡಿ'ಯ ವಾಚಕರಿಗೆ ಅಪರಿಚಿತರೇನಲ್ಲ.

ಪ್ರಕೃತ ಕೃತಿಯಲ್ಲಿ ಹಾಲಕೇರಿಯ ಮಹಾನುಭಾವರರಾದ ಶ್ರೀ ಅನ್ನದಾನೀಶ ಮಹಾಸ್ವಾಮಿಗಳವರ ಜೀವನವನ್ನೂ, ಉಪದೇಶಾಂಶಗಳನ್ನೂ, ೧೦೮ ನಾಮಾವಳಿಗಳನ್ನೂ ಉಲ್ಲೇಖಿಸಿದ್ದಾರೆ.

ಗಂಜಿಹಾಳದ ಕರವೀರಾರ್ಯ–ಲಿಂಗಮ್ಮ ಎಂಬ ಪುಣ್ಯದಂಪತಿಗಳಿಗೆ ವಿರೂಪಾಕ್ಷನೆಂಬ ಹೆಸರಿನ ಶಿಶುವಾಗಿ ಜನಿಸಿ, ಶ್ರೀ ಮುಪ್ಪಿನ ಬಸವಲಿಂಗಾರ್ಯರಿಂದ ಶಿವಜ್ಞಾನೋಪದೇಶ ಪಡೆದು ಮೈಸೂರ ಚರವರಾಧೀಶ ಸಿದ್ಧರಾಮಗುರುವಿನ ಸೇವೆ ಮಾಡಿ ಇಟ್ಟಿಗೆಯ ಭಕ್ತರ ಪ್ರಾರ್ಥನೆಯ ಮೇರೆಗೆ ನಿರಂಜನ ಪೀಠಕ್ಕೆ ಅರ್ಹನೆಂದು ಸಿದ್ಧತೆಯಲ್ಲಿರುತ್ತಾನೆ ಈ ಕೃತಿಯ ಕಥಾನಾಯಕ.

ಆಗ್ಗೆ ಮಠದ ವಟುಗಳಲ್ಲಿ ಹಿರಿಯನಾದ 'ರುದ್ರದೇವ' ನೆಂಬವನು ಕೋಲಾಹಲವನ್ನೆಬ್ಬಿಸಿ ನ್ಯಾಯಾಲಯಕ್ಕೆ ದೂರಿತ್ತನು. ಆಗ ಮೇಧಾವಿಯಾದ ಕೊಪ್ಪಳದ ನ್ಯಾಯಾಧೀಶನು ಆ ವಟುಗಳೀರ್ವರನ್ನೂ ಸೂಕ್ಷ್ಮವಾಗಿ ಪರಿಶೀಲಿಸಿ ಆಡಂಬರದ ರುಪ್ರದೇವನನ್ನು ತಿರಸ್ಕರಿಸಿ, ಪರಮ ವೈರಾಗ್ಯಮೂರ್ತಿಯಾದ ಈತನನ್ನೇ ಪಟ್ಟಕ್ಕರ್ಹ ನೆಂದು ಸಾರಿದನು. ಅಂತೇ ಶ್ರೀ 'ಅನ್ನದಾನೀಶ ಸ್ವಾಮಿ' ಎಂಬ ನಾಮಾಂಕಿತದಿಂದ ಶೂನ್ಯ ಸಿಂಹಾಸನಾರೋಹಣವೂ ನಡೆದುಹೋಯಿತು.

ಪರಾಜಿತನಾದ ರುದ್ರದೇವನು ಮತ್ಸರದಿಂದ ವಿಷವನ್ನಿಕ್ಕಿದರೂ, ಇವರ ತಪಃಪ್ರಭಾವದಿಂದ ಅವನ ಉದ್ದೇಶ ಲೇಶವೂ ಈಡೇರಲಿಲ್ಲ. ಶಿವಪೂಜಾಧುರಂಧರರಾದಾಗ್ಯೂ ಲೋಕಲೀಲೆಗಳಲ್ಲಿ ಅಂದರೆ ಸಂಗೀತವಾದನ ಪ್ರಾವೀಣ್ಯ-ಶಿಲ್ಪಕಲಾಚಾತುರ್ಯಗಳನ್ನು ಕೂಡ ಮೈಗೂಡಿಸಿಕೊಂಡಿದ್ದರು. ಅಲ್ಲದೆ ಅನೇಕ ಮಹತ್ಕಾರ್ಯಗಳನ್ನೂ ಸಾಧಿಸಿ, ಶ್ರೇಷ್ಠ ಜೀವನ ನಡೆಸಿ, ನೂರಾವಂದು ವರ್ಷಗಳ ದೀರ್ಘ ಜೀವನವನ್ನು ತೇಜೋಪೂರ್ಣವಾಗಿ ನಡೆಸಿ ಲಿಂಗೈಕ್ಯರಾದರು—ಎಂಬುದೇ ಈ ನಾಮಾವಳಿಯಲ್ಲಿನ ಚರಿತ್ರಾಂಶ. ಈ ಕೃತಿಯನ್ನು ಶ್ರೀ ನಿಡುಮಾಮಿಡಿ ಜಗದ್ಗುರುಗಳವರಿಗೆ ಅರ್ಪಿಸಿ ನಿಜಕ್ಕೂ ಕೃತಕೃತ್ಯರಾಗಿದ್ದಾರೆ ಲೇಖಕರು.

—ಪಂಡಿತ ಕೆ. ಪಿ. ಶಿವಲಿಂಗಯ್ಯ

---



# ಕನ್ನಡ ಸಾಹಿತ್ಯ ಪರಿಷತ್ತಿಗೆ ರಾಷ್ಟ್ರಾಧ್ಯಕ್ಷರ ಸಂದರ್ಶನ

ಬೆಂಗಳೂರು ೯-೧೦-೧೯೬೩ : ಭಾರತ ರಾಷ್ಟ್ರಾಧ್ಯಕ್ಷ ಡಾ|| ಎಸ್. ರಾಧಾಕೃಷ್ಣನ್ ಅವರು ಈ ಸಂಜೆ ಕನ್ನಡ ಸಾಹಿತ್ಯ ಪರಿಷತ್ತಿಗೆ ಸಂದರ್ಶನವಿತ್ತು, ಪರಿಷತ್ತಿನ ಇತಿಹಾಸದಲ್ಲಿ ಮತ್ತೊಂದು ಶುಭ ಹಾಗೂ ಸುವರ್ಣಸದೃಶ ದಿನವನ್ನಾಗಿ ಮಾಡಿದರು. ಅಪೂರ್ವವಾದ ಸಡಗರ ಮತ್ತು ಸಂಭ್ರಮದಿಂದ ಕೂಡಿದ ಸುಸನ್ನಿವೇಶದಲ್ಲಿ, ರಾಷ್ಟ್ರಾಧ್ಯಕ್ಷರು, ರಾಜ್ಯಪಾಲರಾದ ಶ್ರೀಮನ್ ಮಹಾರಾಜ ಶ್ರೀ ಜಯಚಾಮರಾಜ ಒಡೆಯರೊಡನೆ, ಸಂಜೆ ಆರೂಕಾಲು ಗಂಟೆಗೆ ಭವ್ಯವಾಗಿ ನಿರ್ಮಿಸಲಾಗಿದ್ದ ಚಪ್ಪರದೊಳಕ್ಕೆ ಆಗಮಿಸುತ್ತಲೇ ಶ್ರೀ ಚಾಮರಾಜೇಂದ್ರ ಸಂಸ್ಕೃತ ಮಹಾಪಾಠಶಾಲೆಯ ವಿದ್ವಾಂಸರುಗಳು ವೇದ ಘೋಷ ಮಾಡಿ, ಪೂರ್ಣ ಕುಂಭ ಸಮರ್ಪಿಸಿ ಮರ್ಯಾದೆಗೈದರು. ಪರಿಷತ್ತಿನ ಅಧ್ಯಕ್ಷರು ಮತ್ತು ಅಧಿಕಾರಿ ವರ್ಗದವರು ಸುಸ್ವಾಗತ ಬಯಸಿದರು. ಮುಂದೆ ಕೆಲ ಹೆಜ್ಜೆಯಿಡುತ್ತಲೇ ಸುಮಂಗಲಿಯರು ರಾಷ್ಟ್ರಾಧ್ಯಕ್ಷರಿಗೆ ಆರತಿ ಎತ್ತಿದರು. ಮಂಗಳವಾದ್ಯಗಳು ಮೊಳಗಿದವು.

ನಂತರ ರಾಷ್ಟ್ರಾಧ್ಯಕ್ಷರು ರಾಜ್ಯಪಾಲರೊಡನೆ ಪರಿಷತ್ತಿನ ಸರಸ್ವತೀ ಭಂಡಾರವನ್ನು ವೀಕ್ಷಿಸಿ, ಈಗಾಗಲೇ ಆಹ್ವಾನಿತರಿಂದ ತುಂಬಿ ಹೋಗಿದ್ದ ಸಭಾಭವನವನ್ನು ಪ್ರವೇಶಿಸಿದರು. ಹರ್ಷಧ್ವನಿಗಳಾದವು.

### ಪರಿಷತ್ ಅಧ್ಯಕ್ಷರ ಸ್ವಾಗತ

ಕಾರ್ಯಕ್ರಮವು ಕುಮಾರಿ ಪದ್ಮ ಹಾಗೂ ಕುಮಾರಿ ರಮಾ ಇವರ ಪ್ರಾರ್ಥನೆಯಿಂದ ಆರಂಭವಾಯಿತು. ತರುವಾಯ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಮೊದಲು ಸಂಸ್ಕೃತದಲ್ಲಿ ಅನಂತರ ಕನ್ನಡದಲ್ಲಿ ರಾಷ್ಟ್ರಾಧ್ಯಕ್ಷರನ್ನು ಸ್ವಾಗತಿಸಿ ಮಾತನಾಡಿದರು. ಕಳೆದ ನಲವತ್ತೆಂಟು ವರ್ಷಗಳಲ್ಲಿ ಪರಿಷತ್ತು ಮಾಡಿರುವ ಮತ್ತು ಈಗ ಮಾಡುತ್ತಿರುವ ಕನ್ನಡ ಸಾಹಿತ್ಯ ಸೇವೆಯನ್ನು ವಿವರಿಸಿದರು. ಪರಿಷತ್ತಿನ ಅಗತ್ಯಗಳನ್ನು ಕುರಿತು ಹೇಳುತ್ತ, ಒಂದು ವಿಶಾಲ ಸಭಾಂಗಣದ ಅವಶ್ಯಕತೆ ಇದೆಯೆಂದೂ, ಪರಿಷತ್ತು ಕೈಗೊಂಡಿರುವ ನಿಘಂಟುವಿನ ಕಾರ್ಯಕ್ಕೆ ಹಣ ಸಹಾಯ ಬೇಕಾಗಿದೆ ಎಂದೂ, ಸಂಶೋಧನಾಲಯವು ಆಗಬೇಕಾಗಿದೆ ಎಂದೂ, ಇವೆಲ್ಲಕ್ಕೂ ಸರ್ಕಾರವೂ ಮಹಾಜನರೂ ನೆರವು ನೀಡಬೇಕೆಂದೂ ನಿವೇದಿಸಿದರು. ಈ ಡಿಸೆಂಬರು ತಿಂಗಳಲ್ಲಿ ತುಮಕೂರಿನಲ್ಲಿ ಸೇರಲಿರುವ ೪೪ ನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನೂ, ೧೯೬೪ ರ ಜನವರಿಯಲ್ಲಿ ನಡೆಯಲಿರುವ ಪುರಂದರದಾಸರ ೪೦೦ ನೇ ಶತಮಾನೋತ್ಸವವನ್ನೂ ರಾಷ್ಟ್ರಾಧ್ಯಕ್ಷರು ಉದ್ಘಾಟಿಸಬೇಕೆಂದೂ ಪ್ರಾರ್ಥಿಸಿದರು.

ತದನಂತರ ಅಸ್ಥಾನ ವಿದ್ವಾನ್ ದೇವೇಂದ್ರಪ್ಪ ಮತ್ತು ಮಂಡಲಿಯವರು ಬಹು ಇಂಪಾಗಿ ವಾದ್ಯ ಸಂಗೀತ ನುಡಿಸಿದರು.

ಈ ಕಾರ್ಯಕ್ರಮವಾದಮೇಲೆ ಪರಿಷತ್ತಿನ ಗೌರವ ಕಾರ್ಯದರ್ಶಿಗಳಲ್ಲೊಬ್ಬರಾದ ಡಾ|| ಕೆ. ಎಂ. ಕೃಷ್ಣರಾಯರು ರಾಷ್ಟ್ರಾಧ್ಯಕ್ಷರಿಗೆ ಒಪ್ಪಿಸುವ ಬಿನ್ನಹ ಪತ್ರವನ್ನೋದಿದರು. ಇದನ್ನು ಸುಂದರವಾದ ಶ್ರೀಗಂಧದ ಕರಂಡದಲ್ಲಿಟ್ಟು ಅರ್ಪಿಸಲಾಯಿತು. ರಾಷ್ಟ್ರಾಧ್ಯಕ್ಷರಿಗೂ, ರಾಜ್ಯಪಾಲರಿಗೂ, ಮುಖ್ಯಮಂತ್ರಿಗಳಿಗೂ ಹೂ ಮಾಲೆಗಳನ್ನು ಹಾಕಿ ಗೌರವಿಸಲಾಯಿತು.

### ರಾಷ್ಟ್ರಾಧ್ಯಕ್ಷರ ಭಾಷಣ

ಹರ್ಷಧ್ವನಿಗಳ ಮಧ್ಯೆ ಎದ್ದು ಡಾ|| ರಾಧಾಕೃಷ್ಣನ್ ರವರು "ಮೈಸೂರು ರಾಜ್ಯದಲ್ಲಿ ನಾನು ಎರಡು ವರ್ಷಗಳ ವರೆಗೆ ವಾಸವಾಗಿದ್ದೆ. ಆಗ ಅಂಪರೆ ೧೯೧೮ ರಲ್ಲಿ ಶೇಷಣ್ಣ ಮೊದಲಾದವರನ್ನು ಅರಿತಿದ್ದೆ. ಕಲೆ ಹಾಗೂ ಸಂಸ್ಕೃತಿಯ ಉಚ್ಚ ಪರಂಪರೆಯನ್ನು ಈಗಲೂ ಅನುಸರಿಕೊಂಡು ಬರುತ್ತಿರುವದು ತುಂಬ ಸಂತೋಷದ ವಿಷಯ" ಎಂದು ಹೇಳಿದರು.

ಈ ಕನ್ನಡ ಸಾಹಿತ್ಯ ಪರಿಷತ್ತು ಡಾ|| ಎಂ. ವಿಶ್ವೇಶ್ವರಯ್ಯನವರ ಸ್ಫೂರ್ತಿಯಿಂದ ಸ್ಥಾಪನೆಯಾಗಿ ಪ್ರಗತಿ ಹೊಂದುತ್ತ, ವಿಶಾಲವಾಗುತ್ತ ಬಂದಿದೆ ಎಂದೂ, ಪರಿಷತ್ತು ಕೈಕೊಂಡಿರುವ ನಿಘಂಟುವಿನ ಕಾರ್ಯ ಹಾಗೂ ಪ್ರಾಚೀನ ಲೇಖನಗಳ ಪ್ರಕಟಣೆಗಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ಸಹಾಯ ದೊರೆಯುವದೆಂದೂ ಅವರು ನುಡಿದರು.

### ಕೇವಲ ಜ್ಞಾನ ಸಾಲದು

"ಮನುಷ್ಯನನ್ನು ಮಾನವನನ್ನಾಗಿ ಮಾಡಲು ಸಾಹಿತ್ಯ ಅಗತ್ಯ. ಬರಿ ಜ್ಞಾನ ಸಂಪಾದನೆಯಿಂದ ನಾವು ಯಾವ ಗುರಿಯನ್ನೂ ಮುಟ್ಟಲು ಸಾಧ್ಯವಿಲ್ಲ" ಎಂದು ರಾಷ್ಟ್ರಪತಿಗಳು ಹೇಳಿದರು. "ನಮಗೆ ಸತ್ಯ ಎಂದರೆ ಏನೆಂಬುದು ಗೊತ್ತು. ಆದರೆ ಅದನ್ನು ಕಾರ್ಯರೂಪದಲ್ಲಿ ಅನ್ವಯಿಸಲು ಅಸಮರ್ಥರಿದ್ದೇವೆ" ಎಂದು ಉಪನಿಷತ್ತುಗಳು ಹೇಳುತ್ತವೆ.

"ಯಾವದು ಸರಿ, ಯಾವದು ತಪ್ಪು ಎಂಬುದು ನಮಗೆ ಗೊತ್ತಿದೆ. ಆದರೆ ತಪ್ಪುಗಳನ್ನು ಮಾಡುವುದನ್ನು ಬಿಟ್ಟಿಲ್ಲ ಮತ್ತು ನಿಜವಾಗಿಯೂ ಸರಿಯಾದುದನ್ನು ಮಾಡುತ್ತಿಲ್ಲ. ಸರಿ ಯಾವುದು ಎಂಬ ಜ್ಞಾನ ಹಾಗೂ ಸರಿಯಾದುದನ್ನು ಕಾರ್ಯರೂಪದಲ್ಲಿ ಅನುಸರಿಸುವ ಇವೆರಡರ ನಡುವೆ ಸರಿಯಾದುದನ್ನೇ ಪ್ರೀತಿಸುವ ಮನೋಭಾವ ಅಗತ್ಯ. ಯಾವುದು ಸರಿ ಎಂಬುದನ್ನು ತಿಳಿದುಕೊಂಡರೆ ಮಾತ್ರ ಸಾಲದು. ಅದನ್ನು ಜಾರಿಯಲ್ಲಿಯೂ ತರಬೇಕು. ಇಂದು ಜಗತ್ತಿನಲ್ಲಿ ಯಾವುದು ಸರಿ ಎಂಬ ಜ್ಞಾನ ಜನರಿಗಿಲ್ಲವೆಂದಲ್ಲ, ಆದರೆ ಅದನ್ನು ಜೀವನದಲ್ಲಿ ಅನುಸರಿಸುತ್ತಿಲ್ಲ.

### ಎಂಥ ಸಾಹಿತ್ಯ ನಿರ್ಮಾಣವಾಗಬೇಕು

"ಸರಿಯಾದುದನ್ನೇ ಅನುಸರಿಸಬೇಕಾದರೆ ಮನಸ್ಸಿನ ಪರಿವರ್ತನೆಯಾಗುವದು ಅಗತ್ಯ. ಈ ಪುನಃಪರಿವರ್ತನೆಯ ಕಾರ್ಯ ಸಾಹಿತ್ಯದಿಂದ ಮಾತ್ರ ಸಾಧ್ಯ. ಘಟನೆಗಳನ್ನು ವಿವರಿಸುವ ಅಥವಾ ಅವುಗಳ ಬಗ್ಗೆ ತಿಳಿಸುವ ಸಾಹಿತ್ಯದಿಂದ ಈ ಕಾರ್ಯ ಸಾಧ್ಯವಾಗದು. ಮನುಷ್ಯರ ಹೃದಯದಲ್ಲಿ ಆಧ್ಯಾತ್ಮಿಕ ವಿಚಾರವನ್ನು ಹೆಚ್ಚಿಸುವ ಸಾಹಿತ್ಯ ಬೇಕು. ಮಾನವ ಜನಾಂಗಕ್ಕೆ ಏಕತೆಯ ಭಾವನೆಯನ್ನುಂಟುಮಾಡುವ ಸಾಹಿತ್ಯ ಬೇಕು. ಪ್ರಪಂಚದ ರಹಸ್ಯಗಳನ್ನು ಅರಿತುಕೊಳ್ಳುವ ನೂತನ ಚಕ್ಷುಗಳನ್ನು ಜನರಿಗೆ ಕೊಡುವಂತಹ ಸಾಹಿತ್ಯ ಬೇಕು. ಸಾಹಿತ್ಯ ಕಾರ್ಯದಲ್ಲಿ ತೊಡಗಿರುವವರು ಇವುಗಳನ್ನರಿತು ಮಾನವನ ಮನಸ್ಸಿನ ಉನ್ನತಿಯಾಗುವಂತಹ ಕೃತಿಗಳನ್ನು ರಚಿಸಬೇಕು.

"ಇಂತಹ ಸಾಹಿತ್ಯ ಬರೆದರೆ ಮಾತ್ರ ಸಾಲದು. ಸಾಹಿತಿಗಳು ತಾವು ಬರೆಯುವುದನ್ನು ತಪಸ್ವಿಯಾಗಿ ಜಾರಿಗೆ ತಂದು, ಪರಿವರ್ತನೆ ಹೊಂದಿ, ಇತರರನ್ನು ಪರಿವರ್ತಿಸಬೇಕು" ಎಂದು ಡಾ|| ರಾಧಾಕೃಷ್ಣನ್ ಅವರು ಕರೆ ಇತ್ತರು.

ಕಡೆಯದಾಗಿ ಗೌರವ ಕಾರ್ಯದರ್ಶಿಗಳಾದ ಶ್ರೀ ಎಸ್. ಶಂಕರಪ್ಪನವರು ರಾಷ್ಟ್ರಾಧ್ಯಕ್ಷರಿಗೂ, ರಾಜ್ಯಪಾಲರಿಗೂ, ಮುಖ್ಯಮಂತ್ರಿಗಳಿಗೂ ವಂದನೆಯನ್ನರ್ಪಿಸಿದರು.

ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಪರವಾಗಿ ಶ್ರೀ ಆರ್. ಎಸ್. ಆರಾಧ್ಯರೂ, ಪುರಂದರದಾಸರ ಶತಮಾನೋತ್ಸವ ಸಮಿತಿ ಪರವಾಗಿ ಶ್ರೀ ಕೆ. ಗೋಪಾಲಕೃಷ್ಣರಾಯರೂ ಮತ್ತು 'ಶರಣ ಸಾಹಿತ್ಯ'ದ ಪರವಾಗಿ ಶ್ರೀ ರೇಣುಕ ಪ್ರಸಾದರೂ ರಾಷ್ಟ್ರಾಧ್ಯಕ್ಷರಿಗೆ ಹೂಮಾಲಿಗಳನ್ನು ಅರ್ಪಿಸಿದರು.

ರಾಷ್ಟ್ರಗೀತೆಯೊಡನೆ ಸಮಾರಂಭವು ಮುಕ್ತಾಯಗೊಂಡಿತು.

ಈ ಸಮಾರಂಭಕ್ಕೆ ರಾಜ್ಯದ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪ, ಮಾಜಿ ಮುಖ್ಯಮಂತ್ರಿ ಶ್ರೀ ಕೆ. ಹನುಮಂತಯ್ಯ, ಮೇಯರ್ ಶ್ರೀ ಕೆ. ಎಂ. ನಂಜಪ್ಪ, ಡೆ|| ಮೇಯರ್ ಶ್ರೀಮತಿ ಜಯಲಕ್ಷಮ್ಮ, ವಿಧಾನ ಪರಿಷತ್ತಿನ ಅಧ್ಯಕ್ಷ ಶ್ರೀ ಜಿ. ವಿ. ಹಳ್ಳಿಕೇರಿ, ಹಿರಿಯ ಸಾಹಿತಿಗಳಾದ ಡಾ|| ಎ. ಆರ್. ಕೃಷ್ಣಶಾಸ್ತ್ರಿ, ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪ್ರೊ|| ತೀ.ನಂ. ಶ್ರೀಕಂಠಯ್ಯ, ಪ್ರೊ|| ಡಿ. ಎಲ್. ನರಸಿಂಹಾಚಾರ್, ಶ್ರೀ ಪು. ತಿ. ನರಸಿಂಹಾಚಾರ್, ಶ್ರೀ ತಾತಾಚಾರ್ಯ ಶರ್ಮ ಅಲ್ಲದೆ ಶ್ರೀ ಜಿ. ಶ್ರೀನಿವಾಸ್, ಶ್ರೀ ಈಶ್ವರರಾವ್, ವಿಧಾನ ಪರಿಷತ್ತಿನ ಸದಸ್ಯರುಗಳಾದ ಶ್ರೀ ಜೆ. ಬಿ. ಮಲ್ಲಾರಾಧ್ಯ, ಶ್ರೀ ಎಂ. ಪಿ. ಎಲ್. ಶಾಸ್ತ್ರಿ, ಹೈಕೋರ್ಟಿನ ನಿವೃತ್ತ ನ್ಯಾಯಮೂರ್ತಿಗಳಾದ ಶ್ರೀ ಜಿ. ಪರಮಶಿವಯ್ಯ ಮತ್ತು ಶ್ರೀ ಟಿ. ಎನ್. ಮಲ್ಲಪ್ಪ ಮುಂತಾಗಿ ಅನೇಕ ಪ್ರಮುಖರು ಆಗಮಿಸಿದ್ದರು.

---

# ರಾಷ್ಟ್ರಾಧ್ಯಕ್ಷರಿಗೆ ಪರಿಷತ್ತು ಅರ್ಪಿಸಿದ ಬಿನ್ನಹ ಪತ್ರ

**ಜ್ಞಾನನಿಧಿಗಳಾದ ಭಾರತ ರಾಷ್ಟ್ರಾಧ್ಯಕ್ಷರೆ,**

ಉತ್ತುಂಗ ಹಿಮಾಲಯ, ಪಾವನತಮ ಗಂಗಾನದಿ, ಪವಿತ್ರ ಕ್ಷೇತ್ರಗಳಾದ ಕಾಶಿ, ಕೇದಾರ, ರಾಮೇಶ್ವರ, ಕನ್ಯಾಕುಮಾರಿ ಮೊದಲಾದ ರಮಣೀಯ ಪ್ರದೇಶಗಳಿಂದ ಕಂಗೊಳಿಸುತ್ತಿರುವ ಸ್ವತಂತ್ರ ಭರತಖಂಡದ ರಾಷ್ಟ್ರಾಧ್ಯಕ್ಷರೂ, ವಿಶ್ವವಿಖ್ಯಾತ ತತ್ತ್ವಜ್ಞಾನಿಗಳೂ ಆದ ತಮ್ಮನ್ನು, ಕರ್ಣಾಟಕ ಸಾಹಿತ್ಯಸರಸ್ವತಿಯ ನಿವಾಸ ಸ್ಥಾನವೆನಿಸಿರುವ **ಕನ್ನಡ ಸಾಹಿತ್ಯ ಪರಿಷತ್ತಿಗೆ** ಈ ಶುಭದಿನ ಬರಮಾಡಿಕೊಂಡು ಪ್ರೀತಿ ಗೌರವಪೂರ್ವಕವಾಗಿ ಸ್ವಾಗತಿಸುವ ಭಾಗ್ಯ ಒದಗಿ ಬಂದುದಕ್ಕಾಗಿ ನಮಗೆ ಅಮಿತಾನಂದವಾಗಿದೆ. ಮಹಾಮಹಿಮರಾದ ತಾವು ಕೃಪೆಮಾಡಿ ನಮ್ಮ ಬಿನ್ನಹವನ್ನು ಮನ್ನಿಸಿ **ಕನ್ನಡ ಸಾಹಿತ್ಯ ಪರಿಷತ್ತಿಗೆ** ಸಂದರ್ಶನವಿತ್ತ ಈ ಶುಭದಿನವನ್ನು ನಾವು ಅತ್ಯಂತ ಮಹತ್ವದ ದಿನವೆಂದು ಪರಿಗಣಿಸುತ್ತೇವೆ.

ಮಾನವ ಧರ್ಮದ ಉದ್ಧಾರಕರೂ, ವಿಶ್ವಶಾಂತಿಯ ಆರಾಧಕರೂ, ದರ್ಶನಶಾಸ್ತ್ರ ವಿಶಾರದರೂ, ಮಹರ್ಷಿ ಸದೃಶ ಜೀವನವುಳ್ಳವರೂ ಆದ ತಾವು, ನೆರೆಯ ನಾಡಾದ ಆಂಧ್ರ ಪ್ರದೇಶದ ಸರ್ವಪಲ್ಲಿಯೆಂಬ ಗ್ರಾಮದಲ್ಲಿ ೧೮೮೮ ನೆಯ ಸೆಪ್ಟೆಂಬರ್ ೫ ರಂದು ಜನಿಸಿದಿರಿ. ಪರಿಶುದ್ಧವಾದ ವೈದಿಕ ಮನೆತನದಲ್ಲಿ ಅವತರಿಸಿದ ತಾವು, ಬಾಲ್ಯದಿಂದಲೂ ತೆಲುಗು, ಸಂಸ್ಕೃತ, ಇಂಗ್ಲೀಷ್ ಮೊದಲಾದ ಭಾಷೆಗಳನ್ನೂ, ಸಾಹಿತ್ಯ, ವೇದಾಂತ, ಇತಿಹಾಸ ಮೊದಲಾದ ಶಾಸ್ತ್ರಗಳನ್ನೂ ಶ್ರದ್ಧೆಯಿಂದ ಅಭ್ಯಸಿಸಿ ವಿಖ್ಯಾತ ಪಂಡಿತರೆನಿಸಿದಿರಿ. ಕಾರಣಪುರುಷರಾದ ತಾವು ೧೯೦೯ ರಲ್ಲಿ ಮದರಾಸ್ ಕ್ರಿಶ್ಚಿಯನ್ ಕಾಲೇಜಿನಲ್ಲಿ ಎಂ.ಎ. ಪದವೀಧರರಾದ ಅನಂತರ ಅಲ್ಲಿಯೇ ಕೆಲವುಕಾಲ ಪ್ರಾಧ್ಯಾಪಕರಾಗಿದ್ದಿರಿ. ಆಮೇಲೆ ೧೯೧೮ ರಿಂದ ೧೯೨೧ ರ ವರೆವಿಗೆ ಮೈಸೂರು ಮಹಾರಾಜರ ಕಾಲೇಜಿನಲ್ಲಿಯೂ, ೧೯೨೧ ರಿಂದ ೧೯೪೧ ರ ವರೆವಿಗೆ ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿಯೂ ದರ್ಶನಶಾಸ್ತ್ರದ ಪ್ರಾಧ್ಯಾಪಕರಾಗಿದ್ದಿರಿ. ೧೯೪೧ರಲ್ಲಿ ಆಂಧ್ರ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದಿರಿ. ಈ ಮಧ್ಯೆ ತಾವು ೧೯೩೬ರಿಂದ ೧೯೪೮ರ ವರೆಗೆ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ವೇದಾಂತದ ಆಚಾರ್ಯರಾಗಿದ್ದಿರಿ. ವಿಶ್ವವಿದ್ಯಾನಿಲಯಗಳ ಗ್ರಾಂಟ್ಸ್ ಕಮಿಷನ್ನಿಗೆ ೧೯೪೮ರಲ್ಲಿ ಅಧ್ಯಕ್ಷರಾಗಿದ್ದಿರಿ. ತರುವಾಯ ದೆಹಲಿ ವಿಶ್ವವಿದ್ಯಾನಿಲಯದ ಉಪಕುಲಪತಿ ಆಗಿದ್ದಿರಿ. ೧೯೪೯ ರಿಂದ ೧೯೫೨ ರ ವರೆವಿಗೆ ರಷ್ಯಾ ದೇಶದಲ್ಲಿ ಭಾರತದ ರಾಯಭಾರಿಗಳಾಗಿದ್ದಿರಿ. ಅದಾದಮೇಲೆ, ಅನೇಕವರ್ಷ ಭಾರತದ ಉಪಾಧ್ಯಕ್ಷ ಪೀಠವನ್ನು ಅಲಂಕರಿಸಿ, ಈಗ ಮಹೋನ್ನತವಾದ ಅಧ್ಯಕ್ಷ ಪೀಠದಲ್ಲಿ ವಿರಾಜಿಸುತ್ತಿದ್ದೀರಿ.

ವಿಶ್ವವಿಖ್ಯಾತ ವಿದ್ವಾಂಸರಾದ ತಾವು "ದಿ ಫಿಲಾಸೊಫಿ ಆಫ್ ರಬೀಂದ್ರನಾಥ ಟಾಗೂರ್," "ದಿ ರೈನ್ ಆಫ್ ರಿಲಿಜನ್ ಇನ್ ಕಂಟೆಂಪೊರರಿ ಫಿಲಾಸೊಫಿ," "ದಿ ಇಂಡಿಯನ್ ಫಿಲಾಸೊಫಿ," "ದಿ ಹಿಂದು ವ್ಯೂ ಆಫ್ ಲೈಫ್" ಮೊದಲಾದ ಅನೇಕ ವಿದ್ವತ್ಪೂರ್ಣವಾದ ಗ್ರಂಥಗಳನ್ನು ರಚಿಸಿರುವುದಲ್ಲದೆ, **ಭಗವಾನ್ ಶಂಕರಾಚಾರ್ಯರ** ಪ್ರಸ್ಥಾನ ತ್ರಯ ಭಾಷ್ಯಗ್ರಂಥಗಳನ್ನು ಇಂಗ್ಲೀಷಿಗೆ ಭಾಷಾಂತರಿಸಿ ಜಗತ್ತಿಗೆ ಮಹೋಪಕಾರ ಮಾಡಿರುತ್ತೀರಿ. ಈ ಕಾರ್ಯವು ಕರ್ಣಾಟಕದ ಪೂರ್ವಾಚಾರ್ಯರೂ, ವೇದಭಾಷ್ಯಗಳ ಕರ್ತೃಗಳೂ ಆದ **ಸಾಯಣ** ಮತ್ತು **ಮಾಧವಾಚಾರ್ಯರನ್ನು** ನಮ್ಮ ಸ್ಮರಣೆಗೆ ತರುತ್ತದೆ. ಸನಾತನವೂ, ಉದಾತ್ತವೂ ಆದ ಭಾರತೀಯ ಧರ್ಮ, ದರ್ಶನ, ಸಾಹಿತ್ಯ, ಇತಿಹಾಸ ಮತ್ತು ಸಂಸ್ಕೃತಿಗಳನ್ನು ತಾವು ಸಂಪೂರ್ಣವಾಗಿ ಅರಿತವರಾಗಿರುತ್ತೀರಿ. ಭಾರತೀಯ ಸಂಸ್ಕೃತಿಯ ಪುತ್ತಳಿಯಂತಿರುವ ತಾವು ಭಾರತ ರಾಷ್ಟ್ರದ ಉನ್ನತಿಯನ್ನೂ ವಿಶ್ವದ ಶಾಂತಿಯನ್ನೂ ಸದಾ ಬಯಸುತ್ತಾ, ಭಾರತದ ಕೀರ್ತಿ ಗೌರವ ಗಳನ್ನು ಅಧಿಕಗೊಳಿಸಿರುತ್ತೀರಿ. ಭಾರತದ ಅಧ್ಯಕ್ಷರಾದಮೇಲೆ ತಾವು, ಆಫ್ಘಾನಿಸ್ಥಾನ್, ಇರಾನ್ ಮೊದಲಾದ ನೆರೆಯ ರಾಷ್ಟ್ರಗಳಿಗೂ, ಅಮೆರಿಕಾ, ಇಂಗ್ಲೆಂಡ್ ಮೊದಲಾದ ಪಾಶ್ಚಾತ್ಯ ರಾಷ್ಟ್ರಗಳಿಗೂ ಸಂದರ್ಶನವಿತ್ತ ಸನ್ನಿವೇಶದಲ್ಲಿ, ಆ ದೇಶಗಳಲ್ಲಿ ಪೂಜ್ಯರಾದ ತಮಗೆ ದೊರೆತ ಗೌರವವೂ, ಆ ಸಂದರ್ಭದಲ್ಲಿ ತಾವು ನಿರೂಪಿಸಿದ ಅಮೋಘವಾದ ಹಿತವಚನಗಳೂ ವಿಶ್ವದ ಇತಿಹಾಸದಲ್ಲಿಯೇ ಚಿರಸ್ಮರಣೀಯವೆನಿಸಿವೆ. ಜಗತ್ತು ಅಶಾಂತಿಯ ಸಾಗರದಲ್ಲಿ ಹೊಯ್ದಾಡು ತ್ತಿರುವ ಈ ಸಮಯದಲ್ಲಿ ಸ್ಥಿತಪ್ರಜ್ಞರಾದ ತಾವು ಭಾರತದ ಹಾಗೂ ಪ್ರಪಂಚದ ಮಾರ್ಗದರ್ಶಕರಾಗಿರುವುದು ವಿಶ್ವದ ಭಾಗ್ಯವೇ ಸರಿ.

ಕನ್ನಡ ಸಾಹಿತ್ಯ ಪರಿಷತ್ತು **ಜನತಾ ವಿಶ್ವವಿದ್ಯಾನಿಲಯ**ವೆನಿಸಿಕೊಂಡಿರುವ ಮಹಾಸಂಸ್ಥೆ. ಎರಡೂವರೆ ಕೋಟಿ ಕನ್ನಡ ಜನರ ಹಿತಕ್ಕಾಗಿಯೂ, ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಅಭಿವೃದ್ಧಿಗಾಗಿಯೂ, ಅಂದು ದಿವಾನರಾಗಿದ್ದ **ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯನವರ** ಸಲಹೆಯಂತೆ ನಾಡಿನ ಹಿರಿಯರಿಂದ ೧೯೧೫ ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾಯಿತು. ಕನ್ನಡ ಸಾಹಿತ್ಯ ಪರಿಷತ್ತು ೪೮ ವರ್ಷಗಳ ಅವಧಿಯಲ್ಲಿ ಇದುವರೆವಿಗೆ ೪೩ ವಾರ್ಷಿಕ ಸಾಹಿತ್ಯ ಸಮ್ಮೇಳನಗಳನ್ನು, ಕರ್ಣಾಟಕದ ಹಲವು ನಗರಗಳಲ್ಲಿಯೂ, ಮದರಾಸು, ಬೊಂಬಾಯಿ, ಹೈದರಾಬಾದ್ ಮೊದಲಾದ ಭಾರತದ ಪ್ರಮುಖ ನಗರಗಳಲ್ಲಿಯೂ ನಡೆಸಿದೆ. ಕನ್ನಡದ ಸರ್ವತೋಮುಖ ಪ್ರಗತಿಗಾಗಿ, ಕರ್ಣಾಟಕ ಸಾಂಸ್ಕೃತಿಕ ಏಕೀಕರಣಕ್ಕಾಗಿ ಪರಿಷತ್ತು ಸತತವಾಗಿ ಪ್ರಯತ್ನಿಸುತ್ತಿದೆ. ಪ್ರಾಚೀನ ಗ್ರಂಥ ಪ್ರಕಟನೆ, ನೂತನ ಗ್ರಂಥರಚನೆ, ಕರ್ಣಾಟಕ ಕವಿಚರಿತೆಯ ನೂತನ ಪರಿಷ್ಕರಣ ಪ್ರಕಟನೆ, ಕನ್ನಡ-ಕನ್ನಡ ನಿಘಂಟು ನಿರ್ಮಾಣ ಮೊದಲಾದ ಮಹತ್ಕಾರ್ಯಗಳನ್ನು ಪರಿಷತ್ತು ಸಾಧಿಸಿದೆ. ಸ್ವತಂತ್ರ ಭಾರತಕ್ಕೆ ಪರಿಪೋಷಕವೆನಿಸುವ ಭಾರತೀಯ ಭಾಷೆಗಳ ಬಾಂಧವ್ಯವು ಅಧಿಕಗೊಳ್ಳುವ ಬಗೆಗೂ ಪರಿಷತ್ತು ಪ್ರಯತ್ನಿಸುತ್ತಿದೆ. ಕನ್ನಡ ಕಾವ ಮತ್ತು ಜಾಣ ಮೊದಲಾದ ಪರೀಕ್ಷೆಗಳನ್ನೂ, ಭಾಷಣ ಕಲಾಭಿವರ್ಧಕ ತರಗತಿಗಳನ್ನೂ ನಡೆಸುತ್ತಿರುವುದಲ್ಲದೆ, **ಪರಿಷತ್ಪತ್ರಿಕೆ** ಮತ್ತು **ಕನ್ನಡ ನುಡಿ**ಗಳೆಂಬ ನಿಯತ ಕಾಲಿಕ ಪತ್ರಿಕೆಗಳನ್ನೂ ಪರಿಷತ್ತು ಪ್ರಕಟಿಸುತ್ತಿದೆ. ಸಂಗೀತ, ನಾಟಕ, ಗಮಕ ಮೊದಲಾದ ಲಲಿತಕಲೆಗಳ ಉನ್ನತಿಗಾಗಿಯೂ ಪ್ರಯತ್ನ ನಡೆಸಿದೆ. ಪರಿಷತ್ತಿನಲ್ಲಿ ವಾಚನಾಲಯ, ಪುಸ್ತಕಾಲಯ ಮೊದಲಾದುವುಗಳು ಸಾರ್ವಜನಿಕರ ಉಪಯೋಗಕ್ಕಾಗಿ ನಡೆಯುತ್ತಿವೆ. ಪರಿಷತ್ತು ನಾಡಿನ ಬೇರೆ ಬೇರೆ ಸ್ಥಳಗಳಲ್ಲಿ ಸಾಹಿತ್ಯ, ವೇದಾಂತ, ವಿಜ್ಞಾನಗಳನ್ನು ಕುರಿತು ಉಪನ್ಯಾಸಗಳನ್ನೂ, ಪ್ರತಿ ವರ್ಷ **ರಾಷ್ಟ್ರಕವಿ ಕಾಳಿದಾಸ ಜಯಂತಿ**ಯನ್ನೂ ಏರ್ಪಡಿಸುತ್ತಿದೆ. ಪರಿಷತ್ತಿನಲ್ಲಿ ಒಂದು ಸ್ವತಂತ್ರವಾದ ಮುದ್ರಣಾಲಯವಿದೆ. ಹೀಗೆ ಹಲವು ರೀತಿಯಿಂದ ಪರಿಷತ್ತು ಕನ್ನಡಿಗರ ಕಾಮಧೇನುವೆಂಬಂತೆ, ನಾಡಿನ ಕಲ್ಪವೃಕ್ಷವೆಂಬಂತೆ ತನ್ನ ವಿನಮ್ರವಾದ ಸೇವೆಯನ್ನು ರಾಷ್ಟ್ರಕ್ಕೆ ಮತ್ತು ರಾಜ್ಯಕ್ಕೆ ಸಲ್ಲಿಸುತ್ತಿದೆ.

ಕನ್ನಡ ಸಾಹಿತ್ಯ ಪರಿಷತ್ತನ್ನು ಮೈಸೂರು ರಾಜಮನೆತನದವರೂ, ಮೈಸೂರು ಸರ್ಕಾರದವರೂ ಮಮತೆಯಿಂದ ನಡೆಸಿಕೊಂಡು ಬರುತ್ತಿದ್ದಾರೆ. ಕನ್ನಡ ನಾಡಿನ ಮಹಾಜನರು ಪರಿಷತ್ತಿನ ಬಗೆಗೆ ಹೆಚ್ಚು ಆಸಕ್ತಿ ವಹಿಸಿ ಅದನ್ನು ಪೋಷಿಸಿಕೊಂಡು ಬರುತ್ತಿದ್ದಾರೆ. ದಿವಂಗತರಾದ **ಡಾ|| ರಾಜೇಂದ್ರ ಪ್ರಸಾದರು** ತಾ|| ೧೪-೮-೧೯೫೮ ರಲ್ಲಿ ಇಲ್ಲಿಗೆ ಆಗಮಿಸಿ, ಪರಿಷತ್ತಿನ ಕಾರ್ಯಕಲಾಪಗಳ ಬಗ್ಗೆ ಹರ್ಷಿಸಿ ನಮ್ಮನ್ನು ಅನುಗ್ರಹಿಸಿ ಆಶೀರ್ವದಿಸಿರುತ್ತಾರೆ. ೧೯೪೦ ರಲ್ಲಿ ಪರಿಷತ್ತಿನ ರಜತೋತ್ಸವವು **ರಾಜರ್ಷಿ ಶ್ರೀಮನ್ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರವರ** ಸನ್ನಿಧಿಯಲ್ಲಿ ವೈಭವದಿಂದ ನಡೆದಿದೆ. ಈಗ ಪರಿಷತ್ತಿನ ಸುವರ್ಣ ಮಹೋತ್ಸವ ಸನ್ನಿಹಿತವಾಗಿದೆ.

ವಿಶ್ವದ ಹಿತೈಷಿಗಳೂ, ಭಾರತರತ್ನರೂ ಆದ **ತೇವು,** ಕನ್ನಡ ಸಾಹಿತ್ಯ ಪರಿಷತ್ತಿಗೆ ಸಂದರ್ಶನವಿತ್ತ **ಈ** ಶುಭದಿನದ ಸವಿನೆನಪಿಗಾಗಿ **ಈ ಮಹಾಸಂಸ್ಥೆಯ ಮಹಾಪೋಷಕರಾಗಿ** ಇರಲು ಕೃಪೆಮಾಡಿ ಅಂಗೀಕರಿಸಿ ನಮ್ಮನ್ನು ಆಶೀರ್ವದಿಸಬೇಕಾಗಿ ಪ್ರಾರ್ಥಿಸುತ್ತೇವೆ. ಪೂಜ್ಯರಾದ ತಮ್ಮ ತಪಃಪ್ರಭಾವದಿಂದಲೇ ಭಾರತಕ್ಕೆ ಒದಗಿದ್ದ ಚೀಣದ ಗಂಡಾಂತರ ತಪ್ಪಿದೆ; ವಿಶ್ವದಲ್ಲಿ ಭಾರತಕ್ಕೆ ಅಪಾರವಾದ ಕೀರ್ತಿಗೌರವಗಳು ಬಂದಿವೆ. ಭಾರತವು ಇಂದು ಸುಭದ್ರವಾಗಿದೆ.

ಸಚ್ಚಿದಾನಂದಸ್ವರೂಪನಾದ ಪರಮೇಶ್ವರನು ರಾಷ್ಟ್ರಪತಿಗಳಾದ ತಮಗೂ, ತಮ್ಮ ಕುಟುಂಬವರ್ಗದವರಿಗೂ ಇತೋಪ್ಯತಿಶಯವಾದ ಆಯುರಾರೋಗ್ಯ ಭಾಗ್ಯಗಳನ್ನು ಅನುಗ್ರಹಿಸಿ, ಭಾರತಕ್ಕೂ ವಿಶ್ವಕ್ಕೂ ತಾವು ಚಿರಕಾಲ ಮಾರ್ಗದರ್ಶನ ಮಾಡುತ್ತಿರುವಂತೆ ಅನುಗ್ರಹಿಸಲೆಂದು ಆ ದಯಾಮಯನನ್ನು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇವೆ.

**|| ಸತ್ಯಂ ಶಿವಂ ಸುಂದರಂ ||**

**ಬೆಂಗಳೂರು**
**೯-೧೦-೧೯೬೩**

ಇಂತು ತಮ್ಮ ಕೃಪಾಪಾತ್ರರಾದ,
**ಪರಿಷತ್ತಿನ ಅಧ್ಯಕ್ಷರು ಮತ್ತು ಸದಸ್ಯರು.**

# ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮

## ಸಾಹಿತ್ಯ ಪರೀಕ್ಷೆಗಳು

**ತಿಳಿವಳಿಕೆ ಪತ್ರ : ನಂ. ೨. (೩೦-೯-೧೯೬೩)**

ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ನಡೆಯುವ ೧೯೬೩ನೇ ಸಾಲಿನ ಸಾಹಿತ್ಯ ಪರೀಕ್ಷೆಗಳು ೧೯೬೪ನೇ ಜನವರಿ ಮಾಹೆಯಲ್ಲಿ ಈ ಕೆಳಗೆ ಕಾಣಿಸಿರುವ ಕೇಂದ್ರಗಳಲ್ಲಿ ನಡೆಯುತ್ತವೆ.

ಕೇಂದ್ರಗಳಿಂದಲೂ ಸ್ವಂತ ವ್ಯಾಸಂಗಿಗಳಿಂದಲೂ ಅಪೇಕ್ಷಾ ಪತ್ರಗಳನ್ನು ಸ್ವೀಕರಿಸುವ ಕೊನೆಯ ತಾರೀಖನ್ನು ೩೦-೯-೧೯೬೩ ರಿಂದ ೧೫-೧೦-೧೯೬೩ ರ ವರೆಗೆ ಮುಂದುವರಿಸಲಾಗಿದೆ.

**ಸೂಚನೆ:** ನಿಯಮಾವಳಿಗನುಸಾರವಾಗಿ ಕನಿಷ್ಠಪಕ್ಷ ೩೦ ವಿದ್ಯಾರ್ಥಿಗಳಾದರೂ ಒಂದು ಕೇಂದ್ರದಲ್ಲಿ ಪರೀಕ್ಷೆಗೆ ಕೂಡುವುದಾದರೆ ಅಂತಹ ಕೇಂದ್ರಗಳಲ್ಲಿ ಪರೀಕ್ಷೆಗಳನ್ನು ನಡೆಸಲಾಗುವುದು.

| ಪರೀಕ್ಷಾ ಕೇಂದ್ರಗಳು | ಜಿಲ್ಲೆ |
|---|---|
| (೧) ಹೊಸರಿತ್ತಿ | ಧಾರವಾಡ |
| (೨) ಬಸವಕಲ್ಯಾಣ | ಬೀದರ್ |
| (೩) ಭಾಲ್ಕಿ | ಬೀದರ್ |
| (೪) ಹುಂನಾಬಾದ್ | ಬೀದರ್ |
| (೫) ಅಮಿನಘಡ | ಬಿಜಾಪುರ |
| (೬) ಸಾಲೋಟಗಿ | ಬಿಜಾಪುರ |
| (೭) ಗೋಕಾಕ್ | ಬೆಳಗಾಂವಿ |
| (೮) ಯಡ್ರಾಮಿ | ಗುಲ್ಬರ್ಗ |
| (೯) ದೇವದುರ್ಗ (ಮುಸರ್‌ಕಲ್ ಕೇಂದ್ರ) | ರಾಯಚೂರು |
| (೧೦) ಸಂಪಖಂಡ | ಉತ್ತರ ಕನ್ನಡ |
| (೧೧) ಬನವಾಸಿ | ಉತ್ತರ ಕನ್ನಡ |
| (೧೨) ಬೆಂಗಳೂರು | ಬೆಂಗಳೂರು |

**ಕೆ. ಎಂ. ಕೃಷ್ಣರಾವ್**
ಎಸ್. ಶಂಕರಪ್ಪ
ಗೌರವ ಕಾರ್ಯದರ್ಶಿಗಳು

---

# ಕನ್ನಡದ ಸುದ್ದಿಗಳು

### ಬೆಂಗಳೂರು

ಸೆ. ೨೯ರಂದು ಬೆಂಗಳೂರಿನ ಅನುಭವ ಮಂಟಪದವರು ರವೀಂದ್ರ ಕಲಾಕ್ಷೇತ್ರದಲ್ಲಿ ರಾಜ್ಯದ ಹನ್ನೆರಡು ಮಂದಿ ಕಲಾವಿದರಿಗೆ ಪ್ರಶಸ್ತಿಗಳನ್ನಿತ್ತು ಗೌರವಿಸಿದರು. ಗೃಹ ಮಂತ್ರಿಗಳಾದ ಶ್ರೀ ಆರ್. ಎಂ. ಪಾಟೀಲರು ಅಧ್ಯಕ್ಷತೆ ವಹಿಸಿದ್ದರು. ಅರ್ಥಸಚಿವ ಶ್ರೀ ಬಿ. ಡಿ. ಜತ್ತಿಯವರು ಪ್ರಶಸ್ತಿಗಳನ್ನು ಹಂಚಿದರು. ಈ ಸಂದರ್ಭದಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಸ್ವಾಗತ ಭಾಷಣ ಮಾಡಿದರು.

ಸೆ. ೧೮ ರಂದು ಕನ್ನಡ ಥಿಯೇಟರ್ಸ್‌ನವರು ಕನ್ನಡ ಸಾಹಿತ್ಯ ಪರಿಷತ್ತಿನ ಸಹಾಯಾರ್ಥವಾಗಿ 'ಸತ್ಯ ಹರಿಶ್ಚಂದ್ರ' ನಾಟಕವನ್ನಾಡಿದರು. ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಪರಿಷತ್ತಿನ ಪರವಾಗಿ ಮಾತನಾಡಿ ನಾಟಕ ಸಂಸ್ಥೆಯ ಮಾಲೀಕರನ್ನು ವಂದಿಸಿದರು. ಶ್ರೀ ನಿಜಲಿಂಗಪ್ಪನವರು ಕನ್ನಡ ಸಾಹಿತ್ಯ ಪರಿಷತ್ತು ಕೈಕೊಂಡಿರುವ ನಿಘಂಟು ಇತ್ಯಾದಿ ಕಾರ್ಯಗಳ ಸಲುವಾಗಿ ಸರ್ಕಾರ ನೆರವು ನೀಡುವುದೆಂದು ಭರವಸೆ ಇತ್ತರು.

ಅ. ೫ ರಂದು ಕನ್ನಡ ಸಂಯುಕ್ತರಂಗದಾಶ್ರಯದಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಕನ್ನಡ ರಾಜ್ಯೋದಯ ದಿನವಾದ ನವೆಂಬರ್ ಒಂದರಂದು ಸರ್ಕಾರ ಸಾರ್ವತ್ರಿಕ ರಜಾ ಕೊಡಬೇಕೆಂದು ಒತ್ತಾಯಪಡಿಸಲಾಯಿತು. ಈ ಸಭೆಯಲ್ಲಿ ವಿಧಾನ ಸಭೆಯ ಸದಸ್ಯರಾದ ಶ್ರೀ ಎಸ್. ಗೋಪಾಲಗೌಡರೂ, ಶ್ರೀ ವಾಲಿ ಚೆನ್ನಪ್ಪನವರೂ ಭಾಷಣ ಮಾಡಿದರು. ಶ್ರೀ ಅ. ನ. ಕೃಷ್ಣರಾಯರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಗೋಪಾಲಗೌಡರು ಮಾತನಾಡುತ್ತಾ, ಕನ್ನಡ ಚಳುವಳಿಯಲ್ಲಿ ಒಮ್ಮತ, ಒಗ್ಗಟ್ಟು ಅಗತ್ಯವೆಂದು ಹೇಳಿದರು.

### ಬನಹಟ್ಟಿ

ಸೆ. ೨೬ ರಂದು ಶ್ರೀ ದೇವರ ದಾಸಿಮಾರ್ಯ ಪುರಾಣದ ಪ್ರಕಾಶನ ಸಮಾರಂಭವು ವೈಭವದಿಂದ ಜರುಗಿತು. ವಿಜಯಪುರ ಹಿರಿಯ ಮಠಾಧೀಶರಾದ ವಿದ್ಯಾವಾಚಸ್ಪತಿ ಹುಲ್ಯಾಳದ ಶ್ರೀ ಶ್ರೀ ಶಂಭುಲಿಂಗ ಮಹಾಸ್ವಾಮಿಗಳು ಅಧ್ಯಕ್ಷರಾಗಿದ್ದರು. ಮುಖ್ಯ ಅತಿಥಿಗಳಾಗಿ ಡಾ|| ಫ. ಗು. ಹಳಕಟ್ಟಿಯವರು ಆಗಮಿಸಿದ್ದರು.

### ಮುಂಬಯಿ

ಅ. ೮ ರಂದು ಕರ್ನಾಟಕದ ಪ್ರಸಿದ್ಧ ಸಾಹಿತಿಗಳೂ ವಿಶ್ವಕೋಶ ರಚನಕಾರರೂ ಆದ ಶ್ರೀ ಕೋಟಾ ಶಿವರಾಮ ಕಾರಂತರಿಗೆ ಮುಂಬೈ ಕನ್ನಡಿಗರು ಸನ್ಮಾನ ಸಮಾರಂಭ ಒಂದನ್ನೇರ್ಪಡಿಸಿ ೬,೧೬೧ ರೂ.ಗಳ ನಿಧಿಯನ್ನು ಸಮರ್ಪಿಸಿದರು. ಶ್ರೀ ಕಾರಂತರ ೬೧ ನೇ ಹುಟ್ಟು ಹಬ್ಬದ ಸಲುವಾಗಿ ಏರ್ಪಡಿಸಲಾಗಿದ್ದ ಈ ಸಮಾರಂಭದಲ್ಲಿ ಮುಂಬೈನ ಎಲ್ಲ ಕನ್ನಡ ಸಂಘಗಳು ಹಾರವನ್ನರ್ಪಿಸಿ ಕಾರಂತರ ಬಗ್ಗೆ ತಮ್ಮ ಗೌರವವನ್ನು ಸೂಚಿಸಿದವು. ಈ ಸತ್ಕಾರ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶ್ರೀ ವಿ. ಸೀತಾರಾಮಯ್ಯನವರು ಕಾರಂತರ ಸಾಹಿತ್ಯ ಸೇವೆಯನ್ನು ಮುಕ್ತ ಕಂಠದಿಂದ ಹೊಗಳಿದರು. ಶ್ರೀ ಕಾರಂತರು ಈ ಸನ್ಮಾನಕ್ಕಾಗಿ ವಂದನೆಯನ್ನರ್ಪಿಸಿ ಸಾಹಿತ್ಯ ಸೇವೆಯನ್ನು ಮುಂದುವರಿಸುವುದಾಗಿ ತಿಳಿಸಿದರು.

ದಿವಂಗತ ದ. ಬಾ. ಕುಲಕರ್ಣಿಯವರ ಕುಟುಂಬ ಪರಿಹಾರ ನಿಧಿಗೆ ಹಣವನ್ನು ಸಂಗ್ರಹಿಸಿ ಮೊದಲನೆಯದಾಗಿ ೫೦೦ ರೂಪಾಯಿಗಳನ್ನು ಕಳುಹಿಸಲಾಗಿದೆ. ಹೆಚ್ಚಿನ ಹಣ ಸಂಗ್ರಹಕ್ಕಾಗಿ ಕಾರ್ಯ ಭರದಿಂದ ಸಾಗಿದೆ.

### ತುಮಕೂರು

೪೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯು ಅ. ೪ ರಂದು ಸೇರಿ, ಈ ಸಮ್ಮೇಳನವನ್ನು ಡಿ. ೨೮, ೨೯ ಮತ್ತು ೩೦ ರ ದಿನಗಳಲ್ಲಿ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆಸಬೇಕೆಂದು ತೀರ್ಮಾನಿಸಿತು. ಸಮ್ಮೇಳನದ ಉದ್ಘಾಟನೆಗಾಗಿ ರಾಷ್ಟ್ರಪತಿ ಡಾ|| ಎಸ್. ರಾಧಾಕೃಷ್ಣನ್ ಅವರನ್ನು ಆಹ್ವಾನಿಸಬೇಕೆಂದೂ ನಿರ್ಧರಿಸಲಾಯಿತು.

### ಜಮಖಂಡಿ

ಇಲ್ಲಿನ ಆರ್ಟ್ಸ ಮತ್ತು ಸಾಯನ್ಸ್ ಕಾಲೇಜಿನ ಕರ್ನಾಟಕ ಸಂಘದ ಪ್ರಾರಂಭೋತ್ಸವವು ಸೆ. ದಿನಾಂಕ ೨೩ ರಂದು ನಡೆಯಿತು. ಧಾರವಾಡದ ಕರ್ನಾಟಕ ವಿಶ್ವ ವಿದ್ಯಾಲಯದ ಕನ್ನಡ ಬೋಧಕರಾದ ಪ್ರಾ|| ಶ್ರೀ ವೃಷಭೇಂದ್ರ ಸ್ವಾಮಿಗಳು 'ಕನ್ನಡ ಸಾಹಿತ್ಯದಲ್ಲಿ ರಸಿಕ ರಂಜನ' ಎಂಬ ವಿಚಾರವಾಗಿ ಭಾಷಣ ಮಾಡಿದರು.

# ಕನ್ನಡ ಸಾಹಿತ್ಯ ಪರಿಷತ್ತಿಗೆ ರಾಷ್ಟ್ರಾಧ್ಯಕ್ಷರ ಭೇಟಿಯ ಚಿತ್ರಗಳು

(೯-೧೦-೧೯೬೩)





ರಾಷ್ಟ್ರಾಧ್ಯಕ್ಷರು ರಾಜ್ಯಪಾಲರೊಡನೆ ಪರಿಷತ್ತಿಗೆ ಆಗಮಿಸಿದಾಗ ಸುಮಂಗಲಿಯರು ಆರತಿ ಎತ್ತಿದಾಗ ತೆಗೆದ ಚಿತ್ರ.





ಸಭಾಭವನದಲ್ಲಿ ಆಹ್ವಾನಿತರು ಮುಂಡಿಸಿರುವ ಚಿತ್ರ. ಪ್ರೊ|| ಡಿ. ಎಲ್. ನರಸಿಂಹಾಚಾರ್, ಪ್ರೊ|| ತೀ. ನಂ. ಶ್ರೀಕಂಠಯ್ಯ, ಡಾ|| ಎ. ಆರ್. ಕೃಷ್ಣಶಾಸ್ತ್ರಿಗಳು, ಶ್ರೀ ಜೆ. ಬಿ. ಮಲ್ಲಾರಾಧ್ಯ ಮತ್ತು ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಮೊದಲನೇ ಸಾಲಿನಲ್ಲಿ ಕುಳಿತಿದ್ದಾರೆ.

# ಸಂಗೀತ



ಆಸ್ಥಾನವಿದ್ವಾನ್ ಶ್ರೀ ಬಿ. ದೇವೇಂದ್ರಪ್ಪನವರು ತಮ್ಮ ಮಂಡಲಿಯವರ ಸಮೇತ ವಾದ್ಯ ಸಂಗೀತ ನಡೆಸುತ್ತಿದ್ದಾರೆ.






ರಾಷ್ಟ್ರಗೀತೆಯಾಗುತ್ತಿರುವಲ್ಲಿ ರಾಷ್ಟ್ರಾಧ್ಯಕ್ಷರು ಮತ್ತು ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪನವರು ನಿಂತಿರುವುದನ್ನು ನೋಡಬಹುದು.

# ಕನ್ನಡ ಸಾಹಿತ್ಯ ಪರಿಷತ್ತಿಗೆ ರಾಷ್ಟ್ರಾಧ್ಯಕ್ಷರ ಭೇಟಿ

## ಪರಿಷತ್ ಅಧ್ಯಕ್ಷರ ಸ್ವಾಗತ ಭಾಷಣ

**ದಿನಾಂಕ ೯-೧೦-೧೯೬೩ ರಂದು ಭಾರತರತ್ನ ಡಾ|| ಎಸ್. ರಾಧಾಕೃಷ್ಣನ್‌ರವರು ಕನ್ನಡ ಸಾಹಿತ್ಯ ಪರಿಷತ್ತಿಗೆ ಸಂದರ್ಶನವಿತ್ತ ಸಂದರ್ಭದಲ್ಲಿ ಪರಿಷದಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ನಿರೂಪಿಸಿದ ಸ್ವಾಗತ ಭಾಷಣ.**

ಶ್ರೀಮಂತಃ ಭೋ ರಾಷ್ಟ್ರಾಧ್ಯಕ್ಷ ಮಹಾಶಯಾಃ ಭಾರತ ರತ್ನಂ, ಡಾಕ್ಟರ್, ಇತ್ಯಾದಿ ಅನೇಕ ಮಧುರ ಬಿರುದಾಲಂಕೃತ ಶ್ರೀ ಸರ್ವಪಲ್ಲಿ ರಾಧಾಕೃಷ್ಣ ಮಹೋದಯಾಃ.

ಸುದಿನಮಿದಮಸ್ಮಾಕಂ ಯತ್ ಅಸ್ಮದೀಯ ಪ್ರಾರ್ಥನಾಮಂಗೀಕೃತ್ಯ ಭವಂತೋ ಮಹಾಂತಃ ಕೃಪಯಾ ಕರ್ಣಾಟಕ ಸಾಹಿತ್ಯ ಪರಿಷನ್ಮಂದಿರಂ ಏತಂ ಸಮಾಗತ್ಯ ಅಮೋಘೇನ ಭವತಾಂ ಸಂದರ್ಶನೇನ ಪಾತ್ರೀಕೃತ ವಂತೋ ಅಸ್ಮಾ‌ನ್ ಮಹತಃ ಸಂತೋಷಸ್ಯ.

ಅಸ್ಮಿನ್ನೇವ ಭವ್ಯಪ್ರಸಂಗೇ ಕರ್ಣಾಟಕ ರಾಜ್ಯಪಾಲ ಶ್ರೀ ಜಯಚಾಮರಾಜ ವಿಭವಃ, ಕರ್ಣಾಟಕ ರಾಜ್ಯ ಮುಖ್ಯ ಸಚಿವ ಶ್ರೀ ನಿಜಲಿಂಗಪ್ಪ ಪ್ರಭೃತಯೋ ಮಹೋದಯಾಶ್ಚ ಭವದ್ಭಿಃ ಸಹ ಅತ್ರ ಸಮಾಗತ್ಯ ಹರ್ಷವರ್ಧನೇನ ಅಸ್ಮಾ‌ನ್ ಅನುಗೃಹೀತವಂತಃ, ಕೃತಜ್ಞತಾ ಪೂರ್ವಕಂ ಏತದೌದಾರ್ಯಂ ಸ್ಮರಾಮಃ ಧನ್ಯಾ ವಯಮಿತಿ.

ಪುನರುಕ್ತಿರೇಷಾ ಭವತಿ ಯದನೇನ ಸುಯೋಗೇನ ಆನಂದತುಂದಿಲಹೃದಯಾಃ ವಯಂ ಭವತಾಂ ಸರ್ವೇಷಾಂ ಸುಸ್ವಾಗತಂ ಕರ್ತುಂ ಉತ್ಸಹಾಮಹೇ.

ಮಹಾಪುರುಷ ಸಂಶ್ರಯೋ ದೈವಾನುಗ್ರಹ ಹೇತುರಿತಿ ಶ್ರೀಮತಾಂ ಶಂಕರಾಚಾರ್ಯಾಣಾಂ ನಿರ್ವಚನಂ. ತದದ್ಯ ಜಗದ್ವಿಖ್ಯಾತ ತತ್ತ್ವಶಾಸ್ತ್ರ ವಿದುಷಾಂ ಭವತಾಂ, ಇತರೇಷಾಂ ಮಾನನೀಯ ಮಹೋದಯಾನಾಂಚ ಅತ್ರ ಅಭ್ಯಾಗಮಃ ಕರ್ಣಾಟಕ ಸಾಹಿತ್ಯ ಪರಿಷದಃ ಸಕಲವಿಧ ಶ್ರೇಯಸೇ ಕಾರಣಂ ಭವಿಷ್ಯತೀತಿ ಮನ್ಯಾಮಹೇ.

ಲೋಕೋತ್ತರ ಕೀರ್ತಿಶಾಲಿನಾಂ, ವಿಶ್ವಶಾಂತಿ ಸಾಧಕಾನಾಂ, ದಾರ್ಶನಿಕಕುಲತಿಲಕಾನಾಂ, ಶಿಕ್ಷಣ ಶಾಸ್ತ್ರ ವಿಶಾರದಾನಾಂ ಮಾನ್ಯಾನಾಂ ಭವತಾಂ ರಾಷ್ಟ್ರಾಧ್ಯಕ್ಷ ಪದವೀ ಸಮಲಂಕರಣಂ ಭಾರತೀಯ ಸಂಸ್ಕೃತೇರೇವ ಮಹಾಪ್ರಶಸ್ತಿಕಾರಣಂ ಇತಿ ಸಹರ್ಷಂ ವಿಜ್ಞಾಪಯಾ ಮಹೇ.

ಪರಮಪೂಜ್ಯರಾದ ರಾಷ್ಟ್ರಾಧ್ಯಕ್ಷರೇ, ರಾಜಋಷಿಗಳಾದ ರಾಜ್ಯಪಾಲರೇ, ಸನ್ಮಾನ್ಯ ಮುಖ್ಯ ಮಂತ್ರಿಗಳೇ, ಆಹ್ವಾನಿತ ಮಹಿಳೆಯರೇ ಮತ್ತು ಮಹನೀಯರೇ,

ಸ್ವತಂತ್ರ ಭಾರತದ ರಾಷ್ಟ್ರಪತಿಗಳೂ, ವಿಶ್ವವಿಖ್ಯಾತ ತತ್ತ್ವಜ್ಞಾನಿಗಳೂ, ವಿಶ್ವಶಾಂತಿ ಸಾಧಕರೂ, ಶಿಕ್ಷಣ ಶಾಸ್ತ್ರ ವಿಶಾರದರೂ, ಸುವಿಖ್ಯಾತ ದರ್ಶನಗ್ರಂಥ ಕರ್ತೃಗಳೂ ಆದ ಭಾರತರತ್ನ ಡಾ|| ಎಸ್. ರಾಧಾಕೃಷ್ಣನ್ ಅವರು ನಮ್ಮಗಳ ಪ್ರಾರ್ಥನೆಯನ್ನು ಕೃಪೆಮಾಡಿ ಅಂಗೀಕರಿಸಿ ಈ ಶುಭದಿನ ಕನ್ನಡ ಸಾಹಿತ್ಯ ಪರಿಷತ್ತಿಗೆ ಆಗಮಿಸಿರುವುದು ನಮ್ಮೆಲ್ಲರಿಗೂ ಹೆಚ್ಚಿನ ಸಂತೋಷವನ್ನುಂಟು ಮಾಡಿದೆ. ತಪೋಧನರಾದ ನಮ್ಮ ರಾಷ್ಟ್ರಪತಿಗಳನ್ನು ಕನ್ನಡ ಸಾಹಿತ್ಯ ಸರಸ್ವತೀ ಮಂದಿರವೂ, ಜನತಾ ವಿಶ್ವವಿದ್ಯಾನಿಲಯವೂ ಎನಿಸಿರುವ ಕನ್ನಡ ಸಾಹಿತ್ಯ ಪರಿಷತ್ತಿಗೆ ತುಂಬಿದ ಹೃದಯದಿಂದ ಸ್ವಾಗತಿಸುತ್ತೇನೆ. ಇದೇ ಸುಸಂದರ್ಭದಲ್ಲಿ ರಾಷ್ಟ್ರಪತಿಗಳ ಜತೆಯಲ್ಲಿ ಪರಿಷತ್ತಿಗೆ ಆಗಮಿಸಿರುವ ಮೈಸೂರಿನ ರಾಜ್ಯಪಾಲರಾದ ರಾಜರ್ಷಿ ಶ್ರೀ ಜಯಚಾಮರಾಜ ಒಡೆಯರನ್ನೂ, ಸನ್ಮಾನ್ಯ ಮುಖ್ಯ ಮಂತ್ರಿಗಳೂ, ಕರ್ಣಾಟಕದ ಹಿರಿಯ ಧುರೀಣರೂ ಆದ ಶ್ರೀಮಾನ್ ಎಸ್. ನಿಜಲಿಂಗಪ್ಪನವರನ್ನೂ ನಾನು ಅತ್ಯಂತ ವಿಶ್ವಾಸದಿಂದ ಸ್ವಾಗತಿಸುತ್ತೇನೆ. ಇಂದಿನ ಮಹಾಸಮಾರಂಭಕ್ಕೆ ನಮ್ಮ ಆಹ್ವಾನದಂತೆ ಆಗಮಿಸಿರುವ ಮಾನ್ಯ ಮಂತ್ರಿಗಳು, ಉನ್ನತಾಧಿಕಾರಿಗಳು, ಪತ್ರಿಕಾಕರ್ತರು, ಕಲಾವಿದರು, ಕವಿಪಂಡಿತರು,

ಮಾನ್ಯ ಮಹಿಳೆಯರು ಮತ್ತು ಮಹನೀಯರು ಇವರೆಲ್ಲರನ್ನೂ ನಾನು ಪರಿಷತ್ತಿನ ಪರವಾಗಿ ಸಹರ್ಷದಿಂದ ಸ್ವಾಗತಿಸುತ್ತೇನೆ.

ಗಂಗಾನದಿಯಂತೆ ನಿರ್ಮಲ ಜೀವನ ಉಳ್ಳವರೂ, ಹಿಮಾಲಯದಂತೆ ಉತ್ತುಂಗಧವಲ ಕೀರ್ತಿಯಿಂದ ವಿರಾಜಿಸತಕ್ಕವರೂ, ಕನ್ಯಾಕುಮಾರಿಯಂತೆ ಅಪ್ರತಿಮ ತಪಸ್ಸಿದ್ಧಿಯನ್ನುಳ್ಳವರೂ, ಹಿಂದೂ ಮಹಾಸಾಗರದಂತೆ ವಿಶಾಲ ಹೃದಯವುಳ್ಳವರೂ ಆದ, ಭಾರತರತ್ನ ಡಾ|| ಎಸ್. ರಾಧಾಕೃಷ್ಣನ್ ಅವರ ಆಗಮನದಿಂದ ಕನ್ನಡ ಸಾಹಿತ್ಯ ಪರಿಷತ್ತು ಅಪಾರವಾದ ಕೀರ್ತಿ ಗೌರವಗಳನು ಪಡೆದಿದೆ.

ಕನ್ನಡ ಸಾಹಿತ್ಯ ಪರಿಷತ್ತು ದಿವಂಗತ ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯನವರ ಆದೇಶದಂತೆ ೧೯೧೫ ರಲ್ಲಿ ಬೆಂಗಳೂರಿನಲ್ಲಿ ಕನ್ನಡ ನಾಡಿನ ಹಿರಿಯರಿಂದ ಸ್ಥಾಪಿಸಲ್ಪಟ್ಟಿತು. ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಉನ್ನತಿಯೇ ಪರಿಷತ್ತಿನ ಮುಖ್ಯವಾದ ಧ್ಯೇಯ. ಭಾರತದ ೧೪ ರಾಜ್ಯಾಂಗಬದ್ಧ ಭಾಷೆಗಳಲ್ಲಿ ಒಂದಾಗಿ, ಎರಡೂವರೆ ಕೋಟಿ ಕನ್ನಡಿಗರ ಮಾತೃಭಾಷೆಯಾಗಿ, ಎರಡು ಸಾವಿರ ವರ್ಷಗಳಷ್ಟು ಪ್ರಾಚೀನತೆಯನ್ನುಳ್ಳದ್ದಾಗಿ, ತಮಿಳು, ಮಲಯಾಳ, ತೆಲುಗು ಮೊದಲಾದ ದ್ರಾವಿಡ ವರ್ಗಕ್ಕೆ ಸೇರಿದ ಸೋದರ ಭಾಷೆಗಳಲ್ಲಿ ಒಂದಾಗಿ, ಸುಪ್ರೌಢವಾದ ಕಾವ್ಯ ಮತ್ತು ಶಾಸ್ತ್ರ ಗ್ರಂಥಗಳಿಂದ ಕೂಡಿದುದಾಗಿ, ಕನ್ನಡವು ಭರತಖಂಡದಲ್ಲಿಯೇ ಗಣ್ಯತೆಯನ್ನು ಪಡೆದಿದೆ: ಅಂತಹ ಕನ್ನಡದ ಸೇವೆಗಾಗಿ ೪೮ ವರ್ಷಗಳಿಂದ ಅಪಾರವಾಗಿ ಶ್ರಮಿಸುತ್ತಿರುವ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡಿಗರ ಕೀರ್ತಿ ಗೌರವಗಳಿಗೆ ಹಾಗೂ ಆದರಾಭಿಮಾನಗಳಿಗೆ ಕಾರಣವೆನಿಸಿದೆ. ಇಂದಿನ ವಿಶಾಲ ಮೈಸೂರು ಅಥವಾ ಕರ್ಣಾಟಕ ರಾಜ್ಯ ಸ್ಥಾಪನೆಯಲ್ಲಿ ಪರಿಷತ್ತಿನ ಪಾತ್ರವು ಪ್ರಮುಖವಾದುದೆಂಬುದನ್ನು ನಾಡಿನ ಮುಖಂಡರೆಲ್ಲರೂ ಒಕ್ಕೊರಲಿನಿಂದ ಒಪ್ಪಿಕೊಂಡಿದ್ದಾರೆ.

ಪರಿಷತ್ತು ಕನ್ನಡಿಗರ ಸರ್ವಾಂಗೀಣ ಪ್ರಗತಿಗಾಗಿ ಬಹುಮುಖ ಪ್ರಯತ್ನಗಳನ್ನು ಮಾಡುತ್ತಿದೆ. ಅದು ಮಾಡಬೇಕಾದ ಕಾರ್ಯಗಳು ಇನ್ನೂ ಬಹಳವಾಗಿವೆ. ಪರಿಷತ್ತಿಗೆ ಸಂಬಂಧಪಟ್ಟಂತೆ ಒಂದು ವಿಶಾಲ ಸಭಾಭವನ ಅಗತ್ಯವಾಗಿದೆ. ಪರಿಷತ್ತಿನಲ್ಲಿ ಒಂದು ಇತಿಹಾಸ ಸಂಶೋಧನಾಲಯ ಆಗಬೇಕಾಗಿದೆ. ಪರಿಷತ್ತು ಕೈಗೊಂಡಿರುವ 'ಕನ್ನಡ-ಕನ್ನಡ-ನಿಘಂಟು ಮತ್ತು ಪ್ರಾಚೀನ ಗ್ರಂಥಗಳ ಪ್ರಕಟಣೆಗಳಿಗೆ ಸರಕಾರದಿಂದಲೂ, ಸಾರ್ವಜನಿಕರಿಂದಲೂ ಹೆಚ್ಚು ಧನ ಸಹಾಯ ಬೇಕಾಗಿದೆ. ಪರಿಷತ್ತಿನ ಈ ಹೆಬ್ಬಯಕೆಗಳು ತಪೋಧನರಾದ ಭಾರತರತ್ನ ಡಾ|| ಎಸ್. ರಾಧಾಕೃಷ್ಣನ್ ಅವರ ಸಂದರ್ಶನ ಭಾಗ್ಯದ ಫಲವಾಗಿ ಬೇಗನೆ ನೆರವೇರುವುದೆಂದು ನಂಬುತ್ತೇನೆ. ಏಕೆಂದರೆ, ಮಹಾಪುರುಷರ ಸಂದರ್ಶನವು ಫಲಪ್ರದವೆಂದು ನಮ್ಮ ಶಾಸ್ತ್ರಗಳಲ್ಲಿ ಹೇಳಿದೆ.

ಪರಿಷತ್ತು ತನ್ನ ಗ್ರಂಥ ಪ್ರಕಟಣೆ, ಪತ್ರಿಕೆಗಳ ಪ್ರಕಟಣೆ, ಪ್ರಚಾರೋಪನ್ಯಾಸ, ವಾರ್ಷಿಕ ಸಮ್ಮೇಳನ ಮೊದಲಾದುವುಗಳ ಮೂಲಕವಾಗಿ ಸಮಗ್ರ ಕರ್ಣಾಟಕದಲ್ಲಿ



ಪರಿಷತ್' ಅಧ್ಯಕ್ಷ
ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು
ಸ್ವಾಗತ ಭಾಷಣ ಮಾಡುತ್ತಿದ್ದಾರೆ.

ಸಾಂಸ್ಕೃತಿಕ ನವಚೈತನ್ಯವನ್ನುಂಟು ಮಾಡಿದೆ. ಅಲ್ಲದೆ ರಾಷ್ಟ್ರಕವಿ ಕಾಳಿದಾಸನ ಜಯಂತಿಯನ್ನು ನಾಡಿನ ತುಂಬಾ ಆಚರಿಸುತ್ತಾ, ಭಾರತೀಯ ಜನತಾ ಭಾವೈಕತೆಗೆ ಕೂಡ ಪರಿಷತ್ತು ತುಂಬಾ ಶ್ರಮಿಸುತ್ತಿದೆ. ಸಮಗ್ರ ಕರ್ನಾಟಕದ ಅಭ್ಯುದಯದ ಹಾದಿಯಲ್ಲಿ ಪರಿಷತ್ತು ಕೈಗೊಂಡಿರುವ 'ಕನ್ನಡ-ಕನ್ನಡ ನಿಘಂಟು', ಸರಕಾರವು ಕೈಗೊಂಡಿರುವ 'ಕನ್ನಡ ವಸ್ತುಕೋಶ', ಸಂಗೀತದ ಅಕಾಡೆಮಿ ಕೈಗೊಂಡಿರುವ 'ಕನ್ನಡ ಕಲಾವಿದರ ಪ್ರೋತ್ಸಾಹ' ಈ ಕಾರ್ಯಗಳು ನಿಜಕ್ಕೂ ಮಿಗಿಲಾದುವು. ಈ ವರ್ಷ ತುಮಕೂರು ಜಿಲ್ಲಾ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆಯುವ ೪೪ ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವೂ, ಮುಂದಿನ ವರ್ಷದ ಜನವರಿಯಲ್ಲಿ ಶ್ರೀ ಪಂಪಾಕ್ಷೇತ್ರ ಮತ್ತು ಸಮಗ್ರ ಕರ್ಣಾಟಕದಲ್ಲಿ ನಡೆಯುವ ಶ್ರೀ ಪುರಂದರದಾಸರ ೪೦೦ ವರ್ಷಗಳ ಪುಣ್ಯಾರಾಧನಾ ಉತ್ಸವವೂ ಮಿಗಿಲಾದುವು. ಈ ಎರಡು ಮಹೋತ್ಸವಗಳನ್ನು ಪೂಜ್ಯ ರಾಷ್ಟ್ರಾಧ್ಯಕ್ಷರು ದಯೆಮಾಡಿ ಆಗಮಿಸಿ ಪ್ರಾರಂಭಿಸಿ ಅನುಗ್ರಹಿಸಬೇಕೆಂದು ಕನ್ನಡ ಜನತೆ ಹಾಗೂ ತತ್ಸಂಬಂಧವಾದ ಸಮಿತಿಗಳು ಅಪೇಕ್ಷಿಸಿವೆ.

ಪರಿಷತ್ತಿನಲ್ಲಿ ಆಗಬೇಕಾದ ಸಂಶೋಧನಾ ಶಾಖೆಗೆ ಮೈಸೂರು ಶ್ರೀಮನ್ಮಹಾರಾಜರೂ ರಾಜ್ಯಪಾಲರೂ ಆದ ಶ್ರೀ ಜಯಚಾಮರಾಜ ಒಡೆಯರು ಉದಾರವಾಗಿ ಧನ ಸಹಾಯ ಮಾಡಲು ಅಪ್ಪಣೆ ಕೊಡಿಸಿರುತ್ತಾರೆ. ಪರಿಷತ್ತು ಕೈಗೊಂಡಿರುವ ಕನ್ನಡ-ಕನ್ನಡ ನಿಘಂಟಿಗೆ ಮೈಸೂರು ಸರಕಾರದವರು ಉದಾರವಾಗಿ ಧನಸಹಾಯ ಮಾಡಲು ಕರಾರು ಮೂಲಕ ಒಪ್ಪಿಕೊಂಡಿರುತ್ತಾರೆ. ಈಗತಾನೇ ಕನ್ನಡವನ್ನು ನಮ್ಮ ಸರಕಾರವು ರಾಜ್ಯಭಾಷೆಯನ್ನಾಗಿ ಮಾಡಿ ಎಲ್ಲರ ಮನ್ನಣೆಗೂ ಪಾತ್ರವಾಗಿದೆ. ಈ ಸಂತೋಷದ ಸಮಯದಲ್ಲಿ ೧೯೫೮ ನೇ ಆಗಸ್ಟ್ ತಿಂಗಳು ೧೪ ರಂದು ಭಾರತದ ರಾಷ್ಟ್ರಪತಿಗಳೂ ಮಹಾನುಭಾವರೂ ಆದ ದಿವಂಗತ ಡಾ|| ರಾಜೇಂದ್ರ ಪ್ರಸಾದರು ಪರಿಷತ್ತಿಗೆ ಸಂದರ್ಶನವಿತ್ತು, ಇಲ್ಲಿನ ಕಾರ್ಯಕಲಾಪಗಳನ್ನು ಪರಾಮರ್ಶಿಸಿ, ಹರ್ಷಿಸಿ ತಮ್ಮ ಅಮೋಘ ಭಾಷಣದಿಂದ ನಮ್ಮನ್ನು ಅನುಗ್ರಹಿಸಿರುತ್ತಾರೆ ಎಂಬುದನ್ನು ಸ್ಮರಿಸಿಕೊಳ್ಳುತ್ತೇನೆ. ಮಹಾ ವಿದ್ವಾಂಸರೂ ಪೂಜ್ಯ ರಾಷ್ಟ್ರಾಧ್ಯಕ್ಷರೂ ಆದ ಡಾ|| ಎಸ್. ರಾಧಾಕೃಷ್ಣನ್ ಅವರು ಮೊನ್ನೆತಾನೇ "ಸಾಹಿತ್ಯವು ಆತ್ಮೋನ್ನತಿಯ ಸಾಧನ" ಎಂದು ತಿರುವನಂತಪುರದಲ್ಲಿ (ತಾ|| ೨೯-೯-೬೩) ಅಪ್ಪಣೆ ಕೊಡಿಸಿರುವ ವಿಷಯವನ್ನು ಇಲ್ಲಿ ಸ್ಮರಿಸಿಕೊಂಡು ಅದು ನಮ್ಮ ಪರಿಷತ್ತಿಗೂ ಉಪದೇಶದಂತಿದೆ ಎಂದು ಬಿನ್ನೈಸಿ ಮಹಾಮಹಿಮರಾದ ನಮ್ಮ ರಾಷ್ಟ್ರಾಧ್ಯಕ್ಷರನ್ನೂ, ರಾಜ್ಯಪಾಲರನ್ನೂ, ಮುಖ್ಯ ಮಂತ್ರಿಗಳನ್ನೂ, ಇಲ್ಲಿಗೆ ಆಗಮಿಸಿರುವ ಮುಖ್ಯ ಅತಿಥಿಗಳನ್ನೂ ಮಾನ್ಯ ಮಹಿಳೆಯರು ಮತ್ತು ಮಹನೀಯರನ್ನೂ ನಾನು ಮಮತೆಯಿಂದ ಸ್ವಾಗತಿಸುತ್ತೇನೆ.

|| ಸಿರಿಗನ್ನಡಂ ಗೆಲ್ಗೆ-ಬಾಳ್ಗೆ ||

---



ರಾಷ್ಟ್ರಾಧ್ಯಕ್ಷರಿಗೆ ಬಿನ್ನವತ್ತಳೆಯ ಅರ್ಪಣೆ: ಶ್ರೀ ಜಿ. ಶ್ರೀನಿವಾಸನ್ನರು ಶ್ರೀಗಂಧದ ಕರಂಡವನ್ನೂ ಡಾ|| ಕೆ. ಎಂ. ಕೃಷ್ಣರಾಯರು ಚೌಕಟ್ಟನ್ನೂ ಅರ್ಪಿಸುತ್ತಿದ್ದಾರೆ.

# ಸಂಪಾದಕೀಯ

## ಪರಿಷತ್ತಿಗೆ ರಾಷ್ಟ್ರಾಧ್ಯಕ್ಷರ ಸಂದರ್ಶನ

ರಾಷ್ಟ್ರಪತಿ ಡಾ|| ಎಸ್. ರಾಧಾಕೃಷ್ಣನ್ ಅವರು ಪರಿಷತ್ತಿನ ಬಿನ್ನಹಕ್ಕೆ ಮನ್ನಣೆಯನ್ನಿತ್ತು ದಿನಾಂಕ ೯-೧೦-೬೩ರ ಸಂಜೆ ೬-೧೫ ಗಂಟೆಗೆ ರಾಜ್ಯಪಾಲ ಶ್ರೀ ಜಯಚಾಮರಾಜ ಒಡೆಯರು, ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ಸಹಿತ ಪರಿಷತ್ತಿಗೆ ಸಂದರ್ಶನವನ್ನಿತ್ತರು. ಪರಿಷತ್ತಿನ ಅಧ್ಯಕ್ಷರು ಮತ್ತು ಸದಸ್ಯರು ಪೂರ್ಣಕುಂಭ, ವೇದಘೋಷ ಮತ್ತು ಮಂಗಳ ವಾದ್ಯಗಳೊಡನೆ ಪೂಜ್ಯ ಅಧ್ಯಕ್ಷರನ್ನು ಸ್ವಾಗತಿಸಿದರು. ರಾಷ್ಟ್ರಾಧ್ಯಕ್ಷರ ಸಂದರ್ಶನಾರ್ಥವಾಗಿ ಸದಸ್ಯರು ಮತ್ತು ವಿದ್ವಾಂಸರು ಪರಿಷತ್ತಿನ ಸಭಾಭವನದಲ್ಲಿ ಕಿಕ್ಕಿರಿದು ನೆರೆದಿದ್ದರು. ಅಧ್ಯಕ್ಷರು ಪರಿಷತ್ತಿನಲ್ಲಿ ನಡೆಯುತ್ತಿರುವ ಕಾರ್ಯಕಲಾಪಗಳನ್ನು ಕೇಳಿ ತಮ್ಮ ಅಮೋಘವಾದ ಉಪದೇಶ ಭಾಷಣದಿಂದ ಅನುಗ್ರಹಿಸಿದರು. ಪರಿಷತ್ತಿನ ಪರವಾಗಿ ಪೂಜ್ಯ ಅಧ್ಯಕ್ಷರಿಗೆ ಗಂಧದ ಕರಂಡದಲ್ಲಿ ಬಿನ್ನಹ ಪತ್ರವನ್ನು ಅರ್ಪಿಸಲಾಯಿತು. ಸಾಹಿತ್ಯ ಮತ್ತು ಸಾಹಿತಿ ಕುರಿತು ಅಧ್ಯಕ್ಷರು ತಮ್ಮ ಅಮೋಘವಾದ ಭಾಷಣದಲ್ಲಿ ನಿರೂಪಿಸಿರುತ್ತಾರೆ. ಅದರ ವಿವರಗಳನ್ನೆಲ್ಲಾ ಇದೇ ಸಂಚಿಕೆಯಲ್ಲಿಯೇ ಬೇರೆ ಕಡೆ ಪ್ರಕಟಿಸಲಾಗಿದೆ. ಪರಿಷತ್ತಿನ ಪ್ರಕಟನೆಗಳನ್ನೂ ಪರಿಷತ್ತಿನ ಪರವಾಗಿ ಇಂಗ್ಲೀಷಿನಲ್ಲಿ ಒಂದು ಮಾನಪತ್ರವನ್ನೂ ಅಧ್ಯಕ್ಷರಿಗೆ ಅರ್ಪಿಸಲಾಯಿತು. ಶರಣ ಸಾಹಿತ್ಯ ಸಂಪಾದಕರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಪರವಾಗಿ ಅವರ ಗ್ರಂಥಮಾಲೆಯ ಪ್ರಕಟನೆಯನ್ನೂ ಶ್ರೀಗಂಧದ ಹಾರವನ್ನೂ ಶ್ರೀ ಎಚ್. ಎಸ್. ರೇಣುಕಾ ಪ್ರಸಾದರು ಅಧ್ಯಕ್ಷರಿಗೆ ಅರ್ಪಿಸಿದರು. ಮುಖ್ಯವಾಗಿ ಐದು ವರ್ಷಗಳ ಅವಧಿಯಲ್ಲಿ ದಿವಂಗತ ಡಾ|| ರಾಜೇಂದ್ರ ಪ್ರಸಾದರು (೧೮-೮-೧೯೫೮) ಜಗದ್ವಿಖ್ಯಾತರಾದ ಡಾ|| ಎಸ್. ರಾಧಾಕೃಷ್ಣನ್ ಅವರು (೯-೧೦-೧೯೬೩) ಪರಿಷತ್ತಿಗೆ ಸಂದರ್ಶನವಿತ್ತದ್ದು ಪರಿಷತ್ತಿನ ಇತಿಹಾಸದಲ್ಲಿ ಒಂದು ಅಮೋಘವಾದ ವಿಚಾರವೆಂದು ಹೇಳಬಹುದು.

## ಅಶ್ಲೀಲ ನಾಟಕಗಳ ಮೇಲೆ ಹತೋಟಿ

ಅಶ್ಲೀಲ ನಾಟಕಗಳ ಮೇಲೆ ಹತೋಟಿಯನ್ನಿಟ್ಟುಕೊಳ್ಳಲು ೧೮೭೬ ನೇ ಇಸವಿಯ ಕಾನೂನು ಬೊಂಬಾಯಿ ಕರ್ನಾಟಕ, ಕೊಡಗು, ಬಳ್ಳಾರಿ ಜಿಲ್ಲೆಗಳಲ್ಲಿ ಈಗಾಗಲೇ ಜಾರಿಯಲ್ಲಿದೆ. ಮದರಾಸು, ಕರ್ನಾಟಕದಲ್ಲಿಯೂ ಇದೇ ರೀತಿಯ ಇನ್ನೊಂದು ಕಾನೂನು ಜಾರಿಯಲ್ಲಿದೆ. ಆದರೆ, ಹಳೆಯ ಮೈಸೂರು ಮತ್ತು ಹೈದರಾಬಾದು ಕರ್ನಾಟಕ ವಿಭಾಗಗಳಲ್ಲಿ ಮಾತ್ರ ಅಂತಹ ಯಾವ ಕಾನೂನೂ ಇಲ್ಲ. ೧೯೫೪ ರಲ್ಲಿ ಮದ್ರಾಸು ಹೈಕೋರ್ಟಿನಲ್ಲಿ ಈ ಕಾನೂನಿಗೆ ಸಂಬಂಧಪಟ್ಟ ಒಂದು ವಿಷಯ ವಿಚಾರಣೆಗೆ ಬಂದು ಈ ಕಾನೂನಿನ ಆರನೆಯ ಕ್ಲಾಜು ರಾಜ್ಯಾಂಗಕ್ಕೆ ವಿರೋಧವಾಗಿದೆಯೆಂದು ಅಭಿಪ್ರಾಯಪಡಲಾಯಿತು. ಅಲಹಾಬಾದು ಮತ್ತು ಪಂಜಾಬು ಹೈಕೋರ್ಟಿನವರೂ ಇದೇ ರೀತಿ ತೀರ್ಮಾನ ಕೊಟ್ಟಿದ್ದಾರೆ. ಇದನ್ನು ಗಮನದಲ್ಲಿಟ್ಟು, ಕೇಂದ್ರ ಸರ್ಕಾರವು ನಾಟಕಗಳ ನಿಯಂತ್ರಣಕ್ಕಾಗಿ ಮತ್ತೊಂದು ಕಾನೂನನ್ನು ಮಾಡಲು ಸೂಚಿಸಿತ್ತು. ಹೀಗೆ ಪೂರ್ವಭಾವಿ ಅಂಶಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಈಗ ಮೈಸೂರು ಸರ್ಕಾರದವರು ಈ ಹೊಸ ಕಾನೂನನ್ನು ತಂದಿದ್ದಾರೆ. ಇಡೀ ರಾಜ್ಯದಲ್ಲಿ ನಾಟಕಗಳ ನಿಯಂತ್ರಣಕ್ಕೆ ಒಂದು ಏಕರೂಪತೆಯ ಕಾನೂನು ಮಾಡುವ ಉದ್ದೇಶದಿಂದ ಇದನ್ನು ತರಲಾಗಿದೆ. ಈ ವಿಧೇಯಕವನ್ನು ಮಂಡಿಸುತ್ತ ಮಾನ್ಯ ಗೃಹಮಂತ್ರಿಗಳು ಈ ರೀತಿ ತಿಳಿಸಿದ್ದಾರೆ :-

"ಯಾರಿಗೆ ಈ ಆಜ್ಞೆಯಿಂದ ತೊಂದರೆಯಾಗುವುದೋ ಅಂಥವರು ತಮ್ಮ ಅಭಿಪ್ರಾಯವನ್ನು ಸೂಚಿಸಲು ಸಾಕಷ್ಟು ಕಾಲಾವಕಾಶ ಕೊಟ್ಟಿದೆ. ಆದ್ದರಿಂದ ಈ ವಿಧೇಯಕದಲ್ಲಿರುವ ನಿರ್ಬಂಧಗಳು ಹಾಗೂ ನಿಯಂತ್ರಣಗಳು ಅತ್ಯಂತ ನ್ಯಾಯವಾದುವು ಮತ್ತು ಯೋಗ್ಯವಾದುವು. ಆಕ್ಷೇಪಾರ್ಹ ನಾಟಕವೆಂದರೆ ಯಾವುದು ಎಂಬುದನ್ನು ಬಹಳ ಸ್ಪಷ್ಟವಾಗಿ ವಿವರಿಸಲಾಗಿದೆ. ಇಂತಹ ನಾಟಕಗಳನ್ನು ಅಧಿಕಾರಿಗಳು ತಕ್ಷಣ ನಿರ್ಬಂಧಿಸುವುದಿಲ್ಲ. ಇದರ ಬಗ್ಗೆ ಮೊದಲು ನಾಟಕ ಕಂಪೆನಿಯವರಿಗೆ ನೋಟೀಸು ಕೊಡುವರು. ಅವರ ಅಭಿಪ್ರಾಯ ತಿಳಿದುಕೊಳ್ಳುವರು. ಆಮೇಲೆ ಆಜ್ಞೆ ಹೊರಡಿಸುವರು. ಈ ಆಜ್ಞೆ ಸರಿಯಾಗಿಲ್ಲವೆಂದು ಅನಿಸಿದರೆ ನಾಟಕ ಕಂಪೆನಿಯವರು ಹೈಕೋರ್ಟಿಗೆ ಅಪೀಲು ಮಾಡಿಕೊಳ್ಳಬಹುದು." ಎಂದರು.

ಇಂಗ್ಲೆಂಡಿನಲ್ಲಿಯೂ ನಾಟಕ ಕಂಪೆನಿಗಳ ಮೇಲೆ ಇದೇ ರೀತಿ ೧೮೪೩ ರಿಂದಲೂ ನಿರ್ಬಂಧಗಳಿವೆ. ಮೂಲಭೂತ

ಹಕ್ಕುಗಳಿಗೆ ಧಕ್ಕೆ ತರುವ ವಾದವನ್ನು ನಿರಾಕರಿಸುತ್ತ ಗೃಹಸಚಿವರು—"ಮೂಲಭೂತ ಹಕ್ಕುಗಳೆಂದರೆ, ಮನಸ್ಸಿಗೆ ಬಂದಂತೆ ಮಾಡುವುದಲ್ಲ. ಅಗತ್ಯವಾದಾಗ, ಅನಿವಾರ್ಯವೆನಿಸಿದಾಗ ಮೂಲಭೂತ ಹಕ್ಕುಗಳನ್ನು ನಿಯಂತ್ರಿಸಲು ಸರಕಾರಕ್ಕೆ ಅಧಿಕಾರವಿದೆ. ಸಾರ್ವಜನಿಕರ ಹಿತದೃಷ್ಟಿಯಿಂದ, ಅಷ್ಟೇ ಅಲ್ಲ ಕಲೆ ಮತ್ತು ಸಾಹಿತ್ಯಗಳ ಹಿತದ ದೃಷ್ಟಿಯಿಂದ, ಈ ರೀತಿ ನಿಯಂತ್ರಿಸಬೇಕಾದ ಸಂದರ್ಭಗಳು ಬರಬಹುದು" ಎಂದಿದ್ದಾರೆ.

ವಿಧಾನ ಸಭೆಯಲ್ಲಿ ಈ ವಿಧೇಯಕದ ಬಗ್ಗೆ ನಡೆದ ಕೂಲಂಕಷವಾದ ಚರ್ಚೆಯನ್ನೂ ನಾವು ಗಮನಿಸಿದ್ದೇವೆ. ಆಂಗ್ಲ ಸಾಹಿತ್ಯದಲ್ಲಿ ಅಡಿಸನ್ ಎಂಬ ಪ್ರಬಂಧಕಾರನು ಪಿಕ್‌ವಿಕ್ ಎಂಬ ವ್ಯಕ್ತಿಯ ಬಾಯಿಯಲ್ಲಿ ಹೇಳಿಸಿರುವಂತೆ "Much might be said on both sides" ಎಂಬುದು ಇಲ್ಲಿ ನೆನಪಿಗೆ ಬರುತ್ತದೆ. ಎಂದರೆ ಸರ್ಕಾರ ಕಾನೂನು ತಂದಿರುವುದೂ ಸರಿ; ವಿಧಾನ ಸಭೆಯಲ್ಲಿ ಅದನ್ನು ವಿರೋಧಿಸುವುದೂ ಸರಿ. ಕಡೆಗೆ ಈ ವಿಧೇಯಕವನ್ನು ವಿಮರ್ಶೆ ಮಾಡಿ ತಿಳಿಸಲು "ಜಾಯಿಂಟ್ ಸೆಲೆಕ್ಟ್ ಕಮಿಟಿ"ಗೆ ಸೂಚಿಸಿರುವುದೂ ಸರಿ. ಆದರೆ, ಯಾವುದೋ ಕಾನೂನು ಅದರ ಪ್ರಯೋಗದಲ್ಲಿ ಸಿಹಿ ಕಹಿಯಾಗುವುದುಂಟು. ಯಾವುದೇ ನಾಟಕ-ಅಷ್ಟೇಕೆ ಯಾವುದೇ ಮಾತು-ಅದರ ಪ್ರಯೋಗದಿಂದ ಅಶ್ಲೀಲ, ಶ್ಲೀಲವಾಗುತ್ತದೆ. ಇದನ್ನು ಸರಿಯಾದ ರೀತಿಯಲ್ಲಿ ಆಚರಣೆಗೆ ತರಬೇಕಾದರೆ ಕಷ್ಟವಿದೆ. ಕಾನೂನಿನ ಬಲವುಳ್ಳ ಅಧಿಕಾರಿ ಕಾನೂನನ್ನೇ ದುರುಪಯೋಗಪಡಿಸಬಹುದು. ಜನಾದರಣೆಯ ಬಲವುಳ್ಳ ನಾಟಕ ಕಂಪೆನಿ ನಾಟಕವನ್ನೇ ದುರುಪಯೋಗಪಡಿಸಬಹುದು. ಆದ್ದರಿಂದ ಸರ್ಕಾರದ ಕಾನೂನಿಗೂ, ನಾಟಕ ಕಂಪೆನಿಗೂ ಮಧ್ಯಗತವಾಗಿ ಕೆಲವು ಗಣ್ಯ ಸಾಹಿತಿಗಳಿಂದ ಕೂಡಿದ ಒಂದು ಸಮಿತಿಯ ಅಭಿಪ್ರಾಯವನ್ನು ಪಡೆದು ನಡೆಯಲು ಉಭಯತಾಪಿ ಅವಕಾಶವಿರಬೇಕು. ಇದರಿಂದ ಸರ್ಕಾರಕ್ಕೂ ರಕ್ಷಣೆ, ನಾಟಕ ಕಂಪೆನಿಗೂ ರಕ್ಷಣೆ. ಇಂತಹ ರಕ್ಷಣೆಯಿಂದ ನಾಟಕ ಸಾಹಿತ್ಯವು ಉನ್ನತವಾದ ಮತ್ತು ಉತ್ತಮವಾದ ಮಾರ್ಗದಲ್ಲಿ ಬೆಳೆಯಲು ಅವಕಾಶವಿರುತ್ತದೆ. ನಾಟಕ ಸಾಹಿತ್ಯವು ಪ್ರಭುಸಮ್ಮಿತೆಯಾಗುವುದಕ್ಕೆ ಬದಲಾಗಿ ಕಾಂತಾಸಮ್ಮಿತೆಯಾಗಿ ಬೆಳೆಯುತ್ತದೆ. ಇನ್ನೂ ಮುಂದೆ ಹೋಗಿ ಮಿತ್ರಸಮ್ಮಿತೆಯಾಗಿ ಬೆಳೆದು, ಸರ್ಕಾರಕ್ಕೂ, ನಾಟಕ ಕಂಪೆನಿಗೂ ಮೈತ್ರೀಭಾವಕ್ಕೆ ಅವಕಾಶವುಂಟಾದರೆ ಅದು ಉಭಯತ್ರರಿಗೂ ಸರ್ವಶ್ರೇಷ್ಠವಾದ ಮಾರ್ಗವಲ್ಲವೇ?

## ಶ್ರೀಮಾನ್ ಹೆಚ್. ಸಿ. ದಾಸಪ್ಪನವರು

ಮೈಸೂರು ರಾಜ್ಯದ ವಿಖ್ಯಾತ ರಾಜಕಾರಣಿಗಳೂ ಮೈಸೂರು ಸರ್ಕಾರದ ಮಾಜಿ ಕೈಗಾರಿಕೆ ಮಂತ್ರಿಗಳೂ ಆದ ಶ್ರೀಮಾನ್ ಹೆಚ್. ಸಿ. ದಾಸಪ್ಪನವರು ಈಗ ಕೇಂದ್ರ ಸರ್ಕಾರದಲ್ಲಿ ರೈಲ್ವೆ ಸಚಿವ ಸ್ಥಾನವನ್ನು ಅಲಂಕರಿಸಿದ್ದಾರೆ. ಇವರು ಅಚ್ಚಕನ್ನಡಿಗರು. ದಿವಂಗತ ರಾವ್ ಸಾಹೇಬ್ ಲೋಕಸೇವಾನಿರತ ಹೆಚ್. ಚೆನ್ನಯ್ಯನವರ ಪುತ್ರರು. ದಿವಂಗತ ಕೆ. ಹೆಚ್. ರಾಮಯ್ಯನವರ ಅಳಿಯಂದಿರು. ಇವರು ಮೈಸೂರು ನಗರದಲ್ಲಿ ಪ್ರಸಿದ್ಧ



ಅಡ್ವೋಕೇಟರಾಗಿ ಬಹಳಕಾಲ ಕೆಲಸ ಮಾಡಿ, ಪೂಜ್ಯ ಗಾಂಧೀಜೀಯವರ ಆಶೀರ್ವಾದಬಲದಿಂದ ಸ್ವಾತಂತ್ರ್ಯ ಸಮರದಲ್ಲಿ ಪ್ರಾಮುಖ್ಯ ಪಾತ್ರ ವಹಿಸಿದರು. ಮೈಸೂರು ರಾಜಕೀಯವು ವಿಕಾಸಗೊಂಡು ಕಾಂಗ್ರೆಸ್ ನೇತೃತ್ವದಲ್ಲಿ ಮೈಸೂರು ರಾಜ್ಯವು ಪ್ರಜಾರಾಜ್ಯವಾಗಿ ಪರಿವರ್ತನೆಯಾಗುವುದರಲ್ಲಿ ಸರ್ವಸ್ವವನ್ನೂ ಧಾರೆಯೆರೆದ ಮಹನೀಯರಲ್ಲಿ ಮುಂಚೂಣಿಗೆ ಸೇರಿದವರು ಇವರು.

ಶ್ರೀಮಾನ್ ದಾಸಪ್ಪನವರು ಮೈಸೂರು ಸರ್ಕಾರದ ಕೈಗಾರಿಕೆ ಮಂತ್ರಿಗಳಾಗಿ ಮಾಡಿದ ಅತುಳವಾದ ಸೇವೆಯನ್ನು ಮರೆಯುವಂತಿಲ್ಲ. ಈಗ ಕೇಂದ್ರ ಸರ್ಕಾರದ

ರೈಲ್ವೆ ಮಂತ್ರಿಗಳಾಗಿ ಇಡೀ ಭಾರತದ ವಿಶಾಲ ಕ್ಷೇತ್ರದಲ್ಲಿ ಉತ್ತಮ ರೀತಿಯಲ್ಲಿ ಸೇವೆ ಸಲ್ಲಿಸಿ ಮೈಸೂರಿನ ಹಾಗೂ ಕನ್ನಡಿಗರ ಕೀರ್ತಿ ಸಂಪನ್ನತೆಯನ್ನು ಹೆಚ್ಚಿಸುವುದರಲ್ಲಿ ಸಂಶಯವಿಲ್ಲ. ಇವರು ಲೋಕಸಭೆಯ ಎಸ್ಟಿಮೇಟ್ಸ್ ಸಮಿತಿಯ ಅಧ್ಯಕ್ಷರಾಗಿ ಭರತಖಂಡದ ನಾನಾ ಅಭಿವೃದ್ಧಿ ಕೇಂದ್ರಗಳನ್ನು ಪ್ರತ್ಯಕ್ಷ ನೋಡಿದ್ದಾರೆ. ಇಷ್ಟು ಅನುಭವವುಳ್ಳ ಶ್ರೇಷ್ಠ ರಾಜಕಾರಣಿಯು ಕೇಂದ್ರ ಸರ್ಕಾರದ ಉನ್ನತ ವಾತಾವರಣದಲ್ಲಿ ಬೆಳಗುತ್ತಿರುವುದು ಮೈಸೂರಿನ ಜನತೆಗೆ ಹೆಮ್ಮೆಯನ್ನುಂಟುಮಾಡಿದೆ. ಮೈಸೂರು ರಾಜ್ಯಕ್ಕೆ ಆಗಬೇಕಾದ ರೈಲ್ವೆ ಸೌಕರ್ಯಗಳನ್ನು ಅವರು ನಡೆಸಿಕೊಡುವರೆಂದು ನಂಬಿದ್ದೇವೆ. ಇವರ ಆದರ್ಶಪತ್ನಿ ಶ್ರೀಮತಿ ಯಶೋಧರಮ್ಮ ದಾಸಪ್ಪನವರು ಮೈಸೂರು ಸರ್ಕಾರದ ಸಮಾಜ ಕಲ್ಯಾಣ ಸಚಿವರಾಗಿರುವುದು ಮತ್ತಷ್ಟು ಶೋಭಾಯಮಾನವಾಗಿದೆ.

---

## ರಾಜ್ಯಪಾಲರ ಆಗಮನ



ರಾಜ್ಯಪಾಲರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರು ವಿದೇಶ ಪ್ರವಾಸದಿಂದ ೩-೧೦-೬೩ರಂದು ಹಿಂತಿರುಗಿದ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರು ಹೂಮಾಲೆ ಹಾಕಿ ಗೌರವಿಸುತ್ತಿರುವ ಚಿತ್ರ.

ಸಂಪಾದಕರು: ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು-೧೮

# ಸಾದರ ಸ್ವೀಕಾರ

**ನಿಮ್ಮ ಮೋಟಾರು** (ದಕ್ಷಿಣ ಭಾಷಾ ಸಂಸ್ಥೆಯ ಪ್ರಕಟನೆ): ಅನುವಾದಕರು: ಶ್ರೀ ಕೆ. ನಾಗರಾಜ; ಪ್ರಕಾಶಕರು: ಪ್ರಗತಿ ಪ್ರಕಟನಾಲಯ, ಗಾಂಧಿನಗರ, ಬೆಂಗಳೂರು; ಸೈಜು ೧/೮ ಡೆಮ್ಮಿ; ಪುಟ ೩೪೬; ಬೆಲೆ ರೂ. ೩.

*** ಚಂದ್ರಶೇಖರ**: ಲೇಖಕರು: ಶ್ರೀ ಬಿ. ವೆಂಕಟಾಚಾರ್ಯ; ಪ್ರಕಾಶಕರು: ಸಾಹಿತ್ಯ ಮಂದಿರ, ಬೆಂಗಳೂರು-೧೯; ಸೈಜು ೧/೮ ಕ್ರೌನ್; ಪುಟ ೧೯೪; ಬೆಲೆ ರೂ. ೩.

**ಅಡವಿಯ ಹುಡುಗಿ**: ಲೇಖಕರು: ಶ್ರೀ ಬಿ. ವೆಂಕಟಾಚಾರ್ಯ; ಪ್ರಕಾಶಕರು: ಸಾಹಿತ್ಯ ಮಂದಿರ, ಬೆಂಗಳೂರು-೧೯; ಸೈಜು ೧/೮ ಕ್ರೌನ್; ಪುಟ ೧೧೫; ಬೆಲೆ ರೂ. ೧-೫೦ ನ.ಪೈ.

**ವಿಷವೃಕ್ಷ**: ಲೇಖಕರು: ಶ್ರೀ ಬಿ. ವೆಂಕಟಾಚಾರ್ಯ; ಪ್ರಕಾಶಕರು: ಸಾಹಿತ್ಯ ಮಂದಿರ, ಬೆಂಗಳೂರು-೧೯; ಸೈಜು ೧/೮ ಕ್ರೌನ್; ಪುಟ ೨೦೧; ಬೆಲೆ ರೂ. ೩-೫೦ ನ.ಪೈ.

*** ಸಹಕಾರ ಪಂಚತಂತ್ರ**: ಲೇಖಕರು: ಶ್ರೀ ಕುಮಾರ ವೆಂಕಣ್ಣ; ಪ್ರಕಾಶಕರು: ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು; ಸೈಜು ೧/೮ ಡೆಮ್ಮಿ; ಪುಟ ೩೮.

*** ಕೂಡಿ ದುಡಿಯೋಣ**: ಲೇಖಕರು: ಶ್ರೀ ಕುಮಾರ ವೆಂಕಣ್ಣ; ಪ್ರಕಾಶಕರು: ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ; ಸೈಜು ೧/೮ ಡೆಮ್ಮಿ; ಪುಟ ೩೮.

**Mysore State Businessmen's Third Conference Souvenir, 1963**: Issued by the Mysore Chamber of Commerce, Bangalore.

*** ಶಿವಾದ್ವೈತ ದರ್ಶನ**: ಲೇಖಕರು: ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ. ಯವರು, ಗೂಳೂರು; ಸೈಜು ೧/೮ ಕ್ರೌನ್; ಪುಟ ೨೭೦; ಬೆಲೆ ರೂ. ೪.

*** ಬಿಲ್ವಬಿನ್ನಾಣ**: ಲೇಖಕರು: ಶ್ರೀ ಜ. ಚ. ನಿ. ಯವರು, ಗೂಳೂರು; ಸೈಜು ೧/೮ ಕ್ರೌನ್; ಪುಟ ೫೫; ಬೆಲೆ ೭೫ ನ.ಪೈ.

*** ಯುಗಮಹಿಳೆ ದುಗ್ಗಳೆ**: ಲೇಖಕರು: ಶ್ರೀ ಜ. ಚ. ನಿ. ಯವರು, ಗೂಳೂರು; ಸೈಜು ೧/೮ ಕ್ರೌನ್; ಪುಟ ೫೨; ಬೆಲೆ ರೂ. ೧.

*** ಸುಳಿಗಾಳಿ** (ಲಲಿತ ಪ್ರಬಂಧ): ಲೇಖಕರು: ಶ್ರೀ ಬಿ. ಆರ್. ವಾಡಪ್ಪಿ; ಪ್ರಕಾಶಕರು: ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೧೦೨; ಬೆಲೆ ರೂ. ೧.

**ಮಲೆನಾಡು**: (ಸ್ವಾತಂತ್ರ್ಯೋತ್ಸವ ಸಂಚಿಕೆ-೧೯೬೩).

*** ಭಕ್ತ ಶಬರಿ** (ಗೀತ ನಾಟಕ): ಲೇಖಕರು: 'ತಿರುಕ'; ಪ್ರಕಾಶಕರು: ಅನಾಥ ಸೇವಾಶ್ರಮ, ಮಲ್ಲಾಡಿಹಳ್ಳಿ; ಸೈಜು ೧/೮ ಕ್ರೌನ್; ಪುಟ ೪೦; ಬೆಲೆ ೫೦ ನ.ಪೈ.

**ಲಿಂಗಸಕೀಲಗಳು**: ಲೇಖಕರು: ಶ್ರೀ ಮುರಿಗೆಪ್ಪಾ ವೀರಪ್ಪ ಎಲಿ, ಹಂಸಭಾವಿ; ಪ್ರಕಾಶಕರು: ಮೃತ್ಯುಂಜಯ ಮಹಾಸ್ವಾಮಿಗಳು, ಶ್ರೀ ಮುರುಘಾಮಠ; ಸೈಜು ೧/೮ ಕ್ರೌನ್; ಪುಟ ೭೯; ಬೆಲೆ ರೂ. ೧.

*** ಅವ್ಯಕ್ತ ದರ್ಶನ**: ಲೇಖಕರು: ದಿ. ಸರ್ ಜಗದೀಶ ಚಂದ್ರ ಬೋಸ; ಪ್ರಕಾಶಕರು: ಶ್ರೀ ಅರವಿಂದ ಗ್ರಂಥಾಲಯ, ಚಡಚಣ; ಸೈಜು ೧/೮ ಕ್ರೌನ್; ಪುಟ ೯೬; ಬೆಲೆ ರೂ. ೧-೨೫ ನ.ಪೈ.

*** ದತ್ತಪುತ್ರ**: ಲೇಖಕರು: ಶ್ರೀ ಎನ್. ನಾರಾಯಣ ಬಲ್ಲಾಳ; ಪ್ರಕಾಶಕರು: ರೇಖಾ ಪ್ರಕಾಶನ, ಉಡುಪಿ; ಸೈಜು ೧/೮ ಕ್ರೌನ್; ಪುಟ ೫೫; ಬೆಲೆ ರೂ. ೧.

**ಕನಕದಾಸ ಕೀರ್ತನ ಸ್ವರಾವಳಿ**: ಲೇಖಕರು: ಶ್ರೀ ಎಚ್. ಕೆ. ಅಶ್ವತ್ಥನಾರಾಯಣ ಶಾಸ್ತ್ರಿ; ಪ್ರಕಾಶಕರು: ವಿದ್ವಾನ್ ಶ್ರೀ ಕೆ. ಮಧುಸೂದನರಾವ್, ಬೆಂಗಳೂರು ನಗರ; ಪುಟ ೧೧೨; ಬೆಲೆ ರೂ. ೩-೫೦ ನ.ಪೈ.

*** ಹೃದಯ ತರಂಗ**: ಲೇಖಕರು: 'ಪುಲಿಕೇಶಿ' (ಪಂಡಿತ ಕೆ. ಪಿ. ಶಿವಲಿಂಗಯ್ಯ); ಪ್ರಕಾಶಕರು: ವಾಗ್ವಿಲಾಸ ಪ್ರಕಾಶನ, ರಾಜಾಜಿನಗರ, ಬೆಂಗಳೂರು; ಸೈಜು ೧/೮ ಕ್ರೌನ್; ಪುಟ ೪೨; ಬೆಲೆ ರೂ. ೧.

*** ಹೂವು-ಹಣ್ಣು**: ಲೇಖಕರು: ಶ್ರೀ ಹೊಸಮನಿ ಸಂಗಮೇಶ, ಹುನಗುಂದ; ಸೈಜು ೧/೮ ಕ್ರೌನ್; ಪುಟ ೬೯; ಬೆಲೆ ರೂ. ೧.

*** ಕ್ಷಯಮಾಸನಿರ್ಣಯಮೀಮಾಂಸಾ**: ಲೇಖಕರು: ವಿದ್ವಾನ್ ಶ್ರೀ ಕೆ. ವಾಸುದೇವ ಸೋಮಯಾಜೀ, ಮೈಸೂರು; ಸೈಜು ೧/೮ ಡೆಮ್ಮಿ; ಪುಟ ೧೦೪; ಬೆಲೆ ರೂ. ೨-೫೦ ನ.ಪೈ.

*** ವೀರಶೈವ ತ್ರೈಮಾಸಿಕ ಪತ್ರಿಕೆ, ಧಾರವಾಡ**; ಏಪ್ರಿಲ್, ಮೇ ಮತ್ತು ಜೂನ್, ೧೯೬೩; ವಾರ್ಷಿಕ ಚಂದಾ ರೂ. ೫-೦೦; ಸಂಪಾದಕರು: ಶ್ರೀ ಡಿ. ಸಿ. ಪಾವಟೆ, ಎಂ.ಎ.

*** ಶ್ರೀ ರಾಘವೇಂದ್ರ ಸ್ವಾಮಿಗಳು**: ಲೇಖಕರು: ಶ್ರೀ ಮೂಲರಘುಪತಿ; ಪ್ರಕಾಶಕರು: ಶ್ರೀ ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ, ನಂಜನಗೂಡು; ಸೈಜು ೧/೮ ಕ್ರೌನ್; ಪುಟ ೧೬೬; ಬೆಲೆ ರೂ. ೨.

*** ಮಂತ್ರಾಲಯ ಪ್ರಭು**: ಲೇಖಕರು: ರಾಜಾ ಶ್ರೀಗುರುರಾಜಾಚಾರ್ಯರು; ಪ್ರಕಾಶಕರು: ಶ್ರೀ ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ, ನಂಜನಗೂಡು; ಸೈಜು ೧/೮ ಫುಲ್ ಸ್ಕೇಪ್; ಪುಟ ೫೬; ಬೆಲೆ ೫೦ ನ.ಪೈ.

*** ಜಗದ್ಗುರು ಶ್ರೀ ರಾಘವೇಂದ್ರ ಸ್ವಾಮಿಜಿ** (ಹಿಂದಿ): ಲೇಖಕರು: ಡಾ॥ ಎಚ್. ಕೆ. ವೇದವ್ಯಾಸಾಚಾರ್ಯ; ಅನುವಾದಕರು: ಶ್ರೀರಮಣ; ಪ್ರಕಾಶಕರು: ಶ್ರೀ ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ, ನಂಜನಗೂಡು; ಸೈಜು ೧/೮ ಕ್ರೌನ್; ಪುಟ ೧೪೪ + ೪; ಬೆಲೆ ರೂ. ೨.

**ನಿಬಂಧಮಾಲಾ – ಭಾಗ ೨**: (ರವೀಂದ್ರನಾಥ ಠಾಕೂರ್): ಅನುವಾದಕರು: ಶ್ರೀ ಎ. ಆರ್. ಕೃಷ್ಣಶಾಸ್ತ್ರಿ, ಪ್ರಕಾಶಕರು: ಸಾಹಿತ್ಯ ಅಕಾಡೆಮಿ, ನವದೆಹಲಿ; ಸೈಜು ೧/೮ ಡೆಮ್ಮಿ; ಪುಟ ೪೪೦; ಬೆಲೆ ರೂ. ೬-೭೫ ನ.ಪೈ.

---

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತದೆ.

Reg. No. B. G. 4—October 1963

Licensed to Post without pre-payment. License No 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಚಾಮರಾಜಪೇಟೆ, ಬೆಂಗಳೂರು-೧೮.




# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೬] ಸಂಪಾದಕರು: ಡಿ. ಆರ್. ರಾಮಯ್ಯ, ಬಿ.ಎ. [ಸಂಚಿಕೆ ೧೧

## "ಕನ್ನಡ ಕುಲ ಪುರೋಹಿತ" ಶ್ರೀ ಆಲೂರು ವೆಂಕಟರಾಯರಿಗೆ ಪರಿಷತ್ತಿನ ಸನ್ಮಾನ



ನವೆಂಬರ್ ೧ ರಂದು ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ರಾಜ್ಯೋತ್ಸವವನ್ನು ಆಚರಿಸಿದ ಸಂದರ್ಭದಲ್ಲಿ ಶ್ರೀ ಆಲೂರು ವೆಂಕಟರಾಯರನ್ನು ಸನ್ಮಾನಿಸಲಾಯಿತು. ಅಂದಿನ ಈ ಚಿತ್ರದ ಮಧ್ಯದಲ್ಲಿ ಶ್ರೀ ಆಲೂರರಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

ಸಂಪುಟ ೨೬ ] ನವೆಂಬರ್ ೧೯೬೩ [ ಸಂಚಿಕೆ ೧೧

# ವಿಷಯ ಸೂಚಿಕೆ

# ಕನ್ನಡನುಡಿ



ಸಂಪುಟ ೨೬ ] ನವೆಂಬರ್ ೧೯೬೩ [ ಸಂಚಿಕೆ ೧೧

## ಕನ್ನಡಿಗರ ಕೂಗು

ಕವಿ: ಶ್ರೀ ಡಿ. ಆರ್. ರಾಮಯ್ಯ

೧

ಕಿವಿಯ ಕೊಟ್ಟು ಕೇಳು |
ಕನ್ನಡಿಗರ ಕೂಗು ||
ಕಣ್ಣ ಬಿಟ್ಟು ನೋಡು
ಕನ್ನಡಿಗರ ಬಾಳು || ಪ ||

ಹೊತ್ತು ಮುಳುಗಿ ಮೂಡುವಾಗ,
ಕತ್ತಲಾಗಿ ಬೆಳಗುವಾಗ,
ತುತ್ತನುಂಡು ತೂಗುವಾಗ,
ಚಿತ್ರದ ಏಕಾಂತದಲ್ಲಿ ಮತ್ತೆ ಮತ್ತೆ ಮೊಳಗಿತು-
ಕಿವಿಯ ಕೊಟ್ಟು ಕೇಳು,
ಕನ್ನಡಿಗರ ಕೂಗು !

ತುಂಗಭದ್ರೆಯಡಿಗಳಲ್ಲಿ,
ಭಂಗಗೊಂಡು ಬಾಳಿನಲ್ಲಿ,
ಅಂಗಲಾಚಿ ಮೋಸದಲ್ಲಿ,
ರಂಗರುಧಿರದಲ್ಲಿ ಅದ್ದಿ ಕತ್ತಿ ಏಟು ಬಿದ್ದಿತು-
ಕತ್ತನೆತ್ತಿ ನೋಡು,
ಕನ್ನಡಿಗರ ಬಾಳು !

ಕಾವೇರಿಯ ತೀರದಲ್ಲಿ,
ನೋವು ತುಂಬಿ ಬದುಕಿನಲ್ಲಿ,
ಸಾವುಗೂಡಿ ದುಗುಡದಲ್ಲಿ,
ಆವೇಶದ ಗುಂಡಿನೇಟು ಕಾವೇರಿಸಿ ಸಿಡಿಯಿತು-
ಕಣ್ಣ ಬಿಟ್ಟು ನೋಡು
ಕನ್ನಡಿಗರ ಬಾಳು !

ಏನು ಕೂಗು, ಏನು ಮೊಳಗು,
ಏನು ಹೊಡೆತ, ಏನು ಸಿಡಿತ,
ನಾನು ನೀನು ಎಂಬ ಭೇದ,
ಹಾನಿಯಲ್ಲಿ ಸುಳಿದು ಕಳೆದು ದೀನದೆಸೆಯ ತೋರಿತು-
ಮೌನವಾಗಿ ಬೀಡು
ಕನ್ನಡಿಗರ ನಾಡು !

ಬಟ್ಟೆ, ಭಾಷೆ, ಶಾಸ್ತ್ರ, ರಾಜ್ಯ,
ಉಟ್ಟು, ನುಡಿದು, ನಡೆದು, ಪಡೆದು,
ಬಿಟ್ಟವೇಕೆ ಕೆಟ್ಟವೇಕೆ,
ಮೆಟ್ಟಬರಲು ದಾಸ್ಯವೃತ್ತಿ ಆಂಗ್ಲರಂತೆ ನಡೆದೆವು-
ಕಟ್ಟನಿಲಲು ಸೇನೆ
ಹುಟ್ಟಬಂತು ಬೇನೆ !

ನಮ್ಮ ಬಟ್ಟೆ ಎಲ್ಲ ಬೆರೆತು,
ನಮ್ಮ ಭಾಷೆ ಎಲ್ಲ ಕಲೆತು,
ನಮ್ಮ ಶಾಸ್ತ್ರ ಸಿದ್ಧಾಂತ,
ನಮ್ಮನಗಲಿ ಮಿಶ್ರವಾಗಿ ರೂಪುಗೆಟ್ಟು ನಿಂತಿದೆ-
ಸುಮ್ಮನಿರುವೆವೇಕೆ
ಇಂಥ ಬಾಳು ಸಾಕೆ !

೨

ಸಾಕೆನ್ನ ಬೇಡ ಮಗು, ನಿರ್ಮಲದ ಮಡಿಲಲ್ಲಿ,
ಸಾಕಾರಗೊಂಡು ಬಾ, ನಾಡಿನಲ್ಲಿ,
ಸ್ವೀಕರಿಸು ಹಿರಿಯತನ ನೀಕರಿಸು ದುಗುಳತನ,
ಬೇಕೆಮಗೆ ನಮ್ಮತನ - ಕನ್ನಡತನ !

ತಮಿಳರು, ಕೇರಳ, ಆಂಧ್ರ, ಮರಾಠರು,
ಮಮತೆಯ ಬಲದಲಿ ಎಲ್ಲರು ಕೂಡಿ,
ತನ್ಮಯ ಸಂಸ್ಕೃತಿ ಉಳಿಸಿಹರು,
ಒಮ್ಮನದಿಂದಲಿ ನಡೆದಿಹರು–

ಕನ್ನಡ ಜನರಿದ ನೋಡುವರೆ,
ಚಿನ್ನದ ನಾಡೊಳು ಬಾಳುವರೆ,
ಕನ್ನಡತನವನು ಸಾಧಿಸಿ ಮುನ್ನ
ನನ್ನಿಯ ಪಡೆಯುವುದೆಂದಿಗೆ ಬನ್ನ !

ಎಲ್ಲಿಹುದು ಕನ್ನಡದ ಉಡುಪು,
ಎಲ್ಲಿಹುದು ಕನ್ನಡದ ತೊಡಪು,
ಎಲ್ಲಿಹುದು ಕನ್ನಡದ ಹಾವ,
ಎಲ್ಲಿಹುದು ಕನ್ನಡದ ಭಾವ!

ಮನೆಯಲ್ಲಿ ಮಠದಲ್ಲಿ ಪರಕೀಯ ದೇಶದಲಿ,
ನೆನೆಯುವರೆ ಕನ್ನಡದ ಆಜನ್ಮಸಿರಿಯ,
ಅನುನಯದಿ ಕನ್ನಡಕೆ ಉಸಿರಿತ್ತ ಸುಧೆಯ,
ಮನವರಿತು ಭಾರತಕೆ ಕನ್ನಡದ ಗುರಿಯ !

ಹ್ಯಾಟು ಬೂಟೇನಿರಲಿ, ಕ್ರಾಪು ನೆಕ್‌ಟೈ ಇರಲಿ,
ಪ್ಯಾಂಟು ಬುಷ್‌ಕೋಟಿರಲಿ, ಏನೆ ಇರಲಿ,
ರಾಕ್ ಎನ್ನು ರೋಲಿರಲಿ, ಕುಡಿತ ಕುಣಿತಗಳಿರಲಿ,
ಕನ್ನಡದ ನಡೆನುಡಿಗಳೆಮಗೆ ಬರಲಿ!

ಇಂಗ್ಲೀಷು ತಮಿಳಿರಲಿ, ಹಿಂದಿ ಉರ್ದುಗಳಿರಲಿ,
ಆಂಧ್ರ ಕೇರಳ ಜನರ ಭಾಷೆಗಳು ಇರಲಿ,
ಇಂದ್ರನೀಲಗವಿರಲಿ ಚಂದ್ರಬಿಂಬವೆ ಇರಲಿ,
ಸುಂದರದ ಕನ್ನಡದ ಸೊಬಗು ಬರಲಿ !

ಸಾಹೇಬರಾಗಿರಲಿ, ಆಳುಕಾಳಾಗಿರಲಿ,
ಸಾವಿರದ ಸರದಾರ ಕೂಲಿಯಾಗಿರಲಿ,
ಅಮೃತಪನೆ ಪಡೆದಿರಲಿ, ಭಿಕ್ಷುಕನೆ ಆಗಿರಲಿ,
ಅಮರದುಂದುಭಿಯಂತೆ ಕನ್ನಡವು ನಿಲಲಿ !

ವ್ಯಾಪಾರ ಕಟ್ಟೆಗಳು, ವ್ಯವಹಾರ ಕ್ಷೇತ್ರಗಳು,
ಸಿದ್ಧಾಂತ ಕೂಟಗಳು, ನಾಮಧೇಯಗಳು,
ಎಲ್ಲಕ್ಕು ಕನ್ನಡದ ಮುದ್ರೆಯೊತ್ತಿರಲಿ,
ಎಲ್ಲೆಲ್ಲು ಕನ್ನಡದ ಸೇವಕರು ಬರಲಿ !

೩

ಐದು ಜನ, ಒಂದೆ ಮನ,
ಐದು ಬಟ್ಟೆ, ಒಂದೆ ನಿಷ್ಠೆ,
ಐದರಲ್ಲಿ ಒಂದು ಕಂಡು,
ಒಂದರಲ್ಲಿ ಐದು ಕಂಡು,
ಒಂದೆ ಕೈಯ ಬೆರಳಿನಂತೆ ಒಂದಾದರು
ಕನ್ನಡಿಗರು ;

ಕನ್ನಡ ಸರ್ಕಾರದಲ್ಲಿ,
ಕನ್ನಡ ಸಾಹಿತ್ಯದಲ್ಲಿ,
ಕನ್ನಡ ಸಿದ್ಧಾಂತದಲ್ಲಿ,
ಅಂದವರಿತು ಬಾಳುವ–
ಒಂದುಗೂಡಿ ಮೆರೆಯುವ !

---

# ಸಾವಿತ್ರಿ

ಮೂಲ: ಡಾ॥ ವಾಸುದೇವ ಶರಣಜೀ ಅಗ್ರವಾಲ

ಅನು: ಶ್ರೀ ರಾ. ಸಾ. ರತನ್

ಸಾವಿತ್ರಿಯ ಕಥೆ ಬಹಳ ಪ್ರಸಿದ್ಧವಾಗಿದೆ. ಆಕೆ ಯಮನನ್ನು ತನ್ನ ವಶವರ್ತಿಯಾಗಿ ಮಾಡಿಕೊಂಡು ತನ್ನ ಪತಿ ಸತ್ಯವಾನನನ್ನು ಮತ್ತೆ ಬದುಕಿಸಿದಳು. ಲೋಕ ಕಥೆಗೆ ಸಂಬಂಧಿಸಿದಂತೆ ನೋಡಿದಲ್ಲಿ ಅದು ಸ್ವಯಂ ತನ್ನಲ್ಲೇ ಒಂದು ಸುಂದರ ರಚನೆಯಾಗಿದೆ. ವಟಸಾವಿತ್ರಿ ಪರ್ವದಂದು ಸ್ತ್ರೀಯರು ವ್ರತವಿದ್ದು ಈ ಕಥೆ ಹೇಳಿ-ಕೇಳುತ್ತಾರೆ.

ಆದರೆ ಸಾವಿತ್ರಿ ಉಪಾಖ್ಯಾನದ ಮತ್ತೊಂದು ಪಕ್ಷ ಕೂಡ ಉಂಟು. ಇದಕ್ಕೆ ವೈದಿಕ ಪೀಠಿಕೆ ಇತ್ತು. ಎಂದೋ ಪೂರ್ವಯುಗದಲ್ಲಿ, ಸೃಷ್ಟಿವಿದ್ಯೆಯ ತತ್ವಗಳನ್ನು ಉಪಾಖ್ಯಾನಗಳ ರೂಪದಲ್ಲಿ ಅಚ್ಚುಹಾಕಲಾದ ಕಾಲದಲ್ಲಿ, ವೈದಿಕ ಸೂರ್ಯನನ್ನು ಲಕ್ಷ್ಯಮಾಡಿ ಈ ಸಾವಿತ್ರಿ-ಉಪಾಖ್ಯಾನದ ಪ್ರಥಮ ಬೀಜಾರೋಪಣವಾಯಿತು. ಅದರ ಅಲ್ಪ-ಸ್ವಲ್ಪ ವ್ಯಾಖ್ಯೆ ಈ ರೀತಿಯಿದೆ:

ಸಾವಿತ್ರಿ ಸವಿತಾದೇವತೆಯ ಶಕ್ತಿ. ವೇದಗಳಲ್ಲಿ ಸಾವಿತ್ರಿ ದೇವತೆಯನ್ನು ಅನೇಕ ಪ್ರಕಾರದಿಂದ ವರ್ಣಿಸಲಾಗಿದೆ. ಈ ವಿರಾಟ ಜಗತ್ತಿನಲ್ಲಿ ಸೂರ್ಯನು ಸವಿತಾ-ದೇವತೆ. ಸವಿತಾದ ವಿಷಯವನ್ನು ಕುರಿತು ಹೀಗೆನ್ನಲಾಗಿದೆ-'ಸವಿತಾ ವೈ ದೇವಾನಾಂ ಪ್ರಸವಿತಾ'. ದೇವತೆಗಳನ್ನು ಕ್ರಿಯಾಶೀಲರನ್ನಾಗಿ ಮಾಡುವ ಒಂದು ಕೇಂದ್ರೀಯ ತತ್ವವು ಸವಿತಾ. ಈ ಸೌರಮಂಡಲದಲ್ಲಿ ಅಗ್ನಿ, ವಾಯು, ಜಲ ಮುಂತಾದ ಎಷ್ಟು ದಿಕ್‌ಪದಾರ್ಥಗಳಿವೆಯೋ ಅವುಗಳ ಮಧ್ಯೆ ಈ ಸೂರ್ಯ ಅಥವಾ ಸವಿತಾ-ದೇವತೆಯಿದೆ. ಈ ವಿಶ್ವದಲ್ಲಿ ಎಷ್ಟು ಕ್ರಿಯಾ-ಶಕ್ತಿ ಅಥವಾ ಸಂಚಾಲನ-ಶಕ್ತಿಯಿದೆಯೋ, ಅದು ಕಟ್ಟಕಡೆಗೆ, ಸೂರ್ಯನಿಂದಲೇ ಪ್ರಾಪ್ತವಾಗುತ್ತದೆ. ಸೂರ್ಯನೇ ತನ್ನ ಮಂಡಲಕ್ಕೆ ಅಧಿಷ್ಠಾತೃ. ಸೂರ್ಯನ ಯಾವ ಅನಂತ ಶಕ್ತಿ ನಮಗೆ ನಿತ್ಯವೂ ರಶ್ಮಿಗಳ ರೂಪದಲ್ಲಿ ಪ್ರಾಪ್ತವಾಗುತ್ತಿದೆಯೋ ಅದೇ ಸಾವಿತ್ರಿ. ಸಾವಿತ್ರಿ ಶಕ್ತಿಯಿಂದ ಸೂರ್ಯನ ಸ್ವರೂಪವು ನಿತ್ಯ ಪ್ರಕಾಶಮಾನವಾಗಿರುತ್ತದೆ. ಸಾವಿತ್ರಿಯಿಲ್ಲದೆ ಸೂರ್ಯನ ಪ್ರತಿಸ್ವಿಕ ಅಥವಾ ನಿಜರೂಪವು ಕೃಷ್ಣ ಅಥವಾ ಕಪ್ಪು. 'ಆಕೃಷ್ಣೇ ರಜಸಾ ವರ್ತಮಾನ' ಎಂಬ ಮಂತ್ರದಲ್ಲಿ ಇದೇ ಹೇಳಿದೆ. ಸೂರ್ಯನ ಈ ಶಕ್ತಿಯು ಸಾವಿತ್ರಿ ರೂಪದಲ್ಲಿ ಸೂರ್ಯನೊಡನೆ ಪತಿ-ಪತ್ನಿಭಾವದಿಂದ ಕಲ್ಪಿತಗೊಂಡಿದೆ. ಸೂರ್ಯ ಅಥವಾ ಸವಿತಾ ಅನ್ನು ವೈದಿಕ ಪರಿಭಾಷೆಯಲ್ಲಿ ಸತ್ಯ ಎಂದು ಹೇಳುತ್ತಾರೆ. ಸೂರ್ಯನಿಗಿರುವ ಸಂಜ್ಞೆ ಸತ್ಯನಾರಾಯಣ. ಸೂರ್ಯನ ಸತ್ಯಾತ್ಮಕ ತೇಜವು, ಸೃಷ್ಟಿಯ ಆದಿಯಲ್ಲಿ ಈ ವಿಶ್ವವು ಜಲಮಯವಾಗಿದ್ದ ಸ್ಥಿತಿಯ ನಡುವೆ ಪ್ರಕಟಗೊಂಡಿತು. ಇಂದಿಗೂ ಕೂಡ ಅದು ಅಖಂಡ ತೇಜಸ್ಸಿನಿಂದ ತಪಿಸುತ್ತಿದೆ. ಸತ್ಯ ಅಂದರೆ ಅದಕ್ಕೆ ತನ್ನದೊಂದು ಕೇಂದ್ರವಿರಬೇಕು ಮತ್ತು ತನ್ನ ಅನುಶಾಸನ ಅಥವಾ ಸಂಯಮದಿಂದ ತನ್ನ ಸುತ್ತಮುತ್ತಲಿನ ಪರಿಧಿಯನ್ನು ನಿಯಮಿತಗೊಳಿಸುತ್ತಿರಬೇಕು. ಕೇಂದ್ರದ ಓಜಸ್ಸಿನಿಂದ ನಿಯಮಿತವಾದ ಪರಿಧಿಯೇ ಪೂರ್ಣ ವೃತ್ತಕ್ಕೆ ರೂಪುಕೊಡುತ್ತದೆ. ಪರಿಧಿಯ ಮೇಲೆ ಕೇಂದ್ರದ ಅಂಕುಶವಿಲ್ಲದೆ ಹೋದರೆ ಅದು ಹರಿದಾಡುತ್ತಿರುವ ಅಥವಾ ಡೊಂಕು-ಡೊಂಕಾದ ರೇಖೆಯಾಗಿ ಬಿಡುತ್ತದೆ. ಸವಿತಾ ಕೇಂದ್ರವಾದರೆ ಸಾವಿತ್ರಿ ಪರಿಧಿ. ಸಾವಿತ್ರಿಯು ಪ್ರತಿಕ್ಷಣ ತನ್ನ ಆ ಸವಿತಾ-ಕೇಂದ್ರದಿಂದ ಅನುಶಾಸಿತವಾಗಿರುತ್ತದೆ. ಅಥವಾ ಪತ್ನಿ ಹೇಗೆ ತನ್ನ ಪತಿಯ ಬಗ್ಗೆ ಸಮರ್ಪಣೆಯ ಭಾವದಿಂದ ಕೂಡಿರುತ್ತಾಳೋ ಮತ್ತು ತನ್ನ ಮನದ ಚಂಚಲತೆಯನ್ನು ಒಟ್ಟುಗೂಡಿಸಿ ಪತಿ-ರೂಪ ಕೇಂದ್ರದಲ್ಲಿ ಲೀನಗೊಳಿಸಿಬಿಡುತ್ತಾಳೋ ಅಂತೆಯೇ ಸಾವಿತ್ರಿ ಶಕ್ತಿಯು ಸವಿತಾ ರೂಪಿ ಕೇಂದ್ರವನ್ನಾರಾಧಿಸುತ್ತದೆ. ಇದರಿಂದಲೇ ಕೇಂದ್ರ ಮತ್ತು ಪರಿಧಿಯ ಸಮ್ಮಿಲಿತ ಸೌಂದರ್ಯವು ಜನ್ಮ ತಾಳುತ್ತದೆ. ಇದನ್ನು ನಾವು ವೃತ್ತ ಎನ್ನುತ್ತೇವೆ. ಪರಿಪೂರ್ಣ ವೃತ್ತಕ್ಕಿಂತ ಹೆಚ್ಚಾದ ಸೌಂದರ್ಯ ಈ ವಿಶ್ವದಲ್ಲಿ ಬೇರಾವುದೂ ಇಲ್ಲ. ಗೃಹಸ್ಥದಲ್ಲಿ ಇದೇ ಪತಿ-ಪತ್ನಿಯರ ಏಕಾತ್ಮ ಭಾವ.

ಸೂರ್ಯನ ಸಾವಿತ್ರಿ ಶಕ್ತಿಯು ಪ್ರತಿಕ್ಷಣ ಅದರಿಂದ ಹೊರಡುತ್ತಿದೆ. ಅದೇ ವೃಕ್ಷ, ವನಸ್ಪತಿ, ಕೀಟ-ಪತಂಗ, ಪಶು-ಪಕ್ಷಿ ಮತ್ತು ಮಾನವ, ಎಲ್ಲರ ಜನ್ಮ, ವಿಕಾಸ ಮತ್ತು ಸಂವರ್ಧನೆಗೆ ಕಾರಣಕರ್ತೃ. ಆ ಶಕ್ತಿಯು

ಸಂಚಿತ ಘಟಕವನ್ನು ನಾವು ಸಂವತ್ಸರದ ರೂಪದಲ್ಲಿ ಪಡೆದುಕೊಳ್ಳುತ್ತೇವೆ. ಪೃಥ್ವಿಯು ತನ್ನ ಕ್ರಾಂತಿ ವೃತ್ತದ ಮೇಲೆ ಒಂದು ಬಿಂದುವಿನಿಂದ ಚಲಿಸಿ ಮತ್ತೆ ಅದೇ ಬಿಂದುವಿಗೆ ಹಿಂತಿರುಗಿಬರುತ್ತದೆ. ಕಾಲದ ಈ ಅವಧಿ ಗಿರುವ ಸಂಜ್ಞೆ ಸಂವತ್ಸರ. ಸೂರ್ಯ-ಪ್ರಜಾಪತಿಯ ಮತ್ತೊಂದು ರೂಪವೇ ಈ ಸಂವತ್ಸರ. ಸವಿತಾ-ದೇವ ತೆಯ ಆಯುಷ್ಯದ ಘಟಕಗಳು ಈ ಸಂವತ್ಸರಗಳು. ವಿಶ್ವ ವಾಪಕ ಶಕ್ತಿಯು ಸಂವತ್ಸರಾಧಿಪತಿ ಸವಿತಾ ಅಥವಾ ಸೂರ್ಯನನ್ನು ಒಂದು ವರ್ಷಕ್ಕೆಂದು ಪಡೆದುಕೊಳ್ಳುತ್ತದೆ ಮತ್ತು ಪ್ರತಿವರ್ಷವು ಪುನಃ-ಪುನಃ ಪ್ರಾಪ್ತಿಮಾಡಿ ಕೊಳ್ಳುತ್ತಿರುತ್ತದೆ.

ಯಮ ಮತ್ತು ರುದ್ರ ವಾಯುವಿನ ಸಂಜ್ಞೆಗಳು. ಇಲ್ಲಿ ಇಡೀ ಸೃಷ್ಟಿಯು ಎರಡು ತರಹದ್ದಿದೆ-ಒಂದು ಅಭೋಗ, ಮತ್ತೊಂದು ಭೋಗ. ಒಂದು ರುದ್ರ, ಮತ್ತೊಂದು ಶಿವ. ರುದ್ರ ಎಂಬುದು ವಿಘಟನಕಾರಕ ಪ್ರಾಣಕ್ಕೂ ಮತ್ತು ಶಿವ ಎಂಬುದು ಶುಭಮೂರ್ತಿ ನಿರ್ಮಾಣಕಾರಕ ಪ್ರಾಣಕ್ಕೂ ಇರುವ ಸಂಜ್ಞೆ. ನಾವು ಈ ವಿಶ್ವದ ರೂಪ ದಲ್ಲಿ ನೋಡುತ್ತಿರುವುದೇನೆಂದರೆ, ಸಂವತ್ಸರವು ಮತ್ತೆ-ಮತ್ತೆ ಜನ್ಮಗ್ರಹಣ ಮಾಡುವುದು ಅಥವಾ ಚಕ್ರದ ನಿಯ ಮಿತ ಪರಿಭ್ರಮಣದ ಮೂಲಕ ಅದರ ದೇವರಥವು ಸಕುಶಲವಾಗಿ ಪರಿಭ್ರಮಣಮಾಡುವುದನ್ನೇ. ಈ ಬ್ರಹ್ಮ ಚಕ್ರದ ಪರಿಭ್ರಮಣದ ಕಾಲಾತ್ಮಕ ಅವಧಿಯ ಸಂಜ್ಞೆಯೇ ಸಂವತ್ಸರ. ಗಡಿಯಾರದ ಕಾರ್ಯದಲ್ಲಿ ಯಾವ ಸೂಕ್ಷ್ಮಧ್ವನಿ ಕೇಳಿಬರುತ್ತದೋ ಮತ್ತು ಯಾವುದರಿಂದ ಕಾಲದ ಅಕ್ಷರಗತಿಯ ಸಂಕೇತ ಸಿಕ್ಕುತ್ತದೋ, ಆ ದುರ್ಧರ್ಷ ಅಕ್ಷರಗತಿಯೇ ಈ ಬ್ರಹ್ಮಾಂಡದ ಉದರದಲ್ಲಿ ಸಂವತ್ಸರ ರೂಪದಲ್ಲಿದೆ. ಈ ಸಂವತ್ಸರದ ಕುಶಲ-ಕ್ಷೇಮ ಸಾಧ್ಯವಾಗುವುದು, ರುದ್ರ ಅಥವಾ ಘೋರ ಯಮ ವಾಯುವಿನ ಮೇಲೆ ಅದು ವಿಜಯ ಗಳಿಸಿದಾಗಲೇ ಮಾತ್ರ. ಪ್ರತಿ ವರ್ಷ ಶರದೃತುವು ರುದ್ರನ ಘೋರ ಶಕ್ತಿಯ ರೂಪದಲ್ಲಿ ಬರುತ್ತದೆ ಮತ್ತು ದಕ್ಷಿಣಾಯನದ ಆರು ತಿಂಗಳುಗಳಲ್ಲಿ ತಮುಭಾಮು ಅಥವಾ ಅಸುರಭಾವ ಅಥವಾ ಜಲಾತ್ಮಕ ಶೀತದ ಪ್ರಚಂಡ ಆಕ್ರಮಣವು ಸೂರ್ಯರೂಪಿ ಪ್ರಕಾಶದ ಅಧಿದೇವತೆಯ ಮೇಲಾಗುತ್ತದೆ. ಆದ್ದರಿಂದಲೇ ಶರದ್ ಅನ್ನು ರುದ್ರನ ಸ್ವಸಾ ಅಥವಾ ಸೋದರಿ ಎಂದೆನ್ನಲಾಗಿದೆ.. ಶೀತೋಷ್ಣದ ಈ ದ್ವಂದ್ವ ದಲ್ಲಿ ಸೂರ್ಯನು ವಿಜಯ ಗಳಿಸುತ್ತಾನೆ. ಈ ಸೂರ್ಯನೇ ಶಿವ. ಇದೇ ವ್ಯಕ್ತಿ ಮತ್ತು ವಿಶ್ವ-ಜೀವನದ ಅಘೋರ ಅಗ್ನಿ. ಇದರ ಉಪಾಸನೆಯೆಂದರೆ ಎಲ್ಲರಿಗೂ ಇಷ್ಟ. ವರ್ಷೇ ವರ್ಷೇ ಜರುಗುವ ಈ ದ್ವಂದ್ವದೊಳಗಿನಿಂದ ಸಾವಿತ್ರಿ-ಶಕ್ತಿ ಮತ್ತು ಸತ್ಯಾತ್ಮನಾದ ಸೂರ್ಯನ ಸಮ್ಮಿಳ ನವು ದೃಷ್ಟಿಗೋಚರವಾಗುತ್ತದೆ. ಇದರ ಭಾವಾತ್ಮಕ ರೂಪವೇ ಸಾವಿತ್ರಿ-ಸತ್ಯವಾನರ ಸುಂದರ ಕಥೆ. ಯಾವುದು ಯಮವಾಯುವಿನಿಂದ ತನ್ನ ಸತ್ಯವಾನ್-ಕೇಂದ್ರವನ್ನು ರಕ್ಷಿಸುತ್ತದೊ ಅದೇ ಸಾವಿತ್ರಿ. ಭಾರತೀಯ ಗೃಹಸ್ಥ ಜೀವನದಲ್ಲಿ ಪತಿ ಕೇಂದ್ರವಾದರೆ ಪತ್ನಿ ಪರಿಧಿಯಾಗಿದ್ದಾಳೆ. ಪರಿಧಿಯ ರೇಖೆ ವಕ್ರಭಾವದಿಂದ ಬಂದುಬಿಟ್ಟು ಡೊಂಕು ಡೊಂಕಾಗಿ ನಡೆಯಲಾರಂಭಿಸಿದರೆ, ಅದರ ಸ್ವರೂಪ-ವಿನಾಶವಂತೂ ಇದ್ದೇ ಇದೆ, ಜೊತೆಗೆ ಅದರ ಕೇಂದ್ರ ಕೂಡ ನಷ್ಟ-ನಿರರ್ಥಕವಾಗಿಬಿಡುತ್ತದೆ. ಆದ್ದರಿಂದ ಕೇಂದ್ರ ಮತ್ತು ವೃತ್ತದ ರಕ್ಷಣೆಯ ಹೊಣೆಗಾರಿಕೆ ಅರ್ಥಾತ್ ಪತಿ-ಪತ್ನಿಯ ಸಮ್ಮಿಳಿತ ಸೌಂದರ್ಯವನ್ನು ಊರ್ಜಿತಗೊಳಿಸುವ ಪ್ರತಿಷ್ಠೆಯಿರುವುದು ಪತ್ನಿಯ ಮೇಲಿಯೇ. ಗೃಹಸ್ಥ ಜೀವನದ ಈ ಕಲೆ ವಿಲಕ್ಷಣ ವಾದುದು. ಇದರಲ್ಲಿ ಪತಿಯಂತೂ ಕೇಂದ್ರ ನಿಷ್ಠ ನಿಷ್ಕ್ರಿಯ ತತ್ವಕ್ಕೆ ಸಮಾನ. ಗೃಹಸ್ಥ ಧರ್ಮಗಳ ಸಮಸ್ತ ಕ್ರಿಯಾಶೀಲತೆ ಗೃಹಿಣಿ ಅಥವಾ ಪತ್ನಿಯ ಮೇಲೆಯೇ ಇದೆ. ಪತಿಯ ಜೀವನದ ಅಮೃತತ್ವವು ಪ್ರತಿಕ್ಷಣ ಸಾವಿತ್ರಿ-ರೂಪಿ ಪತ್ನಿಯ ಮೂಲಕ ಪ್ರಾಪ್ತ ವಾಗುವ ರಕ್ಷಣಾ-ಭಾವವನ್ನೇ ಅವಲಂಬಿಸಿದೆ.

ಪ್ರಸಿದ್ಧ ಗಾಯತ್ರಿ ಮಂತ್ರವು ಸವಿತಾ ದೇವತೆಯ ಶಕ್ತಿಯನ್ನಾರಾಧಿಸುವುದೇ ಆಗಿದೆ. ಸಾವಿತ್ರಿ ಮತ್ತು ಗಾಯತ್ರಿಗಳು ಒಂದೇ ಶಕ್ತಿತತ್ವದ ಎರಡು ಸಂಜ್ಞೆಗಳು. ಸೂರ್ಯನಿಂದ ಪೃಥಿವಿಯತ್ತ ಬರುವ ಶಕ್ತಿ ಸಾವಿತ್ರಿಯೆನಿಸಿ ಕೊಳ್ಳುತ್ತದೆ ಮತ್ತು ಅದೇ ಹಿಂತಿರುಗಿ ಯಾವಾಗ ಸೂರ್ಯನ ಕಡೆ ಹೋಗುತ್ತದೋ ಆಗ ಅದನ್ನು ಗಾಯತ್ರಿ ಯೆನ್ನುತ್ತೇವೆ. ದ್ಯುಲೋಕ ಮತ್ತು ಪೃಥಿವಿ ಇವೆರಡರ ನಡುವೆ ಶಕ್ತಿಯ ಈ ಅಖಂಡ ಆದಾನ-ಪ್ರದಾನ ಜರುಗು ತ್ತಿದೆ. ಫಲಸ್ವರೂಪವಾಗಿ, ರಹಸ್ಯಮಯ ಶಕ್ತಿಯು ಅವೆರಡನ್ನೂ ಪತಿ-ಪತ್ನಿಯ ರೂಪದಲ್ಲಿ ಅಭೇದಕ (ಅವಿ ಭಕ್ತ) ವಾಗಿ ಮಾಡಿದೆ. ಪುರುಷ ಮತ್ತು ಸ್ತ್ರೀಯ ಈ ಶ್ಲಾಘನೀಯ ಸಮ್ಮಿಲನದ ಸಂಜ್ಞೆಯೇ ಗೃಹ ಎಂದು. ಇದರಲ್ಲಿ, ವಿವಾಹದ ಮೂಲಕ ಪ್ರತಿಷ್ಠಿತಳಾಗಿ ಸ್ತ್ರೀಯು ಗೃಹಿಣಿಯಾಗುತ್ತಾಳೆ.

---

# ಸುಗುಣಳ ಸುಖ

ಲೇ: ದಿವಂಗತ ಆರ್. ಕಾಮಾಕ್ಷಮ್ಮ

## ೧

ಬಹುಕಾಲದಿಂದಲೂ ಮಕ್ಕಳಿಲ್ಲವೆಂಬ ಸಂಕಟಸಾಗರದಲ್ಲಿ ತೇಲುತ್ತಿದ್ದ ಸುವಾಸಿನಿಗೂ ಮತ್ತು ಸುದೇವನಿಗೂ ವೃದ್ಧಾಪ್ಯದಲ್ಲಿ ಇಷ್ಟಾರ್ಥ ಸಿದ್ಧಿಸಿತು! ಅದಕ್ಕಾಗಿ ಅವರ ಬಂಧುಬಳಗಕ್ಕೂ, ಇಷ್ಟಮಿತ್ರರಿಗೂ ಬಹಳ ಆನಂದ! ಹೀಗಿರುವಲ್ಲಿ, ಅದನ್ನೇ ಹೊಂದಿದ ಈ ವೃದ್ಧ ದಂಪತಿಗಳ ಸಂತೋಷವನ್ನು ಇಲ್ಲಿ ವರ್ಣಿಸಲು ಸಾಧ್ಯವೇ? ನಾನೇನಾದರೂ ಕವಿಯಾಗಿದ್ದ ಪಕ್ಷಕ್ಕೆ ಸ್ವಲ್ಪಮಟ್ಟಿಗೆ ಪ್ರಯತ್ನವನ್ನಾದರೂ ಮಾಡಬಹುದಾಗಿತ್ತು. ಆದರೇನು, ಈ ಆನಂದದ ಬಹುಭಾಗ ಆನಂದವಾಗಿರಲಿಲ್ಲ!

ಸುವಾಸಿನೀ ಮತ್ತು ಸುದೇವ ಇವರಿಗೆ ಬಹಳ ಚಿಕ್ಕ ವಯಸ್ಸಿನಲ್ಲಿಯೇ ವಿವಾಹವಾಗಿತ್ತು. ಆದರೆ ವಿವಾಹದ ಫಲವಿರಲಿಲ್ಲ. ಆದಾಗ್ಗೂ ಇನ್ನೊಂದು ವಿಷಯದಲ್ಲಿ ಒಳ್ಳೆಯದೇ ಆಯಿತು. ಈ ದಂಪತಿಗಳು ತಮಗೆ ಸಂತಾನವಿಲ್ಲವೆಂದು ಇತರ ಆಸೆಗಳಿಗೆ ಮನಗೊಡದೆ– ಎಂದರೆ ಪುನರ್ವಿವಾಹವಾಗದೆ, ಅನ್ಯೋನ್ಯಭಾವದಿಂದ ದೇವರು ಕೊಟ್ಟಿದ್ದನ್ನು ಅನುಭವಿಸುತ್ತಿದ್ದರು. ತಾವು ಮಾಡುವ ಪ್ರತಿಯೊಂದು ಕಾರ್ಯವೂ ಭಗವಂತನ ಸೇವೆಯೆಂದು ತಿಳಿದಿದ್ದರು. ಭಗವಂತನಲ್ಲಿ ಸಂಪೂರ್ಣ ನಂಬಿಕೆಯನ್ನು ಇಟ್ಟುಕೊಂಡು ದಿನಗಳನ್ನು ಕಳೆದರು.

ಸುವಾಸಿನಿಯಾದರೊ ಬಹಳ ಒಳ್ಳೆಯ ಸ್ವಭಾವದ ಸ್ತ್ರೀ. ಇವಳಿಗೆ ಕಪಟವೆಂದರೆ ತಿಳಿಯದು. ಇವಳಿಗೆ ಈ ಲೋಕದಲ್ಲಿ ಇದ್ದ ಆಸ್ತಿ ಇವಳ ಪತಿ. ಆತನ ಮನಸ್ಸು ತೃಪ್ತಿಯಾದರೆ ಜಗದೀಶನಿಗೆ ಮೆಚ್ಚುಗೆ ಎಂದು ತಿಳಿದಿದ್ದಳು. ಅಲ್ಲದೆ ಯಾರಾದರೂ ಕೇಳಿದರೆ ಪತಿಯಿಲ್ಲದೆ ಬೇರೆ ದೇವರನ್ನು ನಾನರಿಯೆ, ಎಂದು ಹೇಳುತ್ತಿದ್ದಳು. ಇಂತಹ ಪತಿಪರಾಯಣೆಯಾದುದರಿಂದಲೇ ದೇವರು ಇವಳಿಗೊಂದು ಲೋಪವನ್ನು ಇಟ್ಟಿದ್ದನೋ ಏನೋ! ಕೆಲವು ಸಂವತ್ಸರಗಳು ಕಳೆದುವು. ಸಂತಾನವಾಗಲಿಲ್ಲವೆಂಬ ಯೋಚನೆಯ ಮಬ್ಬು ಹೆಚ್ಚಿತು. ಈ ಲೋಕವೇ ಬೇಡವಾಯಿತು. ಮಕ್ಕಳಿಲ್ಲದ ಮನೆ ಕಾಡಿಗೆ ಸಮ ಎಂದು ತಿಳಿದಳು. ದೇವರಲ್ಲಿ ನಂಬಿಕೆ ಕೆಟ್ಟಿತು.

ಏನಾದರೂ ಬೇಕಾದರೆ ದೇವರಲ್ಲಿ ಬೇಡುವುದು; ಇಲ್ಲವೆ ಹರಕೆಗಳನ್ನು ಮಾಡಿಕೊಳ್ಳುವುದು; ಕಣ್ಣೀರು ಸುರಿಸಿ ಮೊರೆ ಇಡುವುದು; ನೆನಸಿದ ಕಾರ್ಯ ಸಿದ್ಧಿಸಿದರೆ ತಕ್ಷಣವೇ ಭಗವಂತನನ್ನು ಮರೆಯುವುದು; ಇಲ್ಲದಿದ್ದರೆ, ಆತನಲ್ಲಿ ನಂಬಿಕೆಯನ್ನು ಬಿಟ್ಟು, ನಿಷ್ಠುರದ ಮಾತನಾಡಿ ದೇವರಿಲ್ಲವೆಂದು ವಾದಿಸುವುದು–ಇದು ಮನುಷ್ಯ ಜಾತಿಯ ಸ್ವಭಾವ! ಇದು ಯಾವುದರಿಂದಲೂ ಜಗದೀಶ್ವರನಿಗೆ ಅಪಮಾನವೂ ಇಲ್ಲ, ನಷ್ಟವೂ ಇಲ್ಲ. ಫಲಿತಾಂಶಗಳನ್ನು ನೋಡಿ ಇದು ಒಳ್ಳೆಯದಕ್ಕೊ ಕೆಟ್ಟದಕ್ಕೊ ಎಂದು ತಿಳಿಯದೆ, ಅಥವಾ ದೇವರು ಮಾಡುವುದೆಲ್ಲ ಒಳ್ಳೆಯದಕ್ಕೇ –ಆತನು ತೋರಿಸಿದ ದಾರಿಯಾಗಲಿ ಎಂದು ನಂಬದೆ, ಸಂಕಟದಲ್ಲಿ ವೆಂಕಟರಮಣನನ್ನೂ ಸುಖದಲ್ಲಿ ಬಿಂಕದ ರಮಣನನ್ನೂ ಹಿಡಿದರುಂಟೆ? ಅಂತೂ ಸುವಾಸಿನಿಗೆ ದೇವರಲ್ಲಿ ನಂಬಿಕೆ ತಪ್ಪಿತು.

ಪತಿಸೇವೆಯೇ ತನ್ನ ಕರ್ತವ್ಯವೆಂದು ತಿಳಿದುಕೊಂಡಿದ್ದ ಅವಳು ಯಂತ್ರದೋಪಾದಿ ದಿನಚರಿ ಕೆಲಸಗಳನ್ನು ಮಾಡುತ್ತ ದಿನಗಳನ್ನು ಕಳೆಯುತ್ತಿದ್ದಳು. ಇತ್ತ ಸುದೇವನು ಇತ್ತೀಚೆಗೆ ತನ್ನ ಪತ್ನಿಯ ಬದಲಾವಣೆಗಳನ್ನು ನೋಡಿ ಒಂದು ದಿನ ವಿರಾಮ ಕಾಲದಲ್ಲಿ ತನ್ನ ಪ್ರಿಯ ಪತ್ನಿಯನ್ನು ಪಕ್ಕಕ್ಕೆ ಕರೆದು ಅವಳ ಮನೋಭಾವವನ್ನು ತಿಳಿಯಲು ಪ್ರಯತ್ನಪಟ್ಟನು.

ಸುದೇವನಾದರೂ ಬಹಳ ಧರ್ಮಿಷ್ಠ, ದಯಾಪರ. ಭಗವಂತನನ್ನು ಶೀಘ್ರದಲ್ಲಿ ಕಾಣಲು ದೇವರು ಮಕ್ಕಳಿಲ್ಲದಂತೆ ಮಾಡಿರುವುದು ಒಳ್ಳೆಯದೆಂದು ತಿಳಿದಿದ್ದನು. ಈತನು ಪತ್ನಿಯನ್ನು ಕುರಿತು–"ನೋಡು, ಸುನೀ, ನೀನು ಈ ರೀತಿ ನಿನ್ನ ಮನಸ್ಸನ್ನು ಬದಲಾಯಿಸಿದುದಕ್ಕೆ ಕಾರಣವೇನು? ಜಗದೀಶ್ವರನು ನಮಗೆ ಒಳ್ಳೆಯ ಮಾರ್ಗವನ್ನೇ ತೋರಿಸಿದ್ದಾನೆ. ನೀನು ಮೂಢಳಾಗಿ ಇಹಜನ್ಮದ ಕರ್ಮವನ್ನು ತೊಳೆದು, ಆತನ ಸಾನ್ನಿಧ್ಯವನ್ನು ಸೇರುವುದಕ್ಕೆ ಬದಲು ಹೀಗೆ ಇರುವುದು ತರವಲ್ಲ. ಇಷ್ಟು ದಿನದಿಂದಲೂ ದೇವರಲ್ಲಿ ನಿನಗಿದ್ದ ಆ ಅಳವರಿಯದ ನಂಬುಗೆ ಈಗ ಎಲ್ಲಿ ಹೋಯಿತು? ನಡುವೆ ಅದಕ್ಕೆ ಕುಂದು ತಂದೆಯಾ! ನಮಗೆ ಪುತ್ರಲಾಭವಾಗಬೇಕಾಗಿದ್ದರೆ ಆ ಜಗದೀಶ್ವರನಿಗೆ ತಿಳಿಯದೆ? ನೀನು ಆತನನ್ನು ಕೇಳಿಯೂ ಕೊಡದೆ ಇದ್ದುದಕ್ಕಾಗಿ ಆತನನ್ನು ನಿಂದಿಸಿದರೆ ಆತನಿಗೆ ಆಗುವ ನಷ್ಟವಾವುದು? ಈ ಪಾಪಮಯ ಪ್ರಪಂಚದಲ್ಲಿ ಯಾವುದರ ಮೇಲೂ ಅಧಿಕ ಪ್ರೇಮವಿಲ್ಲದೆ ತುಂಬು ಪ್ರೇಮ ಆತನಲ್ಲಿ ನಿಂತರೆ ಆತನ ಸಾನ್ನಿಧ್ಯವನ್ನು ಸೇರಲು ಸುಲಭ. ಆದುದರಿಂದಲೇ ನಮಗೆ ಈ ಮಾರ್ಗವನ್ನು ತೋರಿಸಿದ್ದಾನೆ. ಈ ಕೆಲವು ದಿನ ದೇವರನ್ನು ಮರೆತುದಕ್ಕಾಗಿ

ಪಶ್ಚಾತ್ತಾಪಪಟ್ಟು, ಆತನನ್ನು ನಂಬು."—ಎಂದು ಹೇಳಿದ. ಇದನ್ನು ಕೇಳಿ ಸುವಾಸಿನಿಗೆ ಬಹಳ ದುಃಖ ವುಂಟಾಯಿತು. ಏನೂ ಹೇಳಲಿಲ್ಲ. ದಿಕ್ಕೂ ತೋಚ ಲಿಲ್ಲ. ಮನಸ್ಸಿನ ಇಚ್ಛೆಯನ್ನು ತನ್ನ ಎದೆಯಿನಿಯನಲ್ಲಿ ತಿಳಿಸದೆ ಮತ್ತಾರಲ್ಲಿ ಹೇಳಲಿ, ಎಂದು ಯೋಚಿಸಿ—"ಪೂಜ್ಯರೆ, ನೀವು ಹೇಳುವುದು ನಿಜ. ಆದರೆ ಈ ಪ್ರಪಂಚ ದಲ್ಲಿ ನಾವು ನಿಂದೆಗೆ ಗುರಿಯಾಗಿರುತ್ತೇವೆ. ಬಂಜೆ ಎಂಬ ಹೆಸರು ನನಗೆ ಬಂತು! ನಾನು ಮಾಡಿದ ಯಾವ ಕಾರ್ಯ ವನ್ನೂ ಜಗದೀಶನು ಒಪ್ಪನೆಂದು ಜನರು ಹೇಳುತ್ತಾರೆ. ಹಿರಿಯರು ಹೇಳಿರುವ ಹಾಗೆ ಯೋಗ್ಯನಾದ ಪುತ್ರನು ಕುಲಕ್ಕೆ ಪ್ರಕಾಶಕರ. ಮುಂದೆ ನಮ್ಮ ವಂಶವನ್ನು ಬೆಳಗುವವರಾರು?" ಎಂದಳು.

ಸುದೇವನಿಗೆ ಕೊಂಚ ಕೋಪ ಬಂತು. ಆದರೆ ಕೋಮಲೆಯಾದ ತನ್ನ ಸತಿಗೆ ತೋರಿಸದೆ "ದೇವಿ, ನಿನಗೇ ಇಷ್ಟು ಯೋಚನೆ ಇದ್ದರೆ ನಿನ್ನನ್ನು ನಿರ್ಮಿಸಿದ ಭಗವಂತ ನಿಗೆ ಯೋಚನೆಗಳಿಲ್ಲವೇ? ಈ ಯೋಚನೆಗಳು ಆತನಲ್ಲಿ ದ್ದರೆ ಆತನಿಗೆ ಇವುಗಳನ್ನು ಬಗೆಹರಿಸುವ ಮಾರ್ಗ ತಿಳಿ ಯದೇ? ತಿಳಿದೂ ಆತನು ಹೀಗೆ ಇರಬೇಕಾದರೆ ಇದು ಒಳ್ಳೆಯದಕ್ಕೇ ಎಂದು ನಂಬು. ಇಂದಿನಿಂದ ಆ ಯೋಚನೆ ಯನ್ನು ಬಿಟ್ಟು ಭಗವಂತನ ಧ್ಯಾನ ಮಾಡು. ಅಲ್ಲದೆ ಇನ್ನೊಂದು ಉಪಾಯವನ್ನು ಹೇಳುತ್ತೇನೆ, ಕೇಳು. ನಿನ್ನನ್ನು ಸೃಷ್ಟಿಸಿದ ದೇವನೇ ನಿನ್ನ ಮಗನೆಂದು ತಿಳಿದು ಆತನನ್ನು ಪ್ರೀತಿಸು." ಎಂದು ಬೋಧಿಸಿದನು. ಇದನ್ನು ಕೇಳಿದ ಸುವಾಸಿನಿಗೆ ರೋಮಾಂಚವಾಯಿತು. ಮನಸ್ಸು ವಿಕಲ್ಪವಾಯಿತು. ಏನೋ ಒಂದು ಬಗೆಯ ಜ್ಞಾನೋ ದಯವೂ ಆಯಿತು. ತನ್ನ ತಪ್ಪನ್ನು ತಿಳಿದಳು. ಅದು ಮೊದಲು ಮಕ್ಕಳ ಮೇಲಿನ ಭ್ರಮೆಯನ್ನು ಬಿಟ್ಟು ತನ್ನ ಮನಸ್ಸನ್ನು ದೇವರ ಕಡೆಗೆ ತಿರುಗಿಸಿ ಪೂರ್ವದಂತೆಯೇ ದಿನಗಳನ್ನು ಕಳೆಯುತ್ತಿದ್ದಳು.

೨

ಹೀಗೆ ಅನೇಕ ಸಂವತ್ಸರಗಳು ಕಳೆದುವು. ವೃದ್ಧಾಪ್ಯ ಪ್ರಾರಂಭವಾಯಿತು. ಇವರ ದೈವಭಕ್ತಿಯಾದರೋ ದಿನೇ ದಿನೆ ಹೆಚ್ಚುತ್ತ ಬಂದಿತು. ಕೊನೆಗೆ ದೇವರು ಇವರನ್ನು ಪರೀಕ್ಷಿಸಬೇಕೆಂದು ಇಟ್ಟ ತಂತ್ರವೋ ಅಥವಾ ಇವರ ಪುಣ್ಯದ ಫಲವೋ ಅಥವಾ ಇವರು ಮಾಡಿದ ಪಾಪದ ಶೇಷವೋ ಎಂಬಂತೆ ಆ ಇಳಿವಯಸ್ಸಿನಲ್ಲಿ ಅವರಿಗೆ ಒಂದು ಹೆಣ್ಣುಮಗು ಪ್ರಾಪ್ತವಾಯಿತು. ಆಯಿತು! ದಿನಕ್ರಮೇಣ ಮಗುವಿನ ಮೇಲೆ ಪ್ರೇಮ ಹೆಚ್ಚಿತು. ಶಿಶುವಿನಲ್ಲಿ ಪ್ರೇಮ ಹೆಚ್ಚಿದ ಹಾಗೆಲ್ಲಾ ದೇವರಲ್ಲಿ ಪ್ರೇಮ ಕಡಿಮೆಯಾಯಿತು.

ಮಕ್ಕಳ ರೂಪಲಾವಣ್ಯಗಳನ್ನು ನೋಡಿ ಎಂಥವರಿ ಗಾದರೂ ಮನಸ್ಸು ಬದಲಾಯಿಸುವುದು ನಿಜ. ಇಲ್ಲಿ ಒಂದು ಮಾತು. ದೇವರನ್ನು ಕೆಲವುವೇಳೆ ಮಾಯಾವಿ, ಮಹಾತಂತ್ರಿ, ಮೋಸಗಾರ ಎಂದು ಹೇಳಬೇಕಾಗುವುದು. ಇಹಜನ್ಮದಲ್ಲಿ ಮನುಷ್ಯನು ಶ್ರಮಪಟ್ಟು ಸಂಪಾದಿಸಿದ ಒಳ್ಳೆಯ ಗುಣಗಳನ್ನು ಕಳೆದುಕೊಳ್ಳುವಂತೆ ದೇವರು ಯಾವಾಗಲೂ ಏನಾದರೂ ಉಪಾಯವನ್ನು ಹುಡುಕು ತ್ತಾನೆ. ಎಂತೆಂತಹ ತಪಸ್ವಿಗಳ ತಪಸ್ಸುಗಳನ್ನು ಸ್ತ್ರೀ ಜಾತಿಯಿಂದ ಕೆಡಿಸಿಲ್ಲ! ಎಷ್ಟೋಕಾಲ ಶ್ರಮಪಟ್ಟು ಮಾಡಿದ ತಪಸ್ಸುಗಳನ್ನೆಲ್ಲ ಕ್ಷಣಕಾಲದಲ್ಲಿ ಕೆಡಿಸಿ ತನ್ನ ಭಾರವನ್ನು ತಪ್ಪಿಸಿಕೊಂಡಿರುವನಲ್ಲ ಆ ಮಾಯಾವಿ! ಭಕ್ತರ ಹೊಟ್ಟೆಯಲ್ಲಿ ಒಂದು ಹೆಣ್ಣುಮಗುವನ್ನು ಸೃಷ್ಟಿ ಸಿದ್ದು ತನ್ನ ಮೇಲಿನ ಪ್ರೇಮವನ್ನು ಕಳಚಿದಂತಾಯಿತು. ಭಕ್ತರನ್ನು ಪಾಪಕ್ಕೆ ಈಡುಮಾಡಿ ಕಷ್ಟಕ್ಕೆ ಗುರಿಮಾಡಿ ಆನಂದಪಡುತ್ತಿದ್ದಾನೋ ಪರಮಾತ್ಮ!

ಮಗು ದಿನದಿನವೂ ಚಂದ್ರಮನಂತೆ ಬೆಳೆಯಿತು. ಸುಗುಣ ಎಂದು ನಾಮಕರಣವೂ ಆಯಿತು. ಅಲ್ಲದೆ, ಇಷ್ಟುದಿನ ಅರ್ಪಿಸಿದ ಸೇವೆಗೆ ತಮಗೆ ದಯಪಾಲಿಸಿರುವ ವರವೆಂದು ತಿಳಿದು, ಮಗುವಿಗೆ ಕೊಂಚವೂ ತೊಂದರೆ ಇಲ್ಲದಂತೆ ಸಾಕುತ್ತ ಬಂದರು. ಅದರ ಬಾಲಲೀಲೆಗಳನ್ನು ನೋಡಿ ಹಿಗ್ಗುತ್ತಿದ್ದರು. ಹೆಸರಿಗೆ ತಕ್ಕಂತೆ ಬಹಳ ಒಳ್ಳೆಯ ಗುಣಗಳನ್ನು ಹುಟ್ಟಿದಂದಿನಿಂದಲೇ ತೋರಿಸುತ್ತ ತನ್ನ ತಾಯಿತಂದೆಗಳನ್ನು ಆನಂದಪಡಿಸುತ್ತಿತ್ತು ಮಗು. ೩ ವರ್ಷಗಳು ಕಳೆದುವು. ಮಾತೂ ಬಂತು. ಅದಕ್ಕೆ ಒಳ್ಳೆಯ ಕಥೆ, ಒಳ್ಳೆಯ ಹಾಡು, ಒಳ್ಳೆಯ ಬದುಕು ಮತ್ತು ಒಳ್ಳೆಯ ಬುದ್ಧಿ ಕಲಿಸಬೇಕೆಂದು ಮಾತಾಪಿತರು ಹಗಲೂ ಇರುಳೂ ಪ್ರಯತ್ನಪಡುತ್ತಿದ್ದರು. ತಾಯಿತಂದೆಯ ರಂತೆಯೇ ಒಳ್ಳೆಯ ಶೀಲ, ಸ್ವಭಾವ, ಈ ಮಗುವಿಗೆ ಚುರುಕಾದ ಬುದ್ಧಿ! ಏಳು ವರ್ಷಗಳವರೆಗೂ ತಮ್ಮ ಸಮೀಪದಲ್ಲಿಟ್ಟುಕೊಂಡು ಸಾಧ್ಯವಾದುದನ್ನು ಅದಕ್ಕೆ ಹೇಳಿಕೊಡುವುದು, ಅದರೊಂದಿಗೆ ಆಡುವುದು, ಅದಕ್ಕೆ ಅಲಂಕಾರ ಮಾಡುವುದು, ನೋಡುವುದು, ಅದರಿಂದ ಆನಂದಪಡುವುದು ಇದೇ ಅವರ ದಿನಚರಿ ಕರ್ತವ್ಯ ವಾಯಿತು. ಇದಾದ ಮೇಲೆ ಕಾಲಕ್ಕೆ ತಕ್ಕಂತೆ ವಿದ್ಯೆ ಯನ್ನು ಕಲಿಸಬೇಕೆಂದು ಪ್ರಾರಂಭಿಸಿದರು. ಮೊದಲು

ಸಂಗೀತ ವಿದ್ಯೆ. ಜತೆಗೆ ಮನೆ ಕೆಲಸಗಳನ್ನು ತಾಯಿ ಕಲಿಸಿದಳು. ಹೆಣ್ಣುಮಗಳು ಕಲಿಯಬೇಕಾದ ವಿದ್ಯೆಗಳನ್ನೆಲ್ಲ ಹದಿನಾರು ವರ್ಷಗಳೊಳಗಾಗಿ ಅಷ್ಟಿಷ್ಟು ಕಲಿಸಿದರು. ಇಷ್ಟರಮಟ್ಟಿಗೆ ಪ್ರವೀಣೆಯಾದರೆ ಸಾಕು ಎಂದು ಅವರಿಬ್ಬರೂ ತೃಪ್ತರಾದರು.

ಸುಗುಣಳಿಗೆ ವಿವಾಹಕಾಲ ಹತ್ತಿರವಾಯಿತು. ನವಯೌವನದಿಂದ ಕೂಡಿದ ವಧು! ಯಾರು ನೋಡಿದರೂ ಮೋಹಿಸುವ ಮುಖ! ಬಂತು ಸುವಾಸಿನಿಗೂ ಸುದೇವನಿಗೂ ಯೋಚನೆ! ಆಗ ದೇವರನ್ನು ಮತ್ತೆ ನೆನೆದರು. "ಭಗವಂತ, ನಿನ್ನ ಮಗುವಿಗೆ ಎಲ್ಲಿ ತಕ್ಕ ವರನನ್ನು ಒದಗಿಸಿಟ್ಟಿರುವೆ, ತೋರಿಸು. ಇದೊಂದು ಕಾರ್ಯವನ್ನು ಮುಗಿಸಿ, ನಿನ್ನ ಬಳಿಗೆ ಬರುತ್ತೇವೆ." ಇದುವರೆಗೆ ಮಗುವಿನಲ್ಲಿ ಮೈಮರೆತಿದ್ದ ಆ ಮುದುಕರು ಮತ್ತೆ ಮುರಾರಿಯಲ್ಲಿ ಮೊರೆಯಿಟ್ಟರು. ದೇವನು ಪುನಃ ಇವರು ತನ್ನ ಕಡೆಗೆ ತಿರುಗುವರೆಂದು ಇಲ್ಲಿ ಒಂದು ತಂತ್ರವನ್ನು ಹೂಡಿದನು.

ಇದ್ದಕ್ಕಿದ್ದ ಹಾಗೆಯೇ ಸುದೇವನಿಗೆ ಮನಸ್ಸು ಬದಲಾಯಿಸಿತು. ತನ್ನ ಮಗುವಿಗೆ ಮದುವೆ ಮಾಡುವುದಿಲ್ಲವೆಂದೂ, ತನ್ನ ಜೀವಿತವಿರುವವರೆಗೂ ಹೀಗೆಯೇ ಇರಲೆಂದೂ, ಅನಂತರ ತಾವು ನಂಬಿರುವ ದೇವರೇ ಆಕೆಗೆ ಮಾರ್ಗ ತೋರಿಸಲಿ ಎಂದೂ ಯೋಚಿಸಿದ. ತನ್ನ ಪ್ರಿಯ ಪತ್ನಿಗೂ ಇದನ್ನೇ ತಿಳಿಸಿದ. ಹೆಂಗಸರ ಸ್ವಭಾವ ತಿಳಿದೇ ಇದೆ! ಆಕೆ ಇಷ್ಟಪಡಲಿಲ್ಲ. "ದೇವರು ತೋರಿಸುವ ವರನಿಗೆ ನಮ್ಮ ಮಗಳನ್ನು ಕೊಡಲೇಬೇಕು. ಇಲ್ಲದಿದ್ದರೆ, ಆತನಿಗೆ ಕೋಪ ಬರಬಹುದು. ಆದರಿಂದ ನಮ್ಮ ಪ್ರಿಯಪುತ್ರಿಗೆ ಯಾವುದಾದರೂ ಅನಿಷ್ಟವಾಗಬಹುದು. ಈಗ ಸರಿಯಾದ ವಯಸ್ಸು. ಇನ್ನು ತಡಮಾಡದೆ ಈ ಕಾರ್ಯ ಮೊದಲು ಮಾಡಬೇಕು" ಎಂದು ತಿಳಿಸಿದಳು. ಅದಕ್ಕೆ ಸುದೇವ —"ಯಾವ ಮನಸ್ಸು ನನ್ನ ಮಗುವಿಗೆ ಮದುವೆ ಮಾಡಬೇಕೆಂದು ಹೇಳಿತೋ ಆ ಮನಸ್ಸೇ ಈಗ ಬೇಡವೆಂದು ಹೇಳುತ್ತಿದೆ. ಆದಕಾರಣ ಅದರ ಯೋಚನೆಯನ್ನು ಬಿಡು." ಎಂದು ಹೇಳಿಬಿಟ್ಟ!

೩

ಸ್ತ್ರೀಯರು ಸ್ವತಂತ್ರರಲ್ಲ. ಸುವಾಸಿನೀ ಪತಿಯ ಅಧೀನೆ. ಆತನ ಮಾತನ್ನು ಕೇಳಲೇಬೇಕಾಯಿತು. ಲಗ್ನವು ನಿಂತಿತು. ಹುಡುಗಿ ತನ್ನ ತಾಯಿತಂದೆಯರ ಬಳಿಯಲ್ಲಿ ಕಷ್ಟವನ್ನರಿಯದೆ ಬೆಳೆಯುತ್ತಿದ್ದಳು. ಸುಗುಣಳಿಗೆ ಈಗ ಇಪ್ಪತ್ತು ವರ್ಷ. ತಂದೆತಾಯಿ ಇಬ್ಬರೂ ಹಣ್ಣು ಹಣ್ಣುಮುದುಕರು. ಪುನಃ ಅವಳ ಇಪ್ಪತ್ತನೆಯ ವಯಸ್ಸಿನಲ್ಲಿ ಮದುವೆಯ ಮಾತು ಬಂತು. ಐದು ವರುಷಗಳ ಹಿಂದೆ ಬೇಡವಾಗಿದ್ದ ಕಾರ್ಯ ಐದುವರುಷಗಳು ತಳ್ಳಿದ ಮೇಲೆ ಬೇಕಾಯಿತು. ಮೊದಲು ನೋಡಿದ್ದ ಹುಡುಗನಿಗೆ ಸುಗುಣಳನ್ನು ಗೊತ್ತುಮಾಡಿ ಲಗ್ನವನ್ನೂ ನಡೆಸಿದರು.

ಹುಡುಗನೇನೊ ಒಳ್ಳೆಯ ಮನೆತನದಲ್ಲಿ ಹುಟ್ಟಿದವ. ಈತನ ತಂದೆಯೂ ದೊಡ್ಡ ಐಶ್ವರ್ಯವಂತ. ಆದರೆ ಒಂದೇ ಹುಳುಕು! ತನಗಿರುವ ಒಬ್ಬ ಮಗನಿಗೆ ಒಳ್ಳೆಯ ಬುದ್ಧಿಯನ್ನು ಕಲಿಸಿ ತಾನು ಮಾತ್ರ ತನ್ನ ಇಷ್ಟ ಬಂದಂತೆ ಇರುತ್ತಿದ್ದನು. ದೇವರಲ್ಲಿ ಅಷ್ಟು ನಂಬಿಕೆಯಿಲ್ಲ. ಆದರೂ ತನ್ನ ಐಶ್ವರ್ಯದ ಮದದಿಂದ ತಾನೇ ದೊಡ್ಡವನೆಂದೂ, ಗುಣಾಢ್ಯನೆಂದೂ ಮೆರೆಯುತ್ತಿದ್ದ. ಮಗನನ್ನು ಕಂಡರೆ ಬಹಳ ಪ್ರೀತಿ.

ಹುಡುಗ ಸುಗುಣವುಳ್ಳ ಸುಂದರ. ಆದರೆ ತನ್ನ ತಂದೆಯಲ್ಲಿದ್ದ ಕೆಲವು ದುರ್ಗುಣಗಳು ತನ್ನೊಳಗೂ ಇರುವುದನ್ನು ಅರಿಯ. ವಿವಾಹವಾಗಿ ಎರಡು ಮೂರು ವರ್ಷಗಳು ಕಳೆದುವು. ಆದರೆ ಸುವಾಸಿನೀ ಸುದೇವರು ಸುಗುಣಳನ್ನು ಗಂಡನ ಮನೆಗೆ ಕಳುಹಿಸಲಿಲ್ಲ. ಎಂದು ಕಳುಹಿಸಬೇಕಾಗುವುದೋ ಎಂದು ಯೋಚನೆ ಹೆಚ್ಚಿತು. ಅನೇಕ ಸಾರಿ ಬಂದು ಕರೆದರು. ಸುಂದರನೇ ಅನೇಕ ಸಾರಿ ಬಂದರೂ ಕಳುಹಿಸಲಿಲ್ಲ. ಅವನ ತಾಯಿಯೂ ಕೆಲವು ವೇಳೆ ಬಂದು ಕಳುಹಿಸಲು ಕೇಳಿದಳು. "ಈ ಮುಪ್ಪಿನ ಕಾಲದಲ್ಲಿ ಇವಳನ್ನು ಕಳುಹಿಸಿ ನಾವು ಜೀವಿಸುವುದು ತಾನೆ ಹೇಗೆ?" ಎಂದು ಇಬ್ಬರೂ ಅತ್ತುಕೊಂಡರು. ಹುಡುಗನ ತಂದೆ ಬಂದು ಕೇಳಿದರೂ ಇಲ್ಲ. ಅದೇ ಸೊಲ್ಲೆ! ಇನ್ನೆರಡುದಿನ ಇಲ್ಲೇ ಇರಲೆಂದು ಹೇಳಿ ಕಳುಹಿಸಿದರು. ಹೀಗಾಗಿ, ಹುಡುಗಿಗೆ ವಯಸ್ಸು ಹೆಚ್ಚುತ್ತ ಬಂತು. ಒಂದರ ಮೇಲೆ ಒಂದರಂತೆ ಕಷ್ಟಗಳು ಪ್ರಾರಂಭವಾದವು. ಇಷ್ಟು ದಿನವೂ ಏನೂ ಯೋಚನೆ ಇಲ್ಲದೆ ಬೆಳೆದ ಹುಡುಗಿ ಈಗ ಪ್ರಪಂಚದ ಕಷ್ಟಗಳನ್ನು ಕಂಡಳು. ಒಂದು ಉಪಾಯವನ್ನು ಹುಡುಕಿದಳು. ತನ್ನ ತಂದೆಯಲ್ಲಿ ಹೋಗಿ" ಅಪ್ಪಾ, ನನ್ನದೊಂದು ಮಾತನ್ನು ಕೇಳಬೇಕು. ಕೆಲವು ದಿನಗಳ ಮಟ್ಟಿಗೆ ಅವರನ್ನು ನಮ್ಮ ಮನೆಯಲ್ಲಿಯೇ ಇಟ್ಟುಕೊಂಡರೆ ಎಲ್ಲವೂ ಸರಿಹೋಗುವುದು, ಇದೇ ನನ್ನ ಯೋಚನೆ" ಎಂದು ತಿಳಿಸಿದಳು. ಇದನ್ನು ಕೇಳಿ ಆಗಲೆಂದು ಅಳಿಯನನ್ನು ಬರಮಾಡಿಕೊಂಡರು.

ಆದರೆ ಸುಂದರನಿಗೂ, ಆತನ ತಾಯಿ ತಂದೆಗಳಿಗೂ ಇದು ಸರಿಬೀಳಲಿಲ್ಲ. ಆದರೂ ಬೇಸರಪಡದೆ ಮಗನನ್ನು

ಕಳುಹಿಸಿಕೊಟ್ಟರು. ಕೆಲವು ದಿನಗಳಲ್ಲಿ ಸುಂದರನಿಗೆ ಸುಗುಣಳನ್ನೇ ತನ್ನ ಮನೆಗೆ ಕರೆದು ತಂದು, ಎಂದಿಗೆ ಆಕೆಯಿಂದ ತನ್ನ ತಂದೆತಾಯಿಗಳ ಸೇವೆಯನ್ನು ತಾವಿಬ್ಬರೂ ಮಾಡುವೆವೋ ಎಂಬ ಯೋಚನೆ ಬಂತು. ತನ್ನ ಮಾವನಲ್ಲಿಗೆ ಹೋಗಿ ತನ್ನ ಇಚ್ಛೆಯನ್ನು ಹೇಳಿಕೊಂಡ. ಮಾವನು ಆತನನ್ನು ಹೋಗಹೇಳಿ, ಸುಗುಣಳನ್ನು ತಾವೇ ಕರೆದುಕೊಂಡು ಬರುವುದಾಗಿ ತಿಳಿಸಿ ಕಳುಹಿಸಿದರು.

ಇದರಿಂದ ಮಿತಿಮೀರಿದ ಸಂತೋಷಗೊಂಡ ಸುಂದರ ಈ ಸುದ್ದಿಯನ್ನು ತಿಳಿಸಲು ತನ್ನ ತಂದೆಯ ಮನೆಗೆ ತೆರಳಿದನು. ಇತ್ತ ಸುಂದರನನ್ನು ಎಲ್ಲರೂ ಇದಿರು ನೋಡುತ್ತಿದ್ದರು. ಅತ್ತ ಪ್ರತಿದಿನವೂ ಕರೆದುಕೊಂಡು ಹೋಗಬೇಕೆಂದು ಮನಸ್ಸುಮಾಡಿ ಹೊರಡುತ್ತಿದ್ದ ಆ ವೃದ್ಧ ದಂಪತಿಗಳು ಇವಳನ್ನು ಬಿಟ್ಟರೆ ತಮ್ಮ ಪ್ರಾಣಪಕ್ಷಿ ನಿಲ್ಲದೆಂದು ದಿನಗಳನ್ನು ಕಳೆಯುತ್ತಿದ್ದರು.

ನೋಡಿದಿರಾ, ದೇವರ ಮಾಯೆ! ವಿವಾಹವನ್ನೇ ಮಾಡಬಾರದೆಂದು ಯೋಚಿಸಿದ್ದವರು ವಿವಾಹ ಮಾಡಿದರು! ವಿವಾಹ ಮಾಡಿದವರು ಮಗಳನ್ನು ಬಿಡರು! ಎರಡು ಮನೆಯವರೂ ನೆಮ್ಮದಿಯಾಗಿರಬಹುದಾಗಿತ್ತು. ಈಗ ಇಬ್ಬರಿಗೂ ಸಂಕಟಕ್ಕೆ ಕಾರಣವಾಯಿತಲ್ಲ!

೪

ದಿನಗಳು ಹೀಗೆ ಕಳೆಯುತ್ತಿರುವಲ್ಲಿ ಆಕಸ್ಮಿಕವಾಗಿ ಸುಂದರನ ತಂದೆ ಹೃದಯವೇದನೆಯಿಂದ ಪರಲೋಕವನ್ನು ಸೇರಿದನು. ಸುಂದರನಿಗೆ ಕೋಪ ಹೆಚ್ಚಿತು. ತನ್ನ ತಂದೆ ಇದ್ದಾಗ ತನ್ನ ಪತ್ನಿ ಬಂದು ಸೇವೆಮಾಡದೆ ಇದ್ದುದಕ್ಕಾಗಿ ವ್ಯಸನಪಟ್ಟನು. ಅವನ ಮನಸ್ಸು ಕೆಟ್ಟಿತು. ಮನುಷ್ಯನ ಮನಸ್ಸು ಕೆಡಲು ಯಾವುದೋ ಒಂದು ನೆಪ. ಹೆಂಡತಿಗೆ ತಕ್ಕ ಪ್ರಾಯಶ್ಚಿತ್ತ ಮಾಡುವೆನೆಂದು ಮನಸ್ಸಿನಲ್ಲಿ ಸ್ಥಿರಮಾಡಿಕೊಂಡ. ತಾಯಿಗೂ ಇದೇ ವಿಷಯವನ್ನು ತಿಳಿಸಿದ. ಆದರೆ ತಾಯಿ ಅಂತಹ ಸ್ವಭಾವದವಳಲ್ಲ. ಪತಿಯನ್ನು ಕಳೆದುಕೊಂಡ ಸಂಕಟದಲ್ಲಿ ಮಗನೂ ಸಹ ಮನಸ್ಸು ಕೆಟ್ಟು ಮನಬಂದಂತೆ ಹೋದರೆ ಏನುಗತಿ ಎಂದು ಯೋಚಿಸಿ ನಾನಾ ಬಗೆಯಾಗಿ ಬುದ್ಧಿ ಹೇಳಿದಳು. ತಾನೇ ಹೋಗಿ ಸೊಸೆಯನ್ನು ಕರೆತರುವುದಾಗಿ ಹೇಳಿ ಸಮಾಧಾನಪಡಿಸಿದಳು. ಸುಂದರನಿಗೆ ಮತ್ತಷ್ಟು ಕೋಪ ಹೆಚ್ಚಿತು. ತನ್ನ ತಂದೆಯ ಕಾಲದಲ್ಲಿ ಇಲ್ಲದ ನಿನ್ನ ಸೊಸೆ ಎಂದಿಗೂ ಬೇಡ ಎಂದು ಗದರಿದನು. ಎಷ್ಟು ಸಮಾಧಾನ ಹೇಳಿದರೂ ಪ್ರಯೋಜನವಾಗಲಿಲ್ಲ.

ಸುಂದರ ತನ್ನ ಇಷ್ಟಬಂದಂತೆ ಮೆರೆಯಲು ಹೊರಟ. ತಂದೆ ಗಳಿಸಿಟ್ಟ ಹಣವನ್ನು ಲೆಕ್ಕವಿಲ್ಲದೆ ವ್ಯಯಮಾಡಿದ. ತಾಯಿಯ ಮಾತನ್ನೂ ಕೇಳಲಿಲ್ಲ. ಮತ್ತಾರೂ ಹೇಳುವಂತಿಲ್ಲ. ಮನೆಗೆ ಸೇರುವುದನ್ನೂ ಬಿಟ್ಟ. ಆ ಬುದ್ಧಿ ತಂದೆಯ ಬುದ್ಧಿ! ತಂದೆ ಹೊರಗೆ ತೋರಿಸದೇ ಇದ್ದರೂ ಮಗನಿಗೆ ಅದು ರಕ್ತಗತವಾಗಿಯೇ ಬಂದಿತ್ತು. ಸಂಸಾರ ಕೆಟ್ಟಿತು. ಎಲ್ಲಿ ಹಣವಿರುತ್ತದೆಯೋ ಅಲ್ಲಿ ಇದೇ ಗತಿ. ಸುಂದರನ ತಾಯಿ ಒಬ್ಬಳೇ ಮನೆಯಲ್ಲಿರುತ್ತಿದ್ದಳು.

ಈ ವಿಷಯಗಳು ಸುಗುಣಳ ಕಿವಿಗೂ ಬಿದ್ದುವು. ದಿಕ್ಕು ತೋಚದೆ ಅಂಧಕಾರದಲ್ಲಿ ಮುಳುಗಿದಳು. ತಂದೆಯಲ್ಲಿ ಹೋಗಿ ಬೇಡಿದಳು. ಇವಳ ಮೊರೆಯನ್ನು ಆಗ ಕೇಳಿದರು. ನಮ್ಮ ಮಗುವೇ ನಮಗೆ ಸಂಕಟಕಾರಿಯಾಗಿ ದೇವರನ್ನು ಮರೆಸಲು ದೂರವಾಯಿತೆ ಎಂದು ತಿಳಿದರು. ಅಂದಿನಿಂದ ತಮ್ಮ ಅಗಾಧ ಪ್ರೇಮಕ್ಕೆ ಬೆಂಕಿ ಹಚ್ಚಿದರು. ದೇವರಲ್ಲಿ ಮೊರೆಯಿಟ್ಟು ಆಕೆಯನ್ನು ಕರೆದುಕೊಂಡು ಹೋಗಿ ಸುಂದರನ ಮನೆಯಲ್ಲಿ ಬಿಟ್ಟು ಬಂದರು. ತಮ್ಮ ಕೊನೆಯ ಕಾಲವನ್ನು ಭಗವಂತನ ಧ್ಯಾನದಲ್ಲಿ ಕಳೆಯಬೇಕೆಂದು ನಿಶ್ಚಯಿಸಿದರು. ತಮ್ಮನ್ನು ಪರೀಕ್ಷಿಸಲು ದೇವರು ಈ ರೀತಿ ಮಾಡಿದನೆಂದೂ, ತಾವು ಮಾಡಿದುದು ಬಹಳ ಮೂಢತನವೆಂದೂ ತಿಳಿದು ಬಹಳ ಪಶ್ಚಾತ್ತಾಪಪಟ್ಟರು. ಹೀಗೆ ಇಳಿವಯಸ್ಸಿನಲ್ಲಿ ತಮ್ಮ ಮೂಢತನಕ್ಕಾಗಿ ಕೊರಗಿ ಕೊರಗಿ, ಸುವಾಸಿನೀ ಸುದೇವರು ಕೆಲಕಾಲದಲ್ಲಿಯೇ ದೇವರ ಪಾದವನ್ನು ಸೇರಿದರು.

ಇತ್ತ ಸುಗುಣಳ ಅವಸ್ಥೆಯನ್ನು ಕೇಳಬೇಕೇ? ಅಲ್ಲಿ ತನ್ನ ಪ್ರಿಯ ಮಾತಾಪಿತೃಗಳನ್ನು ಕಳೆದುಕೊಂಡಳು. ಇಲ್ಲಿ ಅವಳನ್ನು ಮೆಚ್ಚಿತಂದ ಮಾವ ಮಾಯವಾಗಿದ್ದ. ಅತ್ತೆಯಾದರೋ ಅರಣ್ಯವಾಸಕ್ಕಿಂತ ಕಷ್ಟತಮವಾಗಿ ಜೀವನವನ್ನು ನೀಗುತ್ತಿದ್ದಳು. ಎಲ್ಲಕ್ಕಿಂತ ಘೋರವಾದ ಸಂಕಟ ತನ್ನ ಪತಿಯದು. ನೋಡಬೇಕೆಂದು ಬಯಸಿದರೂ ಮನೆಗೆ ಬರುವಹಾಗಿಲ್ಲ. ಎಂದಾದರೂ ತಾಯಿ ಬರಹೇಳಿದರೆ "ನಾರಿ ನರಕಕ್ಕೆ ದಾರಿ" ಎಂದು ಹರಟುತ್ತ, ಅವಳು ಇರುವವರೆಗೂ ತಾನು ಮನೆ ಸೇರುವುದಿಲ್ಲವೆಂದು ಹೇಳುತ್ತಿದ್ದ. ಎಂದಾದರೂ ತನ್ನ ಪತಿ ವಿರಾಮವಾಗಿ ಸಿಕ್ಕಿದರೆ ತಾನೇ ಹೇಳಿ ಅವರ ಮನವನ್ನು ಬದಲಾಯಿಸುವೆನೆಂದು ನೆನೆಸುತ್ತಿದ್ದ ಸುಗುಣಳಿಗೆ ಅವನು ಸಿಕ್ಕುತ್ತಲೇ ಇರಲಿಲ್ಲ. ಹೀಗೆ ಕೆಲವುಕಾಲ ಕಳೆಯಿತು. ಸುಗುಣಳಿಗೂ ಅವಳ ಅತ್ತೆಗೂ ಮಾರ್ಗವೇ ತೋರದಂತಾಯಿತು. ಪ್ರಪಂಚವೇ ಬೇಡವಾಯಿತು.

೫

ಕೊನೆಗೆ ಸುಗುಣಳಿಗೆ ಒಂದು ಯೋಚನೆ ಹೊಳೆಯಿತು. ತನ್ನ ತಂದೆ ತಾಯಿ ದೇವರನ್ನೇ ನಂಬಿದ್ದರು. ಈಗ

ತಾನೂ ಹಾಗೆಯೇ ಮಾಡಿ ತನ್ನ ಇಷ್ಟಾರ್ಥವನ್ನು ಪಡೆಯುವೆನೆಂದು ನಿರ್ಧರಿಸಿದಳು. ಆ ಮೊದಲು ದೃಢ ಭಕ್ತಿಯಿಂದ ದೇವರ ಸೇವೆಗೆ ನಿಂತಳು. ಅವಳಿಗೆ ದಿನ ದಿನವೂ ಮನಸ್ಸಿಗೆ ಹರ್ಷವಾಯಿತು. ಭಗವಂತನು ಇಂದಲ್ಲ ಒಂದು ದಿನ ನನ್ನ ಮಾತನ್ನು ಕೇಳುವನು ಎಂದು ನಂಬಿದಳು. ಅನುದಿನವೂ ದೇವರಲ್ಲಿ ಭಕ್ತಿಯೂ ನಂಬು ಗೆಯೂ ಹೆಚ್ಚಿತು. ದೇವರು ತನ್ನ ಇಚ್ಛೆಯನ್ನು ನೆರ ವೇರಿಸದೆ ಇದ್ದರೆ ಇನ್ನು ಯಾರಿಂದ ಸಾಧ್ಯವೆಂದು ಅವನನ್ನೇ ಮೊರೆಹೊಕ್ಕಳು. ಅವಳ ಪೂಜೆಗಳೂ, ವ್ರತಗಳೂ ಹೆಚ್ಚಿದುವು.

ಇದನ್ನೆಲ್ಲ ನೋಡುತ್ತಿದ್ದ ಆಕೆಯ ಅತ್ತೆಗೆ ಸಂಕಟ ಹೆಚ್ಚಿತು. ಯಾವಾಗಲೂ ಅತ್ತೆಗೆ ಧೈರ್ಯ ಹೇಳುವಳು, ದೇವರನ್ನು ಪ್ರಾರ್ಥಿಸುವಳು. ತಂದೆಯಿಲ್ಲ, ತಾಯಿ ಇಲ್ಲ, ಮಾವನಿಲ್ಲ! ಕೂಡಿದ ಗಂಡನಿಗೂ ತನ್ನ ಅತ್ತೆಗೂ ಆಯುಸ್ಸು ಕೊಡೆಂದು ಕೇಳುವಳು.

ಅತ್ತ ಸುಂದರನನ್ನು ಕೇಳುವವರೇ ಇಲ್ಲ. ತನ್ನ ತಂದೆ ಸಂಪಾದಿಸಿದ ಹಣವನ್ನೆಲ್ಲ ಒಂದು ಕಾಸಿಲ್ಲದೆ ಸೂರೆ ಮಾಡಿದ್ದ. ಆತನ ಆಪ್ತ ಸ್ನೇಹಿತರೆಲ್ಲ ದೂರವಾದರು. ನೆಂಟರೂ ಇಷ್ಟರೂ ದೂರಲು ಪ್ರಾರಂಭಿಸಿದರು. ಯಾರು ಒಂದು ಕಾಲದಲ್ಲಿ ನೀನೇ ದೇವರು, ನೀನೇ ತಂದೆ, ನೀನೇ ಸ್ನೇಹಿತ, ನೀನೇ ಸಕಲವೂ ಎಂದು ಮುಖಸ್ತುತಿ ಮಾಡು ತ್ತಿದ್ದರೋ ಆ ಮಾಯಾವಿಗಳೆಲ್ಲಾ ಮಾಯವಾದರು! ಇದನ್ನು ಸುಂದರ ಯೋಚಿಸಿಯೇ ಇರಲಿಲ್ಲ. ಯಾವಾಗಲೂ ಕಾಲ ಹೀಗೆಯೇ ಇರುವುದೆಂದು ತಿಳಿದಿದ್ದ! ತನ್ನ ಕಷ್ಟ ಕಾಲದಲ್ಲಿ ಕೇಳುವವರಿಲ್ಲದೆ ಕಾಯಿಲೆಯಿಂದ ನರಳುವ ಕೀಳು ಜಾತಿಯ ನಾಯಿಯೋಪಾದಿಯಲ್ಲಿ ಮನೆಮನೆಗೂ ಅನ್ನಕ್ಕೆ ತಿರುಗುವ ಗತಿ ಬಂತು.

ಆಹಾ! ಎಂತಹ ಕೆಟ್ಟ ಪ್ರಪಂಚ! ಎಲ್ಲಾದರೂ ಯಾರೂ ಇಲ್ಲದ ಸ್ಥಳದಲ್ಲಿ ಕುಳಿತು ಒಬ್ಬನೇ ಯೋಚಿಸು ವನು. ಎಲ್ಲಿ ನನ್ನ ತಂದೆ, ಎಲ್ಲಿ ನನ್ನ ತಾಯಿ, ನನ್ನ ಸತಿಯೆಲ್ಲಿ, ನನ್ನ ಮಿತ್ರಿಯೆಲ್ಲಿ, ನನ್ನ ಸ್ನೇಹಿತರೆಲ್ಲಿ, ನನ್ನ ನೆಂಟರೆಲ್ಲಿ! ಈ ದುರವಸ್ಥೆಗೆ ಎಳೆದ ನನ್ನ ಹಣವೆಲ್ಲಿ! ಒಂದು ವೇಳೆ ನಾನು ಹಣವಿದ್ದ ಕಾಲದಲ್ಲಿ ಸಹಾಯ ಮಾಡಿದವರನ್ನು ಈಗ ಹೋಗಿ ಕೇಳಲೇ ಎಂದು ಯೋಚಿಸಿ ಮನಸ್ಸು ಗಟ್ಟಿಮಾಡಿ ತಾನು ಸಹಾಯ ಮಾಡಿದವರ ಬಳಿಗೆ ಹೋಗಿ ಕೇಳುವನು. ಒಂದು ಎಳ್ಳು ಕಾಳಿನಷ್ಟೂ ಪ್ರಯೋಜನವನ್ನು ಹೊಂದಲಿಲ್ಲ. ಅದಕ್ಕೆ ಬದಲಾಗಿ ಅನೇಕ ಅನಿಷ್ಟದ ಮಾತನ್ನು ಕೇಳಿ, ಮಾನವನ್ನು ಕಳೆದು ಕೊಂಡು, ಮನನೊಂದು ಕೊರಗಿ ಕಂಗೆಟ್ಟನು.

೬

ಸುಗುಣಳು ದಿನೇದಿನೆ ಜಗದೀಶನ ಸೇವೆಯನ್ನು ಹೆಚ್ಚಿಸಿ ಆತನಲ್ಲಿ ನಂಬುಗೆಯನ್ನು ಬೆಳೆಸಿದಳು. ತನ್ನ ಪತಿ ಎಷ್ಟೇ ಕೆಟ್ಟದ್ದರೂ ಅವಳ ಮನಸ್ಸು ಹರ್ಷವಾಗಿಯೇ ಇತ್ತು. ತನ್ನ ಪತಿ ಕೆಟ್ಟನೆಂಬ ಆನಂದವಲ್ಲ; ತಾನು ಭಗವಂತ ನನ್ನು ನಂಬುವೆನೆಂದೂ, ಆತನು ತನ್ನ ಪತಿಯನ್ನು ಕೆಡಿಸು ವುದಿಲ್ಲವೆಂದೂ ಆನಂದ.

ಒಂದು ದಿನ ಸುಗುಣ ತನ್ನ ಮನೆಯ ಸಮೀಪದಲ್ಲಿರುವ ಗುಡಿಗೆ ಹೋಗಿ ಅಲ್ಲಿ ದೇವರ ಪ್ರಾರ್ಥನೆಯಲ್ಲಿರುವಾಗ ಸುಂದರ ದಾರಿಗೆಟ್ಟು ತನ್ನ ಪ್ರಿಯ ಪತ್ನಿ ಅಲ್ಲಿರುವುದನ್ನರಿ ಯದೆ, ತನ್ನ ಶರೀರದ ಆಯಾಸವನ್ನು ಪರಿಹರಿಸಿಕೊಳ್ಳಲು ಅದೇ ದೇವಸ್ಥಾನದ ಅಂಗಳದಲ್ಲಿ ಕುಳಿತುಕೊಂಡ. ಒಳಗೆ ಯಾರೋ ಪ್ರಾರ್ಥನೆ ಮಾಡುವುದನ್ನು ಕೇಳಿಸಿಕೊಳ್ಳುತ್ತಿದ್ದ.

"ಹೇ ದೇವಾ, ನನ್ನನ್ನು ನರಕಕ್ಕೆ ತಳ್ಳಬೇಡ. ನನ್ನ ಅತ್ತೆಗೆ ನಾನು ನಂಬುಗೆಯನ್ನು ಕೊಟ್ಟದ್ದೇನೆ. ನನ್ನ ಪತಿ ಕೆಟ್ಟಿರುವುದಕ್ಕೆ ನಾನೇ ಕಾರಣಳು. ನಾನು ಆತನು ಕೇಳಿದಾಗಲೇ ಬಂದಿದ್ದರೆ ಎಲ್ಲ ಸರಿಯಾಗುತ್ತಿತ್ತು. ಈಗ ಲಾದರೂ ಆತನ ಮನಸ್ಸನ್ನು ಬದಲಾಯಿಸು. ಆತನ ತಾಯಿಯ ಸೇವೆಯನ್ನೂ, ನಿನ್ನ ಸೇವೆಯನ್ನೂ ನಮ್ಮಿಬ್ಬ ರಿಂದಲೂ ಮಾಡಿಸಿಕೊಂಡು ಇನ್ನು ಜನ್ಮಜನ್ಮಗಳಿಗೂ ಆತನನ್ನೇ ನನ್ನ ಪತಿಯನ್ನಾಗಿ ಮಾಡು." ಎಂಬ ಮಾತು ಕೇಳಿಸಿತು. ಸುಂದರನಿಗೆ ರೋಮಾಂಚವಾಯಿತು. ತಾನು ಕ್ರೂರವಾಗಿದ್ದರೂ ಆಕೆ ತನ್ನಲ್ಲಿಟ್ಟಿದ್ದ ಪ್ರೇಮವನ್ನು ನೋಡಿ ಆಶ್ಚರ್ಯವಾಯಿತು. ಇಂಥಾ ಸಾಧ್ವಿಗೆ ನನ್ನ ಈ ಮುಖ ವನ್ನು ಹೇಗೆ ತಾನೇ ತೋರಿಸಲಿ. ಇವಳು ನನ್ನಿಂದ ಎಷ್ಟು ನೊಂದಿರುವಳೋ! ಅದನ್ನು ಹರಿಸುವ ಬಗೆ ಹೇಗೆ? ಎಂದು ನಾನಾ ಯೋಚನೆಗಳು ಇವನ ಮನಸ್ಸಿಗೆ ತೋರ ಲಾರಂಭಿಸಿದವು. ಇವಳಿಗೆ ತನ್ನ ನೀಚಮೋರೆಯನ್ನು ತೋರಿಸಲಾರೆನೆಂದು ಹೊರಡುವಷ್ಟರೊಳಗೆ ಸುಗುಣ ತನ್ನ ಪತಿಯನ್ನು ಅಪ್ಪಿಗಟ್ಟಿದಳು. ತನ್ನ ಅಪರಾಧಕ್ಕಾಗಿ ದೇವರೆದುರಿಗೆ ಕ್ಷಮಾಪಣೆ ಬೇಡಿದಳು.

ಸುಗುಣಳ ದೀನಭಾವವನ್ನು ಕಂಡು ಸುಂದರನ ಕಲ್ಲೆದೆ ಕರಗಿತು. ಇಬ್ಬರೂ ಮನೆಯನ್ನು ಸೇರಿ ತಾಯಿಯ ಪಾದಕ್ಕೆ ನಮಿಸಿದರು. ಮಗಳು ಹೆಚ್ಚೊ, ಸೊಸೆ ಹೆಚ್ಚೊ ಯಾರಿಗೆ ಗೊತ್ತು! ಎಲ್ಲವೂ ಭಗವಂತನ ಕೃಪೆ.

# ಗ್ರಂಥಾವಲೋಕನ

**ವೀರಶೈವ** (ತ್ರೈಮಾಸಿಕ); ಕ್ರೌ ೧/೪; ಪುಟ ೭೦; ಬೆಲೆ ರೂ. ೧–೫೦ ನ.ಪೈ.

ಇದು ಅಖಿಲ ಭಾರತ ವೀರಶೈವ ಮಹಾಸಭೆಯ ಪ್ರಮುಖ ಪತ್ರಿಕೆ. ಶ್ರೀ ಡಿ. ಸಿ. ಪಾವಟೆ ಮತ್ತು ಡಾ|| ಎಸ್. ನಂದಿಮಠ ಇವರು ಇದರ ಸಂಪಾದಕರು. ಪ್ರಕೃತ ಸಂಚಿಕೆಯಲ್ಲಿ ಪ್ರೊ|| ಜಿ. ಎಂ. ಉಮಾಪತಿ ಶಾಸ್ತ್ರಿಗಳು "ಸರ್ವಜ್ಞ ವಚನಗಳು", ಡಾ|| ನಂದಿಮಠರು "ಧರ್ಮಾಪದ", "ವೇದಗಳ ಕಾಲದಲ್ಲಿ ವೀರಶೈವ ಪ್ರಗತಿ" ಕುರಿತು ನ್ಯಾಯಮೂರ್ತಿ ಟಿ. ಎನ್. ಮಲ್ಲಪ್ಪನವರು, ಶ್ರೀ ಜ. ಚ. ನಿ. ಅವರು "ಕರ್ಮ–ಧರ್ಮ" ಕುರಿತು, ಶ್ರೀ ನವಕಲ್ಯಾಣ ಮಠದ ಕುಮಾರಸ್ವಾಮಿಗಳು "ಬುದ್ಧ ಬಸವರು" ಕುರಿತು ಉತ್ತಮ ಲೇಖನಗಳನ್ನು ಬರೆದಿದ್ದಾರೆ. ಉಪಯುಕ್ತ ಸಂಪಾದಕೀಯ ಪ್ರಕಟಣೆಗಳಿವೆ.

ಶ್ರೀ ಡಿ. ಸಿ. ಪಾವಟೆಯವರು ಕರ್ಣಾಟಕ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ, ವೀರಶೈವ ಮಹಾಸಭೆ ಅಧ್ಯಕ್ಷರಾಗಿ, ಭಾರತೀಯ ಶಿಕ್ಷಣ ಶಾಸ್ತ್ರವಿಶಾರದರಾಗಿ ಉತ್ತಮ ಸೇವೆಯನ್ನು ನಾಡಿಗೆ ಸಲ್ಲಿಸಿದ್ದಾರೆ. ಅವರು ಮಹಾಸಭಾಧ್ಯಕ್ಷರಾದಮೇಲೆ ಸಮಾಜ ಸಂಸ್ಕೃತಿಗಳ ಉನ್ನತಿಗಾಗಿ ಈ ವೀರಶೈವ ತ್ರೈಮಾಸಿಕವನ್ನು ಪ್ರಾರಂಭಿಸಿದ್ದಾರೆ. ಇದು ಕೇವಲ ವೀರಶೈವರಿಗೇ ಅಲ್ಲ ಸಾಹಿತ್ಯಾಭಿಮಾನಿಗಳಾದ ಇತರರಿಗೂ ಉಪಕಾರಿಯೆನಿಸಿದೆ. ಧರ್ಮ ಮತ್ತು ಸಾಹಿತ್ಯ ಪ್ರಿಯರೆಲ್ಲರಿಗೂ ಇದು ಸ್ವಾಗತಾರ್ಹವಾಗಿದೆ.

ಪತ್ರಿಕೆಯ ಕಾಗದ, ಮುದ್ರಣ, ರಕ್ಷಾಪತ್ರ ಎಲ್ಲವೂ ಚೆನ್ನಾಗಿವೆ.

**ಸಂಸ್ಕರಣ ಸಂಚಿಕೆ**; ಕ್ರೌ ೧/೪: ಪುಟ ೪೭; ಬೆಲೆ ೫೦ ನ.ಪೈ.

ಬೆಂಗಳೂರಿನ ಸಾರ್ವಜನಿಕರ ಪರವಾಗಿ ಮೇಯರ್ ಶ್ರೀ ಕೆ. ಎಂ. ನಂಜಪ್ಪನವರ ಹಿರಿಯತನದಲ್ಲಿ ನಡೆದ ಕನ್ನಡ ರಾಜ್ಯೋತ್ಸವ ಸಮಿತಿಯವರು ಈ ಸ್ಮಾರಕ ಸಂಚಿಕೆಯನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಕನ್ನಡ ನಾಡು ನುಡಿಗಳನ್ನು ಕುರಿತಾದ ಹಲವು ಲೇಖನಗಳೂ ಚಿತ್ರಗಳೂ ಇವೆ. ಇದರ ನಿರ್ದೇಶಕರು ಶ್ರೀ ಬಿ. ಎನ್. ಗುಪ್ತರು, ಸಂಪಾದಕರು ಶ್ರೀ ಎಸ್. ಗೋಪಾಲಗೌಡ, ಎಂ.ಎಲ್.ಎ. ಅವರು. ಸಂಚಿಕೆಯು ವಾಚನಾರ್ಹವಾಗಿದೆ. ಕಾಗದ, ಮುದ್ರಣ, ರಕ್ಷಾಪತ್ರ ಚೆನ್ನಾಗಿದೆ.

**ಕ್ಷಯಮಾಸ ವಿಮಾಮಾಂಸಾ**; ಡೆಮ್ಮಿ ೧/೮; ಪುಟ ೧೦೪; ಬೆಲೆ ರೂ. ೨-೫೦ ನ.ಪೈ.; ರಚಿಸಿದವರು: ಶ್ರೀಯುತ ವಿದ್ವಾನ್ ಕೆ. ವಾಸುದೇವ ಸೋಮಯಾಜೀ, ಮೈಸೂರು.

ಮೈಸೂರು ಸಂಸ್ಕೃತ ಕಾಲೇಜಿನ ಧರ್ಮಶಾಸ್ತ್ರದ ಪ್ರಾಧ್ಯಾಪಕರಾದ ಇವರು ಪಂಚಾಂಗಗಳಲ್ಲಿ ಆಗಾಗ ಬರುವ ಅಧಿಕಮಾಸ ಕ್ಷಯಮಾಸಗಳ ವಿಷಯಗಳನ್ನು ಕುರಿತು ಈ ಗ್ರಂಥದಲ್ಲಿ ಶಾಸ್ತ್ರ ಸಮ್ಮತವಾಗಿ ವಿವೇಚಿಸಿದ್ದಾರೆ. ಈ ಗ್ರಂಥವು ಸರಳವಾದ ಸಂಸ್ಕೃತ ಭಾಷೆಯಲ್ಲಿ ರಚಿತವಾಗಿದೆ. ವಿಚಾರಪೂರ್ಣವಾಗಿದೆ. ವಾಚನಾರ್ಹವಾಗಿದೆ. ಈ ಉಪಯುಕ್ತ ಗ್ರಂಥವು ಕನ್ನಡದಲ್ಲಿಯೂ ಭಾಷಾಂತರವಾಗಿ ಬರಲಿ ಎಂಬುದು ನಮ್ಮ ಮನದಾಶೆ. ಪ್ರಕೃತ ಗ್ರಂಥದಲ್ಲಿ ಈ ವರ್ಷ ಅಧಿಕಮಾಸವಾಗಿ ಬಂದಿರುವ ಆಶ್ವಯುಜ, ಕ್ಷಯಮಾಸವಾಗಿ ಬಂದಿರುವ ಮಾರ್ಗಶೀರ್ಷಗಳ ವಿಚಾರವನ್ನು ಚರ್ಚಿಸಿದ್ದಾರೆ. ಸುಮಾರು ೪೦ ಪ್ರಾಚೀನ ಗ್ರಂಥಗಳಿಂದ ತಮ್ಮ ವಾದವನ್ನು ಸಮರ್ಥಿಸಿದ್ದಾರೆ.

ಕಾಗದ, ಮುದ್ರಣ, ರಕ್ಷಾಪತ್ರ ಎಲ್ಲವೂ ತೃಪ್ತಿಕರವಾಗಿವೆ.

—ಶೂಲಪಾಣಿ

**ದತ್ತಪುತ್ರ** (ಕಥಾಸಂಕಲನ): ಲೇಖಕರು: ಶ್ರೀ ಎಸ್. ನಾರಾಯಣ ಬಲ್ಲಾಳ, ಉಡುಪಿ; ಪ್ರಕಾಶಕರು: ರೇಖಾ ಪ್ರಕಾಶನ, ಉಡುಪಿ; ಆಕಾರ ಕ್ರೌನ್ ೧/೮; ಪುಟಗಳು ೫೫; ಬೆಲೆ ಒಂದು ರೂಪಾಯಿ.

ಈ ಕಥಾಸಂಕಲನದಲ್ಲಿ ಆರು ಕಥೆಗಳು ಸೇರಿವೆ. ಹೆಸರಿಗೆ ತಕ್ಕಂತೆ ದತ್ತಪುತ್ರ ಎಂಬ ಕಥೆ ಮೊದಲನೆಯದಾಗಿದ್ದರೆ ಚೆನ್ನಾಗಿತ್ತು. ಎಲ್ಲ ಕಥೆಗಳಲ್ಲೂ ಸಹಜತೆ (Realism) ಇದೆ; ಇದಕ್ಕೆ ಕಾರಣ ಕಥೆಗಾರರೇ ಹೇಳಿರುವಂತೆ ಒಂದೊಂದು ಕಥೆಯೂ ಒಂದೊಂದು ಘಟನೆಯಿಂದ ಪ್ರೇರಿತವಾದವುಗಳು. ಕಂಡುದನ್ನು ಕಂಡಂತೆ ಹೇಳಿಬಿಡುವುದು ಸಹಜವೇ ಆದರೂ, ಅದರಿಂದ ಓದುಗರ ಮೇಲೆ ಸತ್ಪರಿಣಾಮವುಂಟಾಗುವಂತೆ ಕಲೆಯ

ಕಡೆಗೂ ಗಮನವಿರಬೇಕು. ಕಳ್ಳ ಕದ್ದ ಎಂಬುದು ಸಹಜ; ಆದರೆ, ಆ ಕಳ್ಳ ಏನಾದ ಎಂಬುದರಲ್ಲಿ ಕಲೆಯ ಸತ್ಪರಿಣಾಮ ನಿಂತಿದೆ. ಈ ದೃಷ್ಟಿಯಿಂದ ಬೇಸ್ತು ಬಿದ್ದ ಪ್ರಣಯಿ, ಕತ್ತಲಲ್ಲಿ ನಡೆಯುವವು, ಸಿಗದ ಸೀಟು, ದತ್ತ ಪುತ್ರ – ಈ ಕಥೆಗಳಲ್ಲಿ ಸಹಜತೆಯೂ ಇದೆ; ಕಲೆಯೂ ಇದೆ; ಸತ್ಪರಿಣಾಮವೂ ಇದೆ. ಇವೆಲ್ಲ ಸ್ತ್ರೀ ಪುರುಷರ ಆಚಾರ ವಿಚಾರಗಳಿಗೆ ಸಂಬಂಧಪಟ್ಟುವೇ ಆದಾಗ್ಯೂ ಅವುಗಳಲ್ಲಿ ಓದುಗರು ಗ್ರಹಿಸತಕ್ಕ ನೀತಿ ಅಡಗಿದೆ. ಆದರೆ, "ಬ್ರಹ್ಮನ ಆದರ್ಶ" ಎಂಬ ಕಥೆ ಸಹಜವಾದರೂ ಪರಿಣಾಮದಲ್ಲಿ ಜಾರಿದೆ. ನಿಂಗಿ ಮರುದಿನ ಕೆರೆಯಲ್ಲಿ ತೇಲುತ್ತಿದ್ದುದೇನೋ ಸಹಜವಾದರೂ, ಭಟ್ಟರನ್ನು ಬ್ರಹ್ಮನ ಪುನರಾವತಾರವಾಗಿಯೇ ಉಳಿಸಿದುದು ಕಳ್ಳ ಕದಿಯುವುದೇ ಸರಿ ಎಂಬಂತಾಗಿದೆ. ಇದನ್ನು ಸರಿಪಡಿಸಬೇಕು. "ಮುಗಿಯದ ಯೋಚನೆ" ಎಂಬ ಕಥೆ ನಿಜವಾಗಿಯೂ ಉನ್ನತ ಮಟ್ಟಕ್ಕೆ ಸೇರಿದ್ದು. ಪ್ರಾಮಾಣಿಕತೆಗೆ ತಪ್ಪಿತಲೆ ಮರೆಸಿಕೊಂಡರೂ ಧರ್ಮದೃಷ್ಟಿ ವ್ಯಕ್ತಿಯನ್ನು ಬಾಧಿಸುತ್ತಿತ್ತು. ಇದರ ಪರಿಣಾಮವೇನೆಂಬುದನ್ನು ಓದುಗರು ಊಹಿಸಬಲ್ಲರು. ಶ್ರೀಮರ್ತಿ ಬಲ್ಲಾಳರ "ಬಣ್ಣದ ಕುಂಚ" ಪರಿಪುಷ್ಟವಾಗಿದೆ. ಜನಜೀವನದ ಹಲವಾರು ಚಿತ್ರಗಳು ಇದರಿಂದ ವಿಕಸಿತವಾಗಲಿ.

**ಜಾರುಬಂಡೆ** (ಕಾದಂಬರಿ): ಲೇಖಕರು: ಶ್ರೀ ಪ. ಸು. ಭಟ್ಟ, ಎಂ.ಎ., ಬೆಂಗಳೂರು; ಪ್ರಕಾಶಕರು; ವಸಂತ ಪ್ರಕಾಶನ, ಬೆಂಗಳೂರು; ಆಕಾರ ಕ್ರೌನ್ ೧/೮; ಪುಟಗಳು ೧೧೮; ಬೆಲೆ ರೂ. ೧–೫೦ ನ.ಪೈ.

ಯುವಕರು ಸ್ತ್ರೀ ವ್ಯಾಮೋಹಕ್ಕೆ ಸಿಕ್ಕಿದರೆ ಅವರು ಮರಳಿ ಚೇತರಿಸಿಕೊಳ್ಳಲಾರರು. ಅದೊಂದು ಜಾರುಬಂಡೆ; ಜಾರುಬಂಡೆಯ ಮೇಲೆ ಒಮ್ಮೆ ಜಾರಿದರೆ ಮತ್ತೆ ಏಳಲಾರರು ಎಂಬ ನೀತಿಯನ್ನು "ಜಾರುಬಂಡೆ" ಮಲೆನಾಡಿನ ಜೀವನ ವಿಧಾನದಲ್ಲಿ ಚಿತ್ರಿಸುತ್ತದೆ. "ಜಾರುಬಂಡೆ" ಎಂಬ ನಾಮ ಅನ್ವರ್ಥವಾಗಿದೆ. ಅನಂತನೆಂಬ ಯುವಕ ಶೀಲಾ ಎಂಬ ಯುವತಿಯನ್ನು ಮೋಹಿಸಿ, ಆಕೆಯ ನಿಜಪತಿ ಶ್ರೀನಿವಾಸನ ಮನೆಗೂ ನುಗ್ಗಿ, ಮಾಯ ಮಾಟಗಳ ಸೆಳೆತದಲ್ಲಿ ಆತನ ದುಷ್ಟಸಖ ಭೈರಪ್ಪನ ಜಾಡು ಹಿಡಿದು ಕೆಟ್ಟುಹೋದ ಕಥೆ ಇದು. ಕೊನೆಗೆ ಕಾಲ ಮೀರಿದ ಮೇಲೆ ತನ್ನ ತಪ್ಪನ್ನು ತಿಳಿದುಕೊಂಡ ಅನಂತ. ಈ ಗ್ರಂಥಕ್ಕೆ ವಿಜಯಾ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಶ್ರೀ ಜಿ. ವೆಂಕಟಸುಬ್ಬಯ್ಯನವರು ಮುನ್ನುಡಿ ಬರೆದಿದ್ದಾರೆ. ಇವರು ಹೇಳುವಂತೆ ಇದೊಂದು ಕಾದಂಬರಿಯಾಗಬಲ್ಲ ನೀಳ್ಗತೆ. ಇದಕ್ಕೆ ಅನೇಕ ಘಟನೆಗಳ ಮೂಲಕ ಸಾಕಷ್ಟು ಪುಷ್ಟಿ ದೊರೆತರೆ ಒಂದು ಸುಂದರ ಕಾದಂಬರಿಯಾಗುತ್ತದೆ. ಗ್ರಂಥಕರ್ತರು ಇದನ್ನು ಗಮನಿಸುವರೆಂದು ನಂಬಿದ್ದೇವೆ.

**ಶರೀಫರ ಜನಪ್ರಿಯ ಪದಗಳು** (ಸಂಕಲನ): ಲೇಖಕರು: ಶ್ರೀ ಪುಣ್ಯಶ್ಲೋಕ ಶರೀಫ ಸಾಹೇಬರು, ಶಿಶುವಿನಾಳ, ಸಿಗ್ಗಾಂ ತಾಲ್ಲೂಕು, ಧಾರವಾಡ ಜಿಲ್ಲೆ; ಸಂಪಾದಕರು: ಡಾ॥ ಡಿ. ಎಸ್. ಕರ್ಕಿ ಮತ್ತು ತಲ್ಲೂರ ರಾಯನಗೌಡ; ಪ್ರಕಾಶಕರು: ಶ್ರೀ ಶರೀಫ ಸಾಹಿತ್ಯ ಸಮಿತಿ, ಶಿಶುವಿನಾಳ; ಆಕಾರ ಕ್ರೌನ್ ೧/೮; ಪುಟಗಳು ೮೨; ಬೆಲೆ ಒಂದು ರೂಪಾಯಿ.

ಈ ಕವನಸಂಗ್ರಹ ಶ್ರೀ ಶರೀಫ ಸಾಹಿತ್ಯದ ಮೊದಲನೆಯ ದಳ. ಪುಣ್ಯಶ್ಲೋಕ ಶರೀಫ ಸಾಹೇಬರು ೧೯ನೆಯ ಶತಮಾನದಲ್ಲಿ (೧೮೧೯–೧೮೮೯) ಧಾರವಾಡ ಜಿಲ್ಲೆಯಲ್ಲಿ ಬಾಳಿ ಬೆಳಗಿದವರು. ಈ ಸಾಧುಪುರುಷರ ೨೮ ಹಾಡುಗಳು ಮೊದಲನೆಯ ಭಾಗದಲ್ಲಿಯೂ, ಕವಿಕಾವ್ಯ ಪರಿಚಯವು ಎರಡನೆಯ ಭಾಗದಲ್ಲಿಯೂ ಅಡಕವಾಗಿದೆ. ಒಂದೊಂದು ಹಾಡಿನ ಎಡಪಕ್ಕದಲ್ಲೂ ಆ ಹಾಡಿನ ಭಾವ ಪರಿಚಯ ಕೊಟ್ಟಿದೆ. ಸಂಪಾದಕರಾದ ಡಾ॥ ಕರ್ಕಿಯವರು ಹೇಳಿರುವಂತೆ ಈ ಹಾಡುಗಳು ಅನುಭವ ಗೀತೆಗಳ ವರ್ಗಕ್ಕೆ ಸೇರಿದವುಗಳು. ಈ ಹಾಡುಗಳಿಗೆ ಕನ್ನಡ ನಾಡಿನಲ್ಲಿ ಪ್ರಚಾರ ದೊರೆಯಬೇಕಾಗಿದೆಯೆಂಬುದು ಒಪ್ಪತಕ್ಕ ಮಾತು. ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಸರ್ಪಭೂಷಣ ಶಿವಯೋಗಿ, ಪುರಂದರದಾಸ, ಕನಕದಾಸ ಮುಂತಾದ ಸಾಧುಸಂತರ ಹಾಡುಗಳಂತೆ ಶ್ರೀ ಶರೀಫರ ಹಾಡುಗಳೂ ಸಮಾಜ ನೀತಿ, ಜೀವನ ತತ್ತ್ವ, ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಜನಪದ ಭಾಷೆಯಲ್ಲಿ ಬೋಧಿಸುತ್ತವೆ.

**ಅವ್ಯಕ್ತ ದರ್ಶನ** (ಪ್ರಬಂಧ, ಲೇಖನ, ಭಾಷಣಗಳ ಸಂಕಲನ): ಲೇಖಕರು: ದಿವಂಗತ ಸರ್ ಜಗದೀಶ ಚಂದ್ರ ಬೋಸರು, ಕಲ್ಕತ್ತ; ಕನ್ನಡಿಸಿದವರು: ದಿವಂಗತ ಕಾಪಸೆ ರೇವಪ್ಪನವರು, ಹಲಸಂಗಿ; ಪ್ರಕಾಶಕರು: ಶ್ರೀ ವ್ಹಿ. ಎಸ್. ಸಿಂಪಿ, ಎಂ.ಎ., ಶ್ರೀ ಅರವಿಂದ ಗ್ರಂಥಾಲಯ, ಚಡಚಣ, ಬಿಜಾಪುರ ಜಿಲ್ಲೆ; ಆಕಾರ ಕ್ರೌನ್ ೧/೮; ಪುಟಗಳು ೬೯; ಬೆಲೆ ರೂ. ೧–೨೫ ನ.ಪೈ.

ಈ ಗ್ರಂಥ ಶ್ರೀ ಅರವಿಂದ ಗ್ರಂಥಾಲಯದ ೧೪ನೆಯ ಕುಸುಮ. ಶ್ರೇಷ್ಠ ವೈಜ್ಞಾನಿಕರೂ, ದಾರ್ಶನಿಕರೂ ಆದ ದಿವಂಗತ ಸರ್ ಜಗದೀಶಚಂದ್ರ ಬೋಸರ ಪ್ರಬಂಧಗಳು, ಲೇಖನಗಳು ಮತ್ತು ಭಾಷಣಗಳು ಮೊದಲು "ಅವ್ಯಕ್ತ" ಎಂಬ ಬಂಗಾಳಿ ಪುಸ್ತಕದಲ್ಲಿ ಪ್ರಕಟವಾದುವು. ಈ

ಪುಸ್ತಕದಿಂದ ದಿವಂಗತ ಕಾಪಸೆ ರೇವಪ್ಪನವರು ಕೆಲವನ್ನು ಆರಿಸಿ ಕನ್ನಡಿಸಿದರು. ಶ್ರೀ ಸಿಂಪಿ ಲಿಂಗಣ್ಣನವರು ಹೇಳುವಂತೆ ಜಗಜ್ಜನನಿಯನ್ನು ಮಮತಾರೂಪದಲ್ಲಿಯೂ, ಸಂಹಾರ ರೂಪದಲ್ಲಿಯೂ ಕಂಡವರು ದಿವಂಗತ ಸರ್ ಜಗದೀಶಚಂದ್ರ ಬೋಸರು. ಅವರು ಅನುಭವಿಸಿದ ಅಗೋಚರವಾದ ಅವ್ಯಕ್ತವಾದ ದಾರ್ಶನಿಕ ತತ್ತ್ವಗಳನ್ನು ಅವರ ಮಾತಿನಲ್ಲೇ ಗೋಚರವಾಗುವಂತೆ ವ್ಯಕ್ತವಾಗುವಂತೆ ಮಾಡಿದ್ದಾರೆ ಪ್ರಕಾಶಕರು ಈ "ಅವ್ಯಕ್ತ ದರ್ಶನ"ದಲ್ಲಿ. ಇದೊಂದು ಉತ್ತಮ ವಿಚಾರ ಸಾಹಿತ್ಯ. ಈ ಸಂಕಲನದಲ್ಲಿ ದಿವಂಗತ ಸರ್ ಜಗದೀಶಚಂದ್ರ ಬೋಸರ ದಿಟ್ಟತನ, ಸಹೃದಯತೆ, ಸಾಹಸ, ಸಂಯಮ, ವಿನಯಶೀಲತೆ - ಇತ್ಯಾದಿ ಗುಣಗಳನ್ನು ಕಾಣಬಹುದು.

**ಬಿಳಿಯ ಹಾಳೆಯ ಮೇಲೆ** (ಕವನ ಸಂಗ್ರಹ): ಲೇಖಕರು: ಶ್ರೀ ಕೆ. ವಿರೂಪಾಕ್ಷ ಗೌಡ; ಪ್ರಕಾಶಕರು: ಶ್ರೀ ಕೊಟ್ಟೂರೇಶ ಪ್ರಕಾಶನ, ಹಗರಿಬೊಮ್ಮನಹಳ್ಳಿ (ಬಳ್ಳಾರಿ ಜಿಲ್ಲೆ); ಆಕಾರ ಕ್ರೌನ್ ೧/೮; ಪುಟಗಳು ೪೫; ಬೆಲೆ ೭೫ ನ.ಪೈ.

ಈ ಕವನ ಸಂಗ್ರಹಕ್ಕೆ "ಬಿಳಿಯ ಹಾಳೆಯ ಮೇಲೆ" ಎಂದು ಏಕೆ ಹೆಸರಿಟ್ಟರೋ ತಿಳಿಯದು. ಅದು ಅಂಕಿತ ನಾಮವೋ, ಅನ್ವರ್ಥ ನಾಮವೋ ಹೇಳುವಂತಿಲ್ಲ. ಕಾರಣವನ್ನು ಹುಡುಕಲು "ಬಿಳಿಯ ಹಾಳೆಯ ಮೇಲೆ" ಎಂಬ ಕವನವನ್ನು ಓದಿದಾಗ, ಅದರಲ್ಲಿ ಕೈಬಿಟ್ಟುಹೋದ ಆದವಾನಿ, ಆಲೂರು, ರಾಯದುರ್ಗದ ಜನರನ್ನು "ಕನ್ನಡವ ಬಿಡಬೇಡಿ; ಕನ್ನಡಕೆ ಪ್ರಾರ್ಥಿಸುತ| ಕನ್ನಡವ ದಿನನಿತ್ಯ ಬಾಳಿ ನೀವು" ಎಂಬ ಕೋರಿಕೆ ಇತ್ತು. ಆದುದರಿಂದ, ಈ ಕವನಕ್ಕೂ, ಕವನ ಸಂಗ್ರಹಕ್ಕೂ "ಕೋರಿಕೆ" ಎಂಬ ನಾಮಧೇಯ ಒಪ್ಪುತ್ತಿತ್ತು. ಹಾರೈಕೆ, ವಿಚಿತ್ರ, ಒಂದೇ ಕಾಲ, ಜೀವನ-ವೇದನೆ, ಈ ಕವನಗಳು ಚೆನ್ನಾಗಿವೆ. ಶ್ರೀ ಗೌಡರಲ್ಲಿ ರಸಕ್ಕೆ ತಕ್ಕ ಭಾವ, ಭಾವಕ್ಕೆ ತಕ್ಕ ಶೈಲಿ - ಇವು ಮತ್ತಷ್ಟು ಪಕ್ವವಾಗಲೆಂದು ಹಾರೈಸುತ್ತೇವೆ.

**ಭಕ್ತ ಶಬರಿ** (ಗೀತ ನಾಟಕ): ಲೇಖಕರು: 'ತಿರುಕ'; ಪ್ರಕಾಶಕರು: ಅನಾಥ ಸೇವಾಶ್ರಮ, ಮಲ್ಲಾಡಿಹಳ್ಳಿ, ಹೊಳಲ್ಕೆರೆ ತಾಲ್ಲೂಕು; ಆಕಾರ ಕ್ರೌನ್ ೧/೮; ಪುಟ ೮೦; ಬೆಲೆ ೫೦ ನ.ಪೈ.

ಇದು ಬಾಳ ಬೆಳಕು ಸಾಹಿತ್ಯ ಮಾಲೆಯ ೩೩ನೆಯ ಕಿರಣ. ಲೇಖಕರು ಈ ಗೀತನಾಟಕವನ್ನು ಅನಾಥ ಸೇವಾಶ್ರಮದ ವಿದ್ಯಾರ್ಥಿನಿಯರಿಂದ ಯಶಸ್ವಿಯಾಗಿ ಅಭಿನಯಿಸಿ ನೋಡಿದ್ದಾರೆ. ಎಂದಮೇಲೆ ಏಳು 'ನೋಟ'ಗಳುಳ್ಳ ಈ ನಾಟಕದ ರಚನೆ ಚೆನ್ನಾಗಿದೆಯೆಂದು ಮತ್ತೆ ಹೇಳಬೇಕಾಗಿಲ್ಲ. ಅಲ್ಲದೆ, ಸುಲಭವಾದ ಶೈಲಿಯಲ್ಲಿ ರಚಿಸಿರುವುದು ಮತ್ತಷ್ಟು ಹಿತಕರವಾಗಿದೆ. ಅಪ್ರತಿಮ ಶ್ರೀ ರಾಮಭಕ್ತೆ ಶಬರಿಯ ಕಥೆ ಶ್ರೀಮದ್ರಾಮಾಯಣದಲ್ಲಿ ಒಂದು ಗುರುತರವಾದ ಸನ್ನಿವೇಶವನ್ನು ಒದಗಿಸಿಕೊಟ್ಟಿದೆ. ಈ ಸನ್ನಿವೇಶವನ್ನು ಲೇಖಕರು ಸ್ವಾರಸ್ಯವಾಗಿ ಚಿತ್ರಿಸಿದ್ದಾರೆ.

**ಸಹಕಾರ ಪಂಚತಂತ್ರ ಮತ್ತು ಕೂಡಿ ದುಡಿಯೋಣ**: ಲೇಖಕರು: ಶ್ರೀ ಕುಮಾರ ವೆಂಕಣ್ಣ; ಪ್ರಕಾಶಕರು: ಶ್ರೀ ಪ ಸು. ಭಟ್ಟ, ಮ್ಯಾನೇಜಿಂಗ್ ಡೈರೆಕ್ಟರ್, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು; ಆಕಾರ ಡೆಮ್ಮಿ ೧/೮; ಪುಟಗಳು (ಕ್ರಮವಾಗಿ) ೩೪ ಮತ್ತು ೩೮; ಬೆಲೆ ಕೊಟ್ಟಿಲ್ಲ.

ಇವೆರಡು ಪ್ರಕಟನೆಗಳಿಗೂ ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರದ ಅಧ್ಯಕ್ಷರಾದ ಶ್ರೀ ಕೆ. ವಿ. ಶಂಕರಗೌಡರು ನಿವೇದನೆ ಬರೆದಿದ್ದಾರೆ. ಅವರು ಹೇಳಿರುವಂತೆ ನಮ್ಮ ದೇಶದಲ್ಲಿ ಉಳುವವರೆಲ್ಲ ಕೂಡಿ-ಸಹಕರಿಸಿ-ವ್ಯವಸಾಯದಲ್ಲಿ ಪಾಲುಗೊಂಡರೆ ಮಾತ್ರವೇ ವ್ಯವಸಾಯದ ಅಭಿವೃದ್ಧಿ ಹಾಗೂ ಹಳ್ಳಿಗಳ ಶಾಂತಿ ಮತ್ತು ಸಂಪತ್ಸಾಧನೆ. ಈ ದಿವ್ಯಸೂತ್ರ ಮನಸ್ಸಿಗೆ ಹಿಡಿಸುವಂತೆ ಸರಳವಾಗಿ ಬರೆದ ಪುಸ್ತಕಗಳಿವು. ಕಥನ ವಿಧಾನ ಚೆನ್ನಾಗಿದೆ. ಇಂತಹ ಪುಸ್ತಕಗಳನ್ನು ಹೆಚ್ಚು ಹೆಚ್ಚಾಗಿ ಪ್ರಕಟಿಸುವುದು ಒಳಿತು.

—ಡಿ. ಆರ್. ರಾಮಯ್ಯ

**ಕನಕದಾಸ ಕೀರ್ತನ ಸ್ವರಾವಳಿ**: ಲೇಖಕರು: ಶ್ರೀ ಎಚ್. ಕೆ. ಅಶ್ವತ್ಥನಾರಾಯಣ ಶಾಸ್ತ್ರಿ; ಪ್ರಕಾಶಕರು: ವಿದ್ವಾನ್ ಕೆ. ಮಧುಸೂದನರಾವ್; ಸೈಜು ೧/೮ ಡೆಮ್ಮಿ; ಪುಟಗಳು ೧೧೨; ಬೆಲೆ ರೂ. ೩-೫೦ ನ.ಪೈ.

ಕರ್ನಾಟಕದ ಏಕೀಕರಣದ ನಂತರ ಹಲವು ಮುಖ ಕನ್ನಡ ಸಂಸ್ಕೃತಿಯ ಅಭ್ಯುದಯ ಸೂಚಕವಾದ ಉತ್ಸಾಹವು ಕಾಣಬರುತ್ತಿರುವುದು ಸ್ವಾಗತಾರ್ಹ. ಇಂತಹ ಉತ್ಸಾಹಗಳಲ್ಲಿ ಒಂದಾದ ಶ್ರೀ ಅಶ್ವತ್ಥನಾರಾಯಣ ಶಾಸ್ತ್ರಿಗಳ ಈ ಹೊಸ ಹೊತ್ತಿಗೆಯು ಲೋಕೋಕ್ತಿಗಳು, ಮತ್ತು ಭಕ್ತಿ ಜ್ಞಾನಗಳ ಶ್ರೇಷ್ಠತೆಗಳೇ ಸಾಹಿತ್ಯವಸ್ತುವಾಗುಳ್ಳ, ಸಂಗೀತಕ್ಕೆ ಅಳವಡಿಸಲ್ಪಟ್ಟಿರುವ, ಮತ್ತು ಅಳವಡಿಸಲು ಹೊಂದಿಕೊಳ್ಳುವ ಶ್ರೀ ಕನಕದಾಸ ಕೀರ್ತನ ಸ್ವರಾವಳಿಯ ರೂಪದಲ್ಲಿ ಹೊರಬಿದ್ದಿರುವುದನ್ನು ಕನ್ನಡ ಭಾಷಾಭಿಮಾನಿಗಳು ಮಾತ್ರವಲ್ಲದೆ ಕರ್ನಾಟಕ ಸಂಗೀತ

ಕಲಾಭಿಮಾನಿಗಳೂ ಸಹ ಆದರಿಸುವುದರಲ್ಲಿ ಸಂದೇಹವಿಲ್ಲ. ಈ ಪುಸ್ತಕದಲ್ಲಿ ಉಪಯೋಗಿಸಿರುವ ಅನೇಕ ರಾಗಗಳ ಪರಿಚಯವು ಈ ಕೀರ್ತನೆಗಳ ಪಾಠಾಂತರದ ಮೂಲಕವಾಗಿ ಸಂಗೀತ ವಿದ್ಯಾರ್ಥಿಗಳಿಗೆ ಉಂಟಾಗುವುದೂ ಮತ್ತು ಶ್ರೋತೃಗಳಲ್ಲಿ ಕನ್ನಡ ಕೀರ್ತನೆಗಳ ಬಗ್ಗೆ ಹೆಚ್ಚು ಶ್ರದ್ಧೆಯನ್ನು ಕೆರಳಿಸಲು ಸಾಧನವಾಗುವುದೂ ಮುಖ್ಯ ಪ್ರಯೋಜನವಾಗುಳ್ಳ ಈ ಕೃತಿಯು ಜನಪ್ರಿಯತೆಯನ್ನು ಪಡೆಯಲು ಇಂತಹ ಕಾಣಿಕೆಗೆ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ, ಕನ್ನಡ ಕೃತಿಗಳ ಪ್ರಚಾರದಲ್ಲಿ ವಿಶೇಷೋತ್ಸಾಹಿತರೂ ಆದ ಪಂಡಿತರತ್ನಂ ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಮುನ್ನುಡಿಯನ್ನು ಬರೆದಿರುವುದೂ ಬಹಳ ಉಚಿತವಾಗಿದೆ.

—ಡಿ. ಸುಬ್ಬರಾಮಯ್ಯ

**ಶ್ರೀ ಶ್ರೀನಿವಾಸ ಲೀಲಾ ವಿಲಾಸಂ:** ಗ್ರಂಥಕರ್ತರು: ಶ್ರೀ ಬಿ. ಎಸ್. ಎಸ್. ಕೌಶಿಕ್, ಶ್ರೀ ವಾಲ್ಮೀಕಿ ಗಮಕ ಪಾಠಶಾಲಾ, ಮೈಸೂರು; ಪುಟಗಳು ೧೨೨ + xiii ; ಬೆಲೆ ೨೦೦ ನ.ಪೈ.

'ಭರತ ಭಕ್ತಿ ಕಾವ್ಯಂ' ಕೃತಿಯನ್ನು ರಚಿಸಿ ಈಗಾಗಲೇ ಕನ್ನಡಿಗರಿಗೆ ಪರಿಚಿತರಾಗಿರುವ ಶ್ರೀ ರಾಮಸ್ವಾಮಯ್ಯಂಗಾರ್ಯರವರು ಈ ಕೃತಿಕರ್ತರು. ಭಗವಾನ್ ವ್ಯಾಸ ಮಹರ್ಷಿಯ ಭವಿಷ್ಯೋತ್ತರ ಮತ್ತು ಶ್ರೀ ಸ್ಕಾಂದ ಪುರಾಣಗಳಲ್ಲಿ ಉಲ್ಲೇಖವಾಗಿರುವ ಶ್ರೀ ಶ್ರೀನಿವಾಸನು ವೈಕುಂಠದಿಂದ ಭೂಲೋಕಕ್ಕೆ ಬಂದು, ವೇಂಕಟಗಿರಿಯಲ್ಲಿ ನೆಲೆಸಿ, ಪದ್ಮಾವತಿಯನ್ನು ಪರಿಸಿದ ಕಥಾಭಾಗನೇ ಪ್ರಕೃತ ಕೃತಿಯಲ್ಲಿ ವಿಸ್ತೃತವಾಗಿರುವುದು.

ಒಟ್ಟು ಒಂಭತ್ತು ತರಂಗಗಳು ಮತ್ತು ಪೂರ್ವೋತ್ತರ ತರಂಗಗಳಲ್ಲಿ ನಾನೂರೈವತ್ತೊಂಭತ್ತು ಪದ್ಯಗಳಿವೆ. ವಾರ್ಧಕ ಷಟ್ಪದಿಯಲ್ಲಿ ಸರಳ ಹಾಗೂ ಸುಭಗ ಶೈಲಿಯಿಂದ ಕೋದಿದ್ದಾರೆ ಕೃತಿಕಾರರು. ಸೋಸಲೆಯ ಶ್ರೀ ವ್ಯಾಸರಾಯ ಮಠದ ಶ್ರೀ ಶ್ರೀ ವಿದ್ಯಾಪ್ರಸನ್ನತೀರ್ಥ ಶ್ರೀಪಾದಂಗಳವರು ಮುನ್ನುಡಿಯನ್ನು ಅನುಗ್ರಹಿಸಿದ್ದಾರೆ. 'ವಿದ್ಯಾ ವಿಭೂಷಣ' ಶ್ರೀಮಾನ್ ಎಂ. ಪಿ. ಎಲ್. ಶಾಸ್ತ್ರಿಯವರೂ, 'ಸಾಧ್ವಿ' ದಿನಪತ್ರಿಕೆಯ ಸಂಪಾದಕರಾದ ಶ್ರೀ ಅಗರಂ ರಂಗಯ್ಯನವರೂ, ನ್ಯಾಯಾಧೀಶರಾದ ಶ್ರೀ ಆರ್. ಬಿ. ನಾಯಕ್ ರವರೂ ಕೃತಿಯ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಪಡಿಸಿರುತ್ತಾರೆ.

ಪೂರ್ವತರಂಗದ ಒಂಭತ್ತು ಪದ್ಯಗಳಲ್ಲಿ ದೇವಮೂಂಗಿರಿರಂಗ, ಶ್ರೀರಮಾದೇವಿ, ಶ್ರೀ ಗಣಾಧಿಪ, (ದೇವಿ) ವಾಗ್ದೇವಿಯರನ್ನೂ ಹಳಗನ್ನಡದ ಕವಿವರರನ್ನೂ ಸ್ತುತಿಸಿರುವುದಲ್ಲದೆ, ಕೃತಿಪರಿಚಯವನ್ನೂ ಮಾಡಿಕೊಡಲಾಗಿದೆ.

ಮಿಕ್ಕೆಲ್ಲ ತರಂಗಗಳಿಗಿಂತ ದೊಡ್ಡದಾಗಿರುವ ಪ್ರಥಮ ತರಂಗದ ಅರುವತ್ತೂರು ಪದ್ಯಗಳಲ್ಲಿ–ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹಾಮುನಿಗಳ ಪ್ರಾರ್ಥನೆಯಂತೆ ಶ್ರೀ ಸೂತಮಹರ್ಷಿಯು ಶ್ರೀ ಮನೋಹರನ ಲೀಲಾವಿಲಾಸಮಂ ನಿರೂಪಿಸತೊಡಗುವುದು, ದಕ್ಷಿಣ ಭಾರತದ ತೀರ್ಥಕ್ಷೇತ್ರಗಳ ವಿವರಣೆ, ಲೋಕಕಲ್ಯಾಣಾರ್ಥವಾಗಿ ಮಹಾಯಾಗ ನಡೆಸಿ ಫಲಸಮರ್ಪಣೆ ಸಲ್ಲಿಸುವ ಬಗ್ಗೆ ತ್ರಿಮೂರ್ತಿಗಳಲ್ಲಿ ಯಾರಿಗೆ ಕೊಡಮಾಡುವುದೆಂದು ತಿಳಿದುಬರಲು ಭಗವಾನ್ ಭೃಗುಋಷಿಯನ್ನು ಎಲ್ಲಾ ಮಹರ್ಷಿಗಳೂ ಪ್ರಾರ್ಥಿಸುವುದು, ಅದರಂತೆ ಆ ಮಹಾಮುನಿಯು ಸತ್ಯಲೋಕದಲ್ಲಿ ಚತುರ್ಮುಖನಿಂದ ಪುರಸ್ಕರಿಸಲ್ಪಡದ ಕತದಿಂದೆ 'ಪೂಜಾರ್ಹನಾಗದಿರು' ಎಂದು ಶಪಿಸಿ, ಕೈಲಾಸದಲ್ಲಿ ಪರಶಿವಮೂರ್ತಿಯು ಪಾರ್ವತೀದೇವಿಯೊಂದಿಗೆ ವಿಲಾಸದಲ್ಲಿರುವನೆಂದು ನಂದಿಕೇಶ್ವರನಿಂದ ತಿಳಿದು 'ಅಂಗಪೂಜೆ ಬೇಡ, ಲಿಂಗಪೂಜೆ ಪಡೆ' ಎಂದು ಹೇಳಿ ವೈಕುಂಠಕ್ಕೆ ಹೊರಡುವುದು, ಅಲ್ಲಿ ಸಿರಿಪತಿಯು, ಮುನಿ ತನ್ನ ವೀಕ್ಷಣೆಯ ಕಾಲಮಂ ಕಾಯುತಿರ್ದುದಂ ಅರಿತುಂ ಅರಿಯದಂತೆ ಸತಿಯೊಂದಿಗೆ ಸಲ್ಲಾಪದಲ್ಲಿರಲು, ಮುನಿಪತಿ ಬೇಸರದಿಂದ ಕೋಪಗೊಂಡು ತನ್ನ ಪಾದಾಕ್ಷಿಯಿಂದ ನಾರಾಯಣನ ವಕ್ಷಸ್ಥಲವನ್ನು ನೋಡುವುದು, ಆಗ ಸ್ವಾಮಿಯು ಆಶ್ಚರ್ಯವನ್ನು ನಟಿಸಿ ಆತನ ಪಾದ ತೊಳೆದು ಸತ್ಕರಿಸುವ ಭರದಲ್ಲಿ ಆ ಪಾದಾಕ್ಷಿಯನ್ನು ತೆಗೆಯುವುದು, ಆ ಮುನೀಶ್ವರನ ಪ್ರಾರ್ಥನೆಯಂತೆ 'ಧರಣಿಯೊಳ್ ನಿತ್ಯಸೇವಾನಂದಮಂ' ಕರುಣಿಸಲೊಪ್ಪಿ ಆತನಂ ಬೀಳ್ಕೊಟ್ಟುದು–ಈ ವಿಷಯಗಳು ಹೃದಯಂಗಮವಾಗಿ ಚಿತ್ರಿತವಾಗಿವೆ.

ಅಲ್ಲಿಂದ ಮುಂದಣ ಎಂಟು ತರಂಗಗಳಲ್ಲಿ–ಸಿರಿವಾಸುದೇವ ಧರಣಿಗೈತಂದು ಮಾನವನಂತೆ ನಟನೆಗೈವುದು, ಹಿಂದೆ ಯಶೋದೆಯಾಗಿದ್ದು ಈಗ ಬಕುಳಾಮಾಲೆಯಾಗಿರುವ ತಾಯಿಯೊಂದಿಗೆ ಗಿರಿಗೆ ಹೋಗುವುದು, ಲಕುಮಿ ಅಯೋನಿಜೆಯಾಗಿ ಅವತರಿಸಿ, ನಾರದನಿಂದ ಹರಿಯ ಕೈಹಿಡಿಯುವುದಾಗಿ ತಿಳಿಯುವುದು, ಪದ್ಮಾವತಿಗೆ ಹರಿಯು ತನ್ನ ಲೀಲೆಯನ್ನು ತೋರಿ ಅಡಗುವುದು, ತಾನೇ ಕೊರವಂಜಿ ವೇಷವನ್ನು ಧರಿಸಿ ಆಕೆಯ ಭವಿಷ್ಯ ಹೇಳುವುದು, ಆಕಾಶರಾಯನಿಂದ ಬಕುಳಾದೇವಿಯು ಲಗ್ನಪತ್ರಿಕೆಯನ್ನು ತರುವುದು, ವೇಂಕಟಾಚಲದಿಂದ

ಹೊರಡುವುದು, ನಾರಾಯಣಪುರದಲ್ಲಿ ಎಲ್ಲ ಭಕ್ತರೆದುರು ವಿವಾಹಿತನಾಗಿ ಅಗಸ್ತ್ಯಾಶ್ರಮದ ಗಿರಿಯಲ್ಲಿ ನೆಲೆಸಿದ್ದು–ಈ ಕಥಾವಿಷಯಗಳು ವರ್ಣಿತವಾಗಿವೆ.

ಇನ್ನು ಕೊನೆಯದಾದ ಉತ್ತರ ತರಂಗದಲ್ಲಿ ಬಕುಳಾ ಮಾಲೆ ಮುಕ್ತಿ ಪಡೆವುದು, ಲಕ್ಷ್ಮಿಯನ್ನು ಕಲಿ ಮರಳುವ ತನಕ ಕರವೀರಪುರದಲ್ಲಿರುವಂತೆ ಆ ಣ ತಿ ಯಾ ವು ದು, ಆ ಕಾ ಶ ರಾ ಯ ನ ಸೋದರ ತೊಂಡಮಾನ ನೃಪನು ಸ್ವಾಮಿಗೆ ಎಲ್ಲ ವಿಧದ ಸೌಕರ್ಯವನ್ನೂ ಏರ್ಪಡಿಸಿ ತಿರುಪತಿ ಗಿರಿಯಲ್ಲಿ ನೆಲೆಗೊಳಿಸಿದ್ದು–ಇವು ನಿರೂಪಿತ ವಾಗಿವೆ.

ಪೂರ್ವೋತ್ತರಗಳನ್ನುಳಿದು ಮಿಕ್ಕೆಲ್ಲ ಭಾಗಗಳಲ್ಲಿಯೂ (ಹಿಂದಣ ಕವಿಗಳ ತೆರದೆ) ಸೂಚನೆ ಪದ್ಯ ರಚಿಸಿರುವುದು, ಹಾಗೂ ಪ್ರತಿ ತರಂಗದ ಅಂತ್ಯದಲ್ಲಿಯೂ 'ಮಾಂಗಿರೀಶ' ಅಥವಾ 'ಮಾಂಗಿರಿರಂಗ' ಎಂಬ ದೈವಸ್ತುತಿಯಿರು ವುದು ಔಚಿತ್ಯಪೂರ್ಣವೆನಿಸಿದೆ.

ಒಟ್ಟಿನಲ್ಲಿ ಪೌರಾಣಿಕ ಕಥಾನಕವಾದರೂ, ಕವಿಯು 'ತನ್ನತನ'ವನ್ನು ವಿಶಿಷ್ಟಪೂರ್ಣವಾಗಿ ಪ್ರಯೋಗಿಸಿ ಕೃತಕೃತ್ಯರಾಗಿದ್ದಾರೆ.

ಭಕ್ತಿದೀಪಿಕಾ: (ಭಜನಾ ಗೀತಗಳು) ರಚಯಿತರು: ಕೀರ್ತನಕೇಸರಿ ಭದ್ರಗಿರಿ ಕೇಶವದಾಸ್, ಬಿ.ಎ., ಎಲ್‌ಎಲ್.ಬಿ., ಪ್ರಕಾಶಕರು: ದಾಸಾಶ್ರಮ ಪಬ್ಲಿಕೇಶನ್ಸ್, ೧೬೪, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೧೦; ಪುಟ: ೨೬.

ಎಷ್ಟೇ ಮಾಲಿನ್ಯದಿಂದ ಕೂಡಿದ್ದರೂ 'ಕಲಿಯುಗ'ದಲ್ಲಿ ಕೇವಲ ಪರಮಾತ್ಮನ ಕೀರ್ತನೆಯೊಂದೇ ಮಾನವನಿಗೆ ಮುಕ್ತಿಯನ್ನು ದೊರಕಿಸಿಕೊಡಬಲ್ಲುದು–ಎಂಬ ಆದ್ಯರ ನುಡಿಯಿರುವುದು ಸರ್ವವಿದಿತವಷ್ಟೆ. ಅಂತಹ ಭಗವಂತನ ಸಂಕೀರ್ತನೆಗಳನ್ನು ಎಲ್ಲರೂ ಹಾಡಲು ಅನುಕೂಲ ವಾಗುವಂತೆ ಕೀರ್ತನೆಯವೇಳೆ ಹೃದಯ ಸ್ಫೂರ್ತಿಯಿಂದ ಹೊರಹೊಮ್ಮಿದ ಕೆಲವು ಕೀರ್ತನೆಗಳ ಸಂಕಲನವೇ ಈ 'ಭಕ್ತಿ ದೀಪಿಕಾ' ಎಂದು ಶ್ರೀ ದಾಸವರ್ಯರು 'ಅರಿಕೆ' ಯಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ.

ಶ್ರೀ ಗಣಸ್ತುತಿಯೇ ಮೊದಲುಗೊಂಡು ಸುಮಾರು ೩೩ ಸ್ತೋತ್ರ ರೂಪವಾದ ಹಾಡುಗಳಿವೆ. 'ಕೇಶವನುತ' ಎಂಬ ಅಂಕಿತದಿಂದ ಕೂಡಿರುವ ಈ ಕೀರ್ತನೆಗಳು, ಶ್ರೀಯುತರ ಇತರ ಕೃತಿಗಳ ದಿಸೆಯಲ್ಲಿಯೇ ಪರಮಾತ್ಮನ ಚರಣ ಸಾರಸಗಳಿಗೆ ನಿಜಭಕ್ತರ ಮನವ ನಾರಡಿ ಗೈಯಲು ಸಹಕಾರಿಯಾಗಿಯೇ ಇವೆ.

—ಪಂಡಿತ ಕೆ. ಪಿ. ಶಿವಲಿಂಗಯ್ಯ

---

# ಪತ್ರಿಕಾಪ್ರತಿನಿಧಿಗಳ ಭೇಟಿ

ಉತ್ತರ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕದ ಹಲವು ಪತ್ರಿಕಾ ಪ್ರತಿನಿಧಿಗಳು ಬಿಜಾಪುರದ 'ಸಂದರ್ಶನ' ಪತ್ರಿಕಾ ಸಂಪಾದಕರಾದ ಶ್ರೀ ವಿ. ಬಿ. ನಾಯಕ ಅವರ ನೇತೃತ್ವದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿಗೆ ೩೦-೧೦-೬೩ ರಲ್ಲಿ ಭೇಟಿಕೊಟ್ಟು, ಪರಿಷತ್ತಿನ ಕಾರ್ಯಕಲಾಪಗಳ ಪರಿಚಯ ಮಾಡಿಕೊಂಡರು. ಇವರ ಗೌರವಾರ್ಥವಾಗಿ ಸತ್ಕಾರ ಕೂಟದ ವ್ಯವಸ್ಥೆಯಾಗಿತ್ತು. ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಪತ್ರಿಕಾ ಪ್ರತಿನಿಧಿಗಳಿಗೆ ಸುಸ್ವಾಗತ ಬಯಸಿ, ಪರಿಷತ್ತು ಇದುತನಕ ಮಾಡಿರುವ ಕೆಲಸ, ಮುಂದೆ ಮಾಡಬೇಕಾಗಿರುವ ಕೆಲಸ ಇವನ್ನು ವಿವರಿಸಿ, ಇತ್ತ ಕರ್ಣಾಟಕದ ಪ್ರತ್ರಿಕಾ ಪ್ರಪಂಚದ ಸಹಾಯ ಮತ್ತು ಸಹಕಾರವನ್ನು ಕೋರಿದರು. ತರುವಾಯ ಸಭೆಯಲ್ಲಿ ಹಾಜರಿದ್ದವರ ಪರಿಚಯ ಮಾಡಿಕೊಟ್ಟರು.

ಶ್ರೀ ವಿ. ಬಿ. ನಾಯಕರು ಪತ್ರಿಕಾ ಪ್ರತಿನಿಧಿಗಳ ಪರಿಚಯ ಮಾಡಿಕೊಟ್ಟು, ಸಾಹಿತ್ಯ ಮತ್ತು ಸಂಸ್ಕೃತಿಯ ಕೇಂದ್ರವೆನಿಸಿರುವ ಪರಿಷತ್ತಿನ ಕಾರ್ಯಕಲಾಪಗಳ ಪರಿಚಯಗೊಳ್ಳುವುದು ಅತ್ಯಂತ ಮಹತ್ವದ ವಿಚಾರವೆಂದು ತಿಳಿಸಿದರು.

ಶ್ರೀ ರಾ. ವೆ. ವಾಲಗಳ್ಳಿಯವರೂ ಮಾತನಾಡಿ ಪರಿಷತ್ತಿನ ಬಗ್ಗೆ ತಮಗಿರುವ ಅಭಿಮಾನ ಮತ್ತು ಆಸಕ್ತಿಯನ್ನು ತೋರಿಸಿದರು.

ಸಭೆಯಲ್ಲಿ ಹಾಜರಿದ್ದ ೪೪ನೇ ಸಾಹಿತ್ಯ ಸಮ್ಮೇಳನದ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಆರ್. ಎಸ್. ಆರಾಧ್ಯರು ಮಾತನಾಡಿ, ಸಮ್ಮೇಳನಕ್ಕೆ ಪತ್ರಿಕಾಕರ್ತರೆಲ್ಲ ಆಗಮಿಸಿ ಅದು ಸಂಪೂರ್ಣ ಯಶಸ್ವಿಯಾಗಲು ಸಹಕರಿಸಬೇಕೆಂದು ಪ್ರಾರ್ಥಿಸಿದರು.

ಆಗಮಿಸಿದ್ದ ಪತ್ರಿಕಾ ಪ್ರತಿನಿಧಿಗಳ ಪರವಾಗಿ ಹುಬ್ಬಳ್ಳಿಯ 'ಕನ್ನಡಿಗ' ಪತ್ರಿಕೆಯ ಸಂಪಾದಕರಾದ ಶ್ರೀ ಹುಚ್ಚೇಶ್ವರ ಮೇದಿಯವರು ಪರಿಷತ್ತಿನ ಅಧಿಕಾರಿವರ್ಗಕ್ಕೆ ವಂದನೆಯನ್ನು ಅರ್ಪಿಸಿದರು.

ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಎಸ್. ಶಂಕರಪ್ಪನವರು ಪತ್ರಿಕಾ ಪ್ರತಿನಿಧಿಗಳಿಗೂ ಆಹ್ವಾನಿತರಿಗೂ ಕೃತಜ್ಞತೆ ವ್ಯಕ್ತಪಡಿಸಿದರು.



ಈ ಚಿತ್ರದಲ್ಲಿ ಎಡದಿಂದ ಬಲಕ್ಕೆ : ಶ್ರೀ ಆರ್. ಅನಂತರಾಮನ್, ಶ್ರೀ ವಿ. ಬಿ. ನಾಯಕ್ (ಪತ್ರಿಕಾ ಪ್ರತಿನಿಧಿಗಳ ನಾಯಕರು), ಶ್ರೀ ವಾಲಗಳ್ಳಿ, ಶ್ರೀ ಶಿವಮೂರ್ತಿ ಶಾಸ್ತ್ರಿಗಳವರು ಮತ್ತು ಶ್ರೀ ಜಿ. ವೆಂಕಟಸುಬ್ಬಯ್ಯ. ಹಿಂದೆ ನಿಂತಿರುವವರು ಪರಿಷತ್ತಿನ ಕಾರ್ಯದರ್ಶಿ ಶ್ರೀ ಎಸ್. ಶಂಕರಪ್ಪನವರು.

# ಪರಿಷತ್ತಿಗೆ ಶ್ರೀ ಹಾಸನದ ರಾಜಾರಾಯರ ಭೇಟಿ

ಅಕ್ಟೋಬರ್ ದಿನಾಂಕ ೧೫ರಂದು, ಕಳೆದ ಮೂವತ್ತು ನಾಲ್ಕು ವರ್ಷಗಳಿಂದ ಫ್ರಾನ್ಸ್ ದೇಶದಲ್ಲಿ ನೆಲೆಸಿರುವ ಜನ್ಮತಃ ಕನ್ನಡಿಗರಾದ, ಶ್ರೀ ಹಾಸನದ ರಾಜಾರಾಯರು ಕನ್ನಡ ಸಾಹಿತ್ಯ ಪರಿಷತ್ತಿಗೆ ಭೇಟಿಕೊಟ್ಟು, ಪರಿಷತ್ತಿನ ಕಾರ್ಯಕಲಾಪಗಳ ಪರಿಚಯ ಮಾಡಿಕೊಂಡು ತಮ್ಮ ಕನ್ನಡಾಭಿಮಾನವನ್ನು ವ್ಯಕ್ತಗೊಳಿಸಿದರು.

ಶ್ರೀಯುತರನ್ನು ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರೂ, ಇನ್ನಿತರೆ ಅಧಿಕಾರ ವರ್ಗದವರೂ, ಸ್ವಾಗತಿಸಿದರು. ಈ ಸಂದರ್ಭದಲ್ಲಿ ಖ್ಯಾತ ಸಾಹಿತಿಗಳನೇಕರು ಆಗಮಿಸಿದ್ದರು.

ಶ್ರೀ ರಾಜಾರಾಯರು ಇಂಗ್ಲೀಷು ಭಾಷೆಯಲ್ಲಿ ಕಾದಂಬರಿಗಳನ್ನು ಬರೆದಿದ್ದಾರೆ. ಅಷ್ಟೇ ಅಲ್ಲ ಕನ್ನಡದಲ್ಲಿಯೂ ರಚಿಸಿದ್ದಾರೆ.

ತಮ್ಮ ಮಾತುಕತೆಗಳಲ್ಲಿ ಶ್ರೀ ರಾಜಾರಾಯರು, ಕಾಳಿದಾಸನ ಶಾಕುಂತಲ, ಕನ್ನಡ ಗೋವಿನಕಥೆ ಇವು ಫ್ರೆಂಚ್ ಭಾಷೆಯಲ್ಲಿ ಪ್ರಕಟವಾಗಿವೆ ಎಂದು ತಿಳಿಸಿದರು.

ಶ್ರೀ ರಾಜಾರಾಯರು ದೀರ್ಘಕಾಲ ವಿದೇಶದಲ್ಲಿದ್ದರೂ ಇವರ ದೇಶಪ್ರೇಮವಾಗಲೀ ತಾಯ್ನುಡಿಯ ಅಭಿಮಾನವಾಗಲೀ ಕಿಂಚಿತ್ತೂ ಕುಗ್ಗಿಲ್ಲವೆಂಬುದು ಗಮನಾರ್ಹವಾದ ವಿಚಾರ.



ಈ ಚಿತ್ರದ ಮಧ್ಯದಲ್ಲಿ ಕುಳಿತಿರುವವರೇ ಶ್ರೀ ರಾಜಾರಾಯರು.
ಅವರ ಬಲದಲ್ಲಿ ಶ್ರೀ ವಿ. ಸೀ. ಅವರೂ, ಎಡದಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರೂ ಇದ್ದಾರೆ.

## ಡಾ|| ಎ. ಆರ್. ಕೃಷ್ಣಶಾಸ್ತ್ರಿಗಳವರ ದತ್ತಿ ನಿಧಿಯ ದೇವರ ನಾಮಗಳ ಸ್ಪರ್ಧೆ

ಪ್ರತಿವರ್ಷ ಪದ್ಧತಿಯಂತೆ ಈ ವರ್ಷ ಮಹಾನವಮಿಯ ದಿನ (ತಾ|| ೨೬-೧೦-೧೯೬೩ನೇ ಶನಿವಾರ) ಮಧ್ಯಾಹ್ನ ೪ ಘಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಡಾ|| ಎ. ಆರ್. ಕೃಷ್ಣಶಾಸ್ತ್ರಿಗಳವರ ದತ್ತಿ ನಿಧಿಯ ಆಶ್ರಯದಲ್ಲಿ ದೇವರ ನಾಮಗಳ ಹಾಡುಗಾರಿಕೆ ಸ್ಪರ್ಧೆ ನಡೆಯಿತು. ಸರಸ್ವತಿ ಪೂಜೆಯಾದನಂತರ ಸ್ಪರ್ಧೆಯು ಆರಂಭವಾಯಿತು. ೩೫ ಮಂದಿ ಹೆಣ್ಣು ಮಕ್ಕಳು ಸ್ಪರ್ಧೆಯಲ್ಲಿ ಭಾಗವಹಿಸಿದ್ದರು. ಅನೇಕ ಮಂದಿ ಮಹಿಳೆಯರು ಈ ಸಮಾರಂಭಕ್ಕೆ ದಯೆಮಾಡಿಸಿದ್ದರು. ಸ್ಪರ್ಧೆಯ ನಂತರ ಸುಮಂಗಲಿಯರಿಗೆ ಮಂಗಳ ದ್ರವ್ಯಗಳನ್ನೂ ಮತ್ತೆ ಎಲ್ಲರಿಗೂ ಪ್ರಸಾದವನ್ನೂ ಹಂಚಲಾಯಿತು. ಸ್ಪರ್ಧೆಯಲ್ಲಿ ಬಹುಮಾನಿತರಾದ ಹೆಣ್ಣು ಮಕ್ಕಳಿಗೆ ಸಮಾರಂಭಕ್ಕೆ ಆಗಮಿಸಿದ್ದ ಡಾ|| ಎ. ಆರ್. ಕೃಷ್ಣಶಾಸ್ತ್ರಿಗಳ ಧರ್ಮಪತ್ನಿಯವರು ಬಹುಮಾನಗಳನ್ನು ಹಂಚಿದರು.

ಶ್ರೀಮತಿ ಆರ್. ತಂಗಮ್ಮನವರು, ಗಮಕಿ ಶ್ರೀಮಾನ್ ಎಂ. ರಾಘವೇಂದ್ರರಾಯರು ಮತ್ತು ವಿದ್ವಾನ್ ಎಚ್. ಕೆ. ಅಶ್ವತ್ಥನಾರಾಯಣ ಶಾಸ್ತ್ರಿಯವರು ಸ್ಪರ್ಧೆಯ ತೀರ್ಪುಗಾರರಾಗಿದ್ದು ಉಪಕಾರಮಾಡಿದರು.

ಪರಿಷತ್ತಿನ ಗೌ|| ಕಾರ್ಯದರ್ಶಿಗಳಲ್ಲೊಬ್ಬರಾದ ಶ್ರೀಮಾನ್ ಎಸ್. ಶಂಕರಪ್ಪನವರಿಂದ ವಂದನಾರ್ಪಣೆಯಾದನಂತರ ಸಮಾರಂಭವು ಮುಕ್ತಾಯವಾಯಿತು. ಸ್ಪರ್ಧೆಯ ತೀರ್ಪುಗಾರರಿಗೂ ಪರಿಷತ್ತಿನ ಅಧಿಕಾರಿ ವರ್ಗದವರಿಗೂ ಈ ಕಾರ್ಯಕ್ರಮದಲ್ಲಿ ಸಹಕರಿಸಿದಕ್ಕಾಗಿ ಮಹಿಳಾಶಾಖೆಯು ಅತ್ಯಂತ ಕೃತಜ್ಞವಾಗಿದೆ ಎಂದು ವ್ಯವಸ್ಥಾಪಕಿಯವರು ತಿಳಿಸುತ್ತಾರೆ.

### ಸ್ಪರ್ಧೆಯಲ್ಲಿ ಬಹುಮಾನ ಪಡೆದವರು

**ಸೀನಿಯರ್ ವಿಭಾಗ**

೧. ಕುಮಾರಿ ವಿ. ರತ್ನಾ
೨. ಕುಮಾರಿ ಬಿ. ಜಿ. ರಮಾ
೩. ಕುಮಾರಿ ಎಚ್. ಪಿ. ಭ್ರಮರಾ

**ಜೂನಿಯರ್ ವಿಭಾಗ**

೧. ಕುಮಾರಿ ಎಂ. ಕೆ. ಜಯಶ್ರೀ
೨. ಕುಮಾರಿ ಎಸ್. ಎಂ. ವಸಂತಾ
೩. ಕುಮಾರಿ ಪಿ. ವಿ. ಪ್ರಮೀಳಾ

## ಶ್ರೀಮಾನ್ ತೊಬಗೆರೆ ನಂಜಪ್ಪನವರ ದತ್ತಿಯ ಪ್ರಬಂಧ ಸ್ಪರ್ಧೆ–೧೯೬೩

ವೀರಶೈವ ಸಾಹಿತ್ಯ ಸಂಸ್ಕೃತಿ ಮತ್ತು ಇತಿಹಾಸಗಳಲ್ಲಿ ಸಂಶೋಧನೆಯನ್ನು ಪ್ರೋತ್ಸಾಹಿಸುವುದಕ್ಕಾಗಿ ದಾನಿಗಳ ಇಷ್ಟದಂತೆ ಈ ಸ್ಪರ್ಧೆ ಏರ್ಪಟ್ಟಿದೆ.

ಪ್ರಬಂಧದ ವಿಷಯ: **" ಹಂಪೆಯ ಹರಿಹರ "**

### ನಿಯಮಗಳು

(೧) ಪ್ರಬಂಧವು ವಿದ್ವತ್ ಪೂರ್ಣವಾಗಿ ಸಂಶೋಧನಾತ್ಮಕವಾಗಿ ಪ್ರಮಾಣಬದ್ಧವಾಗಿದ್ದು ಕನ್ನಡದಲ್ಲಿ ಬರೆದಿರಬೇಕು; ಪ್ರಬಂಧಕಾರರ ಸ್ವಂತ ಕೃತಿಯಾಗಿದ್ದು ಇದುವರೆಗೆ ಎಲ್ಲೂ ಅಚ್ಚಾಗಿರಬಾರದು.

(೨) ಪ್ರಬಂಧ ಫೂಲ್ಸ್‌ಕೇಪ್ ಆಕಾರದ ೨೫–೩೦ ಪುಟಗಳ ಪರಿಮಿತಿಯಲ್ಲಿರಬೇಕು; ಕಾಗದದ ಒಂದೇ ಪಕ್ಕದಲ್ಲಿ ಶಾಯಿಯಲ್ಲಿ ಸ್ಪಷ್ಟಾಕ್ಷರಗಳಲ್ಲಿ ಬರೆದಿರಬೇಕು.

(೩) **೧೯೬೩ನೆಯ ಡಿಸೆಂಬರ್ ೧೫ನೆಯ ತಾರೀಖಿ**ನೊಳಗಾಗಿ ಪ್ರಬಂಧ ಪರಿಷತ್ತಿನ ಕಚೇರಿಗೆ ತಲುಪಿರಬೇಕು.

(೪) ಪರಿಷತ್ತು ನಿಯಮಿಸಿದ ತೀರ್ಪುಗಾರರು ಅತ್ಯುತ್ತಮವೆಂದು ತೀರ್ಮಾನಿಸಿದ ಪ್ರಬಂಧಕ್ಕೆ **ಅರವತ್ತು ರೂಪಾಯಿಗಳ ಒಂದು ನಗದು ಬಹುಮಾನವನ್ನು ಕೊಡಲಾಗುವುದು.**

(೫) ಬಹುಮಾನ ಪಡೆದ ಪ್ರಬಂಧದ ಸರ್ವಸ್ವಾಮ್ಯವೂ ಪರಿಷತ್ತಿಗೆ ಸೇರಿರುತ್ತದೆ. ಆದರೆ **ಪರಿಷತ್ತು ಪ್ರಕಟಿಸಿದ** ಅನಂತರ ಪ್ರಬಂಧಕಾರರಾಗಲಿ ಇತರರಾಗಲಿ ಬಳಸಿಕೊಳ್ಳಲು ಅಪೇಕ್ಷೆ ಪಟ್ಟರೆ ಪರಿಷತ್ತು ಅನುಮತಿ ಕೊಡಬಹುದು.

(೬) ಸ್ಪರ್ಧೆಗೆ ಬಂದ ಪ್ರಬಂಧಗಳು ಬಹುಮಾನಕ್ಕೆ ತಕ್ಕಷ್ಟು ಯೋಗ್ಯತೆ ಪಡೆಯದೆ ಇದ್ದರೆ ಬಹುಮಾನವನ್ನು ಕೊಡದೆ ನಿಲ್ಲಿಸುವ ಅಧಿಕಾರ ಪರಿಷತ್ತಿಗೆ ಇರುತ್ತದೆ.

(೭) ಸ್ಪರ್ಧೆಯಲ್ಲಿ ಭಾಗವಹಿಸಲು ಅಪೇಕ್ಷೆಯುಳ್ಳವರು ಪ್ರಬಂಧದೊಂದಿಗೆ **ಒಂದು ರೂ. ಪ್ರವೇಶ ಧನ**ವನ್ನು ಕಳುಹಿಸಿ ಕೊಡಬೇಕು. ಈ ಮೊಬಲಗನ್ನು ಯಾವ ಕಾರಣದಿಂದಾಗಲೀ ಹಿಂದಿರುಗಿಸುವುದಿಲ್ಲ.

(೮) ಬಹುಮಾನವನ್ನು ಪರಿಷತ್ತಿನ ಸಮ್ಮೇಳನದ ಕಾಲದಲ್ಲಾಗಲಿ, ವಸಂತ ಸಾಹಿತ್ಯೋತ್ಸವದ ಕಾಲದಲ್ಲಾಗಲಿ ಕೊಡಲಾಗುತ್ತದೆ.

(೯) ಸ್ಪರ್ಧೆಯಲ್ಲಿ ಬಹುಮಾನ ದೊರೆಯದೇ ಹೋದ ಪ್ರಬಂಧಗಳನ್ನು ಹಿಂದಕ್ಕೆ ಪಡೆಯಬೇಕಾದರೆ ಸ್ಪರ್ಧಿಗಳು

ತಕ್ಕಟ್ಟು ಅಂಚೆಯ ವೆಚ್ಚವನ್ನು ಮುಂದಾಗಿ ಪರಿಷತ್ತಿಗೆ ಕಳಿಸಬೇಕು. ಸ್ಪರ್ಧೆಗೆ ಸಂಬಂಧಿಸಿದ ಪತ್ರವ್ಯವಹಾರವನ್ನು ಪರಿಷತ್ತಿನ ಕಾರ್ಯದರ್ಶಿಗಳೊಂದಿಗೆ ನಡೆಸತಕ್ಕದ್ದು.

## ದಿವಂಗತ ಶೇಷಮ್ಮ ಭಾಸ್ಕರರಾಯರ ಕನ್ನಡ ವಿಮರ್ಶಾ ಸ್ಪರ್ಧೆ—೧೯೬೩

ದಿವಂಗತ ಶೇಷಮ್ಮ ಭಾಸ್ಕರರಾಯರ ಹೆಸರಿನಲ್ಲಿ ಒಂದು ವಿಮರ್ಶಾ ಸ್ಪರ್ಧೆಯನ್ನು ಪ್ರತಿವರ್ಷದಂತೆ ಪರಿಷತ್ತು ಈ ವರ್ಷವೂ (೧೯೬೩) ಏರ್ಪಡಿಸಿದೆ.

ಸ್ಪರ್ಧೆಯ ವಿಷಯ : **"ತ್ರಿವೇಣಿಯವರ ಕೃತಿಗಳು".**

### ಸ್ಪರ್ಧೆಯ ನಿಯಮಗಳು

೧. ಸ್ಪರ್ಧೆಗೆ ಬರುವ ವಿಮರ್ಶೆಗಳು ಸ್ವತಂತ್ರವಾಗಿದ್ದು ಈ ಸ್ಪರ್ಧೆಗಾಗಿಯೇ ಬರೆದುದಾಗಿರಬೇಕು.

೨. ಇದುವರೆಗೂ ಎಲ್ಲೂ ಅಚ್ಚಾಗಿರಬಾರದು.

೩. ಕಾಗದದ ಒಂದೇ ಕಡೆಯಲ್ಲಿ ಸ್ಪಷ್ಟವಾಗಿ ಮಸಿಯಲ್ಲಿ ಬರೆದಿರಬೇಕು.

೪. **೧೯೬೩ ರ ಡಿಸೆಂಬರ್ ೧೫ ನೆಯ ದಿನದಂದು** ಅಥವಾ ಅದರೊಳಗಾಗಿ ತಲಪುವಂತೆ **ಪ್ರವೇಶ ಧನ ಒಂದು ರೂಪಾಯಿಯೊಂದಿಗೆ** ಕಳುಹಿಸಬೇಕು.

೫. ತೀರ್ಪುಗಾರರು ನಿಶ್ಚಯಿಸಿದ ಪ್ರಬಂಧಗಳಿಗೆ ಮೊದಲನೆಯ ಬಹುಮಾನ ೩೦ ರೂ. ಮತ್ತು ಎರಡನೆಯ ಬಹುಮಾನ ೨೦ ರೂ. ಕೊಡಲಾಗುವುದು.

೬. ಎರಡು ಬಹುಮಾನಗಳಲ್ಲಿ ಒಂದನ್ನು ಮಹಿಳೆಯರಿಗೆ ಕೊಡಲಾಗುವುದು. ಮಹಿಳಾ ಸ್ಪರ್ಧಿಗಳು ಇಲ್ಲದಿದ್ದಲ್ಲಿ, ಎರಡು ಬಹುಮಾನಗಳನ್ನೂ ಪುರುಷ ಸ್ಪರ್ಧಿಗಳಿಗೇ ಕೊಡಲಾಗುವುದು. ಪರಿಷತ್ತಿನ ತೀರ್ಮಾನವೇ ಈ ವಿಚಾರದಲ್ಲಿ ಕೊನೆಯದು.

೭. ಬಹುಮಾನ ಪಡೆದ ಪ್ರಬಂಧಗಳ ಸ್ವಾಮ್ಯ ಪರಿಷತ್ತಿಗಿರುತ್ತದೆ. ಪರಿಷತ್ತು ಪ್ರಕಟಿಸಿದ ತರುವಾಯ ಪರಿಷತ್ತಿನ ಅನುಮತಿ ಪಡೆದು ಪ್ರಬಂಧಕಾರರು ಪ್ರಕಟಿಸಬಹುದು.

೮. ಸ್ಪರ್ಧೆಗೆ ಬಂದ ಪ್ರಬಂಧಗಳು ಬಹುಮಾನಕ್ಕೆ ಯೋಗ್ಯವಾಗಿಲ್ಲವೆಂದು ಕಂಡುಬಂದರೆ, ಬಹುಮಾನವನ್ನು ಹಂಚದಿರುವ ಅಧಿಕಾರವು ಪರಿಷತ್ತಿಗಿದೆ.

೯. ಹಿಂದಿನ ವರ್ಷಗಳಲ್ಲಿ ಈ ಸ್ಪರ್ಧೆಯಲ್ಲಿ ಬಹುಮಾನ ಪಡೆದವರು ಮತ್ತೆ ಸ್ಪರ್ಧಿಸುವಂತಿಲ್ಲ.

ಕೆ. ಎಂ. ಕೃಷ್ಣರಾವ್
ಎಸ್. ಶಂಕರಪ್ಪ
ಗೌರವ ಕಾರ್ಯದರ್ಶಿಗಳು

## ಪುರಂದರದಾಸರ ಸ್ಮಾರಕ ಪ್ರಬಂಧ ಮತ್ತು ಕೀರ್ತನೆಗಳ ಸ್ಪರ್ಧೆ

ಉಡುಪಿಯಲ್ಲಿ ಇದೇ ಡಿಸೆಂಬರು ಕೊನೆಯ ವಾರದಲ್ಲಿ ಸಂಗೀತ ಸಭೆಯ ಆಶ್ರಯದಲ್ಲಿ ಜರುಗುವ ಶ್ರೀ ಪುರಂದರದಾಸ ಚತುರ್ಥ ಶತಮಾನೋತ್ಸವದ ಅಂಗವಾಗಿ ಪ್ರಬಂಧ ಮತ್ತು ಕೀರ್ತನೆಗಳನ್ನು ಹಾಡುವ ಎರಡು ಪ್ರತ್ಯೇಕ ಸ್ಪರ್ಧೆಗಳನ್ನು ನಡೆಸಲಾಗುವುದು. ಸ್ಪರ್ಧೆಗಳಲ್ಲಿ ಭಾಗವಹಿಸಲು ಎಲ್ಲರಿಗೂ ಪ್ರವೇಶವಿದ್ದು ಪ್ರವೇಶಧನ ಒಂದೊಂದು ರೂಪಾಯಿ ಆಗಿರುತ್ತದೆ. ಪ್ರಥಮ ಮೂರು ಸ್ಥಾನಗಳನ್ನು ಪಡೆದವರಿಗೆ ಪ್ರತಿಸ್ಪರ್ಧೆಯಲ್ಲಿ ಪ್ರತ್ಯೇಕ ರೂ. ೧೦೦, ರೂ. ೭೫ ಮತ್ತು ರೂ. ೫೦ ರ ಮೂರು ಮೂರು ನಗದು ಬಹುಮಾನಗಳನ್ನು ನೀಡಲಾಗುವುದು. ಉತ್ತಮ ವಿದ್ವಾಂಸರಿಂದ ಕೂಡಿದ ತೀರ್ಮಾನ ಸಮಿತಿಯು ಸ್ಪರ್ಧೆಗಳಲ್ಲಿ ಸ್ಥಾನಗಳನ್ನು ನಿರ್ಧರಿಸುವುದು.

ಪ್ರಬಂಧ ಸ್ಪರ್ಧೆಯಲ್ಲಿ ಭಾಗವಹಿಸುವವರು ಈ ಕೆಳಗಿನ ಮೂರು ವಿಷಯಗಳಲ್ಲಿ ಒಂದನ್ನು ಆರಿಸಿ ೧೦೦೦ ಶಬ್ದಗಳಿಗೆ ಮೀರದಂತೆ, ಬಿಳಿಕಾಗದದ ಮೇಲೆ ಒಂದೇ ಮಗ್ಗುಲಲ್ಲಿ ಬರೆದು, ತಮ್ಮ ಹೆಸರನ್ನು ಪ್ರತ್ಯೇಕ ಕಾಗದದ ಮೇಲೆ ಬರೆದು, ಕಳುಹಿಸತಕ್ಕದ್ದು.

೧. ಸಾಮಾಜಿಕ ಜೀವನದ ಮೇಲೆ ಪುರಂದರದಾಸರ ಪ್ರಭಾವ

೨. ಭಕ್ತಿಪಂಥಕ್ಕೆ ಪುರಂದರದಾಸರ ಕಾಣಿಕೆ

೩. ದಾಸಸಾಹಿತ್ಯಕ್ಕೆ ಪುರಂದರದಾಸರ ಕೊಡುಗೆ

ಪ್ರಬಂಧಗಳನ್ನು ಪ್ರವೇಶಧನ ಸಹಿತ ಡಿಸೆಂಬರು ತಾ|| ೧೫ ರೊಳಗೆ ಉತ್ಸವ ಸಮಿತಿಯ ಕಾರ್ಯದರ್ಶಿಗಳಿಗೆ ತಲುಪುವಂತೆ ಕಳುಹಿಸತಕ್ಕದ್ದು.

ಕೀರ್ತನೆಗಳನ್ನು ಹಾಡುವ ಸ್ಪರ್ಧೆಯಲ್ಲಿ ಭಾಗವಹಿಸುವವರು ಕೇವಲ ಪುರಂದರದಾಸರ ಕೀರ್ತನೆಗಳನ್ನು ಆರಿಸಿ ಯಾವುದೇ ಪದ್ಧತಿ ಅಥವಾ ವೈಖರಿಯಲ್ಲಿ ಹಾಡಬಹುದು. ಸ್ಪರ್ಧೆಯಲ್ಲಿ ಭಾಗವಹಿಸುವವರು ಯಾವುದೇ ಹಿಮ್ಮೇಳ ಅಥವಾ ಸಂಗಡಿಗರ ನೆರವಿಲ್ಲದೆ ಕೇವಲ ಶ್ರುತಿ ಹಿಡಿದು ಹಾಡತಕ್ಕದ್ದು. ಈ ಸ್ಪರ್ಧೆಯು ಡಿಸೆಂಬರು ಕೊನೆಯ ವಾರ ಉಡುಪಿಯಲ್ಲಿ ಜರಗಲಿದ್ದು ಸ್ಪರ್ಧೆಯ ನಿಶ್ಚಿತ ದಿನ ಮತ್ತು ಸ್ಥಳಗಳನ್ನು ಭಾಗವಹಿಸುವವರಿಗೆ ತಿಳಿಸಲಾಗುವುದು. ಭಾಗವಹಿಸಲಿಚ್ಛಿಸುವವರು ಪ್ರವೇಶಧನ ಸಹಿತ ತಮ್ಮ ಹೆಸರು ಮತ್ತು ವಿಳಾಸಗಳನ್ನು ಕಾರ್ಯದರ್ಶಿಗಳಿಗೆ ನವಂಬರು ೩೦, ೧೯೬೩ ರೊಳಗೆ ತಲುಪುವಂತೆ ಕಳುಹಿಸತಕ್ಕದ್ದು.

ಸ್ಪರ್ಧೆಗಳಿಗೆ ಸಂಬಂಧಿಸಿದ ಪತ್ರವ್ಯವಹಾರಗಳನ್ನು ಕಾರ್ಯದರ್ಶಿ, ಶ್ರೀ ಪುರಂದರದಾಸ ಚತುರ್ಥ ಶತಮಾನೋತ್ಸವ ಸಮಿತಿ, C/o ಸಂಗೀತ ಸಭಾ, ಉಡುಪಿ ಇವರೊಡನೆ ಮಾಡಬಹುದು.

# ಪರಿಷತ್ತಿನಲ್ಲಿ ಕನ್ನಡ ರಾಜ್ಯೋತ್ಸವ

೧-೧೧-೧೯೬೩



ಉತ್ಸವವನ್ನು ನ್ಯಾಯಮೂರ್ತಿ ಶ್ರೀ ಟಿ. ಕೆ. ತುಕ್ಕೋಳ
ಅವರು ಉದ್ಘಾಟಿಸುತ್ತಿದ್ದಾರೆ.



ಶ್ರೀ ಆಲೂರರಿಗೆ ಸನ್ಮಾನ ಪತ್ರದ ಅರ್ಪಣೆ.
ಕಾರ್ಯದರ್ಶಿ ಡಾ|| ಕೆ. ಎಂ. ಕೃಷ್ಣರಾಯರು ಓದುತ್ತಿದ್ದಾರೆ.



ಸಮಾರಂಭದ
ಇನ್ನೊಂದು ದೃಶ್ಯ



ಶ್ರೀ ಮಂಗಳವೇಢೆ ಶ್ರೀನಿವಾಸರಾಯರು
ಭಾಷಣ ಮಾಡುತ್ತಿರುವುದು.



ಅಂದಿನ ಅಧ್ಯಕ್ಷರಾಗಿದ್ದ ಶ್ರೀ ಆರ್. ಆರ್. ದಿವಾಕರ್ ಅವರು
ಅಧ್ಯಕ್ಷ ಭಾಷಣ ಮಾಡುತ್ತಿರುವುದು.

ಷತ್ತಿನ ಪರವಾಗಿ ಶ್ರೀ ದಿವಾಕರ್ ಅವರು
ಕನ್ನಡ ಟೈಪ್‌ರೈಟರ್ ನಿರ್ಮಾಪಕ
ಶ್ರೀ ಅನಂತಸುಬ್ಬರಾಯರಿಗೆ
ಹೂಮಾಲೆಯನ್ನು ಹಾಕುತ್ತಿರುವುದು.



# ಪರಿಷತ್ತಿನಲ್ಲಿ ಕನ್ನಡ ರಾಜ್ಯೋತ್ಸವ

## 'ಕನ್ನಡ ಕುಲ ಪುರೋಹಿತ' ಶ್ರೀ ಆಲೂರು ವೆಂಕಟರಾಯರಿಗೆ ಸನ್ಮಾನ

**ಬೆಂಗಳೂರು ನವಂಬರ್ ೧: ಇಂದು ಸಂಜೆ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ರಾಜ್ಯೋತ್ಸವವನ್ನು ಅತ್ಯಂತ ಕಳಕಳಿಯಿಂದ ಆಚರಿಸಿತು. ಶ್ರೀ ಆರ್. ಆರ್. ದಿವಾಕರ್ ಅವರು ಅಧ್ಯಕ್ಷತೆ ವಹಿಸಿದ್ದರು. ನ್ಯಾಯಮೂರ್ತಿ ಶ್ರೀ ಟಿ. ಕೆ. ತುಕ್ಕೋಳ್ ಅವರು ಉದ್ಘಾಟಿಸಿದರು.**

ಇದೇ ಸಂಬಂಧದಲ್ಲಿ ಕರ್ನಾಟಕದಲ್ಲಿನ ಜನ ಜಾಗೃತಿಗೆ ವಿಶೇಷವಾಗಿ ಸೇವೆ ಸಲ್ಲಿಸಿದ ಸೊಲ್ಲಾಪುರದ ದಿ|| ಬ್ಯಾರಿಸ್ಟರ್ ಎಂ. ಎಸ್. ಸರದಾರ್‌ರವರ ಭಾವಚಿತ್ರವನ್ನು ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶ್ರೀ ದಿವಾಕರ್‌ರವರು ಅನಾವರಣ ಮಾಡಿ ಸರದಾರರು ನಾಡಿಗೆ ಸಲ್ಲಿಸಿರುವ ಸೇವೆಯನ್ನು ಸ್ಮರಿಸಿದರು.

ಕುಮಾರಿ ಸಿ. ಕೆ. ಪದ್ಮ ಮತ್ತು ಕುಮಾರಿ ಬಿ. ಜಿ. ರಮಾರವರಿಂದ ಪ್ರಾರ್ಥನೆಯಾದನಂತರ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಯವರು ಸ್ವಾಗತ ಭಾಷಣ ಮಾಡಿ ಕನ್ನಡ ನಾಡಿನ ಹಿರಿಯರಲ್ಲಿ ಹಿರಿಯರಾದ ಶ್ರೀ ಆಲೂರರು ಅರ್ಧ ಶತಮಾನಕ್ಕೂ ಹೆಚ್ಚಿನಕಾಲ ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿ ಕರ್ನಾಟಕ ಏಕೀಕರಣಕ್ಕಾಗಿ ದುಡಿದುದನ್ನು ಪ್ರಸ್ತಾಪಿಸಿದರು.

ಮತ್ತೊಬ್ಬ ಭಾಷಣಕಾರರಾದ ಶ್ರೀ ಮಂಗಳವೇಢೆ ಶ್ರೀನಿವಾಸರಾಯರನ್ನು ಪರಿಚಯ ಮಾಡಿ ಕೊಡುತ್ತಾ ಶ್ರೀ ಶಾಸ್ತ್ರಿಗಳು, ಹಲವಾರು ದಶಕಗಳ ಕಾಲ ಎಲ್ಲವನ್ನೂ ತ್ಯಾಗಮಾಡಿ ಕರ್ನಾಟಕಕ್ಕಾಗಿ ದುಡಿದವರು ಇಂದು ಎಲೆಮರೆಯ ಕಾಯಿಯಂತೆ, ಸನ್ಯಾಸಿಗಳಂತೆ ಇದ್ದಾರೆಂದೂ ಅಂತಹವರಿಗೆ ಸಲ್ಲಬೇಕಾದ ಪುರಸ್ಕಾರ ಸಂದಿಲ್ಲವೆಂದೂ ವಿಷಾದಿಸಿದರು. ಶ್ರೀ ಆಲೂರರಿಗೆ ಸನ್ಮಾನ ಮಾಡಲು ಸರಕಾರ ಈಗ ಆಲೋಚಿಸುತ್ತಿದೆಯೆಂಬುದು ಸಮಾಧಾನದ ವಿಷಯ ಎಂದರು.

ಕರ್ನಾಟಕ ಏಕೀಕರಣಕ್ಕಾಗಿ ನಡೆದ ಪ್ರಯತ್ನದಲ್ಲಿ ಶೇ. ೮೦ ರಷ್ಟು ಕರ್ನಾಟಕ ಪರಿಷತ್ತಿನ ಪಾತ್ರವಿದೆ ಎಂದು ಹೇಳಿದರು. "ಉದಯವಾಗಲಿ ಚೆಲುವ ಕನ್ನಡ ನಾಡು" ಎಂಬ ತಮ್ಮ ಹಾಡನ್ನು ಉದಯವಾಗಿದೆ ಕನ್ನಡ ನಾಡು ಎಂದು ಬದಲಾಯಿಸಬೇಕೆಂದು ಕೇಳಿದಾಗ ಅದರ ಕರ್ತೃ ಶ್ರೀ ಹುಯಿಲಗೋಳ ನಾರಾಯಣರಾಯರು, ಇನ್ನೂ ಕರ್ನಾಟಕ ಪೂರ್ಣವಾಗಿ ಆಗಿಲ್ಲ, ಆರ್ಥಿಕ, ಸಾಂಸ್ಕೃತಿಕವಾಗಿ ಪರಿಪೂರ್ಣವಾದಾಗಲೇ ಉದಯವಾದಂತೆ, ಆವರೆಗೆ ಬದಲಾಯಿಸುವುದಿಲ್ಲವೆಂದು ತಿಳಿಸಿದರೆಂದೂ ಈಗ ಆಗಬೇಕಾಗಿರುವುದರಲ್ಲಿ ರಾಜ್ಯದ ಹೆಸರು ಕರ್ನಾಟಕವೆಂದಾಗುವುದು ಮುಖ್ಯವೆಂದೂ ಶ್ರೀ ಶಾಸ್ತ್ರಿಗಳು ನುಡಿದರು.

ಸಮಾರಂಭವನ್ನು ಉದ್ಘಾಟಿಸುತ್ತಾ ನ್ಯಾಯಮೂರ್ತಿ ಶ್ರೀ ಟಿ. ಕೆ. ತುಕ್ಕೋಳ್‌ರವರು ಕನ್ನಡಿಗರ ಪರಂಪರೆ ಎಷ್ಟು ಭವ್ಯವೆಂಬುದರ ಕಲ್ಪನೆ ಆಗಬೇಕಾದರೆ ಆಲೂರು ವೆಂಕಟರಾಯರ "ಕರ್ನಾಟಕ ಗತವೈಭವ" ಗ್ರಂಥವನ್ನು ಓದಬೇಕೆಂದರು.

ರಾಜ್ಯೋತ್ಸವದ ಆನಂದದ ಸಂದರ್ಭದಲ್ಲಿ ಕನ್ನಡಿಗರು ಅಂತರ್ಮುಖಿಗಳಾಗಿ ವಿಚಾರ ಮಾಡಬೇಕೆಂದು ಕರೆ ನೀಡಿ "ಕರ್ನಾಟಕವು ತನಗೆ ಏನುಮಾಡಿದೆಯೆಂಬುದರ ಬದಲು ಕರ್ನಾಟಕಕ್ಕೆ ತಾನು ಏನುಮಾಡಿದ್ದಾನೆಂಬುದನ್ನು ಕನ್ನಡಿಗ ವಿಚಾರ ಮಾಡಬೇಕು" ಎಂದರು.

ಪರಿಷತ್ತಿನ ಕಾರ್ಯದರ್ಶಿಗಳು ಡಾ|| ಕೆ. ಎಂ. ಕೃಷ್ಣರಾಯರು ಪರಿಷತ್ತಿನ ಪರವಾಗಿ ಶ್ರೀ ಆಲೂರು ಅವರಿಗೆ ಸನ್ಮಾನ ಪತ್ರವನ್ನು ಅರ್ಪಿಸಿದರು. (ಇದನ್ನು ಬೇರೊಂದೆಡೆ ಕೊಟ್ಟಿದೆ)

ತರುವಾಯ ತಮಗಿತ್ತ ಸನ್ಮಾನಪತ್ರಕ್ಕೆ ಶ್ರೀ ಆಲೂರರು ವಂದಿಸಿ ಹೀಗೆ ಹೇಳಿದರು.

### ಸನ್ಮಾನಪತ್ರಕ್ಕೆ ಶ್ರೀ ಆಲೂರರ ಉತ್ತರ

"ಕರ್ನಾಟಕ ರಾಜ್ಯೋದಯದ ಶುಭದಿನವಾದ ಇಂದು ನೀವು ನನಗೆ ಸನ್ಮಾನ ಮಾಡಿರುವಿರಿ. ಈ ಸನ್ಮಾನವು ಕರ್ನಾಟಕಾಂತರ್ಗತ ಭಾರತ ಮಾತೆಗೆ – ನನಗಲ್ಲ! ಕನ್ನಡಿಗರೆಲ್ಲ ಒಂದಾಗಿ, ಒಂದೇ ರಾಜ್ಯದಲ್ಲಿ ಬಾಳಬೇಕೆಂಬ ಆದರ್ಶವನ್ನು ಇಟ್ಟುಕೊಂಡು ಕರ್ನಾಟಕ ಸಾಹಿತ್ಯ ಪರಿಷತ್ತು ಬಹಳ ವರ್ಷಗಳ ಹಿಂದೆಯೆ ಸ್ಥಾಪನೆ

ಯಾಯಿತು. ಪರಿಷತ್ತು ಉಜ್ವಲವಾದ ಕನಸನ್ನು ಕಂಡು ತನ್ನ ಚಟುವಟಿಕೆಗಳನ್ನು ಕರ್ನಾಟಕದ ದಶದಿಕ್ಕುಗಳಲ್ಲಿಯೂ ಹಬ್ಬಿಸಿತು. ಗಡಿನಾಡಿನಲ್ಲಿ ಕರ್ನಾಟಕದ ಜಾಗೃತಿ ಮಾಡಿತು. ಮಾತೃಭಾಷೆಯ ಸ್ವಾಭಿಮಾನವನ್ನು ಮೂಡಿಸಿತು. ಇದೀಗ ಕರ್ನಾಟಕ ಸಾಹಿತ್ಯ ಪರಿಷತ್ತಿನ ಕನಸು ನನಸಾಗಿದೆ. ಕರ್ನಾಟಕ ರಾಜ್ಯ ಉದಯವಾದುದರಲ್ಲಿ ಬಹುಪಾಲಿನ ಶ್ರೇಯಸ್ಸು ಕರ್ನಾಟಕ ಸಾಹಿತ್ಯ ಪರಿಷತ್ತಿಗೆ ಇದೆಯೆಂದು ಹೇಳಬೇಕು. ಅಂಥ ಶ್ರೇಯಸ್ಸನ್ನು ಕಾಣುವ ಭಾಗ್ಯ ನನ್ನ ಜೀವನದಲ್ಲಿಯೇ ದೊರೆತದ್ದು ನನ್ನ ಪುಣ್ಯ. ಇದರಿಂದ ನನಗೆ ಅತ್ಯಂತ ಆನಂದವಾಗಿದೆ. ರಾಜಕಾರಣದಲ್ಲಿ ಬಿದ್ದುಕೊಂಡು ಸಂಸ್ಥೆಗಳು ಕಾರ್ಯ ನಡೆಸುವ ರೀತಿಯೇ ಬೇರೆ. ಆದರೆ ಕರ್ನಾಟಕ ಸಾಹಿತ್ಯ ಪರಿಷತ್ತಿನಂಥ ಸಂಸ್ಥೆಯು ಸಾಹಿತ್ಯ ಮತ್ತು ಸಂಸ್ಕೃತಿಗಳ ಕ್ಷೇತ್ರದಲ್ಲಿ ಅದ್ಭುತ ಕಾರ್ಯಗಳನ್ನು ಸಾಧಿಸಬಲ್ಲದು. ಅದರಿಂದ ಕನ್ನಡಿಗರ ಸ್ಥಾನ ಜಾಗತಿಕ ಕ್ಷೇತ್ರದಲ್ಲಿ ಉನ್ನತವಾಗಿ ಇರುವಂತೆ ನೋಡಿಕೊಳ್ಳಬಲ್ಲದು. ಇಂಥ ಕಾರ್ಯಕ್ಕೆ ಜನತೆಯ ಮತ್ತು ಸರಕಾರಗಳ ಬೆಂಬಲವಿರಬೇಕು. ರಾಜ್ಯ ಸರಕಾರವು ಧಾರಾಳವಾಗಿ ನೆರವು ನೀಡಬೇಕು. ಜನತೆ ಉತ್ಸಾಹದಿಂದ ಕೆಲಸ ಮಾಡಬೇಕು. ಅಂದರೇನೆ ಸಾಹಿತ್ಯ ಮತ್ತು ಸಂಸ್ಕೃತಿಗಳ ಸಂಘಗಳು ತಲೆಯೆತ್ತಿ ನಿಲ್ಲಬಲ್ಲವು. ಕರ್ನಾಟಕ ಸಾಹಿತ್ಯ ಪರಿಷತ್ತಿನಲ್ಲಿ ಆಸ್ಥಾನ ವಿದ್ವಾನ್ ಪಂಡಿತರತ್ನಂ ಬಿ. ಶಿವಮೂರ್ತಿಶಾಸ್ತ್ರಿಗಳಂಥ ಉತ್ಸಾಹಿ ಕಾರ್ಯವಾಹಕರಿರುವುದು ಸಂತೋಷದ ಸಂಗತಿ. ಶಾಸ್ತ್ರಿಗಳು ಪರಿಷತ್ತನ್ನು ಪ್ರಗತಿ ಮಾರ್ಗದಲ್ಲಿ ಯಾವಾಗಲೂ ಸಾಗಿಸುವರೆಂದು ಆಶಿಸುತ್ತೇನೆ. ಸನ್ಮಾನ್ಯರಾದ ಶ್ರೀ ತುಕ್ಕೋಳರವರಿಂದ ಉದ್ಘಾಟನೆ ನಡೆದ, ದಿವಾಕರರ ಅಧ್ಯಕ್ಷತೆಯಲ್ಲಿ ಜರುಗುತ್ತಿರುವ, ಶ್ರೀಮಂಗಳವೇಡೆಯವರು ಭಾಷಣ ಮಾಡಲಿರುವ ಈ ಮಹಾಸಭೆಯಲ್ಲಿ ನನಗೆ ಮಾನಪತ್ರ ಸಲ್ಲಿಸುವ ಮೂಲಕ ಕರ್ನಾಟಕ ಮಾತೆಗೆ ನೀವೆಲ್ಲರೂ ಒಮ್ಮನಸ್ಸಿನಿಂದ ಸಲ್ಲಿಸುತ್ತಿರುವ ಪೂಜೆಗಾಗಿ ನಾನು ಕೃತಜ್ಞನಿದ್ದೇನೆ."

ಶ್ರೀಮತಿ ಅಲುಮೇಲು, ಶ್ರೀಮತಿ ಜಯಲಕ್ಷ್ಮಿಯವರು ಕನ್ನಡ ಗೀತೆಗಳನ್ನು ಹಾಡಿದರು.

ಶ್ರೀ ಮಂಗಳವೇಢೆ ಶ್ರೀನಿವಾಸರಾಯರು ಬೆಂಗಳೂರಿನಲ್ಲಿ ಕನ್ನಡ ಬೋರ್ಡುಗಳಲ್ಲಿನ ಆಭಾಸಗಳನ್ನು ಪ್ರಸ್ತಾಪಿಸಿ ಇದನ್ನು ಸರಿಪಡಿಸುವಂತೆ ಪರಿಷತ್ತು ಆಸಕ್ತಿ ವಹಿಸಬೇಕೆಂದು ಸಲಹೆ ಮಾಡಿದರು.

ಕನ್ನಡ ನಾಡಿನ ನೆರೆ ರಾಜ್ಯಗಳಲ್ಲಿ ಗಡಿ ಪ್ರದೇಶದ ಕನ್ನಡಿಗರ ಹಿತರಕ್ಷಿಸಲೂ ಪ್ರಯತ್ನಿಸಬೇಕಾಗಿದೆಯೆಂದರು.

ವಿವಿಧ ಸಂಘ ಸಂಸ್ಥೆಗಳು ಕನ್ನಡ ಚಳವಳಿ ನಡೆಸುತ್ತಿರುವುದನ್ನು ಪ್ರಸ್ತಾಪಿಸಿ ಎಷ್ಟೇ ಸಂಸ್ಥೆಗಳು ಮಾಡಿದರೂ ಅವುಗಳಲ್ಲಿ ಪರಸ್ಪರ ವಿರೋಧ ಸಲ್ಲದೆಂದರು.

ಶ್ರೀ ಆದ್ಯ ರಾಮಾಚಾರ್ಯರು ಮಾತನಾಡಿ ರಾಜ್ಯದ ಹೆಸರು 'ಕರ್ನಾಟಕ' ಆಗಬೇಕೆಂದು ಒತ್ತಾಯಪಡಿಸಿದರು.

ರಾಜ್ಯೋತ್ಸವಕ್ಕಾಗಿ ಸರಕಾರ ರಜ ಕೊಡದಿದ್ದುದ್ದನ್ನು ಖಂಡಿಸಬೇಕೆಂದು ಯಾರೋ ಬರೆದು ಕಳುಹಿಸಿದ್ದ ಚೀಟಿಯನ್ನು ಪ್ರಸ್ತಾಪಿಸಿ, ಶ್ರೀ ದಿವಾಕರ್‌ರವರು "ನಾನು ಖಂಡಿಸುವುದು ಇಂತಹ ರಜದ ಕೇಳಿಕೆಯನ್ನು. ಇದು ಆರಾಮಕ್ಕೆ ಕಾಲವಲ್ಲ. ಆಗಬೇಕಾದ್ದು ಅಗಾಧವಾಗಿದೆ ಎಲ್ಲರೂ ನಿರಂತರವಾಗಿ ದುಡಿಯಬೇಕಾಗಿದೆ" ಎಂದರು.

ಪರಿಷತ್ತಿನ ಕಾರ್ಯದರ್ಶಿಗಳಲ್ಲೊಬ್ಬರಾದ ಶ್ರೀ ಎಸ್. ಶಂಕರಪ್ಪನವರಿಂದ ವಂದನಾರ್ಪಣೆಯಾಯಿತು.

ಪರಿಷತ್ತಿನ ಪರವಾಗಿ ಶ್ರೀ ಆಲೂರರಿಗೂ, ಇತರ ಮುಖ್ಯ ಅತಿಥಿಗಳಿಗೂ ಖಾದಿ ಶಾಲನ್ನೂ, ಕನ್ನಡ ಟೈಪ್ ರೈಟರ್ ನಿರ್ಮಾಪಕರಾದ ಶ್ರೀ ಕೆ. ಅನಂತಸುಬ್ಬರಾಯರಿಗೆ ಮತ್ತು ಶ್ರೀ ಆಲೂರರ ಕುಟುಂಬವರ್ಗದವರಿಗೆ ಪುಷ್ಪಹಾರಗಳನ್ನೂ ಅರ್ಪಿಸಲಾಯಿತು.

ಶಶಿಕಲಾವಿದರಿಂದ ಪರ್ವತವಾಣಿಯವರ "ಗೊಗ್ಗಯ್ಯ" ನಾಟಕ ಅಭಿನಯಿಸಲ್ಪಟ್ಟಿತು.

---

# ಶ್ರೀ ಆಲೂರರಿಗೆ ಒಪ್ಪಿಸಿದ ಸನ್ಮಾನ ಪತ್ರ

**ಕನ್ನಡ ಕುಲ ಪುರೋಹಿತರೆ,**

ಕನ್ನಡ ನಾಡುನುಡಿಗಳ ಉಜ್ವಲಾಭಿಮಾನಿಗಳೂ, ನಿಸ್ಸೀಮ ರಾಷ್ಟ್ರಭಕ್ತರೂ, ಕನ್ನಡ, ಸಂಸ್ಕೃತ, ಮರಾಠಿ, ಇಂಗ್ಲೀಷ್ ಮೊದಲಾದ ಭಾಷಾ ವಿಶಾರದರೂ, ಕನ್ನಡ ಸಾಹಿತ್ಯ ಪರಿಷತ್ತಿನ ಓರ್ವ ಸಂಸ್ಥಾಪಕ ಸದಸ್ಯರೂ, ಕರ್ನಾಟಕದ ಏಳಿಗೆಗಾಗಿ ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿದ ಪುಣ್ಯಾತ್ಮರೂ ಮತ್ತು ಜ್ಞಾನವೃದ್ಧ, ವಯೋವೃದ್ಧ, ತಪೋವೃದ್ಧರೂ ಆದ ತಮ್ಮನ್ನು ತಾವೇ ಸ್ಥಾಪಿಸಿದ ಕನ್ನಡ ಸಾಹಿತ್ಯ ಪರಿಷತ್ತಿಗೆ ಆಹ್ವಾನಿಸಿ ಗೌರವಿಸುವ ಅವಕಾಶ ಇಂದು ಪ್ರಾಪ್ತವಾದುದಕ್ಕಾಗಿ ನಮಗೆ ಪರಮಾನಂದವಾಗಿದೆ.

ಕನ್ನಡ ಋಷಿಗಳೆನಿಸಿದ ತಾವು ಗಂಡುಮೆಟ್ಟಿನ ಭೂಮಿಯಾದ ಬಿಜಾಪುರದಲ್ಲಿ ಕ್ರಿ. ಶ. ೧೮೮೦ ರ ಜುಲೈ ತಾ|| ೧೨ ರಂದು ಜನಿಸಿದಿರಿ. ತಮ್ಮ ತಂದೆಯವರಾದ ಶಿರಸ್ತೆದಾರ್ ಭೀಮರಾಯರು, ತಾಯಿಯವರಾದ ಭಾಗೀರಥೀ ಬಾಯಿಯವರು ಬ್ರಾಹ್ಮಣ ಕುಟುಂಬದ ಗೌರವಾನ್ವಿತ ಮನೆತನಕ್ಕೆ ಸೇರಿದವರೆಂಬುದು ಪ್ರಸಿದ್ಧವಾದ ವಿಷಯ. ಐತಿಹಾಸಿಕ ಪಟ್ಟಣಗಳಾದ ಗದಗು ಮತ್ತು ಹಾನಗಲ್ಲುಗಳಲ್ಲಿ ತಮ್ಮ ಪ್ರಾಥಮಿಕ ಶಿಕ್ಷಣವಾಯಿತು. ಅನಂತರ ೧೮೯೭ ರಲ್ಲಿ ಧಾರವಾಡದಲ್ಲಿ ನೀವು ಮ್ಯಾಟ್ರಿಕ್ ಆದಿರಿ. ಆಮೇಲೆ ಸ್ವತಂತ್ರ ಚಳುವಳಿ ಕೇಂದ್ರವಾದ ಪುಣೆ ಪಟ್ಟಣದಲ್ಲಿ ಬಿ.ಎ. ಪರೀಕ್ಷೆಯನ್ನೂ (೧೯೦೩), ಅನಂತರ ಭಾರತದ ಮಹಾನಗರವಾದ ಮುಂಬಯಿನಲ್ಲಿ ಎಲ್.ಎಲ್.ಬಿ. ಪರೀಕ್ಷೆಯನ್ನೂ (೧೯೦೫) ಮುಗಿಸಿದಿರಿ. ತದನಂತರ ತಾವು ವಕೀಲಿಯನ್ನು ಪ್ರಾರಂಭಿಸಿದಿರಿ. ಆದರೆ ತಮ್ಮ ವೃತ್ತಿ ವಕೀಲಿಯಾದರೂ ಪ್ರವೃತ್ತಿ ರಾಷ್ಟ್ರೀಯವಾದುದರಿಂದ ತಮ್ಮ ಜೀವಮಾನವನ್ನೆಲ್ಲಾ ಲೋಕಸೇವೆಗೆ ವಿನಿಯೋಗಿಸಿದಿರಿ. ೧೯೦೫ ರಲ್ಲಿ ಉಂಟಾದ ವಂಗಭಂಗದ ಚಳುವಳಿ, ಅದೇ ಕಾಲದಲ್ಲಿ ಭಾರತದಲ್ಲಿ ಲೋಕಮಾನ್ಯ ತಿಲಕರೂ, ಅಮೇರಿಕೆಯಲ್ಲಿ ಸ್ವಾಮಿ ವಿವೇಕಾನಂದರೂ ನಡೆಸಿದ ರಾಷ್ಟ್ರೀಯ ಮತ್ತು ಧಾರ್ಮಿಕ ಚಳುವಳಿಗಳು ತಮ್ಮ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡಿದುವು. ಆ ಸಮಯದಲ್ಲಿಯೇ ಆದ ಪಂಪಾಕ್ಷೇತ್ರ ಆನೆಗುಂದಿಗಳ ಸಂದರ್ಶನವು ತಮ್ಮ ಮನಸ್ಸಿನಲ್ಲಿ ಕರ್ನಾಟಕತ್ವದ ಕಲ್ಪನೆಯನ್ನು ಮೂಡಿಸಲು ಸಹಾಯವಾದುವು. ಆಗಲೇ ತಾವು ಕರ್ನಾಟಕವನ್ನು ತಮ್ಮ ಕಾರ್ಯಕ್ಷೇತ್ರವೆಂದು ತಿಳಿದಿರಿ. ವಿಶಾಲ ಕರ್ನಾಟಕದ ಕನಸು ಕಂಡಿರಿ. ಅಲ್ಲಿಂದ ಮುಂದೆ ತಮ್ಮ ಜೀವನವೆಲ್ಲ ಕನ್ನಡ ಕುಲ ಮತ್ತು ನೆಲಗಳ ಸೇವೆಗಾಗಿಯೇ ಮೀಸಲಾಯಿತು.

**ಕರ್ನಾಟಕ ಋಷಿಪುಂಗವರೆ,**

೧೯೦೭-೮ ರಲ್ಲಿ ತಾವು ಧಾರವಾಡದಲ್ಲಿ ಕರ್ನಾಟಕ ಗ್ರಂಥಕರ್ತರ ಸಮ್ಮೇಳನವನ್ನು ಕೂಡಿಸಿದಿರಿ. ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ಅಭಿವೃದ್ಧಿಗೊಳಿಸಿದಿರಿ. ೧೯೧೫ ರಲ್ಲಿ ಧಾರವಾಡದಲ್ಲಿ ಕರ್ನಾಟಕ ಸಭೆ ಕರೆದಿರಿ. ೧೯೨೦ ರಲ್ಲಿ ಧಾರವಾಡದಲ್ಲಿ ಶ್ರೀ ವಿ. ಪಿ. ಮಾಧವರಾಯರ ಅಧ್ಯಕ್ಷತೆಯಲ್ಲಿ ಕರ್ನಾಟಕ ರಾಷ್ಟ್ರೀಯ ಪರಿಷತ್ತನ್ನು ಕೂಡಿಸಿದಿರಿ. ೧೯೩೬ ರಲ್ಲಿ ಪಂಪಾ ಕ್ಷೇತ್ರದಲ್ಲಿ ನಡೆದ ವಿಜಯನಗರ ಸಾಮ್ರಾಜ್ಯದ ೬೦೦ ವರ್ಷಗಳ ಉತ್ಸವಕ್ಕೆ ಬುನಾದಿ ಹಾಕಿದಿರಿ. ೧೯೧೭ ರಲ್ಲಿ ಮಾಂಟಿಗೋ ಛೆಂಸ್‌ಫರ್ಡ್ ಕಮಿಷನ್ ಮುಂದೆ ಕರ್ನಾಟಕ ಏಕೀಕರಣದ ಮನವಿಯನ್ನು ಒಪ್ಪಿಸಿದಿರಿ. ೧೯೩೦ ರಲ್ಲಿ ಮೈಸೂರಿನಲ್ಲಿ ನಡೆದ ೧೬ ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷತೆ ವಹಿಸಿ, ಅಮೋಘವಾದ ಸಂದೇಶವನ್ನು ಕೊಟ್ಟಿರಿ. ಕರ್ನಾಟಕದಲ್ಲಿ ನಾಡಹಬ್ಬವನ್ನು ರಾಷ್ಟ್ರೀಯ ಹಬ್ಬವಾಗಿ ಆಚರಿಸಲು ಸ್ಫೂರ್ತಿ ಕೊಟ್ಟಿರಿ. ಈ ಎಲ್ಲ ಚಟುವಟಿಕೆಗಳೂ ತಮ್ಮ ಅಪಾರವಾದ ಶಕ್ತಿ ಸಾಮರ್ಥ್ಯಗಳಿಗೆ, ಸತ್ವಪೂರ್ಣವಾದ ಹೆಬ್ಬಯಕೆಗಳಿಗೆ ನಿದರ್ಶನವಾಗಿವೆಯೆಂದು ನಾವು ನಂಬುತ್ತೇವೆ. ಬಹುಶ್ರುತರಾದ ತಾವು ಪ್ರಖ್ಯಾತ ಪತ್ರಿಕಾ ಕರ್ತರೆಂಬುದು ಎಲ್ಲರಿಗೂ ತಿಳಿದಿರುವ ಮಾತು. ವಾಗ್ಭೂಷಣ, ಕರ್ನಾಟಕ ಪತ್ರ, ಕರ್ನಾಟಕ ವೃತ್ತ, ರಾಜಹಂಸ, ಕರ್ಮವೀರ ಮೊದಲಾದ ಪತ್ರಿಕೆಗಳಲ್ಲಿ ತಾವು ಬರೆದಿರುವ ಲೇಖನಗಳು ವಿದ್ವತ್‌ಪೂರ್ಣವಾಗಿಯೂ ಕ್ರಾಂತಿಕಾರಕವಾಗಿಯೂ ಇವೆ. ೧೯೦೭ ರಲ್ಲಿ ಕರ್ನಾಟಕ ಏಕೀಕರಣ ಕುರಿತು ಮೊಟ್ಟಮೊದಲು ತಾವು ಲೇಖನ ಬರೆದಿರಿ. ತಾವು ನಡೆಸಿದ "ಜಯ ಕರ್ನಾಟಕ" ಮಾಸಪತ್ರಿಕೆಯು (೧೯೨೨-೩೮) ಕರ್ನಾಟಕದ ಜ್ಞಾನ ಭಂಡಾರವೆಂಬಂತಿದೆ. ತಾವು ರಚಿಸಿರುವ ಗ್ರಂಥಗಳು ಕರ್ನಾಟಕಕ್ಕೆ ತೇಜಸ್ಸನ್ನೂ, ಓಜಸ್ಸನ್ನೂ ಉಂಟುಮಾಡಿವೆ. ೧೯೧೯ ರಲ್ಲಿ ತಾವು ಶ್ರೀ ಕೆರೂರು ವಾಸುದೇವಾಚಾರ್ಯರೊಡನೆ ಕೂಡಿಕೊಂಡು ಮೇರುಕೃತಿಯಾದ ಲೋಕಮಾನ್ಯರ ಗೀತಾರಹಸ್ಯವನ್ನು ಕನ್ನಡಕ್ಕೆ ಭಾಷಾಂತರಿಸಿದಿರಿ. ೧೯೧೧ ರಲ್ಲಿ ಶ್ರೀ ವಿ. ಎನ್. ಮುಗ್ಗಾಲ್‌ರೊಡನೆ ಕೂಡಿ ಇಂಗ್ಲೀಷಿನಲ್ಲಿ ಪ್ರಸಿದ್ಧವಾಗಿರುವ ಹರ್‌ಬರ್ಟ್ ಸ್ಪೆನ್ಸರ್‌ರವರ "ಎಜ್ಯುಕೇಷನ್" ಎಂಬ ಗ್ರಂಥವನ್ನು ಕನ್ನಡಕ್ಕೆ ಭಾಷಾಂತರಿಸಿ ಉಪಕಾರ

ಮಾಡಿದಿರಿ. ಆಮೇಲೆ ತಮ್ಮ ಅಮೋಘ ಕೃತಿಗಳಾದ ಕರ್ಣಾಟಕ ಗತವೈಭವ, ಕರ್ಣಾಟಕ ವೀರರತ್ನಗಳು, ಕರ್ಣಾಟಕತ್ವದ ವಿಕಾಸ, ನನ್ನ ಜೀವನ ಸ್ಮೃತಿಗಳು, ಗೀತಾ ಪ್ರಕಾಶ, ಗೀತಾ ಪರಿಮಳ, ಗೀತಾ ಭಾವಪ್ರದೀಪ ಮೊದಲಾದ ಕೃತಿರತ್ನಗಳು ಕನ್ನಡಿಗರಿಗೆ ಲಭಿಸಿದುವು. ಈ ರೀತಿಯಲ್ಲಿ ತಾವು ಕನ್ನಡ ಪತ್ರಿಕಾ ಪ್ರಪಂಚಕ್ಕೂ, ಸಾಹಿತ್ಯ ಪ್ರಪಂಚಕ್ಕೂ ಸಲ್ಲಿಸಿರುವ ಸೇವೆಯು ನಿಜಕ್ಕೂ ಶ್ಲಾಘ್ಯವಾದುದು. ತಮ್ಮ ಈ ಅನುಪಮವಾದ ಕನ್ನಡ ಸೇವೆಯನ್ನು ಗೌರವಿಸುವ ಸಲುವಾಗಿ ಕನ್ನಡ ಜನರು ತಮ್ಮನ್ನು "ಕನ್ನಡ ಕುಲ ಪುರೋಹಿತರು" ಎಂಬ ಬಿರುದಿತ್ತು ಗೌರವಿಸಿದರು. ತಮ್ಮ ಭಾವಚಿತ್ರವನ್ನು ಪರಿಷತ್ತಿನ ಇಂದಿನ ಅಧ್ಯಕ್ಷರಾದ ಆಸ್ಥಾನ ವಿದ್ವಾನ್, ಪಂಡಿತರತ್ನಂ **ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು** ಸಾಹಿತ್ಯ ಪರಿಷತ್ತಿಗೆ ಕಾಣಿಕೆಯಾಗಿ ಸಮರ್ಪಿಸಿದುದೂ, ಅದರ ಅನಾವರಣವನ್ನು ಅಂದು ರಾಜ್ಯದ ದಿವಾನರಾಗಿದ್ದ ಪ್ರಧಾನಶಿರೋಮಣಿ **ಶ್ರೀ ಎನ್. ಮಾಧವರಾಯರು** ಮಾಡಿದರೆಂಬುದೂ (೧೯೪೦) ಗಮನಾರ್ಹವಾದ ಸಂಗತಿ. ತಮ್ಮ ಮತ್ತು ತಮ್ಮ ಸಂಗಡಿಗರ ಪ್ರಯತ್ನದ ಫಲವಾಗಿ ೧೯೫೬ರಲ್ಲಿ ವಿಶಾಲ ಮೈಸೂರು ಅಥವಾ **ಕರ್ಣಾಟಕ ರಾಜ್ಯ** ಉದಯವಾಯಿತು. ಈ ವರ್ಷ **ಕನ್ನಡವು ರಾಜ್ಯದ ಭಾಷೆಯಾಯಿತು** ಎಂಬುದು ಕನ್ನಡಿಗರಿಗೆ ಸಂತೋಷದ ಸಂಗತಿಯಾಗಿದೆ. ಆದರೂ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂದು ಹಾಡಿದ ಕವಿಯ ಹೆಬ್ಬಯಕೆ ಇನ್ನೂ ಪೂರ್ಣವಾಗಿಲ್ಲ. ನಮ್ಮ ರಾಜ್ಯಕ್ಕೆ 'ಕರ್ಣಾಟಕ' ಎಂಬ ಹೆಸರಾಗಬೇಕು. ಮಂಗಳೂರು – ಕಾರವಾರ ಬಂದರುಗಳು ಬೇಗನೆ ಆಗಬೇಕು, ಕೃಷ್ಣಾ – ಮಲಪ್ರಭಾ ಮೊದಲಾದ ನದಿಗಳ ಅಣೆಕಟ್ಟೆಗಳಾಗಬೇಕು, ಹಾಸನ – ಮಂಗಳೂರು, ಹುಬ್ಬಳ್ಳಿ – ಕಾರವಾರ, ಸೊಲ್ಲಾಪುರ – ಬೀದರ, ಬೆಂಗಳೂರು – ಸೇಲಂ ಮೊದಲಾದ ರೈಲು ಮಾರ್ಗಗಳಾಗಬೇಕು. ಕನ್ನಡದ ಪ್ರಾಚೀನ ಶಿಲಾ ಶಾಸನಗಳೂ ಗ್ರಂಥಗಳೂ ಬೆಳಕಿಗೆ ಬರಬೇಕು. ಬೆಂಗಳೂರಿನಲ್ಲಿ ಕನ್ನಡ ಧ್ವಜ ಸದಾ ಕಂಗೊಳಿಸುತ್ತಿರಬೇಕು. ಎಲ್ಲಕ್ಕೂ ಮಿಗಿಲಾಗಿ ಕಾಸರಗೋಡು, ಹೊಸೂರು, ಅಕ್ಕಲಕೋಟೆ, ಸೊಲ್ಲಾಪುರ ಮೊದಲಾದ ಕನ್ನಡದ ಗಡಿಗಳು ನಮ್ಮ ರಾಜ್ಯಕ್ಕೆ ಸೇರಬೇಕು ಎಂಬ ಆಶೆ ಆಕಾಂಕ್ಷೆಗಳು ಕನ್ನಡಿಗರನ್ನು ಸದಾ ಬಾಧಿಸುತ್ತಿವೆ. ಇದಕ್ಕೆ ತಮ್ಮಂತಹ ಋಷಿಸದೃಶರಾದ ಹಿರಿಯರ ಆಶೀರ್ವಾದವೂ, ನಮ್ಮ ಸರಕಾರ ಮತ್ತು ಸಾರ್ವಜನಿಕರ ಸತತ ಪ್ರಯತ್ನವೂ ಬೇಕಾಗಿದೆ.

ನಮ್ಮ ರಾಜ್ಯ ಸರಕಾರವು ರಾಜಕೀಯ ಸಂತ್ರಸ್ತರಿಗೆ ಕೊಡುವಷ್ಟು ಪ್ರಾಮುಖ್ಯತೆಯನ್ನು ಸುಮಾರು ೩೦, ೪೦, ೫೦, ವರ್ಷಗಳಿಂದ ಕರ್ಣಾಟಕ ರಾಜ್ಯ ನಿರ್ಮಾಣಕ್ಕೆ ಪ್ರಯತ್ನಿಸಿದವರಿಗೆ ಕೊಡುತ್ತಿಲ್ಲವೆಂಬುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಈ ಕಾರ್ಯದಲ್ಲಿ ಸಾಹಿತ್ಯ ಪರಿಷತ್ತಿನ ಸೇವೆ ಸಾಮಾನ್ಯವಾದುದಲ್ಲ ಎಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಹಿರಿಯರಿಗೆ ಹಿರಿಯರೂ ಕನ್ನಡ ಕುಲಗುರುಗಳೂ ಆದ ತಮ್ಮನ್ನು ಗೌರವಿಸಬೇಕೆಂಬ ಅರಿವು ರಾಜ್ಯೋದಯವಾದ ಎಂಟು ವರ್ಷಗಳ ಅನಂತರ ಈಗತಾನೇ ನಮ್ಮ ಘನ ಸರ್ಕಾರಕ್ಕೆ ಉಂಟಾಗಿದೆಯೆಂಬುದು ಸಮಾಧಾನದ ಸಂಗತಿಯಾಗಿದೆ.

ತಮಗೆ ತಿಳಿದಿರುವಂತೆ ತಮ್ಮ ಆಶೀರ್ವಾದದಿಂದ **ಕನ್ನಡ ಸಾಹಿತ್ಯ ಪರಿಷತ್ತು** ಸುಮಾರು ೪೯ ವರ್ಷಗಳಿಂದ ನಾಡುನುಡಿಗಳಿಗೆ ತನ್ನ ಸೇವೆಯನ್ನು ಸಲ್ಲಿಸಿದೆ. ಅದು ಮಾಡಿರುವ ಕೆಲಸ ಕಡಮೆಯಲ್ಲವಾದರೂ ಮಾಡಬೇಕಾದ ಕೆಲಸ ಅನಂತವಾಗಿದೆ. ಅದಕ್ಕೆ ತಮ್ಮಂತಹ ತಪೋಧನರ ಆಶೀರ್ವಾದ ಅಗತ್ಯವಾಗಿದೆ. ಕನ್ನಡ ನಾಡಿನ ಗುರುಗಳಾದ ತಾವು ಪರಿಷತ್ತಿನ ಬಿನ್ನಹವನ್ನು ಅಂಗೀಕರಿಸಿ ಪರಿಷತ್ತಿನಲ್ಲಿ ಇಂದು ನಡೆಯುವ ಕನ್ನಡ ರಾಜ್ಯೋತ್ಸವದಲ್ಲಿ ಭಾಗವಹಿಸಿದ್ದಕ್ಕಾಗಿ, ನಾವು ಒಪ್ಪಿಸಿದ ಬಿನ್ನಹ ಪತ್ರವನ್ನು ಸ್ವೀಕರಿಸಿದ್ದಕ್ಕಾಗಿ ನಮಗೆ ಸಂತೋಷವಾಗಿದೆ. ಮಹತ್ವದ ಇಂದಿನ ಸಭೆಗೆ ಕನ್ನಡ ನಾಡಿನ ಹಿರಿಯರಾದ **ಡಾ॥ ಆರ್. ಆರ್. ದಿವಾಕರ್** ಅವರು ಅಧ್ಯಕ್ಷರಾಗಿ, ನ್ಯಾಯಮೂರ್ತಿ **ಟಿ. ಕೆ. ತುಕ್ಕೋಳ್‌ರವರು** ಉದ್ಘಾಟಕರಾಗಿ, ನಿಸ್ಸೀಮ ಕನ್ನಡಿಗರಾದ **ಶ್ರೀ ಮಂಗಳವೇಢೆ ಶ್ರೀನಿವಾಸರಾಯರು** ಭಾಷಣಕಾರರಾಗಿ ಆಗಮಿಸಿರುವುದು ನಮಗೆಲ್ಲರಿಗೂ ಹೆಚ್ಚಿನ ಸಂತೋಷವನ್ನುಂಟುಮಾಡಿದೆ. ಭಗವಂತನು ತಮಗೆ ಇನ್ನೂ ಹೆಚ್ಚಿನ ಆಯುರಾರೋಗ್ಯಭಾಗ್ಯಗಳನ್ನು ಕೊಟ್ಟು **ತಮ್ಮ ಶತಮಾನೋತ್ಸವವನ್ನು** ಕನ್ನಡಿಗರು ಉತ್ಸಾಹದಿಂದ ಆಚರಿಸುವಂತೆ ಮಾಡಲೆಂಬುದು ನಮ್ಮ ಅಂತರಂಗದ ಹೆಬ್ಬಯಕೆಯಾಗಿದೆ. ಪೂಜ್ಯರಾದ ತಮಗೆ ನಮ್ಮ ಅನಂತ ಕೃತಜ್ಞತೆಗಳು.

**॥ ಸತ್ಯಂ ಶಿವಂ ಸುಂದರಂ ॥**

ಇಂತು ತಮ್ಮವರಾದ,

**ತಾ॥ ೧-೧೧-೧೯೬೪**
**ಕನ್ನಡ ರಾಜ್ಯೋತ್ಸವ ದಿನ**

**ಕನ್ನಡ ಸಾಹಿತ್ಯ ಪರಿಷತ್ತಿನ**
**ಅಧ್ಯಕ್ಷರು ಮತ್ತು ಸದಸ್ಯರು**

# ಕನ್ನಡದ ಸುದ್ದಿಗಳು



## ಬೆಂಗಳೂರು

ತಾ|| ೧-೧೧-೬೩ ರ ಬೆಳಿಗ್ಗೆ ಬೆಂಗಳೂರು ಪುಟ್ಟಣ್ಣ ಚೆಟ್ಟಿ ನಗರಭವನದಲ್ಲಿ ಶ್ರೀ ರಾಮಕೃಷ್ಣ ಕಾರಂತರ ಅಧ್ಯಕ್ಷತೆಯಲ್ಲಿ ರಾಜ್ಯೋತ್ಸವ ನಡೆಯಿತು. ಶ್ರೀ ಎಸ್. ನಿಜಲಿಂಗಪ್ಪನವರು ಧ್ವಜಾರೋಹಣ ನಡೆಸಿದರು. ಶ್ರೀ ಆರ್. ಎಂ. ಪಾಟೀಲರು ಉತ್ಸವವನ್ನು ಉದ್ಘಾಟಿಸಿ ಸಂಸ್ಕರಣ ಸಂಚಿಕೆಯನ್ನು ಪ್ರಕಟಿಸಿದರು. ಮೇಯರ್ ಶ್ರೀ ಕೆ. ನಂಜಪ್ಪನವರು ಸ್ವಾಗತ ಮತ್ತು ಶ್ರೀ ಕೆ. ಜಿ. ಮಹೇಶ್ವರಪ್ಪನವರು ಪರಿಚಯ ಭಾಷಣ ಮಾಡಿದರು. ಸರ್ವಶ್ರೀ ಪಂಡಿತ ರತ್ನಂ ಬಿ. ಶಿವಮೂರ್ತಿ ಶಾಸ್ತ್ರೀ, ನಾಟಕರತ್ನಂ ಜಿ. ಹೆಚ್. ವೀರಣ್ಣ, ಎಸ್. ಶಿವಪ್ಪ, ಶಾಂತವೇರಿ ಗೋಪಾಲಗೌಡ, ಸಾಹಿತಿ ನಿರಂಜನ, ಶ್ರೀಮತಿ ಲೀಲಾದೇವಿ ಪ್ರಸಾದ್, ಶ್ರೀ ಆರ್. ಅನಂತ ರಾಮನ್, ಶ್ರೀ ವಿ. ಎಸ್. ಕೃಷ್ಣಯ್ಯರ್ ಮೊದಲಾದವರು ಭಾಷಣ ಮಾಡಿದರು.

ತಾ|| ೧-೧೧-೬೩ ರಿಂದ ಮೂರು ದಿನ ಪರ್ಯಂತವಾಗಿ ಬೆಂಗಳೂರು ಸುಭಾಸ್‌ನಗರದ ಭವ್ಯ ಚಪ್ಪರದಲ್ಲಿ ಕನ್ನಡ ಸಂಯುಕ್ತ ರಂಗದವರು ಕನ್ನಡ ರಾಜ್ಯೋತ್ಸವವನ್ನು ನಡೆಸಿದರು. ಮೊದಲನೇ ದಿನ ಮೆರವಣಿಗೆ, ಎರಡನೇ ದಿನ ಕನ್ನಡಿಗರ ಸಭೆ, ಮೂರನೇ ದಿನ ವಿದ್ಯಾರಣ್ಯರ ಜಯಂತಿ ಮೊದಲಾದವು ನಡೆದವು. ಶ್ರೀ ಅಂದಾನಪ್ಪ ದೊಡ್ಡಮೇಟಿ ಸಭಾಧ್ಯಕ್ಷರಾಗಿದ್ದರು. ಶ್ರೀ ಆರ್. ಎಂ. ಪಾಟೀಲರು ಈ ಉತ್ಸವವನ್ನು ಉದ್ಘಾಟಿಸಿದರು. ವಿದ್ವಾಂಸರನೇಕರು ಭಾಷಣ ಮಾಡಿದರು. ಕನ್ನಡ ಕಾರ್ಯಕರ್ತರ ಸಮ್ಮೇಳನ ನಡೆದು ಅಲ್ಲಿ ಕೆಲವು ನಿರ್ಣಯಗಳಾದವು.

ತಾ|| ೩-೧೧-೬೩ ರಂದು ಸಂಜೆ ಬೆಂಗಳೂರು ದಂಡಿನಲ್ಲಿ ತಮಿಳು ಸಂಘದವರು ರಾಜ್ಯೋತ್ಸವವನ್ನು ಆಚರಿಸಿದರು. ಕೀರ್ತನಾಚಾರ್ಯ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಅಧ್ಯಕ್ಷರಾಗಿದ್ದರು. ಗಣ್ಯ ಸಾಹಿತಿಗಳಾದ ಶ್ರೀ ಜಿ. ಪಿ. ರಾಜರತ್ನಂ, ವಿದ್ವಾನ್ ಸುಬ್ರಹ್ಮಣ್ಯಂ ಭಾಷಣ ಮಾಡಿದರು.

ತಾ|| ೫-೧೧-೬೩ ರಂದು ಬೆಂಗಳೂರು ಸರ್ಕಾರಿ ಲಾ ಕಾಲೇಜಿನಲ್ಲಿ ರಾಜ್ಯೋತ್ಸವ ನಡೆಯಿತು. ಡಾ|| ಆರ್. ಆರ್. ದಿವಾಕರ್ ಅವರು ಅಧ್ಯಕ್ಷರು. ಸಭಾಪತಿ ಶ್ರೀ ಜಿ. ವಿ. ಹಳ್ಳಿಕೇರಿ ಅವರು ಉದ್ಘಾಟಕರು. ಸರ್ವಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ, ಎಂ. ಪಿ. ಎಲ್. ಶಾಸ್ತ್ರಿ, ಎಸ್. ಕೃಷ್ಣಶರ್ಮ, ಮಂಗಳವೇಡೆ ಶ್ರೀನಿವಾಸರಾವ್ ಮತ್ತು ಖಾದ್ರಿ ಶಾಮಣ್ಣ ಇವರು "ಕರ್ನಾಟಕದ ಸಮಸ್ಯೆ"ಗಳನ್ನು ಕುರಿತು ಭಾಷಣ ಮಾಡಿದರು. ಶ್ರೀ ಅನ್ನದಾನಯ್ಯ ಪುರಾಣಿಕರು ಸ್ವಾಗತ ಮಾಡಿದರು.

ಅ. ದಿನಾಂಕ ೨೨ ರಂದು ಶ್ರೀ ಶರನ್ನವರಾತ್ರಿ ಪ್ರಯುಕ್ತ ಶ್ರೀ ಎಚ್. ಕೆ. ಅಶ್ವತ್ಥನಾರಾಯಣ ಶಾಸ್ತ್ರಿಗಳು, ಶ್ರೀ ಶಾರದ ಚಂದ್ರ ಮೌಳೀಶ್ವರರ ಮತ್ತು ಶ್ರೀ ಶ್ರೀ ಶೃಂಗೇರಿ ಜಗದ್ಗುರುಗಳವರ ಸನ್ನಿಧಾನದಲ್ಲಿ, ಕನಕದಾಸ ಕೀರ್ತನ ಸ್ವರಾವಳಿ ಗ್ರಂಥವನ್ನು ಅರ್ಪಿಸಿ ತಮ್ಮ ಸಂಗೀತ ಸೇವೆಯನ್ನು ನಡೆಸಿದರು. ಶ್ರೀ ಶ್ರೀ ಗಳವರು, ಶಾಸ್ತ್ರಿಗಳನ್ನು ಆಶೀರ್ವದಿಸಿದರು.

ಅಕ್ಟೋಬರ್ ತಿಂಗಳಲ್ಲಿ ಕ್ರಾಂತಿಕಾರಿ ಸಂಯುಕ್ತ ಸಂಘದವರು ಏರ್ಪಡಿಸಿದ್ದ ಕನ್ನಡ ಚಳುವಳಿಯ ಹಬ್ಬದ ಅಂಗವಾದ ಭಾಷಣ ಮಾಲೆಯನ್ನು ಶ್ರೀ ಆಲೂರು ವೆಂಕಟರಾಯರು ಉದ್ಘಾಟಿಸಿದರು. ಶ್ರೀ ಆರ್. ಅನಂತರಾಮನ್ ಶ್ರೀ ಅನಂತಸುಬ್ಬರಾವ್, ಶ್ರೀ ಬಾ. ಸು. ಕೃಷ್ಣಮೂರ್ತಿ ಮುಂತಾದವರು ಭಾಷಣ ಮಾಡಿದರು. ಶ್ರೀ ಕೆಂಗಲ್ ಹನುಮಂತಯ್ಯನವರು ಸಭಾಧ್ಯಕ್ಷತೆ ವಹಿಸಿದ್ದರು.

## ಬಳ್ಳಾರಿ

ತಾ|| ೭-೧೧-೬೩ ರಂದು ಬಳ್ಳಾರಿ ಜಿಲ್ಲಾ ರಾಮನಗರದಲ್ಲಿ ಜಿಜ್ಞಾಸುಗಳ ಕೂಟ ನಡೆಯಿತು. ಹಿರಿಯ ಸಾಹಿತಿಗಳಾದ ಪದ್ಮಶ್ರೀ ವಿ. ಕೃ. ಗೋಕಾಕರಿಂದ ಇದರ ಪ್ರಾರಂಭೋತ್ಸವವಾಯಿತು. ಶ್ರೀ ದ. ರಾ. ಬೇಂದ್ರೆಯವರು ಅಧ್ಯಕ್ಷರಾಗಿದ್ದರು. ಇದರಲ್ಲಿ ೨೫ ಮಂದಿ ಸಾಹಿತಿಗಳು ಭಾಗವಹಿಸಿದ್ದರು. ಯುವಕ ಸಂಘದವರು ಈ ಕೂಟವನ್ನು ಏರ್ಪಡಿಸಿದ್ದರು.

**ಮೈಸೂರು**

ಈ ಸಲದ ದಸರಾ ಕಾಲದಲ್ಲಿ ಸರ್ಕಾರದವರು ಶ್ರೀಗಳಾದ ಡಾ|| ಕೆ. ವಿ. ಪುಟ್ಟಪ್ಪ, ಕೆ. ವೆಂಕಟಪ್ಪ, ಗುಬ್ಬಿ ವೀರಣ್ಣ, ಮಿಣಜಗಿ, ಮಲ್ಲಿಕಾರ್ಜುನ ಮನ್ಸೂರ್ ಶ್ರೀಮತಿ ವೆಂಕಟಲಕ್ಷ್ಮಮ್ಮ ಈ ಕಲಾವಿದರನ್ನು ಗೌರವಿಸಿದರು.

**ಬೆಳಗಾವಿ**

ತಾ|| ೬ ಮತ್ತು ೭-೧೧-೬೩ ರಂದು ಬೆಳಗಾವಿಯಲ್ಲಿ ಶ್ರೀ ನಿ. ಪ್ರ. ಶಿವಕುಮಾರ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಶಿವಾನುಭವ ಸಮ್ಮೇಳನ ನಡೆಯಿತು. ಡಾ|| ನಂದಿಮಠ, ಡಾ|| ಹಿರೇಮಠ, ಡಾ|| ಕರ್ಕಿ, ಶ್ರೀಮತಿ ಸರಸ್ವತೀ ದೇವಿ ಗೌಡರ ಮೊದಲಾದ ಸಾಹಿತಿಗಳು ಈ ಸಮಾರಂಭದಲ್ಲಿ ಭಾಗವಹಿಸಿದ್ದರು. ಪ್ರೊ|| ಎಸ್. ಎಸ್. ಭೂಸನೂರು ಮಠರು ಸ್ವಾಗತಾಧ್ಯಕ್ಷರಾಗಿದ್ದರು.

**ಬ್ರಹ್ಮಾವರ**

ತಾ|| ೨೬-೧೦-೬೩ ರಂದು ದಕ್ಷಿಣ ಕನ್ನಡ ಜಿಲ್ಲೆಯ ಬ್ರಹ್ಮಾವರ ಕರ್ಣಾಟಕ ಸಂಘದವರು ತಮಗಿತ್ತ ಬಿನ್ನಹ ಪತ್ರಕ್ಕೆ ಉತ್ತರವಾಗಿ ಶ್ರೀ ಸೇಡಿಯಾಪು ಕೃಷ್ಣಭಟ್ಟರು "ಕವಿಯನ್ನು ಸನ್ಮಾನಿಸುವವರು ಅವನ ಕೃತಿಗಳನ್ನು ಕೊಂಡು ಓದಬೇಕು" ಎಂದಿದ್ದಾರೆ.

**ಮಂಗಳೂರು**

ಕೀರ್ತಿಶೇಷ ಶ್ರೀ ಎಂ. ಗೋವಿಂದಪೈ ಅವರ ಮಂಜೇಶ್ವರದ ಮನೆಯನ್ನು ಸ್ಮಾರಕ ಕೇಂದ್ರವಾಗುವಂತೆ ನಿರ್ಧರಿಸಲಾಗಿದೆ. ಇಲ್ಲೇ ಅವರು ಸಂಶೋಧನ ಲೇಖನಗಳನ್ನೂ ಕವನ, ಗ್ರಂಥ, ನಾಟಕಗಳನ್ನೂ ಬರೆದು ಪೂರೈಸಿದ್ದರು.

**ಕಲಬುರ್ಗಿ**

ಇಲ್ಲಿನ ಕನ್ನಡ ಸಾಹಿತ್ಯ ಸಂಘದ ಆಶ್ರಯದಲ್ಲಿ ನ. ದಿನಾಂಕ ೯ ರಂದು ದಿವಂಗತರಾದ ಪಾಂಡುರಂಗರಾವ್ ದೇಶಮುಖ ಅವರ ಸ್ಮಾರಕ ಉಪನ್ಯಾಸವೇರ್ಪಟ್ಟಿತ್ತು, ಹುಬ್ಬಳ್ಳಿಯ ಕಾಡಸಿದ್ಧೇಶ್ವರ ಕಾಲೇಜಿನ ಪ್ರಿನ್ಸಿಪಾಲರಾದ ಡಾ|| ಡಿ. ಎಸ್. ಕರ್ಕಿ ಅವರು ಸ್ಮಾರಕ ಉಪನ್ಯಾಸ ಮಾಡಿದರು.

**ಉಡುಪಿ**

ಸ್ಥಳೀಯ ಕರ್ಣಾಟಕ ಸಂಘದ ಮಹಾಧಿವೇಶನವು ಅ. ದಿನಾಂಕ ೭ ರಂದು ಶ್ರೀ ಸಿ. ನಾರಾಯಣ ಅಯ್ಯಂಗಾರರ ಅಧ್ಯಕ್ಷತೆಯಲ್ಲಿ ಜರುಗಿತು. ಗತವರ್ಷದ ಆಯವ್ಯಯ ಪಟ್ಟಿಯನ್ನು ಅನುಮೋದಿಸಿತು. ತರುವಾಯ ಹೊಸಕಾರ್ಯಕಾರಿ ಸಮಿತಿಯ ಚುನಾವಣೆಯು ನಡೆಯಿತು .ಗೋವಿಂದಪೈ, ತ್ರಿವೇಣಿ, ದ. ಬಾ. ಕುಲಕರ್ಣಿ, ನಿಧನದ ಬಗ್ಗೆ ಸಂತಾಪ ಸೂಚಕ ನಿರ್ಣಯವಾಯಿತು. ಸಂಘಕ್ಕೆ ಶ್ರೀ ಹರಿದಾಸ ಭಟ್ಟರು ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದಾರೆ.

**ಮುಂಬಯಿ**

ಅ. ದಿನಾಂಕ ೧೯ ಮತ್ತು ೨೦ರಂದು "ನಾಡಹಬ್ಬ"ವನ್ನು ಪೊದ್ದಾರ್ ಕಾಲೇಜಿನ ಸಭಾಂಗಣದಲ್ಲಿ ಅತ್ಯಂತ ವಿಜೃಂಭಣೆಯಿಂದ ಮುಂಬಯಿ ಕನ್ನಡ ಸಂಘವು ಆಚರಿಸಿತು. ಇದೇ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಜಿ. ಪಿ. ಪಾಳೇಕರ್‌ರವರು ಸಮಾರಂಭವನ್ನು ಉದ್ಘಾಟಿಸಿದರು. ಕನ್ನಡ ನಾಡಿನ ಹಿರಿಯ ಹಾಗೂ ಸುಪ್ರಸಿದ್ಧ ಪತ್ರಿಕೋದ್ಯೋಗಿಗಳೂ, ಸಾಹಿತಿಗಳೂ ಆದ ಶ್ರೀ ತಿರುಮಲೆ ತಾತಾಚಾರ್ಯ ಶರ್ಮರವರು ಮುಖ್ಯ ಅತಿಥಿಗಳಾಗಿದ್ದು "ಕನ್ನಡ ಜನ ಜೀವನದ ವೈಭವ" ಮತ್ತು "ಕರ್ನಾಟಕದ ವಾಸ್ತು ಶಿಲ್ಪ"ಗಳ ಬಗ್ಗೆ ವಿಚಾರಪೂರಿತ ಭಾಷಣಗಳನ್ನು ಮಾಡಿದರು.

**ಸುರತ್ಕಲ್ಲು**

ಅ. ದಿನಾಂಕ ೧೪ರಲ್ಲಿ ಸುರತ್ಕಲ್ಲು ವಿದ್ಯಾದಾಯಿನೀ ಹೈಸ್ಕೂಲಲ್ಲಿ ಶ್ರೀ ಕೆ. ಬಾಲಕೃಷ್ಣರಾವ್, ಅಡ್ವೊಕೇಟ್ ಅವರ ಸಭಾಧ್ಯಕ್ಷತೆಯಲ್ಲಿ ಯಕ್ಷಗಾನ ಕಲೋಪಾಸಕ ಶ್ರೀ ಎಸ್. ಅಗರಿ ಶ್ರೀನಿವಾಸ ಭಾಗವತರಿಗೆ ಸನ್ಮಾನಪತ್ರ ನಿಧಿ ಸಮರ್ಪಣೆಗಳ ಸಮಾರಂಭವು ನೆರವೇರಿತು. ಯಕ್ಷಗಾನರತ್ನ ಶ್ರೀ ಬಲಿಪ ನಾರಾಯಣ ಭಾಗವತರ ಹಸ್ತಾಂತರ ಮಾನಪತ್ರವನ್ನು ನೀಡಲಾಗಿ, ಸಮಿತಿಯವರು ಸಂಗ್ರಸಿದ್ದ ರೂ. ೧೬೬೬-೦೦ನ್ನು ಉಡುಗೊರೆಯೊಂದಿಗೆ ಸಭಾಧ್ಯಕ್ಷರ ಹಸ್ತಾಂತರ ಕೊಡಲ್ಪಟ್ಟಿತು.

**ರಂಗಂಪೇಟೆ**

ಇಲ್ಲಿ ಅ. ೧೪ರಿಂದ ೫ ದಿನಗಳ ಪರ್ಯಂತ ನಾಡಹಬ್ಬ ಮಹೋತ್ಸವವು ಬಹು ವಿಜೃಂಭಣೆಯಿಂದ ನಡೆಯಿತು. ಭಾಷಣಗಳು, ಸ್ಪರ್ಧೆ, ಮನರಂಜನೆ ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ಮೊದಲನೆಯ ದಿನದಂದು ಮಹೋತ್ಸವದ ಉದ್ಘಾಟನೆಯನ್ನು ಮಂತ್ರಿಗಳಾದ ಶ್ರೀ ಡಿ. ದೇವರಾಜೆ ಅರಸಿನವರು ಮಾಡಿದರು.

## ಅಪ್ಪಚ್ಚು ಕವಿಯ ಕೊಡಗು ನಾಟಕಗಳು ಕನ್ನಡದಲ್ಲಿ ಪ್ರಕಟಣೆ

ಬೆಂಗಳೂರು ನ. ೯: ಕೊಡಗಿನ ಕೀ|| ಶೇ|| ಅಪ್ಪಚ್ಚು ಕವಿಯ ಮೂರು ನಾಟಕಗಳ ಗ್ರಂಥವು ನಿನ್ನೆ ಬಿಡುಗಡೆಯಾಯಿತು.

ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ನೆರವೇರಿದ ಗ್ರಂಥಪ್ರಕಟನೋತ್ಸವ ಉತ್ಸವದಲ್ಲಿ ಗೃಹ ಸಚಿವ ಶ್ರೀ ಆರ್. ಎಂ. ಪಾಟೀಲರು ಗ್ರಂಥವನ್ನು ಪ್ರಕಾಶಿಸಿದರು. ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಅಧ್ಯಕ್ಷತೆ ವಹಿಸಿದ್ದರು.

ಹರಿದಾಸ ಅಪ್ಪಚ್ಚು ಕವಿಯು ಕೊಡಗಿನ ಕಿರಿಂದಾಡು ಗ್ರಾಮದಲ್ಲಿ ೧೮೬೭ರಲ್ಲಿ ಜನಿಸಿ ೧೯೪೪ರಲ್ಲಿ ದಿವಂಗತರಾದರು. ಅವರು ಕೊಡಗು ಭಾಷೆಯಲ್ಲಿ ಯಯಾತಿರಾಜ ಸುಕನ್ಯಾ, ಸಾವಿತ್ರಿ ಮತ್ತು ಕಾವೇರಿ ನಾಟಕಗಳನ್ನು ರಚಿಸಿದ್ದಾರೆ.

ಕೀರ್ತನ ಮತ್ತು ನಾಟಕ ಕಲೆಯಲ್ಲಿ ಪ್ರವೀಣರಾಗಿದ್ದ ಅವರ ಮೂರು ನಾಟಕಗಳನ್ನು ಸದ್ಯಕ್ಕೆ ಇತಿಯೋಪಿಯಾದಲ್ಲಿರುವ ಶ್ರೀ ಐ. ಎಂ. ಮುತ್ತಣ್ಣನವರು ಕನ್ನಡಕ್ಕೆ ಭಾಷಾಂತರಿಸಿದ್ದಾರೆ.

### ಬಾಂಧವ್ಯಕ್ಕೆ ನಾಂದಿ

"ಗ್ರಂಥ ಪ್ರಕಟನೋತ್ಸವ"ದಲ್ಲಿ ಸಚಿವ ಶ್ರೀ ಪಾಟೀಲ್ ಮತ್ತು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಭಾಷಣ ಮಾಡುತ್ತಾ, ಕನ್ನಡ ಮತ್ತು ಅದರ ಉಪ ಭಾಷೆಗಳಾದ ಕೊಡಗು, ತೋಡ, ಬಡಗ, ತುಳು ಮೊದಲಾದುವುಗಳಲ್ಲಿ ಮಧುರ ಬಾಂಧವ್ಯ ಬೆಳೆಯಲು ಇಂತಹ ಗ್ರಂಥಗಳು ಅಗತ್ಯವೆಂದರು.

ಪ್ರಾರಂಭದಲ್ಲಿ ಕುಮಾರಿಯರಾದ ಸಿ. ಕೆ. ಪದ್ಮಾ ಮತ್ತು ಬಿ. ಜಿ. ರಮಾರವರಿಂದ ಪ್ರಾರ್ಥನೆಯಾದ ಮೇಲೆ ಶ್ರೀ ಎಸ್. ಶಂಕರಪ್ಪನವರು ಸ್ವಾಗತ ಭಾಷಣ ಮಾಡಿದರು.

## ಕನ್ನಡಿಗರೆಲ್ಲರಿಗೂ ಸನ್ಮಂಗಳವಾಗಲಿ

### ಶ್ರೀ ಆಲೂರರ ಹಾರೈಕೆ

ಬೆಂಗಳೂರು, ನ. ೧೦: "ಸಮಸ್ತ ಕನ್ನಡಿಗರಿಗೆ ಸನ್ಮಂಗಳವಾಗಲಿ. ಕರ್ನಾಟಕ ಸಂಪದ್ಯುಕ್ತವಾಗಲಿ" ಎಂದು ಈ ದಿನ ಬೆಳಗ್ಗೆ ನಗರದ ಬಳೇಪೇಟೆಯಲ್ಲಿರುವ ಶ್ರೀ ಸುಗ್ರೀವ ದೇವಸ್ಥಾನದಲ್ಲಿ ಏರ್ಪಟ್ಟ ಕನ್ನಡ ರಾಜ್ಯೋತ್ಸವದಲ್ಲಿ ಕರ್ನಾಟಕದ ಕುಲ ಪುರೋಹಿತರೂ ನಾಡಿನ ವಯೋವೃದ್ಧ ಸಾಹಿತಿಗಳೂ ಆದ ಶ್ರೀ ಆಲೂರು ವೆಂಕಟರಾಯರು ತುಂಬಿದ ಕಂಠದಿಂದ ಹಾರೈಸಿದರು.

ಸಭೆಯ ಅಧ್ಯಕ್ಷತೆಯನ್ನು ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪಂಡಿತರತ್ನ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ವಹಿಸಿದ್ದರು.

ಜ್ಞಾನಜ್ಯೋತಿ ಕಲಾಮಂದಿರ ಸಂಸ್ಥೆಯವರು ಈ ಕನ್ನಡ ರಾಜ್ಯೋತ್ಸವವನ್ನು ಏರ್ಪಡಿಸಿದ್ದರು. ದೇವಸ್ಥಾನದಲ್ಲಿ ಮಹಾಮಂಗಳಾರತಿಯಾದಮೇಲೆ ಶ್ರೀ ಆಲೂರರಿಗೆ ದೇವಾಲಯದ ಗೌರವ ಮತ್ತು ಪುಷ್ಪಹಾರ ಸಮರ್ಪಿಸಲಾಯಿತು.

ಸಭೆಯ ಕಾರ್ಯ ಕಲಾಪಗಳು ದೇವತಾ ಪ್ರಾರ್ಥನೆಯೊಂದಿಗೆ ಮೊದಲಾದವು. ಜ್ಞಾನಜ್ಯೋತಿ ಕಲಾಮಂದಿರ ಅಧ್ಯಕ್ಷ ಶ್ರೀ ಆರ್. ಗಂಗಪ್ಪನವರು ಸರ್ವರನ್ನೂ ಆದರದಿಂದ ಸ್ವಾಗತಿಸಿದರು. ನಂತರ ಶ್ರೀ ಬಿ. ಬಸವರಾಜ್ ಅವರು ಶ್ರೀ ಆಲೂರು ವೆಂಕಟರಾಯರ ಮತ್ತು ಮುಖ್ಯ ಅತಿಥಿಗಳ ಪರಿಚಯ ಮಾಡಿಕೊಟ್ಟರು.

ನಂತರ ಮುಖ್ಯ ಭಾಷಣಕಾರರಾಗಿ ಬಂದಿದ್ದ ಶ್ರೀ ಅರ್ಚಕ ವೆಂಕಟೇಶ್ ಅವರು ಮಾತನಾಡುತ್ತಾ, "ಶ್ರೀ ಆಲೂರು ವೆಂಕಟರಾಯರು ಕನ್ನಡ ರಾಜ್ಯೋತ್ಸವ ಆಚರಿಸುತ್ತಿರುವ ನಮ್ಮ ಮಧ್ಯೆ ಬಂದು ಭಾಗವಹಿಸಿರುವುದು ಸಮಸ್ತ ಕನ್ನಡಿಗರ ಮಹದ್ಭಾಗ್ಯ" ಎಂದರು.

ಆ ಮೇಲೆ ಅಧ್ಯಕ್ಷತೆ ವಹಿಸಿದ್ದ ಪಂಡಿತರತ್ನಂ ಬಿ. ಶಿವಮೂರ್ತಿ ಶಾಸ್ತ್ರಿಗಳು ಮಾತನಾಡುತ್ತಾ, "ಏಕೀಕೃತವಾಗಿರುವ ಕರ್ನಾಟಕಕ್ಕೆ ಕೇವಲ ಒಂದು ಊರಿನ ಹೆಸರಾದ ಮೈಸೂರು ಎಂಬ ಹೆಸರು ಸರ್ವಥಾ ಸೂಕ್ತವಲ್ಲ; ನಮ್ಮ ರಾಜ್ಯಕ್ಕೆ ಕರ್ನಾಟಕ ಎಂದೇ ಹೆಸರಾಗಬೇಕು; ಜನ ಏಕ ಕಂಠದಿಂದ ಹೀಗೆಂದು ಘೋಷಿಸಿದರೆ ಅದು ಖಂಡಿತವಾಗಿಯೂ ಆಗುತ್ತದೆ. ಪ್ರಜಾಪ್ರಭುತ್ವದಲ್ಲಿ ಮಹಾಜನಗಳ ಮಾತಿಗೆ ಸರಕಾರ ಮನ್ನಣೆ ಕೊಡಬೇಕಾದುದು ಕ್ರಮಪ್ರಾಪ್ತ" ಎಂದರು.

ಶ್ರೀ ಶಾಸ್ತ್ರಿಗಳು ಕನ್ನಡ ಭಾಷೆಯ ಸೊಗಸು, ನಾಡಿನ ವೈಶಿಷ್ಟ್ಯಗಳನ್ನು ಜನರಿಗೆ ಪ್ರಿಯವಾಗುವಂತೆ ವಿವರಿಸಿದರು. ನಂತರ 'ಕರ್ನಾಟಕ ಸಂದರ್ಶನ' ಎಂಬ ತಮ್ಮ ನೂತನ ಗ್ರಂಥವನ್ನು ಶ್ರೀ ಆಲೂರರಿಗೆ ಕಾಣಿಕೆಯಾಗಿ ಅರ್ಪಿಸಿದರು.

---

# ೪೪ ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ತುಮಕೂರು.

## ಪ್ರಕಟಣೆ ೧

## ಸ್ವಾಗತ ಸಮಿತಿಯ ಕರೆಯೋಲೆ

ಕರ್ಣಾಟಕ ಮಾತೆಯ ಹಣೆಯ ಕುಂಕುಮದಂತೆ ಪರಿಶೋಭಿಸುತ್ತಿರುವ ಪ್ರಕೃತಿ ಸೌಂದರ್ಯದಿಂದಲೂ ಸಾಹಿತ್ಯ ವೈಭವದಿಂದಲೂ ಕಂಗೊಳಿಸುತ್ತಿರುವ, ತುಮಕೂರು ಜಿಲ್ಲೆಯ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ೧೯೬೩ ನೇ ಡಿಸೆಂಬರ್ ತಿಂಗಳು ದಿನಾಂಕ ೨೮, ೨೯, ೩೦, ಈ ಮೂರು ದಿನ ಪರ್ಯಂತವೂ ೪೪ ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವು ನಡೆಯಬೇಕೆಂದು ತೀರ್ಮಾನವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಸ್ವಾಗತ ಸಮಿತಿಯವರ ಏಕಾಭಿಪ್ರಾಯದಂತೆ ಕರ್ಣಾಟಕದ ಸುಪ್ರಸಿದ್ಧ ಸಾಹಿತಿಗಳೂ, ವಿದ್ವಾಂಸರೂ, ಕನ್ನಡ ನಿಘಂಟು ಸಂಪಾದಕ ಮಂಡಳಿಯ ಸದಸ್ಯರೂ, ಸಾಂಗ್ಲಿಯ ವಿಲ್ಲಿಂಗ್‌ಡನ್ ಕಾಲೇಜಿನ ಪ್ರಿನ್ಸಿಪಾಲರೂ ಆದ **ಡಾ॥ ರಂಗನಾಥ ಶ್ರೀನಿವಾಸ ಮುಗಳಿ,** ಎಂ.ಎ., ಬಿ.ಟಿ., ಡಿ.ಲಿಟ್., ಅವರು ಈ ಸಮ್ಮೇಳನದ ಅಧ್ಯಕ್ಷರಾಗಲು ಕೃಪೆಮಾಡಿ ಒಪ್ಪಿರುತ್ತಾರೆ. ಈ ಸಮ್ಮೇಳನದ ಉದ್ಘಾಟನೆಗೆ ವಿಶ್ವವಿಖ್ಯಾತ ತತ್ವಜ್ಞಾನಿಗಳೂ, ಭಾರತದ ರಾಷ್ಟ್ರಾಧ್ಯಕ್ಷರೂ ಆದ ಡಾ॥ ಎಸ್. ರಾಧಾಕೃಷ್ಣನ್ ಅವರನ್ನು ಪ್ರಾರ್ಥಿಸಲಾಗಿದೆ. ಈ ಸಮ್ಮೇಳನದ ಕಾಲದಲ್ಲಿ ಪದ್ಧತಿಯಂತೆ ಕವಿ ಗೋಷ್ಠಿ, ಸಾಹಿತ್ಯ ಗೋಷ್ಠಿ, ನಾಟಕ ಗೋಷ್ಠಿ, ಮಹಿಳಾ ಗೋಷ್ಠಿ, ಪತ್ರಿಕಾ ಗೋಷ್ಠಿ ಮತ್ತು ಗ್ರಂಥ ಪ್ರದರ್ಶನ ಮುಂತಾದುವುಗಳನ್ನು ಏರ್ಪಡಿಸಲಾಗುವುದು. ಈ ಗೋಷ್ಠಿಗಳಿಗೆ ಕರ್ಣಾಟಕದಲ್ಲಿನ ಹೆಸರಾಂತ ವಿದ್ವಾಂಸರನ್ನು ಆಹ್ವಾನಿಸಲಾಗಿದೆ. ಮನರಂಜನೆ ಕಾರ್ಯಕ್ರಮಕ್ಕಾಗಿ ಸಂಗೀತ, ನಾಟಕ, ಯಕ್ಷಗಾನ, ನೃತ್ಯ, ಕೋಲಾಟ, ಕರಡಿಯ ಮಜಲು, ಖಣವಾದ್ಯ ಮೊದಲಾದುವುಗಳಲ್ಲಿ ಭಾಗವಹಿಸಲು ನಾಡಿನ ನಾನಾ ಭಾಗದ ಕಲಾವಿದರನ್ನು ಆಹ್ವಾನಿಸಲಾಗಿದೆ. ಈ ಸಮ್ಮೇಳನವನ್ನು ಯಶಸ್ವಿಯಾಗಿ ನಡೆಸಲು ಸುಮಾರು ೩೦ ಸಾವಿರ ರೂ. ಗಳು ಬೇಕಾಗುತ್ತವೆ. ಕರ್ಣಾಟಕದ ಹಾಗೂ ತುಮಕೂರು ಜಿಲ್ಲೆಯ ಅಭಿಮಾನಿಗಳು ಈ ಮಹತ್ಕಾರ್ಯ ಸಾಧನೆಗೆ ಉದಾರವಾಗಿ ಧನ ಸಹಾಯ ಮಾಡಬೇಕೆಂದು ಕೋರುತ್ತೇವೆ.

**ಸಮ್ಮೇಳನದ ಪ್ರತಿನಿಧಿಗಳು :**

ಸಮ್ಮೇಳನಕ್ಕೆ ಪ್ರತಿನಿಧಿಗಳಾಗಬಯಸುವವರು ೪ ರೂ. ಶುಲ್ಕ ಕೊಡಬೇಕೆಂದು ನಿರ್ಧರಿಸಲಾಗಿದೆ. ಪ್ರತಿನಿಧಿಗಳಿಗೆ ಊಟ, ವಸತಿ ಸೌಕರ್ಯ ಏರ್ಪಡಿಸಲಾಗುವುದು. ಊಟ ಮತ್ತು ವಸತಿಗಾಗಿ ದಿನಕ್ಕೆ ೨ ರೂ. ನಂತೆ ಮೂರು ದಿನಗಳಿಗೆ ೬ ರೂ. ಗಳನ್ನು ವಿಧಿಸಲಾಗುವುದು.

**ಸ್ವಾಗತ ಸಮಿತಿ ಸದಸ್ಯರು :**

ಸ್ವಾಗತ ಸಮಿತಿಯಲ್ಲಿ ಪೋಷಕರಾಗಬಯಸುವವರು ೧೦೦ ರೂ. ಗಳನ್ನೂ, ಹಿತಚಿಂತಕರಾಗಬಯಸುವವರು ೫೦ ರೂ. ಗಳನ್ನೂ, ಸದಸ್ಯರಾಗಬಯಸುವವರು ೨೫ ರೂ. ಗಳನ್ನೂ ಪಾವತಿ ಮಾಡಬೇಕೆಂದು ನಿರ್ಧರಿಸಲಾಗಿದೆ.

ಕನ್ನಡನಾಡು ನುಡಿಗಳ ಅಭಿಮಾನಿಗಳೆಲ್ಲರೂ ಈ ಮಹತ್ಕಾರ್ಯಕ್ಕೆ ತಮ್ಮ ತನು, ಮನ, ಧನಗಳಿಂದ ನೆರವಾಗುವುದರ ಮೂಲಕ ಸಮ್ಮೇಳನವನ್ನು ಯಶಸ್ವಿಯನ್ನಾಗಿ ಮಾಡಬೇಕೆಂದು ಪಾರ್ಥಿಸುತ್ತೇವೆ.

| ಸ್ವಾಗತಾಧ್ಯಕ್ಷರು | ಕೋಶಾಧಿಕಾರಿ : | ಪ್ರಧಾನ ಕಾರ್ಯದರ್ಶಿ : |
|---|---|---|
| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು<br>ಸಿದ್ಧಗಂಗಾ ಕ್ಷೇತ್ರ | ಡಾ॥ ಟಿ. ಎಸ್. ಮಲ್ಲಿಕಾರ್ಜುನಯ್ಯ | ಆರ್. ಎಸ್. ಆರಾಧ್ಯ |

ಕಾರ್ಯದರ್ಶಿಗಳು :

ಹೆಚ್. ಆರ್. ಗುಂಡೂರಾವ್, ಹೆಚ್. ಎಗ. ಶಿವಾನಂದ, ಸಿ. ಜಿ. ಪರಮಶಿವಯ್ಯ, ಎಂ. ಎಸ್. ವಾಸುದೇವ್, ಟಿ. ಎ. ಲಕ್ಷ್ಮೀನಾರಾಯಣ ಶೆಟ್ಟಿ.

# ಸಂಪಾದಕೀಯ

## ಕನ್ನಡ ರಾಜ್ಯೋತ್ಸವ

ಕನ್ನಡ ರಾಜ್ಯೋದಯದ (೧-೧೧-೧೯೫೬) ಏಳನೆಯ ವಾರ್ಷಿಕೋತ್ಸವವು ಅಪೂರ್ವ ಉತ್ಸಾಹದಿಂದ ಹಿಂದೆಂದೂ ಇಲ್ಲದಷ್ಟು ವಿಜೃಂಭಣೆಯಿಂದ ಕನ್ನಡ ನಾಡಿನ ಪ್ರಾಮುಖ್ಯ ನಗರಗಳಲ್ಲಿ ೧-೧೧-೧೯೬೩ ರಂದು ಆಚರಿಸಲ್ಪಟ್ಟಿತು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಪರಿಷತ್ತಿನ ಕಾರ್ಯಕರ್ತರೂ, ನಗರ ಭವನದಲ್ಲಿ ಕರ್ಣಾಟಕ ರಾಜ್ಯೋದಯ ಮಹೋತ್ಸವ ಸಮಿತಿಯವರೂ, ಬನವಾಸಿ ನಗರದಲ್ಲಿ ಕರ್ಣಾಟಕ ಸಂಯುಕ್ತ ರಂಗದ ವ್ಯವಸ್ಥಾಪಕರೂ ನಡೆಸಿದ ಕಾರ್ಯಕ್ರಮಗಳು ಕನ್ನಡಿಗರ ಎದೆಯಲ್ಲಿ ಹೆಮ್ಮೆಯ ವೀರರಸವನ್ನು ಉಕ್ಕಿಸುವಂತಿದ್ದುವು. ಕನ್ನಡ ಕುಲಪುರೋಹಿತ ಶ್ರೀ ಆಲೂರು ವೆಂಕಟರಾಯರು ಈ ಎಲ್ಲ ಕ್ಷೇತ್ರಗಳಲ್ಲೂ ಇದ್ದು ತಮ್ಮ ಪ್ರತ್ಯಕ್ಷ ದರ್ಶನವನ್ನು ದಯಪಾಲಿಸಿದರು. ಕನ್ನಡ ರಾಜ್ಯ ಸ್ಥಾಪನೆಗಾಗಿ ಸುಮಾರು ಐವತ್ತೈದು ವರ್ಷಗಳಿಂದ (೧೯೦೭) ನಾನಾ ಮುಖಗಳಲ್ಲಿ ದುಡಿದ ಮಹಾಪುರುಷರಲ್ಲಿ ಅಗ್ರಗಣ್ಯರಾದ ಇವರು ತಮ್ಮ ಆಶೀರ್ವಾದ ಪೂರ್ವಕವಾದ ಮಂಗಳ ವಚನದಲ್ಲಿ ಈ ರೀತಿ ಹೇಳಿದ್ದಾರೆ.

> "ಒಂದೇ ಮರದ ನೆರಳಿನಲ್ಲಿ ನಾವು ಸುಖಪಡುತ್ತಿದ್ದರೂ, ಅಂತರಂಗದಲ್ಲಿ ಭೇದಭಾವನೆ ಇನ್ನೂ ತಾಂಡವಾಡುತ್ತಿದೆ. ಅದು ಹೋದರೆ ಮಾತ್ರ ನಮಗೆ ನಿಜವಾದ ಸುಖವಿದೆ."

ಇದರ ಅಂತರಾರ್ಥವೇನೆಂಬುದನ್ನು ನಾವು ಗ್ರಹಿಸಬೇಕು. ಭೇದಭಾವನೆಗೆ ಕಾರಣವೇನು? ಕನ್ನಡ ರಾಜ್ಯೋದಯವಾದ ಮೇಲೆ ಬೊಂಬಾಯಿ ಕರ್ಣಾಟಕ, ಹೈದರಾಬಾದು ಕರ್ಣಾಟಕ, ಮದರಾಸು ಕರ್ಣಾಟಕ, ಕೊಡಗು—ಇವು ಮೈಸೂರು ಸಂಸ್ಥಾನಕ್ಕೆ ಸೇರಿ ಮೈಸೂರು ರಾಜ್ಯವಾದುದು ಸರಿಯಷ್ಟೆ. ಹೊಸದಾಗಿ ಮೈಸೂರು ಸಂಸ್ಥಾನಕ್ಕೆ ಸೇರಿದ ಈ ಪ್ರಾಂತಗಳ ಕನ್ನಡಿಗರು ಸಂಸ್ಥಾನದ ಕನ್ನಡಿಗರೊಡನೆ ರಾಜ್ಯದ ಆಡಳಿತದಲ್ಲಿ ಮಿಳಿತವಾಗಿಲ್ಲವೆಂಬುದೊಂದು; ಮೈಸೂರು ರಾಜ್ಯಕ್ಕೆ ಕರ್ಣಾಟಕ ಎಂಬ ನಾಮಧೇಯವಿರಬೇಕೆಂಬ ವಿಚಾರದಲ್ಲಿ ಒಮ್ಮತವಿಲ್ಲವೆಂಬುದೊಂದು— ಈ ಎರಡು ಪ್ರಬಲ ಕಾರಣಗಳು, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅಶಾಂತಿಯನ್ನು ತಂದಿವೆ. ಇದರ ಸೂಕ್ಷ್ಮ ಸ್ಪರ್ಶ ಮಾನ್ಯ ಆಲೂರು ವೆಂಕಟರಾಯರಿಗೂ ಆಗದಿರಲಿಕ್ಕಿಲ್ಲ. ಇದಕ್ಕೆ ಕಾರಣವೇನು? ಇದಕ್ಕೆ ಪರಿಹಾರವನ್ನೂ ಆಲೂರರವರೇ ಸೂಚಿಸಿದ್ದಾರೆ.

> "ಕನ್ನಡ ಚಳುವಳಿಗಾಗಿ ಬೇರೆ ಬೇರೆ ಸಂಘ ಸಂಸ್ಥೆಗಳು ಇರಬಹುದು. ನಾಮ ಹಲವು, ದೇವರು ಒಬ್ಬನೇ. ನೀವೆಲ್ಲಾ ಕಾರ್ಯ ಮಾಡುತ್ತಿರುವುದು ಒಬ್ಬ ಕರ್ಣಾಟಕ ಮಾತೆಯ ಸಲುವಾಗಿ."

ಈ ಅಮೃತಬಿಂದು ಸಮಾನವಾದ ವಚನಗಳನ್ನು ಕನ್ನಡಿಗರು ಗಮನಿಸಬೇಕು. ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ನಿಜಲಿಂಗಪ್ಪನವರು ಹೇಳಿರುವಂತೆ ಶೌರ್ಯ ಸಾಹಸಗಳಲ್ಲಿ ಎಂದೂ ಕನ್ನಡಿಗರು ಹಿಂದೆ ಬಿದ್ದಿಲ್ಲವೆಂಬುದನ್ನೂ, ಕನ್ನಡ ನಾಡಿನ ಸಂಪತ್ ಸಾಧನಗಳನ್ನು ರೂಢಿಸಿಕೊಂಡು ಕನ್ನಡಿಗರನ್ನೆಲ್ಲಾ ಒಂದು ಮಾಡಿರುವ ನವೆಂಬರ್ ೧ನೆಯ ದಿನವನ್ನು ಯುಗಾದಿ ಹಬ್ಬದಂತೆ ವೈಭವದಿಂದ ಆಚರಿಸಬೇಕೆಂಬುದನ್ನೂ ನೆನಪಿನಲ್ಲಿಡಬೇಕು. ಮಾನ್ಯ ಆಲೂರ ವೆಂಕಟರಾಯರು ನುಡಿದಿರುವಂತೆ, ಕನ್ನಡ ಮಾತನಾಡುವ ಜನರನ್ನೆಲ್ಲಾ ಒಂದುಗೂಡಿಸುವ ಕನ್ನಡ ಸಾಹಿತ್ಯ ಪರಿಷತ್ತಿನ ಕನಸು ನನಸಾಯಿತು. ಅದನ್ನು ತಮ್ಮ ಜೀವಿತದಲ್ಲಿಯೇ ಕಂಡ ಭಾಗ್ಯಕ್ಕಾಗಿ ಆಲೂರರು ಸಂತೋಷವನ್ನು ವ್ಯಕ್ತಪಡಿಸಿದರು. ಈ ಮಹನೀಯರಿಗೆ ಕನ್ನಡ ಸಾಹಿತ್ಯ ಪರಿಷತ್ತು ಅಂದು ಬಿನ್ನಹ ಪತ್ರವನ್ನು ಅರ್ಪಿಸಿದುದು ಕನ್ನಡ ಮಾತೆಗೆ ಸಲ್ಲಿಸಿದ ಪೂಜೆಯಂತಿದೆ.

## ರಾಷ್ಟ್ರೀಯ ಐಕ್ಯತಾ ದಿನಾಚರಣೆ

ಇಂದಿನ ದಿನಗಳಲ್ಲಿ ಎಲ್ಲೆಲ್ಲಿಯೂ ಎಲ್ಲರೂ ಗಮನಿಸತಕ್ಕ ಒಂದು ಮಹತ್ವದ ವಿಚಾರವೆಂದರೆ ಐಕ್ಯತೆ. ಹದಿನೈದು ರಾಜ್ಯಗಳ ಜನತೆಯಲ್ಲಿ ಪರಸ್ಪರ ಐಕ್ಯತೆ; ಈ ರಾಜ್ಯಗಳಲ್ಲಿ ಪರಸ್ಪರ ಐಕ್ಯತೆ—ಇದೀಗ ರಾಷ್ಟ್ರೀಯ ಐಕ್ಯತೆಯ ಮೂಲತತ್ತ್ವ. ಈ ಮೂಲತತ್ತ್ವದ ಸಿದ್ಧಾಂತಕ್ಕೆ ಒಂದು ವರ್ಷದ ಹಿಂದೆ ಅಕ್ಟೋಬರ್ ೨೦ ರಲ್ಲಿ ಚೀಣಾದವರು ಭಾರತದ ಮೇಲೆ ಉತ್ತರ ಮತ್ತು ಈಶಾನ್ಯ ಗಡಿಗಳಲ್ಲಿ ನಡೆಸಿದ ದಂಡಯಾತ್ರೆ ಜೀವಕಳೆ ತುಂಬಿತು. ಆ ರಣಭೇರಿ ಈಗ ಜಯಭೇರಿಯಾಗಿ ಭಾರತೀಯರಲ್ಲಿ ಭಾವೈಕ್ಯತೆ ಶಾಶ್ವತವಾಗಿ ರೂಪುಗೊಳ್ಳಲೆಂದು ಸಾರುತ್ತಿದೆ. ಇದೊಂದು ನಂಬಲಾಗದ ಸಮಸ್ಯೆ. ೧೯೪೭ ರ ವರೆಗೆ ಮಹಾತ್ಮಾ ಗಾಂಧೀಜಿಯವರ ನೇತೃತ್ವದಲ್ಲಿ ಬ್ರಿಟಿಷರ ಆಡಳಿತವನ್ನು ಮುರಿದು ಭಾರತೀಯರು

ಸತ್ಯಾಗ್ರಹದ ಮಾರ್ಗದಲ್ಲಿ ಸ್ವರಾಜ್ಯವನ್ನು ಸ್ಥಾಪಿಸಿದಾಗ ಬ್ರಿಟಿಷರನ್ನೂ ಬೆರಗು ಮಾಡುವಂತಹ ಐಕ್ಯತೆ ನಮ್ಮಲ್ಲಿತ್ತು. ಈಗ ಅದನ್ನು ಮತ್ತೆ ಕಲಿಯಬೇಕಾಗಿದೆಯೆಂದರೆ ಅದು ನಂಬಲಾಗದ ಸಮಸ್ಯೆಯಲ್ಲವೇ? ಆದಿರಲಿ; ಹೋದುದನ್ನು ಮರೆತು, ಇದ್ದುದನ್ನು ಬೆಳೆಸೋಣ. ಪ್ರಧಾನಿ ನೆಹ್ರೂರವರು ಸೂಚಿಸಿರುವ ಪ್ರಮಾಣ ವಚನವನ್ನು ನಾವೆಲ್ಲರೂ ಬದ್ಧಾದರದಿಂದ ಕಾರ್ಯರೂಪಕ್ಕೆ ತರೋಣ.

"ಜಾತಿ, ಮತ, ಭಾಷೆ ಮೊದಲಾದ ಭಿನ್ನಾಭಿಪ್ರಾಯಗಳನ್ನು ತ್ಯಜಿಸಿ, ರಾಷ್ಟ್ರವನ್ನು ಪ್ರಗತಿಯ ಹಾದಿಯಲ್ಲಿಒಯ್ಯಲು ಶ್ರಮಿಸೋಣ. ನಮ್ಮನ್ನು ಬೇರ್ಪಡಿಸುವಎಲ್ಲ ಸಣ್ಣ ಅಡಚಣೆಗಳನ್ನೂ ನಾವು ನಿವಾರಿಸಬೇಕು. ನಾವು ಐಕ್ಯತೆ ಮತ್ತು ದೃಢ ನಿರ್ಧಾರದಿಂದಿದ್ದರೆ ವಿಶ್ವದಲ್ಲಿರುವ ಯಾವ ರಾಷ್ಟ್ರವೂ ನಮ್ಮನ್ನು ಹಾನಿಗೊಳಿಸಲು ಸಾಧ್ಯವಿಲ್ಲ."

ಈ ಅಮರವಾಣಿ ನಮ್ಮೆಲ್ಲರ ಹೃದಯದಲ್ಲಿ ಪ್ರತಿಬಿಂಬಿಸಲಿ; ಐಕಮತ್ಯ ಮತ್ತು ಏಕಧರ್ಮದ ದಾರಿಯಲ್ಲಿ ದುಂಬಿಯ ಲೋಕದಂತೆ ಸುಖಸಮೃದ್ಧಿಗೆ ಆಕರವಾಗಲಿ.

### ಪರಿಷತ್ತಿಗೆ ಪತ್ರಿಕಾ ಪ್ರತಿನಿಧಿಗಳ ಭೇಟಿ

ಮೈಸೂರು ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆಯ ಆಶ್ರಯದಲ್ಲಿ ಮೈಸೂರು ರಾಜ್ಯದ ದಕ್ಷಿಣ ಭಾಗದ ಅಭಿವೃದ್ಧಿ ಕ್ಷೇತ್ರಗಳನ್ನು ಪರಿಶೀಲಿಸಲು ಉತ್ತರ ಭಾಗದ ಎಂದರೆ ಉತ್ತರ ಕರ್ಣಾಟಕ ಮತ್ತು ಹೈದರಾಬಾದು ಕರ್ಣಾಟಕದ ಹದಿಮೂರು ಮಂದಿ ಪತ್ರಿಕಾ ಪ್ರತಿನಿಧಿಗಳು ತಮ್ಮ ಪ್ರವಾಸದ ಕೊನೆಯ ಅಂಗವಾಗಿ ಕನ್ನಡ ಸಾಹಿತ್ಯ ಪರಿಷತ್ತಿಗೆ ದಯೆಮಾಡಿಸಿದ್ದರು. ಅಧ್ಯಕ್ಷರಾದ ಆಸ್ಥಾನ ವಿದ್ವಾನ್ ಪಂಡಿತರತ್ನ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರೂ, ಕಾರ್ಯದರ್ಶಿಗಳಾದ ಶ್ರೀ ಶಂಕರಪ್ಪನವರೂ ಪತ್ರಿಕಾ ಪ್ರತಿನಿಧಿಗಳನ್ನು ಸ್ವಾಗತಿಸಿ ಆದರಿಸಿದರು. ಬಿಜಾಪುರದ "ಸಂದರ್ಶನ" ಪತ್ರಿಕೆಯ ಸಂಪಾದಕರಾದ ಶ್ರೀ ವಿ. ಬಿ. ನಾಯಕ್‌ರವರು ಪ್ರತಿನಿಧಿಗಳನ್ನು ಪರಿಚಯ ಮಾಡಿಕೊಟ್ಟರು. ಪರಿಷತ್ತಿನ ಕಾರ್ಯಕಲಾಪಗಳ ಸಂಕ್ಷೇಪ ವರದಿಯನ್ನು ಪ್ರತಿನಿಧಿಗಳಿಗೆ ಒದಗಿಸಲಾಗಿತ್ತು.

ರಾಜ್ಯದ ಉತ್ತರದ ಪತ್ರಿಕಾ ಪ್ರತಿನಿಧಿಗಳನ್ನು ಈ ಪ್ರವಾಸದಲ್ಲಿ ನೋಡಿಕೊಂಡ ಅಸಿಸ್ಟೆಂಟ್ ಡೈರೆಕ್ಟರ್ ಶ್ರೀ ಬಿ. ಜಿ. ಕುಲಕರ್ಣಿಯವರ ಶ್ರಮವು ಸಾರ್ಥಕವಾಯಿತು. ಇದೇ ಕ್ರಮದಲ್ಲಿ ವಾರ್ತಾ ಮತ್ತು ಪ್ರಚಾರ ಇಲಾಖೆಯು ವರ್ಷಕ್ಕೆ ನಾಲ್ಕು ಬಾರಿಯಾದರೂ (೩ ತಿಂಗಳಿಗೊಮ್ಮೆ) ರಾಜ್ಯದ ಪತ್ರಿಕಾ ಪ್ರತಿನಿಧಿಗಳ ಪ್ರವಾಸಕ್ಕೆ ಸೂಕ್ತ ಕ್ರಮ ಕೈಗೊಳ್ಳುವುದು ಒಳಿತು. ಪ್ರತ್ಯಕ್ಷ ದರ್ಶನದಿಂದ ಸರ್ಕಾರದ ಕಾರ್ಯಕಲಾಪಗಳಿಗೆ ಪತ್ರಿಕಾ ಪ್ರಪಂಚದಲ್ಲಿ ಸುಮಧುರ ವಾತಾವರಣ ರೂಪುಗೊಳ್ಳಲು ಇದಕ್ಕಿಂತ ಉನ್ನತವಾದ, ಉತ್ತಮವಾದ ಮಾರ್ಗ ಬೇರೊಂದಿಲ್ಲ.

### ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ

ಮುಂದಿನ ಡಿಸೆಂಬರ್ ೨೮ ಕ್ಕೆ ತುಮಕೂರು ಶ್ರೀಕ್ಷೇತ್ರ ಸಿದ್ಧಗಂಗೆಯಲ್ಲಿ ನಡೆಯುವ ಕನ್ನಡ ಸಾಹಿತ್ಯ ಸಮ್ಮೇಳನವು ಅಖಿಲ ಭಾರತದ ದೃಷ್ಟಿಯಿಂದ ನಡೆಯುತ್ತದೆ. ಎಂದಮೇಲೆ ಹಿಂದಿನ ೪೩ ಸಮ್ಮೇಳನಗಳಿಗಿಂತ ಇದಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆ. ವ್ಯವಸ್ಥಾಪಕರು ಈ ವಿಶಾಲ ದೃಷ್ಟಿಯಿಂದಲೇ ಸಕಲ ಕಾರ್ಯಗಳನ್ನೂ ಸಜ್ಜುಗೊಳಿಸುವುದರಲ್ಲಿ ನಿರತರಾಗಿದ್ದಾರೆ.

ಈಗಿನ ತುರ್ತು ಸನ್ನಿವೇಶದಲ್ಲಿ ನಮ್ಮ ಮುಂದಿದ್ದ ಸಮಸ್ಯೆಗಳಲ್ಲಿ ಒಂದಕ್ಕೆ ಅಧಿಕಾರ ಸ್ಥಾನ ಸಲ್ಲುವುದರಲ್ಲಿದೆ. ಎಂದರೆ, ಕನ್ನಡವು ಮೈಸೂರು ರಾಜ್ಯ ಸರ್ಕಾರದ ಆಡಳಿತ ಭಾಷೆಯಾಗುತ್ತದೆ. ಆದರೆ ಮೈಸೂರು ರಾಜ್ಯಕ್ಕೆ ಇನ್ನೂ ಸೇರಬೇಕಾಗಿರುವ ಗಡಿ ಪ್ರಾಂತಗಳು, ಮತ್ತು ಮೈಸೂರು ರಾಜ್ಯಕ್ಕೆ ಕರ್ಣಾಟಕ ಎಂದು ನಾಮಕರಣ – ಇವು ಇನ್ನೂ ಸಮಸ್ಯೆಗಳಾಗಿಯೇ ಉಳಿದಿವೆ. ಕನ್ನಡ ಸಾಹಿತ್ಯ ಪರಿಷತ್ತು ಇವುಗಳನ್ನು ಸಾಧಿಸಲೇಬೇಕು; ಸಾಧಿಸುವುದೆಂಬ ನಂಬಿಕೆ ನಮಗಿದೆ.

### ಶ್ರೀ ಎಚ್. ಶ್ರೀಕಂಠಯ್ಯನವರು

ಕನ್ನಡ ಸಾಹಿತ್ಯ ಪರಿಷತ್ತಿನ ಆಜೀವಸದಸ್ಯರೂ, ಪರಿಷತ್ತಿನ ಹಲವು ಕಾರ್ಯವಿಧಾನಗಳಲ್ಲಿ ಸೇವೆ ಸಲ್ಲಿಸುತ್ತಿರುವವರೂ ಆದ ಶ್ರೀ ಎಚ್. ಶ್ರೀಕಂಠಯ್ಯನವರನ್ನು ಬೆಂಗಳೂರು ಪಬ್ಲಿಕ್ ಲೈಬ್ರರಿ (ಸಾರ್ವಜನಿಕ ಪುಸ್ತಕ ಭಂಡಾರ) ಅಧ್ಯಕ್ಷರಾಗಿ ಮೈಸೂರು ಸರ್ಕಾರವು ನೇಮಿಸಿದೆ. ಇದು ಸಂತಸದ ಸುದ್ದಿ. ಇವರ ನೇತೃತ್ವದಲ್ಲಿ ಪಬ್ಲಿಕ್ ಲೈಬ್ರರಿ ಮತ್ತಷ್ಟು ಬೆಳೆದು ಬೆಳಗುವುದೆಂದು ನಮಗೆ ನಂಬಿಕೆಯಿದೆ.

ಸಂಪಾದಕರು: ಶ್ರೀ ಟಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು–೧೮

# ಸಾದರ ಸ್ವೀಕಾರ



* **ನೀರಾವರಿ ಬೇಸಾಯ** : ಲೇಖಕರು : ಪ್ರೊ॥ ಎಸ್. ಎ. ಹೊಸಮನಿ ; ಪ್ರಕಾಶಕರು : ಕರ್ಣಾಟಕ ವಿಶ್ವವಿದ್ಯಾಲಯ, ಧಾರವಾಡ ; ಸೈಜು ೧/೮ ಫುಲ್‌ಸ್ಕೇಪ್ ; ಪುಟ ೫೮ ; ಬೆಲೆ ೨೫ ನ.ಪೈ.

* **ಮೂಢ ನಂಬಿಕೆಗಳು** : ಲೇಖಕರು : ಪ್ರೊ॥ ಎಲ್. ಆರ್. ಹೆಗಡೆ ; ಪ್ರಕಾಶಕರು : ಕರ್ನಾಟಕ ವಿಶ್ವವಿದ್ಯಾಲಯ ; ಸೈಜು ೧/೮ ಫುಲ್‌ಸ್ಕೇಪ್ ; ಪುಟ ೧೨೪ ; ಬೆಲೆ ೨೫ ನ.ಪೈ.

* **ಸಾರ್ವಜನಿಕರ ಅಭಿಪ್ರಾಯ** : ಲೇಖಕರು : ಪ್ರೊ॥ ಎನ್. ರಾಜಗೋಪಾಲರಾವ್ ; ಪ್ರಕಾಶಕರು : ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ ; ಸೈಜು ೧/೮ ಫುಲ್‌ಸ್ಕೇಪ್ ; ಪುಟ ೯೨ ; ಬೆಲೆ ೨೫. ನ.ಪೈ.

* **ಶಿಶು–ಶಿಕ್ಷಣ** : ಲೇಖಕರು : ಕು. ಶಾಂತಾ ಹರಪನಹಳ್ಳಿ, ಕು. ಸುಶೀಲಾ, ಬಳ್ಳಾರಿ ; ಪ್ರಕಾಶಕರು : ಶಾಂತಾ ಹರಪನಹಳ್ಳಿ, ಮಾಳಮಡ್ಡಿ, ಧಾರವಾಡ ; ಸೈಜು ೧/೮ ಡೆಮ್ಮಿ ; ಪುಟ ೬೧ ; ಬೆಲೆ ರೂ. ೧–೨೫ ನ.ಪೈ.

**Hinduism** : By C. Rajagoplachari ; Publishers : The Hindustan Times, New Delhi ; Size 1/8 Crown ; Pages 119 ; Price Rs. 3.

* **ಅಪ್ಪಚ್ಚು ಕವಿಯ ಮೂರು ನಾಟಕಗಳು** (ಸಾವಿತ್ರಿ, ಯಯಾತಿರಾಜ ಮತ್ತು ಸುಬ್ರಹ್ಮಣ್ಯ ಸ್ವಾಮಿ) ಅನುವಾದಕರು : ವಿದ್ವಾನ್ ಮುತ್ತಣ್ಣ ; ಸೈಜು ೧/೮ ಕ್ರೌನ್ ; ಪುಟ ೪೮೪ ; ಬೆಲೆ ರೂ. ೬–೫೦ ನ.ಪೈ.

**ವಿಕ್ರಮ** – ಬೆಂಗಳೂರು ; ವಿಜಯದಶಮಿಾ ವಿಶೇಷ ಸಂಚಿಕೆ, ೧೯೬೩ ; ಬೆಲೆ ರೂ. ೧–೫೦ ನ.ಪೈ.

**ವಿಜಯವಾಣಿ** – ತುಮಕೂರು ; ದಸರಾ ವಿಶೇಷ ಸಂಚಿಕೆ – ವಿಜಯದಶಮಿ – ಶೋಭಕೃತು ಸಂ॥ ; ಬೆಲೆ ೩೦ ನ.ಪೈ.

* **ಕೂಡೊಕ್ಕಲ ಪ್ರಭಾವ** (ನಾಟಕ) : ಲೇಖಕರು : ಶ್ರೀ ಅ. ನ. ಸುಬ್ಬರಾವ್ ; ಪ್ರಕಾಶಕರು : ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಮಾಧವನಗರ ; ಸೈಜು ೧/೮ ಡೆಮ್ಮಿ ; ಪುಟ ೪೪.

**ನೀತಿವಲ್ಲರಿ ಮತ್ತು ಕವಿತಾಮಂಜರಿ** : ಲೇಖಕರು: ವಿದ್ವಾನ್ ಸುಬ್ಬರಾವ್, ಸುರತ್ಕಲ್ಲು ; ಪ್ರಕಾಶಕರು : ವಿಜಯ ಸಾಹಿತ್ಯ ಮಾಲೆ, ಸುರತ್ಕಲ್ಲು (ದ.ಕ.) ; ಸೈಜು ೧/೮ ಕ್ರೌನ್ ; ಪುಟ ೪೯ ; ಬೆಲೆ ೬೦ ನ.ಪೈ.

**ಶ್ರೀ ವೆಂಕಟೇಶ ಮಹಾತ್ಮ್ಯ ಅಥವಾ ಪದ್ಮಾವತೀ ಪರಿಣಯ** (ಯಕ್ಷಗಾನ ಪ್ರಸಂಗ) : ಲೇಖಕರು ಮತ್ತು ಪ್ರಕಾಶಕರು : ಶ್ರೀ ಅಗರಿ ಶ್ರೀನಿವಾಸ ಭಾಗವತ ; ಸೈಜು ೧/೮ ಕ್ರೌನ್ ; ಬೆಲೆ ೫೦ ನ.ಪೈ.

* **ಮಹಾಶರಣ ಕಲಬುರ್ಗಿಯ ಶ್ರೀ ಶರಣ ಬಸವೇಶ್ವರ ನಾಮಾವಳಿಯು** : ಲೇಖಕರು : ಶ್ರೀ ಮಹಾರುದ್ರಪ್ಪ ಮಹಾ ಲಿಂಗಪ್ಪ ಮಿರ್ಜಿ ; ಪ್ರಕಾಶಕರು : ಶ್ರೀ ಗುರುಸಿದ್ದಪ್ಪ ಮಹಾ ಲಿಂಗಪ್ಪ ಮಿರ್ಜಿ ; ಸೈಜು ೧/೮ ಡೆಮ್ಮಿ ; ಪುಟ ೨೪.

* **ಕನ್ನಡವೇ ದೇವರು** : ಲೇಖಕರು : ಶ್ರೀ ನಾ. ಕ್ಯ. ಸ ; ಪ್ರಕಾಶಕರು : ಸುಂದರ ಪ್ರಕಾಶನ, ನಾಗಸಂದ್ರ ರಸ್ತೆ, ಬೆಂಗಳೂರು–೪ ; ಸೈಜು ೧/೮ ಕ್ರೌನ್ ; ಪುಟ ೬೪ ; ಬೆಲೆ ರೂ. ೧.

* **ಭಾರತಿ ಸಂಸ್ಕೃತಿ** (ಕನ್ನಡ ಅನುವಾದ) : ಲೇಖಕರು : ಶ್ರೀ ಎನ್. ಎನ್. ಆರ್. ರಾಮಚಂದ್ರರಾಜು ಮತ್ತು ಶ್ರೀ ಕೆ. ಶಿವರಾಮಾಚಾರ್ಯ ; ಸೈಜು ೧/೮ ಕ್ರೌನ್ ; ಪುಟ ೩೦ ; ಬೆಲೆ ೪೦ ನ.ಪೈ.

* **ವೇದದಲ್ಲಿಯ ಕತೆಗಳು** : ಲೇಖಕರು : ಶ್ರೀ ಗೋ. ವೆಂ. ಚುಳಕಿ ; ಪ್ರಕಾಶಕರು : ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ ; ಸೈಜು ೧/೮ ಕ್ರೌನ್ ; ಪುಟ ೧೪೦ ; ಬೆಲೆ ರೂ. ೨.

* **ಮಧುಪುರ ಮಹಾತ್ಮೆ** (ಯಕ್ಷಗಾನ) : ಲೇಖಕರು ಮತ್ತು ಪ್ರಕಾಶಕರು : ಶ್ರೀ ಡಿ. ವಿ. ಹೊಳ್ಳ, ವಿದ್ವಾನ್, ಕುಂದಾಪುರ ; ಸೈಜು ೧/೮ ಕ್ರೌನ್ ; ಪುಟ ೨೧ ; ಬೆಲೆ ೩೨ ನ.ಪೈ.

* **ಗೀತಾ ಸಾಂಗತ್ಯ** : ಲೇಖಕರು ಮತ್ತು ಪ್ರಕಾಶಕರು : ಶ್ರೀ ಡಿ. ವಿ. ಹೊಳ್ಳ, ವಿದ್ವಾನ್, ಕುಂದಾಪುರ ; ಸೈಜು ೧/೮ ಕ್ರೌನ್ ; ಪುಟ ೧೩೦ ; ಬೆಲೆ ರೂ. ೧-೫೦ ನ.ಪೈ.

**ಜೋನಿ ಮತ್ತು ಇತರ ಕಥೆಗಳು** (ಮರಾಠಿ ಸಣ್ಣ ಕಥೆಗಳು) : ಲೇಖಕರು : ಮೂಲ : ಶ್ರೀ ಎನ್. ಎಸ್. ಫಡ್ಕೆ ; ಅನು : ಶ್ರೀ ಎಂ. ಎಸ್. ಅನಂತರಾವ್ ; ಪ್ರಕಾಶಕರು : ಚಾಮುಂಡೇಶ್ವರಿ ಪ್ರಕಾಶನ, ಬೆಂಗಳೂರು–೨ ; ಸೈಜು ೧/೮ ಕ್ರೌನ್ ; ಬೆಲೆ ರೂ. ೧-೨೫ ನ.ಪೈ.

**ಯುಗಪುರುಷ** (ಕಿನ್ನಿಗೋಳಿ, ದ.ಕ.) ; ದಸರಾ ವಿಶೇಷಾಂಕ, ೧೯೬೩ ; ಪುಟ ೧೬೮ ; ಬೆಲೆ ರೂ. ೧–೫೦ ನ.ಪೈ.

* **ಮಹಾರಾಜ ಶ್ರೀ ಸ್ವಾತಿ ತಿರುನಾಳರ ಕೃತಿಗಳು – ೨** : ಸಂಪಾದಕರು ಮತ್ತು ಪ್ರಕಾಶಕರು : ಸಂಗೀತ ವಿದ್ವಾನ್ ಶ್ರೀ ಎಂ. ಆರ್. ಶಂಕರಮೂರ್ತಿ ; ಸೈಜು ೧/೪ ಡೆಮ್ಮಿ ; ಪುಟ ೪೧ ; ಬೆಲೆ ರೂ. ೧.

* **ಮಹಾರಾಜ ಶ್ರೀ ಸ್ವಾತಿ ತಿರುನಾಳರ ಕೃತಿಗಳು – ೩** : ಸಂಪಾದಕರು ಮತ್ತು ಪ್ರಕಾಶಕರು : ಸಂಗೀತ ವಿದ್ವಾನ್ ಶ್ರೀ ಎಂ. ಆರ್. ಶಂಕರಮೂರ್ತಿ ; ಸೈಜು ೧/೪ ಡೆಮ್ಮಿ ; ಪುಟ ೪೦ ; ಬೆಲೆ ರೂ. ೧.

---

* ಈ ಗುರ್ತಿನ ಪುಸ್ತಕಗಳ ವಿಮರ್ಶೆ ‘ ಕನ್ನಡ ನುಡಿ ’ ಯಲ್ಲಿ ಪ್ರಕಟವಾಗುತ್ತದೆ.

Reg. No. B. G. 4—November 1963

Licensed to Post without pre-payment. License No 1



...ಕಂಠಯ್ಯ, ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮.









# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೭]　　ಸಂಪಾದಕರು : ಡಿ. ಆರ್. ರಾಮಯ್ಯ, ಬಿ.ಎ.　　[ಸಂಚಿಕೆ ೧

## ಕನ್ನಡ-ಕನ್ನಡ ನಿಘಂಟು ಸಂಪಾದಕ ಸಮಿತಿ



ಈ ಚಿತ್ರದಲ್ಲಿ ಸಮಿತಿಯ ಅಧ್ಯಕ್ಷ ಶ್ರೀ ತೀ. ನಂ. ಶ್ರೀಕಂಠಯ್ಯ, ಸದಸ್ಯರುಗಳಾದ ಶ್ರೀ ಡಿ. ಎಲ್. ನರಸಿಂಹಾಚಾರ್ಯರು, ಶ್ರೀ ಸಿದ್ದಯ್ಯ ಪುರಾಣಿಕರು, ಶ್ರೀ ಡಿ. ಕೆ. ಭೀಮಸೇನರಾಯರು, ಶ್ರೀ ಕೆ. ವಿ. ರಾಘವಾಚಾರ್, ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಮುಂತಾದವರನ್ನು ನೋಡಬಹುದು.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

## ವಿಷಯ ಸೂಚಿಕೆ






ಸಂಪುಟ ೨೭ ] ಜನವರಿ ೧೯೬೪ [ ಸಂಚಿಕೆ ೧

# ಹಳಿಯಬೇಡ

(ಹಾಫಿಸ್ ಕವಿಯ ಒಂದು ಗಜ್ಞಲು)

ಲೇ : ಶ್ರೀ ಎಂ. ವಾಸುದೇವಮೂರ್ತಿ

ಶುದ್ಧಮನುಜನೆ ಕುಡಿದು ಕುಣಿವರ ಹಳಿವ ಸಾಹಸವೇತಕೆ
ಅವರ ಪಾಪವ ನಿನಗೆ ಬರೆಯರು ತಿಳಿದುಕೊಳ್ಳೆಯದೇತಕೆ?
ನಿನ್ನ ಮಾರ್ಗವ ನೀನು ನೋಡಿಕೊ ನನ್ನ ಗುಣಗಳು ನನ್ನವು
ಬಿತ್ತಿದಂದದೆ ಕೊಯಿಲು ನೋಡದೇ ಎಲ್ಲ ಮನುಜರ ಬಾಳಿಕೆ,
ಪ್ರೇಮವಸ್ತುವ[1] ನೋಳ್ಪತವಕವು ಮರವು ಎಚ್ಚರಕೆಲ್ಲಕು,
ಗುಡಿಮಸೀದಿಗಳಾವುವಾಗಲಿ ಎಲ್ಲ ಮೀಸಲು ಪ್ರೇಮಕೆ,
ಕಳ್ಳಿನಂಗಡಿ[2] ಬಾಗಿಲೆಡೆಯಿದೆ ಅಲ್ಲಿಗೆನ್ನಯಸಿರವಿದೆ,
ಕಲ್ಲು ಇಟ್ಟಿಗೆ[3] ಸಿದ್ಧವಾಗಿದೆ ಇದನು ಗ್ರಹಿಸದ ತರ್ಕಕೆ,
ನಂಬದಿರು ನೀ ದೈವವನು ಯೆಂದೆನಗೆ ಬೋಧನೆ ಗೈವೆಯ
ತೆರೆಯ ಮರೆಯದು[4] ಸೊಗಸೇ ವಕ್ರವೊ ಕಾಣದಾಡುವೆಯೇತಕೆ?
ತ್ಯಾಗಧ್ಯಾನವ ಬಿಟ್ಟು ಬಿದ್ದವ ನಾನು ಒಬ್ಬನೆ ಎಂಬೆಯ
ಹೆಸರು ಪಡೆದನು ತಂದೆ ಆದಮು ನೋಡು ಸಗ್ಗದ ತ್ಯಾಗಕೆ,[5]
ನಾನು ಗೈದವ ನಾನು ಪಡೆದವನೆಂಬ ಮಾತನು ನಿಲ್ಲಿಸು
ನನ್ನ ಹೆಸರಲಿ ದೈವ ಬರೆದಿಹುದೊಂದು ಮರೆಯುವೆಯೇತಕೆ?
ಹುಟ್ಟಿನಿಂದಲೆ ಶುಚಿಯು ನೀನಿರೆ ಒಳ್ಳಿತಾಗಲಿಯೆಂಬೆನು
ಎಲ್ಲ ಶುಚಿತನವೆನಲು ದೈವದ ಕರುಣೆ ನಿನ್ನ ಶುಚಿತ್ವಕೆ.
ಸಗ್ಗ ಚೆಲುವಿನ ಸ್ಥಾನವಾದರು ಕೇಳು ನುಡಿವೆನು ಎಚ್ಚರ
ಈ ಹಸುರು ಹೊಲ ನೆಳಲಿನಾಸರೆ ಸಾಕು ಎಂಬುದು ಪುಣ್ಯಕೆ[6]
ಸಾವವೇಳೆಗೆ ಕೇಳು ಹಾಫಿಸ್ ಕೈಯಿ ಬಟ್ಟಲ ಹಿಡಿಯಲು[7]
ಒಂದೆಮಾರ್ಗವು ಕಳ್ಳಿನಂಗಡಿಯಿಂದೆ ಸಗ್ಗದ ನೇರಕೆ[8]

---

[1] ಭಗವಂತನನ್ನು, [2] ಭಕ್ತಮಂದಿರ, [3] ಭೇದಭಾವಕ್ಕೆ ಮಂದಿರ ಕೊಡುವುದು ಕಲ್ಲು ಇಟ್ಟಿಗೆಯೇ ಸರಿ, [4] ಭಗವಂತನ ದರ್ಶನ, [5] ಆದಂ ಸ್ವರ್ಗದಿಂದ ಬಿದ್ದ ಕತೆ, [6] ಸ್ವರ್ಗ ಹೆಚ್ಚು ಎಂದು ಭೂಮಿಯನ್ನು ಮರೆಯಲಾಗದು, [7] ಮನುಷ್ಯ ಹೃದಯ ಭಗವಂತನ ಧ್ಯಾನದಲ್ಲಿದ್ದರೆ, [8] ನೇರವಾಗಿ ಸ್ವರ್ಗ ಪಡೆಯುವುದು ನಿಶ್ಚಯ.

# ಕನ್ನಡ ಸಾಮ್ರಾಜ್ಯ ಸ್ಥಾಪನೆ

ಲೇ: ಶ್ರೀ ಆ. ಸತ್ಯಪಾಲ

೧

"ಇಳಿಯುತಿದೆ ಪಾತಾಳಖಾತಕೆ
ಚಳಿದ ಕನ್ನಡ ದೇಶವು
ಕಳಚುತಿವೆ ಧರ್ಮಾಲಯದ
ಹೊಂಗಳಸ ಕನ್ನಡಿ ಧ್ವಜಗಳು
ಉದ್ಧರಿಸುವ ಮಹಾತ್ಮರಿಲ್ಲವೆ
ಇದ್ದರೇಕೆ ವಿಲಂಬವೈ
ಎದ್ದು ಬನ್ನಿರಿ, ಭೂತದಯೆ ಬದು
ಕಿದ್ದರದನೇ ತೋರಿರೈ"

ಕನ್ನಡ ತಾಯ ಮಮತೆಯ ಅಮೃತದ ಪುತ್ರ ಪುತ್ರಿಯರೆ, ಕೇಳಿಸಲಿಲ್ಲವೆ ನಿಮಗೆ ನಿಮ್ಮ ತಾಯಿಯ ನುಡಿ, ಕಾಣಲಿಲ್ಲವೇ ಆಕೆಯ ಮ್ಲಾನವದನ, ಆ ಕಣ್ಣೀರು-ಆ ನಿಟ್ಟುಸಿರು-ಅಳಿಸಲಾರಿರಾ. ಈ ಬಡತನದ ಕೊರಕಿನಲ್ಲಿ, ತುಂಗಾ ತೀರದಲ್ಲಿ, ಕಣ್ಣೀರು ಹರಿಸುತ್ತ, ತನ್ನ ದುರ್ವಿಧಿಯ ಹಳಿಯುತ್ತ, ಚಿಂದಿ ಬಟ್ಟೆಯನುಟ್ಟು, ಮರುಗುತ್ತಿರುವ ತಾಯಿ ಭುವನೇಶ್ವರಿ, ರಾಜರಾಜೇಶ್ವರಿ ಕಾಣಲಿಲ್ಲವೆ ನಿಮಗೆ. ಅದೊ-ಅಲ್ಲಿಯೆ:

"ಏನು ಕವಿಯಿತೋ ಮಂಕು, ಮಕ್ಕಳಿಗೆ,
ಯಾರೆರಚಿದರೋ ಬೂದಿ ನಾ ಕಾಣೆ"

"ಕೇಳಲಾರಿರೆ ನೀವು ಉಳಿಸಲಾರಿರೆ ತಾಯ, ಮರೆಸಲಾರಿರೆ ಅವಳ ಅಳಲ"

"ಯದಾಯದಾಹಿ ಧರ್ಮಸ್ಯ . . . .
. . . . ಸಂಭವಾಮಿ ಯುಗೇ ಯುಗೇ"

"ಕುರುಕ್ಷೇತ್ರದಲ್ಲಿ ಪಾರ್ಥಸಾರಥಿಯಾಗಿ, ಅರ್ಜುನ-ಬಂಧು ಬಾಂಧವರೆಂಬ ಮಮತೆಯಲ್ಲಿ ತೂರಿಹೋಗಿ ಚಾಪ ಶರವನವನಿಗೆ ಬಿಸುಟು ತಾನಿನ್ನು ಯುದ್ಧ ಮಾಡಲಾರೆನೆಂಬ ಭ್ರಾಂತಿಯಿಂದ ತೊಳಲಾಡುತ್ತಿದ್ದಾಗ ಮಾರ್ಗದರ್ಶನಕ್ಕಾಗಿ ಹರಿ ಮುಕುಂದ ಮುರಾರಿ ಕೇಶವ ಮುರಹರ ಸರಸಿಜಾಂಬಿಕ ರಾಮ ರಕ್ಷಿಸು ಎಂದೊರಲಿದಾಗ, ಪ್ರಾರ್ಥಿಸಿದಾಗ, ಅಂಗಲಾಚಿದಾಗ ಭಗವಂತ ಭಕ್ತಜನಪ್ರಿಯ, ದೇವಕಿನಂದನ ಪಾಂಡವರಾಧಾರಿ ಭಗವಾನ್ ಶ್ರೀಕೃಷ್ಣ ತನ್ನ ವಿಶ್ವರೂಪವನ್ನೇ ಸಾಕ್ಷಾತ್ಕರಿಸಿ ಭಗವದ್ಗೀತೆಯನ್ನರುಹಿ ಕರ್ತವ್ಯವಿಮುಖಿಗೆ ಕರ್ತವ್ಯದತ್ತ ದೃಷ್ಟಿ ಹರಿಸುವಂತೆ ಮಾಡಲಿಲ್ಲವೆ ಅಂದು. ಕನ್ನಡ ನಾಡು ನುಡಿ ಸಂಸ್ಕೃತಿ ಪರಕೀಯರ ಧಾಳಿಯಿಂದ ನಿರ್ನಾಮವಾಗುತ್ತಿರುವಾಗ ಅವತರಿಸಿ ಬರಬಾರದೆ. 'ಏನು ಕವಿಯಿತೋ ಮಂಕು ನಾ ಕಾಣೆ, ಯಾರೆರಚಿದರೋ ಬೂದಿ ಭಗವಂತನಿಗೆ' ಎನ್ನಬೇಕೆ ನಾವು. ಕಾವೇರಿಯಿಂದ ಗೋದಾವರಿಯವರೆಗೆ ಮೆರೆದಿತ್ತು ಈ ನಮ್ಮ ನಾಡು. ಶಾತವಾಹನ, ಕದಂಬ, ಬಾಣ, ಆಳುಂಪ, ನಳ, ಸೇಂದ್ರಕ, ಪುನ್ನಾಟ, ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳರೆಲ್ಲ ಕನ್ನಡ ನಾಡಿನಲ್ಲಿ ಬಾಳಿ ಬೆಳಗಿ ತಾಯಸೇವೆಯಲ್ಲಿ ತಮ್ಮ ಜನ್ಮ ಸವೆಸಿ ಸಾರ್ಥಕ್ಯ ಪಡೆದರು. ಎಂತಹ ನಾಡಿನಲ್ಲಿ ಎಂತಹ ವಿಪ್ಲವ! ದೆಹಲಿಯ ಬಾದಷಹ ತೊಗಲಖನ ಪರಾಕ್ರಮ ಸಾಮರ್ಥ್ಯಗಳನ್ನು ಎದುರಿಸಿ ತಡೆಗಟ್ಟುವವರಿಲ್ಲ. ಕನ್ನಡ ನಾಡು ಹರಿದು ಹಂಚಿಹೋಗಿದೆ ಇಂದು. ಅಳಿವು-ಉಳಿವಿನ ಪ್ರಶ್ನೆ-ಯಾರ ತಪ್ಪಿಗೆ ಯಾರಿಗೋ ಶಿಕ್ಷೆ! ಕೊನೆ ಮೊದಲಿಲ್ಲದ ಅವ್ಯಾಹತ ಅನಾಹುತ ಆಘಾತ ಅನ್ಯಾಯಗಳ ಪರಂಪರೆಯ ಸಾಲು ಸಾಲು. ಜನರ ಕಣ್ಣೀರು, ನಿಟ್ಟುಸಿರು-ಅರ್ಥಶೂನ್ಯ ಅಸಹಾಯಕತೆಯ ಜೀವಂತ ಮೂರ್ತಿಮಂತ ಪ್ರತೀಕ, ಜನ-ಪ್ರಕೃತಿ, ಸಮರ್ಥ ನಾಯಕತ್ವ, ಸೂಕ್ತ ಮಾರ್ಗದರ್ಶನ, ಸ್ಪಷ್ಟ ನಿರ್ದೇಶನದ ಅಭಾವ-ಇದಕ್ಕೆ ಕೊನೆಯೆಂದಿಗೆ ಪ್ರಭು."

೨

ಹುಕ್ಕಬುಕ್ಕರ ಕಣ್ಣಲ್ಲಿ ನೀರು ಹರಿದಿತ್ತು. ಮನಸ್ಸು ಅಸಹಾಯವಾಗಿ ಚಡಪಡಿಸಿತ್ತು. ಮಂಗಳನಿಲಯದ ದೊರೆ ಸಂಗಮರಾಯನ ಮಕ್ಕಳು, ಯದುವಂಶೋತ್ಪನ್ನರಾದ ಈ ಕ್ಷತ್ರಿಯ ಪುಂಗವರು ಪ್ರತಾಪರುದ್ರದೇವನ ಆಶ್ರಯದಲ್ಲಿದ್ದಾಗ ದೆಹಲಿಯ ಬಾದಷಹನ ಹೊಡೆತ ತಾಳಲಾರದೆ ಓರಂಗಲ್ಲು ನುಚ್ಚುನೂರಾಯಿತು. ನಿರಾಶ್ರಿತರಾದ ಹುಕ್ಕಬುಕ್ಕರು ದ್ವಾರಸಮುದ್ರದ ಬಲ್ಲಾಳರಾಜನ ಬಳಿ ಸೇರಿದರು. ದ್ವಾರಸಮುದ್ರವೂ ಹಾಳಾದಾಗ ದಿಕ್ಕು ಕಾಣದೆ ಅಸಹಾಯರಾಗಿ, ದೈವಬಲವಿಲ್ಲದೆ, ಜನಬಲವಿಲ್ಲದೆ, ಪರಿತಪಿಸುತಿತ್ತೀಚೈತನ್ಯದ್ವಯ.

"ಕನ್ನಡ ತಾಯಿ ಇಂದು ನಿನ್ನೆಯವಳಲ್ಲ. ಕೈ ಚಾಚಿದರೆ ೫೦೦೦ ವರ್ಷಗಳ ಹಿಂದಿನವರೆಗೆ ಕೈ ಚಾಚಬಹುದು. ಸಂಸ್ಕೃತದ ಮಗಳಲ್ಲ-ಸಂಸ್ಕೃತಕ್ಕೂ ಹಿರಿಯದಾದ ಪಾರಂಪರ್ಯವುಳ್ಳ ಕನ್ನಡ ತಾಯ ಬಗ್ಗೆ ನಾವು ಅಭಿಮಾನ ತಳೆಯಬಾರದೆ, ಹೆಮ್ಮೆ ತಳೆಯಬಾರದೆ, ಈ ಕೆಚ್ಚು ಇದರ ಅರಿವು ನಮ್ಮ ಹೃನ್ಮಂದಿರದಲ್ಲಿ ಅಭಿಮಾನದ ಜಾಗೃತಿಯನ್ನುಂಟುಮಾಡುವಂತಾಗಬೇಕು. ಈ ಕೀರ್ತಿ ಈ

ವೈಭವ, ಈ ಇತಿಹಾಸ ನಿರರ್ಥಕವಾಗಬೇಕೆ? ಕೈಹಿಡಿದು ದಾರಿ ತೋರಿಸು ತಂದೆ, ನೀನಲ್ಲದಿನ್ನಾರು ಗತಿ?"

ಹನುಮನುದಿಸಿದ ನಾಡು, ಪರಶುರಾಮನ ಬೀಡು, ವಿರಾಟ ಪ್ರಭುವಿನ ನೆಲೆ, ಪುರಾಣ ಪ್ರಸಿದ್ಧ-ಇತಿಹಾಸ ಪ್ರಸಿದ್ಧವಾದ ನಾಡು.

"ಬಿಡು ಇರಲದು ಗತವೈಭವ ಇತಿಹಾಸದ ಹಾಳಿ . . . ."

ಯಾರೋ, ಎಲ್ಲೋ, ಎಂದೋ ಹಾಡಿದ ನೆನಪು.

ಆದರೂ ಮನಸ್ಸು ಹಿಂದೆ ಹಿಂದೆ ಹೋಗುತ್ತಿತ್ತು. ಆ ವೈಭವದ ಸ್ಮರಣೆ ಸ್ಫೂರ್ತಿಯನ್ನು ಚೈತನ್ಯವನ್ನು ತುಂಬುವಂಥದು. ಹರಿದು ಹಂಚಿಹೋದ ನಾಡನ್ನು ಒಂದಾಗಿಸುವ ಏಕೈಕ ತಾರಕಮಂತ್ರ – ಗತವೈಭವದ ಸ್ಮರಣೆ.

"ನಮ್ಮೆಲ್ಲ ಅಲೆದಾಟ, ಪ್ರಯತ್ನ ನಿರರ್ಥಕವಾಗಬೇಕೇನಣ್ಣ. ಯಾರೂ ನಮಗೆ ಮಾರ್ಗದರ್ಶಕರಾಗಲಾರರೆ. ಭಗವಂತನ ವಾಣಿ ನಿರರ್ಥಕವಾಗಬೇಕೆ. ಅವನ ಉದಯಕ್ಕೆ ಕಾಲ ಪರಿಪಕ್ವವಾಗಿಲ್ಲವೆ. ಶ್ರೀಮಾತೆ ಯವನ ಬಾಧೆಯಿಂದ ಮ್ಲಾನವದನಳಾಗಿದ್ದಾಳೆ. ಭುವನೇಶ್ವರಿಯಾಗಿದ್ದವಳು ಭಿಕ್ಷುಕಿಯಾಗಿದ್ದಾಳೆ. ರಾಜರಾಜೇಶ್ವರಿಯನ್ನು ಮಹಾಕಮಲ ಪೀಠಸ್ಥೆಯನ್ನಾಗಿ ಮಾಡಬೇಕು. ಅವಳೇ ರಾಷ್ಟ್ರಶಕ್ತಿ. ಆ ಶಕ್ತಿಯನ್ನು ಪ್ರತಿಷ್ಠಾಪಿಸುವ ಹೊಣೆಗಾರಿಕೆ ನಮ್ಮದು. ಇನ್ನೆಷ್ಟು ಕಾಲ ಈ ಅನ್ಯಾಯ ಅನಾಹುತಗಳಾಗಬೇಕು. ಇಲ್ಲ, ಇದೆಂದಿಗೂ ಸಾಧ್ಯವಿಲ್ಲ. ನಾವ್ಯಾರಿಗೆ ತಾನೆ ಏಕೆ ಕಾಯಬೇಕು. ಈ ದೇಹದ ಮೇಲಿನ ಮಮತೆಯಿಂದ ಹೇಡಿಗಳಂತೆ ಈ ಅಜ್ಞಾತವಾಸ ನಮಗೆ ತಕ್ಕುದಲ್ಲ. ಯಾರ ಮಾರ್ಗದರ್ಶನ ನಮಗೇಕೆ ನಡೆಯಣ್ಣ. ಈ ನಾಡ ಸೇವೆಗೆ ನಮ್ಮ ಪ್ರಾಣ ಮೀಸಲು. ನಡೆಯಣ್ಣ ಹೊಗೋಣ."

"ಇರು ತಮ್ಮ ಏತಕೀದುಡುಕು. ಅರಿವಿನ ಸುಜ್ಞಾನ ಸೂರ್ಯನಿಂದಲ್ಲದೆ ಮಿಂಚುಹುಳುವಿನಿಂದ ಹರಿಯುವುದೇ ಮಾಯಾತಮಂಥ. ಮುರಿದ ಓಡೆಯಿಂದ ಕಡಲನ್ನು ದಾಟಲೆಳಸುತ್ತಿರುವೆ. ಕರ್ತಾರನ ಕಮ್ಮಟದಲ್ಲಿ ನಾವು ಲೋಹದ ತುಂಡುಗಳು ಮಾತ್ರ. ತನ್ನ ಇಚ್ಛೆಯಂತೆ ಅಸ್ತ್ರವಾಗಿಯೋ, ಉಪಕರಣವಾಗಿಯೋ, ಅಲಂಕಾರಕ ವಸ್ತುವಾಗಿಯೋ ರೂಪಿಸುವನು ಆ ವಿರೂಪಾಕ್ಷ. ನಾವು ದುಡುಕಿ-ನಡೆದರೆ ಆ ತಾಯಿ ಊಡಿಸಿದ ಅಮೃತಕ್ಕೆ ದ್ರೋಹ ಬಗೆಯುವಂತಾದೀತು. ತೊಗಲಖನ ಮುಂದೆ ನಾವಿಬ್ಬರೇ ನಿಲ್ಲಬಲ್ಲವೇ ಕಂದ. ಅಸತ್ತಿನಿಂದ ಸತ್ತತ್ವವನ್ನರಿಯಲು, ಅಂಥ ತಮಸ್ಸಿನಿಂದ ಬೆಳಗಿನತ್ತ ನಡೆಯಲು ಮಾರ್ಗದರ್ಶನ ಅವಶ್ಯ. ಸಾವಿಗೆ ನಾನು ಭಯಪಡುತ್ತಿಲ್ಲ. ಕನ್ನಡ ರಾಜರಾಜೇಶ್ವರಿ ನಮ್ಮಿಂದ ಮಹತ್ಕಾರ್ಯ ಆಗಬೇಕೆಂದಪೇಕ್ಷಿಸಿದ್ದಾಳೆ. ಆಕೆಯ ಆಶೆ ಆಕಾಂಕ್ಷೆಗಳನ್ನು ಈಡೇರಿಸುವ ಯೋಗ್ಯತೆ ಶಕ್ತಿ ಸಾಮರ್ಥ್ಯಗಳಿಗಾಗಿ ಆಕೆಯ ಅನುಗ್ರಹವೇ ಆಗಬೇಕಲ್ಲದೆ ವಿಧಿಯಿಲ್ಲ. ಶೀಲ ಭಕ್ತಿ ಸೌಜನ್ಯಗಳು ಯಾರೊಬ್ಬರ ಸ್ವತ್ತಲ್ಲ. ಕಾಲವಂಚನೆ ಪ್ರಸ್ತುತ ಪರಿಸ್ಥಿತಿಯಲ್ಲಿ ಅನಿವಾರ್ಯ. ಭಗವಂತ ನಮ್ಮನ್ನು ಪರೀಕ್ಷಿಸುತ್ತಿದ್ದಾನೆ. ಚಂದನವನ್ನು ಕಡಿಕಡಿದು ತೇದರೆ ನೊಂದೆನೆಂದು ಕಂಪ ತೊರೆಯುವುದೆ? ಚಿನ್ನವನ್ನು ತಂದು ಮೂಸೆಯಲ್ಲಿಟ್ಟು ಕರಗಿಸಿದರೆ ಬೆಂದೆನೆಂದು ಕಳಂಕ ಹಿಡಿಯುವುದೆ? ಸಿಂಡು ತಂದು ಕಡಿದು ಕಬ್ಬನ್ನು ತಂದು ಗಾಣದಲ್ಲಿಕ್ಕಿದರೆ ಬೆಂದ ಪಾಕ ಸಕ್ಕರೆಯಾಗಿ ನೊಂದೆನೆಂದು ಸವಿಬಿಟ್ಟೀತೆ? ನಿನಗೆ ಪೂರ್ಣ ನಂಬಿಕೆಯಿದೆ. ನಾವು ಈ ಪರೀಕ್ಷೆಯಲ್ಲಿ ಧೃತಿಗೆಡದೆ ಮುಂದುವರಿದರೆ ಯಾವ ರೂಪದಲ್ಲಿಯೋ ನಮ್ಮ ಕೈ ಹಿಡಿಯುತ್ತಾನೆ. ಮೇಲಾಗಿ ಆ ಮಹಾಪುರುಷ ಯಾರು? ಎಲ್ಲಿಂದ ಬರುತ್ತಾನೆಂದು ಭಾವಿಸಿರುವೆ ಕಂದ. ವ್ಯಕ್ತಿ ನಿಮಿತ್ತ ಮಾತ್ರ. ರಾಷ್ಟ್ರದ ತಪಶ್ಶಕ್ತಿ ಅವನಲ್ಲಿ ಒಟ್ಟುಗೂಡಿ ಮೂರ್ತೀಭವಿಸಬೇಕು. ಆ ತಪಶ್ಶಕ್ತಿಯನ್ನು ಯಾವನು ಜೀರ್ಣಿಸಿಕೊಳ್ಳುವನೋ ಅವನೇ ಆ ಮಹಾಪುರುಷ. ಇಷ್ಟೊಂದು ಕಳಕಳಿ, ಉತ್ಸುಕತೆ ಇರುವ ನೀನೇ ಆ ಮಹಾಪುರುಷ ಯಾಕಾಗಿರಬಾರದು. ಈ ರಾಷ್ಟ್ರ ಬದುಕಬೇಕು, ಈ ರಾಷ್ಟ್ರಧರ್ಮ ಆಧಾರಿತವಾಗಿ ವೃದ್ಧಿಯಾಗಬೇಕು. ಈ ಜನರ ಬಾಳು ಹಸನಾಗಬೇಕು. ಮನೀಸದಾಕಾಂಕ್ಷೆ ನಿನ್ನ ಹೃದಯದಲ್ಲಿ ಜಾಗೃತವಾಗಿದೆ. ಆಕಾಂಕ್ಷೆಗೆ ತಕ್ಕ ಸಾಧನೆ-ಶ್ರದ್ಧೆ ನಿನ್ನಲ್ಲಿವೆ. ನಮ್ಮ ನಾಡಿನ ಮುಕ್ತಿ ಸನ್ನಿಹಿತವಾಗಿದೆಯೆಂದು ಯಾವುದೋ ಅಂತರ್ವಾಣಿ ನನ್ನ ಹೃದಯದಲ್ಲಿ ಮೊರೆಯುತ್ತಿದೆ. ಈ ವಿಪ್ಲವ ಅವನಿಗೆ ಪ್ರಿಯನೆ ಬುಕ್ಕ. ಅದೊ ಅಲ್ಲಿಯ ವಿಜಯಧ್ವಜ ರಾಜ ಕಟ್ಟಿಸಿದ ಕೋಟೆ, ಈಗ ಶಿಥಿಲವಾಗಿ ಹಾಳಾಗಿದೆ. ಒಂದು ಕಡೆ ಋಷ್ಯಮೂಕ ಪರ್ವತ, ಮತ್ತೊಂದು ಕಡೆ ತುಂಗಭದ್ರಾ ನದಿ, ಇನ್ನೊಂದು ಕಡೆ ಮಾಲ್ಯವಂತಿ ಪರ್ವತ, ಮತ್ತೊಂದು ಕಡೆ ಮಾತಂಗ ಪರ್ವತ. ಇದು ತಪೋಭೂಮಿ, ವೀರಭೂಮಿ, ಶ್ರೀರಾಮಚಂದ್ರನ ಅಳಲು ನಿವಾರಣೆಯಾದುದು ಈ ಕ್ಷೇತ್ರದಲ್ಲಿಯೇ. ಕನ್ನಡಿಗರೆಲ್ಲರ ಅಳಲೂ ಇಲ್ಲಿಯೇ ನಿರ್ಮೂಲವಾಗುತ್ತದೆ. ಯಾವುದೋ ಅವ್ಯಕ್ತ ಶಕ್ತಿ ನುಡಿಯುವಂತಿದೆ. ಜಗತ್ತಿನ ಇತಿಹಾಸದಲ್ಲಿಯೇ ಉಲ್ಲೇಖಿಸಿಲ್ಲದಿರುವ ಮಹಾಸಾಮ್ರಾಜ್ಯವಿಲ್ಲಿ ಅವತರಿಸುತ್ತದೆ.

೩

"ದಣಿದ ಮೈ ಮನ ವಿಶ್ರಾಂತಿ ಬಯಸಿತ್ತು. ಭೂಮಿ ತಾಯಿ ಬಾಚಿ ಬಿಗಿದಪ್ಪಿದಳಿಬ್ಬರನ್ನೂ. ಹೊಂಗೆ ಮರದ ನೆರಳಿನಲ್ಲಿ, ಪ್ರಕೃತಿಯ ಮಡಿಲಲ್ಲೊರಗಿದರಿಬ್ಬರೂ. ಗುಪ್ತ ಚೈತನ್ಯದ ಅವ್ಯಕ್ತ ಗಭೀರತೆಯಲ್ಲಿ ಸುಳಿಯುತ್ತಿದ್ದ ಅಚಿಂತಾ ತಂತು ಕನಸೊಂದನ್ನು ಹೆಣೆಯಿತು. ಪರಮ ಪರಂಜ್ಯೋತಿ ಕೇಳಿ ಚಂದ್ರಾದಿತ್ಯ ಕಿರಣ ಸುಜ್ಞಾನ ಪ್ರಕಾಶನದ ಶ್ರೀ ವಿರೂಪಾಕ್ಷನನ್ನು ಕಂಡರು. ಭಗವಂತ ಮುಗುಳನಗುತ್ತ ಕೈನೀಡಿದತ್ತ ದೃಷ್ಟಿ ಹರಿಸಿದಾಗ ಕಂಡರಲ್ಲೆ ಯೋಗಿಪುಂಗವ, ತಪೋನಿಧಿ ಮಹರ್ಷಿಯೋರ್ವರನ್ನು. ಅವರ ಅಭಯಹಸ್ತ ಹುಕ್ಕಬುಕ್ಕರ ಹೃನ್ಮಂದಿರಗಳಲ್ಲಿ ಭಕ್ತಿ ಶ್ರದ್ಧೆ ನಂಬಿಕೆಗಳ ಹೊನಲುಕ್ಕಿ ಹರಿಸಿತು. ತೃಪ್ತಿಯ ಎಳೆಯ ಮುಗುಳುನಗೆ ಮುಖದಲ್ಲಿ ಕಾಣಿಸಿಕೊಂಡಿತು. ಮಧ್ಯಾಹ್ನ ರಣಬಿಸಿಲು ಸ್ವಲ್ಪ ಹೊತ್ತಿನಲ್ಲೆ ಮರದ ನೆಳಲು ಪಕ್ಕಕ್ಕೆ ಹರಿದಿತ್ತು. ಸರ್ಪವೊಂದು ಹರಿದು ಬಂದು ಹಿರಿಯನ ತಲೆಯ ಮೇಲೆ ತನ್ನ ಹೆಡೆಯನ್ನು ಮರೆಮಾಡಿ ಲಾಸ್ಯವಾಡಿತ್ತು. ಈ ಅಪೂರ್ವ ದೃಶ್ಯವನ್ನು ದೂರದಿಂದಲೇ ಕಂಡು ಪುಳಕಿತರಾದರು ತಪೋನಿಧಿ ಶ್ರೀ ವಿದ್ಯಾರಣ್ಯರು. ಆನಂದನಗೆ ಹೊರ ಚೆಲ್ಲಿತು. ತೃಪ್ತಿಯನಗೆ ಹೊರಹೊಮ್ಮಿತು. ಕರ್ನಾಟಕ ಸಾಮ್ರಾಜ್ಯ ಸ್ಥಾಪನೆಗೆ ಯೋಗ್ಯರಾದ ರಾಜಕುವರರನ್ನರಸುತ್ತ ನಡೆದಿದ್ದರು. ಜನರ ಕಣ್ಣೀರು, ಯವನರ ಪದಾಘಾತಕ್ಕೆ ಸಿಕ್ಕಿ ಹಾಳಾದ ಪಾಳು ದೇಗುಲಗಳ ಸಾಲು ಸಾಲುಗಳನ್ನು ಕಂಡಾಗ, ಈ ಅಧರ್ಮ ಅನ್ಯಾಯಗಳ ನಗ್ನ ತಾಂಡವ ನೃತ್ಯವನ್ನು ಕಂಡು ಆಘಾತವಾಗಿತ್ತು ಈ ದಿವ್ಯ ಚೇತನಕ್ಕೆ. ಹಗಲು ರಾತ್ರಿ ಸಾಗಿದೆ – ಎರಡು ಬಾಳಿನ ಹಾದಿ ಎಂದು ಹಲುಬುತ್ತಿತ್ತು ಹಿರಿಯ ಜೀವ. ಅದಾಗುವವರೆಗೆ ತೃಪ್ತಿಯೆಲ್ಲಿ, ಶಾಂತಿಯೆಲ್ಲಿ, ಸಮಾಧಾನವೆಲ್ಲಿ. ಎಷ್ಟು ಜನಕ್ಕಿದೆ, ಯಾರಿಗಿದೆ ಇಷ್ಟು ಕಳಕಳಿ. ಬಾಳ ಮರುಭೂಮಿಯಲ್ಲಿ ನೀರಿನ ಅಲ್ಲಿ ಅಮೃತದ ಬುಗ್ಗೆಯನ್ನೇ ಕಂಡಂತಾಯಿತು ವಿದ್ಯಾರಣ್ಯರಿಗೆ ಹುಕ್ಕಬುಕ್ಕರ ಕಂಡು. ದಂತದಲ್ಲಿ ಕಡಿದು ಮಾಡಿದ ಚೆಲುವಾದ ವಿಗ್ರಹಗಳನ್ನು ಮಣ್ಣಿನಲ್ಲಿ ಎಸೆದಂತಿತ್ತು. ತಮ್ಮ ಧ್ಯೇಯ ಸಾಧನೆಗೆ, ಸಾಮ್ರಾಜ್ಯ ಸ್ಥಾಪನೆಗೆ ಇವರೇ ತಕ್ಕವರೆಂದು ತೀರ್ಮಾನಿಸಿದರು. ಅಷ್ಟರಲ್ಲಿ ಎಚ್ಚೆತ್ತ ಆ ತರುಣದ್ವಯ ಮುಂದೆಯೇ ಕನಸಿನಲ್ಲಿ ಕಂಡ ಮಹರ್ಷಿ ಪ್ರತ್ಯಕ್ಷವಾಗಿಯೇ ನಿಂತಿರುವುದನ್ನು ಕಂಡು ಆನಂದತುಂದಿಲರಾಗಿ ಅವರ ಚರಣಕಮಲಗಳಲ್ಲಿ ಶಿರವನ್ನಿಟ್ಟು ನಮಸ್ಕರಿಸಿದರು. ವಾತ್ಸಲ್ಯಭರಿತ ದೃಷ್ಟಿಯಿಂದ ಅಭಿಷೇಕಮಾಡಿ ಭುಜ ಹಿಡಿದೆತ್ತಿದಾಗ ಆ ಸ್ಪರ್ಶಮಾತ್ರದಿಂದಲೆ ಅವರಿಗೆ ರೋಮಾಂಚನವಾಯಿತು.

"ಭಗವಾನ್ ಇಂದು ನಮ್ಮ ಬಾಳಿನಲ್ಲಿ ಅಪೂರ್ವ ದಿನ. ತಮ್ಮ ದರ್ಶನದಿಂದ ನಮ್ಮ ಜನ ಸಾರ್ಥವಾಯಿತು. ನಮ್ಮೆಲ್ಲ ಚಿಂತೆ ಹರಿದಂತಾಯಿತಿಂದಿಗೆ. ಶ್ರೀ ವಿರೂಪಾಕ್ಷ ಸ್ವಾಮಿ ಕನಸಿನಲ್ಲಿ ಇದೀಗ ದರ್ಶನವಿತ್ತು ತಮ್ಮ ಆಗಮನದ ಬಗ್ಗೆ ತಿಳಿಸಿ ತಮ್ಮಿಂದ ನಮ್ಮಪೇಕ್ಷೆ ಕೈಗೂಡುವುದಾಗಿ ತಿಳಿಸಿದ್ದರ ಮೇರೆಗೆ ತಾಯಿ ಭುವನೇಶ್ವರಿಯ ಕೃಪೆಯಿಂದ, ತಮ್ಮ ಆಶೀರ್ವಾದ, ಮಾರ್ಗದರ್ಶನದ ನೆರಳಿನಲ್ಲಿ ನಮ್ಮ ಜೀವನದ ಏಕೈಕಧ್ಯೇಯ ಈಡೇರಬೇಕು. ನಮ್ಮನ್ನು ಅನುಗ್ರಹಿಸಿ ಆಶೀರ್ವದಿಸಿ."

ಪುಷ್ಪವೃಷ್ಟಿಯಾದಂತೆ ಆನಂದಬಾಷ್ಪಗಳುದುರಿದವು. ಸ್ಥಿತಿಪ್ರಜ್ಞ ಸನ್ಯಾಸಿಯ ಕಣ್ಣುಗಳಲ್ಲಿ ಹನಿಗಳು ತೊಟ್ಟಿಕ್ಕಿದ್ದುವು. ವಿದ್ಯಾರಣ್ಯರು ಬಾಚಿ ಬಿಗಿದಪ್ಪಿದರಿಬ್ಬರನ್ನೂ. ಈ ಅಪೂರ್ವ ಸಮಾಗಮವನ್ನು ಕಂಡ ಪ್ರಕೃತಿಯೂ ಪುಲಕಿತಗೊಂಡಿತು.

"ಶ್ರೀ ವಿರೂಪಾಕ್ಷ ಸ್ವಾಮಿಯ, ತಾಯಿ ಭುವನೇಶ್ವರಿಯ ದರ್ಶನಕ್ಕೆ ಹೋಗೋಣ. ಇನ್ನು ನಮ್ಮ ಧ್ಯೇಯ, ಗುರಿ, ಸಾಧನೆ, ಏಕೈಕ ಕರ್ನಾಟಕ ಸ್ಥಾಪನೆ, ಇದಕ್ಕಾಗಿ ನಮ್ಮ ಜೀವನ ಮೀಸಲು. ಪಕ್ಕದಲ್ಲಿ ನಿಂತದ್ದ ಸಾಯಣನ ಕಡೆ ತಿರುಗಿ ನುಡಿದರು :

"ಏಳು ಸಾಯಣ ಕಟ್ಟುಗ್ರಂಥವನೇಳು ಪಂಪಾಕ್ಷೇತ್ರಕೆ,
ಗಾಳಿಸಂಚುಗಳೋದಿದರೇತಕೆ ಏಳು ಈ ಕ್ಷಣಮಾತ್ರಕೆ."

"ನಾಡು ನುಡಿ ಬಲಿದಾನವನ್ನಪೇಕ್ಷಿಸಿದೆ. ಶಾಸ್ತ್ರಾಧ್ಯಯನ, ಧರ್ಮಚಿಂತನೆ ಎಲ್ಲ ಗುರಿಸಾಧಿಸುವವರೆಗೆ ಪಡೆದಿರಲಿ. ಲಕ್ಷ ಶಾಸ್ತ್ರಗಳೇಕೆ, ಲಕ್ಷ ಸೂತ್ರಗಳೇಕೆ, ಮೋಕ್ಷ ಸಂಪಾದನೆಗೆ ನಿಶ್ಚಯ ಮೋಕ್ಷ-ಸ್ವಾತಂತ್ರ್ಯದಲ್ಲಿ ಎನ್ನುವುದರ ಅರಿವು ನಮಗೆ ಅತ್ಯಾವಶ್ಯಕ. ನಡೆ ಕಂದಾ, ಈ ದಾಸ್ಯ ನಮಗಿನ್ನು ಸಾಕು. ಕನ್ನಡ ತಾಯ ಕಣ್ಣೀರನ್ನೊರೆಸಿ ಮತ್ತೆ ರಾಜರಾಜೇಶ್ವರಿಯ ತೇರೇರಿಸೋಣ. ಆಕೆಯ ಸ್ವಾಗತಕ್ಕಾಗಿ ನಾಡನ್ನು ಸಿಂಗರಿಸೋಣ. ದಾರಿ ತೋರುವ ಹಿರಿಯ ಸೋದರು ಮುಂಬರುವಾಗ ವೈಭವದಿಂದ ಭಕ್ತಿಯಿಂದ ಆಕೆಯನ್ನು ಮೆರೆಸೋಣ. ಅಲ್ಲಿಯವರೆಗೆ ನಮಗೆಲ್ಲಿಯ ಶಾಂತಿ, ಸಮಾಧಾನ.

"ಮಹಾದಾಜ್ಞೆ ಪ್ರಭೂ . . . "

ಆ ವೀರವಾಣಿಯಿಂದ ರೋಮಾಂಚಿತರಾದರು ಹುಕ್ಕಬುಕ್ಕರು. ನದಿಯಲ್ಲಿ ಮಿಂದು ಪ್ರವಾಸದ ದಣಿವುದೂಸರಗಳನ್ನು ಕಳೆದು ಶುಚಿಭೂರ್ತರಾಗಿ ಭಗವಂತನ ದರ್ಶನ ಮಾಡಿದರು. ಈ ದಿವ್ಯ ತೇಜಸ್ಸಿನ ಮುಂದೆ ಯವನರ

ಆಟ ಸಾಗದೆಹೋಯಿತು. ಕನ್ನಡ ನಾಡು ಸ್ವತಂತ್ರ ವಾಯಿತು. ಶ್ರೀ ವಿದ್ಯಾರಣ್ಯರ ನೇತೃತ್ವದಲ್ಲಿ ಶಾ. ಶ. ೧೨೫೮ರ ಧಾತೃ ಸಂವತ್ಸರ ವೈಶಾಖ ಶುದ್ಧ ಸಪ್ತಮಿಯ ಶುಭ ವಿಜಯ ಲಗ್ನದಲ್ಲಿ ವಿಜಯನಗರ ಸ್ಥಾಪನೆ ಯಾಯಿತು. ಹೊನ್ನ ಹೊಳೆ ಹರಿಯಿತು. ನಾಡು ಸುಭಿಕ್ಷವಾಯಿತು. ತೃಪ್ತಿ ಸಂತೋಷ ಆನಂದಕೆಲ್ಲೆ ಯಿಲ್ಲವಾಯಿತು. ಪಾಂಡುಪುತ್ರ ಧರ್ಮರಾಯ ಮಂಡಿಸಿದ್ದ ದಿವ್ಯ ಪರಮ ಪವಿತ್ರ ಸಿಂಹಾಸನವನ್ನೇರಿದ ಹರಿಹರರಾಯ. ಉಘೇ ಎಂದಿತು ಜನಸ್ತೋಮ. ವಂದಿ ಮಾಗಧರು ಹಾಡಿ ಹೊಗಳಿದರು. ಕವಿ ಗಮಕಿಗಳು ಕೀರ್ತಿಸಿದರು. ಸುಮಂಗಲಿಯರು ಆರತಿಯನ್ನೆತ್ತಿ ತಿಲಕ ವನ್ನಿಟ್ಟರು. ವಿಧಿವತ್ತಾಗಿ ಪಟ್ಟಾಭಿಷೇಕ ಮಹೋತ್ಸವ ವಿಜೃಂಭಣೆಯಿಂದ ನೆರವೇರಿತು.

೪

'ನಾಡು ಸಿಂಗರವಾಯ್ತು ಬೀಡು ಹೆಬ್ಬೆಳಕಾಯ್ತು
ಭುವನೇಶ್ವರೀದೇವಿ ರಥವನೇರಿದಳು'
"ತಾಯ್ ಬಿಜಯಮಾಡುವಳು, ದಾರಿಬಿಡಿ, ದಾರಿಬಿಡಿ
ಅಡ್ಡಬಾರದಿರಿ
ಭಾರತಾಂಬೆಯ ಹಿರಿಯ ಹೆಣ್ಮಗಳೆ . . . ."

"ಸತ್ಯಂ ಶಿವಂ ಸುಂದರಂ ಎಂದು ಆದ್ಯರು ಯಾವ ಪರಾವಸ್ತುವನ್ನು ನಿರ್ದೇಶಿಸಿರುವರೋ, ಚರಾಚರವಾದ ಈ ಜಗತ್ತು ಯಾವ ಪರಾಚೈತನ್ಯದ ವ್ಯಕ್ತಸ್ವರೂಪವೋ, ಯಾರ ಪ್ರಭಾವದಿಂದ ವಿಶ್ವದ ಸೃಷ್ಟಿ ಸ್ಥಿತಿ ಲಯಗಳು ನಡೆಯುವುವೋ ಆ ವಿರೂಪಾಕ್ಷಸ್ವಾಮಿಯನ್ನು ಅನನ್ಯ ಭಕ್ತಿಯಿಂದ ಆರಾಧಿಸುತ್ತೇನೆ. ತೋಳುಗಳ ತಪನಿಧಿ ಯಂತೆ, ಮಡಿಲ ಮಾಣಿಕ್ಯದಂತೆ ನಮ್ಮನ್ನು ಕಂಡು ಭಕ್ತಿ ಶ್ರದ್ಧೆಗಳ ಬೀಜ ಬಿತ್ತಿ, ಅಸಹಾಯಕತೆ, ಧೈರ್ಯ ರಾಹಿತ್ಯದ ಕಳೆಕಿತ್ತು. ಸ್ವಾತಂತ್ರ್ಯ ಸಾಮ್ರಾಜ್ಯಗಳ ಸತ್ಫಲವನ್ನು ಬೆಳೆದ ತಪೋನಿಧಿ ಗುರುದೇವ ಶ್ರೀ ವಿದ್ಯಾರಣ್ಯರಿಗೆ ಭಕ್ತಿಭಾವದಿಂದ ನಮಿಸುತ್ತೇನೆ.

"ಕನ್ನಡ ರಾಜರಾಜೇಶ್ವರಿಯ ಪಾದಸಾಕ್ಷಿ, ಪಂಪಾಪತಿ ಶ್ರೀ ವಿರೂಪಾಕ್ಷಸ್ವಾಮಿಯ ಪಾದದಾಣೆ, ಕರ್ನಾಟಕ ರತ್ನಸಿಂಹಾಸನ ಪ್ರತಿಷ್ಠಾಪನಾಚಾರ್ಯ ಚರಣಯುಗ್ಮಗಳಲ್ಲಿ ಶಿರವಿಟ್ಟು ನಮಿಸಿ ತಮಗೆಲ್ಲ ಭರವಸೆ ನೀಡುತ್ತೇನೆ. ನನ್ನ ಕೊನೆಯುಸಿರಿನವರೆಗೂ ಪ್ರಜೆಗಳ ತಂದೆಯಾಗಿ ಅರಮನೆಯ ರತ್ನಾದೀಪವಾಗಿ ನಾಡಿನ ನಂದಾದೀವಿಗೆಯಾಗಿ, ಶತೃಗಳಿಗೆ ಸಿಂಹಸ್ವಪ್ನವಾಗಿ ಉಳಿಯಲು ತ್ರಿಕರಣ ಪೂರ್ವಕವಾಗಿ ಶ್ರಮಿಸುತ್ತೇನೆ."

ಕೇಳಿದವರ ಹೃದಯ ತುಂಬಿಬಂತು. ಜನರೆಲ್ಲ ಮನೆ ತುಂಬಿ ಹರಸಿದರು – ತಮ್ಮ ದೊರೆಯನ್ನು – ಕನ್ನಡಿಗರ ಕಣ್ಮಣಿಯನ್ನು – ಶ್ರೀ ಹರಿಹರರಾಯನನ್ನು. ಶ್ರೀ ವಿದ್ಯಾರಣ್ಯರ ತಪಸ್ಸು ಧ್ಯೇಯ ಸಿದ್ಧಿಸಿತು. ಅವರ ಶ್ರಮ ಸಾರ್ಥಕವಾಯ್ತು. ಎಲ್ಲರೊಂದಿಗೆ ತಾವೂ ತುಂಬು ಹೃದಯದಿಂದ ಆಶೀರ್ವದಿಸಿದರು.

"ಸ್ವಸ್ತಿಶ್ರೀ ಸಮಸ್ತ ಭುವನಾಶ್ರಯ, ವಿಜಯನಗರ
ಸಾರ್ವಭೌಮ,
ತ್ರೈಲೋಕ್ಯಮಲ್ಲ, ಭಾಷೆಗೆ ತಪ್ಪುವ ರಾಯರ ಗಂಡ,
ಅರಿರಾಯವಿಭಾಡ, ಶರಣಾಗತ ವಜ್ರಪಂಜರ,
ಚತುಸ್ಸಮುದ್ರಾಧಿಪತಿ, ಮಹಾರಾಜಾಧಿರಾಜ,
ರಾಜ ಪರಮೇಶ್ವರ, ಬಿರುದೆಂತೆಂಬರ ಗಂಡ,
ಪರನಾರೀ ಸಹೋದರ, ವೀರಪ್ರತಾಪ,
ವೈರೀಭ ಕಂಠೀರವ, ತ್ರಿಭುವನಮಲ್ಲ,
ಹಿಂದೂರಾಯ ಸುರತ್ರಾಣ, ಶ್ರೀ ಹರಿಹರರಾಯ
ಜಯಾ ಜಯಾ . . . .
ಕರ್ನಾಟಕ ರತ್ನಸಿಂಹಾಸನ ಪ್ರತಿಷ್ಠಾಪನಾಚಾರ್ಯ
ಮಹರ್ಷಿ ಶ್ರೀ ವಿದ್ಯಾರಣ್ಯ ಜಯ ಜಯಾ"

ಜನರ ಉದ್ಘೋಷ ದಶದಿಕ್ಕುಗಳಲ್ಲೂ ಪ್ರತಿಧ್ವನಿಸಿತು.

ಇತಿಹಾಸಕಾರರ, ವಿದ್ವಾಂಸರ, ಹಿರಿಯರ ಅಭಿಪ್ರಾಯ ದಲ್ಲಿ ವಿಜಯನಗರ ಸಾಮ್ರಾಜ್ಯ ಬಾಳಿ ಬೆಳಗಿದ ಬಗೆ ಕರ್ನಾಟಕದ ಏಕೆ ಭಾರತದ ಅಲ್ಲ ವಿಶ್ವದ ಇತಿಹಾಸದಲ್ಲೇ ನಭೂತೋ ನಭವಿಷ್ಯತಿ.

ಈ ಗತವೈಭವದ ಸ್ಮರಣೆ ನಮ್ಮಲ್ಲಿ ಸ್ಫೂರ್ತಿಯನ್ನು ತುಂಬುವಂತಾಗಬೇಕು.

"ಯದಾ ಯದಾಹಿ ಧರ್ಮಸ್ಯ . . . ."

ಇಂದು ಮತ್ತೊಮ್ಮೆ ಶ್ರೀ ವಿದ್ಯಾರಣ್ಯರ ಪುನರುದಯ ವಾಗಬೇಕಾಗಿದೆ – ಆಗಿದೆ. ಗುರುತಿಸುವ ಜವಾಬ್ದಾರಿ ಅನುಸರಿಸುವ ಕರ್ತವ್ಯ ನಿಮ್ಮದು.

ಸುಪ್ತವಾಗಿರುವ ಚೈತನ್ಯವನ್ನು ಬಡಿದೆಬ್ಬಿಸಿ! ನಾಡು ನುಡಿ ನಡೆಗಳನ್ನು ಮುನ್ನಡೆಗೆ ನಡೆಸುತ್ತ ಮುಂದೆ ಸಾಗುತ್ತ, ಭಾರತದ, ಲೋಕದ ಮಕ್ಕಳಲಿ ಹಿರಿದಾಗಿ ತೂಕ ತೂಗುತ್ತ

ಬನ್ನಿ ಓ ಮಕ್ಕಳಿರ
ಒಕ್ಕೊರಲೆಲ್ಲರೂ ಕೂಗಿ ಈ ಒಕ್ಕೂಗ–
ಈ ಹಿರಿಯ ಹೆಕ್ಕೂಗ
"ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ
ಸಿರಿಗನ್ನಡಂ ಗೆಲ್ಗೆ ಬಾಳ್ಗೆ
ಕನ್ನಡ ತಾಯ್ ಗೆಲ್ಗೆ ಬಾಳ್ಗೆ"

# ಕನ್ನಡ ಸಾಹಿತ್ಯಗೋಷ್ಠಿ

## ಪ್ರಾಸ್ತಾವಿಕ ಭಾಷಣ

[ಡಿಸೆಂಬರ್ ದಿನಾಂಕ ೨೯ ರಂದು ಸಿದ್ಧಗಂಗಾ ಕ್ಷೇತ್ರದಲ್ಲಿ ೪೪ ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ನಡೆದ ಕನ್ನಡ ಸಾಹಿತ್ಯಗೋಷ್ಠಿಯಲ್ಲಿ ಶ್ರೀ ದೇ. ಜವರೇಗೌಡರು ಮಾಡಿದ ಪ್ರಾಸ್ತಾವಿಕ ಭಾಷಣವನ್ನಿಲ್ಲಿ ಕೊಡಲಾಗಿದೆ.]

ಅನೇಕ ಸಾಧಕವರೇಣ್ಯರ ತಪೋಮಹಿಮೆಯಿಂದ ಪಾವನವಾಗಿರುವ ಈ ಸಿದ್ಧಗಂಗಾ ಕ್ಷೇತ್ರದಲ್ಲಿ, ಕ್ಷೇತ್ರ ಪಾಲಕರೂ ತಪೋಧನರೂ ಶಿಷ್ಯಕೋಟಿಸಂಪನ್ನರೂ ವಿದ್ವನ್ಮಣಿಗಳೂ ಕನ್ನಡ ಭಾಷಾಭಿಮಾನಿಗಳೂ ದೀನ ದಲಿತಜನ ಹಿತೈಷಿಗಳೂ ಆದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ದಿವ್ಯ ನೇತೃತ್ವದಲ್ಲಿ, ಅವರ ಆಶೀರ್ವಾದ ಪರಿವೇಶದಲ್ಲಿ ನಡೆಯುತ್ತಿರುವ ಈ ಸಾಹಿತ್ಯ ಸಮ್ಮೇಲನದಲ್ಲಿ ಭಾಗವಹಿಸುವುದೊಂದು ಪುಣ್ಯಕಾರ್ಯ. ಕರ್ನಾಟಕದ ನಾನಾ ಭಾಗಗಳ ವಿದ್ವಾಂಸರೂ ಸಾಹಿತ್ಯೋಪಾಸಕರೂ ನೆರೆದಿರುವ ಈ ಸಾಹಿತ್ಯಗೋಷ್ಠಿಯಲ್ಲಿ ಭಾಗವಹಿಸುವ, ಪರಿಚಯಸ್ತರೂ ಸ್ವಲ್ಪಪರಿಚಯಸ್ತರೂ ಅಪರಿಚಯಸ್ತರೂ ಆದ ಸಾರಸ್ವತ ಭಕ್ತರನ್ನು ಹತ್ತಿರದಿಂದಲೊ ದೂರದಿಂದಲೊ ಸಂದರ್ಶಿಸುವ ಸದವಕಾಶ ದೊರೆತದ್ದು ಮತ್ತೊಂದು ಪುಣ್ಯವಿಶೇಷ. ಸಾಹಿತ್ಯಕ್ಷೇತ್ರದ ಹೊರವಳಯದಲ್ಲಿಯೆ ಅಂಬೆಗಾಲಿಡುತ್ತಿರುವ ನನ್ನನ್ನು ಈ ಗೋಷ್ಠಿಯ ಸಮಾರಂಭ ಭಾಷಣಕ್ಕೆ ಆಹ್ವಾನಿಸುವ ಮೂಲಕ ಸಾಹಿತ್ಯೋಪಾಸನೆಗೆ ಹಾಗೂ ಭಾಷಾ ಸೇವೆಗೆ ಪ್ರೋತ್ಸಾಹ ಪ್ರಚೋದನೆಗಳನ್ನು ನೀಡಿ, ನನ್ನ ಮೇಲೆ ಪ್ರೀತಿ ವಿಶ್ವಾಸಗಳ ಋಣ ಹೊರಿಸಿರುವ ಸ್ವಾಗತಸಮಿತಿಗೂ, ಸಂಬಂಧಪಟ್ಟ ಇತರ ಹಿರಿಯರಿಗೂ ಗೆಳೆಯರಿಗೂ ಕೃತಜ್ಞತೆಯಿಂದ ಮಣಿಯುತ್ತೇನೆ.

ಕನ್ನಡ ಸಾಹಿತ್ಯಪರಂಪರೆ ಒಂದುವರೆ ಸಾವಿರ ವರ್ಷ ಹಳೆಯದು. ಪ್ರಪಂಚದ ನಾನಾ ಜನಾಂಗಗಳು ಇನ್ನೂ ಅಜ್ಞಾನದ ಕಗ್ಗತ್ತಲಲ್ಲಿ ತೊಳಲಾಡುತ್ತಿದ್ದಾಗ, ಭರತ ಖಂಡದ ಅನೇಕ ಪ್ರಾಂತ ಭಾಷೆಗಳು ಇನ್ನೂ ಭ್ರೂಣಾವಸ್ಥೆಯಲ್ಲಿದ್ದಾಗ, ಕನ್ನಡ ಭಾಷಾ ಸಾಹಿತ್ಯಗಳು ಅತ್ಯಂತ ಉಚ್ಛ್ರಾಯಾವಸ್ಥೆಯಲ್ಲಿದ್ದುವೆನ್ನುವುದನ್ನು ನೆನೆದಾಗ ಯಾವ ಕನ್ನಡಿಗನಾದರೂ ಹೆಮ್ಮೆಯಿಂದ ಹಿಗ್ಗದಿರಲಾರನು. ಅಂದಿನಿಂದ ಇಂದಿನವರೆಗೆ ಕನ್ನಡ ಸಾಹಿತ್ಯ ಅವಿಚ್ಛಿನ್ನವಾಗಿ ಬೆಳೆದಿದೆ; ಸಂಸ್ಕೃತ ಪ್ರಾಕೃತ ಮತ್ತು ಯೂರೋಪೀಯ ಸಾಹಿತ್ಯಗಳ ಸಂಪರ್ಕ ಸಾರಸಂಗ್ರಹಗಳಿಂದ ಅದು ಸರ್ವತೋಮುಖವಾಗಿ ಬೆಳೆದು ಪರಿಪುಷ್ಟಿಗೊಂಡಿದೆ; ಮತೀಯ ವಿಚಾರ ಸಂಸ್ಕಾರಗಳಿಂದ ಭೂಯಿಷ್ಠವಾಗಿದೆ; ರಾಜಕೀಯ ಮತ್ತು ಸಾಮಾಜಿಕ ಜೀವನದಲ್ಲಿ ಕಾಣಬಹುದಾದ ಏರುಮುಖ ಇಳಿಮುಖಗಳೆಲ್ಲ ಅಲ್ಲಿ ಪಡಿಮೂಡಿವೆ. ಒಮ್ಮೆ ಪಾಂಡಿತ್ಯಪ್ರಧಾನವಾದ ಕಾವ್ಯ ಶ್ರೇಷ್ಠತೆಯ ಮುಗಿಲು ಮುಟ್ಟಿದರೆ, ಮತ್ತೊಮ್ಮೆ ಪಾಮರರಂಜಿತವಾದ ಕಾವ್ಯ ಧವಳ ಗೌರೀಶಂಕರಕ್ಕೆ ಪ್ರತಿಸ್ಪರ್ಧಿಯಾಗಿ ನಿಲ್ಲುತ್ತದೆ; ಒಮ್ಮೆ ಸಂಕುಚಿತ ವಲಯದ ವಿದ್ವತ್ಸಮಾಜವನ್ನು ಪ್ರತಿನಿಧಿಸುವ ಸಾಹಿತ್ಯ ಮೇರುತುಲ್ಯವಾಗಿ ವಿಜೃಂಭಿಸಿದರೆ, ಮತ್ತೊಮ್ಮೆ ವಿಶಾಲ ವಲಯದ ಸಾಮಾನ್ಯಶ್ರೀ ಸಮಾಜವನ್ನು ಪ್ರತಿಬಿಂಬಿಸುವ ಸಾಹಿತ್ಯ ಸಾಗರ ಸ್ಪರ್ಧಿಯಾಗಿ ಘೂರ್ಣಿಸಿದೆ.

ಇಂಗ್ಲಿಷ್ ಭಾಷಾಸಾಹಿತ್ಯಗಳಲ್ಲಿ ಪಾಂಡಿತ್ಯ ಪಡೆದೆವೆಂದು ಹೇಳಿಕೊಂಡು ಗಣ್ಯತೆ ಪಡೆದಿರುವ ಕೆಲವು ಪಾಶ್ಚಾತ್ಯ ಪಂಡಿತರ ಹಿಂಬಾಲಕರು ಆಗಾಗ್ಗೆ ಕನ್ನಡ ಸಾಹಿತ್ಯವನ್ನು ಸಾಹಿತ್ಯವಲ್ಲವೆಂದು ಅಲ್ಲಗಳೆದು, ಪಂಪ ಹರಿಹರ ಕುಮಾರವ್ಯಾಸರನ್ನು ಕವಿಗಳಲ್ಲವೆಂದೇ ಉದ್ಘೋಷಿಸಿ, ಅವಹೇಳನ ಮಾಡುವುದುಂಟು. ಚಿತ್ತ ವಿಕಾರ ಮೂಲವಾದ ಈ ವಿಚಿತ್ರ ಕಲ್ಪನೆಗೆ ಭಾರತೀಯ ಸಂಸ್ಕೃತಿಯ ಬಗೆಗಿರುವ ಅವರ ಅಂಧತಿರಸ್ಕಾರ, ಮಾತೃಭಾಷಾದ್ರೋಹ, ಪರದೇಶ ಪರಸಂಸ್ಕೃತಿ ಪರಭಾಷೆಗಳ ವಿವೇಕರಹಿತವಾದ ಉನ್ಮತ್ತ ವ್ಯಾಮೋಹವೇ ಕಾರಣ. ಆಯಾಯ ಕಾಲ ದೇಶ ಸನ್ನಿವೇಶಗಳಿಗೆ ತಕ್ಕಂತೆ, ಆಯಾಯ ಕಾಲದ ಸಂಪ್ರದಾಯ ಸಂಸ್ಕಾರಗಳಿಗನುಗುಣವಾಗಿ ಸಾಹಿತ್ಯೋದಯವಾಗುತ್ತದೆಂಬುದನ್ನೂ, ಸಾಹಿತ್ಯ ಆಯಾಯ ದೇಶದ ಪರಂಪರೆಯ ಹಿನ್ನೆಲೆಯಲ್ಲಿ ಪ್ರಗತಿ ಹೊಂದುತ್ತದೆಂಬುದನ್ನೂ ಆ ಜನ ಮರೆತಿರುವಂತೆ ತೋರು

ತ್ತದೆ. ಕಾವ್ಯ ಪ್ರಯೋಜನವನ್ನು ಕುರಿತು 'ಶಿವೇತರಕ್ಷತಯೇ, ಸದ್ಯಃ ಪರ ನಿರ್ವೃತಯೇ' ಎಂದು ಮಮ್ಮಟ ಹೇಳುವಾಗ ಅವನು ಇಡೀ ಭರತಖಂಡದ ಕವಿಸಮುದಾಯದ ಮತ್ತು ರಸಿಕವೃಂದದ ಅಭಿಪ್ರಾಯವನ್ನು ಪ್ರತಿನಿಧಿಸುತ್ತಾನೆಂದರೆ ತಪ್ಪಲ್ಲ. ಈ ತತ್ತ್ವ ವಾಲ್ಮೀಕಿ ಕಾಳಿದಾಸ ತುಲಸೀದಾಸ ಕೃತ್ತಿವಾಸ ಸೂರದಾಸ ಕಂಬಾದಿಗಳಿಗನ್ವಯವಾಗುವಂತೆಯೇ ಪಂಪ ಹರಿಹರ ಕುಮಾರವ್ಯಾಸಾದಿಗಳಿಗೂ ಅನ್ವಯವಾಗುತ್ತದೆ.

"ನಾವು ಬದುಕುತ್ತಿರುವ ವಿಶಿಷ್ಟ ಸನ್ನಿವೇಶ ವಾತಾವರಣಗಳಿಗನುಗುಣವಾಗಿ ನಮ್ಮ ಸ್ವಭಾವವೂ, ಆ ಸ್ವಭಾವಕ್ಕನುಗುಣವಾಗಿ ನಮ್ಮ ಶೀಲ ಸ್ವಧರ್ಮಗಳೂ ಚಿತ್ತಪ್ರವೃತ್ತಿಗಳೂ, ಅವುಗಳಿಗೆ ಬದ್ಧವಾಗಿ ನಮ್ಮ ಜೀವನವೂ ರೂಪುಗೊಳ್ಳುತ್ತ"* ದೆಂದು ರವೀಂದ್ರನಾಥ ಠಾಕೂರರು ಹೇಳಿರುವಂತೆ, ನಮ್ಮ ಸಂಸ್ಕೃತಿ ಸಾಹಿತ್ಯಗಳು ಮತ್ತು ನಮ್ಮ ಜೀವನ ವಿಧಾನಗಳು ಭಾರತೀಯ ರೀತಿಯಾಗಿಯೇ ವಿಕಾಸಗೊಳ್ಳಬೇಕಾಗಿದೆ. ಗಗನವನ್ನು ತಿವಿಯುವ ಧವಳ ಹಿಮಾಚಲದ ಸಾನ್ನಿಧ್ಯದಲ್ಲಿ, ಹೈಮಾಚಲ ಸ್ಪರ್ಧಿಯಾಗಿ ಬೆಳೆದ ಅರಣ್ಯದ ಗರ್ಭಾಂತರಾಳದಲ್ಲಿ ಬಾಳಿದ ಮಾನವ ಸಹಜಸಿದ್ಧವಾಗಿ ಪ್ರಕೃತಿಯ ಉಪಾಸಕನಾಗುತ್ತಾನೆ, ಅಂತರ್ಮುಖಿಯಾಗುತ್ತಾನೆ; ತನ್ನ ಅಂತರಂಗ ಜೀವನದ ಸಮಸ್ತೈಶ್ವರ್ಯವನ್ನು ವಾಗ್ರೂಪದಲ್ಲಿ ಹೊರಹಾಕುತ್ತಾನೆ. ಮಾನವ ಜೀವನದಲ್ಲಿ ಹೊರಮೈ ಎಂತೋ ಒಳಮೈ ಕೂಡ ಅಂತೆಯೇ ಪ್ರಶಸ್ತವಾದುದು, ಪ್ರಧಾನವಾದುದು; ಹೊರಮೈತನದಂತೆ ಒಳಮೈತನವೂ ಸಾಹಿತ್ಯದ ವಸ್ತುವಾಗಬಲ್ಲುದು. ಒಂದು ದೃಷ್ಟಿಯಲ್ಲಿ ಸಾಹಿತ್ಯಸಮಸ್ತವೂ ಅಂತಃಕರಣ ಮೀಮಾಂಸೆಯೇ! ಆದ್ದರಿಂದ ಸಾಮಾಜಿಕ ರಾಜಕೀಯ ಚಾರಿತ್ರಿಕ ವಿಷಯಗಳಂತೆಯೇ ಪುರುಷಾರ್ಥ ಸಾಧನಾಪೇಕ್ಷಿಯಾದ ಮತೀಯ ವಿಷಯಗಳೂ ಸಾಹಿತ್ಯದ ವಸ್ತುವಾಗುವುದಾದರೆ ಏನೂ ಬಾಧಕವಿಲ್ಲ. ಆದರೆ ಆ ವಸ್ತು ಹೇಗೆ ನಿರೂಪಣೆಗೊಂಡಿದೆಯೆಂಬುದರ ಮೇಲೆ ಸಾಹಿತ್ಯದ ಮೇಲ್ಮೆ ಹಿರಿಮೆಗಳು ನಿಂತಿರುತ್ತವೆ.

ಅಷ್ಟೇ ಅಲ್ಲ, ಕವಿ ಸಮಕಾಲೀನ ಜನರ ಮನೋಧರ್ಮ ಸಂಸ್ಕಾರಾಭಿರುಚಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಕಾವ್ಯ ರಚನೆ ಮಾಡುತ್ತಾನೆನ್ನುವುದನ್ನು ಮರೆಯಬಾರದು. ಮತ ಧರ್ಮ ನೀತಿ ತತ್ತ್ವಗಳೇ ಎಲ್ಲ ಕನ್ನಡ ಕವಿಗಳ ಕಾವ್ಯ ವಸ್ತುವಾಗಿರುವುದಾದರೆ ಅದು ಅವರ ತಪ್ಪಲ್ಲ; ಜನತೆಗೆ ಬೇಕಾದದ್ದು ಕಾವ್ಯಕ್ಕೆ ಬೇಕಾಯಿತು; ಜನತೆಗೆ ಬೇಡವಾದದ್ದು ಕಾವ್ಯಕ್ಕೆ ಹೊರತಾಯಿತು. "ಪಾಪಮಿದು ಪುಣ್ಯಮಿದು ಹಿತರೂಪಮಿದಹಿತ ಪ್ರಕಾರಮಿದು ಸುಖಮಿದು ದುಃಖೋಪಾತ್ತಮಿದೆಂದಱಪುಗುಮಾ ಪರಮಕವಿ ಪ್ರಧಾನರಾ ಕಾವ್ಯಂಗಳ್" ಎಂದು ಕವಿರಾಜಮಾರ್ಗ ಕರ್ತೃವೂ, "ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗೞ್ತೆ ಲಾಭಮೆಂಬಿವೆ ವಲಂ" ಎಂದು ಆದಿಕವಿ ಪಂಪನೂ, "ಪರಮವೇದದ ಸಾರ, ಯೋಗೀಶ್ವರರ ತತ್ತ್ವವಿಚಾರ" ವೆಂದು ಕುಮಾರವ್ಯಾಸನೂ "ರಸೆಯೊಳ್ ರಸವತ್ಕವಿತೆಯ–ನುಸಿರಲ್ ಪಡೆದಸಮನಯನನಂ ಪೊಗಳದೆ ಮಾನಿಸರಂ ಸುರರಂ ಪೊಗಳ್ವುದು ಕಸವರಮಂ ಕಳೆದು ಕಸವನಾಂತವೊಲಕ್ಕುಂ" ಎಂದು ಷಡಕ್ಷರಿಯೂ ತಮ್ಮ ಕಾವ್ಯೋದ್ದೇಶವನ್ನು ಕುರಿತು ಹೇಳುವಲ್ಲಿ ತಮ್ಮ ಕಣ್ಣಮುಂದಿದ್ದ ಜನರ ಹೃದಯದಲ್ಲಿ ಮಿಡಿಯುತ್ತಿದ್ದ ಭಾವನೆಗಳನ್ನು ಪ್ರತಿಬಿಂಬಿಸಿದ್ದಾರೆ.

ಪಾಶ್ಚಾತ್ಯ ಕಾವ್ಯಮೀಮಾಂಸೆಯ ಸೂತ್ರಗಳ ಮಾನದಂಡದಿಂದ ಪ್ರಾಚೀನ ಭಾರತೀಯ ಕಾವ್ಯಗಳನ್ನು ಪರೀಕ್ಷೆಗೀಡುಮಾಡುವ ಪ್ರಯತ್ನ ಶ್ಲಾಘ್ಯವಾದುದೇನೊ ನಿಜ; ಆದರೆ ಆ ಸೂತ್ರಗಳೇ ಪರಮ ಸತ್ಯ, ಅವು ಮಾತ್ರ ದೇಶ ಕಾಲಾತೀತವಾದುವೆಂದು ಭ್ರಮಿಸಿ, ಆ ಲಕ್ಷಣಗಳಿಗಳವಡದ ಕಾವ್ಯಗಳೆಲ್ಲ ಬಾಹಿರವೆಂದು ಅವಹೇಳನಗೈಯುವ ಪ್ರಯತ್ನ ಸೂರ್ಯನಲ್ಲಿ ತಂಪನ್ನೂ, ಚಂದ್ರನಲ್ಲಿ ಬಿಸುಲನ್ನೂ, ಚಿನ್ನದಲ್ಲಿ ಪರಿಮಳವನ್ನೂ, ಶ್ರೀಗಂಧದಲ್ಲಿ ಹೂವನ್ನೂ ಕಾಣದೆ ಕಾತರಿಸುವ ಗಾಂಪನ ಎಗ್ಗತನವಾಗುತ್ತದೆ.

ಭಾರತೀಯ ಸಾಹಿತ್ಯದಲ್ಲಿ, ಅರ್ಥಾತ್ ಕನ್ನಡ ಸಾಹಿತ್ಯದಲ್ಲಿ ಅನೇಕ ವೇಳೆ ಮತೀಯಾಂಶಗಳು ಸಾಹಿತ್ಯಾಂಶಗಳನ್ನು ಮರೆಸಿಬಿಡುವಷ್ಟರಮಟ್ಟಿಗೆ ಇಡಿಕಿರಿದುಕೊಂಡಿವೆಯೆಂಬ ಮಾತಿನಲ್ಲಿ ತಕ್ಕಮಟ್ಟಿಗೆ ಸತ್ಯಾಂಶವಿಲ್ಲದಿಲ್ಲ. ಮತ ಭಾರತೀಯ ಸಮಾಜ ಸಂಸ್ಕೃತಿಗಳ ಮೂಲಧನ; ಅದೇ ಅವುಗಳ ಜೀವಸತ್ವ, ಅದೇ ಅವುಗಳ ಚಾಲಕಶಕ್ತಿ. ವೇದಗಳ ಕಾಲದಿಂದ ಹಿಡಿದು ಅತ್ಯಾಧುನಿಕ ಯುಗದವರೆಗೂ ಆ ಮತ–ಅದನ್ನು ಹಿಂದೂಮತವೆಂದು ಕರೆಯಿರಿ, ಅಥವಾ ಭಾರತೀಯ ಮತವೆಂದು ಕರೆಯಿರಿ–ಅನೇಕ ಋಷಿಗಳ ಮೂಲಕ, ಬುದ್ಧ ಮಹಾವೀರ ಶಂಕರ ಮಧ್ವ

---

* The truth of our life depends upon our attitude of mind towards it-an attitude which is formed by our habit of dealing with it according to the special circumstance of our surroundings and our temperaments (Creative Unity - Page 45)

ಬಸವೇಶ್ವರ ರಾಮಾನುಜ ನಾನಕ್ ಮೊದಲಾದ ಕಾರಣ ಪುರುಷರ ತಪಶ್ಶಕ್ತಿಯ ಪರಿಣಾಮವಾಗಿ ಅನೇಕ ರೂಪಾಂತರಗಳನ್ನು ಪಡೆದು, ಅನ್ಯಮತಗಳ ಪ್ರಚಂಡ ಧಾಳಿಗಳನ್ನು ಹಿಮ್ಮೆಟ್ಟಿಸಿ, ಅಚಲವಾಗಿ ನಿಂತಿದೆ. ಬಹುರೂಪಿಯೂ ಅನಂತಮುಖಿಯೂ ಸರ್ವಗ್ರಾಹಿಯೂ ಆದ ಈ ಭಾರತೀಯ ಮತ ತಾಯ್ನೆಲದಲ್ಲಿ ಬೇರೂರಿ, ಹಿಮಾಚಲದಂತೆ ಸುಸ್ಥಿರವಾಗಿ ನಿಲ್ಲದಿದ್ದರೆ, ಈ ಹೊತ್ತಿಗೆ ಪ್ರಾಚೀನ ಸಂಸ್ಕೃತಿ ಕೇವಲ ಪುರಾತತ್ತ್ವ ಶೋಧನೆಯ ವಸ್ತುವಾಗುಳಿದಿರುವ ಗ್ರೀಸ್ ಈಜಿಪ್ಟ್ ಪೆರು ಮೆಕ್ಸಿಕೋ ಪರ್ಷಿಯಾ ಮೊದಲಾದ ದೇಶಗಳಿಗೊದಗಿದ ಗತಿ ಭರತಖಂಡಕ್ಕೂ ಪ್ರಾಪ್ತವಾಗುತ್ತಿತ್ತೆನ್ನುವುದರಲ್ಲಿ ಲವಲೇಶವೂ ಸಂದೇಹವಿಲ್ಲ. ಭರತಖಂಡದ ಇತಿಹಾಸದಲ್ಲಿಯೇ ಇದಕ್ಕೆ ಸಾಕಷ್ಟು ಸಾಕ್ಷಿ ಸಿಗುತ್ತದೆ. ಅರಮನೆ ಗುರುಮನೆಗಳು, ತೀರ್ಥಕ್ಷೇತ್ರ ದೇವಾಲಯಗಳು, ರಾಮಾಯಣ ಭಾರತ ಪುರಾಣಾದಿ ಗ್ರಂಥಗಳ ವಾಚನ ಪಠನ ಶ್ರವಣಾದಿ ಕಾರ್ಯಗಳು, ಮೇಲಾಗಿ ಅಸಂಖ್ಯಾತ ಸಾಹಿತ್ಯ ಕೃತಿಗಳು ಮತಾಂತರ ಕಾರ್ಯವನ್ನು ತಡೆಗಟ್ಟುವ ಪ್ರಯತ್ನದಲ್ಲಿ ಬಹುಮಟ್ಟಿಗೆ ಯಶಸ್ವಿಯಾಗಿ, ಭಾರತೀಯ ಸಂಸ್ಕೃತಿಯನ್ನು ಸಂರಕ್ಷಿಸಿವೆಯೆನ್ನುವುದಾದರೆ, ಹಿಂದಿನ ಕಾಲದಲ್ಲಿ ಮತೀಯ ಸಾಹಿತ್ಯದ ಲೌಕಿಕ ಪ್ರಯೋಜನ ವೇದ್ಯವಾಗದಿರದು.

ನಿತ್ಯಪರಿವರ್ತನೆ ಜೀವಂತ ಸಮಾಜದ ವಿಶಿಷ್ಟ ಲಕ್ಷಣ. ಮತೀಯ ಸಾಹಿತ್ಯದ ಕಾಲವೂ ಈಗ ಮುಗಿದು ಹೋಗಿದೆ. ಮತದೈವ ಸಂಬಂಧವಾದ ಹಳೆಯ ಕಲ್ಪನೆಗಳೆಲ್ಲ ಹಿಂಜರಿದು ಹೊಸ ಕಲ್ಪನೆಗಳಿಗೆ ದಾರಿ ಮಾಡುತ್ತಿವೆ. "ನೂರಾರು ದೇವರನೆಲ್ಲ ನೂಕಾಚೆ ದೂರ, ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ" ಎಂಬ ತಾರಕ ಮಂತ್ರವೂ, "ದರಿದ್ರದೇವೋ ಭವ! ಮೂರ್ಖದೇವೋಭವ" ಎಂಬ ಆಧುನಿಕ ಋಷಿವಾಣಿಯೂ ಭಾರತೀಯರ ಧಮನಿ ಧಮನಿಗಳಲ್ಲಿ ಚೈತನ್ಯಶಕ್ತಿಯಾಗಿ ಪ್ರವಹಿಸಬೇಕಾಗಿದೆ. ಯೂರೋಪೀಯ ವಿಜ್ಞಾನ ಸಾಹಿತ್ಯ ಸಂಸ್ಕೃತಿಗಳ ಸಂಪರ್ಕ ಸಂಘರ್ಷಣೆ ಪ್ರಭಾವಗಳಿಂದ ಭಾರತೀಯ ಸಮಾಜದ ಸಾಂಸ್ಕೃತಿಕ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಕ್ರಾಂತಿಯ ಬಿರುಗಾಳಿಯೆದ್ದಿದೆ. ದೇವರು ದಿಂಡರ ಹೆಸರಿನಲ್ಲಿ, ಭೂತ ಪಿಶಾಚಿಗಳ ರೂಪದಲ್ಲಿ, ಗ್ರಹಕೂಟಗಳ ನೆಪದಲ್ಲಿ, ಮತಧರ್ಮಗಳ ಮುಸುಕಿನಲ್ಲಿ ವಿಜೃಂಭಿಸುತ್ತಿದ್ದ ಮೂಢಾಚಾರ ಸಂಪ್ರದಾಯಗಳೆಲ್ಲ ಕ್ರಾಂತಿಯ ಬಸಿರಿನಲ್ಲಿ ಗೋರಿಯಾಗುತ್ತಿವೆ; ಆಚಾರಕ್ಕೆ ಪ್ರತಿಯಾಗಿ ವಿಚಾರ, ಶಾಸ್ತ್ರಕ್ಕೆ ಬದಲಾಗಿ ವಿಜ್ಞಾನ, ಅಂಧಾಭಿಮಾನದ ಗೊಡ್ಡು ಸಂಪ್ರದಾಯಗಳಿಗೆ ಬದಲಾಗಿ ವಿವೇಚನೆಯಿಂದ ಕೂಡಿದ ನೂತನ ಪದ್ಧತಿಗಳು ಅನುಷ್ಠಾನದಲ್ಲಿ ಬರುತ್ತಿವೆ. ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಿಂದ, ಎಂದರೆ ರಾಜಾರಾಮ ಮೋಹನರಾಯ ಇಂಗ್ಲೆಂಡಿಗೆ ಹೋದಂದಿನಿಂದ (೧೮೩೦) ನೂತನ ವಿಚಾರಧಾರೆಯ ತಲಕಾವೇರಿ ಉದಯವಾಯಿತೆನ್ನಬಹುದು. ಮಹಮ್ಮದೀಯ ಮತ್ತು ಕ್ರಿಶ್ಚಿಯನ್ ಮತದ ಪವಿತ್ರ ಗ್ರಂಥಗಳನ್ನು ಆಳವಾಗಿ ಅಭ್ಯಾಸಮಾಡಿ ಪಾರಂಗತನಾದ ಆ ಮಹಾವ್ಯಕ್ತಿ ಹಿಂದೂಮತ ಸಮಾಜಗಳಿಗೆ ನವಚೈತನ್ಯ ತುಂಬಲು ಪ್ರಯತ್ನಿಸಿ ಸಫಲನಾದನು. ಅವನ ಆ ಪ್ರಯತ್ನವೇ ಬ್ರಹ್ಮಸಮಾಜವಾಗಿ ರೂಪಧಾರಣೆ ಮಾಡಿತು. ಸ್ವಾಮಿ ದಯಾನಂದ ಸರಸ್ವತಿ, ಶ್ರೀ ರಾಮಕೃಷ್ಣ ಪರಮಹಂಸ, ಕೇಶವಚಂದ್ರಸೇನ, ಸ್ವಾಮಿ, ವಿವೇಕಾನಂದ, ಅರವಿಂದ ಮೊದಲಾದ ವಿಭೂತಿ ಪುರುಷರ ಸಾಧನೆ ತಪಸ್ಸುಗಳ ಪರಿಣಾಮವಾಗಿ, ಮಹಾತ್ಮ ಗಾಂಧೀಜಿಯ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯ ಪ್ರತ್ಯಕ್ಷ ಫಲವೆನ್ನುವಂತೆ ಭಾರತೀಯ ಸಮಾಜ ಕ್ರಮಕ್ರಮೇಣ ರೂಪಾಂತರ ಹೊಂದುತ್ತಿದೆ; ಆರ್ಥಿಕ ಕ್ಷೇತ್ರದಲ್ಲಿ ನೂತನ ಪಂಥಗಳು ಗೋಚರವಾಗುತ್ತಿರುವಂತೆಯೆ, ಸಾಮಾಜಿಕ ಕ್ಷೇತ್ರದಲ್ಲಿ ಹೊಸ ಹೊಸ ಮೌಲ್ಯಗಳು ಕಾಣಿಸಿಕೊಳ್ಳುತ್ತಿವೆ. ಪುರಾತನ ನೂತನಗಳಿಗೆ, ಆಚಾರ ವಿಚಾರಗಳಿಗೆ, ಮೌಢ್ಯ ವಿವೇಕಗಳಿಗೆ, ಸ್ಥಿತಿಗತಿಗಳಿಗೆ, ವಿಧಿ ನಿಷೇಧಗಳಿಗೆ, ವರ್ಗ ವರ್ಗಗಳಿಗೆ, ಮೇಲು ಕೀಳುಗಳಿಗೆ, ಬಡಿದಾಟ ಪ್ರಾರಂಭವಾಗಿ, ಓಬೀರಾಯನ ಕಾಲದ ವಿವೇಕಹೀನವಾದ ಕಂದಾಚಾರ ಪದ್ಧತಿಗಳು ನಾಶವಾಗಿ, ಇದೇ ತಾನೆ ಸಮಾಜದಲ್ಲಿ ಜ್ಞಾನೋದಯವಾಗುತ್ತಿದೆ, ನೀಚೋಚ್ಚ ವರ್ಗಗಳು ನಿರ್ಮೂಲವಾಗುತ್ತಿವೆ. ನೂತನ ವಿಚಾರಧಾರೆಯ ಸದ್ಯೋಜಾತ ಫಲವೆನ್ನುವಂತೆ ಬಾಲ್ಯವಿವಾಹ, ಅಂತರ್ಜಾತೀಯ ವಿವಾಹನಿಷೇಧ, ನೀಚೋಚ್ಚ ವರ್ಗಗಳ ಸಹ-ಜೀವನ – ಭೋಜನ ನಿಷೇಧ, ಏಕಪಕ್ಷೀಯವಾದ ಜ್ಞಾನ ಸ್ವಾಮ್ಯ – ಮೊದಲಾದ ಸಮಾಜ ಘಾತಕವಾದ, ಐಕ್ಯಭಂಗಕಾರಿಗಳಾದ, ಛಿದ್ರಕಾರಕ ಶಕ್ತಿಗಳಾದ ಅನಾಚಾರಗಳು ಮೂಲೆಗುಂಪಾಗುತ್ತಿವೆ; ಅಶ್ಲೀಲವೆಂದು ತಿರಸ್ಕೃತವಾಗಿದ್ದ ವಿಧವಾ ವಿವಾಹ ಪದ್ಧತಿಗೆ ಕಾನೂನಿನ ಅಂಗೀಕಾರಮುದ್ರೆ ಬಿದ್ದಿದೆ; ಆರ್ಷೇಯ ಕಾಲದಿಂದ ರೂಢಿಯಲ್ಲಿದ್ದ ಅವಿಭಕ್ತ ಕುಟುಂಬ ಪದ್ಧತಿ ಹಿಮ್ಮೆಟ್ಟುತ್ತಿದೆ; ಜಘನ್ಯ ವರ್ಣೀಯರೆಂದು

ಅಸಡ್ಡೆಗೆ ಪಾತ್ರಳಾಗಿದ್ದ ಸ್ತ್ರೀ ಪುರುಷನಿಗೆ ಸಮಜೋಡಿಯಾಗಿ ನಿಲ್ಲುವಂತಾಗಿದೆ; ಛತ್ರಪತಿಗಳು ಮತ್ತು ರಾಜ ಮಹಾರಾಜರು ವಿಸ್ಮೃತಿಯ ಗರ್ಭದಲ್ಲಿ ಸಂಛನ್ನವಾಗಿದ್ದಾರೆ; ಈಗ ರೈಲು ವಿಮಾನ ಮೋಟಾರುಗಳಲ್ಲಿ ಕಟ್ಟುನಿಟ್ಟುಗಳ ತೊಡಕಿಲ್ಲದೆ ತೀರ್ಥಕ್ಷೇತ್ರ ಯಾತ್ರೆ ನಡೆಯಬಹುದಾಗಿದೆ; ವಿದೇಶಗಳಿಗೆ ಹೋಗಿ ಬರುವ ಜನ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾದ ಮೌಢ್ಯಸಂಪ್ರದಾಯ ಗತಿಸಿಹೋಗಿದೆ. ಸ್ವಾತಂತ್ರ್ಯಾನಂತರದ ಈ ಹ್ರಸ್ವಾವಧಿಯಲ್ಲಂತೂ ದಿನಬೆಳಗಾದರೆ ನಾಡಿನ ಜನಜೀವನದಲ್ಲಿ ವ್ಯತ್ಯಾಸಗಳು ಕಾಣಿಸಿಕೊಳ್ಳುತ್ತಿವೆ; ಕೈಗಾರಿಕೆಗಳು ಬೆಳೆದಂತೆಲ್ಲ ನಗರಗಳಲ್ಲಿ ಜನಸಂದಣಿ ನೂಕುನುಗ್ಗಲಾಗುತ್ತಿದೆ; ಮೂಲೆ ಮೂಲೆಯ ಹಳ್ಳಿಗಳಿಗೆ ಸಂಚಾರ ಸೌಕರ್ಯಗಳು ದೊರೆತು, ವಿದ್ಯುಚ್ಛಕ್ತಿ ಹರಿದು, ಗ್ರಾಮಜೀವನದಲ್ಲಿ ಸಂಕ್ರಮಣಾವಸ್ಥೆ ತಲೆದೋರಿದೆ. ಜ್ಞಾನ, ವಿಜ್ಞಾನಗಳು ಸಾರ್ವಜನಿಕರ ಸ್ವತ್ತಾಗಿ, ಅವುಗಳ ಫಲಾನುಭವ ಸರ್ವರಿಗೂ ದೊರೆಯುವಂತಾಗಿದೆ. ಹೀಗಾಗಿ ಪುರಾತನತೆಯ ಸಮಾಧಿಯ ಮೇಲೆ ನೂತನತೆಯ ಹಸಿರು ಪಲ್ಲವಿಸುತ್ತಿದೆ. ಬೆನ್ನೇರಿದ ಭೇತಾಳನಂತೆ ಬಹುಕಾಲದಿಂದ ನಾಡನ್ನು ನಿರ್ವೀರ್ಯಗೊಳಿಸುತ್ತಿರುವ ಸಾಮಾಜಿಕ ರೋಗರುಜಿನಗಳೆಲ್ಲ ಮಾಯವಾಗಿ ಸರ್ವೋದಯ ದೃಷ್ಟಿಯ ನವಸಮಾಜ ಸೃಷ್ಟಿಯಾಗುತ್ತಿದೆ. ಬಹುಶಃ ನೂರು ವರ್ಷದ ಹಿಂದೆ ಬದುಕಿದ್ದ ವ್ಯಕ್ತಿ ಸಮಾಧಿಯಿಂದೆದ್ದು ಬರುವುದಾದರೆ, ಅವನು ಅಪರಿಚಿತವೂ ವಿಚಿತ್ರವೂ ಆದ ಸನ್ನಿವೇಶ ವಾತಾವರಣಗಳನ್ನೆದುರಿಸಬೇಕಾಗುತ್ತದೆ. ಇಷ್ಟಾದರೂ ಭಾರತೀಯ ಸಮಾಜ ಅವಸ್ಥಾಂತರದ ಮಾರ್ಗದಲ್ಲಿದೆಯೇ ಹೊರತು, ಪರಿಣತಾವಸ್ಥೆಯ ಗುರಿಯನ್ನು ಮುಟ್ಟಿಲ್ಲ.

ಈ ಹಿನ್ನೆಲೆಯಲ್ಲಿ ಆಧುನಿಕ ಕನ್ನಡ ಸಾಹಿತ್ಯದ ರೂಪರೇಖೆಗಳನ್ನು, ಆಗುಹೋಗುಗಳನ್ನು, ಸಾಧನೆ ಸಿದ್ಧಿಗಳನ್ನು, ಗೊತ್ತು ಗುರಿಗಳನ್ನು ಪರಿಶೀಲಿಸಬೇಕಾಗಿದೆ. ಕನ್ನಡ ಸಾಹಿತ್ಯ ಎಷ್ಟರ ಮಟ್ಟಿಗೆ ಅವಸ್ಥಾಂತರಮುಖಿಯಾಗಿರುವ ಸಮಾಜವನ್ನು ಸಮಗ್ರವಾಗಿ ಸಮರ್ಪಕವಾಗಿ ಪ್ರತಿನಿಧಿಸುತ್ತಿದೆ; ಎಷ್ಟರಮಟ್ಟಿಗೆ ಅದು ಕನ್ನಡ ಜನರ ಆಶೆ ಆಕಾಂಕ್ಷೆಗಳಿಗೆ ನಾಲಿಗೆಯಾಗಿದೆ; ಎಷ್ಟರಮಟ್ಟಿಗೆ ಅವರ ಇಷ್ಟಾನಿಷ್ಟಗಳನ್ನು, ಆಶೋತ್ತರ ಅಭೀಪ್ಸೆಗಳನ್ನು, ಛಲ ಬಲ ಶಕ್ತಿ ಸಾಮರ್ಥ್ಯ ಪ್ರತಿಭೆಗಳನ್ನು, ಕುಂದು ಕೊರತೆಗಳನ್ನು, ಬೇಡ ಬೇಕುಗಳನ್ನು ಪ್ರತಿಬಿಂಬಿಸುತ್ತಿದೆ; ಎಷ್ಟರ ಮಟ್ಟಿಗೆ ಕನ್ನಡ ಸಮಾಜವನ್ನು ರೂಪಿಸುತ್ತಿದೆ, ತಿದ್ದುತ್ತಿದೆ, ಅಭ್ಯುದಯದ ಕಡೆಗೆ ಒಯ್ಯುತ್ತಿದೆ ಎಂಬುದನ್ನು ನಿರ್ವಿಕಾರ ಮನೋಭಾವದಿಂದ ಪರಾಮರ್ಶಿಸಬೇಕಾಗಿದೆ. ನಗರ ಜೀವನದ ಕೆಲವು ಮುಖಗಳು ಮಾತ್ರ ಆಧುನಿಕ ಸಾಹಿತ್ಯದಲ್ಲಿ ಅಭಿವ್ಯಕ್ತಿ ಪಡೆದಿವೆಯೇ ಹೊರತಾಗಿ, ಬಹು ಸಂಕೀರ್ಣವಾದ ಬೃಹತ್ ಸಾಮಾಜಿಕ ಜೀವನ ಇನ್ನೂ ಸಾಕಷ್ಟು ಪ್ರಮಾಣದಲ್ಲಿ ಅಭಿವ್ಯಕ್ತಿ ಪಡೆದಿಲ್ಲ. ಕಾರ್ಮಿಕರ, ಕೂಲಿಗಾರರ, ರೈತರ, ದೀನ ದಲಿತರ, ನಾನಾ ಕಾಯಕದವರ ಜೀವನ ಚಿತ್ರಣ ಇನ್ನೂ ಬರಬೇಕಾಗಿದೆ. ಸ್ವಾತಂತ್ರ್ಯ ಚಳುವಳಿಯ ರೂಪರೇಖೆ ಸ್ವರೂಪಗಳನ್ನು ಕುರಿತ ಸಾಹಿತ್ಯ ಆ ಚಳುವಳಿಯ ಭವ್ಯತೆಗನುಗುಣವಾಗಿ ಬಂದಿಲ್ಲ. ರೂಪಾಂತರ ಹೊಂದುತ್ತಿರುವ ಸಮಾಜದ ಸ್ಥಿತಿಗತಿಗಳು ಇನ್ನೂ ವಾಙ್ಮಯರೂಪ ಧಾರಣೆ ಮಾಡಬೇಕಾಗಿದೆ. ಕನ್ನಡಿಗರ ಸಮಗ್ರಜೀವನ ಸಾಹಿತ್ಯದಲ್ಲಿ ಮೈಗೊಂಡಾಗ ಕನ್ನಡ ಸಾಹಿತ್ಯ ಹೊರವಾಗಿ ಹುಲುಸಾಗಿ ನವ್ಯೋಜ್ವಲವಾಗಿ ಬೆಳೆಯುತ್ತದೆ; ಆಗ ಆ ಸಾಹಿತ್ಯದಲ್ಲಿ ತಾಯ್ನೆಲದ ಕಂಪು ಮಗಮಗಿಸುವಂತಾಗುತ್ತದೆ.

ಈಗಾಗಲೇ ಅಂಥ ಸಾಹಿತ್ಯ ತಕ್ಕಮಟ್ಟಿಗೆ ನಿರ್ಮಾಣವಾಗಿದೆಯಾದರೂ ಸೃಷ್ಟಿಯಾಗಬೇಕಾಗಿರುವ ಸಾಹಿತ್ಯ ಸೃಷ್ಟಿಯಾಗಿರುವ ಸಾಹಿತ್ಯಕ್ಕಿಂತ ಬಹುಪಾಲು ಮಿಗಿಲಾಗಿದೆ. ಸಮಷ್ಟಿಪ್ರಜ್ಞೆ ವಿಕಾಸಗೊಂಡಾಗ ಮಾತ್ರ ಈ ಸೃಷ್ಟಿಕಾರ್ಯ ಅತ್ಯಧಿಕ ಪ್ರಮಾಣದಲ್ಲಿ, ವಿಶಿಷ್ಟಗುಣ ಸಂಪನ್ನವಾಗಿ ನಡೆದೀತು. ಅನುಕೂಲ ವಾತಾವರಣ ಮಹಿಮೆಯಿಂದ ಮಹಾ ರಾಜಕಾರಣಿಯಾಗಿ, ಶ್ರೇಷ್ಠ ಸಾಹಿತಿಯಾಗಿ, ವಿಶ್ವವಿಖ್ಯಾತ ವಿಜ್ಞಾನಿಯಾಗಿ, ಪ್ರಚಂಡ ರಣಗಲಿಯಾಗಿ ವಿಜೃಂಭಿಸಬಹುದಾಗಿದ್ದ ವ್ಯಕ್ತಿ ಸೌಲಭ್ಯಾವಕಾಶಗಳಿಲ್ಲದ ಹಳ್ಳಿಯ ಬಡಗುಡಿಸಿಲಲ್ಲಿ ಹುಟ್ಟಿ, ಅಸಾರ್ಥಕವಾದ ಜೀವನವನ್ನು ನಡೆಸಿ, ಅಜ್ಞಾತವಾಗಿ ಮಣ್ಣುಗೂಡುವಂತಾಗಿದೆ. ಹಳ್ಳಿಗಾಡಿನಲ್ಲೆಲ್ಲ ವಿದ್ಯಾ ಪ್ರಸಾರವಾಗಿ ಜ್ಞಾನಶಕ್ತಿ ಹರಿದಾಗ ಸಮಷ್ಟಿ ಚೇತನವೇ ಪುಲಕಿತವಾಗುತ್ತದೆ. ಕಳೆ ತುಂಬಿಕೊಂಡಿರುವ ಹೊಲದಲ್ಲಿ ಒಳ್ಳೆಯ ಪೈರೂ ಸತ್ವಹೀನವಾಗಿ ನರುಚಲಾಗುವಂತೆ, ಬಂದಳಿಕೆಯಿಂದ ಮಾವಿನ ಮರ ಬಂಜರಾಗುವಂತೆ ಅಜ್ಞಾನದ ವಾತಾವರಣದಲ್ಲಿ ಬೆಳೆದ ಮೇಧಾವಿಯೂ ಕಾಂತಿಹೀನನಾಗುತ್ತಾನೆ. ಉತ್ತಮ ಪರಿಸರದಲ್ಲಿ ಹುಲುಸುಬೆಳೆ ಕೈಸೇರುವಂತೆ ಶಕ್ತಿಪೂರ್ಣವಾದ ಸಮಾಜದಲ್ಲಿ ಬಸವೇಶ್ವರ, ಗಾಂಧೀಜಿಯಂಥ ಕಾರಣಪುರುಷರೂ, ರಾಮನ್ ಅಂಥ ವಿಜ್ಞಾನಿಗಳೂ,

ಕುವೆಂಪು, ಬೇಂದ್ರೆ, ಮಾಸ್ತಿ, ಕಾರಂತ, ಪು. ತಿ. ನ., ಅ.ನ.ಕೃ. ಅವರಂಥ ಶ್ರೇಷ್ಠ ಸಾಹಿತಿಗಳೂ ಅಧಿಕ ಸಂಖ್ಯೆಯಲ್ಲಿ ಜನ್ಮಧಾರಣೆ ಮಾಡುತ್ತಾರೆ. ಅಮೆರಿಕಾ, ಇಂಗ್ಲೆಂಡ್, ರಷ್ಯಾ, ಜಪಾನ್ ದೇಶಗಳ ಸರ್ವತೋಮುಖವಾದ ಪ್ರಗತಿಗೆ, ಅವುಗಳ ಅಗ್ರಗಾಮಿತ್ವಕ್ಕೆ ಅಲ್ಲಿಯ ಮಹತ್‌ಸಾಧನೆ ಸಿದ್ಧಿಗಳಿಗೆ, ಮೇಲು ಕೀಳುಗಳ ಭೇದಭಾವವಿಲ್ಲದ ಸರ್ವೋದಯ ದೃಷ್ಟಿಯ ಸರ್ವಸಮಾನತೆಯ ಸಮಾಜವೇ ಪ್ರಧಾನ ಕಾರಣವಾಗಿದೆ. ನಮ್ಮಲ್ಲಿ "ಓಂ ಸಹನಾ ವವತು, ಸಹನೌ ಭುನಕ್ತು, ಸಹ ವೀರ್ಯಂ ಕರವಾವಹೈ..." ಮೊದಲಾದ ವೇದ ಮಂತ್ರಗಳು ಪಾಂಡಿತ್ಯ ಪ್ರದರ್ಶನದ ತಂತ್ರಗಳಾಗುಳಿದಿವೆಯೇ ಹೊರತು ವ್ಯವಹಾರ ಜೀವನದಲ್ಲಿ ಚಲಾವಣೆಯಾಗಲಿಲ್ಲ. ಸಮಾಜವೆಂಬ ದೇವಾಲಯದ ಮಂಟಪವನ್ನು ಹೊರುವ ಕಂಬಗಳೆಲ್ಲ ಸಮನಾಗಿದ್ದರೆ, ಭಾರ ಸರ್ವತ್ರ ಹಂಚಿಕೆಯಾಗಿ, ಮಂಟಪದ ಕ್ಷೇಮ ಭದ್ರತೆಗಳು ಸ್ಥಿರವಾಗಿರುತ್ತವೆ; ಇಲ್ಲವಾದರೆ ಮಂಟಪ ಕುಸಿದು ಬೀಳುತ್ತದೆ. ಭರತಖಂಡದ ಕ್ರಮಬದ್ಧವಾದ ಪತನಕ್ಕೆ, ಅದು ಪ್ರಪಂಚದ ಇತರ ರಾಷ್ಟ್ರಗಳೊಡನೆ ಹೆಗಲೆಣೆಯಾಗಿ ನಿಲ್ಲದಿರುವುದಕ್ಕೆ ಸರ್ವವ್ಯಾಪಕವಾದ ಅಜ್ಞಾನವೇ ಕಾರಣ. ಸಮಷ್ಟಿ ಪ್ರಜ್ಞೆ ವಿಕಾಸಗೊಂಡು ಪ್ರಬುದ್ಧವಾದಾಗ ಮಾತ್ರ ಭರತಖಂಡದ ಸರ್ವಾಂಗೀಣ ಅಭ್ಯುದಯ ಸಾಧ್ಯವಾಗುತ್ತದೆ.

ಸಮಷ್ಟಿ ಪ್ರಜ್ಞೆ ವಿಕಾಸಗೊಂಡಾಗ ಸಾಹಿತ್ಯ ಎಷ್ಟು ಉಜ್ವಲವಾಗಿ ಮತ್ತು ಮಹಿಮಾನ್ವಿತವಾಗಿ ಪ್ರಕಾಶಿಸುತ್ತದೆನ್ನುವುದಕ್ಕೆ ಕನ್ನಡ ನಾಡಿನಲ್ಲಿ ಹನ್ನೆರಡನೆಯ ಶತಮಾನದಲ್ಲಾದ ಕ್ರಾಂತಿಯೇ ಪ್ರಬಲವಾದ ಶಾಶ್ವತ ಸಾಕ್ಷಿಯಾಗಿದೆ. ಬಸವೇಶ್ವರನ ಕೃಪಾ ಮಹಿಮೆಯ ಪ್ರಭಾವಕ್ಕೊಳಗಾದ ಪ್ರತಿಯೊಬ್ಬ ವ್ಯಕ್ತಿಯೂ, ಅವನು ಕುಲಹೀನನಾಗಲಿ ಅಂತ್ಯಜನಾಗಲಿ – ನುಡಿದದ್ದೆಲ್ಲ ಕಾವ್ಯವಾಯಿತು. ಅದೆಷ್ಟೊಂದು ಜನ ವಚನಕಾರರು ಹುಟ್ಟಿಕೊಂಡರು ಆ ಅಲ್ಪಾವಧಿಯಲ್ಲಿ. "ಆ ನಾಡವರ್ಗಳ್ ಚದುರರ್ ನಿಜದಿಂ; ಕುಱಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್" ಎಂಬ ಕವಿರಾಜ ಮಾರ್ಗಕಾರನ ಹಾರೈಕೆಯ ಮಾತು ಸತ್ಯವಾದದ್ದು ಆಗ. ದಾಸಕೂಟವೆಂಬ ಹೆಸರಿನಲ್ಲಿ ಪ್ರಖ್ಯಾತವಾದ ಸಮಾನುಗುಣದ ಮತ್ತೊಂದು ಪರಂಪರೆಯೂ ಈ ಸಮಷ್ಟಿಚೇತನದ ವಿಕಾಸದಿಂದ ಸಂಲಬ್ಧವಾದ ಮಧುರ ಫಲಕ್ಕೆ ಸಾಕ್ಷಿಯಾಗಿದೆ.

ಅಂಥ ಯುಗ ಮುಂದೆ ಬರಲಿದೆಯೆಂದ ಮೇಲೆ ಈಗ ಕನ್ನಡ ಭಾಷೆಯಲ್ಲಿ ಸೃಷ್ಟಿಯಾಗಿರುವ ಮತ್ತು ಸೃಷ್ಟಿಯಾಗುತ್ತಿರುವ ಸಾಹಿತ್ಯ ಮಹತ್ವಪೂರ್ಣವಾದದ್ದಲ್ಲವೆಂಬುದು ನನ್ನ ಅಭಿಪ್ರಾಯವಲ್ಲ. ಕನ್ನಡಿಗರು ಹೆಮ್ಮೆಪಡಬಹುದಾದಂಥ ಮಹಾಕಾವ್ಯ ಕಾದಂಬರಿ ಕಥೆ ನಾಟಕ ಪ್ರಬಂಧಗಳು ಈಗಾಗಲೇ ಸಾಕಷ್ಟು ಸೃಷ್ಟಿಯಾಗಿವೆ. ಆದರೆ ರೂಪಾಂತರ ಹೊಂದುತ್ತಿರುವ ಸಮಾಜದ ಅನಂತ ಮುಖಗಳನ್ನು ಚಿತ್ರಿಸುವ ಸಾಹಿತ್ಯ ಮುಂದೆ ಸಂಭವಿಸಬೇಕಾಗಿದೆಯೆಂಬುದೇ ನನ್ನ ತಾತ್ಪರ್ಯ. ಮುಂಬರಲಿರುವ ಸಾಹಿತ್ಯಕ್ಕೆ ತಕ್ಕಂಥ ಭಾಷೆಯೂ ಈಗ ಸಿದ್ಧವಾಗಬೇಕಾಗಿದೆ. ಪದ್ಯದ ಭಾಷೆ ತೃಪ್ತಿಕರವಾಗಿ, ಕೆಲವು ಕಡೆ ಭವ್ಯವಾಗಿ ಬೆಳೆದಿದೆಯಾದರೂ ಗದ್ಯದ ಭಾಷೆ ಸಾಕಲ್ಯವಾಗಿ ಸರ್ವಂಕಷವಾಗಿ ಬಳ್ಳಿವರಿದು, ಇನ್ನೂ ಸ್ವಸ್ವರೂಪವನ್ನು ಕಂಡುಕೊಳ್ಳುವುದರಲ್ಲಿದೆ. ಕನ್ನಡ ಗದ್ಯ ಸಾಹಿತ್ಯದ ದೃಷ್ಟಿಯಿಂದ ವಡ್ಡಾರಾಧನೆಯೊಂದು ಸೀಮಾಕೃತಿ: ಸುಂದರವಾದ ದೇಶಿ ಶೈಲಿಯಲ್ಲಿ ತತ್ಕಾಲೀನ ಸಮಾಜದ ಭಾವ ವೈವಿಧ್ಯ ಆಲೋಚನಾ ಸಮುದಾಯವೆಲ್ಲ ಮೈಗೊಂಡಿವೆ. ಅದೇ ಸಿಟ್ಟಿನಲ್ಲಿ ಧರ್ಮಾಮೃತ ಪಂಚತಂತ್ರ ಮತ್ತು ಹರಿಹರನ ರಗಳೆಗಳ ಗದ್ಯ ಆಯಾಯ ಯುಗಧರ್ಮಾನುಸಾರಿಯಾಗಿ ಮೈತುಂಬಿಕೊಂಡು ಬೆಳೆಯಿತು. ಆದರೆ ಚಂಪೂಗ್ರಂಥಗಳ ಶ್ಲೇಷೆ ವಿಷಮ ಪರಿಸಂಖ್ಯೆ ವಿರೋಧಾಭಾಸಾದಿ ಅಲಂಕಾರ ಸಮಾಕೀರ್ಣವಾದ, ದೀರ್ಘಸಮಾಸ ಸಂಶ್ಲಿಷ್ಟವಾದ, ಜಟಿಲ ಕುಟಿಲವಾದ, ವೈವಿಧ್ಯರಹಿತವಾದ ಗಿರಿಭಾರದ ಆಡಂಬರಶೈಲಿ ಕನ್ನಡದ ಕಂದನ ನೀರಿಳಿಯದ ಗಂಟಲಲ್ಲಿ ಕಡುಬು ತುರುಕಿದಂತಾಯಿತು.

ಪರಿಪೂರ್ಣತೆಯನ್ನು ಸಾಧಿಸಿದ ಗದ್ಯ ಸುಸಂಸ್ಕೃತ ಸಮಾಜದ ಸಮಸ್ತ ವ್ಯವಹಾರಗಳಿಗೂ ಸರಾಗವಾಗಿ ಸರಸವಾಗಿ ಬಳಸಬಹುದಾದಂಥ ವಾಹಕವಾಗಬೇಕು; ಸಮಾಜದ ಎಲ್ಲ ವರ್ಗಗಳ ಭಾಷೆಯನ್ನು ಗರ್ಭೀಕರಿಸಿಕೊಳ್ಳಬೇಕಲ್ಲದೆ ಹೊಸ ಹೊಸ ಭಾವವಿಚಾರ ಚಿತ್ತವೃತ್ತಿ ಕಲ್ಪನೆಗಳ ರೂಪಧಾರಣೆಗೆ ಸಿದ್ಧವಾಗಿರಬೇಕು; ಎಲ್ಲ ತರದ ಮೋಡಿ, ಬೆಡಗು ಬಿನ್ನಾಣಗಳನ್ನು, ನಯನಣ್ಪು ನುಣ್ಪು ಗುಣ್ಪುಗಳನ್ನು, ತಿರುವು ಮುರಿವುಗಳನ್ನು ಬಾಗು ಬಳುಕುಗಳನ್ನು ಒಳಗೊಂಡಿರಬೇಕು. ವಾಕ್ಯ ಸರಣಿಯಲ್ಲಿ ಲಯಮಾಧುರ್ಯ ವೈವಿಧ್ಯಗಳಿರಬೇಕು, ಸ್ಥಿತಿಸ್ಥಾಪಕ ಶಕ್ತಿಯಿರಬೇಕು, ಅರ್ಥನಾದಗಳ ಸಾಮರಸ್ಯವಿರಬೇಕು, ಕಾರ್ಯಕಾರಣ ಸಂಬಂಧವಿರಬೇಕು; ಭಾವಾಲೋಚನೆಗಳ ಸಂಕೋಚ ವಿಕಾಸಗಳಿಗೆ ತಕ್ಕಂತೆ ಭಾಷೆಯ ಗತಿಯಲ್ಲಿ ಏರಿಳಿತಗಳಿರಬೇಕು.

ಈಗ ಕನ್ನಡ ಜ್ಞಾನ ವಿಜ್ಞಾನಗಳ ಭಾಷೆಯಾಗಿ ಸ್ಪಷ್ಟತೆ ನಿಖರತೆ ನಿಸ್ಸಂದಿಗ್ಧತೆ ಮತ್ತು ಸ್ಫುಟತ್ವಗಳನ್ನು ಪಡೆಯುತ್ತಿದೆ; ವೃತ್ತಪತ್ರಿಕೆಗಳ ಭಾಷೆಯಾಗಿ ಋಜುತ್ವ ಸ್ಥಿತಿಸ್ಥಾಪಕತ್ವಗಳನ್ನು ಚಾಚು ಮೊನಚುಗಳನ್ನು ರೂಢಿಸಿ ಕೊಳ್ಳುತ್ತಿದೆ; ವಾಣಿಜ್ಯ ರಾಜಕೀಯಾದಿ ವ್ಯವಹಾರಗಳ ಭಾಷೆಯಾಗಿ ನಯ ನುಣ್ಪುಗಳನ್ನು ಸೂಕ್ಷ್ಮತೆ ಕುಶಲತೆ ಗಳನ್ನು ಸಾಧಿಸುತ್ತಿದೆ; ಪ್ರಜಾಪ್ರತಿನಿಧಿ ಸಭೆಗಳಲ್ಲಿ ವಾದ ವಿವಾದಗಳಿಗೆ, ಸಾರ್ವಜನಿಕ ಸಭೆಗಳಲ್ಲಿ ಜನಮನ ಪ್ರಚೋದನೆಗೆ ಅನುಕೂಲವಾಗುವಂತೆ ಸಾಲಂಕೃತವೂ ಚಟುಲತೀಕ್ಷ್ಣವೂ ಸ್ಫೂರ್ತಿದಾಯಕವೂ ತರ್ಕ ಸಮರ್ಥವೂ ಆದ ಲಕ್ಷಣಗಳನ್ನೂ, ವಿಡಂಬನಯೋಗ್ಯ ವಾದ ಬೀಸು ಬಿರುಸುಗಳನ್ನೂ, ಹರಿತ ಹೊಗರುಗಳನ್ನೂ ಬೆಳೆಸಿಕೊಳ್ಳಬೇಕಾಗಿದೆ; ವಿದ್ಯೆ ಮತ್ತು ಜ್ಞಾನಗಳು ಸರ್ವ ಸಾಮಾನ್ಯರ ಸ್ವತ್ತಾಗುತ್ತಿರುವಾಗ, ರಾಷ್ಟ್ರ ಸಂಘಟನೆಯ ಕಾರ್ಯದಲ್ಲಿ ಸರ್ವರೂ ಸಮಭಾಗಿಗಳಾಗುತ್ತಿರುವಾಗ, ಹೋಟಲು ಮಾರ್ಕೆಟ್ಟುಗಳಲ್ಲಿ, ರೈಲು ಮೋಟಾರುಗಳಲ್ಲಿ, ಕಚೇರಿ ಗಿರಣಿಗಳಲ್ಲಿ ವ್ಯವಹಾರ ಭಾಷೆಯಾಗುತ್ತಿರುವಾಗ ಅದು ಕೊಂಕು ಬಿಂಕಗಳನ್ನುಳಿದು, ಆಡಂಬರವನ್ನು ತೊರೆದು, ಸರಳ ಶೀಲವಾಗಿ, ಜನಸಾಮಾನ್ಯದ ಭಾಷೆ ಯನ್ನು ತನ್ನದಾಗಿ ಮಾಡಿಕೊಳ್ಳುವ ಮಾರ್ದವತೆ ಯನ್ನೂ, ಪ್ರಸನ್ನತೆಯನ್ನೂ, ವ್ಯಾಪಕತ್ವವನ್ನೂ ಸಂಪಾದಿಸಿಕೊಳ್ಳಬೇಕಾಗಿದೆ; ಜ್ಞಾನ ವಿಜ್ಞಾನ ಸಂಬಂಧ ವಾದ ವಿಷಯಗಳನ್ನು ಸಾಮಾನ್ಯಮತಿಗೂ ಮುಟ್ಟಿಸು ವಂಥ ವಿಶದತೆಯನ್ನೂ ಅಕ್ಲಿಷ್ಟತೆಯನ್ನೂ ತನ್ನದಾಗಿಸಿ ಕೊಳ್ಳುತ್ತಿದೆ. ಒಟ್ಟಿನಲ್ಲಿ ಅದು ಸಭ್ಯಸಮಾಜದ ಸಕಲ ದೈನಂದಿನ ವ್ಯವಹಾರಗಳ ವಾಹಕಶಕ್ತಿಯಾಗಿ ಪಳಗು ತ್ತಿದೆ, ನುರಿಯುತ್ತಿದೆ, ಹುರಿಯಾಗುತ್ತಿದೆ, ಚೀಗಾಗು ತ್ತಿದೆ.

ಬಹುಮುಖವಾದ ವೈವಿಧ್ಯತೆಯನ್ನು ಸಾಧಿಸಿ, ಸಕಲ ಭಾವೋಪಯೋಗಿಯಾಗುವ ಸರ್ವಲೋಕೋಪಯೋಗಿ ಯಾಗುವ ವಿಶಿಷ್ಟ ಸಾಮರ್ಥ್ಯ ಕನ್ನಡಕ್ಕಿದೆ ಎಂದರೆ ಅದು ಕೇವಲ ಅಂಧಾಭಿಮಾನದ ಧೋರಣೆಯಾಗ ಲಾರದು. ಸಹಸ್ರ ಸಹಸ್ರ ವರ್ಷಗಳಿಂದ ಸಂಸ್ಕೃತ ಕನ್ನಡ ಜೊತೆ ಜೊತೆಗೆ, ಮತ್ತು ಕನ್ನಡದ ಮೂಲಕ ಬಾಳು ಸಾಗಿಸುತ್ತಿದೆ; ಅವೆರಡೂ ಅಭಿನ್ನವೆನ್ನುವಷ್ಟರಮಟ್ಟಿಗೆ ಅವುಗಳ ಬಾಳು ಬೆಸುಗೆಗೊಂಡಿದೆ. ಸಂಸ್ಕೃತದ ಸಾರ ವತ್ತಾದ ಸಾಹಿತ್ಯ ಕೃತಿಗಳೆಲ್ಲ ಕನ್ನಡ ಭಾಷೆಯಲ್ಲಿ ನೈತಾಳಿವೆ. ಒಂದಾನೊಂದು ಕಾಲದಲ್ಲಿ ಕನ್ನಡ ಪ್ರಾಕೃತ ಭಾಷೆಗಳು ಪರಸ್ಪರ ಪೋಷಕವಾಗಿದ್ದುವು. ಇತ್ತೀಚೆಗಂತು ಬಂಗಾಳಿ, ಮರಾಠಿ, ಹಿಂದಿ, ತೆಲುಗು, ತಮಿಳು ಭಾಷೆಗಳಿಂದ ಕನ್ನಡಕ್ಕೆ ಅನೇಕ ಕೃತಿಗಳು ಭಾಷಾಂತರವಾಗುತ್ತಿವೆ. ಆಂಗ್ಲಭಾಷೆಯ ಹಲವಾರು ಕೃತಿಗಳು ದಿನೇ ದಿನೇ ಹೆಚ್ಚು ಹೆಚ್ಚಾಗಿ ಕನ್ನಡ ಭಾಷಾ ಸೀಮೆಯನ್ನು ಪ್ರವೇಶಿಸಿ, ಆ ಕ್ಷೇತ್ರವನ್ನು ಶ್ರೀಮಂತ ಗೊಳಿಸುತ್ತಿವೆ. ವಿದ್ಯಾಪ್ರಸಾರದೊಡನೆ ಅಭಿವೃದ್ಧಿ ಯಾಗುತ್ತಿರುವ ದೈನಂದಿನ ಪತ್ರಿಕೆಗಳು, ಮಾಸಿಕ ತ್ರೈ ಮಾಸಿಕಗಳು ಜಟಿಲಭಾವಗಳನ್ನೂ ಕ್ಲಿಷ್ಟ ವಿಚಾರಗಳನ್ನೂ ನೂತನ ಕಲ್ಪನೆಗಳನ್ನೂ ಸರ್ವಗ್ರಾಹ್ಯವಾಗುವಂತೆ ನಿರೂಪಿಸುತ್ತ, ಹೊಸ ಹೊಸ ಪದಗಳನ್ನೂ ಪದಗುಚ್ಛ ಗಳನ್ನೂ ಕಂಡರಿಸುತ್ತ, ವಿವಿಧ ರೀತಿ ಛಾಯೆಗಳ ವಾಕ್ಯ ಸಮೂಹವನ್ನು ರೂಪಿಸುತ್ತ, ಭಾಷೆಯನ್ನು ಸರ್ವಾಂಗ ಸುಂದರವಾಗಿ ಹದಗೊಳಿಸುತ್ತಿವೆ; ಹಲವಾರು ಮಂದಿ ಸಾಹಿತಿಗಳು ತಮ್ಮ ಪ್ರಭಾವಮುದ್ರೆಯನ್ನೊತ್ತಿ ಭಾಷೆ ಸರ್ವಸಮರ್ಥವಾಗುವಂತೆ ತಮ್ಮ ತಪಶ್ಶಕ್ತಿಯನ್ನು ಧಾರೆ ಯೆರೆದಿದ್ದಾರೆ. ಈ ವಿವರಣೆಯ ಹಿನ್ನೆಲೆಯಲ್ಲಿ ಕನ್ನಡ ಭಾಷೆಯ ಬೆಳವಣಿಗೆಯನ್ನು ಗಣನೆಗೆ ತೆಗೆದುಕೊಳ್ಳು ವುದಾದರೆ, ಅದರ ಲಾವಣ್ಯ ಗಭೀರತೆಗಳನ್ನು ವಿನ್ಯಾಸ ವಿಲಾಸಗಳನ್ನು ವೈಭವ ಮಹೋನ್ನತಿಗಳನ್ನು ಗಮನಿಸು ವುದಾದರೆ ಅದು ಯಾವ ಭಾಷೆಗೂ ಕನಿಷ್ಠವಲ್ಲವೆಂಬ, ಯಾವ ಭಾಷೆಯೊಡನಾದರೂ ಸಮಜೋಳಿಯಾಗಿ ನಿಲ್ಲ ಬಲ್ಲುದೆಂಬ ಅಂಶ ವೇದ್ಯವಾಗದಿರದು.

ಹೊಸಗನ್ನಡ ಗದ್ಯ ಇನ್ನೂ ವಿಕಾಸಪಥದಲ್ಲಿದೆಯೆಂಬ ಮಾತನ್ನೊಪ್ಪಿಕೊಳ್ಳಬಹುದಾದರೂ, ಅದು ಸಮರ್ಥವಾದ ಭಾಷೆಯಲ್ಲವೆಂಬ ವಾಮಶೀಲದ ಬಡಕಲು ವಾದದ ಒಡಕುದನಿಯನ್ನು ಪುರಸ್ಕರಿಸಲಾಗದು. ಏಕೆಂದರೆ, ಭಾಷೆ ನಿರಾಕಾರದ ಅಮೂರ್ತವಸ್ತು; ಅದಕ್ಕೆ ಮೂರ್ತತ್ವ ಮತ್ತು ಸಾಕಾರತೆ ಸರಸ್ವತೀ ಕೃಪೆಗೆ ಪಾತ್ರನಾದ ಪ್ರತಿಭಾಶಾಲಿಯಿಂದ ಲಭಿಸಬೇಕಾಗಿದೆ. ಕಾಮರಾಜ ನಾಡಾರ್ ಅಂಥ ಆತ್ಮಗೌರವವುಳ್ಳ ಧೀರ ಸಾಹಸಿಯ ವ್ಯಕ್ತಿಮಹಿಮೆಯಿಂದ ಎಂಥ ಸಾಮಾನ್ಯ ಭಾಷೆಯಾದರೂ ಅಖಿಲ ಭಾರತೀಯ ಮಟ್ಟದ ಪಟ್ಟಕ್ಕೆ ಯೋಗ್ಯವಾಗು ತ್ತದೆ. ಶಬ್ದತೇಜಿಯನ್ನೇರುವ ಬುದ್ಧಿಯ ಸವಾರ ಶಕ್ತಿ ಯುತವಾಗಿದ್ದರೆ ಸರಿ, ಇಲ್ಲವಾದರೆ ತೇಜಿ ಸವಾರನನ್ನೆಸೆದು ಪಲಾಯನ ಮಾಡುತ್ತದೆ. "ಏಕಂ ಶಬ್ದಃ ಸಮ್ಯಗ್ಜ್ಞಾತಃಸಮ್ಯಗ್ ಪ್ರಯುಕ್ತಃ ಸ್ವರ್ಗೇ ಲೋಕೇ ಕಾಮ ದುಗ್ಭವತಿ" ಭಾಷೆ ಚಲಾವಣೆಯ ಮೂಲಕ ನಾಣ್ಯತೆ

ಪಡೆಯುತ್ತಾದರೂ, ಸ್ವಾಭಾವಿಕವಾಗಿ ಹೊಸ ಹೊಸ ರೂಪವನ್ನು ಧರಿಸುತ್ತಾದರೂ ಕನ್ನಡ ಭಾಷೆಯ ಅಭಿವೃದ್ಧಿಗೆ ಸಹಾಯಕವಾಗಬಹುದಾದ ಕೆಲವು ವಿಧಾನಗಳನ್ನಿಲ್ಲಿ ಸೂಚಿಸುವುದು ಅಪ್ರಕೃತವಾಗಲಾರದು:

ಮೊದಲನೆಯದಾಗಿ ಭಾಷಾಂತರ ಕಾರ್ಯ (ಅ) ನೃಪತುಂಗಅಸ್ಗಾದಿಗಳಿಂದ ಹಿಡಿದು ಇಂದಿನ ಕೃಷ್ಣಮೂರ್ತಿ ಪರಮೇಶ್ವರಭಟ್ಟ ನಂಜುಂಡಾರಾಧ್ಯರವರೆಗೆ ಸಂಸ್ಕೃತ ಸಾಹಿತ್ಯರಾಶಿ ವಿಪುಲಸಂಖ್ಯೆಯಲ್ಲಿ ಅವಿಚ್ಛಿನ್ನವಾಗಿ ಯಶಸ್ವಿಯಾಗಿ ಕನ್ನಡ ಭಾಷೆಗೆ ತರ್ಜುಮೆಯಾಗುತ್ತಿದೆ. ಒಬ್ಬೊಬ್ಬ ಕವಿಯ ಕೃತಿಗಳು ಅನೇಕ ಸಮರ್ಥ ವಿದ್ವಾಂಸರಿಂದ ಪರಿವರ್ತನೆಗೊಂಡಿವೆ. ರಾಮಾಯಣ ಭಾರತ ಭಾಗವತಗಳಂತು ಅನೇಕ ಸಾಹಿತಿಗಳ ಲೇಖನಿಯ ಮೂಲಕ ಸಮಗ್ರವಾಗಿಯೊ ಅಸಮಗ್ರವಾಗಿಯೊ ಸಂಕ್ಷಿಪ್ತವಾಗಿಯೊ ಕನ್ನಡದಲ್ಲಿ ಅನೇಕಾನೇಕ ರೂಪಗಳನ್ನು ತಳೆದುಬಂದಿವೆ. ಆದರೂ ಮೂಲಕವಿಯ ಮಹಿಮೋನ್ನತಿಯನ್ನು ಸಂಪೂರ್ಣವಾಗಿ ಗ್ರಹಿಸಬೇಕಾದರೆ ಮೂಲಕೃತಿಯನ್ನೇ ಆಶ್ರಯಿಸಬೇಕಾದ ಪ್ರಮೇಯ ಆಗಾಗ್ಗೆ ಒದಗುತ್ತದೆ. ಮೂಲಕೃತಿಯಲ್ಲಿ ಬಳಸಿರುವ ನುಡಿ ನುಡಿಗಟ್ಟು ನುಡಿಗೊಂಚಲುಗಳನ್ನು ಉಂಡುಂಡೆಯಾಗಿ ಕನ್ನಡದಲ್ಲಿಯೂ ಬಳಸುವುದಾದರೆ ಮೂಲಕವಿಯ ಭಾವ ಕಲ್ಪನೆಗಳು ಸ್ವಸ್ವರೂಪದಲ್ಲಿ ನೇರವಾಗಿ ವಾಚಕನ ಹೃದಯವನ್ನು ಪ್ರವೇಶಿಸುತ್ತವೆ. ಕಠಿನವೆಂದು ತೋರುವ ಪದಗಳಿಗೆ ಬದಲಾಗಿ ಬೇರೆ ಪದಗಳನ್ನು ಬಳಸಿ ಭಾಷಾಂತರಿಸಿದಾಗ ಮೂಲಕವಿಯ ಉದ್ದೇಶ ತಿರೋಹಿತವಾಗುತ್ತದೆ. ಆಗ ಭಾಷಾಂತರಕಾರ ವಾಚಕನಿಗೂ ಮೂಲಕವಿಗೂ ನಡುವಣ ರಸಸೇತುವೆಯಾಗುವ ಬದಲು ದಳ್ಳಾಳಿಯಾಗುತ್ತಾನೆ. ಇದರಿಂದ ಮೂಲಕವಿಗೆ ಅನ್ಯಾಯವಾಗುತ್ತದೆ, ಕನ್ನಡಕ್ಕೆ ಅಪರಿಹಾರ್ಯವಾದ ನಷ್ಟವೊದಗುತ್ತದೆ. ಛಂದಸ್ಸಿನ ಇತಿಮಿತಿಗಳಿಂದಾಗಿ ಮೂಲಪದಪ್ರಯೋಗ ಪದ್ಯದಲ್ಲಿ ಕ್ಲೇಶಕರವಾಗುವುದಾದರೂ, ಗದ್ಯದಲ್ಲಿ ಸರ್ವಥಾ ತೊಡಕಾಗಲಾರದು.

(ಆ) ಸಂಸ್ಕೃತ ಗ್ರಂಥಗಳ ಭಾಷಾಂತರ ಕಠಿನವಾದರೆ, ಆಂಗ್ಲ ಮೊದಲಾದ ಪಾಶ್ಚಾತ್ಯ ಗ್ರಂಥಗಳ ಭಾಷಾಂತರ ಕಠಿನತಮವಾಗುತ್ತದೆ. ತನಗೆ ಹೊಕ್ಕುಳು ಬಳ್ಳಿಯ ಸಂಬಂಧವಿಲ್ಲದ, ಭೌಗೋಲಿಕವಾಗಿ ಬಹುದೂರಸ್ಥವಾದ ಸಂಸ್ಕೃತಿಯ ಪರಿಸರಣದಲ್ಲಿ ಬೆಳೆದ ಅನ್ಯಭಾಷೆಯಿಂದ ತನ್ನ ಭಾಷೆಗೆ ಗ್ರಂಥಗಳನ್ನು ಪರಿವರ್ತಿಸುವಾಗ ಭಾಷಾಂತರಕಾರ ಅಸಾಧ್ಯವಾದ ಬವಣೆಗೊಳಗಾಗಬೇಕಾಗುತ್ತದೆ. ಪರಭಾಷೆಯ ಪದಗಳನ್ನು ಕೆದಕಿ ಬೆದಕಿ ಚಿದಕಿ, ಅವುಗಳ ಗರ್ಭಕೋಶದಲ್ಲಿ ಗುಪ್ತವಾಗಿರುವ ಮೂಲಕವಿಯ ಆಶಯವನ್ನು ಗುರುತಿಸಿ, ರಸಭಾವಗಳನ್ನು ಗ್ರಹಿಸಿ, ಆಲೋಚನೆಯನ್ನು ಪರಿಗ್ರಹಿಸಿ, ಆ ದ್ರವ್ಯಗಳನ್ನೆಲ್ಲ ಸರ್ವಸಮರ್ಪಕವಾಗಿ ಅಭಿವ್ಯಕ್ತಿಗೊಳಿಸಬಲ್ಲ ಸಮರ್ಥ ಶಬ್ದಗಳನ್ನು ತನ್ನ ಭಾಷೆಯ ಬೊಕ್ಕಣದಿಂದ ಹೊರತೆಗೆದು, ಮೂಲವಾಕ್ಯದ ಗತಿಲಯಗಳಿಗೆ ಭಂಗಬರದಂತೆ, ಬಂಧಕ್ಕೆ ಚ್ಯುತಿಯೊದಗದಂತೆ, ವಾಕ್ಯಗಳನ್ನು ನೇರ್ಪಡಿಸುವಾಗ, ಅವನು ಪರಕಾಯ ಪ್ರವೇಶಮಾಡಿ ಮರುಹುಟ್ಟು ಪಡೆದಂತಾಗುತ್ತದೆ. ಅಂದಮೇಲೆ ಮೂಲಭಾಷೆಯ ಸೊಗಸು ಸೊಗಡುಗಳು, ದಾಪುಚೂಪುಗಳು, ಗಭೀರತೆ ಪ್ರಸನ್ನತೆಗಳು, ತಿರುವು ಮುರಿವುಗಳು, ಬೀಸುಬಿರುಸುಗಳು, ಹಂಬುಮುಂಬುಗಳು ತುಂಬಿಕೊಂಡು ಬರಬೇಕಾಗುತ್ತದೆ. ಪರಭಾಷಾ ಗ್ರಂಥಗಳ ಅನುವಾದ ಅನುಕರಣ ಕ್ಲೇಶಕರವಲ್ಲ; ಆದರೆ ಅವುಗಳ ಭಾಷಾಂತರ ನುರಿತವರಿಗೂ ಶಿರೋವೇಧಕ.

(ಇ) ಆದರೆ ಭಾಷಾಂತರ ಕೃತಿಗಳಿಂದಲ್ಲದೆ ಯಾವ ರಾಷ್ಟ್ರದ ಭಾಷಾ ಸಾಹಿತ್ಯಗಳು ಶ್ರೀಮಂತವಾಗಲಾರವು. ಇಂಗ್ಲಿಷ್ ಸಾಹಿತ್ಯದ ಮಹಿಮೋತ್ಕರ್ಷಕ್ಕೆ, ಆ ಭಾಷೆಯ ಸರ್ವಶಕ್ತತೆಗೆ ಭಾಷಾಂತರ ಕೃತಿಗಳೂ ಸಾಕಷ್ಟುಮಟ್ಟಿಗೆ ಕಾರಣವೆಂದು ಹೇಳಿದರೆ ತಪ್ಪಾಗಲಾರದು. ಹೋಮರ್ ಡಾಂಟೆ ವರ್ಜಿಲ್ ಗಯಟೆ ಟಾಲ್‌ಸ್ಟಾಯ್ ಸೋಫೋಕ್ಲಿಸ್ ಇಬ್ಸೆನ್ ಮೋಲಿಯರ್ ಮೊದಲಾದ ವಿಶ್ವವಿಖ್ಯಾತ ಸಾಹಿತಿಗಳ ಕೃತಿಗಳು ಆಂಗ್ಲಭಾಷೆಗೆ ತರ್ಜುಮೆಯಾದದ್ದರಿಂದಲೇ ಆ ಭಾಷೆಯ ಹೆಚ್ಚುಗಾರಿಕೆ ದೇಶವಿದೇಶಗಳಲ್ಲಿ ಪ್ರಚುರವಾಯಿತು. ಇಟಾಲಿಯನ್ ಲ್ಯಾಟಿನ್ ಗ್ರೀಕ್ ರಷ್ಯನ್ ಜರ್ಮನ್ ಫ್ರೆಂಚ್ ಮೊದಲಾದ ಭಾಷೆಗಳ ತೇಜಸ್ಸನ್ನು ಹೀರಿಕೊಂಡು ಆಂಗ್ಲಭಾಷೆ ಸಂಪುಷ್ಟಿಗೊಂಡಿತು. ಸ್ಕಾಟ್ ಡೀಫೊ ಆಸ್ಟಿನ್ ಹಾರ್ಡಿ ಟಾಲ್‌ಸ್ಟಾಯ್ ಮೊದಲಾದವರ ಕಾದಂಬರಿಗಳು ಭಾಷಾಂತರವಾದಾಗ ಕನ್ನಡ ಭಾಷೆ ವಿಶೇಷೌಜ್ವಲ್ಯದಿಂದ ಬೆಳಗುತ್ತದೆ. ಆದ್ದರಿಂದ ಸಾಹಿತ್ಯ ಕ್ಷೇತ್ರದ ಈ ಪ್ರಮುಖಭಾಗವನ್ನು ಲಘುವಾಗಿ ಕಾಣದೆ, ಉಪೇಕ್ಷೆಯಿಂದ ಕಡೆಗಣಿಸದೆ ಭಾಷಾಂತರ ಕಾರ್ಯಕ್ಕೆ ಸಾಕಷ್ಟು ಪ್ರೋತ್ಸಾಹ ಅತ್ಯವಶ್ಯವೆಂಬುದನ್ನು ಭಾಷಾಭಿಮಾನಿಗಳು ಮನಗಾಣಬೇಕಾಗಿದೆ. ಅನ್ಯಜನಾಂಗಗಳ ಸಾಹಿತ್ಯಕೃತಿಗಳು ಕನ್ನಡಕ್ಕೆ ಬಂದಾಗ ಅವು ನಮ್ಮ ಸಾಹಿತಿಗಳಿಗೆ ಮಾದರಿಯಾಗಬಹುದಲ್ಲದೆ, ಆ ಜನಾಂಗಗಳ ಜೀವನವಿಧಾನ

ವನ್ನೂ ಜೀವನಮೌಲ್ಯಗಳನ್ನೂ ನಮ್ಮವರು ಗ್ರಹಿಸಿ, ಅವುಗಳನ್ನು ಮೆಚ್ಚಲನುಕೂಲವಾಗುತ್ತದೆ.

ಎರಡನೆಯದಾಗಿ ಹಳಗನ್ನಡ ಮತ್ತು ನಡುಗನ್ನಡ ಗ್ರಂಥಗಳು ಹೊಸಗನ್ನಡ ಗದ್ಯರೂಪವನ್ನು ಪಡೆಯ ಬೇಕಾಗಿದೆ. ಹಾಗೆ ಅನುವಾದ ಮಾಡುವಾಗ ಈಗಿನ ಸಂದರ್ಭದಲ್ಲಿ ವಿರೋಧಾರ್ಥ ಕೊಡುವ ಪದಗಳನ್ನು ತ್ಯಜಿಸಿ, ಉಳಿದ ಪದಗಳನ್ನು ಸ್ವಸ್ವರೂಪದಲ್ಲಿಯೇ ಉಳಿಸಿ ಕೊಳ್ಳಬೇಕಾಗುತ್ತದೆ. ಇದರಿಂದ ಪಂಪ ರನ್ನ ಹರಿಹರ ನಾರಣಪ್ಪಾದಿಗಳ ಧೀರ ಗಂಭೀರ ಶೈಲಿಯ ಸಂಪರ್ಕ ದಿಂದ ಹೊಸಗನ್ನಡದ ಮೈಯಲ್ಲಿ ವಿದ್ಯುತ್ ಸಂಚಾರ ವಾಗುತ್ತದಲ್ಲದೆ, ಆ ಕವಿಗಳು ಜನಸಾಮಾನ್ಯರ ಮತಿಗೆ ಎಟುಕುವಂತಾಗುತ್ತದೆ.

ಮೂರನೆಯದಾಗಿ ತುಳು ಮತ್ತು ಕೊಡಗು ಭಾಷೆಯ ಪದಗಳು ಕನ್ನಡ ಭಾಷೆಯಲ್ಲಿ ಜೀರ್ಣಗೊಂಡು, ಆ ಭಾಷೆಯಲ್ಲಿ ಸಾಯುಜ್ಯ ಪಡೆಯುವಂತೆ ಅಯಾಯ ಪ್ರಾಂತ ಭಾಗಗಳ ಸಾಹಿತಿಗಳು ಪ್ರಯತ್ನಿಸಬೇಕು. ಆಗ ಚಲಾವಣೆಯಿಲ್ಲದೆ ರಾಜಭಾಷೆಯ ಪ್ರಭಾವದಿಂದ ಕಣ್ಮರೆ ಯಾಗಬಹುದಾದ ಶಬ್ದಸಂಪತ್ತು ಕನ್ನಡದ ಸ್ವತ್ತಾಗಿ, ಶಬ್ದಭಂಡಾರ ಹಿಗ್ಗುತ್ತದೆ.

ನಾಲ್ಕನೆಯದಾಗಿ ಗ್ರಾಮಾಂತರಗಳಲ್ಲಿ ಬಳಕೆ ಯಲ್ಲಿರುವ ವೃತ್ತಿ ಸಂಬಂಧವಾದ ಸಹಸ್ರ ಸಹಸ್ರ ಪದ ಗಳನ್ನು ಸಂಗ್ರಹಿಸಿ, ಆಧುನಿಕ ವಿಚಾರಾಭಿಪ್ರಾಯಗಳ ಅಭಿವ್ಯಕ್ತಿಗೆ ಉತ್ತಮ ಸಾಧನವಾಗುವಂತೆ ನಿಯೋಜಿಸಿ ಕೊಳ್ಳಬೇಕು. ನವನಾಗರಿಕತೆಯ ಧಾಳಿಯಿಂದ ಆ ಪದಗಳೆಲ್ಲ ವಿಸ್ಮೃತಿಯ ಗರ್ಭದಲ್ಲಿ ಹೂತುಹೋಗುವುದಕ್ಕೆ ಮುಂಚೆಯೇ ಅವುಗಳನ್ನು ರಕ್ಷಿಸದಿದ್ದರೆ, ಮುಂದೆ ತುಂಬ ಲಾರದ ಅಗಾಧ ನಷ್ಟವೊದಗುತ್ತದೆ. ಚೀನೀಯರ ಆಕ್ರಮಣದಿಂದ ದೇಶದಲ್ಲಿ ಎಂಥ ತುರ್ತು ಪರಿಸ್ಥಿತಿ ಒದಗಿದೆಯೋ ಅಂಥದೇ ತುರ್ತು ಪರಿಸ್ಥಿತಿ ಭಾಷಾಕ್ಷೇತ್ರ ದಲ್ಲಿ ಪದಪ್ರಲಯದಿಂದ ಸಂಪ್ರಾಪ್ತವಾಗಲಿದೆಯೆಂಬು ದನ್ನು ಕನ್ನಡಿಗರೆಲ್ಲ ಮನಗಾಣಬೇಕಾಗಿದೆ.

ಐದನೆಯದಾಗಿ ನಾನಾ ದರ್ಜೆಯ ವೈಜ್ಞಾನಿಕ ಗ್ರಂಥ ಗಳ ರಚನೆಗೆ ವಿಶ್ವವಿದ್ಯಾನಿಲಯಗಳೂ ಸರಕಾರವೂ ಆದ್ಯ ಗಮನ ಕೊಡಬೇಕಾಗಿದೆ. ವಿಜ್ಞಾನ ಸಾಮಾನ್ಯ ಮಾನ ವನ ಸ್ವತ್ತಾಗಬೇಕಾದರೆ ಅದು ಕನ್ನಡದಲ್ಲಿ ಪ್ರಸಾರವಾಗ ಬೇಕು, ಸಾಮಾನ್ಯ ಮಾನವನಲ್ಲಿ ವೈಜ್ಞಾನಿಕ ಪ್ರಜ್ಞೆ ಜಾಗೃತಗೊಳ್ಳುವ ತನಕ ವಿಜ್ಞಾನದ ಮಹತ್ ಸಿದ್ಧಿಗಳು ರಾಷ್ಟ್ರಕ್ಕೆ ದೊರೆಯಲಾರವು. ತಳಹದಿ ಭದ್ರವಾಗಿದ್ದರೆ ಎಷ್ಟು ಮಹಡಿಗಳನ್ನಾದರೂ ಏರಿಸಬಹುದು. ಆದ್ದರಿಂದ ವೈಜ್ಞಾನಿಕ ಗ್ರಂಥಗಳ ರಚನೆಗೆ ವಿನಿಯೋಗಿಸುವ ಹಣ ಸಾರ್ಥಕವಾಗುತ್ತದಲ್ಲದೆ, ಕಾಲಾನಂತರದಲ್ಲಿ ಅನಿರೀಕ್ಷಿತ ವಾದ ಪ್ರತಿಫಲವನ್ನು ನೀಡುತ್ತದೆ.

ಆರನೆಯದಾಗಿ ಕನ್ನಡದಲ್ಲಿ ಪದವಿಯೋತ್ತರ ಸಂಶೋಧನೆಗೆ ಸಾಕಷ್ಟು ವಿದ್ಯಾರ್ಥಿ ವೇತನಗಳನ್ನೊದ ಗಿಸುವುದರ ಮೂಲಕ ಸಂಶೋಧನಾತ್ಮಕವಾದ ವಿಮರ್ಶಾ ಸಾಹಿತ್ಯವನ್ನು ಬೆಳೆಸಬಹುದಾಗಿದೆ. ಈ ಕ್ಷೇತ್ರದಲ್ಲಿ ಆಗ ಬೇಕಾಗಿರುವ ಕೆಲಸವನ್ನು ನೆನೆಸಿಕೊಂಡರೆ, ಆಗಿರುವ ಕೆಲಸ ಅತ್ಯಲ್ಪವಾದುದೆಂದೇ ಹೇಳಬೇಕಾಗುತ್ತದೆ. ಪಂಪ ರನ್ನ ಹರಿಹರ ರಾಘವಾಂಕ ಜನ್ನ ಕುಮಾರವ್ಯಾಸ ರತ್ನಾ ಕರವರ್ಣಿ ಮೊದಲಾದ ಕವಿಗಳ ಕಾವ್ಯವಿಮರ್ಶೆ ನಾನಾ ಮುಖವಾಗಿ ಬೆಳೆಯಬೇಕಾಗಿದೆ. ಮೂಲಭೂತ ರೂಪ ವಾದ ಈ ಕಾರ್ಯ ಆಮೂಲಾಗ್ರವಾಗಿ ನಡೆಯುವ ತನಕ ಸರ್ವಸಮರ್ಪಕವಾದ ಸಾಹಿತ್ಯ ಚರಿತ್ರೆ ಬರಿಯ ಕನ ಸಾಗುಳಿಯುತ್ತದೆ. ಇತಿಹಾಸ ಸಮಾಜಶಾಸ್ತ್ರ ಭೌತ ಶಾಸ್ತ್ರ ಆಂಗ್ಲ ಸಾಹಿತ್ಯವೇ ಮೊದಲಾದ ವಿಷಯಗಳನ್ನು ಕುರಿತಾದ ಸಂಶೋಧನೆ ಭರತಖಂಡದ ಎಲ್ಲ ವಿಶ್ವವಿದ್ಯಾ ನಿಲಯಗಳಲ್ಲಿಯೂ ನಡೆಯುತ್ತಿದೆ. ಕನ್ನಡ ಭಾಷಾ ಸಾಹಿತ್ಯಗಳಿಗೆ ಸಂಬಂಧಿಸಿದ ಸಂಶೋಧನೆ ಮುಖ್ಯವಾಗಿ ಎರಡೇ ಎರಡು ವಿಶ್ವವಿದ್ಯಾನಿಲಯಗಳಲ್ಲಿ ನಡೆಯಬೇಕಾ ಗಿದೆ. ಆದ್ದರಿಂದ ಈ ವಿಶ್ವವಿದ್ಯಾನಿಲಯಗಳು ಕನ್ನಡ ಸಂಶೋಧನೆಗೆಂದು ಸಾಕಷ್ಟು ವಿದ್ಯಾರ್ಥಿ ವೇತನಗಳನ್ನು ಮುಡಿಪಾಗಿಡಬೇಕು. ಇದರ ಜೊತೆಗೆ ವಿದ್ಯಾರ್ಥಿ ವೇತನದ ಸಹಾಯವಿಲ್ಲದೆ ಸಂಶೋಧನೆ ನಡೆಸಿ, ಅತ್ಯುತ್ತಮವಾದ ಮಹಾನಿಬಂಧಗಳನ್ನು ಬರೆದವರಿಗೆ ಧನಸಹಾಯ ನೀಡುವುದರ ಮೂಲಕ ಅಂಥ ವ್ಯಾಸಂಗೋ ದ್ಯಮನನ್ನು ಪ್ರೋತ್ಸಾಹಿಸಬೇಕು. ಎಸ್. ವಿ. ರಂಗಣ್ಣ ನವರ ಕಾಳಿದಾಸ ಕೃತಿ ವಿಮರ್ಶೆಗಳು, ಎಲ್. ಬಸವ ರಾಜುರವರ ಅಲ್ಲಮನ ವಚನಚಂದ್ರಿಕೆ ಮತ್ತು ಶ್ರೀ ಶಿವ ದಾಸ ಗೀತಾಂಜಲಿ, ತಿಪ್ಪೇರುದ್ರ ಸ್ವಾಮಿಯವರ 'ಕನ್ನಡ ದಲ್ಲಿ ಅನುಭಾವ ಸಾಹಿತ್ಯ' ಮೊದಲಾದ ಗ್ರಂಥಗಳು ಈ ಸಂದರ್ಭದಲ್ಲಿ ಉಲ್ಲೇಖನೀಯವಾದುವು.

ಕನ್ನಡ ಭಾಷಾಭಿವೃದ್ಧಿಗಾಗಿ ಸರಕಾರ ಮತ್ತು ವಿಶ್ವ ವಿದ್ಯಾನಿಲಯಗಳು ಮಾಡಬೇಕಾದ ಕಾರ್ಯ ಬೆಟ್ಟದಷ್ಟಿದೆ. ಭಾಷಾವಾರು ಪ್ರಾಂತ್ಯಗಳು ನಿರ್ಮಾಣವಾದ ಸಂದರ್ಭ ದಲ್ಲಿ ಇತರ ದೇಶ ಭಾಷೆಗಳಂತೆಯೇ ಕನ್ನಡ ನಾಡಿನಲ್ಲಿ ಕನ್ನಡ ಪ್ರಥಮ ಭಾಷೆಯಾಗುತ್ತದೆ, ಶಿಕ್ಷಣ ಮಾಧ್ಯಮ

ವಾಗುತ್ತದೆ, ಆಡಳಿತ ಭಾಷೆಯಾಗುತ್ತದೆ ಎಂಬುದಾಗಿ ಹಲವರು ನಂಬಿಕೊಂಡಿದ್ದರು. ಏಳೆಂಟು ವರ್ಷಗಳಾದರೂ ಈ ದಿಶೆಯಲ್ಲಿ ಕೆಲಸ ತೃಪ್ತಿಕರವಾಗಿ ಸಾಗದಿರುವುದನ್ನು ನೋಡಿದರೆ, ಕೇವಲ ತಾತ್ಕಾಲಿಕ ಪ್ರಯೋಜನದ ರಾಜಕೀಯ ಕಾರಣಗಳಿಗಾಗಿ ಭಾಷಾವಾರು ಪ್ರಾಂತ್ಯಗಳು ಅಸ್ತಿತ್ವಕ್ಕೆ ಬಂದಿರಬಹುದೆಂಬ ಊಹೆಗೆ ಗರಿಮೂಡುತ್ತದೆ. ಹೆಸರಿಗಾಗಿ ಕಾದಾಡುತ್ತಿರುವಂತೆ ಹೆಸರಿನ ಸಾರ್ಥಕತೆಗಾಗಿ ಯಾರೂ ಗಮನಕೊಟ್ಟಂತೆ ಕಾಣುವುದಿಲ್ಲ. ಕನ್ನಡ ಆಡಳಿತ ಭಾಷೆಯಾಗುತ್ತದೆಂದು ಜನಪ್ರಿಯ ಸರ್ಕಾರ ಘೋಷಿಸಿದೆ. ಆದರೆ ಶ್ವೇತವರ್ಣದ ಕಂಠಪಟ್ಟಿಯ ಮಹಾನುಭಾವರಿಂದ ಏನೇನು ಕಾಟ ಕಾದಿದೆಯೋ ಗೊತ್ತಿಲ್ಲ. ಪ್ರತಿಯೊಂದು ಕಚೇರಿಗೂ ಕನ್ನಡ ಐಚ್ಛಿಕ ಭಾಷೆಯ ಪದವೀಧರರನ್ನು ನೇಮಿಸಿಕೊಂಡರೆ ಆಡಳಿತ ಭಾಷೆಯನ್ನು ಕಾರ್ಯರೂಪಕ್ಕೆ ತರುವ ಕಾರ್ಯ ಸರಾಗವಾಗುತ್ತದೆ.

ಒಲಿದವರಿಗೆ ಒಲ್ಲದವರಿಗೆಲ್ಲ ಏಕಪ್ರಕಾರವಾದ ಕಡ್ಡಾಯದಿಂದ ವಿಜ್ಞಾನ ವಿಷಯಗಳನ್ನು ತುರುಕುವ ಮೂಲಕ ಒಲ್ಲದ ವಿದ್ಯಾರ್ಥಿಗಳ ಸಾಮರ್ಥ್ಯವನ್ನು ಕುಬ್ಜಗೊಳಿಸುವಂಥ, ವಿದ್ಯಾರ್ಥಿಗಳ ವ್ಯಕ್ತಿತ್ವ ಸಂಪೂರ್ಣವಾಗಿ ವಿಕಾಸವಾಗಲನುಕೂಲಿಸುವಂಥ ಪಠ್ಯಕ್ರಮವನ್ನುಳಿದು, ಅವರ ಏಕಪಕ್ಷೀಯವಾದ ಬೆಳವಣಿಗೆಗೆ ಮಾತ್ರ ಅನುವು ಮಾಡಿಕೊಡುವಂಥ ಪಠ್ಯಕ್ರಮವನ್ನು ಜಾರಿಗೆ ತರುವುದರ ಮೂಲಕ ಕನ್ನಡದ ಸ್ಥಾನಮಾನಗಳನ್ನು ಅಧೋಗತಿಗಿಳಿಸಿ, ಕನ್ನಡದ ಬಗ್ಗೆ ವಿದ್ಯಾರ್ಥಿಗಳಲ್ಲಿ ಔದಾಸೀನ್ಯ ಮೂಡುವಂಥ ಅನಿಷ್ಟಕಾರಕವಾದ ಏರ್ಪಾಡಿನ ಚಿಹ್ನೆಗಳು ಕನ್ನಡ ನಾಡಿನ ವಿಶ್ವವಿದ್ಯಾನಿಲಯಗಳ ಆವರಣದಲ್ಲಿ ಕಾಣುತ್ತಿರುವುದು ದುರ್ದೈವದ ಸಂಗತಿಯಾಗಿದೆ. ಡಾಕ್ಟರ್ ಕೆ. ವಿ. ಪುಟ್ಟಪ್ಪನವರು ವೈಸ್ ಛಾನ್ಸಲರಾಗಿದ್ದಾಗ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಜಾರಿಗೆ ತಂದು ಸರ್ವ-ವಿದ್ಯಾರ್ಥಿ ಪ್ರಿಯವಾಗಲಿದ್ದ ಕನ್ನಡ ಮಾಧ್ಯಮ ಕೆಲವು ಪ್ರತಿಗಾಮೀ ಶಕ್ತಿಗಳ ಅಧಿಕಾರ ದರ್ಪದ ಸಂಚಿನಿಂದಾಗಿ ಕಣ್ಮರೆಯಾಗಲಿದೆ. ನಾಗದಂಶನದಿಂದ ಮೂರ್ಛಾಗತನಾಗಿರುವ ಕನ್ನಡದ ಲೋಹಿತಾಶ್ವನನ್ನೆಬ್ಬಿಸಲು ಮತ್ತೊಮ್ಮೆ ಶಿವಶಕ್ತಿಯ ಸಾಕ್ಷಾತ್ಕಾರವಾಗಬೇಕಾಗಿದೆ. ಕನ್ನಡ ಸಾಹಿತ್ಯ ಪರಿಷತ್ತೂ, ಜೊತೆಗೆ ಕ್ರಿಯಾಸಮರ್ಥರೂ ಉಜ್ವಲ ಭಾಷಾಭಿಮಾನಿಗಳೂ ಆದ ಶ್ರೀ ಶಿವಮೂರ್ತಿ ಶಾಸ್ತ್ರಿಗಳೂ, ಮೇಲಾಗಿ ಸಾರ್ವಜನಿಕರೂ ವಿದ್ಯಾರ್ಥಿಗಳೂ ಸದಾ ಎಚ್ಚರಿಕೆಯಿಂದಿದ್ದು ಎಲ್ಲೆಡೆಯೂ ಕನ್ನಡದ ಸ್ಥಾನಮಾನಗಳನ್ನು ಕಾಯ್ದುಕೊಳ್ಳಬೇಕಾಗಿದೆ. ಇಂದು ಪರಿಷತ್ತಿಗೆ ಇದಕ್ಕಿಂತ ಪವಿತ್ರತಮವಾದ ಕಾರ್ಯ ಮತ್ತೊಂದಿಲ್ಲವೆಂದು ವಿನಯಪೂರ್ವಕವಾಗಿ ವಿಜ್ಞಾಪಿಸಿಕೊಳ್ಳುತ್ತೇನೆ.

ಕನ್ನಡ ನಾಡಿನಲ್ಲಿ ಕನ್ನಡದ ಅಸ್ತಿತ್ವಕ್ಕಾಗಿ ಚಳುವಳಿ ಹೂಡಬೇಕಾದ ನಾಚಿಕೆಗೇಡಿನ ಪ್ರಸಂಗ ಆಗಾಗ್ಗೆ ತಲೆದೋರುತ್ತಿರುವುದು ಬುದ್ಧಿಸ್ವಾಸ್ಥ್ಯದ ಕುರುಹಲ್ಲ, ಆತ್ಮಗೌರವದ ಲಕ್ಷಣವಲ್ಲ. ತಾಯಿ ಮತ್ತು ತಾಯಿನುಡಿಗಳನ್ನು ಪರದೇಶಿಗಳನ್ನಾಗಿ ಮಾಡಬೇಡಿ, ಅದರಿಂದ ಪತನ ಕಟ್ಟಿಟ್ಟ ಬುತ್ತಿಯೆಂದು, ಉಪದೇಶ ಮಾಡಬೇಕಾಗಿದೆ. ಕನ್ನಡ ನಾಡಿನ ನಗರಗಳಲ್ಲಿರುವ ಅಂಗಡಿಗಳ ಹೆಸರು ಕನ್ನಡದಲ್ಲಿರಬೇಕೆಂದು, ಮೈಸೂರು ರಾಜ್ಯದ ಸಿನಿಮಾ ಮಂದಿರಗಳಲ್ಲಿ ಕನ್ನಡ ಚಲನಚಿತ್ರಗಳನ್ನು ಪ್ರದರ್ಶಿಸಬೇಕೆಂದು ಮುಷ್ಕರ ಹೂಡಬೇಕೆ? ಬೆಂಗಳೂರಿನ ರೈಲು ನಿಲ್ದಾಣದಲ್ಲಿ ತಮಿಳು ತೆಲುಗುಗಳಿಗಿರುವ ಘನತೆಗೌರವಗಳು ಮದ್ರಾಸ್ ನಿಲ್ದಾಣದಲ್ಲಿ ಕನ್ನಡಕ್ಕಿಲ್ಲ. ಕನ್ನಡ ನಾಡಿನ ಹೃದಯದಂತಿರುವ ಶಿವಮೊಗ್ಗೆಯಲ್ಲಿ ತಮಿಳು ಶಾಲೆಗಳು! ಕನ್ನಡಿಗರು ಅಧಿಕ ಸಂಖ್ಯೆಯಲ್ಲಿರುವ ನೀಲಗಿರಿ ಸತ್ಯಮಂಗಲಂ ಮೊದಲಾದ ಪಟ್ಟಣಗಳಲ್ಲಿ ಕನ್ನಡಕ್ಕೆ ದಿಕ್ಕೇ ಇಲ್ಲ. ತನ್ನ ಮನೆಯಲ್ಲಿಯೇ ದಿಕ್ಕು ದಿವಾಣಿ ಇಲ್ಲದ ದಾಸಿಯಂತಿರುವ ಕನ್ನಡಕ್ಕೆ ಬೇರೆ ಮನೆಯಲ್ಲಿ ಜಾಗ ಸಿಗುತ್ತದೆಯೇ? ಇದೆಲ್ಲ ಕನ್ನಡಿಗರ ರಿಕ್ತಸ್ಥಿತಿಯನ್ನೂ ವಿಪನ್ನಾವಸ್ಥೆಯನ್ನೂ ಆತ್ಮದಾರಿದ್ರ್ಯವನ್ನೂ ಎತ್ತಿ ತೋರಿಸುತ್ತದೆ. ತಮಿಳು ನಾಡಿನಲ್ಲಿ ತಮಿಳಿಗಿರುವ ಗೌರವ ಕನ್ನಡ ನಾಡಿನಲ್ಲಿ ಕನ್ನಡಕ್ಕೆ ದೊರೆತರೆ ಸಾಕು; ಅದೇ ನಮ್ಮ ಭಾಗ್ಯ. ಆ ಭಾಗ್ಯಕ್ಕೆ ಭಾಗಿಯಾಗುವ ಸುದಿನ ಬೇಗ ಬರಲಿದೆಯೆ?

"ಮಣಿಯದಿಹ ಮನವೊಂದು ಸಾಧಿಸುವ ಹಟವೊಂದು
ನಿಜದ ನೇರಕೆ ನಡೆವ ನಿಶ್ಚಲತೆಯೊಂದು—
ಅನ್ಯಾಯಕೆಂದೆಂದು ಬಾಗದೆಚ್ಚರವೊಂದು"

ಎಂಬ ತಾರಕ ವಾಕ್ಯ ಕನ್ನಡಿಗರ ಗಾಯತ್ರಿಯಾಗುವುದಾದರೆ ಆ ಭಾಗ್ಯ ತಳುವಿಲ್ಲದೆ ಕೈಗೂಡುತ್ತದೆ.

"ಕನ್ನಡಕ್ಕಾಗಿ ಕೈಯೆತ್ತು; ನಿನ್ನ ಕೈ ಕಲ್ಪವೃಕ್ಷವಾಗುತ್ತದೆ! ಕನ್ನಡಕ್ಕಾಗಿ ಕೊರಳೆತ್ತು; ಅಲ್ಲಿ ಪಾಂಚಜನ್ಯ ಮೂಡುತ್ತದೆ! ಕನ್ನಡಕ್ಕಾಗಿ ಕಿರುಬೆರಳೆತ್ತಿದರೂ ಸಾಕು ಇಂದು ಅದೆ ಗೋವರ್ಧನಗಿರಿಧಾರಿಯಾಗುತ್ತದೆ."

---

# ಸಾಹಿತ್ಯಗೋಷ್ಠಿ – ಅಧ್ಯಕ್ಷ ಭಾಷಣ

[ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ (೨೯–೧೨–೧೯೬೩) ಸಾಹಿತ್ಯಗೋಷ್ಠಿಯ ಅಧ್ಯಕ್ಷ ಪ್ರೊ॥ ರಾ. ಯ. ಧಾರವಾಡಕರ' ಅವರ ಭಾಷಣ ]

ಸಂಸಾರವಿಷವೃಕ್ಷಸ್ಯ ದ್ವೇ ಫಲೇ ಹ್ಯಮೃತೋಪಮೇ ।
ಕಾವ್ಯಾಮೃತರಸಾಸ್ವಾದಃ ಆಲಾಪಃ ಸಜ್ಜನೈಃ ಸಹ ॥

ತಮ್ಮಂಥ ಸರಸ್ವತೀಕುವರ – ಕುವರಿಯರ – ಸಾಹಿತ್ಯ ಪ್ರೇಮಿಗಳ ಸತ್ಸಂಗದಿಂದ ಮೇಲಿನ ಉಕ್ತಿಯಲ್ಲಿಯ ಒಂದು ಮಾತೇನೋ ಲಭಿಸಿತು. ಆದರೆ, ಕಾವ್ಯಾಮೃತರಸಾಸ್ವಾದದ ಇಂದಿನ ಪರಿಸ್ಥಿತಿಯ ಬಗೆಗೆ ನಾವೆಲ್ಲರೂ ಕೂಡಿಯೇ ಇಂದು ಚಿಂತನೆ ಮಾಡಬೇಕಾಗಿದೆ. ೪೫ನೆಯ ಕನ್ನಡ ಸಾಹಿತ್ಯ ಸಮ್ಮೇಲನದ ಸಾಹಿತ್ಯಗೋಷ್ಠಿಯ ಈ ಅಧ್ಯಕ್ಷಮರ್ಯಾದೆಯನ್ನು ದಯಪಾಲಿಸಿದ್ದಕ್ಕಾಗಿ, ಸ್ವಾಗತ ಸಮಿತಿಯ ಸದಸ್ಯರಿಗೂ ಪರಿಷತ್ತಿನ ಕಾರ್ಯವಾಹಕಮಂಡಲದವರಿಗೂ ನನ್ನ ಸವಿನಯ ಕೃತಜ್ಞತೆಗಳನ್ನರ್ಪಿಸುತ್ತೇನೆ. ಅವರು ಕೊಡಮಾಡಿದ ಈ ಗೌರವವಿಲ್ಲದೆ, ತಮ್ಮಂಥ ಸಾಹಿತ್ಯಪ್ರೇಮಿಗಳ ಸತ್ಸಂಗವೆಲ್ಲಿ ಲಭಿಸುತ್ತಿತ್ತು? ಅದಕ್ಕಾಗಿ ಕೃತಜ್ಞ.

ಸಾಹಿತ್ಯಗೋಷ್ಠಿಯ ದೃಷ್ಟಿಯಿಂದ ಮಾತನಾಡುವುದಾದರೆ, ಈ ವರುಷ ತುಂಬಾ ಖೇದದಾಯಕ ವರ್ಷ. ಕೇವಲ ಒಂದು ವರ್ಷದ ಅವಧಿಯಲ್ಲಿ ಕನ್ನಡ ಶಾರದೆಯು ಅನೇಕ ಸಿದ್ಧಹಸ್ತರೂ, ಖ್ಯಾತನಾಮರೂ, ಉದ್ದಾಮ ಗದ್ಯಲೇಖಕರೂ ಆದ ನಾಲ್ವರು ಮೇಧಾವಿಗಳನ್ನು ಕಳೆದುಕೊಂಡಳು. ಕವಿಗಳೂ, ಪ್ರಗಲ್ಭ ಸಂಶೋಧನಾಪಂಡಿತರೂ ಆದ ರಾಷ್ಟ್ರಕವಿ ಗೋವಿಂದ ಪೈ ಅವರು, ಜನಪ್ರಿಯ ಲಲಿತಕಾದಂಬರಿಕಾರರಾದ ಶ್ರೀಮತಿ ತ್ರಿವೇಣಿಯವರು, ವ್ಯಕ್ತಿಚಿತ್ರ ಶಿಲ್ಪಿಗಳೂ ಸಹೃದಯ ಸ್ನೇಹಿತರೂ ಆದ ಶ್ರೀ ದ. ಬಾ. ಕುಲಕರ್ಣಿ ಅವರು, ಕನ್ನಡ ಕಥಾಪ್ರಪಂಚದ ಶ್ರೀ ಆನಂದ ಅವರು ಕನ್ನಡ ಸಾಹಿತ್ಯವನ್ನು ಅಧಿಕವಾಗಿ ಪೋಷಿಸಿ ಅಲಂಕರಿಸಿದವರು. ಈ ನಾಲ್ವರು ಲೇಖಕರ ಆಕಸ್ಮಿಕ ನಿಧನದಿಂದ ಕನ್ನಡ ಸಾಹಿತ್ಯ ಬಲಗುಂದಿತು. ಆದರೆ, ಅದೆಲ್ಲ ಪರಮಾತ್ಮನ ಇಚ್ಛೆ. ಪ್ರತಿರೋಧಿಸಲಾಗದ್ದನ್ನು ಸಹಿಸಿಯೇ ತೀರಬೇಕೆಂದು ಹೇಳುವಂತೆ, ಈ ನಾಲ್ವರು ದಿವಂಗತರ ದಿವ್ಯಸ್ಮರಣೆಯನ್ನು ಮಾಡಿ ಪರಮಾತ್ಮನು ಅವರಿಗೆ ಸದ್ಗತಿ ಈಯಲೆಂದು ನಾವು ಪ್ರಾರ್ಥಿಸಬೇಕಾಗಿದೆ.

ಇರಲಿ; ಈಗ ನಾವು ಪುನಃ ಮೊದಲಿನ ಮಾತಿಗೆ ಹೋಗೋಣ: ಸಂಸಾರ ವಿಷವೃಕ್ಷದ ಎರಡು ಅಮೃತ ಸದೃಶವಾದ ಫಲಗಳೆಂದರೆ ಸತ್ಸಂಗ, ಕಾವ್ಯಾಮೃತ ರಸಾಸ್ವಾದ—ಎಂದು ಹೇಳಿ ಆಯಿತಷ್ಟೆ. ಇಂದಿನ ಈ ತಳಮಳದಲ್ಲಿ ಸಂಸಾರವೃಕ್ಷ ಹಣ್ಣನ್ನೇ ಕೊಡುವುದನ್ನು ನಿಲ್ಲಿಸಿ, ಬರಿಯ ವಿಷವೃಕ್ಷವಾಗಿದೆಯೇ? ಸಾಹಿತ್ಯಾಭ್ಯಾಸದ ಕಡೆಗಿರುವ ನಮ್ಮ ಬುಭುಕ್ಷೆಯನ್ನು, ಒಲ್ಮೆಯನ್ನು ಬತ್ತಿಸುತ್ತಿದೆಯೇ? ಬೇಸಗೆಯಲ್ಲಿ ಒಣಗಿ ಗರಿಗರಿಯಾಗಿ ನಿಂತ ಬಸಿರಿಗಿಡದ ಹಾಗೆ, ಯಾವ ತಂಪು ಛಾಯೆಯನ್ನೂ ಕೊಡದೆ, "ದೃಷ್ಟಿವಿಷಾಹಿಯ" ಹಾಗೆ ಬರಿಯ ವಿಷದರ್ಶನವನ್ನು ಮಾತ್ರ ಮಾಡಿಸುತ್ತಿದೆಯೇ ವಿಚಾರಿಸಬೇಕು.

ಸ್ಥೂಲವಾಗಿ, ಇಂದು ಸಾಹಿತ್ಯದ ಅಭ್ಯಾಸಕ್ಕೆ ಬಲವಿಲ್ಲ. ಕಾವ್ಯಕ್ಕೆ ಮನವಿಲ್ಲ. ಸಾಹಿತ್ಯಕೃಷಿಗೆ ಬೆಲೆಯಿಲ್ಲ. ಅಲ್ಲಲ್ಲಿ ಅಪವಾದಾತ್ಮಕವಾಗಿ ನಡೆಯುವ ಮಾತಿನ ವಿಷಯ ಬೇರೆ; ಆದರೆ, ಸಾಮಾನ್ಯವಾಗಿ ಶ್ರೀ ಸಾಮಾನ್ಯನಿಗೆ ಸಾಹಿತ್ಯದಲ್ಲಿ ಆಕಾಂಕ್ಷೆ ಇಲ್ಲ. ಓದುವ ಕಥೆ, ಕಾದಂಬರಿಗಳನ್ನು ಸಹ, ಸುಖ-ಸಂಕಥೆಯ ಐಷಾರಾಮಕ್ಕೆ ಓದುತ್ತಾರೇ ವಿನಾ ಅದರಲ್ಲಿ ಜಿಗುಟುತನವಿಲ್ಲ. ಸಾಹಿತ್ಯದ ರಾಜದಂಡ, ವಿಜ್ಞಾನ—ರಾಜಕಾರಣಗಳ ಕೈ ಸೇರಿದೆ. ಸಾಹಿತ್ಯಕೃಷಿ ಮೊತ್ತದಲ್ಲಿ ಗಮನೀಯವಾಗಿ ಕಂಡರೂ, ಚೈತನ್ಯದಲ್ಲಿ ಉತ್ಸಾಹದಾಯಕವಾಗಿ ಕಾಣುವುದಿಲ್ಲ.

ಸಾಹಿತ್ಯಾಭ್ಯಾಸದ ಈ ನಿರುತ್ಸಾಹಕ್ಕೆ ಕಾರಣವೇನು? ಇಂದಿನ ಸಾಮಾನ್ಯ ಓದುಗರು-ವಿದ್ಯಾರ್ಥಿಗಳು ಸಾಹಿತ್ಯದ ಕಡೆಗೆ ಅಷ್ಟಾಗಿ ಯಾಕೆ ಮನಸ್ಸನ್ನು ಹಾಕುತ್ತಿಲ್ಲ?

ಕಾರಣ ಸ್ಪಷ್ಟವೇ ಇದೆ: ಇಂದಿನ ಆರ್ಥಿಕ ಅನಿಶ್ಚಿತತೆ, ರಾಜಕೀಯ ತಳಮಳ, ವೈಜ್ಞಾನಿಕ ಮೇಲ್ಮೆ—ಇವೆಲ್ಲ ಜನ ಸಾಹಿತ್ಯಗಂಗೆಯ ಅಮೃತ ಪುಲಿನದಿಂದ ಕೆಲಸಾರುವಂತೆ ಮಾಡಿವೆ. ದಿನ ದಿನಕ್ಕೆ ಏರುತ್ತಿರುವ ಬೆಲೆಗಳು, ಜೀವನಾವಶ್ಯಕ ವಸ್ತುಗಳ ತುಟಾಗ್ರತೆ, ಕಳ್ಳಪೇಟೆ, ಲಂಚ-ರುಸುವತ್ತು, ವ್ಯಕ್ತಿಯಲ್ಲಿ ಸಾಕಷ್ಟು ಪರಿಶ್ರಮವಿದ್ದೂ ತತ್ಸಮಾನವಾಗಿರದ ಆರ್ಥಿಕ ಶಕ್ತಿ, ಇಂದಿನ

ಯುವಕನನ್ನು ದಿಙ್ಮೂಢನನ್ನಾಗಿ ಮಾಡಿವೆ. ತನ್ನಲ್ಲಿ ಸಾಕಷ್ಟು ಬುದ್ಧಿಶಕ್ತಿಯಿದ್ದು, ಪ್ರಾಮಾಣಿಕತೆಯಿದ್ದು, ಪರಿಶ್ರಮಶಕ್ತಿಯಿದ್ದು ಆಧುನಿಕ ಭಾರತೀಯ ಯುವಕನಿಗೆ ಜೀವನದಲ್ಲಿ ಸಿಗಬೇಕಾದ ಸ್ಥಾನ-ಮಾನ ಹೋಗಲಿ-ನೆಲೆಯೂ ಕೂಡ ಸಿಗದಿರುವ ಪರಿಸ್ಥಿತಿ ಅವನ ಕಣ್ಣು ಕತ್ತಲೆಗಡಿಸುವಂತೆ ಮಾಡಿವೆ. ಸಾಹಿತ್ಯದಲ್ಲಿ ತಾನು ಓದಿದ್ದೇನು? ಜೀವನದಲ್ಲಿ ತಾನು ಕಂಡದ್ದೇನು? Poetic Justice ಎನ್ನುವುದು ಜೀವನದ Justice ಆಗಲಾರದೇ? ಹಾಗಿದ್ದರೆ, "ಏಳು ಸಾಯಣ, ಕಟ್ಟು ಗ್ರಂಥವ"—ಆದರೆ, ಎಲ್ಲಿಗೆ? ಅದು ಅವನಿಗೇ ಗೊತ್ತಿಲ್ಲ. ಒಟ್ಟು ಈ ಹಳೆಯ ಕಾಲದ ರಾಜಮಹಾರಾಜರ ಐಷಾರಾಮದ ವಸ್ತುವಿನಂತೆ ಕಾಣುತ್ತಿರುವ ಈ ಸಾಹಿತ್ಯಾದಿಗಳ ಸಂಪರ್ಕ ಬೇಡ. ಸಾಹಿತ್ಯೋಪಾಸಕರೆಷ್ಟುಜನ ಇಂದು ಕೇವಲ ಸಾಹಿತ್ಯೋಪಾಸನೆಯಿಂದ ಬದುಕುವಂತೆ ನಮ್ಮ ನಾಡಿನಲ್ಲಿದೆ? Moliere ನಿಂದ ಮುದ್ದಣನ ವರೆಗೆ ಎಲ್ಲರೂ ಸಪ್ತಾಕ್ಷರೀ ಮಂತ್ರಪಾಠಕರೇ. ಜ್ಯೇಷ್ಠಾದೇವಿಯ ಜ್ಯೇಷ್ಠ ಪುತ್ರರೇ. ಅಂದಮೇಲೆ, ಈ ಸಾಹಿತ್ಯ-ಹೊಟ್ಟೆಗೆ ಹಿಟ್ಟನ್ನು ಕೊಡದ ಈ ಸಾಹಿತ್ಯ-ಯಾರ ಸುಖಕ್ಕೆ? ಮಾಘ ಕವಿಯು ಈ ಮೊದಲೇ ಹೇಳಿದ ಹಾಗೆ,

ಬುಭುಕ್ಷಿತೈಃ ವ್ಯಾಕರಣಂ ನ ಭುಜ್ಯತೇ
ಪಿಪಾಸಿತೈಃ ಕಾವ್ಯರಸೋ ನ ಪೀಯತೇ।
ನ ವಿದ್ಯಯಾ ಕೇನಚಿದ್ ಧೃತಂ ಕುಲಂ

ಆದ್ದರಿಂದ, ಸುವರ್ಣಮೇವ ಆರ್ಜಯ—ನಿಷ್ಫಲಾಃ ಕಲಾಃ—ಸುವರ್ಣಮೇವ ಆರ್ಜಯ. ಹಣಗಳಿಸು—ಇನ್ನೂ ಹಣಗಳಿಸು—ಮಾನಪ್ರತಿಷ್ಠೆಗಳು ಬೇಕಾಗಿದ್ದರೆ "ಸರಸ್ವತಿಯನಬಲೆಯಗೋಣ್ಮುರಿಕೊಂಡು" ಕೇವಲ ದುಡ್ಡಿನ ಆರಾಧನೆಯನ್ನು ಮಾಡು, ಸರ್ವೇಗುಣಾಃ ಕಾಂಚನಮಾಶ್ರಯಂತಿ| Mammon worship. ಹಣದ ಸಿಹಿಗೆ ಸಾಲಿಟ್ಟಿದೆ ಇಂದಿನ ಭಗ್ನಮನೋರಥ ಯುವಕ ಪಿಪೀಲಿಕಾಸಂತಾನ.

ಅಲ್ಲದೆ, ಅಭ್ಯಾಸವೃತ್ತಿಯಲ್ಲಿಯೂ ಈ ಹಣದ ಸಾಧನ ವಿಜ್ಞಾನವಾಗಿದೆ. ಇಂದಿನದು ವಿಜ್ಞಾನ ಯುಗ. ಅಣುಬಾಂಬಿನ ಇಂದಿನ ಯುಗದಲ್ಲಿ ವಿಜ್ಞಾನ ಸರಕುಗಳನ್ನು ಕೊಡಬಲ್ಲುದು; ಸಾಹಿತ್ಯದಿಂದೇನು? ಅಲ್ಲದೆ, ಹೊಸ ಪ್ರಜಾಪ್ರಭುತ್ವದ ಕಲ್ಪನೆಯಲ್ಲಿ ದಿನದಿನಕ್ಕೆ ಹೆಚ್ಚು ಹೆಚ್ಚು ಜನ ಶಾಲೆ ಕಾಲೇಜುಗಳನ್ನು ಸೇರುತ್ತಿದ್ದಾರೆ. ಸಾಹಿತ್ಯ ಪರಂಪರೆಯ ಸಂಪರ್ಕ ಇಲ್ಲವೆ ಆಸ್ಥೆ ಇಲ್ಲದ ಜನವೂ ಸಾಹಿತ್ಯಪ್ರಗತಿಗೆ ಪ್ರತಿಬಂಧಕವಾಗುತ್ತಿಲ್ಲವೆ? ಇದು ಬರಿಯ ಭಾರತ ಇಲ್ಲವೆ ಕರ್ನಾಟಕದ ಮಾತು ಮಾತ್ರವಲ್ಲ; ಇಡೀ ಪ್ರಪಂಚದ ಮಾತೇ ಇದ್ದಹಾಗೆ ಕಾಣುತ್ತದೆ. ಇಂಗ್ಲಂಡದಲ್ಲಿಯೂ ಇದೇ ಪರಿಸ್ಥಿತಿ ಇಂದು ಇದ್ದಬಗ್ಗೆ ಪ್ರೊಫೆಸರ್ ಕಿಂಗ್ಸ್ಲೆ ಎಮಿಸ್ ಅವರು ಹೀಗೆ ಹೇಳುತ್ತಾರೆ:

"The demand for expansion is frequently coupled with the demand for more Science, and therefore less arts in the University. We live in a scientific age, you see. It might be thought that this is just when you want more arts."

*[Kingsley Amis in 'Encounter' July 1960]*

ಅಲ್ಲದೆ, ವಿಜ್ಞಾನ ಮತ್ತು ಸಾಹಿತ್ಯಗಳು ಯಮಳರಾಗಿದ್ದರೂ, ಗಂಡಭೇರುಂಡದ ಎರಡು ಮುಖಗಳಾಗಿದ್ದರೂ, ಅವು ಜನ್ಮತಾಳಿದ ನಕ್ಷತ್ರ ಸಮಯ ಬೇರೆ ಬೇರೆ. ಒಂದರ ಉಗಮ ಮೋಡಗಳು ಮುದ್ದಿಡುವ ಉನ್ನತೋನ್ನತ ಹಿಮವತ್ಪರ್ವತದ ಮಡಿಲಲ್ಲಿ ಪವಡಿಸಿದ ಮಾನಸ ಗಂಗೋತ್ರಿಯಲ್ಲಿ-ಮತ್ತೊಂದರದು ವ್ಯಾವಹಾರಿಕ ಜೀವನದ ಕಪ್ಪತಗುಡ್ಡದಲ್ಲಿ. ಒಂದರ ಬೆಳಕು ಸಾವಿರಾರು ಮೈಲು ದೂರನಿಂತು ಕಣ್‌ಚಿವುಟ ಕರೆಯುತ್ತಿರುವ ನಕ್ಷತ್ರಪುಂಜದಿಂದ; ಇನ್ನೊಂದರದು Danger 440 volts ಭಯಂಕರವಾದ ವಿದ್ಯುಚ್ಛಕ್ತಿಯಿಂದ. ಒಂದರ ದೃಷ್ಟಿ ಸಮಷ್ಟಿ; ಇನ್ನೊಂದರದು ವ್ಯಷ್ಟಿ. ಒಂದು ಸಮೀಕರಣ ಪ್ರಧಾನವಾದುದು; ಇನ್ನೊಂದು ವಿಶ್ಲೇಷಣ ಪ್ರಧಾನವಾದುದು. ಒಂದು magic ಮಾಯೆ-ಮೋಡಿ; ಇನ್ನೊಂದು logic ತರ್ಕ-ಪ್ರಯೋಗ-ಭೂಸಿದ್ಧಾಂತ. ಒಂದು bewitching; ಇನ್ನೊಂದು switching. ಈ ದೃಷ್ಟಿಭೇದದಿಂದ ಒಂದೇ ವ್ಯಕ್ತಿ ಈ ಎರಡೂ ಗುಣಗಳನ್ನು ಸಮನ್ವಯಿಸಿಕೊಳ್ಳುವುದೂ ಕಠಿಣವಾಗುತ್ತದೆ.

ಇಪ್ಪತ್ತನೆಯ ಶತಮಾನದ ಕಾವ್ಯಾಭ್ಯಾಸದ ಇಂಥ ಹ್ರಾಸಪರಿಸ್ಥಿತಿಯಲ್ಲಿ ಕಾವ್ಯ ಸಾಯುಹತ್ತಿದೆಯೇ? ಸಾಯಬೇಕೇ? ಎಂಬುದು ಇಂದಿನ ಪ್ರಶ್ನೆಯಾಗಿದೆ. ವಿಜ್ಞಾನದ ಇಂದಿನ ಯುಗದಲ್ಲಿ ಕಾವ್ಯ ಸತ್ತು, ಮನುಷ್ಯ ಬದುಕಿಯಾನೆ?

ಇದು ಕೇವಲ ನಮ್ಮ ಕನ್ನಡ ಸಾಹಿತ್ಯದ ಪ್ರಶ್ನೆಯಲ್ಲ; ಭಾರತೀಯ ಸಾಹಿತ್ಯದ ಪ್ರಶ್ನೆಯಲ್ಲ; ಜಗತ್ತಿನ ಸಾಹಿತ್ಯಜ್ಞರೆಲ್ಲ ಇಂದು ಎದುರಿಸುತ್ತಿರುವ ಸಮಸ್ಯೆ ಇದು. Cecil Day Lewis ಅವರು ಹೇಳಿದ ಹಾಗೆ—

"Poetry was born from magic: it grew up with religion: it lived through the age of reason: is it to die in the century of propaganda? Not death, perhaps, but a self defensive cataleptic trance. For what hope has it of making heard in such a pandemonium of slogans, national anthems, headlines, straight talks, loud speakers, manifestos, monkey business, marlhouse gossip and high explosive ideals? Poetry is based on the principle of free individual interpretation; you must create the meaning of each poem out of your private experience. But, life for the average child of the twentieth century becomes an endless series of extension lectures?"

*[Cecil Day Lewis "A hope for Poetry" 1947]*

ಅಷ್ಟೇ ಅಲ್ಲ, ಅವರು ಒಂದು ಹೆಜ್ಜೆ ಮುಂದು ಹೋಗಿ, "Magic is the personal interpretation of the Universe; science, the impersonal rationalisation. So, it would seem, that in a 'scientific' age the flower of poetry must wither." ಮಾತು ಬಹಳ ದೂರದವರೆಗೆ ಹೋಯಿತು. Science ದಿಂದ poetry wither ಆಗಬೇಕಾಗಿಲ್ಲ. ಬೇಕಾದರೆ "science poetry" ಸಿದ್ಧವಾದೀತು.

ಜೀವನವನ್ನೇ ಕಾವ್ಯದ ಕಣ್ಣಿನಿಂದ ನೋಡಿದ ಕಾಲವೊಂದಿತ್ತು. ಜೀವನವೇ ಕಾವ್ಯವೂ ಆದ ಕಾಲವೇನೋ! ಮನುಷ್ಯನ ಮಾತಿನಲ್ಲಿ,-ಭಾವನೆಯಲ್ಲಿ,-ಎನಿಸಿಕೆಯಲ್ಲಿ-ಈ ಕಾವ್ಯ ಸೇರಿ ಜೀವನಕ್ಕೊಂದು ಸೊಬಗನ್ನೂ ಮೋಡಿಯನ್ನೂ ಒದಗಿಸಿತ್ತು. ಪ್ರತಿದಿನ ಸೂರ್ಯ ಹುಟ್ಟಿದ, ಮುಳುಗಿದ. ತಾಯ ಮಡಿಲನ್ನು ಸೇರಿದ. ಕತ್ತಲೆ ಕವಿಯುತ್ತಿತ್ತು, ಬೆಳಕು ಮೂಡುತ್ತಿತ್ತು. ವೇಳೆ ಹಾವು ಏರಿದ ಹಾಗೆ ಏರುತ್ತಿತ್ತು. ಅನ್ನ ದೇವರಾಗಿತ್ತು. ಅನ್ನ ದೇವರ ಮುಂದೆ ಇನ್ನು ದೇವರಿರಲಿಲ್ಲ. ಭಗವದ್ಗೀತೆ ಸಹಿತ-ಅನ್ನ ಚಕ್ರದ ವರ್ಣನೆ ಕೊಟ್ಟಿತು:

ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ॥

ಅದರ ಪಚನವಾಗುವುದು "ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ।" ಇಂದು ನಮ್ಮ ಹೊಟ್ಟೆಯಲ್ಲಿ ಅನ್ನ ಸೇರುವುದು ದೇವರಾಗಿ ಅಲ್ಲ; ಅನ್ನ ದೇವರಲ್ಲ; ಅಷ್ಟು calories of food. ಅನ್ನ ದೈವತ್ವ ಕಳೆದುಕೊಂಡು calories ಗೆ ಇಳಿದಾಗ, ಕಾವ್ಯ ತನ್ನ ಸಿಂಹಾಸನವನ್ನು ಬಿಟ್ಟು ವಿಜ್ಞಾನಕ್ಕೆ ಎಡೆಮಾಡಿಕೊಟ್ಟಿತು.

ಅಷ್ಟೇ ಅಲ್ಲ; ಇಂದಿನದು ವೇಗದ ಯುಗ. ರಭಸ, ಗದ್ದಲ, ಕೂಗು, ಕಿರುಚು, ಧೂಳು, ನೂಕು-ನುಗ್ಗಲು. ಯಾರಿಗೂ ಪುರಸತ್ತಿಲ್ಲ. ಎಲ್ಲರೂ ನುಗ್ಗುವವರೇ. ಯಾಕೆ? ಎಲ್ಲಿ? ಏನು?-ಪ್ರಶ್ನೆ ಸಹ ಕೇಳಲು ಪುರಸತ್ತಿಲ್ಲ. ಇಂದಿನ ಜೀವನವೆಂದರೆ ಪ್ರತಿ ದಿನದ ಜಾತ್ರೆ. ಜಾತ್ರೆಯಲ್ಲಿದ್ದಷ್ಟೇ ಗದ್ದಲ; ಅಷ್ಟೇ ಗಡಿಬಿಡಿಯ ಭಾವನೆ. ಈ ನೂಕು ನುಗ್ಗುಲಿನಲ್ಲಿ ಶರಟು ಹರಿದರೆ, ಹರಿದೀತು; ಕೋಟು ಕತ್ತರಿಸಿದರೆ ಕತ್ತರಿಸೀತು; ಒಬ್ಬರ ಕಾಲು ಮತ್ತೊಬ್ಬರು ತುಳಿದರೂ ತುಳಿದಾರು. ಇದೆಲ್ಲಕ್ಕೂ ಕಾರಣವೇ ಗೊತ್ತಿಲ್ಲ. ಎಲ್ಲವೂ ದಣಿವಿಲ್ಲದ ಓಟ. ಪ್ರಕೃತಿ, ನೆರೆ-ಹೊರೆ, ಜನಜೀವನ, ಮಾನವ್ಯ, ಸೌಂದರ್ಯ—ಯಾವುದನ್ನೂ ನಿಂತು . . . ನೋಡಿ . . . ಕಣ್-ತುಂಬಿ . . . ಭಲಾ . . . ಎಂದು ಮನ ತುಂಬಿಕೊಳ್ಳುವ ಪುರಸತ್ತು ಯಾರಿಗಿದೆ? ಹೋಗಬೇಕು—ಮುಂದು ಹೋಗಬೇಕು—ಓಡಿ ಹೋಗಬೇಕು. ಯಾವ ವಿನಾಶದತ್ತಲೋ! Blood pressure ಯುಗ. "No time to stand and stare." Mathew Arnold ಅವರು ತಮ್ಮ Scholar Gipsy ಎಂಬ ಸುಂದರವಾದ ಕವಿತೆಯಲ್ಲಿ ಹೇಳಿದಂತೆ:

"O born in days when wits were
fresh and clear,
And life ran gaily as the
sparkling Thames;
Before this strange disease of
modern life,
With its sick hurry, its devided
aims,
Its heads overtaxed, its palsied
hearts was rife,—
Fly hence, our contact fear—"

J. C. Powys ಅವರು ತಮ್ಮ "Meaning of Culture" ಎಂಬ ಪುಸ್ತಕದಲ್ಲಿ ಈ ಗದ್ದಲ-ಈ ಗಡಬಡಿ-ಈ ಕಳವಳ ಸಂಸ್ಕೃತಿಗೆ ವಿಘಾತವೆಂದು ಹೇಳುತ್ತಾರೆ.

"How true it is that the greatest of all obstacles to any deep . . . sensitive culture is the inability to obtain leisure, the inability to be alone . . . of all the practical problems connected with the pilgrimage of culture, this is the most difficult."

*[Meaning of Culture, 1936]*

ಸಂಸ್ಕೃತಿ ಏಕೆ? ಧರ್ಮವೆಂದರೂ ಇದೇ ಎಂದು Professor Whitehead ಹೇಳುತ್ತಾರೆ—"Religion is what a man does with his own solitude."

ಅದೇನೇ ಇದ್ದರೂ ಆರ್ಥಿಕ ಅಸ್ಥಿರತೆ, ರಾಜಕಾರಣದ ಥಳಕು, ವಿಜ್ಞಾನದ ಹೊಸಸೃಷ್ಟಿ, ಈ ಗೊಂದಲದ ಧೂಳು-ಈ ಉಪಾಧಿಗಳಲ್ಲಿ ಸಾಹಿತ್ಯ ಬದುಕಬೇಕೇ? ಬದುಕೀತೇ? ಎಂಬ ಸಂಶಯ ನಿಜವಾದುದು. ಆದರೆ, ಒಂದು ಮಾತು ಮಾತ್ರ ಸತ್ಯ. ಎಲ್ಲಿಯವರೆಗೆ ಮನುಷ್ಯ ಆದರ್ಶಜೀವಿಯಾಗಿದ್ದಾನೋ, ಅಲ್ಲಿಯವರೆಗೆ ಸಾಹಿತ್ಯ ಸಾಯದು; ಸಾಯಬಾರದು. ಮಾನವನ ಭಾವನೆಗೆ ಪುಷ್ಟಿಯನ್ನು ಕೊಟ್ಟು ಅವನನ್ನು ಸಹೃದಯನನ್ನಾಗಿ ಮಾಡುವುದು ಸಾಹಿತ್ಯ. ಸ್ಥಿರಭೂಮಿಯಲ್ಲಿ ನೆಲಸಿ ಮುಗಿಲ ಮಲ್ಲಿಗೆಗೆ ಕೈಯೆತ್ತುವುದು ಸಾಹಿತ್ಯ. ಸಾಹಿತ್ಯ ಸತ್ತರೆ, ಸಂಸ್ಕೃತಿ ಸತ್ತೀತು. W. H. Auden ತನ್ನ ಕಾವ್ಯದಲ್ಲಿ ಹೇಳಿದಹಾಗೆ,

"And in cold Europe, in the middle of Autum destruction,
Christopher stood, his face grown lined with wincing, infront of ignorance,
"Tell the English" he shivered,
"MAN IS SPIRIT"

Man is spirit—ಮನುಷ್ಯ ಭಾವಜೀವಿಯಾಗಿದ್ದಾನೆ. ಬರಿಯ calory eater ಅಲ್ಲ.

ಎಂದು ತಿಳಿದೇ ಸಾಹಿತ್ಯ—"ಪಾಪಮಿದು, ಪುಣ್ಯಮಿದು, ಹಿತರೂಪಮಿದು ಅಹಿತಪ್ರಕಾರಮಿದು" ಎಂದು ಉಪದೇಶ ಮಾಡುತ್ತ ಬಂದಿತು. "ಬಾಳಬಟ್ಟೆಯ ಪರಮಾಗಮವಾಯಿತು." ನಾಗಚಂದ್ರನಂಥ ಕವಿಗಳು "ಉಪದೇಶಂಗೆಯ್ದು ಕಾವ್ಯಚ್ಛಲದಿಂ ಅಖಿಲಧರ್ಮಂಗಳಂ ಲೋಕಮಂ ಧರ್ಮಪಥ ಪ್ರಸ್ಥಾನದೋಳ್ ಯೋಜಿಸಿ, ಪರಮಪುರಾಣಂಗಳಂ ಪೇಳ್ದುಕಲ್ಪಾಂತಪರೀತ ಖ್ಯಾತಿಯಂತಾಳ್ದಿದ ಪರಮಕವಿಜ್ಯೇಷ್ಠರಾದರ್ ತದೀಯಾಂಘ್ರಿ ಪಯೋಜಂಗಳ್ ಮದೀಯಾಶಯಮಣಿ ಭವನಕ್ಕೆಕ್ಕೆ ಪುಷ್ಪೋಪಹಾರಂ"—ಎಂದು ಪ್ರಾರ್ಥಿಸಿದರು. ಉಪದೇಶ ಮಾಡಲಿ ಬಿಡಲಿ, ಸಾಹಿತ್ಯ ಪ್ರತಿ ವ್ಯಕ್ತಿಯ ಪ್ರಜ್ಞೆಯನ್ನು ಹರಿತವನ್ನಾಗಿಸಿತು. ಅವನು ಹೆಚ್ಚು ಪರಿಪೂರ್ಣನಾಗಿ ಬಾಳುವ ಹಾಗೆ ಮಾಡಿತು. Ernest Raymond ಹೇಳಿದ ಹಾಗೆ "Literature . . . makes us not only feel about more things, but feel more about them. It heightens our awareness."

*[Ernest Raymond 'Through Literature to Life.' 1937]*

Hyman Levy ಮತ್ತು Helen Spalding ಅವರು ಹೇಳಿದ ಹಾಗೆ—". . . the function of the writer—and indeed of his fellow artists—is to heighten the awareness of his contemporaries about themselves and the world in which they live."

*["Literature for an age of Science" 1952]*

ಈ ದೃಷ್ಟಿಯಿಂದ ಈ ವರುಷದ ನಮ್ಮ ಗದ್ಯಸಾಹಿತ್ಯದ ಬೆಳವಣಿಗೆಯನ್ನು ನೋಡಿದರೆ ನಾವು ಬಹುಮಟ್ಟಿಗೆ ಹೆಮ್ಮೆಪಡುವಂತಿದೆ. ಗದ್ಯದ ಪ್ರಕಾರಗಳೇ ಆದ ನಾಟಕ ಮತ್ತು ಪತ್ರಿಕಾಸಾಹಿತ್ಯದ ಬಗ್ಗೆ ಅನ್ಯತ್ರ ಸಮಾಲೋಚನೆ ನಡೆಯಲಿದೆ. ಸದ್ಯ ಈ ಎರಡು ರೂಪಗಳನ್ನುಳಿದು, ಗದ್ಯದ ಇತರ ಪ್ರಕಾರಗಳಾದ ಕಾದಂಬರಿ, ಸಣ್ಣಕಥೆ, ನಿಬಂಧ-ಪ್ರಬಂಧ, ದಿನಚರಿ, ವಿಮರ್ಶಾ ಸಾಹಿತ್ಯ, ಶಾಸ್ತ್ರ ಸಾಹಿತ್ಯ, ಪ್ರವಾಸ ಸಾಹಿತ್ಯ, ಚರಿತ್ರೆ, ವ್ಯಕ್ತಿಚಿತ್ರ—ಮೊದಲಾದ ಸಾಹಿತ್ಯ ರೂಪಗಳನ್ನು ನೋಡಿದರೆ, ಕನ್ನಡ ಗದ್ಯ ಸಾಹಿತ್ಯದ ಕೃಷಿವೈವಿಧ್ಯದ ಅರಿವಾಗುತ್ತದೆ. ಅದರಲ್ಲಿಯೂ ಕಾದಂಬರೀ ಪ್ರಪಂಚದಲ್ಲಿ, ಹಳೆಯ ತಲೆಮಾರಿನವರಾದ ಕೆರೂರ ವಾಸುದೇವಾಚಾರ್ಯರು, ಎಂ. ಎಸ್. ಪುಟ್ಟಣ್ಣನವರು, ಬಿ. ವೆಂಕಟಾಚಾರ್ಯರು ಗಳಗನಾಥರು, ಗುಳವಾಡಿಯವರು ಮೊದಲಾದ ಹಿರಿಯರ ತಲೆಗಳಿಗೆ-ಸಮವಾಗಿ, ಹೊಯ್‌ಕೈಯಾಗಿ, ನವೀನರ ಕಾದಂಬರೀಸೃಷ್ಟಿ ನಿರ್ಮಾಣಗೊಂಡಿದೆ. ಲಘುಕಥಾ ಲೇಖನದಲ್ಲಿಯೂ ಅನೇಕ ಒಳ್ಳೆಯ ಕಥೆಗಳು ಬೆಳಕಿಗೆ

ಬಂದಿವೆ. ಆದರೆ, ಲಲಿತ ಸಾಹಿತ್ಯದ ವಿಭಾಗದಲ್ಲಿ ನಿಬಂಧ ಅಥವಾ ಹರಟೆಗೆ ನಮ್ಮ ಲೇಖಕರು ಇನ್ನೂ ಅಷ್ಟಾಗಿ ಗಮನವನ್ನು ಹರಿಸಿಲ್ಲವೆಂದೇ ಹೇಳಬೇಕು. ಇಂಗ್ಲೀಷ ದಂಥ ಪಾಶ್ಚಾತ್ಯ ಸಾಹಿತ್ಯದಲ್ಲೇ personal essay ರಾಜಪೀಠದಲ್ಲಿ ವಿರಾಜಮಾನವಾಗಿದೆ. Charles Lamb, ಅವರಲ್ಲಿ "Prince among English Essayists" ಪ್ರಬಂಧಕಾರರ ರಾಜಪುತ್ರ. ಅವನ A dissertation upon Roast Pig, Old China, New Year's Eve, Dream Children ಮೊದಲಾದ ಕೃತಿಗಳು ಅನರ್ಘ್ಯ ರತ್ನ. ಅಥವಾ Hazlittನ On Gusto, The Indian Jugglers, On Going a Journey, ಮನಃಪಟಲದಿಂದ ಮಸಳಿಸವು. ಆಧುನಿಕರಲ್ಲಿ ಗಾರ್ಡಿನರ್, ಲಿಂಡ್, ಲ್ಯೂಕಸ್, ಚೆಸ್ಟರಟನ್ ಮೊದಲಾದವರು ನಮ್ಮ ಮನಸ್ಸನ್ನು ಆನಂದಸಾಗರದಲ್ಲಿ ತಣಿಸಿದ್ದಾರೆ. ಕನ್ನಡ ಪ್ರಬಂಧ ಸಾಹಿತ್ಯ ಇಂಥ ಮೇಧಾವಿಗಳ ಆಗಮನಕ್ಕಾಗಿ ಇನ್ನೂ ದಾರಿಕಾಯಬೇಕಾಗಿದೆ. ಪ್ರಬಂಧದ ಈ ಮಾತು ರಸವಿಮರ್ಶೆ, ವ್ಯಕ್ತಿಚಿತ್ರ, ಶಾಸ್ತ್ರ ಸಾಹಿತ್ಯಕ್ಕೂ ಅನ್ವಯಿಸುತ್ತದೆ. ನಮ್ಮ ಸಾಹಿತ್ಯದಲ್ಲಿ ಈ ರೂಪಗಳು ತೀವ್ರವೇ ಹುಲುಸಾಗಿಯೂ ಸತ್ವಪೂರ್ಣವಾಗಿಯೂ ಬೆಳೆಯಲೆಂದು ಹಾರೈಸುತ್ತೇನೆ—ಆದರೆ, ಈಗ ದೊರೆತಷ್ಟು ಸಾಹಿತ್ಯವೂ ಹೃದಯ-ಮೆದುಳುಗಳಿಗೆ ಬೆಳಕನ್ನಿತ್ತಿದೆ.

ಆದ್ದರಿಂದ, ಸಾಹಿತ್ಯ ಉಳಿಯಬೇಕು; ಅಖಂಡವಾಗಿ ಸಾವಿರ ವರುಷ ಕನ್ನಡ ಜನತೆಯ ಬದುಕನ್ನು ಕಂಡು, ತಿದ್ದಿ, ಔನ್ನತ್ಯವನ್ನೂ, ಪೋಷಣೆಯನ್ನೂ ಇತ್ತ ಕನ್ನಡ ಸಾಹಿತ್ಯದ ಅಭ್ಯಾಸ ಅವಿರತವಾಗಿ ಸಾಗಬೇಕು. ಸಾಹಿತ್ಯ ನಿರ್ಮಿತಿಯ ಜೊತೆಗೆ, ಸಾಹಿತ್ಯ ವಿಮರ್ಶೆಯೂ, ಜಿಜ್ಞಾಸೆಯೂ, ವಿಶ್ಲೇಷಣೆಯೂ, ರಸವಿಮರ್ಶೆಯೂ ವಿಪುಲವಾಗಿ ಬೆಳೆದುಬರಬೇಕು. ದಿವಂಗತ ಬಿ. ಎಂ. ಶ್ರೀಕಂಠಯ್ಯನವರು ಅಂದು ಹೇಳಿದ ಮಾತು ಇಂದಿಗೂ ಅಷ್ಟೇ ಸತ್ಯಪೂರ್ಣವಾಗಿದೆ. "ಬೆಳೆಯೇನೋ ಹುಲುಸಾಗಿದೆ; ಕುಯ್ಯುವವರೇ ಕಡಿಮೆ." ಕನ್ನಡ ದೀಕ್ಷಿತರು ಈ ಕೃಷಿಗೆ ಕೈಹಾಕಬೇಕು. ನಮ್ಮ ಶಾಲೆ-ಕಾಲೇಜುಗಳ ಕನ್ನಡ ಸಂಘಗಳು, ಊರಲ್ಲಿಯ ಕನ್ನಡ ಕೂಟಗಳು ಕೇವಲ ಪ್ರಾರಂಭ ಮತ್ತು ಮುಕ್ತಾಯ ಭಾಷಣಗಳಿಗೆ ಮಾತ್ರ ತೃಪ್ತರಾಗದೆ, ಕನ್ನಡದ ಆರ್ದ್ರಮದ ಅಭ್ಯಾಸಕ್ಕೆ ತೊಡಗಬೇಕು. ವೃತ್ತಪತ್ರಿಕೆಗಳ ಪುಟತುಂಬುವ ಹತ್ತು ಕಾರ್ಯಕ್ರಮಗಳನ್ನು ವರುಷವಿಡೀ ಇಟ್ಟುಕೊಳ್ಳದೆ, ಬಲ್ಲವರಿಂದ, ಪಂಡಿತರಿಂದ ವರುಷದಲ್ಲಿ ಮೂರು ಸಾಹಿತ್ಯೋಪನ್ಯಾಸಗಳನ್ನು ಮಾಡಿಸಿದರೆ, ಕನ್ನಡದ ಅಭ್ಯಾಸಕ್ಕೆ ಕಾಣಿಕೆಯಾದೀತು! ಹತ್ತಾರು ಸಮಸ್ಯೆಗಳು ಕನ್ನಡ ಅಭ್ಯಾಸಿಗಳ ದಾರಿ ಕಾಯುತ್ತಿವೆ. ಕನ್ನಡಕ್ಕೊಂದು ಚಿಕ್ಕದಾದ-ಉಪಯುಕ್ತವಾದ ನಿಘಂಟು ಬೇಕು; ಕನ್ನಡ ಅಭ್ಯಾಸಿಗಳು ಹೆಜ್ಜೆಹೆಜ್ಜೆಗೆ ಎದುರಿಸುವ ಪ್ರಶ್ನೆ-ಕನ್ನಡ ಸಾಹಿತ್ಯದಲ್ಲಿ ಕಂಡುಬರುವ ಐತಿಹಾಸಿಕ-ಪೌರಾಣಿಕ ವ್ಯಕ್ತಿಗಳು ಯಾರು ಎಂಬುದನ್ನು-ಯಯಾತಿ ಯಾರು? ಸಹಸ್ರಾರ್ಜುನ ಯಾರು? ಸಿದ್ಧನಾಗಾರ್ಜುನ ಯಾರು?- ಪುರಾಣನಾಮ ಚೂಡಾಮಣಿ ಮಾಡಿದ ಕೆಲಸವನ್ನು ಪುನಃ ಮುಂದುವರಿಸಿಕೊಂಡು ಹೋಗಬೇಕು. ಜ್ಞಾನ-ವಿಜ್ಞಾನ ಸಾಹಿತ್ಯ, ಕನ್ನಡ ಮಕ್ಕಳ ಮನಸ್ಸನ್ನು ಉದಾತ್ತೀಕರಿಸುವ ಚರಿತ್ರ ಸಾಹಿತ್ಯ, ಹುಟ್ಟಿಬರಬೇಕು. ಕನ್ನಡ ಕಾವ್ಯದಲ್ಲಿ ಕಂಡುಬರುವ ನಾದಶಕ್ತಿಯ ಬಗ್ಗೆ ಚರ್ಚೆ ನಡೆಯಬೇಕು. ಕನ್ನಡ ಭಾಷೆಗೆ (ಸಾಹಿತ್ಯಕ್ಕಲ್ಲ-ಅದೂಸಹಿತ) ವಚನಕಾರರು—ದಾಸರು ಕೊಟ್ಟ ಕಾಣಿಕೆ ಯೇನು? ನಾವು ಗುರುತಿಸಲು ಸಮರ್ಥರಾಗಬೇಕು. ಹೊಸಕನ್ನಡ ಅರುಣೋದಯ ಕಾಲದಲ್ಲಿ ಕನ್ನಡಕ್ಕಾಗಿ ದುಡಿದ ಹಿರಿಯರು ಯಾರು? ದಿವಂಗತ ಪುಟ್ಟಣ್ಣನವರು, ಬಿ. ವೆಂಕಟಾಚಾರ್ಯರು, ಗಳಗನಾಥರು, ಕೆರೂರ ವಾಸುದೇವಾಚಾರ್ಯರು, ಡೆಪ್ಯೂಟಿ ಚೆನಬಸಪ್ಪನವರು, ಶಾಂತವೀರರಾಜದೇವಕಿತ್ತೂರ, ಕಾವ್ಯಾನಂದ ಫಣೇಕರ್‌ರು, ಕನ್ನಡವಾಮನ, ಗಂಗಾಧರ ಮಡಿವಾಳೇಶ್ವರ ತೂರಮರಿ, ಚುರಮುರಿ ಶೇಷಗಿರಿರಾಯರು, ಪಂಜೆ ಮಂಗೇಶರಾಯರು, ಎಂ. ಎ. ಕಾಮತರು, ಉಲ್ಲಾಳರು, ಗುಳವಾಡಿ, ಮುದ್ದಣ, ವೆಂಕಟರಂಗೋಕಟ್ಟಿ, ರಾ. ಹ. ದೇಶಪಾಂಡೆ, Dr. Zeigler, Dr. Kittel, E. P. Rice, B. L. Rice, ಶರೀಫ್ ಸಾಹೇಬರು, ಇನ್ನೂ ಹತ್ತಾರು ಜನ ಮಾಡಿದ ಕೃಷಿಯ ಪರಿಚಯ ನಮ್ಮಗಳಿಗೆ ಅರಿವಾಗಬೇಕು.

ಸಾಹಿತ್ಯಸಮಾರೋಹದ ಶುಭಾವಸರದಲ್ಲಿ ನಾವೆಲ್ಲರೂ ಹತ್ತು ಮಾತನ್ನಾಡಿದ್ದರೂ ಅದರಲ್ಲಿ ಒಂದನ್ನಾದರೂ ಮಾಡಿ ತೋರಿಸುವ ಸಾಮರ್ಥ್ಯವನ್ನು ದಯಪಾಲಿಸಲೆಂದು ಕನ್ನಡ ಶಾರದೆಗೆ ವಂದಿಸಿ, ಇಷ್ಟು ಶಾಂತವಾಗಿ ಈ ಮಾತುಗಳನ್ನು ಕೇಳಿದ ತಮ್ಮನ್ನು ಅಭಿನಂದಿಸಿ, ಪರಿಷತ್ತು ದಯಪಾಲಿಸಿದ ಈ ಗೌರವಕ್ಕಾಗಿ ಪುನಃ ಕೃತಜ್ಞತೆಗಳನ್ನರ್ಪಿಸಿ ನನ್ನ ಮಾತನ್ನು ಮುಗಿಸುತ್ತೇನೆ.

---

# ನಲವತ್ತನಾಲ್ಕನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ

## ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ಈ ಸಮ್ಮೇಳನದ ಮೂರು ದಿನಗಳ ಕಾರ್ಯಕಲಾಪ

ಪವಿತ್ರ ಕ್ಷೇತ್ರವೂ, ಪ್ರಕೃತಿ ಸೌಂದರ್ಯದ ನೆಲೆವೀಡೂ ಎನಿಸಿದ ಸಿದ್ಧಗಂಗಾ ಕ್ಷೇತ್ರದಲ್ಲಿ (ತುಮಕೂರು) ಡಿಸೆಂಬರ್ ದಿನಾಂಕ ೨೮, ೨೯ ಮತ್ತು ೩೦ ರಲ್ಲಿ ನಲವತ್ತನಾಲ್ಕನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವು ವಿಜೃಂಭಣೆಯಿಂದಲೂ, ಕಳಕಳಿಯಿಂದಲೂ ಜರುಗಿ ಯಶಸ್ವಿಯಾಯಿತು.

ಯಥಾವಿಧಿಯಾಗಿ ಸಮ್ಮೇಳನಾಧ್ಯಕ್ಷರ ಮೆರವಣಿಗೆ, ಗ್ರಂಥಪ್ರದರ್ಶನದ ಉದ್ಘಾಟನೆ (ಮಣಿಪಾಲದ ಡಾ|| ಟಿ. ಎಂ. ಎ. ಪೈ. ಅವರಿಂದ) ರಾಷ್ಟ್ರಧ್ವಜವಂದನೆ (ಶ್ರೀ ಜೆ. ಬಿ. ಮಲ್ಲಾರಾಧ್ಯರಿಂದ) ಇತ್ಯಾದಿ ಕಾರ್ಯಕ್ರಮಗಳಾದೊಡನೆ ಸಮ್ಮೇಳನವು ಉತ್ಸಾಹಭರಿತ ಸನ್ನಿವೇಶದಲ್ಲಿ ೨೮ ರಂದು ಬೆಳಗ್ಗೆ ಹತ್ತೂವರೆ ಗಂಟೆ ಸುಮಾರಿಗೆ, ಭವ್ಯವಾದ ಚಪ್ಪರದಲ್ಲಿ ಸೇರಿತು. ತುಮಕೂರು ಜಿಲ್ಲೆಯ ನಾನಾ ಕಡೆಗಳಿಂದಲೂ, ಕ್ಷೇತ್ರದ ಸುತ್ತಮುತ್ತಲಿನ ಪ್ರದೇಶಗಳಿಂದಲೂ ಅಸಂಖ್ಯಾತ ಜನ ಈಗಾಗಲೇ ಸೇರಿಬಿಟ್ಟಿದ್ದರು. ಕರ್ಣಾಟಕದಾದ್ಯಂತ ಪ್ರತಿನಿಧಿಗಳೂ, ಸಾಹಿತಿಗಳೂ, ಅಭಿಮಾನಿಗಳೂ ಅಧಿಕ ಸಂಖ್ಯೆಯಲ್ಲಿ ಬಂದಿದ್ದರು.

ಸಮ್ಮೇಳನಾಧ್ಯಕ್ಷರಾದ ಶ್ರೀ ರಂ. ಶ್ರೀ. ಮುಗಳಿಯವರನ್ನು ಸ್ವಾಗತ ಸಮಿತಿಯವರು ಮೆರವಣಿಗೆಯಲ್ಲಿ ಸಭಾಮಂಟಪಕ್ಕೆ ಕರೆದೊಯ್ದಾಗ ಸಭಿಕರು ಹರ್ಷಧ್ವನಿಗೈದರು. ಮಹಿಳೆಯರು ಅಪಾರವಾಗಿದ್ದುದು ಒಂದು ವಿಶೇಷ. ವೇದಿಕೆಯ ಮೇಲೆ ಪರಿಷತ್ತಿನ ಅಧ್ಯಕ್ಷರೂ, ಕಾರ್ಯಕಾರಿ ಸಮಿತಿ ಸದಸ್ಯರೂ, ಹಿರಿಯ ಸಾಹಿತಿಗಳೂ – ಸಮ್ಮೇಳನಾಧ್ಯಕ್ಷರು ಮತ್ತು ಸ್ವಾಗತಾಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಇವರೊಡನೆ ಮಂಡಿಸಿದ್ದರು.

ಲೋಕಸಭೆಯ ಉಪಾಧ್ಯಕ್ಷರಾದ ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರೂ, ವಿಧಾನ ಸಭಾಧ್ಯಕ್ಷ ಶ್ರೀ ಬಿ. ವಿ. ಬಾಳಿಗಾ ಅವರ ಬದಲು ವಿದ್ಯಾ ಸಚಿವ ಶ್ರೀ ಎಸ್. ಆರ್. ಕಂಠಿಯವರೂ ಆಗಮಿಸಿದ್ದುದು ಸಮ್ಮೇಳನಕ್ಕೆ ವಿಶೇಷ ಕಳೆಯನ್ನು ತಂದುಕೊಟ್ಟಿತು.

ಹೆಣ್ಣುಮಕ್ಕಳ ಗೀತೆಯೊಡನೆ ಸಮ್ಮೇಳನದ ಕಾರ್ಯಕ್ರಮವು ಆರಂಭವಾಯಿತು. ಸಮ್ಮೇಳನವನ್ನು ಉದ್ಘಾಟಿಸಲು ನಿಯೋಜಿತರಾಗಿದ್ದ ಶ್ರೀ ಬಿ. ವಿ. ಬಾಳಿಗಾ ಅವರು ಕಾರ್ಯಗೌರವದ ನಿಮಿತ್ತ ಬರಲಾಗದಿದ್ದುದರಿಂದ ವಿದ್ಯಾ ಸಚಿವ ಶ್ರೀ ಎಸ್. ಆರ್. ಕಂಠಿ ಅವರು ಉದ್ಘಾಟನಾ ಕಾರ್ಯ ನಡೆಸಿ, ಶ್ರೀ ಬಾಳಿಗಾ ಅವರ ಭಾಷಣವನ್ನೋದಿದರು. ತರುವಾಯ ನಾಲ್ಕಾರು ಮಾತುಗಳನ್ನಾಡಿ, ರಾಜ್ಯಕ್ಕೆ ಕರ್ಣಾಟಕ ಎಂಬ ಹೆಸರಿಡುವಂತೆ ಹೇಳುವ ನಿರ್ಣಯವನ್ನು ಸಮ್ಮೇಳನ ಅಂಗೀಕರಿಸಬೇಕೆಂದು ಸೂಚಿಸಿದರು.

ಸ್ವಾಗತ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ ಆರ್. ಎಸ್. ಆರಾಧ್ಯರು ಈ ಮೊದಲು ಸ್ವಾಗತ ಭಾಷಣ ಮಾಡಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರು ಬಿನ್ನಹ ಭಾಷಣ ಮಾಡಿ, ತುಮಕೂರು ಜಿಲ್ಲೆಯಲ್ಲಿ ಸಾಹಿತ್ಯ ಸಮ್ಮೇಳನ ನಡೆಸಬೇಕೆಂಬ ತಮ್ಮ ಬಹುದಿನದ ಇಚ್ಛೆ ಇಂದು ಫಲಕಾರಿಯಾಯಿತೆಂದೂ, ಇದು ಸುದಿನವೆಂದೂ ತಿಳಿಸಿ ಪರಿಷತ್ತು ಸಿದ್ಧಗೊಳಿಸಿರುವ 'ಕನ್ನಡ ನುಡಿ'ಯ ಬೆಳ್ಳಿ ಸಂಚಿಕೆಯನ್ನು ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರು ಉದ್ಘಾಟಿಸಬೇಕೆಂದು ಕೋರಿದರು. ಶ್ರೀ ಕೃಷ್ಣಮೂರ್ತಿರಾಯರು ಉದ್ಘಾಟಿಸುತ್ತಾ, ಪರಿಷತ್ತಿನ ಬಗ್ಗೆ ಕನ್ನಡಿಗರು ಹೆಚ್ಚು ಹೆಚ್ಚು ಆಸ್ಥೆ ತೋರಿಸಬೇಕೆಂದೂ, 'ಕನ್ನಡ ನುಡಿ' ಮುಂತಾದ ಪ್ರಕಟನೆಗಳಿಗೆ ಪ್ರೋತ್ಸಾಹ ನೀಡಬೇಕೆಂದೂ ಮನವಿ ಮಾಡಿದರು.

ಸಮ್ಮೇಳನದ ಅಧ್ಯಕ್ಷಸ್ಥಾನಕ್ಕೆ ಡಾ|| ಮಾಸ್ತಿ ವೆಂಕಟೇಶಯ್ಯಂಗಾರ್ಯರು ಶ್ರೀ ರಂ. ಶ್ರೀ. ಮುಗಳಿ ಅವರನ್ನು ಸೂಚಿಸುತ್ತಾ ಅವರ ಪಾಂಡಿತ್ಯ, ಪ್ರತಿಭೆ, ಸರಳ ಮನೋಭಾವ ಮುಂತಾದ ಸದ್ಗುಣಗಳನ್ನು ಪ್ರಶಂಸಿಸಿದರು.

ಶ್ರೀ ಜೆ. ಬಿ. ಮಲ್ಲಾರಾಧ್ಯರು ಡಾ|| ಮಾಸ್ತಿಯವರ ಸೂಚನೆಯನ್ನು ಅನುಮೋದಿಸಿದರು.

ಇದಕ್ಕೆ ಮುನ್ನ ಸ್ವಾಗತಾಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಶ್ರೀ ಮುಗಳಿಯವರ ಸಾಹಿತ್ಯ ಸೇವೆಯನ್ನು ಕೊಂಡಾಡಿ, ಸಾಹಿತಿಗಳು ಮಾನವ ಜೀವನವನ್ನು ಹೆಚ್ಚು ಸಂಪದ್ಭರಿತವಾಗಿ ಮಾಡಿ ಬೆಳಗುವರೆಂದು ಹೇಳಿದರು.

ಶ್ರೀ ಶಿವನಂಜಯ್ಯನವರು ಸಮ್ಮೇಳನವು ಯಶಸ್ವಿಯಾಗಲೆಂದು ಹಾರೈಸಿ ಅನೇಕ ಮಹನೀಯರಿಂದ ಬಂದ ಸಂದೇಶಗಳನ್ನು ಓದಿದರು.

ತರುವಾಯ ಅಧ್ಯಕ್ಷ ಶ್ರೀ ರಂ. ಶ್ರೀ. ಮುಗಳಿಯವರು ತಮ್ಮ ದೀರ್ಘವಾದ, ಸ್ಫೂರ್ತಿಯುತವಾದ ಭಾಷಣ ಮಾಡಿದರು. ವಂದನಾರ್ಪಣೆ, ರಾಷ್ಟ್ರಗೀತೆ ಮುಂತಾದ ಕಾರ್ಯಕಲಾಪದೊಡನೆ ಪ್ರಾತಃಕಾಲದ ಕಾರ್ಯಕ್ರಮವು ಕೊನೆಗೊಂಡಿತು. (ಅಧ್ಯಕ್ಷರ ಭಾಷಣವನ್ನು ಪರಿಷತ್ಪತ್ರಿಕೆಯಲ್ಲಿ ಪೂರ್ತಿ ಪ್ರಕಟಿಸಲಾಗುವುದು)

## ಮಹಿಳಾ ಗೋಷ್ಠಿ

ಅದೇ ದಿವಸ ಮಧ್ಯಾಹ್ನ ಮಹಿಳಾ ಗೋಷ್ಠಿ ನಡೆಯಿತು. ಲೋಕಸಭೆಯ ಸದಸ್ಯರಾದ ಡಾ|| ಸರೋಜನಿ ಮಹಿಷಿ ಅವರು ಅಧ್ಯಕ್ಷತೆ ವಹಿಸಿದ್ದರು. ಸಮಾಜ ಕಲ್ಯಾಣ ಸಚಿವೆ ಶ್ರೀಮತಿ ಯಶೋಧರ ದಾಸಪ್ಪ ಅವರು ಗೋಷ್ಠಿಯ ಉದ್ಘಾಟನೆ ಮಾಡಿದರು. ಶ್ರೀಮತಿ ಸುಲೋಚನಾ ಆರಾಧ್ಯರು ಸ್ವಾಗತಭಾಷಣ ಮಾಡಿದರು. ಬೆಂಗಳೂರು ಕಾರ್ಪೊರೇಷನ್ ಡೆಪ್ಯುಟಿ ಮೇಯರ್ ಶ್ರೀಮತಿ ಪಿ. ಆರ್. ಜಯಲಕ್ಷ್ಮಮ್ಮ, ಶ್ರೀಮತಿ ಮಹಂತಮ್ಮ, ಶ್ರೀಮತಿ ಸುಜಯ ಮಹಲಿಂಗಯ್ಯ, ಶ್ರೀಮತಿ ಗುರುದೇವಿ ಹಿರೇಮಠ ಮತ್ತು ಕುಮಾರಿ ವಿಮಲ ಮುಂತಾದವರು ಭಾಷಣ ಮಾಡಿದರು. ಈ ಗೋಷ್ಠಿಯ ಕಾರ್ಯಕಲಾಪಗಳನ್ನು ವೀಕ್ಷಿಸಲು ಅಸಂಖ್ಯಾತ ಮಹಿಳೆಯರು ಸೇರಿದ್ದರು.

## ಸಾಹಿತ್ಯ ಗೋಷ್ಠಿ

ದಿನಾಂಕ ೨೯-೧೨-೬೩ರ ಪ್ರಾತಃಕಾಲ ಸಾಹಿತ್ಯ ಗೋಷ್ಠಿಯು ಏರ್ಪಾಟಾಗಿತ್ತು. ಧಾರವಾಡದ ಪ್ರೊ|| ರಾ. ಯ. ಧಾರವಾಡಕರ್ ಅವರು ಅಧ್ಯಕ್ಷತೆ ವಹಿಸಿದ್ದರು. ಮೈಸೂರು ವಿಶ್ವವಿದ್ಯಾಲಯದ ಮಾನಸಗಂಗೋತ್ರಿಯ ಕನ್ನಡ ಪ್ರಾಧ್ಯಾಪಕರಾದ ಶ್ರೀ ದೇ. ಜವರೇಗೌಡರು, ಪ್ರಾಸ್ತಾವಿಕ ಭಾಷಣ ಮಾಡಿದರು. (ಅಧ್ಯಕ್ಷರ ಮತ್ತು ಇವರ ಭಾಷಣಗಳನ್ನು ಬೇರೊಂದೆಡೆ ಕೊಡಲಾಗಿದೆ) ತರುವಾಯ ಶ್ರೀ ಕಾ. ಸ. ಧರಣೇಂದ್ರಯ್ಯ, ಶ್ರೀ ಓ. ಎನ್. ಲಿಂಗಣ್ಣಯ್ಯ, ಬಳ್ಳಾರಿ ಬೀಚಿ, ಪ್ರೊ|| ಕೆ. ಡಿ. ಕುರ್ತಕೋಟಿ, ಪ್ರೊ|| ಜಿ. ಡಿ. ನಾಡಕರ್ಣಿ, ಶ್ರೀ ಟಿ. ವಿ. ವೆಂಕಟಾಚಲ ಶಾಸ್ತ್ರಿ, ಶ್ರೀ ಎಂ. ರಾಜೇಶ್ವರಯ್ಯ ಮುಂತಾದವರು ಭಾಷಣಗಳನ್ನು ಮಾಡಿದರು.

## ಕವಿಗೋಷ್ಠಿ

ಆ ಸಂಜೆ ಕವಿಗೋಷ್ಠಿ ನಡೆಯಿತು. ಪ್ರೊ|| ಜಿ. ಎಸ್. ಶಿವರುದ್ರಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಇದರಲ್ಲಿ ಶ್ರೀಗಳಾದ ರಂ. ಶ್ರೀ. ಮುಗಳಿ, ಬಿ. ಎಚ್. ಶ್ರೀಧರ, ಸಿದ್ದಯ್ಯ ಪುರಾಣಿಕ, ಚನ್ನವೀರ ಕಣವಿ, ಡಿ. ಆರ್. ರಾಮಯ್ಯ, ಕೆ. ಗೋಪಾಲಕೃಷ್ಣರಾವ್, ಬ. ನ. ಸುಂದರರಾವ್, ತ್ರಿವಿಕ್ರಮ, ವೈ. ಕೆ. ತಿಮ್ಮರಸಯ್ಯ, ಶಿವತೀರ್ಥನ್, ದೇವಂಗಿ ಚಂದ್ರಶೇಖರ್, ಟಿ. ಕೆ. ವಿಶ್ವನಾಥಶೆಟ್ಟಿ, ಬಿ. ವಿ. ಮುತ್ತಾಚಾರ್, ಜಿ. ಎಸ್. ಸಿದ್ಧಲಿಂಗಯ್ಯ, ಸುಧಾಕರ್, ಸಿ. ಜಿ. ಪರಮಶಿವಯ್ಯ, ಎಸ್. ದಿವಾಕರ್, ಶ್ರೀನಿವಾಸ ಉಡುಪ, ರಮಾತನಯ, ಮಹದೇವ ನಾಯಕ್, ಘನಶ್ಯಾಂ, ಬಿಸ್ರಾ, ಹರಿಕತೆ ರಾಮಣ್ಣ, ನಾರಾಯಣ ಶೆಟ್ಟಿ, ಕೆ. ಪಿ. ಶಿವಲಿಂಗಯ್ಯ ಮುಂತಾದವರು ತಂತಮ್ಮ ಕವಿತೆಗಳನ್ನು ಪಠಿಸಿದರು. ಶ್ರೀ ಪು. ತಿ. ನರಸಿಂಹಾಚಾರ್ಯರು ಈ ಗೋಷ್ಠಿಯನ್ನು ಉದ್ಘಾಟಿಸಿದರು.

## ಪತ್ರಿಕೋದ್ಯಮದ ಗೋಷ್ಠಿ

ದಿನಾಂಕ ೩೦-೧೨-೬೩ ರಂದು ಬೆಳಿಗ್ಗೆ ಪತ್ರಿಕಾ ವ್ಯವಸಾಯದ ಗೋಷ್ಠಿ ನಡೆಯಿತು. 'ಪ್ರಜಾವಾಣಿ'ಯ ಸಂಪಾದಕರಾದ ಶ್ರೀ ಟಿ. ಎಸ್. ರಾಮಚಂದ್ರರಾಯರು ಅಧ್ಯಕ್ಷತೆ ವಹಿಸಿದ್ದರು. 'ಪ್ರಪಂಚ' ಪತ್ರಿಕೆಯ ಸಂಪಾದಕ ಶ್ರೀ ಪಾಟೀಲ್ ಪುಟ್ಟಪ್ಪ, ಎಂ.ಪಿ. ಅವರು ಉದ್ಘಾಟಿಸಿದರು. ಈ ಗೋಷ್ಠಿಯಲ್ಲಿ ಪತ್ರಿಕೋದ್ಯಮದಲ್ಲಿ ನುರಿತವರಾದ ಶ್ರೀ ಎಚ್. ಆರ್. ಗುಂಡೂರಾಯರೂ, ಶ್ರೀ ಬಿ. ಎನ್. ಗುಪ್ತ ಅವರೂ, ಶ್ರೀ ಕೋ. ಚನ್ನಬಸಪ್ಪನವರೂ, ಶ್ರೀ ಎಸ್. ವಿ. ಜಯಶೀಲರಾಯರೂ, ಶ್ರೀ ಹುಚ್ಚೇಶ್ವರ ಮೇಧಿಯವರೂ ಶ್ರೀ ಹಿ. ಮ. ನಾಗಯ್ಯನವರೂ, ಶ್ರೀ ನಾಡಿಗೇರ್ ಕೃಷ್ಣರಾಯರೂ, ಕನ್ನಡ ಟೈಪ್‌ರೈಟರ್ ನಿರ್ಮಾಪಕರಾದ ಶ್ರೀ ಕೆ. ಅನಂತಸುಬ್ಬರಾಯರೂ ಭಾಷಣ ಮಾಡಿದರು.

## ನಾಟಕ ಗೋಷ್ಠಿ

ಆ ಮಧ್ಯಾಹ್ನ ಪ್ರೊ|| ಸುಂಕಾಪುರ ಅವರ ಅಧ್ಯಕ್ಷತೆಯಲ್ಲಿ ನಾಟಕ ಗೋಷ್ಠಿ ವ್ಯವಸ್ಥೆಯಾಗಿತ್ತು. ಪದ್ಮಶ್ರೀ ಸಿ. ಕೆ. ವೆಂಕಟರಾಮಯ್ಯನವರು ಉದ್ಘಾಟನಾ ಭಾಷಣ ಮಾಡಿದರು. ಶ್ರೀ ಗುಬ್ಬಿ ವೀರಣ್ಣನವರು, ಮಾಸ್ಟರ್ ಹಿರಣ್ಣಯ್ಯ, ಶ್ರೀ ಎನ್. ಕೆ. ಕುಲಕರ್ಣಿ, ಶ್ರೀಮತಿ ಬಿ. ಜಯಮ್ಮ ಮುಂತಾದವರು ನಾಟಕ ಕಲೆಯ ವಿಚಾರವಾಗಿ ಭಾಷಣ ಮಾಡಿದರು.

### ಬಹಿರಂಗಾಧಿವೇಶನ

ತರುವಾಯ ಸಾಹಿತ್ಯ ಸಮ್ಮೇಳನದ ಬಹಿರಂಗ ಅಧಿವೇಶನವು ಶ್ರೀ ರಂ. ಶ್ರೀ. ಮುಗಳಿ ಅವರ ಅಧ್ಯಕ್ಷತೆಯಲ್ಲಿ ಸೇರಿ ಹಲವಾರು ನಿರ್ಣಯಗಳನ್ನು ಅಂಗೀಕರಿಸಿತು (ಈ ನಿರ್ಣಯಗಳನ್ನು ಈ ಕೆಳಗೆ ಕೊಟ್ಟಿದೆ) ಸಿದ್ಧಗಂಗಾ ಕ್ಷೇತ್ರದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಭಾಷಣ ಮಾಡಿ, ಸಮ್ಮೇಳನದ ಕಾರ್ಯಕಲಾಪಗಳನ್ನು ವೀಕ್ಷಿಸಿದ ಅವರು ತಮ್ಮ ಅಮಿತವಾದ ಆನಂದವನ್ನು ವ್ಯಕ್ತಪಡಿಸಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರು ಸ್ವಾಗತ ಸಮಿತಿಯವರ ಅಚ್ಚುಕಟ್ಟಾದ ವ್ಯವಸ್ಥೆ, ಅವರ ಉತ್ಸಾಹ ಮತ್ತು ಶ್ರದ್ಧೆಗಾಗಿ ವಂದಿಸಿದರು.

ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರು ಸಂದೇಶ ಭಾಷಣ ಮಾಡಿ, ಕನ್ನಡಿಗರು ಹೃದಯ ವೈಶಾಲ್ಯವನ್ನು ಬೆಳೆಸಿಕೊಳ್ಳಲು ಮನವಿ ಮಾಡಿದರು.

ಅಧ್ಯಕ್ಷ ಶ್ರೀ ಮುಗಳಿಯವರು ತಮ್ಮ ಉಪಸಂಹಾರ ಭಾಷಣದಲ್ಲಿ, ಕನ್ನಡಿಗರಿಗೆ ಕನ್ನಡತನದ ಹಿರಿಮೆಯನ್ನುಳಿಸಿಕೊಳ್ಳಬೇಕೆಂದು ಕರೆಯಿತ್ತರು. ರಾಷ್ಟ್ರಗೀತೆಯೊಂದಿಗೆ ಮೂರು ದಿನದ ಕಾರ್ಯಕಲಾಪಗಳು ಮುಕ್ತಾಯಗೊಂಡವು. ಈ ಮೂರು ದಿನಗಳಲ್ಲೂ ಮನರಂಜನೆಯ ಕಾರ್ಯಕ್ರಮಗಳೇರ್ಪಾಟಾಗಿದ್ದವು.

## ನಿರ್ಣಯಗಳು

೧. ಪರಿಷತ್ತಿನ ಸದಸ್ಯರೂ ಹಿತಚಿಂತಕರೂ ಭಾಷೆ ಮತ್ತು ಸಾಹಿತ್ಯ ಸೇವಕರೂ ಆದ ಈ ಕೆಳಗೆ ಕಾಣಿಸಿರುವ ಮಹನೀಯರು ದೈವಾಧೀನರಾದುದಕ್ಕಾಗಿ ಈ ಸಮ್ಮೇಳನವು ತೀವ್ರ ದುಃಖವನ್ನು ವ್ಯಕ್ತಪಡಿಸಿ ಅವರ ಆತ್ಮಕ್ಕೆ ಶಾಂತಿಯನ್ನು ಕೋರಿ ಅವರ ಸಂಬಂಧಿಕರಿಗೆ ತನ್ನ ಅನುತಾಪವನ್ನು ಸೂಚಿಸುತ್ತದೆ.

ಸರ್ವಶ್ರೀ—

೧. ಬಿ. ಎನ್. ದಾತಾರ್ ಅವರು, ೨. ಆರ್. ಎಸ್. ಹುಕ್ಕೇರಿಕರ್ ಅವರು, ೩. ಬ್ಯಾರಿಸ್ಟರ್ ಎಂ. ಎಸ್. ಸರ್ದಾರ್ ಅವರು, ೪. ಗೋವಿಂದ ಪೈ ಅವರು, ೫. ಉತ್ತಂಗಿ ಚನ್ನಪ್ಪನವರು, ೬. ದೇವುಡು ನರಸಿಂಹ ಶಾಸ್ತ್ರಿಗಳು, ೭. ದ. ಬಾ. ಕುಲಕರ್ಣಿಯವರು, ೮. ಶ್ರೀಮತಿ ಅನಸೂಯ ಅವರು (ತ್ರಿವೇಣಿ), ೯. ಎ. ಸೀತಾರಾಮ್ ಅವರು (ಆನಂದ), ೧೦. ಟಿ. ಎ. ಸಾಲತೊರೆಯವರು, ೧೧. ಗಂಜಾಂ ತಿಮ್ಮಪ್ಪಯ್ಯನವರು, ೧೨. ಟಿ. ಎಚ್. ಎಂ. ಸದಾಶಿವಯ್ಯನವರು, ೧೩. ಟಿ. ಎಂ. ಹೆಗ್ಗಡೆ ಮೋಟನಸರ ಅವರು, ೧೪. ತುಕಾರಾಮ ರತ್ನಪ್ಪ ಕೋಟಿ, ಬನಹಟ್ಟಿ ಅವರು, ೧೫. ಕೆ. ಶೇಷಗಿರಿಯಾಚಾರ್ ಅವರು.

—ಸಮ್ಮೇಳನಾಧ್ಯಕ್ಷರಿಂದ

೨. ನಮ್ಮ ರಾಜ್ಯಕ್ಕೆ ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ಕಾರಣಗಳಿಂದ ಕರ್ಣಾಟಕ ಎಂದೇ ಹೆಸರಿರಬೇಕೆಂದು ಈ ಸಮ್ಮೇಳನ ಹಿಂದಿನಿಂದ ಹೇಳಿಕೊಂಡು ಬಂದಿರುವಂತೆ ಮತ್ತೊಮ್ಮೆ ಈ ಸಮ್ಮೇಳನವು ಒತ್ತಾಯಪಡಿಸುತ್ತದೆ.

ಸೂಚಕರು: ಶ್ರೀ ಸಿ. ಆರ್. ಬಸಪ್ಪ
ಅನುಮೋದಕರು: ಶ್ರೀಮತಿ ಸರೋಜಿನಿ ಮಹಿಷಿ

೩. ದಿನೇ ದಿನೇ ಹೆಚ್ಚಿನ ಪ್ರಮಾಣದಲ್ಲಿ ಪ್ರಕಟವಾಗುತ್ತಿರುವ ಮತ್ತು ಸಮಾಜದ ಮೇಲೆ ದುಷ್ಪರಿಣಾಮವನ್ನು ಉಂಟುಮಾಡುತ್ತಿರುವ ಅಯೋಗ್ಯ ಮತ್ತು ಅಶ್ಲೀಲ ಸಾಹಿತ್ಯವನ್ನು ತಡೆಹಿಡಿಯಲು ಸರ್ವವಿಧ ಕ್ರಮಗಳನ್ನೂ ತೆಗೆದುಕೊಳ್ಳಬೇಕೆಂದು ಈ ಸಮ್ಮೇಳನವು ಸರ್ಕಾರವನ್ನು ಪ್ರಾರ್ಥಿಸುತ್ತದೆ. ಈ ದಿಶೆಯಲ್ಲಿ ಪರಿಷತ್ತಿನ ಸಹಾಯ ಸಲಹೆಗಳನ್ನು ಸರ್ಕಾರ ಪಡೆಯಬಹುದೆಂದು ಈ ಸಮ್ಮೇಳನ ಅಭಿಪ್ರಾಯಪಡುತ್ತದೆ. —ಸಮ್ಮೇಳನಾಧ್ಯಕ್ಷರಿಂದ

೪. ಗೋವಾ ರಾಜ್ಯದಲ್ಲಿರುವ ಕನ್ನಡಿಗರ ಹಿತದೃಷ್ಟಿಯಿಂದ ಕನ್ನಡ ಮಕ್ಕಳಿಗಾಗಿ ಕನ್ನಡ ಶಾಲೆಗಳನ್ನು ಸ್ಥಾಪಿಸುವುದೂ ಕನ್ನಡ ಸಾಂಸ್ಕೃತಿಕ ಚಟುವಟಿಕೆಗಳನ್ನು ಏರ್ಪಡಿಸುವುದೂ ಅಗತ್ಯವೆಂದು ಈ ಸಭೆಯು ಅಭಿಪ್ರಾಯಪಡುತ್ತದೆ. ಸಾಹಿತ್ಯ ಪರಿಷತ್ತಿನವರು ಈ ದಿಶೆಯಲ್ಲಿ ನಡೆಸುವ ಎಲ್ಲ ಕಾರ್ಯಕ್ರಮಗಳಿಗೆ ಮೈಸೂರು ಸರಕಾರದವರು ಉದಾರವಾಗಿ ಧನಸಹಾಯ ಮಾಡಬೇಕೆಂದು ಕೇಳಿಕೊಳ್ಳುತ್ತದೆ.

ಸೂಚಕರು: ಶ್ರೀ ಶಿವಮೂರ್ತಿ ಶಾಸ್ತ್ರಿಗಳು
ಅನುಮೋದಕರು: ಶ್ರೀ ವಿ. ಬಿ. ನಾಯಕರು

೫. ಗೋವಾ ರಾಜಧಾನಿಯಾದ ಪಂಜಿಂ ಕಾರ್ಯಸೌಧದಲ್ಲಿಯೂ, ಪೋರ್ಚುಗೀಸ್ ರಾಜಧಾನಿಯಾದ ಲಿಸ್ಬನ್ನಿನ ಸರಕಾರಿ ಭವನದಲ್ಲಿಯೂ, ಇರುವ ಕೆಳದಿ, ಸ್ವಾದಿ, ವಿಜಾಪುರ, ಆದಿಲಶಾಹಿ, ವಿಜಯನಗರ ಮೊದಲಾದ ಕರ್ನಾಟಕದ ಇತಿಹಾಸಕ್ಕೆ ಸಂಬಂಧಪಟ್ಟ ಕಾಗದ ಪತ್ರಗಳನ್ನು ಮತ್ತು ಇತರ ದಾಖಲೆಗಳನ್ನು ನಮಗೆ ಒದಗಿಸಿಕೊಡುವುದರಲ್ಲಿ ರಾಜ್ಯ ಸರಕಾರವನ್ನು ಈ ಸಮ್ಮೇಳನವು ಒತ್ತಾಯಪಡಿಸುತ್ತದೆ.

ಸೂಚಕರು: ಡಾ॥ ಆರ್. ಸಿ. ಹಿರೇಮಠ
ಅನುಮೋದಕರು: ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು

೬. ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಎನ್. ಸಿ. ಸಿ. ತರಪೇತು ಪಡೆಯುವವರಿಗೆ ರಿಯಾಯಿತಿ ತೋರಿಸಿರುವ ವಿಷಯದಲ್ಲಿ ಕನ್ನಡವನ್ನು ಸೇರಿಸಿರುವುದನ್ನು ಈ ಸಮ್ಮೇಳನವು ತೀವ್ರವಾಗಿ ಪ್ರತಿಭಟಿಸುತ್ತದೆ. ಈ ಪದ್ಧತಿಯನ್ನು ಕೂಡಲೇ ಕರ್ನಾಟಕ ವಿಶ್ವವಿದ್ಯಾನಿಲಯವು ನಿಲ್ಲಿಸಿ ಕನ್ನಡವನ್ನು ಕಡ್ಡಾಯವಾಗಿ ಕಲಿಯುವಂತೆ ಏರ್ಪಡಿಸಬೇಕೆಂದು ಈ ಸಮ್ಮೇಳನವು ಆಗ್ರಹಪೂರ್ವಕವಾಗಿ ಒತ್ತಾಯಪಡಿಸುತ್ತದೆ.

ಸೂಚಕರು: ಶ್ರೀ ಬಸವರಾಜ ಶಿರೂರ್
ಅನುಮೋದಕರು: ಶ್ರೀ ಹು. ಮೋಧಿ ಅವರು

೭. ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ವ್ಯಾಸಂಗ ಮಾಡಲು ಪಿ.ಯು.ಸಿ. ತರಗತಿಯಲ್ಲಿ ಅದರ ಅಭ್ಯಾಸಕ್ರಮಕ್ಕೆ ಅನುಗುಣವಾಗಿ ೪ ಗಂಟೆಗಳ ಕಾಲಾವಕಾಶವನ್ನೂ, ಡಿಗ್ರಿ ತರಗತಿಗಳಲ್ಲಿ ಅವುಗಳಲ್ಲಿಯ ಅಭ್ಯಾಸಕ್ರಮಕ್ಕೆ ಅನುಗುಣವಾಗಿ ೬ ಗಂಟೆಗಳ ಕಾಲಾವಕಾಶವನ್ನೂ ಕಲ್ಪಿಸಬೇಕೆಂದು ಈ ಸಮ್ಮೇಳನವು ಒತ್ತಾಯಪಡಿಸುತ್ತದೆ. ಅಲ್ಲದೆ, ಕರ್ನಾಟಕ ವಿಶ್ವವಿದ್ಯಾನಿಲಯ ಮತ್ತು ಮೈಸೂರು ವಿಶ್ವವಿದ್ಯಾನಿಲಯದಲ್ಲಿರುವಂತೆ ಡಿಗ್ರಿ ತರಗತಿಯ ಮೊದಲೆರಡು ವರ್ಷಗಳಲ್ಲಿ ಕನ್ನಡ ವ್ಯಾಸಂಗಕ್ಕೆ ಅವಕಾಶ ಕಲ್ಪಿಸಬೇಕೆಂದು ಈ ಸಮ್ಮೇಳನವು ಒತ್ತಾಯಪಡಿಸುತ್ತದೆ.

ಕಲೆ, ವಿಜ್ಞಾನ ಮತ್ತು ವಾಣಿಜ್ಯಗಳ ಅಭ್ಯಾಸಕ್ರಮವು ಮೈಸೂರು ರಾಜ್ಯದ ಎರಡೂ ವಿಶ್ವವಿದ್ಯಾನಿಲಯಗಳಲ್ಲಿ ಏಕರೂಪವಾಗಿರುವ ದೃಷ್ಟಿಯಿಂದ ಕನ್ನಡವನ್ನು ಡಿಗ್ರಿಯ ತರಗತಿಗಳಲ್ಲೆಲ್ಲ ಕಡ್ಡಾಯ ವಿಷಯವಾಗುವಂತೆ ಏರ್ಪಡಿಸಬೇಕೆಂದು ಈ ಸಮ್ಮೇಳನವು ಒತ್ತಾಯಪಡಿಸುತ್ತದೆ.

ಕನ್ನಡ ನಾಡಿನ ಎರಡೂ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡವೇ ಶಿಕ್ಷಣ ಮಾಧ್ಯಮವಾಗಬೇಕೆಂದು ಈ ಸಭೆಯು ಅಭಿಪ್ರಾಯಪಡುತ್ತದೆ. ಇದನ್ನು ಕಾರ್ಯಗತಗೊಳಿಸಲು ಖಚಿತವಾದ ಕಾರ್ಯಕ್ರಮಗಳನ್ನು ಈ ಎರಡು ವಿಶ್ವವಿದ್ಯಾನಿಲಯಗಳು ಕೂಡಲೇ ಕೈಗೊಳ್ಳಬೇಕೆಂದು ಈ ಸಮ್ಮೇಳನ ಒತ್ತಾಯಪಡಿಸುತ್ತದೆ.

ಸೂಚಕರು: ಶ್ರೀ ಕೊ. ಚೆನ್ನಬಸಪ್ಪ
ಅನುಮೋದಕರು: ಶ್ರೀ ದೇ. ಜವರೇಗೌಡ

೮. ಈಚೆಗೆ ರಾಜ್ಯದ ಹೈಸ್ಕೂಲುಗಳಲ್ಲಿ ಕನ್ನಡ ಪಂಡಿತರ ಅಭಾವ ಕಂಡುಬಂದಿದ್ದು ನಾಡಿನ ದೇಶಭಾಷಾ ವಿದ್ಯಾಭ್ಯಾಸಕ್ಕೆ ಅಡಚಣೆಯಾಗಿರುವ ಕಾರಣ ಸರ್ಕಾರದವರು ಕನ್ನಡ ಪಂಡಿತ ಪರೀಕ್ಷೆಯನ್ನು ಪ್ರತಿವರ್ಷ ನಡೆಸಬೇಕೆಂದೂ ಈ ಶಿಕ್ಷಣ ಕೇಂದ್ರಗಳನ್ನು ಈಗಿರುವ ಮೈಸೂರಿನೊಂದಿಗೆ ಬೆಂಗಳೂರು, ಧಾರವಾಡ, ಗುಲ್ಬರ್ಗಾ, ಬೆಳಗಾವಿ ಮುಂತಾದೆಡೆಗಳಲ್ಲೂ ನಡೆಸಬೇಕೆಂದೂ ಈ ಸಮ್ಮೇಳನವು ಒತ್ತಾಯ ಮಾಡುತ್ತದೆ.

ಸೂಚಕರು: ಶ್ರೀ ಹಿ. ಎನ್. ಲಿಂಗಣ್ಣಯ್ಯ
ಅನುಮೋದಕರು: ಶ್ರೀ ಎ. ಎಲ್. ಹಿರೇಮಠ

೯. ಕನ್ನಡ ಸಾಹಿತ್ಯ ಪರಿಷತ್ತು ನಡೆಸುತ್ತಿರುವ ಕನ್ನಡ ಜಾಣ ಪರೀಕ್ಷೆಗೆ ಹಿಂದಿನ ಹೈದರಾಬಾದ್ ಸರಕಾರದವರು ಇತ್ತಿದ್ದ ಮಾನ್ಯತೆಯನ್ನು ಹಿಂದಕ್ಕೆ ತೆಗೆದುಕೊಂಡಿರುವುದರಿಂದ ಕನ್ನಡದ ಏಳಿಗೆಗೆ ಕುಂದಕವಾಗಿದೆ. ಆದ್ದರಿಂದ ಕನ್ನಡ ಭಾಷೆ ಮತ್ತು ಸಾಹಿತ್ಯ ವ್ಯಾಸಂಗ ಮಾಡುವ ದೃಷ್ಟಿಯಿಂದ ಈ ಮನ್ನಣೆಯನ್ನು ಮತ್ತೆ ಜಾರಿಗೆ ಕೊಡಬೇಕೆಂದು ಸರ್ಕಾರದ ಸ್ಕೂಲುಗಳಲ್ಲಿ ಉಪಾಧ್ಯಾಯರನ್ನು ನೇಮಿಸುವಾಗ ಈ ಪರೀಕ್ಷೆ ಮಾಡಿದವರಿಗೆ ಆದ್ಯತೆ ಕೊಡಬೇಕೆಂದು ಈ ಸಮ್ಮೇಳನ ಮೈಸೂರು ಸರಕಾರವನ್ನು ಆಗ್ರಹಪೂರ್ವಕ ಬಿನ್ನೈಸುತ್ತದೆ.

ಸೂಚಕರು: ಶ್ರೀ ಎಸ್. ಶಂಕರಪ್ಪನವರು
ಅನುಮೋದಕರು: ಡಾ|| ಆರ್. ಸಿ. ಹಿರೇಮಠ ಅವರು

೧೦. ಕನ್ನಡ ಸಾಹಿತ್ಯ ಪರಿಷತ್ತಿನವರು ನಡೆಸುತ್ತಿರುವ ಗಮಕ ಕಲಾ ತರಗತಿಗಳನ್ನು ಸಮಗ್ರ ಕರ್ನಾಟಕದ ಪ್ರಮುಖ ಸ್ಥಳಗಳಲ್ಲಿ ನಡೆಸಲು ಅನುವಾಗುವಂತೆ ಸರಕಾರದವರು ಪರಿಷತ್ತಿಗೆ ಕೊಡುತ್ತಿರುವ ಸಹಾಯ ಧನವನ್ನು ಎರಡು ಸಾವಿರದಿಂದ ಹತ್ತು ಸಾವಿರಕ್ಕೆ ಹೆಚ್ಚಿಸಬೇಕೆಂದು ಈ ಸಮ್ಮೇಳನ ಪ್ರಾರ್ಥಿಸುತ್ತದೆ.

ಸೂಚಕರು: ಶ್ರೀ ಎಂ. ಎಸ್. ಅನಂತಪದ್ಮನಾಭರಾವ್
ಅನುಮೋದಕರು: ಶ್ರೀ ವೈ. ಎಂ. ಗಂಗಾಧರಪ್ಪ

೧೧. ಕರ್ನಾಟಕದಲ್ಲಿ ತುಂಬಿ ತುಳುಕುತ್ತಿರುವ ಶಿಲಾಶಾಸನಗಳು ಮತ್ತು ತಾಮ್ರಪಟಗಳು ಬಹುಮಟ್ಟಿಗೆ ಇನ್ನೂ ಅಚ್ಚಾಗದೆ ಇರುವುದರಿಂದ ಅವುಗಳನ್ನೆಲ್ಲಾ ಸಂಗ್ರಹಿಸಿ ಪ್ರಾಚ್ಯವಸ್ತು ಸಂಪಾದನಾಲಯ, ಮೈಸೂರು, ಮತ್ತು ಕರ್ನಾಟಕ ಪ್ರಾಚ್ಯ ಸಂಶೋಧನಾಲಯ, ಮತ್ತು ಕನ್ನಡ ಸಾಹಿತ್ಯ ಪರಿಷತ್ತು ಮೊದಲಾದ ಸಂಸ್ಥೆಗಳಿಗೆ ಸಂಗ್ರಹಿಸಿ ಪ್ರಕಟಿಸಲು ಆಗುವ ಸಹಾಯದ್ರವ್ಯವನ್ನು ಸರಕಾರವು ಮಂಜೂರುಮಾಡಲು ಈ ಸಮ್ಮೇಳನವು ಒತ್ತಾಯ ಮಾಡುತ್ತದೆ.

ಸೂಚಕರು: ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು
ಅನುವಾದಕರು: ಶ್ರೀ ಚಂದ್ರಶೇಖರ ಶಾಸ್ತ್ರಿಗಳು

### ಬಹಿರಂಗಾಧಿವೇಶನ

ತರುವಾಯ ಸಾಹಿತ್ಯ ಸಮ್ಮೇಳನದ ಬಹಿರಂಗ ಅಧಿವೇಶನವು ಶ್ರೀ ರಂ. ಶ್ರೀ. ಮುಗಳಿ ಅವರ ಅಧ್ಯಕ್ಷತೆಯಲ್ಲಿ ಸೇರಿ ಹಲವಾರು ನಿರ್ಣಯಗಳನ್ನು ಅಂಗೀಕರಿಸಿತು. (ಈ ನಿರ್ಣಯಗಳನ್ನು ಈ ಕೆಳಗೆ ಕೊಟ್ಟಿದೆ) ಸಿದ್ಧಗಂಗಾ ಕ್ಷೇತ್ರದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಭಾಷಣ ಮಾಡಿ, ಸಮ್ಮೇಳನದ ಕಾರ್ಯಕಲಾಪಗಳನ್ನು ವೀಕ್ಷಿಸಿದ ಅವರು ತಮ್ಮ ಅಮಿತವಾದ ಆನಂದವನ್ನು ವ್ಯಕ್ತಪಡಿಸಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರು ಸ್ವಾಗತ ಸಮಿತಿಯವರ ಅಚ್ಚುಕಟ್ಟಾದ ವ್ಯವಸ್ಥೆ, ಅವರ ಉತ್ಸಾಹ ಮತ್ತು ಶ್ರದ್ಧೆಗಾಗಿ ವಂದಿಸಿದರು.

ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರು ಸಂದೇಶ ಭಾಷಣ ಮಾಡಿ, ಕನ್ನಡಿಗರು ಹೃದಯ ವೈಶಾಲ್ಯವನ್ನು ಬೆಳೆಸಿಕೊಳ್ಳಲು ಮನವಿ ಮಾಡಿದರು.

ಅಧ್ಯಕ್ಷ ಶ್ರೀ ಮುಗಳಿಯವರು ತಮ್ಮ ಉಪಸಂಹಾರ ಭಾಷಣದಲ್ಲಿ, ಕನ್ನಡಿಗರಿಗೆ ಕನ್ನಡತನದ ಹಿರಿಮೆಯನ್ನುಳಿಸಿಕೊಳ್ಳಬೇಕೆಂದು ಕರೆಯಿತ್ತರು. ರಾಷ್ಟ್ರಗೀತೆಯೊಂದಿಗೆ ಮೂರು ದಿನದ ಕಾರ್ಯಕಲಾಪಗಳು ಮುಕ್ತಾಯಗೊಂಡವು. ಈ ಮೂರು ದಿನಗಳಲ್ಲೂ ಮನರಂಜನೆಯ ಕಾರ್ಯಕ್ರಮಗಳೇರ್ಪಾಟಾಗಿದ್ದವು.

## ನಿರ್ಣಯಗಳು

೧. ಪರಿಷತ್ತಿನ ಸದಸ್ಯರೂ ಹಿತಚಿಂತಕರೂ ಭಾಷೆ ಮತ್ತು ಸಾಹಿತ್ಯ ಸೇವಕರೂ ಆದ ಈ ಕೆಳಗೆ ಕಾಣಿಸಿರುವ ಮಹನೀಯರು ದೈವಾಧೀನರಾದುದಕ್ಕಾಗಿ ಈ ಸಮ್ಮೇಳನವು ತೀವ್ರ ದುಃಖವನ್ನು ವ್ಯಕ್ತಪಡಿಸಿ ಅವರ ಆತ್ಮಕ್ಕೆ ಶಾಂತಿಯನ್ನು ಕೋರಿ ಅವರ ಸಂಬಂಧಿಕರಿಗೆ ತನ್ನ ಅನುತಾಪವನ್ನು ಸೂಚಿಸುತ್ತದೆ.

ಸರ್ವಶ್ರೀ—

೧. ಬಿ. ಎನ್. ದಾತಾರ್ ಅವರು, ೨. ಆರ್. ಎಸ್. ಹುಕ್ಕೇರಿಕರ್ ಅವರು, ೩. ಬ್ಯಾರಿಸ್ಟರ್ ಎಂ. ಎಸ್. ಸರ್ದಾರ್ ಅವರು, ೪. ಗೋವಿಂದ ಪೈ ಅವರು, ೫. ಉತ್ತಂಗಿ ಚನ್ನಪ್ಪನವರು, ೬. ದೇವುಡು ನರಸಿಂಹ ಶಾಸ್ತ್ರಿಗಳು, ೭. ದ. ಬಾ. ಕುಲಕರ್ಣಿಯವರು, ೮. ಶ್ರೀಮತಿ ಅನಸೂಯ ಅವರು (ತ್ರಿವೇಣಿ), ೯. ಎ. ಸೀತಾರಾಮ್ ಅವರು (ಆನಂದ), ೧೦. ಟಿ. ಎ. ಸಾಲತೊರೆಯವರು, ೧೧. ಗಂಜಾಂ ತಿಮ್ಮಪ್ಪಯ್ಯನವರು, ೧೨. ಟಿ. ಎಚ್. ಎಂ. ಸದಾಶಿವಯ್ಯನವರು, ೧೩. ಟಿ. ಎಂ. ಹೆಗ್ಗಡೆ ಮೋಟಿನಸರ ಅವರು, ೧೪. ತುಕಾರಾಮ ರತ್ನಪ್ಪ ಕೋಟಿ, ಬನಹಟ್ಟಿ ಅವರು, ೧೫. ಕೆ. ಶೇಷಗಿರಿಯಾಚಾರ್ ಅವರು.

—ಸಮ್ಮೇಳನಾಧ್ಯಕ್ಷರಿಂದ

೨. ನಮ್ಮ ರಾಜ್ಯಕ್ಕೆ ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ಕಾರಣಗಳಿಂದ ಕರ್ಣಾಟಕ ಎಂದೇ ಹೆಸರಿರಬೇಕೆಂದು ಈ ಸಮ್ಮೇಳನ ಹಿಂದಿನಿಂದ ಹೇಳಿಕೊಂಡು ಬಂದಿರುವಂತೆ ಮತ್ತೊಮ್ಮೆ ಈ ಸಮ್ಮೇಳನವು ಒತ್ತಾಯಪಡಿಸುತ್ತದೆ.

ಸೂಚಕರು: ಶ್ರೀ ಸಿ. ಆರ್. ಬಸಪ್ಪ
ಅನುಮೋದಕರು: ಶ್ರೀಮತಿ ಸರೋಜಿನಿ ಮಹಿಷಿ

೩. ದಿನೇ ದಿನೇ ಹೆಚ್ಚಿನ ಪ್ರಮಾಣದಲ್ಲಿ ಪ್ರಕಟವಾಗುತ್ತಿರುವ ಮತ್ತು ಸಮಾಜದ ಮೇಲೆ ದುಷ್ಪರಿಣಾಮವನ್ನು ಉಂಟುಮಾಡುತ್ತಿರುವ ಅಯೋಗ್ಯ ಮತ್ತು ಅಶ್ಲೀಲ ಸಾಹಿತ್ಯವನ್ನು ತಡೆಹಿಡಿಯಲು ಸರ್ವವಿಧ ಕ್ರಮಗಳನ್ನೂ ತೆಗೆದುಕೊಳ್ಳಬೇಕೆಂದು ಈ ಸಮ್ಮೇಳನವು ಸರ್ಕಾರವನ್ನು ಪ್ರಾರ್ಥಿಸುತ್ತದೆ. ಈ ದಿಶೆಯಲ್ಲಿ ಪರಿಷತ್ತಿನ ಸಹಾಯ ಸಲಹೆಗಳನ್ನು ಸರ್ಕಾರ ಪಡೆಯಬಹುದೆಂದು ಈ ಸಮ್ಮೇಳನ ಅಭಿಪ್ರಾಯಪಡುತ್ತದೆ. —ಸಮ್ಮೇಳನಾಧ್ಯಕ್ಷರಿಂದ

೪. ಗೋವಾ ರಾಜ್ಯದಲ್ಲಿರುವ ಕನ್ನಡಿಗರ ಹಿತದೃಷ್ಟಿಯಿಂದ ಕನ್ನಡ ಮಕ್ಕಳಿಗಾಗಿ ಕನ್ನಡ ಶಾಲೆಗಳನ್ನು ಸ್ಥಾಪಿಸುವುದೂ ಕನ್ನಡ ಸಾಂಸ್ಕೃತಿಕ ಚಟುವಟಿಕೆಗಳನ್ನು ಏರ್ಪಡಿಸುವುದೂ ಅಗತ್ಯವೆಂದು ಈ ಸಭೆಯು ಅಭಿಪ್ರಾಯಪಡುತ್ತದೆ. ಸಾಹಿತ್ಯ ಪರಿಷತ್ತಿನವರು ಈ ದಿಶೆಯಲ್ಲಿ ನಡೆಸುವ ಎಲ್ಲ ಕಾರ್ಯಕ್ರಮಗಳಿಗೆ ಮೈಸೂರು ಸರಕಾರದವರು ಉದಾರವಾಗಿ ಧನಸಹಾಯ ಮಾಡಬೇಕೆಂದು ಕೇಳಿಕೊಳ್ಳುತ್ತದೆ.

ಸೂಚಕರು: ಶ್ರೀ ಶಿವಮೂರ್ತಿ ಶಾಸ್ತ್ರಿಗಳು
ಅನುಮೋದಕರು: ಶ್ರೀ ವಿ. ಬಿ. ನಾಯಕರು

೫. ಗೋವಾ ರಾಜಧಾನಿಯಾದ ಪಂಜಿಂ ಕಾರ್ಯಸೌಧದಲ್ಲಿಯೂ, ಪೋರ್ಚುಗೀಸ್ ರಾಜಧಾನಿಯಾದ ಲಿಸ್ಬನ್ನಿನ ಸರಕಾರಿ ಭವನದಲ್ಲಿಯೂ, ಇರುವ ಕೆಳದಿ, ಸ್ವಾದಿ, ವಿಜಾಪುರ, ಆದಿಲಶಾಹಿ, ವಿಜಯನಗರ ಮೊದಲಾದ ಕರ್ನಾಟಕದ ಇತಿಹಾಸಕ್ಕೆ ಸಂಬಂಧಪಟ್ಟ ಕಾಗದ ಪತ್ರಗಳನ್ನು ಮತ್ತು ಇತರ ದಾಖಲೆಗಳನ್ನು ನಮಗೆ ಒದಗಿಸಿಕೊಡುವುದರಲ್ಲಿ ರಾಜ್ಯ ಸರಕಾರವನ್ನು ಈ ಸಮ್ಮೇಳನವು ಒತ್ತಾಯಪಡಿಸುತ್ತದೆ.

ಸೂಚಕರು: ಡಾ॥ ಆರ್. ಸಿ. ಹಿರೇಮಠ
ಅನುಮೋದಕರು: ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು

೬. ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಎನ್. ಸಿ. ಸಿ. ತರಪೇತು ಪಡೆಯುವವರಿಗೆ ರಿಯಾಯಿತಿ ತೋರಿಸಿರುವ ವಿಷಯದಲ್ಲಿ ಕನ್ನಡವನ್ನು ಸೇರಿಸಿರುವುದನ್ನು ಈ ಸಮ್ಮೇಳನವು ತೀವ್ರವಾಗಿ ಪ್ರತಿಭಟಿಸುತ್ತದೆ. ಈ ಪದ್ಧತಿಯನ್ನು ಕೂಡಲೇ ಕರ್ನಾಟಕ ವಿಶ್ವವಿದ್ಯಾನಿಲಯವು ನಿಲ್ಲಿಸಿ ಕನ್ನಡವನ್ನು ಕಡ್ಡಾಯವಾಗಿ ಕಲಿಯುವಂತೆ ಏರ್ಪಡಿಸಬೇಕೆಂದು ಈ ಸಮ್ಮೇಳನವು ಆಗ್ರಹಪೂರ್ವಕವಾಗಿ ಒತ್ತಾಯಪಡಿಸುತ್ತದೆ.

ಸೂಚಕರು: ಶ್ರೀ ಬಸವರಾಜ ಶಿರೂರ್
ಅನುಮೋದಕರು: ಶ್ರೀ ಹು. ಮೋಧಿ ಅವರು

೭. ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ವ್ಯಾಸಂಗ ಮಾಡಲು ಪಿ.ಯು.ಸಿ. ತರಗತಿಯಲ್ಲಿ ಅದರ ಅಭ್ಯಾಸಕ್ರಮಕ್ಕೆ ಅನುಗುಣವಾಗಿ ೪ ಗಂಟೆಗಳ ಕಾಲಾವಕಾಶವನ್ನೂ, ಡಿಗ್ರಿ ತರಗತಿಗಳಲ್ಲಿ ಅವುಗಳಲ್ಲಿಯ ಅಭ್ಯಾಸಕ್ರಮಕ್ಕೆ ಅನುಗುಣವಾಗಿ ೬ ಗಂಟೆಗಳ ಕಾಲಾವಕಾಶವನ್ನೂ ಕಲ್ಪಿಸಬೇಕೆಂದು ಈ ಸಮ್ಮೇಳನವು ಒತ್ತಾಯಪಡಿಸುತ್ತದೆ. ಅಲ್ಲದೆ, ಕರ್ನಾಟಕ ವಿಶ್ವವಿದ್ಯಾನಿಲಯ ಮತ್ತು ಮೈಸೂರು ವಿಶ್ವವಿದ್ಯಾನಿಲಯದಲ್ಲಿರುವಂತೆ ಡಿಗ್ರಿ ತರಗತಿಯ ಮೊದಲೆರಡು ವರ್ಷಗಳಲ್ಲಿ ಕನ್ನಡ ವ್ಯಾಸಂಗಕ್ಕೆ ಅವಕಾಶ ಕಲ್ಪಿಸಬೇಕೆಂದು ಈ ಸಮ್ಮೇಳನವು ಒತ್ತಾಯಪಡಿಸುತ್ತದೆ.

ಕಲೆ, ವಿಜ್ಞಾನ ಮತ್ತು ವಾಣಿಜ್ಯಗಳ ಅಭ್ಯಾಸಕ್ರಮವು ಮೈಸೂರು ರಾಜ್ಯದ ಎರಡೂ ವಿಶ್ವವಿದ್ಯಾನಿಲಯಗಳಲ್ಲಿ ಏಕರೂಪವಾಗಿರುವ ದೃಷ್ಟಿಯಿಂದ ಕನ್ನಡವನ್ನು ಡಿಗ್ರಿಯ ತರಗತಿಗಳಲ್ಲೆಲ್ಲ ಕಡ್ಡಾಯ ವಿಷಯವಾಗುವಂತೆ ಏರ್ಪಡಿಸಬೇಕೆಂದು ಈ ಸಮ್ಮೇಳನವು ಒತ್ತಾಯಪಡಿಸುತ್ತದೆ.

ಕನ್ನಡ ನಾಡಿನ ಎರಡೂ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡವೇ ಶಿಕ್ಷಣ ಮಾಧ್ಯಮವಾಗಬೇಕೆಂದು ಈ ಸಭೆಯು ಅಭಿಪ್ರಾಯಪಡುತ್ತದೆ. ಇದನ್ನು ಕಾರ್ಯಗತಗೊಳಿಸಲು ಖಚಿತವಾದ ಕಾರ್ಯಕ್ರಮಗಳನ್ನು ಈ ಎರಡು ವಿಶ್ವವಿದ್ಯಾನಿಲಯಗಳು ಕೂಡಲೇ ಕೈಗೊಳ್ಳಬೇಕೆಂದು ಈ ಸಮ್ಮೇಳನ ಒತ್ತಾಯಪಡಿಸುತ್ತದೆ.

ಸೂಚಕರು: ಶ್ರೀ ಕೊ. ಚೆನ್ನಬಸಪ್ಪ
ಅನುಮೋದಕರು: ಶ್ರೀ ದೇ. ಜವರೇಗೌಡ

೮. ಈಚೆಗೆ ರಾಜ್ಯದ ಹೈಸ್ಕೂಲುಗಳಲ್ಲಿ ಕನ್ನಡ ಪಂಡಿತರ ಅಭಾವ ಕಂಡುಬಂದಿದ್ದು ನಾಡಿನ ದೇಶಭಾಷಾ ವಿದ್ಯಾಭ್ಯಾಸಕ್ಕೆ ಅಡಚಣೆಯಾಗಿರುವ ಕಾರಣ ಸರ್ಕಾರದವರು ಕನ್ನಡ ಪಂಡಿತ ಪರೀಕ್ಷೆಯನ್ನು ಪ್ರತಿವರ್ಷ ನಡೆಸಬೇಕೆಂದೂ ಈ ಶಿಕ್ಷಣ ಕೇಂದ್ರಗಳನ್ನು ಈಗಿರುವ ಮೈಸೂರಿನೊಂದಿಗೆ ಬೆಂಗಳೂರು, ಧಾರವಾಡ, ಗುಲ್ಬರ್ಗಾ, ಬೆಳಗಾವಿ ಮುಂತಾದೆಡೆಗಳಲ್ಲೂ ನಡೆಸಬೇಕೆಂದೂ ಈ ಸಮ್ಮೇಳನವು ಒತ್ತಾಯ ಮಾಡುತ್ತದೆ.

ಸೂಚಕರು: ಶ್ರೀ ಓ. ಎನ್. ಲಿಂಗಣ್ಣಯ್ಯ
ಅನುಮೋದಕರು: ಶ್ರೀ ಎ. ಎಲ್. ಹಿರೇಮಠ

೯. ಕನ್ನಡ ಸಾಹಿತ್ಯ ಪರಿಷತ್ತು ನಡೆಸುತ್ತಿರುವ ಕನ್ನಡ ಜಾಣ ಪರೀಕ್ಷೆಗೆ ಹಿಂದಿನ ಹೈದರಾಬಾದ್ ಸರಕಾರದವರು ಇತ್ತಿದ್ದ ಮಾನ್ಯತೆಯನ್ನು ಹಿಂದಕ್ಕೆ ತೆಗೆದುಕೊಂಡಿರುವುದರಿಂದ ಕನ್ನಡದ ಏಳಿಗೆಗೆ ಕುಂದಕವಾಗಿದೆ. ಆದ್ದರಿಂದ ಕನ್ನಡ ಭಾಷೆ ಮತ್ತು ಸಾಹಿತ್ಯ ವ್ಯಾಸಂಗ ಮಾಡುವ ದೃಷ್ಟಿಯಿಂದ ಈ ಮನ್ನಣೆಯನ್ನು ಮತ್ತೆ ಜಾರಿಗೆ ಕೊಡಬೇಕೆಂದು ಸರ್ಕಾರದ ಸ್ಕೂಲುಗಳಲ್ಲಿ ಉಪಾಧ್ಯಾಯರನ್ನು ನೇಮಿಸುವಾಗ ಈ ಪರೀಕ್ಷೆ ಮಾಡಿದವರಿಗೆ ಆದ್ಯತೆ ಕೊಡಬೇಕೆಂದು ಈ ಸಮ್ಮೇಳನ ಮೈಸೂರು ಸರಕಾರವನ್ನು ಆಗ್ರಹಪೂರ್ವಕ ಬಿನ್ನೈಸುತ್ತದೆ.

ಸೂಚಕರು: ಶ್ರೀ ಎಸ್. ಶಂಕರಪ್ಪನವರು
ಅನುಮೋದಕರು: ಡಾ॥ ಆರ್. ಸಿ. ಹಿರೇಮಠ ಅವರು

೧೦. ಕನ್ನಡ ಸಾಹಿತ್ಯ ಪರಿಷತ್ತಿನವರು ನಡೆಸುತ್ತಿರುವ ಗಮಕ ಕಲಾ ತರಗತಿಗಳನ್ನು ಸಮಗ್ರ ಕರ್ನಾಟಕದ ಪ್ರಮುಖ ಸ್ಥಳಗಳಲ್ಲಿ ನಡೆಸಲು ಅನುವಾಗುವಂತೆ ಸರಕಾರದವರು ಪರಿಷತ್ತಿಗೆ ಕೊಡುತ್ತಿರುವ ಸಹಾಯ ಧನವನ್ನು ಎರಡು ಸಾವಿರದಿಂದ ಹತ್ತು ಸಾವಿರಕ್ಕೆ ಹೆಚ್ಚಿಸಬೇಕೆಂದು ಈ ಸಮ್ಮೇಳನ ಪ್ರಾರ್ಥಿಸುತ್ತದೆ.

ಸೂಚಕರು: ಶ್ರೀ ಎಂ. ಎಸ್. ಅನಂತಪದ್ಮನಾಭರಾವ್
ಅನುಮೋದಕರು: ಶ್ರೀ ವೈ. ಎಂ. ಗಂಗಾಧರಪ್ಪ

೧೧. ಕರ್ನಾಟಕದಲ್ಲಿ ತುಂಬಿ ತುಳುಕುತ್ತಿರುವ ಶಿಲಾಶಾಸನಗಳು ಮತ್ತು ತಾಮ್ರಪಟಗಳು ಬಹುಮಟ್ಟಿಗೆ ಇನ್ನೂ ಅಚ್ಚಾಗದೆ ಇರುವುದರಿಂದ ಅವುಗಳನ್ನೆಲ್ಲಾ ಸಂಗ್ರಹಿಸಿ ಪ್ರಾಚ್ಯವಸ್ತು ಸಂಪಾದನಾಲಯ, ಮೈಸೂರು, ಮತ್ತು ಕರ್ನಾಟಕ ಪ್ರಾಚ್ಯ ಸಂಶೋಧನಾಲಯ, ಮತ್ತು ಕನ್ನಡ ಸಾಹಿತ್ಯ ಪರಿಷತ್ತು ಮೊದಲಾದ ಸಂಸ್ಥೆಗಳಿಗೆ ಸಂಗ್ರಹಿಸಿ ಪ್ರಕಟಿಸಲು ಆಗುವ ಸಹಾಯದ್ರವ್ಯವನ್ನು ಸರಕಾರವು ಮಂಜೂರುಮಾಡಲು ಈ ಸಮ್ಮೇಳನವು ಒತ್ತಾಯ ಮಾಡುತ್ತದೆ.

ಸೂಚಕರು: ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು
ಅನುವಾದಕರು: ಶ್ರೀ ಚಂದ್ರಶೇಖರ ಶಾಸ್ತ್ರಿಗಳು

೧೨. ಮೈಸೂರು ಸರಕಾರದವರು ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡಲು ನಿರ್ಣಯಿಸಿರುವುದನ್ನು ಈ ಸಮ್ಮೇಳನವು ಅಭಿನಂದಿಸುತ್ತದೆ. ಆದರೆ, ರಾಜ್ಯಾದ್ಯಂತ ಎಲ್ಲಾ ಇಲಾಖೆಗಳಲ್ಲಿಯೂ ಅದನ್ನು ಕಾರ್ಯಗತ ಮಾಡಲು ಸೂಕ್ತಕ್ರಮ ಕೈಗೊಳ್ಳಬೇಕೆಂದು ಈ ಸಮ್ಮೇಳನವು ಒತ್ತಾಯ ಪಡಿಸುತ್ತದೆ. ಇದನ್ನು ಬೇಗನೆ ಕಾರ್ಯರೂಪದಲ್ಲಿ ತರಲು ಪಾರಿಭಾಷಿಕ ಕೋಶ ರಚನೆಗೆ ಒಂದು ತಜ್ಞರ ಸಮಿತಿಯನ್ನು ನೇಮಿಸಿ ಕ್ಲುಪ್ತ ಕಾಲದಲ್ಲಿ ಒಂದು ವರದಿಯನ್ನು ಸಿದ್ಧಗೊಳಿಸಬೇಕೆಂದೂ ತನ್ಮೂಲಕ ಈ ಕೊರತೆಯನ್ನು ಪರಿಹರಿಸಬೇಕೆಂದೂ ಈ ಸಮ್ಮೇಳನವು ಒತ್ತಾಯಪೂರ್ವಕವಾಗಿ ಪ್ರಾರ್ಥಿಸುತ್ತದೆ.

ಸೂಚಕರು: ಶ್ರೀ ಕೆ. ನಂಜುಂಡರಾವ್
ಅನುಮೋದಕರು: ಶ್ರೀ ಅನಂತಸುಬ್ಬರಾವ್

೧೩. ಬೆಂಗಳೂರು ಮತ್ತು ಧಾರವಾಡ ಆಕಾಶವಾಣಿಯಲ್ಲಿ ಪ್ರತಿದಿನ ಪ್ರಸಾರವಾಗುತ್ತಿರುವ ಈಗಿನ ಕಾರ್ಯಕ್ರಮಗಳಲ್ಲಿ ಕನ್ನಡಕ್ಕೆ ಇನ್ನೂ ಹೆಚ್ಚು ಕಾಲಾವಕಾಶ ಕೊಡಬೇಕೆಂದೂ ಸಂಬಂಧಪಟ್ಟ ಅಧಿಕಾರಿಗಳಿಗೆ ಒತ್ತಾಯಪಡಿಸಬೇಕೆಂದು ಈ ಸಮ್ಮೇಳನವು ಅಭಿಪ್ರಾಯಪಡುತ್ತದೆ.

ಸೂಚಕರು: ಶ್ರೀ ಕೆ. ನಂಜುಂಡರಾವ್
ಅನುಮೋದಕರು: ಶ್ರೀ ಟಿ. ಮಹಾಬಲೇಶ್ವರಭಟ್ಟರು

೧೪. ಕನ್ನಡಕ್ಕೆ ಅತ್ಯಗತ್ಯವೂ ಅನಿವಾರ್ಯವೂ ಆದ ವಿಶ್ವಕೋಶ ರಚನೆಯನ್ನು ಸರ್ಕಾರದವರು ವೇಗವಾಗಿ ಮುಂದುವರಿಸಬೇಕೆಂದು ಈ ಸಮ್ಮೇಳನ ಸರ್ಕಾರವನ್ನು ಒತ್ತಾಯಪಡಿಸುತ್ತದೆ.

ಸೂಚಕರು: ಶ್ರೀ ಟಿ. ಎಸ್. ಕೃಷ್ಣಮೂರ್ತಿ
ಅನುಮೋದಕರು: ಶ್ರೀ ಎನ್. ಪ್ರಹ್ಲಾದರಾವ್

೧೫. ಕನ್ನಡ ಚಿತ್ರರಂಗದ ಏಳಿಗೆಯ ದೃಷ್ಟಿಯಿಂದ ಮೈಸೂರು ರಾಜ್ಯದಲ್ಲಿ ಒಂದು ಸುಸಜ್ಜಿತ ಸ್ಟುಡಿಯೋವನ್ನು ಸರ್ಕಾರವೆ ಸ್ಥಾಪಿಸಬೇಕೆಂದು ಈ ಸಮ್ಮೇಳನವು ಅಭಿಪ್ರಾಯಪಡುತ್ತದೆ.

ಸೂಚಕರು: ಶ್ರೀ ಎಚ್. ಎಸ್. ರೇಣುಕಾಪ್ರಸಾದ್
ಅನುಮೋದಕರು: ಶ್ರೀ ಗುಬ್ಬಿ ವೀರಣ್ಣನವರು

೧೬. ವಿಶೇಷ ಅಂಚೆ ಚೀಟಿಗಳನ್ನು ಪ್ರಕಟಿಸುವಾಗ ಭಾರತ ಸರ್ಕಾರವು ಕರ್ಣಾಟಕದ ನೃಪತುಂಗ, ಬಸವೇಶ್ವರ, ವಿದ್ಯಾರಣ್ಯ, ಕಿತ್ತೂರು ಚೆನ್ನಮ್ಮ ಮೊದಲಾದವರ ಅಂಚೆ ಚೀಟಿಗಳನ್ನು ಮುಂದಿನ ವರ್ಷದಲ್ಲಿ ಪ್ರಕಟಿಸಬೇಕೆಂದು ಈ ಸಮ್ಮೇಳನ ಅಭಿಪ್ರಾಯಪಡುತ್ತದೆ.

ಸೂಚಕರು: ಶ್ರೀ ಎಚ್. ಎಸ್. ರೇಣುಕಾಪ್ರಸಾದ್
ಅನುಮೋದಕರು: ಶ್ರೀ ಆರ್. ಎಸ್. ಆರಾಧ್ಯ

೧೭. ಕನ್ನಡದ ಒಳ್ಳೆಯ ಕೃತಿಲೇಖಕರಿಗೆ ಪ್ರತಿವರ್ಷವೂ ಮೈಸೂರು ಸರಕಾರದವರು ಕೊಡುತ್ತಿದ್ದ ಬಹುಮಾನವನ್ನು ತುರ್ತು ಪರಿಸ್ಥಿತಿಯ ಮೂಲಕ ಈ ಸಲ ನಿಲ್ಲಿಸಲಾಗಿದೆ. ಪ್ರತಿಗಳನ್ನು ಕೊಳ್ಳುವುದು ಅದಕ್ಕೆ ಪರಿಹಾರವಾಗದು. ಒಳ್ಳೆಯ ಸಾಹಿತ್ಯ ನಿರ್ಮಾಣಕ್ಕೆ ಸರಕಾರದ ಪ್ರೋತ್ಸಾಹ ಅತ್ಯವಶ್ಯವಾದುದರಿಂದ ಪಾರಿತೋಷಕ ನೀಡುವ ಪದ್ಧತಿಯನ್ನು ಮುಂದುವರಿಸಬೇಕೆಂದು ಈ ಸಮ್ಮೇಳನವು ಒತ್ತಾಯಪಡಿಸುತ್ತದೆ.

ಸೂಚಕರು: ಶ್ರೀ ವರದರಾಜ ಹುಯಿಲಗೋಳ
ಅನುಮೋದಕರು: ಶ್ರೀ ಅನಂತರಾವ ಭೋಸಗೆ

೧೮. ಮೈಸೂರು ರಾಜ್ಯದ ಹೊರಗೆ ಮಹಾರಾಷ್ಟ್ರ, ಆಂಧ್ರ, ತಮಿಳುನಾಡು, ಕೇರಳ ರಾಜ್ಯಗಳಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಲ್ಲಿ ಕನ್ನಡ ಕಲಿಸುವ ಏರ್ಪಾಟಿಲ್ಲದೆ ಕನ್ನಡದವರು ತೊಂದರೆಗೀಡಾಗಿದ್ದಾರೆ. ಅಲ್ಲದೆ ಆಡಳಿತ ಕಛೇರಿಗಳಲ್ಲಿ ಕನ್ನಡ ಅರ್ಜಿಗಳನ್ನು ಸ್ವೀಕರಿಸುವುದು ಕಷ್ಟವಾಗಿದೆ. ಆದ್ದರಿಂದ ಆ ಪ್ರಾಂತ್ಯ ಸರಕಾರಗಳು ಇದಕ್ಕೆ ಏರ್ಪಾಡು ಮಾಡಬೇಕೆಂದು ಈ ಸಮ್ಮೇಳನವು ಒತ್ತಾಯಪಡಿಸುತ್ತದೆ.

ಸೂಚಕರು: ಶ್ರೀಮತಿ ಸರೋಜಿನಿ ಮಹಿಷಿ
ಅನುಮೋದಕರು: ಶ್ರೀ ಎಂ. ಎಸ್. ಮಹಂತಯ್ಯನವರು

೧೯. ಕೇಂದ್ರ ಸರಕಾರದ ಆಶ್ರಯದಲ್ಲಿ ಯುನೆಸ್ಕೊ ಸಹಾಯಧನದಿಂದ ಭಾರತದ ಅನೇಕ ಭಾಷೆಯ ಒಳ್ಳೆಯ ಕೃತಿಗಳಿಗೆ ಬಹುಮಾನ-ಪ್ರೋತ್ಸಾಹ ಕೊಡಲಾಗುತ್ತದೆ. ಆದರೆ ಕನ್ನಡವನ್ನು ಇದುವರೆಗೆ ಸೇರಿಸದೆ ಇರುವುದು ವಿಷಾದದ ಸಂಗತಿಯೆಂದು ಈ ಸಮ್ಮೇಳನವು ಅಭಿಪ್ರಾಯಪಡುತ್ತದೆ. ಅದರಲ್ಲಿ ಕನ್ನಡವನ್ನು ಕೂಡಲೇ ಸೇರಿಸಬೇಕೆಂದು ಈ ಸಮ್ಮೇಳನ ಒತ್ತಾಯಪಡಿಸುತ್ತದೆ.

ಸೂಚಕರು: ಶ್ರೀಮತಿ ಸರೋಜಿನಿ ಮಹಿಷಿ
ಅನುಮೋದಕರು: ಶ್ರೀ ರಾ. ಯ. ಧಾರವಾಡಕರ

---

# ಭಾಷಣ ಶಿಕ್ಷಣಕಲಾ ಉಪನ್ಯಾಸಮಾಲೆ

ದಿನಾಂಕ ೧೬-೧೨-೬೩ ರಂದು ಸೋಮವಾರ ಸಂಜೆ "ಭಾಷಣ ಕಲೆಯ ರೂಪರೇಖೆಗಳು" ಎಂಬ ವಿಷಯವಾಗಿ ವಚನಶಾಸ್ತ್ರಾಚಾರ್ಯ ಶ್ರೀ ಜೀರಿಗೆಕಟ್ಟೆ ಬಸಪ್ಪನವರು ಭಾಷಣ ಮಾಡಿದರು. ಈ ದಿನದ ಸಭೆಯ ಅಧ್ಯಕ್ಷತೆಯನ್ನು ಭಾಷಣಕಲಾ ತರಗತಿಯ ಅಧ್ಯಾಪಕರಲ್ಲಿ ಒಬ್ಬರಾದ ಶ್ರೀ ಅ. ರಾ. ಮಿತ್ರರವರು ವಹಿಸಿದ್ದರು.

ದಿನಾಂಕ ೧೮-೧೨-೬೩ ರಂದು ಬುಧವಾರ ಸಂಜೆ "ಭಾಸ್ಕರಾಚಾರ್ಯರ ಲೀಲಾವತಿ ಗಣಿತಶಾಸ್ತ್ರ" ಎಂಬ ವಿಷಯವಾಗಿ ಸಾಹಿತ್ಯಾಲಂಕಾರ, ಕವಿಭೂಷಣ ಡಾ|| ಕೆ. ಎಸ್. ನಾಗರಾಜನ್‌ರವರು ಭಾಷಣಮಾಡಿದರು. ಪರಿಷತ್ತಿನ ಕಾರ್ಯದರ್ಶಿಗಳಲ್ಲಿ ಒಬ್ಬರಾದ ಡಾ|| ಕೆ. ಎಂ. ಕೃಷ್ಣರಾಯರು ಸಭಾಧ್ಯಕ್ಷತೆ ವಹಿಸಿದ್ದರು. ಸಭೆಯ ಆರಂಭದಲ್ಲಿ ಶ್ರೀಮತಿ ಮಂದಾಕಿನಿಬಾಯಿಯವರು ದೇವತಾ ಪ್ರಾರ್ಥನೆ ಮಾಡಿದರು. ವಿದ್ಯಾರ್ಥಿಯಾದ ಚಿ|| ಎಸ್. ರಂಗಸ್ವಾಮಿ ಎಂಬಾತ ಸ್ವಾಗತ ಭಾಷಣ ಮಾಡಿದರು.

ದಿನಾಂಕ ೨೦-೧೨-೬೩ ರಂದು ಶುಕ್ರವಾರ ಸಂಜೆ ಹಿರಿಯ ಶಿಕ್ಷಣ ಶಾಸ್ತ್ರಜ್ಞರೂ, ಸುಪ್ರಸಿದ್ಧ ವಾಗ್ಮಿಗಳೂ ಆದ ಶ್ರೀ ಕೆ. ಸಂಪದ್ಗಿರಿರಾಯರು 'ಭಕ್ತ ಪುರಂದರದಾಸರು' ಎಂಬ ವಿಷಯವನ್ನು ಕುರಿತು ಭಾಷಣ ಮಾಡಿ, ದಾಸರ ಜೀವನ ಚರಿತ್ರೆ, ಅವರ ತತ್ವಜ್ಞಾನ ಪ್ರಸಾರ ಕಾರ್ಯ, ಸುಲಭ ಶೈಲಿಯ ಸಂಗೀತ ರಚನೆ, ಮೊದಲಾದುವುಗಳನ್ನು ವರ್ಣಿಸಿದರು. ವಿದ್ಯಾರ್ಥಿಯಾದ ಚಿ|| ಎಚ್. ಎಂ. ರಂಗನಾಥ್‌ರವರಿಂದ ದೇವತಾ ಪ್ರಾರ್ಥನೆಯಾಯಿತು. ಶ್ರೀ ಬ. ನ. ಸುಂದರರಾಯರು ಸ್ವಾಗತ ಭಾಷಣ ಮಾಡಿ, ಅತಿಥಿಗಳ ಪರಿಚಯ ಮಾಡಿ ಕೊಟ್ಟರು. ಭಾಷಣವಾದ ಬಳಿಕ ಕಾರ್ಯದರ್ಶಿಗಳಾದ ಡಾ|| ಕೆ. ಎಂ. ಕೃಷ್ಣರಾಯರು ವಂದನಾರ್ಪಣೆ ಮಾಡಿದರು.

ದಿನಾಂಕ ೨೧-೧೨-೬೩ ರಂದು ಶನಿವಾರ ಸಂಜೆ ಶ್ರೀ ಮಧುಗಿರಿ ವಾಸುದೇವಮೂರ್ತಿಗಳು 'ಪಾರ್ಸಿ ಸಾಹಿತ್ಯ ಮತ್ತು ಭಾಷಣ ಕಲೆ' ಎಂಬ ವಿಷಯವಾಗಿ ಭಾಷಣ ಮಾಡಿದರು. ಪರಿಷತ್ತಿನ ಕಾರ್ಯದರ್ಶಿಗಳಲ್ಲೊಬ್ಬರಾದ ಶ್ರೀ ಎಸ್. ಶಂಕರಪ್ಪನವರು ಸಭಾಧ್ಯಕ್ಷತೆಯನ್ನು ವಹಿಸಿದ್ದರು. ಭಾಷಣ ಕಲಾ ವಿದ್ಯಾರ್ಥಿಯಾದ ಚಿ|| ಎಸ್. ರಂಗಸ್ವಾಮಿ ಎಂಬಾತನು ಭಾಷಣ ಮಾಡಿ ಉಪನ್ಯಾಸಕರ ಪರಿಚಯ ಮಾಡಿಕೊಟ್ಟರು. ಅನಂತರ ಮತ್ತೊಬ್ಬ ವಿದ್ಯಾರ್ಥಿಯಾದ ಶ್ರೀ ನಾರಾಯಣರಾವ್ ಎಂಬುವರು ವಂದನೆಗಳನ್ನರ್ಪಿಸಿದರು. ವ್ಯವಸ್ಥಾಪಕರಾದ ಶ್ರೀ ಬ. ನ. ಸುಂದರರಾಯರು ಇದೇ ಭಾಷಣಮಾಲೆಯ ಕಡೆಯದಿನವೆಂದು ತಿಳಿಸಿ, ವಿದ್ಯಾರ್ಥಿಗಳಿಗೆ ಅನೇಕ ಉಪಯುಕ್ತ ಸಲಹೆಗಳನ್ನಿತ್ತರು.

## ಪರಿಷತ್ತಿನ ಸದಸ್ಯರಲ್ಲಿ ವಿನಂತಿ

೧೯೬೩ ನೇ ಸಾಲಿನ ಪರಿಷತ್ತಿನ ಸದಸ್ಯತ್ವದ ಚಂದಾ ಡಿಸೆಂಬರ್ ೩೧ ನೇ ತಾರೀಖಿಗೆ ಮುಗಿಯಿತು. ೧೯೬೪ರ ಪರಿಷತ್ತಿನ ಸದಸ್ಯತ್ವದ ಚಂದಾ ಆರು ರೂಪಾಯಿಗಳನ್ನು ದಯೆಯಿಟ್ಟು ಈ ಕೂಡಲೇ ಪರಿಷತ್ತಿಗೆ ಕಳಿಸಿ ನೆರವು ನೀಡಬೇಕೆಂದು ವಿನಯದಿಂದ ವಿನಂತಿಸುತ್ತೇವೆ.

ಕೆ. ಎಂ. ಕೃಷ್ಣರಾವ್
ಎಸ್. ಶಂಕರಪ್ಪ
ಗೌರವ ಕಾರ್ಯದರ್ಶಿಗಳು

# ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮

## ಸಾಹಿತ್ಯ ಪರೀಕ್ಷೆಗಳು—೧೯೬೪

೧೯೬೪ ನೆಯ ಸಾಲಿನ ಸಾಹಿತ್ಯ ಪರೀಕ್ಷೆಗಳನ್ನು ಈ ಕೆಳಗೆ ಕಂಡ ಕರ್ಣಾಟಕದ ನಾನಾ ಕೇಂದ್ರಗಳಲ್ಲಿ ೧೯೬೪ ನೆಯ ಫೆಬ್ರವರಿ ೮ ನೆಯ ಶನಿವಾರ ಮತ್ತು ೯ ನೆಯ ಭಾನುವಾರಗಳಲ್ಲಿ ನಡೆಸಲು ಏರ್ಪಡಿಸಿದೆ. ವೇಳಾ ಪಟ್ಟಿಯನ್ನು ಈ ಕೆಳಗೆ ಕೊಟ್ಟಿದೆ.

ಕೇಂದ್ರ ಮತ್ತು ಸ್ವಂತ ವ್ಯಾಸಂಗಿಗಳ ಪ್ರವೇಶಪತ್ರಗಳನ್ನು ಆಯಾ ಕೇಂದ್ರಗಳಿಗೆ ಕಳುಹಿಸಿಕೊಡಲಾಗುತ್ತದೆ. ಸ್ವಂತ ವ್ಯಾಸಂಗಿಗಳು ತಾವು ಪರಿಷತ್ತಿನ ಅನುಮತಿ ಪಡೆದು ಚುನಾಯಿಸಿಕೊಂಡಿರುವ ಕೇಂದ್ರಗಳ ವ್ಯವಸ್ಥಾಪಕರಿಂದ ತಮ್ಮ ಪ್ರವೇಶಪತ್ರಗಳನ್ನು ಪಡೆಯಬಹುದು ಅಥವಾ ತಮಗೆ ನೇರವಾಗಿ ಪ್ರವೇಶಪತ್ರಗಳು ಬೇಕಿದ್ದಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆದು, ೧೫ ನ.ಪೈ.ಗಳ ಅಂಚೆ ಚೀಟಿಯನ್ನು ೧೯೬೪ ನೆಯ ಜನವರಿ ೩೧ ನೆಯ ತಾರೀಖಿನೊಳಗಾಗಿ ಪರಿಷತ್ತಿಗೆ ಕಳುಹಿಸಿ ತರಿಸಿಕೊಳ್ಳಬಹುದು. ಆಮೇಲೆ ಬಂದ ಪತ್ರಗಳಿಗೆ ಗಮನ ಕೊಡಲಾಗುವುದಿಲ್ಲ. ಬೆಂಗಳೂರು ಕೇಂದ್ರವನ್ನು ತೆಗೆದುಕೊಂಡಿರುವ ಸ್ವಂತ ವಿದ್ಯಾರ್ಥಿಗಳು ತಮ್ಮ ಪ್ರವೇಶಪತ್ರಗಳನ್ನು ಪರಿಷತ್ತಿನ ಕಛೇರಿಯಿಂದ ಫೆಬ್ರವರಿ ಮೊದಲನೆಯ ವಾರದಲ್ಲಿ ಪಡೆಯತಕ್ಕದ್ದು. ಒಂದು ಸಲ ಚುನಾಯಿಸಿಕೊಂಡ ಕೇಂದ್ರವನ್ನು ಯಾವ ಕಾರಣದಿಂದಲೂ ಬದಲಾಯಿಸುವುದಿಲ್ಲ.

| ಜಿಲ್ಲೆ | ಪರೀಕ್ಷಾ ಕೇಂದ್ರ |
|---|---|
| ೧. ಬೆಂಗಳೂರು | ಕನ್ನಡ ಸಾಹಿತ್ಯ ಪರಿಷತ್ತು. |
| ೨. ಹಾಸನ | ಸರ್ಕಾರಿ ಪ್ರೌಢಶಾಲ, ಹಾಸನ. |
| ೩. ಉ. ಕನ್ನಡ | ಮಾಧ್ಯಮಿಕ ಶಾಲ, ಸಂಪಖಂಡ. |
| ೪. ರಾಯಚೂರು | ಪ್ರೌಢಶಾಲ, ದೇವದುರ್ಗ. |
| ೫. ಧಾರವಾಡ | ಎಸ್. ಎಂ. ಶಾಲ, ಹೊಸರಿತ್ತಿ. |
| ೬. ಬಿಜಾಪುರ | ಎಸ್. ಎಂ. ಶಾಲ, ಅಮಿನಗಡ. |
| ೭. ಬೆಳಗಾಂವಿ | ಮ್ಯುನಿಸಿಪಲ್ ಹೈಸ್ಕೂಲು, ಗೋಕಾಕ. |

"ಜಾಣ" ಪರೀಕ್ಷೆ

ವೇಳಾಪಟ್ಟಿ

| ದಿನ | ವೇಳೆ | ವಿಷಯ |
|---|---|---|
| ತಾ॥ ೮–೨–೧೯೬೪ ಶನಿವಾರ | ಬೆಳಿಗ್ಗೆ ೮ ರಿಂದ ೧೧ ಗಂಟೆಯವರೆಗೆ | ಪದ್ಯ ಮತ್ತು ನಾಟಕ |
| ,, ,, | ಮಧ್ಯಾಹ್ನ ೨ ರಿಂದ ೫ ಗಂಟೆಯವರೆಗೆ | ಗದ್ಯ ಮತ್ತು ಪ್ರಬಂಧ |
| ತಾ॥ ೯–೨–೧೯೬೪ ಭಾನುವಾರ | ಬೆಳಿಗ್ಗೆ ೮ ರಿಂದ ೧೧ ಗಂಟೆಯವರೆಗೆ | ವ್ಯಾಕರಣ, ಛಂದಸ್ಸು ಮತ್ತು ಅಲಂಕಾರ |
| ,, ,, | ಮಧ್ಯಾಹ್ನ ೨ ರಿಂದ ೫ ಗಂಟೆಯವರೆಗೆ | ಸಾಹಿತ್ಯ ಚರಿತ್ರೆ ಮತ್ತು ಕನ್ನಡ ನಾಡಿನ ಚರಿತ್ರೆ |

"ಕಾವ" ಪರೀಕ್ಷೆ

| ದಿನ | ವೇಳೆ | ವಿಷಯ |
|---|---|---|
| ತಾ॥ ೮–೨–೧೯೬೪ ಶನಿವಾರ | ಬೆಳಿಗ್ಗೆ ೮ ರಿಂದ ೧೧ ಗಂಟೆಯವರೆಗೆ | ಪದ್ಯ ಮತ್ತು ವ್ಯಾಕರಣ |
| ,, ,, | ಮಧ್ಯಾಹ್ನ ೨ ರಿಂದ ೫ ಗಂಟೆಯವರೆಗೆ | ಗದ್ಯ ಮತ್ತು ಪ್ರಬಂಧರಚನೆ |
| ತಾ॥ ೯–೨–೧೯೬೪ ಭಾನುವಾರ | ಬೆಳಿಗ್ಗೆ ೮ ರಿಂದ ೧೧ ಗಂಟೆಯವರೆಗೆ | ಚರಿತ್ರೆ ಮತ್ತು ಸಂಸ್ಕೃತಿ |

ಕೆ. ಎಂ. ಕೃಷ್ಣರಾವ್
ಎಸ್. ಶಂಕರಪ್ಪ
ಗೌರವ ಕಾರ್ಯದರ್ಶಿಗಳು

# ಸಂಪಾದಕೀಯ

## ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಆಶಯುಗಳು

೧೯೬೩ ಡಿಸೆಂಬರ್ ೨೮, ೨೯ ಮತ್ತು ೩೦ ರಲ್ಲಿ ತುಮಕೂರು ಸಿದ್ಧಗಂಗಾ ಕ್ಷೇತ್ರದಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವು ಯಶಸ್ವಿಯಾಗಿ ನೆರವೇರಿತು. ಸ್ವಾಗತಾಧ್ಯಕ್ಷರೂ, ಸಿದ್ಧಗಂಗಾ ಕ್ಷೇತ್ರದ ಪೀಠಾಧಿಪತಿಗಳೂ ಆದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಸಮ್ಮೇಳನದ ಕಾರ್ಯಕಲಾಪಗಳನ್ನು ವೀಕ್ಷಿಸಿದುದಲ್ಲದೆ, ಸಕಲ ರೀತಿಯಲ್ಲಿಯೂ ಸಮ್ಮೇಳನದ ವ್ಯವಸ್ಥಾಪಕರೊಡನೆ ಸಹಕರಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪಂಡಿತರತ್ನಂ ಶ್ರೀ ಶಿವಮೂರ್ತಿ ಶಾಸ್ತ್ರಿಗಳವರು ಸ್ವಾಗತ ಸಮಿತಿಯವರ ಅಚ್ಚುಕಟ್ಟಿನ ವ್ಯವಸ್ಥೆ, ಅವರ ಉತ್ಸಾಹ ಮತ್ತು ಶ್ರದ್ಧೆಗಾಗಿ ವಂದಿಸಿದರು. ಅಖಿಲ ಭಾರತದ ಆಯಕಟ್ಟಿನಲ್ಲಿ ನಡೆದ ಈ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಶ್ರೀ ರಂ. ಶ್ರೀ. ಮುಗಳಿಯವರು ಅಧ್ಯಕ್ಷತೆಯನ್ನು ವಹಿಸಿ ಸ್ಫೂರ್ತಿಯುತವಾದ ಭಾಷಣ ಮಾಡಿದರು. ಸಮ್ಮೇಳನದ ಸಂಪೂರ್ಣ ವರದಿಯನ್ನು ಈ ಸಂಚಿಕೆಯ ಬೇರೊಂದು ಕಡೆ ಕೊಟ್ಟಿದೆ.

ಮುಖ್ಯವಾಗಿ, ಸಮ್ಮೇಳನದ ಆಶಯುಗಳೇನೆಂಬುದನ್ನು ನಾವು ಇಲ್ಲಿ ಒತ್ತಿ ಹೇಳಬೇಕಾಗಿದೆ. ಅಲ್ಲಿ ಕನ್ನಡ ಮಹಾಜನರು ಸರ್ವಾನುಮತದಿಂದ ಸಮ್ಮೇಳನದ ಆಶಯವನ್ನು ನಿರ್ಣಯಗಳ ರೂಪದಲ್ಲಿ ಮಂಡಿಸಿದ್ದಾರೆ. ಆ ನಿರ್ಣಯಗಳಲ್ಲಿ ರಾಜ್ಯ ಸರ್ಕಾರದವರೂ, ಕೇಂದ್ರ ಸರ್ಕಾರದವರೂ ಗಮನಿಸಬೇಕಾದುವುಗಳನ್ನು ಇಲ್ಲಿ ಪ್ರಸ್ತಾಪಿಸುತ್ತೇವೆ.

೧. ನಮ್ಮ ರಾಜ್ಯಕ್ಕೆ ಭೌಗೋಳಿಕ ಐತಿಹಾಸಿಕ, ಸಾಂಸ್ಕೃತಿಕ ಕಾರಣಗಳಿಂದ ಕರ್ಣಾಟಕ ಎಂದೇ ಹೆಸರಿರಬೇಕು.

೨. ದಿನೇ ದಿನೇ ಹೆಚ್ಚಿನ ಪ್ರಮಾಣದಲ್ಲಿ ಪ್ರಕಟವಾಗುತ್ತಿರುವ ಅಯೋಗ್ಯ ಮತ್ತು ಅಶ್ಲೀಲ ಸಾಹಿತ್ಯವನ್ನು ತಡೆಹಿಡಿಯಲು ಸರ್ವವಿಧ ಕ್ರಮುಗಳನ್ನೂ ತೆಗೆದುಕೊಳ್ಳಬೇಕು.

೩. ಗೋವಾ ರಾಜ್ಯದಲ್ಲಿರುವ ಕನ್ನಡಿಗರ ಹಿತದೃಷ್ಟಿಯಿಂದ ಕನ್ನಡ ಮಕ್ಕಳಿಗಾಗಿ ಕನ್ನಡ ಶಾಲೆಗಳನ್ನು ಸ್ಥಾಪಿಸಬೇಕು. ಮತ್ತು ಕನ್ನಡ ಸಾಂಸ್ಕೃತಿಕ ಚಟುವಟಿಕೆಗಳನ್ನು ಏರ್ಪಡಿಸಬೇಕು.

೪. ಗೋವಾ ರಾಜಧಾನಿಯಾದ ಪಂಜಿಂ ಕಾರ್ಯಸೌಧದಲ್ಲಿಯೂ, ಪೋರ್ಚುಗೀಸ್ ರಾಜಧಾನಿಯಾದ ಲಿಸ್ಬನ್ನಿನ ಸರಕಾರಿ ಭವನದಲ್ಲಿಯೂ ಇರುವ ಕೆಳದಿ, ಸ್ವಾದಿ, ವಿಜಾಪುರ, ಅದಿಲಶಾಹಿ, ವಿಜಯನಗರ, ಮೊದಲಾದ ಕರ್ಣಾಟಕದ ಇತಿಹಾಸಕ್ಕೆ ಸಂಬಂಧಪಟ್ಟ ಕಾಗದ ಪತ್ರಗಳನ್ನು ಮತ್ತು ಇತರ ದಾಖಲೆಗಳನ್ನು ಕನ್ನಡ ಸಾಹಿತ್ಯ ಪರಿಷತ್ತಿಗೆ ಒದಗಿಸಬೇಕು.

೫. ಮೈಸೂರು ರಾಜ್ಯದಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡಿರುವುದರಿಂದ, ಇದನ್ನು ಬೇಗನೆ ಕಾರ್ಯರೂಪದಲ್ಲಿ ತರಲು ಪಾರಿಭಾಷಿಕ ಕೋಶರಚನೆಗೆ ಒಂದು ತಜ್ಞರ ಸಮಿತಿಯನ್ನು ನೇಮಿಸಬೇಕು.

೬. ಕೇಂದ್ರ ಸರಕಾರದ ಆಶ್ರಯದಲ್ಲಿ ಯುನೆಸ್ಕೊ ಸಹಾಯಧನದಿಂದ ಭಾರತದ ಅನೇಕ ಭಾಷೆಯ ಒಳ್ಳೆಯ ಕೃತಿಗಳಿಗೆ ಬಹುಮಾನ ಪ್ರೋತ್ಸಾಹ ಕೊಡುತ್ತಿರುವಂತೆ, ಕನ್ನಡ ಭಾಷೆಯ ಕೃತಿಗಳಿಗೂ ಬಹುಮಾನ ಪ್ರೋತ್ಸಾಹ ಕೊಡಬೇಕು.

೭. ಕರ್ನಾಟಕದಲ್ಲಿ ತುಂಬಿ ತುಳುಕುತ್ತಿರುವ ಶಿಲಾಶಾಸನಗಳು ಮತ್ತು ತಾಮ್ರಪಟಗಳು ಬಹುಮಟ್ಟಿಗೆ ಇನ್ನೂ ಅಚ್ಚಾಗದೆ ಇರುವುದರಿಂದ ಅವುಗಳನ್ನೆಲ್ಲಾ ಸಂಗ್ರಹಿಸಿ ಪ್ರಾಚ್ಯವಸ್ತು ಸಂಶೋಧನಾಲಯ, ಮೈಸೂರು, ಮತ್ತು ಕರ್ನಾಟಕ ಪ್ರಾಚ್ಯ ಸಂಶೋಧನಾಲಯ, ಮತ್ತು ಕನ್ನಡ ಸಾಹಿತ್ಯ ಪರಿಷತ್ತು ಮೊದಲಾದ ಸಂಸ್ಥೆಗಳಿಗೆ ಸಂಗ್ರಹಿಸಿ ಪ್ರಕಟಿಸಲು ಆಗುವ ಸಹಾಯ ದ್ರವ್ಯವನ್ನು ಸರಕಾರವು ಮಂಜೂರು ಮಾಡುವುದು.

ಇವೇ ಮೊದಲಾದ ನಿರ್ಣಯಗಳನ್ನು ಸಮ್ಮೇಳನವು ಅಧಿಕೃತವಾಗಿ ಸರ್ವಾನುಮತದಿಂದ ಅಂಗೀಕರಿಸಿದೆ. ಈ ನಿರ್ಣಯಗಳನ್ನು ರಾಜ್ಯದ ಸರ್ಕಾರದವರೂ, ಕೇಂದ್ರ ಸರ್ಕಾರದವರೂ ಗಮನಕ್ಕೆ ತಂದುಕೊಂಡು ಕನ್ನಡಿಗರ ಆಶೋತ್ತರಗಳನ್ನು ನೆರವೇರಿಸುವುದು ಯುಕ್ತವಾಗಿದೆ. ಈ ಸಂಬಂಧದಲ್ಲಿ ಕನ್ನಡ ಮಹಾಜನರೂ ತಮ್ಮ ಕರ್ತವ್ಯವನ್ನು ನೆರವೇರಿಸಬೇಕು.

ಒಟ್ಟಿನಲ್ಲಿ, ಭಾರತದ ಹದಿನೈದು ಅಧಿಕೃತ ಭಾಷೆಗಳಲ್ಲಿ ಕನ್ನಡವೂ ಒಂದು. ಆದರೆ, ಆಯಾ ರಾಜ್ಯ ಸರ್ಕಾರಗಳವರು ತಮ್ಮ ತಮ್ಮ ಪ್ರಾದೇಶಿಕ ಭಾಷೆಗಳಿಗೆ ನೀಡುತ್ತಿರುವಷ್ಟು ಸಹಾಯವನ್ನು ಮೈಸೂರು ರಾಜ್ಯ ಸರ್ಕಾರದವರು ನೀಡುತ್ತಿಲ್ಲ. ಅದರಂತೆ, ಆಯಾ ಪ್ರಾದೇಶಿಕ ಭಾಷೆಗಳಿಗೆ ಅಲ್ಲಲ್ಲಿಯ ಮಹಾಜನರು ನೀಡುತ್ತಿರುವಷ್ಟು ಪ್ರೋತ್ಸಾಹವನ್ನು ಕನ್ನಡ ಮಹಾಜನರು ನೀಡುತ್ತಿಲ್ಲ. ಆದುದರಿಂದಲೇ ಕನ್ನಡ ಭಾಷೆಯೆಂಬುದು ಒಂದು ಪುಷ್ಕಳವಾದ ಭಾಷೆ, ಅತ್ಯಂತ ಪುರಾತನವಾದ ಭಾಷೆ ಎಂಬ ತಿಳಿವಳಿಕೆಯೇ ಇತರ ಜನಾಂಗಗಳಿಗಿಲ್ಲ. ಅಷ್ಟೇ ಏಕೆ, ಕನ್ನಡವೇ ಮನೆಮಾತಾಗಿರುವ ಕನ್ನಡಿಗರಿಗೂ ಇಲ್ಲವೆಂದರೂ ಅತಿಶಯೋಕ್ತಿಯಲ್ಲ. ಈಗಲಾದರೂ, ಮೈಸೂರು ರಾಜ್ಯ ಸರ್ಕಾರದವರೂ ಮತ್ತು ಕನ್ನಡ ಮಹಾಜನರೂ ಕನ್ನಡದ ಕನ್ನಡಿಯ ಮೇಲೆ ಮುಸುಕಿರುವ ಧೂಳನ್ನು ತೆಗೆದು, ಕನ್ನಡದ ಕನ್ನಡಿಯಲ್ಲಿ ವಿಶ್ವದ ಸಮಸ್ತ ಜನಾಂಗದವರೂ ತಮ್ಮ ಪ್ರತಿಬಿಂಬವನ್ನು ಕಾಣುವಂತೆ ಮಾಡಬೇಕಾದುದು ಅಗತ್ಯವಾಗಿದೆ.

**ಪು. ತಿ. ನರಸಿಂಹಾಚಾರ್ಯರಿಗೆ ಸನ್ಮಾನ**

ಮದರಾಸಿನ ತಮಿಳು ಬರೆಹಗಾರರ ಸಂಘದವರು (ತಮಿಳ್ ಎಳುತ್ತಾಳರ್ ಮಾನಾಡು) ಕಳೆದ ಡಿಸೆಂಬರ್ ೨೧ ನೆಯ ತಾರೀಖು ಮದರಾಸಿನಲ್ಲಿ ಶ್ರೀ ಪು. ತಿ. ನರಸಿಂಹಾಚಾರ್ಯರವರಿಗೆ ಚಿನ್ನದ ಪದಕವನ್ನು ಪಾರಿತೋಷಕವಾಗಿ ಕೊಟ್ಟು ಸನ್ಮಾನಿಸಿದ್ದಾರೆ. ಶ್ರೀ ನರಸಿಂಹಾಚಾರ್ಯರು ತಮಿಳು ಭಾಷೆಯಲ್ಲಿ ಪ್ರಸಿದ್ಧವಾಗಿರುವ "ತಿರುವಾಯ್ ಮುಳಿ" ಎಂಬ ಸದ್ಗ್ರಂಥವನ್ನು "ಸಿರಿ ಬಾಯ ನುಡಿ" ಎಂಬ ಹೆಸರಿನಲ್ಲಿ ಕನ್ನಡಕ್ಕೆ ಭಾಷಾಂತರ ಮಾಡಿದ್ದಾರೆ. ಸುಪ್ರಸಿದ್ಧ ಕನ್ನಡ ಸಾಹಿತಿಗಳಾದ ಶ್ರೀ ಪು. ತಿ. ನ. ಅವರು ನಿಜವಾಗಿಯೂ ಧನ್ಯರು. ಇವರು ೨೨ ನೆಯ ತಾರೀಖು ಮದರಾಸಿನ "ಕನ್ನಡ ಮಿತ್ರ ಸಂಘ" ದಲ್ಲಿ ಭಾಷಣಮಾಡಿ ತಾವು ಕನ್ನಡದ ಕಿಂಕರನಂತೆ ಶ್ರಮಿಸಲು ಸಿದ್ಧವಾಗಿರುವುದಾಗಿಯೂ, ಮಹಾಜನರ ಪ್ರೋತ್ಸಾಹವು ಅಗತ್ಯವೆಂದೂ ತಿಳಿಸಿದರು.

**ದಿವಂಗತ ಶ್ರೀ ಕೆ. ಶೇಷಗಿರಿ ಆಚಾರ್‌ರವರು**

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕಳೆದ ಕೆಲವಾರು ವರ್ಷಗಳಿಂದ ಅಸಿಸ್ಟೆಂಟ್ ಸೆಕ್ರೆಟರಿಗಳಾಗಿ ಅಹೋರಾತ್ರಿ ದುಡಿದು, ತುಮಕೂರಿನ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ತೆರಳಿ, ಸಮ್ಮೇಳನದ ಅಧಿವೇಶನವು ಉದ್ಘಾಟನೆಯಾದ ದಿನವೇ (ಡಿಶಂಬರ್ ೨೮ನೆಯ ತಾರೀಖು) ತಮ್ಮ ೬೩ನೆಯ ವರ್ಷದಲ್ಲಿ ಶ್ರೀ ಕೆ. ಶೇಷಗಿರಿ ಆಚಾರ್ ಅವರು ಅಸುವನ್ನು ನೀಗಿದರು. ಇವರು ತೀರಿಹೋದ ದುಃಖವು ಸಮ್ಮೇಳನಕ್ಕೆ ಬಂದಿದ್ದ ಕನ್ನಡಿಗ ಮಹಾಜನರಲ್ಲಿ ಕಂಬನಿಯನ್ನು ತುಂಬಿತು. ಶ್ರೀ ಆಚಾರ್ ಅವರು ಗೌ|| ಮುದ್ರಣಾಲಯದಲ್ಲಿ ನೌಕರರಾಗಿ ನಿವೃತ್ತರಾದ ಮೇಲೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕೆಲಸಕ್ಕೆ ಸೇರಿದರು. ತಮ್ಮ ಅಪಾರ ಅನುಭವವನ್ನು ಕಾರ್ಯರೂಪದಲ್ಲಿ ತಂದು ಎಲ್ಲರ ಮೆಚ್ಚುಗೆಗೂ ಪಾತ್ರರಾಗಿದ್ದರು. ದಿವಂಗತರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೂ, ಇವರ ಕುಟುಂಬವರ್ಗಕ್ಕೆ ಈ ದುಃಖವನ್ನು ಸಹಿಸುವ ಶಕ್ತಿಯನ್ನೂ ನೀಡಲೆಂದು ಹಾರೈಸುತ್ತೇವೆ.

---

**ಪರಿಷತ್ತಿನ ಸುದ್ದಿಗಳು**

## ೧೯೬೩–೬೪ನೇ ಸಾಲಿನ ಗಮಕ ಪ್ರವೇಶ ಪರೀಕ್ಷೆಗಳು

ಮೇಲೆ ಕಂಡ ಪರೀಕ್ಷೆಗಳನ್ನು (ಲಿಖಿತ ಭಾಗ) ೧೯೬೪ ನೇ ಫೆಬ್ರವರಿ ತಿಂಗಳ ೧೬ ನೇ ಭಾನುವಾರ ಬೆಳಿಗ್ಗೆ ೯ ರಿಂದ ೧೧ರ ವರೆಗೆ ಈ ಕೆಳಗೆ ಕಾಣಿಸಿರುವ ಕೇಂದ್ರಗಳಲ್ಲಿ ನಡೆಸಲಾಗುವುದು.

| | | |
|---|---|---|
| ೧. | ಮೈಸೂರು | ಶಾರದಾ ವಿಲಾಸ ಹೈಸ್ಕೂಲ್, ಮೈಸೂರು. |
| ೨. | ಹಾಸನ | ಗೌ. ಹೈಸ್ಕೂಲ್, ಹಾಸನ. |
| ೩. | ಶಿವಮೊಗ್ಗ | ಗೌ. ಹೈಸ್ಕೂಲ್, ಶಿವಮೊಗ್ಗ. |
| ೪. | ತಿಪಟೂರು | ಕಲ್ಪತರು ಕಾಲೇಜು, ತಿಪಟೂರು. |
| ೫. | ದಾವಣಗೆರೆ | ಬೇಸಿಕ್ ಟ್ರೇನಿಂಗ್ ಇನ್ಸ್ಟಿಟ್ಯೂಟು, ದಾವಣಗೆರೆ. |
| ೬. | ದೂರವಾಣಿನಗರ (ಬೆಂಗಳೂರು) | ವಿದ್ಯಾಮಂದಿರ ಹೈಸ್ಕೂಲ್, ದೂರವಾಣಿನಗರ. |

ಕೆ. ಎಂ. ಕೃಷ್ಣರಾವ್
ಎಸ್. ಶಂಕರಪ್ಪ
ಗೌರವ ಕಾರ್ಯದರ್ಶಿಗಳು

ಸಂಪಾದಕರು: ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು–೧೮.

# ಕನ್ನಡ ಸಾಹಿತ್ಯ ಪರಿಷತ್ತಿನ
# ಕನ್ನಡ-ಕನ್ನಡ ನಿಘಂಟು



## ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ "ಕನ್ನಡ ನಿಘಂಟು" ಡೆಮ್ಮಿ ಚತುಷ್ಪತ್ರ ಆಕಾರದ ಸುಮಾರು ೫,೦೦೦ ಪುಟಗಳನ್ನು ಒಳಗೊಂಡು, ಒಂದೊಂದು ಸಂಪುಟದಲ್ಲೂ ಸುಮಾರು ೧೨೫೦ ಪುಟಗಳಿರುವ ನಾಲ್ಕು ಸಂಪುಟಗಳಲ್ಲಿ (Volumes) ಪ್ರಕಟವಾಗುವಂತೆ ಏರ್ಪಡಿಸಲಾಗಿದೆ.

ನಿಘಂಟಿನ ಒಟ್ಟು ಬೆಲೆ ೧೨೦ ರೂಪಾಯಿಗಳು; ಮುಂಗಡವಾಗಿ ಹಣ ಸಲ್ಲಿಸುವ ಗ್ರಾಹಕರಿಗೆ ೧೦೦ ರೂಪಾಯಿಗಳ ರಿಯಾಯಿತಿ ದರದಲ್ಲಿ ಅದನ್ನು ಒದಗಿಸಲಾಗುತ್ತದೆ. ನಿಘಂಟು ಸಿದ್ಧವಾದಂತೆಲ್ಲ ೯೬ ಪುಟಗಳುಳ್ಳ ಸಂಚಿಕೆಗಳ (Fascicules) ರೂಪದಲ್ಲಿ ಅದನ್ನು ಮುಂಗಡವಾಗಿ ೧೦೦ ರೂಪಾಯಿಗಳ ರಿಯಾಯಿತಿಯ ಬೆಲೆಯನ್ನು ಸಲ್ಲಿಸಿರುವ ಗ್ರಾಹಕರಿಗೆ ತಲುಪಿಸಲಾಗುವುದು. ನಿಘಂಟಿನ ಸಂಪುಟಗಳನ್ನಾಗಲಿ ಸಂಚಿಕೆಗಳನ್ನಾಗಲಿ ಬಿಡಿ ಬಿಡಿಯಾಗಿ ವಿಕ್ರಯಿಸುವುದಿಲ್ಲ.

ನಿಘಂಟಿನ ಎರಡನೆಯ ಸಂಪುಟವು ಪ್ರಕಟವಾದ ಕೂಡಲೆ **ರಿಯಾಯಿತಿಯ ದರದಲ್ಲಿ** ಅದನ್ನು ವಿಕ್ರಯಿಸುವುದನ್ನು ನಿಲ್ಲಿಸಲಾಗುತ್ತದೆ; ಆ ಮುಂದೆ ಪೂರ್ಣವಾದ ಬೆಲೆಯನ್ನು ಕೊಡಬೇಕಾಗುತ್ತದೆ.

ನಿಘಂಟಿನ ಒಂದು ಸಂಪುಟವು ಸಿದ್ಧವಾದ ಬಳಿಕ ಅದರ ರಕ್ಷಾಕವಚವನ್ನು (Binding Case) ಮುಂಗಡವಾಗಿ ಬೆಲೆ ಸಲ್ಲಿಸಿರುವ ಗ್ರಾಹಕರಿಗೆ ಉಚಿತವಾಗಿ ಒದಗಿಸಲಾಗುವುದು.

ಸಂಚಿಕೆಗಳನ್ನೂ ರಕ್ಷಾಕವಚಗಳನ್ನೂ ಕಳಿಸಲು ತಗುಲುವ ಅಂಚೆವೆಚ್ಚವನ್ನು ಗ್ರಾಹಕರೇ ಸಲ್ಲಿಸತಕ್ಕದ್ದು.

ಗ್ರಾಹಕರು ಮುಂಗಡ ಬೆಲೆಯ ಜೊತೆಗೆ ಹತ್ತು ರೂಪಾಯಿಗಳನ್ನು ಅಂಚೆವೆಚ್ಚ, ರವಾನೆ ವೆಚ್ಚಗಳಿಗಾಗಿ ಸಲ್ಲಿಸಬೇಕು. ಸಂಚಿಕೆಗಳನ್ನು ರಿಜಿಸ್ಟರ್ಡ್ ಪೋಸ್ಟ್ ಮೂಲಕ ಕಳಿಸಬೇಕೆಂದು ಗ್ರಾಹಕರು ಅಪೇಕ್ಷಿಸಿದಲ್ಲಿ ಆ ವಿಷಯವನ್ನು ಅವರು ಲಿಖಿತರೂಪದಲ್ಲಿ ಮೊದಲೇ ತಿಳಿಸತಕ್ಕದ್ದು. ಹಾಗೆ ಮಾಡದಿದ್ದರೆ ಸಂಚಿಕೆಗಳನ್ನು "ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್" ಸಮೇತವಾಗಿ ಸಾದಾ ಟಪಾಲಿನ ಮೂಲಕ ಕಳಿಸಲಾಗುವುದು. ಸಂಚಿಕೆಗಳನ್ನು ಪರಿಷತ್ತಿನ ಕಚೇರಿಯಲ್ಲೇ ತೆಗೆದುಕೊಳ್ಳಲು ಅಪೇಕ್ಷಿಸುವವರು ಮುಂಚಿತವಾಗಿ ತಿಳಿಸಿ ಆ ರೀತಿ ಮಾಡಬಹುದು; ಅಂಥವರು ಅಂಚೆವೆಚ್ಚವನ್ನು ಕೊಡಬೇಕಾಗುವುದಿಲ್ಲ.

**ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.**

ಈ ವಿಳಾಸಕ್ಕೆ ಹಣ ಕಳುಹಿಸಿ ಪತ್ರ ವ್ಯವಹಾರ ಮಾಡಬಹುದು.

**ಕೆ. ಎಂ. ಕೃಷ್ಣರಾವ್**
ಗೌರವ ಕಾರ್ಯದರ್ಶಿ

Reg. No. B. C. 4—January 1964

Licensed to Post without pre-payment. License No 1



[illegible] ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮.




# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೭]  ಸಂಪಾದಕರು: ಡಿ. ಆರ್. ರಾಮಯ್ಯ, ಬಿ.ಎ.  [ಸಂಚಿಕೆ ೨

## ಪರಿಷತ್ತಿನಲ್ಲಿ ಪುರಂದರದಾಸರ ನಾಲ್ಕನೇ ಶತಮಾನೋತ್ಸವ



ಜನವರಿ ೨೯ ರಿಂದ ನಾಲ್ಕು ದಿನಗಳವರೆಗೆ ಪರಿಷತ್ತು ಈ ಉತ್ಸವವನ್ನು ಆಚರಿಸಿತು. ಇದು ಆಗ್ಗೆ ತೆಗೆದ ಚಿತ್ರ. ನಿವೃತ್ತ ಮುಖ್ಯ ನ್ಯಾಯಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಉತ್ಸವವನ್ನು ಉದ್ಘಾಟಿಸಿದರು. ಈ ಚಿತ್ರದಲ್ಲಿ ಅವರು ಮಾತನಾಡುತ್ತಿರುವುದನ್ನು ಕಾಣಬಹುದು. ಶ್ರೀ ಶ್ರೀನಿವಾಸರಾಯರ ಎಡಭಾಗದಲ್ಲಿ ಕುಳಿತಿರುವವರು ಜ॥ ಕಾರಿಯಪ್ಪನವರು.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

ಸಂಪುಟ ೨೭ ] ಫೆಬ್ರವರಿ ೧೯೬೪ [ ಸಂಚಿಕೆ ೨

# ವಿಷಯ ಸೂಚಿಕೆ

# ಕನ್ನಡನುಡಿ



ಸಂಪುಟ ೨೬ ] ಫೆಬ್ರವರಿ ೧೯೬೪ [ ಸಂಚಿಕೆ ೨


## ಬನವಾಸಿಯ ಮಧುಕೇಶ್ವರ*

'ವನವಿಹಾರಿ'

ನಿರತವೆನ್ನ ಕನಸಿನಲಿ ಮನಸಿನಲಿ
ನೆಲೆಸು ನೀ ಮಧುಕೇಶ್ವರ ದೇವನೆ
ಪರಮ ಪಾವನದ ನಿನ್ನ ಸೇವೆಯನು
ಸಲ್ಲಿಸಲು ಬಂದಿಹೆನು ನಾನಿಲ್ಲಿ

ವರದಾ ತೀರದೊಳಿಹ ಬನಮಧ್ಯದಲಿ
ಮೆರೆಯುತಿಹ ವೈಜಯಂತಿ ನಗರದಲಿ
ಪಂಪಕವಿ ಪೆಂಪಿನಲಿ ಸ್ಫೂರ್ತಿಯನುಪಡೆದಿಹ ಬನವಾಸಿಯಲಿ
ಇಂಪಿನಲಿ ಸಂತಸದಿ ಕಾವ್ಯಗಳ ರಚಿಸಿದ ಈ ನಾಡಿನಲಿ

ಬಾಳಿ ಅಳಿದ ವೀರ ಕದಂಬ ರಾಜಧಾನಿಯಲಿ
ಧಾಳಿಗೀಡಾದ ಕಲಾಮಯ ದೇವಾಲಯದಿ
ನೆಲೆಸಿ ಜನರ ಸಲಹುವ ಮಧುಕೇಶ್ವರನೆ
ಸಲೆ ಬೆಳಗುವ ಸ್ವಾಮಿ ಪರಮೇಶ್ವರನೆ

ಸ್ವಾದಿರಾಜನೊಬ್ಬನತ್ಯಾದರದಿ ಮಾಡಿಸಿಹ
ಕಲ್ಲುಮಂಚದ ಮೇಲೆ ಪವಡಿಸುವೆ
ಆದಿಶಕ್ತಿಸಹಿತನಾಗಿ ನೀನಾವದಿನ
ಕಲ್ಲುಮಂಟಪದೊಳಗೆ ಶೋಭಿಸುವೆ?

ನಿನ್ನ ಪಾದಸೇವೆಯ ನಾಗೈದು
ನಿನ್ನ ಪೂಜೆಯನು ಬಹುಮುದದಿಮಾಡಿ
ನಿನ್ನ ಶಿಲೆಯ ರೂಪದಲಿ ಪರಶಿವನ ಮೂರ್ತಿಯನು
ಎನ್ನ ಕಂಗಳಲಿ ಕಂಡು ಹಿರಿಹಿರಿ ಹಿಗ್ಗುತಿಹೆನು –

---

* ಕರ್ಣಾಟಕ ಲೇಖಕರ ಸಂಘದ ಆಶ್ರಯದಲ್ಲಿ ನಡೆದ ಕವಿಗೋಷ್ಠಿಯಲ್ಲಿ ಓದಿದ ಕವನ

# ನಾದ ಲಕ್ಷಣ

ಡಾ॥ ಎಲ್. ಸೀಬಯ್ಯ

[ಕನ್ನಡ ಸಾಹಿತ್ಯ ಪರಿಷತ್ತು ಮೈಸೂರು ನಗರದಲ್ಲಿ ಏರ್ಪಡಿಸಿದ್ದ ದಿವಂಗತ ಬೆಳ್ಳಾವೆ ವೆಂಕಟನಾರಣಪ್ಪನವರ ಸ್ಮಾರಕ ದತ್ತಿ ಉಪನ್ಯಾಸ ಸಂದರ್ಭದಲ್ಲಿ ಡಾ॥ ಎಲ್. ಸೀಬಯ್ಯನವರು ಮಾಡಿದ ಭಾಷಣವನ್ನು ಇಲ್ಲಿ ಪ್ರಕಟಿಸಲಾಗಿದೆ.]

“ನನಾದೇನ ವಿನಾಗೀತಂ” ಎಂಬಂತೆ ನಾದವೇ ಸಂಗೀತಕ್ಕೆ ಆಧಾರ. ಬಹು ಹಿಂದಿನ ಕಾಲದಿಂದ ಸಂಗೀತವು ಮನುಷ್ಯನ ಮೇಲೆ ಪ್ರಭಾವ ಬೀರಿದೆ. ಸಂಗೀತದ ಪ್ರಭಾವವು

“ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿ ಗಾನರಸಂ ಫಣಿಃ”

ಎಂಬುದರಿಂದ ಅರ್ಥವಾಗುವುದು. ಮಕ್ಕಳ ಮೇಲೆ ಸಂಗೀತದ ಪರಿಣಾಮವನ್ನು “ಬೊಮ್ಮನಹಳ್ಳಿ ಕಿಂದರ ಜೋಗಿ” (Piped Piper of Hamelin)ಯಲ್ಲಿ ಬಹು ರಮ್ಯವಾಗಿ ವಿವರಿಸಲಾಗಿದೆ. ಬೃಂದಾವನದ ಪಶುಗಳ ಮೇಲೆ ಕೃಷ್ಣನ ಕೊಳಲಿನ ಪ್ರಭಾವವನ್ನು ಮರೆಯಲಾರೆವು. ಹಾವೂ ಕೂಡ ಪುಂಗಿಯ ನಾದಕ್ಕೆ ಹೆಡೆಯಲ್ಲಾಡಿಸುವುದು. ಮಾನವನ ಮೇಲೆ ಸಂಗೀತದ ಪರಿಣಾಮ ಎರಡು ವಿಧವಾಗಿದೆ. ಮೊದಲನೇಯದಾಗಿ ಅದು ದುಡಿದ ಬೇಸತ್ತ ಜೀವಕ್ಕೆ ಶಾಂತಿಯನ್ನು ನೀಡುವುದು. ಎರಡನೇಯದಾಗಿ ಸಂಗೀತವು ದೇಹದ ಮೇಲೆ ಉತ್ತಮವಾದ ಪರಿಣಾಮವನ್ನು ಉಂಟುಮಾಡುವುದು. ನಾಡಿ, ರಕ್ತದ ಒತ್ತಡ, ಕೆಲಸಮಾಡುವ ಶಕ್ತಿ, ಜೀರ್ಣಶಕ್ತಿ, ರಸೋತ್ಪತ್ತಿ, ಮುಂತಾದ ದೈಹಿಕ ಕಾರ್ಯಗಳನ್ನು ಸಂಗೀತವು ವ್ಯವಸ್ಥಿತ ರೀತಿಯಲ್ಲಿ ಇಡುವುದು! ಅಲ್ಲದೆ ಕೆಲವು ಖಾಯಿಲೆಗಳು ಸಂಗೀತದಿಂದ ಗುಣಹೊಂದುವವೆಂದು ಬಹು ಹಿಂದಿನಿಂದ ತಿಳಿದುಬಂದಿದೆ. ಆಯುರ್ವೇದದಲ್ಲಿಯೂ ಕೂಡ ಸಂಗೀತದಿಂದ ಹಲವಾರು ರೋಗಗಳು ಗುಣವಾಗುವಂತೆ ಹೇಳಲ್ಪಟ್ಟಿದೆ. ಇತ್ತೀಚಿಗೆ ಕೆಲವು ಗಿಡಗಳ ಬೆಳವಣಿಗೆ ಮತ್ತು ಅವುಗಳ ಫಲ ಸಂಗೀತ ಪ್ರಭಾವದಿಂದ ಹೆಚ್ಚುವುದಾಗಿ ತಿಳಿದುಬಂದಿದೆ. ಸಂಗೀತದಿಂದ ಆಗುವ ಈ ನಾನಾ ತೆರನಾದ ಮಹದುಪಕಾರಕ್ಕಾಗಿ ಅದರ ವ್ಯಾಪ್ತಿ ಹೆಚ್ಚಬೇಕು. ಅಲ್ಲದೆ ಸಂಗೀತ ಶಾಸ್ತ್ರಜ್ಞರ, ಮನಶ್ಶಾಸ್ತ್ರಜ್ಞರ, ವೈದ್ಯ ಹಾಗೂ ಸಸ್ಯ ಶಾಸ್ತ್ರಜ್ಞರ ಪರಸ್ಪರ ನೆರವು ಮತ್ತು ಸಹಕಾರ ಸಂಗೀತ ಸಂಶೋಧನೆಗಳಿಗೆ ಅವಶ್ಯಕ. ಆದರೆ ಈ ಎಲ್ಲ ಪರಿಣಾಮಕ್ಕೂ ಸಂಗೀತದ ಆಧಾರವಾದ ನಾದವೇ ಮುಖ್ಯ ಕಾರಣವೆಂದು ನಾವು ನೆನಪಿನಲ್ಲಿಡಬೇಕು.

ನಾದಕ್ಕೆ ಮೂರು ಮುಖ್ಯವಾದ ಲಕ್ಷಣಗಳಿವೆ. ಭೌತಶಾಸ್ತ್ರ ಪ್ರಕಾರ ಪ್ರತಿಯೊಂದು ನಾದವನ್ನೂ ಅದರ “ಕಂಪನ ಸಂಖ್ಯೆ”ಯಿಂದ (Frequency) ಗುರ್ತಿಸಬಹುದು. ಸಕಲ ಶಬ್ದಗಳೂ ವಸ್ತುಗಳ ಕಂಪನದಿಂದ ಉತ್ಪತ್ತಿಯಾಗುತ್ತವೆ. ಒಂದು ಸೆಕೆಂಡಿಗೆ ಉಂಟಾಗುವ ಕಂಪನಗಳ ಮೊತ್ತವನ್ನು “ಕಂಪನ ಸಂಖ್ಯೆ” ಎಂದು ಕರೆಯುತ್ತೇವೆ. ಸಂಗೀತದಲ್ಲಿ ಹೊರಹೊಮ್ಮುವ ನಾದಗಳ ಕಂಪನ ಸಂಖ್ಯೆಗಳಲ್ಲಿ ಒಂದು ಸರಳವಾದ ಸಂಬಂಧವಿದೆ. ಮೊದಲನೆಯದಾದ ‘ಸ’ ಎಂಬ ಸ್ವರದ ಕಂಪನ ಸಂಖ್ಯೆಯು ೨೪೦. ಆದರೆ ಇತರ ಸ್ವರಗಳು (ಶಂಕರಾಭರಣ) ಹೀಗಿರುತ್ತವೆ:

| | ಸ | ರಿ | ಗ | ಮ | ಪ | ದ | ನಿ | ಸ |
|---|---|---|---|---|---|---|---|---|
| ‘ಸ’ ಇಂದ ಅಂತರ: | 1 | $\frac{9}{8}$ | $\frac{5}{4}$ | $\frac{4}{3}$ | $\frac{3}{2}$ | $\frac{5}{3}$ | $\frac{15}{8}$ | 2 |
| ಕಂಪನ ಸಂಖ್ಯೆ: | 240 | 270 | 300 | 320 | 360 | 400 | 450 | 480 |

ಆರೋಹಣ ಅವರೋಹಣಗಳಲ್ಲಿ ಈ ಸ್ವರಗಳನ್ನು ಆಲಾಪನೆಯಲ್ಲಾಗಲಿ, ಅಥವ ಕೀರ್ತನೆಯಲ್ಲಾಗಲಿ ಪ್ರಯೋಗಿಸಿದರೆ ಶಂಕರಾಭರಣವಾಗುತ್ತದೆ. ಸ, ಪ-ಸ್ವರಗಳು ಪ್ರಕೃತಿ ಸ್ವರಗಳು; ಅವುಗಳು ವ್ಯತ್ಯಾಸ ಹೊಂದುವುದಿಲ್ಲ. ವಿಕೃತಿ ಸ್ವರಗಳಾದ ‘ರಿ, ಗ, ಮ, ಧ, ನಿ’ ಸ್ವರಗಳು ಬೇರೊಂದು ರೂಪವನ್ನು ತಾಳುವುವು. ಕಲ್ಯಾಣಿ ರಾಗದಲ್ಲಿ ‘ಮ’ ಎಂಬ ಸ್ವರದ ಕಂಪನ ಸಂಖ್ಯೆ ಸ್ವಲ್ಪ ಹೆಚ್ಚುತ್ತದೆ; ಆದರೆ ‘ರಿ, ಗ, ಧ, ನಿ,’ ಸ್ವರಗಳ ಕಂಪನ ಸಂಖ್ಯೆ ತೋಡಿ ರಾಗದಲ್ಲಿ ಸ್ವಲ್ಪ ಕಡಿಮೆಯಾಗುತ್ತದೆ. ಹೀಗೆ ಸ್ವರಗಳು ವ್ಯತ್ಯಾಸ ಹೊಂದಿದರೂ ಆಧಾರ ಸ್ವರವಾದ ‘ಸ’ ಸ್ವರಕ್ಕೆ ಸುಲಭವಾದ ಭಿನ್ನಾಂಕದ ಸಂಬಂಧವನ್ನು ಹೊಂದಿರುತ್ತದೆ. ‘ಸ’ ದ ಕಂಪನ ಸಂಖ್ಯೆ ಶ್ರುತಿಗೆ ತಕ್ಕಂತೆ ವ್ಯತ್ಯಾಸವಾಗಬಹುದು; ಇತರ ಸ್ವರಗಳು ಮೇಲೆ ಹೇಳಿದ ಭಿನ್ನಾಂಕಗಳ ಸಂಬಂಧವನ್ನೇ ಹೊಂದಿರುತ್ತವೆ. ಒಟ್ಟಿನಲ್ಲಿ ರಾಗಗಳಲ್ಲಿ

ಬರುವ ನಾದಗಳಿಗೆ ತಮ್ಮದೇ ಆದ ಕಂಪನ ಸಂಖ್ಯೆ ಇರುತ್ತದೆ. ಇವುಗಳ ಕಂಪನ ಸಂಖ್ಯೆ ಮಾತ್ರ ಶ್ರುತಿಯನ್ನು ಅವಲಂಬಿಸಿರುತ್ತದೆ. ಭಾರತ ಸಂಗೀತದಲ್ಲಿ ಸಾಧಾರಣವಾಗಿ ಮೂರು ಸ್ಥಾಯಿ (Octaves)ಸ್ವರಗಳನ್ನು ಉಪಯೋಗಿಸುತ್ತಾರೆ. ಇವಕ್ಕೆ ಮಂದ್ರ, ಮಧ್ಯಮ ಮತ್ತು ತಾರ ಸ್ಥಾಯಿಗಳೆಂದು ಹೆಸರು. ಮಧ್ಯಮ ಸ್ಥಾಯಿಯ ಸ್ವರಗಳ ಕಂಪನ ಸಂಖ್ಯೆ ಮಂದ್ರ ಸ್ಥಾಯಿಯ ಎರಡರಷ್ಟು. ತಾರಸ್ಥಾಯಿಯ ಸ್ವರಗಳು ಮಧ್ಯಮ ಸ್ಥಾಯಿಯ ಕಂಪನ ಸಂಖ್ಯೆಗೆ ದ್ವಿಗುಣವಾಗುವುದು. ಹೀಗೆ ಮೂರು ಸ್ಥಾಯಿಯಲ್ಲೇ ಹಾಡುವುದು ಮಾನವ ಕಂಠದ ಎಲ್ಲೆಯನ್ನು ಅವಲಂಬಿಸಿರುವುದು. ಪಕ್ಕವಾದ್ಯಗಳು ಈ ಮೂರು ಸ್ಥಾಯಿಯಲ್ಲೇ ಇದ್ದು ಬಾಯಿ ಹಾಡುಗಾರಿಕೆಗೆ ನೆರವಾಗಿ ನಾದ ಸಂಪತ್ತನ್ನು ನೀಡುವುವು. ಆದರೆ ಶ್ರುತಿಗೆ ಆಧಾರ ಸ್ವರವನ್ನು ಆರಿಸಿಕೊಳ್ಳುವಾಗ ತನ್ನ ಕಂಠಕ್ಕೆ ತಕ್ಕ ಕಂಪನ ಸಂಖ್ಯೆಯ ಶ್ರುತಿಯನ್ನು ಆಯ್ದುಕೊಳ್ಳುವ ವಾಡಿಕೆ. ಕಂಪನ ಸಂಖ್ಯೆ ೧೬ಕ್ಕೆ ಕಡಿಮೆಯಾದರೂ ೨೦,೦೦೦ಕ್ಕೆ ಹೆಚ್ಚಾದರೂ ಶ್ರವಣಕ್ಕೆ ನಿಲುಕುವುದಿಲ್ಲ. ಹೀಗೆ ಅತಿ ಮಂದ್ರ ಸ್ವರಗಳೂ ಅತಿ ತಾರ ಸ್ವರಗಳೂ ಕಿವಿಗೆ ಕೇಳುವುದಿಲ್ಲ. ಪಾಶ್ಚಾತ್ಯರ ಸಂಗೀತದಲ್ಲಿ ಕೆಲವು ವಾದ್ಯಗಳು ೫-೬ ಸ್ಥಾಯಿಯ ಸ್ವರಗಳನ್ನು ಉಪಯೋಗಿಸುವುದುಂಟು. ಇವುಗಳು ಮಾನವ ಕಂಠಕ್ಕೆ ನಿಲುಕದಾದರೂ, ಬಾಯಿ ಹಾಡುಗಾರಿಕೆಗೆ ಹಿನ್ನಲೆಯಾಗಿರಬಹುದು.

ನಾದಗಳ ತೀವ್ರತೆ (Loudness) ಅವುಗಳ ಎರಡನೇ ಲಕ್ಷಣ. ಈ ತೀವ್ರತೆಯು ಕಂಪನ ವೈಶಾಲ್ಯವನ್ನು (Amplitude)ಅವಲಂಬಿಸಿರುತ್ತದೆ. ವೀಣೆಯ ತಂತಿಯನ್ನು ಬಲವಾಗಿ ಮೀಟಿದರೆ, ಕಂಪನ ವೈಶಾಲ್ಯವು ಹೆಚ್ಚಿ ಅದರಿಂದ ಹೊರಹೊಮ್ಮುವ ನಾದವು ಗಟ್ಟಿಯಾಗಿ ಕೇಳುತ್ತದೆ; ಇದನ್ನೇ ನಾದದ ತೀವ್ರತೆ ಹೆಚ್ಚಿತೆಂದು ಹೇಳುತ್ತೇವೆ. ಭೌತ ನಿಯಮದ ಪ್ರಕಾರ ಈ ತೀವ್ರತೆ ಕಂಪನ ವೈಶಾಲ್ಯದ ವರ್ಗವನ್ನು (Square of Amplitude) ಅನುಸರಿಸುತ್ತದೆ. ಮಾನವನ ಶ್ರೋತ್ರೇಂದ್ರಿಯದ ಶ್ರವಣ ಕ್ಷೇತ್ರದಲ್ಲಿ ನಾದಗಳು ತಾಳಬಹುದಾದ ತೀವ್ರತೆಗೆ ಮೇರೆಗಳಿವೆ. ತೀವ್ರತೆ ಬಹು ಕ್ಷೀಣವಾದರೆ ಶ್ರವಣಕ್ಕೆ ಕೇಳದಿರಬಹುದು; ಹಾಗೂ ತೀವ್ರತೆಯು ಒಂದು ಎಲ್ಲೆ ಮೀರಿದರೆ ಶ್ರವಣಕ್ಕೆ ನೋವು ಉಂಟಾಗಬಹುದು; ಹಾಗೂ ಕಿವುಡಾಗುವ ಸಂಭವವೂ ಉಂಟು. ಸಂಗೀತಕ್ಕೆ ಸಂದರ್ಭಾನುಸಾರ ಹಿತಮಿತವಾದ ತೀವ್ರತೆಯು ಅವಶ್ಯಕ. ಇಂದಿನ ಧ್ವನಿವರ್ಧಕಗಳಿಂದ ಕೆಲವುವೇಳೆ ಸಂಗೀತಕ್ಕೆ ಅಪಚಾರವೂ ಆಗಬಹುದು.

ಕಡೆಯದಾಗಿ ನಾದಕ್ಕೆ ಅದರ ಗುಣ (Quality) ಬಹು ಮುಖ್ಯವಾದ ಮೂರನೇ ಲಕ್ಷಣ. ಈ ಗುಣವನ್ನು ನಾದ ವರ್ಣ ಅಥವಾ ನಾದ ಸಂಪತ್ತು ಎಂದೂ ಕರೆಯಬಹುದು. ಇದರ ಭೌತ ಆಧಾರವನ್ನು ಹುಡುಕುವುದಕ್ಕಿಂತ ನಾದ ಸಂಪತ್ತನ್ನು ಅನುಭವ ಮಾಡುವುದೇ ಲೇಸು. ಇದು ಶ್ರೋತ್ರೇಂದ್ರಿಯದ ಒಂದು ಗಣಿತ ಸಾಹಸವೆಂದು ಪರಿಗಣಿಸಬೇಕು. ಇದನ್ನು ಕಿವಿ ನಿರಾಯಾಸವಾಗಿ ಮಾಡುತ್ತದೆ. ಈ ನಾದ ಲಕ್ಷಣವನ್ನು ಫೂರಿಯರ್ (Fourier) ಎಂಬ ವಿಜ್ಞಾನಿ ನಾದ ವಿಭಜನಾಕ್ರಮದಿಂದ ಭೌತ ಆಧಾರವನ್ನು ಗಣಿತ ರೀತ್ಯ ವಿಷದೀಕರಿಸಿದ್ದಾನೆ. ಅಂಗಡಿಯಲ್ಲಿ ಎರಡು ಪಿಟೀಲುಗಳು ಒಂದೇ ತರಹ ಇದ್ದರೂ ಒಂದಕ್ಕೆ ಬೆಲೆ ಕಡಿಮೆಯಿದ್ದು ಅದು ಅಭ್ಯಾಸಕ್ಕೆ ಮಾತ್ರ ಸರಿಹೋಗಬಹುದು. ಇನ್ನೊಂದರ ನಾದ ಸಂಪತ್ತು ಅಪೂರ್ವವಾಗಿದ್ದು ಪಿಟೀಲು ಕಚೇರಿಗೆ ಯೋಗ್ಯವಾಗಿ ಬಹು ಬೆಲೆ ಬಾಳಬಹುದು. ಮೊದಲಿನ ಎರಡು ಲಕ್ಷಣಗಳು ಇವುಗಳಲ್ಲಿ ಸರಿಸಮನಾಗಿದ್ದರೂ ನಾದ ಸಂಪತ್ತೇ ಅವುಗಳ ಬೆಲೆಯ ಮೂಲ. ನಾವು ಮನೆಯಲ್ಲಿರುವಾಗ ಹೊರಗೆ ಸ್ನೇಹಿತರೊಬ್ಬರು ನಮ್ಮನ್ನು ಕೂಗಿದೊಡನೆಯೇ ಅವರಾರೆಂದು ನಮಗೆ ಭಾಸವಾಗುತ್ತದೆ. ಇದಕ್ಕೂ ಅವರ ಶಬ್ದ ಗುಣ ಅಥವಾ ಶಬ್ದ ಸಂಪತ್ತೇ ಕಾರಣ. ಸಂಗೀತಕ್ಕೆ ನಾದಸಂಪತ್ತಿನಿಂದ ಕೂಡಿದ ಕಂಠ ದೈವದತ್ತವಾದುದು. ವಾದ್ಯಗಳ ರಚನೆಗೆ ಉಪಯೋಗಿಸುವ ಸಾಮಾನೂ ರಚಿಸುವವನ ಕೈ ಚಮತ್ಕಾರವೂ ವಾದ್ಯಗಳ ನಾದ ಸಂಪತ್ತಿಗೆ ಕಾರಣವಾಗುತ್ತದೆ. ಯಾವುದಾದರೊಂದು ನಾದದ ಕಂಪನ ಸಂಖ್ಯೆ 'n' ಎಂದು ಭಾವಿಸೋಣ; ಇದನ್ನು ವಾದ್ಯಗಳಲ್ಲಿ ಬಾರಿಸಿದಾಗ ಅಥವಾ ಹಾಡಿದಾಗ ಇದರೊಡನೆ "2n, 3n, 4n, 5n........" ಮುಂತಾದ ಕಂಪನ ಸಂಖ್ಯೆಯ ಸ್ವರಗಳು ಸೇರಿಬರುತ್ತವೆ. 'n' ಎಂಬ ಸ್ವರ ಪ್ರಧಾನವಾದರೂ 2n, 3n....ಇವುಗಳ ಕಡಿಮೆ ಕಂಪನ ವೈಶಾಲ್ಯದ ಮೇಲೆ ನಾದ ಗುಣ ಅವಲಂಬಿಸಿರುತ್ತದೆ. ಈ ನಾದ ಸಂಪತ್ತನ್ನು ಪ್ರಾಯೋಗಿಕವಾಗಿ ಪರೀಕ್ಷೆ ಮಾಡಬಲ್ಲ ವೈಬ್ರೋಗ್ರಾಫ್ (Vibrograph) ಫೋನೊಡೈಕ್ (Phonodick) ಮುಂತಾದ ಸಲಕರಣಗಳು ಭೌತಶಾಸ್ತ್ರದಲ್ಲಿ ಉಕ್ತವಾಗಿವೆ. ಅಂತು ನಾದಕ್ಕೆ ಕಂಪನ ಸಂಖ್ಯೆ, ತೀವ್ರತೆ ಮತ್ತು ಸಂಪತ್ತು ಎಂಬ ಮೂರು ಲಕ್ಷಣಗಳನ್ನು ಹೇಳಿದ ಹಾಗಾಯಿತು.

ಸಂಗೀತದಲ್ಲಿ ಉಪಯೋಗಿಸುವ ಸ್ವರಗಳ ಕಂಪನ ಸಂಖ್ಯೆಯು ಆಧಾರ ಸ್ವರ (ಶ್ರುತಿ) ವನ್ನು ಅವಲಂಬಿಸುವು

ದಾಗಿ ಹೇಳಿದೆ. ಆದರೆ ಈ ಸ್ವರಗಳಲ್ಲಿ ಯಾವುದಾದರೊಂದನ್ನು ಆಧಾರವಾಗಿಟ್ಟುಕೊಂಡರೆ ಇತರ ಸ್ವರಗಳು ಅಪಶ್ರುತಿ ನುಡಿಯುತ್ತವೆ. ಇದನ್ನು ಸರಿಗೊಳಿಸಲು ಹಾರ್ಮೋನಿಯಂ ಮೇಳದಲ್ಲಿ ಸಮಾನಾಂತರ ಶ್ರೇಣಿಯನ್ನು ಅವಲಂಬಿಸಿರುತ್ತಾರೆ. ಒಂದು ಸ್ವರ ಅದರ ಕೆಳಗಿನ ಸ್ವರದ ಕಂಪನ ಸಂಖ್ಯೆಗೆ 1.05946 ($\sqrt[12]{2}$) ರಷ್ಟು ಜಾಸ್ತಿಯಾಗಿರುತ್ತದೆ. ಹನ್ನೆರಡು ಸ್ವರಗಳಾದ ಮೇಲೆ ಮುಂದಿನ ಸ್ವರವು ಆಧಾರ ಷಡ್ಜದ ದ್ವಿಗುಣ ಕಂಪನ ಸಂಖ್ಯೆಯಾಗುವುದು. ಆದರೆ ಹೀಗೆ ಅಳವಡಿಸಿದ ಮೇಳಗಳಿದ್ದು, ಕಂಪನ ಸಂಖ್ಯೆ ವ್ಯತ್ಯಾಸಮಾಡಲಾಗದ ವಾದ್ಯಗಳು ಭಾರತೀಯ ಸಂಗೀತಕ್ಕೆ ಅಷ್ಟು ಯೋಗ್ಯವಲ್ಲ. ಇವುಗಳಿಂದ ಭಾರತೀಯ ಸಂಗೀತದ ವೈಶಿಷ್ಟ್ಯವಾದ ದಶವಿಧ ಗಮಕಗಳು ಹೊರಹೊಮ್ಮಲಾರವು.

ಆರೋಹ ಮವರೋಹಂಚ ಢಾಲುಸ್ಫುರಿತ ಕಂಪಿತಾಃ ।
ಆಹತಃ ಪ್ರತ್ಯಾಹತಶ್ಚ ತ್ರಿಪುಶ್ಚಾಂದೋಳ ಮೂರ್ಚನಾಃ ॥

ಇಲ್ಲಿ ಹೇಳಿರುವ ದಶವಿಧ ಗಮಕಗಳು ಇಲ್ಲದ ಸಂಗೀತ ಭಾರತೀಯರಿಗೆ ಸೊಗಸದು.

ತಂತ್ರಿ ವಾದ್ಯವಾದ ವೀಣೆಯು ಸರಸ್ವತಿಯ ವಾದ್ಯವಿಶೇಷವಾಗಿದೆ. ಇದು ನಖಜ ವಾದ್ಯ. ಧನ್ವಿಜ ವಾದ್ಯವಾದ ಪಿಟೀಲು ಬಹುಮಟ್ಟಿಗೆ ಪಕ್ಕ ವಾದ್ಯವಾಗಿ ನಮ್ಮಲ್ಲಿ ನಡೆದುಬಂದಿದೆ. ವಾಯುಜವಾದ ಕೊಳಲು ಶಬ್ದ ಸಂಪತ್ತಿನಿಂದ ಕೂಡಿದೆ. ಭಾರತೀಯ ತಬಲ, ಮೃದಂಗಗಳು ತಾಳ ವಾದ್ಯಗಳು. ಸರ್ ಸಿ. ವಿ. ರಾಮನ್ ಸಂಶೋಧನೆಯ ಪ್ರಕಾರ ಈ ತಾಳ ವಾದ್ಯಗಳಲ್ಲೂ ಬಹುಮಟ್ಟಿಗೆ ಸ್ವರ ಮೇಳಗಳು ಕೇಳುವಂತೆ ಅಳವಡಿಸಿದ್ದಾರೆ. ಬಿಗಿದ ಚರ್ಮದ ಮೇಲೆ ಭಾರವಾದ ಕರೀ ಬಟ್ಟೊಂದರಿಂದ ಶ್ರುತಿಮಾಡಿ ಬಾರಿಸುತ್ತಾರೆ. ಪಾಶ್ಚಾತ್ಯರ ತಾಳ ವಾದ್ಯಗಳಲ್ಲಿ ಈ ನಾದ ಸಂಪತ್ತು ಕಾಣುವುದಿಲ್ಲ.

ಭಾರತದ ಹಲವಾರು ದೇವಾಲಯಗಳಲ್ಲಿ (ಹಂಪೆ, ಮಧುರೆ, ಸುಚೀಂದ್ರಂ....) ಸ್ತಂಭಗಳಲ್ಲಿರುವ ಉಪಸ್ತಂಭಗಳಲ್ಲಿ ಸಪ್ತ ಸ್ವರಗಳು ಕೇಳುವಂತೆ ರೂವಾರಿಗಳು ಏರ್ಪಡಿಸಿರುತ್ತಾರೆ. ಸುಚೀಂದ್ರಂ ಸ್ತಂಭಗಳ ನಾದ ಇಂಗ್ಲೆಂಡಿನಲ್ಲಿ ಮೊಳಗುವಂತೆ ವಾಕ್ಚಿತ್ರಗಳು ಈಗ ಸಿದ್ಧಗೊಳ್ಳುತ್ತಿವೆ. ಭಾರತೀಯ ಮೃದಂಗವು ಇಂಗ್ಲೀಷ್ ಶ್ರೋತೃಗಳನ್ನು ಎಡಿನ್‌ಬರ್ಗ್ ಸಮ್ಮೇಳನದಲ್ಲಿ ಮರುಳುಗೊಳಿಸಿತು.

ಈ ಕಾರಣದಿಂದ ಮೃದಂಗ ತಯಾರಿಕೆಮಾಡುವ ಪಾಲ್‌ಘಾಟ್ ಕೃಷ್ಣನನ್ನು ಸಂದರ್ಶಿಸಿ ಮೃದಂಗ ರಚನೆಯ ಮರ್ಮವನ್ನೂ ಹೊರಗೆಡವಲು ವಾಕ್ಚಿತ್ರದಲ್ಲಿ ಪ್ರಯತ್ನಿಸಲಾಗಿದೆ.

### *References*

1. Sibaiya L., Third music conference 1960 Souvenir, Mysore, p. p. 35–39, 1960.
2. Sibaiya L. Fourth music Conference 1961 Souvenir, Mysore p. p 17–23, 1961.

---

## ಪರಿಷತ್ತಿನ ಸದಸ್ಯರಲ್ಲಿ ವಿನಂತಿ

೧೯೬೩ ನೇ ಸಾಲಿನ ಪರಿಷತ್ತಿನ ಸದಸ್ಯತ್ವದ ಚಂದಾ ಡಿಸೆಂಬರ್ ೩೧ ನೇ ತಾರೀಖಿಗೆ ಮುಗಿಯಿತು. ೧೯೬೪ ರ ಪರಿಷತ್ತಿನ ಸದಸ್ಯತ್ವದ ಚಂದಾ ಆರು ರೂಪಾಯಿಗಳನ್ನು ದಯೆಯಿಟ್ಟು ಈ ಕೂಡಲೇ ಪರಿಷತ್ತಿಗೆ ಕಳಿಸಿ ನೆರವು ನೀಡಬೇಕೆಂದು ವಿನಯದಿಂದ ವಿನಂತಿಸುತ್ತೇವೆ.

ಕೆ. ಎಂ. ಕೃಷ್ಣರಾವ್
ಎಸ್. ಶಂಕರಪ್ಪ
ಗೌರವ ಕಾರ್ಯದರ್ಶಿಗಳು

# ಕವಿಗೋಷ್ಠಿಯ ಅಧ್ಯಕ್ಷ ಭಾಷಣ

[ ಕಳೆದ ಡಿಶೆಂಬರು ತಿಂಗಳು ೨೯ ರಂದು ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಂಗವಾದ ಕವಿಗೋಷ್ಠಿಯ ಅಧ್ಯಕ್ಷ ಡಾ॥ ಜಿ. ಎಸ್. ಶಿವರುದ್ರಪ್ಪ ಇವರ ಭಾಷಣವನ್ನು ಇಲ್ಲಿ ಕೊಟ್ಟಿದೆ. ]

ಈ ಸಮ್ಮೇಳನ ಪವಿತ್ರವಾದ, ತಪೋವನಸದೃಶವಾದ ಈ ಸಿದ್ಧಗಂಗೆಯಲ್ಲಿ ಸೇರಿದೆ. ನನ್ನ ವಿದ್ಯಾರ್ಥಿಜೀವನದ ಐದು ಮಹತ್ವಪೂರ್ಣವಾದ ವರ್ಷಗಳನ್ನು ನಾನು ಈ ಆಶ್ರಮದಲ್ಲಿ ಕಳೆದಿದ್ದೇನೆ. ಇಲ್ಲಿನ ಈ ಬಂಡೆ ಬೆಟ್ಟಗಳಿಗೆ, ಇಲ್ಲಿನ ಗಿಡಮರಗಳಿಗೆ, ಬೆಟ್ಟದ ಮೇಲೆ ನಿಂತು ಕೈಬೀಸುವ ಕಾವಿಯ ಬಾವುಟಕ್ಕೆ, ಇಲ್ಲಿನ ದೇಗುಲದ ಗಂಟೆಗಳಿಗೆ, ಇಲ್ಲಿನ ಹಳೆಯ ಮುಖಗಳಿಗೆ ನನ್ನ ಪರಿಚಯ ಚೆನ್ನಾಗಿದೆ. ಈ ಬೆಟ್ಟ, ಈ ಆಶ್ರಮ, ಇಲ್ಲಿನ ದೇಗುಲಗಳ ಗಂಧನಾದ ವರ್ತುಲ, ಇಲ್ಲಿ ಬೆಳಗಿನರುಣಾವ ಭೋರ್ಗರೆಯುವ ವೇದ ಘೋಷ, ಎಲ್ಲಕ್ಕೂ ಮಿಗಿಲಾಗಿ ಇಲ್ಲಿನ ಶ್ರೀ ಸ್ವಾಮಿಗಳ ವರ ಆಶೀರ್ವಾದ, ಆಗತಾನೇ ಮೊಳೆಯುತ್ತಿದ್ದ ನನ್ನ ಕವಿತೆಗೆ ಕಣ್ಣುಮಾಡಿಸಿ, ಗರಿಮೂಡಿಸಿ, ಹಾಲೂಡಿಸಿ ನನ್ನನ್ನು ವಿಸ್ತಾರವಾದ ಲೋಕದ ಮೇಲೆ ಹಾರಿಬಿಟ್ಟವೆ. ಮತ್ತೆ ಬಹುಕಾಲದ ಮೇಲೆ ನಿಮ್ಮ ಹಾರೈಕೆ, ಶ್ರೀ ಗುರುವಿನಕೃಪೆ ನನ್ನನ್ನು ಇಲ್ಲಿಗೆ ಎಳೆದುತಂದಿದೆ. ಇಲ್ಲಿಂದ ನಾನು ನಾಲ್ಕು ಮಾತನ್ನು ಹೇಳುತ್ತಿದ್ದೇನೆ. ಕವಿಗಳೂ ಸಹೃದಯರೂ ದಯವಿಟ್ಟು ಕೇಳಬೇಕು:

ಕಾವ್ಯಕ್ಕಿಂತ ಜೀವನ ದೊಡ್ಡದು; ಆದುದರಿಂದಲೆ ಎಷ್ಟೋ ಶತಮಾನಗಳಿಂದ ಈ ಬದುಕಿನ ನಿರಂತರ ಪ್ರವಾಹವನ್ನು ಕವಿಗಳು ತಮ್ಮ ಕಾವ್ಯದ ಪಾತ್ರೆಗಳಿಂದ ಅಳೆದು ಸುರಿದರೂ ಅದು ಮುಗಿಯದಿದೆ; ಅಗಮ್ಯ ವಾಗಿದೆ. ಬದುಕು ಕಾವ್ಯಕ್ಕೆ ಮೂಲಭಿತ್ತಿಯಾಗಿ, ಮೀರಿ ನಿಂತಿದೆ. ಕವಿಯೇನಿದ್ದರೂ ಈ ಬದುಕಿನಿಂದಲೇ ಎದ್ದು ಬಂದು, ಯಾವುದೋ ಒಂದು ನಿಯತ ಕಾಲ-ದೇಶಗಳ ಪರಿಮಿತಿಯಲ್ಲಿ ಜೀವಿಸಿ, ತನ್ನ ಅನುಭವಕ್ಕೆ ಬಂದ ಬದು ಕನ್ನು ಮಾತಿನಲ್ಲಿ ಕಡೆದು ನಿಲ್ಲಿಸಿ, ಅದಕ್ಕೆ ಒಂದು ಅರ್ಥ ವನ್ನು ಕೊಟ್ಟು ಅಥವಾ ಕಂಡುಕೊಂಡು ಬದುಕಿನ ಬೆಲೆ ಯನ್ನು ತನ್ನವರ ಹಾಗೂ ಮುಂದಿನವರ ಪಾಲಿಗೆ ಹೆಚ್ಚಿ ಸುತ್ತಾನೆ.

ಆದರೆ ಕೆಲವರಿಗೆ ಭ್ರಮೆ. ಕಾವ್ಯ ಬದುಕಿಗಿಂತ ದೊಡ್ಡದು ಎಂದೋ, ಕಾವ್ಯದಲ್ಲಿ ಬದುಕೆಲ್ಲವನ್ನೂ ಪ್ರಕ ಟಿಸಬಹುದು ಎಂದೋ ಭ್ರಮೆ. ಹೀಗಾದಾಗ ಒಬ್ಬ ವ್ಯಕ್ತಿಯ ಅನುಭವದಲ್ಲಿ ಬದುಕಿನ ಸಮಸ್ತವೂ ವ್ಯಕ್ತ ವಾಗಬೇಕು, ಅಥವಾ ವ್ಯಕ್ತವಾಗಿದೆ ಎಂದು ಇಂಥವರು ಭಾವಿಸುತ್ತಾರೆ. ಬದುಕಿನಲ್ಲಿ ತಾನು ಕಂಡ, ಯಾವುದೋ ಒಂದು ಮುಖವನ್ನು ಕುರಿತು ಕವಿತೆ ಬರೆದ ಕವಿಗೆ ಬದು ಕಿನ ಉಳಿದ ಮುಖಗಳ ಪರಿಚಯ ಇಲ್ಲವೆಂದೋ, ಅನು ಭವವೇ ಇಲ್ಲವೆಂದೋ, ಅಥವಾ ಅಂಥದೊಂದು ಮುಖ ದಿಂದ ಆತ ಪ್ರಜ್ಞಾಪೂರ್ವಕವಾಗಿ ಪಲಾಯನಮಾಡು ತ್ತಿದ್ದಾನೆ ಎಂದೋ, ತಾವು ಮಾತ್ರ ಬದುಕಿನ ಎಲ್ಲ ಮುಖಗಳನ್ನೂ ಬಲ್ಲವರಂತೆ ನಮ್ಮಲ್ಲಿ ಎಷ್ಟೋ ಜನ ಮಾತನಾಡಿಬಿಡುತ್ತಾರೆ.

ಬದುಕಿಗೆ ಎಷ್ಟು ಮುಖವೋ ಏನು ಕತೆಯೋ. ಅದನ್ನು ಬಲ್ಲವರು ಯಾರು? ಈ ಅಗಾಧವಾದ ಬದುಕು ಯಾರೋ ಒಬ್ಬನು ಅಥವಾ ಹಲವು ವ್ಯಕ್ತಿಗಳು ಅಳೆದು ತೂಗಿ ಮುಗಿಸಿಬಿಡಬಹುದಾದಷ್ಟು ಸಣ್ಣ ವಸ್ತುವಲ್ಲ. ಸಾವಿರ ವರ್ಷದ ಹಿಂದೆಯೆ ಆನಂದವರ್ಧನ ಸಾರಿ ಹೇಳಿದ್ದಾನೆ:

> ವಾಚಸ್ಪತಿ ಸಹಸ್ರಾಣಾಂ ಸಹಸ್ರೈರಪಿ ಯತ್ನತಃ
> ನಿಬದ್ಧಾಪಿ ಕ್ಷಯಂ ನೈತಿ ಪ್ರಕೃತಿರ್ಜಗತಾಮಿವ ॥

"ಸಹಸ್ರಮಂದಿ ಬೃಹಸ್ಪತಿಗಳೇ ಪ್ರಯತ್ನಪಟ್ಟು ಇದನ್ನು (ಕಾವ್ಯ ವಸ್ತುವನ್ನು) ಅಳವಡಿಸಿಕೊಂಡರೂ ಜಗತ್ತಿನ ಪ್ರಕೃತಿಯಂತೆಯೇ ಇದು ಕೂಡ ಕೊನೆಮುಟ್ಟಲಾರದು"- ಎಂದು.

ಕಾವ್ಯ ಎನ್ನುವುದು ಇಂಥ ಕೊನೆಮುಟ್ಟದ ಬದುಕನ್ನು ಒಂದು ವಿಶಿಷ್ಟ ಮನೋಧರ್ಮದ ಮೂಲಕ ಕಂಡು, ಕಂಡರಿಸಿದ ಜಗತ್ತು. Art is a world seen through a temperament ಎನ್ನುವ ಒಂದು ಮಾತಿದೆ. ಕಲೆ ಎನ್ನುವುದು ಒಂದು ಬೇರೆಯ ಜಗತ್ತು; ಅದು ನಮ್ಮ ಚಿರಪರಿಚಿತವಾದ ಲೋಕದಿಂದ ಒಂದಿಷ್ಟು ಭಿನ್ನವಾದಂತೆ ತೋರಲು ಕಾರಣ ಅದು ಯಾವುದೋ ಒಂದು ವಿಶಿಷ್ಟ ಮನೋಧರ್ಮದ ಮೂಲಕ ಹಾಯ್ದು ಬಂದದ್ದು ಎನ್ನುವುದು. ಎಲ್ಲರಿಗೂ ಈ ಜಗತ್ತು ಹೇಗಿ ದೆಯೋ ಹಾಗೇ ಕಂಡಿದ್ದರೆ ಅಲ್ಲಿ ಕಾವ್ಯವೂ ಹುಟ್ಟುತ್ತಿರ ಲಿಲ್ಲ, ಕಲೆಯೂ ಹುಟ್ಟುತ್ತಿರಲಿಲ್ಲ. ಒಂದು ವೇಳೆ ಕಾವ್ಯ

ಹುಟ್ಟಿದ್ದರೆ ಎಲ್ಲರ ಕವಿತೆಯೂ ಒಂದೇ ರೀತಿಯಾಗಿ ಬೇಸರ ತರುತ್ತಿತ್ತು. ಆದರೆ ವಾಸ್ತವ ಸ್ಥಿತಿ ಹಾಗಿಲ್ಲ. ಪ್ರತಿಯೊಬ್ಬ ಕವಿಯ ಕಾವ್ಯವೂ ಶತಮಾನಗಳಿಂದ ಬೇರೆ ಬೇರೆಯ ಸೊಗಸನ್ನು ಪಡೆದೇ ಮೂಡಿದೆ. ಕಾರಣ, ಅದು ಒಬ್ಬೊಬ್ಬ ಕವಿಯೂ ಅವನವನಿಗೆ ವಿಶಿಷ್ಟವಾದ ಮನೋಧರ್ಮದ ಮೂಲಕ ಕಂಡ ಜಗತ್ತು. ಇಲ್ಲಿ "ಮನೋಧರ್ಮ" ಎನ್ನುವ ಮಾತು ಗಮನಿಸಬೇಕಾದದ್ದು. ಈ ಮನೋಧರ್ಮ ಎನ್ನುವುದು ಪ್ರತಿಯೊಬ್ಬ ಕವಿಗೂ ಹುಟ್ಟಿನೊಡನೆ ಬಂದದ್ದು ಅಥವಾ ಪ್ರಕೃತಿದತ್ತವಾದದ್ದು. ಇಂಥ ಒಂದು ಮನೋಧರ್ಮವುಳ್ಳ ವ್ಯಕ್ತಿ, ಆ ಮನೋಧರ್ಮದ ಮೂಲಕವಾಗಿಯೇ ಲೋಕವನ್ನು ನೋಡುವುದು ಅನಿವಾರ್ಯ. ಹಾಗೆ ಆತ ತಾನು ಕಂಡ, ಉಂಡ ಬದುಕನ್ನು, ತನ್ನ ಪಾಲಿಗೆ ಎಟುಕಿದ ಬದುಕನ್ನು ತನ್ನ ಸ್ವಭಾವಾನುಸಾರಿಯಾದ ವಿಶಿಷ್ಟ ಪದರಚನೆಯಲ್ಲಿ ಮೂರ್ತಗೊಳಿಸುತ್ತಾನೆ. ಹೀಗೆ ಮೂರ್ತಗೊಂಡದ್ದನ್ನು ನಾವು "ಇದು ಆತನ ಕಾವ್ಯ" ಎಂದು ಗುರುತಿಸುತ್ತೇವೆ. ಆ ಕಲೆಯನ್ನು ಕುರಿತು ವಿವೇಚಿಸುವಾಗ ನಾವು ಪ್ರಶ್ನಿಸಬೇಕಾದದ್ದು ಆ ಮನೋಧರ್ಮ ಏಕೆ ಹೀಗಿದೆ ಎಂಬುದನ್ನಲ್ಲ; ಸಹೃದಯರಾಗಿ ವಿಮರ್ಶಕರಾಗಿ ನಾವು ಕೇಳಬೇಕಾದದ್ದು ಇಷ್ಟು: ಇಲ್ಲಿ ಆತನ ಅನುಭವ ತೀವ್ರವಾಗಿ ಅನುಭೂತವಾಗಿದೆಯೇ ಇಲ್ಲವೆ; ಆ ಅನುಭವ ಸಮರ್ಪಕವಾದ ಅಭಿವ್ಯಕ್ತಿಯನ್ನು ಪಡೆದಿದೆಯೆ ಇಲ್ಲವೆ—ಎನ್ನತಕ್ಕದ್ದು. ಹೀಗಾಗಿ ಒಂದು ಕಡೆ ಆ ಮನೋಧರ್ಮಕ್ಕೆ ಉಚಿತವಾದ ಅನುಭವದ ದೃಷ್ಟಿಯಿಂದ, ಮತ್ತೊಂದು ಕಡೆ ಆ ಅನುಭವ ಅಭಿವ್ಯಕ್ತಗೊಂಡಿರುವ ಭಾಷೆಯ, ಅಥವಾ ರೀತಿಯ ದೃಷ್ಟಿಯಿಂದ ಪರಿಶೀಲಿಸಬೇಕು. ಅಗಾಧವಾದ ಈ ಬದುಕಿನಲ್ಲಿ ತನಗೆ ಎಟುಕಿದಷ್ಟನ್ನು ತನ್ನ ಪರಿಭಾವನೆಗೆ ಒಳಗುಪಡಿಸಿಕೊಂಡು ತನ್ನ ಮನೋಧರ್ಮಕ್ಕೆ ಅನುಸಾರವಾಗಿ ಅಳವಡಿಸಿಕೊಂಡು ಕಡೆದಿಡುವಲ್ಲಿ, ಹಾಗೆ ಮೂಡಿದ್ದು ಎಷ್ಟರಮಟ್ಟಿಗೆ ಕಾವ್ಯವಾಗಿದೆ, ಅಥವಾ ಕಾವ್ಯವಾಗಿಲ್ಲ ಎನ್ನುವುದನ್ನು ಮೊದಲು ನೋಡಲು ಕಲಿತರೆ ಸಾಕು.

ಇದನ್ನು ತಿಳಿದಾಗ ಯಾವ ಒಬ್ಬ ಕವಿಯೂ ತಾನು ಬರೆದ ಕಾವ್ಯವೇ ನಿಜವಾದ ಕಾವ್ಯ, ಉಳಿದವರದು ಅಲ್ಲ, ತನ್ನದೇ ವಿಶಿಷ್ಟವಾದ ಮನೋಧರ್ಮ, ಉಳಿದವರದು ಅಲ್ಲ ಎಂದು ಹೇಳಲಾರ. ಆದರೆ ಇತ್ತೀಚೆಗೆ ಕನ್ನಡ ಕಾವ್ಯವನ್ನು ಕುರಿತು ನಡೆದ ಗೊಂದಲಗಳಲ್ಲಿ ಇಂಥ ಭಾವನೆಗೆ ಅವಕಾಶವಾಗಿರುವುದು ವಿಷಾದದ ಸಂಗತಿ. ನವ್ಯ ಕಾವ್ಯದ ವೇದಿಕೆಯ ಮೇಲಿನ ಹಲವು ಧ್ವನಿವರ್ಧಕ ಯಂತ್ರಗಳು ಪ್ರಸಾರಮಾಡಿದ ಅನೇಕ ಅಭಿಪ್ರಾಯಗಳಲ್ಲಿ ಇವೂ ಕೆಲವು: ನವ್ಯ ಎನಿಸಿಕೊಂಡ ಕವಿ ಬರೆಯುವ ಕಾವ್ಯವೇ ಕಾವ್ಯ; ನವ್ಯಕಾವ್ಯ ನಿರೂಪಿಸುವ ಜೀವನ ದೃಷ್ಟಿಯೇ ನಿಜವಾದ ಜೀವನ ದೃಷ್ಟಿ; ನವ್ಯಕಾವ್ಯದಲ್ಲಿಯೇ ಸಮಕಾಲೀನ ಪ್ರಜ್ಞೆ ಅಭಿವ್ಯಕ್ತವಾಗಿದೆ. ಉಳಿದ ಕವಿಗಳು ವಾಸ್ತವ ಸತ್ಯವನ್ನು ಎದುರಿಸಲಾರದೆ ಮುಖ ತಿರುಗಿಸಿದ್ದಾರೆ, ಇಲ್ಲವೇ ಅನುಭವದ ಸಂಕೀರ್ಣತೆಯನ್ನು ಸರಳಗೊಳಿಸುವ ಅಪ್ರಾಮಾಣಿಕತೆಯಲ್ಲಿ ತೊಡಗಿದ್ದಾರೆ....ಇತ್ಯಾದಿ. ಈ ಹಲವು ಪ್ರಚಾರಗಳಿಂದ, ಹೊಸದಾಗಿ ಕಾವ್ಯ ಬರೆಯತಕ್ಕ ತರುಣಚೇತನಗಳಲ್ಲಿ ವಿಶೇಷ ಗೊಂದಲವಾಗಿದೆ; ಇಲ್ಲದೆ ಈ ಬಗೆಯ ದೃಷ್ಟಿವೈಪರೀತ್ಯದಿಂದ ಸರಿಯಾದ ಜೀವನದೃಷ್ಟಿಯೇ ಇಲ್ಲದೆ ವ್ಯಕ್ತಿತ್ವದ ಬಹುಮುಖವಾದ ಬೆಳವಣಿಗೆಗೆ ಧಕ್ಕೆಯುಂಟಾಗುತ್ತದೆ ಎಂಬುದನ್ನು ಗಮನಿಸಬೇಕು.

ವಾಸ್ತವವಾಗಿ ಪ್ರತಿಯೊಬ್ಬ ಲೇಖಕನ ಮನೋಧರ್ಮವೂ ವಿಶಿಷ್ಟವಾದುದು. ಈ ಮನೋಧರ್ಮದಲ್ಲಿ ವೈವಿಧ್ಯಗಳುಂಟು. ಕೆಲವರದು ಸ್ವಭಾವತಃ ವ್ಯಗ್ರ, ಕೆಲವರದು ಮಾರ್ದವ, ಕೆಲವರದು ಚಿಂತನಶೀಲ ಇತ್ಯಾದಿ. ಅದು ಅವನವನ ಆವರಣ, ವಿದ್ಯೆ, ಸಂಸ್ಕಾರ, ಸಂಸ್ಕೃತಿ ಇತ್ಯಾದಿಗಳಿಂದ ರೂಪಿತವಾದದ್ದು. ಹೀಗೆ ಅವನವನಿಗೆ ವಿಶಿಷ್ಟ ಮನೋಧರ್ಮವುಳ್ಳ ವ್ಯಕ್ತಿ ಅವನು ಕಂಡ ಬದುಕನ್ನು ಜೀವಂತವಾಗಿ ಅನುಭವಿಸದೆ ಅದು ಅವನಲ್ಲಿ ಕಲೆಯಾಗಿ ರೂಪುಗೊಳ್ಳದು. ಪ್ರತಿಯೊಬ್ಬ ಲೇಖಕನು ತನ್ನ ಪಾಲಿನ ಬದುಕನ್ನು ಎದುರಿಸುತ್ತಾನೆ, ಎದುರಿಸಬೇಕು. ಯಾವ ನಿಜವಾದ ಲೇಖಕನೂ ತನ್ನ ಸಮಕಾಲೀನ ಜೀವನದಿಂದ ತಪ್ಪಿಸಿಕೊಳ್ಳಲಾರ.* ಆದಕಾರಣ ಕವಿಯಾದವನಿಗೆ ಸಮಕಾಲೀನ ಪ್ರಜ್ಞೆ ಇಲ್ಲ ಅಥವಾ ಅದರಿಂದ ಅವನು ತಪ್ಪಿಸಿಕೊಂಡಿದ್ದಾನೆ ಎನ್ನುವ ಮಾತಿಗೆ ಅರ್ಥವಿಲ್ಲ. ಅವನು ತನ್ನ ಅನುಭವಕ್ಕೆ ಅಂದು ಬಂದ ಬದುಕನ್ನು ಅಥವಾ ಸಮಕಾಲೀನ ಪ್ರಜ್ಞೆಯನ್ನು ಪ್ರಕಟಿಸಬಲ್ಲ. ಈ "ಸಮಕಾಲೀನ ಪ್ರಜ್ಞೆ" ಎನ್ನುವ ಮಾತು ಎಷ್ಟೋ ವೇಳೆ

---

* ಈ ಮಾತಿನ ಅರ್ಥ ಹಿಂದಿನಿಂದ ಇಂದಿನತನಕ ಎಲ್ಲ ಕನ್ನಡ ಕವಿಗಳೂ ಸಮಕಾಲೀನ ಪ್ರಜ್ಞೆಯನ್ನು ತಮ್ಮ ಕಾವ್ಯಗಳಲ್ಲಿ ಅಭಿವ್ಯಕ್ತಪಡಿಸಿದ್ದಾರೆ ಎಂದು ಅಲ್ಲ; ಇದರ ಮೇಲೆ "ಸಮಕಾಲೀನ ಪ್ರಜ್ಞೆ"—ಯೊಂದೇ ಕಾವ್ಯದ ಬೆಲೆಯನ್ನು ಅಳೆಯುವ ಮಾನದಂಡವೂ ಅಲ್ಲ. ಕಾವ್ಯ ನಿಜವಾದ ಕಾವ್ಯವಾಗಬೇಕಾದರೆ ಅತ್ಯಗತ್ಯವಾಗಿ ಇರಲೇಬೇಕಾದ ಅಂಶಗಳಲ್ಲಿ ಅದೂ ಒಂದು.

ಅಪಾರ್ಥದಲ್ಲಿ ವ್ಯರ್ಥವಾಗಿದೆ. ಈ ದಿನ ಹಲವರು ಭಾವಿಸಿರುವಂತೆ ಸಮಕಾಲೀನ ಪ್ರಜ್ಞೆ ಎಂದರೆ ಕೇವಲ ನಾಗರಿಕ ಯಂತ್ರ-ವಿಜ್ಞಾನ ಜೀವನ ಪ್ರಜ್ಞೆಯಷ್ಟೇ ಅಲ್ಲ. ಸಮಾಕಾಲೀನ ಪ್ರಜ್ಞೆ ಎನ್ನುವುದು ವ್ಯಕ್ತಿಯಿಂದ ವ್ಯಕ್ತಿಗೆ ಅವನ ಸಾಂಸ್ಕೃತಿಕ, ಧಾರ್ಮಿಕ ಸಂಸ್ಕಾರಗಳಿಗೆ ಅನುಸಾರವಾಗಿ ಭಿನ್ನಭಿನ್ನವಾಗಿರಬಹುದು. ಬದುಕಿನ ನಿರಾಸೆ, ಜುಗುಪ್ಸೆ, ವಿಕೃತಿ ಇತ್ಯಾದಿಗಳನ್ನು ಅತ್ಯಧಿಕ ಪ್ರಮಾಣದಲ್ಲಿ ಅಭಿವ್ಯಕ್ತಪಡಿಸುವ ಕವಿಗೆ ಇರುವ "ಸಮಕಾಲೀನ ಪ್ರಜ್ಞೆ", ಶ್ರದ್ಧೆ, ಉತ್ಸಾಹ, ಸೊಗಸು ಇವುಗಳನ್ನು ಅಭಿವ್ಯಕ್ತಪಡಿಸುವ ಕವಿಯಲ್ಲಿ ಇಲ್ಲವೆಂದು ಹೇಗೆ ಹೇಳುವುದು? ಹತ್ತು ವರ್ಷಕ್ಕೂ ಹಿಂದೆ ಆರಂಭವಾದ ನವ್ಯ ಕಾವ್ಯದ ಉದಯರಾಗ ಇದು: ಶ್ರದ್ಧಾರಾಹಿತ್ಯ. ಮನುಕುಲದ ಎಲ್ಲ ಬೆಲೆಗಳೂ ತಲೆಕೆಳಗಾಗಿವೆ; ನಮ್ಮ ಪೂರ್ವ ಋಷಿ ನಿರ್ಮಿತವಾದ ಮೌಲ್ಯಗಳ ಸೇತುವೆ ಮುರಿದು ಬಿದ್ದಿದೆ; ಜನಜೀವನದಲ್ಲಿ ಹತಾಶೆ, ನಿರುತ್ಸಾಹ, ರಿಕ್ತತೆ ಇವುಗಳೇ ತಾಂಡವವಾಡಿವೆ. ಇವು ವಿವಿಧ ಸ್ವರಗಳು. ಈ ಭಾವನೆಯನ್ನು ವ್ಯಕ್ತಪಡಿಸುವಂಥ ಕವಿ ಸಮಕಾಲೀನ ಪ್ರಜ್ಞೆ ಉಳ್ಳವನು. ಉಳಿದವರಿಗೆ ವಾಸ್ತವ ಸ್ಥಿತಿ ತಿಳಿಯದು ಎನ್ನುವುದು ವಾದ. ಹೀಗಾಗಿ ಅಂದು ನೈತಿಕ, ಧಾರ್ಮಿಕ, ಆಧ್ಯಾತ್ಮಿಕ ಮೌಲ್ಯಗಳೆಲ್ಲವೂ ಭಾರತ ಸ್ವತಂತ್ರವಾದ ಮರುದಿನವೇ ತಲೆಕೆಳಗಾದುವೆಂದೂ, ಅದರಿಂದ ಜನಜೀವನದ ಶ್ರದ್ಧೆಯ ಬುಡವೇ ಅಲುಗಿತೆಂದೂ ಅವರು ಪ್ರಸಾರ ಮಾಡಿದರು. ನಮ್ಮ ದೇಶದ ನೈತಿಕ, ಧಾರ್ಮಿಕ, ಆಧ್ಯಾತ್ಮಿಕ ಭಾವನೆಗಳು ಸದಾ ಅತ್ಯಂತ ಸ್ವಚ್ಛವಾಗಿವೆ ಎಂದು ಯಾವ ಮೂರ್ಖನೂ ಹೇಳಲಾರ; ಆದರೆ ಆ ಎಲ್ಲ ಬೆಲೆಗಳೂ ಸ್ವಾತಂತ್ರ್ಯೋತ್ತರ ಭಾರತದಲ್ಲಿ, ಅದೂ ಈ ದೇಶ ಸ್ವಾತಂತ್ರ್ಯವನ್ನು ಪಡೆದ ಮುಂಜಾವಿನಲ್ಲೇ ತಟಕ್ಕನೆ ತಲೆಕೆಳಗಾದುವೆಂದು ಯಾರೂ ಒಪ್ಪಲಾರರು. ಇಂಗ್ಲೆಂಡಿನಲ್ಲಿ ಎರಡನೇ ಮಹಾಯುದ್ಧದ ಅನಂತರ, ಜನಜೀವನದಲ್ಲಿ ಎಲ್ಲ ಬೆಲೆಗಳೂ ತಲೆಕೆಳಗಾಗಿ ಯಾವ ಒಂದು ಬಗೆಯ ರಿಕ್ತಾವಸ್ಥೆ ಪ್ರಾಪ್ತವಾಯಿತೋ, ಅದೇ ಪರಿಸ್ಥಿತಿ ಇಲ್ಲೂ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಪ್ರಾಪ್ತವಾಯಿತೆಂದು ಭಾವಿಸಿದರು, ಅಥವಾ ಪ್ರಾಪ್ತವಾಗಿದೆ ಎಂದು ಭ್ರಮಿಸಿದರು, ಅಥವಾ ಪ್ರಾಪ್ತವಾಗಬೇಕೆಂದು ಭಾವಿಸಿದರು—ತಮ್ಮ ಕಾವ್ಯ ನಿರ್ಮಿತಿಯ ಸಲುವಾಗಿ! ಇದರಿಂದ ಕಾವ್ಯದ ವಸ್ತುವಿನಲ್ಲಿ ಅತೃಪ್ತಿ, ನೈರಾಶ್ಯ, ಮೌಲ್ಯಗಳ ವೈಪರೀತ್ಯ, ವಿಕೃತಿ, ಜುಗುಪ್ಸೆ ಇವುಗಳೇ ಪ್ರಧಾನವಾದ ಅಂಶಗಳಾದುವು. ಈ ಮನೋಧರ್ಮ ಈ ರೀತಿ ಆದುದಕ್ಕೆ ಕಾರಣವನ್ನು ಹೀಗೂ ಊಹಿಸಬಹುದು: ನವ್ಯಕಾವ್ಯ ಒಂದು ರೀತಿಯಲ್ಲಿ ಪ್ರಧಾನವಾಗಿ ನಾಗರಿಕ ಕಾವ್ಯ; ಎಂದರೆ ನಗರ ಜೀವನ, ಅಲ್ಲಿ ಕಂಡುಬರುವ ಗೊಂದಲ, ಅವ್ಯವಸ್ಥೆ, ಇತ್ಯಾದಿಗಳನ್ನು ನಿರೂಪಿಸತಕ್ಕದ್ದು. ನಗರದಲ್ಲಿ ಕಾಣುವ ತರಾತುರಿ, ನಿರುತ್ಸಾಹ, ಅರ್ಧವಿದ್ಯಾವಂತರ ಭಾವನೆಗಳಲ್ಲಿ ಕಂಡುಬರುವ ಅಪಕ್ವ ವಿಚಾರಸರಣಿ, ಅಂಥವರಲ್ಲಿ ಕಂಡುಬರುವ ಸುಲಭ ನೈರಾಶ್ಯ, ಯಂತ್ರ ವಿಜ್ಞಾನದಿಂದ ಉಂಟಾದ ಯಾಂತ್ರಿಕತೆ, ರಾಜಕೀಯದ ದುಷ್ಪರಿಣಾಮಗಳಿಗೆ ಒಳಗಾದವರ ಆರ್ತತೆ—ಇತ್ಯಾದಿಗಳನ್ನು ನವ್ಯಕಾವ್ಯ ತನ್ನ ಮೂಲ ಸಾಮಗ್ರಿಯನ್ನಾಗಿ ಮಾಡಿಕೊಂಡಿತು. ಇದೂ ಸಮಕಾಲೀನ ಜೀವನವೇ; ಆದರೆ ಇದೇ ಸಮಕಾಲೀನ ಜೀವನದ ಸರ್ವಸ್ವವೂ ಅಲ್ಲವಲ್ಲ. ನಗರದಲ್ಲೇ ಇರತಕ್ಕ ಎಲ್ಲರ ಮನೋಧರ್ಮವೂ ಹೀಗೇ ಇದೆ ಎಂದೇನೂ ಅಲ್ಲ. ಭಾರತದ ಚಿರಂತನ ಪರಂಪರೆಯನ್ನು ಅರಗಿಸಿಕೊಂಡ ಬೇರೆಬೇರೆಯ ಕವಿಗಳೂ ನಗರದಲ್ಲಿದ್ದಾರೆ ಎಂಬುದನ್ನು ಮರೆಯಬಾರದು. ಆದರೆ ವಾಸ್ತವವಾಗಿ ಅಖಂಡ ಭಾರತದ ಜನತೆ ಇರತಕ್ಕದ್ದು ಸಹಸ್ರಾರು ಹಳ್ಳಿಗಳಲ್ಲಿ; ಕವಿ ಈ ಕೆಲವು ನಗರಗಳಲ್ಲಿ, ಕೆಲವು ಜನದಲ್ಲಿ ಕಂಡ ಬದುಕು ಅಸಂಖ್ಯವಾದ ಹಳ್ಳಿಗಳಲ್ಲಿ ಇರುವ ಭಾರತದ ಹೃದಯಸರ್ವಸ್ವವೂ ಅಲ್ಲ. ಅಜ್ಞಾತವಾದ ಆ ಜನಕೋಟಿಯ ಹೃದಯದ ನಿಜವಾದ ಭಾವನೆಗಳ ಮೊತ್ತ ಏನೆಂಬುದನ್ನು ನಮ್ಮ ಪರಂಪರೆ ಹೇಳುತ್ತದೆ; ಅಷ್ಟೇ ಏಕೆ ಅಕಸ್ಮಾತ್ತಾಗಿ ಸಂಧಿಸಿದ ಯಾವ ಹಳ್ಳಿಯವನಾದರೂ ಹೇಳುತ್ತಾನೆ. ನಿಜವಾದ ಭಾರತದ ಮನಸ್ಸು, ಅದರ ಆಶೋತ್ತರಗಳನ್ನು, ಅಲ್ಲಿನ "ಸಮಕಾಲೀನ ಪ್ರಜ್ಞೆ"ಯನ್ನು ಅರಿಯಬೇಕಾದರೆ ಅಲ್ಲಿ ನೋಡಬೇಕು. ಆಗ ಗೊತ್ತಾಗುತ್ತಿತ್ತು, ಬದುಕಿನ ಮೌಲ್ಯಗಳೆಲ್ಲ ಸ್ವಚ್ಛವಾಗಿಲ್ಲದೆ ಹೋದರೂ, ನಗರದ ಕವಿಗಳು ಭಾವಿಸಿರುವಂತೆ ಎಲ್ಲವೂ ತಲೆಕೆಳಗಾಗಿ, ನಿರುತ್ಸಾಹ ರಿಕ್ತತೆಗಳೇ ತುಂಬಿಕೊಂಡಿಲ್ಲ ಎನ್ನುವುದು. ಇದು ಹೇಗೇ ಇರಲಿ ನಗರ ಜೀವನವನ್ನು ಅತ್ಯಂತ ನವೀನ ಪ್ರತಿಮೆಗಳಲ್ಲಿ ಯಶಸ್ವಿಯಾಗಿ ಚಿತ್ರಿಸುವುದರ ಮೂಲಕ ನವ್ಯ ಕವಿಗಳು ಹೊಸ ಹಾದಿಯನ್ನು ತೆರೆದರು.

ಪ್ರತಿಯೊಬ್ಬ ಲೇಖಕನೂ ವಿಶಿಷ್ಟತೆಯನ್ನು ಅಥವಾ ತನ್ನತನವನ್ನು ಪಡೆದುಕೊಳ್ಳುವುದು ಎರಡು ರೀತಿಯಲ್ಲಿ: ಒಂದು ತನ್ನನ್ನು ತಾನು ಅನ್ಯ ಕವಿಗಳ ಪ್ರಭಾವದಿಂದ

ಬಿಡಿಸಿಕೊಂಡು ತನ್ನದೇ ಆದ ಮನೋಧರ್ಮವನ್ನೂ ಅಭಿವ್ಯಕ್ತಿಯನ್ನೂ ಕಂಡುಕೊಳ್ಳುವುದು. ಎರಡು, ಅನ್ಯ ಪರಂಪರೆಯ ಪ್ರಭಾವದಿಂದ ಬಿಡಗಡೆ ಮಾಡಿಕೊಳ್ಳುವುದು ಅಥವಾ ತನ್ನ ಆವರಣದ, ತನ್ನ ಕಾಲದ, ತನ್ನ ಪರಂಪರೆಯ, ಒಟ್ಟಿನಲ್ಲಿ ತನಗೆ ಮೂಲಭಿತ್ತಿಯಾದ 'ಸಮಷ್ಟಿ'ಯ ಪ್ರಜ್ಞೆಯನ್ನು ಪಡೆಯುವುದು. ಎಂದರೆ ಬೇರೆಯ ಕವಿಗಳಿಂದಾಗಲಿ, ಬೇರೆಯ ಪರಂಪರೆಯಿಂದಾಗಲೀ ಉತ್ತಮವಾದ ಅಂಶಗಳನ್ನು ಸ್ವೀಕರಿಸಬಾರದೆಂದೇನೂ ಅಲ್ಲ; ಆದರೆ ಹಾಗೆ ತೆಗೆದುಕೊಂಡದ್ದು ತನ್ನ ವ್ಯಕ್ತಿತ್ವದಲ್ಲಿ ಅರಗ್ಗಿ, ತನ್ನತನದ ಬೆಳವಣಿಗೆಗೆ, ಪ್ರಕಾಶಕ್ಕೆ ನೆರವಾದರೆ ಅದೂ ಒಳ್ಳೆಯದೇ. ವಾಸ್ತವವಾಗಿ ಪ್ರಯೋಗಶೀಲನಾದ ಕವಿ ಇಂಥ ಪ್ರಭಾವ-ಪ್ರಚೋದನೆಗಳನ್ನು ಧಾರಾಳವಾಗಿ ಸ್ವಾಗತಿಸುತ್ತಾನೆ. ಸಾಹಿತ್ಯದಲ್ಲಿ ಕಂಡುಬರುವ ಪ್ರಗತಿ, ನೇರವಾಗಿ ತನ್ನ ಸಮಕಾಲೀನ ಜೀವನದ ಒತ್ತಡದಿಂದ ಆಗಬಹುದು, ಇಲ್ಲವೇ ಬೇರೊಂದು ಸಾಹಿತ್ಯ ಪರಂಪರೆಯ ಪ್ರಚೋದನೆಯಿಂದ ಆಗಬಹುದು. ತನ್ನ ಕಾಲದ ಜೀವನದ ಒತ್ತಡದಿಂದ ಮೂಡಿದ ನೂತನ ಪ್ರಯೋಗ ಅತ್ಯಂತ ಸಹಜವಾಗಿಯೇ ಇರುತ್ತದೆ; ಆದರೆ ಕೆಲವು ಸಲ ಬೇರೊಂದು ಪರಂಪರೆಯ ಪ್ರಚೋದನೆಯಿಂದ ರೂಪುಗೊಂಡ ಕಾವ್ಯ, ಹಾಗೆ ತಾನು ಪ್ರಚೋದನೆ ಪಡೆದ ಆ ಪರಂಪರೆಯ ಹಿಂದಿನ ಮನೋಧರ್ಮವನ್ನು ತನ್ನ ಪರಂಪರೆಗೆ ಅದು ಒಗ್ಗಲಿ-ಬಿಡಲಿ, ತಾನು ಪ್ರಯೋಗಕ್ಕಾಗಿ ಯಥಾವತ್ತಾಗಿ ಸ್ವೀಕರಿಸುತ್ತೇನೆ ಎಂದು ಹೊರಟಾಗ, ಅಂಥ ಪ್ರಯೋಗ, ಪ್ರಯೋಗದ ದೃಷ್ಟಿಯಿಂದ ಯಶಸ್ವಿಯಾದರೂ, ಪರಂಪರೆಯ ದೃಷ್ಟಿಯಿಂದ ತಕ್ಕಮಟ್ಟಿಗೆ ವಿದೇಶೀಯವಾಗಿಯೇ ನಿಂತೀತು. ಹತ್ತು ವರ್ಷಕ್ಕೂ ಹಿಂದೆ ಕನ್ನಡದಲ್ಲಿ ರೂಪುಗೊಂಡ ನವ್ಯ ಕಾವ್ಯಕ್ಕೆ ಈ ಮಾತು ಅಕ್ಷರಶಃ ಅನ್ವಯಿಸುತ್ತದೆ. ನವೋದಯ ಕಾವ್ಯದಿಂದ, ನವ್ಯ ಕಾವ್ಯದ ಕಡೆಗೆ ನಮ್ಮ ಕವಿಗಳ ಕಣ್ಣು ಹೊರಳಿದಾಗ, ಅವರಿಗೆ ಪ್ರಧಾನವಾದ ಪ್ರಚೋದನೆ ಒದಗಿದ್ದು ಪಶ್ಚಿಮದಿಂದ, ಅದೂ ಟಿ. ಎಸ್. ಎಲಿಯಟ್‌ನ ಕಾವ್ಯಪರಂಪರೆಯಿಂದ—ಎಂಬುದನ್ನು ಒಪ್ಪಿಕೊಳ್ಳಬೇಕು. ಎಲಿಯಟ್‌ನ ಕಾವ್ಯವನ್ನು ಓದಿ, ಅದರ ನಾವೀನ್ಯತೆಗೆ ಬೆರಗಾಗಿ, ಕೆಲವು ವ್ಯಕ್ತಿಗಳು ಪ್ರಯೋಗದಲ್ಲಿ ತೊಡಗಿದ್ದರಿಂದ ನವ್ಯಕಾವ್ಯ ಆವಿರ್ಭವಿಸಿತೇ ಹೊರತು, ಇಲ್ಲಿನ ಜನಜೀವನದ ಆಂತರಿಕ ಒತ್ತಡಗಳ ಕಾರಣದಿಂದ ಅಲ್ಲ. ಈ ಪ್ರಯೋಗ ಅಕಾಲಿಕವೆಂದಾಗಲೀ, ಅಸಾರ್ಥಕವೆಂದಾಗಲೀ ಯಾರೂ ಹೇಳಲಾರರು. ಪ್ರಯೋಗವಂತೂ ಅತ್ಯಂತ ಅಗತ್ಯವಾಗಿತ್ತು. ಆದರೆ ಈ ಪ್ರಯೋಗದಲ್ಲಿ ಒಂದು ಪ್ರಮಾದವಾಯಿತು. ಅದು ಈ ಕಾವ್ಯದಲ್ಲಿ ವ್ಯಕ್ತಗೊಂಡ ಮೂಲ ಮನೋಧರ್ಮ, ಮತ್ತು ಅದರ ಸಮರ್ಥನೆಗಾಗಿ ತಯಾರಾದ ಹಸಿಹಸೀ ಸಿದ್ಧಾಂತಗಳು. ಎಲಿಯಟ್‌ನ ಕಾವ್ಯದಿಂದ ಪ್ರಚೋದಿತವಾಗಿ, ಅಲ್ಲಿನ ರೀತಿ, ತಂತ್ರವೈವಿಧ್ಯ ಇತ್ಯಾದಿಗಳನ್ನು ನಮ್ಮಲ್ಲಿ ತಂದದ್ದು ಅತ್ಯಂತ ಸ್ವಾಗತಾರ್ಹ; ಆದರೆ ಇಲ್ಲಿ ರೂಪುಗೊಂಡ ಕಾವ್ಯವೂ 'ಭಾವ'ದಲ್ಲಿ ಅಲ್ಲಿನ ಮನೋಭಾವವನ್ನೇ ಯಥಾವತ್ತಾಗಿ ಅನುಕರಿಸಿದ್ದು ವಿಷಾದನೀಯ. ಅಲ್ಲಿನವರ ರೀತಿ, ನಮ್ಮವರ ಭಾವ ಈ ಎರಡರ ಒಂದು ಸಮನ್ವಯವಾಗಿ ರೂಪುಗೊಂಡಿದ್ದರೆ ಅದರ ರಾಜಮಾರ್ಗವೇ ಬೇರೆಯಾಗುತಿತ್ತೋ ಏನೋ. ಹಾಗಾಗದೆ ಹೋದುದರಿಂದಲೆ ನವ್ಯಕಾವ್ಯದ ಭಾವಸಾಮಗ್ರಿಯಲ್ಲಿ ಕಂಡು ಬಂದ ಆ ನಿರಾಸೆ, ವಿಕೃತಿ, ತುಮುಲ, ಆಂತರಿಕ ರಿಕ್ತತೆ ಇತ್ಯಾದಿಗಳೆಲ್ಲವೂ ಆಗತಾನೆ ಸ್ವಾತಂತ್ರ್ಯವನ್ನು ಪಡೆದು ಉದಯೋನ್ಮುಖವಾಗುತ್ತಿದ್ದ ರಾಷ್ಟ್ರದ ಉತ್ಸಾಹಪೂರ್ಣ ಮನೋಧರ್ಮಕ್ಕೆ ಸಂಪೂರ್ಣ ವಿರುದ್ಧವಾಗಿ ಅಪಸ್ವರದಂತೆ ಭಾಸವಾಯಿತು. ಇಂಗ್ಲೆಂಡಿನಲ್ಲಿ ನವ್ಯಕಾವ್ಯ ಹುಟ್ಟಿಕೊಳ್ಳಲು ಯಾವ ಒಂದು ಮನೋಭಾವ ಅಂದಿನ ಜನಜೀವನದಲ್ಲಿಯೇ ಅನಿವಾರ್ಯವಾಗಿ ಪ್ರಾಪ್ತವಾಯಿತೋ, ಅದೇ ಮನೋಭಾವ ಅಂದು ಎಚ್ಚೆತ್ತ ಭಾರತದಲ್ಲಿ ಪ್ರಾಪ್ತವಾಗಿರಲಿಲ್ಲ. ಹೀಗಾಗಿ ಸ್ವಾತಂತ್ರ್ಯದ ಅರುಣೋದಯ ಕಾಲದಲ್ಲೇ, ನವ್ಯಕವಿಗಳು ಮುಂಗಡವಾಗಿಯೇ ತೋಡಿಕೊಂಡ ಅತೀವ ನಿರಾಸೆ, ನಿರುತ್ಸಾಹ, ತುಮುಲ, ವಿಕೃತಿ ಮೊದಲಾದ ಭಾವನೆಗಳು ತೀರಾ ಅಕಾಲಿಕವಾಗಿದ್ದುವು. ಇದರಿಂದ ನವ್ಯಕಾವ್ಯ ಉದಯವಾದ ಕಾಲದಲ್ಲಿ ಅದರ ಮೂಲಭಾವನಾ ಸಾಮಗ್ರಿ ವಾಸ್ತವವಾಗಿ ಅಂದಿನ ಜನಮನೋಧರ್ಮದೊಂದಿಗೆ ಸಾಮರಸ್ಯವನ್ನು ಪಡೆಯಲಿಲ್ಲ. ಆದರೂ ನವೋದಯ ಕಾವ್ಯಕ್ಕೆ ಒಂದು ಪ್ರತಿಕ್ರಿಯೆಯಾಗಿ, ಒಂದು ನೂತನ ಪ್ರಯೋಗವಾಗಿ ಬಂದದ್ದು ಅತ್ಯಂತ ಸಂತೋಷದ ಸಂಗತಿ. ಬರೆಯುವ ದಾರಿಯಲ್ಲಿ, ನೋಡುವ ದೃಷ್ಟಿಯಲ್ಲಿ ಹೊಸತನವನ್ನು ಅದು ತಂದುಕೊಟ್ಟಿತು. ರೀತಿ ಮತ್ತು ತಂತ್ರದ ದೃಷ್ಟಿಯಿಂದಲಂತೂ ನವ್ಯಕಾವ್ಯದ ಸಾಧನೆ ಮಹತ್ವಪೂರ್ಣವಾದದ್ದು. ಪೂರ್ವದಿಂದ, ಪಶ್ಚಿಮದಿಂದ, ಒಳಗಿನಿಂದ, ಹೊರಗಿನಿಂದ, ಪ್ರಕೃತಿಯಿಂದ, ವಿಕೃತಿಯಿಂದ ನೂರು ದಿಕ್ಕಿಗೆ ತನ್ನ ಅನ್ವೇಷಣೆಯ ಕೈಚಾಚಿ ಅದು ನಿರ್ಮಿಸಿದ ಪ್ರತಿಮೆಗಳ ಉತ್ಸವ ಅತ್ಯಂತ ವೈವಿಧ್ಯ

ಪೂರ್ಣವಾಗಿದೆ. ಕಾವ್ಯ ಬರೆಯುತಕ್ಕವರಲ್ಲಿ ಅದು ಒಂದು ರೀತಿಯ ವಿಚಾರಶೀಲತೆಯನ್ನೂ, ಸ್ವವಿಮರ್ಶನ ಪ್ರಜ್ಞೆಯನ್ನೂ, ನಿರ್ದಾಕ್ಷಿಣ್ಯಪ್ರವೃತ್ತಿಯನ್ನೂ, ನವೀನ ಅನ್ವೇಷಣಾಮನೋಧರ್ಮವನ್ನೂ ತುಂಬಿತು; ಎಲ್ಲಕ್ಕಿಂತಲೂ ಮಿಗಿಲಾದುದು ಎಂದರೆ ಕಾವ್ಯದ ಭಾಷೆ ಜನದ ಆಡು ಮಾತಿಗೆ ಹತ್ತಿರವಾಗಬೇಕು ಎನ್ನುವ ಬಹುಕಾಲದ ಪ್ರಯತ್ನ ಮತ್ತು ಹಾರೈಕೆಗಳನ್ನು ಅತ್ಯಂತ ಯಶಸ್ವಿಯಾಗಿ ನೆರವೇರಿಸಿತು.

ನಿಜ; ನವ್ಯಕಾವ್ಯ ಜನದ ಆಡುಮಾತಿನ ಸಮೀಪಕ್ಕೇನೋ ಬಂದಿತು: ಆದರೆ ಓದುಗರಿಂದ ದೂರ ಸರಿಯಿತು! ಈ ಕಾವ್ಯವನ್ನು ಕುರಿತು ಜನ ಸಾಮಾನ್ಯವಾಗಿ ಹೇಳುವ ಮಾತು ಇದು: ಏನು ಕವಿತೆಯೋ ಇದು! ಸ್ವಲ್ಪವೂ ಅರ್ಥವಾಗುವುದಿಲ್ಲ. ಅರ್ಥವಾಗಿದೆ ಎಂದು ಹೇಳುವ ಎಷ್ಟೋ ಜನ ಬುದ್ಧಿವಂತರಿಗೂ ಇದು ಅರ್ಥವಾಗಿದೆಯೋ ಇಲ್ಲವೋ! ಒಬ್ಬ ಕವಿ ಬರೆದುದು ಓದುವ ಜನಕ್ಕೆ ಅರ್ಥವಾಗದಿದ್ದರೆ ಹೋಗಲಿ; ಮತ್ತೊಬ್ಬ ಕವಿಗೂ ಅರ್ಥವಾಗುವುದಿಲ್ಲವಲ್ಲ. ಅಷ್ಟೇ ಏಕೆ, ಬರೆದವನಿಗೂ ಅದರ ಅರ್ಥ ಗೊತ್ತೋ ಇಲ್ಲವೋ!

ಹಿಂದಿನ ಕಾವ್ಯ, ಅದು ಬಳಸುವ ಭಾಷೆಯಲ್ಲಿ ಒಮ್ಮೊಮ್ಮೆ ಕ್ಲಿಷ್ಟವಾಗಿರುವಂತೆ ತೋರಿದರೂ, ಸ್ವಲ್ಪ ಶ್ರಮಪಟ್ಟ ಸಹೃದಯನಿಗೆ ಅರ್ಥವಾಗದೇ ಇರುತ್ತಿರಲಿಲ್ಲ. ಆದರೆ ನವ್ಯಕಾವ್ಯನಾದರೋ ಭಾಷೆಯಲ್ಲಿ ಅತ್ಯಂತ ಸರಳವಾದರೂ, ಅದರ ಸಾಂಕೇತಿಕ ಹಾಗೂ ವಿಚಿತ್ರ ತಂತ್ರ ವಿಧಾನಗಳಿಂದ, ಮತ್ತು ವಸ್ತು ವೈಪರೀತ್ಯದಿಂದ ತಕ್ಕ ಮಟ್ಟಿಗೆ ಓದುಗರಿಗೆ ಅಗಮ್ಯವಾಗಿಯೇ ಇದೆ. ಇದನ್ನು ಬರೆಯುವ ಕವಿಗಳು ಓದುಗರಿಂದ ಹೆಚ್ಚಿನ ಪರಿಶ್ರಮವನ್ನು ನಿರೀಕ್ಷಿಸುತ್ತಾರೆ. ಅಷ್ಟೆ ಅಲ್ಲ, ತಮ್ಮ ಈ ಕಾವ್ಯ ಕೆಲವೇ ಮಂದಿ ಪ್ರಜ್ಞಾವಂತರಾದ ಬುದ್ಧಿಜೀವಿಗಳಿಗೆ – ಎಂಬ ಮಾತನ್ನು ಕೆಲವರು ಹೇಳಿದರು, ನಿಜ. ಕಾವ್ಯವನ್ನು "ಜನಕ್ಕಾಗಿ ಬರೆಯುತ್ತೇನೆ" ಎಂದು ಯಾವ ಕವಿ ಹೇಳಿದರೂ, ಅದು ಎಲ್ಲರ ಸಮಾರಾಧನೆಯ ವಸ್ತು ಅಲ್ಲ, ಕಾವ್ಯಾಸ್ವಾದ ರಸಿಕರಾದ ಕೆಲವರಿಗೆ–ಎಂದೇ ಅರ್ಥ. ಆದರೆ ನವ್ಯಕಾವ್ಯ ಬರೆದವರ ಮನೋಧರ್ಮವೇ ಬೇರೆ. ಅವರು ಹೇಳಿದರು: ಈ ಕಾವ್ಯ ಕೆಲವೇ "ಬುದ್ಧಿಜೀವಿ"ಗಳಿಗೆ ಎಂದು. ಅಷ್ಟೇ ಅಲ್ಲ, ತಮ್ಮ ಕಾವ್ಯ ಅರ್ಥವಾಗಲಿಲ್ಲ ಎನ್ನುವವರ ಬುದ್ಧಿಯ ಮಟ್ಟವೇ ಕಡಮೆ ಎನ್ನುವ ಧೋರಣೆಯನ್ನು ಪ್ರಕಟಿಸಲು ಅವರು ಹಿಂಜರಿಯಲಿಲ್ಲ. ಇದರಿಂದ ನವ್ಯಕಾವ್ಯವನ್ನು ಓದತಕ್ಕವರ ಸಂಖ್ಯೆ ಪರಿಮಿತವಾಗಿ ಅದರ ಸಹೃದಯರು ಕೆಲವೇ ಕೆಲವರಾಗಿ ಒಂದು ಸಣ್ಣ ಗುಂಪಾದರು. ಈ ರೀತಿ ಪ್ರತ್ಯೇಕವಾಗುವ ನವ್ಯಕಾವ್ಯದ ಸಹೃದಯ ದೀಕ್ಷಿತವಲಯ ಮನೋಭಾವವೂ (esoterism) ಎಲಿಯಟ್‌ನ ಕಾವ್ಯದ ಜೊತೆಗೇ ಪಶ್ಚಿಮದಿಂದ ಬಂದದ್ದು. ಇಂಗ್ಲೆಂಡಿನಲ್ಲಿ ಆರಂಭವಾದ ನವ್ಯಕಾವ್ಯವೂ ಉದ್ದೇಶಪೂರ್ವಕವಾಗಿಯೇ ಇಂಥ ಒಂದು ಪ್ರತ್ಯೇಕ ಸಹೃದಯ ವರ್ಗವನ್ನು ನಿರ್ಮಿಸಿಕೊಂಡಿತು. ಸರಿ; ಅದರ ಅನುಕರಣ ಇಲ್ಲಿಯೂ ವ್ಯೈದೋರಿತು. ಓದುಗರ ಬುದ್ಧಿಯನ್ನು ಬಳಲಿಸಿ, ಅದರ ಮೂಲಕ ತನ್ನ ಅಗ್ಗಳಿಕೆಯನ್ನು ಸ್ಥಾಪಿಸಿಕೊಳ್ಳುವ ಚಾಪಲ್ಯ, ನವ್ಯವೆನಿಸಿಕೊಂಡ ಹಲವು ಪ್ರಕಾರದ ಬರವಣಿಗೆಗಳಲ್ಲಿ ಕಾಣಿಸಿಕೊಂಡಿತು. ಸಹೃದಯರ ಬುದ್ಧಿಶಕ್ತಿಯನ್ನೇ ಶಂಕಿಸುವ ಪ್ರಶ್ನಿಸುವ ಈ ಪರಂಪರೆ ಕನ್ನಡಕ್ಕೆ ತೀರಾ ಹೊಸತು ಎನ್ನುವ ಭಾವನೆ ಹಲವರಲ್ಲಿ ಮೂಡಿತು. ಯಾವ ಕವಿಯೇ ಆಗಲಿ, ಯಾವ ಪರಂಪರೆಯೇ ಆಗಲಿ ಸಹೃದಯರನ್ನು ಗೌರವದಿಂದ ಕಂಡುಕೊಳ್ಳಬೇಕು. ಕವಿ ತನ್ನ ಕಾವ್ಯ ಆಸ್ವಾದಿಸಲ್ಪಡುವಂತಹ ಅಭಿರುಚಿಯನ್ನು ಓದುಗರಲ್ಲಿ ಉಂಟುಮಾಡಬೇಕು. ಸಾವಿರಾರು ವರ್ಷಗಳಿಂದ ಬಂದ ಕಾವ್ಯವನ್ನು ಓದಿ ಅರ್ಥಮಾಡಿಕೊಳ್ಳಬಲ್ಲವರು, ಈ ಮೂರು ನಾಲ್ಕು ದಶಕಗಳಲ್ಲಿ ಬಂದ ನವೋದಯ ಕಾವ್ಯವನ್ನು ಆಸ್ವಾದಿಸಬಲ್ಲವರು, ಆಧುನಿಕವಾದ ಶಿಕ್ಷಣವನ್ನು ಪಡೆದವರು, ಹತ್ತು-ಹನ್ನೆರಡು ವರ್ಷದಿಂದ ಈಚೆಗೆ ಬಂದ ಕಾವ್ಯದ ವಿಚಾರದಲ್ಲಿ ತಟಕ್ಕನೆ "ದಡ್ಡ"ರಾಗಿಬಿಟ್ಟರೆಂದೂ, ಈ ಹೊಸ ಕಾವ್ಯವನ್ನು ಓದಬಲ್ಲವರು ತಟಕ್ಕನೆ ಬುದ್ಧಿವಂತರಾಗಿಬಿಟ್ಟರೆಂದೂ ಭಾವಿಸುವುದು ಎಷ್ಟು ವಿಚಿತ್ರ! ಇದರಿಂದ ಕಾವ್ಯದಿಂದ ಸಹೃದಯರು ದೂರವಾಗುವುದಿರಲಿ, ಒಬ್ಬ ಕವಿ ಮತ್ತೊಬ್ಬ ಕವಿಯಿಂದ ದೂರವಾಗಿ, ಕಾವ್ಯವಿಚಾರ ವಿಮರ್ಶೆಗಳಿಗೆ ತಕ್ಕ ಆವರಣವಿಲ್ಲದೆ, ಸಣ್ಣಪುಟ್ಟ "ಪಂಥ"ಗಳಾಗಿಹೋಗಿರುವುದು ವಿಷಾದದ ಸಂಗತಿ.

ಕನ್ನಡದ ಸುದೈವ; ಈಗಾಗಲೇ ಮೊದಲಿನಿಂದಲೂ ಈ ಗೊಂದಲಗಳಿಂದ ವಿಚಲಿತರಾಗದೆ ಕಾವ್ಯ ಬರೆಯುತ್ತಿರುವವರ ಜೊತೆಗೆ, ಈಗ ಮೂರು ನಾಲ್ಕು ವರ್ಷಗಳಿಂದ ಕೆಲವು ತರುಣ ಲೇಖಕರಲ್ಲಿ ಸಮನ್ವಯದೃಷ್ಟಿ ರೂಪಿತವಾಗುತ್ತಿದೆ. ಮೊದಲಿನ ಆವೇಶ-ರಭಸಗಳು ತಗ್ಗಿ ಹಳದು-ಹೊಸದರ ಬೆಸುಗೆ ರೂಪಿತವಾಗುತ್ತಿದೆ. ಚಂದ್ರಶೇಖರ ಪಾಟೀಲ, ಚಂದ್ರಶೇಖರ ಕಂಬಾರ, ಗಿರಡ್ಡಿ ಗೋವಿಂದರಾಜ, ಸಿದ್ಧಲಿಂಗಯ್ಯ, ನಿಸ್ಸಾರ್ ಅಹಮದ್–ಇಂಥ ತರುಣ ಕವಿಗಳಲ್ಲಿ ಈ ಹೊಸ ಸ್ವರ ಕೇಳಿಸುತ್ತಿದೆ. ವಿಕೃತಿ, ವೈಪರೀತ್ಯಗಳು ಕಡಿಮೆಯಾಗಿ, ಬದುಕಿನ ಬೇರೆ

ಬೇರೆ ಮುಖದ ಆಳವಾದ ನಿರೀಕ್ಷೆ, ಶೈಲಿಯಲ್ಲಿ ಖಾರವಲ್ಲದ ಒಂದು ಹದ ಇವು ವ್ಯೆದೋರುತ್ತಿವೆ. ನವೋದಯ ಕಾಲದ ರೋಮಾಂಚಕಾರಿಯಾದ ಉತ್ಸಾಹವಾಗಲಿ, ನವ್ಯಕಾವ್ಯಾರಂಭ ಕಾಲದ ಆವೇಶ-ರಭಸಗಳಾಗಲೀ ಎರಡೂ ಈಗ ಇಲ್ಲ. ಕವಿಗಳೂ, ಓದುಗರೂ ಮತ್ತು ವಿಮರ್ಶಕರೂ ಒಂದು ರೀತಿಯ ವಿಚಾರಶೀಲ ಮೌನದಲ್ಲಿರುವಂತೆ ತೋರುತ್ತದೆ. ಒಟ್ಟಿನಲ್ಲಿ ಎಲ್ಲವನ್ನೂ ಅಳೆದು ತೂಗುವಂಥ ಮನೋಧರ್ಮಕ್ಕೆ ಉಚಿತವಾದ ಒಂದು ಸಂಧ್ಯಾಸ್ತಬ್ಧತೆ ಆವರಿಸಿದಂತಿದೆ. ಈ ನಡುವೆ ಶ್ರೀ ದಿನಕರ ದೇಸಾಯಿ ಅವರ ಚುಟಕಗಳು ಯಾರ ಕಣ್ಣನ್ನಾದರೂ ಸೆಳೆಯುತ್ತಿವೆ. ಭಾಷೆಯ ಹದ, ಮಾತಿನ ಮೊನಚು, ಧ್ವನಿಯ ಕೊಂಕು, ಅವುಗಳಲ್ಲಿ ಅಪೂರ್ವವಾಗಿದೆ. ಬಹುಶಃ ಕನ್ನಡದಲ್ಲಿ ಇಷ್ಟೊಂದು ಮುಕ್ತಕಗಳು ಎಂದೂ ನಿರ್ಮಾಣವಾದಂತಿಲ್ಲ. ಇಂಥ ಒಂದು ಮುಕ್ತಕಪ್ರಕಾರವನ್ನು ಬೆಳೆಯಿಸಿದ ಕೀರ್ತಿ ಶ್ರೀ ದೇಸಾಯಿಯವರಿಗೆ ಸಲ್ಲುತ್ತದೆ. ಆದರೆ ಈ ಮುಕ್ತಕಗಳ ಪ್ರಧಾನವಸ್ತು ಕೇವಲ ರಾಜಕೀಯ ವಿಡಂಬನೆಯೊಂದೇ ಆಗಿರುವುದು ಅವುಗಳಿಗೆ ಒಂದು ಮಿತಿಯನ್ನು ಕಲ್ಪಿಸಿದಂತಾಗಿದೆ. ಈ ಮುಕ್ತಕ ಪರಂಪರೆ ಸಾರ್ವಕಾಲಿಕವಾದ ಹಾಗೂ ಗಂಭೀರವಾದ ವಸ್ತುವೈವಿಧ್ಯವನ್ನು ತಳೆದರೆ ಒಳ್ಳೆಯದು.

ಅವುಗಳಲ್ಲೆ ಏಕೆ, ಇಂದಿನ ಕನ್ನಡ ಕಾವ್ಯದ ಕೆಲವು ಕವಿಗಳ ಪ್ರಧಾನ ವಸ್ತುವೆ 'ವಿಡಂಬನೆ' ಎನ್ನಬಹುದು. ಅದರಲ್ಲೂ ಕೇವಲ ರಾಜಕೀಯ ವಿಡಂಬನೆಯೊಂದೇ ಬಹುಮಟ್ಟಿಗೆ ರಂಜಕಸಾಮಗ್ರಿಯಾಗಿದೆ. ಇದರಿಂದ ಈ ಕಾವ್ಯ ಬಹುಜನಕ್ಕೆ ಪ್ರಿಯವಾಗುತ್ತಿರುವುದು ಕಾವ್ಯೇತರ ಕಾರಣಗಳಿಂದಲೇ ಹೊರತು ಅದರ ಕಾವ್ಯಾಂಶಗಳಿಂದ ಇರಲಾರದು. ಹೀಗಾಗಿ ಈ ವಿಡಂಬನ ಕಾವ್ಯ, ಏಕಮುಖತೆಯನ್ನೂ, 'ದೇಶ ಕಾಲ ವಿಶೇಷಾವೇಶ'ವನ್ನೂ, ವ್ಯಕ್ತಿಸಂಪರ್ಕವನ್ನೂ ನೀಗಿಕೊಂಡ ಮೇಲೂ ಮುಂದೆ ಎಷ್ಟರಮಟ್ಟಿಗೆ ಕಲೆಯಾಗಿ ನಿಲ್ಲಬಲ್ಲ ಸಾಮರ್ಥ್ಯವನ್ನು ಪಡೆದಿದೆ ಎನ್ನುವುದು ಕಾದುನೋಡಬೇಕಾದ ವಿಚಾರ.

ಇದರ ಜೊತೆಗೆ, ಕಳೆದ ವರ್ಷದಿಂದ ಚೀಣೀ ಧಾಳಿಯ ಪರಿಣಾಮವಾಗಿ ದೇಶಕ್ಕೆ ದೇಶವೇ ಎಚ್ಚರಗೊಂಡ ಪರಿಯನ್ನು, ಅನೇಕ ವೀರಗೀತೆಗಳ ನಿರ್ಮಾಣ ಪ್ರತಿಧ್ವನಿಸುತ್ತಿರುವುದು ಒಂದು ವಿಶೇಷದ ಸಂಗತಿ. ಶ್ರೀ ರಾ. ಯ. ಧಾರವಾಡಕರ ಅವರು ಸಂಪಾದಿಸಿ ಪ್ರಕಟಿಸಿರುವ "ವಿಜಯದುಂದುಭಿ" ಒಂದು ಐತಿಹಾಸಿಕ ಮಹತ್ವವನ್ನು ಒಳಗೊಂಡಿದೆ.

ಇನ್ನು ನವ್ಯ-ಅನವ್ಯ ಇತ್ಯಾದಿ ಮಾತುಗಳನ್ನು ಆದಷ್ಟು ಕಡಿಮೆ ಮಾಡುವುದು ಅಗತ್ಯವಾಗಿದೆ. ನವೋದಯ ಕಾವ್ಯ ಪರಂಪರೆಯಿಂದ ಮುಂದುವರಿದ ಪರಂಪರೆಯೊಂದನ್ನು ಗುರುತಿಸಲು "ನವ್ಯ" ಎಂಬ ಹೆಸರನ್ನು ಒಂದು ಪಾರಿಭಾಷಿಕ ಪದವನ್ನಾಗಿ ಬಳಸಲಾಯಿತೆಂದು ಭಾವಿಸುವುದು ಒಳ್ಳೆಯದು. ನವ್ಯಕಾವ್ಯ, ನವ್ಯವಲ್ಲದ ಕಾವ್ಯ; ನವ್ಯ ಕವಿ, ರೊಮ್ಯಾಂಟಿಕ್ ಕವಿ ಇತ್ಯಾದಿ ಹಣೆಚೀಟಿಗಳನ್ನು ಅಂಟಿಸಿ ಕೂಗಾಡುವುದರಿಂದ ಯಾವ ಒಳಿತೂ ಸಾಧಿತವಾಗಲಾರದು. ಯಾವ ಕಾವ್ಯವೇ ಆಗಲಿ ನಿಜವಾಗಿಯೂ ಕಾವ್ಯವಾಗಬೇಕಾದರೆ ಅದು ನವ್ಯವಾಗಿರಲೇಬೇಕು. ಈ ಅರ್ಥದಲ್ಲೇ ಪಂಪ ಮಹಾಕವಿ ಸಾವಿರ ವರ್ಷದ ಹಿಂದೆ ಹೇಳಿದ್ದು: 'ಇದು ನಿಚ್ಚಂ ಪೊಸತು, ಅರ್ಣವಂಬೊಲತಿಗಂಭೀರಂ ಕವಿತ್ವಂ' ಎಂದು. ಈ ನವ್ಯತೆ ಅಥವಾ ಹೊಸತನ ನೂರು ಕವಿಗಳಲ್ಲಿ ನೂರು ರೂಪದಲ್ಲಿ ಪ್ರಕಟವಾಗಬಹುದು. ಆ ಹೊಸತನವನ್ನು ಎಲ್ಲಿ ಕಂಡರೆ ಅಲ್ಲಿ ಗುರುತಿಸುವುದನ್ನು ಕಲಿಯಬೇಕಾಗಿದೆ. ಯಾವುದೋ ಒಂದು ರೀತಿಯಲ್ಲಿ ಬಂದರೆ ಮಾತ್ರ ನವ್ಯ, ಅಲ್ಲದಿದ್ದರೆ ಅಲ್ಲ, ಎನ್ನುವ ಭಾವನೆಯನ್ನು ನಾವು ನೀಗಿಕೊಳ್ಳಬೇಕಾಗಿದೆ. ಹಾಗೆ ನೋಡಿದರೆ ಕಾವ್ಯದಲ್ಲಿ ಇರುವುದು ಎರಡೇ ವರ್ಗ: ಉತ್ತಮ ಕಾವ್ಯ, ಉತ್ತಮವಲ್ಲದ ಕಾವ್ಯ. ಇದು ಯಾಕೆ ಉತ್ತಮ ಕಾವ್ಯ, ಇದು ಯಾಕೆ ಉತ್ತಮ ಕಾವ್ಯವಲ್ಲ ಎನ್ನುವುದನ್ನು ಸಹೃದಯರು ಬಲ್ಲರು, ವಿಮರ್ಶಕರು ಬಲ್ಲರು. ನಮ್ಮ ಮುಂದಿರುವ ಕಾಲ ಬಲ್ಲದು. ಇನ್ನು ಅನಗತ್ಯವಾದ ಚರ್ಚೆ ಏತಕ್ಕೆ?

ಅದೂ ಬೇಕು ಇದೂ ಬೇಕು
ಎಲ್ಲವೂ ಬೇಕು ನನಗೆ,
ದಾರಿ ನೂರಾಂವೆ ಬೆಳಕಿನರಮನೆಗೆ—
ಬೇಡ ನನಗೆ ಸಿದ್ಧಾಂತಗಳ ರಾದ್ಧಾಂತ ;
ನನಗಿಲ್ಲ, ಇದೇ ಸರಿ ಇಷ್ಟೇ ಸರಿ ಎನುವ ಪಂತ.
ನಾಬಲ್ಲೆ, ಇವು ಎಲ್ಲ ಏರುವೆಯು
ಒಂದೊಂದು ಹಂತ ;
ನೂರಾರು ಭಾವದ ಬಾವಿ ; ಎತ್ತಿಕೋ
ನಿನಗೆ ಬೇಕಾದಷ್ಟು ಸಿಹಿನೀರ.
ಪಾತ್ರೆಯಾಕಾರಗಳ ಕುರಿತು ಏತಕೆ ಜಗಳ ?
ನಮಗೆ ಬೇಕಾದದ್ದು ದಾಹಪರಿಹಾರ.

---

# ಮಹಿಳಾಗೋಷ್ಠಿಯ ಅಧ್ಯಕ್ಷಿಣಿಯವರ ಭಾಷಣ

[ಕಳೆದ ಡಿಸೆಂಬರು ತಿಂಗಳು ೨೮ರಂದು ಸಿದ್ಧಗಂಗಾ ಕ್ಷೇತ್ರದಲ್ಲಿ ೪೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಂ[illegible]ದ ಮಹಿಳಾಗೋಷ್ಠಿಯ ಅಧ್ಯಕ್ಷಿಣಿ ಡಾ॥ ಸರೋಜಿನಿ ಮಹಿಷಿ ಅವರು ಮಾಡಿದ ಭಾಷಣವನ್ನಿಲ್ಲಿ ಕೊಡಲಾಗಿದೆ.]

ಸಿದ್ಧಗಂಗೆಯ ಪವಿತ್ರ ಮಡಿಲಲ್ಲಿ ಸಾಹಿತ್ಯಾರಾಧನೆಗೆಂದು ನೆರೆದ ತಮಗೆಲ್ಲರಿಗೂ ನನ್ನ ಅನಂತ ವಂದನೆಗಳು. ಈ ಕ್ಷೇತ್ರಕ್ಕೆ ಬಂದು ತಪಸ್ವಿವರ್ಯರ ದರುಶನ ಪಡೆಯಲು ನನಗೆ ತುಂಬ ಸಂತೋಷ. ಹಿರಿಯ ಸಾಹಿತಿಗಳು ನೀಡಿದ ರಸದೂಟವನ್ನುಣ್ಣಲು ಎಲ್ಲಿಲ್ಲದ ಉತ್ಸಾಹ! ಜೊತೆಗೆ, ಹೊಸ ಸಾಮಾಜಿಕ, ಧಾರ್ಮಿಕ ಮೂಲ್ಯಗಳನ್ನಳವಡಿಸಿಕೊಂಡು ವಿವಿಧಮುಖವಾಗಿ ಸಾಹಿತ್ಯಸೇವೆಯನ್ನು ಸಲ್ಲಿಸುತ್ತಿರುವ ನನ್ನ ಸೋದರಿಯರನ್ನು ಕಾಣಲು ಅಪರಿಮಿತ ಆನಂದ. ಈ ಮಹಿಳಾಗೋಷ್ಠಿಯ ಹೊಣೆಯನ್ನು ನಿರ್ವಹಿಸಿಕೊಂಡು ಹೋಗುವ ಗುರುತರವಾದ ಕಾರ್ಯವನ್ನು ತಾವು ನನಗೆ ಒಪ್ಪಿಸಿದ್ದೀರಿ. ಅದಕ್ಕೆ ನನ್ನ ಯೋಗ್ಯತೆ ಎಷ್ಟೋ! ಗೌರವವನ್ನು ಕೊಟ್ಟಿರುವುದಕ್ಕೆ, ತಾವು ನನ್ನಲ್ಲಿಟ್ಟಿರುವ ವಿಶ್ವಾಸ ಅಂತಃಕರಣಗಳೇ ಕಾರಣ! ಅದು ನನ್ನ ಸಂಪತ್ತು! ನಾನದಕ್ಕೆ ಋಣಿ. ಈ ವಿಶ್ವಾಸ ಹಾಗೂ ಆತ್ಮೀಯತೆಗಳಿಂದ ಉಂಟಾಗಿರುವ ನನ್ನ ಮೇಲಿನ ಹೆಚ್ಚಿನ ಹೊಣೆಯನ್ನು ನಿರ್ವಹಿಸುವ ಶಕ್ತಿ ನನಗೆ ತಮ್ಮ ಬಲದಿಂದಲೇ ಬರಬೇಕು. ಆ ಶಕ್ತಿಯನ್ನು ದಯಪಾಲಿಸಲೆಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇನೆ.

ಸಂಘಟಿತರಾದ ನನ್ನ ಸೋದರಿಯರನ್ನು – ಕನ್ನಡಿತಿಯರನ್ನು ಕಾಣಲು, ಅವರ ವಿಚಾರಗಳನ್ನು ತಿಳಿದುಕೊಳ್ಳಲು, ಅವರಲ್ಲಿ ಹುದುಗಿದ ಅಪಾರವಾದ ಶಕ್ತಿ ಯಾವ ದಿಕ್ಕಿನಲ್ಲಿ ಹರಿಯುತ್ತಿದೆಯೆಂಬುದನ್ನರಿಯಲು ನನಗೆ ತುಂಬ ಆಶೆ!

ರಾಜ್ಯ ಪುನರ್ಘಟನೆಗೆ ಮೊದಲು ಮುಂಬೈ, ಮದ್ರಾಸ, ಹೈದರಾಬಾದ, ಮೈಸೂರು ಪ್ರಾಂತಗಳಲ್ಲಿ ಹರಿದು ಹಂಚಿಹೋಗಿದ್ದ ಕನ್ನಡ ನಾಡು ಆಯಾ ಪ್ರಾಂತಗಳ ಭಾಷೆ ಸಾಹಿತ್ಯ ಸಮಸ್ಯೆಗಳನ್ನರಿತು ಮೈಗೂಡಿಸಿಕೊಂಡು ಒಂದಾಗಿ ಬದುಕಲು ಯತ್ನಿಸಿತು. ಈಗ ನಾಡು ಒಂದಾಗಿದೆ, ಅದರ ಬಲ ಹೆಚ್ಚಬೇಕು, ಕಲೆ ಸಾಹಿತ್ಯಗಳ ಗುಣ ಗಾತ್ರಗಳಲ್ಲಿ ವಿಕಾಸ ಹೊಂದಬೇಕು; ಬದುಕುವ ಹೋರಾಟ ಮುಗಿದು ಒಳ್ಳೇ ರೀತಿಯಲ್ಲಿ ಬದುಕಲು ಹೋರಾಟ ಸಾಗಬೇಕು.

ಪರಿಸರದ ಪರಿಣಾಮ ಜೀವನದ ಮೇಲಾಗಿ, ಅದರ ಪಡಿನೆಳಲು ಸಾಹಿತ್ಯದಲ್ಲಿ ಬೀಳುವದು: ಈ ಬೆಳಕಿನಲ್ಲಿ ನೋಡಿದಾಗ, ಸ್ವಾತಂತ್ರ್ಯಪೂರ್ವದಲ್ಲಿದ್ದ ಕೆಚ್ಚು ಹೋರಾಟಗಳ ರೀತಿ ಬೇರೆ; ಸ್ವಾತಂತ್ರ್ಯೋತ್ತರ ಭಾರತದಲ್ಲಿ ಇಂದಿನ ಗುರಿ ಬೇರೆ! ಅಂದಿನ ಸಂಘಟನೆ, ಕರ್ತೃತ್ವ ಶಕ್ತಿ, ತ್ಯಾಗಗಳು ಅಷ್ಟೇ ಏಕೆ ದೈಹಿಕ ಶಕ್ತಿ ಸಹಿಷ್ಣುತೆಗಳೂ ಇಂದು ಜನತೆಯಲ್ಲಿ ಕಡಿಮೆಯಾಗಿವೆ ಎಂದು ಎರಡೂ ಕಾಲಗಳನ್ನು ಬಲ್ಲವರು ಹೇಳುತ್ತಾರೆ. ಹಳೆಯದೆಲ್ಲ ಒಳ್ಳೆಯದೆನ್ನುವವರು ಹೀಗೆನ್ನುತ್ತಾರೆಂದು ತಿಳಿಯಬಹುದೇ ಹಾಗಾದರೆ? ನಮ್ಮ ಕಾಲವೂ ಹಳೆಯದಾದ ಮೇಲೆ, ಮುಂದಿನ ಪೀಳಿಗೆ ಅದನ್ನು ಮೆಚ್ಚೀತೆಂಬ ಸಮಾಧಾನವನ್ನು ನಾವೂ ತಾಳಬಹುದೇ? ಅದು ದುರ್ಬಲರ ವಾದ. ಗಳಿಸುವ ಶಕ್ತಿ ಸಾಲದೆ, ತ್ಯಾಗದ ಮಾತನ್ನಾಡಿದರೆ, ಅದು ಹುರುಳಿಲ್ಲದ ಮಾತು.

ಕನ್ನಡಿಗರ ನಿದ್ರೆ ಗಾಢವಾದದ್ದು; ಎದ್ದರೆ ಮಾತ್ರ ಯಾವುದಕ್ಕೂ ವಿಲಂಬವೇ ಇಲ್ಲ. ಆದರೆ ಏಳಲಿಕ್ಕೇ ವಿಲಂಬ ಅಷ್ಟೇ. ಸಾಮ್ರಾಜ್ಯಗಳನ್ನು ಕಟ್ಟಿ ತೋರಿಸಿದ ಕನ್ನಡಿಗರು ಅದನ್ನು ಕೊರೆದೂ ತೋರಿಸಿದ್ದಾರೆ. ಅಂದು ಇತಿಹಾಸವು ಮಾಡಲ್ಪಟ್ಟಿತು, ಇಂದು ಅದು ಓದಲ್ಪಡುತ್ತಿದೆ.

ಕರ್ತೃತ್ವಶಕ್ತಿ ಸೇವೆ ತ್ಯಾಗಗಳು ಅಂದು ರಾಜಕೀಯ ಸ್ವಾತಂತ್ರ್ಯವನ್ನು ಪಡೆಯಲು ಅವಶ್ಯಕವಾಗಿದ್ದರೆ ಇಂದೂ ಅವು ಅವಶ್ಯಕವಾಗಿವೆ,—ಜನರ ಜೀವನ ಒಳ್ಳೆದಾಗಲು. ಇದ್ದ ಪರಿಸ್ಥಿತಿಯಲ್ಲಿಯ ಕೊರತೆಯೇ ಕರ್ತೃತ್ವಶಕ್ತಿಗೆ ಆಹ್ವಾನವಾಗಿ ಒಳ್ಳೆಯ ಸಾಹಿತ್ಯವೂ ಹೊರಬಂತು. ಮಾಂಡಲೆಯ ಕಾರಾಗೃಹದಲ್ಲಿ ಲೋಕಮಾನ್ಯ ಟಿಳಕರ ಹೃದಯ ಗೀತೆಯ ರಹಸ್ಯವನ್ನು ಕಂಡಿತು; ದಾಸ್ಯದ ಪರಿಸರ, ಅಜ್ಞಾನಗಳು ಗಾಂಧೀಜಿಗೆ ಆಹ್ವಾನವಿತ್ತು ಸತ್ಯ

೬ದೊಡನೆ ಪ್ರಯೋಗ ನಡೆಸಲು ಕಾರಣವಾದವು. 'ಬಡವರ ಬಗ್ಗರ ತುತ್ತಿನ ಚೀಲ, ಬರಿದೋ ಬರಿದು, ತೆರವೋ ತೆರವು,' ಎಂದು ಕವಿವರ್ಯ ಬೇಂದ್ರೆಯವರ ಹೃದಯ ಮಿಡಿಯಿತು.

ಕರ್ತೃತ್ವಶಕ್ತಿ, ಸೇವೆ, ತ್ಯಾಗಗಳ ಬೆಲೆ ಕಡಿಮೆಯಾಗಿಲ್ಲ, ಆಗುವದು ಶಕ್ಯವೂ ಇಲ್ಲ. ನಾವು ನಮ್ಮ ದೌರ್ಬಲ್ಯದಿಂದಾಗಿ ಅವುಗಳ ಬೆಲೆಯನ್ನು ಕಡಿಮೆ ಮಾಡುವ ಯತ್ನ ಮಾಡುತ್ತಿದ್ದೇವೆ. ದುರ್ಬಲರ ತ್ಯಾಗ, ಅಹಿಂಸೆಗಳಿಗೆ ಯಾವ ಬೆಲೆಯಿದೆ? ಈ ಶಬ್ದಗಳು ಅಂದಿನಿಂದ ಇಂದಿಗೂ ಇವೆ: ಅವುಗಳಿಗೆ ಸಜೀವತೆ ಬರಬೇಕಾದದ್ದು ವ್ಯಕ್ತಿಯ ಜೀವನದಲ್ಲಿ, ರಾಷ್ಟ್ರದ ಜೀವನದಲ್ಲಿ!!

ಮಹಿಳೆ ಮನೆಯ ನಾಲ್ಕು ಗೋಡೆಗಳ ಮಧ್ಯದಲ್ಲಿದ್ದರೂ, ಅದೊಂದು ಚಿಕ್ಕ ಪ್ರಪಂಚವೇ. ಸೇವಾಬುದ್ಧಿ-ತ್ಯಾಗಬುದ್ಧಿಗಳು ಅವಳ ಜೀವನದಲ್ಲಿ ಹಾಸುಹೊಕ್ಕಾಗಿಯೇ ಬಂದಿವೆ. ತನಗಿಲ್ಲದಿದ್ದರೂ ಸರಿ, ತನ್ನ ಪತಿ ಉಂಡರವಳಿಗೆ ಸಮಾಧಾನ, ಮಗು ಉಂಡರೆ ಸಂತಸ, ಬಂದ ಅತಿಥಿಗಳು ತಿಂದು ತೇಗಿದರೆ ಸಂತೃಪ್ತಿ! ಅವಳ ಈ ತ್ಯಾಗಬುದ್ಧಿ ಸಮಾಜದ ಮಟ್ಟಕ್ಕೂ, ರಾಷ್ಟ್ರಮಟ್ಟಕ್ಕೂ ಸ್ವಲ್ಪ ವಿಸ್ತರಿಸಿದರೆ ಎಂತಹ ಕ್ರಾಂತಿಯಾದೀತು, ಎಷ್ಟು ಒಳ್ಳೆಯದಾದೀತು! ಮನೆಯ ಜನಕ್ಕಾಗಿ ತ್ಯಾಗಮಾಡುವ ಮಹಿಳೆ ತಾನು ತ್ಯಾಗಮಾಡಿದ್ದೇನೆಂಬುದನ್ನು ನೆನೆಯುವದೂ ಇಲ್ಲ. ಇಲ್ಲದೆ ಹೋದರೆ ತ್ಯಾಗದ ಅಹಂಕಾರವನ್ನು ತಾಳಿಕೊಳ್ಳುವದೇ ಕಷ್ಟವಾದೀತು.

ಮಹಿಳೆಯು ಸೇವೆ ಮಾಡಬಲ್ಲಳು, ತ್ಯಾಗ ಮಾಡಬಲ್ಲಳು ಎಂಬುದನ್ನು ಸಮಾಜವು ತಿಳಿಯದೆ ಹೋದರೆ ಅಥವಾ ತಿಳಿದು ದುರುಪಯೋಗ ಮಾಡಿಕೊಂಡರೆ ಆ ನಷ್ಟವು ನಾಡಿಗೆ, ನುಡಿಗೆ. ತನ್ನ ಶಕ್ತಿಯೆಷ್ಟಿದೆಯೆಂಬುದನ್ನು ಮಹಿಳೆಯೂ ಸ್ವತಃ ತಿಳಿಯಬೇಕಾದದ್ದು ಅತ್ಯವಶ್ಯ.

ಸಾಹಿತ್ಯರಚನೆ ಪರಿಸರ, ಸಂಸ್ಕಾರ ಹಾಗೂ ನಿರೂಪಣ ಶಕ್ತಿಗಳನ್ನವಲಂಬಿಸಿದೆ. ಇದ್ದ ಬುದ್ಧಿ-ಭಾವನೆಗಳು ಕೃಷಿಯಿಂದ ವಿಪುಲವಾಗಬಲ್ಲವು. ಮಹಿಳೆಗೆ ಬುದ್ಧಿ-ಭಾವನೆಗಳಿಲ್ಲವೆ? ನಿರೀಕ್ಷಣೆ, ನಿರೂಪಣೆಗಳು ಹೆಚ್ಚು-ಕಡಿಮೆ ಪ್ರಮಾಣದಲ್ಲಿರಬಹುದು. ಆದರೆ ಅಭಿವ್ಯಕ್ತಿಗೆ ಅವಕಾಶ ಉಂಟೆ? ಈ ಪ್ರಶ್ನೆಯ ಉತ್ತರ ಸಾಮಾಜಿಕ ಆರ್ಥಿಕ ಮೂಲ್ಯಗಳ ಕ್ರಿಯೆ ಪ್ರತಿಕ್ರಿಯೆಯ ಹಿನ್ನೆಲೆಯನ್ನವಲಂಬಿಸಿದೆ.

ಸಾಮಾನ್ಯವಾಗಿ ಪುರುಷನ ದುಡಿಮೆಯ ಕ್ಷೇತ್ರ ಸಂಪರ್ಕಗಳು ವಿಶಾಲವಾಗಿವೆ. ಸ್ತ್ರೀಯ ಪ್ರಪಂಚ ಅದರ ಜೊತೆಗೆ ಹೋಲಿಸಿದಾಗ ಚಿಕ್ಕದು. ಆದರೆ ವಿಶ್ವದ ಪ್ರತೀಕದಂತಿದ್ದುದು; ಅವಳ ನಿರೀಕ್ಷಣೆಗೆ, ವಿವಿಧ ಭಾವನೆಗಳ ವಿಕಾಸಕ್ಕೆ ತುಂಬ ಅವಕಾಶ ಅಲ್ಲಿಯೂ ಇದೆ. ಶ್ರಮಜೀವಿ ಮಹಿಳೆ ಮನೆಯ ಒಳಗೂ-ಹೊರಗೂ ದುಡಿಯುತ್ತಾಳೆ: ಅದರೊಂದಿಗೇ ತನ್ನ ಶ್ರಮದ ಶಬ್ದವನ್ನೇ ತನ್ನ ಭಾವದ ಗೀತಕ್ಕೆ ಹಿನ್ನೆಲೆಯ ಸಂಗೀತವನ್ನಾಗಿಟ್ಟುಕೊಂಡು ಹಾಡುತ್ತಾಳೆ, ಬೀಸುವಾಗ, ಕುಟ್ಟುವಾಗ, ಹೊಲದಲ್ಲಿ ರಾಶಿ ಮಾಡಿದಾಗ, ತೊಟ್ಟಿಲು ತೂಗುವಾಗ ಮಹಿಳೆ ಹಾಡುತ್ತಲೇ ಬಂದಿದ್ದಾಳೆ. ಅವಳ ಭಾವನೆಯೊಂದಿಗೆ ಶಬ್ದ, ತಾಳ, ಲಯ ಎಲ್ಲ ಹೊಂದಿಕೊಳ್ಳುತ್ತವೆ. ಇದೇ ಜಾನಪದ ಸಾಹಿತ್ಯ. ಬಾಯಿಂದ ಬಾಯಿಗೆ ಪರಂಪರೆಯಾಗಿ ಒಂದೊಂದು ರೂಪದಲ್ಲಿ ಬದುಕಿ ಉಳಿದಿವೆ. ಜಾನಪದ ಸಾಹಿತ್ಯದಲ್ಲಿ ಮಹಿಳೆಯರದೇ ಹಿರಿಯ ಪಾತ್ರ. ಜೀವನದ ಹೋರಾಟದ ಸುಖ-ದುಃಖಗಳ ಸಮಗ್ರ ಚಿತ್ರವನ್ನು ಜಾನಪದ ಸಾಹಿತ್ಯದಲ್ಲಿ ಮೂಡಿಸಿದವರು ನಮ್ಮ ತಾಯಂದಿರು. ಜೀವನದಲ್ಲಿ ಸುಖವೂ ನಿರಂತರವಲ್ಲ, ದುಃಖವೂ ನಿರಂತರವಲ್ಲ; ಈ ಜಗತ್ತು ನಿಜ, ಅದರಲ್ಲಿಯ ಬಾಳು ನಿಜ, ಹೋರಾಟವೂ ನಿಜ; ಈ ಹೋರಾಟದ ನಡುವೆ ನಾವು ಇದ್ದು ಸವಿಯುವ ಸುಖ-ಆನಂದಗಳೂ ನಿಜ ಎಂಬುದೇ ಈ ಸಾಹಿತ್ಯದ ತಿರುಳು;—ಎಂಬುದನ್ನು ವಿವಿಧ ರಸಗಳಲ್ಲಿ ಹಾಡಿದವರವರು. ಕನ್ನಡ ನಾಡಿನ ಯಾವ ಮೂಲೆಯಲ್ಲಿ ಹೋಗಿ ನೋಡಿದರೂ ಸರಿ, ಹೆಣ್ಣು ಮಕ್ಕಳ ಹೃದಯಸಂಸ್ಕಾರ ಒಂದು ಎಂಬುದಕ್ಕೆ ಜಾನಪದ ಸಾಹಿತ್ಯವೇ ಸಾಕ್ಷಿ. ಶ್ರೀ ಗೊರೂರ ಅವರ ಮಾತಿನಲ್ಲಿ ಹೇಳಬೇಕೆಂದರೆ, 'ಈ ತ್ರಿಪದಿ ವೇದಕ್ಕೆ ಜೀವನವೇ ದೇವತೆ, ಹೆಣ್ಣುಗಳೇ ಋಷಿಗಳು.' ಆ ಕಾರಣದಿಂದಲೇ ಬೀಸುವ ಹಾಡು, ಕೋಲ ಹಾಡು, ಹಂತಿಯ ಹಾಡು, ಸಮುದ್ರ ತೀರದ ದೋಣಿಯ ಹಾಡು, ಗೌರಿಯ ಹಾಡು—ಎಲ್ಲವುಗಳನ್ನು ಒಳಕೊಂಡು ಜಾನಪದ ಸಾಹಿತ್ಯಕ್ಷೇತ್ರ ವಿಶಾಲವಾಗಿದೆ. ಎಂತಹ ದೊಡ್ಡ ವಿಚಾರವನ್ನು ಬೇಕಾದರೂ ಮಹಿಳೆಯರು ತಮ್ಮದೇ ಆದ ಶೈಲಿಯಲ್ಲಿ ಹೇಳಬಲ್ಲರು. "ವಿಷ್ಣುಪತ್ನಿ ನಮಸ್ತುಭ್ಯಂ . . . ಪಾದಸ್ಪರ್ಶಂ ಕ್ಷಮಸ್ವಮೆ" ಎಂದು ಪೃಥ್ವಿಯನ್ನು ಕುರಿತು ವಂದನೆ ಸಲ್ಲಿಸಿದ ವಿಚಾರ, ಜಾನಪದ ಸಾಹಿತ್ಯದಲ್ಲಿ ಎಷ್ಟು ತಿಳಿಯಾಗಿ ಬಂದಿದೆ ಎಂಬುದನ್ನು ನೋಡಬಹುದಾಗಿದೆ.

ಏಳುತಾಲೇ ಎದ್ದು ಯಾರ್‍ಯಾರ ನೆನೆಯಲಿ
ಎಳ್ಳು ಜೀರಿಗೆ ಬೆಳೆಯೋಳಾ। ಭೂಮಿತಾಯಿ
ಎದ್ದೊಂದು ಗಳಿಗೆ ನೆನೆದೇನ॥

ಈ ನೆನಪಿನಿಂದಲೇ ಜಾನಪದ ಕವಿಯಿತ್ರಿಯ ನಿತ್ಯಜೀವನ ಪ್ರಾರಂಭ. ಮಧ್ಯೆ ಆಯಾ ಭಾವನೆಗಳಿಗೂ ಅಭಿವ್ಯಕ್ತಿ ಮೂಡಿದೆ.

ಬೇವಿನ ಆ ಗಿಡಕ ಬೆಲ್ಲದ ಕಟ್ಟೆಕಟ್ಟ
ಜೇನುತುಪ್ಪದಲಿ ಹೊಯ್ನೀರ। ಹಣಸಿದರ
ಬೇವು ತನ್ನ ಸವ ಬಿಡಲಿಲ್ಲ॥

ಸ್ವಭಾವದಲ್ಲಿ ವ್ಯತ್ಯಾಸವಾಗದು ಎಂಬುದನ್ನು ಅಲಂಕಾರಿಕವಾಗಿ, ಇಲ್ಲಿ ಹೇಳಿದ್ದಾಳೆ ಕವಯಿತ್ರಿ! ಜಾನಪದ ಕಾವ್ಯವನ್ನು ರಚಿಸಿದ ಕವಯಿತ್ರಿ ಇಂಥವಳೇ ಎಂದು ಅನೇಕ ಸಂದರ್ಭಗಳಲ್ಲಿ ಹೇಳಲು ಸಾಧ್ಯವಿಲ್ಲ. ಈ ಸಾಹಿತ್ಯ ಗ್ರಂಥಸ್ಥವಾಗದೆ ಹೆಣ್ಣುಮಕ್ಕಳ ಜೀವನದಲ್ಲಿ ಪರಂಪರೆಯಾಗಿ ಉಳಿದುಬಿಟ್ಟುದೇ ಇದಕ್ಕೆ ಕಾರಣವಾಗಿದೆ.

ಮಹಿಳೆ ಋಗ್ವೇದದಲ್ಲಿ ಋಕ್ಕುಗಳನ್ನೂ ರಚಿಸಿದಳು: ಜೀವನದ ಕುಲುಮೆಯಲಿ ಚಿಮ್ಮಿಬಂದ ಜಾನಪದ ಸಾಹಿತ್ಯಕ್ಕೂ ಕರ್ತೃವಾದಳು. ಘೋಷಾ, ವಿಶ್ವಂವಾರಾ, ಅಪಾಲಾ, ಸೂರ್ಯಾ ಇವರು ಋಕ್ಕುಗಳನ್ನು ರಚಿಸಿ ಬ್ರಹ್ಮವಾದಿನಿಯರಾಗಿ ಬದುಕಿದರು. ಆದರೆ ಇಂದು ಅವರ ಭಗಿನಿಯರಿಗೇ ಆ ವೇದಗಳನ್ನೋದುವ ಅಧಿಕಾರ ವಿಲ್ಲ.

ಈ ಮಧ್ಯದ ಕಾಲದಲ್ಲಿ ರಾಜಕೀಯ ಸಾಮಾಜಿಕ ಸ್ಥಿತ್ಯಂತರಗಳಿಂದಾಗಿ, ಮಹಿಳೆ ಮಾತನಾಡದೆ ಹಿಂದುಳಿಯಬೇಕಾಗಿ ಬಂತು; ಧರ್ಮಗ್ರಂಥಗಳೂ, ಕಾನೂನೂ ಅವಳನ್ನು ಹಿಂದೆಯಿರಿಸಲು ಸಹಾಯಕವಾದವು. ಕೌಸಲ್ಯೆ ಸ್ವಸ್ತ್ಯಯನವನ್ನು ಹೇಳಿದಳೆಂಬ ಮಾತೂ, ಸೀತೆ ಸಂಧ್ಯಾವಂದನೆಗಾಗಿ ನದೀ ತೀರಕ್ಕೆ ಬಂದಳೆಂಬ ವಿಚಾರವೂ ರಾಮಾಯಣದ ಮಟ್ಟಿಗೇ ಉಳಿದವು. ಬೌದ್ಧ ಭಿಕ್ಷುಣಿಯರ ಥೇರಿಗಾಥಾದಂತಹ ಕೃತಿಯೂ ತರುವಾಯ ದಲ್ಲಾದ ಧಾರ್ಮಿಕ-ಸಾಮಾಜಿಕ ಅವನತಿಯಿಂದಾಗಿ, ಅಷ್ಟು ಪ್ರಭಾವಿಯೆನಿಸಲಿಲ್ಲ. ಅಲ್ಲಿಂದೀಚೆಗೆಂದರೆ ಪುರುಷನ ಧರ್ಮಾರ್ಥ ಕಾಮಕ್ಕೆ ಸ್ತ್ರೀ ಒಂದು ಸಾಧನಮಾತ್ರವಾದಳು; ಸಾಧಕನ ಸೇವೆಯೇ ಗುರಿ! ಪುರುಷನ ಸೇವೆಯಲ್ಲಿಯೇ ಆಕೆಗೆ ಮೋಕ್ಷವೇರ್ಪಟ್ಟಿತು: ಸ್ತ್ರೀ ಶೃಂಗಾರದ ಬೊಂಬೆಯಾದಳು; ಮಾತೃದೇವತೆಯಾದಳು; ಕಾವ್ಯಕ್ಕೆ ವಸ್ತುವಾದಳು: ಕವಿಸಮಯ ಅವಳನ್ನು ವಿಧವಿಧವಾಗಿ ಚಿತ್ರಿಸಿತು.

ಮಾತೃದೇವೋಭವ ಎಂಬ ಗೌರವವನ್ನು ತಾಯಿ ಪಡೆಯಬೇಕಾದರೆ ಅವಳೂ ತಪಸ್ಸನ್ನಾಚರಿಸಬೇಕಾಗುತ್ತದೆ ಎಂಬುದರ ಅರಿವು ಆಕೆಗೂ ಆಗಲಿಲ್ಲ, ಸಮಾಜಕ್ಕೂ ಇರಲಿಲ್ಲ. ಮಗುವಿಗೆ ಜನ್ಮಕೊಟ್ಟ ಮಾತ್ರದಿಂದಲೇ ಅವಳಿಗೆ ಆ ಪದವಿ ದೊರೆತೀತೇ? ಆ ಮಗುವನ್ನು ಮನುಷ್ಯನನ್ನಾಗಿ ಮಾಡುವ ತಪಸ್ಸು ಅವಳದು. ಮಗುವಿನ ದೈಹಿಕ ಬೆಳವಣಿಗೆಯನ್ನಷ್ಟೇ ಅಲ್ಲ, ಸಾಂಸ್ಕೃತಿಕ ಆತ್ಮಿಕ ಬೆಳವಣಿಗೆಯನ್ನೂ ಆಕೆ ನೋಡಬೇಕಾಗುತ್ತದೆ. ಅವಳಿಗೆ ಆ ವಿಚಾರ, ಶಕ್ತಿ ಎಲ್ಲಿಂದ ಬರಬೇಕು? ಮೇಲೆ ಇದ್ದ ದೌರ್ಬಲ್ಯಕ್ಕೆ ಮುಸುಕು ಹಾಕಿ ಪರರನ್ನೂ ತಮ್ಮನ್ನೂ ಒಟ್ಟಿಗೇ ವಂಚಿಸುವದು ಅನಿಷ್ಟ ರೂಢಿಯಾಗಿಯೇ ಬೆಳೆದುಬಂದಿದೆ. ನಮ್ಮಲ್ಲಿದ್ದ ಶಕ್ತಿಯನ್ನು ಒರೆಗಲ್ಲಿಗೆ ಹಚ್ಚದೆ ನಮ್ಮ ಶಕ್ತಿ ಎಷ್ಟಿದೆಯೆಂಬುದರ ಕಲ್ಪನೆಯೂ ನಮಗೆ ಬರಲಾರದು. ಓದಿ, ಕೇಳಿ, ನೋಡಿ, ತಿಳಿದು ಕಲ್ಪನೆಮಾಡಿ ಪಡೆದ ಎಲ್ಲ ಬಗೆಯ ಜ್ಞಾನವೂ ಯಾವುದೊಂದು ಕಾರ್ಯದಲ್ಲಿ ಉಪಯುಕ್ತವಾಗಬೇಕು. ಆ ಕಾರ್ಯವನ್ನು ಮಾಡುವಾಗ ಅಥವಾ ಮಾಡಿದ ಮೇಲೆ ಉಂಟಾಗುವ ಅನುಭವಜನ್ಯಜ್ಞಾನ ಇದ್ದ ಜ್ಞಾನಕ್ಕೆ ಕಳೆಕಟ್ಟುತ್ತದೆ.

ನಯ-ನಾಜೂಕು ಹಾಗೂ ದೌರ್ಬಲ್ಯಗಳಲ್ಲಿ ಮಹದಂತರವಿದೆ. ಕರ್ತೃತ್ವಶಕ್ತಿ, ಕಾರ್ಯಕ್ಷಮತೆ, ಕಾರ್ಯದಕ್ಷತೆ, ಕರ್ತವ್ಯನಿಷ್ಠೆ ಇವೆಲ್ಲ ದೈವೀ ಶಕ್ತಿಯ ಆವಿಷ್ಕಾರ; ದೌರ್ಬಲ್ಯದಿಂದ ಹುಟ್ಟುವ ಗುಣಗಳಲ್ಲ ಅವು. ತನ್ನ ಕರ್ತೃತ್ವಶಕ್ತಿಯನ್ನು ಲೋಕಕ್ಕೆ ತೋರಿಸಿದ ಅಕ್ಕಮಹಾದೇವಿ, ಝಾಂಸೀ ರಾಣಿಯರಿಗೆ ನಯ-ನಾಜೂಕು ಗೊತ್ತಿರಲಿಲ್ಲವೇನೋ!

ಆತ್ಮಜ್ಞಾನ, ಮೋಕ್ಷಗಳಿಗೆ ಸ್ತ್ರೀ ತಾನೇ ಸ್ವಾವಲಂಬಿಯಾಗಿ ಅರ್ಹತೆಯನ್ನು ಪಡೆಯಬಲ್ಲಳೇ ಎಂಬ ಶಂಕೆ ಪ್ರಚಲಿತವಿದ್ದಾಗ, ಅದು ಸಾಧ್ಯವೆಂಬುದನ್ನು ತಪಸ್ಸಿನಿಂದ ತೋರಿಸಿದ ಶ್ರೇಯಸ್ಸು, ಶಿವಶರಣೆಯರಾದ ವಚನಕಾರ್ತಿಯರದು; 'ಪತಿ ಎಂಥವನಿದ್ದರೂ ಅವನೇ ದೇವರು, ಸತಿಗೆ ಮೋಕ್ಷಕ್ಕೆ ನೇರವಾದ ದಾರಿಯಿಲ್ಲ.' ಎಂಬ ಅಂದಿನ ಸಾಮಾನ್ಯ ತಿಳುವಳಿಕೆಯನ್ನು ಖಂಡಿಸಿ ದೇವರೇ ಪತಿಯೆಂದು ಪರಮಾರ್ಥದಲ್ಲಿ ಪ್ರಪಂಚವನ್ನು ಹೂಡಿದವರು ಶಿವಶರಣೆಯರು. ಜಗತ್ತಿನ ಅಧ್ಯಾತ್ಮಿಕ, ಸಾಮಾಜಿಕ ಹಾಗೂ ಸಾಹಿತ್ಯಿಕ ತಿಳುವಳಿಕೆಗೆ ಅವರು ಸಲ್ಲಿಸಿದ ಕಾಣ್ಕೆ ಅಮೌಲ್ಯವಾದುದು. ಮಹಿಳಾಪ್ರಪಂಚದಲ್ಲಂತೂ ಅದು ಅವಿಸ್ಮರಣೀಯ. "ಹೆಣ್ಣು ಮಾಯೆಯಲ್ಲ, ಹೆಣ್ಣು

ರಾಕ್ಷಸಿಯಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ" – ಎಂದು ಸ್ತ್ರೀಯಲ್ಲಿ ದೇವತ್ವವನ್ನು ಕಂಡು ಆಚರಿಸಿದ ಶ್ರೇಯಸ್ಸು ಅವರದು. ಪತಿಭಕ್ತಿಯಿಂದ ದೈವಭಕ್ತಿಯವರೆಗೂ ಮಹಿಳೆಯರ ಕಾರ್ಯಕ್ಷೇತ್ರವನ್ನು ವಿಸ್ತರಿಸಿದವರು ಅಕ್ಕಮಹಾದೇವಿ, ಮೀರಾಬಾಯಿ ಯಂತಹ ಶರಣೆಯರು!

ಸಮಾಜದಲ್ಲಿ ಸ್ವಾರ್ಥದಿಂದಲೋ ಅಜ್ಞಾನದಿಂದಲೋ ರೂಪುಗೊಂಡ ಕೃತಕ ಮೂಲ್ಯಗಳನ್ನು ಪರಂಪರೆಯಾಗಿ ಕುರುಡುನಂಬಿಗೆಯಿಂದ ನಡೆಸಿಕೊಂಡು ಬರುವವರ ಸಂಖ್ಯೆಯೇ ಹೆಚ್ಚು. ಯಾವ ಕೃತಕಮೂಲ್ಯಗಳು ಹೇಗೆ ಕೂಡಿದವೋ ತಿಳಿಯದು. ಆದರೆ ಸುಶಿಕ್ಷಿತತೆಗೂ ಅಹಂ ಮನ್ಯತೆಗೂ ಸಂಬಂಧ ಕಂಡುಬರುತ್ತದೆ. ಸಾಮಾನ್ಯರಿಗೆ ನಿಲುಕದಂತೆ ದೂರವಿರುವದೇ ಸುಶಿಕ್ಷಿತರ ಲಕ್ಷಣ ಎಂದು ಮಹಿಳೆಯರೂ ತಿಳಿದಿದ್ದಾರೆ. ಓದಿದ ಹುಡಿಗಿ ತಮ್ಮೊಡನೆ ಮಾತನಾಡಿದರೆ ಹಿಂದಿನ ಪೀಳಿಗೆಯ ತಾಯಂದಿರಿಗೆ ತುಂಬ ಆಶ್ಚರ್ಯ.

ಸಿರಿವಂತ ವರ್ಗದ ಮಹಿಳೆ ತಾನು ಆ ವರ್ಗದಲ್ಲಿ ಹುಟ್ಟಿ ಬಂದದ್ದು ತನ್ನ ಹೋದ ಜನ್ಮದ ಪುಣ್ಯ ಎಂದು ತಿಳಿಯುತ್ತಾಳೆ. ಮಧ್ಯಮವರ್ಗದ ಮಹಿಳೆ ಸಿರಿವಂತ ವರ್ಗದ ಮಹಿಳೆಯನ್ನು ಅನುಕರಿಸಲು ಯತ್ನಿಸುತ್ತಾಳೆ. ದುಡಿಯುವ ಪ್ರಸಂಗವೇ ಬಂದರೆ ಅದಕ್ಕಾಗಿ ನೊಂದುಕೊಳ್ಳುತ್ತಾಳೆ. ಅವಳ ನೋವಿಗೆ, ತನ್ನ ದೌರ್ಬಲ್ಯಕ್ಕೆ ಮನೆಯ ಯಜಮಾನನೂ ನೊಂದುಕೊಳ್ಳುತ್ತಾನೆ. ಕೂಲಿಕಾರ ವರ್ಗದ ಮಹಿಳೆ ದುಡಿಯುವದು ತನ್ನಂಥವರಿಗೆ ಬಿಟ್ಟದ್ದಲ್ಲ ಎಂದು ತಿಳಿದಿದ್ದಾಳೆ. ದುಡಿಮೆ ಅವಳ ಜೀವನದ ಉಸಿರು: ಅದನ್ನು ಮಾಡಿಯೂ ಅವಳ ಜೀವನದ ರೀತಿ, ವೈಯಕ್ತಿಕ ಸುಖ–ಸ್ವಾತಂತ್ರ್ಯಗಳ ಕಲ್ಪನೆ ಭಿನ್ನವಾಗಿವೆ.

ಯಾವ ಕ್ಷೇತ್ರದಲ್ಲಾದರೂ ಕೃಷಿಯಿಲ್ಲದೆ ಪ್ರಗತಿ ಸಾಧ್ಯವಿಲ್ಲ. ಪುಣ್ಯಮಾಡಿ ಬಂದವರು ಕೂತು ಉಣ್ಣುತ್ತಾರೆ, ಪಾಪ ಮಾಡಿದವರು ದುಡಿಯುತ್ತಾರೆ ಎಂದು ನಂಬಿದ ತಾಯಿ–ತಂದೆಗಳು ತಮ್ಮ ಮಕ್ಕಳಾದರೂ ಸುಖವಾಗಿರಲಿ ಎಂದು ಆಶಿಸುವದಿಲ್ಲವೆ?

ಕಾಯಕವೇ ಕೈಲಾಸ ಎಂದು ಬಸವಣ್ಣನವರು ಅಂದು ಹೇಳಿದ ಮಾತು ಇಂದಿಗೂ ಸತ್ಯ, ಎಂದಿಗೂ ಸತ್ಯ! ಆದರೆ ಯಾವ ಕಾಯಕವೂ ಇಲ್ಲದೆ ಕೈಲಾಸಸುಖ ಪಡೆಯುತ್ತಿದ್ದೇವೆಂದು ತಿಳಿದ ಪುರುಷರೂ ಇದ್ದಾರೆ. ಮಹಿಳೆಯರೂ ಇದ್ದಾರೆ ಸಾಮಾನ್ಯವಾಗಿ ದುಡಿದು ಹಣಗಳಿಸಿ ತರುವದು ಪುರುಷನ ಮುಖ್ಯ ಉದ್ಯೋಗವೆಂದೂ, ಮನೆ–ಮಕ್ಕಳನ್ನು ನೋಡಿಕೊಂಡಿರುವದು ಮಹಿಳೆಯ ಉದ್ಯೋಗವೆಂದೂ ತಿಳಿಯಲಾಗುತ್ತದೆ. ಸಾಹಿತ್ಯರಚನೆಯನ್ನೇ ಮುಖ್ಯ ಉದ್ಯೋಗವೆಂದು ಕೈಕೊಂಡವರು, ಎಲ್ಲ ಭಾಷೆಗಳ ಸಾಹಿತ್ಯದಲ್ಲಿ, ಅದರಲ್ಲಿಯೂ ಕನ್ನಡ ಸಾಹಿತ್ಯದಲ್ಲಿ ವಿರಳರೆಂದೇ ಹೇಳಬೇಕು. ಅಂಥ ಸಾಹಸವನ್ನೇ ಮಾಡಿದರೆ, ಪಡಬೇಕಾದ ಕಷ್ಟವಿದ್ದೇ ಇದೆ. ಇಂತಹ ಪರಿಸರದಲ್ಲಿ ಮಹಿಳೆ ಅಧ್ಯಯನ ಮಾಡುವದು ಸ್ವಲ್ಪ ಸಾಹಸದ ಮಾತು. "ಮಹಿಳೆಯಾದರೇನಾಯಿತು? ಸಾಹಿತ್ಯರಚನೆ ಮಾಡಬಲ್ಲಳು, ಮಾಡಲಿ," ಎಂಬ ಸಹಾನುಭೂತಿಯ ಮನೋಭೂಮಿಕೆ ಸುತ್ತಲಿನ ಜನರಲ್ಲಿ, ಅದರಲ್ಲಿಯೂ ಅವಳ ಪರಿವಾರದಲ್ಲಿ ಮೂಡಬೇಕು. ಈ ಸಾಮಾಜಿಕ ಕೃತಕಮೂಲ್ಯಗಳನ್ನು ಅರಗಿಸಿಕೊಂಡರೆ ಮುಂದೆ, ಬರೆದ ಕೃತಿಯನ್ನು ಪ್ರಕಟಿಸುವ ಸಮಸ್ಯೆ, ಆರ್ಥಿಕ ತೊಂದರೆ ಇದ್ದೇ ಇವೆ.

೧೯ನೆಯ ಶತಮಾನದಲ್ಲಿ ಸಾಮಾನ್ಯ ಮನೆತನದ ಮಹಿಳೆಯರನೇಕರು ಬುದ್ಧಿವಿಕಾಸಕ್ಕೆ ಅವಕಾಶವಿಲ್ಲದೆ, ಕೇವಲ ಪ್ರತಿಭೆಯ ಬಲದಿಂದ, ಸಮಾಜಕ್ಕೆ ಮನ್ನಣೆಯಾದ ರೀತಿಯಲ್ಲಿಯೇ ದೈವಭಕ್ತಿಯನ್ನು ವಸ್ತುವನ್ನಾಗಿಟ್ಟುಕೊಂಡು ಕೃತಿರಚಿಸಿದವರಿದ್ದಾರೆ. ಯಾವ ಅಡೆತಡೆಗಳನ್ನೂ ಲೆಕ್ಕಿಸದೆ, ಕಲ್ಲುಬಂಡೆಗಳನ್ನು ಕೊರೆದು ಎತ್ತರದಿಂದ ಧುಮ್ಮಿಕ್ಕುವ ಪ್ರವಾಹದಂತೆ ಅವರ ಸಾಹಿತ್ಯ ಧುಮ್ಮಿಕ್ಕಿದೆ. ಅದರಲ್ಲಿ ಹಲವು ಭಾಗ ಗ್ರಂಥಸ್ಥ, ಉಳಿದ ಭಾಗಗಳನ್ನು ಗ್ರಂಥಸ್ಥಗೊಳಿಸುವ ಪ್ರಯತ್ನ ನಡೆಯುತ್ತಿದೆ. ಇವರಲ್ಲಿ ಕೆಲವರ ಕಾಲ ಹದಿನೆಂಟನೆಯ ಶತಮಾನವಾದರೂ ಗಲಗಲಿಯ ಅವ್ವನವರು, ಹೆಳವನಕಟ್ಟಿ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ ಈ ಗುಂಪಿಗೆ ಸೇರಿದವರು.

೧೮೫೦ರ ಸುಮಾರಿಗಿದ್ದ ಕವಯಿತ್ರಿ ಸಿ. ಆರ್. ಚೆಲ್ಲಮ್ಮ, ಮೈಸೂರಿನ ಮಹಾರಾಣಿ ಬಾಲಿಕಾ ಪಾಠಶಾಲೆಯ ಅಧ್ಯಾಪಕಿ. ೧೮೮೫ಕ್ಕೆ ಆಕೆ ಒಳ್ಳೇ ಲೇಖಕಿಯಾಗಿದ್ದರು. 'ರಾಜಕಳಾನಿಧಿ' ಅವರ ಪ್ರೌಢಕೃತಿ! ಚೆಲ್ಲಮ್ಮ ರಚಿಸಿದ 'ರುಕ್ಮಿಣೀಪರಿಣಯ' ೧೮೯೫ರಲ್ಲಿಯೇ ಶ್ರೀ ಆರ್. ನರಸಿಂಹಾಚಾರ್ಯರಿಂದ ಪರಿಶೋಧಿಸಲ್ಪಟ್ಟು ಪ್ರಕಟವಾಗಿದೆ. ಅವರು ರಚಿಸಿದ ಇನ್ನೆರಡು ಕೃತಿಗಳೆಂದರೆ ಗೀತಿಕಾಲಹರಿ ಕಾವ್ಯ ಹಾಗೂ ಪಾರಿಜಾಪಹರಣ ನಾಟಕ. 'ರಾಜಕಳಾನಿಧಿ', — ರಾಜಕೀಯ ರಾಜ್ಯಾಂಗ, ಆಮಾತ್ಯ, ಬಾಂಧವೀಯ, ರಾಜವೃತ್ತಿ, ಪ್ರಜಾರಂಜನ, ಸಭಾರಂಜನ ಇತ್ಯಾದಿಗಳನ್ನೆಲ್ಲ ಒಳಗೊಂಡ ಪ್ರೌಢಕೃತಿ.

ಈ ಕೃತಿಗೆ ತಾನೇ ಬರೆದ ಮುನ್ನುಡಿಯಲ್ಲಿ ಲೇಖಕಿ, "ಈ ಕೃತಿಗಳಿಗೆ ಅಚ್ಚುಹಾಕಿಸುವ ಸಾಮರ್ಥ್ಯ ತನ್ನಲ್ಲಿಲ್ಲ; ಮಹಾಜನರು ಉದಾರಾಂತಃಕರಣದಿಂದ ಅಚ್ಚುಹಾಕಿಸಬೇಕು" ಎಂದು ಕೇಳಿಕೊಂಡಿದ್ದಾಳೆ.

"ವಿನುತ ಮಹಿಸೂರ ರಾಣಿಯುತ ಸ-
ದ್ವಿನುತ ಬಾಲಿಕ ಪಾಠಶಾಲೆಯೊ-
ಳನುಗತೋಪಾಧ್ಯಾಯಿನಿ ಶ್ರೀ ಚೆಲ್ಲಮಾಂಬೆಯಿದ
. . . . . . . . . . . .

—ಎಂದು ಎಲ್ಲ ಕೃತಿಗಳಲ್ಲಿಯೂ ತನ್ನ ವಂಶ ಹಾಗೂ ಉದ್ಯೋಗವನ್ನು ಕುರಿತು ಹೇಳಿದ್ದಾಳೆ! ೧೮೭೦ ರ ಸುಮಾರಿಗಿದ್ದ ಉತ್ತರ ಕನ್ನಡ ಜಿಲ್ಲೆಯ ಗಣಪಕ್ಕ, ಗೋಕರ್ಣ ಮಹಾತ್ಮೆ, ಕೃಷ್ಣನ ಹುಟ್ಟು ಎಂಬ ಯಕ್ಷಗಾನ, ಇತ್ಯಾದಿಗಳನ್ನು ರಚಿಸಿದ್ದಾಳೆ. ಮನೆಯಲ್ಲಿ ತೀರ ಬಡತನ; ಸ್ವಲ್ಪ ಓದು–ಬರಹ ಬಲ್ಲ ಗಣಪಕ್ಕ ಸಂಸ್ಕಾರ ಬಲದಿಂದ ಇವುಗಳನ್ನು ಬರೆದೂ ಇಟ್ಟಿದ್ದಾಳೆ. ಪ್ರತಿ ಇನ್ನೂ ಕೈಬರಹದಲ್ಲೇ ಇದೆ.

ಇಂತಿರುವ ಪುಣ್ಯಕಥೆಯನು ಸಂತಸದೊಳು
ಮುಂತೊರೆವೆ ಯಕ್ಷಗಾನಸ್ವರೂಪದೊಳು
ಅರಿಯೆ ನಾ ಸಂಸ್ಕೃತದ ಶೃತಿಶಾಸ್ತ್ರಗಳನು
ಪರಪುರಾಣದ ಅರ್ಥ ಅನ್ವಯಂಗಳನು
ತರಳೆ ರಚಿಸಿದಳೆಂದು ಇರಿಸಿ ದೋಷವನು
ಜರಿಯದಿರಿ ಮುಂದುವರಿಸಿ ತಿದ್ದುತಾ ಕೃತಿಯನು.

ಗಣಪಕ್ಕನಿಗೂ ಮಹಿಳೆಯ ಕೃತಿಯೆಂದರೆ ಸಮಾಜ ಯಾವ ದೃಷ್ಟಿಯಿಂದ ನೋಡುವದೋ ಎಂಬ ಅಧೈರ್ಯ. ಇಪ್ಪತ್ತನೆಯ ಶತಮಾನದಲ್ಲಿ ಬರೆದ ಬೆಳಗೆರೆ ಜಾನಕಮ್ಮ

ಕಸಕಿಂತ ಕಡೆಯಾಯ್ತೆ
ಹೆಣ್ಣು ಜನ್ಮವು ನಿನಗೆ?

—ಎಂದು ದೇವರಿಗೆ ಸವಾಲು ಹಾಕಿದರು. ಜಯದೇವಿತಾಯಿ ಲಿಗಾಡೆ ಕಣ್ಣಿದ್ದ ಕುರುಡರನ್ನು ದೂರಿದರು.

ಚೆನ್ನಮ್ಮನ ಶೌರ್ಯ
ಹೊನ್ನಮ್ಮನ ಕಾವ್ಯ
ಮಹಾ ಮಹಾದೇವಿಯಕ್ಕನ
ನೆನೆವರೇ ಕಣ್ಣಿದ್ದ ಕುರುಡರು?

ಕನ್ನಡ ನಾಡಿನ ಒಳಹೊರಗೆ ಇನ್ನೂ ಅನೇಕ ಜನ ಕವಯಿತ್ರಿಯರಿದ್ದಾರೆ. ಅವರಲ್ಲಿ ವಿದ್ಯೆ ಪಡೆದವರೂ ಇದ್ದಾರೆ. ನಿರಕ್ಷರಿಕರೂ ಇದ್ದಾರೆ. ಅವರವರ ಪ್ರತಿಭೆ ಸಂಸ್ಕಾರಗಳಿಗನುಗುಣವಾಗಿ ಹಾಡಿದ್ದಾರೆ.

ಕವಯಿತ್ರಿಯರೆಲ್ಲ ಈ ರೀತಿ ಅಧೈರ್ಯದಿಂದ ಹಾಡಿದ್ದೇಕೆ? ಹೆಣ್ಣಿಗಿದ್ದ ಆರ್ಥಿಕ-ಸಾಮಾಜಿಕ ಹಿನ್ನೆಲೆಯ ಚಿತ್ರ ಅವರ ಕವನದಲ್ಲಿ ಮೂಡಿಬಂದಿದೆಯೇ? ಹೆಣ್ಣು ಎಂಬ ಒಂದೇ ಕಾರಣಕ್ಕಾಗಿ ಸಮಾಜದ ಅವಹೇಲನೆಯನ್ನು ಆಕೆ ಅನುಭವಿಸಬೇಕೆ? ಸಮಾಜ ಹಾಕಿಕೊಟ್ಟ ಈ ಕೃತಕಮೂಲ್ಯಗಳ ದಾರಿಯನ್ನೇ ತುಳಿದು, "ಹೆಂಗಸು ನನಗೇನು ತಿಳಿಯುತ್ತದೆ?"—ಎಂದು ಆಕೆಯೂ ತನ್ನ ಅಜ್ಞಾನವನ್ನು ಸಮರ್ಥಿಸಿಕೊಳ್ಳುತ್ತಾಳೆ.

ದಾರಿದ್ರ್ಯ-ಅಜ್ಞಾನಗಳನ್ನು ಕಿತ್ತೆಸೆದು ಸಂಸ್ಕೃತಿ, ಸಮೃದ್ಧಿಗಳನ್ನು ಜನತೆಯಲ್ಲಿ ತರಬೇಕಾದರೆ ವೈಚಾರಿಕ ಕ್ರಾಂತಿ ಮೊದಲು ಅವಶ್ಯ: ಇಂತಹ ಕ್ರಾಂತಿಯನ್ನು ಉಂಟುಮಾಡುವದೇ ಸಾಹಿತ್ಯದ ಗುರಿ. ಸಾಹಿತ್ಯ ಸಮಾಜಗಳು ಪರಸ್ಪರ ಪ್ರತಿಕ್ರಿಯೆಯನ್ನು ಬೀರಿ ಸಬಲವಾಗಬಲ್ಲವು, ದುರ್ಬಲವೂ ಆಗಬಲ್ಲವು. ಸಾಹಿತ್ಯವು ಮಲಿನವಾಗಿ ಬಣ್ಣ ಬಳಿದುಕೊಂಡು ಬಂದರೆ ಇಲ್ಲವೆ ಮತದ ತೊತ್ತಾಗಿ ಹೊರಟರೆ ಅದು ಸಜೀವ ಸಾಹಿತ್ಯವಾಗಲಾರದು.

ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ಮೂಲ್ಯಗಳಲ್ಲಿ ಕ್ರಾಂತಿಯಾಗಿದೆ. ವಿಧಾಯಕವಾದ ಹೊಸ ಮೂಲ್ಯಗಳನ್ನು ಅರ್ಥಮಾಡಿಕೊಳ್ಳದೆ, ಜೀವನದಲ್ಲಿ ಪ್ರಗತಿಯಾಗದು; ದೃಷ್ಟಿ ವಿಶಾಲವಾಗದು. ಜಾತಿ-ಮತ ನಿರಪೇಕ್ಷವಾಗಿ, ಒಳ್ಳೆಯದು ಎಲ್ಲಿದ್ದರೂ, ಸಪ್ತಸಮುದ್ರಗಳ ಆಚೆಗಿದ್ದರೂ, ಅದು ನಮ್ಮ ಜೀವನದಲ್ಲಿ ಬರುವಂತಿದ್ದರೆ ಬರಮಾಡಿಕೊಳ್ಳಬೇಕು. ನಮ್ಮ ಜ್ಞಾನ–ವಿವೇಕಗಳನ್ನು ಬೆಳೆಸಿಕೊಳ್ಳುವಲ್ಲಿ ಮಡಿವಂತಿಕೆ ಸಲ್ಲದು. ಅರ್ಥವಿಲ್ಲದ ವೈಚಾರಿಕ ಪರಂಪರೆಯ ಕೊಳೆಯಿಂದ, ಅಂಧಶ್ರದ್ಧೆಯ ಆಳದಿಂದ ಮಹಿಳೆಯರೂ ಹೊರಗೆ ಬರಬೇಕು. ಅಜ್ಜನ ಕಾಲದಲ್ಲಿ ಬಾವಿಯ ಉಪ್ಪು ನೀರನ್ನು ಕುಡಿಯುತ್ತಿದ್ದರೆ ಇಂದಿಗೂ ಅದನ್ನೇ ಕುಡಿಯುವುದು ಯಾವ ಅಭಿಮಾನ! ಅಂದಿನ ಹುಡಿಗೆ ಶಾಲೆಯ ಕಟ್ಟೆಯನ್ನೇ ಹತ್ತಿರಲಿಕ್ಕಿಲ್ಲ, ಇಂದಿನವಳು ಶಾಲೆಯಲ್ಲಿ ಕಲಿಸುತ್ತಿದ್ದಾಳೆ. ವ್ಯತ್ಯಾಸ ಹೊಂದುತ್ತಿರುವ ಬೆಲೆಗಳನ್ನು ನಾವು ತೀವ್ರಗತಿಯಿಂದ ಅರ್ಥಮಾಡಿಕೊಳ್ಳಬೇಕಾಗುತ್ತದೆ. ದುಡಿಯುವ ಮಹಿಳೆಯ ಬಗ್ಗೆ ನಮ್ಮ ಜನ ಇನ್ನೂ ಕರುಣೆಪಡುತ್ತಾರೆ, 'ಪಾಪ, ದುಡಿದುಹಾಕುವವರು ಯಾರೂ ಇಲ್ಲವೇನೊ' ಎಂದು ಮರುಕ ತೋರುತ್ತಾರೆ; ಹಲವು ಸಲ ವಿವಿಧ ಕ್ಷೇತ್ರಗಳಲ್ಲಿ ಮಹಿಳೆ ಸೇವೆ ಸಲ್ಲಿಸುವದು ಪುರುಷನ ಜೊತೆಗೆ ಅವಳು ಹೂಡಿದ ಸ್ಪರ್ಧೆ ಎಂದೂ ಅರ್ಥ ಮಾಡಲಾಗುತ್ತದೆ. ಎಲ್ಲರೂ ಸ್ಪರ್ಧೆಯಿಂದ ದುಡಿದರೆ ಒಳ್ಳೆಯದೇ ಆದೀತೇನೊ! ಆದರೆ ಇಲ್ಲಿ

ಮಾತ್ರ ಸ್ಪರ್ಧೆಯಿಲ್ಲ. ಪರಸ್ಪರರು ಪೂರಕವಾಗಿ ದುಡಿಯುತ್ತಾರೆ.

ವೈಜ್ಞಾನಿಕ ಸಂಶೋಧನೆಗಳನ್ನು, ರಾಷ್ಟ್ರದ ವಿವಿಧ ಯೋಜನೆಗಳನ್ನು ಭಾರತೀಯ ಮಹಿಳೆ ತಾನು ತಿಳಿದುಕೊಳ್ಳುವದಿಲ್ಲನೆಂದು ಹಟತೊಟ್ಟರೂ ಇಂದು ಅವಳನ್ನವು ಬಿಡುತ್ತಿಲ್ಲ. ರಾಷ್ಟ್ರೀಯ ಪ್ರಯೋಗಶಾಲೆಯಲ್ಲಿ ಏನು ನಡೆದಿದೆ? ಜೋಗದ ಜಲಪಾತದಿಂದ ಹುಟ್ಟುವ ವಿದ್ಯುತ್ ಶಕ್ತಿಯೆಷ್ಟು ಎಂಬ ವಿಷಯದಲ್ಲಿ ಅವಳಿಗೆ ವಿಶೇಷ ಆಸ್ಥೆಯಿಲ್ಲದಿದ್ದರೂ, ಗುಂಡಿಯನ್ನೊತ್ತಿದಾಗ, ಆ ವಿದ್ಯುದ್ದೀಪಗಳು ತನ್ನ ಮನೆಯನ್ನು ಬೆಳಗಿದಾಗ ಅವಳಿಗೆ ಸಂತೋಷ. ಯೋಜನೆಗಳ ಫಲ ಅವಳಿಗಿಷ್ಟವಾದರೂ ಅವುಗಳನ್ನು ತಿಳಿಯಲು ಪರಿಶ್ರಮ ಪಡಬೇಕಾದುದು ಅವಳಿಗೆ ಮೊದಮೊದಲು ಸ್ಪೃಹಣೀಯವಾಗಿ ಕಾಣಲಿಕ್ಕಿಲ್ಲ.

ರಾಜಾಶ್ರಯ ಪಡೆದು ಅಂದು ಸರ್ವಮಾನ್ಯವಾದ ಹದಿಬದೆಯ ಧರ್ಮವನ್ನು ಕುರಿತು ಬರೆದವಳು ಹೊನ್ನಮ್ಮ. ಆದರೆ ಇಂದಿನ ಪರಿಸರದಲ್ಲಿ, ವಿಶ್ವಜೀವನವನ್ನೂ, ಮಾನವ ಮನದ ಸೂಕ್ಷ್ಮತೆಯನ್ನೂ, ಮೂಲ್ಯಗಳ ತಪ್ಪು ತಿಳುವಳಿಕೆಯಿಂದಾಗಿರುವ ತಾಕಲಾಟವನ್ನೂ, ಬುದ್ಧಿ ಹೃದಯಗಳೆರಡರಿಂದಲೂ ಸಾಹಿತಿ ತಿಳಿದಿರಬೇಕಾಗುತ್ತದೆ. ಸಮಗ್ರ ದೃಷ್ಟಿಯ ಅಭಾವದಿಂದಾಗಿ ಇಂದಿನ ಜೀವನದಲ್ಲಿ ಅದೆಷ್ಟು ಕೋಲಾಹಲವೆದ್ದಿದೆ. ವಿಜ್ಞಾನಿ ಕವಿಯನ್ನು ಅಲ್ಲಗಳೆಯುತ್ತಾನೆ. ಕವಿ ಸಮಾಜಸೇವಕರನ್ನು ದೂರುತ್ತಾನೆ; ಸಮಾಜಸೇವಕ ರಾಜಕಾರಣಿಯನ್ನು ನಿಂದಿಸುತ್ತಾನೆ, ರಾಜಕಾರಣಿ ತತ್ತ್ವಜ್ಞಾನಿಯನ್ನು ಮೆಚ್ಚುವದಿಲ್ಲ. ಬುದ್ಧಿಜೀವಿ, ಭಾವಜೀವಿಗಳು ಬುದ್ಧಿ ಭಾವನೆಗಳೆರಡೂ ಒಂದು ನಾಣ್ಯದ ಎರಡು ಮುಖಗಳೆಂಬುದನ್ನು ಅರಿಯದೆಯೇ ಪರಸ್ಪರರನ್ನು ದೂರುತ್ತಾರೆ. ಇದರ ತಿರುಳನ್ನರಿತ ಸಾಹಿತಿ, ಸಮಗ್ರ ದೃಷ್ಟಿಯಿಂದ ಕೂಡಿದ ಸಾಹಿತ್ಯವನ್ನು ರಚಿಸುವದು ಅವಶ್ಯವಿದೆ.

ಮನುಷ್ಯನು ಗುಂಪು ಕಟ್ಟಿಕೊಂಡು ಜೀವಿಸುತ್ತಿದ್ದ ಕಾಲದಿಂದ ಪ್ರಜಾಪ್ರಭುತ್ವದವರೆಗೂ ನಾವಿಂದು ಅನೇಕ ಹಂತಗಳನ್ನು ದಾಟ ಬಂದಿದ್ದೇವೆ. ಈ ಸಾಮಾಜಿಕ, ರಾಜಕೀಯ ವ್ಯತ್ಯಾಸಗಳಲ್ಲಿ ಮಹಿಳೆಯೂ ಪಾಲುಗಾರ್ತಿಯಾಗಿದ್ದಾಳೆ; ಅನೇಕ ಸಲ ಅವುಗಳಿಗೆ ಆಹುತಿಯಾಗಿದ್ದಾಳೆ. ಇಂದು ಪ್ರಜಾಪ್ರಭುತ್ವದಲ್ಲಿ ವ್ಯಕ್ತಿಸ್ವಾತಂತ್ರ್ಯವಿದೆ, ವ್ಯಕ್ತಿತ್ವದ ವಿಕಾಸಕ್ಕೆ ಅವಕಾಶವಿದೆ. ವ್ಯಕ್ತಿಗೂ ಪ್ರಾಧಾನ್ಯವಿದೆ, ಸಮಾಜಕ್ಕೂ ಪ್ರಾಧಾನ್ಯವಿದೆ. ಎರಡೂ ಪರಸ್ಪರ ಪೂರಕಗಳಾಗಿವೆ ಮತ್ತೆ. ಬರೀ ಅಂದಿನ ರಾಮ-ಸೀತೆಯರ ಆದರ್ಶ ಚಿತ್ರಣವೊಂದೇ ಇವತ್ತು ಸಾಲದು, ಯಥಾರ್ಥವೂ ಬೇಕು, ಜೊತೆಗೆ ಇಂದಿನ ಆದರ್ಶವೂ ಬೇಕು.

ಭಾರತೀಯ ಮಹಿಳೆ ಒಬ್ಬ ನಾಗರಿಕಳು, ಸಮಾಜದ ಒಂದು ಮುಖ್ಯ ಘಟಕ ರಾಜ್ಯಘಟನೆ ನಾಗರಿಕರಿಗೆ ಕೊಟ್ಟ ಎಲ್ಲ ಹಕ್ಕು ಬಾಧ್ಯತೆಗಳೂ ಆಕೆಗಿವೆ. ಆದರೆ ಆ ಹಕ್ಕುಗಳ ಜೊತೆಗೆ ಕರ್ತವ್ಯವೂ ಇದೆಯೆಂಬುದನ್ನು ಆಕೆ ಮರೆಯಕೂಡದು. ಎರಡೂ ಬೇಡ ಎಂಬ ಉದಾರ ಬುದ್ಧಿಯ ಮಹನೀಯರೂ ನಮ್ಮಲ್ಲಿದ್ದಾರೆ, ಮಹಿಳೆಯರೂ ಇದ್ದಾರೆ. ಈ ನಿಷ್ಕ್ರಿಯತೆಯನ್ನು ದೂರಗೊಳಿಸಿ, ಸಮಾಜದ ಮಂಗಲಕರವಾದ ಶಕ್ತಿಯಲ್ಲಿ ವಿಶ್ವಾಸವನ್ನು ಬೆಳಸಿಕೊಳ್ಳಬೇಕು. ಅದಕ್ಕೆ, ಕೊಳೆ, ಅನ್ಯಾಯಗಳನ್ನು ಕಿತ್ತಿ ಚೆಲ್ಲುವ ನ್ಯಾಯನಿಷ್ಠುರತೆಯೂ, ಆತ್ಮವಿಶ್ವಾಸವೂ ಅಷ್ಟೇ ಅವಶ್ಯ. ವಿಧಾಯಕ ದೃಷ್ಟಿ ಹಾಗೂ ಆತ್ಮವಿಶ್ವಾಸಗಳು ಹೊಸ ಸಮಾಜರಚನೆಗೆ ತೀರ ಅವಶ್ಯ. ಆತ್ಮವಿಶ್ವಾಸವನ್ನು ಕಳೆದುಕೊಂಡರೆ ಇನ್ನಾವ ಸಂಪತ್ತಿನಲ್ಲಿ ತಾನೇ ನಾವು ವಿಶ್ವಾಸವನ್ನಿಡಬಹುದು?

ವಿಚಾರ ಮಾಡುವ ಶಕ್ತಿಯನ್ನು ಮಹಿಳೆಯರು ಬೆಳೆಸಿಕೊಂಡಿಲ್ಲ. ಶತಮಾನಗಳವರೆಗೆ ಅವಳು ಅಜ್ಞಾನ ದಾರಿದ್ರ್ಯಗಳಲ್ಲಿದ್ದುದರ ಪರಂಪರೆಯ ಫಲವಿರಬೇಕು— ಯಾವದೇ ವಿಷಯದಲ್ಲಿ 'ಹೆಂಗಸು ತನಗೇನು ತಿಳಿಯುತ್ತದೆ,' ಎಂದು ಅವಳು ಪಾರಾಗಬಹುದೆಂದು ಯೋಚಿಸಿದಂತಿದೆ. ಸಮಾಜವೂ ಅದನ್ನು ಒಪ್ಪುತ್ತದೆ. ಇದರಿಂದ ನಾವು ಪಾರಾದೆವೆಂದು ತಿಳಿದರೂ ನಾವೇ ಆಹುತಿಯಾಗಿರುವ ಕೆಲವೊಂದು ದುಷ್ಟ ಸಂಪ್ರದಾಯಪರಂಪರೆಗಳಿಂದ ಹೊರಬರುವದು ಅವಶ್ಯವಿದೆ. ಅದಕ್ಕೆ ವಿಚಾರಶಕ್ತಿಯ ಬೆಳವಣಿಗೆಯಾಗಬೇಕು, ಆಗ ಕ್ರಾಂತಿಯೇ ಮೂಡಬಹುದು. ಮಗುವಿಗೆ ಮೈಸರಿಯಿಲ್ಲದಾಗ ದೇವರು ಕಾಡುತ್ತಿದ್ದಾನೆ ಎಂಬುದು ತಾಯಿಯ ತಲೆಯಲ್ಲಿ ಹೊಕ್ಕರೆ ಯಾವ ದೇವರಿಗೆ ಅದನ್ನು ಬಿಡಿಸಲು ಸಾಧ್ಯವಾದೀತು!

ಹಲವು ಸಾಮಾಜಿಕ ಕಾನೂನುಗಳು ಇಂದು ಮಹಿಳೆಯ ಸಾಮಾಜಿಕ ಆರ್ಥಿಕ ಜೀವನದಲ್ಲಿ ಆ ಮೂಲಕ ಅವಳ ಕೌಟುಂಬಿಕ ಜೀವನದಲ್ಲಿ ಪರಿವರ್ತನೆಯನ್ನು ಉಂಟುಮಾಡಿವೆ. ಒಂದು ಕಾಲಕ್ಕೆ ಅಸ್ತಿತ್ವವಿಲ್ಲದೆ ತಾನೇ ಆಸ್ತಿಯಾಗಿದ್ದ ಮಹಿಳೆ ಇಂದು ತಾನೂ ಆಸ್ತಿ ಪಡೆಯುತ್ತಿದ್ದಾಳೆ. ದುಡಿಯುವ ಮಹಿಳೆ ತನ್ನ ವಿಶಿಷ್ಟ ಹಕ್ಕುಗಳಿಂದ ಸೌಲಭ್ಯ ಪಡೆಯುತ್ತಾಳೆ. ಈ ಕಾನೂನುಗಳೂ

ಕೆಲಮಟ್ಟಿಗೆ ಸಾಮಾಜಿಕ, ಆರ್ಥಿಕ ಮೂಲ್ಯಗಳಲ್ಲಿ ಕ್ರಾಂತಿಯನ್ನೇ ಉಂಟುಮಾಡಿದವು. ಇದರ ಮೂಲಕ ಸ್ತ್ರೀಯ ಸಮಸ್ಯೆಗಳಲ್ಲಿಯೂ ಹೊಸತನ ಕಂಡುಬಂತು. ಅರ್ಧ ಶತಮಾನ ಮಹಿಳೆಯರ ಅಭಿವೃದ್ಧಿಗಾಗಿ ಪರಿಶ್ರಮಿಸಿದ ಮಹರ್ಷಿ ಕರ್ವೆಯವರು ಆ ಅವಧಿಯಲ್ಲಿ ಸ್ತ್ರೀಯ ಸಮಸ್ಯೆಗಳು ವಿವಿಧ ರೂಪಗಳನ್ನು ತಾಳಿದ ಬಗ್ಗೆ ಹೇಳಿದ್ದಾರೆ. ಬಳಿಕ ಕೌಟುಂಬಿಕ ಜೀವನದತ್ತ ನೋಡುವ ದೃಷ್ಟಿಕೋನದಲ್ಲಿಯೂ ವ್ಯತ್ಯಾಸವಾಗುತ್ತದೆ. ಬಂಡವಾಳಶಾಹಿ ಸಮಾಜರಚನೆಯಲ್ಲಿ ಪ್ರೇಮದ ಕಲ್ಪನೆ ಬೇರೆ. ಇಂದಿನ ಕಥಾನಾಯಕಿ ಪ್ರಿಯಕರನ ಮೋಸದಿಂದ ಬಾವಿ ಹಾರಲು ಇಚ್ಛಿಸಲಿಕ್ಕಿಲ್ಲ. ಆರ್ಥಿಕ, ಸಾಮಾಜಿಕ, ರಾಜಕೀಯ ಮೂಲ್ಯಗಳಲ್ಲಾಗುತ್ತಿರುವ ವ್ಯತ್ಯಾಸವು ಅನೇಕ ಹೊಸ ಸಮಸ್ಯೆಗಳಿಗೆ ಆಶ್ರಯವಿತ್ತಿದೆ. ಸುಶಿಕ್ಷಿತ ಮಹಿಳೆ ವೇಷಭೂಷಣ ನಡವಳಿಕೆಯಲ್ಲಿಯೂ ಸ್ತ್ರೀಯಂತಿರದೆ, ಪುರುಷರನ್ನು ಅನುಸರಿಸಲು ಯತ್ನಿಸುತ್ತಾಳೆಂಬುದು ಒಂದು ದೂರು. ಸ್ತ್ರೀಯರನ್ನು ಕುರಿತಿದ್ದ ರೂಢಿಮೂಲ ನೀತಿಗಳನ್ನು ಆಕೆ ಅನುಸರಿಸುವದಿಲ್ಲವೆಂಬುದು ಇನ್ನೊಂದು. ಇಂತಹ ಸಮಸ್ಯೆಗಳ ಸೂಕ್ಷ್ಮತೆಯನ್ನು, ಸಹೃದತೆಯಿಂದ ವಿಶ್ಲೇಷಿಸಲೆತ್ನಿಸುವ ಮಹಿಳೆ ಚೆನ್ನಾಗಿ ಅರಿಯಬಲ್ಲಳು. ಮನದ ಹಿಂದಿನ ಪದರಿನೊಳಗೆ ಇಣಿಕಿ ನೋಡಿ ಸತ್ಯವನ್ನೂ, ತಥ್ಯವನ್ನೂ ಕಂಡುಹಿಡಿದು ಹೃದಯಂಗಮವಾದ ರೀತಿಯಲ್ಲಿ ಚಿತ್ರಿಸುವ ಕೆಲಸ ಸಾಹಿತಿಯದು. ಕೊಡಗಿನ ಗೌರಮ್ಮ ಇಂತಹ ಹೃದಯಂಗಮ ಚಿತ್ರಗಳ ಕಥೆಗಳನ್ನಿತ್ತು ತೆರವನ್ನು ತುಂಬಿದರು. ಹೆಣ್ಣು ಬರೆದ ಕೃತಿ ಎಂಬ ಪೊಳ್ಳು ಸಹಾನುಭೂತಿ ಅಂದೂ ಅವರಿಗೆ ಬೇಕಿರಲಿಲ್ಲ. ಆ ರೂಢಿಯನ್ನು ಮೀರಿ ನಿಂತ ಕೃತಿ ಅವರವು. ಕನ್ನಡ ನಾಡು-ನುಡಿಗಳು ಅವರನ್ನೂ, ಹೃದಯಂಗಮ ಮನೋವಿಶ್ಲೇಷಣೆಯ ಕಾದಂಬರಿಗಳ ಲೇಖಕಿ ತ್ರಿವೇಣಿಯವರನ್ನು ಕಳಕೊಂಡು ತುಂಬ ಬಡವಾದವು. ತ್ರಿವೇಣಿಯವರ ನಿರೀಕ್ಷಣೆ, ವಿಶ್ಲೇಷಣೆ ಬಹುಸೂಕ್ಷ್ಮ. 'ಬೆಕ್ಕಿನ ಕಣ್ಣು'ನಲ್ಲಿಯ ಮನೋವಿಶ್ಲೇಷಣೆಯ ಚಿತ್ರ ಕಲ್ಲನ್ನೂ ಕರಗಿಸುವಂತಿದೆ. ಹಾಗೆಯೇ 'ಕಂಕಣ', 'ಅಪಜಯ!' ಸಾಮಾಜಿಕ ಸಮಸ್ಯೆಗಳನ್ನೂ ಕೌಟುಂಬಿಕ ಚಿತ್ರಗಳನ್ನೂ ಚಿತ್ರಿಸುವಲ್ಲಿಯ ಅವರ ಕೌಶಲ್ಯ ಹಾಗೂ ಸಹೃದಯತೆ ಅವರವೇ! ಕಾದಂಬರಿಗಳ ಅಮೂಲ್ಯ ಕಾಣ್ಕೆಯನ್ನು ಕನ್ನಡ ಸಾಹಿತ್ಯಕ್ಕಿತ್ತ ಶ್ರೇಯಸ್ಸು ತ್ರಿವೇಣಿಯವರದು. ಕಾದಂಬರಿಗಳನ್ನು ಬರೆದ ಮಹಿಳೆಯರ ಸಂಖ್ಯೆ ಕನ್ನಡದಲ್ಲಿ ಹೆಚ್ಚಿಲ್ಲವಾದರೂ, ಬರೆದ ಕಾದಂಬರಿಗಳು ಸ್ವಾರಸ್ಯಯುತವಾಗಿವೆ. ತಮ್ಮ ವೈದ್ಯಕೀಯ ವೃತ್ತಿಯಲ್ಲಿಯೂ ಬಿಡುವು ಮಾಡಿಕೊಂಡು ಶ್ರೀಮತಿ ಅನುಪಮಾ ಎರಡು ಮೂರು ಕಾದಂಬರಿಗಳನ್ನು ಬರೆದಿದ್ದಾರೆ. ನವದೆಹಲಿಯ ಶ್ರೀಮತಿ ಉಮಾದೇವಿ ರಾಷ್ಟ್ರದ ವಿಭಜನೆಯಿಂದುಂಟಾದ ಸಾಮಾಜಿಕ ಸಮಸ್ಯೆಗಳನ್ನು ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದಾರೆ. ಶ್ರೀಮತಿ ಲಲಿತಾಂಬಾ ಹಾಗೂ ಮಂಗಳೂರಿನ ಶ್ರೀಮತಿ ಪದ್ಮಾ ತಮ್ಮ ಕಾದಂಬರಿಗಳಲ್ಲಿ ಕೌಟುಂಬಿಕ ಜೀವನ ಚಿತ್ರಣದ ಮೂಲಕ ಸಾಮಾಜಿಕ ಸಮಸ್ಯೆಗಳನ್ನು ಚಿತ್ರಿಸಿದ್ದಾರೆ.

ಸಣ್ಣ ಕತೆಯ ಕ್ಷೇತ್ರದಲ್ಲೆಂದರೆ ಬರಹಗಾರ್ತಿಯರ ಬಳಗ ದಿನದಿನಕ್ಕೆ ಹೆಚ್ಚುತ್ತಿದೆ. ಕತೆಗಳ ಗಾತ್ರ, ಶೈಲಿ, ವಿಷಯಗಳಲ್ಲಿ ವೈವಿಧ್ಯ ಕಂಡುಬರುತ್ತಿದೆ. ನಾಡಿನ ಎಲ್ಲೆಡೆಗಳಲ್ಲಿಯೂ ಆಯಾ ಭಾಗದ ಜನತೆಯ ವಿಶಿಷ್ಟ ಜೀವನ ಹಾಗೂ ಅವರ ಸಮಸ್ಯೆಗಳನ್ನು ಕಥೆಗಳಲ್ಲಿ ಲೇಖಕಿಯರು ಚಿತ್ರಿಸಿದ್ದಾರೆ. ಉತ್ತರ ಕರ್ನಾಟಕದಲ್ಲಿ ಶ್ರೀಮತಿಯರಾದ ಚಂದ್ರಿಕಾ ಕೊಪ್ಪರ, ಶಾಂತಾದೇವಿ ಮಾಳವಾಡ, ಗೀತಾದೇವಿ ಕುಲಕರ್ಣಿ, ಸರಸ್ವತೀದೇವಿ ಗೌಡರ, ಚಂಪಾ ಮಹಿಷಿ-ಇವರುಗಳು ಪ್ರಮುಖರಾಗಿದ್ದಾರೆ. ಇವರೆಲ್ಲರ ಕಥೆಗಳಲ್ಲಿ ಸಾಮಾಜಿಕ ಸಮಸ್ಯೆ ಹಾಗೂ ಮಕ್ಕಳ ಮನೋವಿಶ್ಲೇಷಣೆಯ ಚಿತ್ರಗಳೇ ಪ್ರಧಾನವಾಗಿವೆ. ಸರಸ್ವತೀದೇವಿ ಗೌಡರರು ಐತಿಹಾಸಿಕ ಮಹಿಳೆಯರ ಹಲವು ಚಿತ್ರಗಳನ್ನೂ ಬಿಡಿಸಿದ್ದಾರೆ. ಮಹಿಳಾಜೀವನದ ಸಮಸ್ಯೆಗಳನ್ನು ವಿಶ್ಲೇಷಿಸಿ ಇನ್ನೊಂದು ಕೃತಿಯನ್ನೇ ರಚಿಸಿದ್ದಾರೆ. ಪತ್ರಿಕಾ ವ್ಯವಸಾಯದಲ್ಲಿ ಸೇವೆಸಲ್ಲಿಸುತ್ತಲಿರುವ ಶ್ರೀಮತಿ ಸುಶೀಲಾ ಕೊಪ್ಪರರ ಲೇಖನಿ ಕಥೆ ಬರೆಯುವಲ್ಲಿ, ಅದರಂತೆ ವ್ಯಕ್ತಿಚಿತ್ರಗಳನ್ನು ಬಿಡಿಸುವಲ್ಲಿ ಮೊನೆಯಾಗಿದೆ. ಮೃದುವೂ ಇದೆ: ಕರಗಡದ ಶ್ರೀಮತಿ ಎಂ. ಕೆ. ಜಯಲಕ್ಷ್ಮಿಯವರು ಕಥೆ, ನಾಟಕಗಳೆರಡರಲ್ಲೂ ಕೃಷಿ ಮಾಡಿದ್ದಾರೆ. ಅವರ ಶೈಲಿ ಸಹೃದಯರ ಕುತೂಹಲವವನ್ನು ಸೆರೆ ಹಿಡಿಯುವಂತಿದೆ. ಶ್ರೀಮತಿಯವರಾದ ವಾಣಿ, ಎಚ್. ಎಸ್. ಕಾತ್ಯಾಯಿನಿ, ಸರಸ್ವತಿಬಾಯಿ ರಾಜವಾಡೆ, ಅನುಪಮಾ, ಜಯಲಕ್ಷ್ಮಿ ಆರ್. ಶ್ರೀನಿವಾಸನ್, ರಾಜಲಕ್ಷ್ಮಿ ಸುತ್ತಲಿನ ಜೀವನದಲ್ಲಿ ಉಂಟಾಗುತ್ತಿರುವ ಮೂಲ್ಯಗಳ ಕ್ರಾಂತಿಯನ್ನು ಕೂಲಂಕಷವಾಗಿ ಅರಿತು ಕಥೆಗಳನ್ನು ಚಿತ್ರಿಸಿದ್ದಾರೆ. ಸಮಸ್ಯೆಯ ತೀವ್ರ ಅರಿವು ಈ ಕತೆಗಳಲ್ಲಿ ಮೂಡಿ ಬಂದಿದೆ. ಈ ಅರಿವು ಶಕ್ತಿಯುತ ಬರಹಕ್ಕೆ ಒಂದು ಚಾಲನೆ. ಬೆಳೆದು ಬಂದ ಅಭ್ಯಾಸಬಲದಿಂದ ತಪ್ಪು ಮೂಲ್ಯಗಳನ್ನು ತಮಗರಿವಾಗದಂತೆಯೇ ಎಷ್ಟೋ ಸಲ ಸಾಹಿತಿಗಳು ಎತ್ತಿಕೊಂಡು

ಬಿಡಬಹುದಾಗಿದೆ. ಆದರೆ ಈ ಲೇಖಕಿಯರು ಆತ್ಮ ವಿಶ್ವಾಸದಿಂದ ತಪ್ಪು ಮೂಲ್ಯಗಳನ್ನು ಖಂಡಿಸಿದ್ದಾರೆ. ಶ್ರೀಮತಿ ಗೌರಮ್ಮನವರ ಕತೆ, 'ಪುನರ್ವಿವಾಹ' ಈಗ ಇಪ್ಪತ್ತೈದು ವರುಷಗಳ ಹಿಂದೆ ಬೆಳಕಿಗೆ ಬಂದರೂ, ಕಥಾನಾಯಕ ವಿಧುರ ಯುವಕನು ತಾನು ವಿವಾಹ ವಾಗುವ ವಧು ಬಾಲವಿಧವೆಯೆಂದು ತಿಳಿದಾಗ ಹಿಂಜರಿದ ವಿಚಾರವನ್ನು ಎಷ್ಟು ನಯವಾಗಿ ಖಂಡಿಸಿದೆ!

ಕವನ, ಕಥೆ, ಕಾದಂಬರಿಗಳೇ ಅಲ್ಲದೆ, ಹರಟೆ, ಪ್ರಬಂಧ, ಏಕಾಂಕ ನಾಟಕಗಳ ಭಾಂಡಾರಕ್ಕೂ ಮಹಿಳೆಯರು ಕಾಣಿಕೆ ಸಲ್ಲಿಸಿದುದುಂಟು; ಆದರೆ ಹೆಚ್ಚು ಪ್ರಮಾಣದಲ್ಲಿಲ್ಲ.

ಸಾಮಾಜಿಕ ಸಮಸ್ಯೆಗಳನ್ನು ಚಿತ್ರಿಸುವಲ್ಲಿ ಪ್ರೌಢ ಜನದ ಸಮಸ್ಯೆಗಳೇ ಸದ್ಯಕ್ಕೆ ಹೆಚ್ಚಾಗಿ ಚಿತ್ರಿತವಾಗಿವೆ. ಮಕ್ಕಳ ಮನಸ್ಸಿನ ವಿಕಾಸವನ್ನು ಹೆಜ್ಜೆಹೆಜ್ಜೆಗೂ ನಿರೀಕ್ಷಿಸಿ ದಾರಿ ತೋರುವ ಮಹಿಳೆ ಮಕ್ಕಳ ಸಾಹಿತ್ಯರಚನೆಗೆ ಇನ್ನೂ ಹೆಚ್ಚು ಲಕ್ಷ್ಯ ಪೂರೈಸಬಹುದಾಗಿದೆ. ಕತೆ, ಕವನ, ಚುಟುಕುಗಳು, ಆತ್ಮಚರಿತ್ರೆಗಳು, ಮಕ್ಕಳಿಗೆ ಹಿಡಿಸುವ ರೀತಿಯಲ್ಲಿ ಬರೆಯಲ್ಪಟ್ಟಲ್ಲಿ, ಬೆಳೆಯುವ ಮಕ್ಕಳ ಮನಸ್ಸಿನ ಮೇಲೆ ತುಂಬ ಪ್ರಭಾವವನ್ನು ಬೀರಬಲ್ಲವು. ವಿದೇಶೀ ಸಾಹಿತ್ಯದಲ್ಲಿ, ಅದೇಕೆ, ನಮ್ಮ ದೇಶದಲ್ಲಿಯೇ ಬೇರೆ ಸಾಹಿತ್ಯಗಳಲ್ಲಿ ಮಕ್ಕಳ ಸಾಹಿತ್ಯ ಚಿತ್ತಾಕರ್ಷಕವಾಗಿ ಪ್ರಕಟವಾಗುತ್ತಿದೆ. ಬಾಲ ಅಪರಾಧ, ಅಂಗವಿಕಲ ಮಕ್ಕಳು, ರಾಷ್ಟ್ರದ ವಿಭಜನೆಯಿಂದ ಮಕ್ಕಳ ಮೇಲಾದ ಪರಿಣಾಮ, ಭಿಕ್ಷುಕರ ಸಂಸ್ಥೆಗಳ ಅನಿಷ್ಟ ಕಾರ್ಯ- ಇಂತಹ ಇನ್ನೂ ಅನೇಕ ವಿಷಯಗಳನ್ನು ಕುರಿತು ನಮ್ಮ ಸೋದರಿಯರು ತಮ್ಮ ಸರಸ ಶೈಲಿಯಲ್ಲಿ ಚಿತ್ರಗಳನ್ನು ಬಿಡಿಸಿ ಸಮಾಜದಲ್ಲಿ ಬೆಳಕನ್ನುಂಟುಮಾಡಬಲ್ಲರು.

ವಾಸ್ತವಿಕತೆ ಆದರ್ಶವಾದಗಳ ಹೋರಾಟ ವಾಸ್ತವವಾಗಿ ಇದ್ದುದಕ್ಕಿಂತಲೂ ಹೆಚ್ಚಾಗಿ ಸಾಹಿತ್ಯದಲ್ಲಿ ಮೂಡಿ ಬರುತ್ತಿದೆ. ಆದರ್ಶ ಗುರಿ, ವಾಸ್ತವಿಕತೆ ದಾರಿ. ಅಂದಿನ ವಾಸ್ತವಿಕತೆ ಆದರ್ಶಗಳಿಗೂ ಇಂದಿನವುಗಳಿಗೂ, ತಲೆಮಾರುಗಳ ಅಂತರದಿಂದಾಗಿ ಸ್ವಲ್ಪ ವ್ಯತ್ಯಾಸವೂ ಕಂಡು ಬರಬಹುದು. ಕಲ್ಪನೆಯನ್ನು ಪ್ರತ್ಯಕ್ಷದಲ್ಲಿ ಕಾಣಬಯಸಿದ ಅಂದಿನ ಅಶಿಭರಿತ ಜೀವನಕ್ಕೂ ಪ್ರತ್ಯಕ್ಷದಲ್ಲಿ ಕಾಣದ್ದನ್ನು ಕಲ್ಪನೆಯಲ್ಲಾದರೂ ಕಾಣಬಯಸುವ ಇಂದಿನ ಜೀವನಕ್ಕೂ ವ್ಯತ್ಯಾಸವಿದೆ. ವಾಸ್ತವತೆಗೆ ಸತ್ಯ ಒರೆಗಲ್ಲು. ಬಳಿಕ ಸತ್ಯದ ಆಭಾಸದ ಮೇಲೆ ನಿಂತ ಅದ್ಭುತ ಕಲ್ಪನೆ, ಅಂಥ ರೂಢಿಗಳು ಹಿಂದೆ ಸರಿಯಲೇ ಬೇಕು. ವಾಸ್ತವ ಸಾಹಿತ್ಯವು ಸತ್ಯದ ಭಕ್ತಿ ಮಾನವತೆಯ ಪ್ರೇಮಗಳಿಂದ ಪ್ರೇರಿತವಾದುದು; ಸಮಾಜ-ಸಾಹಿತ್ಯಗಳ ಸಜೀವ ಸಂಬಂಧವನ್ನು ಈ ಸಾಹಿತ್ಯವೇ ದೃಢಗೊಳಿಸಬಲ್ಲದು.

ನವ್ಯತೆ, ಸೋದರಿಯರು ರಚಿಸಿದ ಕೆಲ ಕಥೆ-ಕವನಗಳಲ್ಲಿಯೂ ಕಂಡುಬರುತ್ತಿದೆ. ನವ್ಯತೆ ಎನ್ನುವದು ಶೈಲಿಯ ನವ್ಯತೆಯೂ ಅಲ್ಲ, ಶಬ್ದಪ್ರಯೋಗಗಳ ಸರ್ಕಸ್ಸೂ ಅಲ್ಲ. ಅದು ಇಂದಿನ ಪರಿಸರದಲ್ಲಿ ಮೂಡಿ ಬಂದಿರುವ ಒಂದು ವೈಚಾರಿಕ ಕ್ರಾಂತಿ. ಜೀವನದ ತೀವ್ರತೆ ಈ ನವ್ಯಕೃತಿಗಳಲ್ಲಿ ಭಾಸವಾಗುತ್ತದೆ. ನಿರ್ಜೀವ ಸಂಪ್ರದಾಯ, ಹತಾಶ ದೈವವಾದಗಳನ್ನು ಹತ್ತಿಕ್ಕಿ ವೈಚಾರಿಕ ಕ್ರಾಂತಿಯ ತೀವ್ರತೆಯನ್ನು ನವ್ಯತೆ ಚಿತ್ರಿಸುತ್ತದೆ. ರಾಜಲಕ್ಷ್ಮಿ ಈ ದಿಕ್ಕಿನಲ್ಲಿ ಕೆಲ ಸ್ತುತ್ಯ ಪ್ರಯೋಗಗಳನ್ನು ಮಾಡಿದ್ದಾರೆ.

ಹಿಂದಿನ ಪರಂಪರೆ, ಹಾಗೂ ಇಂದಿನ ಜೀವನದ ತೀವ್ರತೆ ನವ್ಯತೆಗಳನ್ನು ಆರಸಿಕೊಂಡು ಸಂಕ್ರಾಂತಿಯ ಇಂದಿನ ಸಮಯದಲ್ಲಿ ನಾಡಿನ ಜನಜೀವನವನ್ನೂ ವ್ಯಕ್ತಿ ವಿಕಾಸವನ್ನೂ ರೂಪಿಸಬಲ್ಲ ಶಕ್ತಿ ಕನ್ನಡ ಸಾಹಿತ್ಯದಲ್ಲಿದೆ. ಇದನ್ನು ಅರ್ಥವತ್ತಾಗಿ ಗ್ರಹಿಸಿ, ಇಂದಿನ ಪ್ರಜಾತಂತ್ರದ ಪ್ರಜೆಯಾದ ಮಹಿಳೆಯೂ ತನ್ನ ಅಭಿವ್ಯಕ್ತಿಯ ಶಕ್ತಿಗೆ ಮೂರ್ತರೂಪ ಕೊಡಬೇಕು. ಅವಳ ಆಶೆ, ಭಯ, ಕಲ್ಪನೆ ಮತ್ತು ದೃಷ್ಟಿಕೋನಗಳನ್ನೂ ಇಂದು ವಿಜ್ಞಾನ, ಮನೋವಿಜ್ಞಾನಗಳು ರೂಪಿಸುತ್ತಿವೆ. ವಿಶಾಲ ಪ್ರಪಂಚದಲ್ಲಿ ಬದುಕಬೇಕೆನ್ನುವ ಅವಳೂ ಸಮಸ್ಯೆಗಳೆನೆದುರಿಸಿಯೇ ಬದುಕಬೇಕು. ಈ ಹೋರಾಟ ಕತೆ, ಕಾದಂಬರಿ, ನಾಟಕ, ಹರಟೆ, ಕವನ,—ಯಾವುದರ ಮೂಲಕವಾಗಿಯೋ ಅಭಿವ್ಯಕ್ತಿಯನ್ನು ಪಡೆಯಬಹುದು; ಆದರೆ ಹೀಗೆ ಅಭಿವ್ಯಕ್ತಿಗೊಳಿಸುವ ಕಲೆ ಹಾಗೂ ಸಾಹಸಗಳು ಹೆಚ್ಚು ಜನ ಸೋದರಿಯರಲ್ಲಿಲ್ಲ. ಜಾನಪದ ಕವಯಿತ್ರಿಯರು ಅಂದಿನಿಂದ ಇಂದಿನವರೆಗೂ ಹಾಡುತ್ತಲೇ ಇದ್ದಾರೆ; ಅವರಿಗೆ ಹೊಸ ಸಂಸ್ಕೃತಿಯ ಸಂಪರ್ಕ ಬೇಕು: ಸುಶಿಕ್ಷಿತೆಯರು ಜಾನಪದಜೀವನ ತಿರುಳನ್ನರಿಯಬೇಕು. ಮಹಿಳೆಯ ಕಾರ್ಯಕ್ಷೇತ್ರವಿಂದು ವ್ಯಾಪಕವಾಗಿದೆ. ಅದಕ್ಕನುಗುಣವಾಗಿ ಸಾಹಿತ್ಯವೂ ವಿಶಾಲದೃಷ್ಟಿಯುಳ್ಳದ್ದಾಗಬೇಕು, ಶಕ್ತಿಯುತವಾಗಬೇಕು. ಅವಳ ಭಾವನೆ ವಿಚಾರಗಳು ಅವಳವೇ ಆಗಿ ಹೊರಬರುವ ಆತ್ಮವಿಶ್ವಾಸದ ಪೀಠಿಕೆ ಅವಳದಾಗಬೇಕು. ಆಗಲೇ ನಾಡಿನ ಜನತೆಯಲ್ಲಿ ಚೈತನ್ಯವನ್ನು ತುಂಬಬಲ್ಲ ಸಾಹಿತ್ಯ ವ್ಯಾಪಕವಾಗಿ ಅವಳಿಂದ ನಿರ್ಮಾಣವಾದೀತು.

---

# ಗ್ರಂಥಾವಲೋಕನ



**ಗೆಳೆಯ ನೀನು ಹಳೆಯ ನಾನು:**—ಲೇ : ಶ್ರೀ ಶ್ರೀರಂಗ. ಪ್ರಕಾಶಕರು: ಜಲಂಧರ ಪ್ರಕಟನಾಲಯ—ಸಾಗರ. ಪುಟಗಳು ೮೫ ; ಸೈಜು ಕ್ರೌನ್ ೧/೮, ಬೆಲೆ ರೂ. ೧—೫೦.

ಇದೊಂದು ಸಮಾಜಿಕ ನಾಟಕ. ಇದರಲ್ಲಿ ಕೇವಲ ಮೂರು ಅಂಕಗಳಿವೆ. ಹಾಗೂ ಆರು ಪಾತ್ರಗಳು ಮಾತ್ರ ಇವೆ. ಪ್ರಕಾಶಕರಾದ ಶ್ರೀ ಟಿ. ಮಹಾಬಲೇಶ್ವರ ಭಟ್ಟರು 'ನಮ್ಮ ನಾಡಿನಲ್ಲಿಂದು ಕಾದಂಬರಿ ಯುಗವು ಮುಂದುವರೆಯುತ್ತಿರುವ ಕಾಲದಲ್ಲಿ ನಾವು ಪದೇ ಪದೇ ನಾಟಕವನ್ನೂ ವಿಚಾರಾತ್ಮಕ ಗ್ರಂಥವನ್ನೂ ಹೊರತರುತ್ತಿದ್ದೇವೆ' ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ವಾಸ್ತವವಾಗಿ ಈ ನಾಟಕವೇನೋ ವಿಚಾರ ಪೂರಿತವಾದದ್ದೇ. ಅದರಲ್ಲಿ ಯಾವ ಸಂದೇಹವೂ ಇರಲಾರದು. ಶ್ರೀ ಶ್ರೀರಂಗರು ದಾಂಪತ್ಯವೆಂದರೇನು, ಪ್ರೇಮವೆಂದರೇನು-ಎಂಬಿವೇ ವಿಚಾರಗಳನ್ನು ಮಥನಮಾಡಿ, ವಾಚಕರ ಮುಂದಿಟ್ಟಿದ್ದಾರೆ. ಇದು ಕೇವಲ ಪ್ರಬಂಧವಾಗಿದ್ದರೆ ಓದುಗರು ಬಹುಶಃ ಬೇಸರಪಡುವರೆಂದು, ನಾಟಕ ರೂಪದಲ್ಲಿ ಬರೆಯಲಾಗಿದೆಯೊಂದು ನಾವು ಊಹಿಸಬಹುದಾಗಿದೆ.

ಮಹಾಕವಿ ಕಾಳಿದಾಸನ ಮೇಘದೂತ ಮತ್ತು ಅಭಿಜ್ಞಾನ ಶಾಕುಂತಲ, ಭವಭೂತಿಯ ಉತ್ತರರಾಮ ಚರಿತ ಇವುಗಳನ್ನೋದಿ, ಪ್ರಕೃತ ಲೇಖಕರು ಆದರ್ಶ ದಾಂಪತ್ಯದ ರೀತಿನೀತಿಗಳನ್ನು ಚಿತ್ರಿಸಹೊರಟಿದ್ದಾರೆ. ಈ ಮೇಲ್ಕಂಡ ಕಾವ್ಯಗಳಲ್ಲಿ "ಕವಿಗಳು ಆದರ್ಶ ದಾಂಪತ್ಯವನ್ನು ಚಿತ್ರಿಸುವಾಗ ಪ್ರಣಯಿಗಳು ಒಬ್ಬರನ್ನೊಬ್ಬರು ಅಗಲಿದ ಸಂದರ್ಭವನ್ನೇ ಮುಖ್ಯವಾಗಿ ಹಿನ್ನೆಲೆಯಾಗಿಟ್ಟುಕೊಂಡಿದ್ದಾರೆ. ಇದನ್ನು ಮುನ್ನುಡಿಯಲ್ಲಿ ಲೇಖಕರು ವಿವರಿಸುತ್ತಾ "ನಾನು ವಿದ್ಯಾರ್ಥಿಯಾಗಿದ್ದಾಗ ಇದೊಂದು ಮೋಜು ಎನ್ನಿಸಿತ್ತು. ವಸ್ತುವನ್ನು ಕಳೆದುಕೊಂಡಾಗಲೇ ಅದರ ಮಹತ್ವ ಹೊಳೆಯುವುದೆಂಬುದು ಸಾಮಾನ್ಯ ಅನುಭವ." ಎಂದು ವಾದಿಸಿದ್ದಾರೆ.

ಮೊದಲು ನಾಟಕದ ಹೆಸರಿನ ಬಗ್ಗೆ ಒಂದೆರಡು ಮಾತು ಹೇಳುವುದು ಉಚಿತ. ನಾಟಕದ ಹೆಸರು. "ಗೆಳೆಯ ನೀನು ಹಳೆಯ ನಾನು" ಎಂದು. ಇದು ಜನಸಾಮಾನ್ಯರಿಗೆ ಬೇಗ ಅರ್ಥವಾಗಲಾರದು. ಈ ನಾಟಕದ ಕಥಾವಸ್ತುವಾದರೋ ಪ್ರಣಯಿಗಳ ಪ್ರೇಮಸೂಚಕವಾದ ಉಂಗುರವೊಂದು ಕಳೆದುಹೋಗಿ, ಪುನಃ ದೊರೆತದ್ದು. ಇದರ ಪರಿಣಾಮವಾಗಿ ಏನೇನು, ಒಂದು ಚಿಕ್ಕ ಸಂಸಾರದಲ್ಲಿ ನಡೆಯಿತು ಎಂಬುದು ನಾಟಕದಲ್ಲಿ ಎತ್ತಿ ತೋರಿಸಲಾಗಿದೆ. ಆದ್ದರಿಂದ ಈ ನಾಟಕಕ್ಕೆ 'ಉಂಗುರದ ರಾದ್ಧಾಂತ' ಎಂಬ ಹೆಸರನ್ನಿಟ್ಟರೆ ಬಹು ಸೂಕ್ತವೂ ಆಕರ್ಷಕವೂ ಆಗಿರುತ್ತದೆಂದು ನನ್ನ ಸಲಹೆ.

ಇನ್ನು ನಾಟಕದಲ್ಲಿ ಬರುವ ಪಾತ್ರಗಳನ್ನು ಗಮನಿಸೋಣ. ಮೊದಲನೆಯದಾಗಿ ತಂದೆಯ ಪಾತ್ರ. ಇವರಿಗೆ ಹೆಸರೇ ಇಲ್ಲ. ಇದೊಂದು ವೈಶಿಷ್ಟ್ಯ. ಇವರು ನಾಟಕದುದ್ದಕ್ಕೂ ತಂದೆಯಾಗಿಯೇ ಇರುತ್ತಾರೆ. ಈತ ಸುಮಾರು ೫೬ ವರ್ಷ ವಯಸ್ಸಿನ ಸುಶಿಕ್ಷಿತ ವೃದ್ಧ. ಇಂದಿನ ಪ್ರಪಂಚವನ್ನು ತಕ್ಕಮಟ್ಟಿಗೆ ಬಲ್ಲವನು. ವಿಚಾರವಂತ, ವಿದ್ಯಾವಂತ. ಈತನ ತಮ್ಮನ ಮಗಳಾದ ಶಕುಂತಲೆಯನ್ನು ಚಿಕ್ಕಂದಿನಿಂದಲೂ ಸಾಕಿ, ಸಾಕು ತಂದೆಯಾಗಿ, ನಾಟಕದಲ್ಲಿ ಮಾತ್ರ ತಂದೆಯಾಗಿ ಕಾಣಿಸಿಕೊಳ್ಳುತ್ತಾನೆ. ಶಕುಂತಲೆಯ ತಾಯಿ, ತಂದೆ ಇಬ್ಬರೂ ತೀರಿಹೋಗಿರಲಾಗಿ ಸಾಕು ತಂದೆಯೇ ತಂದೆಯಾಗಿದ್ದಾನೆ. ಆದರೆ ಈ ಸಂಗತಿ ಶಕುಂತಲೆಗೆ ಸ್ಪಷ್ಟವಾಗಿ ತಿಳಿಯದು. ಜನ ಶಕುಂತಲೆಯ ವಿಷಯವಾಗಿ, ಅವಳ ತಾಯಿಯ ವಿಷಯವಾಗಿ ಆಡಿಕೊಳ್ಳುತ್ತಿರುವುದನ್ನು ಕೇಳಿದಾಗ ಅವಳು ವಯಸ್ಸಿಗೆ ಬಂದ ಮೇಲೆ ತನ್ನ ತಂದೆಯನ್ನೇ ಕೇಳುತ್ತಾಳೆ. ಆಗ ತಂದೆ ಪೂರ್ವ ವೃತ್ತಾಂತವನ್ನು ತಿಳಿಸುತ್ತಾನೆ. ಆದರೆ ಒಂದು ಪ್ರಶ್ನೆ ಅವಳ ಮುಂದೆ ಹಾಗೆಯೇ ಉಳಿಯುತ್ತದೆ—'ತನ್ನ ತಾಯಿ ಮದುವೆ ಆಗದೇ ಸತ್ತಳು' ಎಂದು ಈ ಪ್ರಶ್ನೆಯನ್ನು ನೇರವಾಗಿ ವೃದ್ಧ ತಂದೆಯನ್ನೇ ಯುವತಿ ಶಕುಂತಲೆ ಕೇಳಿಬಿಟ್ಟಾಗ ತಂದೆಯಾದವನು ಸರಿಯಾದ ವಿವರಣೆ ಕೊಡದಿದ್ದರೆ ಹೇಗೆ? ಅಲ್ಲದೆ ಸಮಾಜದಲ್ಲಿ ಜನ ಹೇಗೆ ಚುಚ್ಚು ಮಾತುಗಳನ್ನಾಡುತ್ತಾರೆ—ಎಂಬುದನ್ನು ಎಲ್ಲರೂ ಬಲ್ಲರು. ಆಗ ತಂದೆ ಹೀಗೆ ಹೇಳಿ ಮಗಳನ್ನು ಸಮಾಧಾನ ಮಾಡುತ್ತಾನೆ.

"ಹುಚ್ಚಿ! ಹುಚ್ಚಿ! ಎಂಥಾ ವಯಸ್ಸಿನಲ್ಲಿ ಎಂಥಾ ಪ್ರಶ್ನೆ ಕೇಳುವೆ—ಆದ್ರೂ ನಾನು ಮುದುಕ, ನಿರ್ದಾಕ್ಷಿಣ್ಯವಾಗೆ ಹೇಳ್ತೀನಿ. ನಿನ್ನ ತಾಯಿ ನನ್ನ ತಮ್ಮನ ಪ್ರೇಯಸಿ

ಯಾಗಿದ್ದಳು. ನಡತೆಯಿಂದಲ್ಲ, ಹೃದಯದಿಂದ. ಮದುವೆ ಅಶಕ್ಯ ಎನಿಸಿದಾಗ ಸ್ಪಷ್ಟವಾಗಿ ಹೇಳಿದಳು. ತಾನು ಪ್ರೇಯಸಿಯಾಗಿಯೇ ಉಳಿಯುವಳೆಂದು. ಆದರೆ ನನ್ನ ತಮ್ಮನು ಕೊನೆಯವರೆಗೆ ಯಾರನ್ನೂ ಮದುವೆಯಾಗಲಿಲ್ಲ, ಈ ಎರಡು ಹೃದಯಗಳು, ಮದುವೆಯ ಸಂಸ್ಕಾರವಿಲ್ಲದಿದ್ದರೂ ಒಂದಾಗಿದ್ದುವು. ಅಂಥಾ ಪ್ರೇಮ ತಪಸ್ಸಿನ ಫಲ ನೀನು. ಆ ಪ್ರೇಮ ತಪಸ್ಸಿನ ಸ್ಮರಣೆ ಉಳಿಯಲಿ—ಎಂದು ನಾನು ನಿನ್ನನ್ನು ಸಾಕಿದೆ, ಸಲಹಿದೆ. ಬೆಳಸಿದೆ, ಕಲಿಸಿದೆ."

(ಪುಟ ೩೬, ಅಂಕ ೨.)

ಹೀಗೆ ಆ ನಾಟಕದಲ್ಲಿ ತಂದೆಯ ಪಾತ್ರ ಬಹಳ ಮಹತ್ವವನ್ನು ಪಡೆದಿದೆ.

ಇನ್ನೊಂದು ಪಾತ್ರ ಪ್ರೊಫೆಸರರದು. ಇವರು ಸುಮಾರು ೪೬ ವಯಸ್ಸಿನ ಆಧುನಿಕ ಸಂಪ್ರದಾಯದ ವಿದ್ಯಾವಂತರು. ಮೊದಮೊದಲಲ್ಲಿ ಇವರು ಬಹಳ ಗೌರವವನ್ನು ಗಳಿಸಿ, ಕಡೆಗೆ ಎಲ್ಲರಿಂದಲೂ ದೂಷಿತರಾಗಿ, ಕಡೆಗೆ ಊರನ್ನೇ ಬಿಟ್ಟು ಹೋಗುತ್ತಾರೆ. ಇವರು ಹೆಣ್ಣುಮಕ್ಕಳೊಡನೆ ಹರಟೆ ಹೊಡೆಯುವುದು ಹೆಚ್ಚೆಂದು ತಾನಾಗಿಯೇ ಕಾಣುತ್ತದೆ. ಶಕುಂತಲೆಗೆ ಇವರು ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಪ್ರಯುಕ್ತ, ವಿಶ್ವಾಸ, ಸಲಿಗೆ ಬೆಳೆಯಿತು. ಅದನ್ನೇ ನೆಪ ಮಾಡಿಕೊಂಡು ಪದೇ ಪದೇ ಶಕುಂತಲೆಯ ಮನೆಗೆ ಬರುತ್ತಾರೆ. ಅಲ್ಲಿ ಶಕುಂತಲೆಯ ಗಂಡ ಶ್ಯಾಮನೊಂದಿಗೆ, ಅವಳ ತಂದೆಯೊಂದಿಗೆ, ಗೆಳೆಯ ಮನೋಹರನೊಂದಿಗೆ, ಅವನ ಹೆಂಡತಿ ಅನುಸೂಯೆಯೊಂದಿಗೆ ಆಗಾಗ್ಗೆ ಹರಟೆ ಹೊಡೆಯುವಾಗ, ಪುರಾಣದ ಶಕುಂತಲೆಯ ಬಗ್ಗೆ ಚರ್ಚೆ ನಡೆಯುತ್ತದೆ. ಅವರು ಪ್ರೇಮದ ಬಗ್ಗೆ ವ್ಯಾಖ್ಯಾನ ಮಾಡುತ್ತಾರೆ. ಆದರ್ಶ ಪ್ರೇಮ ಹೇಗಿರುತ್ತದೆಂದು ವಿವರಿಸುತ್ತಾರೆ. ಒಮ್ಮೆ ಮಹಾಭಾರತದ ದ್ರೌಪದಿಯನ್ನು ಕುರಿತು ಚರ್ಚೆ ನಡೆದಾಗ ದ್ರೌಪದಿಯು ಕರ್ಣನನ್ನು ಕಾಮ ದೃಷ್ಟಿಯಿಂದ ಕಂಡಿದ್ದಳಲ್ಲವೇ—ಎಂಬ ಮಾತು ಬರುತ್ತದೆ. ಅದಕ್ಕೆ ಪುಟ ಕೊಡುವ ಹಾಗೆ ಅರಣ್ಯದಲ್ಲಿ ಗಿಡವೊಂದರಿಂದ ಹಣ್ಣೊಂದು ಬಿದ್ದಾಗ ಶ್ರೀಕೃಷ್ಣನ ಸಮಕ್ಷಮದಲ್ಲಿ ದ್ರೌಪದಿಯೇ ತನ್ನ ನಿಜವಾದ ಅಂತರಂಗವನ್ನು ವಿವರಿಸಲಾಗಿ ಆ ಹಣ್ಣು ಪುನಃ ಆ ಗಿಡವನ್ನು ಸೇರಿತಂತೆ. ಈ ಸಂಗತಿಯನ್ನು ಚರ್ಚೆ ಮಾಡುತ್ತಾ ಮದುವೆಗೆ ಮುಂಚೆ ಹೆಂಗುಸಾದವಳು ಯಾವ ಪುರುಷನನ್ನಾದರೂ ಪ್ರೀತಿಸಬಹುದೇ—ಎಂಬ ಪ್ರಶ್ನೆ ಏಳುತ್ತದೆ. ಒಬ್ಬೊಬ್ಬರು ಒಂದೊಂದು ವಿಧವಾಗಿ ವಾದಿಸುತ್ತಾರೆ. ಆಗ ಪ್ರೊಫೆಸರರು ತಮ್ಮ ವಾದವನ್ನು ಹೀಗೆ ಮುಂದಿಡುತ್ತಾರೆ.

"ನೋಡಿರಿ, ಬೆಕ್ಕು ತನ್ನ ಮರಿಗೆ ಇಲಿಯನ್ನು ಹ್ಯಾಗೆ ಹಿಡಿಯಬೇಕು ಅನ್ನೋದನ್ನ ಕಲಿಸ್ತದ. ನೋಡೀರೇನು ಅದನ್ನ? ಅದನ್ನು ಕಲಿಸೋವಾಗ ಒಂದು ಕಡ್ಡಿ, ಒಂದು ಅರಿವೆ ತುಣುಕು, ಒಂದು ಚೆಂಡು—ಯಾವುದು ಅಲ್ಲಿ ಇರ್ತದೋ ಅದನ್ನೇ ಇಲಿ ಅಂತ ತಿಳಿದು ಮರಿಗೆ ಕಲಿಸಿಕೊಡುತದೆ. ಹಾಗೆ ಸೃಷ್ಟಿ ಹೆಣ್ಣಿಗೂ ಗಂಡಿಗೂ ಮದುವೆ ಮುಂಚಿತ ಒಬ್ಬರನ್ನೊಬ್ಬರನ್ನ ಹ್ಯಾಗೆ ನೋಡಬೇಕು—ಅನ್ನೋದನ್ನು ಕಲಿಸಿಕೊಡ್ತದೆ. ಒಮ್ಮೆ ಆ ವಿದ್ಯಾ ಹಸ್ತಗತ ಆಯಿತೋ ಆಗ ಬೆಕ್ಕಿನ ಮರಿ ನಿಜವಾದ ಇಲಿಯನ್ನು ಹಿಡಿಯುವಂತೆ..........ನಿಜವಾದ ಇಲಿಯನ್ನು ಹಿಡಿಯುವ ಮುಂಚಿನ ಬೆಕ್ಕಿನ ಮರಿ ಯಾವ್ಯಾವುದನ್ನೋ ಹಿಡಿಯುವುದಲ್ಲ. ಅದು ತಪ್ಪು ಅಂತೀರಾ?"

(ಪುಟ ೫೧-೫೨ ಅಂಕ೨.)

ಆಗ ಶ್ಯಾಮ ಹೇಳ್ತಾನೆ–"ಅಂದ್ರೆ? ನೀವನ್ನೋದೇನು? ಮದುವೆ ಮುಂಚಿತ ಹೆಂಗಸು ಯಾವ, ಇಲ್ಲಾ ಬೇಕಾದಷ್ಟು ಗಂಡಸರನ್ನ ಪ್ರೀತಿಸಿದರೂ ಅದು ತಪ್ಪಲ್ಲ ಅಂತೀರಾ?"

ಅನುಸೂಯ (ಮನೋಹರನ ಹೆಂಡತಿ) ಹೀಗೆ ಹೇಳ್ತಾಳೆ– "ಇಲ್ಲ ಹಾಗೆ ಪ್ರೀತಿಸೋದು ಗಂಡಸಿನದೊಬ್ಬನವೇ ಹಕ್ಕು."

ಶಕುಂತಲಾ ಹೀಗೆ ಹೇಳಿ ಉಪಸಂಹಾರ ಮಾಡ್ತಾಳೆ. "ಅದು ಪ್ರೀತೀನೇ ಅಲ್ಲ—ಅಂತ ಹೇಳ್ತಾರ ಪ್ರೊಫೆಸರರು."

ಹೀಗೆಯೇ ಚರ್ಚೆ ಸಾಗುತ್ತದೆ. ಇದೊಂದು ಉದಾಹರಣೆ ಮಾತ್ರ. ಇದರಿಂದಲೇ ಪ್ರೊಫೆಸರರ ಮನೋಭಾವ ವೇದ್ಯವಾಗುತ್ತದೆಯಲ್ಲವೇ? ಸಾಲದ್ದಕ್ಕೆ ಇವರು ಬ್ರಹ್ಮಚಾರಿಗಳು ಬೇರೆ. ಇಷ್ಟೇ ಅಲ್ಲ, ಇವರ ಪಾತ್ರಕ್ಕೆ ಹೆಚ್ಚು ಪ್ರಾಧಾನ್ಯತೆ ಬರಲು ಮತ್ತೊಂದು ಪ್ರಬಲವಾದ ಕಾರಣವುಂಟು. ಶಕುಂತಲೆ ವಿದ್ಯಾರ್ಥಿನಿಯಾಗಿದ್ದಾಗ, ಅವಳಿಗೆ ಶ್ಯಾಮ ಕೊಟ್ಟಿದ್ದ ಉಂಗುರವನ್ನು, ಅವಳು ತನ್ನ ಪ್ರೊಫೆಸರರಿಗೆ ಗುರುದಕ್ಷಿಣೆಯೆಂದೋ, ವಾತ್ಸಲ್ಯದ ಕುರುಹೆಂದೋ ಕೊಟ್ಟುಬಿಡುವಳು. ಈ ಸಂಗತಿಯನ್ನು ಅನುಸೂಯ ಎಲ್ಲರ ಇದಿರಿನಲ್ಲಿಯೇ ಪ್ರಸ್ತಾಪಮಾಡುವಳು. ಇದರಿಂದಾಗಿ ಶ್ಯಾಮನಿಗೆ ತನ್ನ ಹೆಂಡತಿಯ ಮೇಲೆ ಕೋಪ ಬರುತ್ತದೆ. ಪ್ರೊಫೆಸರನ ಮೇಲೆ ಅನಾದರಣೆ ಮೂಡುತ್ತದೆ. ಯಾವುದೋ ಒಂದು ಸಂದರ್ಭದಲ್ಲಿ ಪ್ರೊಫೆಸರನು ಈ ಸಂಗತಿಯನ್ನು ತಾನೇ ಹೇಳಿಕೊಳ್ಳುತ್ತಾನೆ. ಇದರ ಪರಿಣಾಮ! ಗಂಡಹೆಂಡಿರಲ್ಲಿ ಜಗಳ. ಶ್ಯಾಮನಿಗೂ ಶಕುಂತಲೆಗೂ ವಿರಸವುಂಟಾಗಿ, ಪರಸ್ಪರ ಅಗಲುವ ಸಂದರ್ಭ ಒದಗುತ್ತದೆ. ಆಗ ತಂದೆಗೂ ಪ್ರೊಫೆಸರನಿಗೂ ಮಾತು ಬೆಳೆದು ತನ್ನ ಅಚಾತು

ರ್ಯದಿಂದ ಹೀಗಾಯಿತೆಂದು ತಿಳಿದು, ಕ್ಷಮೆ ಕೋರಿ ಹೊರಟುಹೋಗುತ್ತಾನೆ. ಅನಂತರ ಮನೋಹರ ಅನುಸೂಯ ಇವರು ಶ್ಯಾಮನಿಗೂ ಶಕುಂತಲೆಗೂ ಸಮಾಧಾನ ಹೇಳುತ್ತಾರೆ. ಅಷ್ಟರಹೊತ್ತಿಗೆ ಸರಿಯಾಗಿ ಕಳೆದುಹೋದ ಉಂಗುರ ಸಿಗುತ್ತದೆ. ಪ್ರೊಫೆಸರನು ಶಕುಂತಲೆಗೆ ಎಂದೋ ಹಿಂದಿರುಗಿ ಕೊಟ್ಟಿದ್ದು, ಅದು ಕಳೆದುಹೋಗಿದ್ದು, ಇಷ್ಟು ರಾದ್ಧಾಂತಕ್ಕೆ ಅವಕಾಶವುಂಟಾಗಿತ್ತು. ಈಗ ಪುನಃ ಉಂಗುರ ಸಿಕ್ಕಲಾಗಿ ಶ್ಯಾಮನಿಗೆ ಸಂತೋಷವುಂಟಾಗುತ್ತದೆ. ಮನೋಹರ ಅನಸೂಯೆಯರ ಹಿತವಚನಗಳು, ಶ್ಯಾಮನ ಮಾವನ ಸಮಾಧಾನದ ಮಾತುಗಳು, ಎಲ್ಲಾ ಸೇರಿ ಶಕುಂತಲೆ ಶ್ಯಾಮ ಒಂದಾಗುವರು.

ಇಲ್ಲಿ ಪ್ರೊಫೆಸರನು ತನ್ನ ಅಚಾತುರ್ಯದಿಂದ ಹೇಗೆ ಇದ್ದ ಗೌರವವನ್ನು ಕಳೆದುಕೊಂಡನೆಂಬುದನ್ನು ನಾಟಕಕಾರರು ಬಹು ಸ್ವಾರಸ್ಯವಾಗಿ ನಿರೂಪಿಸಿದ್ದಾರೆ.

ಇನ್ನು ಶ್ಯಾಮನ ಪಾತ್ರ. ಇವನು ರೂಪವಂತ, ವಿದ್ಯಾವಂತ, ಶಕುಂತಲೆಗೆ ಅನುರೂಪನಾದ ಪತಿ. ಇವನೇ ಈ ನಾಟಕದ ಕಥಾನಾಯಕ. ವಯಸ್ಸು ಸುಮಾರು ೨೮. ಉಂಗುರದ ನಾಪತ್ತೆಯ ವಿಷಯವಾಗಿಯೇ ಮನಸ್ತಾಪ ಬರಲಾಗಿ, ಶಕುಂತಲೆಯನ್ನು ಧಿಕ್ಕರಿಸುತ್ತಾನೆ. ಅದು ಸಿಕ್ಕಿದ ಮೇಲೆ ಶಕುಂತಲೆಯನ್ನು ಒಪ್ಪಿ ಅಪ್ಪಿಕೊಳ್ಳುತ್ತಾನೆ. ಆದ್ದರಿಂದ ಇವನೊಬ್ಬ ಕಿರೀಟವಿಲ್ಲದ ದುಷ್ಯಂತನಾಗಿ ಈ ನಾಟಕದಲ್ಲಿ ಶೋಭಿಸುತ್ತಾನೆ. ಈ ನಾಟಕವು ಆಧುನಿಕ ಶಾಕುಂತಲ ನಾಟಕವಾಗಿದೆಯೆಂದರೆ ತಪ್ಪಾಗಲಾರದು. ಶಕುಂತಲೆಯ ಪಾತ್ರವಂತೂ ಬಹಳ ಮುಖ್ಯವಾದದ್ದು. ಇವಳು ಮಾತಿನಲ್ಲಿ ಬಲು ಜಾಣೆ. ರೂಪವತಿ ಹಾಗೂ ವಿದ್ಯಾವತಿ. ವಯಸ್ಸು ಸುಮಾರು ೨೪. ಮೌಢ್ಯದಿಂದಲೋ, ಹೆಚ್ಚಿನ ಗುರು ಭಕ್ತಿಯಿಂದಲೋ ಪ್ರೇಮ ಸೂಚಕವಾದ ಉಂಗುರವನ್ನು ಪ್ರೊಫೆಸರನಿಗೆ ಕೊಟ್ಟು ಅನ್ಯಾಯವಾಗಿ ಅಪವಾದಕ್ಕೆ ಗುರಿಯಾಗುತ್ತಾಳೆ. ಇವಳೇ ಈ ನಾಟಕದ ಕಥಾನಾಯಿಕೆ. ಮನೋಹರ ಮತ್ತು ಅನುಸೂಯೆ—ಇವರು ಇಲ್ಲಿ ಆದರ್ಶ ದಂಪತಿಗಳಾಗಿ ಶೋಭಿಸುತ್ತಾರೆ. ಇವರು ಅತ್ಯಾಧುನಿಕ ರೀತಿಯ ನವನಾಗರಿಕರು. ಎಲ್ಲಾ ಸಂದರ್ಭಗಳಲ್ಲಿಯೂ ಇವರೀರ್ವರೂ ಒಟ್ಟಿಗೇ ಸಂಭಾಷಣೆಗಳಲ್ಲಿ ಭಾಗವಹಿಸುತ್ತಾರೆ. ಶ್ಯಾಮ-ಶಕುಂತಲೆಯರ ಮಧ್ಯೆ ಬಂದಿದ್ದ ಮನಸ್ತಾಪವನ್ನು ನಿವಾರಿಸುವುದಕ್ಕೆ ಬಹಳ ಪ್ರಯತ್ನಪಟ್ಟು ಯಶಸ್ವಿಗಳಾಗುತ್ತಾರೆ. ಅನುಸೂಯೆ ಒಮ್ಮೆ ಉಂಗುರದ ಸುದ್ದಿ ತೆಗೆದಾಗ, ಅದನ್ನು ತಿಳಿಸುವುದು ಬೇಡವೆಂದು ಮನೋಹರ ಸಂಜ್ಞೆ ಮಾಡಿದಾಗಲೂ ಸಹ ಅದನ್ನರಿಯದೆ ತಿಳಿಸಿಯೇಬಿಡುತ್ತಾಳೆ. ಅಲ್ಲದೆ ಶ್ಯಾಮನ ಇದಿರಿನಲ್ಲಿ ಪ್ರೊಫೆಸರನ ಸುದ್ದಿ ತೆಗೆಯಬಾರದೆಂದು ಮನೋಹರ ತಿಳಿಸಿದರೂ ಸಹ ಅನುಸೂಯೆ ದುಡುಕುತ್ತಾಳೆ. ತತ್ಪರಿಣಾಮವಾಗಿ ಶ್ಯಾಮ ಮತ್ತು ಶಕುಂತಲೆಯರಲ್ಲಿ ವಿರಸ ತಲೆದೋರುತ್ತದೆ. ಈ ವಿರಸವು ವಿವಾಹವಿಚ್ಛೇದನದಲ್ಲಿ ಪರಿಣಾಮವಾಗುವುದೋ ಏನೋ ಎಂದು ಭಾಸವಾಗುತ್ತದೆ.

ಅಂತೂ ಅನುಸೂಯೆ ಮತ್ತು ಮನೋಹರರ ಪಾತ್ರಗಳು ನಾಟಕಕ್ಕೆ ಹೆಚ್ಚು ಕಳೆಯನ್ನು ತಂದಿದೆ ಎನ್ನಬಹುದು.

ಇನ್ನು ಈ ನಾಟಕದ ರಂಗಸಜ್ಜಿಕೆಯ ಬಗ್ಗೆ ಒಂದೆರಡು ಮಾತು ಮಾತ್ರ ಹೇಳಬಹುದಾಗಿದೆ. ನಾಟಕ ರಂಗದಲ್ಲಿ ಹೆಸರಾಂತ ಈ ಲೇಖಕರು ಈ ನಾಲ್ಕು ಸೂಚನೆಗಳನ್ನು ಎಲ್ಲರ ಮುಂದೆ ಇಟ್ಟಿದ್ದಾರೆ.

೧. ನಾಟಕವನ್ನಾಡಲು ಶ್ರೀಮತಿ ಶಾರದಾದೇವಿ ಆದ ಅವರಿಗೆ ೧೦೦ ರೂಗಳನ್ನು ಕೊಟ್ಟು ಲೇಖೀ ಸಮ್ಮತಿಯನ್ನು ಪಡೆಯಬೇಕು.

೨. ರಂಗಸ್ಥಲದ ಉದ್ದ ಅಗಲಳತೆ ಕ್ರಮವಾಗಿ ೨೨′× ೧೬′ ಇಲ್ಲದಿದ್ದಲ್ಲಿ ಈ ನಾಟಕವನ್ನಾಡಲು ಸಮ್ಮತಿ ದೊರೆಯದು.

೩. ಎರಡನೆಯ ಅಂಕದಲ್ಲಿ ಸೂಚಿಸಿದ ತಂತ್ರವನ್ನು ಅಗತ್ಯವಾಗಿ ಬಳಸಬೇಕು.

೪. ಈ ನಾಟಕಕಾರರಿಗೆ ತೃಪ್ತಿಕರವಾಗುವಂತೆ ರಿಹರ್ಸಲ್ ಆಗದಿದ್ದಲ್ಲಿ ಕೊಟ್ಟ ಸಮ್ಮತಿಯನ್ನು ಹಿಂದಕ್ಕೆ ತೆಗೆಕೊಳ್ಳಲಾಗುವುದು.

ಈ ನಾಲ್ಕು ಸೂಚನೆಗಳಲ್ಲಿ ಮೊದಲನೆಯದು ಮತ್ತು ನಾಲ್ಕನೆಯದು ಲೇಖಕರ ಸ್ವಂತ ವಿಷಯ. ಎರಡು ಮತ್ತು ಮೂರನೆಯ ಸೂಚನೆಗಳು ಸೂಕ್ತವಾಗಿವೆ. ಎಲ್ಲ ನಾಟಕಾಭಿನಯಕಾರರು ಈ ಸೂಚನೆಗಳನ್ನು ಗಮನಿಸುವುದು ಅಗತ್ಯ.

ಇನ್ನು ಶೈಲಿಯ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವುದು ಸೂಕ್ತವಾಗಿದೆ. ಬೆಂಗಳೂರಿನ ಜನತೆಗೆ ಇದರಲ್ಲಿರುವ ಭಾಷೆ ಬಹುಶಃ ಹಿಡಿಸಲಾರದು. ಆದರೂ ಕನ್ನಡಾಭಿಮಾನಿಗಳು ಈ ನಾಟಕವನ್ನು ಓದುವುದು ಒಳಿತು. ಭಾಷೆ ಹೇಗಿದ್ದರೇನು ? ವಿಷಯ ನಿರೂಪಣೆ ಚೆನ್ನಾಗಿದೆ. ಇಂಥ ನಾಟಕಗಳನ್ನು ಕಾಲೇಜು ಮಟ್ಟದ ವಿದ್ಯಾರ್ಥಿಗಳಿಗೆ ವ್ಯಾಸಂಗದ ಪುಸ್ತಕವಾಗಿ ನಿಯಮಿಸಬಹುದು. ಉಂಗುರ ಎಂಬುದು ಯಾವ ಯಾವ ಸಂದರ್ಭದಲ್ಲಿ, ಎಲ್ಲೆಲ್ಲಿ ಯಾವ ಯಾವ ಕಾವ್ಯಗಳಲ್ಲಿ ಬಂದಿದೆ—ಎಂಬುದನ್ನು ಈ ನಾಟಕದಲ್ಲಿ ಕಾಣಬಹುದು. ಉಂಗುರದ ಬಗ್ಗೆ ಯಾರಾದರೂ ಹೆಚ್ಚು ವಿಷ

ಯುಗಳನ್ನು ತಿಳಿಯಬೇಕೆನ್ನುವವರು ಈ ನಾಟಕದಲ್ಲಿ ಬರುವ ಶಕುಂತಲೆಯ ಮಾತುಗಳನ್ನು ಗಮನಿಸುವುದೊಳಿತು. "ನೋಡು, ಅನುಸೂಯ, ಸೀತಾನ್ನ ಶೋಧಿಸಲಿಕ್ಕೆ ಹೋದ ಹನುಮಂತ ಆಕೆಗೆ ರಾಮಚಂದ್ರನ ಉಂಗುರ ತೋರಿಸಿದ. ದುಷ್ಯಂತ ಶಕುಂತಲಾಗೆ ಉಂಗುರ ಕೊಟ್ಟ. ಇನ್ನೂ ಏನೇನು ಇಂಥಾ ಕತೆ ಇವೆಯೋ ಏನೋ! ಒಟ್ಟು ಪ್ರೇಮದ ಕತೇ ಒಳಗ ಉಂಗುರದ ಸ್ಥಾನ ಆದ ಅನ್ನೋ ವಿಷಯ ಶೋಧ ಮಾಡಿ ಪ್ರಬಂಧ ಯಾಕ ಬರೀಬಾರದು?"

ವಾಚಕರಲ್ಲಿ ಯಾರಾದರೂ ಮುಂದೆ ಬಂದು ಈ ಶಕುಂತಲೆಯ ಸಲಹೆಯನ್ನು ಆಚರಣೆಗೆ ತರಬಾರದೆ? ಶೋಧ ನಡೆಸಿ ಡಾಕ್ಟರೇಟ್ ಪದವಿಯನ್ನು ಪಡೆಯಬಾರದೇಕೆ? ಇದು ಖಂಡಿತ ಸಾಧ್ಯವಿದೆ. ಈ ಬಗ್ಗೆ ಕಾಲೇಜ್ ವಿದ್ಯಾರ್ಥಿ ವಿದ್ಯಾರ್ಥಿನಿಯರು ಮುಖ್ಯವಾಗಿ ಗಮನಿಸುವರೆಂದು ನಂಬಿರುತ್ತೇನೆ.

**ಕನ್ನಡವೇ ದೇವರು**:—ಲೇಖಕರು: ಶ್ರೀ ನಾ. ಕೃ. ಸ. ಬೆಂಗಳೂರು; ಪ್ರಕಾಶಕರು:-ಸುಂದರ ಪ್ರಕಾಶನ, ಗುಪ್ತಾ ಭಂಡಾರ, ನಾಗಸಂದ್ರ ರಸ್ತೆ-ಬೆಂಗಳೂರು ೪; ಪುಟಗಳು ೬೪; ಆಕಾರ (ಕ್ರೌನ್) ಅಷ್ಟದಳ; ಬೆಲೆ ಒಂದು ರೂ.

ಈಗ ಎಲ್ಲೆಲ್ಲಿಯೂ ಕನ್ನಡದ ಚಳುವಳಿ ಬಿರುಸಾಗಿ ನಡೆಯುತ್ತಿದೆ. ಇಂಥ ಸಮಯದಲ್ಲಿ ಈ ನಾಟಕ ಪ್ರಕಟವಾಗಿರುವುದು ಸಮಯೋಚಿತವಾಗಿದೆ. ಇದರಲ್ಲಿ ಏಳು ದೃಶ್ಯಗಳಿವೆ. ಬಡ ಉಪಾಧ್ಯಾಯನೊಬ್ಬ ಕನ್ನಡ ತಾಯಿಯ ಸೇವೆಗಾಗಿ ಎಷ್ಟು ಹೋರಾಡಿದ್ದನೆಂಬ ಸಂಗತಿಯನ್ನೇ ಆಧಾರವಸ್ತುವನ್ನಾಗಿಸಿಕೊಂಡು, ಬಾಲಕರು, ಯುವಕರು ಎಲ್ಲರೊಂದಾಗಿ ಕನ್ನಡ ನಾಡಿಗಾಗಿ—ಕನ್ನಡ ನುಡಿಗಾಗಿ ಹೇಗೆ ಕಾರ್ಯಕ್ರಮಗಳನ್ನು ಕೈಕೊಂಡರೆಂಬುದನ್ನು ಪೋಷಕವಾಗಿ ಮಾಡಿಕೊಂಡು, ಮನೋಜ್ಞವಾದ ರೀತಿಯಲ್ಲಿ ನಾಟಕವನ್ನು ಹೆಣೆದಿದ್ದಾರೆ. ಉತ್ಸಾಹದ ಹುರುಪಿನಲ್ಲಿ ಬರೆದ ನಾಟಕವಿದು. ಆದರೂ ಪ್ರೋತ್ಸಾಹಕ್ಕೆ ಅರ್ಹವಾಗಿದೆ. ಶ್ರೀ ಮ. ರಾಮಮೂರ್ತಿಯವರು ಮುನ್ನುಡಿ ಬರೆದಿದ್ದಾರೆ. ಶ್ರೀ ಅ. ನ. ಕೃ ಅವರಿಗೆ ಈ ನಾಟಕವನ್ನು ಅರ್ಪಿಸಲಾಗಿದೆ.

ನನಗೆ ಬಂದಿರುವ ಪ್ರತಿಯಲ್ಲಿ ೬೫ ಪುಟಗಳು ಸರಿಯಾಗಿದ್ದು ಉಳಿದ ಪುಟಗಳು ಅಸ್ತವ್ಯಸ್ತವಾಗಿವೆ. ಮುದ್ರಣಾಲಯದ ಈ ದೋಷವನ್ನು ಯಾರೂ ಗಮನಿಸಲಿಲ್ಲವೇನೋ? ಅಥವಾ ನನಗೆ ಬಂದಿರುವ ಪ್ರತಿಯಲ್ಲಿ ಮಾತ್ರ ಹೀಗಿರಬಹುದೇನೋ?

ಈ ನಾಟಕವನ್ನು ಇತ್ತೀಚೆಗೆ ಗುಬ್ಬಿ ರಂಗಮಂದಿರದಲ್ಲಿ ಅಭಿನಯಿಸಿದ್ದನ್ನು ಕಣ್ಣಾರೆ ಕಂಡೆ. ಆರಂಭ ಸೊಗಸಾಗಿದೆ; ಆದರೆ ಅಂತ್ಯ ಬೇಸರವನ್ನುಂಟುಮಾಡುತ್ತದೆ. ಜೀವಣ್ಣನ ಪಾತ್ರ ಇನ್ನೂ ಸಜೀವವಾಗಬೇಕು. ಮನೆಮನೆಯಲ್ಲಿಯೂ ಕನ್ನಡ ಕಹಳೆ ಊದುವಂತಾಗಬೇಕು. ಪ್ರತಿ ಕನ್ನಡಿಗನೂ ಕನ್ನಡ ಪತ್ರಿಕೆಗಳನ್ನು ತರಿಸುವಂತಾಗಬೇಕು. ಕನ್ನಡದಲ್ಲಿ ಭಾಷಣಗಳಾಗುವಂತೆ ತೋರಿಸಿಕೊಡಬೇಕು. ಭಿಕ್ಷುಕ, ಹೆಂಡ ಕುಡುಕ, ತಮಿಳು ಗೆಳೆಯ—ಮುಂತಾದ ಈ ಪಾತ್ರಗಳಿಂದ ಹೆಚ್ಚಿನ ಪರಿಪೋಷಣೆ ಆಗಿಲ್ಲ. ಇಂಗ್ಲಿಷ್ ವ್ಯಾಮೋಹವುಳ್ಳಂಥ ಹಳೆಯ ಕಾಲದ ಜಬರದಸ್ತಿ ಅಧಿಕಾರಿಗಳನ್ನು ರಂಗಕ್ಕೆಳೆಯಬಹುದಾಗಿತ್ತು. ಈ ನಾಟಕವನ್ನು ಮತ್ತಷ್ಟು ಸ್ವಾರಸ್ಯಪೂರ್ಣವಾಗಿ ಮಾಡಲು ಸಾಧ್ಯವಿದೆ. ಕೇವಲ ಭಾವೋದ್ರೇಕವೊಂದೇ ನಾಟಕದ ಗುರಿಯಾಗಬಾರದು. ಶೈಲಿ, ಭಾಷೆ, ಸಂಭಾಷಣೆ ಚೆನ್ನಾಗಿದೆ. ಲೇಖಕರಿಗೆ ಉಜ್ವಲ ಭವಿಷ್ಯವಿದೆ. ಇವರಿಂದ ಇಂತಹ ಹಲವಾರು ನಾಟಕಗಳು ಹೊರಬೀಳಲಿ; ಕನ್ನಡನಾಡು-ನುಡಿಗೆ ಇವರಿಂದ ಹೆಚ್ಚು ಸೇವೆ ಸಲ್ಲಲೆಂದು ಹಾರೈಸುತ್ತೇನೆ.

— ಬ. ನ. ಸುಂ.

**ಪಂಪಾ ಮಾಹಾತ್ಮ್ಯ**: ಲೇ: ವಿಷ್ಣುತೀರ್ಥ, ನವವೃಂದಾವನ, ಆನೆಗೊಂದಿ (ಗಂಗಾವತಿ ತಾಲ್ಲೂಕು, ರಾಯಚೂರು ಜಿಲ್ಲೆ) ಆಕಾರ ಡೆ ೧/೮, ಪುಟಗಳು ೩೫೬. ಬೆಲೆ ರೂ ೪.

ಕೆಲವು ವರ್ಷಗಳಿಂದ ನವವೃಂದಾವನದಲ್ಲಿ ನೆಲೆಸಿರುವ ಶ್ರೀ ವಿಷ್ಣುತೀರ್ಥರು ತುಂಬಾ ಶ್ರಮ ವಹಿಸಿ ಈ ಗ್ರಂಥವನ್ನು ರಚಿಸಿ, ಕನ್ನಡಿಗರಿಗೆ ಉಪಕಾರಮಾಡಿದ್ದಾರೆ. ಎಲ್ಲ ಬಗೆಯಿಂದಲೂ ಗ್ರಾಹ್ಯವಾಗಿರುವ ಈ ಗ್ರಂಥದ ವಿಚಾರಗಳು ಕೇವಲ ಇತಿಹಾಸಪ್ರಿಯರಿಗೆ ಮಾತ್ರವಲ್ಲ, ಅಧ್ಯಾತ್ಮಭಾವನಾಪ್ರಿಯರಿಗೂ ಉಪಯುಕ್ತವಾಗಿವೆ. ಅಷ್ಟೇ ಅಲ್ಲ, ಉತ್ಸಾಹ ಪ್ರಚೋದಕವಾಗಿಯೂ ಇದೆ. 'ಸ್ಕಾಂದ ಪುರಾಣದ ಹೇಮಕೂಟ ಖಂಡ ಪ್ರೋಕ್ತವಾದ ಸಪ್ತರ್ಷಿಯಾತ್ರಾ ಪ್ರಕಾಶಿಕಾ' ಎಂಬುದರ ಶ್ಲೋಕಗಳನ್ನು ಎತ್ತಿ ಅವಕ್ಕೆ ಕನ್ನಡ ಅರ್ಥ ಮತ್ತು ತಾತ್ಪರ್ಯವನ್ನೂ ಬರೆದಿದ್ದಾರೆ. ಓದುಗರಲ್ಲಿ ಭಕ್ತಿ ಶ್ರದ್ಧೆ ಆಸಕ್ತಿಯನ್ನು ಕೆರಳಿಸುವುದರಲ್ಲಿ ಇದು ಸಹಾಯಕವಾಗಿದೆ. ಹಂಪೆ ಪುರೋಣೋಕ್ತವಾದ ದಿವ್ಯ ಕ್ಷೇತ್ರವೆಂಬುದಕ್ಕೆ ಈ ಗ್ರಂಥದಲ್ಲಿ ಕಾಣಬರುವ ವಿವರಗಳು ಸ್ಪಷ್ಟ ನಿದರ್ಶನ. ಈ ಕ್ಷೇತ್ರದಲ್ಲಿರುವ ತೀರ್ಥಗಳು, ಬೆಟ್ಟಗಳು, ದೇವಮಂದಿರಗಳು ಇವುಗಳ ಮಹಿಮೆಯನ್ನು ಹಿನ್ನೆಲೆಯನ್ನು ಸವಿಸ್ತಾರವಾಗಿ ಲೇಖಕರು ತಿಳಿಸಿದ್ದಾರೆ. ಒಟ್ಟಿನಲ್ಲಿ

ಪುರಾಣಯುಗದ ಈ ಪವಿತ್ರ ಕ್ಷೇತ್ರದ ಮಹಿಮೆಯಿಂದ ಆಸ್ತಿಕರೆಲ್ಲರಿಗೂ ಪರಮಾತ್ಮನ ಲೀಲೆಯ ವಿರಾಟ್‌ಸ್ವರೂಪದ ಪರಿಚಯವಾಗದಿರದು.

ಇನ್ನು ಆಧುನಿಕ ಯುಗದ ಇತಿಹಾಸ. ವಿಜಯನಗರದ ಸಾಮ್ರಾಜ್ಯ ಸ್ಥಾಪನೆ, ಅದರ ಉಚ್ಛ್ರಾಯ ಸ್ಥಿತಿ, ಕೊನೆಗೆ ಅವನತಿ ಇವು ಹೊಸ ಹಂಪೆಯ ಕತೆ. ಇದರ ಪರಿಚಯ ಯಾರಿಗಿಲ್ಲ? ಪುರಾಣ ಪ್ರಸಿದ್ಧತೆಗೆ ಮಾತ್ರ ಗಮನವಿಡದೆ ಆಧುನಿಕ ಸ್ಥಿತಿಗತಿಯ ಕಡೆಗೂ ಲೇಖಕರು ಗಮನವಿಟ್ಟು, ಸಂಗ್ರಹವಾಗಿ ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನು ಹೃದಯಂಗಮವಾಗಿ ತಿಳಿಸಿ, ಓದುಗರಲ್ಲಿ ಗತ ವೈಭವದ ಸ್ಮರಣೆಯಾಗುವಂತೆ ಮಾಡಿದ್ದಾರೆ. "ಮಾನವನು ಎಷ್ಟೇ ಸಾಹಸಪಟ್ಟು ಎಂಥ ಅದ್ಭುತ ಕಾರ್ಯಗಳನ್ನೇ ಎಸಗಿದರೂ ಅವೆಲ್ಲವೂ ಕ್ಷಣಿಕವೆಂಬುದು ಒಂದರಿಂದ ತಿಳಿದುಬಂದರೆ ವಿಶ್ವ ಶಿಲ್ಪಿಯ ಅನಂತ ಅಪಾರ ವೈಭವದ ಅರಿವೂ ಜೊತೆ ಯಲ್ಲಿಯೇ ಆಗುವುದು" ಎಂದು ಲೇಖಕರು ಆಡಿರುವ ಮಾತು ಸತ್ಯ ಮಾತಾಗಿದೆ. ವಿಶ್ವ ಶಿಲ್ಪಿಯ ಶಕ್ತಿಯ ಮತ್ತು ಪ್ರಭಾವವನ್ನು ಅರಿತುಕೊಳ್ಳುವ ಚೈತನ್ಯವಿಲ್ಲದ ಜನರು ತಾತ್ಕಾಲಿಕವಾದುದೇ ಶಾಶ್ವತ ಎಂದು ಭಾವಿಸುವುದರಲ್ಲಿ ಮಿಥ್ಯವೆಷ್ಟಿದೆ ಎಂಬುದು ಮೇಲಿನ ವಾಕ್ಯದಿಂದ ಅರ್ಥವಾಗುತ್ತದೆ.

ಹಂಪೆ ಸ್ಫೂರ್ತಿದಾಯಕವಾದ ಕ್ಷೇತ್ರ. ಇತ್ತೀಚೆಗಂತೂ ಕಲೋಪಾಸಿಗಳೂ, ಇತಿಹಾಸಾಭಿಮಾನಿಗಳೂ, ಸಂಶೋಧನಾಸಕ್ತರೂ ಅಲ್ಲದೆ ಆಧ್ಯಾತ್ಮಿಕ ಭಾವನಾಮಯರೂ ತಂಡತಂಡವಾಗಿ ಇಲ್ಲಿಗೆ ಪ್ರವಾಸಗೊಳ್ಳುತ್ತಿರುವುದು ಗೊತ್ತಾದ ವಿಚಾರ. ಇವರೆಲ್ಲರಿಗೂ ಅನುಕೂಲಿಸುವಂತೆ ಲೇಖಕರು ಹಂಪೆಯ ವಿವಿಧಮುಖ ದರ್ಶನಕ್ಕೆ ಸಾಧಕವಾಗುವಂತೆ ವಿಚಾರ ಪರಂಪರೆಗಳನ್ನು ಒದಗಿಸಿದ್ದಾರೆ. ಮಾರ್ಗದರ್ಶನ ತೋರಿದ್ದಾರೆ. ಹಲವಾರು ಚಿತ್ರಗಳನ್ನು ಕೊಟ್ಟಿದ್ದಾರೆ. ರಚನೆಯ ಶೈಲಿ, ವೈಖರಿ ಪಂಡಿತರಿಗೂ ಪಾಮರರಿಗೂ ಚೆನ್ನಾಗಿ ಅರ್ಥವಾಗುವಂತೆ ಸುಲಭವಾಗಿ, ಸುಗಮವಾಗಿ ಸಾಗಿದೆ. ಪುರಂದರದಾಸರ ನಾಲ್ಕನೇ ಶತಮಾನೋತ್ಸವದ ಸಮಯದಲ್ಲೇ ಲೇಖಕರು ಈ ಗ್ರಂಥವನ್ನು ಪ್ರಕಟಿಸಿರುವುದು ವಿಶೇಷದ ಸಂಗತಿ. ಕನ್ನಡಿಗರು ಓದಲೇ ಬೇಕಾದ ಗ್ರಂಥವಿದೆಂದು ಹೇಳಬಯಸುತ್ತೇನೆ.

—ಕೆ. ಜೀವಣ್ಣರಾವ್

---

# ಶ್ರೀ ಪುರಂದರದಾಸರ ನಾಲ್ಕನೇ ಶತಮಾನೋತ್ಸವ

## ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಾಲ್ಕು ದಿನಗಳ ಆಚರಣೆ

ಬೆಂಗಳೂರು: ಪುರಂದರದಾಸರ ನಾಲ್ಕನೆಯ ಶತಮಾನೋತ್ಸವವನ್ನು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಜ. ೨೯ರಿಂದ ನಾಲ್ಕು ದಿವಸಗಳವರೆಗೆ ವೈಭವದಿಂದ ಆಚರಿಸಲಾಯಿತು. ಪ್ರಾಜ್ಞರಿಂದ ಉಪನ್ಯಾಸಗಳು, ಪುರಂದರದಾಸರ ಕೀರ್ತನೆಗಳ ಹಾಡಿಕೆ, ಸಂಗೀತ ಕಲಾವಿದರಿಗೆ ಪ್ರಶಸ್ತಿ, ಇತ್ಯಾದಿ ಕಾರ್ಯಕ್ರಮಗಳು ನಡೆದವು. ಈ ಉತ್ಸವವನ್ನು ಮೈಸೂರು ಪ್ರಧಾನ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿಗಳೂ ಪರಿಷತ್ತಿನ ಕಟ್ಟ ಅಭಿಮಾನಿಗಳೂ ಆದ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಆರಂಭ ಮಾಡಿದರು.

ಮೊದಲನೆಯ ದಿನದ ಕಲಾಪ ಜ. ೨೯ರಂದು ಸಂಜೆ ಕೃಷ್ಣರಾಜ ಪರಿಷನ್ಮಂದಿರದಲ್ಲಿ ನಡೆಯಿತು. ಇದಕ್ಕೆ ಕನ್ನಡ-ಕನ್ನಡ ನಿಘಂಟು ಸಂಪಾದಕ ಮಂಡಲಿಯ ಅಧ್ಯಕ್ಷರಾದ ಶ್ರೀ ತೀ. ನಂ. ಶ್ರೀಕಂಠಯ್ಯನವರು ಅಧ್ಯಕ್ಷರಾಗಿದ್ದು ಕಾರ್ಯ ನಡೆಸಿದರು. ಇಂದು ಜ|| ಕಾರಿಯಪ್ಪನವರು ಆಗಮಿಸಿ ಕಾರ್ಯಕಲಾಪದಲ್ಲಿ ಭಾಗವಹಿಸಿದುದು ಒಂದು ವಿಶೇಷ.

ಕಾರ್ಯಕ್ರಮ ಕುಮಾರಿ ಬಿ. ಜಿ. ರಮಾ ಮತ್ತು ಕುಮಾರಿ ಲಲಿತಾ ಇವರ ಪ್ರಾರ್ಥನೆಯೊಂದಿಗೆ ಆರಂಭವಾಯಿತು.

ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಸ್ವಾಗತ ಭಾಷಣ ಮಾಡಿದರು.

ತರುವಾಯ ಶ್ರೀ ನಿಟ್ಟೂರು ಶ್ರೀನಿವಾಸರಾಯರು ಉತ್ಸವದ ಉದ್ಘಾಟನೆ ನಡೆಸುತ್ತಾ, ಹೀಗೆ ಹೇಳಿದರು:

### ಶ್ರೀ ನಿಟ್ಟೂರು ಶ್ರೀನಿವಾಸರಾಯರ ಭಾಷಣ

ನನಗೆ ಈ ದಿನ ಈ ಉತ್ಸವದಲ್ಲಿ ಭಾಗವಹಿಸಲು ಅವಕಾಶ ದೊರೆತುದು ಬಹಳ ಸಂತೋಷದ ವಿಷಯ. ಅದಕ್ಕಾಗಿ ನಾನು ಪರಿಷತ್ತಿನ ಅಧ್ಯಕ್ಷರಿಗೂ, ವ್ಯವಸ್ಥಾಪಕರುಗಳಿಗೂ ಅತ್ಯಂತ ಕೃತಜ್ಞನಾಗಿದ್ದೇನೆ.

ಪೂರ್ವ ಜೀವನದಲ್ಲಿ ಪ್ರಸಿದ್ಧ ರತ್ನಪಡಿ ವರ್ತಕನಾಗಿದ್ದು, ಧನಗಳಿಕೆ, ಉದರಂಭರಣ ಇವುಗಳನ್ನೇ ಬಾಳ ಗುರಿ ಎಂದು ತಿಳಿದು "ಇಷ್ಟು ದೊರಕಿದರೆ ಇನ್ನಷ್ಟು ಬೇಕೆಂಬಾಸೆ"ಗೆ ಸಿಲುಕಿದ್ದ ಪರಮ ಲೋಭಿಯೊಬ್ಬನು, ತನ್ನ ಸರ್ವಸ್ವವನ್ನೂ ಭಗವದರ್ಪಣವಾಗುವಂತೆ ತ್ಯಾಗಮಾಡಿ, ಹರಿ ಸೇವೆಗಾಗಿ ತಂಬೂರಿ ಹಿಡಿದು ಹೊರಟನೆಂದರೆ, ತೀವ್ರ ವೈರಾಗ್ಯ ಭಾವವನ್ನು ಕ್ಷಣ ಮಾತ್ರದಲ್ಲಿ ಹುಟ್ಟಿಸುವ ಪರಮಾದ್ಭುತ ಪ್ರಸಂಗವೊಂದು ಆತನ ಜೀವನದಲ್ಲಿ ನಡೆದಿರಲೇಬೇಕೆಂದು ನಂಬಬೇಕಾಗುತ್ತದೆ. ಶ್ರೀನಿವಾಸನಾಯಕರೆಂದು ಪೂರ್ವ ಜೀವನದಲ್ಲಿ ಹೆಸರು ತಾಳಿದ್ದ ಪುರಂದರದಾಸರ ಚರಿತ್ರೆಯ "ಮೂಗುತಿ ಪ್ರಸಂಗ" ದಾಸರಾಯರು ತಮ್ಮ ಜೀವನದಲ್ಲಿ ಹೊಂದಿದ ಪರಿವರ್ತನೆಗೆ ಮುಖ್ಯ ಕಾರಣವಾಗಿರಬಹುದೆಂದು ನಂಬಲು ಬಾಧಕವೇನಿಲ್ಲ.

ತ್ಯಾಗಮೂರ್ತಿಯಾಗಿ ವೈರಾಗ್ಯವನ್ನು ಅಪ್ಪಿದರೂ ಸಂಸಾರಸ್ಥರಾಗಿಯೇ ಇದ್ದು ಅಧ್ಯಾತ್ಮದ ಸಾಧನೆ ಮಾಡಿದವರು ಪುರಂದರದಾಸರು. ಸಿರಿಯನ್ನು ತೊರೆದು, ಬಡತನವನ್ನು ಅಪ್ಪಿ, ಬವಣೆಯಲ್ಲಿ ಬಳಲಿದವರು, ದಾಸರು. ಎಲ್ಲ ಬಗೆಯ ಆಸೆಗಳನ್ನೂ, ಮೋಹಬಂಧಗಳನ್ನೂ ಖಂಡಿಸಿ ಚಿತ್ತಶುದ್ಧಿ ಹೊಂದದ ಹೊರತು, ನಿಜವಾದ ವೈರಾಗ್ಯ ಮೂಡದು; ಭಗವದ್ಭಕ್ತಿ ಮೊಳೆಯದು ಎಂದು ದಾಸರಾಯರು ಮನಗಂಡರು. ಈ ಸಿದ್ಧಿಗಾಗಿ ಸದ್ಗುರುವನ್ನು ಹುಡುಕುತ್ತಾ ಕಡೆಗೆ ಮಹಾಮಹಿಮರಾದ ವ್ಯಾಸರಾಯರ ಶಿಷ್ಯರಾಗಿ, ದಾಸಕೂಟಕ್ಕೆ ಸೇರಿದರು. ಗುರುಗಳು ಶಿಷ್ಯನಿಗೆ "ಪುರಂದರವಿಠಲ" ಎಂಬ ಅಂಕಿತ ಕೊಟ್ಟರು; ಶಿಷ್ಯರು ಪುರಂದರದಾಸರಾದರು.

ದಾಸರು ಗುರುವಿನಿಂದ ಉಪದೇಶ ಪಡೆದು, ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಸಾಧಿಸಿದರು; ವೇದ ಉಪನಿಷತ್ತುಗಳು, ಸ್ಮೃತಿ ಪುರಾಣಗಳ ಸಾರವನ್ನು ಹೀರಿ, ತಮ್ಮ ಜೀವನದಲ್ಲಿ ಅನುಸಂಧಾನ ಮಾಡಿದರು. ಮಧ್ವಮತ ಸಿದ್ಧಾಂತವನ್ನು ಚೆನ್ನಾಗಿ ಗ್ರಹಿಸಿದರು. ಶ್ರೀಹರಿಯ ಧ್ಯಾನ

# ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಪುರಂದರದಾಸರ ಶತಮಾನೋತ್ಸವ



ಶ್ರೀ ಸಿಟ್ಟೂರು ಶ್ರೀನಿವಾಸರಾಯರು
ಶ್ರೀ ಪುರಂದರದಾಸರ ಭಾವಚಿತ್ರವನ್ನು ಅನಾವರಣ
ಮಾಡುತ್ತಿರುವಾಗ ತೆಗೆದ ಚಿತ್ರ.




ಮೊದಲ ದಿವಸ ಅಂದರೆ ಜ. ೨೯ ರಂದು ಉತ್ಸವದ ಅಧ್ಯಕ್ಷರಾಗಿದ್ದ
ಶ್ರೀ ತೀ. ನಂ. ಶ್ರೀಕಂಠಯ್ಯನವರು ಮಾತನಾಡುತ್ತಿದ್ದಾರೆ.



ಮೊದಲನೇ ದಿನದಂದು ಉತ್ಸವದಲ್ಲಿ ಭಾಗವಹಿಸಿದ್ದ
ಜ॥ ಕಾರಿಯಪ್ಪನವರು ಮಾತನಾಡುತ್ತಿರುವುದು.



## ಎರಡನೇ ದಿನದ ಚಿತ್ರ




ಎರಡನೇ ದಿನದಂದು (ಜ. ೩೦) ಉತ್ಸವದ ಅಧ್ಯಕ್ಷರಾಗಿದ್ದ
ಶ್ರೀ ಡಿ. ಎಲ್. ನರಸಿಂಹಾಚಾರ್ಯರು ಮಾತನಾಡುತ್ತಿದ್ದಾರೆ.

ದಲ್ಲಿ ವೈಮರೆತು ಹರಿಭಕ್ತ ಶಿರೋಮಣಿಗಳಾದರು. ಪರಮಾತ್ಮನ ಸಾಕ್ಷಾತ್ಕಾರ ಹೊಂದಿದ ದಾಸರಾಯರು ತಮ್ಮ ಧ್ಯೇಯ ಸಾಧನೆಯಿಂದಲೇ ಕೃತಕೃತ್ಯರೆಂದು ಭಾವಿಸಲಿಲ್ಲ. ದಾಸಕೂಟದ ಪ್ರಮುಖ ಪ್ರಚಾರಕರಾದ ದಾಸರಾಯರು ದ್ವೈತದರ್ಶನವನ್ನೂ ವೇದ ಉಪನಿಷತ್ತುಗಳ ಸಾರವನ್ನೂ ತಮ್ಮ ಸಾಧನಾ ಫಲವಾದ ಅನುಭವಾಮೃತವನ್ನೂ ಜನಸಾಮಾನ್ಯದಲ್ಲಿ ಪ್ರಚಾರಮಾಡಿದರು. ಔಷಧವನ್ನು ಜೇನಿನ ಅನುಪಾನದಲ್ಲಿ ಕೊಟ್ಟರೆ ರೋಗಿಗೆ ಪ್ರಿಯವೂ ಹಿತಕರವೂ ಆಗುವಂತೆ, ತಮ್ಮ ಬೋಧೆಯನ್ನು ಸಂಗೀತ ಸುಧಾರಸದಲ್ಲಿ ಬೆರಸಿ, ಅಸಂಖ್ಯಾತ ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ರಚಿಸಿ, ಜನಸಾಮಾನ್ಯರಲ್ಲಿ ಜ್ಞಾನಭಕ್ತಿಗಳನ್ನು ಪ್ರಸಾರಮಾಡಿದರು. ಇದಕ್ಕಾಗಿ, ಸಾಧನವನ್ನಾಗಿ ಇಟ್ಟುಕೊಂಡ ಸಂಗೀತ ಕಲೆಯ ಅಭ್ಯಾಸ ಕ್ರಮವನ್ನೇ ಸಶಾಸ್ತ್ರೀಯವಾಗಿರುವಂತೆ ರೂಪಿಸಿ, ಸುಧಾರಿಸಿ, ಶಾಸ್ತ್ರೀಯ ಸಂಗೀತಾಭ್ಯಾಸದ ಬುನಾದಿ ನಿರ್ಮಿಸಿ, ದಕ್ಷಿಣಾದಿ ಸಂಗೀತಕ್ಕೆ "ಕರ್ನಾಟಕ ಸಂಗೀತ"ವೆಂದು ಹೆಸರು ಸಲ್ಲಲು ಕಾರಣರಾದರು. ಗಾನರಸದಲ್ಲಿ ಬೆರೆತ ದಾಸರಾಯರ ಬೋಧೆಯಿಂದ ನಾಡಜನತೆಯ ಬದುಕು ಹಸನಾಯಿತು. ನಯವಾಯಿತು, ಮಧುರವಾಯಿತು. ದಾಸರಾಯರ ಬೋಧೆಯ ಪ್ರಭಾವದಿಂದ ನಾಡಿನ ಒಟ್ಟು ಸಂಸ್ಕೃತಿಯೇ ರೂಪ ತಾಳಿತು.

ವೇದ ಉಪನಿಷತ್ತುಗಳ ಸಾರ ಎಳ್ಳಷ್ಟೂ ಪರಭಾಷೆಯಲ್ಲಿ ಪ್ರಚಾರವಾಗಬಾರದೆಂಬ ಧೃಢ ಮೂಢಮಂತಿಕೆ ಇದ್ದ ಕಾಲದಲ್ಲಿ, ದಾಸರಾಯರು, ಈ ಸಂಕಲ್ಪಕ್ಕೆ ಎದುರು ನಿಂದು, ಜನಸಾಮಾನ್ಯಕ್ಕೆ ವೇದ ಉಪನಿಷತ್ತುಗಳ ಸಾರಸಂಗ್ರಹವನ್ನು ಸರ್ವಗ್ರಾಹ್ಯವಾದ ಸರಳ ತಿಳಿಗನ್ನಡ ಭಾಷೆಯ ಕೀರ್ತನೆಗಳ ರೂಪದಲ್ಲಿ ಹಂಚಿದರು. ಆತ್ಮವಿಕಾಸಮಾಡಿ ಜೀವನವನ್ನು ಹಸನುಮಾಡುವ ಬರವಣಿಗೆ ಸಾಹಿತ್ಯವೆಂದು ಒಪ್ಪಿಗೆಯಾದರೆ ದಾಸರಾಯರ ಕೃತಿಗಳು, ಕನ್ನಡ ಭಾಷೆಯಲ್ಲಿ ಶ್ರೇಷ್ಠ ಸಾಹಿತ್ಯವೆನ್ನಲು ಅಡ್ಡಿಯೇ ಇಲ್ಲ.

ದಾಸರಾಯರ ಬೋಧೆ ಬಹುಮುಖ, ಬಹುವ್ಯಾಪಕ, ಬಹುಶ್ರುತ : ಸಂದರ್ಭಕ್ಕೆ ತಕ್ಕಂತೆ ಮಧುರವೂ ಕಠೋರವೂ ಆಗಿದೆ. ವಿಷಯಲಂಪಟರಾದವರಿಗೆ ಭಗವದ್ಭಕ್ತಿ ಮೂಡಿಸಿ, ಜ್ಞಾನಿಗಳನ್ನಾಗಿಸುವ ಸದುದ್ದೇಶದಿಂದ ವೈರಾಗ್ಯ ಬೋಧೆ ಮಾಡಿದ್ದಾರೆಯೇ ಹೊರತು, ವೈರಾಗ್ಯಕ್ಕೇ ತಮ್ಮ ಕೃತಿಗಳಲ್ಲಿ ಪ್ರಾಶಸ್ತ್ಯ ಕೊಟ್ಟಿಲ್ಲ. "ಮಾನವ ಜನ್ಮ ದೊಡ್ಡದು" "ಸಂಸಾರವೆಂಬಂಥ ಭಾಗ್ಯವಿರಲಿ", "ಕಂಸಾರಿನೆನೆವೆಂಬ ಸೌಭಾಗ್ಯವಿರಲಿ", "ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆವಂತೆ" "ಆಸೆ ಲೇಶ ಮಾಡದಂತೆ", ಈಸಬೇಕು, ಇದ್ದು ಜೈಸಬೇಕು" ಎಂಬ ಧೀರ ಸಂದೇಶವಿತ್ತು, ಸಂಸಾರ ಸಾಗರವನ್ನು ದಾಟಿಸುವ ತಾರಕ ಮಂತ್ರೋಪದೇಶಮಾಡಿದ ಧೀರೋದಾತ್ತ ಮಹಾನುಭಾವರು, ಪುರಂದರದಾಸರು. ನಾಲ್ಕು ನೂರು ವರ್ಷಗಳ ಹಿಂದೆಯೇ "ಹೊಲೆಯ ಹೊರಗಿಹನೆ ಊರೊಳಗಿಲ್ಲವೇ" ಎಂದು ಹಾಡಿದ ದಾಸರಾಯರಿಗೆ ಜಾತಿಕುಲಗಳ ಸಂಕುಚಿತ ಭಾವನೆಯೇ ಇರಲಿಲ್ಲ. ಅಭೂತಪೂರ್ವವಾದ ಅವರ "ಧರ್ಮವೇ ಜಯವೆಂಬ ದಿವ್ಯಮಂತ್ರ" ಎಂಬ ರಚನೆ, ದಾಸರಾಯರ ಆತ್ಮದ ಉನ್ನತಿ, ಹೃದಯ ವೈಶಾಲ್ಯ, ಬುದ್ಧಿ ವೈಶಾಲ್ಯಗಳಿಗೆ ಸುಸ್ಪಷ್ಟ ಸಾಕ್ಷಿಯಾಗಿದೆ. ಸತ್ಯದರ್ಶನ ಮಾಡುವ ಅವರ ಕೃತಿಗಳು ಜನತೆಗೆ ಸನ್ಮಾರ್ಗದರ್ಶಕವಾಗಿವೆ.

ಈ ಎರಡು ಮಾತು ಹೇಳಿ ನಾನು ಅತ್ಯಂತ ಸಂತೋಷದಿಂದ ಶ್ರೀ ಪುರಂದರದಾಸರ ಭಾವಚಿತ್ರವನ್ನು ಅನಾವರಣ ಮಾಡುತ್ತೇನೆ ಮತ್ತು ಈ ಸಮಾರಂಭವನ್ನು ಉದ್ಘಾಟಿಸುತ್ತೇನೆ.

ಶ್ರೀ ಶ್ರೀನಿವಾಸರಾಯರು ಉದ್ಘಾಟನಾ ಭಾಷಣ ಮಾಡಿ ಶ್ರೀ ಪುರಂದರದಾಸರ ಭಾವಚಿತ್ರ ಅನಾವರಣ ಮಾಡಿದರು.

ತರುವಾಯ ಕುಮಾರಿ ಸಿ. ಕೆ. ಪದ್ಮಾ ಅವರು ಪುರಂದರದಾಸರ ಹಾಡುಗಳನ್ನು ಇಂಪಾಗಿ ಹಾಡಿದರು.

ಇದೇ ಸಂದರ್ಭದಲ್ಲಿ, ಸಂಗೀತ ಕಲೆಗೆ ಅಮೂಲ್ಯ ಸೇವೆ ಸಲ್ಲಿಸುತ್ತಿರುವ ನಾಡಿನ ಇಬ್ಬರು ಕಲಾವಿದರಾದ ಪಿಟೀಲು ವಿದ್ವಾನ್ ಶ್ರೀ ಎಚ್. ಕೆ. ಅಶ್ವತ್ಥನಾರಾಯಣ ಶಾಸ್ತ್ರಿಯವರಿಗೆ 'ಸಂಗೀತ ವಿಶಾರದಾ' ಮತ್ತು ಮೃದಂಗ ವಿದ್ವಾನ್ ಶ್ರೀ ಕೆ. ಮಧುಸೂಧನರಾಯರಿಗೆ 'ಮೃದಂಗ ವಿದ್ಯಾ ವಿಶಾರದ' ಎಂಬ ಪ್ರಶಸ್ತಿಗಳನ್ನು ಶಾಲುಜೋಡಿಗಳ ಸಹಿತ ಜ|| ಕಾರಿಯಪ್ಪನವರ ಹಸ್ತದಿಂದ ಕೊಡಿಸಲಾಯಿತು.

ಜ|| ಶ್ರೀ ಕಾರಿಯಪ್ಪನವರು ಮಾತನಾಡುತ್ತ, ನಮ್ಮ ಶಾಲಾ ಮಕ್ಕಳಿಗೆ ಪುರಂದರದಾಸರ ಬಗ್ಗೆ ಹೆಚ್ಚು ತಿಳುವಳಿಕೆ ನೀಡಬೇಕೆಂದು ಹೇಳಿ, ಈ ದಿಶೆಯಲ್ಲಿ ಹೆಚ್ಚು ಉಪಯುಕ್ತವಾಗಬಲ್ಲ ಕಿರುಹೊತ್ತಗೆಗಳನ್ನು ಸಾಹಿತ್ಯ ಪರಿಷತ್ತು ಪ್ರಕಟಿಸಬೇಕೆಂದು ಸೂಚಿಸಿದರು.

ಶ್ರೀ ಪುರಂದರದಾಸರ ಜೀವನ ಹಾಗೂ ಸಾಧನೆಗಳ ಬಗ್ಗೆ, ಸತ್ಯಶೋಧನೆ ಹಾಗೂ ಅವರ ವಚನಗಳ ಪಾಠಾಂತರದ ಕಡೆ ಹೆಚ್ಚು ಗಮನ ಕೊಡಬೇಕೆಂದು ತಿಳಿಸಿದರು.

ವಂದನಾರ್ಪಣೆಯೊಡನೆ ಇಂದಿನ ಕಾರ್ಯಕ್ರಮ ಮುಕ್ತಾಯವಾಯಿತು.

## ಎರಡನೇ ದಿನದ ಕಲಾಪ

ಎರಡನೇ ದಿವಸದ ಕಾರ್ಯಕಲಾಪ (ಜ. ೩೦) ಶ್ರೀ ಡಿ. ಎಲ್. ನರಸಿಂಹಾಚಾರ್ಯರ ಅಧ್ಯಕ್ಷತೆಯಲ್ಲಿ ನಡೆಯಿತು. ಪ್ರಾರ್ಥನೆಯಾದ ನಂತರ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಸ್ವಾಗತ ಭಾಷಣ ಮಾಡಿ ಅಂದಿನ ಸಮಾರಂಭದ ಅಧ್ಯಕ್ಷರ ಗುಣ ಪ್ರಶಂಸೆ ಮಾಡಿದರು.

ಇದಕ್ಕೆ ಮೊದಲು ಪುರಂದರದಾಸರ ಕೃತಿ 'ದ್ರೌಪತಿಯ ಮಾನರಕ್ಷಣೆ'ಯ ಕಾವ್ಯವಾಚನವನ್ನು ಶ್ರೀಮತಿ ಕಮಲಾ ರಾಮಕೃಷ್ಣ ಅವರು ಮಾಡಿದರು.

ವಿದ್ವಾನ್ ಎಚ್. ಎಂ. ರಾಮಚಂದ್ರಪ್ಪ, ಪಾಲ್ಕುರಿಕೆ ಇವರ ಸಂಗೀತ ಕಚೇರಿ, ಅಧ್ಯಕ್ಷರ ಭಾಷಣ ಇತ್ಯಾದಿ ಕಾರ್ಯಗಳೊಡನೆ ಇಂದಿನ ಕಲಾಪ ಮುಗಿಯಿತು.

## ಮೂರನೇ ದಿನದ ಕಲಾಪ

ಜ. ೩೧ ರಂದು ಸಂಜೆ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ಸಭಾಂಗಣದಲ್ಲಿ ಮೂರನೇ ದಿನದ ಕಲಾಪಗಳು ನಡೆದವು. ೪೪ ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಶ್ರೀ ರಂ. ಶ್ರೀ. ಮುಗಳಿ ಅವರು ಅಧ್ಯಕ್ಷತೆ ವಹಿಸಿ ಶ್ರೀ ಪುರಂದರದಾಸರ ಸಾಹಿತ್ಯ ಮತ್ತು ಅವರ ಅಧ್ಯಾತ್ಮಿಕ ಭಾವನಾಪ್ರಸಾರ ಕುರಿತು ಹೃದಯಂಗಮವಾಗಿ ಮಾತನಾಡಿದರು.

ಸಂಗೀತವಿದುಷಿ ಶ್ರೀಮತಿ ಎಂ. ಜಿ. ಸುಲೋಚನಾ ಅವರ ಸಂಗೀತ, ಶ್ರೀಮತಿ ಸುಶೀಲಾ ದೇಶಿಕನ್ ಅವರ ಪಿಟೀಲು ವಾದನ ಮತ್ತು ಶ್ರೀಮತಿ ಎಂ. ಜಿ. ಸರೋಜಾ ಅವರ ಮೃದಂಗ ವಾದನ ನಡೆಯಿತು. ವಂದನಾರ್ಪಣ ಮತ್ತು ರಾಷ್ಟ್ರಗೀತೆಯೊಡನೆ ಈ ದಿನದ ಕಲಾಪ ಕೊನೆಗೊಂಡಿತು.

## ನಾಲ್ಕನೇ ದಿನದ ಕಲಾಪ

ಸಾಹಿತ್ಯ ಪರಿಷತ್ತು ಆಚರಿಸಿದ ಪುರಂದರದಾಸರ ನಾಲ್ಕನೆಯ ಶತಮಾನೋತ್ಸವದ ಕಡೆಯ ದಿನವಾದ ಇಂದು (ಫೆ. ೧) ಕರ್ನಾಟಕ ಏಕೀಕರಣಕ್ಕಾಗಿ ಸತತವಾಗಿ ಶ್ರಮಿಸಿದ ದಿವಂಗತ ಬಾಗಲಕೋಟೆಯ ಮುರುಗಯ್ಯ ಸ್ವಾಮಿ ಜಂಗಿನ ಇವರ ಭಾವಚಿತ್ರ ಅನಾವರಣ ಮತ್ತು ಅವರ ಸಂಗಡಿಗರಾದ ಶ್ರೀ ಮಂಗಳವೇಡೆ ಶ್ರೀನಿವಾಸ ರಾಯರಿಂದ ಭಾಷಣ ಇತ್ಯಾದಿ ಕಾರ್ಯಕ್ರಮಗಳು ನಡೆದವು. ವಿದ್ಯಾಮಂತ್ರಿಗಳಾದ ಶ್ರೀ ಎಸ್. ಆರ್. ಕಂಠಿಯವರು ಮುರುಗಯ್ಯ ಸ್ವಾಮಿ ಅವರ ಭಾವಚಿತ್ರ ಅನಾವರಣ ಮಾಡಿ, ಅವರ ಸೇವೆ, ತ್ಯಾಗ ಮುಂತಾದವನ್ನು ಸ್ಮರಿಸಿದರು.

ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಈ ಸಭೆಯ ಅಧ್ಯಕ್ಷತೆ ವಹಿಸಿದ್ದರು. ಗೌರವ ಕಾರ್ಯದರ್ಶಿಗಳಲ್ಲೊಬ್ಬರಾದ ಡಾ|| ಕೆ. ಎಂ. ಕೃಷ್ಣರಾಯರು ಸ್ವಾಗತ ಭಾಷಣ ಮಾಡಿದರು. ಇದಕ್ಕೆ ಮೊದಲು ಕುಮಾರಿ ಬಿ. ಜಿ. ರಮಾ ಮತ್ತು ಕುಮಾರಿ ಲಲಿತ ಇವರಿಂದ ಪ್ರಾರ್ಥನೆಯಾಯಿತು.

ಸಂಗೀತ ವಿದ್ವಾಂಸರುಗಳಾದ ಶ್ರೀ ಎಚ್. ಎನ್. ರಾಮಚಂದ್ರಪ್ಪ, ಶ್ರೀ ಎಚ್. ಕೆ. ಅಶ್ವತ್ಥನಾರಾಯಣ ಶಾಸ್ತ್ರಿಗಳು ಮತ್ತು ಶ್ರೀ ಕೆ. ಮಧುಸೂಧನರಾವ್ ಇವರಿಗೂ, ಶ್ರೀ ಹಂಡೆ ಗುರುವೇದವ್ಯಾಸ ದಾಸರಿಗೂ ಪ್ರಶಸ್ತಿಗಳನ್ನು ಶ್ರೀ ಕಂಠಿಯವರ ಹಸ್ತದಿಂದ ಕೊಡಿಸಲಾಯಿತು.

ತರುವಾಯ ಶ್ರೀ ಹಂಡೆ ಗುರುವೇದವ್ಯಾಸ ದಾಸರು ಕೀರ್ತನೆ ಮಾಡಿದರು.

ಶ್ರೀ ಕೆ. ಗೋಪಾಲಕೃಷ್ಣರಾಯರು ಶ್ರೀ ಪುರಂದರ ದಾಸರ ಬಗ್ಗೆ ಭಾಷಣ ಮಾಡಿದರು.

ಅಧ್ಯಕ್ಷರ ಭಾಷಣ, ವಂದನಾರ್ಪಣ ತರುವಾಯ ನಾಲ್ಕು ದಿನಗಳ ಉತ್ಸವದ ಕಾರ್ಯಕ್ರಮ ಇಂದು ಸಮಾಪ್ತಿಗೊಂಡಿತು.

---

# ಕನ್ನಡ ಸಾಹಿತ್ಯ ಪರೀಕ್ಷೆಗಳು—೧೯೬೪

## ತಿಳುವಳಿಕೆ

೧೯೬೪ ನೇ ಸಾಲಿನ ಕನ್ನಡ ಸಾಹಿತ್ಯ ಪರೀಕ್ಷೆಗಳು ಇದೇ ಫೆಬ್ರುವರಿ ೨೨ನೇ ಶನಿವಾರ ಮತ್ತು ೨೩ನೇ ಭಾನುವಾರಗಳಲ್ಲಿ ನಡೆಯಬೇಕಾಗಿತ್ತು.

ಆದರೆ ಅವೇ ದಿನಗಳಲ್ಲಿ ಹಿಂದೀ ಪರೀಕ್ಷೆಗಳು ನಡೆಯುತ್ತದೆಯೆಂದು ತಿಳಿದುಬಂದಿದೆ. ಅನೇಕ ವಿದ್ಯಾರ್ಥಿಗಳು ಈ ಎರಡು ಪರೀಕ್ಷೆಗಳಿಗೂ ಕೂತಿರುವುದರಿಂದ ಸಾ. ಪರೀಕ್ಷೆಗಳು ೨೨ ಮತ್ತು ೨೩ನೇ ತಾರೀಖುಗಳಲ್ಲಿ ನಡೆಸಲು ಸಾಧ್ಯವಿಲ್ಲ. ಆದುದರಿಂದ ಇದೇ ಫೆಬ್ರುವರಿ ೨೯ನೇ ಶನಿವಾರ ಮತ್ತು ಮಾರ್ಚಿ ೧ನೇ ಭಾನುವಾರಕ್ಕೆ ಮುಂದುವರಿಸಲಾಗಿದೆಎಂದು ಈಮೂಲಕ ತಿಳಿಸಲಾಗಿದೆ.

ಕೆ. ಎಂ. ಕೃಷ್ಣರಾವ್
ಎಸ್. ಶಂಕರಪ್ಪ
ಗೌರವ ಕಾರ್ಯದರ್ಶಿಗಳು

# ಕನ್ನಡದ ಸುದ್ದಿಗಳು

**ಬೆಂಗಳೂರು**

ಕನ್ನಡದಲ್ಲಿ ಇದುವರೆಗೆ ಪ್ರಕಟವಾಗಿರುವ ಶ್ರೇಷ್ಠ ಗ್ರಂಥಗಳನ್ನು ಅಮೆರಿಕಾದ ಪುಸ್ತಕ ಭಂಡಾರಗಳಿಗೆ ಕೊಳ್ಳುವ ಸಲುವಾಗಿ ವಾಷಿಂಗ್‌ಟನ್ ಕೇಂದ್ರ ವಾಚನಾಲಯದ ಮುಖ್ಯಾಧಿಕಾರಿಗಳು ಬೆಂಗಳೂರಿಗೆ ಬಂದಿದ್ದು ನಗರದ ಹಲವು ಪ್ರಕಾಶಕರನ್ನೂ ಮತ್ತು ಲೇಖಕರನ್ನೂ ಭೇಟಿ ಮಾಡಿದ್ದರು.

ಫೆ. ೬ ರಂದು ಶಿವಾಜಿ ನಗರದ ಕಾರ್ಪೊರೇಷನ್ ಪ್ರೌಢ ಶಾಲೆಯ ಕನ್ನಡ ಸಂಘದ ಸಮಾರಂಭದ ಅಧ್ಯಕ್ಷತೆ ವಹಿಸಿ, 'ಕನ್ನಡೇತರರು ಕನ್ನಡವನ್ನು ಗೌರವದಿಂದ ಕಾಣಬೇಕಲ್ಲದೆ ಜೀವನ ನಡೆಸುತ್ತಿರುವ ಪ್ರಾಂತ್ಯದ ಭಾಷೆಯನ್ನು ಕಲಿಯಬೇಕಾದುದು ಆಗತ್ಯ' ಎಂದು ಮೇಯರ್ ಶ್ರೀ ಜಿ. ನಾರಾಯಣ್ ಅವರು ತಿಳಿಸಿದರು.

**ಚಿತ್ರದುರ್ಗ**

ಸ್ಥಳೀಯ ಪ್ರಥಮ ದರ್ಜೆ ಕಾಲೇಜು ಸಂಘದ ಆಶ್ರಯದಲ್ಲಿ ಮಹಾಕವಿ ಕುವೆಂಪು ಸಾಹಿತ್ಯೋತ್ಸವವನ್ನು ಫೆ. ೭ ಮತ್ತು ೮ ರಂದು ಆಚರಿಸಲಾಯಿತು. ತುಮಕೂರು ಪ್ರಥಮ ದರ್ಜೆ ಕಾಲೇಜಿನ ಕನ್ನಡ ಅಧ್ಯಾಪಕರಾದ ಶ್ರೀ ಎಸ್. ಪ್ರಹ್ಲಾದರಾವ್ ಅವರು ಈ ಉತ್ಸವದ ಉದ್ಘಾಟನೆಯನ್ನು ೭ ರಂದು ನೆರವೇರಿಸಿದರು. ಅಂದು ಶ್ರೀ ಓ. ಎಸ್. ಲಿಂಗಣ್ಣಯ್ಯನವರು ಅಧ್ಯಕ್ಷರಾಗಿದ್ದರು. ೮ ರಂದು ಬಳ್ಳಾರಿಯ ಪ್ರಸಿದ್ಧ ವಕೀಲರಾದ ಶ್ರೀ ಕೋ. ಚನ್ನಬಸಪ್ಪ ಅವರು 'ಶ್ರೀ ರಾಮಾಯಣ ದರ್ಶನಂ – ಒಂದು ಸಮೀಕ್ಷೆ' ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು.

ಇಲ್ಲಿನ ಪ್ರಥಮ ದರ್ಜೆ ಕಾಲೇಜು ಸಂಘದ ಆಶ್ರಯದಲ್ಲಿ ಜನವರಿ ೨೮ ರಂದು ದಿ|| ಕೈಲಾಸಂ ಅವರ ದಿನಾಚರಣೆಯನ್ನಾಚರಿಸಲಾಯಿತು. ಡಾ|| ಪಿ. ಎಸ್. ವೆಂಕಟಸ್ವಾಮಿಯವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಬಿ. ಎಸ್. ರಾಮರಾಯರು, ಶ್ರೀ ಕೈಲಾಸಂ ಅವರು ಕನ್ನಡ ಸಾಹಿತ್ಯಕ್ಕೆ ಮತ್ತು ಕನ್ನಡ ರಂಗಭೂಮಿಗೆ ಸಲ್ಲಿಸಿದ ಸೇವೆ ಕುರಿತು ಭಾಷಣ ಮಾಡಿದರು.

**ಶಿವಮೊಗ್ಗ**

ಶ್ರೀ ಪುರಂದರದಾಸರ ನಾಲ್ಕನೆಯ ಶತಮಾನೋತ್ಸವದ ಸ್ಥಳೀಯ ಸಮಿತಿಯವರು ಫೆ. ೮, ೯ ಮತ್ತು ೧೦ ರ ದಿನಗಳಂದು ಕರ್ನಾಟಕ ಸಂಘದ ಆಶ್ರಯದಲ್ಲಿ ದಾಸರ ಶತಮಾನೋತ್ಸವವನ್ನು ವೈಭವದಿಂದ ಆಚರಿಸಿದರು. ೮ರಂದು ಬೆಂಗಳೂರಿನ ಶ್ರೀ ಕೆ. ಸಂಪದ್ಗಿರಿರಾಯರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಕೆ. ವೆಂಕಟರಾಮಪ್ಪನವರು ಮುಖ್ಯ ಅತಿಥಿಗಳಾಗಿದ್ದರು. ಸಭೆಯ ಅಧ್ಯಕ್ಷರು ಶ್ರೀ ಪುರಂದರದಾಸರ ಭಾವಚಿತ್ರದ ಅನಾವರಣ ಮಾಡಿದರು. ೯ ರಂದು ಸಂಜೆ ಮದ್ರಾಸಿನ ಶ್ರೀಮತಿ ಎಂ. ಎಲ್. ವಸಂತಕುಮಾರಿ ಅವರು ಪುರಂದರದಾಸರ ಕೀರ್ತನೆಗಳನ್ನು ಹಾಡಿದರು. ೧೦ ರಂದು ಸಂಜೆ ಕರ್ನಾಟಕ ಸಂಘ ಭವನದಲ್ಲಿ ರಾಷ್ಟ್ರ ಪ್ರಶಸ್ತಿಯನ್ನು ಪಡೆದ ಗಾನವಿಶಾರದ ಶ್ರೀ ಬಿ. ದೇವೇಂದ್ರಪ್ಪನವರಿಗೆ ಸನ್ಮಾನಿಸಿ ಮಾನಪತ್ರವನ್ನೂ ನಿಧಿಯನ್ನೂ ಅರ್ಪಿಸಲಾಯಿತು. ಜಿಲ್ಲಾಧಿಕಾರಿಗಳಾದ ಶ್ರೀ ಎಸ್. ಸಿದ್ದಯ್ಯನವರು ಅಧ್ಯಕ್ಷರಾಗಿದ್ದರು.

## ಶ್ರೀ ಶೃಂಗೇರಿ ಜಗದ್ಗುರುಗಳಿಂದ ಪರಿಷದಧ್ಯಕ್ಷರಿಗೆ ಅನುಗ್ರಹ

**ಶ್ರೀಕ್ಷೇತ್ರ ಶೃಂಗೇರಿ ಶಾರದಾಪೀಠದಿಂದ**

ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ಆಹ್ವಾನಿಸಲ್ಪಟ್ಟಿದ್ದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಆಸ್ಥಾನ ವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಶೃಂಗೇರಿಯಲ್ಲಿ ತಾ|| ೧೦-೨-೬೪ ರ ದಿನ "ಶಾಂಕರ ಸಿದ್ಧಾಂತವೂ ವಿಶ್ವಶಾಂತಿಯೂ" ಎಂಬ ವಿಷಯವಾಗಿಯೂ, ತಾ|| ೧೧-೨-೬೪ರ ದಿನ "ಸಂಸ್ಕೃತ ವಾಙ್ಮಯಕ್ಕೆ ಕನ್ನಡಿಗರ ಕಾಣಿಕೆ" ಎಂಬ ವಿಷಯವಾಗಿಯೂ ಭಾಷಣ ಮಾಡಿದರು. ಶ್ರೀ ಶಾಸ್ತ್ರಿಗಳ ಈ ಉಪನ್ಯಾಸಗಳು ಪರಮಪೂಜ್ಯ ಶ್ರೀ ಜಗದ್ಗುರುಗಳ ಸಂತೋಷಕ್ಕೂ ಮಹಾಜನಗಳ ಮೆಚ್ಚುಗೆಗೂ ಅರ್ಹವೆನಿಸಿದವು. ಆದರ ಫಲವಾಗಿ ತಪೋಧನರಾದ ಶ್ರೀ ಶ್ರೀ ಜಗದ್ಗುರು ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳು ತಾ|| ೧೧-೨-೬೪ರ ಬೆಳಗ್ಗೆ ಶಿವರಾತ್ರಿಯ ಶುಭದಿನದಂದು ಶ್ರೀ ಶಾಸ್ತ್ರಿಗಳನ್ನು ತಪೋಭೂಮಿಯಾದ ಶ್ರೀ ನರಸಿಂಹವನಕ್ಕೆ ಬರಮಾಡಿಕೊಂಡು ಕಾಶ್ಮೀರ ಶಾಲು, ರುದ್ರಾಕ್ಷಿಯ ಸರ, ಸಂಸ್ಥಾನದ ಪ್ರಕಟನೆಗಳು, ವಿದ್ವತ್ ಸಂಭಾವನೆ ಇತ್ತು, ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಲಾಪಗಳನ್ನು ಕೇಳಿ ಆನಂದಿಸಿದರು.

# ಸಂಪಾದಕೀಯ

### ಪುರಂದರರ ಪುಣ್ಯಾರಾಧನೆ

ಈಗ್ಗೆ ನಾನ್నೂರು ವರ್ಷಗಳಿಗೆ ಹಿಂದೆ ವಿಜಯನಗರ ಕರ್ಣಾಟಕ ಸಾಮ್ರಾಜ್ಯವು ಶ್ರೀ ಕೃಷ್ಣದೇವರಾಯನ ಆಳ್ವಿಕೆಯ ಉಚ್ಛ್ರಾಯಸ್ಥಿತಿಯಲ್ಲಿದ್ದಾಗ ಕನ್ನಡ ಕಂದ ನೋರ್ವನು ಸರ್ವಸುಖ ಪರಿತ್ಯಾಗಮಾಡಿ ಪುರಂದರ ವಿಠಲನ ಪಾದಕಿಂಕರನಾಗಿ ಸೇವೆ ಸಲ್ಲಿಸಿದನೆಂಬುದು ಕನ್ನಡಿಗರಿಗೆ ಹೆಮ್ಮೆಯನ್ನುಂಟುಮಾಡತಕ್ಕ ಅಂಶ. ನವಕೋಟಿ ನಾರಾಯಣನಾಗಿದ್ದ ನಾಯಕನು ಪುರಂದರ ದಾಸನಾದುದು ಅಗಿರಲಿ, ಎಷ್ಟೋ ಮಂದಿ ತ್ಯಾಗಶೀಲ ರಾಗಿ ಉನ್ನತ ಕಾರ್ಯಗಳನ್ನೆಸಗಿದ್ದಾರೆ. ಆದರೆ, ಪುರಂದರದಾಸರ ಖ್ಯಾತಿ ಕನ್ನಡಿಗರ ದೃಷ್ಟಿಯಲ್ಲಿ ಅವರ ಸಾಹಿತ್ಯ ಸೇವೆಗೆ ಸಲ್ಲುತ್ತದೆ. ತಿಳಿಗನ್ನಡದಲ್ಲಿ ಭಕ್ತಿಗೀತೆ ಗಳನ್ನು ಭಾವಗೀತೆಗಳ ಮಟ್ಟದಲ್ಲಿ ಪ್ರಾಸಾನುಬದ್ಧವಾಗಿ ಹಾಡಿ ಕನ್ನಡ ನಾಡಿನ ಮನೆ ಮನೆಗಳಲ್ಲಿ ಮೊಳಗುವಂತೆ ಮಾಡಿದ ಮಹಾತ್ಮರು ಇವರು. ಕನಕದಾಸರೂ ಇದೇ ಪರಂಪರೆಗೆ ಸೇರಿದವರು.

ಇಂತಹ ಕನ್ನಡ ಕಂದನ ಆರಾಧನೆಯನ್ನು ಇತ್ತೀಚೆಗೆ ನಾಡಿನ ಮೂಲೆ ಮುಡುಕುಗಳಲ್ಲೆಲ್ಲಾ ನಡೆಸಿ ಕನ್ನಡ ಮಹಾಜನರು ಪುನೀತರಾಗಿದ್ದಾರೆ. ಹಂಪೆಯಲ್ಲಿ, ದಾಸಾ ಶ್ರಮದಲ್ಲಿ, ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಹೀಗೆ ಅನು ಕ್ರಮವಾಗಿ ನಡೆದ ಉತ್ಸವಗಳು ನಿಜಕ್ಕೂ ಸ್ಫೂರ್ತಿ ದಾಯಕವಾಗಿದ್ದುವು. ಭಕ್ತಿಯ ರಸಾಯನವನ್ನು ಕನ್ನಡಿಗರು ಮೆದ್ದಿದ್ದಾರೆ. ತಿಳಿಗನ್ನಡದ ತಿಳಿನೀರನ್ನು ಪಾನಮಾಡಿದ್ದಾರೆ. ಪುರಂದರದಾಸರ ನಾಮಸ್ಮರಣೆ ಯಿಂದ ಕನ್ನಡ ನಾಡು ಎಚ್ಚೆತ್ತಿದೆ. ಎಚ್ಚೆತ್ತ ನಾಡು, ೧೯ ಜಿಲ್ಲೆಗಳ ಕನ್ನಡಿಗರ ಗೂಡು. ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮಗಳೆಂಬ ಭಿನ್ನಭೇದಗಳನ್ನು ಮರೆತು ಮುಂದುವರಿಯಲೆಂದು ಹಾರೈಸುತ್ತೇವೆ.

### ಸಾಹಿತ್ಯ ಮತ್ತು ಕಲೆ

ಸಾಹಿತ್ಯ ಮತ್ತು ಕಲಾಕ್ಷೇತ್ರಗಳಲ್ಲಿ ಗಣನೀಯವಾದ ಸೇವೆ ಸಲ್ಲಿಸಿರುವವರಿಗೆ ಆಶ್ರಯ ನೀಡುವುದು ಅನಾದಿ ಯಿಂದ, ರಾಜಾಧಿರಾಜರುಗಳ ಕಾಲದಿಂದ ನಡೆದು ಬಂದಿರುವ ಪದ್ಧತಿ. ಇಂದು ಪ್ರಜಾರಾಜ್ಯಗಳಲ್ಲೂ ಈ ಪದ್ಧತಿ ಆಚರಣೆಯಲ್ಲಿದೆ. ಭಾರತ ಸರ್ಕಾರವು ಈ ಪದ್ಧತಿ ಯಂತೆ ೧೫ ರಾಜ್ಯಗಳಲ್ಲಿ ಸಾಹಿತ್ಯ ಮತ್ತು ಕಲಾಕ್ಷೇತ್ರ ಗಳಲ್ಲಿ ಉನ್ನತ ಮಟ್ಟದಲ್ಲಿ ಸೇವೆ ಸಲ್ಲಿಸಿರುವ ಮಹನೀಯ ರಿಗೆ ಗಣರಾಜ್ಯ ದಿನೋತ್ಸವದ ಅಂಗವಾಗಿ ಮಾಸಾಶನ ವನ್ನೋ, ಸಂಭಾವನೆಯನ್ನೋ ದಯೆಪಾಲಿಸುತ್ತಿದೆ.

ಮೈಸೂರು ರಾಜ್ಯದ ಸಂಗೀತ ನಾಟಕ ಅಕಾಡೆಮಿಯ ವರ ಶಿಫಾರಸಿನಂತೆ ಈ ವರ್ಷ ೧೨ ಮಂದಿ ಮಹನೀಯ ರಿಗೆ ತಿಂಗಳೊಂದಕ್ಕೆ ನೂರು ರೂಪಾಯಿಗಳಂತೆಯೂ, ೯ ಮಂದಿಗೆ ಎಪ್ಪತ್ತೈದು ರೂಪಾಯಿಗಳಂತೆಯೂ ೨೩ ಮಂದಿಗೆ ಐವತ್ತು ರೂಪಾಯಿಗಳಂತೆಯೂ, ಒಬ್ಬರಿಗೆ ನಲವತ್ತು ರೂಪಾಯಿಯಂತೆಯೂ ಮಾಸಾಶನವು ದೊರೆ ತಿದೆ. ಒಬ್ಬರಿಗೆ ಮಾತ್ರ ಒಂದೇ ಗಂಟಿನಲ್ಲಿ ಒಂದು ಸಾವಿರ ರೂಪಾಯಿಗಳ ಸಂಭಾವನೆಯನ್ನು ನೀಡಿದ್ದಾರೆ. ಇವ ರೆಲ್ಲರಿಗೂ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡಿಗರ ಪ್ರತಿ ನಿಧಿಯಾಗಿ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಆಡಳಿತ ನಡೆಸುವ ಪ್ರಜಾಸರ್ಕಾರಗಳು ಪ್ರಜೆಗಳಲ್ಲಿ ದೇಶದ ಕೀರ್ತಿ ಪ್ರಸಾರಕ್ಕಾಗಿ ಬೆಳೆಸಬೇಕಾಗಿರುವ ಕಲೆ ಗಳಿಗೆ ಸಹಾಯ ನೀಡುವುದು ಯುಕ್ತನೇ ಆಗಿದೆ. ಸಾಹಿತ್ಯ ಕಲೆಗಳಂತೆಯೇ, ಆಟ, ವ್ಯಾಯಾಮ ಮುಂತಾದ ಕಾರ್ಯ ಕ್ಷೇತ್ರಗಳಲ್ಲೂ ಈ ಬಗೆಯ ಸಹಾಯ ಅತ್ಯವಶ್ಯಕ. ಹೀಗೆ ಸರ್ಕಾರದಿಂದ ಸಂಭಾವಿತರಾದ ಮಹನೀಯರು ತಮ್ಮ ತಮ್ಮ ಕಾರ್ಯಕ್ಷೇತ್ರಗಳಲ್ಲಿ ರಾಷ್ಟ್ರದ ಕೀರ್ತಿ ಪತಾಕೆ ಯನ್ನು ಉನ್ನತ ರೀತಿಯಲ್ಲಿ ಬೆಳಗುವರೆಂದು ನಂಬಿದ್ದೇವೆ.

### ಸಂಸ್ಕೃತಿ ಮತ್ತು ಚಲನಚಿತ್ರಗಳು

ಕನ್ನಡ ಚಿತ್ರಪ್ರೇಮಿಗಳ ಸಂಘದ ಆಶ್ರಯದಲ್ಲಿ ನಗರದ ನೂತನ ಮೇಯರ್‌ರವರಾದ ಶ್ರೀ ಜಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ರವೀಂದ್ರ ಕಲಾಕ್ಷೇತ್ರದಲ್ಲಿ ನಡೆದ ಸನ್ಮಾನ ಸಭೆಯಲ್ಲಿ ಐವತ್ತಕ್ಕೂ ಹೆಚ್ಚು ಕನ್ನಡ ಚಿತ್ರಗಳಲ್ಲಿ ಅಭಿ ನಯಿಸಿರುವ ನಟರುಗಳಾದ ಶ್ರೀ ರಾಜಕುಮಾರ್, ಶ್ರೀ ನರಸಿಂಹರಾಜು, ಶ್ರೀ ಬಾಲಕೃಷ್ಣ ಮತ್ತು ಶ್ರೀಮತಿ ಲಕ್ಷ್ಮೀದೇವಿ ಇವರುಗಳಿಗೆ ಫೆಬ್ರವರಿ ೨ರಂದು ಗೌರವ

ವನ್ನು ಸಲ್ಲಿಸಿದುದು ಶ್ಲಾಘನೀಯವಾದ ಅಂಶ. ಇತರ ಕಲಾಸಂಸ್ಥೆಗಳೂ ಈ ಮಾರ್ಗದಲ್ಲಿ ಮುಂದುವರಿಯುವುದು ಯೋಗ್ಯವಾಗಿದೆ.

ಈ ಸಮಾರಂಭದಲ್ಲಿ ಅಧ್ಯಕ್ಷರಾದ ಶ್ರೀ ಜಿ. ನಾರಾಯಣರವರು ನುಡಿದ ಕೆಲವು ನುಡಿಗಳನ್ನು ಕಲಾವಂತರು ಗಮನದಲ್ಲಿಡಬೇಕು. “ಕನ್ನಡ ಚಲನಚಿತ್ರಗಳಲ್ಲಿ ಕನ್ನಡ ನಾಡಿನ ಸಂಸ್ಕೃತಿ, ನಾಗರಿಕತೆಯ ಪರಂಪರೆಯನ್ನು ಸಜೀವವಾಗಿ ಉಳಿಸಿಕೊಳ್ಳಲು ಸಹಕಾರಿಯಾಗುವಂತೆ ಯಕ್ಷಗಾನ, ಜಾನಪದ, ಬಯಲುನಾಟಕ ಮುಂತಾದುವುಗಳನ್ನು ಅಳವಡಿಸಿಕೊಂಡು ಬರಬೇಕು” ಎಂದು ಅವರು ತಿಳಿಸಿದ್ದಾರೆ. ಕನ್ನಡ ಚಿತ್ರ ನಿರ್ಮಾಪಕರೂ, ನಿರ್ದೇಶಕರೂ ಮತ್ತು ನಟವರ್ಗದವರೂ ಈ ಅಂಶವನ್ನು ಗಮನಿಸಬೇಕಾಗಿದೆ. ಆಗ ಚಲನಚಿತ್ರಗಳು ನಿಜಕ್ಕೂ ಜನರ ಮೆಚ್ಚುಗೆಯನ್ನು ಮತ್ತಷ್ಟು ಅಧಿಕವಾಗಿ ಗಳಿಸುತ್ತವೆ.

---

## ಭಾವಚಿತ್ರ ಅನಾವರಣ



ಫೆ. ೧ರಂದು ಪರಿಷತ್ತಿನಲ್ಲಿ ಬಾಗಲಕೋಟೆಯ ಡಾ॥ ಮುರುಗಯ್ಯ ಜಂಗಿನ ಅವರ ಭಾವಚಿತ್ರ ಅನಾವರಣ ಮಾಡಿದಾಗ ತೆಗೆದ ಚಿತ್ರ. ಈ ಕಾರ್ಯವನ್ನು ವಿದ್ಯಾಸಚಿವ ಶ್ರೀ ಎಸ್. ಆರ್. ಕಂಠಿಯವರು ಆಗಮಾಡಿಸಿದರು. ಶ್ರೀ ಜಂಗಿನ ಅವರ ವಿಚಾರವಾಗಿ ಶ್ರೀ ಮಂಗಳವೇಡೆ ಶ್ರೀನಿವಾಸರಾಯರು ಮಾತನಾಡುತ್ತಿರುವುದನ್ನು ಚಿತ್ರದಲ್ಲಿ ನೋಡಬಹುದು.

ಸಂಪಾದಕರು: ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು-೧೮.

# ಸಾದರ ಸ್ವೀಕಾರ

ಈ ಕೆಳಗೆ ಕಾಣಿಸಿರುವ ೧೯೬೩ ನೇ ದೀಪಾವಳಿ ವಿಶೇಷ ಸಂಚಿಕೆಗಳನ್ನು ನಾವು ಆತ್ಮಾದರದಿಂದ ಸ್ವೀಕರಿಸಿದ್ದೇವೆ.

(೧) ಸಂದೇಶ, ಬೆಳಗಾಂವ; ಪುಟ ೬೬.
(೨) ಸಂದರ್ಶನ, ವಿಜಾಪುರ; ಪುಟ ೬೦; ಬೆಲೆ ೭೫ ನ.ಪೈ.
(೩) ಉದ್ಯೋಗ, ಧಾರವಾಡ; ಪುಟ ೪೮; ಬೆಲೆ ೫೦ ನ.ಪೈ.
(೪) ಸುಬೋಧ, ಬೆಂಗಳೂರು; ಪುಟ ೯೭; ಬೆಲೆ ೫೦ ನ.ಪೈ.
(೫) ನಗುವ ನಂದ, ಬೆಂಗಳೂರು; ಪುಟ ೧೨೨; ಬೆಲೆ ೧ ರೂ.

* **ಜೈನಧರ್ಮ ಪರಿಚಯ**: ಲೇಖಕರು: ವಿದ್ಯಾವಿಭೂಷಣ ಶ್ರೀ ಓ. ಎನ್. ಲಿಂಗಣ್ಣಯ್ಯ, ಚಿತ್ರದುರ್ಗ; ಸೈಜು ೧/೮ ಕ್ರೌನ್; ಪುಟ ೧೧೨; ಬೆಲೆ ರೂ. ೧.

**ನಂಟರು**: ಲೇಖಕರು: ಶ್ರೀ ತೀ. ನಂ. ಶ್ರೀಕಂಠಯ್ಯ, ಪ್ರಕಾಶಕರು: ಶ್ರೀ ಎಂ. ಶಂಕರನಾರಾಯಣರಾವ್, ಎಂ.ಎ., ಮೈಸೂರು; ಸೈಜು ೧/೮ ಕ್ರೌನ್; ಪುಟ ೧೪೯; ಬೆಲೆ ರೂ. ೨-೫೦ ನ.ಪೈ.

* **ಭಾರತಿ ಸಂಸ್ಕೃತಿ** (ಕನ್ನಡ ಅನುವಾದ): ಲೇಖಕರು: ಶ್ರೀ ಎಸ್. ಎನ್. ಆರ್. ಆರ್.; ಸೈಜು ೧/೮ ಕ್ರೌನ್; ಪುಟ ೬೪; ಬೆಲೆ ರೂ. ೧-೨೦ ನ.ಪೈ.

* **ಶ್ರೀ ಪೇಜಾವರ ಮಠದ ಶ್ರೀ ವಿಜಯಧ್ವಜಾಚಾರ್ಯರು** (ಜೀವನಚರಿತ್ರೆ): ಲೇಖಕರು: ವಿದ್ವಾನ್ ಶ್ರೀ ಕೆ. ವೆಂಕಟರಾಯಾಚಾರ್ಯ; ಪ್ರಕಾಶಕರು: ವಿಜಯ ಸಾಹಿತ್ಯಮಾಲೆ, ಸುರತ್ಕಲ್; ಸೈಜು ೧/೮ ಕ್ರೌನ್; ಪುಟ ೧೬; ಬೆಲೆ ೨೫ ನ.ಪೈ.

* **ಇಂಟರ್‌ವ್ಯೂ ಮತ್ತು ಇದೂ ಮದುವೆ**: ಲೇಖಕರು: ಶ್ರೀ ಕೆ. ಶ್ರೀನಿವಾಸ ಉಪಾಧ್ಯಾಯ; ಪ್ರಕಾಶಕರು: ದೀನಬಂಧು ಪ್ರಕಾಶನ, ಮಾಡಲ್ ಹೌಸ್ ಬೀದಿ, ಬೆಂಗಳೂರು-೪; ಸೈಜು ೧/೮ ಕ್ರೌನ್; ಪುಟ ೧೧೨; ಬೆಲೆ ರೂ. ೧-೫೦ ನ.ಪೈ.

**ಮಲೆನಾಡ ಕುಸುಮ** (ಕವನ ಸಂಕಲನ): ಲೇಖಕರು: ಶ್ರೀ ಎಂ. ವಿ. ಜಿ. ರಾಜ; ಪ್ರಕಾಶಕರು: ಶಕ್ತಿ ಪ್ರಕಾಶನ, ಚಿಕ್ಕಮಗಳೂರು; ಸೈಜು ೧/೮ ಕ್ರೌನ್; ಪುಟ ೪೮; ಬೆಲೆ ೭೫ ನ.ಪೈ.

* **ಮಹಾವೀರವಾಣಿ**: ಲೇಖಕರು: ಶ್ರೀ ಎಸ್. ಬಿ. ವಸಂತರಾಜಯ್ಯ; ಸೈಜು ೧/೮ ಫುಲ್‌ಸ್ಕೇಪ್; ಪುಟ ೧೬; ಬೆಲೆ ೧೫ ನ.ಪೈ.

* **ಶೃಂಗೇರಿ ಜಗದ್ಗುರುಗಳು ಮತ್ತು ವೈಶ್ಯರು**: ಲೇಖಕರು: ಪಂಡಿತ ಶ್ರೀ ಟೀಕಾ ವೆಂಕಟಾಚಲಗುಪ್ತ; ಸೈಜು ೧/೮ ಕ್ರೌನ್; ಪುಟ ೧೩೪.

* **ವೈಶ್ಯ ಕುಲದೇವತೆ**: ಲೇಖಕರು: ಪಂಡಿತ ಶ್ರೀ ಟೀಕಾ ವೆಂಕಟಾಚಲಗುಪ್ತ; ಸೈಜು ೧/೮ ಕ್ರೌನ್; ಪುಟ ೧೧೬; ಬೆಲೆ ರೂ. ೧.

* **ರಸಗಂಗೆ**: ಲೇಖಕರು: ಶ್ರೀ ಜಿ. ಎಸ್. ಸಿದ್ದಲಿಂಗಯ್ಯ, ತುಮಕೂರು; ಸೈಜು ೧/೮ ಕ್ರೌನ್; ಪುಟ ೬೮; ಬೆಲೆ ರೂ. ೧-೨೫ ನ.ಪೈ.

* **ನಾನೇ ನಾನು ಮತ್ತು ಇತರ ಏಕಾಂಕಗಳು**: ಲೇಖಕರು: ಶ್ರೀ ಬೇಂದ್ರೆ ಲಕ್ಷ್ಮಣರಾವ್; ಪ್ರಕಾಶಕರು: ಸಾಹಿತ್ಯ ಭಂಡಾರ; ಸೈಜು ೧/೮ ಕ್ರೌನ್; ಪುಟ ೧೬೫; ಬೆಲೆ ರೂ. ೨-೬೫ ನ.ಪೈ.

**ಮಲೆನಾಡು** (ದೀಪಾವಳಿ ವಿಶೇಷಾಂಕ) ೧೯೬೩; ಪುಟ ೭೫; ಬೆಲೆ ರೂ. ೧.

**ಚೆಂಗಾಳ್ವ ಚೆಲುವಾಂಬ** (೧ ನೇ ಭಾಗ): ಲೇಖಕರು: ಶ್ರೀ ರಾಮರಾಜ ಪುಟ್ಟರಾಜ ಅರಸಿನವರು; ಸೈಜು ೧/೮ ಡೆಮ್ಮಿ; ಪುಟ ೩೨೬; ಬೆಲೆ ೧+೨ ಭಾಗಗಳೂ ಸೇರಿ ರೂ. ೬-೫೦ ನ.ಪೈ.

**ಚೆಂಗಾಳ್ವ ಚೆಲುವಾಂಬ** (೨ ನೇ ಭಾಗ): ಲೇಖಕರು: ಶ್ರೀ ರಾಮರಾಜ ಪುಟ್ಟರಾಜ ಅರಸಿನವರು; ಸೈಜು ೧/೪ ಡೆಮ್ಮಿ; ಪುಟ ೩೨೭ ರಿಂದ ೬೩೮ ರ ವರೆಗೆ.

**ಶಿವಾದ್ವೈತ ದರ್ಶನ**: ಲೇಖಕರು: ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ.; ಸೈಜು ೧/೮ ಕ್ರೌನ್; ಪುಟ ೨೭೦; ಬೆಲೆ ರೂ. ೫.

**ಯುಗಮಹಿಳೆ ದುಗ್ಗಳೆ**: ಲೇಖಕರು: ಶ್ರೀ ಜ. ಚ. ನಿ.; ಸೈಜು ೧/೮ ಕ್ರೌನ್; ಪುಟ ೫೨; ಬೆಲೆ ರೂ. ೧.

* **ಜ್ಞಾನೋದಯ**; ಪ್ರಕಾಶಕರು: ಜ್ಞಾನೋದಯ ಪುಸ್ತಕಮಾಲೆ, ಆನೆಕಲ್; ಸೈಜು ೧/೮ ಕ್ರೌನ್; ಪುಟ ೧೮.

**ಜಾಗೃತ ಕರ್ನಾಟಕ** (ಸಂಪುಟ ೧, ಸಂಚಿಕೆ ೨) (ಉಜ್ವಲ ಕನ್ನಡ ಪಾಕ್ಷಿಕ, ಬೊಂಬಾಯಿ): ಸಂಪಾದಕರು: ಶ್ರೀ ಎಚ್. ವ್ಹಿ. ಇಮಾರತಿ, ಹಾವನೂರ; ವಾರ್ಷಿಕ ಚಂದಾ ರೂ. ೬-೫೦ ನ.ಪೈ.

* **ರಂ. ಶ್ರೀ ಮುಗಳಿ** (ಸಚಿತ್ರ ಸವಿಪರಿಚಯ): ಪ್ರಕಾಶಕರು: ಪರಾಗ ಪ್ರಕಾಶನ, ಧಾರವಾಡ; ಸೈಜು ೧/೮ ಡೆಮ್ಮಿ; ಪುಟ ೭೦; ಬೆಲೆ ರೂ. ೧-೫೦ ನ.ಪೈ.

* **ಶ್ರೀ ಪುರಂದರದಾಸರು** (ನಾಟಕ): ಲೇಖಕರು: ಕೀರ್ತನಕೇಸರಿ ಶ್ರೀ ಭದ್ರಗಿರಿ ಕೇಶವದಾಸರು; ಸೈಜು ೧/೮ ಕ್ರೌನ್; ಪುಟ ೭೬; ಬೆಲೆ ರೂ. ೧.

**ಶ್ರೀ ಸೋನೇಕಟ್ಟಿ ಶಿವಾನುಭವ ಸಾಹಿತ್ಯ**: ಸಂಪಾದಕರು: ಶ್ರೀ ಹೆಚ್. ಆರ್. ಮಹಾಂತಯ್ಯನವರು; ಪ್ರಕಾಶಕರು: ಶ್ರೀ ಮುರುಘಾಮಠ, ಧಾರವಾಡ; ಸೈಜು ೧/೮ ಕ್ರೌನ್; ಬೆಲೆ ರೂ. ೧.

**ಕಾವಲೇಶ್ವರ ಲಿಂಗಲೀಲೆ**: ಲೇಖಕರು: ಶ್ರೀ ನಿ. ಪ್ರ. ಸ್ವ. ಮಲ್ಲಿಕಾರ್ಜುನ ಶಿವಯೋಗಿಗಳು, ನಿಡಗುಂದಿ; ಸೈಜು ೧/೮ ಕ್ರೌನ್; ಪುಟ ೧೪೦; ಬೆಲೆ ರೂ. ೧-೨೫ ನ.ಪೈ.

**ತೋಂಟದ ಸಿದ್ಧಲಿಂಗ ಶಿವಯೋಗಿಗಳ ಚಾರಿತ್ರ:** ಲೇಖಕರು: ಪ್ರೊ|| ಎಸ್. ಎಂ. ವೃಷಭೇಂದ್ರಸ್ವಾಮಿ, ಎಂ.ಎ.; ಪ್ರಕಾಶಕರು: ಶ್ರೀ ಮುರುಘಾಮಠ, ಧಾರವಾಡ; ಸೈಜು ೧/೮ ಕ್ರೌನ್; ಬೆಲೆ ರೂ. ೧.

**ಸಿದ್ಧಲಿಂಗ ಚರವರೇಣ್ಯರ ಚಾರಿತ್ರ:** ಲೇಖಕರು: ಅಸ್ಥಾನ ವಿದ್ವಾನ್, ಸರ್ವದರ್ಶನತೀರ್ಥ, ಪಂಡಿತ ವೈ. ನಾಗೇಶಶಾಸ್ತ್ರಿಗಳು; ಪ್ರಕಾಶಕರು: ಶ್ರೀ ಮುರುಘಾಮಠ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೨೫೮; ಬೆಲೆ ರೂ. ೩.

**ಬಸವಣ್ಣನವರ ವೀರಶೈವ ಸಮಾಜ:** ಲೇಖಕರು: ಪಂ. ವಾಯ್. ನಾಗೇಶ ಶಾಸ್ತ್ರಿ, ಬಳ್ಳಾರಿ; ಪ್ರಕಾಶಕರು: ಶ್ರೀ ಮುರುಘಾಮಠ, ಧಾರವಾಡ; ಸೈಜು ೧/೮ ಡೆಮ್ಮಿ; ಪುಟ ೭೭; ಬೆಲೆ ರೂ. ೧.

**ಧರ್ಮಭಂಡಾರಿ ಬಸವಣ್ಣನವರು:** ಲೇಖಕರು: ಪ್ರೊ|| ಬಸವರಾಜ ಚೆನ್ನವೀರಪ್ಪ ಜವಳಿ; ಪ್ರಕಾಶಕರು: ಪಂಪಾ ಸಾಹಿತ್ಯ ಪ್ರಕಟನಾಲಯ; ಸೈಜು ೧/೮ ಕ್ರೌನ್; ಪುಟ ೩೮೯, ಬೆಲೆ ರೂ. ೫.

* **ಜೀವನ ಸಂಸಾರ:** ಲೇಖಕರು: ಶ್ರೀ ಸಗರ ಕೃಷ್ಣಾಚಾರ್ಯ, ಶಹಪುರ; ಸೈಜು ೧/೮ ಫುಲ್‌ಸ್ಕೇಪ್; ಪುಟ ೨೨; ಬೆಲೆ ೨೫ ನ.ಪೈ.

Souvenir: Sixth Music Conference, December 1963, Mysore; Pages 62.

* **ರಣತೂರ್ಯ** (ದೇಶಪ್ರೇಮ ಗೀತೆಗಳು): ಸಂಪಾದಕರು: ಶ್ರೀ ಪಿ. ಶ್ರೀನಿವಾಸರಾವ್, ಶ್ರೀ ಸಾ. ನ. ಲಕ್ಷ್ಮಣಗೌಡ; ಪ್ರಕಾಶಕರು: ಕರ್ನಾಟಕ ಸಂಘ, ಮಂಚೇನಹಳ್ಳಿ; ಸೈಜು ೧/೮ ಫುಲ್‌ಸ್ಕೇಪ್; ಪುಟ ೩೨.

* **ಶ್ರೀ ವೆಂಕಟೇಶ ಕಲ್ಯಾಣಂ** (ಉದಯ ರಾಗ): ಸಂಪಾದಕರು: ಶ್ರೀ ಕುಮುದಪ್ರಿಯ; ಸೈಜು ೧/೮ ಫುಲ್‌ಸ್ಕೇಪ್; ಬೆಲೆ ೨೦ ನ.ಪೈ.

**ಕಹಳೆ** (ವೀರಗೀತೆಗಳ ಸಂಕಲನ): ಪ್ರಕಾಶಕರು: ಜನತ ಪುಸ್ತಕಾಲಯ, ಎಂ. ಜಿ. ರೋಡು, ತುಮಕೂರು; ಸೈಜು ೧/೮ ಕ್ರೌನ್; ಪುಟ ೩೩; ಬೆಲೆ ೭೫ ನ.ಪೈ.

**ತಿರುಗ ಮುರುಗ:** ಲೇಖಕರು: ಶ್ರೀಹೊಯಿಸಳ; ಸೈಜು: ೧/೮ ಕ್ರೌನ್; ಪುಟ ೧೮; ಬೆಲೆ ೫೦ ನ.ಪೈ.

**ಪರಂಜೋತಿ ದರ್ಶನ:** ಲೇಖಕರು: ಶ್ರೀ ಚ. ಸುಂದರೇಶ್, ಎಂ.ಎ.; ಪ್ರಕಾಶಕರು: ಮಧುಮಾಧವಿ–ಸೋಸಲೆ; ಸೈಜು ೧/೮ ಫುಲ್‌ಸ್ಕೇಪ್; ಪುಟ ೩೪; ಬೆಲೆ ೨೫ ನ.ಪೈ.

**ಪಂಪಾ ಮಾಹಾತ್ಮ್ಯ** (ಶ್ರೀ ಹಂಪಿ ಮಹಾಕ್ಷೇತ್ರ): ಲೇಖಕರು: ಶ್ರೀ ವಿಷ್ಣುತೀರ್ಥ; ಪ್ರಕಾಶಕರು: ನವವೃಂದಾವನ, ಆನೆಗೊಂದಿ, ರಾಯಚೂರು ಡಿಸ್ಟ್ರಿಕ್ಟ್; ಸೈಜು: ಡೆಮ್ಮಿ ೧/೮; ಪುಟ: ೨೫೬; ಬೆಲೆ: ರೂ. ೪.

**ಇದ್ದು ಜಯಿಸಬೇಕು:** ಲೇಖಕರು: ಶ್ರೀ ಎನ್. ಎಸ್. ಗದಗಕರ; ಪ್ರಕಾಶಕರು: ಎನ್. ಎಸ್. ಗದಗಕರ, ಶುಕ್ರವಾರ ಪೇಟೆ, ನವಲೂರು ಅಗಸಿ, ಧಾರವಾಡ; ಪುಟ: ೫೦; ಸೈಜು: ಕ್ರೌನ್ ೧/೮; ಬೆಲೆ: ೮೦ ನ.ಪೈ.

**ಸಫಲ ಸಾಧಕ:** ಲೇಖಕರು: ವಿವಿಧ ಅನುಭವಿಗಳು; ಪ್ರಕಾಶಕರು: ವಿಕಾಸ, ಉಡುಪಿ; ಪುಟ: ೧೧೯; ಸೈಜು: ಕ್ರೌನ್ ೧/೮; ಬೆಲೆ: ರೂ. ೨.

**ದಕ್ಷಿಣ ಭಾಷಾ ಕಥಾಮಂಜರಿ:** ಲೇಖಕರು ಮತ್ತು ಪ್ರಕಾಶಕರು: ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ, ಮದರಾಸು; ಪುಟ: ೧೬೦; ಸೈಜು: ಕ್ರೌನ್ ೧/೮; ಬೆಲೆ: ರೂ. ೧–೬೫ ನ.ಪೈ.

* **ನ್ಯೂ ಟೈಪ್ ಕನ್ನಡ ಟೀಚರ್:** ಲೇಖಕರು: ಜಹಿರುದ್ದೀನ್ ಅಹಮದ್; ಪುಟ: ೧೦೦; ಸೈಜು: ಕ್ರೌನ್ ೧/೮; ಬೆಲೆ: ರೂ. ೧–೨೫ ನ.ಪೈ.

**ಅವಳೇ ಇವಳು:** ಲೇಖಕರು: ಶ್ರೀ ಶಿವಲಿಂಗ; ಪ್ರಕಾಶಕರು: ಸಂಗಡಿಗರ ಸಮಿತಿ, ರಾಯಚೂರು; ಪುಟ: ೯೭; ಸೈಜು: ಕ್ರೌನ್ ೧/೮; ಬೆಲೆ: ರೂ. ೧.

* **ದ. ಬಾ. ಕು. ಬದುಕಿದ ಬಾಳು:** ಸಂಪಾದಕರು: ಶ್ರೀ ಗೋವಿಂದ ವೆಂಕಟೇಶ ಚುಳಕಿ; ಪ್ರಕಾಶಕರು: ಲಲಿತ ಸಾಹಿತ್ಯ ಮಾಲೆ, ಧಾರವಾಡ; ಪುಟ: ೧೯೨; ಸೈಜು: ಕ್ರೌನ್ ೧/೮; ಬೆಲೆ: ರೂ. ೩.

* **ಪ್ರಜಾಪ್ರಭುತ್ವ** (ನಾಟಕ): ಲೇಖಕರು: 'ಜೇವಿ' ಕುಲಕರ್ಣಿ; ಪ್ರಕಾಶಕರು: ಲಲಿತ ಸಾಹಿತ್ಯ ಮಾಲೆ, ಧಾರವಾಡ; ಪುಟ: ೧೦೪; ಸೈಜು: ಕ್ರೌನ್ ೧/೮; ಬೆಲೆ: ರೂ. ೧–೫೦ ನ. ಪೈ.

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತದೆ.

# ಕನ್ನಡ ಸಾಹಿತ್ಯ ಪರಿಷತ್ತಿನ
# ಕನ್ನಡ-ಕನ್ನಡ ನಿಘಂಟು

## ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ "ಕನ್ನಡ ನಿಘಂಟು" ಡೆಮ್ಮಿ ಚತುಷ್ಪತ್ರ ಆಕಾರದ ಸುಮಾರು ೫,೦೦೦ ಪುಟಗಳನ್ನು ಒಳಗೊಂಡು, ಒಂದೊಂದು ಸಂಪುಟದಲ್ಲೂ ಸುಮಾರು ೧೨೫೦ ಪುಟಗಳಿರುವ ನಾಲ್ಕು ಸಂಪುಟಗಳಲ್ಲಿ (Volumes) ಪ್ರಕಟವಾಗುವಂತೆ ಏರ್ಪಡಿಸಲಾಗಿದೆ.

ನಿಘಂಟಿನ ಒಟ್ಟು ಬೆಲೆ ೧೨೦ ರೂಪಾಯಿಗಳು; ಮುಂಗಡವಾಗಿ ಹಣ ಸಲ್ಲಿಸುವ ಗ್ರಾಹಕರಿಗೆ ೧೦೦ ರೂಪಾಯಿಗಳ ರಿಯಾಯಿತಿ ದರದಲ್ಲಿ ಅದನ್ನು ಒದಗಿಸಲಾಗುತ್ತದೆ. ನಿಘಂಟು ಸಿದ್ಧವಾದಂತೆಲ್ಲ ೯೬ ಪುಟಗಳುಳ್ಳ ಸಂಚಿಕೆಗಳ (Fascicules) ರೂಪದಲ್ಲಿ ಅದನ್ನು ಮುಂಗಡವಾಗಿ ೧೦೦ ರೂಪಾಯಿಗಳ ರಿಯಾಯಿತಿಯ ಬೆಲೆಯನ್ನು ಸಲ್ಲಿಸಿರುವ ಗ್ರಾಹಕರಿಗೆ ತಲುಪಿಸಲಾಗುವುದು. ನಿಘಂಟಿನ ಸಂಪುಟಗಳನ್ನಾಗಲಿ ಸಂಚಿಕೆಗಳನ್ನಾಗಲಿ ಬಿಡಿ ಬಿಡಿಯಾಗಿ ವಿಕ್ರಯಿಸುವುದಿಲ್ಲ.

ನಿಘಂಟಿನ ಎರಡನೆಯ ಸಂಪುಟವು ಪ್ರಕಟವಾದ ಕೂಡಲೆ **ರಿಯಾಯಿತಿಯ ದರದಲ್ಲಿ** ಅದನ್ನು ವಿಕ್ರಯಿಸುವುದನ್ನು ನಿಲ್ಲಿಸಲಾಗುತ್ತದೆ; ಆ ಮುಂದೆ ಪೂರ್ಣವಾದ ಬೆಲೆಯನ್ನು ಕೊಡಬೇಕಾಗುತ್ತದೆ.

ನಿಘಂಟಿನ ಒಂದು ಸಂಪುಟವು ಸಿದ್ಧವಾದ ಬಳಿಕ ಅದರ ರಕ್ಷಾಕವಚವನ್ನು (Binding Case) ಮುಂಗಡವಾಗಿ ಬೆಲೆ ಸಲ್ಲಿಸಿರುವ ಗ್ರಾಹಕರಿಗೆ ಉಚಿತವಾಗಿ ಒದಗಿಸಲಾಗುವುದು.

ಸಂಚಿಕೆಗಳನ್ನೂ ರಕ್ಷಾಕವಚಗಳನ್ನೂ ಕಳಿಸಲು ತಗುಲುವ ಅಂಚೆವೆಚ್ಚವನ್ನು ಗ್ರಾಹಕರೇ ಸಲ್ಲಿಸತಕ್ಕದ್ದು.

ಗ್ರಾಹಕರು ಮುಂಗಡ ಬೆಲೆಯ ಜೊತೆಗೆ ಹತ್ತು ರೂಪಾಯಿಗಳನ್ನು ಅಂಚೆವೆಚ್ಚ, ರವಾನೆ ವೆಚ್ಚಗಳಿಗಾಗಿ ಸಲ್ಲಿಸಬೇಕು. ಸಂಚಿಕೆಗಳನ್ನು ರಿಜಿಸ್ಟರ್ಡ್ ಪೋಸ್ಟ್ ಮೂಲಕ ಕಳಿಸಬೇಕೆಂದು ಗ್ರಾಹಕರು ಅಪೇಕ್ಷಿಸಿದಲ್ಲಿ ಆ ವಿಷಯವನ್ನು ಅವರು ಲಿಖಿತರೂಪದಲ್ಲಿ ಮೊದಲೇ ತಿಳಿಸತಕ್ಕದ್ದು. ಹಾಗೆ ಮಾಡದಿದ್ದರೆ ಸಂಚಿಕೆಗಳನ್ನು "ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್" ಸಮೇತವಾಗಿ ಸಾದಾ ಟಪಾಲಿನ ಮೂಲಕ ಕಳಿಸಲಾಗುವುದು. ಸಂಚಿಕೆಗಳನ್ನು ಪರಿಷತ್ತಿನ ಕಚೇರಿಯಲ್ಲೇ ತೆಗೆದುಕೊಳ್ಳಲು ಅಪೇಕ್ಷಿಸುವವರು ಮುಂಚಿತವಾಗಿ ತಿಳಿಸಿ ಆ ರೀತಿ ಮಾಡಬಹುದು; ಅಂಥವರು ಅಂಚೆವೆಚ್ಚವನ್ನು ಕೊಡಬೇಕಾಗುವುದಿಲ್ಲ.

**ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.**

ಈ ವಿಳಾಸಕ್ಕೆ ಹಣ ಕಳುಹಿಸಿ ಪತ್ರ ವ್ಯವಹಾರ ಮಾಡಬಹುದು.

**ಕೆ. ಎಂ. ಕೃಷ್ಣರಾವ್**
ಗೌರವ ಕಾರ್ಯದರ್ಶಿ

## ಶ್ರೀ ಪುರಂದರದಾಸರ ಶತಮಾನೋತ್ಸವ

### ಪರಿಷತ್ತಿನಲ್ಲಿ ನಡೆದ ಸಮಾರಂಭದ ದೃಶ್ಯಗಳು



ಜ. ೩೧ರಂದು ಶ್ರೀ ಮುಗಳಿ ಅವರು ಅಧ್ಯಕ್ಷತೆ ವಹಿಸಿದ್ದರು.
ಅವರು ಮಾತನಾಡುತ್ತಿರುವಾಗ ತೆಗೆದ ಚಿತ್ರ.



ನಾಲ್ಕನೇ ದಿನ (ಫೆ. ೧) ದಂದು ತೆಗೆದ ಚಿತ್ರ. ಇದರಲ್ಲಿ ವಿದ್ಯಾಮಂತ್ರಿಗಳು,
ಶ್ರೀ ಮಂಗಳವೇಡೆ ಶ್ರೀಸಿವಾಸರಾಯರು ಇವರನ್ನು ಕಾಣಬಹುದು.
ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಮಾತನಾಡುತ್ತಿದ್ದಾರೆ.

Reg. No. B. G. 4—February 1964

Licensed to Post without pre-payment. License No 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು–೧೮.






# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೭] [ಸಂಚಿಕೆ ೩

ಸಂಪಾದಕರು : ಡಿ. ಆರ್. ರಾಮಯ್ಯ, ಬಿ.ಎ.

## ಕನ್ನಡ ಸಾಹಿತ್ಯ ಪರಿಷತ್ತಿಗೆ ವಿದ್ಯಾಧಿಕಾರಿಗಳ ಭೇಟಿ

★  ★

ರಾಜ್ಯದ ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಗಳಾದ ಶ್ರೀ ಟಿ. ವಾಸುದೇವಯ್ಯನವರು ಫೆಬ್ರವರಿ ೨೧ ರಂದು ಭೇಟಿ ಇತ್ತಾಗ ತೆಗೆದ ಚಿತ್ರ. ಪರಿಷತ್ ಅಧ್ಯಕ್ಷರೂ ಮತ್ತು ಕಾರ್ಯದರ್ಶಿಗಳೂ ಸ್ವಾಗತಿಸುತ್ತಿರುವುದನ್ನು ಕಾಣಬಹುದು.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

## ವಿಷಯ ಸೂಚಿಕೆ



## ಪರಿಷತ್ತಿನಲ್ಲಿ ಪುರಂದರೋತ್ಸವ



ಕಳೆದ ತಿಂಗಳು ಅಂತ್ಯದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ ಪುರಂದರೋತ್ಸವ ಸಮಾರಂಭದಲ್ಲಿ ಆದ ಸಂಗೀತ ಕಚೇರಿಯ ದೃಶ್ಯ: ಹಾಡುತ್ತಿರುವವರು ವಿದ್ವಾನ್ ಎಚ್. ಎಂ. ರಾಮಚಂದ್ರಪ್ಪ, ಪಾಲುರಿಕೆ, ಅವರು. ಪಿಟೀಲು ನುಡಿಸುತ್ತಿರುವವರು ವಿದ್ವಾನ್ ಶ್ರೀ ಅಶ್ವತ್ಥನಾರಾಯಣ ಶಾಸ್ತ್ರಿ ಅವರು, ಮೃದಂಗ ನುಡಿಸುತ್ತಿರುವವರು ವಿದ್ವಾನ್ ಎ. ಜಗನ್ನಾಥರಾವ್ ಅವರು.




ಸಂಪುಟ ೨೭ ] ಮಾರ್ಚಿ ೧೯೬೪ [ ಸಂಚಿಕೆ ೩

# ಸಮ್ಮೇಳನವೆಲ್ಲ ಒಳಿತಾಗಲಿ*

'ಕವಿತಾವಾಣಿ'

ಈ ಕನ್ನಡ ಸಮ್ಮೇಳನ
ಯಶಸ್ವಿಯಾಗಲಿ |

ನಾವು ನೀವು ಎಲ್ಲ
ನಲಿವಂತಾಗಲಿ |

ನಮ್ಮ, ನಿಮ್ಮ, ಅಧ್ಯಕ್ಷರ
ಮನ ಒಂದಾಗಲಿ |

ಸಿರಿಗನ್ನಡ ಜನರೆಲ್ಲ
ಈಗ ಒಟ್ಟಾಗಲಿ |

ಸಾರಸ್ವತ ವಿಶ್ವ ಮೇಳವೆಲ್ಲ
ರಾಮರಾಜ್ಯವಾಗಲಿ |

ಕನ್ನಡ ಜನರ ಹೃದಯವೆಲ್ಲ
ಪ್ರೇಮರಾಜ್ಯವಾಗಲಿ |

ವೀಕ್ಷಕರು ಆನಂದದಿ
ಚಪ್ಪಾಳೆ ತಟ್ಟೆ ನಗುತಿರಲಿ |

ನಮ್ಮೆದೆ ಉಬ್ಬುಬ್ಬಿ
ಹರುಷವನೆ ಸುರಿಸಲಿ |

ನಮ್ಮ ನಿಮ್ಮ ವ್ಯಾಜ್ಯವೆಲ್ಲ
ಸಂಪೂರ್ಣ ಮರೆಯಾಗಲಿ |

ಕಾವ್ಯ ಕಾದಂಬರಿಗಳೆಲ್ಲ
ಸುವರ್ಣ ಸೃಷ್ಟಿಯಾಗಲಿ |

ಈ ಕನ್ನಡ ದೇಶ ಭಾರತಕೆ
ಕನ್ನಡಿಯಾಗಿ ಉಳಿಯಲಿ |

ಸರಸ್ವತಿಯ ಕರುಣೆ ನಮಗೆ
ಶರಾವತಿಯಂತೆ ಇರಲಿ |

ನೋವು ಕಾವುಗಳೆಲ್ಲ
ಅಳಿದು ಹೋಗಲಿ |

ನಮ್ಮ ನಿಮ್ಮ ಮನವೆಲ್ಲ
ಪರಿಶುದ್ಧವಾಗಲಿ |

ಈ ಕನ್ನಡ ಸಮ್ಮೇಳನ
ಯಶಸ್ವಿಯಾಗಲಿ ||

---

* ನಲವತ್ತನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯಲ್ಲಿ ಶ್ರೀ ಶ್ರೀನಿವಾಸ ಉಡುಪ ಅವರು ಓದಿದ ಕವನ.

# ನಾಟಕ ಗೋಷ್ಠಿಯ ಅಧ್ಯಕ್ಷರ ಭಾಷಣ

[ಕಳೆದ ಡಿಶೆಂಬರ್ ೩೦ ರಂದು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ನಡೆದ ನಾಟಕ ಗೋಷ್ಠಿಯ ಅಧ್ಯಕ್ಷ ಡಾ॥ ಎಂ. ಎಸ್. ಸುಂಕಾಪೂರ ಅವರು ಮಾಡಿದ ಭಾಷಣವನ್ನು ಕೊಡಲಾಗಿದೆ.]

‘ನಾಟ್ಯಂ ಭಿನ್ನರುಚೇರ್ಜನಸ್ಯ ಬಹುದಾಪ್ಯೇಕಂ ಸಮಾರಾಧನಂ’

ತುಮಕೂರು ಅಮರಗುಂಡದ ಒಂದು ಮುಖ್ಯ ವಿಭಾಗ. ಪ್ರಾಚೀನ ಕರ್ನಾಟಕದ ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಇತಿಹಾಸದಲ್ಲಿ ಅಮರಗುಂಡದ ಹೆಸರು ಅಜರಾಮರವಾಗಿದೆ. ಅಮರಗುಂಡದ ಮಲ್ಲಿಕಾರ್ಜುನ ಶರಣರು ತಮ್ಮ ನಿರ್ಮಲ ನಡೆನುಡಿಗಳಿಂದ ಲೋಕವಿಖ್ಯಾತರೆನಿಸಿಕೊಂಡರು. ಅಂದಿನ ಅಮರಗುಂಡವೇ ಇಂದಿನ ಗುಬ್ಬಿ. ಈ ಭಾಗದಲ್ಲಿ ಅನೇಕ ಸಾಹಿತ್ಯ ರತ್ನಗಳೂ, ಧರ್ಮಶಿರೋಮಣಿಗಳೂ, ತತ್ವವೇತ್ತರೂ, ಶಿಲ್ಪಕಲಾವಿದರೂ, ವಿದ್ವಾಂಸರೂ ಜನ್ಮವೆತ್ತಿರುವುದು ಈ ನಾಡಿನ ಪುಣ್ಯವೇ ಸರಿ. ಪ್ರಭುದೇವರ ಅಪರಾವತಾರವೆನಿಸಿದ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಜನ್ಮಭೂಮಿ, ತಪೋಭೂಮಿ–ನೆರೆಯ ಎಡೆಯೂರೆಂಬುದು ಸರ್ವಶ್ರುತ. ಈ ಭಾಗದಲ್ಲಿಯೇ ಗುಬ್ಬಿ ಮಲ್ಲಣ್ಣ, ಮಲ್ಲಣಾರ್ಯ, ಶಾಂತೇಶ, ಚೆನ್ನಬಸವೇಶ್ವರ, ಸಂಪಾದನೆಯ ಸಿದ್ಧವೀರೇಶ್ವರ, ಪರ್ವತೇಶ್ವರ, ವಿರಕ್ತ ತೋಂಟದಾರ್ಯ ಮೊದಲಾದ ಶರಣಕವಿಗಳು ಉದಿಸಿ ಕನ್ನಡ ಸಾಹಿತ್ಯ ಸಂವರ್ಧನೆಗೆ ಸಹಾಯ ಸಲ್ಲಿಸಿದ್ದಾರೆ. ಅವರು ರಚಿಸಿದ ಗಣಭಾಷಿತ ರತ್ನಮಾಲೆ, ವಾತುಲ ತಂತ್ರಟೀಕೆ, ವೀರಶೈವಾಮೃತ ಪುರಾಣ, ಸಿದ್ಧೇಶ್ವರ ಪುರಾಣ, ಶೂನ್ಯಸಂಪಾದನೆ ಮುಂತಾದ ಕೃತಿರತ್ನಗಳು ನಮ್ಮ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನಗಳಿಸಿಕೊಂಡಿವೆ. ಲಲಿತ ಕಲೆಗಳು ಅರಳಿ ನಿಂತುದೂ ಈ ನಾಡಿನಲ್ಲಿಯೇ. ಕೈದಾಳದ ಜಕ್ಕಣಾಚಾರ್ಯನು ಶಿಲ್ಪ ಕಲೆಗೂ ಕೈದಾಳದ ನಂಜುಂಡ ಸ್ವಾಮಿಗಳೂ ಚಿತ್ರಕಲೆಗೂ ಉಸಿರಾಗಿದ್ದಾರೆ. ಇನ್ನೊಂದು ವಿಶೇಷವೆಂದರೆ ತುಮಕೂರ ವಿಭಾಗವು ಕನ್ನಡ ಶ್ರೇಷ್ಠ ಪ್ರತಿಯ ನಟರಿಗೂ ನಾಟಕಕಾರರಿಗೂ ಜನ್ಮವಿತ್ತಿರುವುದು. ನಾಟಕರತ್ನ ಗುಬ್ಬಿ ವೀರಣ್ಣನವರು, ಖ್ಯಾತನಟ ಕೆ. ಹಿರಣ್ಣಯ್ಯನವರು ಕನ್ನಡ ರಂಗಭೂಮಿಗೆ ಸಲ್ಲಿಸಿದ ಸೇವೆ ಅಪ್ರತಿಮವಾದುದು. ನಾಟಕ ಗೋಷ್ಠಿಯ ಅಧ್ಯಕ್ಷ ಸ್ಥಾನದಿಂದ ಬಿತ್ತರಿಸುವ ಈ ಭಾಷಣದಲ್ಲಿ ಈ ಮಹನೀಯರ ನಾಮಸ್ಮರಣೆ ಮಾಡದೆ ಹೋದರೆ ಕರ್ತವ್ಯ ಚ್ಯುತಿಮಾಡಿದಂತಾಗುವುದು.

ಪುಣ್ಯಸ್ಥಾನಗಳೆನಿಸಿದ ಸಿದ್ಧಗಂಗೆ ಶಿವಗಂಗೆಗಳು ನಾಡದೇವಿಯ ಎರಡು ಕಣ್ಣುಗಳಾಗಿ ಶೋಭಿಸುತ್ತಿವೆ. ಸಿದ್ಧಗಂಗೆಯಂತೂ ಧರ್ಮ ಸಾಹಿತ್ಯಗಳ ಸಿದ್ಧಿಯನ್ನು ಪಡೆದು ಈ ಸಮ್ಮೇಳನದ ಪುಣ್ಯಕ್ಷೇತ್ರವಾಗಿ ಪರಿಣಮಿಸಿದೆ. ಇಂತು ಪವಿತ್ರವೂ ಮಹತ್ವವೂ ಆದ ಈ ದಿವ್ಯ ಕ್ಷೇತ್ರದಲ್ಲಿ, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ನೆರವೇರಿದ ಈ ನಾಟಕಗೋಷ್ಠಿಯ ಅಧ್ಯಕ್ಷ ಪದವಿಯ ಹೊಣೆಯನ್ನು ಹಿರಿಯರು ನನ್ನ ಮೇಲೆ ಹೊರಿಸಿದ್ದಾರೆ. ಅದು ಪರಮಾಶೀರ್ವಾದವೆಂದು ನೆರೆನಂಬಿ “ಯದ್ಯತ್ಕರೋಮಿ ತತ್ತದಖಿಲಂ ಶಂಭೋತವಾರಾಧನಂ” ಎಂದು ಭಾವಿಸಿ ಹೊರೆ ಹೊತ್ತಿದ್ದೇನೆ. ಈ ಗೋಷ್ಠಿಯನ್ನು ಸಾಂಗವಾಗಿ ನೆರವೇರಿಸಿಕೊಡುವ ಹೊಣೆ ಸಹೃದಯರಾದ ತಮ್ಮೆಲ್ಲರ ಮೇಲಿದೆ.

ವಿಶ್ವಸಾಹಿತ್ಯದಲ್ಲಿ ನಾಟಕ ಸಾಹಿತ್ಯಕ್ಕೆ ವಿಶಿಷ್ಟವಾದ ಸ್ಥಾನವಿದೆ. ಪ್ರಾಯಶಃ ಸಾಹಿತ್ಯದ ಇನ್ನಾವ ಪ್ರಕಾರವೂ ನಾಟಕದಷ್ಟು ಪರಿಣಾಮಕಾರಿಯಾಗಿಲ್ಲವೆನಿಸುತ್ತದೆ. ಅಂತೆಯೇ ವಿನಯಕ್ಕೆ ಆದರ್ಶ ಶಿರೋಮಣಿಯೆನಿಸಿದ ಕಾಳಿದಾಸನು ನಾಟಕವನ್ನು ಕುರಿತು “ನಾಟ್ಯಂ ಭಿನ್ನರುಚೇರ್ಜನಸ್ಯ ಬಹುದಾಪ್ಯೇಕಂ ಸಮಾರಾಧನಂ” ಎಂದು ಸಾರಿದನು. ಈ ಮಾತು ನಿತ್ಯ ಸತ್ಯವಾದುದು. ಜನಾಂಗದಲ್ಲಿ ಭಿನ್ನಭಿನ್ನ ದೃಷ್ಟಿಕೋನಗಳು, ಭಿನ್ನಭಿನ್ನ ಒಲವುನಿಲವುಗಳು ಇರುವುದು ಸ್ವಾಭಾವಿಕ. ಜನ ಬೆಳೆದು ಜನಾಂಗವಾಗುವಲ್ಲಿ, ಭಿನ್ನ ಭಿನ್ನ ಪ್ರವೃತ್ತಿಯ ಜನತೆಯಲ್ಲಿ ರಸಾನುಭೂತಿ ಸಿದ್ಧಿಯನ್ನು ಪಡೆಯಬೇಕಾದರೆ ನಾಟಕವೊಂದೇ ಸಮರ್ಥ ರೀತಿಯಿಂದ ಕಾರ್ಯ ಮಾಡಬಲ್ಲುದು. ಅಂತೆಯೇ ಜಗತ್ತಿನ ಪ್ರಾಚೀನ ವಾಙ್ಮಯದಲ್ಲಿ ನಾಟಕ ಸಾಹಿತ್ಯಕ್ಕೆ ಪ್ರಧಾನ ಸ್ಥಾನವಿದ್ದುದು ಸ್ಪಷ್ಟವಾಗುತ್ತದೆ.

ಗ್ರೀಕ ನಾಟಕ, ಸಂಸ್ಕೃತ ನಾಟಕ, ಇಂಗ್ಲೀಷ ನಾಟಕ ಇವು ಜಗತ್ತಿನ ಇತಿಹಾಸದಲ್ಲಿ ಅಚ್ಚಳಿಯದೆ ಉಳಿದು ಬಂದ ಕಲಾಕೃತಿಗಳು. ಗ್ರೀಸ್ ದೇಶದಲ್ಲಿ ಕ್ರಿ. ಪೂ. ೫ನೆಯ ಶತಮಾನದಲ್ಲಿ ಅರಳಿದ ಇಸ್ಕಿಲಸ್, ಸಪೋಕ್ಲಿಸ್, ಯುರಿಪಿಡಿಸ್ ಈ ಮಹಾಶಯರ ನಾಟಕಗಳು ಲೋಕವಿಖ್ಯಾತವಾ

ಗಿವೆ. ಜೀವನವನ್ನು ಸಮಗ್ರವಾಗಿಯೂ ಸಾವಧಾನವಾಗಿಯೂ ನಿರೀಕ್ಷಿಸಿದ ಈ ನಾಟಕಕಾರರು ಅತ್ಯಂತ ಮಾರ್ಮಿಕವೂ ಮನೋಜ್ಞವೂ ಆದ ನಾಟಕಗಳನ್ನು ರಚಿಸಿದ್ದಾರೆ.

As flies are to wanton boys
So are we to Gods.

ದೇವತೆಗಳ ಕೈಯಲ್ಲಿಯ ಮಾನವರು ಮಕ್ಕಳ ಕೈಯೊಳಗಿನ ನೊಣಗಳಿದ್ದಂತೆ. ಅವರು ಮನಬಂದಂತೆ ಅವರನ್ನು ಕಾಡಿಸಿ ಪೀಡಿಸಿ ಕೊಂದು ಆನಂದಪಡಬಲ್ಲರು. ಗ್ರೀಕ ದೇವತೆಗಳು ಮಾನವನ ವಿಷಯವಾಗಿ ಇಟ್ಟುಕೊಂಡ ಸಂಬಂಧ ಈ ಬಗೆಯದು. ಜನವಿದ್ದಂತೆ ಜನತೆಯ ಸಾಹಿತ್ಯ. ಗ್ರೀಕ ದೇಶದ ಆ ಕಾಲದ ಜನಜೀವನವನ್ನೂ ಅವರ ಜೀವನ ಸಮಸ್ಯೆಗಳನ್ನೂ ಈ ನಾಟಕಗಳು ಬಿತ್ತರಿಸಿದವು, ಬಿಡಿಸಿದವು, ಸ್ಥಾಯಿಯಾದವು.

ಗ್ರೀಕ ಸಾಹಿತ್ಯವನ್ನೇ ಯೂರೋಪದ ಮಿಕ್ಕ ಸಾಹಿತ್ಯಗಳು ಆಧಾರವಾಗಿಟ್ಟುಕೊಂಡರೂ ಕಾಲಕಾಲಕ್ಕೆ ದರ್ಶನದಲ್ಲಿಯೂ ಪ್ರದರ್ಶನದಲ್ಲಿಯೂ ಮಹತ್ವದ ಮಾರ್ಪಾಡುಗಳನ್ನು ಆಯಾ ದೇಶದ ಮಹಾ ಕವಿಗಳು ಮಾಡಿಕೊಂಡಿರುವುದುಂಟು. ಅವರಲ್ಲೆಲ್ಲ ಅಗ್ರಗಣ್ಯನಾದವನು ಮಹಾಕವಿ ಷೇಕ್ಸ್‌ಪಿಯರ್. ಅವನು ಜೀವನವನ್ನು ಹೊಸ ದೃಷ್ಟಿಯಿಂದ ನಿರೀಕ್ಷಿಸಿದನು; ವಾಸ್ತವ್ಯ ದೃಷ್ಟಿಯಿಂದ ಅವಲೋಕಿಸಿದನು. ಗ್ರೀಕ್ ನಾಟಕಕಾರರು ತಿಳಿದುಕೊಂಡಂತೆ ಮಾನವನ ಆಗುಹೋಗುಗಳಿಗೆ ದೇವತೆಗಳೇ ಕಾರಣವೆಂದು ನಂಬುವ ಕಾಲ ಆಗಲೇ ಮಾಜಿಹೋಗಿದ್ದಿತು. ಷೇಕ್ಸ್‌ಪಿಯರ ಮಹಾಕವಿಯ ದಿವ್ಯ ದೃಷ್ಟಿಗೆ ಮಾನವನ ಏಳುಬೀಳುಗಳಿಗೆ ಅವನ ವೈಯಕ್ತಿಕ ಜೀವನದ ಒಲವು ನಿಲವುಗಳೇ ಕಾರಣವೆಂಬ ಮಾತು ಗೋಚರವಾಯಿತು. ಸ್ವಭಾವದೊಳಗಿನ ಒಂದು ದೌರ್ಬಲ್ಯವು ಸಾವಿರ ಸದ್ಗುಣಗಳ ಶಕ್ತಿಯನ್ನು ಹಿಮ್ಮೆಟ್ಟಿಸಿ ಮನುಷ್ಯನ ಅಧಃಪತನಕ್ಕೆ ಕಾರಣವಾಗಬಲ್ಲುದೆಂಬ ದರ್ಶನವನ್ನು ಷೇಕ್ಸ್‌ಪಿಯರ್ ಕವಿ ಕಂಡುಕೊಂಡನು. ಆತನ ದುರಂತ ನಾಟಕಗಳಿಗೆಲ್ಲ ಈ ತತ್ವವೇ ತಳಹದಿಯಾಯಿತು. ಮಾನವ ಜೀವನದ ಮನೋವಿಶ್ಲೇಷಣೆಯಲ್ಲಿ, ಅದರ ಸತ್ಯಾಂಶವನ್ನೂ ತಥ್ಯಾಂಶವನ್ನೂ ನಿರೂಪಿಸುವಲ್ಲಿ, ಕವಿ ಷೇಕ್ಸ್‌ಪಿಯರನು 'ನ ಭೂತೋ ನ ಭವಿಷ್ಯತಿ' ಎಂಬ ಮಾತಿಗೆ ಉತ್ತಮ ನಿದರ್ಶನವಾದನು. ಹೀಗೆ ಪಾಶ್ಚಾತ್ಯ ದೇಶದ ನಾಟಕ ಪ್ರಪಂಚದಲ್ಲಿ ರುದ್ರನಾಟಕ, ದುರಂತ ನಾಟಕಗಳಿಗೆ ಪ್ರಧಾನ ಸ್ಥಾನ ದೊರೆತಿದ್ದರೂ ಅಲ್ಲಿ ಹಾಸ್ಯ ಪ್ರಧಾನವಾದ ಸುಖಾಂತನಾಟಕಗಳು ಬೆಳೆಯದೆ ಉಳಿಯಲಿಲ್ಲ. ಬರುತ್ತ ಸುಖಾಂತ ನಾಟಕಗಳೇ ಅಗ್ರಸ್ಥಾನಕ್ಕೇರಿದವು. ಜೀವನವನ್ನು ಪೂರ್ಣ ದೃಷ್ಟಿಯಿಂದ ಕಂಡ ಯೋಗಿಗಳವರು.

ಸಂಸ್ಕೃತ ಸಾಹಿತ್ಯದಲ್ಲಿಯೂ ನಾಟಕಕ್ಕೆ ಗಣ್ಯ ಸ್ಥಾನವಿದೆ. ವೇದ, ಆಗಮ, ಉಪನಿಷತ್ತು, ರಾಮಾಯಣ, ಮಹಾಭಾರತಗಳು ಉದಯವಾದನಂತರ ಸಂಸ್ಕೃತ ನಾಟಕ ಸಾಹಿತ್ಯದ ಉಜ್ವಲ ಯುಗವು ಆರಂಭವಾಗುತ್ತದೆ. ಕ್ರಿ.ಶ. ೧ನೆಯ ಶತಮಾನದಿಂದ ೬ನೆಯ ಶತಮಾನದವರೆಗಿನ ಅವಧಿ ನಾಟಕ ಸಾಹಿತ್ಯ ದೃಷ್ಟಿಯಿಂದ ಅಮರವಾಗಿದೆ. ಲೌಕಿಕ ಜೀವನವನ್ನು ಸಮದೃಷ್ಟಿಯಿಂದ ಸಮ್ಯಕ್ ದೃಷ್ಟಿಯಿಂದ ಕಂಡ ಕಾಲವದು. ಈ ಕಾಲಾವಧಿಯಲ್ಲಿ ಭಾಸ, ಕಾಳಿದಾಸ, ಭವಭೂತಿ, ಶ್ರೀಹರ್ಷ, ವಿಶಾಖದತ್ತರಂತಹ ಮಹಾಕವಿಗಳು ಮೈವೆತ್ತು. ವಿಶ್ವ ವಾಙ್ಮಯದಲ್ಲಿ ಗಣ್ಯ ಸ್ಥಾನವನ್ನು ಪಡೆಯಬಲ್ಲ ನಾಟಕಗಳನ್ನು ರಚಿಸಿದರು. ಈ ನಾಟಕಕಾರರಲ್ಲಿ ಕಾಳಿದಾಸ ಮಹಾಕವಿಯು ಮೇರು ಪರ್ವತದಂತೆ ಉನ್ನತ ಸ್ಥಾನ ಪಡೆದನು. ಭಾರತೀಯ ಸಂಸ್ಕೃತಿಯ ಹಿರಿಮೆ ದೇಶವಿದೇಶಗಳಲ್ಲಿ ವಿದಿತವಾದುದು ಕಾಳಿದಾಸ ಮಹಾಕವಿಯ ಶಾಕುಂತಲ ನಾಟಕದಿಂದ. ಪಾಶ್ಚಾತ್ಯ ನಾಟಕಕಾರರು ಕೊಲೆ, ಸುಲಿಗೆ, ಪಾತಕದಂತಹ ಭೀಕರ ದೃಶ್ಯಗಳನ್ನೇ ಚಿತ್ರಿಸಲೆಳಸಿದರು: ಆದರೆ ಭಾರತೀಯ ನಾಟಕಕಾರರು ಋಷ್ಯಾಶ್ರಮ, ಪ್ರಥಮ ಸಂದರ್ಶನದ ಕಾಮ, ವಿರಹದಿಂದ ಬೆಂದ ಕಾಮವೇ ಪ್ರೇಮ, ಮಕ್ಕಳನ್ನು ಹೆತ್ತು ಹೊತ್ತು ಲಾಲಿಸಿ ಪಾಲಿಸುವ ಮಹದಾನಂದ, ಇಹಪರಗಳನ್ನು ಒಂದುಗೂಡಿಸುವ ಸಂಕ್ರಾಂತ ಸೃಷ್ಟಿ, ಕೊನೆಗೆ ಉಳಿಯುವ ಶಾಂತಿ ತತ್ವ—ಇವನ್ನೇ ಮನೋಹರವಾಗಿ ಚಿತ್ರಿಸಿದರು. ಅವರವರ ಸಂಸ್ಕೃತಿ ಇದ್ದಂತೆಯೇ ಅವರವರ ಸಾಹಿತ್ಯ. ಪರಮಾದರ್ಶವನ್ನಿಟ್ಟುಕೊಂಡು ಬೆಳೆದು ಬಂದ ಸಂಸ್ಕೃತ ನಾಟಕ ಸಾಹಿತ್ಯವು ಮಹಾಕಾವ್ಯದ ಸೆಳವಿಗೆ ಸಿಕ್ಕು ಮುಂದಣ ಸಾಹಿತ್ಯ ನಿರ್ಮಿತಿಯಲ್ಲಿ ಗೌಣ ಸ್ಥಾನ ಪಡೆಯಿತು.

ವಿಶ್ವದ ಪ್ರಾಚೀನ ನಾಟಕ ಸಾಹಿತ್ಯವನ್ನು ಸ್ಥೂಲವಾಗಿ ಒಂದೆರಡು ಮಾತುಗಳಲ್ಲಿ ದಿಗ್ದರ್ಶನ ಮಾಡಲಾಯಿತು. ಈ ಕೃತಿಗಳು ಹುಟ್ಟಿದಾಗಲೇ ನಾಟಕ ಜನ್ಮ ತಾಳಿತೆಂದು ಭಾವಿಸುವುದು ಸರಿಯಲ್ಲ. ನಾಟ್ಯ ಪ್ರವೃತ್ತಿ ಮಾನವನಿಗೆ ಅತ್ಯಂತ ಸಹಜವಾದುದು; ಹರ್ಷವಾದಾಗ ಉಬ್ಬಿ ಕುಣಿಯುವುದೂ ದುಃಖವಾದಾಗ ಕಣ್ಣೀರಿಡುವುದೂ ಮಾನವನ ಹುಟ್ಟುಗುಣ. ತನಗೆ ಅನಿಸಿದ್ದನ್ನು ಅನ್ಯರಿಗೆ ತಿಳಿಸಲು ಮೂಲ ಮಾನವನು ಅನೇಕ ಪ್ರಕಾರಗಳನ್ನು ಆಶ್ರಯಿಸಿದ. ಅವನ ಅಭಿವ್ಯಕ್ತಿಯ

ಪ್ರಕಾರಗಳಲ್ಲಿ ಅಭಿನಯ ಮಹತ್ವದ ಪಾತ್ರವನ್ನಾಡಿತು. ಅಭಿನಯವು ನಿಜವಾಗಿ ನೋಡಿದರೆ ಮಾನವನ ಗ್ರಹಣಶಕ್ತಿಯ ಅನುಕೃತಿಯಾಗಿದೆ. ಅನುಕರಣವೇ ಅಭಿನಯಕ್ಕೆ ಮೂಲವೆಂದು ಹೇಳುವವರೂ ಉಂಟು. ಅದೇನೇ ಇರಲಿ; ಮಾನವನು ತನ್ನ ಅನುಭವವನ್ನು ಅನ್ಯರಿಗೆ ತಿಳಿಸಿ ಕೊಡಲು ಅಭಿನಯವನ್ನು ಒಂದು ಉತ್ತಮ ಸಾಧನ ಮಾಡಿಕೊಂಡ. ಚಿಕ್ಕಮಕ್ಕಳ ಪ್ರಗತಿಯನ್ನು ಅಭ್ಯಸಿಸಿದವರಿಗೆ ಈ ಮಾತು ಸತ್ಯವೆನಿಸುವುದು. ಮೊದಮೊದಲು ಅನುಕರಣೆ ಎನಿಸಿಕೊಂಡ ಅಭಿನಯದ ಅಂಶಗಳೇ ಬಲಿತು ಅಭಿವ್ಯಕ್ತಿಯ ಸಾಧನವಾಗಿ ನಿಲ್ಲುತ್ತವೆ. ಇದನ್ನೆಲ್ಲ ಮನದಂದರೆ ಅಭಿನಯವು ಮಾನವನಿಗೆ ಸ್ವಭಾವ ಜನ್ಮವೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ನಮ್ಮ ರಂಗಭೂಮಿ ಅಭಿನಯದಷ್ಟೇ ಹಳೆಯದೆಂದೂ ಅಭಿನಯಶಕ್ತಿ ಮಾನವನಷ್ಟೇ ಪುರಾತನವಾದುದೆಂದೂ ಹೇಳಿದರೆ ಅಸತ್ಯವೆನಿಸದು.

ನೃತ್ಯ ಮತ್ತು ನಾಟಕಗಳಿಗೆ ಮೂಲಸ್ಥಾಯಿ ಒಂದೇ. ನೃತ್ಯವು ಹಾವಭಾವ, ಮುದ್ರೆ ಮೊದಲಾದವುಗಳನ್ನು ಅಭಿವ್ಯಕ್ತಿಯ ಸಾಧನವಾಗಿ ಅಂಗೀಕರಿಸಿದರೆ, ನಾಟಕವು ಅದಕ್ಕೂ ಮುಂದೆ ಹೋಗಿ ಭಾಷೆಯೆಂಬ ಉನ್ನತ ಸಾಧನವನ್ನು ಆಶ್ರಯಿಸಿತು. ಹೀಗಿದ್ದ ಮೇಲೆ ನಾಟಕದ ಹುಟ್ಟು ಮಾನವ ಜನಾಂಗದ ಹುಟ್ಟಿನೊಡನೆಯೇ ಆಗಿದೆಯೆಂದರೆ ಅತಿಶಯೋಕ್ತಿ ಎನಿಸದು. ಅಂತೆಯೇ ಜಗತ್ತಿನೊಳಗಿನ ಅತ್ಯಂತ ಕಾಡು ಜನಾಂಗಗಳಲ್ಲಿಯೂ ಸಹ ಅವರವರ ಸಂಸ್ಕೃತಿಗೆ ತಕ್ಕಂತೆ ನೃತ್ಯ ನಾಟಕಗಳಿರುವುದು ಪಂಡಿತರ ಅವಗಾಹನೆಗೆ ಬಂದಿದೆ. ಸುಸಂಸ್ಕೃತರಿರಲಿ, ಅಸಂಸ್ಕೃತರಿರಲಿ—ಎಲ್ಲರಿಗೂ ನಾಟಕ ಆವಶ್ಯಕವೆಂಬ ಮಾತು ಎಂದೋ ಸಿದ್ಧವಾಗಿದೆ. ಆದ್ದರಿಂದ ನಾಟ್ಯ ಪ್ರವೃತ್ತಿ ಮಾನವ ಜನಾಂಗದಲ್ಲಿ ಆಜನ್ಮಸಿದ್ಧವೆಂಬುದನ್ನು ಯಾರೂ ಅಲ್ಲಗಳೆಯಲಾರರು.

ನಾಟಕವು ಬರೀ ಮಾತಿನ ಮಂಟಪವಲ್ಲ; ರಾಗಲಾಪಗಳ ಓವರಿಯಲ್ಲ. ಅದೊಂದು ಸುಂದರದೃಶ್ಯ; ಮನೋಹರ ಚಿತ್ರ. ದೃಶ್ಯದ ಮೇಲೆ ದೃಶ್ಯವೊಂದು ಕಾಣಬಂದು ನಮ್ಮ ಜೀವನ ದರ್ಶನವನ್ನೇ ನಮ್ಮ ಮನಂಬುಗುವಂತೆ ಮಾಡುವ ಒಂದು ಮಹತ್ವಪೂರ್ಣ ಕಲೆಯಾಗಿದೆ ನಾಟಕ. ಅಭಿನಯದ ತರಂಗಗಳು ಪ್ರೇಕ್ಷಕನಲ್ಲಿ ಭಾವನಾತರಂಗಗಳನ್ನೆಬ್ಬಿಸಿ ರಸಾನುಭೂತಿಗೆ ಅನುವು ಮಾಡಿಕೊಡುತ್ತವೆ. ಅಂತೆಯೇ ಮಾನವನ ಮನಕ್ಕೂ ಜೀವನಕ್ಕೂ ಹೊಂದಿಕೆಯಾಗುವಂತೆ ಕಾರ್ಯ ಮಾಡುತ್ತಾ ಬಂದಿದೆ ನಾಟ್ಯ ಕಲೆ. ಇದನ್ನು ತಿಳಿದರೆ ನಮ್ಮ ನಮ್ಮ ನಡವಳಿಕೆಯಲ್ಲಿ ವ್ಯಕ್ತವಾಗುವ ಪರಿಪರಿಯ ಅಭಿನಯಗಳ ಹಿಂದೆ ಒಂದು ಅವ್ಯಕ್ತ ರಂಗಭೂಮಿ ಪಡಿನೆಳಲಿನಂತೆ ನಿಂತೇ ಇರುತ್ತದೆ. ಹೀಗೆ ಇದೇ ರಂಗಭೂಮಿ ಪ್ರತಿಯೊಬ್ಬರ ಮನದಲ್ಲಿಯೂ ಮನೆಮನೆಗಳಲ್ಲಿಯೂ ಹಾದಿಬೀದಿಗಳಲ್ಲಿಯೂ ಊರ ಬಯಲುಗಳಲ್ಲಿಯೂ ಸುಳಿದಾಡುತ್ತ ಇತ್ತೀಚೆಗೆ ವಿಶಿಷ್ಟವಾಗಿ ರಚಿಸಿದ ರಂಗಮಂಟಪವನ್ನು ಪ್ರವೇಶಿಸಿದೆ, ರಂಗಮಂಟಪವೆನಿಸಿಕೊಂಡಿದೆ.

ಕನ್ನಡನಾಡು ನುಡಿಗಳು ಭಾರತದ ಇತಿಹಾಸದಲ್ಲಿ ಅತ್ಯಂತ ಗಣ್ಯ ಸ್ಥಾನವನ್ನು ಪಡೆದಿವೆ. ಪ್ರಾಚೀನತೆಯ ದೃಷ್ಟಿಯಿಂದ ಕನ್ನಡ ಸಾಹಿತ್ಯವು, ಸಂಸ್ಕೃತ ತಮಿಳು ವಾಙ್ಮಯಗಳನ್ನು ಬಿಟ್ಟರೆ, ಭಾರತದಲ್ಲಿ ಅಗ್ರಸ್ಥಾನವನ್ನು ಪಡೆದಿದೆ. ಚಂಪು, ಷಟ್ಪದಿ, ರಗಳೆ, ಸಾಂಗತ್ಯ, ವಚನ, ಗೀತ ಮುಂತಾದ ಪ್ರಕಾರಗಳು ತಲೆದೋರಿ ಕನ್ನಡ ಸಾಹಿತ್ಯದ ಸಿರಿಸಂಪತ್ತನ್ನು ಹೆಚ್ಚಿಸಿವೆ. ಆದರೆ ಕನ್ನಡ ವಾಙ್ಮಯವು ನಾಟಕ ಸಾಹಿತ್ಯಕ್ಕೆ ನೀಡಿದ ಕಾಣಿಕೆ ಏನೆಂಬ ಪ್ರಶ್ನೆ ನಮ್ಮ ಮುಂದೆ ಬಂದರೆ ಅದಕ್ಕೆ ಉತ್ತರಿಸುವುದು ಕರಕಷ್ಟವಾಗುತ್ತದೆ. ಕನ್ನಡ ಸಾಹಿತ್ಯವು ಕ್ರಿ. ಶ. ೫ನೆಯ ಶತಮಾನದ ಸುಮಾರಿಗೆ ಆರಂಭವಾದರೂ ಅಲ್ಲಿಂದ ೯ನೆಯ ಶತಮಾನದವರೆಗೆ ಉದಯವಾದ ಸಾಹಿತ್ಯ ಕೃತಿಗಳು ಉಪಲಬ್ಧವಾಗಿಲ್ಲವಾದ್ದರಿಂದ ಆ ಅವಧಿಯಲ್ಲಿ ನಾಟಕ ಸಾಹಿತ್ಯ ಇತ್ತೋ ಇಲ್ಲವೋ ಹೇಳುವುದಾದರೂ ಹೇಗೆ? ಒಂಬತ್ತನೆಯ ಶತಮಾನದೀಚೆಗೆ ಕನ್ನಡ ಸಾಹಿತ್ಯದ ಬೆಳೆ ಹುಲುಸಾಗಿ ಬಂದಿದೆ. ಹಳಗನ್ನಡ ಸಾಹಿತ್ಯವು ಹುಟ್ಟುವಾಗಲೂ ಬೆಳೆಯುವಾಗಲೂ ಸಂಸ್ಕೃತ ಭಾಷೆ ಮಾರ್ಗದರ್ಶನ ಮಾಡುತ್ತ ಬಂದಿದೆ. ಸಂಸ್ಕೃತದ ಆದರ್ಶ ಕನ್ನಡಕ್ಕೆ ನಿದರ್ಶನವಾಗಿ ಬಿಟ್ಟಿದೆ. ಹೀಗಾಗಿ, ೯ನೆಯ ಶತಮಾನದಿಂದ ಈಚೆಗೆ ಬೆಳೆದು ಬಂದ ಕನ್ನಡ ಸಾಹಿತ್ಯವು ಚೈತನ್ಯಪೂರ್ಣವಾಗಿದ್ದರೂ ಸಂಸ್ಕೃತವನ್ನನುಸರಿಸಿ, ನಾಟಕವನ್ನು ಕಡೆಗಣ್ಣಿ ನೋಡಿ, ಮಹಾಕಾವ್ಯಗಳನ್ನೇ ಮೈಗೂಡಿಸಿಕೊಂಡು ಬಂದಿರುವುದು ಸ್ಪಷ್ಟವಾಗಿದೆ. ಅಂತೆಯೇ ಕನ್ನಡದಲ್ಲಿ ನಾಟಕಗಳು ಆ ಕಾಲದಲ್ಲಿ ಹುಟ್ಟಲಿಲ್ಲವೆಂದು ಹೇಳುವುದು ಸತ್ಯವೆನಿಸಹತ್ತಿದೆ. ಆದರೆ ನಾಟಕೀಯ ಪ್ರತಿಭೆಯುಳ್ಳ ಕವಿಗಳು ಕನ್ನಡದಲ್ಲಿ ಜನಿಸಲೇ ಇಲ್ಲವೆಂದು ಹೇಳಲಿಕ್ಕಾದೀತೆ? ನಾಟಕೀಯ ಪ್ರತಿಭೆ ಹಳಗನ್ನಡದ ಅನೇಕ ಕವಿಗಳಲ್ಲಿ ಸ್ಫುಟವಾಗಿದ್ದಿತೆಂಬುದಕ್ಕೆ ನಿದರ್ಶನಗಳಿಲ್ಲದಿಲ್ಲ. ರನ್ನನ ಗದಾಯುದ್ಧ, ರಾಘವಾಂಕನ ಹರಿಶ್ಚಂದ್ರ ಕಾವ್ಯ ಇವು ನಾಟಕವನ್ನು ಗರ್ಭೀಕರಿಸಿಕೊಂಡ ಕಾವ್ಯಗಳೆಂಬುದನ್ನು ಪಂಡಿತರು ಈಗಾಗಲೇ ತೋರಿಸಿಕೊಟ್ಟಿದ್ದಾರೆ. ದರ್ಪಣಕಾರ ಕೇಶಿರಾಜನು ಬರೆದಿರುವ ಕೃತಿಗಳಲ್ಲಿ ಸುಭದ್ರಾಹರಣವು

ನಾಟಕವಾಗಿರಬೇಕೆಂದು ಊಹಿಸಲು ಸಾಧ್ಯವಿದೆ. ಎಲ್ಲದೂ ಊಹೆಯಾದರೆ ಹೇಗೆ? ಹದಿನೇಳನೆಯ ಶತಮಾನದ ಉತ್ತರಾರ್ಧಕ್ಕೆ ಬರುವವರೆಗೂ ಕನ್ನಡದಲ್ಲಿ ನಾಟಕಗಳಿಲ್ಲವೆಂಬ ಕೊರತೆಯ ಮಾತನ್ನು ನಾವು ಹೇಳುತ್ತಲೇ ಬರಬೇಕಾಗುತ್ತದೆ.

ಶ್ರೀಹರ್ಷನ ರತ್ನಾವಲೀ ನಾಟಕದ ಭಾಷಾಂತರವೆನಿಸಿದ ಮಿತ್ರವಿಂದಾ ಗೋವಿಂದವೇ ಈಗ ಉಪಲಬ್ಧವಾದ ಮೊದಲನೆಯ ಕನ್ನಡ ನಾಟಕ. ಅದಕ್ಕೆ ಚಾರಿತ್ರಿಕ ಬೆಲೆ ಇರುವದಷ್ಟೇ! ಕಲಾ ದೃಷ್ಟಿಯಿಂದ ಅದರ ಸ್ಥಾನಮಾನವೂ ಅಷ್ಟಕಷ್ಟೆ! ಆದರೂ ಮೈಸೂರು ದೊರೆಗಳ ಆಸ್ಥಾನದಲ್ಲಿ ಪಾಂಡಿತ್ಯಪೂರ್ಣ ಕೃತಿಗಳಿಗೆ ಬೆಲೆ ಇರುವಾಗ, ಆಳಿಹಿಯ ಸಿಂಗರಾರ್ಯನಂಥವರು ನಾಟಕ ಬರೆಯುವ ಸಾಹಸ ಮಾಡಿರುವುದು ತುಂಬಾ ಶ್ಲಾಘನೀಯ. ಅನಂತರವೂ ಪುನಃ ಮೌನ. ೧೯ನೆಯ ಶತಮಾನವು ಸರಿಯುವವರೆಗೆ ನಾಟಕ ಕೃತಿಗಳ ಸುದ್ದಿಯೇ ಇಲ್ಲದಾಯಿತು. ನಾಟಕಗಳು ಇಲ್ಲವೆಂದಾಕ್ಷಣವೇ ಕನ್ನಡದಲ್ಲಿ ರಂಗಭೂಮಿಯೇ ಇದ್ದಿಲ್ಲವೆಂದು ಹೇಳಲಿಕ್ಕಾಗದು. ಪಂಪನಿಂದ ಹಿಡಿದು ಮುದ್ದಣನವರೆಗೆ ಬೆಳೆದು ಬಂದ ಸಾಹಿತ್ಯದಲ್ಲಿ 'ನಾಟ್ಯಗರಣ' ಎನ್ನುವ ಪದ ಪ್ರಯೋಗವು ವಿಪುಲವಾಗಿ ಬರುತ್ತದೆ. ಆ ಪದದ ಸೂಕ್ಷ್ಮ ಅರ್ಥವನ್ನು ಮಾಡಿಕೊಂಡರೆ ಜಾನಪದ ರಂಗಭೂಮಿ ಯಾವಾಗಲೂ ಎಚ್ಚತ್ತು ವರ್ತಿಸುತ್ತಿತ್ತೆಂಬ ಮಾತು ಮನದಟ್ಟಾಗುವುದು. ನಾಡವರ ಅಭಿನಯವೇ, ಹಗರಣವೇ, ಹಗಣವೇ ಬಯಲಾಟದ ಒಂದು ಪ್ರಕಾರವಾಗಿದ್ದು ಸಾಮಾನ್ಯ ಜನತೆಗೆ ಮನರಂಜನೆ ನೀಡುವಲ್ಲಿ ಉದ್ಯುಕ್ತವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಜಾನಪದ ರಂಗಭೂಮಿಗೆ ಬರುತ್ತಿದ್ದ ಆಟಗಳನ್ನು ಸಾಮಾನ್ಯ ಕವಿಗಳು ಸಾಮಾನ್ಯ ಜನತೆಗೆ ಒದಗಿಸುತ್ತಿರಬೇಕು. ಪಂಡಿತಕವಿಗಳು ಅದು ತಮ್ಮ ಕಾರ್ಯವಲ್ಲೆಂದು ಭಾವಿಸಿರಬೇಕು. ಮುದ್ದಣ ಮಾತ್ರ ಸಂಪ್ರದಾಯದ ಕಟ್ಟು ಮುರಿದು ಒಂದೆರಡು ಯಕ್ಷಗಾನಗಳನ್ನು ಬರೆದನೆಂಬುದು ಸ್ಪಷ್ಟವಾಗಿದೆ. ಆದರೂ ಕನ್ನಡದಲ್ಲಿ ಜಾನಪದ ರಂಗಭೂಮಿಯು ಪಂಡಿತರ ಮೆಚ್ಚುಗೆಗೆ ಪಾತ್ರವಾಗದಿದ್ದರೂ ಸಾಮಾನ್ಯ ಜನತೆಯ ಉದ್ಧಾರಕ್ಕಾಗಿ ಕಂಕಣಬದ್ಧವಾಗಿ ಕಾರ್ಯ ಮಾಡುತ್ತಿತ್ತೆಂಬುದನ್ನು ಎಲ್ಲರೂ ನಂಬಬಹುದಾಗಿದೆ. ಜಾನಪದ ರಂಗಕ್ಕೆ ಕಾಲುಗಳಿದ್ದುವು. ಅದು ವೇಗದಿಂದ ಚಲಿಸುತ್ತಿತ್ತಲ್ಲದೆ ಅಲ್ಪ ವೆಚ್ಚದಲ್ಲಿ ಅಸಂಖ್ಯಾತ ಜನರಿಗೆ ಮನರಂಜನೆ ಕೊಡುತ್ತಿತ್ತು. ಕೆಲವೊಂದು ಮೂಲಭೂತ ನಿಯಮಗಳನ್ನುಳಿದರೆ ಅದು ಜನಜೀವನಕ್ಕೆ ಹೊಂದಿಕೊಂಡು ಹೋಗುತ್ತಿತ್ತು. ಜನತೆಯ ಜೀವನವನ್ನು ತಿದ್ದುವ, ಮಾರ್ಪಡಿಸುವ, ಅದಕ್ಕೊಂದು ಹೊಸತನವನ್ನು ನೀಡುವ ಕಾರ್ಯದಲ್ಲಿ ಅಮೋಘವಾದ ಸೇವೆಯನ್ನು ಅದು ಸಲ್ಲಿಸಿತು. ಪುರಾಣಗಳೇ ಬಯಲಾಟಕ್ಕೆ ವಸ್ತುವನ್ನು ನೀಡುತ್ತಿದ್ದವು. ಹಿಂದಿನ ಕಾಲದಿಂದಲೂ ಸಾಮಾನ್ಯರಲ್ಲಿ ಜ್ಞಾನ ಪ್ರಸಾರ ಮಾಡುತ್ತ ಬಂದ ಶ್ರೇಯಸ್ಸು ಜಾನಪದ ರಂಗಭೂಮಿಗೆ ಸಲ್ಲಬಹುದಾಗಿದೆ. ಹಳ್ಳಿಹಳ್ಳಿಗಳಲ್ಲಿ ಇಂದಿಗೂ ನಡೆಯುತ್ತಿರುವ ದಶಾವತಾರ, ಯಕ್ಷಗಾನ, ಪಾರಿಜಾತ, ಕಿಳ್ಳಿಕೇತರ ಆಟಗಳು ಮೊದಲಿನಿಂದಲೂ ಬಂದವುಗಳಾಗಿವೆ. ಪರಿಸರದ ಒತ್ತಡ ಹೆಚ್ಚಾದ ಈ ಕಾಲದಲ್ಲಿ, ಜಾನಪದ ರಂಗಭೂಮಿ ಮೊದಲಿನ ಉತ್ಸಾಹವನ್ನು ಬಿಟ್ಟುಕೊಡುವುದರಲ್ಲಿದೆ. ಅದೊಂದು ದುರ್ದೈವದ ಸಂಗತಿ.

ಇದೆಲ್ಲ ಸಾಮಾನ್ಯ ಜನತೆಯ ಮಾತಾಯಿತು. ಇನ್ನು ಮೇಲು ವರ್ಗದವರ ಗತಿಯೇನು? ಅವರು ನಾಟಕದಂತಹ ಒಂದು ರಂಜನ ಸಾಧನವನ್ನು ಪಡೆಯದಂತಹ ನೀರಸರಾದ್ದರೆ? ಹಾಗೇನೂ ಇಲ್ಲ. ಕನ್ನಡಿಗರು ಕುಲರಸಿಕರು. ಸರ್ವರಿಗೂ ಮನರಂಜನೆ ನೀಡುವ ವ್ಯವಸ್ಥೆ ಇದ್ದೇ ಇದ್ದಿತು. ರಾಜರಾಜರ, ಮಾಂಡಲಿಕ ದೊರೆಗಳ ಅರಮನೆಗಳಲ್ಲಿ ರಂಗಮಂಟಪಗಳಿರುತ್ತಿದ್ದವು. ಅಲ್ಲಿ ಪ್ರತಿಷ್ಠಿತ ನಾಗರಿಕರಿಗೂ ರಾಜ್ಯದ ಮೇಲಧಿಕಾರಿ ವರ್ಗಕ್ಕೂ ಪ್ರವೇಶ ದೊರೆಯುತ್ತಿತ್ತು. ರಾಜ–ರಾಣಿಯರೊಡನೆ ಕುಳಿತು ನೋಡುವ ಹಕ್ಕು ಅವರಿಗೆ ಪ್ರಾಪ್ತವಾಗಿದ್ದಿತು. ಅರಮನೆಯ ರಂಗಭೂಮಿ ನಾಟಕದ ಸವಿಯೂಟವನ್ನು ನೀಡಿ ಮೇಲು ವರ್ಗದವರನ್ನು ತಣಿಸುತ್ತಲಿದ್ದಿತು. ಇದಕ್ಕೆ ಸಾಕ್ಷಿಯಾಗಿ ವಿಜಯನಗರ, ತಂಜಾವೂರು, ಇಕ್ಕೇರಿ ಮೊದಲಾದ ರಾಜ್ಯಗಳ ರಾಜರ ಅರಮನೆಗಳಲ್ಲಿ ರಂಗಮಂಟಪಗಳಿದ್ದವೆಂಬುದನ್ನು ಇತಿಹಾಸ ತಿಳಿಸುತ್ತದೆ. ಅಲ್ಲಿ ನೃತ್ಯ, ಸಂಗೀತ, ನಾಟಕ ಆಗಾಗ ಜರುಗುತ್ತಿದ್ದವು. ಆದರೆ ಅಲ್ಲಿ ಹೆಚ್ಚಾಗಿ ಪ್ರದರ್ಶನವಾಗುತ್ತಿದ್ದ ನಾಟಕಗಳು ಸಂಸ್ಕೃತ ನಾಟಕಗಳು ಇಲ್ಲವೆ ಸಂಸ್ಕೃತ ನಾಟಕಗಳ ರೂಪಾಂತರಗಳು. ಅವರಿಗೆ ಯಾಕೋ ಏನೋ? ಸಂಸ್ಕೃತದ ವ್ಯಾಮೋಹ; ಹೀಗಾಗಿ ಕನ್ನಡ ನಾಟಕಗಳು ಹುಟ್ಟುವ ಸಂದರ್ಭ ಬರಲಿಲ್ಲ. ನಾಟಕಗಳು ಇಲ್ಲದಿದ್ದರೂ ಕನ್ನಡ ರಂಗಭೂಮಿ ಎಚ್ಚತ್ತಿರುವುದನ್ನು ಕಾಣಬಹುದು.

ಸಿಂಗರಾರ್ಯನು ಪ್ರಾರಂಭಿಸಿದ ನಾಟಕಾನುವಾದ ಕಾರ್ಯ, ಎರಡು ಶತಮಾನಗಳು ಕಳೆದ ಮೇಲೆ ಒಳ್ಳೆಯ ಭರದಿಂದ ಸಾಗಿತು. ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಮೈಸೂರು ದೊರೆಗಳ ಪ್ರೋತ್ಸಾಹದಿಂದ ಅನೇಕ ಸಂಸ್ಕೃತ ನಾಟಕಗಳು ಕನ್ನಡಕ್ಕಿಳಿದು ಬಂದವು. ಈ

ಕಾರ್ಯದಲ್ಲಿ ಯಶಸ್ವಿಯಾದವರೇ ದಿ|| ಬಸವಪ್ಪಶಾಸ್ತ್ರಿಗಳು. ಅವರು ಕಾಳಿದಾಸನ ಶಾಕುಂತಲ ನಾಟಕವನ್ನು ಕನ್ನಡಿಸಿ 'ಅಭಿನವ ಕಾಳಿದಾಸ'ನೆಂದು ಖ್ಯಾತಿ ಪಡೆದರು. ಅನೇಕ ಸಂಸ್ಕೃತ ನಾಟಕಗಳನ್ನು ಭಾಷಾಂತರಿಸುವವರ ಜೊತೆಗೆ ಷೇಕ್ಸ್‌ಪಿಯರನ ಒಥೆಲೋ ನಾಟಕವನ್ನು ಅವರು ಕನ್ನಡಕ್ಕೆ ತಿರುಗಿಸಿರುವುದನ್ನು ನೋಡಿದರೆ, ಕನ್ನಡ ನಾಟಕದ ಚೈತನ್ಯಯುಗ ಅವರಿಂದಲೇ ಆರಂಭವಾಯಿತೆಂದು ಹೇಳಬೇಕಾಗುತ್ತದೆ. ಅವರು ಹಾಕಿದ ಮಾರ್ಗದಲ್ಲಿಯೇ ಮುನ್ನಡೆದು ಅನೇಕ ಪಂಡಿತರು ಉಳಿದ ಸಂಸ್ಕೃತ ನಾಟಕಗಳನ್ನು ಕನ್ನಡಕ್ಕೆ ತರುವ ಸಾಹಸಮಾಡಿದರು. ಭಾಷಾಂತರ ನಾಟಕಗಳ ಶೈಲಿ ಚಂಪೂ ಶೈಲಿ. ಅದನ್ನೇ ಸ್ವಲ್ಪ ಶಿಥಿಲಗೊಳಿಸಿ ಶ್ರೀ ಮುಳಬಾಗಿಲ ಅವರು ಕನ್ನಡ ವೇಣಿ ಸಂಹಾರವನ್ನು ಬರೆದರು. ಈ ಭಾಷಾಂತರ ಕೃತಿಗಳು ಜನರಲ್ಲಿ ಓದುವ ಅಭಿರುಚಿಯನ್ನು ಹುಟ್ಟಿಸಿದವಲ್ಲದೆ ಕಂಪನೀ ನಾಟಕಗಳ ಮೇಲೆ ತಮ್ಮ ಪ್ರಭಾವ ಬೀರಿದವು.

೧೯ನೆಯ ಶತಮಾನದ ಅಂತ್ಯದಲ್ಲಿ ಕನ್ನಡ ರಂಗಭೂಮಿ ಚೇತರಿಸತೊಡಗಿತು. ನಾಟಕಗಳನ್ನು ಪ್ರದರ್ಶಿಸುವುದಕ್ಕಾಗಿ ಕಂಪನಿಗಳು ನಿರ್ಮಾಣಗೊಂಡವು. ಮೈಸೂರಿನ ವರದಾಚಾರ್ಯರು "ರತ್ನಾವಳಿ ಥಿಯೇಟ್ರಿಕಲ್ ಕಂಪನಿ" ಪ್ರಾರಂಭಿಸಿ ನಮ್ಮ ಪ್ರಾಚೀನ ಸಂಸ್ಕೃತಿಯ ಪರಂಪರೆಯ ನಾಟಕಗಳನ್ನು ಜನತೆಗೆ ಪರಿಚಯ ಮಾಡಿಸತೊಡಗಿದರು. ಆಸ್ಥಾನ ವಿದ್ವಾನ್ ಬಸವಪ್ಪ ಶಾಸ್ತ್ರಿಗಳವರ 'ಶಾಕುಂತಲ'ವನ್ನು ಕನ್ನಡ ಜನಸ್ತೋಮಕ್ಕೆ ಮೊದಲು ಬಾರಿ ಪ್ರಯೋಗಿಸಿ ತೋರಿಸಿದ ಶ್ರೇಯಸ್ಸು ವರದಾಚಾರ್ಯರಿಗೆ ಸಲ್ಲುತ್ತದೆ. ಅದೇ ರೀತಿಯಲ್ಲಿ ಶಾಸ್ತ್ರಿಗಳು ರಚಿಸಿದ ಶೂರಸೇನ ಚರಿತ್ರೆ (Othello) ರಂಗಭೂಮಿಗೆ ಬರುವಂತೆ ಮಾಡಿದವರೂ ಅವರೇ. ಅವರು ಆಡಿದ 'ರತ್ನಾವಳಿ' ಮತ್ತು 'ಇಂದಿರಾ ತನಯ' ನಾಟಕಗಳು ರಂಗಭೂಮಿಗೊಂದು ಭವಿತವ್ಯವಿದೆಯೆಂಬುದನ್ನು ತೋರಿಸಿದವು. ಅದೇ ಸಮಯದಲ್ಲಿ ಉತ್ತರ ಕರ್ನಾಟಕದಲ್ಲಿಯೂ ಕೆಲವು ಕಂಪನಿಗಳು ಮೂಡಿಬಂದವು. ಶ್ರೀ ಮುದವೀಡು ಕೃಷ್ಣರಾಯರು 'ಭರತ ಕಲೋತ್ತೇಜಕ ಕಂಪನಿ'ಗೆ ಪ್ರೋತ್ಸಾಹವಿತ್ತು ತುರಮುರಿಯವರ ಶಾಕುಂತಲವು ರಂಗಭೂಮಿಯ ಮೇಲೆ ಬೆಳಕಿಗೆ ಬರುವಂತೆ ಮಾಡಿದರು. ಕಂಪನೀ ರಂಗಭೂಮಿ ಕಳೆಗಟ್ಟತೊಡಗಿತು. ಈ ಕಂಪನಿಗಳು ಮೊದಮೊದಲು ಭಾಷಾಂತರ ನಾಟಕಗಳನ್ನೇ ಪ್ರದರ್ಶಿಸಿದವು. ಬರಬರುತ್ತ ಹಳೆಯ ಮಾದರಿಯಲ್ಲಿಯೇ ಸ್ವತಂತ್ರ ನಾಟಕಗಳನ್ನು ಬರೆಯಿಸಿ ಆಡತೊಡಗಿದವು. ಈ ಕಂಪನಿಗಳಲ್ಲಿ ಶಿರಹಟ್ಟಿ ವೆಂಕೋಬರಾವ್ ಕಂಪನಿ, ಕೊಣ್ಣೂರ ಕಂಪನಿ, ಅಸುಂಡಿ ಕಂಪನಿ, ಹಲಗೇರಿ ಕಂಪನಿ, ಮಹಮದ್ ಪೀರ್ ಕಂಪನಿ, ಗುಬ್ಬಿ ಕಂಪನಿ, ಹಿರಣ್ಣಯ್ಯ ಕಂಪನಿ, ಎಸ್. ಎಸ್. ನಾಟಕ ಮಂಡಳಿ, ಗರುಡ ಕಂಪನಿ, ಏಣಗಿ ಕಂಪನಿ, ಗೋಕಾಕ ಕಂಪನಿಗಳು ಮುಖ್ಯವಾದುವುಗಳು. ಇವರಿಗೆಲ್ಲ ಮೊದಮೊದಲು ಅನುವಾದ ಅನುಕರಣಗಳೇ ಆಧಾರವಾಗಿದ್ದವು. ಕೆಲವೊಂದು ಕಂಪನಿಗಳ ಮಾಲೀಕರು ಸ್ವತಃ ನಟರಾಗಿಯೂ ನಾಟಕಕಾರರಾಗಿಯೂ ಕಾರ್ಯ ಮಾಡಿದರು; ಕಲಾ ಸೇವೆಯನ್ನು ಮುಂದುವರಿಸಿದರು. ಸರ್ವಶ್ರೀ ಸದಾಶಿವ ಗರುಡ, ವಾಮನರಾವ ಮಾಸ್ತರ, ನಾಗೇಂದ್ರರಾವ, ಹಿರಣ್ಣಯ್ಯ ಮೊದಲಾದ ನಟಶ್ರೇಷ್ಠರು ರಚಿಸಿದ ನಾಟಕಗಳು ಕನ್ನಡ ರಂಗಭೂಮಿಯಲ್ಲಿಯೇ ಕ್ರಾಂತಿಯನ್ನುಂಟುಮಾಡಿದವು. ಉಳಿದ ಕಂಪನಿಗಳಿಗೆ ಸರ್ವಶ್ರೀ ನೀಲಕಂಠಶಾಸ್ತ್ರಿ, ಬೆಳ್ಳಾವೆ ನರಹರಿಶಾಸ್ತ್ರಿ, ಬಿ. ಪುಟ್ಟಸ್ವಾಮಿ. ಹುಯಿಲಗೋಳ ನಾರಾಯಣರಾವ, ಕಂದಗಲ್, ಕೆರೂರು ಮುಂತಾದವರು ನಾಟಕಗಳನ್ನು ಬರೆದು ಕೊಡುತ್ತಿದ್ದರು. ಅಲ್ಪ ಸಮಯದಲ್ಲಿಯೇ ಊರೂರಿಗೊಂದು ಕಂಪನಿ ಹುಟ್ಟತೊಡಗಿದವು. ನಾಟಕಕಾರರ ಸಂಖ್ಯೆಯೂ ಹೆಚ್ಚಿತು. ಮೊದಮೊದಲು ಪೌರಾಣಿಕ ನಾಟಕಗಳನ್ನೇ ಪ್ರದರ್ಶಿಸುತ್ತಿದ್ದ ಈ ಕಂಪನಿಗಳು ಕಾಲ ಸರಿದಂತೆ ಐತಿಹಾಸಿಕ ಹಾಗೂ ಸಾಮಾಜಿಕ ನಾಟಕಗಳನ್ನು ಆಡತೊಡಗಿದವು. ಮಧ್ಯ ರಾತ್ರಿಗೆ ಪ್ರಾರಂಭವಾಗಿ ಬೆಳಗಾದರೂ ಮುಗಿಯುತ್ತಿದ್ದಿಲ್ಲ ನಾಟಕ; ಆಡಿಯೇ ಆಡುತ್ತಿದ್ದರು; ಶಾಸ್ತ್ರೀಯ ಸಂಗೀತಕ್ಕೆ ಈ ನಾಟಕಗಳಲ್ಲಿ ಪ್ರಧಾನಪಟ್ಟ; ನಡುನಡುವೆ ನೃತ್ಯಕ್ಕೂ ಅವಕಾಶ. ಹಾಸ್ಯವಿಲ್ಲದ ನಾಟಕ ಸುವಾಸನೆ ಇಲ್ಲದ ಹೂವಿನಂತೆ! ಇದನ್ನು ಮನದಂದ ಈ ಕಂಪನಿಗಳು ಒಬ್ಬಿಬ್ಬರು ಹಾಸ್ಯಗಾರರನ್ನು ಸಾಕುತ್ತಿದ್ದವು. ಸಂದರ್ಭವಿಲ್ಲದಿದ್ದರೂ ಈ ಹಾಸ್ಯಗಾರರು ಅಡಸೋಗು ತಂದು ನಗಿಸಿದ್ದುಂಟು. ಹೆಣ್ಣು ಪಾತ್ರಗಳನ್ನು ಹೆಚ್ಚಾಗಿ ಗಂಡಸರೇ ವಹಿಸುತ್ತಿದ್ದರು. ನಾಟ್ಯ ಕಲೆಯ ಬೆಳವಣಿಗೆಗಾಗಿ ಈ ಕಂಪನಿಗಳು ಇಷ್ಟೊಂದು ಪರಿಶ್ರಮಿಸಿದರೂ ಜನತೆ ಮಾತ್ರ ಅವರನ್ನು ಮರ್ಯಾದೆಯಿಂದ ಕಾಣುತ್ತಿದ್ದಿಲ್ಲ. ನಾಟಕ ಸೇರಿದವನು ಅನೀತಿವಂತನೆಂದೇ ಅವರ ಭಾವನೆ. ಕಂಪನಿಗಳಿಗೆ ಪರಿಶ್ರಮಕ್ಕೆ ತಕ್ಕ ಫಲ ದೊರೆಯದೇಹೋಯಿತು. ಕೈತುಂಬ ಸಾಲ, ಮೇಲಾಗಿ ಅವಮರ್ಯಾದೆ. ಒಟ್ಟಿನಲ್ಲಿ ಕಂಪನಿ ನಾಟಕ ರಂಗಭೂಮಿ ಮುಗ್ಗುರಿಸುತ್ತ ಮುಂದೆ ಸಾಗಿತು. ಗುಬ್ಬಿ ಕಂಪನಿ, ಎಸ್. ಎಸ್. ನಾಟಕ ಮಂಡಳಿಗಳು ರಂಗಸಜ್ಜಿಕೆ, ನೆಳಲು ಬೆಳಕು, ಪಾತ್ರ ಪರಿಪೋಷಣೆಗಳನ್ನು ಹೆಚ್ಚಾಗಿ ಸಾಧಿಸಿ, ಮೊದಲಿದ್ದ ಕುಂದು

ಕೊರತೆಗಳನ್ನು ಹೋಗಲಾಡಿಸಿದರೂ ಜನತೆಯ ಪ್ರೋತ್ಸಾಹ ಹೆಚ್ಚಾಗಲಿಲ್ಲ.

ಕಂಪನಿ ನಾಟಕಗಳು ಎಷ್ಟೇ ಅಭಿವೃದ್ಧಿ ಸಾಧಿಸಿದರೂ ಸರ್ವತೋಮುಖ ಸುಧಾರಣೆ ಅಲ್ಲಿ ಆಗದೇಹೋಯಿತು. ಒಂದೊಂದು ಕಂಪನಿಯಲ್ಲಿ ಒಂದೊಂದು ವೈಶಿಷ್ಟ್ಯವಿದ್ದುದರಿಂದ ಅವು ಕೆಲವು ಕಾಲ ಜೀವ ಹಿಡಿದುಕೊಂಡವು. ವೆಂಕೋಬರಾಯರ ರಂಗಪ್ರಸ್ತಾಪ, ವಾಮನರಾಯರ, ಶಾಸ್ತ್ರೀಯ ಸಂಗೀತ, ವರದಾಚಾರ್ಯರ ಠೀವಿ, ಜಟ್ಟಪ್ಪನ ಹಾಸ್ಯ, ಗರುಡರ ಹಾವಭಾವ, ಸುಬ್ಬಯ್ಯನವರ ಗಾಂಭೀರ್ಯ, ವೀರಣ್ಣನವರ ರಂಗಸಜ್ಜಿಕೆ, ಹಿರಣ್ಣಯ್ಯನ ಮಾತಿನ ಮೋಡಿ, ನಾಗೇಂದ್ರರಾಯರ ಸ್ವಾಭಾವಿಕ ನಟನೆ ಮೆಚ್ಚುವಂತಹವು. ಆ ಒಂದೊಂದು ಗುಣಕ್ಕಾಗಿ ಆ ಕಂಪನಿಗಳ ಪ್ರಸಿದ್ಧಿ. ಈ ಎಲ್ಲ ಗುಣಗಳು ಒಂದೇ ಕಂಪನಿಯಲ್ಲಿ ಸೇರಿದ್ದರೆ ಎಷ್ಟು ಚೆನ್ನಾಗುತ್ತಿತ್ತು? ಆ ಭಾಗ್ಯ ಕನ್ನಡ ರಂಗಭೂಮಿಗೆ ಬಾರದೆಹೋಯಿತು. ಹೀಗಾಗಿ ಕಂಪನಿಗಳು ಒಂದೊಂದು ಮುಚ್ಚತೊಡಗಿದವು. ಸರಕಾರ ಮನರಂಜನೆಯ ಕರ ಮುಕ್ತಮಾಡಿದುದರ ಫಲವಾಗಿ ಇನ್ನೂ ಕೆಲವು ಕಂಪನಿಗಳು ಉಸಿರಾಡಿಸುತ್ತಲಿವೆ. ಇಷ್ಟರಲ್ಲಿಯೇ ಬಂದಿದೆ ನಾಟಕ ವಿಧೇಯಕ! ಅದು ತನ್ನ ಕರಾಳ ಸ್ವರೂಪವನ್ನು ತೋರಿಸಿದರೆ ಇದ್ದ ಕಂಪನಿಗಳೂ ಮುಚ್ಚುವುದರಲ್ಲಿ ಸಂದೇಹವೇ ಇಲ್ಲ.

ಸಾಹಿತ್ಯ ದೃಷ್ಟಿಯಿಂದ ಕಂಪನಿಯ ನಾಟಕಗಳು ಅಷ್ಟೊಂದು ಮೇಲುಮಟ್ಟಕ್ಕೆ ಏರದೆಹೋದವು. ವಸ್ತು, ತಂತ್ರ, ಸನ್ನಿವೇಶ, ಪಾತ್ರ ಪರಿಪೋಷಣೆಗಳ ದೃಷ್ಟಿಯಿಂದ ನೋಡಿದರೆ ಅವುಗಳ ಬೆಲೆ ಅಷ್ಟಕಷ್ಟೆ! ಪಾತ್ರ ವಹಿಸುವ ಜನರೂ ಸುಶಿಕ್ಷಿತರಲ್ಲ. ಹೀಗಾಗಿ ಒಳ್ಳೆಯ ನಾಟಕಗಳು ಎಷ್ಟೆಂದು ಹೇಳಹೊರಟರೆ ಕೈಬೆರಳು ಸಾಕೆನಿಸುತ್ತದೆ. ಸಾಹಿತ್ಯದ ಪರಿಚಯವಿಲ್ಲದೆ, ರಂಗಭೂಮಿಯ ಅನುಭವವಿಲ್ಲದೆ, ಪ್ರೇಕ್ಷಕರ ಅಭಿರುಚಿಯನ್ನು ಅರಿಯದೆ, ನಾಟಕ ಬರೆದವರೇ ನಮ್ಮಲ್ಲಿ ಹೆಚ್ಚು. ಆದರೂ ಜನತೆಯ ಮನವನ್ನು ತಿದ್ದಲು ಕಂಪನಿ ನಾಟಕಗಳು ಹೆಚ್ಚಾಗಿ ದುಡಿದವೆಂದೇ ಹೇಳಬೇಕು. ಇನ್ನೂ ಪ್ರಯೋಗಾವಸ್ಥೆಯಲ್ಲಿಯೇ ಉಳಿದಿದೆ ಕನ್ನಡ ರಂಗಭೂಮಿ; ಅದು ಸಿದ್ಧಿಯನ್ನು ಕಾಣಬೇಕಾದರೆ ಎಷ್ಟು ಕಾಲ ಬೇಕೋ ಏನೋ?

ಇಪ್ಪತ್ತನೆಯ ಶತಮಾನದ ಆದಿ ಭಾಗದಲ್ಲಿ ಕನ್ನಡ ಸಾಹಿತ್ಯದ ಮೇಲೆ ಆಂಗ್ಲ ಸಾಹಿತ್ಯದ ಪ್ರಭಾವ ವಿಶೇಷವಾಯಿತು. ತತ್ಪರಿಣಾಮವಾಗಿ, ಪಾಶ್ಚಾತ್ಯ ಸಾಹಿತ್ಯದ ಅನೇಕ ಪ್ರಕಾರಗಳು ನಮ್ಮಲ್ಲಿ ಪ್ರೈಪೆತ್ತವು. ಕನ್ನಡಿಗರು ವಿದೇಶ ಸಂಚಾರ ಕೈಕೊಂಡರು. ಜಾಜ್ವಲ್ಯಮಾನವಾಗಿ ಪ್ರಜ್ವಲಿಸುತ್ತಿದ್ದ ಪಾಶ್ಚಾತ್ಯ ರಂಗಭೂಮಿಯನ್ನು ಕಣ್ಣಾರೆ ಕಂಡರು. ಜೀವನದ ಸಮಸ್ಯೆಗಳನ್ನು ಬಿಡಿಸುವ ನಾಟಕಗಳು ಅಲ್ಲಿ ಪ್ರದರ್ಶಿತವಾಗುವುದನ್ನು ಅರಿತರು. ಸ್ವದೇಶಕ್ಕೆ ಆಗಮಿಸಿದ ಮೇಲೆ ಸಾವಿರಾರು ಸಮಸ್ಯೆಗಳಿಂದ ತುಂಬಿದ ನಮ್ಮ ಜೀವನವನ್ನು ನಾಟಕದಲ್ಲಿ ಎತ್ತಿ ತೋರಿಸುವ ಪ್ರಯತ್ನಕ್ಕೆ ಕೈಹಾಕಿದರು. ಅಂತಹವರಲ್ಲಿ ಟಿ. ಪಿ. ಕೈಲಾಸಂ ಅವರು ಅಗ್ರಗಣ್ಯರು. ಅವರೇ ನಮ್ಮ ಆಧುನಿಕ ನಾಟಕ ಸಾಹಿತ್ಯದ ಪಿತಾಮಹರು.

ಕೈಲಾಸಂ ಅವರು ದೀರ್ಘ ಕಾಲದವರೆಗೆ ಪರದೇಶದಲ್ಲಿ ಉಳಿದುದರ ಫಲವಾಗಿ ಅವರಿಗೆ ಇಂಗ್ಲೀಷಿನ ಮೇಲೆ ಪ್ರಭುತ್ವ ಪ್ರಾಪ್ತವಾಗಿದ್ದಿತು. ಅವರು ಇಂಗ್ಲೆಂಡಿನಲ್ಲಿದ್ದಾಗ ಇಂಗ್ಲೀಷ್ ನಾಟಕಗಳಲ್ಲಿ ಪಾತ್ರ ವಹಿಸಿ ರಂಗಭೂಮಿಯ ಅನುಭವ ಪಡೆದರು. ಆ ಕಾಲದಲ್ಲಿ ಶೇಕ್ಸ್‌ಪಿಯರನು ಬರೆದ ನಾಟಕಗಳು ಇಂಗ್ಲೀಷ್ ರಂಗಭೂಮಿಯನ್ನು ಆಕ್ರಮಿಸಿದ್ದವು. ಆಗ ರಂಗಭೂಮಿಯಲ್ಲಿಯೂ ಕ್ರಾಂತಿಯಾಗತೊಡಗಿತ್ತು. ಆಸ್ಕರ ವೈಲ್ಡ, ಬರ್ನಾಡಶಾಹ ಮೊದಲಾದ ಕ್ರಾಂತಿಕಾರ ನಾಟಕಕಾರರು ನಾಟಕವು ಯಾವ ಬಗೆಯದೆ ಇರಲಿ, ಅದು ಸ್ವಾಭಾವಿಕವಾಗಿ ಜೀವನದ ಪ್ರತಿಬಿಂಬವಾಗಿರಬೇಕೆಂಬ ತತ್ವವನ್ನು ಬೋಧಿಸತೊಡಗಿದ್ದರು. ಆ ಕ್ರಾಂತಿಯ ಬೀಜವು ಕೈಲಾಸಂ ಅವರ ಮನದಲ್ಲಿ ಮೂಡಿ ನಾಡಿಗೆ ಮರಳಿ ಬಂದ ಮೇಲೆ ಪೂತು, ಕಾತು ಫಲ ಕೊಟ್ಟಿತೆಂದೇ ಹೇಳಬೇಕು. ಈ ಫಲವೇ ಆಧುನಿಕ ಏಕಾಂಕಗಳು.

ಕೈಲಾಸಂ ಕನ್ನಡ ರಂಗಭೂಮಿಯ ಅಂದಿನ ಸ್ಥಿತಿಯನ್ನು ನೋಡಿ ಮರುಗಿದರು. ನಮ್ಮ ಜೀವನದಿಂದ ದೂರ ಸರಿದು ನಿಂತಿರುವ ಪೌರಾಣಿಕ ನಾಟಕಗಳು ನಮಗೆ ಉಪಯೋಗವಿಲ್ಲೆಂದು ಅವರು ಸಾರಿದರು. ರಾಜರಾಣಿಯರು, ದೇವದಾನವರು, ಕೃತಕ ಪ್ರಣಯಿಗಳು, ಸಾಧುಸಂತರು, ದ್ರೋಹಿಗಳು ನಮ್ಮ ರಂಗಭೂಮಿಯನ್ನು ಗುತ್ತಿಗೆ ಹಿಡಿದುದು ಅವರ ಪ್ರತಿಭಾನ್ವಿತ ಬುದ್ಧಿಗೆ ಸರಿದೋರಲಿಲ್ಲ. ಆ ಸ್ಥಳದಿಂದ ಅವರನ್ನೋಡಿಸಿ ಅಲ್ಲಿ ಜನಸಾಮಾನ್ಯರು ಸುಳಿಯುವುದೇ ಲೇಸೆಂದು ಬಗೆದರು. ರಂಗಭೂಮಿ ನಮ್ಮ ಜೀವನದ ಪ್ರತಿಬಿಂಬ; ಅಲ್ಲಿರುವ ಪಾತ್ರಗಳು ನಮ್ಮಂತೆ ಮಾತನಾಡಬೇಕು. ಸಮಾಜದ ಕುಂದುಕೊರತೆಗಳನ್ನು ಬೈಲಿಗೆಳೆದು ವಿಡಂಬನೆಯ ಚೂರಿಯಿಂದ ಅವನ್ನು ನುಚ್ಚುನೂರು ಮಾಡುವುದೇ ನಾಟಕದ ಗುರಿ. ನಾಟಕಗಳನ್ನೂ ನಟರ ವಿಚಿತ್ರ ಹಾವಭಾವಗಳನ್ನೂ ನಿರೂಪಿಸಿ ಅಲ್ಲಿರುವ ದೋಷಗಳನ್ನು ಎತ್ತಿ ತೋರಿಸಿದವರು ಕೈಲಾಸಂ. ಆ ಅವಹೇಳನವೇ 'ನಮ್ಮ ಕಂಪನಿ' ಎಂದು ಏಕಾಂಕವಾಯಿತು.

ಕೈಲಾಸಂ ದೋಷವನ್ನು ತಿದ್ದಲು ಹಿಡಿದ ಹಾದಿಯೆಂದರೆ ನಗೆ. ನಗುನಗುತ್ತಲೇ ಪರರ ವಶೌಢ್ಯಗಳನ್ನು ಎತ್ತಿ ತೋರಿಸಿ ಮಾರ್ಗಕ್ಕೆ ತರುವ ಅಸ್ತ್ರ ಹಾಸ್ಯವೆಂದು ಅವರ ನಂಬಿಕೆ. ಅವರು ಟೊಳ್ಳುಗಟ್ಟಿ, ತಾಳಿಕಟ್ಟೋಕ್ಕೂಲೀನೇ? ಹೋಂ ರೂಲು, ಬಂಡವಾಳ್ವಿಲ್ಲದ ಬಡಾಯಿ, ಗಂಡಸ್ಕತ್ರಿ, ಸೂಳೆ–ಒಂದೇ ಎರಡೇ ಅನೇಕ ನಾಟಕಗಳನ್ನು ರಚಿಸಿದರು; ರಂಗಭೂಮಿಗೆ ತಂದರು. ಜನರನ್ನು ನಕ್ಕು ನಗಿಸಿ ಹಾಸ್ಯ ಬ್ರಹ್ಮರೆನಿಸಿಕೊಂಡರು. ಅವರ ನಗೆಯ ಹಿಂದೆ ಮರುಕವಿದೆ. ಸಮಾಜದ ಕೊರತೆಗಾಗಿ ಕೊರಗುವ ಮನವಿದೆ. ಜನತೆಯ ಹೀನ ನಡತೆಯನ್ನು ವಿಡಂಬಿಸುವ ಅವರ 'ಬ್ರಾಹ್ಮಣ್ಕೆ' 'ಹುತ್ತದಲ್ಲಿ ಹುತ್ತ' 'ಬಹಿಷ್ಕಾರ' ಮೊದಲಾದ ನಾಟಕಗಳು ಉಗ್ರವಾಗಿವೆ. ಕ್ರಾಂತಿಕಾರ ಕೈಲಾಸಂ ಕನ್ನಡ ರಂಗಭೂಮಿಯಲ್ಲಿ ಪ್ರಯೋಗ ನಡೆಸಿದರು, ಸಿದ್ಧಿಯನ್ನು ಸಾಧಿಸಿದರು. ಕರ್ಣ, ಏಕಲವ್ಯರಂತಹ ವ್ಯಕ್ತಿಗಳನ್ನು ಕುರಿತು ಗಂಭೀರ ಸ್ವರೂಪದ ನಾಟಕಗಳನ್ನು ಇಂಗ್ಲೀಷಿನಲ್ಲಿ ಬರೆದರು. ಅವರ ಹಾಸ್ಯದರ್ಶನ ಶಕ್ತಿ, ಕಥಾ ನಿರೂಪಣ ಯುಕ್ತಿ, ಪಾತ್ರಪೋಷಣೆಯ ರೀತಿ, ಸನ್ನಿವೇಶ ಹೆಣೆಯುವ ಬುದ್ಧಿ ಅಗಾಧವಾದುವು. ಅದೇ ಕೈಲಾಸಂನ ಕಲೆ, ಅವರ ಸಹಾಸ ಕಾರ್ಯದಿಂದ ಕನ್ನಡ ರಂಗಭೂಮಿ ತನ್ನ ದಿಸೆಯನ್ನೇ ಬದಲಾಯಿಸಿಕೊಂಡಿತು. ಚೈತನ್ಯಪೂರ್ಣವಾಯಿತು.

ಮೈಸೂರ ಕಡೆಗೆ ಕೈಲಾಸಂ; ಧಾರವಾಡದ ಕಡೆಗೆ ಶ್ರೀರಂಗರು. ಕೈಲಾಸಂನಷ್ಟೇ ಕ್ರಾಂತಿಕಾರರು ಶ್ರೀರಂಗರು. ರಂಗಭೂಮಿಯ ಮೇಲೆ ಅವರ ನಾಟಕಗಳು ಜೀವಂತವಾಗಿ ಬಂದವು. ಇವರಿಬ್ಬರೂ ನಗೆಯಾಟಗಳನ್ನು ಬರೆದು ನಮ್ಮನ್ನು ನಗಿಸಿದ್ದಾರೆ. ಆದರೆ ನಗಿಸುವವರಲ್ಲಿ ಅವರು ಹಿಡಿದ ದಾರಿ ಬೇರೆ ಬೇರೆ. ಕೈಲಾಸಂ ನಗಿಸುತ್ತಲೇ ನಮ್ಮನ್ನು ಕೆರಳಿಸುತ್ತಾರೆ. ಶ್ರೀರಂಗರು ಕೆರಳಿಸಿ ನಗುವಂತೆ ಮಾಡುತ್ತಾರೆ. ಒಬ್ಬರ ನಗೆಯ ಹಿಂದೆ ಕನಿಕರವಿದ್ದರೆ ಇನ್ನೊಬ್ಬರ ನಗೆಯ ಹಿಂದೆ ಕ್ರೋಧ ತುಂಬಿರುತ್ತದೆ. ಒಬ್ಬರದು ಇನ್ನೊಬ್ಬರಿಗೆ ಬಾರದು. ಶ್ರೀರಂಗರಿಗೆ ಸಮಾಜದ ಲೋಪದೋಷಗಳನ್ನು ಕಂಡರೆ ಆಗದು. ಅವುಗಳನ್ನು ತಿದ್ದುವುದಕ್ಕಿಂತಲೂ ಹೂಳಿಬಿಡುವುದೇ ಒಳಿತೆನ್ನುವ ಭಾವ ಅವರದು. ಅದಕ್ಕಾಗಿ ವಿಡಂಬನೆಯ ಅಸ್ತ್ರಗಳನ್ನು ಅವರು ಮಸೆಯುತ್ತಾರೆ. ಅವರ ನಾಟಕಗಳಿಗೆ ಸಂಸಾರ ಸಮಸ್ಯೆಗಳೇ ತಳಹದಿ; ವೈದ್ಯರಾಜ, ನರಕದಲ್ಲಿ ನರಸಿಂಹ, ಪ್ರಪಂಚ ಪಾಣಿಪತ್ತು, ಹರಿಜನ್ವಾರ ದೊಡ್ಡ ನಾಟಕಗಳು; ಟೊಳ್ಳು ಡೊಹ್ಸ್ತ್ರೀಯನ್ನು ಮಣ್ಣು ಮುಕ್ಕಿಸುವ ಭಾವ ನಾಟಕಗಳು. ಇಲ್ಲಿ ಅವರು ಸಮಾಜದ ವಂಚನೆ ಕೊಳಚೆಗಳನ್ನು ನಿರ್ದಯರಾಗಿ ಕೆದಕಿದ್ದಾರೆ. ಮಾತುಮಾತಿನಲ್ಲಿ ಕಟಕಿಯನ್ನು ತುಂಬಿ ಹಾಸ್ಯ ಚಟಾಕಿ ಹಾರಿಸಿದ್ದಾರೆ. ಕೊತವರನ್ನು ಗದಗದನೆ ನಡುಗುವಂತೆ ಮಾಡುವ ಕಟಕಿ ಅವರದು. ಶ್ರೀರಂಗರೂ ಸಮಕಾಲೀನ ರಂಗಭೂಮಿಯಲ್ಲಿರುವ ನ್ಯೂನತೆಗಳನ್ನು ಮನೋಹರವಾಗಿ ಚಿತ್ರಿಸಿದರು. ಅವರ ಪೂರ್ವರಂಗ, ಉತ್ತರಂಗಗಳು ಆ ಕಾರ್ಯಕ್ಕಾಗಿಯೇ ಹುಟ್ಟಿಬಂದವು.

ಶ್ರೀರಂಗರ ನಾಟಕಗಳಲ್ಲಿ ಹಳೆ ಹೊಸವಿಚಾರಗಳ ತಿಕ್ಕಾಟ ಬಹು ಸೂಕ್ಷ್ಮವಾಗಿ ಬರುತ್ತದೆ. ಉದರ ವೈರಾಗ್ಯ, ಮುಕ್ಕಣ್ಣ ವಿರಾಟಪುರುಷ; ಅಧಿಕಮಾಸಗಳು ವಸ್ತು, ತಂತ್ರ ಶೈಲಿಗಳ ದೃಷ್ಟಿಯಿಂದ ನೂತನವಾಗಿದ್ದು ಸಮಾಜದಲ್ಲಿ ವಿಚಾರ ಕ್ರಾಂತಿಯನ್ನು ಮಾಡುತ್ತವೆ. ಪಾರ್ಥ ಪ್ರತಿಜ್ಞೆ, ಅಶ್ವಮೇಧ, ಶರಪಂಜರಗಳು ವಿಡಂಬನಾತ್ಮಕ ನಗೆನಾಟಕಗಳೆನ್ನಬಹುದು. ಅವರ ನಾಟಕಗಳ ಸಂಖ್ಯೆ ಐವತ್ತಕ್ಕೂ ಮೀರಿದೆ; ಇನ್ನೂ ಬರೆಯುತ್ತಿದ್ದಾರೆ, ಇತ್ತೀಚೆಗೆ 'ಶೋಕಚಕ್ರ'ವನ್ನು ರಚಿಸಿ ರಾಜಕೀಯವನ್ನೂ ವಿಡಂಬಿಸಿದ್ದಾರೆ. ಶ್ರೀರಂಗರ ಹಾದಿಯ ಹೊತ್ತಿಗೆಗಳು ನಗದವರನ್ನು ನಗಿಸಿವೆ.

ಈ ಉಭಯ ನಾಟಕಕಾರರು ಹೊಸ ಹೊಸ ಪ್ರಯೋಗ ನಡೆಸಿದರು; ಮುಂದಿನವರಿಗೆ ನಾಟಕದ ಮಾರ್ಗ ತೋರಿಸಿದರು. ಏಕಾಂಕಗಳು ಈ ರೀತಿ ಇರಬೇಕೆಂಬ ಸ್ಥೂಲಕಲ್ಪನೆ ಮಾಡಿಕೊಟ್ಟರು. ಮೊದಲ ಪ್ರಯೋಗದಲ್ಲಿಯೇ ಮಹಾ ಸಿದ್ಧಿಯನ್ನು ಸಾಧಿಸಿದ ಮಹನೀಯರು ಜಗತ್ತಿನಲ್ಲಿಯೇ ವಿರಳ. ಆದ್ದರಿಂದ ಇವರ ನಾಟಕಗಳಲ್ಲಿ ಗುಣಗಳಿವೆ: ದೋಷವಿಲ್ಲವೆಂದು ಹೇಳುವುದು ಅಂಜಿಕೆಯ ಮಾತಾದೀತು. ಅ. ನ. ಕೃ ಅವರು ಈ ಮಹನೀಯರ ಗುಣಗಳನ್ನು ಎತ್ತಿ ತೋರಿಸುತ್ತ "ಹಾಸ್ಯಗಾರ ಕೈಲಾಸಂ ಹೃದಯ ಜೀವಿ, ಹಾಸ್ಯಗಾರ ಶ್ರೀರಂಗ ಬುದ್ಧಿ ಜೀವಿ. ಕೈಲಾಸಂ ಹಾಸ್ಯದಲ್ಲಿ ಲಲಿತ ಮನೋಹರತೆ ಇದೆ; ಶ್ರೀರಂಗರ ಹಾಸ್ಯದಲ್ಲಿ ರುದ್ರ ಗಭೀರತೆ ಇದೆ. ಕೈಲಾಸಂ ಹಾಸ್ಯ ಹೃದಯವನ್ನು ಅರಳಿಸುತ್ತದೆ; ಶ್ರೀರಂಗರ ಹಾಸ್ಯ ಕೆರಳಿಸುತ್ತದೆ" ಎಂದು ಹೇಳಿದ್ದಾರೆ. ಅವರ ನಾಟಕಗಳಲ್ಲಿ ಬರುವ ಸಂಭಾಷಣೆ ಉದ್ದವಾಗಿರುವುದನ್ನು ಕಂಡುಹಿಡಿದು, "ಒಬ್ಬ ಭಾಷಣ ಮಾಡಹೋಗಿ ನಾಟಕ ಬರೆದ; ಇನ್ನೊಬ್ಬ ನಾಟಕ ಬರೆಯಹೋಗಿ ಭಾಷಣ ಮಾಡಿದ" ಎಂದಿದ್ದಾರೆ. ನಾಟಕ ಸಮಾಜದ ವಾಸ್ತವ ದರ್ಶನವನ್ನು ಚಿತ್ರಿಸಬೇಕೆಂಬ ತತ್ವವನ್ನೇ ಹಿಡಿದು, ಈ ಪ್ರಾಯೋಗಿಕ ನಾಟಕ ಸಾಹಿತ್ಯವನ್ನು ಅಳೆಯಹೊರಟರೆ ಇನ್ನೂ ಅನೇಕ ದೋಷಗಳು ಕಾಣಬಹುದು. ದೋಷವಿಲ್ಲದ

ಸಾಹಿತ್ಯ ಯಾವ ಭಾಷೆಯಲ್ಲಿದೆ? ಮುಂಬರುವ ಸಾಹಿತಿಗಳು ಅವ ದೋಷಗಳು ಪುನಃ ತಲೆದೋರದಂತೆ ನೋಡಿಕೊಳ್ಳಬೇಕಾಗುವುದು. ಅಂದಿನಿಂದ ಹಿಡಿದು ಇಂದಿನವರೆಗೆ ಅನೇಕ ನಾಟಕಕಾರರು ಕನ್ನಡದಲ್ಲಿ ಏಕಾಂಕಗಳನ್ನು ರಚಿಸಿದ್ದಾರೆ. ಕನ್ನಡ ರಂಗಭೂಮಿ ಕಳೆಗಟ್ಟಲೆಂದು ಪ್ರಯತ್ನಿಸಿದ್ದಾರೆ. ನಾಟಕ ಸಾಹಿತ್ಯದ ಬೆಳೆ ಮುಂದಿನ ಎರಡು ದಶಕಗಳಲ್ಲಿ ಹುಲುಸಾಗಿಯೇ ಬಂದಿತು. ಬೆಳೆಯೊಡನೆ ಕೊಳೆಯೂ ಬೆಳೆಯುತ್ತದೆ.

ಬೆಳೆ ಶುದ್ಧವಾಗಬೇಕಾದರೆ ಕಳೆ ತೆಗೆಯಬೇಕಾದುದು ಸಹಜ. ಆ ರೀತಿ ಮಾಡಿದರೆ ಕನ್ನಡ ಆಧುನಿಕ ಸಾಹಿತ್ಯ ಇನ್ನೂ ಅಷ್ಟೊಂದು ಅಭಿವೃದ್ಧಿ ಹೊಂದಿಲ್ಲವೆಂದೇ ಅನಿಸುತ್ತದೆ. ಈ ದಿಸೆಯಲ್ಲಿ ಪರ ಪ್ರಾಂತದವರು ಸಾಧಿಸಿದ್ದನ್ನು ನೋಡಿದರೆ, ನಮ್ಮ ನಾಟಕ ಸಾಹಿತ್ಯ ನೀರು ಕಾಣದ ತುಳಸಿ ಮರದಂತಿರುವುದು ಗೋಚರವಾಗುತ್ತದೆ. ಉಳಿದ ನಾಟಕಕಾರರನ್ನೂ ಅವರ ಕೃತಿರತ್ನಗಳನ್ನೂ ಕುರಿತು ಮಾತಾಡುವುದಕ್ಕಿಂತ ಮುಂದಿನ ದಾರಿಯನ್ನು ಅರಿತುಕೊಳ್ಳುವುದೇ ಯೋಗ್ಯವೆನಿಸುತ್ತದೆ.

ಇಂದಿನವರೆಗೆ ಕನ್ನಡದಲ್ಲಿ ಬಂದಿರುವ ನಾಟಕಗಳನ್ನು ಸಮಾಲೋಚಿಸಿದರೆ ಏಕಾಂಕದ ರೂಪರೇಷೆ ಹೀಗಿರಬೇಕೆನ್ನಿಸುತ್ತದೆ. ಜೀವನವೇ ಜೀವಂತವಾಗಿ ನಾಟಕದುದ್ದಕ್ಕೂ ಹರಿಯಬೇಕು. ಸನ್ನಿವೇಶ ಸೃಷ್ಟಿಗೆ ಹೆಚ್ಚಿನ ಪ್ರಾಧಾನ್ಯ. ನಾಟಕ ತ್ವರಿತ ಗತಿಯಿಂದ ಮುಂದುವರಿಯಬೇಕು. ಸಂಭಾಷಣೆಯಲ್ಲಿ ವ್ಯರ್ಥ ಮಾತುಗಳಿಗೆ ಅವಕಾಶವಿಲ್ಲ. ಮಾತಿನಲ್ಲಿ ನೇರವಾದ ಗುರಿ ಇರಬೇಕು. ಆಡಿದ ಮಾತು ಹುಸಿಯಾಗಬಾರದು. ಸ್ವಗತ ಭಾಷಣಗಳನ್ನು ಉದ್ದುದ್ದ ಹೆಣೆಯುವುದು ಅಸ್ವಾಭಾವಿಕ. ಜೀವನ ಚಿತ್ರ ಚಿತ್ರಿಸುತ್ತಲೇ ಅಲ್ಲಿ ಬರುವ ಸಮಸ್ಯೆಗಳನ್ನು ಚರ್ಚಿಸಬೇಕು. ಅವಕ್ಕೆ ಪರಿಹಾರ ಹೇಳುವುದು ಮಾತ್ರ ಸೂಜಿಗೆ ಮುದ್ದು ಕೊಟ್ಟಂತಿರಬೇಕು. ಸಂಗೀತಕ್ಕೂ ಇಂದಿನ ನಾಟಕಕ್ಕೂ ಸಂಬಂಧ ಕಡಿಮೆ. ಪ್ರಯೋಗ ವೇಳೆ ಹೆಚ್ಚೆಂದರೆ ತಾಸೊಂದನ್ನು ಮೀರಬಾರದು. ಸ್ಥಳೈಕ್ಯ, ಕಾಲೈಕ್ಯ ಮತ್ತು ಕಾರ್ಯೈಕ್ಯಗಳ ನಿಬಂಧವನ್ನು ನಾಟಕ ಪಾಲಿಸಬೇಕು. ವಿಷಯ ಹೀಗೆ ಇರಬೇಕೆಂದು ನಿಯಮವಿಲ್ಲ; ಜೀವನದ ಯಾವುದೇ ಸನ್ನಿವೇಶವಿದ್ದರೂ ನಡೆಯುತ್ತದೆ. ರಂಗಸಜ್ಜಿಕೆ, ವರ್ಣವೈವಿಧ್ಯ, ನೆಳಲು ಬೆಳಕು, ಹಿನ್ನೆಲೆಯ ರಚನೆ ಸಜ್ಜಾಗಿರಬೇಕು. ಒಟ್ಟಿನಲ್ಲಿ ನಾಟಕದ ಮುಕ್ತಾಯ ಪ್ರೇಕ್ಷಕನ ಮನಸ್ಸಿನ ಮೇಲೆ ಅಚ್ಚಳಿಯದ ಮುದ್ರೆಯನ್ನೊತ್ತಬೇಕು. ಇಷ್ಟೆಲ್ಲ ನಿಯಮಗಳನ್ನು ಪಾಲಿಸಿ ಉತ್ತಮ ಏಕಾಂಕಗಳನ್ನು ರಚಿಸಿದ ಕವಿಗಳು ನಮ್ಮಲ್ಲಿ ವಿರಳವೆಂದೇ ಹೇಳಬೇಕಾಗುತ್ತದೆ. ನಾಟಕ ಸಾಹಿತ್ಯ ಇನ್ನೂ ಸತ್ವಪೂರ್ಣವಾಗಿ ಬೆಳೆಯಬೇಕು: ಇಂದಿನದು ಏನೇನೂ ಅಲ್ಲ ಎನಿಸದಿರದು. ಈ ಕಡೆಗೆ ನಮ್ಮ ಸಾಹಿತಿಗಳು ಮನಸ್ಸು ಹಾಕಿ ಸಾಹಿತ್ಯ ರಚನೆ ಮಾಡಬೇಕು; ದುಡಿತದಲ್ಲಿ ಫಲವಿದೆ.

ಕನ್ನಡದಲ್ಲಿ ಆಧುನಿಕ ನಾಟಕಗಳನ್ನು ಹೆಣೆದ ಮಹನೀಯರು ಒಂದು ವಿಶಿಷ್ಟ ವರ್ಗಕ್ಕೆ ಸೇರಿದವರಾಗಿದ್ದಾರೆ. ಮಧ್ಯಮ ವರ್ಗದ ಶಿಕ್ಷಕರೇ ಹೆಚ್ಚಾಗಿ ಇಲ್ಲಿ ಕೃಷಿಮಾಡಿದ್ದುಂಟು. ಅವರು ತಮ್ಮ ಅಂತಸ್ತಿನ ಜೀವನವನ್ನೇ ನಾಟಕಗಳ ವಸ್ತುವನ್ನಾಗಿ ಸ್ವೀಕರಿಸಿದ್ದಾರೆ. ವ್ಯಷ್ಟಿಯಲ್ಲಿ ಸಮಷ್ಟಿಯನ್ನು ಕಾಣಲು ಅವರು ಯತ್ನಿಸಿದ್ದಾರೆ; ಆದರೆ ಸಮಸ್ತ ಜೀವನವು ನಾಟಕಕ್ಕೆ ಇನ್ನೂ ಪಕ್ಕಾಗದಿರುವುದು ಒಂದು ಎದ್ದು ಕಾಣುವ ಕುಂದು. ಇಂದು ನಮ್ಮ ಜೀವನ ಹೊಸ ಮನ್ವಂತರದಲ್ಲಿ ಸಾಗಿದೆ. ಪ್ರಜಾರಾಜ್ಯವನ್ನು ಕಟ್ಟಿಕೊಂಡು ಜಾತ್ಯಾತೀತ ರಾಷ್ಟ್ರದ ಗುರಿಯತ್ತ ನಾವು ಸಾಗಿದ್ದೇವೆ. ಸುಧಾರಣೆಯ ಭರದಲ್ಲಿ ನೂತನ ಕಾನೂನುಗಳು ಪಾಸಾಗುತ್ತಲಿವೆ. ಅವುಗಳಿಂದ ಸಮಾಜದ ಮೇಲೆ ಹೊಸ ಪರಿಣಾಮವಾಗುತ್ತಿದೆ. ಪರಿಸ್ಥಿತಿಗೆ ಹೊಂದಿಕೊಳ್ಳಲಾರದೆ ಸಮಾಜ ತತ್ತರಿಸತೊಡಗಿದೆ. ವ್ಯಕ್ತಿಯ ಭಾವನೆಗಳು ಹತೋಟಿಗೆ ಸಿಗದೆ ವಿಹರಿಸತೊಡಗಿವೆ. ಆರ್ಥಿಕ ಅಶಾಂತಿ ತಾಂಡವವಾಡತೊಡಗಿದೆ. ಜೀವನದ ಸಮಸ್ಯೆಗಳು ಹೆಚ್ಚು ಜಟಿಲವಾಗಹತ್ತಿವೆ. ಇದನ್ನೆಲ್ಲ ನಮ್ಮ ನಾಟಕಕಾರರು ಅತಿ ಸೂಕ್ಷ್ಮವಾಗಿ ಅಭ್ಯಾಸಮಾಡಬೇಕು. ಅರಿಯದ ವಿಷಯವನ್ನು ನೇರವಾಗಿ ನಾಟಕದಲ್ಲಿ ಇಳಿಸುವುದು ವಿಚಾರ ದಾರಿದ್ರ್ಯದ ಕುರುಹು. ಸಮಸ್ಯಾತ್ಮಕ, ವಿಚಾರ ಪರಿಪ್ಲುತ ನಾಟಕಗಳನ್ನು ಹೆಣೆಯುವವರು ಮಾನವನ ಮನೋವಿಶ್ಲೇಷಣೆಯನ್ನು ಅರಿತುಕೊಳ್ಳಬೇಕಾದುದು ಅಗತ್ಯ.

ಇಂದಿನ ಆಧುನಿಕ ನಾಟಕಗಳು ಸುವ್ಯವಸ್ಥಿತ ರೀತಿಯಲ್ಲಿ ರಂಗಭೂಮಿಗೆ ಬಂದುದೇ ಕಡಿಮೆ; ಈ ಕಾರ್ಯಕ್ಕಾಗಿ ಅಲ್ಲಲ್ಲಿ ನಾಟ್ಯವಿಲಾಸಿ ತಂಡಗಳು ಆಗಾಗ ಹುಟ್ಟಿಕೊಂಡವು; ಒಂದೆರಡು ಪ್ರಯೋಗಗಳನ್ನು ನಡೆಸಿ ಅಲ್ಲಿಯೇ ನಿಂತುಬಿಟ್ಟವು. ಶಾಲೆ ಕಾಲೇಜುಗಳ ವಿದ್ಯಾರ್ಥಿಗಳು ಮಾತ್ರ ತಮ್ಮ ವಿದ್ಯಾಸಂಸ್ಥೆಗಳ ಸ್ನೇಹ ಸಮ್ಮೇಳನಗಳಲ್ಲಿ ಈ ನಾಟಕಗಳನ್ನು ರಂಗಭೂಮಿಗೆ ತರಲು ಯತ್ನಿಸುವರು. ಸರಿಯಾಗಿ ಮಾತು ಬಾರದೆ, ಯೋಗ್ಯ ರಂಗಸಜ್ಜಿಕೆ ವೇಷಭೂಷ ದೊರಕದೆ, ಆಡಿದ ನಾಟಕಗಳು ಹುಡುಗಾಟವೆನಿಸಿಕೊಂಡುದೇ ಹೆಚ್ಚು; ಒಮ್ಮೊಮ್ಮೆ ನಗೆ ನಾಟಕವೂ ದುಃಖಾಂತ ನಾಟಕವಾಗಿ ಪರಿಣಮಿಸುವುದುಂಟು. ಹೀಗಾದರೆ ನಾಟಕ

ಯಶಸ್ವಿಯಾಗುವ ಬಗೆ ಎಲ್ಲಿ? ಕಲಾವಿಲಾಸಿಗಳ ರಂಗಭೂಮಿಯ ದುಸ್ಥಿತಿಯನ್ನು ನೋಡಿ ನಾಟಕ ಬರೆಯುವವರೂ ಸಹ ಸುಮ್ಮನೆ ಕೂಡುವ ಸ್ಥಿತಿ ಒದಗಿದೆ. ಬರೆಯಬಲ್ಲ ಕೆಲವು ಸಾಹಿತಿಗಳು ಬಾನುಲಿ ಕೇಂದ್ರದ ಆಶ್ರಯಕ್ಕೆ ಸರಿಯತೊಡಗಿದ್ದಾರೆ.

ಬಾನುಲಿ ಕೇಂದ್ರವು ಒಂದು ಪ್ರಚಾರ ಸಾಧನವಾಗಿ ಭಾರತದಲ್ಲಿ ಕಾರ್ಯಮಾಡುತ್ತಿದೆ. ಅಲ್ಲಿ ಕೇಳಿ ಬರುವುದು ಸರಕಾರದ ಕಾಳಿಯ ಕೂಗು. ಸಾಹಿತ್ಯಕ ಸಾಂಸ್ಕೃತಿಕ ಕಾರ್ಯಕ್ರಮಗಳೂ ಇಲ್ಲಿ ನಡೆಯುತ್ತವೆ. ಕಲಾವಿಕಾಸಕ್ಕಾಗಿ ನಡೆಸುತ್ತಿರುವ ಬಾನುಲಿಯಲ್ಲಿ ಕಟ್ಟುಸಿಟ್ಟುಗಳೇ ಹೆಚ್ಚು; ನಿಯಮ ನಿಬಂಧಗಳೇ ವಿಪರೀತ. ಅಂತಹ ಸ್ಥಳದಲ್ಲಿ ನಾಟಕಗಳು ಪ್ರಸಾರವಾಗುತ್ತಲಿವೆ. ಕುಂಬಳಕಾಯಿಗೆ ಕಬ್ಬಿಣದ ಕಟ್ಟು ಹಾಕಿದರೆ ನೆಟ್ಟಗಾದೀತೆ? ಹಾಗೇ ನಾಟಕ ಸಾಹಿತ್ಯ ಬಾನುಲಿಯಲ್ಲಿ ಪ್ರಸಾರವಾಗುತ್ತಿದೆ. ಈ ಪ್ರಸಾರ ನಾಟಕಕ್ಕೂ ಕೆಲವೊಂದು ನಿಬಂಧನೆಗಳಿವೆ. ಅದಕ್ಕೊಂದು ನವೀನ ತಂತ್ರವೇ ಏರ್ಪಟ್ಟಿದೆ. ರೇಡಿಯೋ ನಾಟಕದಲ್ಲಿ ದೃಶ್ಯ ವ್ಯಾಪಾರವಿಲ್ಲ; ಕಿವಿಯೇ ಕಣ್ಣಾಗಬೇಕು. ಧ್ವನಿ ಚಿತ್ರವನ್ನು ಕೇಳುತ್ತಲೇ ನಮ್ಮ ಮನಸ್ಸಿನಲ್ಲೊಂದು ರಂಗಭೂಮಿ ಜನ್ಮತಾಳಬೇಕು; ಅಲ್ಲಿಯೇ ನಟನಟಿಯರ ಹಾವಭಾವಗಳನ್ನು ಗುರುತಿಸಿಕೊಳ್ಳಬೇಕು. ಪಂಚೇಂದ್ರಿಯ ವ್ಯಾಪಾರಗಳನ್ನೆಲ್ಲ ಕಿವಿಯೊಂದೇ ಸಾಧಿಸುವುದು ಸಾಧ್ಯವೆ? ಅಸಾಧ್ಯವಾದುದನ್ನು ಸಾಧ್ಯಮಾಡತೊಡಗಿದೆ ರೇಡಿಯೋ ನಾಟಕ. ಸಂಭಾವನೆಯ ಸವಿಹತ್ತಿ ಕೆಲವು ಸಾಹಿತಿಗಳು ಕೊಟ್ಟ ವಿಷಯವನ್ನು ಮನನಮಾಡಿಕೊಳ್ಳದೆ, ಪಾತ್ರಗಳ ಬಾಯಿಂದ ಶಬ್ದ ಸುರಿಸಿ ನಾಟಕ ಮುಗಿಸುತ್ತಿದ್ದಾರೆ; ಯಶಸ್ವಿಯಾದವರು ಒಬ್ಬರೋ ಇಬ್ಬರೋ! ಅನ್ಯ ಕೇಂದ್ರಗಳಿಂದ ಕೇಳಿಬರುತ್ತಿರುವ ನಾಟಕಗಳಿಗೆ ನಮ್ಮ ಪ್ರಸಾರ ನಾಟಕಗಳನ್ನು ಸರಿಹಚ್ಚಿ ನೋಡಿದಾಗ, ನಮ್ಮ ಪ್ರಸಾರ ನಾಟಕ ಕಲಾತ್ಮಕವಾಗಿ ಬೆಳೆದಿಲ್ಲವೆನಿಸುತ್ತದೆ.

ಒಟ್ಟಿನಲ್ಲಿ ತ್ರಿಪಥಗಾಮಿಯಾದ ಕನ್ನಡ ರಂಗಭೂಮಿಯ ಸ್ಥಿತಿ ಚಿಂತಾಜನಕವಾಗಿದೆಯೆಂದೇ ಹೇಳಬೇಕಾಗುತ್ತದೆ. ರಂಗಭೂಮಿ ಸಮಾಜವನ್ನು ಮೇಲಕ್ಕೆತ್ತುವ ಪರಮಾಗಮ. ಪಾಶ್ಚಾತ್ಯ ದೇಶಗಳಲ್ಲಿ ಸಿನೀಮಾ ಮಂದಿರಗಳ ಜೊತೆಜೊತೆಗೆ ನಾಟ್ಯ ಮಂದಿರಗಳೂ ಇದ್ದು ಅವು ಅತ್ಯಂತ ಊರ್ಜಿತ ಸ್ಥಿತಿಯನ್ನು ಪಡೆಯುತ್ತಿರುವುದು ಗಮನಾರ್ಹವಾಗಿದೆ. ನಮ್ಮ ನಾಡಿನಲ್ಲಿ ರಂಗಭೂಮಿ ಸರ್ವಾಂಗ ಸುಂದರವಾಗುವಂತೆ ಮಾಡಲು ಮುನ್ನೊಗವಾಗಿ ಕಾರ್ಯ ನಡೆಯಬೇಕಾಗಿದೆ. ಮೊದಲನೆಯದಾಗಿ ನಾಟ್ಯ ಲೇಖಕರು ಕೇವಲ ಶಾಲೆ ಕಾಲೇಜುಗಳ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಮಧ್ಯಮ ವರ್ಗದ ಜೀವನವನ್ನೇ ಚಿತ್ರಿಸುವ ಕಾರ್ಯದಲ್ಲಿ ನಿರತರಾದರೆ ಸಾಲದು; ನಮ್ಮ ನಾಡಿನ ಹಳ್ಳಿಗಳಲ್ಲಿ ವಾಸಿಸುವ ಸಾಮಾನ್ಯ ಜನತೆಯನ್ನು ಅನುಲಕ್ಷಿಸಿ, ಅವರ ಜೀವನ ಸಮಸ್ಯೆಗಳನ್ನೇ ಎತ್ತಿಕೊಂಡು ಸರ್ವರ ಮನ ಹಿಡಿಯುವಂತೆ ನಾಟಕಗಳನ್ನು ಬರೆದರೆ ನಮ್ಮ ರಂಗಭೂಮಿ ಉದ್ಧಾರವಾಗದೆ ಇರದು; ಅಂದರೆ ನಮ್ಮ ಸುಶಿಕ್ಷಿತ ನಾಟಕಕಾರರು ಕಂಪನೀ ರಂಗಭೂಮಿಗಾಗಿ ನಾಟಕಗಳನ್ನು ಬರೆಯುವ ಸಾಹಸ ಮಾಡಬೇಕೆಂಬುದೇ ನನ್ನ ಅಭಿಪ್ರಾಯ. ಈಗ ಕಂಪನಿಗಳಿಗೆ ನಾಟಕ ಪೂರೈಸುವವರು ಒಂದು ದೃಷ್ಟಿಯಿಂದ ಕಲಾಭಿಜ್ಞತೆ ಕಡಿಮೆ ಇದ್ದವರೆಂದೇ ಹೇಳಬೇಕಾಗುತ್ತದೆ. ಅವರಿಗೆ ವಿಶ್ವಸಾಹಿತ್ಯದ ಪರಿಚಯವೂ ಕಡಿಮೆ; ಜಾಗತಿಕ ಸಾಹಿತ್ಯದಲ್ಲಿರುವ ಮಹೋನ್ನತ ನಾಟಕಗಳ ಪರಿಚಯವೂ ಅವರಿಗಿಲ್ಲ. ಹಳ್ಳಿಗರಿಗೆ ಮನರಂಜನೆಯನ್ನುಂಟುಮಾಡುವ ಹಲವಾರು ಸನ್ನಿವೇಶಗಳನ್ನು ಬರೆದು ಜೋಡಿಸಿ, ಸಹಜವಲ್ಲದ ಆಕಸ್ಮಿಕಗಳ ಮಾಲಿಕೆಯಿಂದ ನಾಟಕಕ್ಕೆ ಮುಕ್ತಾಯ ಹಾಡಿ, ಪ್ರೇಕ್ಷಕರನ್ನು ಮನೆಗೆ ಕಳಿಸುವುದೇ ಅವರ ದೃಷ್ಟಿಯಲ್ಲಿ ಮಹಾನಾಟಕವೆನಿಸಿದೆ. ಶ್ರೇಷ್ಠ ಪ್ರತಿಯ ಕಲಾವಿದ ನಾಟಕಕಾರರು ಇತ್ತ ಮನಸ್ಸು ಹಾಕಿದರೆ, ನಮ್ಮ ರಂಗಭೂಮಿಯ ಭಾಗ್ಯ ತೆರೆದಂತಾಗುತ್ತದೆ.

ಕಂಪನಿಗಳ ಒಡೆಯರೂ ತಮ್ಮ ಮೇಲಿರುವ ಹೊಣೆಯನ್ನು ಚೆನ್ನಾಗಿ ಅರಿತುಕೊಳ್ಳಬೇಕು. ಕಲೆಯ ಗಂಧವನ್ನರಿಯದ ಅಶಿಕ್ಷಿತ ನಟನಟಿಯರನ್ನು ಕಲೆಹಾಕಿ, ಕೆಳದರ್ಜೆಯ ನಾಟಕಗಳನ್ನು ಆಡಿ ತೋರಿಸಿದರೆ ಅದರಿಂದ ಸಮಾಜಕ್ಕೆ ಅನ್ಯಾಯವಾಗದೇ ಇರದು. ಸಮಾಜದ ಉದ್ಧಾರಕ್ಕಾಗಿ ಸರ್ವಸ್ವವನ್ನೂ ಧಾರೆಯೆರೆದು ನಿಂತ ಕಂಪನಿಯ ಒಡೆಯರು ತಮ್ಮ ವಿಶಾಲ ದೃಷ್ಟಿಯನ್ನು ಶ್ರೇಷ್ಠ ಪ್ರತಿಯ ಕಲಾವಿದರ ಕಡೆಗೆ ಹರಿಸಬೇಕು. ಕಲಾಭಿಜ್ಞರಾದ ಸಾಹಿತ್ಯಕರು ರಚಿಸಿದ ನಾಟಕಗಳನ್ನು ರಂಗಭೂಮಿಗೆ ತರಲು ಯತ್ನಿಸಬೇಕು. ಇಂತಹ ಕಾರ್ಯವನ್ನು ಕೈಕೊಂಡರೆ ಅವರು ತಮ್ಮಲ್ಲಿದ್ದ ಅನೇಕ ನಟನಟಿಯರನ್ನು ಮಾರ್ಪಡಿಸಬೇಕಾಗುಗುತ್ತದೆ, ಇಲ್ಲವೆ ಬಿಟ್ಟುಕೊಡಬೇಕಾಗುತ್ತದೆ. ಈಗ ಸಾಮಾನ್ಯವಾಗಿ, ಎಲ್ಲ ಕಂಪನಿ ನಾಟಕಗಳಲ್ಲಿ ಯಾವ ಸನ್ನಿವೇಶವಿದ್ದರೂ ನಟನಟಿಯರು ಮಾತನಾಡುವ ಧಾಟಿ ಒಂದೇ. ಆ ಕೃತಿಮತೆಯನ್ನು ಬಿಟ್ಟು ಸ್ವಾಭಾವಿಕತೆಯನ್ನು ಅಂಗೀಕರಿಸಿದರೆ ರಂಗಭೂಮಿಗೆ ಘನತೆ ಬರಬಹುದಾಗಿದೆ. ಸುಶಿಕ್ಷಿತ ನಟನಟಿಯರು ಕಂಪನಿಯಲ್ಲಿ ಸೇರಿದರಂತೂ ನಾಡು ಪುನೀತ

ವಾಗಬಹುದಾಗಿದೆ. ಕಂಪನಿಯ ರಂಗಭೂಮಿ ಎಂದರೆ ಕೇವಲ ರಂಗಸಜ್ಜಿಕೆ ಎಂಬ ಭಾವನೆ ಆಗಿದೆ. ರಂಗಸಜ್ಜಿಕೆ ಯೊಡನೆ ಉತ್ತಮ ನಾಟಕ, ನಿಪುಣ ಕಲಾವಿದರು ಬೆರೆ ಯಬೇಕು. ಈ ಮೂರರ ಮುಪ್ಪುರಿಯೇ ನಮ್ಮ ರಂಗ ಭೂಮಿಯ ಮುನ್ನಡೆ.

ಇನ್ನು ರಂಗಭೂಮಿಯ ಅತಿ ಮಹತ್ವದ ೪ ನೆಯ ಅಂಗ ವನ್ನು ಕುರಿತು ನಾಲ್ಕು ಮಾತು ಹೇಳುವುದು ಅತ್ಯವಶ್ಯಕವೆ ನಿಸಿದೆ. ಅದುವೆ ಪ್ರೇಕ್ಷಕ ವರ್ಗ. ನಮ್ಮ ರಂಗಭೂಮಿಯ ಮಟ್ಟ ಕಡಮೆಯಾಗಿದ್ದರೆ ಅದಕ್ಕೆ ಹೊಣೆ ನಾಟಕಕಾರರಲ್ಲ, ಕಂಪನಿಯ ಒಡೆಯರಲ್ಲ, ನಟನಟಿಯರಲ್ಲ; ನಿಜವಾಗಿಯೂ ಪ್ರೇಕ್ಷಕ ವರ್ಗವೆನಿಸಿದ ಸಮಾಜವೇ ಅದಕ್ಕೆ ಹೊಣೆ. ನಮ್ಮ ಜೀವನವಿದ್ದಂತೆ ಸಾಹಿತ್ಯ. ಸಮಾಜದ ಜನ ಕೀಳ್ತರಗತಿಯ ಪ್ರವೃತ್ತಿಗಳಿಗೆ ಮನ ಸೋತಿದ್ದರೆ, ಜೋತಿದ್ದರೆ ನಾಟಕ ಕಾರರೇನು ಮಾಡಬಲ್ಲರು ? ಅವರಿಗೆ ತಕ್ಕಂಥ ನಾಟಕಗಳೇ ಸೃಷ್ಟಿಯಾಗುತ್ತವೆ. ಆದ್ದುದರಿಂದ ಸಮಾಜದ ರುಚಿ ಶುಚಿ ಯಾಗಬೇಕು. ಅದರೆದುರು ಉನ್ನತವಾದ ಧ್ಯೇಯ ಧೋರ ಣೆಗಳಿರಬೇಕು. ಮಹತ್ತರವನ್ನು ಕಂಡು ಮಹದಾನಂದ ವನ್ನು ಪಡೆಯುವ ಪ್ರವೃತ್ತಿ ಪ್ರೇಕ್ಷಕರಿಗಿರಬೇಕು. ಅಂತೆಯೆ ನಮ್ಮ ಸಮಾಜದ ಶೀಲ ಉನ್ನತವಾಗಬೇಕು. ಪ್ರೇಕ್ಷಕ ವರ್ಗದ ಅಭಿರುಚಿ, ಒಲವು ನಿಲವುಗಳು ಮೇಲಕ್ಕೇರಬೇಕು. ಇವರನ್ನು ಆ ಸ್ಥಿತಿಗೆ ತರಲು ನಾಟಕಕಾರರೂ ನಟರೂ ಪ್ರಯತ್ನ ಮಾಡಬೇಕು. ಅವರು ತಮ್ಮ ಇಂದಿನ ನಿರ್ಲಿಪ್ತ ಸ್ಥಿತಿಯಿಂದ ಜನಸಾಮಾನ್ಯರ ಮಧ್ಯಕ್ಕೆ ಬಾರದೆ ಗತ್ಯಂತರ ವಿಲ್ಲ. ನಾಟಕಕಾರರು, ಕಂಪನಿಗಳ ಒಡೆಯರು, ನಟನಟಿ ಯರು, ಪ್ರೇಕ್ಷಕರು–ರಂಗಭೂಮಿಯ ಈ ನಾಲ್ಕು ಮುಖ ಗಳು ಸುಂದರವಾದರೆ ನಮ್ಮ ರಂಗಭೂಮಿ ಬಂಧುರವಾಗು ತ್ತದೆ. ಸರ್ವಾಂಗ ಸುಂದರವಾಗುತ್ತದೆ.

ಸಹಸ್ರಾರು ವರ್ಷಗಳಿಂದ ಬೆಳೆದು ಬಂದ ನಮ್ಮ ಗ್ರಾಮೀಣ ಕಲೆ ಈಗ ಅಳಿದುಹೋಗುವುದರಲ್ಲಿದೆ; ಇದು ನಾಡಿಗೆ ಶುಭದ ಸೂಚನೆಯಲ್ಲ. ಆ ಕಲೆ ಹೊರನೈಯ ನೋಟದಲ್ಲಿ ಗ್ರಾಮ್ಯವೆನಿಸಿದರೂ ಒಳಗೆ ಸತ್ವಪೂರ್ಣವಾ ದುದು. ಒಂದು ಪಡದೆ, ಒಂದು ಚಿಕ್ಕ ಅಟ್ಟ ಇಷ್ಟರಿಂದಲೇ ತಾಸುತಾಸುಗಳವರೆಗೆ ಜನಸ್ತೋಮವನ್ನು ಫಲಾಪೇಕ್ಷೆ ಇಲ್ಲದೆ ಆನಂದ ಸಾಗರದಲ್ಲಿ ಮುಳುಗುವಂತೆ ಮಾಡುವ ಕಲೆ ಸಾಮಾನ್ಯವಾದುದಲ್ಲ. ನಮ್ಮ ಪಾರಿಜಾತ, ಯಕ್ಷಗಾನ, ಬಯಲಾಟ, ಜಾತಿಗರ ಆಟಗಳನ್ನು ವಿದೇಶೀಯರು ಕಂಡು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಿರುವಾಗ ಸ್ವದೇಶಿ ಯರಾದ ನಾವು ಅದನ್ನು ಕಡೆಗಣಿಸುವುದು ಒಳ್ಳೆಯದಲ್ಲ. ಹಳ್ಳಿಗರು ಕೇವಲ ನಾಟಕ ಸಿನೀಮಾಗಳ ದಾಸರಾಗದೆ ಪುರಾತನ ಕಾಲದಿಂದಲೂ ನಡೆದು ಬಂದ ಈ ಜಾನಪದ ರಂಗಭೂಮಿಯನ್ನು ಉಳಿಸಿ ಬೆಳೆಸಿಕೊಂಡು ಹೋಗಬೇ ಕೆಂದು ಪ್ರಾರ್ಥನೆ.

ಪ್ರೋತ್ಸಾಹವಿಲ್ಲದೆ ಯಾವ ಕಲೆಯೂ ಬಾಳಲಾರದು. ಹಿಂದೆ ನಮ್ಮ ದೇಶದಲ್ಲಿ ರಾಜಮಹಾರಾಜರುಗಳು ಆಸ್ಥಾನ ಗಳಲ್ಲಿ ಕವಿ, ಗಮಕಿ, ವಾದಿ, ವಾಗ್ಮಿಗಳನ್ನೂ ಕಲಾವಿದ ರನ್ನೂ ಸತ್ಕರಿಸಿ ಅವರಿಗೆ ಕನಕಾಭಿಷೇಕ ಮಾಡಿಸುತ್ತಿದ್ದ ಉಲ್ಲೇಖಗಳು ಹೇರಳವಾಗಿವೆ. ನಮ್ಮ ಇಂದಿನ ಪ್ರಜಾ ಸರಕಾರದ ಮೇಲೂ ಆ ಹೊಣೆ ಇದೆ. ಅದನ್ನು ಮನದಂದೇ ರಾಜ್ಯ ಮತ್ತು ಕೇಂದ್ರ ಸರಕಾರಗಳ ಆಶ್ರಯದಲ್ಲಿ ಸಂಗೀತ ನಾಟಕ ಎಕ್ಯಾಡೆಮಿಗಳು ಸ್ಥಾಪಿತವಾಗಿ ಕಾರ್ಯೋನ್ಮುಖ ವಾಗಿವೆ. ಈ ಸಂಸ್ಥೆಗಳು ಹೆಚ್ಚು ಜಾಗೃತವಾಗಿ ರಂಗ ಭೂಮಿಯ ಉದ್ಧಾರಕ್ಕಾಗಿ ಹೊಸ ಯೋಜನೆಗಳನ್ನು ಹಮ್ಮ ಲೆಂದು ಹಾರೈಸುತ್ತೇನೆ.

ಈ ನಾಟಕ ಗೋಷ್ಠಿಯಲ್ಲಿ ಅನೇಕ ಜನ ವಿದ್ವನ್ಮಣಿಗಳೂ ಕಲಾವಿದರೂ ಭಾಗವಹಿಸಿರುವುದು ಸಂತೋಷದ ಸಂಗತಿ. ಅವರೆಲ್ಲರ ವಿಚಾರ ಪರಿಪ್ಲುತವಾದ ಭಾಷಣಗಳಿಂದ ನಮ್ಮ ಅನೇಕ ಸಮಸ್ಯೆಗಳ ಮೇಲೆ ಹೊಸ ಬೆಳಕು ಬೀಳುವದರಲ್ಲಿ ಸಂದೇಹವಿಲ್ಲ. ಅವರೆಲ್ಲರ ಹಾಗೂ ತಮ್ಮೆಲ್ಲರ ಸಹಾಯ, ಸಹಕಾರ, ಸಹಾನುಭೂತಿಗಳಿಂದ ಈ ನಾಟಕ ಗೋಷ್ಠಿ ಮುಂದುವರಿಯುತ್ತಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧಿ ಕಾರಿ ವರ್ಗದವರೂ ಈ ಸಮ್ಮೇಳನದ ಸ್ವಾಗತ ಸಮಿತಿ ಯವರೂ ಅತ್ಯಂತ ಅಭಿಮಾನದಿಂದ ಈ ಹೊರೆಯನ್ನು ನನ್ನ ಮೇಲೆ ಹೊರಿಸಿರುವರು. ಸರ್ವರಿಗೂ ಅಭಿವಂದಿಸಿ ವಿರಮಿ ಸುತ್ತೇನೆ.

---

# ಷೇಕ್ಸ್‌ಪಿಯರ್ ನಾಟಕಗಳು—ಡಾ॥ ಜಾನ್‌ಸನ್ನರ ಸಲಹೆಗಳು

ಲೇ: 'ಅರಯ್ಯ'

ಪುರಂದರದಾಸರ ನಾಲ್ಕನೇ ಶತಮಾನೋತ್ಸವವನ್ನು ಕನ್ನಡಿಗರು ಕೈಗೊಂಡಿರುವ ವರ್ಷವೇ, ಷೇಕ್ಸ್‌ಪಿಯರ್ ಕವಿಯ ಅಂಥದೇ ಉತ್ಸವವನ್ನು ಆಚರಿಸಲು ಇಡೀ ವಿಶ್ವವೇ ಅನುವಾಗುತ್ತಿದೆ. ಈ ಮಹಾಕವಿಯ ಮೇರು ಕೃತಿಗಳ ಸ್ಥೂಲ ಪರಿಚಯು ಕನ್ನಡ ಜನಕ್ಕೆ ಈಗಾಗಲೇ ಸಾಕಷ್ಟು ಆಗಿದೆ. ನಮ್ಮ ಕವಿಗಳು ಈ ವಿಶ್ವ ಕವಿಗೆ ನಮಿಸಿ ಬಳಿಕ ತಮ್ಮ ಕೃತಿ ರಚನೆಗೆ ಕೈ ಹಾಕಿದ್ದಾರೆ. ಡಿ.ವಿ.ಜಿ. ಶ್ರೀನಿವಾಸ, ಕುವೆಂಪು—ಇವರುಗಳು ಈ ಕವಿಯ ನಾಟಕಗಳ ಕನ್ನಡ ಭಾಷಾಂತರ, ರೂಪಾಂತರಗಳನ್ನು ಒದಗಿಸಿದ್ದಾರೆ. ಪ್ರೊ. ಮೂರ್ತಿರಾಯರು ಕಿರು ಹೊತ್ತಿಗೆ ಎಂದು ಆರಂಭಿಸಿದ ವಿಮರ್ಶಾ ಗ್ರಂಥವು ಬೃಹದ್ರೂಪವನ್ನು ತಾಳುತ್ತಿದೆ. ಆದರೆ ಈ ಬಗ್ಗೆ ಮಾಡಬೇಕಾದ ಕೆಲಸ ಇನ್ನೂ ಬಹಳ ಇದೆ. "ಬೆಳೆಯೇನೋ ಹುಲುಸಾಗಿದೆ, ಕುಯ್ಯುವವರು ಕಡಿಮೆ."

ಈ ಕವಿಯ ಆಂಗ್ಲ ವಿಮರ್ಶಕರಲ್ಲಿ ಡಾ. ಜಾನ್‌ಸನ್‌ಗೆ ಒಂದು ವಿಶಿಷ್ಠ ಸ್ಥಾನವಿದೆ. ಪ್ರೊ. ನಿಕಲ್‌ಸ್ಮಿತ್ ಹೇಳಿರುವಂತೆ:–"ಯಾವುದಾದರೂ ಕ್ಲಿಷ್ಟವಾದ ಭಾಗವು ವಿಮರ್ಶಕರ ಪರಾಭಾವವನ್ನುಂಟುಮಾಡುವ ಪ್ರಸಂಗ ಒದಗಿದಾಗ–ಜಾನ್‌ಸನ್ ಏನ್ ಹೇಳ್ತಾನೆ?—ಎಂದು ಯೋಚಿಸುವುದು ವಾಡಿಕೆಯಾಗಿದೆ."

೧೭೬೫ರಲ್ಲಿ ಜಾನ್‌ಸನ್ ಸಂಪಾದಿಸಿ ಪ್ರಕಟಿಸಿದ ಈ ನಾಟಕಗಳ ಅಷ್ಟಪತ್ರ ಆಕಾರದ ಅಷ್ಟ ಸಂಪುಟಗಳು ಆ ಶತಮಾನದಲ್ಲಿ ಹೊರಬಿದ್ದ ಆರನೇ ಪ್ರಕಟಣೆಯಾಗಿತ್ತು. ಅದಕ್ಕೆ ಹಿಂದೆ ರೋ, ಪೋಪ್, ಥೀಬಾಲ್ಡ್, ಹ್ಯಾನ್ಮರ್ ಮತ್ತು ವಾರ್ಬರ್ಟನ್ ಇವರುಗಳ ಸಂಪಾದಕತ್ವದಲ್ಲಿ ಈ ನಾಟಕ ಚಕ್ರವು ಪ್ರಕಟಣೆ ಹೊಂದಿತ್ತು. ಜಾನ್‌ಸನ್ ಪ್ರಕಟಣೆ ಬಹುಬೇಗ ಅಧಿಕೃತ ಪ್ರಕಟಣೆಯ ಮನ್ನಣೆ ಪಡೆದು ಆರು ದಶಕಗಳ ಕಾಲ ಹದಿನೆಂಟನೆಯ ಶತಮಾನದಲ್ಲಿ ಪ್ರಚುರವಾಗಿದ್ದ ಷೇಕ್ಸ್‌ಪಿಯರ್ ಸಂಪಾದನಾ ಪದ್ಧತಿಗೆ ರತ್ನಪ್ರಾಯದಂತಿತ್ತು.

ಸಂಪಾದಕ ಎಂದಲ್ಲದೆ ಜಾನ್‌ಸನ್ ವಿಮರ್ಶಕನಾಗಿಯೂ ಯಶಸ್ವಿಯಾದನು. ತನ್ನ ಪ್ರಕಟಣೆಗೆ ಒಂದು ಸೂಚನೆಯನ್ನೂ, ತದನಂತರ ಒಂದು ಮುನ್ನುಡಿಯನ್ನೂ ಅವನು ಒದಗಿಸಿದ್ದಾನೆ. ಈ ಮುನ್ನುಡಿ ಎಂಬ ಪ್ರಬಂಧ ಷೇಕ್ಸ್‌ಪಿಯರ್ ಅನ್ನು ಕುರಿತು ಬರೆದ ಪ್ರಬಂಧಗಳಲ್ಲೆಲ್ಲಾ ಅತಿ ಮಹತ್ವದಿಂದ ಕೂಡಿದ್ದು. ಈ ಪ್ರಬಂಧಗಳಲ್ಲೂ, ಅವನ ಟೀಕೆ, ಟಿಪ್ಪಣಿಗಳಲ್ಲೂ ಜಾನ್‌ಸನ್ ಏನೇನು ಸಾಧಿಸಿದಾನೆ ಎಂಬ ಅಂಶಗಳನ್ನು ಪಟ್ಟೀ ಮಾಡುವುದು ಸುಲಭವಲ್ಲ. ಈ ಕೆಲಸಕ್ಕೆ ಕೈ ಹಾಕುವ ಮುನ್ನ ಆ ಯುಗದಲ್ಲಿ ವಿಮರ್ಶೆ ಯಾವ ಪಥದಲ್ಲಿ ಸಾಗಿತ್ತು ಎಂಬಂಶವನ್ನು ಗಮನಿಸಬೇಕಾಗಿದೆ.

ಅಂದಿನ ವಿಮರ್ಶಾ ಪದ್ಧತಿಗೆ ಸರ್ವಾಧಿಕಾರಿ ಪಂಥಾ ಎಂಬ ಹೆಸರು ಬಂದಿದೆ. (Augustan or Magisterial) ಆ ಯುಗದಲ್ಲಿ ಫ್ರೆಂಚ್ ಬರಹಗಾರನಾದ ವಾಲ್ಟೇರನ ಪ್ರಭಾವ ಯೂರೋಪ್ ಖಂಡವನ್ನೆಲ್ಲಾ ಆವರಿಸಿತ್ತು. ಅವನ ಅಭಿಪ್ರಾಯದಲ್ಲಿ ಷೇಕ್ಸ್‌ಪಿಯರ್ ಒಳ್ಳೇ ಪ್ರತಿಭಾ ಸಂಪನ್ನನಾದರೂ ಅನಾಗರಿಕ ವ್ಯಕ್ತಿ, ಮತ್ತೂ ಅಜ್ಞಾನಿ. ಈ ಪಂಥದವರ ವಾದದಂತೆ ಷೇಕ್ಸ್‌ಪಿಯರನ ನಾಟಕಗಳು ದೋಷಪೂರ್ಣವಾಗಿದ್ದುವು: ಸಂಭಾಷಣೆಯಲ್ಲಿ ಅಶ್ಲೀಲ ಪದಪ್ರಯೋಗ, ಅನೌಚಿತ್ಯ ಘಟನೆಗಳು, ಪಾತ್ರಗಳ ಅಸ್ವಾಭಾವಿಕ ವರ್ತನೆ, ಹಾಸ್ಯ ಮತ್ತೂ ಕರುಣಾರಸಗಳನ್ನೂ ಕಲಬೆರಕೆ ಮಾಡಿರುವುದು, ಮತ್ತೂ ಕಾಲ ಮತ್ತು ಸ್ಥಳ ಇವುಗಳ ನಿರೂಪಣೆಯಲ್ಲಿ ಏರ್ಪಟ್ಟಿರುವ ಯಥಾರ್ಥ ಭಾವ ಸೂತ್ರದ ನಿರಾಕರಣೆ, (violation of unities) ಇತ್ಯಾದಿ.

ಈ ಪೂರ್ವ ಪಕ್ಷವನ್ನು ಖಂಡಿಸಿ ಷೇಕ್ಸ್‌ಪಿಯರ್ ಕವಿಗೆ ವಿಶ್ವಕವಿಯ ಮನ್ನಣೆಯನ್ನು ದೊರಕಿಸಿ ಕೊಡುವ ಪ್ರಯತ್ನ ಮಾಡಿದವರಲ್ಲಿ ಜಾನ್‌ಸನ್ ನೊತ್ತ ಮೊದಲಿಗನೆನ್ನಬಹುದು. ಅವನ ಹಿಂದೆ ಮಹಾಕವಿಗಳಾದ ಬೆನ್‌ಜಾನ್‌ಸನ್ ಮತ್ತೂ ಡ್ರೈಡನ್ ಈ ಕೆಲಸಕ್ಕೆ ತಳಹದಿ ಹಾಕಿದ್ದರು. ಆದರೂ ಷೇಕ್ಸ್‌ಪಿಯರ್‌ನ ಕೀರ್ತಿಗೆ ಕಳಸವಿಟ್ಟ ಹೆಗ್ಗಳಿಕೆ ಜಾನ್‌ಸನ್‌ಗೆ ಸೇರಿದ್ದು. ಇಲ್ಲಿ ಒಂದು ವಿಷಯವನ್ನು ಮಾತ್ರ ಪ್ರತಿಪಾದಿಸಲು ಅವಕಾಶ ಉಂಟು. ಷೇಕ್ಸ್‌ಪಿಯರ್ ಒಂದೇ ನಾಟಕದಲ್ಲಿ ಅಳು–ನಗು ಎರಡನ್ನೂ ಗಂಟು ಹಾಕಿರುವುದು ತೀರ ಅಸ್ವಾಭಾವಿಕ, ಅನೌಚಿತ್ಯ ಎಂಬುದು ಪೂರ್ವ ಪಕ್ಷ. ಇದಕ್ಕೆ ಜಾನ್‌ಸನ್ ಹೀಗೆ ಉತ್ತರಿಸಿದ:–" ಷೇಕ್ಸ್‌ಪಿಯರ್

ನಾಟಕಗಳನ್ನು ಮೋದಾಂತ-ಖೇದಾಂತ ಎಂದು ವಿಂಗಡಿಸುವುದು ತಪ್ಪು. ಇವುಗಳ ವೈಶಿಷ್ಟ್ಯವೇ ಬೇರೆ. ಅವುಗಳಲ್ಲಿ ನರಲೋಕದ ಮಾನವನ ಸಹಜವಾದ ಸ್ಥಿತಿಯನ್ನು ಚಿತ್ರಿಸಲಾಗಿದೆ. (Exhibiting the real state of sublunary nature.) ಇಲ್ಲಿ ಧರ್ಮ-ಅಧರ್ಮ, ಸುಖ-ದುಃಖ ಈ ದ್ವಂದ್ವಗಳು ಒಂದೊಕ್ಕೊಂದು ಅಂಟಿಕೊಂಡೇ ಇರುತ್ತವೆ. ಒಂದು ಘಟನೆಗೂ ಮತ್ತೊಂದಕ್ಕೂ ವ್ಯತ್ಯಾಸವೇನೆಂದರೆ, ಈ ಭಾವಗಳು ಬೇರೆ ಬೇರೆ ಪ್ರಮಾಣದಲ್ಲಿ ತೋರಿಬರಬಹುದು, ಕಾರಣ ಈ ವೈವಿಧ್ಯತೆಗೆ ಇತಿಮಿತಿಯೇ ಇಲ್ಲ." ಹೀಗೆ ಜಾನ್‌ಸನ್ ಬರೆದ ಪ್ರಬಂಧಗಳು ಬಹು ಅರ್ಥಗರ್ಭಿತವಾಗಿವೆ.

ಜಾನ್‌ಸನ್‌ನ ಶೈಲಿಯನ್ನು ಕುರಿತು ಒಂದು ಮಾತು. ಅವನೇ ಹೇಳಿಕೊಂಡಿರುವಂತೆ ಆಂಗ್ಲ ಭಾಷೆಯ ಬೆಳವಣಿಗೆಗೆ ಅವನು ಎರಡು ಬಗೆಯಾಗಿ ಸಹಾಯ ಮಾಡಿದ್ದಾನೆ:— ಪದಗಳ ಜೋಡಣೆ ಅಂದವಾಗಿರಬೇಕು; ಮತ್ತು ಅವುಗಳ ಓಟ ಕಿವಿಗೆ ಇಂಪನ್ನು ಕೊಡಬೇಕು. ಈ ಎರಡು ಬಗೆಯ ಉದ್ದೇಶಗಳನ್ನೂ ಅವನು ಸಾಧಿಸಿ ಯಶಸ್ವಿಯಾಗಿದ್ದಾನೆ. ಒಂದು ವಾಕ್ಯದಲ್ಲಿ ಹೇಳಬೇಕಾದರೆ, ಉದಾತ್ತ ಭಾವನೆಗಳನ್ನು ಘಂಟಾಘೋಷವಾಗಿ ನಿರೂಪಿಸಲು ಜಾನ್‌ಸನ್‌ನ ಶೈಲಿ ಬಹು ಚಂದಾಗಿ ಹೊಂದಿಕೊಳ್ಳುತ್ತದೆ.

ಕೊನೆಯದಾಗಿ, ಇನ್ನೂರು ವರ್ಷಗಳ ಕೆಳಗೆ ರಚಿತವಾದ ಈ ಪ್ರಬಂಧದಲ್ಲಿ ಈಗ ನಮ್ಮ ಗ್ರಂಥ ಸಂಪಾದನಾ ಕಾರ್ಯದಲ್ಲಿ ತೋರಿಬರಬಹುದಾದಂಥಾ ಅನೇಕ ಸಮಸ್ಯೆಗಳ ವಿವೇಚನೆಯು ಅಡಗಿದೆ. ಇದನ್ನು ಓದುವುದರಿಂದ ಪಾಂಡಿತ್ಯವನ್ನು ಸಂಪಾದಿಸಬೇಕೆಂದು ಪಣತೊಟ್ಟ ಕನ್ನಡಿಗನು ಎಷ್ಟು ಬಗೆಯಾಗಿ ಪರಿಶ್ರಮಿಸಬೇಕು ಎಂಬುದರ ಅರಿವಾಗುತ್ತದೆ. ಬಾಸ್‌ವೆಲ್ ವಿರಚಿತ ಜೀವನ ಕಥೆ ಪ್ರಪಂಚದಲ್ಲೆಲ್ಲಾ ಅತಿ ಶ್ರೇಷ್ಠವಾದದ್ದು ಎಂಬ ಪ್ರತಿಷ್ಠೆಯನ್ನು ಹೊಂದಿದೆ. ಈ ಮುಖ ಲ್ಯಾಟಿನ್ ಮೋಹ—ಆ ಮುಖ ಆಂಗ್ಲ ಕವಿತ್ವಾ ಪ್ರವಾಹ; ಹಾಸ್ಯ ರಸಕ್ಕೆ ನರ್ಮಸಚಿವ—ವಿಮರ್ಶಕರ ಗುರು; ಕರ್ಮಠನಾದರೂ ದುರ್ಜನರ ಸಲ್ಲಾಪವನ್ನು ಸವಿಯುವ ಚಟ ಉಳ್ಳವನು—ಹೀಗೆ ಪರಸ್ಪರ ವಿರೋಧಾಭಾಸಗಳಿಂದ ಕೂಡಿದ್ದ ಈ ವ್ಯಕ್ತಿಯ ಸ್ಥೂಲ ಪರಿಚಯ ಮಾಡಿಕೊಡುವುದೇ ಪ್ರಸ್ತುತ ಲೇಖನದ ಉದ್ದೇಶ.

ಷೇಕ್ಸ್‌ಪಿಯರಿನ ನಾಟಕಗಳನ್ನು ಸಂಪಾದಿಸಿ ಮುದ್ರಿಸುವ ಪ್ರಯತ್ನಗಳು ಅನೇಕವಾಗಿದ್ದು ಅವನ ಕೃತಿಗಳೆಲ್ಲಾ ವಾಚಕರ ಮುಂದಿರುವ ಈ ಸಮಯದಲ್ಲಿ, ಇವನ್ನು ಅರ್ಥಮಾಡಿಕೊಳ್ಳಲು ವಿಶೇಷವಾದ ವಿಮರ್ಶೆಯ ಸಹಾಯ ಏನಾದರೂ ಬೇಕಾಗಿದೆಯೇ? ಹಿಂದಣ ಮುದ್ರಣಗಳಲ್ಲಿ ತೋರಿ ಬಂದ ಯಾವ ನ್ಯೂನತೆಗಳನ್ನು ಈ ಹೊಸ ಉದ್ಯಮ ಸರಿಪಡಿಸಲು ಸಾಧ್ಯ? ಎಂಬ ಪ್ರಶ್ನೆಗಳು ಎದ್ದು ನಿಲ್ಲುತ್ತವೆ.

ಪುರಾತನ ಗ್ರಂಥಗಳನ್ನು ಪುನರ್ಮುದ್ರಣಕ್ಕೆ ಸಿದ್ಧಪಡಿಸುವ ಪಂಡಿತ ಎರಡು ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ:—ಅಶುದ್ಧವಾದ ಪಾಠಗಳನ್ನು ಶುದ್ಧಪಡಿಸುವುದು ಮತ್ತು ಅಸ್ಪಷ್ಟವಾದ ಭಾಗಗಳ ಮೇಲೆ ಬೆಳಕನ್ನು ಚೆಲ್ಲುವುದು. ಮುದ್ರಣ ಕಲೆ ಹುಟ್ಟಿದ ಕಾಲದಿಂದೀಚೆಗೆ ಪ್ರಕಟಿತವಾದ ಗ್ರಂಥಗಳಲ್ಲಿ ಅಶುದ್ಧವಾದ ಪಾಠಗಳು ಹೇರಳವಾಗಿರುವುದೂ, ಅನೇಕ ಕಡೆ ಸಂದಿಗ್ಧವಾಗಿರುವುದೂ ಷೇಕ್ಸ್‌ಪಿಯರನ ಕೃತಿಗಳ ವೈಶಿಷ್ಟ್ಯ ಎನ್ನಬಹುದು. ಬಹುತೇಕ, ಲೇಖಕರು ತಮ್ಮ ಕೃತಿಗಳನ್ನು ತಾವೇ ಪ್ರಕಟಿಸುವ ಕಾರ್ಯವನ್ನು ನಿರ್ವಹಿಸುವ ಮೂಲಕ ಪಾಠಾಂತರಗಳ ಅವಶ್ಯಕತೆಯನ್ನು ಹೋಗಲಾಡಿಸಿ ವಿಮರ್ಶಕನ ಊಹಾಪೋಹೆಗೆ ಎಡೆಯನ್ನು ಕೊಡುವುದಿಲ್ಲ. ಕೆಲವು ವೇಳೆ ಗ್ರಂಥಕರ್ತನ ಮರಣಾನಂತರ ಅದು ಮುದ್ರಿತವಾಗಬಹುದು, ಆದರೆ ಷೇಕ್ಸ್‌ಪಿಯರಿನ ಅನಾಥ ಕೃತಿಗಳ ಅಶುದ್ಧ ಪಾಠಗಳ ಗತಿ ಅವಕ್ಕೆ ದೊರೆಯುವುದು ಅಪೂರ್ವ. ಏಕೆಂದರೆ, ಅವುಗಳು ಒಂದೇ ಹಸ್ತಪ್ರತಿಯಲ್ಲಿ ಅಡಕವಾಗಿದ್ದು, ಗ್ರಂಥಕಾರನೇ ಬರೆದೋ ತಿದ್ದಿಯೋ ಇರುವುದರಿಂದ ಆ ಗ್ರಂಥಗಳಲ್ಲಿ ತೋರಿ ಬರುವ ನ್ಯೂನತೆಗಳಿಗೆಲ್ಲಾ ಒಬ್ಬನೇ ಹೊಣೆಗಾರನಾಗಿರುತ್ತಾನೆ.

ಇವಕ್ಕೂ ಷೇಕ್ಸ್‌ಪಿಯರಿನ ನಾಟಕಗಳ ಸ್ಥಿತಿಗೂ ಬಹು ಅಂತರವಿದೆ. ಅವನು ಅವುಗಳನ್ನು ಮಾರಿದ್ದು ಮುದ್ರಣಕ್ಕೆಂದಲ್ಲ, ರಂಗಮಂಟಪದ ಮೇಲೆ ಪ್ರಯೋಗಿಸಲೆಂದು. ನಟರ ಸೌಕರ್ಯಕ್ಕಾಗಿ ತ್ವರಿತದಿಂದ ಅವುಗಳ ಅನೇಕ ಪ್ರತಿಗಳು ತಯಾರಾರಾದವು; ನಕಲುಗಳ ಸಂಖ್ಯೆ ಬೆಳೆದಂತೆಲ್ಲಾ ಲಿಪಿಕಾರರ ದೋಷಗಳು ವೃದ್ಧಿಯಾದವು; ಅಥವಾ ನಟನ ಮೋಡಿಯನ್ನನುರಿಸಿ (Fashion) ಅಶುದ್ಧ ಪಾಠಗಳುಂಟಾದವು. ಹೀಗಾಗಿ ಒಬ್ಬ ನಟ ಸ್ವಕಪೋಲಕಲ್ಪಿತವಾದ ಹಾಸ್ಯೋಕ್ತಿಗಳನ್ನು ಸೇರಿಸಿರಬಹುದು; ಮಗುದೊಬ್ಬ ಪ್ರಯೋಗದ ಕಾಲವನ್ನು ಮಿತಗೊಳಿಸುವ ಸಲುವಾಗಿ ಕೆಲವು ಭಾಗಗಳನ್ನು ಕಿತ್ತು ಹಾಕಿರಬಹುದು. ಈ ನಾಟಕಗಳು ಮುದ್ರಣವಾಗುವ ಹೊತ್ತಿಗೆ ನಾನಾ ದುರವಸ್ಥೆಗೆ ಈಡಾಗಿರಬೇಕು—ಗ್ರಂಥಕರ್ತನ ಸಮ್ಮತಿ ಇಲ್ಲದಿರುವುದು; ಮಾಲೀಕನ ಒಪ್ಪಿಗೆ ಪಡೆಯದಿರುವುದು; ರಂಗಮಂಟಪಕ್ಕೆಂದು ತಯಾ

ರಾದ ತುಂಡು ತುಂಡು ಭಾಗಗಳನ್ನು ಕದ್ದೋ ಆಕಸ್ಮಾತ್ತಾಗಿಯೊ ಸಂಪಾದಿಸಿ ಅವುಗಳನ್ನು ಒಟ್ಟುಗೂಡಿಸಿ ಮುದ್ರಿಸುವ ಸಾಹಸಕ್ಕೆ ಕೈ ಹಾಕುವುದು; ಕಳ್ಳತನದಿಂದಲೂ ಕ್ಷಿಪ್ರವಾಗಿಯೂ ಮುದ್ರಿಸುವುದು—ಇತ್ಯಾದಿ. ಅವುಗಳ ದುಃಸ್ಥಿತಿಗೆ ಇನ್ನೊಂದು ಕಾರಣ ಎಂದರೆ ಮುದ್ರಕರ ಅಜ್ಞಾನ ಮತ್ತೂ ಅಜಾಗರೂಕತೆ. ಮುದ್ರಣ ಕಲೆ ಆ ಕಾಲದಲ್ಲಿ ಯಾವ ಸ್ಥಿತಿಯಲ್ಲಿತ್ತು ಎಂಬ ಅಂಶವನ್ನು ಅರಿತವರಿಗೆಲ್ಲಾ ಈ ವಿಷಯ ಥಟ್ಟನೆ ಹೊಳೆಯುವುದು.

ಅನೇಕ ಬಗೆಯ ನ್ಯೂನತೆಗಳನ್ನು ಉದ್ದೇಶಪೂರ್ವಕವಾಗಿ ಒಟ್ಟುಗೂಡಿಸಿ ಪಾಠವನ್ನು ಹೀಗೆ ಅಶುದ್ಧಪಡಿಸುವುದು ಸುಲಭಸಾಧ್ಯವಲ್ಲ. ಈ ರೀತಿ ಇನ್ನು ಯಾವ ಗ್ರಂಥಕರ್ತನೂ ತನ್ನ ಕೃತಿಯನ್ನು ಹಿಂದು ಮುಂದು ನೋಡದೆ ಕಾಲಕ್ಕೆ ತುತ್ತು ಮಾಡಲಿಲ್ಲ. ಇನ್ನು ಯಾವ ಗ್ರಂಥವೂ ಹೀಗೆ ಪದೇ ಪದೇ ರಂಗಮಂಟಪದ ಮೇಲೆ ಪ್ರಯೋಗಿಸುವವರ ಕೈಗೆ ಸಿಕ್ಕಿ ಮಾರ್ಪಾಟನ್ನು ಹೊಂದಿದರೂ ಹಸ್ತಪ್ರತಿಯಾಗೇ ಉಳಿದಿಲ್ಲ. ನಟರಿಗೆ ನಕಲನ್ನು ಒದಗಿಸುವ ಲಿಪಿಕಾರರಂತೆ ಅಸಮರ್ಥರಾದವರು ಈ ಕೆಲಸಕ್ಕೆ ಇನ್ನು ಎಲ್ಲೂ ಸಿಗಲಾರರು; ಏಕೆಂದರೆ ಆ ಕಾಲದಲ್ಲಿ ಕೆಳಮಟ್ಟದ ಜನರೆಲ್ಲಾ ಅನಕ್ಷರಸ್ಥರಾಗಿದ್ದರು. ಇನ್ನು ಯಾವ ಗ್ರಂಥವೂ ಹೀಗೆ ಛಿದ್ರವಿಛಿದ್ರವಾದ ಭಾಗಗಳನ್ನು ಹೇಗೋ ಒಟ್ಟುಗೂಡಿಸುವ ಮುಖೇಣ ಮುದ್ರಣದ ಸಂಸ್ಕಾರವನ್ನು ಪಡೆಯಲಿಲ್ಲ. ಇನ್ನು ಯಾವ ಯುಗದಲ್ಲೂ ಮುದ್ರಣ ಕಲೆ ಇಂಥಾ ಅಡ್ಡನಾಡಿಗಳ ಕೈಗೆ ಸಿಕ್ಕಿ ಬಿದ್ದಿರಲಿಲ್ಲ.

ಗ್ರಂಥ ಪಾಠವನ್ನು ದೋಷಯುಕ್ತವನ್ನಾಗಿ ಮಾಡಲು ಎಷ್ಟು ಕಾರಣಗಳಿವೆ ಎಂದು ಯೋಚಿಸಿದರೆ, ಷೇಕ್ಸ್‌ಪಿಯರಿನ ನಾಟಕಗಳನ್ನು ಶೋಧಿಸಿ ಮುದ್ರಿಸುವ ಆವಶ್ಯಕತೆ ಸ್ಪಷ್ಟವಾಗುತ್ತದೆ. ಇದರ ಜತೆಗೆ ಲೇಖಕನ ಅರ್ಥವನ್ನು ಮಸಕು ಮಾಡುವ ಸಾಧನಗಳನ್ನೂ ನಾವು ಎಣಿಕೆಗೆ ತಂದುಕೊಳ್ಳಬೇಕಾಗುತ್ತದೆ. ಇವುಗಳಲ್ಲಿ ಕೆಲವು ಆ ಯುಗಧರ್ಮಕ್ಕೆ ಸೇರಿದ್ದು, ಮತ್ತೆ ಕೆಲವಕ್ಕೆ ಗ್ರಂಥಕರ್ತನೇ ಮೂಲಕಾರಣ.

ಒಬ್ಬಾತನು ತನ್ನ ತಲೆಮಾರಿನವರನ್ನು ಬಹಳ ಹಿಂದೆ ಬಿಟ್ಟು, ಬೇರೊಂದು ಯುಗದವರು ಸ್ಮರಿಸುವ ಏಕೈಕ ಬರಹಗಾರನಾಗಿ ಉಳಿದರೆ ಅವನ ಮಾತುಗಳು ಮಸಕಮಸಕಾಗುವುದು ಅನಿವಾರ್ಯ. ಪ್ರತಿಯೊಂದು ಯುಗದಲ್ಲೂ ಅದಕ್ಕೆ ಅನುಗುಣವಾದ ಮಾತಿನ ಮೋಡಿ ಮತ್ತೂ ಆಲೋಚನಾಸರಣಿ ಇರುತ್ತವೆ. ಪರಸ್ಪರ ಹೋಲಿಸಿ ನೋಡಲು ಅನೇಕ ಗ್ರಂಥಗಳು ದೊರೆತರೆ ಮೇಲ್ಕಂಡ ವೈಶಿಷ್ಟ್ಯಗಳನ್ನು ಸುಲಭವಾಗಿ ವಿವರಿಸಬಹುದು. ಒಂದಕ್ಕೊಂದು ಸಾಮ್ಯದಿಂದ ಯಾವಾಗ ಬೆಳಕು ಚೆಲ್ಲಲು ಸಾಧ್ಯವಾಗದೇ ಹೋಗುತ್ತದೆಯೋ ಆ ಸಂದರ್ಭದಲ್ಲಿ ಗ್ರಂಥದ ಅನೇಕ ಭಾಗಗಳು ಸರಿಯಾಗಿ ಅರ್ಥವಾಗದೇ ಹೋಗಬಹುದು; ಅಥವಾ ಕಷ್ಟಸಾಧ್ಯವಾಗಬಹುದು. ಮಹೋನ್ನತಿ ಪಡೆದ ಅಥವಾ ನಿತ್ಯ ಜೀವನಕ್ಕೆ ಸಂಬಂಧಿಸಿದಂಥ ಸಂಭಾಷಣೆಗಳು ಆಂಗ್ಲ ಭಾಷೆಯಲ್ಲಿ ಮೊತ್ತಮೊದಲು ಗಮನಾರ್ಹವಾಗಿ ದೊರೆಯತಕ್ಕಂಥಾದ್ದು ಷೇಕ್ಸ್‌ಪಿಯರಿನ ನಾಟಕಗಳಲ್ಲಿ ಮಾತ್ರ. ಅವನು ಓದಿ ತನ್ನ ಶೈಲಿಯನ್ನು ರೂಪಿಸಿಕೊಂಡ ಗ್ರಂಥಗಳಲ್ಲಿ ಕೆಲವು ಬಹುಶಃ ನಷ್ಟವಾಗಿವೆ; ಉಳಿದವು ಕಡೆಗಾಣಿಸಲ್ಪಟ್ಟಿವೆ. ಆದ್ದರಿಂದ ಯಾವ ಕವಿಯ ಛಾಯೆ ಎಲ್ಲಿ ಕಂಡುಬರುತ್ತದೆ ಎಂಬುದನ್ನು ಗುರುತಿಸಲು ಸಾಧ್ಯವಾಗಿಲ್ಲ; ಅಲ್ಲಲ್ಲಿ ಸೂಚಿತವಾಗಿರುವ ಕಥಾಸಂದರ್ಭಗಳನ್ನು ಕಂಡುಹಿಡಿದಿಲ್ಲ; ಮತ್ತು ಅನೇಕ ಸುಂದರ ಭಾವಗಳು, ಅವು ಹಾಸ್ಯರಸಕ್ಕೆ ಸೇರಿದ್ದಾಗಲಿ ಗಂಭೀರತರನಾದ್ದಾಗಲಿ, ಅವುಗಳ ಆಕರಗಳು ಹೇಗೆಯೊ ಹಾಗೇ ಮಾಯವಾಗಿವೆ—ಪರದೇ ನಶಿಸಿದ ಮೇಲೆ ಚಿತ್ರಗಳ ರೂಪು ರೇಖೆಗಳು ಅದೃಶ್ಯವಾಗುವಂತೆ.

ಷೇಕ್ಸ್‌ಪಿಯರಿನ ಶ್ರೇಷ್ಠತೆಯ ಹೆಗ್ಗಳಿಕೆ ಏನೆಂದರೆ ಅವನ ದೃಶ್ಯಗಳು ಪ್ರತ್ಯಕ್ಷ ಜೀವನವನ್ನು ಮತ್ತೂ ಮಾನವನ ಸ್ವಭಾವವನ್ನು ಅವಲಂಬಿಸಿರತಕ್ಕ ರೀತಿ. ತನ್ನ ಕಣ್ಣಿನ ಎದುರಿಗೆ ಹಾಯ್ದು ಹೋಗುತ್ತಿದ್ದ ಜೀವನ ನಾಟಕದ ದೃಶ್ಯಗಳನ್ನು ಅವನು ಪ್ರತಿಬಿಂಬಿಸುತ್ತಿದ್ದನು: ಆದ್ದರಿಂದ ಅವನ ನಾಟಕಗಳಲ್ಲಿ ಇತರ ಕಾವ್ಯಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಜನಸಾಮಾನ್ಯರ ಮೂಢನಂಬಿಕೆಗಳೂ ಸಂಪ್ರದಾಯಗಳೂ ಸೂಚಿತವಾಗಿವೆ. ಇವುಗಳನ್ನು ನಾವು ಪತ್ತೆ ಹಚ್ಚಿದ ಹೊರತು ಈ ಕವಿಯ ಅರ್ಥ ಸ್ಫುಟವಾಗುವಂತಿಲ್ಲ.

ಅವನು ಗ್ರಂಥ ರಚನೆ ಮಾಡಿದ ಕಾಲದಲ್ಲಿ ಕಾವ್ಯದ ಭಾಷೆ ಇನ್ನೂ ಖಚಿತವಾಗಿರಲಿಲ್ಲ. ಅದರ ನುಡಿಗಟ್ಟಿನ ಅರ್ಥ ಏರುಪೇರಿಗೆ ಒಳಗಾಗಿತ್ತು; ಅಕ್ಕಪಕ್ಕದ ಭಾಷೆಗಳಲ್ಲಿನ ಪದಗಳನ್ನು ಸ್ವೇಚ್ಛೆಯಾಗಿ ದೇಶಭಾಷಾ ಕಣಜಕ್ಕೆ ತಂದು ತುಂಬುತ್ತಿದ್ದ ಕಾಲ ಅದು; ಮತ್ತೂ ದೇಶೀ ಶಬ್ದಗಳು ಮಾತಿನ ಮಾಲೆಯಲ್ಲಿ ಎದ್ದು ಕಾಣುತ್ತಿದ್ದುವು. ಮೃತಭಾಷೆಗಳು ಮತ್ತೂ ಪರಭಾಷೆಗಳು ಒಂದು ಕಡೆ, ಹಳೇ ಪ್ರಯೋಗಗಳೂ ನವ್ಯತೆಯೂ ಮಗುದೊಂದು ಕಡೆ, ಹೀಗಾಗಿ ವಾಚಕರಿಗೆ ಕಕ್ಕಾಬಿಕ್ಕಿ ಉಂಟು ಮಾಡುವ ಅನೇಕ ಪ್ರಸಂಗಗಳು ಒಟ್ಟುಗೂಡಿದ್ದುವು. ಎಲ್ಲಾ ಯುಗಗಳಲ್ಲಿ ನಡೆವಂತೆ, ಆ ಯುಗದಲ್ಲೂ ಪದಸರಣಿ ಕಾಲಮಹಿಮೆಗೆ ಒಳಗಾಗಿ ಪದೇ ಪದೇ ಬದಲಾವಣೆ ಹೊಂದುತ್ತಿತ್ತು. ಈಗ ಹುಟ್ಟಿದ ಮಾತು ನಾಳೆ ಮಾಯವಾಗಬಹುದು. ಹೀಗಾಗಿ ಹೊಸ

ಮಾತುಗಳ ಅರ್ಥ ಜನಜನಿತವಾಗುವ ಮುನ್ನ ಅಥವಾ ಸಾಕಷ್ಟು ಅಧಿಕೃತವಾಗುವುದರೊಳಗೆ ಈ ಜನ ಮರುಳೊ ಜಾತ್ರೆ ಮರುಳೊ ಎಂಬ ಫ್ಯಾಷನ್ನಿನ ಪ್ರವಾಹದಲ್ಲಿ ಕೊಚ್ಚಿ ಕೊಂಡು ಹೋಗಿಬಿಡುತ್ತಿತ್ತು. ಷೇಕ್ಸ್‌ಪಿಯರಿನ ಸಮ ಕಾಲೀನರು ಉಳಿದವರಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಭಾಷಾ ಸಾಮಗ್ರಿಯ ಮೇಲೆ ಪ್ರಯೋಗ ನಡೆಸ ಹತ್ತಿದ್ದರು; ಇದರಿಂದ ಅಸಾಧು ಪ್ರಯೋಗಗಳು ಬಳಕೆಗೆ ಬಂದು ಭಾಷಾ ಮಾರ್ಗ ಏಕರೂಪವನ್ನು ಪಡೆದಂತಾಯ್ತು.

ಷೇಕ್ಸ್‌ಪಿಯರಿನ ಭಾಷೆ ಇತರ ಕವಿಗಳ ಭಾಷೆಗಿಂತ ಹೆಚ್ಚು ಕ್ಲಿಷ್ಟವಾಗಿರುವುದಕ್ಕೆ ಅವನ ಕೃತಿ ರಚನೆಯ ಸ್ವಭಾವವೇ ಕಾರಣ. ಇವನು ತನ್ನ ಉದ್ದೇಶ ಸಾಧನೆಗಾಗಿ ಜನರು ಸಾಮಾನ್ಯವಾಗಿ ಮಾತನಾಡುವ ಪದ ಸರಣಿಯನ್ನೇ ಉಪಯೋಗಿಸುತ್ತಿದ್ದನು. ಆದ್ದರಿಂದ ವಿಶೇಷವಾದ ಅರ್ಥ ಸೂಚನೆ, ಅಧ್ಯಾಹಾರ, ಮತ್ತೂ ನಿಬಿಡವಾದ ನಾಣ್ನುಡಿ ಗಳಿಗೆ ಎಡೆಮಾಡಿಕೊಟ್ಟ ಹಾಗಾಯ್ತು. ಮಾತಿನ ಭರದಲ್ಲಿ ನಾವು ಈ ವಿಶೇಷ ಗುಣಗಳನ್ನು ಗಮನಿಸುವುದೇ ಇಲ್ಲ. ಈಗ ಸುಂದರವೂ ಸುಪರಿಚಿತವೂ ಎಂದೆನಿಸಿರುವ ಭಾಷೆ ಎಂದಾದರೂ ಅಪರಿಚಿತವೂ ಅಸ್ವಾಭಾವಿಕವೂ ಆಗಬಹುದೆಂಬ ಸಂದೇಹ ನಮಗೆ ಬರುವುದಿಲ್ಲ. ಅಥವಾ ಈಗ ಸುಲಭವಾಗಿ ಗ್ರಾಹ್ಯವಾಗುವ ಭಾಷೆ ಕಾಲ ಕ್ರಮದಲ್ಲಿ ಪುರಾತನ ಪ್ರಯೋಗ ಎಂದೆನಿಸಿಕೊಳ್ಳಬಹುದೆಂಬುದರ ಅರಿವು ನಮಗೆ ಈಗ ಇರುವುದಿಲ್ಲ.

ಷೇಕ್ಸ್‌ಪಿಯರಿನ ಭಾಷೆ ನಮಗೆ ಮಸಕಾಗಿ ಕಾಣಲು ಮುಖ್ಯ ಕಾರಣಗಳು ಮೇಲೆ ಕಂಡಂತೆ ಇವೆ. ಇದರ ಜತೆಗೆ ಅವನ ಭಾವನಿರ್ಭರತೆ ಹೇಗಿದೆ ಅಂದರೆ ಕೆಲವು ಕಡೆ ಅದು ಮಾತುಗಳು ಹೊರಲು ದುಸ್ಸಾಧ್ಯವಾದ ವಿಚಾರ ಸರಣಿ ಯನ್ನು ಅವುಗಳ ಮೇಲೆ ಹೇರಿಸುತ್ತದೆ. ಮತ್ತು ಅವನ ಪ್ರತಿಭಾಶಕ್ತಿ ಮಿಂಚಿನ ವೇಗದಿಂದ ಹರಿಯುವುದಾದ್ದರಿಂದ ಒಂದು ವಿಷಯವನ್ನು ಪೂರ್ಣವಾಗಿ ಪ್ರತಿಪಾದಿಸುವ ಮುನ್ನ ಇನ್ನೊಂದು ಚಿತ್ರ ಅವನ ಮುಂದೆ ಅಡ್ಡ ಸುಳಿಯುವಂತಾಗು ತ್ತದೆ. ಆದರೆ, ನನ್ನ ಅಭಿಪ್ರಾಯದಲ್ಲಿ ಪ್ರೇಕ್ಷಕವರ್ಗಕ್ಕೆ ಕಷ್ಟವಾಗಿ ಕಂಡ ಸಾಲುಗಳು ಅತಿ ವಿರಳ; ಕಾರಣ ಅವನ ಮಾತಿನ ಧಾಟಿ ಜನಸಾಮಾನ್ಯರು ಆಡುವ ಭಾಷೆಯೇ ಆಗಿತ್ತು. ಅವನ ಸಮಕಾಲೀನರ ಕೃತಿಗಳು ಸಾಕಷ್ಟು ಪ್ರಚುರವಾಗಿಲ್ಲವಾದ ಕಾರಣ ಷೇಕ್ಸ್‌ಪಿಯರಿನ ಭಾಷೆ ಈಗ ವಿಚಿತ್ರವಾಗಿ ತೋರಿಬರುತ್ತದೆ.

ಅನೇಕ ಗ್ರಂಥಕರ್ತರು ತಾವು ಮಾಡಿರಬಹುದಾದ ಉದ್ಧಾರ ಕಾರ್ಯಕ್ಕಾಗಿ ಹೊಗಳಿಕೆಗೆ ಪಾತ್ರರಾಗುತ್ತಾರೆ: ಅಥವಾ ನವೀನ ಕವಿ ಎಂಬ ತೆಗಳಿಕೆಗೆ ತುತ್ತಾಗುತ್ತಾರೆ. ಇದೆಲ್ಲಾ ಸಕಾರಣ ಎನ್ನುವಂತಿಲ್ಲ, ಏಕೆಂದರೆ ಹೀಗೆ ಹೇಳ ತಕ್ಕ ವಾಚಕರು ಆ ಯುಗದಲ್ಲಿ ಹುಟ್ಟಿದ ಇತರ ಗ್ರಂಥ ಗಳನ್ನು ಓದಿರುವುದು ಅಪರೂಪ. ಅಡಿಸನ್‌ನಂಥ ಪ್ರತಿಷ್ಠಿತ ಗ್ರಂಥಕರ್ತ ಮಿಲ್ಟನ್ ಕವಿ ಹೇಗೆ ಭಾಷಾ ಸಂಪತ್ತಿಯನ್ನು ಹೆಚ್ಚಿಸಿದಾನೆ ಎಂಬಂಶವನ್ನು ಪಟ್ಟೀಮಾಡುವುದರಲ್ಲಿ ನಿಷ್ಫಲ ಹೊಂದಿದ್ದಾನೆ. ಹೇಗೆಂದರೆ ಅವನು ಮಿಲ್ಟನ್ ಮುಖೇಣ ಭಾಷೆಗೆ ಸೇರಿದ ಒಂದು ಶಬ್ದವನ್ನು ಹೆಸರಿಸಿಲ್ಲ. ಬೆಂಟ್ಲಿ ಯಂಥ ಪಂಡಿತನು ಕೂಡ ಮಿಲ್ಟನ್ ಕವಿಯನ್ನು ಅಕ್ಷರ ಲೋಪ ಎಂಬ ಅಲಂಕಾರವನ್ನು ಬಳಕೆಗೆ ತಂದನೆಂದು ಹೊಗಳಿರುವುದು ಅಷ್ಟು ಸೊಗಸಾಗಿಲ್ಲ; ಏಕೆಂದರೆ ಈ ಅಲಂಕಾರದ ಉಪಯೋಗವನ್ನು ಕಾವ್ಯರಚನೆ ಆರಂಭ ಮಾಡಿದ ಕಾಲದಿಂದ ಆಂಗ್ಲಕವಿಗಳು ಅರಿತಿದ್ದರು. ವಾಸ್ತವ ವಾಗಿ, ಮಿಲ್ಟನ್ ಕವಿಯೇ ಈ ಅಲಂಕಾರವನ್ನು ಉಪಯೋ ಗಿಸಿದವರಲ್ಲಿ ಕೊಟ್ಟಕೊನೆಯವನು.(?)

ಇನ್ನೊಂದು ಅಡಚಣೆ, ವ್ಯಾಖ್ಯಾನಕಾರನ ತಲೆ ತಿನ್ನುವ ವಿಷಯ ಇದು, ಏನೆಂದರೆ ಷೇಕ್ಸ್‌ಪಿಯರ್ ತನ್ನ ಮೂಲ ಗ್ರಂಥಗಳನ್ನು ಚಾಚು ತಪ್ಪದೆ ಅನುಸರಿಸುತ್ತಿದ್ದುದು. ತನ್ನ ಭಾವಗಳನ್ನು ಹಿಗ್ಗಲಿಸಿ ಅವಕ್ಕೆ ವಿಶಾಲವಾದ ತಳಹದಿ ಹಾಕು ವುದು ಮತ್ತೂ ಕವಿಸಹಜವಾದ ಧೋರಣೆಯಿಂದ ಅವುಗಳಿಗೆ ಕಾವ್ಯದ ಮೆರಗು ಕೊಡುವುದು—ಈರೀತಿ ಮಾಡದೆ, ತನ್ನ ಮೂಲ ಉದ್ದೇಶಕ್ಕೆ ಭಂಗತರತಕ್ಕಂಥಾ ಪರಸ್ಪರ ವಿರೋಧಾ ಭಾಸಗಳಿಂದ ಕೂಡಿದ ಪ್ರಸಂಗಗಳನ್ನು ಹಾಗೆಯೇ ನಿರೂಪಿ ಸಿದ್ದಾನೆ. ಮೂಲಗ್ರಂಥದಲ್ಲಿ ಹೀಗಿತ್ತು ಎಂಬುದೇ ಇದಕ್ಕೆ ಕಾರಣ. ಇಂಥಾ ಭಾಗಗಳ ಮೇಲೆ ಬೆಳಕನ್ನು ಚಲ್ಲಬೇಕಾ ದರೆ, ಷೇಕ್ಸ್‌ಪಿಯರ್ ಯಾವ ಗ್ರಂಥವನ್ನು ಆಧಾರವಾಗಿ ಟ್ಟುಕೊಂಡಿದ್ದನೊ ಅದೇ ಗ್ರಂಥವನ್ನು ವಿಮರ್ಶಕನು ಪರಿ ಶೀಲಿಸಬೇಕು.

ಷೇಕ್ಸ್‌ಪಿಯರ್ ನಾಟಕಚಕ್ರವನ್ನು ಸಂಪಾದಿಸುವ ಸಾಹ ಸಕ್ಕೆ ಕೈಹಾಕಿದ ಪಂಡಿತ ಈ ಕಷ್ಟಸಾಧ್ಯವಾದ ಪೂರ್ವಸಿದ್ಧತೆ ಯನ್ನು ಪಡೆದಿರಬೇಕು; ಈ ಅಡಚಣೆಗಳಿಗೆಲ್ಲಾ ಪರಿಹಾರ ವನ್ನು ಒದಗಿಸಬೇಕು.

ಈ ನಾಟಕಚಕ್ರದಲ್ಲಿ ಉಂಟಾಗಿರುವ ಅಶುದ್ಧಪಾಠಗಳನ್ನು ಪುರಾತನವಾದ ಎಲ್ಲ ಪ್ರತಿಗಳನ್ನೂ ನೋಡಿ, ತೂಗಿ, ತಿದ್ದಲು ಪ್ರಯತ್ನಿಸಲಾಗುತ್ತದೆ. ಇದರಿಂದ ಅನೇಕ ಕಡೆ ಮೂಲ ಪಾಠದ ಸೌಂದರ್ಯವನ್ನು ಪುನಃ ಪಡೆಯಬಹುದೆಂಬ ಆಸೆ ಇದೆ. ಕನಿಷ್ಠಪಕ್ಷ, ಪಾಠಾಂತರಗಳನ್ನೆಲ್ಲಾ ಸಂಗ್ರಹಿಸಿ ಎಲ್ಲೆಲ್ಲಿ ಯಾವ ಯಾವ ಪಾಠಭೇದಗಳಿವೆ ಎಂಬಂಶವನ್ನು

ಪಟ್ಟೀಮಾಡುವುದರಿಂದ, ಮುಂದೆ ಬರುವ ವಿಮರ್ಶಕ ವಿವೇಚನೆಗೆ ತಕ್ಕ ಸಾಮಗ್ರಿ ಒದಗಿಸಿಕೊಟ್ಟ ಹಾಗಾಗುತ್ತದೆ. ಏತಕ್ಕೆಂದರೆ ಅಶುದ್ಧಪಾಠ ಎಂದು ನಾವು ಯಾವುದನ್ನು ಭಾವಿಸಿದ್ದೇವೆಯೋ ಅದು ಮೂಲಕ್ಕೆ ಸಮೀಪವರ್ತಿಯಾಗಿರ ಬಹುದು.

ಈಗ ದೊರೆಯತಕ್ಕ ಪ್ರತಿಗಳೆಲ್ಲಾ ಪ್ರತ್ಯಕ್ಷವಾಗಿಯೂ ಉದ್ದೇಶಪೂರ್ವಕವಾಗಿಯೂ ದೋಷಪೂರ್ಣವಾಗಿವೆ. ಮುಂದೆ ಬರುವವರ ಶ್ರಮವನ್ನು ಕಡಿಮೆ ಮಾಡಬೇಕೆಂಬ ಉದ್ದೇಶ ಹಳೆಯ ಸಂಪಾದಕರು ಇಟ್ಟುಕೊಂಡಿರಲಿಲ್ಲ. ಅವರು ನೋಡಿದ ಪ್ರತಿಗಳನ್ನೇ ಪುನಃ ತುಲನ ಮಾಡಬೇಕಾಗಿದೆ; ಮಾಡಿದ ಕೆಲಸ ಪುನಃ ಮಾಡಬೇಕಾಗಿದೆ; ಈಗ ದೊರೆಯುವ ಯಾವ ಮುದ್ರಣವೂ ಷೇಕ್ಸ್‌ಪಿಯರಿನ ಕೃತಿಗಳ ಅತ್ಯುತ್ತಮ ಪ್ರತಿ ಎಂದು ಓದುಗರು ನಂಬಲು ಸಾಮಗ್ರಿಯನ್ನು ಒದಗಿಸಿಲ್ಲ.

ಈಗ ಮುದ್ರಿಸಬೇಕೆಂದಿರುವ ಪ್ರತಿ, ಬೇರೊಂದರಲ್ಲಿ ದೊರೆಯದೇ ಇರತಕ್ಕ, ಇಷ್ಟು ಪ್ರಯೋಜನವನ್ನಾದರೂ ಒದಗಿಸಬಲ್ಲದೆಂದು ಆಶಿಸಲಾಗಿದೆ. ಇದುವರೆಗೆ ದೊರೆತಿರುವ ಎಲ್ಲಾ ಮಾತೃಕೆಗಳಲ್ಲಿ ಕಂಡುಬರುವ ಪಾಠ ಪ್ರಭೇದಗಳನ್ನೆಲ್ಲಾ ಇಲ್ಲಿ ಪ್ರದರ್ಶಿಸಲಾಗುವುದು. ಕಾರಣ, ಸಂಪಾದಕರು ನಿರ್ಧರಿಸಿರುವ ಪಾಠ ತೃಪ್ತಿಕರವಾಗಿಲ್ಲ ಎಂದೆನಿಸಿದರೆ ವಾಚಕರೇ ಇದಕ್ಕಿಂತ ಒಳ್ಳೆಯ ಪಾಠವನ್ನು ಆರಿಸಿಕೊಳ್ಳಲು ಸಾಮಗ್ರಿಯನ್ನು ಒದಗಿಸಿಕೊಟ್ಟಂತೆ ಆಗುತ್ತದೆ.

ಎಲ್ಲಾ ಮುದ್ರಣಗಳೂ ಸಿದ್ಧವಾಗಿ ದೋಷಪೂರ್ಣವಾಗಿರುವಲ್ಲಿ ಬೇರೆ ಬೇರೆ ಪಾಠಗಳ ತುಲನ ಕ್ರಮವು ಶುದ್ಧ ಪಾಠವನ್ನು ನಿರ್ಧರಿಸಲು ಸಹಾಯ ಮಾಡಲಾರದು. ಸಂಪಾದಕನ ಚಾತುರ್ಯ, ಕಲ್ಪಕತನ ಇಲ್ಲಿ ಉಪಯೋಗಿಸಬೇಕಾಗಿದೆ. ಗ್ರಂಥಕರ್ತನು ನಿರ್ಧರಿಸದೆ ಬಿಟ್ಟದ್ದು, ಮುದ್ರಕರ ಕ್ಷಣಭಂಗುರವಾದ ಮನೋವೃತ್ತಿಗೂ ಮತ್ತೂ ಅವರ ಅಜ್ಞಾನಕ್ಕೂ ಪಕ್ಕಾಗಿದ್ದ ಭಾಗಗಳಲ್ಲಿ ಕೆಲವೆಡೆಯಾದರೂ ಬದಲಾವಣೆ ಮಾಡಬೇಕಾಗುತ್ತದೆ. ಆದರೆ ಆಕ್ಸ್‌ಫರ್ಡ್ ಆವೃತ್ತಿಯಲ್ಲಿ ಮಾಡಿರುವಂತೆ ಓದುಗರ ಗಮನಕ್ಕೆ ತರದೇ ಯಾವ ಬದಲಾವಣೆಯನ್ನೂ ಹಳೆಯ ಪಾಠದ ಮೇಲೆ ಹೊರಿಸಲಾಗುವುದಿಲ್ಲ; ಹಾಗೂ ಸಂಪಾದಕನ ಊಹಾಪೋಹೆಗೆ ಎಡೆ ಇರುವಲ್ಲಿ ಸ್ವೇಚ್ಛಾ ಮನೋವೃತ್ತಿಯನ್ನೂ ಅನಗತ್ಯವಾಗಿ ಬದಲಾಯಿಸುವ ಕ್ರಮವನ್ನೂ ತ್ಯಜಿಸಲಾಗುವುದು.

(ಮುಂದುವರಿಯುವುದು)

# ಶ್ರೀ ಪುರಂದರದಾಸರು ಮತ್ತು ಅವರ ಸಾಹಿತ್ಯ

ಲೇ : ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ

ಕರ್ಣಾಟಕದ ಚರಿತ್ರೆಯಲ್ಲಿ ಶ್ರೀ ಪುರಂದರದಾಸರು ಹಲವಾರು ಕಾರಣಗಳಿಂದ ಪ್ರಖ್ಯಾತಿಯನ್ನು ಗಳಿಸಿದ್ದಾರೆ. ಇವರು ಕನ್ನಡದ ಮಹಾಕವಿಗಳಾಗಿ, ಕರ್ಣಾಟಕದ ಮಹಾಸಂತರಾಗಿ, ವಿಖ್ಯಾತ ವಾಗ್ಗೇಯಕಾರರಾಗಿ ಗಣ್ಯತೆಯನ್ನು ಗಳಿಸಿದ್ದಾರೆ. ಇವರ ಜನ್ಮ ಸ್ಥಳ ಪುಣೆ ಪಟ್ಟಣಕ್ಕೆ ಸಮೀಪದಲ್ಲಿರುವ 'ಪುರಂದಗಡ' ಎಂಬ ಗ್ರಾಮ. ಇವರ ತಂದೆ ವರದಪ್ಪನಾಯಕ, ಇವರ ಪತ್ನಿ ಸರಸ್ವತೀದೇವಿ. ಇವರ ಪೂರ್ವದ ಹೆಸರು ಶ್ರೀನಿವಾಸನಾಯಕ. ಇವರ ಮಕ್ಕಳು ವರದಪ್ಪ, ಗುರುರಾಯ, ಅಪ್ಪಣ್ಣ ಮತ್ತು ಮಧ್ವಪತಿ ಎಂಬುವರು. ಇವರೆಲ್ಲರೂ ಕೃತಿ ರಚನೆ ಮಾಡಿದ್ದಾರೆ. ಇವರು ಕನ್ನಡದಲ್ಲಿ ನಾಲ್ಕು ಲಕ್ಷದ ಇಪ್ಪತ್ತೈದು ಸಾವಿರ ಕೃತಿಗಳನ್ನು ರಚಿಸಿದಂತೆ ವಿಜಯದಾಸರು ಹೇಳಿದ್ದಾರೆ. ಇದರಲ್ಲಿ ಸುಳಾದಿ ಮತ್ತು ಉಗಾಭೋಗಗಳೂ ಸೇರಿವೆ.

"ನಾಲ್ಕು ಲಕ್ಷದ ಇಪ್ಪತ್ತೈದು ಸಾವಿರ ಕೃತಿಯು
ಕಂತು ಜನಕನ ನಾಮ ಘನ ಮಹಿಮೆ
ಸಂತಸದಿ ಶ್ರುತಿಸ್ಮೃತಿ ಸಮ್ಮತದಿಂದ
ಪುರಂದರ ವಿಠಲ ವ್ಯಾಸಮುನಿಗಳು ಪೇಳಿಸಿದರು."

ತೆಲುಗಿನಲ್ಲಿರುವ ಶ್ರೀ ಸುಬ್ಬರಾಯ ದೀಕ್ಷಿತರ 'ಸಂಗೀತ ಸಂಪ್ರದಾಯ ಪ್ರದರ್ಶಿನಿ' ಎಂಬ ಗ್ರಂಥದಲ್ಲಿ ದಾಸರು ತೆಲುಗಿನಲ್ಲಿಯೂ ಕೃತಿಗಳನ್ನು ರಚಿಸಿದಂತೆ ನಿರೂಪಿತವಾಗಿದೆ. ತೆಲುಗಿನ ವಾಗ್ಗೇಯಕಾರರಾದ ತ್ಯಾಗರಾಜರಿಗೆ ಪುರಂದರದಾಸರು ಮಾರ್ಗದರ್ಶಕರು ಎಂಬ ವಿಚಾರ ಪ್ರಖ್ಯಾತವಾಗಿದೆ. ತ್ಯಾಗರಾಜರು 'ಪ್ರಹ್ಲಾದ ಭಕ್ತಿ ವಿಜಯ' ಎಂಬ ಗ್ರಂಥದಲ್ಲಿ ಪುರಂದರದಾಸರು ನಾರದರ ಅವತಾರ ಎಂದು ಬರೆದಿರುತ್ತಾರೆ. ವಿಜಯದಾಸರು, ಮೋಹನದಾಸರು, ಗೋಪಾಲದಾಸರು, ತಿಮ್ಮಣ್ಣದಾಸರು, ಇವರು ಪುರಂದರದಾಸರ ಶಿಷ್ಯರು.

ಶ್ರೀ ಪುರಂದರದಾಸರು ಮೊದಲು ಸಂಸಾರಿಗಳಾಗಿದ್ದು ಚಿನ್ನ ಬೆಳ್ಳಿಯ ವ್ಯಾಪಾರಿಗಳಾಗಿದ್ದರಂತೆ. ಒಬ್ಬ ಬ್ರಾಹ್ಮಣ ಭಿಕ್ಷೆ ಬೇಡಲು ಅವರಲ್ಲಿಗೆ ಬಂದನಂತೆ. ಇವರು ಹಲವಾರು ದಿನ ಆತನನ್ನು ತಿರುಗಿಸಿ ಆತನಿಗೆ ಏನೂ ಕೊಡಲಿಲ್ಲವಂತೆ. ಕಡೆಗೆ ಆ ಬ್ರಾಹ್ಮಣನು ನಾಯಕನ ಪತ್ನಿ ಸರಸ್ವತೀದೇವಿಯ ಹತ್ತಿರ ಹೋಗಿ ಈ ಎಲ್ಲ ಸಂಗತಿಗಳನ್ನೂ ತಿಳಿಸಿದನಂತೆ. ಆ ಸಾಧ್ವಿ ಮನ ಮರುಗಿ ತನ್ನ ಮೂಗಿನಲ್ಲಿದ್ದ ಬೆಲೆ ಬಾಳುವ ಮೂಗುತಿಯನ್ನು ಬ್ರಾಹ್ಮಣನಿಗೆ ಕಾಣಿಕೆಯಾಗಿ ಕೊಟ್ಟಳಂತೆ. ಆ ಬ್ರಾಹ್ಮಣನು ಆ ಮೂಗುತಿಯನ್ನು ಶ್ರೀನಿವಾಸನಾಯಕನಲ್ಲಿಗೆ ತಂದು ಅದರ ಬೆಲೆಯನ್ನು ಕೊಡುವಂತೆ ಕೇಳಿದನಂತೆ. ನಾಯಕನು ಇದು ತನ್ನ ಪತ್ನಿಯ ಮೂಗುತಿಯೆಂದು ಗುರುತಿಸಿ ಮನೆಗೆ ಹೋಗಿ ಪತ್ನಿಯನ್ನು ಪ್ರಶ್ನಿಸಿದನಂತೆ. ಆಕೆ ಭಯಚಕಿತಳಾಗಿ ಮೂಗುತಿ ದೇವರ ಮನೆಯಲ್ಲಿ ಇದೆಯೆಂದು ಹೇಳಿದಳಂತೆ. ಅದನ್ನು ತರುವಂತೆ ನಾಯಕನು ಒತ್ತಾಯ ಮಾಡಿದನಂತೆ. ಆಕೆ ಗಂಡನ ಕ್ರೌರ್ಯಕ್ಕೆ ಹೆದರಿ ದೇವರ ಮನೆಯಲ್ಲಿ ವಿಷಪಾನ ಮಾಡಲು ಪ್ರಯತ್ನಿಸಿದಳಂತೆ. ದೇವರ ಕೃಪೆಯಿಂದ ಮೂಗುತಿ ವಿಷದ ಬಟ್ಟಲಿಗೆ ಬಿತ್ತಂತೆ. ಅದನ್ನು ಪತಿಗೆ ತಂದುಕೊಟ್ಟಳಂತೆ. ಆಗ ನಾಯಕನು ಆಶ್ಚರ್ಯಚಕಿತನಾಗಿ ನಡೆದ ವಿವರವನ್ನೆಲ್ಲಾ ಕೇಳಿದನಂತೆ. ಅವಳು ಇದ್ದ ಸಂಗತಿಯನ್ನು ತಿಳಿಸಿದಳಂತೆ. ಹೊರಗೆ ಬರುವಲ್ಲೆ ಬ್ರಾಹ್ಮಣನು ಮಾಯವಾಗಿದ್ದನಂತೆ. ಇದರಿಂದ ನಾಯಕನ ಮನಸ್ಸಿಗೆ ವೈರಾಗ್ಯ ಉಂಟಾಗಿ ನವಕೋಟಿ ನಾರಾಯಣನಾದ ಆತನು ತನ್ನ ಎಲ್ಲ ಐಶ್ವರ್ಯವನ್ನೂ ದಾನ ಮಾಡಿ ಪಂಪಾಕ್ಷೇತ್ರಕ್ಕೆ ನಿಜಗುರುಗಳನ್ನು ಅರಸಿ ಹೊರಟನಂತೆ. ಇದು ಸಂಪ್ರದಾಯದ ಒಂದು ಕಥೆ. ಆದರೆ ದಾಸರ ಒಂದು ಹಾಡಿನ ಆಧಾರದಿಂದ, ಅವರು ತಮ್ಮ ಹೆಂಡತಿಯನ್ನು ಕಂಭಕ್ಕೆ ಕಟ್ಟಿ ಹೊಡೆದರೆಂದೂ, ಅವಳು ಮೃತಳಾಗಿರಬೇಕೆಂದೂ, ಅದರಿಂದ ಅವರಿಗೆ ವೈರಾಗ್ಯ ಬಂತೆಂದೂ, ಅದರ ಪರಿಣಾಮವಾಗಿ ಅವರು ಸನ್ಯಾಸಿಗಳಾಗಿ ಪುರಂದರಗಡವನ್ನು ಬಿಟ್ಟು ಪಂಪಾಕ್ಷೇತ್ರಕ್ಕೆ ಹೊರಟರೆಂದೂ ಮತ್ತೊಂದು ವಾದವೂ ಉಂಟು. ಇಲ್ಲಿ ಮೊದಲನೆಯದು ಮಾರ್ಜಾಲ ಕಿಶೋರ ನ್ಯಾಯ. ಎರಡನೆಯದು ಮರ್ಕಟ ಕಿಶೋರನ್ಯಾಯ ಎಂದಿಷ್ಟು ಮಾತ್ರ ನಾವು ತಿಳಿಯಬೇಕಾದ ಸಂಗತಿ. ಈ ಘಟನೆಯ ಫಲವಾಗಿ ಇವರು—

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆಮಾಚಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ

ಎಂಬ ಈ ಹಾಡನ್ನು ಹೇಳಿಕೊಂಡು ತಮ್ಮ ಊರು ಬಿಟ್ಟಂತೆ ಕಾಣುತ್ತದೆ.

ಪುರಂದರದಾಸರ ಜನನ ಕ್ರಿ.ಶ. ೧೪೮೪ (ಪುರಂದರಗಡ) ಅವರ ಮರಣ (ಪಂಪಾಕ್ಷೇತ್ರ) ೧೫೬೪. ಇವರ ಗುರುಗಳು ಮಹಾಮಹಿಮರೂ, ವಿದ್ವಾಂಸರೂ ಆದ ವ್ಯಾಸರಾಯಸ್ವಾಮಿಗಳು. ವಿಜಯನಗರದಲ್ಲಿ ಆಳಿದ ಕೃಷ್ಣದೇವರಾಯ, ಅಚ್ಯುತರಾಯ ಮತ್ತು ಅಳಿಯ ರಾಮರಾಯ ಈ ಮೂರು ಮಂದಿ ರಾಜರ ಕಾಲದಲ್ಲಿಯೂ ಜೀವಿಸಿದ್ದರೆಂದು ತಿಳಿದು ಬಂದಿದೆ. ಶ್ರೀ ಕನಕದಾಸರು, ವಾದಿರಾಜರು ಮೊದಲಾದ ವಿಖ್ಯಾತ ಈ ಪುರುಷರು ಇವರ ಸಮಕಾಲೀನರು. ಇವರು ಕರ್ಣಾಟಕ ಹಾಗೂ ದಕ್ಷಿಣ ಭಾರತದ ಹಲವಾರು ತೀರ್ಥ ಕ್ಷೇತ್ರಗಳನ್ನು ಸಂಚರಿಸಿದಂತೆ ಅವರ ಕೃತಿಗಳಿಂದ ತಿಳಿಯಬಹುದಾಗಿದೆ. ಶ್ರೀಶೈಲ, ತಿರುಪತಿ, ಉಡುಪಿ, ಪಂಡರಾಪುರ, ಪಂಪಾಕ್ಷೇತ್ರ ಮೊದಲಾದುವು ಇವರಿಗೆ ಅತ್ಯಂತ ಪ್ರಿಯವಾದ ಕ್ಷೇತ್ರಗಳು. ಇವರು ದ್ವೈತಮತದ ಪಂಥವನ್ನು ಅನುಸರಿಸಿದವರು. ಹರಿಸರ್ವೋತ್ತಮತ್ವವನ್ನು ಅಂಗೀಕರಿಸಿದವರು. ಶ್ರೀ ಕೃಷ್ಣನ ಲೀಲೆಗಳಲ್ಲಿ ಅಪಾರ ಶ್ರದ್ಧಾಸಕ್ತಿಗಳನ್ನು ಉಳ್ಳವರು. ಆದರೂ ಇವರು ಶಿವದ್ವೇಷಿಗಳಲ್ಲ ಎಂಬುದಕ್ಕೆ 'ಎಲ್ಲಾ ರೂಪವು ತಾನಂತೆ ಶಿವನೆಲ್ಲೆಲ್ಲಿಯು ತುಂಬಿಹನಂತೆ, 'ಶಿವದರುಶನವೆಮಗಾಯಿತು' ಇತ್ಯಾದಿ ಕೃತಿಗಳು ನಿದರ್ಶನವಾಗಿವೆ.

"ಹರಿಹರರ ಸಮನೆಂಬುವರಿಗೆ ನರಕ ತಪ್ಪದು,
ಹರಿಹರರು ಹೇಗೆ ಸಮರು ?
ಹರಹರ ಎಂಬೋರು ಪತರಾಗುವರು"

—ಎಂದು ಮೊದಲಾಗಿ ಇರುವ ಹಾಡುಗಳು ಯಾರೋ ಮತಭ್ರಾಂತಿಯಿಂದ ಈಚಿನವರು ಸೇರಿಸಿರುವ ಕೃತಿಗಳಾಗಿರಬೇಕು. ಒಂದು ವೇಳೆ ಇವು ಪುರಂದರದಾಸರ ವಚನಗಳೇ ಆದರೆ ಅವರಿಗೆ 'ಏಕ್ ಸಂತ್ ವಿಪ್ರಾ ಬಹುಧಾ ವದಂತಿ' ಎಂಬ ವೇದವಾಕ್ಯ ದಾಸರಿಗೆ ತಿಳಿದಿರಲಿಲ್ಲವೆನ್ನಬೇಕಾಗುತ್ತದೆ. ಒಂದು ವೇಳೆ ಹರಿಹರ ತಾರತಮ್ಯ ದಾಸರೇ ಹೇಳಿದ್ದೆಂದರೆ ಈಗಿರುವ ವಿಶ್ವಮಾನ್ಯತೆ ಬರಲಾರದು ಅವರಿಗೆ ಎಂದು ನಾವು ಯತ್ನವಿಲ್ಲದೆ ಹೇಳಬೇಕಾಗುತ್ತದೆ. ಇವರು ೩೨ ರಾಗಗಳಲ್ಲಿ ಕೃತಿಗಳನ್ನು ಕಟ್ಟಿ ಹಾಡಿದಂತೆ ಹೇಳುತ್ತಾರೆ.

ಈಗ ಪ್ರಕಟವಾಗಿರುವ ಇವರ ಕೃತಿಗಳೆಲ್ಲವನ್ನು ಸಂಶೋಧಿಸಿ ಪ್ರಕಟಿಸುವುದು ಅಗತ್ಯ. ಪುರಂದರದಾಸರ ಹಾಡುಗಳು ಕನ್ನಡ ನಾಡಿನ ತುಂಬ ಪ್ರಸಾರದಲ್ಲಿವೆ. ತೆಲುಗು, ತಮಿಳು ಮತ್ತು ಕೇರಳ ರಾಜ್ಯಗಳಲ್ಲಿಯೂ ಇವರ ಕೃತಿಗಳಿಗೆ ಮನ್ನಣೆಯಿದೆ. ಇವರು ಬಹಳ ಸುಲಭವಾದ ಶೈಲಿಯಲ್ಲಿ ದ್ರಾಕ್ಷಾಪಾಕದಿಂದ ನೇರವಾಗಿ ಜನಗಳ ಮನಸ್ಸಿಗೆ ಹಿಡಿಯುವಂತೆ ಹಾಡುಗಳನ್ನು ಕಟ್ಟಿದ್ದಾರೆ. ಅವು ವಿಶಾಲಭಾವನೆಯಿಂದ ಕೂಡಿವೆ; ವ್ಯವಹಾರಜ್ಞಾನದಿಂದಲೂ ಕೂಡಿವೆ. ಆದುದರಿಂದಲೇ ಅವನ್ನು 'ಪುರಂದರೋಪನಿಷತ್' ಎಂದು ಕರೆಯುತ್ತಾರೆ. ಬಸವೇಶ್ವರಾದಿ ಶರಣರ ವಚನಗಳನ್ನು 'ಕನ್ನಡದ ಉಪನಿಷತ್' ಎಂದು ಕವಿಚರಿತೆಕಾರರು ಕರೆದಿರುವುದನ್ನು ಇಲ್ಲಿ ನಾವು ಸ್ಮರಿಸಿಕೊಳ್ಳಬಹುದು.

ಪುರಂದರಗಡದಲ್ಲಿ ಇವರ ಯಾವ ಸ್ಮಾರಕಗಳೂ ಇಲ್ಲವೆಂದು ತಿಳಿದು ಬಂದಿದೆ. ಪಂಡರಾಪುರದ ವಿಠ್ಠಲನ ಗುಡಿಯಲ್ಲಿ ಇರುವ ಒಂದು ಕಂಭಕ್ಕೆ 'ಪುರಂದರದಾಸರ ಕಂಭ' ಎಂದು ಹೇಳುತ್ತಾರೆ. ದಾಸರು ಆ ಕಂಭದ ಪಕ್ಕದಲ್ಲಿ ಕುಳಿತು ದಿನವೂ ತಮ್ಮ ಕೃತಿಗಳನ್ನು ಹಾಡುತ್ತಿದ್ದರಂತೆ. ಪಂಪಾಕ್ಷೇತ್ರದಲ್ಲಿರುವ ಪುರಂದರದಾಸರ ಮಂಟಪವು ಅವರು ದಿನವೂ ಕುಳಿತು ಭಜನೆ ಮಾಡುತ್ತಿದ್ದ ಸ್ಥಳವೆಂದು ತಿಳಿದು ಬಂದಿದೆ. ಅವರು ಅಲ್ಲಿಯೇ ನಿರ್ಯಾಣ ಹೊಂದಿದರೆಂದು ಜನರ ನಂಬಿಕೆಯಿದೆ.

ಶ್ರೀ ಪುರಂದರದಾಸರ ಕೃತಿಗಳು ಬಹಳ ಸ್ವಾರಸ್ಯವಾಗಿವೆ. ಅದರ ಪಲ್ಲವಿ ಮತ್ತು ಅನುಪಲ್ಲವಿಗಳು ಮುಂದಿನ ಚರಣದಲ್ಲಿರಬಹುದಾದ ಎಲ್ಲ ವಿಷಯಗಳನ್ನು ಒಳಗೊಂಡಿರುತ್ತವೆ. ಇವನ್ನು ಇವರ ಕೃತಿ ರಚನಾಕೌಶಲ್ಯ ಎಂದು ಹೇಳಬಹುದು. ಇಲ್ಲಿ ಮಾದರಿಗಾಗಿ ಕೆಲವು ಪುರಂದರದಾಸರ ವಾಕ್ಯಗಳನ್ನು ನಾವು ಪರಿಶೀಲಿಸಬಹುದು.

೧. ಮಾನವ ಜನ್ಮ ದೊಡ್ಡದು, ಇದನು ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ.
೨. ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ.
೩. ಹೊಲೆಯ ಹೊರಗಿಹನೆ, ಊರೊಳಗಿಲ್ಲವೆ ? ಶ್ರೀ ಹರಿಯ ನಾಮವನು ಬಲ್ಲವರು ಹೇಳಿ.
೪. ಆರು ಹಿತವರು ನಿನಗೆ ಮೂರು ಮಂದಿಗಳಲ್ಲಿ, ನಾರಿಯೋ ? ಧಾರುಣಿಯೋ ? ಬಲುಧನದ ಸಿರಿಯೋ ?
೫. ಏನು ಆನಂದವಾಗಿದೆ ಶ್ರೀ ಹರಿಯ ನಾಮ.
೬. ಓಡಿಬಾರೈ ವೈಕುಂಠಪತಿ.
೭. ಪರಾಕುಮಾಡದೆ ಪರಾಮರಿಸಿ.

೮. ನೀನ್ಯಾಕೋ ನಿನ್ನ ಹಂಗ್ಯಾಕೊ, ನಿನ್ನ ನಾಮದ ಬಲವೊಂದಿದ್ದರೆ ಸಾಕೋ.

೯. ತನುವ ನೀರೊಳಗದ್ದಿ ಫಲವೇನು, ಮನದಲ್ಲಿ ದೃಢ ಭಕ್ತಿಯಿಲ್ಲದವರು?

೧೦. ಸ್ಮರಣೆ ಒಂದೇ ಸಾಲದೆ ಗೋವಿಂದನ ನಾಮ ಸ್ಮರಣೆ.

೧೧. ನೀನೇ ಬಲ್ಲಿದನೋ ಹರಿ ನಿನ್ನ ದಾಸರು ಬಲ್ಲಿದರೋ, ನಾನಾತೆರದಿ ವಿಚಾರಿಸಿ ನೋಡಲು ನೀನೇ ಭಕ್ತಿ ಪರಾಧೀನನಾದಮೇಲೆ.

೧೨. ನೋಡಿರೈ ಕಲ್ಪ ಭೂರುಹರನಾಡೊಳಗೆ ಅಚ್ಯುತ ದಾಸರು.

೧೩. ಕೇಳನೋ ಹರಿ ತಾಳನೋ, ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ.

೧೪. ನಾನ್ಯಾಕೆ ಬಡವನು, ನಾನ್ಯಾಕೆ ಪರದೇಶಿ, ಶ್ರೀನಿಧೇ ಹರಿ ನನಗೆ ನೀನಿರುವತನಕ.

೧೫. ಇನ್ನೂ ದಯಬಾರದೆ? ದಾಸನಮೇಲೆ.

೧೬. ಕಲ್ಲು ಸಕ್ಕರೆ ಕೊಳ್ಳಿರೊ ಹರಿನಾಮವೆಂಬ.

೧೭. ರಾಗಿ ತಂದೀರ್ಯಾ, ಭಿಕ್ಷಕೆ ರಾಗಿ ತಂದೀರ್ಯಾ, ಯೋಗ್ಯರಾಗಿ, ಭೋಗ್ಯರಾಗಿ ಭಾಗ್ಯವಂತರು ನೀವಾಗಿ.

೧೮. ಅವರೇಕಾಯಿ ಬೇಕು, ಕಾಲದಿ ಅವರೇಕಾಯಿ ಬೇಕು.

೧೯. ಬಿನ್ನಹಕ್ಕೆ ಬಾಯಿಲ್ಲವಯ್ಯಾ, ಅನಂತ ಅಪರಾಧ ವೆನ್ನೊಳಗೆ ಇರಲಿಕ್ಕೆ.

೨೦. ಶಿವದರುಶನವೆನಗಾಯಿತು ಕೇಳ್ಶೈ ಶಿವರಾತ್ರಿಯ ಉಪವಾಸ.

೨೧. ಕೃಷ್ಣಮೂರ್ತಿ ಕಣ್ಣುಮುಂದೆ ನಿಂತಿದ್ದಂತಿದೆ.

೨೨. ಕಂಡೆನಾ ಕನಸಿನಲಿ ಗೋವಿಂದನಾ

೨೩. ಧನ್ಯನಾದೆನಾ ನಾನೀಜಗದಲಿ ಪನ್ನಗಶಯನನ ಕಣ್ಣಿನಿಂದಲಿ ಕಂಡು.

೨೪. ನಮ್ಮ ಭಾಗ್ಯ ದೊಡ್ಡದೋ ನಿಮ್ಮ ಭಾಗ್ಯ ದೊಡ್ಡದೋ ಸಮ್ಮತಿಯಿಂದ ನಾವು ನೀವು ಸಾಟಿ ಮಾಡಿ ನೋಡುವ ಬನ್ನಿ.

೨೫. ಕಣ್ಣಿನಿಂದ ನೋಡೋ ಶ್ರೀಹರಿಯ ಒಳಗಣ್ಣಿನಿಂದ ನೋಡೋ ಮೂಜಗದೊಡೆಯನ.

೨೬. ಪೋಗದಿರೆಲವೊ ರಂಗಾ ಬಾಗಿಲಿಂದಾಚೆಗೆ ಪೋಗದಿರೆಲವೊ ರಂಗಾ.

೨೭. ನೆಚ್ಚದಿರಿ ಭಾಗ್ಯ ಯಾರಿಗೂ ಸ್ಥಿರವಲ್ಲ, ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು ಕೇಳೆಚ್ಚರಿಕೆ.

೨೮. ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ.

೨೯. ಮೋಸಹೋದೆನಲ್ಲಾ ಸಕಲವ ವಾಸುದೇವ ಬಲ್ಲ.

೩೦. ಅವಮಾನವಾದರೆ ಒಳ್ಳಿತು, ಅಪರೂಪ ಹರಿ ನಾಮವ ಜಪಿಸುವ ಮನುಜಗೆ.

೩೧. ಆದದ್ದೆಲ್ಲಾ ಒಳ್ಳಿತೇ ಆಯಿತು ಶ್ರೀಹರಿಯ ಕೃಪೆಯಿಂ.

೩೨. ಉದರವೈರಾಗ್ಯವಿದು ನಮ್ಮ ಪದುಮನಾಭನಲ್ಲಿ ಲೇಶ ಭಕುತಿಯಿಲ್ಲ.

೩೩. ಯಾಕೆನ್ನ ಈ ರಾಜ್ಯಕೆ ತಂದೆ ಹರಿಯೇ.

೩೪. ಎನಗೂ ಆಣೆ, ರಂಗ ನಿನಗೂ ಆಣೆ.

೩೫. ಸಕಲ ಗ್ರಹಬಲ ನೀನೆ ಸರಸಿಜಾಕ್ಷ.

೩೬. ನಾ ಮಾಡಿದ ಕರ್ಮ ಬಲವಂತವಾದರೆ ನೀ ಮಾಡುವುದೇನೋ ಹರಿಯೇ.

೩೭. ಈ ಪರಿಯ ಸೊಬಗಾವ ದೇವರೊಳು ಕಾಣೆ, ಗೋಪೀಜನಪ್ರಿಯ ಗೋಪಾಲಗಲ್ಲದೇ.

೩೮. ಇಕ್ಕಲಾರದ ಕೈ ಎಂಜಲು, ಚಿಕ್ಕ ಮಕ್ಕಳು ಅಳುತಾರೆ ಹೋಗೋ ದಾಸಯ್ಯ.

೩೯. ಮಡಿ ಮಡಿಯೆಂದು ಮಾರ್ಮಾರ ಹಾರುತಿ, ಮಡಿಯಲ್ಲಿ ಬಂತೇ ಬಿಕನಾಸಿ.

೪೦. ಹರಿಕೊಟ್ಟ ಕಾಲಕ್ಕೆ ಉಣಲಿಲ್ಲ ಹರಿಕೊಡದ ಕಾಲಕ್ಕೆ ಬಾಯ ಬಿಡುವಲ್ಲೋ ಪ್ರಾಣಿ.

೪೧. ಗುಡಿ ಗುಡಿಯನು ಸೇದಿ ನೋಡೋ, ನಿನ್ನ ಒಡಲೊಳಗಿನ ಕಾಮಕ್ರೋಧವನೀಡ್ಯಾಡೊ

೪೨. ನರನಾದ ಮೇಲೆ ಹರಿನಾಮ ಜಿಹ್ವೆಯೊಳಿರಬೇಕು.

೪೩. ಹೃದಯ ಹೊಲನ ಮಾಡಿ, ಮನವ ನೇಗಿಲ ಮಾಡಿ, ಶಾಸೋಚ್ಛ್ವಾಸ ಎರಡೆತ್ತ ಮಾಡಿ, ನಿರ್ಮಲವೆಂಬ ಗುಂಟೆಲಿ ಹರವಿರಯ್ಯಾ.

೪೪. ನಾರಾಯಣನೆಂಬ ನಾಮದ ಬೀಜವ ನಾರದ ಬಿತ್ತಿದ ಧರೆಯೊಳಗೆ.

೪೫. ಎಂದೆಪ್ಪಿಕೊಂಬೆನಾ ರಂಗಯ್ಯನಾ, ಎಂದಪ್ಪಿಕೊಂಬೆ ನಾನೆಂದು ಮುದ್ದಾಡುವೆ.

೪೬. ಕೂಸನು ಕಂಡಿರಾ ಜ್ಞಾನಿಗಳೆಲ್ಲ, ಸಾಸಿರ ನಾಮದ ಶತಕೋಟಿ ತೇಜನ ಸೂಸುವ ಸುಖಮಯ ಜ್ಞಾನದ ಕೂಸು.

ಈ ಮೇಲೆ ಕಂಡ ದಾಸರ ಕೃತಿಗಳ ಪಲ್ಲವಿಯಿಂದ ಅವರ ಸಾಹಿತ್ಯದ ಸ್ವರೂಪ, ಸಂದೇಶದ ಮಹತ್ವ ಇವುಗಳನ್ನು

ನಾವು ಸುಲಭವಾಗಿ ಅರಿಯಬಹುದು. ಶ್ರೀ ಪುರಂದರ ದಾಸರ ಗುರುಗಳಾದ ಶ್ರೀ ವ್ಯಾಸರಾಯಸ್ವಾಮಿಗಳು ಶಿಷ್ಯರನ್ನು ಕುರಿತು ಹಾಡಿದ ಹಾಡು ಇಲ್ಲಿಸ್ಮರಣಾರ್ಹ.

"ದಾಸರೆಂದರೆ ಪುರಂದರದಾಸರಯ್ಯಾ,
ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ,
ನೀತಿಯೆಲ್ಲವನರಿತು, ನಿಗಮವೇದ್ಯನನಿತ್ಯ
ವಾತಸುತನಲ್ಲಿಹನ ವರ್ಣಿಸುತಲಿ.
ಗೀತ ನರ್ತನದಿಂದ ಕೃಷ್ಣನ್ನ ಪೂಜಿಸುವ
ಪೂತಾತ್ಮ ಪುರಂದರದಾಸರಿವರಯ್ಯಾ."

ಶ್ರೀ ವಿಜಯದಾಸರು, ಪ್ರಸನ್ನ ವೆಂಕಟದಾಸರು, ಮೊದಲಾದನರು ಪುರಂದರದಾಸರ ಬಗ್ಗೆ ಗೌರವದಿಂದ ಹಾಡಿದ್ದಾರೆ. ಶ್ರೀ ಪುರಂದರದಾಸರ ಅವತಾರದಿಂದ ಕರ್ಣಾಟಕಕ್ಕೆ ಅಪಾರವಾದ ಕೀರ್ತಿ ಗೌರವಗಳು ಬಂದಿವೆ. ದಾಸಕೂಟಕ್ಕೆ ಮಿಗಿಲಾದ ಮನ್ನಣೆ ಬಂದಿದೆ. ಸನಾತನ ಧರ್ಮ ಹಿಗ್ಗಿದೆ.

ಇದೇ ಜನವರಿ ತಾ|| ೧೩, ೧೪ ಮತ್ತು ೧೫ ರಂದು (೧೯೬೪) ಪಂಪಾಕ್ಷೇತ್ರದಲ್ಲಿ ನಡೆದ ದಾಸರ ಪುಣ್ಯೋತ್ಸವವು ಅಖಿಲ ಭಾರತದ ಮಟ್ಟದಲ್ಲಿ ನಡೆದಿದೆ. ಭಾರತ ಸರ್ಕಾರ ದಾಸರ ಅಂಚೆ ಚೀಟಿಗಳನ್ನು ಪ್ರಕಟಿಸಿದೆ. ಮೈಸೂರು ಸರ್ಕಾರ ಈ ಉತ್ಸವಕ್ಕೆ ೨೫೦೦೦ ರೂ. ಸಹಾಯವಿತ್ತು ಎಲ್ಲ ಏರ್ಪಾಡುಗಳನ್ನೂ ಮಾಡಿ ಕೊಟ್ಟಿದೆ. ಮುಂಬೈ, ಮದರಾಸು, ಹೊಸದಿಲ್ಲಿ, ವಾರಣಾಸಿ, ಹೈದರಾಬಾದು ಮೊದಲಾದ ಕಡೆಗಳಲ್ಲಿಯೂ ದಾಸರ ಪುಣ್ಯಾರಾಧನೆ ನಡೆದಿದೆ. ಶ್ರೀ ದಾಸರು ಮತ್ತು ಅವರ ಕೃತಿಗಳನ್ನು ಕುರಿತು ಅದೆಷ್ಟೋ ಗ್ರಂಥಗಳು ಪ್ರಕಟವಾಗಿವೆ. ದಾಸರ ಮಹತ್ವಕ್ಕೆ ಇದಕ್ಕಿಂತ ಹೆಚ್ಚಿನ ನಿದರ್ಶನಗಳೇನು ಬೇಕು?

ಶ್ರೀ ಪುರಂದರದಾಸರಿಗೆ ಸಂದ ಮನ್ನಣೆಯೇ ಕರ್ಣಾಟಕದ ವಿಖ್ಯಾತ ಕವಿಗಳೂ, ಮಹಾಪುರುಷರೂ ಆದ ನೃಪತುಂಗ, ಆದಿಪಂಪ, ಬಸವೇಶ್ವರ, ಪ್ರಭುದೇವರು, ಹರೀಶ್ವರ, ರಾಘವಾಂಕ, ವಿದ್ಯಾರಣ್ಯರು ಲಕ್ಷ್ಮೀಶ, ಕುಮಾರವ್ಯಾಸ, ಚಾಮರಸ, ನಿಜಗುಣ ಶಿವಯೋಗಿ, ಕನಕದಾಸರು, ಸರ್ವಜ್ಞಮೂರ್ತಿ, ರತ್ನಾಕರವರ್ಣಿ ಮೊದಲಾದವರ ಬಗೆಗೂ ಆಗುವುದು ಅಗತ್ಯ. ಇದರಿಂದ ಕನ್ನಡ ನಾಡುನುಡಿಗಳ ಕೀರ್ತಿಗೌರವಗಳು ಹೆಚ್ಚುತ್ತವೆ. ಕನ್ನಡಿಗರಲ್ಲಿ ನವಚೈತನ್ಯವುಂಟಾಗುತ್ತದೆ. ಪಂಪನ ಸಾವಿರ ವರ್ಷದ ಉತ್ಸವವನ್ನು ನಾವು ಆಚರಿಸಿದ್ದೇವೆ. ವಿಜಯನಗರದ ಆರ್ನೂರು ವರ್ಷಗಳ ಉತ್ಸವವನ್ನು ನಡೆಸಿದ್ದೇವೆ. ಪುರಂದರದಾಸರ ನಾನ್ನೂರು ವರ್ಷಗಳ ಪುಣ್ಯಾರಾಧನೆ ನಡೆದಿದೆ. ಬಸವೇಶ್ವರನ ಎಂಟನೂರು ವರ್ಷಗಳ ಉತ್ಸವ ಸನ್ನಿಹಿತವಾಗಿದೆ. ಇದನ್ನೆಲ್ಲಾ ನಮ್ಮ ಜನ ಅರಿತಿರುವುದು ಅಗತ್ಯ. ಆಚರಿಸುವುದೂ ಅಗತ್ಯ.

## ಶ್ರೀ ಬಸವೇಶ್ವರರ ೮೦೦ ವರ್ಷಗಳ ಪುಣ್ಯಾರಾಧನೆ

ಪುಣ್ಯದ ಬೀಡಾದ ಕನ್ನಡನಾಡು ಸ್ವತಂತ್ರ ಭಾರತದಲ್ಲಿ ತನ್ನದೇ ಆದ ಕೆಲವು ವಿಶೇಷ ಗುಣಗಳಿಂದ ಕೂಡಿದೆ. ಇಡೀ ಭಾರತದಲ್ಲಿಯೇ ಗಣ್ಯತೆಯನ್ನು ಪಡೆದಿರುವ ರಾಷ್ಟ್ರಕೂಟ ನೃಪತುಂಗ, ಚಾಲುಕ್ಯ ವಿಕ್ರಮಾದಿತ್ಯ, ಹೊಯ್ಸಳ ವಿಷ್ಣುವರ್ಧನ, ಮಹಾತ್ಮ ಬಸವೇಶ್ವರ, ಆಚಾರ್ಯ ಆನಂದತೀರ್ಥ, ಮಹರ್ಷಿ ವಿದ್ಯಾರಣ್ಯ, ಭಕ್ತ ಕನಕದಾಸ, ಸಂತಶ್ರೇಷ್ಠ ಪುರಂದರದಾಸ, ರಾಷ್ಟ್ರಕವಿ ಸರ್ವಜ್ಞ ಮೊದಲಾದ ಮಹಾನುಭಾವರು ಈ ನಾಡಿನಲ್ಲಿ ಆಗಿ ಹೋಗಿದ್ದಾರೆ. ಆದರ್ಶ ಪುರುಷರಾದ ಇಂಥವರ ಜಯಂತಿಗಳನ್ನು ಆಚರಿಸುವುದು, ಚರಿತ್ರೆಯನ್ನು ಅವಲೋಕಿಸುವುದು ನಮ್ಮ ಜನರಿಗೆ ಪುಣ್ಯಪ್ರದವೂ, ಸ್ಫೂರ್ತಿದಾಯಕವೂ ಆಗಿದೆ.

ಪ್ರಕೃತ ಕರ್ಣಾಟಕದಲ್ಲಿ ಯುಗಪ್ರವರ್ತಕರೆನಿಸಿಕೊಂಡಿರುವ ಪ್ರಖ್ಯಾತ ಕವಿಗಳೂ, ಕಾಲಚೂರ್ಯ ರಾಜರ ಮಹಾಮಂತ್ರಿಗಳೂ, ಅನುಭವಮಂಟಪದ ಸಂಸ್ಥಾಪಕರೂ ಎನಿಸಿರುವ ಶ್ರೀ ಬಸವೇಶ್ವರರು ಈ ಭೂಲೋಕದಲ್ಲಿ ಬೆಲೆಯುಳ್ಳ ಬಾಳನ್ನು ಬಾಳಿ ಕೈಲಾಸಕ್ಕೆ ಹೋಗಿ ೧೯೬೮ಕ್ಕೆ ೮೦೦ ವರ್ಷಗಳಾಗುತ್ತವೆ. ಶ್ರೀ ಬಸವೇಶ್ವರರು ಕನ್ನಡ ನಾಡಿನ ಮತ್ತು ಸಾಹಿತ್ಯದ ಚರಿತ್ರೆಯಲ್ಲಿ ಅತ್ಯಂತ ಪ್ರಸಿದ್ಧರಾಗಿದ್ದಾರೆ. ಅವರು ಷಟ್ಸ್ಥಲ ವಚನ, ಕಾಲಜ್ಞಾನ ವಚನ, ಮಂತ್ರಗೋಪ್ಯ ಮೊದಲಾದ ಗ್ರಂಥಗಳನ್ನು ಬರೆದಿರುವುದಲ್ಲದೆ ನಮ್ಮ ನಾಡಿನ ಪುರಾಣ ಪುರುಷರು ಎನ್ನಿಸಿರುತ್ತಾರೆ. ಅವರು ಬರೆದಿರುವ ವಚನಗಳನ್ನು ಕನ್ನಡದ ಉಪನಿಷತ್ತುಗಳೆಂದು ಕವಿಚರಿತೆಕಾರರು ಹೇಳಿರುತ್ತಾರೆ. ಕನ್ನಡ, ತಮಿಳು, ತೆಲುಗು, ಸಂಸ್ಕೃತ, ಮರಾಠಿ, ಹಿಂದಿ ಮೊದಲಾದ ಭಾಷೆಗಳಲ್ಲಿ ಮಹಾಕವಿಗಳನೇಕರು ಇವರ ಗುಣಗಾನ ಮಾಡಿ ಮಹಾಕಾವ್ಯಗಳನ್ನು ಬರೆದಿರುತ್ತಾರೆ. ಕವಿಕುಲೋತ್ತಂಸರಾದ

ಹಂಪೆಯ ಹರೀಶ್ವರ, ಪಾಲ್ಕುರಿಕೆ ಸೋಮನಾಥ, ಭೀಮ ಕವಿ, ಪಿಡುಪರ್ತಿಯ ಬಸವ ಕವಿ, ಕಂಬಿ ಶಂಕರಾರಾಧ್ಯ, ಸಿಂಗಿರಾಜ, ಷಡಕ್ಷರದೇವ ಮೊದಲಾದ ಕವಿಗಳು ಶ್ರೀ ಬಸವೇಶ್ವರರನ್ನು ಕುರಿತು ವಿಖ್ಯಾತ ಕಾವ್ಯಗಳನ್ನು ಬರೆದಿರುತ್ತಾರೆ. ಇತ್ತೀಚೆಗೆ ತ್ರಿಭಾಷಾ ಕವಿ ಪುಟ್ಟರಾಜ ಗವಾಯಿಗಳು ಹಿಂದಿ ಭಾಷೆಯಲ್ಲಿ ಬಸವ ಪುರಾಣವನ್ನು ಬರೆದು ರಾಷ್ಟ್ರಾಧ್ಯಕ್ಷರಿಗೆ ಒಪ್ಪಿಸಿರುತ್ತಾರೆ. ಅರ್ಜುನವಾಡದ ಶಿಲಾಶಾಸನದಲ್ಲಿ ಕೂಡ ಬಸವೇಶ್ವರರ ಉಲ್ಲೇಖವಿದೆ.

ಶ್ರೀ ಬಸವೇಶ್ವರರು ಕ್ರಿ. ಶ. ೧೧೩೨ರಲ್ಲಿ ಬಿಜಾಪುರ ಜಿಲ್ಲಾ ಬಾಗೇವಾಡಿಯಲ್ಲಿ ಜನಿಸಿ ಕಪ್ಪಡಿ ಸಂಗಮ ಕ್ಷೇತ್ರದಲ್ಲಿ ಜಾತವೇದ ಮುನಿಯಲ್ಲಿ ವಿದ್ಯಾಭ್ಯಾಸ ಮಾಡಿ ಮಹಾಪಂಡಿತರೆನಿಸಿ ಕಲ್ಯಾಣದ ಮಂತ್ರಿ ಶ್ರೇಷ್ಠರಾದ ಬಲದೇವ ಮತ್ತು ಸಿದ್ದಣ್ಣ ಸಚಿವರ ಸುಪುತ್ರಿಯರಾದ ಗಂಗಾಂಬಿಕೆ, ನೀಲಾಂಬಿಕೆಯರನ್ನು ಕೈ ಹಿಡಿದು ಸಂಸಾರವನ್ನು ನಿರ್ವಹಿಸಿ ಕಲ್ಯಾಣದ ಅನುಭವಮಂಟಪವನ್ನು ಸ್ಥಾಪಿಸಿ ಸಮಗ್ರ ಭಾರತಕ್ಕೆ ಉಪಕಾರ ಮಾಡಿರುತ್ತಾರೆ. ಹರಿಜನೋದ್ಧಾರ, ಕಾಯಕ ನಿಷ್ಠೆ, ದಯಾಧರ್ಮ, ಕನ್ನಡದ ನಿಷ್ಠೆ, ಧರ್ಮ ಸಮನ್ವಯ, ಸಮತಾವಾದ, ಮೊದಲಾದ ಉದಾತ್ತ ತತ್ವಗಳನ್ನು ಅವರು ಪ್ರತಿಪಾದಿಸಿ ಪ್ರಾಚೀನ ಬುದ್ಧದೇವ, ಅರ್ವಾಚೀನ ಮಹಾತ್ಮಾ ಗಾಂಧಿ ಇವರಿಗೆ ಸಮಸಾಟಿ ಎನಿಸಿದ್ದಾರೆ. ರಾಷ್ಟ್ರೀಯಪುರುಷ ರೆನಿಸಿದ್ದಾರೆ.

ಇಂತಹ ಮಹಾನುಭಾವರ ೮೦೦ ವರ್ಷಗಳ ಜಯಂತಿ ಮಹೋತ್ಸವ ನಡೆಯುವುದು ಕರ್ನಾಟಕ ರಾಜ್ಯೋದಯವಾದಮೇಲೆ ಅತಿ ಅಗತ್ಯವಾದ ಕಾರ್ಯವಾಗಿದೆ. ಈ ಕಾರಣಗಳಿಂದ ಇಂದಿನ ರಾಷ್ಟ್ರೀಯ ಯುಗದಲ್ಲಿ ಶ್ರೀ ಬಸವೇಶ್ವರರ ೮೦೦ ವರ್ಷಗಳ ಪುಣ್ಯಾರಾಧನೆಯು ಸಮಗ್ರ ಕರ್ನಾಟಕದಲ್ಲಿಯೂ, ವಿಶಾಲ ಭಾರತದಲ್ಲಿಯೂ ನಡೆಯುವುದು ಅತಿ ಅಗತ್ಯವಾಗಿದೆ. ಈ ಪುಣ್ಯಾರಾಧನೆಯ ಕಾಲದಲ್ಲಿ ಈ ಮುಂದೆ ಹೇಳಿರುವ ಕೆಲವು ರಚನಾತ್ಮಕ ಕಾರ್ಯಗಳನ್ನು ಈ ಉತ್ಸವವನ್ನು ನಿರ್ವಹಿಸಲಿರುವ ಸಮಿತಿಯವರು ಆಗಮಾಡುವುದು ಅಗತ್ಯವಾಗಿದೆ.

೧. ರಾಷ್ಟ್ರೀಯ ಭಾವನೆಯಿಂದ ಕೂಡಿದ ವಿಶ್ವ ಶಾಂತಿಗೆ ಸಾಧಕವಾದ ಶ್ರೀ ಬಸವೇಶ್ವರರ ವಚನಗಳನ್ನು ಚುನಾಯಿಸಿ ಅವನ್ನು ಭಾರತದ ಎಲ್ಲ ಭಾಷೆಗಳಲ್ಲಿಯೂ ಮತ್ತು ಇಂಗ್ಲೀಷಿನಲ್ಲಿಯೂ ಭಾಷಾಂತರಿಸಿ ಪ್ರಕಟಿಸುವುದು ಹಾಗೂ ಅವನ್ನು ವಿಶ್ವಸಂಸ್ಥೆಯ ಗಮನಕ್ಕೆ ತರುವುದು.

೨. ಶ್ರೀ ಬಸವೇಶ್ವರರ ಚರಿತ್ರೆಯನ್ನು ಭಾರತದ ಭಾಷೆಗಳಲ್ಲಿ ಮತ್ತು ವಿಶ್ವ ಭಾಷೆಯಾದ ಇಂಗ್ಲೀಷಿನಲ್ಲಿ ಅಚ್ಚುಕಟ್ಟಾಗಿ ಬರೆದು ಪ್ರಕಟಿಸುವುದು. ಭಾರತದ ರಾಷ್ಟ್ರೀಯ ಪ್ರಗತಿಗೆ ಬಸವಣ್ಣನವರ ತತ್ವಗಳು ಒಳ್ಳೆಯ ಸಾಧಕವಾಗಿವೆ ಎಂಬುದನ್ನು ಪ್ರತಿಪಾದಿಸುವುದು.

೩. ಕನ್ನಡ, ತಮಿಳು, ತೆಲುಗು, ಮರಾಠಿ, ಹಿಂದಿ ಮತ್ತು ಸಂಸ್ಕೃತ ಭಾಷೆಗಳಲ್ಲಿರುವ ಬಸವ ಪುರಾಣಗಳನ್ನು ಶುದ್ಧವಾಗಿಯೂ, ಸುಂದರವಾಗಿಯೂ ಪ್ರಕಟಿಸುವುದು.

೪. ಭಾರತದ ಆಕಾಶವಾಣಿಯ ಕೇಂದ್ರಗಳಲ್ಲಿ ಬಸವೇಶ್ವರರ ವಚನಗಳನ್ನು ಹಾಡಿಸುವುದು ಹಾಗೂ ಅವರ ಉದಾತ್ತ ತತ್ವಗಳ ಬಗೆಗೆ ಉಪನ್ಯಾಸಗಳನ್ನು ಏರ್ಪಡಿಸುವುದು. ಅವರ ಚಿತ್ರಗಳನ್ನು ಸರ್ವತ್ರ ಪ್ರಸಾರ ಮಾಡುವುದು.

೫. ಶ್ರೀ ಬಸವೇಶ್ವರರ ಮತ್ತು ಸಮಕಾಲೀನ ಶರಣರ ಬಗೆಗೆ ನಾಟಕಗಳನ್ನು ಬರೆಸಿ ಅವನ್ನು ಇಂದಿನ ರಾಷ್ಟ್ರೀಯ ಭಾವನೆಗೆ ಸರಿಯಾಗಿರುವಂತೆ ಅನುಗೊಳಿಸಿ ಭಾರತದ ರಂಗಭೂಮಿಗಳಲ್ಲಿ ಪ್ರದರ್ಶಿಸುವುದು.

೬. ಬಸವೇಶ್ವರರ ಅಂಚೆ ಚೀಟಿಗಳನ್ನು ಪ್ರಕಟಿಸುವಂತೆ ಕೇಂದ್ರ ಸರಕಾರವನ್ನು ಒತ್ತಾಯಪಡಿಸುವುದು.

೭. ಕಲ್ಯಾಣ, ಬಾಗೇವಾಡಿ, ಕಪ್ಪಡಿ ಸಂಗಮಗಳಲ್ಲಿರುವ ಬಸವೇಶ್ವರ ಸ್ಮಾರಕಗಳನ್ನು ಜೀರ್ಣೋದ್ಧಾರಗೊಳಿಸುವುದು. ಅವು ರಾಷ್ಟ್ರೀಯ ಸ್ಮಾರಕಗಳಾಗುವಂತೆ ಸರ್ಕಾರದಿಂದ ಸಂರಕ್ಷಣೆಗೊಳಿಸುವುದು.

೮. ೧೯೬೮ನೆಯ ಬಸವ ಜಯಂತಿಯ ಕಾಲದಲ್ಲಿ ಚಾಲುಕ್ಯ ರಾಜಧಾನಿಯಾದ ಕಲ್ಯಾಣ, ಬೆಂಗಳೂರು, ಹೊಸದಿಲ್ಲಿ, ಮುಂಬಯಿ, ಮದರಾಸು ಕಲ್ಕತ್ತ, ಬನಾರಸ್, ಹೈದರಾಬಾದ್ ಮೊದಲಾದ ಪಟ್ಟಣಗಳಲ್ಲಿ ಈ ಮಹೋತ್ಸವವನ್ನು ವೈಭವದಿಂದ ಆಚರಿಸುವುದು.

೯. ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನಲ್ಲಿ ಶ್ರೀ ಬಸವೇಶ್ವರರ ಹೆಸರಿನಲ್ಲಿ ಒಂದು ದೊಡ್ಡ ಪ್ರಮಾಣದ ಸಂಶೋಧನಾಲಯವನ್ನು ಸ್ಥಾಪಿಸಿ ತನ್ಮೂಲಕ ಸಾಹಿತ್ಯ ಮತ್ತು ಸಂಸ್ಕೃತಿಯ ಕಾರ್ಯಗಳನ್ನು ಕೈಗೊಳ್ಳುವುದು.

೧೦. ಈ ಮೇಲೆ ಕಂಡ ಮಹತ್ಕಾರ್ಯಗಳನ್ನು ನಿರ್ವಹಿಸುವುದರಿಂದ ಬುದ್ಧದೇವನ ಉಪದೇಶ, ಮಹಾತ್ಮ ಗಾಂಧಿಯವರ ಸತ್ಯಾಗ್ರಹ ಇವೆರಡರ ತಾತ್ಪರ್ಯವನ್ನು ಒಳಗೊಂಡಿರುವ ಶ್ರೀ ಬಸವೇಶ್ವರರ ಸಂದೇಶವು ಸಮಗ್ರ ಭಾರತದಲ್ಲಿ ಪ್ರಸಾರವಾಗಿ ಜನಜೀವನದಲ್ಲಿ ವಿನೂತನ ಸ್ಫೂರ್ತಿಯುಂಟಾಗುವುದು. ಬಸವೇಶ್ವರರ ಜೀವನವು

ಸಾಕ್ರಟೀಸನ ಸತ್ಯನಿಷ್ಠೆ, ಕನ್‌ಫೂಷಿಯಸ್ಸನ ಅನುಕಂಪ, ಏಸುಕ್ರಿಸ್ತನ ಪತಿತೋದ್ಧಾರ, ಬುದ್ಧದೇವನ ಸರ್ವಸಮತೆ, ಅರವಿಂದ ಘೋಷರ ಅನಾಸಕ್ತಿಯೋಗ, ಮಹಾತ್ಮಾ ಗಾಂಧಿಯವರ ವಿಶ್ವಪ್ರೇಮ, ಮಾಣಿಕ್ಯವಾಚಕರ ದೈವ ಭಕ್ತಿ, ಜ್ಞಾನದೇವರ ಬ್ರಹ್ಮೈಕಭಾವ ಮೊದಲಾದ ಮಹದ್ಗುಣಗಳಿಂದ ವಿರಾಜಿಸುತ್ತಿದೆ. ಈ ಮಹ ತ್ಕಾರ್ಯಕ್ಕೆ ಕರ್ಣಾಟಕದ ಮಹಾಜನರು, ಮೈಸೂರು ಸರ್ಕಾರದವರು, ಕೇಂದ್ರ ಸರ್ಕಾರದವರು, ಮಠಾಧಿಪತಿ ಗಳು, ಶ್ರೀಮಂತರು ಉದಾರವಾಗಿ ಧನಸಹಾಯ ಮಾಡುವರೆಂದು ನಾವು ನಂಬುತ್ತೇವೆ. ಈ ಕಾರ್ಯ ನಿರ್ವಹಣೆಗಾಗಿ ಬೆಂಗಳೂರಿನಲ್ಲಿ ಒಂದು ಕೇಂದ್ರ ಉತ್ಸವ ಸಮಿತಿ ಬೇಗನೆ ನಿರ್ಮಾಣವಾಗಿ ತತ್ಸಂಬಂಧವಾದ ಕಾರ್ಯಕ್ರಮಗಳನ್ನು ಕೈಗೊಳ್ಳುವುದೆಂದು ನಾವು ನಂಬುತ್ತೇವೆ.

—ಬಿ. ಶಿವಮೂರ್ತಿ ಶಾಸ್ತ್ರೀ
ಅಧ್ಯಕ್ಷರು, ಕ. ಸಾ. ಪ.

## ಗೋವ ಮೈಸೂರಿಗೆ ಸೇರಬೇಕಾದರೆ ?

ಗೋವೆಯ ಭವಿಷ್ಯಕ್ಕೂ, ಮೈಸೂರಿನ ಅಭ್ಯುದಯಕ್ಕೂ ನಿಕಟವಾದ ಬಾಂಧವ್ಯವಿದೆ. ಐತಿಹಾಸಿಕ, ಭೌಗೋಳಿಕ ಕಾರಣಗಳಿಂದ ಗೋವ ಮೈಸೂರಿಗೆ ಸೇರಿದಂತಿದೆ. ಆದರೆ ನಾನ್ನೂರು ವರ್ಷಗಳ ಪೋರ್ಚುಗೀಸರ ಆಡಳಿತವು ಗೋವೆಯ ಸಾಂಸ್ಕೃತಿಕ ಜೀವನವನ್ನು ಬದಲು ಮಾಡಿದೆ. ಸ್ವಾದಿಯ ಕನ್ನಡ ರಾಜರು ಪೋರ್ಚುಗೀಸರಿಗೆ ಗೋವೆ ಯನ್ನು ಮಾರಿದ ಬಗೆಗೆ ಪಂಜಿಂ ಮತ್ತು ಲಿಸ್ಬನ್ ಗಳಲ್ಲಿರುವ ಸರ್ಕಾರದ ಭವನಗಳಲ್ಲಿ ಲಿಖಿತರೂಪವಾದ ನಿದರ್ಶನಗಳಿವೆ. ಕೆಳದಿ, ಸ್ವಾದಿ, ವಿಜಯನಗರ ಮತ್ತು ಬಿಜಾಪುರಗಳ ಕನ್ನಡ ರಾಜರಿಗೂ ಪೋರ್ಚುಗೀಸರಿಗೂ ನಡೆದ ಕಾಗದ ಪತ್ರಗಳೂ, ಕೌಲು ಕರಾರುಗಳೂ ಇಂದಿಗೂ ಗೋವೆಯ ಮುಖ್ಯ ಪಟ್ಟಣವಾದ ಪಂಜಿಂ ನಲ್ಲಿರುವುದನ್ನು ನಾವು ಮರೆಯಬಾರದು. ಈ ಕಾಗದ ಪತ್ರಗಳು ಬೆಳಕಿಗೆ ಬಂದರೆ ಕರ್ಣಾಟಕದ ಚರಿತ್ರೆಯ ಮೇಲೆ ಹೊಸ ಬೆಳಕು ಬೀಳುತ್ತದೆ. ಇದಕ್ಕಾಗಿ ಮೈಸೂರು ಸರ್ಕಾರದವರು ನೆರವಾದರೆ ಸಾಹಿತ್ಯ ಪರಿಷತ್ತು ಈ ಸಂಗ್ರಹ ಕಾರ್ಯದಲ್ಲಿ ಪ್ರಯತ್ನ ನಡೆಸುತ್ತದೆ.

ಗೋವೆಯ ಮೂರನೆಯ ಒಂದು ಭಾಗ ಮಹಾರಾಷ್ಟ್ರದ ಕಡೆಗೂ, ಮೂರನೆಯ ಎರಡು ಭಾಗ ಮೈಸೂರಿನ ಕಡೆಗೂ ಹೊಂದಿಕೊಂಡಿದೆ. ಗೋವೆಯಲ್ಲಿ ಕೊಂಕಣಿ ಭಾಷೆ ಹೆಚ್ಚು ಪ್ರಚಾರದಲ್ಲಿದೆ. ಇತ್ತೀಚೆಗೆ ಅಲ್ಲಿ ಮರಾಠಿ ಬಲಗೊಂಡಿದೆ. ಕನ್ನಡವೂ ಅಲ್ಲಲ್ಲಿ ಮಿನುಗುತ್ತಿದೆ. ಆಕಸ್ಮಿಕ ಕಾರಣಗಳಿಂದ ಮಹಾರಾಷ್ಟ್ರವಾದಿಗಳು ಅಲ್ಲಿ ಈಗ ಸರ್ಕಾರ ನಡೆಸಿದ್ದಾರೆ. ಇದಕ್ಕೆ ಕೇಂದ್ರ ರಕ್ಷಣಾ ಮಂತ್ರಿ ಮಾನ್ಯ ಚವ್ಹಾಣರ ಆಶೀರ್ವಾದವೂ ದೊರೆತಿದೆ. ಮರಾಠಿಗಳ ಮುಂಗೈ ಬಲ ಜೋರಾಗಿ ಗೋವೆ ಒಂದು ವೇಳೆ ಮಹಾರಾಷ್ಟ್ರಕ್ಕೆ ಸೇರಿದರೆ ಅದರಿಂದ ಮೈಸೂರಿಗೆ ಅಹಿತವಾಗುತ್ತದೆ. ಬೆಳಗಾಂವಿ, ಕಾರವಾರ, ನಿಪ್ಪಾಣಿ ಗಳು ಗಂಡಾಂತರಕ್ಕೀಡಾಗುತ್ತವೆ. ಇದರಿಂದ ಮರಾಠಿಗ ರಿಗೆ ಹಾಸಿಗೆ ಹಾಸಿ ಕೊಟ್ಟಂತಾಗುತ್ತದೆ. ಈ ಬಾಂಧವ್ಯ ದಿಂದ ಗೋವೆಯವರಿಗೆ ಯಾವ ಪ್ರಯೋಜನವೂ ಆಗುವುದಿಲ್ಲ.

ಗೋವೆ ಆರ್ಥಿಕವಾಗಿ ಹಿಂದುಳಿದಿರುವುದರಿಂದ ಅದು ಕೆಲಕಾಲ ಸ್ವತಂತ್ರವಾಗಿದ್ದು ಅನಂತರ ಗೋವನ್ನರ ಇಚ್ಛೆ ಯಂತೆ ಯಾವ ಪ್ರಾಂತಕ್ಕಾದರೂ ಸೇರಲೆಂಬುದು ಮಹಾ ಪ್ರಧಾನಿ ಪಂಡಿತ ನೆಹರೂರವರ ಆಸೆಯಾಗಿದೆ. ಗೋವೆ ಮೈಸೂರಿಗೆ ಸೇರುವುದರಿಂದ ಉಭಯರಿಗೂ ಹಿತವೆಂದು ಮಾನ್ಯ ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರ ಅಭಿ ಪ್ರಾಯವಾಗಿದೆ. ಗೋವೆ ತಟಸ್ಥವಾಗಿರುವುದು ಅಗತ್ಯ ವೆಂದು ಬಹುಸಂಖ್ಯಾತ ಗೋವನ್ನರ ಅಭಿಮತವಾಗಿದೆ. ಈ ಎಲ್ಲ ಕಾರಣಗಳಿಂದ ಗೋವೆ ತನ್ನ ಕಾಲಮೇಲೆ ತಾನು ನಿಲ್ಲುವವರೆಗೆ ಸ್ವತಂತ್ರವಾಗಿದ್ದು ಅನಂತರ ಅಧಿಕ ಸಂಖ್ಯಾತರ ಗೋವನ್ನರ ಇಚ್ಛೆಯಂತೆ ಮೈಸೂರಿಗೆ ಸೇರು ವುದರಲ್ಲಿಯೇ ಎಲ್ಲರ ಹಿತವಿದೆ. ಈ ಮಧ್ಯೆ ಗೋವಾ ರಾಜ್ಯದ ಪಂಜಿಂ ಮತ್ತು ವಡಗಾಂ ಮೊದಲಾದೆಡೆ ಗಳಲ್ಲಿರುವ ಕನ್ನಡಿಗರ ಹಿತದೃಷ್ಟಿಯಿಂದ ಅಲ್ಲಿ ಕನ್ನಡ ಶಾಲೆಗಳು ಸ್ಥಾಪನೆಯಾಗುವುದೂ, ಕನ್ನಡ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುವುದೂ ಅಗತ್ಯವೆನಿಸಿದೆ. ಈ ದೆಸೆಯಲ್ಲಿ ಮೈಸೂರು ಸರ್ಕಾರವೂ ಕರ್ಣಾಟಕದ ಮಹಾ ಜನರೂ ಆಲೋಚಿಸಬೇಕಾದ ಅಂಶಗಳಿವು.

೧. ಗೋವಾ ರಾಜ್ಯದಲ್ಲಿರುವ ಕನ್ನಡಿಗರ ಹಿತದೃಷ್ಟಿಯಿಂದ ಅಲ್ಲಿ ಕನ್ನಡ ಶಾಲೆಗಳನ್ನೂ, ಸಂಘಸಂಸ್ಥೆಗಳನ್ನೂ ಸ್ಥಾಪಿಸಬೇಕೆಂದಿರುವ ಕನ್ನಡ ಸಾಹಿತ್ಯ ಪರಿಷತ್ತಿನವರಿಗೆ ಘನ ಸರ್ಕಾರದವರೂ ಸಾರ್ವಜನಿಕರೂ ಉದಾರವಾಗಿ ಧನ ಸಹಾಯ ಮಾಡುವುದು.

೨. ಗೋವೆಯಲ್ಲಿ ಕೊಂಕಣಿ ಭಾಷೆ ಪ್ರಧಾನವಾಗಿರುವುದರಿಂದ ಬಹುಸಂಖ್ಯಾತ ಕೊಂಕಣಿಗಿಳಿರುವ ಕಾರವಾರ ಮತ್ತು ಮಂಗಳೂರು ಜಿಲ್ಲೆಯ ಬಾಂಧವ್ಯದಿಂದಲೇ ಗೋವನ್ನರಿಗೆ ಹಿತವಿದೆಯೆಂದು ಅಲ್ಲಿ ಪ್ರಸಾರ ಮಾಡುವುದು.

೩. ಮೈಸೂರು ಸರ್ಕಾರದವರು ಮೈಸೂರು ಮತ್ತು ಗೋವಾಗಳಿಗಿರುವ ವ್ಯಾಪಾರ ಬಾಂಧವ್ಯವನ್ನು ಬಲಪಡಿಸಿ ಗೋವನ್ನರ ಅಭ್ಯುದಯಕ್ಕೆ ಕಾರಣವಾಗಿರುವ ವಿದುಚ್ಛಕ್ತಿ ಮೊದಲಾದುವುಗಳನ್ನು ಆ ರಾಜ್ಯಕ್ಕೆ ಒದಗಿಸಿ ಗೋವನ್ನರ ಮನಸ್ಸನ್ನು ಮೈಸೂರಿನ ಕಡೆಗೆ ಒಲಿಸಿಕೊಳ್ಳಲು ಪ್ರಯತ್ನಿಸುವುದು. ಮೇಲೆ ಕಂಡ ವಿಷಯಗಳ ಬಗ್ಗೆ ನಾವು ಈಗಿನಿಂದಲೇ ಪ್ರಯತ್ನ ನಡೆಸದೇ ಹೋದರೆ ಭಾರತ ಸರ್ಕಾರವು ಟಿಬೆಟ್ಟಿನ ಮೇಲೆ ತನಗೆ ಇದ್ದಿರಬಹುದಾದ ಹಕ್ಕುದಾರಿಕೆಯನ್ನು ಕೆಂಪು ಚೀನಾಕ್ಕೆ ಸುಲಭವಾಗಿ ಬಿಟ್ಟುಕೊಟ್ಟು ಶತ್ರುವನ್ನು ಮನೆಯ ಬಾಗಿಲಿಗೆ ಆಹ್ವಾನಿಸಿ ಈಗ ಕಣ್ಣು ಕಣ್ಣು ಬಿಡುವ ಸ್ಥಿತಿಗೆ ಬಂದಂತೆ ಮೈಸೂರು ಆಗಬಾರದು.

೪. ವಿಶಾಲ ಮೈಸೂರು ಅಥವಾ ಕರ್ಣಾಟಕ ರಾಜ್ಯವು ಕರ್ಣಾಟಕದ ಭಾಗಗಳೇ ಆದ ಕಾಸರಗೋಡು, ತಾಳವಾಡಿ, ಹೊಸೂರು, ಮಡಕಶಿರ, ಆದವಾನಿ, ಅಕ್ಕಲಕೋಟೆ, ಜತ್ತ, ಸೊಲ್ಲಾಪುರ ಮೊದಲಾದ ಗಡಿಗಳಲ್ಲಿರುವ ಸುಮಾರು ೧೫-೨೦ ಲಕ್ಷ ಕನ್ನಡಿಗರ ಮಾತೃಭಾಷೆಯನ್ನು ಅಲಕ್ಷಿಸದೆ ಈ ಭಾಗಗಳಲ್ಲಿ ಕನ್ನಡವನ್ನು ಉಳಿಸಲು, ಬೆಳೆಸಲು ಕನ್ನಡ ಸಾಹಿತ್ಯ ಪರಿಷತ್ತು ಕೈಗೊಳ್ಳುವ ಸಾಂಸ್ಕೃತಿಕ ಕಾರ್ಯಗಳಿಗೆ ಉದಾರವಾಗಿ ಧನ ಸಹಾಯ ಮಾಡಿ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಎಂದು ಹಾಡಿದ ಕವಿಯ ಉದ್ದೇಶವನ್ನು ಸಫಲಗೊಳಿಸುವರಾಗಿ ನಂಬಲಾಗಿದೆ. ಮೈಸೂರಿನ ಸುತ್ತಲೂ ಹಬ್ಬಿರುವ ಕೇರಳ, ತಮಿಳುನಾಡು, ಆಂಧ್ರ, ಮಹಾರಾಷ್ಟ್ರಗಳಲ್ಲಿರುವ ಕನ್ನಡಿಗರ ಸಾಂಸ್ಕೃತಿಕ ಹಿತರಕ್ಷಣೆಯ ಹೊಣೆ ನೈತಿಕವಾಗಿ ಮೈಸೂರು ಸರ್ಕಾರಕ್ಕೂ, ಕರ್ಣಾಟಕದ ಮಹಾಜನಕ್ಕೂ ಸೇರಿದುದಾಗಿದೆ. ನಮ್ಮ ಸರಕಾರವೂ, ನಾಡಿನ ಮಹಾಜನರೂ ನೆರವಾದರೆ ಪರಿಷತ್ತು ಈ ಮಹತ್ಕಾರ್ಯ ಸಾಧನೆಯಲ್ಲಿ ಸಾಮರ್ಥ್ಯದಿಂದ ಕಾರ್ಯನಿರ್ವಹಿಸಬಲ್ಲುದೆಂದು ಈ ಮೂಲಕ ಮಹಾಜನಗಳಲ್ಲಿ ಬಿನ್ನೈಸುತ್ತೇನೆ.

**ಬಿ. ಶಿವಮೂರ್ತಿ ಶಾಸ್ತ್ರೀ**
ಅಧ್ಯಕ್ಷರು, ಕ. ಸಾ. ಪ.

# ಕರ್ಣಾಟಕ ಜ್ಞಾನ ಭಂಡಾರ ಕಣ್ಮರೆಯಾಗಿದೆ

ಕನ್ನಡ ನಾಡು ನುಡಿಗಳ ಏಳಿಗೆಗಾಗಿ ತಮ್ಮ ಜೀವನವನ್ನು ಮುಡುಪು ಮಾಡಿದ, ಕನ್ನಡ ಕುಲಪುರೋಹಿತ ಶ್ರೀ ಆಲೂರು ವೆಂಕಟರಾಯರು ಇನ್ನಿಲ್ಲವಾದರು. ಜಯ ಕರ್ಣಾಟಕದ ಜಯ ದುಂದುಭಿಯನ್ನು ನಾಡಿನ ತುಂಬ ಮೊಳಗಿಸಿ ಕರ್ಣಾಟಕದ ಗತವೈಭವದ ಮಹತ್ವವನ್ನು ಜನತೆಗೆ ಉಂಟುಮಾಡಿ ಕರ್ಣಾಟಕ ವೀರರತ್ನಗಳ ಪರಿಚಯ ಮಾಡಿಕೊಟ್ಟು, ಕರ್ಣಾಟಕದ ಕಲ್ಪನೆಯನ್ನು ಚೆನ್ನಾಗಿ ಮಾಡಿ ಕೊಟ್ಟು ಸುಮಾರು ಐವತ್ತು ವರ್ಷಗಳ ಕಾಲ ಕರ್ಣಾಟಕದ ಆಚಾರ್ಯ ಪುರುಷರೆನಿಸಿದ್ದ ಶ್ರೀ ಆಲೂರು ವೆಂಕಟರಾಯರು ಕಣ್ಮರೆಯಾದರು.

ಲೋಕಮಾನ್ಯ ತಿಲಕರ ಗರಡಿಯಲ್ಲಿ ತಯಾರಾದ ಕನ್ನಡದ ಜಟ್ಟಿ ಆಲೂರು ವೆಂಕಟರಾಯರು. ಕನ್ನಡ ಕುಲ ನೆಲಗಳ ಬಗೆಗೆ ಅವರ ಅಭಿಮಾನ ಅತುಲವಾದುದು. 'ಕನ್ನಡ ಕುಲ ಪುರೋಹಿತರು' ಎಂಬ ಹೆಸರು ಅವರಿಗೆ ಅನ್ವರ್ಥವಾದುದು. ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಗೆ ಓರ್ವ ಕಾರಣಕರ್ತರು ಅವರು. (೧೯೧೫) ಕರ್ಣಾಟಕ ಏಕೀಕರಣ ಮಂತ್ರವನ್ನು ಮೊದಲು ಉಚ್ಚರಿಸಿದವರು ಅವರು. (೧೯೦೭) ವಿಜಯನಗರ ಸಾಮ್ರಾಜ್ಯ ಮಹೋತ್ಸವಕ್ಕೆ ಸ್ಫೂರ್ತಿ ಕೊಟ್ಟು ಮಾಡಿಸಿದವರು ಅವರು. (೧೯೩೬) ಮೈಸೂರಿನಲ್ಲಿ ನಡೆದ ಹದಿನಾರನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು ಅವರು. (೧೯೩೦) ನಾಡಹಬ್ಬ, ಇತಿಹಾಸ ಮಂಡಲ ಮೊದಲಾದ ಕಾರ್ಯಕ್ರಮಗಳ ಉತ್ಪಾದಕರು ಅವರು.

ಬಹಳ ಹಿಂದಿನ ಕಾಲದಲ್ಲಿಯೇ ವಕೀಲಿಯನ್ನು ಪ್ರಾರಂಭಿಸಿದ ಅವರು ಚೆನ್ನಾಗಿ ಹಣವನ್ನು ಗಳಿಸಿ ಶ್ರೀಮಂತರಾಗಬಹುದಿತ್ತು. ಆದರೆ ಅವರು ವ್ಯಕ್ತಿಗಿಂತ

ಸಮಾಜ, ಸಮಾಜಕ್ಕಿಂತ ರಾಷ್ಟ್ರ ಹಿರಿದು ಎಂದು ತಿಳಿದ ಉದಾರ ರಾಷ್ಟ್ರವಾದಿಗಳು ಅವರು. ಲೋಕಮಾನ್ಯರ ಗರಡಿಯಲ್ಲಿ ತಯಾರಾದ ಕನ್ನಡ ಜಟ್ಟಿಗಳಿಗೆ ಇದು ಸಹಜ ವಾದುದು. ಆಲೂರರ ಲೇಖನ ಶೈಲಿ ವೈಶಿಷ್ಟ್ಯಗಳಿಂದ ಕೂಡಿ ವೀರರಸ ಪ್ರಧಾನವಾದವು. ಪದ್ಯ ಕಾವ್ಯಗಳಲ್ಲಿ ರನ್ನನೂ, ಗದ್ಯ ಕಾವ್ಯಗಳಲ್ಲಿ ಆಲೂರರೂ ವೀರರಸಕ್ಕೆ ಹೆಸರಾಗಿದ್ದಾರೆ. ಧಾರವಾಡದ ಸಾಧನ ಕೇರಿಯಲ್ಲಿರುವ ಅವರ ಮನೆ ನಿಜಕ್ಕೂ ಒಂದು ಆಶ್ರಮ; ಅದರ ಕುಲಪತಿಗಳು ಶ್ರೀ ಆಲೂರರು. ಅವರು ಉಪದೇಶಿಸಿದ ಮಂತ್ರ ಏಕೀಕರಣದ ಮಂತ್ರ. ಅವರು ಸಾಧಿಸಿದ ಫಲ ಸ್ವತಂತ್ರ ಭಾರತಾಂತರ್ಗತ ಕರ್ಣಾಟಕ ರಾಜ್ಯೋದಯ. ಶ್ರೀ ಆಲೂರರು, ಕರ್ಣಾಟಕದ ಗಡಿಗಳು ವಿಶಾಲ ಮೈಸೂರಿಗೆ ಬೇಗ ಸೇರಬೇಕೆಂಬ ಬಯಕೆಯುಳ್ಳವರಾಗಿದ್ದರು. ಅವರು ಈ ಮಹತ್ಕಾರ್ಯವನ್ನು ಕನ್ನಡ ಸಾಹಿತ್ಯ ಪರಿಷತ್ತು ಸಾಧಿಸಲಿ ಎಂದು ಹರಸುತ್ತಿದ್ದರು. ನಮ್ಮ ರಾಜ್ಯಕ್ಕೆ "ಕರ್ಣಾಟಕ" ಎಂಬ ಹೆಸರಾಗಬೇಕೆಂಬ ಬಯಕೆಯುಳ್ಳವರಾಗಿದ್ದರು. ತಮ್ಮ ಇಡೀ ಜೀವಮಾನವನ್ನೆಲ್ಲಾ ಪರೋಪಕಾರಕ್ಕಾಗಿ ದೇಶದ ಉನ್ನತಿಗಾಗಿ ಕಳೆದ ಆ ಕರ್ಮಯೋಗಿಗಳು ದಿನಾಂಕ ೨೫-೨-೬೪ನೇ ಮಂಗಳವಾರ ಭಗವಂತನ ಪಾದವನ್ನು ಸೇರಿದರು. ಅವರ ಪ್ರಾಣ ಹೋಯಿತು; ಕೀರ್ತಿ ಉಳಿಯಿತು. ಕನ್ನಡಿಗರು ಕಳವಳಗೊಂಡರು.

ಋಷಿಸದೃಶ್ಯರಾದ ಆಲೂರರಂತಹ ಕರ್ಮಯೋಗಿಗಳಿಗೆ ಉಚಿತವಾದ ಒಂದು ಸ್ಮಾರಕವನ್ನು ರಚಿಸುವುದು ಕನ್ನಡಿಗರ ಒಂದು ಕರ್ತವ್ಯ. ಕಳೆದ ವರ್ಷ ನವೆಂಬರ್ ಒಂದರಲ್ಲಿ ಬೆಂಗಳೂರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿಗೆ ಆಗಮಿಸಿ ಮಾನಪತ್ರ ಸ್ವೀಕರಿಸಿದರು. ಸಾರ್ವಜನಿಕ ಸ್ಥಳಗಳಿಗೆ ಸಂದರ್ಶನವಿತ್ತರು. ವಿಯೋಗ ಕಾಲದಲ್ಲಿ ಅವರಿಗೆ ೮೫ ವರ್ಷ ವಯಸ್ಸು. ಮೃತರ ಆತ್ಮಕ್ಕೆ ಶಾಂತಿಯೂ, ವಿಯೋಗಿಗಳ ಪುತ್ರ ಪೌತ್ರಾದಿಗಳ ಮನಸ್ಸಿಗೆ ಸಮಾಧಾನವೂ ಉಂಟಾಗಲೆಂದು ಪ್ರಾರ್ಥಿಸುತ್ತೇನೆ.

**ಬಿ. ಶಿವಮೂರ್ತಿ ಶಾಸ್ತ್ರೀ**
ಅಧ್ಯಕ್ಷರು, ಕ. ಸಾ. ಪ.



---

## ಕನ್ನಡ ಕುಲಪುರೋಹಿತರಿಗೆ ಶ್ರದ್ಧಾಂಜಲಿ!

ಲೇ: ಶ್ರೀ ಸಂಗನೇಶ ಹೊಸಮನಿ

ಕನ್ನಡವೆ ಕುಲ! ಕರುನಾಡನೆಲ!!
ಕಣ್ಮುಂದೆ 'ಕರ್ಣಾಟಕ'!!!
ನಾಡುಸಿರೆ ಉಸಿರು! ನರನರದಿ ಹೆಸರು,
ಇರಲಿಲ್ಲ ತುಸುನಾಟಕ!!... ‖ ೧ ‖

ಅರ್ಧಶತಮಾನ-ಕುಲಕೋಟಿ ಧ್ಯಾನ!
ಬೆಳಿಸಿಗಳಿಸಿದಾಯಜ್ಞ!
ಹಣ್ಣಾದ ತೊಗಲು, ಬಿಳಿ ಗಡ್ಡ ಮೀಸೆ,
ಆದರೇಂ ಪೂರ್ಣಪ್ರಜ್ಞ!! ‖ ೨ ‖

ತಾಯಿ ತೊಡೆಯೇರಿ ಶೃತಿಗೊಂಡವೀಣೆ!
ಗಾನ ಗಾಯತ್ರಿ ಸ್ಮರಣೆ!
ಕನ್ನಾಡುನುಡಿ, ಮೆರೆದಂಥ ಗುಡಿ
ಲೋಕಕೇ ಸಂಭಾವನೆ!!... ‖ ೩ ‖

'ಸಪ್ತರ್ಷಿಮಾಲೆ'ಯೊಳಗೊಂದು ಲೀಲೆ
ಸಂಸ್ಕೃತಿಗೆ ಮೀಸಲಾಯ್ತು!
ಸಾಹಿತ್ಯ ಯೋಗ ದಿವ್ಯಾನುರಾಗ
ಕುಲಕೋಟಿ ಎಚ್ಚರಿಸಿತು!!... ‖ ೪ ‖

ಬಲಭೀಮ ನೀನು! ಹೃದಯ ಹೆಜ್ಜೇನು!
ಮುಖದಲ್ಲಿ ಮಂದಸ್ಮಿತ!
ಕರುಳುಂಡ ಕನಸು, ನಮಗೆಲ್ಲ ನನಸು
ಗುರುತಾರೆ ನೀಶಾಶ್ವತ!!... ‖ ೫ ‖

# ಗ್ರಂಥಾವಲೋಕನ

**ಶ್ರೀ ಪುರಂದರದಾಸರು:** ಪ್ರಕಾಶಕರು: ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೧೬೪; ಬೆಲೆ ೨ ರೂ.

ಶ್ರೀ ಪುರಂದರದಾಸರ ಪುಣ್ಯ ದಿನಾಚರಣೆ ದಿನಾಂಕ ೧೪-೧-೧೯೬೪ ರಂದು ಕರ್ಣಾಟಕದಲ್ಲೆಲ್ಲಾ ನಡೆದ ಶುಭ ಸನ್ನಿವೇಶದಲ್ಲಿ ಶ್ರೀ ಬುರ್ಲಿ ಬಿಂದುಮಾಧವರ ಸಂಪಾದಕತ್ವದಲ್ಲಿ ಈ ಗ್ರಂಥವು ಪ್ರಕಟವಾಗಿದೆ. ಇದರಲ್ಲಿ ಹೆಸರಾಂತ ಲೇಖಕರು ೨೨ ಮಂದಿ ಶ್ರೀ ಪುರಂದರದಾಸರ ಜೀವನ, ಸಾಹಿತ್ಯ, ಸಂದೇಶ ಮೊದಲಾದುವುಗಳನ್ನು ಬರೆದಿದ್ದಾರೆ. ಅಲ್ಲದೆ ಪಂಡರಾಪುರದ ವಿಟ್ಠಲನ ಗುಡಿಯಲ್ಲಿರುವ ಪುರಂದರದಾಸರ ಕಂಭ, ಹಾಗೂ ಪಾಂಡುರಂಗ ವಿಟ್ಠಲ ಚಿತ್ರಗಳನ್ನು ಅನುಗೊಳಿಸಲಾಗಿದೆ. ಈ ಗ್ರಂಥಸ್ಥ ಲೇಖನಗಳು ವಿಚಾರಪೂರ್ಣವಾಗಿದ್ದು ಶ್ರೀ ಪುರಂದರದಾಸರ ಮಹತ್ತು ಹಾಗೂ ಬೃಹತ್ತುಗಳನ್ನು ತಿಳಿಯಲು ಸಾಧನವೆನಿಸಿವೆ.

ಗ್ರಂಥದ ಕಾಗದ, ಮುದ್ರಣ, ರಕ್ಷಾಪತ್ರ ಎಲ್ಲವೂ ತೃಪ್ತಿಕರವೆನಿಸಿವೆ. ವಾಚನಾರ್ಹ ಗ್ರಂಥವಿದು.

—'ಶೂಲಪಾಣಿ'

**ಶಿವಾದ್ವೈತದರ್ಶನ:** ಲೇ: ಜಗದ್ಗುರು ಜ.ನಿ., ಪ್ರಕಾಶಕರು: ಶ್ರೀ ಜ. ಚ. ನಿ. H. B. ಸಮಾಜ ರಸ್ತೆ, ಬೆಂಗಳೂರು-೪, ಬೆಲೆ: ೪ ರೂ.

ವೀರಶೈವ ಧರ್ಮದ ಆಚಾರ್ಯ ಪುರುಷರೊಬ್ಬರ ಸಿದ್ಧ ಹಸ್ತದಿಂದ ಹೊರಬಿದ್ದ, ವೀರಶೈವ ಧರ್ಮವನ್ನು ಪ್ರತಿಪಾದಿಸುವ ಧರ್ಮಗ್ರಂಥವು ವೀರಶೈವ ಮತತತ್ತ್ವಕ್ಕೆ ಕೈದೀವಿಗೆಯಂತೆ ಇದೆ ಎಂದರೆ ತಪ್ಪಾಗಲಾರದು. ಶತಮಾನಗಳು ಉರುಳಿ ಹೋಗುವಾಗ ಮತದ ಏರುಪೇರುಗಳು ಎಷ್ಟಾಗಿದ್ದರೂ, ಆ ಪರಂಪರೆಯನ್ನು ರಕ್ಷಿಸಲು ನಿರ್ಮಿತವಾಗಿರುವ ಸ್ಥಾನವನ್ನು ಅಲಂಕರಿಸಿರುವ ಶ್ರೀಗಳು ಸಕಲ ತತ್ತ್ವಗಳನ್ನೂ ಅನುಷ್ಠಾನದಲ್ಲಿ ತರತಕ್ಕವರಾಗಿದ್ದು, ಅವರ ಅನುಭವದಿಂದ ಹೊರಬಿದ್ದಿರುವ ಈ ಮಾತುಗಳು ನಿಜಕ್ಕೂ ಪ್ರಮಾಣ ವಾಕ್ಯಗಳೆಂದು ಹೇಳಬಹುದು. ಅನುಭವದೊಂದಿಗೆ, ಅನೇಕ ಪ್ರಮಾಣ ಗ್ರಂಥಗಳನ್ನು ಉದಾಹರಿಸಿರುವುದು, ಗ್ರಂಥದ ಹಿರಿಮೆಗೆ ಮತ್ತಷ್ಟು ಮೆರುಗನ್ನು ಕೊಟ್ಟಿದೆ. ಶಿವತತ್ತ್ವ, ಶಕ್ತಿತತ್ತ್ವ ಮುಂತಾದ ಪ್ರಕರಣಗಳಲ್ಲಿ ಸಾಂಪ್ರದಾಯಕವಾದ ಸಿದ್ಧಾಂತಗಳನ್ನು ಸೂತ್ರೋಪನಿಷತ್ತುಗಳು ಹಾಗೂ ವಚನ ಶಾಸ್ತ್ರದ ಸಾರಸಂಗ್ರಹದಿಂದ ಸಮರ್ಥಿಸಿರುವುದಲ್ಲದೆ, ಸಮಷ್ಟಿಸೃಷ್ಟಿ, ೩೬ ತತ್ತ್ವೋದಯ, ಅರ್ಚನ, ಅರ್ಪಣ ಮತ್ತು ಅನುಭವ ರಹಸ್ಯಗಳನ್ನು ತಮ್ಮದೇ ಆದ ಶೈಲಿಯಲ್ಲಿ, ಶ್ರೀಗಳು ಬಹಳ ಸರಳವಾಗಿ ಧರ್ಮದ ತಿರುಳನ್ನು ಹೊರಗೆಡವಿದ್ದಾರೆ. ಕನ್ನಡಿಗರು, ಅದರಲ್ಲೂ, ಧರ್ಮ ಜಿಜ್ಞಾಸುಗಳು, ಈ ಹೊತ್ತಿಗೆಯನ್ನು ಆದರದಿಂದ ಓದಿ, ಕೃತಾರ್ಥರಾಗಬೇಕೆಂದು ಹಾರೈಸುತ್ತೇನೆ.

—"ಶಂಕರ"

**ನಾನೇ ನಾನು ಮತ್ತು ಇತರ ಏಕಾಂಕಗಳು:** ಶ್ರೀ ಬೇಂದ್ರೆ ಲಕ್ಷ್ಮಣರಾವ್; ಪ್ರಕಾಶಕರು: ಸಾಹಿತ್ಯ ಭಂಡಾರ, ಹುಬ್ಬಳ್ಳಿ; ಪುಟಗಳು: ೧೬೫; ಕಿರೀಟ ಅಷ್ಟದಳ; ಬೆಲೆ: ೨-೫೦.

ಈ ಹೊತ್ತಿಗೆಯಲ್ಲಿ ಅಡಗಿರುವುದು ಎಂಟು ಏಕಾಂಕಗಳು. ಕನ್ನಡ ಬರಹಗಾರರಾದ ಶ್ರೀ ಲ. ಜಿ. ಬೇಂದ್ರೆಯವರು ಸಾಮಾಜಿಕ ಸಮಸ್ಯೆಗಳನ್ನು ಈ ಏಕಾಂಕಗಳಲ್ಲಿ ತಿಳಿ ಹಾಸ್ಯದ ಹಿನ್ನೆಲೆಯಲ್ಲಿ ಸರಳವಾಗಿ ಬಿಡಿಸಿದ್ದಾರೆ. ಈ ಎಂಟರಲ್ಲಿ 'ನಾಯಿ ಒದರ್‌ತಾನೇ ಇತ್ತು' ಎಂಬುದು ದೆಹಲಿಯ ಆಕಾಶವಾಣಿ ಕೇಂದ್ರದಿಂದಲೂ, 'ಮಾಡಿ ದುಣ್ಣೋ ಮಹಾರಾಯಾ!' ಎಂಬುದು ಧಾರವಾಡದ ಕೇಂದ್ರದಿಂದಲೂ ಕೆಲವು ವರ್ಷಗಳ ಹಿಂದೆ ಬಿತ್ತರಿಸಲ್ಪಟ್ಟಿವೆ. ತಮ್ಮ ಅನುಭವಗಳನ್ನು ಶ್ರೀ ಲ. ಜಿ. ಬೇಂದ್ರೆಯವರು ಈ ಏಕಾಂಕಗಳಲ್ಲಿ ಸರಳವಾಗಿ ಮೂಡಿಸಿ ಪ್ರೇಕ್ಷಕರನ್ನೂ ಶ್ರೋತೃಗಳನ್ನೂ ರಂಜಿಸಿದ್ದಾರೆ.

ಮೊದಲನೆಯದು 'ನಾನೇ ನಾನು' ಎಂಬುದು. ಬೆಡಗು ಬಿನ್ನಾಣಗಳಿಂದ ಮೆರೆಯುವ ಸುಂದರಿಯರನ್ನು ನೋಡಿ ತನ್ನ ಗಂಡಂದಿರೆಲ್ಲಿ ಮೋಹಗೊಳ್ಳುತ್ತಾರೋ ಎಂದು ಹೆಂಡತಿಯ ಸಂಶಯ, ಇಂದಿಗೂ ಕೆಲವರು ಸ್ತ್ರೀ ವಿದ್ಯಾಭ್ಯಾಸದ ಬಗ್ಗೆ ತೋರುವ ತಿರಸ್ಕಾರ, ಆಧುನಿಕ ಶಿಕ್ಷಕಿಯರು ಕೆಲವರ ವರ್ತನೆ, ಸಣ್ಣ ಪುಟ್ಟ ಹುಡುಗರಿಗೂ ಸಿನಿಮಾ ಪ್ರಪಂಚದ ಬಗ್ಗೆ ಇರುವ ಆಸಕ್ತಿ ಮತ್ತು ದೊಡ್ಡಸ್ತಿಕೆ ಮೆರೆಸಬೇಕೆಂದು ಹಾತೊರೆಯುವ

ವಿದ್ಯಾವತಿಯರಾದ ಸ್ತ್ರೀಯರ ವರ್ತನೆ-ಇವುಗಳು ಈ ನಾಟಕದಲ್ಲಿ ರಸವತ್ತಾಗಿ ಚಿತ್ರಿಸಲ್ಪಟ್ಟಿವೆ.

'ಮೂರು ಮೆಟ್ಟಲು' ಎಂಬುದು ಆಕಾಶವಾಣಿಗಾಗಿ ಬರೆದದ್ದರಿಂದ ರಂಗಸಜ್ಜಿಕೆಯ ಸೂಚನೆಗಳೊಂದೂ ಕಂಡುಬರುವುದಿಲ್ಲ. ಮಕ್ಕಳ ಆಟದಿಂದ ಪ್ರಾರಂಭವಾದ ಕುಂದಾ ಭಾಲ್ಯಾರ ಪ್ರೇಮ ಮುಂದೆ ವಿಧಿಲೀಲೆಯಿಂದಾಗಿ ಯಾವ ಬಣ್ಣಕ್ಕೆ ತಿರುಗಿತು.-ಎಂಬುದೇ ಇದರ ಕಥಾ ವಸ್ತು. ಮಕ್ಕಳ ಮನೋಭಾವನೆಗಳು, ಸ್ತ್ರೀ ಸ್ವಾತಂತ್ರ್ಯ ಸ್ತ್ರೀ ಪುರುಷ ಸಮಾನತೆ-ಮೊದಲಾದುವುಗಳು ಶ್ರೀ ಲ. ಜಿ. ಬೇಂದ್ರೆಯವರ ಲೇಖನಿಯಿಂದ ಸ್ವಾರಸ್ಯಪೂರ್ಣವಾಗಿ ಹೊರಹೊಮ್ಮಿವೆ.

ಪಾರ್ಲಿಮೆಂಟ್ ಮೆಂಬರಾಗಬೇಕೆಂಬ ಆಸೆಯುಳ್ಳ ಮತ್ತು ಹಾಗಾದರೂ ಲಂಚ ತಿನ್ನುವ ವ್ಯಾಮೋಹಕ್ಕೆ ಒಳಗಾದ ಹಾಲಪ್ಪನ ಮತ್ತು ಅವನ ಸಂಸಾರದ ಒಂದು ಚಿತ್ರ-'ನಾಯಿ ಒದರ್‌ತಾನೇ ಇತ್ತು.' ಹೇಗೆ ನಡೆದುಕೊಂಡರೂ ಜನರ ಬಾಯಿ ಮುಚ್ಚಿಸಲು ಸಾಧ್ಯವಿಲ್ಲವೆಂಬುದರಿಂದಲೇ ಈ ನಾಟಕಕ್ಕೆ ಈ ಹೆಸರು ಕೊಡಲಾಗಿದೆ. ವಿದ್ಯಾಭ್ಯಾಸಕ್ಕೆಂದು ವಿದೇಶಕ್ಕೆ ತೆರಳಿದ ಮಗನ ಬಗ್ಗೆ ಒಂದು ಬಗೆಯ ಆಸೆ ತಳೆದ ತಂದೆ ತಾಯಿಗಳು ಮಗನಿಂದ ಅಪೇಕ್ಷಿಸಿದ್ದೇನು ಎಂಬುದರ ಕರುಣಾಜನಕ ಚಿತ್ರ-'ಇವ ಮಗ'. 'ಮದಿವ್ಯಾದ್ ಮ್ಯಾಲ ಮಕ್ಕಳು ನಮ್ಮವಲ್ಲಪಾ! ಪ್ರಪಂಚ ಹೀಂಗ ಇರೋದು....' ಎಂಬ ದಾಸಣ್ಣನ ಮಾತು ನಿಜವೆನ್ನಿಸುವ ಮಟ್ಟಿಗೆ ಈ ನಾಟಕ ಪರಿಣಾಮಕಾರಿಯಾಗಿದೆ.

ಸ್ವಲ್ಪ ಸಲಿಗೆ ಕೊಟ್ಟರೆ ಆದನ್ನು ಪ್ರೇಮ ಎಂದು ಕರೆದು ಧನ್ಯರಾದೆವೆಂದುಕೊಳ್ಳುವ ಪುರುಷರ ಪ್ರತಿನಿಧಿಯನ್ನು 'ಪ್ರೇಮದ ಇಕ್ಕಟ್ಟು'ವಿನಲ್ಲಿ ಕಾಣುತ್ತೇವೆ. ಗಂಡ ಹೆಂಡಿರ ಜಗಳದಲ್ಲಿ ಸಣ್ಣಗಾದ ಮಗು (ಹುಡುಗ) ತಂದೆಯ ನೂರು ರೂ.ಗಳ ನೋಟೊಂದನ್ನು ತೆಗೆದುಕೊಂಡು ಚಹಾದಂಗಡಿಗೆ ಹೋಗಿ ಸಿಕ್ಕಿ ಹಾಕಿಕೊಂಡು, ಲಂಚ ತಿನ್ನುತ್ತಿದ್ದ ತಂದೆಗೆ ಪರೋಕ್ಷವಾಗಿ ಬುದ್ಧಿ ಕಲಿಸಿದ ವರ್ತಮಾನ ಸಂಸಾರವೊಂದರ ಚಿತ್ರ 'ಮಾಡಿದುಣ್ಣೋ ಮಹಾರಾಯಾ'. ವಾಸ್ತವಿಕತೆ ಈ ನಾಟಕದಲ್ಲಿ ಎದ್ದು ಕಾಣುತ್ತದೆ. ಮೊಮ್ಮಗಳ ಮದುವೆ ನಿಶ್ಚಿತಾರ್ಥದ ಮೂಲಕ ಸೊಸೆಯ ಅಹಂಕಾರವನ್ನಿಳಿಸಿದ ವೃದ್ಧನೋರ್ವನ ಚಾತುರ್ಯ 'ಬಾಯಿಗೆ ಬಾಯಿ, ಕೈಗೆ ಕೈ' ನಾಟಕದಲ್ಲಿ ನಿರೂಪಿತವಾಗಿದೆ. 'ರೆಡಿಮೇಡ್ ಕವಿತೆಗಳ ಅಂಗಡಿ' ಒಂದು ಅನುನಾದಿತ ಕೃತಿ. ಆದರೂ ಲೇಖಕರು ತಮ್ಮ ಸಂಭಾಷಣೆಯ ಕೌಶಲ್ಯವನ್ನು ಅದರಲ್ಲಿ ತೋರಿದ್ದಾರೆ. ಈ ನಾಟಕಗಳಲ್ಲಿ ಪಾತ್ರನಿರೂಪಣೆ ಸೊಗಸಾಗಿದೆ. ಸಂಭಾಷಣೆಯಲ್ಲಿಯೂ ಪ್ರಾಸವಿರುವುದರಿಂದ ಕೇಳುವುದಕ್ಕೆ ಹಿತವೆನಿಸುತ್ತದೆ. ಮಾತುಗಳು ಸಿರರ್ಗಳವಾಗಿ ಓಡುತ್ತವೆ. ಸನ್ನಿವೇಶಗಳ ಸೃಷ್ಟಿ, ಲೇಖಕರ ಚಾತುರ್ಯವನ್ನು ತೋರಿಸುತ್ತದೆ. ಭಾಷೆ ಧಾರವಾಡದ ಕಡೆಯದಾಗಿರುವುದರಿಂದ ಈ ಕೃತಿ ಬೆಂಗಳೂರಿನವರಿಗೆ ಅಷ್ಟಾಗಿ ಹಿಡಿಸಲಾರದು. ಆದರೂ ಇಲ್ಲಿಯ ಕನ್ನಡಿಗರು ಇದನ್ನು ಓದಿ ಶ್ರೀ ಲ. ಜಿ. ಬೇಂದ್ರೆಯವರ ನಾಟಕ ರಚನೆಯ ಸವಿಯನ್ನು ಸವಿಯಲೆಂದು ನನ್ನ ಹಾರೈಕೆ.

—'ವನವಿಹಾರಿ'

ಬಿಲ್ವಬಿನ್ನಾಣ: ಲೇಖಕರು: ಶ್ರೀ ಜ. ಚ. ನಿ., ಸೂರ್ಯ ಸಿಂಹಾಸನಾಧೀಶ್ವರ, ಗೂಳೂರು; ಪ್ರಕಾಶಕರು: ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ; ಹ. ಬ. ಸಮಾಜ ರಸ್ತೆ, ಬೆಂಗಳೂರು ೪ ಪುಟ ೫೫; ಬೆಲೆ ೭೫ ನ.ಪೈ.

ಅಗಣಿತ ಕೃತಿಗಳನ್ನು ರಚಿಸಿ ಈಗಾಗಲೇ ಕನ್ನಡ ತತ್ರಾಪಿ ಆಧ್ಯಾತ್ಮಿಕಾರಾಧನೆಯಲ್ಲಿ ಪಾಲು ಪಡೆಯುತ್ತಿರುವವರಿಗೆ ಚಿರಪರಿಚಿತರೆನಿಸಿರುವ ಶ್ರೀ ಜ. ಚ. ನಿ. ಯವರಿಂದ ರಚಿತವಾಗಿರುವ ಈ ಗ್ರಂಥವು ನಿಜಕ್ಕೂ ಒಂದು ಹೊಸ ವಿಚಾರಧಾರೆಯಿಂದ ಕೂಡಿರುವುದಾಗಿದೆ.

ಹದಿನಾರು ಪುಟ್ಟ ಪ್ರಕರಣಗಳಿಂದ ಕೂಡಿರುವ ಈ ಭೂಮಾತೆಯ ಬಿನ್ನಾಣ (ವಿಜ್ಞಾನ) ದ ಬಿತ್ತರ, ವನದೇವತೆ ಮಾನವ ಕುಲಕ್ಕೆ ನೀಡಿರುವ ಅಮೂಲ್ಯ ಕಾಣಿಕೆ, ದೈಹಿಕ ಆರೋಗ್ಯ-ದೈವಿಕ ಅರ್ಚನೆಗಳೆರಡನ್ನೂ ಒಟ್ಟಿಗೆ ಅನುಗ್ರಹಿಸಬಲ್ಲ ಬಿಲ್ವದ ಬಲ್ಮೆ, ಶಕ್ತಿ-ಕಣ್ಣು-ಕಾಲ-ಪೂಜೆ-ಲಿಂಗ-ಪಾದ-ತೇಜ-ಪ್ರಣವ=ಈ ಎಲ್ಲದರಲ್ಲಿಯೂ ಮೂರು ಭಾಗಗಳನ್ನು ಅಳವಡಿಸಿಕೊಂಡಿರುವ ಬಿಲ್ವ ಮಹಿಮಾ, ಬೇನೆ ಬಡತನಗಳಿಂದ ಬಳಲಿ-ಬೆಂಡಾಗಿದ್ದ ಓರ್ವ ಭಿಲ್ಲ ಸ್ತ್ರೀಯು ಪಾಲ್ಗಡಲ ಮಗಳಾಗಿ ಮೈದಾಳುವಂತೆ ಶಕ್ತಿ ಕರುಣಿಸಿದ ಬಿಲ್ವವೃಕ್ಷ, ಜವರಾಯನನ್ನೇ ನಡುಗಿಸಬಲ್ಲ ಬಿಲ್ವಾರ್ಚನ ಫಲ, ತಾನು ಸೋಂಕಿದ ಮಣ್ಣಿಗೇ ಮುಕ್ತಿಯನ್ನು ಕೊಡುವ ಶಕ್ತಿಯುಳ್ಳ ಬಿಲ್ವದ ಬೇರು, ತ್ರಿಜನ್ಮ ಪಾಪ ಸಂಹಾರ ಮಾಡುವ ಬಿಲ್ವದಲ, 'ಸತ್ಯಫಲ' ವೆಂಬ ಶ್ರೇಷ್ಠ ನಾಮಧೇಯ ಪಡೆದಿರುವ ಬಿಲ್ವಫಲ, ವಶಿಷ್ಠ ಋಷಿಯು ಶ್ರೀರಾಮನಿಗೆ ಬೋಧಿಸಿದ ಬಿಲ್ವಫಲೋಪ ಕಥೆ, ಉದ್ರಿಕ್ತ ಪಾಪಗಳೆಲ್ಲ ಉಪಸಂಹಾರವಾಗುವ-ಬಿಲ್ವದ ಬಳಿಯ ಉಪವಾಸ, ಬಿಲ್ವೋಪಾಸನದ ಮಹತ್ವ, ಬಿಲ್ವಪತ್ರೆಯಿಂದ ಇಷ್ಟಲಿಂಗಾರ್ಚನೆ, ಪ್ರಸಾದ

ಪತ್ರಫಲ ಮತ್ತು ಅದರ ಬಗ್ಗೆ ಉಕ್ತವಾಗಿರುವ ಕಥೆ, ಬಿಲ್ವವೃಕ್ಷ ಕಲ್ಪವೃಕ್ಷ– ಈ ವಿಷಯುಗಳು ಮನಂಬುಗುವಂತೆ ವರ್ಣಿತವಾಗಿವೆ.

ಕೃತಿಕಾರರು ಸ್ವಾನುಭವದಿಂದೊಡಗೂಡಿದ ತನ್ಮತನದ ಜೊತೆಗೆ ವೇದ, ಶ್ರೀರುದ್ರ, ಶಿವರಹಸ್ಯ ಮಾರ್ಕಂಡೇಯ ಪುರಾಣ, ಶ್ರೀಸೂಕ್ತ, ಬಿಲ್ವೋಪನಿಷತ್, ಮಹಾನ್ಯಾಸ ಪ್ರಯೋಗ, ಯೋಗವಾಸಿಷ್ಠ, ಮುಂಡಕೋಪನಿಷತ್, ಗೀತಾ, ಆರೋಗ್ಯದರ್ಪಣ–ಈ ಎಲ್ಲ ಆಕರಗಳಿಂದಲೂ ಶ್ಲೋಕ–ಕಥೆಗಳನ್ನು ಆರಿಸಿ ಸಂದರ್ಭೋಚಿತ ಪವಣಿಸಿ ಈ ಕೃತಿಯನ್ನು ಸರ್ವಾಂಗ ಸುಂದರವಾಗಿ ರಚಿಸಿರುತ್ತಾರೆ.

ಈ ಪುಸ್ತಕವನ್ನು ಓದುವಾಗ ಶ್ರೀ ಬಿಲ್ವವೃಕ್ಷದತ್ತಲೇ ಮನ ಹರಿಯುವುದಲ್ಲದೆ, ದೈಹಿಕಾರೋಗ್ಯದಿಂದ ಇಹವನ್ನೂ, ದೈವಿಕಾರ್ಚನೆಯಿಂದ ಪರವನ್ನೂ ಸಮನ್ವಯಿಸುವ ಲೋಕದ್ವಯ ಸಾಧನಾ ಚಾತುರ್ಯವು ಲಭ್ಯವಾಗುವುದೆಂಬ ದಿವ್ಯ ಸಂದೇಶ ಹೃದಯದಲ್ಲಿ ಮನೆಮಾಡಿ ನಿಲ್ಲಬಲ್ಲುದೆನಿಸುತ್ತದೆ.

ಒಟ್ಟನಲ್ಲಿ ಪ್ರಾಯೋಗಿಕ ಫಲಪ್ರಾಪ್ತಿಯಿಂದ ಮಾತ್ರವೇ ನಂಬಬೇಕೆಂಬ ಈ ಮನೋಭಾವ ಬಲಿಯುತ್ತಿರುವ ಈ ವಿಜ್ಞಾನ ಯುಗದಲ್ಲಿ, ಮಹಾಸ್ವಾಮಿಗಳವರು ಪ್ರಕೃತ 'ಬಿನ್ನಾಣ'ದ ಪ್ರತಿಕೃತಿಯನ್ನು ಜನತೆಯ ಮುಂದಿಟ್ಟು ಮಹೋಪಕಾರ ಮಾಡಿದ್ದಾರೆ.

**—ಪಂಡಿತ ಕೆ. ಪಿ. ಶಿವಲಿಂಗಯ್ಯ**

**ಭಾರತಿ ಸಂಸ್ಕೃತಿ:** (ಕನ್ನಡ ಅನುವಾದ) ಲೇಖಕರು: ಶ್ರೀ ಎಸ್. ಎನ್. ಆರ್. ಆರ್.; ಸೈಜು ೧/೮ ಕ್ರೌನ್; ಪುಟ: ೬೪; ಬೆಲೆ: ೧-೨೦ ನ.ಪೈ.

ಈ ಪುಸ್ತಕ ಕನ್ನಡ ಅನುವಾದವೆಂದು ಇದರ ಶಿರೋನಾಮೆಗಿಂತಲೂ, ದಪ್ಪವಾದ ಅಕ್ಷರಗಳಲ್ಲಿ ಪ್ರಾಮುಖ್ಯವಾಗಿ ಪ್ರಕಟಿಸಲ್ಪಟ್ಟಿದೆ. ಅಂದ ಮೇಲೆ ಇದರ ಮೂಲ ಇನ್ನಾವುದೋ ಭಾಷೆಯಲ್ಲಿ ಇರಬೇಕು. ಅದಾವುದೆಂಬುದನ್ನು ಕಂಡುಹಿಡಿಯಲು ಅಸೀಮ ಸಾಹಸಿಗಳಾದ ಸಾಹಿತ್ಯ ಸಂಶೋಧಕರಿಂದ ಮಾತ್ರ ಸಾಧ್ಯವೆಂದು ಕಾಣುತ್ತೆ.

ಮತ್ತೆ ಈ ಗ್ರಂಥ ಯಾವ ಗುರಿ ಮತ್ತು ಉದ್ದೇಶ್ಯ ಸಾಧನೆಗಾಗಿ ರಚಿಸಲ್ಪಟ್ಟಿದೆ ಎಂಬ ವಿಚಾರ ಪುಸ್ತಕವನ್ನು ನಾಲ್ಕು ಸಲ ಓದಿದರೂ ತಿಳಿಯಲು ಕಷ್ಟವಾಗಿರುತ್ತೆ. ಲೇಖಕರು ಸಂಸ್ಕೃತವನ್ನು ಕುರಿತು ಬರೆದಿದ್ದಾರೆಯೇ ಇಲ್ಲ ಸಂಸ್ಕೃತಿಯ ವಿಚಾರವೇ ಎಂಬ ಸಮಸ್ಯೆಯನ್ನು ಬಿಡಿಸಲಾಗದೆಯೇ ಉಳಿಯುತ್ತೆ. ಪುಸ್ತಕದ ತುಂಬ ಅಕ್ಷರ ಸ್ಖಾಲಿತ್ಯ, ಅಚ್ಚುದೋಷಗಳು, (ಅಥವಾ ಲೇಖಕರು ಉದ್ದಿಶ್ಯಪೂರ್ವಕವಾಗಿಯೇ ಬರೆದಿದ್ದಾರೋ?) ಅಸಂಗತ ವಾಕ್ಯರಚನೆ, ಅಸಂಬದ್ಧ ಪದಬಂಧಗಳು, ಇವು ಈ ಹೊತ್ತಿಗೆಯ ವೈಶಿಷ್ಟ್ಯ.

ಉದಾ:– ಭಿನ್ನಹ, ಫಾವೀತ್ರಂ, ಬಿಂದಂ, ಭವತ್ತುಂ, ಕಾರ್ತವ್ಯಣಾಃ, ಸಂಸ್ಕೃಥ . . .

ಈ ವಾಕ್ಯಗಳನ್ನು ನೋಡಿ.

"ಆದಿಮೂಲದಿಂದ ಹುಟ್ಟಿರುವ ನಮ್ಮಗಳ ಹಿಂದಿನ ಯುಗದಲ್ಲಿ ಬಳಸಿಕೊಂಡು ಬರುತ್ತಿದ್ದ ಫೇಥರಾಯನ ಕಾಲದಿಂದ ಬರುತ್ತಿದ್ದ ಸಂಸ್ಕೃತವು ಹುಟ್ಟಿರುವ ಇದರಲ್ಲಿ ತೀರ್ದಳ ರೂಪದಲ್ಲಿ ಹೇಳಿರುವ ಲಿಖಿತ ಪಾವನದ ಪ್ರಕಾರ . . ."

"ಮೊದಲನೆಯ (ಪ) ಪಂಥದಲ್ಲಿ ಹೂಡುವ ಮಹನೀಯರು ಎರಡನೆಯ (ಟಾ) ಟಾಕೀಸ್ ನಾಗರಿಕ ಜನಗಳಲ್ಲಿ ಇರತಕ್ಕ ಪ್ರಥಮ ನೋಬಿಲು ಇಷ್ಟ ಉಳ್ಳವರು ಅತಿ ಜಾಗ್ರತೆ ಟಾಕಿಸಿಗೆ ಮನಸ್ಸು ಮಾಡಿ ಹೋಗಲಿಕೆ ಮನವರಿಕೆ ಆಗುವುದು ಅವರುಗಳ ಇರತಕ್ಕ ಧನವೇ ಆಗಲಿ, ಅಥವಾ ಸಾಲವೇ ಆಗಲಿ ತೆಗೆದುಕೊಂಡು . . .

ಈ ಪುಸ್ತುಕವನ್ನು ಓದಿದಮೇಲೆ ನಮಗನಿಸುವುದು ಇಷ್ಟೆ, ಲೇಖಕರ ಬರವಣಿಗೆಯಲ್ಲಿ ಎಲ್ಲೋ ಏನೋ ಮಹತ್ತರ ಲೋಪವಾಗಿರಬೇಕು, ಇಲ್ಲವೇ ನಮ್ಮ ವಾಚನ ಶಕ್ತಿಯು ಕುಂಠಿತವಾಗಿರಬೇಕು. ಇಷ್ಟು ಹೇಳಿ ಈ ವಿಮರ್ಶೆಯನ್ನು ಇಲ್ಲಿಯೇ ಮುಕ್ತಾಯಗೊಳಿಸುವುದು ಸೂಕ್ತವೆಂದು ತೋರುತ್ತದೆ.

**—ಕೆ. ಎಸ್. ಸೂಲಿಬೆಲೆ**

**ತಿದ್ದುಪಡಿ**

ಜನವರಿ ತಿಂಗಳ 'ಕನ್ನಡ ನುಡಿ'ಯ ಮುಖ ಪುಟದಲ್ಲಿ ಅಚ್ಚಾಗಿರುವ ಚಿತ್ರದಲ್ಲಿ, ಕೂತಿರುವವರ ಪೈಕಿ ಎಡಗಡೆಯಿಂದ ಶ್ರೀ ಡಿ. ಸಿ. ಸುಬ್ಬರಾಯಪ್ಪನವರ ಹೆಸರು ಬಿಟ್ಟು ಹೋಗಿದೆ. ಇದನ್ನು ಗಮನಿಸಬೇಕಾಗಿ ಕೋರಿದೆ.

# ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಿಗೆ ಕಾರ್ಪೊರೇಷನ್ನಿನ ಸತ್ಕಾರ

೪೪ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾದ ಶ್ರೀ ರಂ. ಶ್ರೀ. ಮುಗಳಿಯವರನ್ನು ಬೆಂಗಳೂರು ನಗರ ಕಾರ್ಪೊರೇಷನ್ ಫೆ. ೨೪ರಂದು ಸಂಜೆ ಸತ್ಕರಿಸಿ ಉತ್ತಮ ಸಂಪ್ರದಾಯವನ್ನು ರೂಢಿಸಿತು. ಇಂದಿನ ಸತ್ಕಾರಕ್ಕೆ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರೇ ಮುಂತಾಗಿ ಕನ್ನಡ ಸಾಹಿತಿಗಳನೇಕರು ಆಹ್ವಾನಿತರಾಗಿ ಆಗಮಿಸಿದ್ದರು.

ಮೇಯರ್ ಶ್ರೀ ಜಿ. ನಾರಾಯಣ ಅವರು ಶ್ರೀ ಮುಗಳಿಯವರನ್ನು ಸ್ವಾಗತಿಸುತ್ತಾ, ಅವರನ್ನು ಸತ್ಕರಿಸುವ ಒಂದು ಸದವಕಾಶ ದೊರೆತುದುದು ಕಾರ್ಪೊರೇಷನ್ನಿನ ಸೌಭಾಗ್ಯವೆಂದು ಹೇಳಿದರು.

ತಮ್ಮ ಭಾಷಣವನ್ನು ಮುಂದುವರಿಸುತ್ತ ಶ್ರೀ ನಾರಾಯಣ ಅವರು ಹೀಗೆ ನುಡಿದರು.

"ಶ್ರೀ ಮುಗಳಿಯವರ ಸಾಹಿತ್ಯ ಸೇವೆ ಬಹು ಮುಖ್ಯವಾದುದು. ಕಾವ್ಯ, ಕಾದಂಬರಿ, ನಿಬಂಧ ನಾಟಕ ಮತ್ತು ವಿಮರ್ಶೆ, ಹೀಗೆ ಅದು ತುಂಬಾ ವಿಪುಲವಾಗಿದೆ ಮತ್ತು ವ್ಯಾಪಕವಾಗಿದೆ. ಅಲ್ಲದೆ ವೈವಿಧ್ಯಮಯವಾಗಿದೆ. ಅವರು ಬರೆದಿರುವ ಕನ್ನಡ ಸಾಹಿತ್ಯ ಚರಿತ್ರೆ ಕನ್ನಡದ ಅಭ್ಯಾಸಿಗಳಿಗೆ ಒಂದು ಪ್ರಮಾಣ ಗ್ರಂಥ. ಕನ್ನಡದಲ್ಲಿ ಒಂದು ದೊಡ್ಡ ಕೊರತೆಯನ್ನು ಪೂರೈಸುವ ಆಧಾರ ಗ್ರಂಥ. ಅವರ ಈ ಕೃತಿಗೆ ೧೯೫೬ರಲ್ಲಿ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಕೂಡ ದೊರೆತಿದೆ. ಅದಕ್ಕೆ ಮೊದಲು ಈ ಗ್ರಂಥ ಅವರಿಗೆ ಪುಣೆಯ ವಿಶ್ವವಿದ್ಯಾನಿಲಯದ ಡಿ.ಲಿಟ್. ಪದವಿಯನ್ನು ದೊರಕಿಸಿ ಕೊಟ್ಟಿದೆ. ಇನ್ನು ನಿಮ್ಮಲ್ಲನೇಕರಿಗೆ ತಿಳಿದಿರುವಂತೆ ಇವರು ಬರೆದಿರುವ "ದಿ ಹೆರಿಟೇಜ್ ಆಫ್ ಕರ್ನಾಟಕ" ಎಂಬ ಗ್ರಂಥ ಕನ್ನಡ ನಾಡು ನುಡಿ ಮತ್ತು ಸಂಸ್ಕೃತಿಗಳ ಒಂದು ಭವ್ಯ ಚಿತ್ರವನ್ನೇ ನಮ್ಮ ಕಣ್ಮುಂದೆ ಇಡುತ್ತದೆ.

"ಕೇವಲ ಕಲ್ಪನೆಯ ಗಾಳಿಗೋಪುರ ಕಟ್ಟುವುದೆ ಸಾಹಿತಿಗಳ ಪಾತ್ರವಾಗಬಾರದು. ಜೀವನದ ನಿಜ ಚಿತ್ರ ಅವರ ಕಣ್ಮುಂದೆ ಇರಬೇಕು. ಜೀವನದ ನಿತ್ಯ ಸಮಸ್ಯೆಗಳ ಪೂರ್ಣ ಪ್ರಜ್ಞೆ ಬೇಕು. ಅದರ ಹಿನ್ನೆಲೆಯಲ್ಲಿ ತಮ್ಮ ಕಲ್ಪನಾ ಶಕ್ತಿಗೆ ಅವರು ಪುಟ ಕೊಡಬೇಕು. ಅದು ಬಹಳ ಮುಖ್ಯ. ಇಂದು ನಾವು ಸತ್ಕರಿಸುತ್ತಿರುವ ಸಾಹಿತಿ ಶ್ರೀ ರಂ. ಶ್ರೀ. ಮುಗಳಿಯವರು ಅಂತಹ ವರ್ಗಕ್ಕೆ ಸೇರಿದ ಸಾಹಿತಿಗಳಾಗಿದ್ದಾರೆ. "ಗಡಿ ಪ್ರದೇಶದಲ್ಲಿ ಇದ್ದು ಕನ್ನಡದ ಧ್ವಜವನ್ನು ಮಹಾರಾಷ್ಟ್ರದಲ್ಲಿ ಎತ್ತಿ ಹಿಡಿದವರಲ್ಲಿ ಇವರು ಅಗ್ರಗಣ್ಯರು" ಎಂದು ಶ್ರೀ ಮುದವೀಡು ಕೃಷ್ಣರಾಯರು ಇವರ ಬಗ್ಗೆ ಆಡಿದ ಮಾತನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು."

ತರುವಾಯ ಮೇಯರ್ ಅವರು ಕಾರ್ಪೊರೇಷನ್ ಕನ್ನಡದ ವಿಚಾರವಾಗಿ ತೋರುತ್ತಿರುವ ಶ್ರದ್ಧೆಯನ್ನು ಪ್ರಸ್ತಾಪಿಸಿ, "ಬೆಂಗಳೂರಿನಂತಹ ಕಾಸ್ಮೋಪಾಲಿಟನ್ ನಗರದಲ್ಲಿ ಇದು ಸಾಧ್ಯವಾಗುತ್ತಿದೆ, ಎಂಬುದನ್ನು ಅವರಿಗೆ ತಿಳಿಸಲು ನಾನು ಹರ್ಷಿಸುತ್ತೇನೆ. ಎರಡು ವರ್ಷಕ್ಕೂ ಹಿಂದೆಯೇ ಬೆಂಗಳೂರು ನಗರ ಕಾರ್ಪೊರೇಷನ್ ಕನ್ನಡವನ್ನು ತನ್ನ ಆಡಳಿತ ಭಾಷೆಯನ್ನಾಗಿ ಅಂಗೀಕರಿಸಿತು. ಬೆಂಗಳೂರು ಕಾಸ್ಮೊಪಾಲಿಟನ್ ನಗರವಾದರೂ ಕನ್ನಡ ನಾಡಿನ ರಾಜಧಾನಿ. ಇಲ್ಲಿ ನೆಲಸಿರುವ ಎಲ್ಲ ಜನರಲ್ಲಿ ಕನ್ನಡದ ಬಗ್ಗೆ ಸವಭಿಮಾನ ಮೂಡಬೇಕು. ಇಲ್ಲಿಯ ನಾಗರಿಕರೆಲ್ಲರೂ ಒಂದೇ ಕುಟುಂಬಕ್ಕೆ ಸೇರಿದ ಸದಸ್ಯರಂತೆ ಬಾಳಬೇಕು ಎಂಬ ಘನೋದ್ದೇಶದಿಂದ ಆ ನಿರ್ಣಯವನ್ನು ಕೈಗೊಳ್ಳಲಾಯಿತು. ಈ ನಿರ್ಣಯ ಯಶಸ್ವಿಯಾಗಿ ಕಾರ್ಯಗತವಾಗುತ್ತಿದೆ ಎಂದು ಈ ಸಂದರ್ಭದಲ್ಲಿ ತಿಳಿಸಬಯಸುತ್ತೇನೆ." ಎಂದು ಹೇಳಿದರು.

"ಕನ್ನಡ ಭಾಷೆಗೆ ಸಹಜವಾಗಿ ಕೊಡಬೇಕಾದ ಪ್ರಾಮುಖ್ಯತೆಯನ್ನು ಎಲ್ಲಾ ಕಡೆಗಳಲ್ಲೂ ಕೊಡಲಾಗುತ್ತಿದೆ. ಬೆಂಗಳೂರು ನಗರ ಕಾರ್ಪೊರೇಷನ್‌ನಲ್ಲಿ ಹತ್ತು ಕನ್ನಡ ಟೈಪ್‌ರೈಟರ್‌ಗಳಿದ್ದು, ಎಷ್ಟೋ ವ್ಯವಹಾರ ಕನ್ನಡದಲ್ಲಿಯೇ ನಡೆಯುತ್ತಿದೆ. ಈ ವಿಚಾರವನ್ನು ತಿಳಿದು ಮಾನ್ಯ ರಂ. ಶ್ರೀ. ಮುಗುಳಿಯವರು ಹರ್ಷಿಸುತ್ತಾರೆ ಎಂದೂ ತಿಳಿಯುತ್ತೇನೆ. ಅನ್ಯ ಭಾಷೆಗಳ ಬಗ್ಗೆ ನಮ್ಮ ಗೌರವವನ್ನು ಉಳಿಸಿಕೊಂಡು ಹೋಗಿ ಕನ್ನಡಕ್ಕೆ ವ್ಯವಹಾರ ಭಾಷೆಯ ಒಂದು ವಿಶಿಷ್ಟ ಸ್ಥಾನ ಕೊಡಬೇಕೆಂಬುದಷ್ಟೇ ನಮ್ಮ ಗುರಿಯಾಗಿದೆ." ಎಂದೂ ನುಡಿದರು.

### ಶ್ರೀ ಮುಗಳಿಯವರ ಉತ್ತರ

ತಮಗಿತ್ತ ಸತ್ಕಾರಕ್ಕಾಗಿ ಶ್ರೀ ಮುಗಳಿಯವರು ವಂದಿ

ಸುತ್ತ, ಕನ್ನಡ ನಾಡಿನ ರಾಜಧಾನಿಯಾದ ಬೆಂಗಳೂರು ನಗರದಲ್ಲಿ ಕನ್ನಡಕ್ಕೆ ಪ್ರಮುಖ ಹಾಗೂ ಕೇಂದ್ರ ಸ್ಥಾನ ದೊರೆತು ಅದರ ಸುತ್ತಲೂ ಇತರ ಭಾಷೆಗಳು ಬೆಳೆಯಲು ಪ್ರೋತ್ಸಾಹ ದೊರೆಯುವಂತಾಗಬೇಕೆಂದು ಹೇಳಿದರು.

ತಮ್ಮ ಭಾಷಣವನ್ನು ಮುಂದುವರಿಸುತ್ತಾ, ಕನ್ನಡ ಆಡಳಿತ ಭಾಷೆಯಾಗಿ ಮಾಡಿ ಅದನ್ನು ಜಾರಿಗೆ ಕೊಡುತ್ತಿರುವದಕ್ಕಾಗಿ ಕಾರ್ಪೋರೇಷನ್‌ನವರನ್ನು ಅವರು ಅಭಿನಂದಿಸಿದರು. ಕನ್ನಡ ನಾಡಿನ ಭವ್ಯ ಚರಿತ್ರೆಯು ಹಾಗೂ ಪರಂಪರೆ ಸದಾ ಕನ್ನಡಿಗರ ಕಣ್ಮುಂದೆ ಇರುವಂತೆ ಮಾಡಲು ಪಂಪ ರನ್ನ ಮುಂತಾದ ಕವಿಗಳ ಹಾಗೂ ಚಿತ್ತೂರ ಚನ್ನಮ್ಮ ಮುಂತಾದ ವೀರಾಗ್ರಣಿಗಳ ಹೆಸರುಗಳಿಂದ ರಸ್ತೆಗಳನ್ನು ಕರೆಯುವದು ಅಗತ್ಯವೆಂದರು.

ಕನ್ನಡ ಸಾಹಿತ್ಯದ ಅಭಿವೃದ್ಧಿಗೆ ಸಾಹಿತಿಗಳು ಇನ್ನೂ ಬಹಳ ಕಾರ್ಯ ಮಾಡಬೇಕಾಗಿದೆಯೆಂಬುದನ್ನು ಒಪ್ಪಿ ಕೊಳ್ಳುತ್ತ, ಡಾ|| ಮುಗಳಿ ಅವರು, ಕನ್ನಡಿಗರು ಒಳ್ಳೆಯ ಪುಸ್ತಕಗಳನ್ನು ಖರೀದಿಮಾಡಿ ಓದುವ ಅಭಿರುಚಿ ಬೆಳೆಸಿ ಕೊಳ್ಳದ ಹೊರತು ಸಾಹಿತ್ಯ ಅಭಿವೃದ್ಧಿಯಾಗಲಾರ ದೆಂದೂ, ತಿಳಿಸಿದರು.

"ಒಬ್ಬ ಸಾಹಿತಿಯನ್ನು ಕಾರ್ಪೋರೇಷನ್ ಗೌರವಿ ಸುತ್ತಿರುವದು ಇದೇ ಮೊದಲನೆ ಬಾರಿ ಎಂದು ಭಾವಿ ಸಿರುವೆ. ಸಾಹಿತಿಗಳನ್ನು ಕಲಾವಿದರನ್ನು ಗೌರವಿಸುವ ಈ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗ ಬೇಕು" ಎಂದು ಅವರು ಹೇಳಿದರು.

## ಪರಿಷತ್ತಿನ ಸುದ್ದಿಗಳು

### ಸಂತೋಷ ಕೂಟ

ಫೆ. ೯ರಂದು ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಭಾಷಣ ಕಲಾ ಶಿಕ್ಷಣ ಸಂಬಂಧವಾದ ಸಂತೋಷಕೂಟ ವೇರ್ಪಟ್ಟಿತ್ತು. ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಅಧ್ಯಕ್ಷತೆ ವಹಿಸಿದ್ದರು.

### ಕಾವ್ಯ ವಾಚನ

ಫೆ. ೨೨ ರಂದು ಗಮಕ ವಿದ್ಯಾ ಪ್ರವೀಣೆ ಶ್ರೀಮತಿ ಕಮಲಾ ರಾಮಕೃಷ್ಣ ಅವರು ಕುಮಾರವ್ಯಾಸ ಭಾರತ ದಿಂದ ಕಾವ್ಯ ವಾಚನವನ್ನು ಪರಿಷನ್ಮಂದಿರದಲ್ಲಿ ನಡೆ ಸಿದರು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಅಧ್ಯಕ್ಷ ರಾಗಿದ್ದರು.

### ವಿದ್ಯಾಧಿಕಾರಿಗಳ ಭೇಟಿ

ಮೈಸೂರು ಸರ್ಕಾರದ ವಿದ್ಯಾ ಇಲಾಖೆಯ ಮುಖ್ಯಾಧಿ ಕಾರಿಗಳಾದ ಶ್ರೀ ಟಿ. ವಾಸುದೇವಯ್ಯನವರು ಫೆ.೨೧ರಂದು ರಂದು ಕನ್ನಡ ಸಾಹಿತ್ಯ ಪರಿಷತ್ತಿಗೆ ಭೇಟಿ ಇತ್ತು ಪರಿಷತ್ತಿನ ಕಾರ್ಯಕಲಾಪಗಳ ಪರಿಚಯ ಮಾಡಿ ಕೊಂಡರು. ಪರಿಷತ್ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿಶಾಸ್ತ್ರಿ ಗಳವರು ಶ್ರೀ ವಾಸುದೇವಯ್ಯನವರನ್ನು ಆದರದಿಂದ ಬರಮಾಡಿಕೊಂಡು, ಪುಸ್ತಕ ಭಂಡಾರ, ಕನ್ನಡ-ಕನ್ನಡ ನಿಘಂಟು ಕಚೇರಿ, ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ ಮುಂತಾದುವುಗಳಿಗೆ ಕರೆದೊಯ್ದು, ತೋರಿಸಿದರು. ತರುವಾಯ ಸತ್ಕಾರ ಕೂಟದ ವ್ಯವಸ್ಥೆಯಾಗಿತ್ತು. ಅದರಲ್ಲಿ ಕನ್ನಡ-ಕನ್ನಡ ನಿಘಂಟು ಸಮಿತಿಯ ಅಧ್ಯಕ್ಷ ರಾದ ಶ್ರೀ ತೀ. ನಂ. ಶ್ರೀಕಂಠಯ್ಯನವರು, ಪರಿಷತ್ತಿನ ಅಧಿಕಾರಿ ವರ್ಗದವರು ಮುಂತಾಗಿ ಹಾಜರಿದ್ದರು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಶ್ರೀ ವಾಸುದೇವಯ್ಯ ನವರನ್ನು ಸ್ವಾಗತಿಸಿ, ಪರಿಷತ್ತು ಕೈಗೊಂಡಿರುವ ಉಪಯುಕ್ತ ಕಾರ್ಯಕ್ರಮಗಳಿಗೆ, ಸೂಕ್ತ ರೀತಿಯಲ್ಲಿ ಸಹಾಯವೆಸಗುವಂತೆ ಕೋರಿದರು. ಶ್ರೀ ವಾಸುದೇವಯ್ಯ ನವರು ಮಾತನಾಡಿ, ತಮ್ಮ ಕೈಲಾದ ಸಹಾಯವನ್ನು ನೀಡಲು ಸಿದ್ಧರಿರುವುದಾಗಿ ಭರವಸೆ ಇತ್ತರು.

### ಸಂತಾಪ ಸೂಚಕ ಸಭೆ

ಮಾರ್ಚಿ ೫ರಂದು ಸಂಜೆ, ದಿವಂಗತ ಆಲೂರು ವೆಂಕಟ ರಾಯರ ಸಲುವಾಗಿ ಸಂತಾಪ ಸೂಚಿಸಲು ಪರಿಷನ್ಮಂದಿರ ದಲ್ಲಿ ಸಭೆಯೊಂದು ಏರ್ಪಟ್ಟಿತ್ತು. ಪರಿಷತ್ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಈ ಸಭೆಯ ಅಧ್ಯಕ್ಷತೆ ವಹಿಸಿದ್ದರು. ಬೆಂಗಳೂರು ಆಕಾಶವಾಣಿಯ ಶ್ರೀ ಎನ್. ಕೆ. ಕುಲಕರ್ಣಿಯವರು, ಬಾಗಲಕೋಟೆಯ ಶ್ರೀ ಮಂಗಳವೇಡೆ ಶ್ರೀನಿವಾಸರಾಯರು ಮತ್ತು ಶ್ರೀ ಆದ್ಯ ರಾಮಾಚಾರ್ಯರು ಮಾತನಾಡಿ ದಿವಂಗತರ ಸಾಹಿತ್ಯ ಸೇವೆ, ದೇಶಸೇವೆ ಮುಂತಾದುವುಗಳನ್ನು ಸ್ಮರಿಸಿದರು. ಅಧ್ಯಕ್ಷರೂ ಸಹ ದಿವಂಗತರ ನಾಡಿನ ಸರ್ವತೋಮುಖ ಸೇವೆಗಾಗಿ ಕೃತಜ್ಞತೆಯನ್ನು ಸೂಚಿಸಿದರು. ಸಂತಾಪ ಸೂಚಕ ನಿರ್ಣಯವಾಯಿತು.

# ಕನ್ನಡದ ಸುದ್ದಿಗಳು

**ಬೆಂಗಳೂರು**

೧೯೬೨-೬೩ರ ದೇವರಾಜ ಬಹದ್ದೂರ್ ಸಾಹಿತ್ಯ ಬಹುಮಾನವನ್ನು ಕೆಳಗಿನ ಮೂರು ಮಂದಿಗೆ ಕೊಡಲಾಗಿದೆ.

ಪ್ರಥಮ ಬಹುಮಾನ (ರೂ. ೩೦೦) ಶ್ರೀ ಜಿ. ಬ್ರಹ್ಮಪ್ಪ ಗ್ರಂಥ ರತ್ನಾಕರ ಸತಕ್ ಸಾಹಿತ್ಯ, ದ್ವಿತೀಯ ಬಹುಮಾನ (ರೂ. ೨೦೦) ಶ್ರೀ ಆರ್. ವೈ. ಧಾರ್‌ವಾಡ್‌ಕರ್, ಗ್ರಂಥ ಆರು ಪ್ರಬಂಧಗಳು, ತೃತೀಯ ಬಹುಮಾನ (ರೂ. ೧೦೦) ಶ್ರೀ ಚಂದ್ರಶೇಖರ ಐತಾಳ್, ಗ್ರಂಥ, ಸೌಂದರ್ಯದ ಸನ್ನಿಧಿಯಲ್ಲಿ.

"ಗಮಕ ಕಲೆ ಕನ್ನಡ ನಾಡಿನದೇ ಆದ ವಿಶಿಷ್ಟ ಕಲೆಯಾಗಿದೆ." ಎಂದು ಪ್ರಸಿದ್ಧ ಭಾರತ ವಚನ ವ್ಯಾಖ್ಯಾನಕಾರರಾದ ಶ್ರೀ ಮತ್ತೂರು ಲಕ್ಷ್ಮೀಕೇಶವ ಶಾಸ್ತ್ರಿಗಳು ಮಲ್ಲೇಶ್ವರದ ಗಾಂಧೀ ಸಾಹಿತ್ಯ ಮಂದಿರದವರು ಏರ್ಪಡಿಸಿದ್ದ ಶ್ರೀಮದ್ರಾಮಾಯಣ ಗಮಕ ರೂಪಕಗಳ ಮಾಲೆಯ ಅಧ್ಯಕ್ಷತೆ ವಹಿಸಿದ್ದ ಸಂದರ್ಭದಲ್ಲಿ ತಿಳಿಸಿದರು.

ಆಡಳಿತಕ್ಕೆ ಸಂಬಂಧಪಟ್ಟ ಕನ್ನಡ ಕೋಶ ರಚನೆ ಕಾರ್ಯ ನಡೆಯುತ್ತಿದ್ದು ಅದು ಪೂರ್ತಿಯಾದನಂತರ ರಾಜ್ಯದಲ್ಲಿ ಕನ್ನಡವನ್ನು ಪೂರ್ಣ ಆಡಳಿತ ಭಾಷೆಯಾಗಿ ಜಾರಿಗೆ ತರುವ ಕಾಲವನ್ನು ನಿಗದಿಗೊಳಿಸಲಾಗುವುದು, ಹೀಗೆಂದು ವಿಧಾನ ಸಭೆಯಲ್ಲಿ ಒಳಾಡಳಿತ ಸಚಿವರು ತಿಳಿಸಿದರು.

ಅಖಿಲ ಕರ್ಣಾಟಕ ಕೀರ್ತನಕಾರರ ಸಮ್ಮೇಳನವು ರಾಜಾಜಿ ನಗರದ ದಾಸಾಶ್ರಮದ ಬಳಿ ನಿರ್ಮಿಸಲಾಗಿದ್ದ ಭವ್ಯ ಚಪ್ಪರದಲ್ಲಿ ಮಾರ್ಚಿ ೪ ರಂದು ಆರಂಭವಾಗಿ ೮ ರಂದು ಮುಕ್ತಾಯಗೊಂಡಿತು. ಶ್ರೀಮನ್ ಮಹಾರಾಜರು ಸಮ್ಮೇಳನದ ಆರಂಭೋತ್ಸವ ನಡೆಸಿ, ಪುರಂದರದಾಸರೇ ಮೊದಲಾಗಿ ದಾಸಶ್ರೇಷ್ಠರು ಕನ್ನಡ ಸಾಹಿತ್ಯಕ್ಕೂ, ಆಧ್ಯಾತ್ಮ ವಿಕಾಶಕ್ಕೂ ಗೈದ ಸೇವೆಯನ್ನು ಸ್ಮರಿಸಿ, ಕೀರ್ತನಕಾರರು ಈ ದಿಶೆಯಲ್ಲಿ ಮಹತ್ತರ ಸೇವೆ ಸಲ್ಲಿಸಲು ಶಕ್ಯವೆಂದು ನುಡಿದರು. ವಿಧಾನ ಸಭಾಧ್ಯಕ್ಷರಾದ ಶ್ರೀ ವೈಕುಂಠ ಬಾಳಿಗರು ಸ್ವಾಗತಾಧ್ಯಕ್ಷರಾಗಿದ್ದರು. ಅರ್ಥ ಸಚಿವ ಶ್ರೀ ಬಿ. ಡಿ. ಜತ್ತಿಯವರು ಅಧ್ಯಕ್ಷತೆ ವಹಿಸಿದ್ದರು. ಇಡೀ ಕರ್ಣಾಟಕದಿಂದ ೧೫೦ಕ್ಕೂ ಮೇಲ್ಪಟ್ಟು ಕೀರ್ತನಕಾರರು ಆಗಮಿಸಿದ್ದರು. ಐದು ದಿನಗಳ ಪರ್ಯಂತರವೂ ಸಂಗೀತ, ಕೀರ್ತನ, ವಿಚಾರಗೋಷ್ಠಿ, ಭಾಷಣಗಳು ಇತ್ಯಾದಿ ನಡೆದವು. ಕೊನೆಯ ದಿವಸದ ಸಮಾರಂಭದಲ್ಲಿ ಉರವಕೊಂಡದ ಜಗದ್ಗುರುಗಳು ಅಧ್ಯಕ್ಷತೆ ವಹಿಸಿದ್ದರು. ಕೀರ್ತನ ಕಲೆ ಮತ್ತು ಕೀರ್ತನಕಾರರ ಸಮಸ್ಯೆಗಳ ಬಗ್ಗೆ ಹನ್ನೆರಡು ನಿರ್ಣಯಗಳಾದುವು.

**ಕಾಸರಗೋಡು**

ಏಪ್ರಿಲ್ ತಿಂಗಳ ಮೊದಲ ವಾರದಲ್ಲಿ ಕನ್ನಡಿಗರ ರಾಜಕೀಯ ಸಮ್ಮೇಳನವು ನಡೆಯುವಂತೆ ಯೋಚಿಸಲಾಗಿದೆ. ಈ ಸಂಬಂಧವಾಗಿ ವ್ಯವಸ್ಥಾಪಕರು ಚುನಾಯಿತರಾಗಿದ್ದಾರೆ.

**ದೆಹಲಿ**

ಕರ್ಣಾಟಕ ಕುಲ ಪುರೋಹಿತ ಶ್ರೀ ಆಲೂರು ವೆಂಕಟರಾಯರು ನಿಧನರಾದ ಬಗ್ಗೆ ಲೋಕಸಭೆಯ ಉಪಾಧ್ಯಕ್ಷರಾದ ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರು, ಶ್ರೀ ಡಿ. ಪಿ. ಕರಮರಕರ್, ಶ್ರೀಮತಿ ಸರೋಜಿನಿ ಮಹಿಷಿ ಮುಂತಾದವರು ತಮ್ಮ ಸಂತಾಪವನ್ನು ವ್ಯಕ್ತಪಡಿಸಿ ಶ್ರೀ ವೆಂಕಟರಾಯರ ಅನುಪಮ ಸೇವೆಯನ್ನು ಪ್ರಶಂಸಿದ್ದಾರೆ.

**ತಿಪಟೂರು**

ಇಲ್ಲಿ ನಡೆದ ಅಖಿಲ ಕರ್ಣಾಟಕ ನಾಟಕ ಸ್ಪರ್ಧೆಯ ಉದ್ಘಾಟನೆಯನ್ನು ಉಪಮಂತ್ರಿ ಶ್ರೀ ಕೊಂಡಜ್ಜಿ ಬಸಪ್ಪನವರು ಫೆ ೨೭ ರಂದು ನೆರವೇರಿಸುತ್ತಾ, 'ಲಲಿತಕಲೆ ಉತ್ತಮ ಮನರಂಜನೆಯನ್ನು ಒದಗಿಸುತ್ತದಲ್ಲದೆ ಜನ ಜಾಗೃತಗೊಳಿಸುತ್ತದೆ." ಎಂದು ತಿಳಿಸಿದರು. ವಿಧಾನ ಸಭಾಸದಸ್ಯ ಶ್ರೀ ರೇವಣ ಸಿದ್ಧಪ್ಪನವರು ಅಧ್ಯಕ್ಷತೆ ವಹಿಸಿದ್ದರು.

**ದಾವಣಗೆರೆ**

ಇಲ್ಲಿನ ಗಮಕ ಪ್ರವೇಶ ತರಗತಿಯ ಅಧ್ಯಾಪಕರಾದ ಶ್ರೀ ಎನ್. ಅಶ್ವತ್ಥ ನಾರಾಯಣ ಅವರು ಫೆ ೯ ರಿಂದ ೧೨ರ ತನಕ ಪೂನಾ ನಗರದಲ್ಲಿ ಕನ್ನಡ ಅಭಿಮಾನಿಗಳ ಸಮ್ಮುಖದಲ್ಲಿ ಕಾವ್ಯ ವಾಚನ ನಡೆಸಿದರು.

**ಕೋಲಾರ**

ಇಲ್ಲಿನಪ್ರಥಮ ದರ್ಜೆ ಕಾಲೇಜು ಸಂಘದಾಶ್ರಯದಲ್ಲಿ 'ಕವಿವಂದನೆ' ಕಾರ್ಯಕ್ರಮವು ಮಾರ್ಚಿ ೯ ರಂದು ಏರ್ಪಟ್ಟಿತ್ತು. ಸಾಹಿತಿಗಳಾದ ಶ್ರೀ ವಿ. ಸೀತಾರಾಮಯ್ಯನವರು ಮುಖ್ಯ ಅತಿಥಿಗಳಾಗಿದ್ದರು. ಪ್ರೊ. ಕೆ. ರಾಮಕೃಷ್ಣ ಉಡುಪ ಅವರು ಅಧ್ಯಕ್ಷತೆ ವಹಿಸಿದ್ದರು.

# ಸಂಪಾದಕೀಯ

## ಸಾಹಿತ್ಯ ಅಕಾಡೆಮಿಯ ಗುರಿ

ಕೇಂದ್ರ ಸಾಹಿತ್ಯ ಅಕಾಡೆಮಿ ನವದೆಹಲಿಯಲ್ಲಿ ಕುಳಿತು ಭಾರತದ ಹದಿನೈದು ಭಾಷೆಗಳ ಉದ್ಧಾರವನ್ನು ಬಯಸುತ್ತ, ಉತ್ತಮ ಗ್ರಂಥಗಳಿಗೆ ಬಹುಮಾನ ನೀಡುವುದು ಇತ್ತೀಚೆಗೆ ವಾಡಿಕೆಯಾಗಿದೆಯಷ್ಟೆ. ಉತ್ತಮ ಲೇಖಕರಿಗೆ ಐದು ಸಾವಿರ ರೂಪಾಯಿಗಳ ನಗದು ಹಣ ಮತ್ತು ತಾಮ್ರದ ತಗಡಿನಲ್ಲಿ ಪ್ರಶಸ್ತಿ ವಿವರಗಳನ್ನು ಕೆತ್ತಿದ ಚಿತ್ರದ ಕೆಲಸದಿಂದ ಮಾಡಿದ ಫಲಕ–ಇದು ಸಲ್ಲತಕ್ಕ ಸಂಭಾವನೆ. ಈ ಸಂಭಾವನೆ ೧೯೬೩ರಲ್ಲಿ ಪ್ರಕಟವಾದ ಕನ್ನಡ ಗ್ರಂಥಗಳಿಗೆ ದೊರೆತಿಲ್ಲವೆಂದರೆ ಅದರ ಪ್ರತಿಕ್ರಿಯೆ ಏನೆಂಬುದನ್ನು ನಾವು ಗಮನಿಸಬೇಕು. ಕನ್ನಡ ಲೇಖಕರ ಕಾವ್ಯಶಕ್ತಿ ಕುಗ್ಗಿತೆಂದು ಹೇಳಬೇಕೆ? ಅಥವಾ ಕೇಂದ್ರ ಸಾಹಿತ್ಯ ಅಕಾಡೆಮಿ ಆಡಳಿತಗಾರರಿಗೆ ಕನ್ನಡದ ಉತ್ತಮ ಲೇಖಕರು ಕಾಣಿಸಲಿಲ್ಲವೆನ್ನಬೇಕೆ?—ಎರಡೂ ಇರಬಹುದು. ಆದರೆ, "ಉತ್ತಮ" ಎಂಬ ಶಬ್ದ ವ್ಯಾವಹಾರಿಕ. ಇದ್ದುದರಲ್ಲಿ "ಉತ್ತಮ" ದೊರೆಯುವುದರಲ್ಲಿ ಸಂದೇಹವೇ ಇಲ್ಲ. ಎಷ್ಟು "ಉತ್ತಮ" ಯಾವುದು "ಉತ್ತಮ" ಎಂಬುದನ್ನು ಕೇಂದ್ರ ಸಾಹಿತ್ಯ ಅಕಾಡೆಮಿಯವರು ಮುದ್ರೆ ಒತ್ತಿ ಹೇಳಲು ಸಾಧ್ಯವಾಗಲಾರದು. ಭಾಷೆಗಳ ಉದ್ಧಾರವನ್ನು ಬಯಸಿ ನಿಂತವರು, ಏನೇ ಆಗಲಿ ಒಂದೊಂದು ಭಾಷೆಗೂ ಪ್ರತಿಸಲವೂ ಸಂಭಾವನೆ ನೀಡುವುದರಲ್ಲಿ ಔಚಿತ್ಯವಿದೆ, ಅಗತ್ಯವಿದೆ. ಇದರಿಂದ ಭಾವೈಕ್ಯತೆಗೆ ಅವಕಾಶವಿದೆ. ಇಲ್ಲವಾದರೆ, ಇದರ ಪರಿಣಾಮ ಭಾಷಾದ್ವೇಷ. ಕೇಂದ್ರ ಸಾಹಿತ್ಯ ಅಕಾಡೆಮಿಯವರು ಭಾಷಾದ್ವೇಷಕ್ಕೆ ತಳಹದಿ ಹಾಕದಿರಲೆಂದು ನಾವು ಬಯಸುತ್ತೇವೆ. ಪ್ರಶಸ್ತಿ ಪಡೆದ ಹನ್ನೊಂದು ಮಂದಿ ಲೇಖಕರಲ್ಲಿ ಕನ್ನಡಿಗರಿಬ್ಬರಿದ್ದಾರೆ. ಆದರೆ, ಅವರಿಗೆ ದೊರೆತ ಪ್ರಶಸ್ತಿ ಅವರು ಬರೆದಿರುವ ಇಂಗ್ಲೀಷ್ ಕಾದಂಬರಿಗಳಿಗೆ! ಇದಕ್ಕೂ ಸಂತೋಷ ಪಡಬೇಕಾದ್ದೆ! ಈ ಮಹನೀಯರು ತಮ್ಮ ಪ್ರೌಢಿಮೆಯನ್ನು ಕನ್ನಡಕ್ಕೂ ಹಂಚಲೆಂದು ನಾವು ಹಾರೈಸುತ್ತೇವೆ.

## ರಾಜ್ಯಪಾಲರ ಕನ್ನಡ ಭಾಷಣ

ಕಳೆದ ತಿಂಗಳು ೨೬ ರಂದು ನೆರೆದ ವಿಧಾನ ಮಂಡಳದ ಜಂಟಿ ಅಧಿವೇಶನದಲ್ಲಿ ರಾಜ್ಯಪಾಲರಾದ ಶ್ರೀ ಜಯಚಾಮರಾಜ ಒಡೆಯರ್ ಅವರು ಮೈಸೂರಿನ ಚರಿತ್ರೆಯಲ್ಲಿಯೇ ಪ್ರಥಮವಾಗಿ ತಮ್ಮ ಭಾಷಣವನ್ನು ಕನ್ನಡದಲ್ಲಿ, ತಾಯಿನುಡಿಯಲ್ಲಿ, ಮಾತೃಭಾಷೆಯಲ್ಲಿ ನೀಡಿದುದು ಕನ್ನಡ ಲೋಕದಲ್ಲಿ ಮಹದಾನಂದವನ್ನುಂಟು ಮಾಡಿದೆ. ಈ ಮಹಾನುಭಾವರು ಹಾಕಿಕೊಟ್ಟಿರುವ ಮಾರ್ಗವನ್ನು ಸಮಸ್ತರೂ ಅನುಸರಿಸಿ, ಕನ್ನಡ ನಾಡಿನಲ್ಲಿ ನಡೆಯುವ ಉನ್ನತ ಸಮಾರಂಭಗಳಲ್ಲಿ ಕನ್ನಡಿಗರು ಕನ್ನಡದಲ್ಲಿಯೇ ಭಾಷಣ ಮಾಡಲು ಪ್ರತಿಜ್ಞೆ ಮಾಡಬೇಕು. ಭಾಷಣ ಮಾಡುವವರು ಕನ್ನಡಿಗರಲ್ಲದಿದ್ದರೆ ಹೋಗಲಿ, ಕನ್ನಡಿಗರಾದರೋ ಕನ್ನಡವನ್ನು ಬಿಟ್ಟು ಇಂಗ್ಲೀಷಿನಲ್ಲಿ ಭಾಷಣ ಮಾಡುವುದು ಭಾಷಾದ್ರೋಹವೆಂದೇ ಪರಿಗಣಿಸಬೇಕು. ೨೪–೨–೬೪ರ ಸಂಜೆ ಬೆಂಗಳೂರು ಪೌರಸಭೆಯವರು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಶ್ರೀ ಆರ್. ಎಸ್. ಮುಗಳಿಯವರಿಗೆ ಇತ್ತ ಸತ್ಕಾರ ಕೂಟದಲ್ಲಿ ಶ್ರೀ ಮುಗಳಿಯವರು ಬೆಂಗಳೂರಿನಲ್ಲಿ ಕನ್ನಡಕ್ಕೆ ಪ್ರಾಧಾನ್ಯತೆ ಇರಬೇಕೆಂದು ಒತ್ತಿ ಹೇಳಿದ್ದಾರೆ. ಕನ್ನಡಿಗರಾದ ನಾವು ಕನ್ನಡವನ್ನು ಮರೆತಿದ್ದೇವೆಂಬುದಕ್ಕೆ ಇದು ಸಾಕ್ಷಿ. ಬೆಂಗಳೂರು ನಗರವೆಂಬ ಸುಂದರ ಸ್ತ್ರೀಯ ಹಣೆಯ ಕುಂಕುಮ ಕನ್ನಡವೆಂದೂ, ಇತರ ಭಾಷೆಗಳು ಕಣ್ಣಿನ ಕಾಡಿಗೆ, ಕೆನ್ನೆಯ ಅರಿಸಿನವೆಂದೂ ಶ್ರೀ ಮುಗಳಿಯವರು ತಿಳಿಸಿ, ಇತರ ಭಾಷೆಗಳಿಗೆ ಅಡ್ಡಿಯಿಲ್ಲದಿದ್ದರೂ ಮುಖ್ಯ ಭಾಷೆ ಕನ್ನಡವಾಗಿರಬೇಕೆಂದೂ, ಇತರ ಭಾಷೆಗಳನ್ನಾಡುವವರ ಮೇಲೆ ಕನ್ನಡಿಗರಿಗೆ ಖಂಡಿತ ವೈಷಮ್ಯವಿಲ್ಲವೆಂದೂ ನುಡಿದಿದ್ದಾರೆ. ಈ ಹೋಲಿಕೆ ಕನ್ನಡ ನಾಡಿನ ಸಮಸ್ತ ಕಾರ್ಯಕ್ಷೇತ್ರಗಳಿಗೂ ಅನ್ವಯಿಸಬೇಕು. ಕನ್ನಡಿಗರೆಲ್ಲರೂ ಇದನ್ನು ಪರಿಪಾಲಿಸಬೇಕು.

## ಶ್ರೀ ಬಸವೇಶ್ವರರ ಪುಣ್ಯಾರಾಧನೆ

ಶ್ರೀ ಬಸವೇಶ್ವರರು ಕನ್ನಡ ನಾಡಿನಲ್ಲಿ ಬಾಳಿ, ಬೆಳಗಿ ೧೯೬೪ನೆಯ ಇಸವಿಗೆ ೮೦೦ ವರ್ಷಗಳು ತುಂಬುತ್ತವೆ. ಶ್ರೀ ಬಸವೇಶ್ವರರು ಕರ್ನಾಟಕದ ಯುಗ ಪ್ರವರ್ತಕರಾಗಿ, ಪ್ರಖ್ಯಾತ ಕನ್ನಡ ಕವಿಗಳಾಗಿ, ಕಾಲಚೂರ್ಯರ ಮಹಾಮಂತ್ರಿಗಳಾಗಿ, ಅನುಭವಮಂಟಪದ ಸಂಸ್ಥಾಪಕರಾಗಿ ಮೆರೆದ ಮಹಾತ್ಮರು. ಕನ್ನಡ ನಾಡಿನ ಚರಿತ್ರೆಯಲ್ಲಿ ಇವರ ಸ್ಥಾನವು ಮಹೋನ್ನತವಾದುದು.

ಕ್ರಿ. ಶ. ೧೧೩೧ರಲ್ಲಿ ಬಿಜಾಪುರ ಜಿಲ್ಲೆ ಬಾಗೇವಾಡಿಯಲ್ಲಿ ಜನಿಸಿ, ಹರಿಜನೋದ್ಧಾರ, ಕನ್ನಡದ ನಿಷ್ಠೆ, ಸಮತಾ

ವಾದ ಮೊದಲಾದ ಉದಾತ್ತ ತತ್ವಗಳನ್ನು ಪ್ರತಿಪಾದಿಸಿ ರಾಷ್ಟ್ರೀಯ ಮಹಾಪುರುಷರಾದ ಇವರು ಬುದ್ಧದೇವ, ಮಹಾತ್ಮಾ ಗಾಂಧಿಯವರಿಗೆ ಸಮಸಾಟಿಯೆಂದರೆ ಅದು ಅತ್ಯುಕ್ತಿಯಾಗಲಾರದು. ಇಂತಹ ಮಹನೀಯರ ೧೦೦ ವರ್ಷಗಳ ಜಯಂತಿ ಮಹೋತ್ಸವವನ್ನು ಸಮಗ್ರ ಕರ್ನಾಟಕದಲ್ಲಿ ನಡೆಸಲು ಕನ್ನಡಿಗರು ಕಾರ್ಯೋನ್ಮುಖ ರಾಗಿದ್ದಾರೆ. ಇವರ ಮಹತ್ಕಾರ್ಯದಿಂದ ಶಾಶ್ವತವಾದ ಪುಣ್ಯ ಪುರುಷಾರ್ಥಗಳು ನೆರವೇರಲೆಂದು ಹಾರೈಸುತ್ತೇವೆ.

**ಗೋವಾ**

ಗೋವಾ ಭೂಭಾಗವು ಪೋರ್ಚುಗೀಸರ ಕೈಬಿಟ್ಟು ಇಂದು ಕೇಂದ್ರ ಸರ್ಕಾರದ ಆಡಳಿತದಲ್ಲಿರುವುದು ಸರಿಯಷ್ಟೆ. ಈ ಭೂಭಾಗವು ಮೈಸೂರು ರಾಜ್ಯಕ್ಕೆ ಸೇರಬೇಕೆಂದು ಕನ್ನಡಿಗರೂ, ಮಹಾರಾಷ್ಟ್ರಕ್ಕೆ ಸೇರಬೇಕೆಂದು ಮರಾಠಿಯವರೂ ತಮ್ಮ ತಮ್ಮ ಹಕ್ಕು ಬಾಧ್ಯತೆಗಳನ್ನು ಸ್ಥಾಪಿಸ ತೊಡಗಿದ್ದಾರೆ. ಈಚೆಗೆ ವಿಧಾನ ಸಭೆಯಲ್ಲಿ ಬೆಳಗಾಂವಿ ಜಿಲ್ಲೆಯ ಸದಸ್ಯರೊಬ್ಬರು ಬಿಸಿ ಬಿಸಿ ಮಾತುಗಳನ್ನಾಡಿ ತಾವು ಮೈಸೂರನ್ನು ಬಿಟ್ಟು ಹೋಗುವಾಗ ತಮಗೆ ಸೇರಬೇಕಾದುದನ್ನು ತೆಗೆದುಕೊಂಡೇ ಹೋಗುತ್ತೇವೆಂದು ಸಾರಿರುವುದು ಮಹಾರಾಷ್ಟ್ರ ರಾಜ್ಯಕ್ಕೂ, ಮೈಸೂರು ರಾಜ್ಯಕ್ಕೂ ಇರಬೇಕಾದ ನಿರ್ಮಲ ವಾತಾವರಣವನ್ನು ಕೆಡಿಸಲು ಅವಕಾಶ ಕೊಡುತ್ತದೆ. ಇನ್ನು ಮುಂದೆ ಮಹಾರಾಷ್ಟ್ರ ಮಹನೀಯರು ಇಂತಹ ವಾದ ಸರಣಿಗೆ ಅವಕಾಶ ನೀಡಲಾಗದು. ಗೋವೆಯ ಭವಿಷ್ಯಕ್ಕೂ ಮೈಸೂರಿನ ಭವಿಷ್ಯಕ್ಕೂ ಹೆಚ್ಚಿನ ಬಾಂಧವ್ಯವಿದೆ. ಸ್ವಾದಿಯ ಕನ್ನಡ ರಾಜರು ಪೋರ್ಚುಗೀಸರಿಗೆ ಗೋವೆಯನ್ನು ಮಾರಿದುದಕ್ಕೆ ಪಂಜಿಂ ಮತ್ತು ಲಿಸ್ಬನ್‌ಗಳಲ್ಲಿರುವ ಸರ್ಕಾರದ ಭವನಗಳಲ್ಲಿ ಲಿಖಿತರೂಪವಾದ ನಿದರ್ಶನಗಳಿವೆ. ಅಲ್ಲದೆ, ಗೋವೆಯ ಬಹುಭಾಗ ಮೈಸೂರು ರಾಜ್ಯದ ಆಯಕಟ್ಟಿನಲ್ಲಿದೆ. ಈ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಮಹಾರಾಷ್ಟ್ರ ರಾಜ್ಯವಾಗಲಿ, ಮೈಸೂರು ರಾಜ್ಯವಾಗಲಿ ಪರಸ್ಪರ ತಿಕ್ಕಾಟಕ್ಕೆ ಅವಕಾಶ ಕೊಡದಂತೆ ಕೇಂದ್ರ ಸರ್ಕಾರದ ತೀರ್ಮಾನವನ್ನು ಅವಲಂಬಿಸುವುದು ಶ್ರೇಯಸ್ಕರವಾಗಿದೆ.

**ಕನ್ನಡಿಗರ ಅಗಾಧ ಶೋಕ**

ಕನ್ನಡ ಕುಲ ಪುರೋಹಿತ ಶ್ರೀ ಆಲೂರು ವೆಂಕಟರಾಯರ ನಿಧನ ವಾರ್ತೆ ಕನ್ನಡಿಗರ ಪಾಲಿಗೆ ಅಗಾಧ ಶೋಕವನ್ನು ತುಂಬಿದೆ.

ಶ್ರೀ ಆಲೂರು ವೆಂಕಟರಾಯರು ತಮ್ಮ ೮೪ ವರ್ಷಗಳ ತುಂಬು ಜೀವನದಲ್ಲಿ ಅಖಂಡ ಕರ್ನಾಟಕವನ್ನು ರೂಪಿಸುವುದರಲ್ಲಿ ಅಪಾರ ಸೇವೆ ಸಲ್ಲಿಸಿದರು. "ಕನ್ನಡಿಗರ ಗತ ವೈಭವ" ಎಂಬ ಇವರ ಗ್ರಂಥವು ಕನ್ನಡಿಗರ ಕೆಚ್ಚೆದೆಯನ್ನು ಕೆರಳಿಸಿತು. ಬಿಜಾಪುರ ಜಿಲ್ಲೆಯಲ್ಲಿ ೧೮೮೦ರಲ್ಲಿ ಜನಿಸಿದ ಶ್ರೀ ಆಲೂರು ವೆಂಕಟರಾಯರು ವಕೀಲ ವೃತ್ತಿಗಾಗಿ ಶಿಕ್ಷಣ ಪಡೆದು, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದರು. ಧಾರವಾಡದಲ್ಲಿ ರಾಷ್ಟ್ರೀಯ ಶಾಲೆಯೊಂದನ್ನು ಸ್ಥಾಪಿಸಿದರು. ಪತ್ರಿಕೋದ್ಯಮಿಗಳಾದರು. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. ಅಖಂಡ ಕರ್ನಾಟಕದ ಸಾಧನೆಯನ್ನು ಗುರಿಯಲ್ಲಿಟ್ಟು ತಮ್ಮ ಜೀವಮಾನದಲ್ಲೇ ಗುರಿ ಮುಟ್ಟಿದ ಮಹನೀಯರು ಇವರು.

"ವೆಂಕ್ಟ" ಎಂಬ ಲೇಖನನಾಮದಿಂದ ಕನ್ನಡ ಪತ್ರಿಕಾ ಪ್ರಪಂಚದಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಸ್ಥಾಪಿಸಿದ ಶ್ರೀ ಎಸ್. ವೆಂಕಟರಾಮಯ್ಯನವರು ಕನ್ನಡಿಗರನ್ನು ಅಗಲಿರುವುದು ಕನ್ನಡ ಪತ್ರಿಕಾ ಪ್ರಪಂಚಕ್ಕೆ ಅಪಾರ ನಷ್ಟವನ್ನುಂಟುಮಾಡಿದೆ. ಪತ್ರಿಕೋದ್ಯಮದಲ್ಲಿ ತೊಳಲಿ ಬಳಲಿದ ಮಹನೀಯರಿವರು.

"ಕನ್ನಡ ಥಿಯೇಟರ್ಸ್" ಮಾಲೀಕರಾಗಿ ಹಲವು ಕಾಲ ಶ್ರೀ ಗುಬ್ಬಿ ಚನ್ನಬಸವೇಶ್ವರ ನಾಟಕ ಕಂಪೆನಿಯ ಮ್ಯಾನೇಜರಾಗಿ, ಕನ್ನಡ ನಾಟಕ ಕ್ಷೇತ್ರದಲ್ಲಿ ಧೈರ್ಯದಿಂದ ನಿಂತು, ಕನ್ನಡ ಕಲಾವಿದರಿಗೆ ಪ್ರೋತ್ಸಾಹ ನೀಡಿದ ಮಹನೀಯರು ಶ್ರೀ ಸಿ. ಮಹದೇವಸ್ವಾಮಿಯವರು. ಕನ್ನಡ ನಾಟಕ ರಂಗವು ದಿನೇ ದಿನೇ ಕ್ಷೀಣ ದೆಸೆಗೆ ಬರುತ್ತಿರುವ ಈ ಕಾಲದಲ್ಲಿ ಶ್ರೀ ಮಹದೇವಸ್ವಾಮಿಯವರಂತಹ ಮಹನೀಯರು ನಾಟಕರಂಗವು ಅಚ್ಚಳಿಯದಂತೆ ಕಾಪಾಡಿದರು. ಇವರು ತಮ್ಮ ೫೩ನೆಯ ವಯಸ್ಸಿನಲ್ಲಿಯೇ ನಮ್ಮನ್ನಗಲುವರೆಂದು ಯಾರೂ ನಂಬಿರಲಿಲ್ಲ. ಆದರೆ, ವಿಧಿ ಸಂಕಲ್ಪಕ್ಕೆ ಅಡ್ಡಿಯೆಲ್ಲಿಯದು! ಶ್ರೀ ಮಹದೇವಸ್ವಾಮಿಯವರು ಕಟ್ಟಿರುವ "ಕನ್ನಡ ಥಿಯೇಟರ್ಸ್" ರಂಗಮಂಟಪವನ್ನು ಉಳಿಸಿಕೊಂಡು ಬರುವುದು ಕನ್ನಡಿಗರ ಕರ್ತವ್ಯವಾಗಿದೆ.

ಈ ಮೂವರು ದಿವಂಗತರುಗಳ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನು ಕೊಡಲಿ. ಅವರ ಕುಟುಂಬ ವರ್ಗದವರಿಗೆ ಈ ಶೋಕವನ್ನು ಸಹಿಸುವ ಶಕ್ತಿಯನ್ನು ದಯಪಾಲಿಸಲಿ.

ಸಂಪಾದಕರು: ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು–೧೮.

# ಸಾದರ ಸ್ವೀಕಾರ

**ಕಪಾಲ ಕುಂಡಲಾ** (ಕಾದಂಬರಿ): ಲೇಖಕರು: ಬಿ. ವೆಂಕಟಾಚಾರ್ಯ; ಪ್ರಕಾಶಕರು: ಸಾಹಿತ್ಯ ಮಂದಿರ, ಹನುಮಂತ ನಗರ, ಬೆಂಗಳೂರು-೧೯; ಸೈಜು ೧/೮ ಕ್ರೌನ್; ಪುಟ ೧೩೧; ಬೆಲೆ ರೂ. ೨.

**ಇವನ್ಯಾರು?** (ಕಾದಂಬರಿ): ಲೇಖಕರು: ಶಾಂತ್-ಕಾಂತ್; ಪ್ರಕಾಶಕರು: ಶಾಂತ್-ಕಾಂತ್; ಸೈಜು ೧/೮ ಕ್ರೌನ್; ಪುಟ ೧೧೦; ಬೆಲೆ ೫೦ ನ.ಪೈ.

**ಕಲಂಕಿನಿಯ ಕೊಲೆ** (ಕಾದಂಬರಿ): ಲೇಖಕರು: ಶಾಂತ್-ಕಾಂತ್; ಪ್ರಕಾಶಕರು: ಶಾಂತ್-ಕಾಂತ್; ಸೈಜು ೧/೮ ಕ್ರೌನ್; ಪುಟ ೯೮; ಬೆಲೆ ರೂ. ೧.

**ಉದಯವಂದನೆ-ಆ ಕವಿತೆ**: ಲೇಖಕರು: ವಿ. ಹರಿಕೃಷ್ಣ ಲಕ್ಷ್ಮಣ ಆಳವಂಡಿ ಪ್ರಕಾಶಕರು: ಕಾವ್ಯಶ್ರೀ ಪ್ರಕಾಶನ, ವಿಶ್ವೇಶ್ವರಪುರ ಬೆಂಗಳೂರು-೪; ಸೈಜು ೧/೮ ಕ್ರೌನ್; ಪುಟ ೩೯.

**ಬಿಸಿಲ ಹೂ-ಆ ಕವಿತೆ**: ಲೇಖಕರು: ಸೋಮಶೇಖರ ಇಂಮ್ರಾಪುರ; ಪ್ರಕಾಶಕರು: ಸೋಮಶೇಖರ ಇಂಮ್ರಾಪುರ, ಸ್ನೇಹಕುಂದ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೬೨; ಬೆಲೆ ರೂ. ೧.

**ಪುರಂದರೋಪನಿಷತ್ ಭಾಗ ೩** (ದಾಸ ಸಾಹಿತ್ಯ): ಲೇಖಕರು: ಭದ್ರಗಿರಿ ಕೇಶವದಾಸರು; ಪ್ರಕಾಶಕರು: ದಾಸಾಶ್ರಮ, ಪುರಂದರಪುರ ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೧೦; ಸೈಜು ೧/೮ ಕ್ರೌನ್: ಪುಟ: ೧೭೮; ಬೆಲೆ ರೂ. ೨.

**ಜ್ಞಾನದೀಪ ಅಥವಾ ಮುಕ್ತಿ ಶಾಸ್ತ್ರವೆಂಬ ವೇದಾಂತ ಗ್ರಂಥ**: ಲೇಖಕರು: ಬಿ. ಗಂಗಾಧರ ಶಾಸ್ತ್ರೀ; ಪ್ರಕಾಶಕರು: ಬಿ. ಗಂಗಾಧರ ಶಾಸ್ತ್ರೀ, ಅಸ್ಟ್ರಾಲಜರ್; ವಿದ್ಯಾರಣ್ಯಪುರಂ, ಮೈಸೂರು-೪; ಸೈಜು ೧/೮ ಕ್ರೌನ್; ಪುಟ ೬೧; ಬೆಲೆ: ರೂ. ೧.

**ವಿಕ್ರಮ ವಿಜಯ ಅಥವಾ ಶನಿಪ್ರಭಾವವೆಂಬ ಕನ್ನಡ ಕಾವ್ಯ**; ಲೇಖಕರು: ಬಿ. ಗಂಗಾಧರ ಶಾಸ್ತ್ರೀ; ಪ್ರಕಾಶಕರು: ಕೆ. ಎಚ್. ಕಾಳೇಗೌಡ, ಜಮೀನುದಾರ್, ಕಡಹೆಮ್ಮಿಗೆ, ಕಿಕ್ಕೇರಿ; ಸೈಜು ೧/೮ ಕ್ರೌನ್; ಪುಟ: ೩೮; ಬೆಲೆ ೬೦ ನ.ಪೈ.

**ರಾಮಧ್ಯಾನ, ಗೀತಾ ಸ್ತೋತ್ರಗಳು, ಶಿವಸ್ತೋತ್ರ, ನವಗ್ರಹ ಸ್ತೋತ್ರಗಳು**; ಲೇಖಕರು: ಬಿ. ಗಂಗಾಧರ ಶಾಸ್ತ್ರೀ ಸೈಜು ೧/೧೬ ಡೆಮ್ಮಿ; ಪುಟ ೧೨; ಬೆಲೆ ೧೨ ನ.ಪೈ.

**ಭಾವವಾಣಿ**; ಲೇಖಕರು: ಸಿ. ಕೆ. ತುಕಾರಾಮ; ಪ್ರಕಾಶಕರು: ವಿದ್ಯಾನಿಧಿ ಪ್ರಕಾಶನ ಮಂದಿರ, ಜಾಲೀಹಾಲ ತಾಲ್ಲೂಕು ಬಾದಾಮಿ, ಬಿಜಾಪುರ ಜಿಲ್ಲೆ; ಸೈಜು ೧/೮ ಕ್ರೌನ್; ಪುಟ ೮೦; ಬೆಲೆ ರೂ. ೧-೨೫ ನ.ಪೈ.

**ರಣಕಹಳೆ**: ಸಂಪಾದಕರು: ಕೆ. ಭೀಮರಾವ್, ರಾಷ್ಟ್ರಕೂಟ ಪ್ರಕಾಶನ, ಚಾಮರಾಜಪೇಟೆ, ಬೆಂಗಳೂರು-೧೮; ಸೈಜು ೧/೮ ಕ್ರೌನ್; ಪುಟ ೪೮; ಬೆಲೆ ೭೫ ನ.ಪೈ.

**ಬಂಬೈ ಮಿಠಾಯಿ**: ಲೇಖಕರು: ಪರುಶುರಾಮ ಚಿತ್ರಗಾರರು; ಪ್ರಕಾಶಕರು: ಹರಿಹರ ಭಾರತೀ ಸಾಹಿತ್ಯ ಭಂಡಾರ, ಬಿಜಾಪುರ; ಸೈಜು ೧/೮ ಕ್ರೌನ್; ಪುಟ ೨೪; ಬೆಲೆ ೫೦ ನ.ಪೈ.

**ಶ್ರೀ ಪುರಂದರದಾಸರು**: ಲೇಖಕರು: ಶ್ರೀ ಹಂಡೆ ಗುರು ವೇದವ್ಯಾಸದಾಸರು; ಪ್ರಕಾಶಕರು: ಕೆ. ಮಧುಸೂದನರಾವ್, ಆರ್ಕಾಟ್ ಶ್ರೀನಿವಾಸಚಾರ್ ರಸ್ತೆ, ಬೆಂಗಳೂರು-೨; ಸೈಜು ೧/೮ ಕ್ರೌನ್; ಪುಟ ೧೨೦; ಬೆಲೆ ರೂ. ೧-೫೦ ನ.ಪೈ.

**ಮೂವತ್ತೈದು ವರುಷ**: ಲೇಖಕರು: ಶ್ರೀ ಸಿಂಪಿ ಲಿಂಗಣ್ಣ; ಪ್ರಕಾಶಕರು: ಶ್ರೀ ಅರವಿಂದ ಗ್ರಂಥಾಲಯ, ಚಡಚಣ; ಸೈಜು ೧/೮ ಕ್ರೌನ್; ಪುಟ ೧೩೭; ಬೆಲೆ ರೂ. ೧-೭೫ ನ.ಪೈ.

**ಇರುವೆಯ ಕತೆ**: ಲೇಖಕರು: ಪ. ವಿ. ಚಂದ್ರಶೇಖರ, ಪ್ರಕಾಶಕರು: ಸಾಹಿತ್ಯ ವಿಹಾರ, ಮೈಸೂರು; ಸೈಜು ೧/೮ ಕ್ರೌನ್; ಪುಟ: ೯೪; ಬೆಲೆ: ಸಾದಾ ಪ್ರತಿ: ರೂ. ೧-೫೦ ನ.ಪೈ. ಕ್ಯಾಲಿಕೋ ಪ್ರತಿ: ರೂ. ೨-೫೦ ನ.ಪೈ.

**ಕೀಟಗಳ ಒಡನಾಡಿ**: ಲೇಖಕರು: ಬಿ. ಎಸ್. ರುಕ್ಕಮ್ಮ ಎಂ. ಎ. ಪ್ರಕಾಶಕರು: ತ. ವೆಂ. ಸ್ಮಾರಕ ಗ್ರಂಥಮಾಲೆ; ಸೈಜು ೧/೮ ಕ್ರೌನ್; ಪುಟ: ೯೧; ಬೆಲೆ ರೂ. ೧-೨೫ ನ.ಪೈ.

**ಕಾರುಣ್ಯ ಕಿರಣ**: ಲೇಖಕರು: ಶ್ರೀ ಜ. ಚ. ನಿ. ಪ್ರಕಾಶಕರು: ಸಮಾಜ ರೋಡ್ ಬೆಂಗಳೂರು-೪; ಸೈಜು ೧/೮ ಕ್ರೌನ್; ಪುಟ: ೧೫೦; ಬೆಲೆ: ರೂ. ೨-೫೦.

**ದೇವದೃಷ್ಟಿ**: ಲೇಖಕರು ಶ್ರೀ ಜ. ಚ. ನಿ., ಪ್ರಕಾಶಕರು: ಶ್ರೀ ಶೈಲ ಜಗದ್ಗುರು ನಿಡುಮಾಮಿಡಿ, ಪುಸ್ತಕ ಭಂಡಾರ, ಸಮಾಜದ ರಸ್ತೆ, ಬೆಂಗಳೂರು-೪; ಸೈಜು ೧/೮ ಕ್ರೌನ್; ಪುಟ: ೧೮೮; ಬೆಲೆ ರೂ. ೨-೫೦ ನ.ಪೈ.

**ಜೋನಿ ಮತ್ತು ಇತರ ಕಥೆಗಳು**: ಅನುವಾದ: ಎಂ. ಎಸ್. ಅನಂತರಾವ್; ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯವರ ಸಹಕಾರದಿಂದೆ, ಮದರಾಸು; ಸೈಜು ೧/೮ ಕ್ರೌನ್; ಪುಟ: ೧೨೨: ಬೆಲೆ ರೂ. ೧-೨೦ ನ.ಪೈ.

---

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತದೆ.

*Statement about ownership and other particulars about*

# KANNADA NUDI (Kannada)

to be published in the first issue every year after last day of February

*Form IV*

*( See Rule 8 )*



| | | |
|---|---|---|
| 1. *Place of Publication* | ... | BANGALORE |
| 2. *Periodicity of its Publication* | .... | MONTHLY |
| 3. *Printer's Name* | .... | B. M. SRIKANTIA PRESS ( KANNADA SAHITYA PARISHAT ) |
| *Nationality* | .... | INSTITUTION |
| *Address* | ... | Kannada Sahitya Parishat, Chamarajapet, Bangalore-18 |
| 4. *Publisher's Name* | .... | Kannada Sahitya Parishat |
| *Nationality* | ... | REGISTERED PUBLIC CULTURAL INSTITUTION |
| *Address* | .... | Chamarajapet, Bangalore-18. |
| 5. *Editor's Name* | .... | Sri D. R. Ramaya, B.A. |
| *Nationality* | .... | INDIAN |
| *Address* | ... | Kannada Sahitya Parishat, Bangalore-18. |
| 6. *Names and Addresses of Individuals who own the newspaper and partners or shareholders holding more than one per-cent of the total capital.* | .... | KANNADA SAHITYA PARISHAT, BANGALORE. |

I, B. Sivamurthi Sastry, hereby declare that the particulars given above are true to the best of my knowledge and belief.

B. Sivamurthi Sastry
*President, Kannada Sahitya Parishat.*

10th March 1964
BANGALORE

# ಪರಿಷತ್ತಿನಲ್ಲಿ ಪುರಂದರೋತ್ಸವ



ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕಳೆದ ತಿಂಗಳ ಅಂತ್ಯದಲ್ಲಿ ಪುರಂದರೋತ್ಸವ ನಡೆದಾಗ ತೆಗೆದ ಚಿತ್ರ. ಇದರಲ್ಲಿ ಕುಮಾರಿ ಪದ್ಮಾರವರು ಹಾಡುತ್ತಿರುವುದನ್ನು ನೋಡಬಹುದು. ಪಿಟೀಲು ನುಡಿಸುತ್ತಿರುವವರು ವಿದ್ವಾನ್ ಅಶ್ವತ್ಥ ನಾರಾಯಣಶಾಸ್ತ್ರಿ ಅವರು. ಮೃದಂಗ ನುಡಿಸುತ್ತಿರುವವರು ವಿದ್ವಾನ್ ಮಧುಸೂದನರಾಯರು.





ಈ ಚಿತ್ರದಲ್ಲಿ ಸಂಗೀತವಿದುಷಿ ಶ್ರೀಮತಿ ಎಂ. ಜಿ. ಸುಲೋಚನಾ ಅವರು ಹಾಡುತ್ತಿರುವುದನ್ನು ನೋಡಬಹುದು. ಪಿಟೀಲು ನುಡಿಸುತ್ತಿರುವವರು ಶ್ರೀಮತಿ ಸುಶೀಲಾ ದೇಶಿಕನ್. ಮೃದಂಗ ನುಡಿಸುತ್ತಿರುವವರು ಶ್ರೀಮತಿ ಎಂ. ಜಿ. ಸರೋಜಾ ಅವರು.

Reg. No. B. G. 4—March 1964

Licensed to Post without pre-payment. License No 1



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ. ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮.




ಏಪ್ರಿಲ್ 1964

# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೭] ಸಂಪಾದಕರು: ಡಿ. ಆರ್. ರಾಮಯ್ಯ, ಬಿ.ಎ. [ಸಂಚಿಕೆ ೪

## ಪಂಪಾ ವಿರೂಪಾಕ್ಷ ದೇವಾಲಯದ ದೃಶ್ಯ



ವಿಜಯನಗರ ಸಾಮ್ರಾಜ್ಯದ ಅಧಿದೈವನಾಗಿದ್ದ ಶ್ರೀ ವಿರೂಪಾಕ್ಷನ ದೇವಾಲಯ. ಇದು ಶಿಲ್ಪಕಲೆಯಲ್ಲಿ ಪ್ರಸಿದ್ಧವಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

ಸಂಪುಟ ೨೬ ]　　ಏಪ್ರಿಲ್ ೧೯೬೪　　[ ಸಂಚಿಕೆ ೪

# ವಿಷಯ ಸೂಚಿಕೆ











ಸಂಪುಟ ೨೭ ] ಏಪ್ರಿಲ್ ೧೯೬೪ [ ಸಂಚಿಕೆ ೪

# ಕನ್ನಡ ನಡೆ-ನುಡಿ

ಲೇ: ಶ್ರೀ ಎಸ್. ಆರ್. ರಾಮಚಂದ್ರನ್

ಹರಿಸಿ-ಹರಿಸಿ ತರುತಿದೆ
ಕನ್ನಡ ನಡೆ ನುಡಿಯಲಾ ‖ ಪಲ್ಲವಿ ‖

ಕೆಚ್ಚು ನುಡಿಯಾ
ಸ್ನೇಹ ನುಡಿಯಾ
ಇಚ್ಛಿತ ರಸ ತೋರುವಾ ‖ ೧ ‖

ಆದಿ ಕಥೆಯಾ
ಸತ ಪಥವಾ
ವೀರ ರಸವಾ ಹರಿಸುವಾ ‖ ೨ ‖

ಪಂಪ ರನ್ನ
ರಾಘವಾಂಕ
ಆದಿಕವಿಗಳಾ ಕೃತಿಗಳಾ ‖ ೩ ‖

ಖ್ಯಾತಿವಂತ
ನೀತಿವಂತ
ಕವಿಗಳಾಗಿ ಮೆರೆಸುವಾ ‖ ೪ ‖

ಪ್ರೇಮ ವಾಕ್ಯ
ಸತ್ಯ ಮಾರ್ಗ
ಸರಸ ಪ್ರೇಮ ತೋರುವಾ ‖ ೫ ‖

ಕವಿಯ ನೀತಿ
ಬರೆಹ ಸಾರ
ರಾಜ್ಯತಂತ್ರ ಸುದ್ದಿಯಾ ‖ ೬ ‖

ವನದ ಸೃಷ್ಟಿ
ಜನರ ದೃಷ್ಟಿ
ಹಕ್ಕಿ ಪಿಕಗಳಾ ರಾಗವಾ ‖ ೭ ‖

ನಾಡ ಗಡಿಯಾ
ನಾಡ ಜನರಾ
ನಾಡ ಪ್ರೇಮವೆಲ್ಲವಾ ‖ ೮ ‖

ಯಲ್ಲ ಜನರ
ಯಲ್ಲರೊಲುವ
ಸೊಲ್ಲು ಆಗಿ ತರುತಿಹಾ ‖ ೯ ‖

ನಾಡ ಹೆಸರಾ
ಕರ್ಣಾಟಕವೆಂಬ
ಹೆಸರು ಇಡುವಾಕೂಗನು ‖ ೧೦ ‖

ದುಃಖ ಸುಖದ
ವಿರಹ ವ್ಯಥೆಯ
ಸುರಸವಾದ ಕೃತಿಗಳಾ ‖ ೧೧ ‖

ರಾಜ್ಯ ವನದ
ಖನಿಜ ಪತ್ತೆ
ಎತ್ತಿ ಎತ್ತಿ ಹೇಳುವಾ ‖ ೧೨ ‖

ಯಾರು ತಪ್ಪದೆ
ತಾಯಿ ಮಕ್ಕಳ
ಯಲ್ಲ ಜನರಾ ಬಾಯಲಿ ‖ ೧೩ ‖

ಸೂರೆಗೊಂಡಿಹ
ಆದಿ ರಾಜ್ಯವ
ಬಣ್ಣಿ ಬಣ್ಣಿಸಿ ಹೇಳುವಾ ‖ ೧೪ ‖

ಸಿಂಹ ಗರ್ಜನೆ
ಗಜನ ಗಾತ್ರವ
ಹಿಂಸೆ ಹುಲಿಯಾ ಬಣ್ಣಿಸಿ ‖ ೧೫ ‖

ಚಿಕ್ಕ ಮಕ್ಕಳು
ತರುಣ ವೃದ್ಧರು
ಮೆಚ್ಚುವಂತಹ ನುಡಿಯಲೀ ‖ ೧೬ ‖

ದಿನದ ಪತ್ರಿಕೆ
ವಾರ ಪತ್ರಿಕೆ
ಮಾಸ ಪತ್ರಿಕೆಯಲ್ಲವೂ ‖ ೧೭ ‖

ಹರಿಸಿ ಹರಿಸಿ ತರುತಿದೆ
ಕನ್ನಡ ನಡೆ ನುಡಿಯಲಾ ‖ ಪ ‖

# ಸೂಕ್ತಿ ಸುಧಾರ್ಣವದ ಎರಡು ಪದ್ಯಗಳು

ಲೇ: ಶ್ರೀ ಹಂಪ. ನಾಗರಾಜಯ್ಯ ಎಂ. ಎ.

ಸೂಕ್ತಿ ಸುಧಾರ್ಣವದ 'ಋತುವರ್ಣನಂ' ವಿಭಾಗದಲ್ಲಿನ ವರ್ಷಾಕಾಲ ವರ್ಣನೆಯ ವಿವರಣೆಯಲ್ಲಿ ಮಲ್ಲಿಕಾರ್ಜುನ ಕವಿ ಉದಾಹರಿಸಿರುವ ಹಲವು ಪದ್ಯಗಳಲ್ಲಿ ಈ ಕೆಳಗಿನ ಪದ್ಯವೂ ಒಂದು—

ಎಳೆಮಿಂಚಂ ತಳೆಯಿಕ್ಕಿ ಚಾದಗೆಗಳಂ ಬಿಟ್ಟಾಡಿ ಬಳ್ಗೆಚ್ಚಲಿ
ಟ್ಟೆಳನೀಳಾಂಬುದದಿಂ ಬೆಳಲ್ದ ಗಗನ ಶ್ರೀಧೇನುವಂ ಕೋಮಳಾ
ಮಳದೀರ್ಘಾಮೃತಧಾರೆಗಳ್ ಸುರಿಯೆ ಭೋರ್ ಭೋರೆಂಬಿನಂ
ಶಕ್ರಚಾ
ಪಲತಾದಾಮಕದಿಂದೆ ಕಟ್ಟಿ ಕರೆದಂ ಕಾರೆಂಬ ಗೋಪಾಲಕಂ
(ಪುಟ. ೨೬೮ ಪದ್ಯ ೧೪೯.)

ಸೂಕ್ತಿ ಸುಧಾರ್ಣವದ ಸಂಪಾದಕರು ಈ ಪದ್ಯ ಯಾವ ಕಾವ್ಯಕ್ಕೆ ಸೇರಿದ್ದೆಂಬುದನ್ನು ತಿಳಿಸಿಲ್ಲ. ಆ ಪದ್ಯಕ್ಕೆ ಆಕರ ಗೊತ್ತಿಲ್ಲವೆಂದು ಹಾಗೆಯೇ ಬಿಟ್ಟಿದ್ದಾರೆ. ಈ ಪದ್ಯಕ್ಕೆ ಯಾವ ಪಾಠಾಂತರವೂ ಇಲ್ಲ.

ಕಾರ್ಗಾಲವನ್ನು ವರ್ಣಿಸುವ ಈ ಪದ್ಯ ಕಾವ್ಯ ಸೌಂದರ್ಯವನ್ನು ತನ್ನಲ್ಲಿ ಮೇಳವಿಸಿಕೊಂಡಿದೆ. ಸಂಚಲಿಸುವ ಎಳೆಯ ಮಿಂಚಿನ ಗೊಂಚಲನ್ನೇ ಕೊಡೆ (ತಳೆ? ತಟಿ?)ಯಾಗಿ ಹಿಡಿದು, ಚಾತಕ (ಕೃ–ಚಾದಗೆ) ಪಕ್ಷಿಗಳನ್ನು ಬಿಟ್ಟು, ಆಟವಾಡಿ, ತೋರ ಕೆಚ್ಚಲುಗಳನ್ನಿಟ್ಟು, ದುಂಬಿಗಪ್ಪಾದ ಮೋಡಗಳಿಂದ ಬೆಳೆದ (ಬೆಳಲ್ದ?) ಬಾನೆಂಬ ಕಾಮಧೇನುವನ್ನು ಕೋಮಲವೂ ನಿರ್ಮಲವೂ ಆದ ಸಿಡಿದಾದ ಅಮೃತಧಾರೆಯು ಭೋರ್ ಭೋರೆಂದು (ಅನುಕರಣೆಯ ಶಬ್ದ) ಸುರಿಯಲು ಇಂದ್ರಧನು (ಶಕ್ರಚಾಪ) ವೆಂಬ ಬಳ್ಳಿ (ದಾವು) ಯಿಂದ ಕಟ್ಟಿ ಮಳೆಯೆಂಬ ಗೋಪಾಲಕನು ಕರೆದನು–ಇದು ಪದ್ಯದ ಭಾವಾರ್ಥ. ಈ ಪದ್ಯದಲ್ಲಿ ಕೆಲವು ಕಡೆ ಅಸ್ಪಷ್ಟತೆಗೆ ಅವಕಾಶವಿದ್ದು ಅರ್ಥ ಸರಿಯಾಗಿ ಆಗುವುದಿಲ್ಲ. 'ಎಳೆ ಮಿಂಚಂ ತಳೆಯಿಕ್ಕಿ' ಎಂಬಲ್ಲಿ 'ತಳೆ' ಎಂಬ ಪದ ತಪ್ಪು ಪ್ರಯೋಗವಾಗಿರುವಂತೆ ಕಾಣುತ್ತದೆ. ಏಕೆಂದರೆ 'ತಳೆ' ಎಂಬುದಕ್ಕೆ 'ಧಾರಣೇ' ಅಂದರೆ ಧರಿಸು ಎಂಬ ಅರ್ಥವನ್ನು ಕೇಶಿರಾಜನು ಧಾತು ಪ್ರಕರಣದಲ್ಲಿ ಕೊಟ್ಟಿದ್ದಾನೆ. (ಶಬ್ದಮಣಿ ದರ್ಪಣ: ಸಂ: ಆಚಾರ್ಯ ಡಿ ಎಲ್. ನರಸಿಂಹಾಚಾರ್ಯರು: ಪದಸಂಖ್ಯೆ ೯೫೫.) ಆದರೆ ಈ ಪದ್ಯದಲ್ಲಿ ಎಳೆ ಮಿಂಚನ್ನು ಧರಿಸಿಟ್ಟು ಎಂದರೆ ಅನುಚಿತವಾಗುತ್ತದೆ. ಅದನ್ನು ತಟಿ ಎಂಬ ಜಟಿ ಯುಕ್ತವಾದ ಪದ ಮಾಡಿದರೆ (ಆತಪತ್ರಭೇದೇ ಜಟಂ) ಆಗ ಎಳೆ ಮಿಂಚೆಂಬ ಕೊಡೆಯಿಟ್ಟು, ಎಂಬ ಅರ್ಥವಾಗಿ ಪದ್ಯದ ಸ್ವಾರಸ್ಯ ಸ್ವಲ್ಪ ಹೆಚ್ಚುತ್ತದೆ. ಇನ್ನು 'ನೀಳಾಂಬುದದಿಂ ಬೆಳಲ್ದ' ಎಂಬ ಪದಪುಂಜವೂ ಕ್ಲಿಷ್ಟವಾಗಿದ್ದು, ಬೆಳಲ್ದ ಎಂಬ ಪದದ ಬಳಕೆಯಿಂದಾಗಿ ಇದಕ್ಕೆ ಅರ್ಥವನ್ನು ನಿರವಿಸುವುದು ತೊಡಕಾಗಿದೆ. ಬಹುಶಃ ಅದು 'ಬಟಲ್ದ' ಎಂದಿರಬಹುದೆಂಬ ಅನುಮಾನವಾಗುತ್ತದೆ. ಶಕ್ರಚಾಪಲತಾ ಎಂಬುದು 'ಶಕ್ರಚಾಪಳತಾ' ಎಂದಿರಬೇಕು. ಏಕೆಂದರೆ ಪದ್ಯದ ದ್ವಿತೀಯಾಕ್ಷರ ಪ್ರಾಸ 'ಳ'ಕಾರವಾದುದರಿಂದ ಸಂಸ್ಕೃತ 'ಲ' ಇಲ್ಲಿ ಕ್ಷಳ 'ಳ'ಕಾರವಾಗಬೇಕು.

ಆದರೆ ವಾಸ್ತವವಾಗಿ ಈ ಪದ್ಯ ನೇಮಿಚಂದ್ರ ಕವಿಯ ನೇಮಿನಾಥ ಪುರಾಣ (ಅರ್ಧನೇಮಿ) ಕಾವ್ಯಕ್ಕೆ ಸೇರಿದ್ದು, ಅಷ್ಟಮಾಶ್ವಸದಲ್ಲಿ ಈ ಪದ್ಯವಿದೆ. ಅಲ್ಲಿನ ಈ ಪದ್ಯವನ್ನು ನೋಡಿದಾಗ ನಮ್ಮ ಸಂದೇಹ ಸರಿದು ಸ್ಪಷ್ಟತೆ ಮೂಡುತ್ತದೆ. ಭಯಂಕರವಾದ ಕಾರ್ಗಾಲ ಒಮ್ಮೆ ಗೋಕುಲಕ್ಕೆ ಆಗಮಿಸಿದ ಸಂನಿವೇಶದಲ್ಲಿ ನೇಮಿಚಂದ್ರ ಈ ವರ್ಣನೆ ಕೊಟ್ಟಿದ್ದಾನೆ,

ಎಳೆಮಿಂಚಂ ತಟಿಯಿಕ್ಕಿ ಚಾದಗೆಗಳಂ ಬಿಟ್ಟೋಡಿ ಬಳ್ಗೆಚ್ಚಲಿ
ಟ್ಟೆಳ ನೀಳಾಂಬುದದಿಂ ಬಟಲ್ದ ಗಗನ ಶ್ರೀಧೇನುವಂ ಕೋಮಳಾ
ಮಳದೀರ್ಘಾಮೃತಧಾರೆಗಳ್ಸುರಿಯೆ ಘೋರ್ಘೋರೆಂಬಿನಂಶಕ್ರಚಾ
ಪಳತಾದಾಮಕದಿಂದೆ ಕಟ್ಟಿ ಕರೆದಂ ಕಾರೆಂಬ ಗೋಪಾಳಕಂ
(ಆಶ್ವಾಸ–೮–ಪದ್ಯ–೩)

ಈ ಪದ್ಯ ಸೂಕ್ತಿಸುಧಾರ್ಣವದ ಪದ್ಯದಲ್ಲಿ ಕಾಣಿಸಿಕೊಂಡ ಸಂದೇಹಗಳನ್ನು ಹೋಗಲಾಡಿಸುತ್ತದೆ.

ಈಗ ಸೂಕ್ತಿಸುಧಾರ್ಣವದ ಕೆಳಗಿನ ಇನ್ನೊಂದು ಪದ್ಯ ಗಮನಿಸಬಹುದು,

ಗರಗರನಾಗಿ ಭೋಗಿ ಪೊಡೆವೋಳಿಸಿ ಮುಗ್ಧೆಯನಾಗುಮಾಟ್ಟುದೋ
ಗರದಧರಾಮೃತಂ ತುಳುಕಲಾಗದು ಬೀಸರವಾಗದಪ್ಪು ಕ
ಣ್ಪುರಿಯುಣಮಾಗದಣ್ಪುಜುಯದಣ್ಮರೆಯಾಗದಲಂಪುಮಿಾಸಲಂ
ತಿರೆಮನಮಿರ್ಪುದೇಳಿಸದ ಲಜ್ಜೆಯ ಲಚ್ಚಣದಂಗಜಾಬ್ಧಿಯೊಳ್ ।
(ಪುಟ-೩೩೦; ಪದ್ಯ–೧೫)

ಸೂಕ್ತಿ ಸುಧಾರ್ಣವದ ಸಂಭೋಗವರ್ಣನಂ ವಿಭಾಗದಲ್ಲಿ ಈ ಪದ್ಯವನ್ನು ಮಲ್ಲಿಕಾರ್ಜುನನು ಉದಾಹರಿಸಿದ್ದಾನೆ. ಸಂಪಾದಕರು ಈ ಪದ್ಯದ ಆಕರ ತಿಳಿಯದೆಂಬುದನ್ನು ತಿಳಿಸುವುದಕ್ಕಾಗಿ ಇದು ಯಾವ ಕವಿಯ ಯಾವ ಕಾವ್ಯದ ಪದ್ಯವೆಂಬುದನ್ನು ಸೂಚಿಸಿಲ್ಲ.

ಮನೋಹರವಾಗಿ (ಗರಗರಿಕೆ=ಲಾಲಿತ್ಯ) ಭೋಗಿಸುವುದಾದರೆ ಸುತ್ತುವರಿದು ಮುಗ್ಧೆಯನ್ನು ಒಳಗು ಮಾಡಿಕೊಳ್ಳುವುದು; ಅವರಿಗೆ ಆಹಾರ (ಓಗರ) ವಾದ ತುಟಿಯ ಸುಧೆ ತುಳುಕಕೂಡದು; ವ್ಯರ್ಥವಾದ ಆಲಿಂಗನ; ಕಣ್ಣಿನ ಹೊಗರು ಸ್ವಲ್ಪವಾಗದೆ, ನಂಟು ಕತ್ತರಿಸದೆ, ಶಕ್ತಿ ಕಡಿಮೆಯಾಗದೆ, ಸೊಗಸು ವಿಮಾಸಲಿನಂತೆ ಇರಲು ಮನಸ್ಸು ತಿರಸ್ಕಾರವಾಗದೆ (?) ಇರುತ್ತದೆ—ಇವೆಲ್ಲಾ ಅಂಗಜನ ಅರ್ಣವ (?)ದಲ್ಲಿ ಸಿಗ್ಗಿನ ಚಿಹ್ನೆಗಳು—ಇದು ಪದ್ಯದ ಭಾವ. ಈ ಪದ್ಯಕ್ಕೆ ಕೆಲವು ಪಾಠಾಂತರಗಳೂ ಇವೆ. ಅವರಲ್ಲಿ ಕೊನೆಯೆರಡು ಪಾಠಾಂತರಗಳೇ ಸ್ವೀಕಾರಾರ್ಹವೆಂಬುದು ಮುಂದೆ ಗೊತ್ತಾಗುತ್ತದೆ.

ಈ ಪದ್ಯವೂ ನೇಮಿಚಂದ್ರ ಕವಿಯ ನೇಮಿನಾಥ (ಅರ್ಧನೇಮಿ) ಪುರಾಣಕ್ಕೆ ಸೇರಿದ್ದು, ಅಲ್ಲಿನ ಚತುರ್ಥಾಶ್ವಾಸದ ಪದ್ಯ. ಸಂನಿವೇಶದ ವಿವರಣೆ ಈ ರೀತಿಯಿದೆ. ಪಾಂಡುರಾಜನಿಗೆ ಇನ್ನೂ ಕನ್ನೆಯಾದ ಕುಂತಿಯಲ್ಲಿ ಮೋಹವಂಕುರಿಸಿದೆ. ಆದರೆ ಒಂದು ಗಂಡು ನೊಣವೂ ಅಡ್ಡ ಹಾಯದಂತೆ ಇಟ್ಟಿದ್ದ ಅಂತಃಪುರದ ಪಹರೆಯನ್ನು ದಾಟಿ ಅವಳನ್ನು ಸೇರಲು ಸಾಧ್ಯವಾಗದೆ, ಕಂತುರಾಜನ ಕೊಂತದಂತೆ ಅಂತರಂಗವನ್ನು ಕುಂತಿಯ ರೂಪು ಸೆಳೆಯುತ್ತಿರುವಾಗ ಮಲ್ಮಲ ಮರುಗುತ್ತಿರುವನು. ಆಗ ಒಮ್ಮೆ ವಜ್ರಮಾಳಿಯೆಂಬ ವಿದ್ಯಾಧರನ ಕಾಮರೂಪ ಸಾಧನವಾದ ಬೆರಳುಂಗುರ ಎರಡು ದಿನಗಳ ಮಟ್ಟಿಗೆ ದೊರಕಿತು. ಒಡನೆಯೇ ಆ ಮದನಮುದ್ರಿಕೆಯ ಸಹಾಯದಿಂದ ಹಸ್ತಿನಾಪುರಕ್ಕೆ ಹೋಗಿ, "...ಕೆಂಬೊನ್ನ ಕನ್ನೆಮಾಡದೇಟನೆಲೆಯೊಳ್ ಸಮಾನಮಯೋವಿಳಾಸ ವಿಭ್ರಮ ವಿಭವೆಯರಪ್ಪ ವಿಳಾಸಿನಿಯರ್ನೆರಸು ಕೆಮ್ಮುಗಿಲ ಪೊರೆಯೊಳ್ ಪೊಳೆವೆಳಮಿಂಚಿನ ಗೊಂಚಲಂತೆ ತಳತ್ತಳಿಸಿಕೇಳೀಕಲಹದಿಂ ಮುಳಿದ ಕಾಮನಕಾಲ್ವಿಡಿವ ರತಿಯಂತೆ ಕಾಮದೇವನಂ ಪೂಜಿಸಿ ಪೊಡೆವಡುತ್ತುಮಿರ್ದ ಕೊಂತಿಯಂ ಕಂಡು ಕೂಡಲ್ ಬಯಸಿ ತನ್ನೊಳಿಂತೆಂದಂ

ಗರಗರನಾಗಿ ಭೋಗಿಪೊಡೆಮೇಳಿಸಿ ಮುಗ್ಧೆಯನಾಗುಮಾಳ್ಪುದೋ
ಗರಪಧರಾಮೃತಂ ತುಳುಕಲಾಗದು ಜೀಸರಪಾಸದಪ್ಪು ಕ |
ಣ್ಣ್ಪಿಯುಂ ನವಾಗದಣ್ಣಿ ಅಂಸಡೀಪರೆಯಾಗದಲಂಪು ವಿಮಾಸಲಂ
ತಿರೆಮನಮಿಂಪುರ್ದೇಜಿಸಿದ ಲಜ್ಜೆಯು ಲಚ್ಚಣಮಂಗಜಾಜ್ಞೆಯಾ ॥

(ಆಶ್ವಾಸ-೪; ಪದ್ಯ ೮೬)

ಈಗ ಸೂಕ್ತಿಸುಧಾರ್ಣವದ ಪದ್ಯದೊಡನೆ ಇದನ್ನು ಹೋಲಿಸಿ ನೋಡಬಹುದು. ಭಿನ್ನ ಪಾಠಗಳಿದ್ದುದೇ ಬಹುಶಃ ಆಕರವನ್ನು ಪತ್ತೆ ಹಚ್ಚಲು ಕಷ್ಟವಾಗಿದ್ದಿರಬೇಕು. ಅಲ್ಲದೆ ಈ ಸಂನಿವೇಶ ವಿವರಣೆಯಿಂದ ಪದ್ಯದಲ್ಲಿ ಮೊದಲು ತಲೆದೋರಿದ್ದ ಅಸ್ಪಷ್ಟತೆಯೂ ಅದೃಶ್ಯವಾಗುತ್ತದೆ.

ಮಲ್ಲಿಕಾರ್ಜುನ ಕವಿಯು ನೇಮಿಚಂದ್ರನ ನೇಮಿನಾಥ ಪುರಾಣದಿಂದ ತೆಗೆದುಕೊಂಡಿರುವ ಪದ್ಯಗಳು ಕೇವಲ ನಾಲ್ಕು ಎಂಬುದಾಗಿ ಅದರ ಸಂಪಾದಕರು ಪರಿಶಿಷ್ಟದಲ್ಲಿ ಸೂಚಿಸಿದ್ದಾರೆ. ಆದರೆ ಈಗ ಈ ಎರಡೂ ಪದ್ಯಗಳು ಅಲ್ಲಿಗೆ ಸೇರುವುದರಿಂದ ಆ ಸಂಖ್ಯೆ ಆರಕ್ಕೆ ಏರುತ್ತದೆ.

# ಷೇಕ್ಸ್‌ಪಿಯರ್ ನಾಟಕಗಳು—ಡಾ|| ಜಾನ್‌ಸನ್ನರ ಸಲಹೆಗಳು

ಲೇ: 'ಅರಯ್ಯ'

(ಮಾರ್ಚಿ ಸಂಚಿಕೆಯಿಂದ ಮುಂದುವರಿದುದು)

ಬಹುಕಾಲದಿಂದ ಜನರ ಗಮನಕ್ಕೆ ಬಂದಿರುವಂತೆ, ತೋರಿಕೆಗೆ ಸರಿ ಎಂದು ಕಾಣ ಬರುವ ಹೊಸ ಪಾಠಗಳು ಎಲ್ಲರ ಏಕಮತದ ಒಪ್ಪಿಗೆಯನ್ನು ಪಡೆಯಲಾರವು; ಹಾಗೂ ಒಬ್ಬನೇ ಅವುಗಳ ವಿಷಯದಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಭಿನ್ನಾಭಿಪ್ರಾಯಗಳನ್ನು ಹೊಂದಬಹುದು. ಹಾಗಾದ್ದರಿಂದ, ಬಹುಶಃ ಅನೇಕ ಬದಲಾವಣೆಗಳನ್ನು ಒಪ್ಪಬಹುದು ಎಂದು ಸೂಚಿಸುವ ಪ್ರಯತ್ನ ಮಾಡಿದರೂ, ಕೇವಲ ಕೆಲವನ್ನು ಮಾತ್ರ ಖಚಿತ ಎಂದು ಓದುಗರ ಗಮನಕ್ಕೆ ತರಲಾಗುವುದು. ಷೇಕ್ಸ್‌ಪಿಯರಿನಂಥ ನಿಯಮ ರಹಿತವಾದ ವ್ಯಾಕರಣ ಉಳ್ಳ ಭಾಷೆಯಲ್ಲಿ ಮತ್ತೂ ಲೇಖನ ಸ್ವೇಚ್ಛಾವೃತ್ತಿಗೆ ಸಿಕ್ಕಿ ಬಿದ್ದ ಬರವಣಿಗೆಯಲ್ಲಿ ಇದು ಹೆಚ್ಚು ಸೂಕ್ತ ಎಂದು ಬದಲಾವಣೆಯನ್ನು ಸೂಚಿಸುವುದು ಸಂಪಾದಕನ ಸಾಹಸ ಕಾರ್ಯವೇ ಸರಿ. ಈ ಕಾರ್ಯವನ್ನು ಕೈಗೊಂಡಂಥವನು ಆ ಯುಗದ ಗ್ರಂಥಗಳನ್ನೆಲ್ಲಾ ಓದಿ ಹೆಚ್ಚಿನ ಪಾಂಡಿತ್ಯವನ್ನು ಸಂಪಾದಿಸಿರಬೇಕು; ಹಾಗೂ ಷೇಕ್ಸ್‌ಪಿಯರಿನಲ್ಲಿ ದೊರೆಯುವಂಥ ಶಬ್ದ ಭಂಡಾರವನ್ನು ಚೆನ್ನಾಗಿ ಅಭ್ಯಾಸ ಮಾಡಿರಬೇಕು. ಪ್ರಮಾದಗಳು ಆಗದಂತೆ ಎಚ್ಚರಿಕೆಯಿಂದಿರಬೇಕು. ಹಾಗಿಲ್ಲದಿದ್ದರೆ ಲೇಖಕನ ವೈಶಿಷ್ಟ್ಯಗಳನ್ನೇ ದೋಷಗಳೆಂದು ಪರಿಗಣಿಸಬಹುದು; ಮತ್ತೂ ಸಂಕುಚಿತ ದೃಷ್ಟಿಗೆ ನಿಲುಕದ ಭಾಗಗಳನ್ನು ವಜಾ ಮಾಡಬಹುದು.

ಇದುವರೆಗೆ ಪರಿಶ್ರಮಿಸಿದ ಸಂಪಾದಕರೆಲ್ಲಾ ಉತ್ತಮ ಪಾಠವನ್ನು ಒದಗಿಸಬೇಕು ಎಂಬಂಶದ ಮೇಲೆ ವಿಶೇಷ ಗಮನ ಇಟ್ಟ ಪರಿಣಾಮವಾಗಿ ಅವರು, ಅಕಸ್ಮಾತ್ತಾಗಿಯೋ ಕಾಲ ಧರ್ಮವನ್ನು ಅನುಸರಿಸಿಯೋ ಅಸ್ಪಷ್ಟತಾ ದೋಷಕ್ಕೆ ಪಕ್ಕಾಗಿರುವ ಭಾಗಗಳ, ಅರ್ಥ ವಿವರಣೆಗೆ ಸಾಕಷ್ಟು ಗಮನ ಕೊಟ್ಟಿಲ್ಲ. ಈ ಸಂಪಾದಕನು ಮಾಡಬೇಕೆಂದಿರುವ ಕಾರ್ಯ ಹೇಗಿದೆ ಅಂದರೆ ಅವನು ಕವಿಯು ಯಾವ ಯಾವ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡಿದ್ದನೋ ಅವನ್ನೆಲ್ಲಾ ಅವಲೋಕಿಸಲು ಯತ್ನಿಸುತ್ತಾನೆ. ಅದರಿಂದ ಮೂಲದ ಅರ್ಥಕ್ಕೂ ಪ್ರಸಕ್ತ ಭಾಗಕ್ಕೂ ಏನು ಸಂಬಂಧ ಇದೆ ಎಂಬುದನ್ನು ಗುರುತಿಸಿದ ಹಾಗೆ ಆಗುತ್ತದೆ; ಮತ್ತೂ ಆಧುನಿಕ ಕೃತಿಗಳನ್ನು ಅವುಗಳ ಮೂಲದೊಂದಿಗೆ ಹೋಲಿಸಿ ನೋಡಿದಂತಾಗುತ್ತದೆ. ಈ ವಿಷಯದಲ್ಲಿ ಸಂಪಾದಕನು ತನ್ನ ಹಿಂದಿನವರಿಗಿಂತ ಹೆಚ್ಚು ಪ್ರಾಶಸ್ತ್ಯವನ್ನು ಪಡೆಯಲು ಆಶಿಸಿದರೆ, ಅವರ ಪರಿಶ್ರಮದ ಪ್ರಯೋಜನವನ್ನು ಪಡೆದಿರುವ ಅಂಶ ಮರೆಯುವ ಹಾಗಿಲ್ಲ. ಒಂದು ಪಾಲು ಕೆಲಸ ಈಗಾಗಲೇ ನಡೆದಿದೆ ಎಂದ ಮೇಲೆ ಉಳಿದಿದ್ದಕ್ಕೆ ಹೆಚ್ಚು ಗಮನ ಕೊಡುವುದು ಸ್ವಾಭಾವಿಕವೇ ಸರಿ. ವಾಸ್ತವಾಂಶವನ್ನು ಹೊರಗೆಡಹಬೇಕೂ ಅಂದರೆ, ರೋ ಮತ್ತೂ ಪೋಪ್ ಎಂಬ ಸಂಪಾದಕರಿಗೆ ಪುರಾತನ ಆಂಗ್ಲ ಸಾಹಿತ್ಯ ಜ್ಞಾನ ಎಳ್ಳಷ್ಟಾದರೂ ಇರಲಿಲ್ಲ; ಬಿಷಾಪ್ ವಾರ್ಬರ್ಟನ್ನಿಗೆ ಗ್ರಂಥ ಸಂಪಾದನೆಗಿಂತಾ ಹೆಚ್ಚು ಪ್ರಧಾನವಾದ ಕಾರ್ಯ ಗೌರವ ಇತ್ತು; ಥೀ ಬಾಲ್ಡ್‌ನ ಕೀರ್ತಿಶ್ರೀ ಅವನಿಗೆ ನ್ಯಾಯ ದೊರಕಿಸಿ ಕೊಟ್ಟಿದಾಳೆ ಎಂದು ಭಾವಿಸುವುದಾದರೆ, ಅವನು ತನ್ನ ವಿದ್ವತ್ತನ್ನು ಸ್ವಪ್ರಯೋಜನಕ್ಕೆ ಒಂದು ಉಪಾಯ ಎಂದೆಣಿಸಿದ್ದನು; ಮತ್ತೂ ತನ್ನ ಪುಟಗಳನ್ನು ಜನರು ನಿರೀಕ್ಷಿಸಿದಂತೆ ಅಲಂಕಾರ ಮಾಡಲು ಅನುವಾದ ಟಿಪ್ಪಣಿಗಳನ್ನು ತಯಾರಿಸಿದ ಮೇಲೆ ಕವಿಯ ಅಭಿಪ್ರಾಯ ಹೇಗಿದ್ದಿರಬಹುದು ಎಂಬಂಶವನ್ನು ಕುರಿತು ವಿವೇಚನೆಯನ್ನು ಅವನು ಮುಂದುವರಿಸಲೇ ಇಲ್ಲ.

ಈಗ ಬಳಕೆಯಲ್ಲಿ ಇಲ್ಲದ ಅಥವಾ ವೈಶಿಷ್ಟ್ಯಪೂರ್ಣವಾದ ಪದ ಪ್ರಯೋಗಗಳ ವಿಚಾರದಲ್ಲಿ ಪ್ರಸ್ತುತ ಸಂಪಾದಕನು ಸ್ವಲ್ಪ ಧೈರ್ಯದಿಂದ ವಿವೇಚಿಸಬಹುದು; ಏಕೆಂದರೆ ಆಂಗ್ಲ ಭಾಷೆಯ ವ್ಯಾಪ್ತಿಯನ್ನು ಆಮೂಲಾಗ್ರವಾಗಿ ಪರೀಕ್ಷೆ ಮಾಡಲು ಭಾಷೆ ಹುಟ್ಟಿದಾಗಿನಿಂದ ಅಲ್ಲಿಯವರೆಗೆ ಮತ್ತೆ ಯಾರಿಗೂ ಇರದ ಪ್ರಬಲ ಕಾರಣ ಈ ಸಂಪಾದಕನಿಗೆ ಇತ್ತು. (ನಿಘಂಟುಕಾರ ಎಂಬ ಪ್ರಶಸ್ತಿ ಡಾ|| ಜಾನ್‌ಸನ್‌ಗೆ ಈ ಮೊದಲೇ ದೊರಕಿತ್ತು.) ಷೇಕ್ಸ್‌ಪಿಯರಿನ ಕೃತಿಗಳನ್ನು ಅವನ ಸಮಕಾಲೀನರ ಕೃತಿಗಳೊಂದಿಗೆ ಹೋಲಿಸಿ ನೋಡುವುದರಿಂದ—ಸ್ವಲ್ಪ ಹಿಂದೆಯೊ ಮುಂದೆಯೊ ಹುಟ್ಟಿದ ಕೃತಿಗಳಾಗಿರಬಹುದು—ಆ ಮಹಾಕವಿಯ ಪ್ರಯೋಗಗಳಲ್ಲಿ ಸಂದಿಗ್ಧವಾದದ್ದೇನಿದೆ ಎಂಬಂಶವನ್ನು ನಿರ್ಧರಿಸಲು ಸಾಧ್ಯವಾಗಬಹುದು; ಹಾಗೂ ತೊಡಕುಗಳನ್ನು ಬಿಡಿಸಬಹುದು;

ಪುರಾತನವೆಂಬ ಅಂಧಕಾರದಲ್ಲಿ ಅಳಿಸಿ ಹೋಗಿದ್ದ ಅರ್ಥವನ್ನು ಪುನಃ ಪಡೆಯಬಹುದು—ಎಂಬವೇ ಸಂಪಾದಕನ ಆಶೆ.

ಆದುದರಿಂದ ಇನ್ನೊಂದು ಕಾವ್ಯಕ್ಕೆ ಸೂಚನೆಯನ್ನೊಳಗೊಂಡ ಕಾರಣ ಏನಾದರೂ ಅಸ್ಪಷ್ಟತೆ ಉಂಟಾಗಿದ್ದರೆ, ಆ ಭಾಗವನ್ನು ಉದಾಹರಿಸಲಾಗುವುದು. ಮಾತುಗಳು ಹೆಗ್ಗಂಟಿನಂತಿದ್ದ ಸಂದರ್ಭದಲ್ಲಿ ಆ ಗಂಟನ್ನು ಬಿಡಿಸಿ, ಪ್ರತಿಪದಾರ್ಥ ಮುಖೇಣ ಅಥವಾ ವಿವರಣಾ ಸಹಿತ ಆ ಭಾಗದ ಅರ್ಥವು ಸ್ಫುಟವಾಗುವಂತೆ ಮಾಡಲಾಗುವುದು. ಹಾಸ್ಯಕ್ಕೆಂದಾಗಲೀ ಉದ್ವೇಗ ಭರದಿಂದಾಗಲೀ ಕೆಲವು ಮಾತುಗಳು ಅವ್ಯಕ್ತವಾಗಿದ್ದ ಕಾರಣ ಅರ್ಥಕ್ಕೆ ಭಂಗ ಬರುವಂತಿದ್ದರೆ, ತಾರ್ಕಿಕ ಸಂಬಂಧವನ್ನು ಒದಗಿಸಿಕೊಡಲಾಗುವುದು. ಮರೆತು ಹೋದ ಯಾವುದಾದರೂ ಆಚಾರದ ಸೂಚನೆ ಇದ್ದ ಕಡೆ, ಜಾಗರೂಕತೆಯಿಂದ ಅದನ್ನು ಪತ್ತೇಹಚ್ಚಿ ಸೂಕ್ತವಾದ ವಿವರಣೆ ಕೊಡಲಾಗುವುದು. ಸಂದೇಹಕ್ಕೆ ಎಡೆಗೊಡುವ ಮಾತುಗಳ ಅರ್ಥ ವಿವರಣೆ ಕೊಡುವಾಗ, ಇತರ ಲೇಖಕರ ಪ್ರಯೋಗಗಳ ಆಧಾರವನ್ನು ಕೊಟ್ಟು ಅದನ್ನು ಸಮರ್ಥಿಸಲಾಗುವುದು; ಅಥವಾ ಷೇಕ್ಸ್‌ಪಿಯರಿನ ಕೃತಿಗಳಿಂದ ಅದೇ ಅರ್ಥ ಬರುವ ಭಾಗಗಳನ್ನು ಉದಾಹರಿಸಲಾಗುವುದು.

ಕವಿತೆಯು ಎಲ್ಲಿ ಕುಂಟುತ್ತದೆ ಎಲ್ಲಿ ಸ್ವಾರಸ್ಯವಾಗಿದೆ ಎಂಬುದನ್ನು ನಿರ್ದೇಶಿಸುವುದು ಟೀಕಾಕಾರನ ಕರ್ತವ್ಯಗಳಲ್ಲಿ ಒಂದು; ಈ ಕರ್ತವ್ಯವನ್ನು ಕೆಲವು ಸಂಪಾದಕರು ನಿರ್ವಹಿಸಿದ್ದಾರೆ; ಕೆಲವರು ಉಪೇಕ್ಷೆ ಮಾಡಿದ್ದಾರೆ. ಈ ಕರ್ತವ್ಯ ನಿರ್ವಹಣೆಗೆ ಮಾತ್ರ ಪೋಪ್ ಕವಿ ವಿಶೇಷ ಯೋಗ್ಯತಾ ಸಿದ್ಧಿ ಪಡೆದಿದ್ದ ಎಂಬಲ್ಲಿ ಚರ್ಚೆಗೆ ಆಸ್ಪದವಿಲ್ಲ. ಬಿಷಾಪ್ ವಾರ್ಬರ್ಟನ್ ಶ್ರಮ ವಹಿಸಿ ಇದೇ ದಾರಿಯಲ್ಲಿ ನಡೆದು ಕೃತಕೃತ್ಯನಾಗಿದ್ದಾನೆ. ಆದರೆ ಈ ಸಂಪಾದಕರೆಲ್ಲರೂ ಉಪಯೋಗಿಸಿರುವ ಆವರಣ ಚಿಹ್ನೆ, ವಿರಾಮ ಚಿಹ್ನೆ, ನಕ್ಷತ್ರ ಸೂಚಿ—ಇವುಗಳು ಜನರಿಗೆ ಆಹ್ಲಾದವನ್ನುಂಟು ಮಾಡಿವೆ ಎಂದಾಗಲಿ, ಅವರ ಜ್ಞಾನದ ಮಟ್ಟವನ್ನು ಹೆಚ್ಚಿಸಿವೆ ಎಂದಾಗಲಿ ನನ್ನ ತಾರ್ಕಣೆಗೆ ಬಂದಿಲ್ಲ. ಇದರಿಂದ ಆಗುವ ಏಕಮಾತ್ರ ಪ್ರಯೋಜನ ಎಂದರೆ ಸ್ವಂತವಾಗಿ ತುಲನ ಮಾಡುವುದರಿಂದುಂಟಾಗುವ ಸಂತೋಷವನ್ನು ನಾವು ಕಳೆದುಕೊಳ್ಳುತ್ತೇವೆ. ಇದರಿಂದ ಚಿಕ್ಕವರೂ ಅಜ್ಞಾನಿಗಳೂ ಕಾವ್ಯದ ಸೌಂದರ್ಯವನ್ನು ಸೂತ್ರಗಳ ಆಧಾರವಿಲ್ಲದೆ ನಿಸ್ಮರಿಸುವಂತೆ ಹೇಳಿಕೊಟ್ಟ ಹಾಗಾಗುತ್ತದೆ. ಜನರು ಕಂಡು ಹಿಡಿಯಬೇಕಾದ್ದನ್ನು ಮಿತಗೊಳಿಸುವ ಮುಖೇಣ, ಇದರಿಂದ ಅವರ ಕುತೂಹಲವನ್ನೂ ರಸಾಭಿಜ್ಞತೆಯನ್ನೂ ದುರ್ಬಲಪಡಿಸಿದ ಹಾಗೆ ಆಗುತ್ತದೆ. ಕೊನೆಯದಾಗಿ, ವಿಮರ್ಶಕನು ತನ್ನ ಅಭಿಪ್ರಾಯವನ್ನು ಸೂಚಿಸುವಾಗ ಅದಕ್ಕೂ ಅವನ ವಾದಸರಣಿಗೂ ಏನು ಸಂಬಂಧ ಇದೆ ಎಂಬುದನ್ನು ಮರೆಮಾಚಿದಂತಾಗುತ್ತದೆ. ಹೀಗಾಗಿ ವಿಮರ್ಶಕನ ಅಭಿಪ್ರಾಯಗಳನ್ನು ಒರೆ ಹಚ್ಚಿ ನೋಡಲು ಬೇಕಾದ ಯಾವ ಬೆಳಕನ್ನೂ ಈ ಕ್ರಮವು ನೀಡುವುದಿಲ್ಲ.

ವಾಚಕನು ಸಂಪಾದಕನಷ್ಟೇ ಕಾವ್ಯದ ದೋಷಗಳನ್ನೂ ಸೌಂದರ್ಯಗಳನ್ನೂ ತುಲನ ಮಾಡಲು, ಪುರಾತನ ಸಾಹಿತ್ಯ ಜ್ಞಾನ ಎಂಬ ಪೂರ್ವ ಸಂಸ್ಕಾರವಿಲ್ಲದೇ, ಸಾಧ್ಯ ಎಂಬುದನ್ನು ತೋರಿಸಿಕೊಡುವುದರಿಂದ ಸಂಪಾದಕನ ಸ್ವಪ್ರತಿಷ್ಠೆಗೆ ಕುಂದು ಬರಬಹುದು; ಆದರೆ ಇದರಿಂದ ವಾಚಕರಿಗೆ ಹೆಚ್ಚು ಸಂತೋಷವಾದೀತು. ಮನುಷ್ಯ ವ್ಯಾಪಾರದ ಸಹಜ ಚಿತ್ರಗಳನ್ನು ಒಳಗೊಂಡ ವರ್ಣನೆ, ನಿಸರ್ಗದ ಒಂದು ಚಿತ್ರ, ವಿವೇಚನೆಗೆ ಒಳಪಟ್ಟ ಅಥವಾ ಅನುಭಾವಕ್ಕೆ ಬಂದ ಒಂದು ಭಾವ, ತಾರ್ಕಿಕವಾಗಿ ಖಚಿತ ಮಾಡಲ್ಪಟ್ಟ ಒಂದು ಊಹೆ, ಕ್ಷಣಭಂಗುರವೆನಿಸುವ ಉದ್ವೇಗದ ಒಂದು ಹೃದಯಸ್ಪರ್ಶಿಯಾದ ಘಟನೆ—ಇವುಗಳೆಲ್ಲಾ, ವಿಮರ್ಶೆ ಎಂಬ ಅನಗತ್ಯವಾದ ಸಹಾಯವಿಲ್ಲದೆ, ಸಾಮಾನ್ಯ ಜನರ ತಿಳಿವಳಿಕೆಗೆ ತಕ್ಕುದಾದ ವಿಷಯಗಳು ಎಂದೆಣಿಸಬಹುದು. ಏಕೆಂದರೆ ಇವುಗಳನ್ನು ಅರ್ಥಮಾಡಿಕೊಳ್ಳಲು ಪ್ರಪಂಚದ ವಸ್ತುಸ್ಥಿತಿಯ ಸಾಮಾನ್ಯ ಜ್ಞಾನ ಮತ್ತೂ ಷೇಕ್ಸ್‌ಪಿಯರಿನ ಕೃತಿಗಳನ್ನು ಓದಲು ಬೇಕಾದ ಬುದ್ಧಿಯ ಪರಿಪಾಕ ಇಷ್ಟಿದ್ದರೆ ಸಾಕು. ಇದಕ್ಕಿಂತ ಹೆಚ್ಚಿನ ಸಂಸ್ಕಾರ ಏನೂ ಬೇಕಿಲ್ಲ.

ಆದರೆ ಕೆಲವು ಸಂದರ್ಭಗಳಲ್ಲಿ ವಾಚಕರಿಗೆ ಸಹಾಯ ಮಾಡುವುದು ಟೀಕಾಕಾರನ ಕರ್ತವ್ಯವಾಗಿರುತ್ತದೆ. ಭಾವವನ್ನು ಜೀರ್ಣವಾಗಿರತಕ್ಕಂಥಾ ಒಂದು ಹಳೆಯ ಸಂಪ್ರದಾಯಕ್ಕೆ ಹೊಂದುವಂತೆ ಮಾಡುವುದರಿಂದ ಉಂಟಾಗುವ ಸೌಂದರ್ಯವನ್ನು ಸವಿಯಬೇಕಾದಾಗ, ಸರ್ವೇ ಸಾಧಾರಣವಾಗಿ ಪ್ರಚಲಿತವಾಗದೇ ಇರತಕ್ಕ ಅಭಿಪ್ರಾಯಗಳನ್ನು ಸಮಂಜಸ ಮಾಡಬೇಕಾದಾಗ, ಮತ್ತೂ ಜನರ ಸಾಮಾನ್ಯ ತಿಳಿವಳಿಕೆಗಾಗಲಿ ನೇರ ನೋಟಕ್ಕಾಗಲಿ ಸಿಕ್ಕದಂಥಾದ್ದಾಗಿ ಹಠಾತ್ತನೆ ಉಂಟಾಗುವ ಅಥವಾ ತೀರ ನಿಕೃಷ್ಟವಾದ ಸಂಗತಿಗಳು ಕಾವ್ಯದಲ್ಲಿ ಕಂಡು ಬಂದಾಗ—ಇವೇ ಮುಂತಾದ್ದು ಆ ಸಂದರ್ಭಗಳು.

ಈ ಮಿತಿಗೆ ಒಳಪಟ್ಟ ದೋಷ, ಸೌಂದರ್ಯ ಇವುಗಳನ್ನು ತೋರಿಸಿಕೊಡುವುದು ನನ್ನ ಉದ್ದೇಶದ ಚೌಕಟ್ಟಿಗೆ ಸೇರಿ

ದ್ದೇನಲ್ಲ. ಅಸ್ಪಷ್ಟವಾದ ಭಾಗಗಳನ್ನು ವಿವರಿಸುವುದೇ ನನ್ನ ಮುಖ್ಯೋದ್ದೇಶ.

ಇಷ್ಟಾದರೂ, ಷೇಕ್ಸ್‌ಪಿಯರಿನಲ್ಲಿ ಕಂಡುಬರುವ ಭಾವಗಳು ಮತ್ತು ಉಕ್ತಿಗಳನ್ನು ಮತ್ತು ಇತರ ಪುರಾತನ-ನೂತನ ಕವಿಗಳಲ್ಲಿ ತೋರಿಬರುವಂಥವುಗಳೊಡನೆ ಹೋಲಿಸಿ ನೋಡುವ, ಅಥವಾ ಕಾವ್ಯವನ್ನು ಓದುವುದರಲ್ಲಿ ಆಸಕ್ತಿಯುಳ್ಳವರು ಸಾಮಾನ್ಯವಾಗಿ ಕಾಣದೇ ಇರತಕ್ಕಂಥಾ ಸೌಂದರ್ಯ ಭಾಗವನ್ನು ಪ್ರದರ್ಶಿಸುವ ಕಾರ್ಯವನ್ನು ಸಂಪಾದಕನು ಕೈ ಬಿಡುವ ಯೋಜನೆ ಇಲ್ಲ. ಏಕೆಂದರೆ ಈ ಸಂಪಾದಕನಿಗೆ ಜನರು ಕವಿವಾಣಿಯನ್ನು ಇನ್ನೂ ಚನ್ನಾಗಿ ಅರ್ಥಮಾಡಿಕೊಳ್ಳಲು ಸಹಾಯ ಮಾಡಬೇಕೆಂಬ ಉದ್ದೇಶವಿರುವಂತೆ, ಆ ಕವಿಯ ಹೊಗಳಿಕೆ ಸಕಾರಣವಾಗಿ ನಡೆಯಲು ನೆರವಾಗಬೇಕೆಂಬ ಆಸೆಯೂ ಇದೆ. ಈ ಮೊದಲು ಬಂದ ಸಂಪಾದಕರು ತಮ್ಮ ಹಿಂದಲ ಸಂಪಾದಕರನ್ನು ಕಡೆಗಾಣಿಸುವ ಸೋಗನ್ನು ತೊಟ್ಟಿದ್ದರು. ಆದರೆ ಈ ಮುದ್ರಣದಲ್ಲಿ ಹಿಂದಣ ಸಂಪಾದಕರಲ್ಲಿ ಏನು ಏನು ಗುಣಗಳಿವೆಯೋ ಅವನ್ನೆಲ್ಲಾ ಅಂಗೀಕರಿಸಲಾಗುವುದು; ಕಾರಣ, ಭಾವೀ ಜನಾಂಗ ಉಳಿದೆಲ್ಲದರ ಗುಣಗಳ ಸಂಗ್ರಹವನ್ನು ಈ ಮುದ್ರಣದಲ್ಲಿ ಕಾಣುವಂತಾಗಬೇಕು. ಇದೇ ಉದ್ದೇಶದಿಂದ ಆಂಗ್ಲ ನಾಟಕ ಪಿತಾಮಹನಾದ ಈ ಮಹಾಕವಿಯ ವಿಷಯದಲ್ಲಿ ಇದುವರೆಗೆ ಏನೇನು ತಿಳಿದು ಬಂದಿದೆಯೊ ಅದನ್ನೆಲ್ಲಾ ಈ ಮುದ್ರಣದಲ್ಲಿ ಪ್ರದರ್ಶಿಸಲು ಯತ್ನಿಸಲಾಗುವುದು.

---

## ಕನ್ನಡದ ಮಾನ್ಯತೆ

ಲೇ: ಶ್ರೀ ಜ. ಈಶ್ವರಪ್ಪ ಚಿಕ್ಕೋಳ

ಕನ್ನಡಿಗರೆಲ್ಲ ಒಂದಾಗಬೇಕು
ಕನ್ನಡದ ಮುನ್ನಡೆಯುಬೇಕು
ಕನ್ನಡವು ಎಲ್ಲೆಡೆಯು ಬಿತ್ತರಿಸಬೇಕು.
ಕನ್ನಡದ ಕಹಳೆ ಎಲ್ಲೆಲ್ಲು ಮೊಳಗಬೇಕು
ಕನ್ನಡದ ಕೋಟೆಯನು ಕಟ್ಟಬೇಕು
ಕನ್ನಡದ ಧ್ವಜವನು ಗಗನಕೇರಿಸಬೇಕು
ಕನ್ನಡದ ಜಯಘೋಷ ಮುಂದಾಗಬೇಕು
ಕನ್ನಡದ ನೆಲದಲ್ಲಿ ಅನ್ಯ ಭಾಷೆಗಳ ತ್ಯಜಿಸಬೇಕು
ಕನ್ನಡವೆ ಹಿರಿದಾಗಿ ಬೆಳಗಬೇಕು
ಕನ್ನಡದ ಕಸ್ತೂರಿ ಎಲ್ಲೆಲ್ಲಿಯೂ ತೀಡಬೇಕು ॥ ೧ ॥

ಕನ್ನಡಾಂಬೆಯ ಗುಡಿಗಟ್ಟಿ ಕೊಂಡಾಡಬೇಕು
ಕನ್ನಡದ ಸವಿಯನ್ನು ಸವಿಯಬೇಕು
ಕನ್ನಡಮ್ಮನ ಹಾಡಿ ಹರಸಬೇಕು
ಕನ್ನಡಕೆ ಮಾನ್ಯತೆಯ ನೀಡಬೇಕು
ಕನ್ನಡದ ಕಲೆಯನ್ನು ನೆಲೆಗೊಳಿಸಬೇಕು
ಕನ್ನಡವು ಚಿರಕಾಲ ಬಾಳಬೇಕು
ಕನ್ನಡದ ಶ್ರೇಷ್ಠ ಸಾಹಿತ್ಯ ಬೆಳೆಯಬೇಕು
ಕನ್ನಡದ ಕವಿಪುಂಗವರು ಹೆಚ್ಚಾಗಬೇಕು
ಕನ್ನಡದ ಸ್ಫೂರ್ತಿಯನು ಹರಿಸಬೇಕು
ಕನ್ನಡದ ಕೀರ್ತಿಯನು ಮೆರೆಸಬೇಕು ॥ ೨ ॥

ದ್ವೇಷಾಸೂಯೆಗಳನಳಿಯಬೇಕು
ಆ ನಾಡು ಈ ನಾಡು ಮರೆಯಬೇಕು
ಜಾತಿ ಮತಗಳ ತೊರೆದು ಒಂದಾಗಬೇಕು
ಕನ್ನಡಾಂಬೆಗೆ ಸತತ ದುಡಿಯ ಬೇಕು
ಕನ್ನಡಮ್ಮನ ಮಕ್ಕಳೆಂದರಿಯಬೇಕು
ನಾವೆಲ್ಲರೂ ಒಂದೆಂದು ಶಪಥಗೈಯಬೇಕು
ಕನ್ನಡಾಂಬೆಯ ಚರಣಕೆರಗಬೇಕು
ಕನ್ನಡಕೆ ತನುಮನವ ಸಲಿಸಬೇಕು
ಕನ್ನಡದ ಕೆಚ್ಚನ್ನು ಉಳಿಸಬೇಕು
ಕನ್ನಡಕೆ ಹೋರಾಡಿ ಮಡಿಯಬೇಕು ॥ ೩ ॥

---

# ಎರಡು ಕರ್ನಾಟಕದ ಭಾವನೆ ಅರಾಷ್ಟ್ರೀಯವಾದುದು

ಲೇ: ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು

ಸುಮಾರು ಐವತ್ತು ವರ್ಷಗಳ ಸತತ ಪ್ರಯತ್ನಗಳಿಂದ, ರಚನಾತ್ಮಕ ಕಾರ್ಯಕ್ರಮಗಳಿಂದ, ಹರಿದು ಹಂಚಿಹೋಗಿದ್ದ ಕನ್ನಡ ನಾಡನ್ನು ಒಂದುಗೂಡಿಸುವ ಬಗೆಗೆ ಕನ್ನಡ ಸಾಹಿತ್ಯ ಪರಿಷತ್ತಿನವರೂ ಕರ್ನಾಟಕ ಏಕೀಕರಣ ಚಳುವಳಿಯ ಧುರೀಣರೂ ಬಹಳವಾಗಿ ಪ್ರಯತ್ನಿಸಿ ೧೯೫೬ರ ನವೆಂಬರ ೧ರಲ್ಲಿ ವಿಶಾಲ ಮೈಸೂರು ಅಥವಾ ಕರ್ನಾಟಕ ರಾಜ್ಯವನ್ನು ನೆಲೆಗೊಳಿಸಿದರು. ಸುಮಾರು ೬೦೦ ವರ್ಷಗಳಷ್ಟು ಹಿಂದಿನಿಂದ ಬೇರೆ ಬೇರೆ ರಾಜಕೀಯ ವಿಭಾಗಗಳಿಗೆ ಸೇರಿ ಅಪಾರವಾದ ಕಷ್ಟಗಳನ್ನು ಅನುಭವಿಸಿ ಕಡೆಗೆ ಮೈಸೂರು, ಮದರಾಸು, ಹೈದರಾಬಾದು, ಬೊಂಬಾಯಿ ಮತ್ತು ಕೊಡಗು ಎಂಬ ಐದು ಭಾಗಗಳಿಗೆ ಸೇರಿದ್ದ ಕರ್ನಾಟಕ ರಾಜ್ಯವು ಒಂದಾಯಿತು ಎಂದು ಕನ್ನಡ ಜನ ಹರ್ಷಿಸಿದರು. ಕೆಲವು ಮಂದಿ ರಾಜಕೀಯ ಧುರೀಣರ ಅದೂರ ದೃಷ್ಟಿಯಿಂದ ರಾಜ್ಯ ಪುನರ್ವಿಂಗಡಣಾ ಆಯೋಗವು ಬಂದಾಗ ಕನ್ನಡಿಗರು ತಕ್ಕಷ್ಟು ಬಲವಾಗಿ ಮತ್ತು ಸಂಘಟಿತರಾಗಿ ಪ್ರಯತ್ನ ನಡೆಸಲಿಲ್ಲವಾಗಿ ಕನ್ನಡ ನಾಡಿನ ಭಾಗಗಳೇ ಆದ ತಾಳವಾಡಿ, ಕಾಸರಗೋಡು, ಹೊಸೂರು, ಆದವಾನಿ, ರಾಯದುರ್ಗ, ಆಲೂರು, ಅಕ್ಕಲಕೋಟೆ, ಜತ್ತ ಸೊಲ್ಲಾಪುರ ಮತ್ತು ನೀಲಗಿರಿ ಮೊದಲಾದ ಕನ್ನಡ ಪ್ರದೇಶಗಳು ಅಕ್ಕಪಕ್ಕದ ಕೇರಳ. ಮದರಾಸು, ಆಂಧ್ರ ಮತ್ತು ಮಹಾರಾಷ್ಟ್ರಗಳಿಗೆ ಸೇರಿ ಸುಮಾರು ಮೂವತ್ತು ಲಕ್ಷ ಮಂದಿ ಕನ್ನಡಿಗರು ಕಳವಳಕ್ಕೆ ಈಡಾಗುವಂತಾಯಿತು. ಕನ್ನಡ ಬಂಧುಗಳೊಡನೆ ತಾವು ಇಲ್ಲವಲ್ಲ ಎಂಬ ದುಃಖ ಅವರ ಪಾಲಿಗಾಯಿತು. ಏಕೀಕರಣ ಅಪೂರ್ಣವಾಯಿತು.

ಹಳೆಯ ಮೈಸೂರಿನ ಮುಖಂಡರಾದ ಶ್ರೀ ಸಾಹುಕಾರ್ ಚೆನ್ನಯ್ಯ ಹಾಗೂ ಅವರ ಕೆಲವು ಮಿತ್ರರು ಮೊದಲಿನಿಂದಲೂ ಏಕೀಕರಣ ವಿರೋಧಿಗಳು. ಇವರು ತಮ್ಮ ಎಲ್ಲ ಶಕ್ತಿಯನ್ನೂ ಒಂದುಗೂಡಿಸಿ ಏಕೀಕರಣ ಚಳುವಳಿಯನ್ನು ವಿರೋಧಿಸಿದರು. ಆದರೆ ಕನ್ನಡ ನಾಡಿನ ಬಹುಸಂಖ್ಯಾತರ ಅಭಿಪ್ರಾಯ ಮತ್ತು ಕೇಂದ್ರ ಸರ್ಕಾರದ ಒತ್ತಾಯಗಳಿಗೆ ತಲೆಬಾಗಿ ಈ ಮಹನೀಯರು ಆಗ ಏಕೀಕರಣವನ್ನು ಒಪ್ಪಿಕೊಂಡರು. ಮೈಸೂರು ಶಾಸನ ಸಭೆ, ಭಾರತದ ಲೋಕಸಭೆ, ಕಾಂಗ್ರೆಸ್ ಕಾರ್ಯ ಸಮಿತಿ, ಎಲ್ಲ ಪಕ್ಷ ಪಂಗಡಗಳ ಅಭಿಪ್ರಾಯ, ಮಹಾತ್ಮಾ ಗಾಂಧಿ, ಸರ್ದಾರ್ ಪಟೇಲ್ ಮತ್ತು ಪಂಡಿತ ನೆಹರು ಅವರ ಆಶೀರ್ವಾದ, ರಾಜ್ಯ ಪುನರ್ವಿಂಗಡಣಾ ಸಮಿತಿಯವರ ಶಿಫಾರಸು ಇವೆಲ್ಲವುಗಳ ಫಲವಾಗಿ ಭಾರತದಲ್ಲಿ ಈಗ ಭಾಷಾವಾರು ರಾಜ್ಯಗಳು ಸ್ಥಾಪನೆಯಾಗಿವೆ. ಒಂದು ಭಾಷೆಯಲ್ಲಿ ಮಾತನಾಡುವ ಜನರು ಒಂದು ರಾಜ್ಯದಲ್ಲಿ ವಾಸಿಸಿದರೆ ಆಡಳಿತವು ಸುಗಮವಾಗಿ ನಡೆಯಲು ಸಾಧ್ಯವಾಗುತ್ತದೆ ಎಂಬ ಮಾತು ಎಲ್ಲರೂ ಎಲ್ಲ ಕಾಲದಲ್ಲಿಯೂ ಒಪ್ಪಿಕೊಳ್ಳತಕ್ಕದ್ದೇ. ಹೀಗೆ ಲೋಕ ಸಮ್ಮತವಾಗಿ ರಚನೆಯಾಗಿರುವ ವಿಶಾಲ ಮೈಸೂರು ಅಥವಾ ಕರ್ನಾಟಕ ರಾಜ್ಯದಲ್ಲಿ ಶ್ರೀ ಎಸ್. ಚೆನ್ನಯ್ಯನವರು ಮತ್ತು ಅವರ ಮಿತ್ರರು ಕಾಂಗ್ರೆಸ್ ಅಧ್ಯಕ್ಷರಾಗಿ, ರಾಜ್ಯದ ಮಂತ್ರಿಗಳಾಗಿ, ಗಡಿಸಮಿತಿ ಸದಸ್ಯರಾಗಿ (ಶ್ರೀ ಎಸ್. ಚೆನ್ನಯ್ಯನವರು) ಎಲ್ಲ ಕೀರ್ತಿ ಗೌರವವನ್ನೂ, ಸುಖ ಸಂಪತ್ತುಗಳನ್ನೂ ಪಡೆದಿದ್ದಾರೆ. ಕರ್ನಾಟಕ ರಾಜ್ಯೋದಯವಾಗಿ ೮ ವರ್ಷಗಳಾಗಿವೆ. ನಮ್ಮ ಸರ್ಕಾರದವರು ಮಾನ್ಯ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪನವರ ನೇತೃತ್ವದಲ್ಲಿ ಪ್ರಗತಿಗಾಗಿ ಏನೆಲ್ಲ ಪ್ರಯತ್ನಗಳನ್ನೂ ಮಾಡುತ್ತಿದ್ದಾರೆ. ಈಗ ಕನ್ನಡ ಭಾಷೆಯು ರಾಜ್ಯಭಾಷೆಯಾಗಿದೆ. ಶಾಲೆ ಕಾಲೇಜುಗಳು ಹೆಚ್ಚುತ್ತಿವೆ. ಹರಿಜನ ಗಿರಿಜನ ಉನ್ನತಿಯ ಕಾರ್ಯಗಳು ನಡೆಯುತ್ತಿವೆ. ಪರಿಸ್ಥಿತಿಯು ಹೀಗೆ ಪ್ರಗತಿದಾಯಕವಾಗಿರುವಾಗಲೇ ಶ್ರೀ ಎಸ್. ಚೆನ್ನಯ್ಯ ಮೊದಲಾದ ಪ್ರಮುಖ ಮಹನೀಯರು ಈಗಿನ ಸರ್ಕಾರ ತಮ್ಮ ಹಿಡಿತಕ್ಕೆ ಸಿಗದೆ ಇರುವ ಕಾರಣದಿಂದಲೋ, ಮತ್ತಾವ ವೈಯುಕ್ತಿಕ ಕಾರಣಗಳಿಂದಲೋ ಉದ್ರಿಕ್ತರಾಗಿ ಘಟನಾತ್ಮಕವಾಗಿ ರಚನೆಯಾಗಿರುವ ಕರ್ನಾಟಕ ರಾಜ್ಯವನ್ನು ಎರಡು ಭಾಗಗಳಾಗಬೇಕು ಎಂಬ ಅರಾಷ್ಟ್ರೀಯ ಮಾತುಗಳನ್ನು ಆಡುತ್ತಿದ್ದಾರೆ. ರಾಜಧಾನಿಯನ್ನು ಹುಬ್ಬಳ್ಳಿಗೆ ಬದಲಾಯಿಸುವರೆಂಬ ಸುಳ್ಳು ಸುದ್ದಿಯನ್ನು ಹಬ್ಬಿಸುತ್ತಿದ್ದಾರೆ. ಇದನ್ನು ಸರ್ಕಾರದವರೇ ತಪ್ಪೆಂದು ಹೇಳಿದ್ದಾರೆ. ಕಳೆದ ಚುನಾವಣೆಯಲ್ಲಿ ಶ್ರೀ ಎಸ್ ಚೆನ್ನಯ್ಯನವರು ಮತ್ತು ಅವರ ಪ್ರಮುಖ ಮಿತ್ರರು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಬಲವಾದ ಸೋಲನ್ನು ಅನುಭವಿಸಿವಾರೆ. ಚುನಾವಣೆಯಲ್ಲಿ ಸೋಲನ್ನನುಭವಿಸಿದ ಮಹನೀಯರು ಅನಂತರ ಕೃದ್ಧರಾಗಿ ಸರ್ಕಾರದ ಮೇಲೆ, ಸಾರ್ವಜನಿಕರ ಮೇಲೆ ತಿರುಗಿ ಬೀಳುವ ಮನೋಧರ್ಮ ಸಾಧುವಲ್ಲ. ಒಮ್ಮೆ ಶಾಸನ ಸಭೆ ಮತ್ತು ಲೋಕಸಭೆ ಮತ್ತು ಕೇಂದ್ರ ಸರ್ಕಾರ ಒಪ್ಪಿ ಮಾಡಿದ ತೀರ್ಮಾನವನ್ನು ಈ ಮೊದಲು ತಾವು ಒಪ್ಪಿಕೊಂಡು ತಕ್ಕಷ್ಟು ಸುಖ ಸಂಪತ್ತುಗಳನ್ನು ಅನುಭವಿಸಿ

ಅನಂತರ ಇದು ಬೇಡ ಎಂದು ಹೇಳುವುದು ವಿವೇಕವಲ್ಲ. ಮದುವೆಯಾದಮೇಲೆ ಬಾಂಧವ್ಯ ಬೇಡ ಎಂದ ಹಾಗೆ ಇದು ಆಭಾಸ. ಕರ್ಣಾಟಕವನ್ನು ಜಾತಿವಾರಾಗಿ ಹಂಚಿಕೊಳ್ಳುವುದು ಪಾಪಕರ.

ವಿಶಾಲ ಮೈಸೂರು ರಾಜ್ಯವನ್ನು ಎರಡು ಭಾಗಮಾಡುವುದು ಸಾಧ್ಯವಲ್ಲದ ಮಾತು. ಆಗಬಾರದ ಕಾರ್ಯ. ಮನೆ ಕಟ್ಟುವುದರಲ್ಲಿ ಕೌಶಲ್ಯ ತೋರಿಸಬೇಕೇ ಹೊರತು ಮನೆ ಒಡೆಯುವುದರಲ್ಲಿ ಪರಾಕ್ರಮ ತೋರಿಸುವುದರಲ್ಲಿ ಏನು ಔಚಿತ್ಯವಿದೆ? ಶ್ರೀ ಎಸ್. ಚೆನ್ನಯ್ಯನವರು ಹಾಗೂ ಅವರ ಮಿತ್ರರು ರಾಜ್ಯದಲ್ಲಿ ಗಣ್ಯರು. ದೇಶದ ಸ್ವಾತಂತ್ರ್ಯಕ್ಕಾಗಿ ಅಸಾಧ್ಯವಾಗಿ ಶ್ರಮಿಸಿದವರು. ಉನ್ನತವಾದ ಸ್ಥಾನಮಾನಗಳನ್ನು ಪಡೆದವರು. ಇಂತಹ ಮಹನೀಯರು ಯಾವುದೋ ಚಿತ್ತ ವಿಕಾರಕ್ಕೆ ಒಳಗಾಗಿ ಕರ್ಣಾಟಕವನ್ನು ಎರಡು ಭಾಗಮಾಡುವ ಅರಾಷ್ಟ್ರೀಯ ಭಾವನೆಯ ಮಾತುಗಳನ್ನಾಡುವುದು ಸಾಧುವಲ್ಲ. ಈ ಮಾತುಗಳಿಗೆ ವಿವೇಕವುಳ್ಳ ಯಾವ ಜನರೂ ಬೆಲೆಕೊಡುವುದಿಲ್ಲವೆಂದು ನಾವು ನಂಬಬಹುದು. ನೆರೆಹೊರೆಯ ನಾಡಿನವರು ನಮ್ಮ ಈ ಹುಡುಗಾಟಿಕೆಯನ್ನು ಮಾತುಗಳನ್ನು ಕೇಳಿ ಏನೆಂದಾರು ಎಂಬ ಎಚ್ಚರಿಕೆ ಕೂಡ ಅಗತ್ಯ. ಕನ್ನಡಿಗರಲ್ಲಿ ಭಾವೈಕ್ಯವನ್ನು ಉಂಟುಮಾಡಬೇಕಾದುದು ನಮ್ಮ ಕರ್ತವ್ಯ. ಅದುವೇ ನಿಜವಾದ ದೇಶಭಕ್ತಿ ಮಾರ್ಗ, ಒಂದು ವಿಶಾಲ ರಾಜ್ಯರಚನೆಯಾದಾಗ ಕೊಂಚ ಕಾಲ ಭಿನ್ನಾಭಿಪ್ರಾಯ ಬರವುದು ಸ್ವಭಾವ. ಕನ್ನಡ, ಭಾಷೆ, ಸಾಹಿತ್ಯಗಳ ಅಭಿಮಾನದಿಂದ ನಾವೆಲ್ಲರೂ ಒಟ್ಟುಗೂಡುವುದು ಅಗತ್ಯ. ಕರ್ಣಾಟಕದ ಉಜ್ವಲವಾದ ೨೦೦೦ ವರ್ಷಗಳ ಚರಿತ್ರೆಯನ್ನು ಸ್ಮರಿಸಿಕೊಂಡು ಕನ್ನಡನಾಡು ವೈಭವದಿಂದ ಬಾಳುವಂತೆ ಮಾಡುವುದು ಅಗತ್ಯ.

ಸರ್ಕಾರದವರೂ, ಸಾರ್ವಜನಿಕರೂ ಈ ರಾಜಮಾರ್ಗದಲ್ಲಿ ಮುಂದುವರೆಯುವಂತೆ ಶ್ರೀ ಭುವನೇಶ್ವರಿಯು ಎಲ್ಲರನ್ನೂ ಕರುಣಿಸಲಿ. ಕರ್ಣಾಟಕದ ಸರ್ವಾಂಗೀಣ ಪ್ರಗತಿಗೆ ಎಲ್ಲರೂ ಒಟ್ಟುಗೂಡಿ ಶ್ರಮಿಸೋಣ. ಸ್ವತಂತ್ರ ಭಾರತದಲ್ಲಿ ತಲೆಯೆತ್ತಿ ನಿಲ್ಲಲು ಇತರರಂತೆ ನಾವೂ ಪ್ರಯತ್ನಪಡೋಣ. ಕೇವಲ ಭಿನ್ನಾಭಿಪ್ರಾಯಗಳಿಗಾಗಿ ರಾಜ್ಯವನ್ನೇ ಹೋಳುಮಾಡುವ ಮಾತುಗಳನ್ನಾಡದಿರೋಣ. ನೆರೆ ಹೊರೆಯ ರಾಜ್ಯದವರಂತೆ ಸುಸಂಘಟಿತರಾಗಿ ಗೌರವದಿಂದ ಬಾಳಿ ಬದುಕೋಣ.

---

## ಪರಿಷತ್ತಿನ ಸದಸ್ಯರಲ್ಲಿ ವಿನಂತಿ

೧೯೬೩ ನೇ ಸಾಲಿನ ಪರಿಷತ್ತಿನ ಸದಸ್ಯತ್ವದ ಚಂದಾ ಡಿಸೆಂಬರ್ ೩೧ ನೇ ತಾರೀಖಿಗೆ ಮುಗಿಯಿತು. ೧೯೬೪ರ ಪರಿಷತ್ತಿನ ಸದಸ್ಯತ್ವದ ಚಂದಾ ಆರು ರೂಪಾಯಿಗಳನ್ನು ದಯೆಯಿಟ್ಟು ಈ ಕೂಡಲೇ ಪರಿಷತ್ತಿಗೆ ಕಳಿಸಿ ನೆರವು ನೀಡಬೇಕೆಂದು ವಿನಯದಿಂದ ವಿನಂತಿಸುತ್ತೇವೆ.

**ಕೆ. ಎಂ. ಕೃಷ್ಣ ರಾವ್**
**ಎಸ್. ಶಂಕರಪ್ಪ**
ಗೌರವ ಕಾರ್ಯದರ್ಶಿಗಳು

# ವೇದಾಂತ ಮತ್ತು ವಿಜ್ಞಾನ

ಋಗ್ವೇದದಲ್ಲಿ 'ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ' ಎಂಬ ಒಂದು ಮಾತಿದೆ. ಅದರ ಅರ್ಥ ವೇದಾಂತದ ತತ್ತ್ವಗಳನ್ನು ಚೆನ್ನಾಗಿ ತಿಳಿದು ಅಳವಡಿಸಿಕೊಂಡವರು ಎಂದು. 'ವೇದಾಂತ ವಿಜ್ಞಾನ' ಎಂಬ ಶಬ್ದವು ಅಲ್ಲಿ ತತ್ಪುರುಷ ಸಮಾಸವಾಗಿದೆ. ಆದರೆ ಅದನ್ನು ದ್ವಂದ್ವ ಸಮಾಸವಾಗಿ ಮಾಡಿಕೊಂಡರೆ ವೇದಾಂತ ಮತ್ತು ವಿಜ್ಞಾನಗಳಿಂದ ನಿಶ್ಚಿತಾರ್ಥರು–ಎಂದು ನಾವು ಅರ್ಥ ಮಾಡಬಹುದು. ಅದರಿಂದ ಒಂದು ವಿಶಾಲವಾದ ಅರ್ಥವನ್ನು ನಾವು ತರ್ಕಿಸಲು ಅವಕಾಶವಿದೆ. ಅಂತಹ ಒಂದು ಪ್ರಯತ್ನವೇ ಈ ಬರೆಹ.

'ವೇದಾಂತ ಎಂಬ ಶಬ್ದಕ್ಕೆ 'ವೇದಸ್ಯ ಅಂತಃ ವೇದಾಂತಃ' ಅಂದರೆ ವೇದದ ಕಡೆಯ ಭಾಗ ಎಂದು ಅರ್ಥವಾಗುತ್ತದೆ. ವೇದದ ಕಡೆಯ ಭಾಗವು ಉಪನಿಷತ್ತು ಎಂಬುದು ಸರ್ವಶ್ರುತವಾಗಿದೆ. 'ವಿಜ್ಞಾನ' ಎಂಬ ಶಬ್ದದ ಅರ್ಥವು 'ವಿಶಿಷ್ಟಂ ಜ್ಞಾನಂ ವಿಜ್ಞಾನಂ' ಅಥವಾ 'ವಿವಿಧಂ ಜ್ಞಾನಂ ವಿಜ್ಞಾನಂ' ಎಂದು ಆಗುತ್ತದೆ.

ಜಗತ್ತಿನ ಮೂಲವಸ್ತುಗಳು ಶಿವ, ಶಕ್ತಿ ಎಂದು ದಾರ್ಶನಿಕರು ಹೇಳಿದ್ದಾರೆ. ಈ ಶಿವಶಕ್ತಿಗಳು, ಶಬ್ದ–ಅರ್ಥ, ಹೂವು–ವಾಸನೆ, ಹಾಲು–ರುಚಿ ಬೆಳುದಿಂಗಳು–ತಂಪು, ರತ್ನ–ಕಾಂತಿ, ಇವುಗಳಂತೆ ಅವಿನಾಭಾವವಾಗಿ ಇವೆಯೆಂದೂ ಅವು ಎರಡಾಗಿ ಕಂಡರೂ ಒಂದಾಗಿವೆಯೆಂದೂ ಶಿವಾದ್ವೈತ ಸಿದ್ಧಾಂತಿಗಳು ಹೇಳಿದ್ದಾರೆ. ಇದೇ ಅಭಿಪ್ರಾಯವನ್ನು ವಿಶಿಷ್ಟಾದ್ವೈತಿಗಳು ವಿಷ್ಣು ಮತ್ತು ಲಕ್ಷ್ಮಿ ಜಗತ್ತಿನ ಮೂಲ ವಸ್ತುಗಳು ಎಂದು ತಿಳಿಯುತ್ತಾರೆ. ಶಿವ, ವಿಷ್ಣು, ಬ್ರಹ್ಮ– ಈ ಶಬ್ದಗಳು 'ದೇವನೊಬ್ಬ ನಾಮ ಹಲವು' ಎಂಬ ಬಸವಣ್ಣನವರ ಮಾತಿನಂತೆ ಒಬ್ಬನೇ ಸೃಷ್ಟಿಕರ್ತನನ್ನು ಕುರಿತು ವ್ಯವಹರಿಸಲ್ಪಟ್ಟಿವೆ. 'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಎಂಬ ವೇದವಾಕ್ಯವು ಈ ಅರ್ಥವನ್ನೇ ಹೇಳುತ್ತದೆ. ವಿಶ್ವವಿಖ್ಯಾತ ಭೌತಶಾಸ್ತ್ರಜ್ಞರಾದ ಸರ್ ಸಿ. ವಿ. ರಾಮನ್ ಅವರು ಜಗತ್ತಿನ ಮೂಲವಸ್ತುಗಳು Matter and Energy ಎಂದು ಹೇಳಿರುತ್ತಾರೆ. ದಾರ್ಶನಿಕ ಭಾಷೆಯಲ್ಲಿ ಯಾವುದು ಶಿವಶಕ್ತಿಯೋ ಅಥವಾ ವಿಷ್ಣು ಶಕ್ತಿಯೋ ವೈಜ್ಞಾನಿಕ ಭಾಷೆಯಲ್ಲಿ ಅದೇ Matter and Energy ಎಂದು ನಾವು ತಿಳಿಯಬಹುದು. ತತ್ವನಿರೂಪಣೆಗಳಿಗಾಗಿಯೇ ಹುಟ್ಟಿರುವ ಉಪನಿಷತ್ತುಗಳಲ್ಲಿ ಬಹುಮಟ್ಟಿಗೆ ದೇವರು ಜೀವರು ಮತ್ತು ಜಗತ್ತಿನ ವಿಚಾರನಿರೂಪಿಸಲ್ಪಟ್ಟಿದೆ. ದರ್ಶನಗಳು ಭಿನ್ನವಾದರೂ ಮುಖ್ಯಧ್ಯೇಯ ಒಂದೇ ಎಂಬುದನ್ನೂ ಜೀವರಿಗೆ ಭಗವತ್ಸಾಕ್ಷಾತ್ಕಾರ ರೂಪವಾದ ಮೋಕ್ಷವು ಒಂದೇ ಎಂಬುದನ್ನೂ ಆಸ್ತಿಕ ದಾರ್ಶನಿಕರೆಲ್ಲರೂ ಹೇಳಿರುತ್ತಾರೆ. ಉಪನಿಷತ್ತುಗಳಲ್ಲಿ 'ಅಹಂ ಬ್ರಹ್ಮಾಸ್ಮಿ' 'ತತ್ತ್ವಮಸಿ' 'ಸರ್ವಂ ಖಲ್ವಿದಂ ಬ್ರಹ್ಮ' 'ಸೋಹಂ' ಇತ್ಯಾದಿ ಮಂತ್ರಗಳು ಪ್ರಮುಖವೆನಿಸಿವೆ. ಆ ಪರಮಾತ್ಮನೇ ನಾನಾಗಿರುವೆ ಅಥವಾ ನಾನು ಆ ಪರಬ್ರಹ್ಮನ ಅಂಶವೆನಿಸಿರುವೆ, ಎಂಬುದು ಇದರ ತಾತ್ಪರ್ಯವಾಗಿದೆ. ನಾನು ಯಾರು? ಹೇಗೆ ಹುಟ್ಟಿದೆ? ಎಲ್ಲಿಗೆ ಹೋಗುತ್ತೇನೆ? ವಿಚಿತ್ರವಾದ ಈ ಸೃಷ್ಟಿಯ ಕರ್ತೃ ಯಾರು? ಅವನು ಎಲ್ಲಿದ್ದಾನೆ? ಹೇಗಿದ್ದಾನೆ? ಈ ಜಗತ್ತಿನ ನಿಜಸ್ವರೂಪವೇನು? ಜನನ ಮರಣಗಳಿಗೆ ಕಾರಣವೇನು? ಅದರ ಪರಿಹಾರ ಹೇಗೆ? ಇತ್ಯಾದಿ ವಿಷಯಗಳನ್ನು ಚರ್ಚಿಸುವುದು ವೇದಾಂತ ಗ್ರಂಥಗಳ ಮುಖ್ಯೋದ್ದೇಶವಾಗಿದೆ. ಕಡೆಯದಾಗಿ ಸೃಷ್ಟಿಯ ಕಾರಣವನ್ನೂ ಸೃಷ್ಟಿಕರ್ತನನ್ನೂ ತಿಳಿಯುವುದೇ ದರ್ಶನಗಳ ಪರಮ ಧ್ಯೇಯವೆನಿಸಿದೆ. ಹಾಗು ಆಸ್ತಿಕ ಮತಗಳ ಹೆಗ್ಗುರಿಯಾಗಿದೆ.

ವೇದಾಂತವು ಸೃಷ್ಟಿಯ ಕಾರಣವನ್ನು ಹುಡುಕಿದರೆ, ವಿಜ್ಞಾನವು ಸೃಷ್ಟಿಯ ರಹಸ್ಯಗಳನ್ನು ಬೋಧಿಸುತ್ತದೆ. ಉಪನಿಷತ್ತುಗಳಲ್ಲಿ ಹೇಳುವಂತೆ, ಬ್ರಹ್ಮನಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ತೇಜ, ತೇಜದಿಂದ ಜಲ, ಜಲದಿಂದ ಪೃಥ್ವಿ ಇವು ಹೇಗೆ ಹುಟ್ಟಿದುವು ಎಂಬುದನ್ನು ವಿಜ್ಞಾನವು ಚರ್ಚಿಸುತ್ತದೆ. ಕಣ್ಣಿಗೆ ಕಾಣುವ ಸೂರ್ಯ, ಚಂದ್ರ, ನಕ್ಷತ್ರಗಳು, ಗ್ರಹಣ, ಉಲ್ಕಾಪಾತ ಮೊದಲಾದುವುಗಳು ಹೇಗೆ ವ್ಯವಹರಿಸುತ್ತವೆ? ಆಕಾಶದಲ್ಲಿ ಕಾಣುವ ಮೋಡಗಳು, ಅದರಲ್ಲಿ ಉಂಟಾಗುವ ಗುಡುಗು, ಮಿಂಚು, ಸಿಡಿಲುಗಳು ಇವುಗಳಿಗೆ ಕಾರಣವೇನು? ಹಗಲು–ರಾತ್ರಿ, ಬಿಸಿಲು–ಬೆಳುದಿಂಗಳು ಇವುಗಳ ಹುಟ್ಟು ಗುಟ್ಟುಗಳೇನು? ಭೂಮಿಯು ವರ್ಷಕ್ಕೊಮ್ಮೆ ಸೂರ್ಯನನ್ನು ಸುತ್ತುವುದು, ಚಂದ್ರನು ತಿಂಗಳಿಗೊಮ್ಮೆ ಭೂಮಿಯನ್ನು ಸುತ್ತುವುದು, ಸೂರ್ಯನ ಬಿಸಿಲು ಚಂದ್ರನ ಮೇಲೆ ಬಿದ್ದು ಬೆಳುದಿಂಗಳಾಗುವುದು, ನಕ್ಷತ್ರಗಳು ಸ್ವಯಂ ಪ್ರಕಾಶದಿಂದ ಬೆಳಗುವುದು ಇವೆಲ್ಲವುಗಳು ಹೇಗೆ ನಡೆಯುತ್ತವೆ? ಪ್ರಪಂಚದಲ್ಲಿ ಭೂಕಂಪಗಳು, ಶೀತ ಮಾರುತಗಳು, ಜಲ ಪ್ರವಾಹಗಳು, ಅಗ್ನಿಪರ್ವತಗಳು ಹೇಗೆ ಉಂಟಾಗುತ್ತವೆ? ಸುತ್ತಲೂ

ನೀರಿನಿಂದ ತುಂಬಿರುವಾಗ ಪೃಥ್ವಿ ಅದರ ಮಧ್ಯೆ ಕರಗದಂತೆ ಹೇಗೆ ನಿಂತಿದೆ? ಸಕಲ ಪದಾರ್ಥಗಳೂ ಭೂಮಿಯನ್ನು ಆಶ್ರಯಿಸಿ ಹೇಗೆ ಸುಸ್ಥಿರವಾಗಿವೆ. ನವಗ್ರಹಗಳನ್ನು ಹೇಗೆ ಸೂರ್ಯನು ತನ್ನ ಆಕರ್ಷಣೆಗೆ ಒಳಪಡಿಸಿಕೊಂಡಿದ್ದಾನೆ. ಸೂರ್ಯನ ಕಿರಣಗಳಲ್ಲಿ ಸಪ್ತವರ್ಣಗಳು ಏಕಾದುವು? ಬೆಳುದಿಂಗಳಿನಿಂದ ಚಂದ್ರಕಾಂತ ಶಿಲೆ ಏಕೆ ಕರಗುತ್ತದೆ? ಹುಣ್ಣಿಮೆಯ ಚಂದ್ರನನ್ನು ಕಂಡು ಸಮುದ್ರವು ಏಕೆ ಉಬ್ಬುತ್ತದೆ? ಇತ್ಯಾದಿ ವಿಷಯಗಳನ್ನು ಕುರಿತು ವಿಜ್ಞಾನಿಗಳು ಕುತೂಹಲದಿಂದ ಕಾರ್ಯ ಕಾರಣ ಭಾವಗಳನ್ನು ವಿಚಾರಿಸಿ ಚರ್ಚಿಸುತ್ತಾರೆ. ಇಂತಹ ಜಿಜ್ಞಾಸೆಯೇ ವಿಜ್ಞಾನದ ಮೂಲವೆನಿಸುತ್ತದೆ.

ಇಂದಿನ ಜನಜೀವನವು ವಿಜ್ಞಾನ ಪ್ರಧಾನವಾಗಿದೆ. ನಾಗರಿಕ ಜೀವನದಲ್ಲಿ, ವಿದ್ಯುದ್ದೀಪಗಳು, ರೇಡಿಯೋಗಳು, ಟೆಲಿಫೋನ್‌ಗಳು, ಟೆಲಿವಿಜನ್‌ಗಳು, ಆಕಾಶ ವಿಮಾನ, ರೈಲು ಇತ್ಯಾದಿ ವಿಷಯಗಳು ಎಲ್ಲರಿಗೂ ಚಿರಪರಿಚಿತವೆನಿಸಿವೆ. ವಿಜ್ಞಾನ ಪರಿಣತರಾದ ರಷ್ಯ ಮತ್ತು ಅಮೆರಿಕದ ಸಾಹಸಿಗಳು ಕ್ಷಿಪಣಿಗಳಿಂದ ವಿಶ್ವವನ್ನೆಲ್ಲಾ ಹತ್ತಾರು ಸಲ ಸುತ್ತಿ ಬಂದ ಸಂಗತಿಗಳು ಇಂದು ಮನೆ ಮಾತಾಗಿವೆ. ಯುದ್ಧ ಕಾಲದಲ್ಲಿ ಕೇಳಿಬರುವ ಅಣುಬಾಂಬುಗಳು, ಜಲಜನಕದ ಬಾಂಬುಗಳು, ವಿಷವಾಯು ಇತ್ಯಾದಿಗಳೆಲ್ಲವೂ ಇಂದು ಮುಂದುವರಿದ ವಿಜ್ಞಾನಕ್ಕೆ ನಿದರ್ಶನವೆನಿಸಿವೆ. ವಿಶ್ವವು ಒಂದು ವಿಜ್ಞಾನದ ಭಂಡಾರದಂತಿದೆ. ಇಂತಹ ವಿಶ್ವದಲ್ಲಿ ವಾಸ ಮಾಡುವ ಪ್ರಾಣಿಗಳಲ್ಲಿ ಅಗ್ರಗಣ್ಯವೆನಿಸಿರುವ ಮಾನವನು ವಿಜ್ಞಾನದ ಗುಟ್ಟು ಗುರಿಗಳನ್ನು, ಉಪಾಯ ಅಪಾಯಗಳನ್ನು ತಿಳಿಯದೆ ಜೀವಿಸುವುದು ಲೋಕದಲ್ಲಿ ಸುಸ್ಥಿರವೆನ್ನಲು ಹೇಗೆ ತಾನೆ ಸಾಧ್ಯವಾದೀತು? ವಿಷಯಗಳನ್ನು ತಿಳಿಯದೆ ಜೀವಿಸುವುದು ಅಪರಾಧವೆನಿಸುತ್ತದೆ ಎಂಬುದಕ್ಕೆ ಅಮೆರಿಕದ ಎರಡು ಅಣುಬಾಂಬುಗಳಿಗೆ ಬಲಶಾಲಿ ಜಪಾನು ತಲೆಬಾಗಿದುದನ್ನು ನಿದರ್ಶನವಾಗಿ ಹೇಳಬಹುದು.

ಒಂದು ರೀತಿಯಿಂದ ಮನುಷ್ಯ ಶರೀರವು ವಿಜ್ಞಾನ ಮತ್ತು ವೇದಾಂತಗಳ ಸಮನ್ವಯ ಎನಿಸಿಕೊಂಡಿದೆ. ಉಪನಿಷತ್ತಿನ 'ಅಹಂ ಬ್ರಹ್ಮಾಸ್ಮಿ' ಮಂತ್ರಾರ್ಥದಂತೆ ಮಾನವನ ಹೃದಯಸ್ಥನಾದ ಆತ್ಮನು ಭಗವಂತನ ಅಂಶ; ಅಥವಾ ಭಗವಂತನೇ ಆಗಿದ್ದಾನೆ. ಆತ್ಮ ಮತ್ತು ಪರಮಾತ್ಮನ ಬಾಂಧವ್ಯವನ್ನು ಉಪನಿಷತ್ತುಗಳಲ್ಲಿ ಬಹಳವಾಗಿ ಹೇಳಲಾಗಿದೆ. ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತಕಾರರು, ಜೈನ, ಬೌದ್ಧ ದಾರ್ಶನಿಕರು, ಷಡ್ದರ್ಶನಕಾರರು ಈ ವಿಚಾರವನ್ನು ಕುರಿತು ವಿಸ್ತಾರವಾಗಿ ಚರ್ಚಿಸಿದ್ದಾರೆ. ಆಧುನಿಕ ಕಾಲದ ಮಹರ್ಷಿಗಳೆನಿಸಿದ ಅರವಿಂದರು, ರಮಣರು, ಪರಮಹಂಸರು, ವಿವೇಕಾನಂದರು, ರಾಮತೀರ್ಥರು ಮೊದಲಾದವರು ಈ ವಿಷಯವನ್ನು ಕುರಿತು ತಕ್ಕಷ್ಟು ಚರ್ಚಿಸಿದ್ದಾರೆ. ವೇದಾಂತದ ಪರಮಗುರಿಯಾದ ಮೋಕ್ಷವನ್ನು ಪಡೆಯಬೇಕೆಂಬ ಜನ ಈ 'ಸೋಹಂ' ತತ್ತ್ವದ ವಿಚಾರವನ್ನು ಚೆನ್ನಾಗಿ ಮನನ ಮಾಡಿಕೊಳ್ಳಬೇಕಾದುದು ಅಗತ್ಯ. 'ನಾಹಂ, ಕೋಹಂ' ಅವಸ್ಥೆಗಳು ಕಳೆದ ಮೇಲೆ 'ಸೋಹಂ' ಅನುಭವಕ್ಕೆ ಬರುತ್ತದೆ ಎಂದು ಉಪನಿಷತ್ತುಗಳು ಹೇಳುತ್ತವೆ. ಆದುದರಿಂದ ವೇದಾಂತದ ಸರ್ವಸ್ವವಾದ ಆತ್ಮನು ಜಗತ್ತಿನ ಸೃಷ್ಟಿಗೆ ಕಾರಣಕರ್ತನಾದ ಪರಬ್ರಹ್ಮನ ಅಂಶವಾಗಿ ಅಥವಾ ಪರಬ್ರಹ್ಮನೇ ಆಗಿ ನಮ್ಮ ಹೃದಯದಲ್ಲಿ ವಿರಾಜಿಸುತ್ತಿದ್ದಾನೆ. ಪರಮಾತ್ಮನನ್ನು ಮಹಾಕಾಶಕ್ಕೂ ಆತ್ಮನನ್ನು ಗೃಹಾಕಾಶಕ್ಕೂ ಪರಮಾತ್ಮನನ್ನು ಸೂರ್ಯದೇವನಿಗೂ ಜೀವನವನ್ನು ಅದರ ಪ್ರತಿಬಿಂಬಕ್ಕೂ ಹೋಲಿಸುತ್ತಾರೆ ಅನುಭವಿಗಳು.

ಇನ್ನು ಆತ್ಮನೆಂಬ ದೇವರಿಗೆ ದೇವಾಲಯದಂತಿರುವ ನಮ್ಮ ಶರೀರವು ಸಪ್ತಧಾತುಮಯವಾಗಿದೆ. ಚರ್ಮ, ರಕ್ತ, ಮಾಂಸ, ಮೇದಸ್ಸು, ಮೂಳೆ, ಮಜ್ಜ, ಶುಕ್ಲ ಎಂಬಿವುಗಳೇ ಆ ಸಪ್ತಧಾತುಗಳು. ಇವು ಪ್ರಪಂಚವನ್ನು ಆವರಿಸಿರುವ ಪಂಚಭೂತಗಳ ಅಂಶಗಳು. ಅಂದರೆ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಇವುಗಳ ಪರಿಣಾಮಗಳು. ಮನುಷ್ಯನಿಗೆ ಸ್ಥೂಲ, ಸೂಕ್ಷ್ಮ, ಕಾರಣ ಎಂಬ ಮೂರು ಶರೀರಗಳು ಉಂಟೆಂದೂ, ಅನ್ನಮಯಕೋಶ, ಪ್ರಾಣಮಯಕೋಶ, ಮನೋಮಯಕೋಶ, ವಿಜ್ಞಾನಮಯಕೋಶ, ಆನಂದಮಯಕೋಶ ಎಂಬ ಪಂಚಕೋಶಗಳು ಉಂಟೆಂದೂ ವೇದಾಂತ ಗ್ರಂಥಗಳು ಹೇಳುತ್ತವೆ. ಈ ತ್ರಿವಿಧ ದೇಹಗಳ ಮಧ್ಯೆ ಪಂಚಕೋಶಗಳ ನಡುವೆ ಅಂತಃಕರಣಗಳು ಇವೆ. ಬುದ್ಧಿ, ಚಿತ್ತ, ಅಹಂಕಾರ, ಮನಸ್ಸು ಎಂಬಿವುಗಳೇ ಆ ಅಂತಃಕರಣಗಳು. ಮನುಷ್ಯನ ಜೀವನದಲ್ಲಿಯೇ ಅಳವಟ್ಟಿರುವ ಈ ಬುದ್ಧಿ, ಚಿತ್ತ, ಅಹಂಕಾರ, ಮನಸ್ಸುಗಳ ಲಕ್ಷಣಗಳನ್ನು ಕೋಟಿ ಕೋಟಿ ಜನಗಳು ತಿಳಿಯಲು ಪ್ರಯತ್ನಿಸಿಲ್ಲವೆಂಬುದು ಇಲ್ಲಿ ಸೋಜಿಗದ ಸಂಗತಿ. ಮನುಷ್ಯರು ದಿನವೂ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಅವಸ್ಥೆಗಳನ್ನೂ, ಹಸಿವು, ತೃಷೆ, ಕಾಮ ಮೊದಲಾದ ವಿಕಾರಗಳನ್ನೂ ಅನುಭವಿಸುತ್ತಿದ್ದರೂ ಅವುಗಳ ಕಾರ್ಯಕಾರಣಗಳನ್ನು ತಿಳಿಯಲು ಬಹು ಜನರು ಪ್ರಯತ್ನಿಸಿಲ್ಲವೆಂಬುದು ಇಲ್ಲಿ ಗಮನಾರ್ಹವಾದ ಸಂಗತಿ. 'ತನುವಿದನುಳಿದು ಇಂದ್ರಜಾಲ ದಾಟಗಳುಂಟೆ' ಎಂದು ಶ್ರೀ ನಿಜಗುಣ ಶಿವಯೋಗಿಗಳು

ಹೇಳಿದ್ದಾರೆ. ಹುಟ್ಟು, ಸಾವು, ಕಷ್ಟ, ಸುಖ, ರೋಗ ರುಜಿನ ಇವುಗಳಿಗೆ ಮಾನವನ ದೇಹವು ಈಡಾಗಿದೆ. ಹುಟ್ಟು ಸಾವು ಗಳು ಈ ದೇಹಕ್ಕೇ ಹೊರತು ಆತ್ಮನಿಗಲ್ಲ ಎಂದು ಭಗವದ್ಗೀತೆ ಯಲ್ಲಿ 'ವಾಸಾಂಸಿ ಜೀರ್ಣಾನಿ ಯಥಾವಿಹಾಯ, ನವಾನಿ ಗೃಹ್ಣಾತಿ ನರೋಪ ರಾಣಿ' ಎಂದು ಕೃಷ್ಣ ಪರಮಾತ್ಮನು ಹೇಳಿರುತ್ತಾನೆ. ಇದರ ಅರ್ಥ ಲೋಕದ ಜನರು ಹಳೆಯ ಅಂಗಿಗಳನ್ನು ಬಿಟ್ಟು ಹೊಸ ಅಂಗಿಗಳನ್ನು ಧರಿಸುವ ಹಾಗೆ, ಜೀವನು ಸವೆದು ಹೋದ ದೇಹಗಳನ್ನು ಬಿಟ್ಟು ಹೊಸ ಶರೀರಗಳನ್ನು ಧರಿಸುತ್ತಾನೆ ಎಂದು.

ಸಾಮಾನ್ಯ ಜನರಿಗೆ ಮರಣವು ಬಹಳ ಭಯಂಕರ ವಾದುದು ಎಂಬ ತಿಳಿದಿದೆ. ಅದರ ಗುಟ್ಟು, ಗುರಿಗಳು ಅವರಿಗೆ ತಿಳಿದಿಲ್ಲವಾದುದರಿಂದಲೇ ಅವರು ಹಾಗೆ ಅಂಜಿಕೊಳ್ಳುತ್ತಾರೆ. ಜ್ಞಾನಿಗಳಿಗೆ ಮರಣವು ಸಹಜವಾದುದೇ ಎಂಬ ಭಾವನೆ. ಬಸವೇಶ್ವರರು "ಮರಣವೇ ಮಹಾನವಮಿ ಎಮಗೆ" ಎಂದು ಎಚ್ಚರಿಸಿದ್ದಾರೆ. ಸೃಷ್ಟಿಯ ರಹಸ್ಯಗಳನ್ನೂ ವೇದಾಂತದ ತತ್ತ್ವಗಳನ್ನೂ ಅರಿಯದ ಮರುಳು ಜನರು ಮಾನವನ ಉನ್ನತಿಗಾಗಿಯೇ ಆಗುವ ಮರಣಕ್ಕಾಗಿ ಅಂಜಿಕೊಳ್ಳು ತ್ತಾರೆ. ಆದುದರಿಂದ ಜೀವನವು ಸುಸ್ಥಿರವಾಗಬೇಕೆಂದು ಬಯಸುವ ಜನರು ಜನನ–ಮರಣಗಳ ಗುಟ್ಟು ಗುರಿಗಳನ್ನು ಅರಿಯಬೇಕು. ಜನರು ವೇದಾಂತ ಮತ್ತು ವಿಜ್ಞಾನದ ಸಮನ್ವಯದಿಂದ ಕೂಡಿದ ಜೀವನ ವ್ಯಾಪಾರಗಳನ್ನು ಅರಿತುಕೊಳ್ಳುವುದು ಅಗತ್ಯ. ಅದರಿಂದ ಅವರಿಗೆ ಜೀವನ ಸ್ಫೂರ್ತಿ ಉಂಟಾಗುತ್ತದೆ.

ಮನುಷ್ಯನ ನಿತ್ಯ ವ್ಯವಹಾರಗಳಾದ ಆಹಾರ, ನಿದ್ರೆ, ಸ್ವಪ್ನ ಮೊದಲಾದ ಮಾನವ ವ್ಯಾಪಾರಗಳಲ್ಲಿ ಕೂಡ ವಿಜ್ಞಾನದ ದೃಷ್ಟಿಯನ್ನು ಹೊಂದುವುದು ಅಗತ್ಯ. ಶುದ್ಧ ವಾದ ಆಹಾರ, ಶುದ್ಧವಾದ ನೀರು, ಸುಖವಾದ ನಿದ್ರೆ, ಶುಭ ಸ್ವಪ್ನಗಳು ಇವು ಆರೋಗ್ಯಕ್ಕೆ ಸಾಧನ. 'ಶರೀರ ಮಾದ್ಯಂ ಖಲು ಧರ್ಮ ಸಾಧನಂ' ಎಂದು ಮಹಾಕವಿ ಕಾಳಿದಾಸನು ಹೇಳಿದ್ದಾನೆ. ಅಂದರೆ ಶರೀರ ಸುಭದ್ರವಾಗಿದ್ದಲ್ಲದೆ ಧರ್ಮ ಸಾಧನೆ ಆಗುವುದಿಲ್ಲವೆಂಬುದು ಅದರ ತಾತ್ಪರ್ಯ. ರೋಗ ಮಯವಾದ ದೇಹವು ಈ ಲೋಕದ ಸುಖವನ್ನಷ್ಟೇ ಅಲ್ಲ, ಪರಲೋಕದ ಪ್ರಾಪ್ತಿಯನ್ನು ಕೂಡ ತಪ್ಪಿಸುತ್ತದೆ; ಎಂದು ನಾವು ತಿಳಿಯಬೇಕು. "ನಹ್ಯಾರೋಗ್ಯಂ ಸಮಂ ಭಾಗ್ಯಂ. Health is the working man's capital, be careful, your body is the living temple of God. 'ದೇಹೋ ದೇವಾ ಲಯಃ ಪ್ರೋಕ್ತಃ ಜೀವೋದೇವಃ ಸನಾತನಃ' ಇತ್ಯಾದಿ ಅನುಭವಿಗಳ ಮಾತುಗಳು ಉತ್ತಮ ಜೀವನವನ್ನು ನಡೆಸ ಬೇಕೆಂದಿರುವವರಿಗೆ ಮಾರ್ಗದರ್ಶಕವಾಗಿವೆ.

ದೇಹವು ಆರೋಗ್ಯದಿಂದಿರಬೇಕಾಗಿದ್ದರೆ ಮನಸ್ಸು ಶುದ್ಧ ವಾಗಿರಬೇಕು. ಜೀವನ ಪವಿತ್ರವಾಗಿರಬೇಕು. ಉದ್ದೇಶ ಗಳು ಒಳ್ಳೆಯವುಗಳಾಗಿರಬೇಕು. ವಿಧ್ಯುಕ್ತ ಕರ್ಮಗಳಲ್ಲಿ ಮಾನವನು ಆಸಕ್ತನಾಗಿರಬೇಕು. ಭಕ್ತಿ, ಪ್ರೀತಿ, ದಯೆ, ದಾಕ್ಷಿಣ್ಯ ಮೊದಲಾದ ಸದ್ಗುಣಗಳಿಂದ ಕೂಡಿದವನಾಗಿರ ಬೇಕು. 'ತನಗಾಗಿಯೇ ಅಲ್ಲ, ತನ್ನ ಸಂಸಾರಕ್ಕಾಗಿ, ದೇಶ ಕ್ಕಾಗಿ, ವಿಶ್ವಕ್ಕಾಗಿ ಜೀವಿಸುತ್ತಿದ್ದೇನೆ' ಎಂಬ ವಿಶಾಲ ಭಾವನೆ ಬೇಕು ಎಂಬುದನ್ನು ನಾವಿಲ್ಲಿ ಸ್ಮರಣೆಯಲ್ಲಿ ಉಳ್ಳವರಾಗಿರಬೇಕು. ಇದಕ್ಕೆ ಗೀತಾದಿ ಶಾಸ್ತ್ರಗಳ ಅಧ್ಯಯನ ಬೇಕು. ಗುರುಕುಲವಾಸಬೇಕು; ದೇಶಾಟನ ಬೇಕು. ಆತ್ಮ ಜಿಜ್ಞಾಸೆ ಬೇಕು. ಸತ್‌ಸಂಕಲ್ಪ ಬೇಕು.

ದೇಹ ಮತ್ತು ಆತ್ಮ, ವಿಶ್ವ ಮತ್ತು ಪರಮಾತ್ಮ ಇವುಗಳ ಬಾಂಧವ್ಯವನ್ನು ಅರಿಯಬೇಕೆನ್ನುವವರು ವಿಜ್ಞಾನ ಮತ್ತು ವೇದಾಂತಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕಾಗು ತ್ತದೆ. ಬ್ರಹ್ಮಸೃಷ್ಟಿಯಲ್ಲಿ ಮನುಷ್ಯನು ಅತ್ಯುತ್ಕೃಷ್ಟವಾದ ಪ್ರಾಣಿಯೆಂದು ಹೇಳಿಸಿಕೊಂಡಿದ್ದಾನೆ. ಬೆಲೆ ಮತ್ತು ಬಲ ಗಳಿಂದ ಮನುಷ್ಯನು ಪ್ರಾಣಿಗಳಿಗಿಂತ ಕಡಿಮೆಯೆಂದೆನ್ನಿ ಸಿದ್ದಾನೆ. ಬಲದಲ್ಲಿ ಆನೆ, ಧೈರ್ಯದಲ್ಲಿ ಸಿಂಹ, ಸಾಹಸದಲ್ಲಿ ಹುಲಿ, ವೇಗದಲ್ಲಿ ಜಿಂಕೆ, ಕುದುರೆ, ಸೌಂದರ್ಯದಲ್ಲಿ ನವಿಲು, ಮಾಧುರ್ಯದಲ್ಲಿ ಕೋಗಿಲೆ, ಕೃತಜ್ಞತೆಯಲ್ಲಿ ನಾಯಿ ಮನುಷ್ಯ ನನ್ನು ಮೀರಿಸುತ್ತವೆ. ಹುಲಿಯ ಚರ್ಮ, ಆನೆಯ ಹಲ್ಲು ಚಮರೀಮೃಗದ ಕೂದಲು, ಕಸ್ತೂರೀ ಮೃಗದ ಹೊಕ್ಕಳ ಹೊಲಸು, ಪುನುಗಿನ ಬೆಕ್ಕಿನ ಮೈಬೆವರು ಇವು ಮನುಷ್ಯನ ತತ್ಸಂಬಂಧವಾದ ವಸ್ತುಗಳಿಗಿಂತ ಹೆಚ್ಚು ಬೆಲೆ ಬಾಳುತ್ತವೆ. ಇದನ್ನೇ ಅನುಭವಿಗಳಾದ ಬಸವಣ್ಣನವರು ತಮ್ಮ ಒಂದು ವಚನದಲ್ಲಿ

> ಬೇಡನು ಒಂದು ಮೊಲವ ತಂದೊಡೆ ಅದನು ಸಲುವ
> ಹಾಗಕ್ಕೆ ಕೊಳ್ಳುವರಯ್ಯ; ನೆಲನಾಳ್ವನ ಹೆಣನೆಂದೊಡೆ
> ಅದನು ಒಂದು ಅಡಕೆಗೂ ಕೊಳ್ಳರಯ್ಯ; ಮೊಲನಿಂದ
> ಕರಕಷ್ಟ ಕಾಣಾ ನರನ ಬಾಳುವೆ ಕೂಡಲ ಸಂಗಮನಾಥ

ಎಂದು ಹೇಳಿದ್ದಾರೆ.

ಈ ವಚನದಲ್ಲಿ ಬಸವಣ್ಣನವರು ಮಾನವ ದೇಹವನ್ನು ಗಮನದಲ್ಲಿಟ್ಟು ನಿರೂಪಿಸುತ್ತಾರೆ ಎಂದು ನಾವು ತಿಳಿಯ ಬೇಕು. "ಜಂತೂನಾಂ ನರಜನ್ಮ ದುರ್ಲಭಂ" ಎಂದು ಶ್ರೀ ಶಂಕರಾಚಾರ್ಯರು ಹೇಳಿದ್ದಾರೆ. "ನರಜನ್ಮದಿಂದಿಹ ದೊಳು ಮಿಗಿಲುಂಟೆ" ಎಂದು ಶ್ರೀ ನಿಜಗುಣರು ಹೇಳು

ತ್ತಾರೆ. 'ಮಾನವ ಜನ್ಮವು ದೊಡ್ಡದು' ಎಂದು ಶ್ರೀ ಪುರಂದರದಾಸರು ನಿರೂಪಿಸುತ್ತಾರೆ.

ಈ ಮೇಲೆ ಕಂಡ ಜ್ಞಾನಿಗಳ ಮಾತುಗಳೆಲ್ಲವೂ ಮಾನವನ ಆತ್ಮನನ್ನು ಕುರಿತು ಹೇಳಿದವುಗಳು ಎಂದು ನಾವು ತಿಳಿಯ ತಕ್ಕದ್ದು. ಮನುಷ್ಯನು ತನ್ನ ಬುದ್ಧಿಶಕ್ತಿಯಿಂದ ವಿಶ್ವದ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿರುವುದನ್ನು ನಾವು ಗಮನಿಸಬಹುದು.

ಮನುಷ್ಯನು ವಾಸಮಾಡುವ ಈ ಪ್ರಪಂಚವು ಒಂದು ವಿಜ್ಞಾನದ ಪ್ರಯೋಗಶಾಲೆಯಂತಿದೆ. ಭೂಮಿಯು ಸೂರ್ಯನನ್ನು ಸುತ್ತುತ್ತದೆ. ಚಂದ್ರನು ಭೂಮಿಯನ್ನು ಸುತ್ತುತ್ತಾನೆ. ಸೂರ್ಯನು ಎಲ್ಲ ಗ್ರಹಗಳನ್ನೂ ತನ್ನ ಶಕ್ತಿಯಿಂದ ಆಕರ್ಷಿಸಿದ್ದಾನೆ. ಸೂರ್ಯನ ಪ್ರಚಂಡ ಕಿರಣ ಅದೆಷ್ಟೋ ವರುಷಗಳಿಂದ ಥಳಥಳಿಸುತ್ತಿದ್ದರೂ ಆ ಮಹಾಶಕ್ತಿ ಎಳ್ಳಷ್ಟೂ ಕಡಿಮೆಯಾಗಿಲ್ಲ. ಸಾಗರದ ಮಧ್ಯೆ ಇರುವ ಭೂಮಿ ಸೃಷ್ಟಿಯ ಆದಿಯಿಂದ ಕರಗದೆ ನಿಂತಿದೆ. ನೀರಿನಲ್ಲಿ ಹಾಕಿದ ಮಣ್ಣಿನ ಹೆಂಟೆ ಕರಗುವುದನ್ನು ನಾವು ದಿನವೂ ನೋಡುತ್ತೇವೆ. ಆದರೆ ವಿಶ್ವ ಈ ಬಗೆಗೆ ವಿಭಿನ್ನವಾಗಿದೆ. ಸೂರ್ಯೋದಯ, ಸೂರ್ಯಾಸ್ತಮಯ ಇವು ಕ್ರಮವಾಗಿ ನಡೆಯುತ್ತಿವೆ. ಷಡೃತುಗಳು ಕ್ರಮವಾಗಿ ಬರುತ್ತಿವೆ. ಸೂರ್ಯಕಿರಣದಿಂದ ಸಮುದ್ರವು ಕಾಯುತ್ತದೆ. ಕಾದ ಸಾಗರ ಆವಿಯಾಗಿ ಮೋಡವಾಗುತ್ತದೆ ಮೋಡವು ಮಳೆಯಾಗುತ್ತದೆ. ಮಳೆ ನದಿಯಾಗುತ್ತದೆ. ನದಿ ಸಮುದ್ರವನ್ನು ಸೇರುತ್ತದೆ. ಮತ್ತೆ ಈ ವ್ಯಾಪಾರ ಹೀಗೆಯೇ ನಡೆಯುತ್ತದೆ. ಇದನ್ನೆಲ್ಲ ದಿನವೂ ನಾವು ನಮ್ಮ ಕಣ್ಣಿಂದಲೇ ನೋಡುತ್ತಿದ್ದೇವೆ. ಆದರೂ ಈ ಅಗಾಧವಾದ ವಿಶ್ವದ ವ್ಯಾಪಾರಗಳನ್ನು ಕುರಿತು ಚಿಂತಿಸುವುದಿಲ್ಲ. ಇದರ ಕರ್ತೃವನ್ನು ಕುರಿತು ಯೋಚಿಸುವುದಿಲ್ಲ.

ಮನುಷ್ಯನಿಗೆ ಶ್ವಾಸೋಚ್ಛ್ವಾಸಕ್ಕೆ ಆಮ್ಲಜನಕ ಬೇಕು (oxygen). ಮರಗಳಿಗೆ ಇಂಗಾಲಾಮ್ಲ ಬೇಕು (carbon di-oxide). ಮರಗಿಡಗಳಿಗೆ ಚೆಲೋ ಗೊಬ್ಬರ ಬೇಕು. ಅದು ಮನುಷ್ಯನಿಗೆ ಬೇಡವಾದುದು, ಅನಾರೋಗ್ಯಕರವಾದುದು. ಇಂಗಾಲಾಮ್ಲವನ್ನು ಸೇವಿಸಿದ ಮರಗಳು ಹಣ್ಣು ಹಂಪಲುಗಳನ್ನು ಕೊಟ್ಟು ಮಾನವನನ್ನು ಕಾಪಾಡುತ್ತವೆ. ಕಸ ಕಡ್ಡಿಗಳನ್ನು ತಿಂದು ಬಾಳುವ ಪಶುಗಳು ಮನುಷ್ಯನಿಗೆ ಅಮೃತವನ್ನು ಕೊಡುತ್ತವೆ. ಅದರಿಂದ ಮನುಷ್ಯನು ಬದುಕುತ್ತಾನೆ. ವಿಶ್ವದ ಈ ವ್ಯವಹಾರವು ಮಾನವ, ವೃಕ್ಷ, ಮತ್ತು ಪಶುಗಳ ಸಂಬಂಧವು ಪರಸ್ಪರ ಪೂರಕವೆಂಬುದನ್ನು ಸಿದ್ಧಪಡಿಸುತ್ತದೆ. ಮನುಷ್ಯನಿಗೆ ಮಾರಕವಾದ ಇಂಗಾಲಾಮ್ಲ ಮರಗಿಡಗಳಿಗೆ ಜೀವನಾಧಾರವೆನಿಸಿದೆ ಜನಕ್ಕೆ ಬೇಡವಾದ ಗೊಬ್ಬರ ಗಿಡಮರಗಳಿಗೆ ಆಹಾರವೆನಿಸಿದೆ.

ಆಕಾಶದಿಂದ ಬೀಳುವ ಮಳೆಯ ಜೊತೆಯಲ್ಲಿ ಜೀವಾಣುಗಳು ಬರುತ್ತವೆ. ಭೂಮಿಯ ಧಾನ್ಯಗಳಲ್ಲಿ ಸೇರುತ್ತವೆ. ತಂದೆಯ ಧಾತುವಿನಲ್ಲಿ ಬಳೆಯುತ್ತವೆ. ತಾಯಿಯ ಗರ್ಭದಲ್ಲಿ ಅವು ಪಿಂಡರೂಪವನ್ನು ಪಡೆಯುತ್ತವೆ. ಆಮೇಲೆ ಆ ಪಿಂಡವು ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಶ್ರೀಕೃಷ್ಣ, ಬುದ್ಧ, ಕಲ್ಕಿ ಈ ದಶಾವತಾರಗಳ ಸಂಕೇತವೆಂಬಂತೆ ಬಳೆಯುತ್ತವೆ. ಈ ಜೀವನ ವಿಜ್ಞಾನವು ಮನುಷ್ಯನು ತಿಳಿಯಲು ಅರ್ಹವಾದುದು. ಅಂಡಜ, ಪಿಂಡಜ, ಸ್ವೇದಜ, ಉದ್‌ಭಿಜ ಎಂಬ ಸೃಷ್ಟಿಯ ಗುಟ್ಟು ಗುರಿಗಳು ತಿಳಿಯಲರ್ಹವೆನಿಸಿವೆ. ಡಾರ್ವಿನ್ ಮಹಾಶಯನು 'ಮಾನವನ ಮೂಲ ಮಂಗಗಳಿಂದ' ಎಂದು ಹೇಳಿದ್ದಾನೆ. ರಾಮಾಯಣದಲ್ಲಿ ವಾನರರ ಪರಾಕ್ರಮ ನಿರೂಪಿತವಾಗಿದೆ. ಮುಂದಿನ ಬ್ರಹ್ಮಪದವಿ ವಾನರ ಶ್ರೇಷ್ಠ ಮಾರುತಿಗೆ ಎಂದು ಹೇಳಿದೆ. 'ಭೂಮಿಯಲ್ಲಿ, ಲಿಂಗದಲ್ಲಿ, ಕಂಭದಲ್ಲಿ ಮಾನವನು ಹುಟ್ಟಿದನು' ಎಂಬ ಪುರಾಣೋಕ್ತಿಗಳನ್ನು ಶಿವಶರಣರು ಟೀಕಿಸಿ 'ಕರ್ಣದೊಳಗೆ ಹುಟ್ಟಿದವರುಂಟೆ? ಸ್ತ್ರೀ ಪುರುಷರ ಸಂಗದಿಂದಲ್ಲದೆ ಪಿಂಡವಾಗದು' ಈ ಮೊದಲಾದ ಮಾತುಗಳಿಂದ ಅಲ್ಲಗಳೆದಿದ್ದಾರೆ. ಶಿವಶರಣರ ಈ ವಿಜ್ಞಾನ ದೃಷ್ಟಿ ನಿಜಕ್ಕೂ ಆಶ್ಚರ್ಯಕರವಾಗಿದೆ.

ಸೃಷ್ಟಿಯ ಮೂಲವನ್ನು ಪರೀಕ್ಷಿಸಿದಾಗ ಹೆಣ್ಣು ಮತ್ತು ಗಂಡಿನ ದೇಹ ಮತ್ತು ಆತ್ಮವು ಒಂದೇ ಪ್ರಕಾರವಾದವು. ಆತ್ಮವು ಭಗವದಂಶೀಭೂತವಾದುದು. ದೇಹವು ಪಂಚಭೂತಾತ್ಮಕವಾದುದು. ಸೃಷ್ಟಿಗಾಗಿ ಕೆಲವು ಅವಯವಗಳ ವ್ಯತ್ಯಾಸ. "ಗಂಡಿಗೆ ಹೆಣ್ಣು ಮಾಯೆ; ಹೆಣ್ಣಿಗೆ ಗಂಡು ಮಾಯೆ" "ಯೋಗಿಗೆ, ಯೋಗಿಣಿ ಮಾಯೆ, ಯೋಗಿಣಿಗೆ ಯೋಗಿ ಮಾಯೆ" ಎಂಬ ಅಕ್ಕ ಮಹಾದೇವಿಯ ವಚನದಂತೆ ಈ ಗಂಡು ಹೆಣ್ಣುಗಳು ಪರಸ್ಪರ ಆಕರ್ಷಕವಾಗಿವೆ. ಇದೊಂದು ಸೃಷ್ಟಿಯ ಮೂಲ. ಕಾಮ, ಕ್ರೋಧ, ಲೋಭಗಳು ಸೃಷ್ಟಿಯ ಬೀಜ ಎಂಬ ಗೀತೆಯ ಮಾತನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದು. ಶಿವಶರಣರ 'ಶರಣ ಸತಿ ಲಿಂಗಪತಿ' ನ್ಯಾಯವು ಈ ಹೆಣ್ಣು ಗಂಡುಗಳ ಭಾವವನ್ನು ಮೀರಿನಿಂತಿದೆ.

ನಮ್ಮ ಹಿಂದೂಜನರ ದೇವರ ಕಲ್ಪನೆಯಲ್ಲಿ ಕೂಡ ವಿಜ್ಞಾನ—ವೇದಾಂತಗಳ ಸಮನ್ವಯವಿದೆ. ಪರಮೇಶ್ವರನ ಕಣ್ಣುಗಳು, ಸೂರ್ಯ, ಚಂದ್ರ, ಅಗ್ನಿ. ಅಲ್ಲದೆ ಅವನು ಅಷ್ಟಾಂಗತನು. ಇದರ ಮೇಲೆ ಗಂಗಾಧರ ಈ ಭಾವನೆ

ಯಲ್ಲಿ ಪ್ರಪಂಚವೆಲ್ಲವೂ ಅಡಗಿ ಹೋಗಿದೆ. ವಿಷ್ಣುವು ಶೇಷ ಶಾಯಿ. ಶೇಷನಿರುವುದು ಪಾತಾಳದಲ್ಲಿ. ಅಲ್ಲದೆ ಅವನು ಗರುಡ ಗಮನ. ಗರುಡ ಇರುವುದು ಆಕಾಶದಲ್ಲಿ. ಆ ಗರುಡ ಮತ್ತು ಸರ್ಪ ದ್ವೇಷರಹಿತವಾಗಿ ಭಗವಂತನ ಸೇವೆಯಲ್ಲಿ ನಿರತವಾಗಿವೆ ಎಂಬ ಈ ಕಲ್ಪನೆ ಎಷ್ಟು ಸುಂದರವಾಗಿದೆ. ವಿಷ್ಣುವು ಆಕಾಶ, ಭೂಮಿ, ಪಾತಾಳಗಳನ್ನು ವ್ಯಾಪಿಸಿರುವ ನೆಂಬುದು ಇಲ್ಲಿ ತತ್ತ್ವ. ಚತುರ್ಮುಖನಾದ ಬ್ರಹ್ಮನು ವೇದ ಗಳ ಜನಕ. ನಾಲ್ಕು ಕಡೆಗೆ ದೃಷ್ಟಿಯುಳ್ಳವನು. ಸರಸ್ವತಿ ಅವನ ನಾಲಗೆಯಲ್ಲಿ ನೆಲಸಿದ್ದಾಳೆ. ನಿರ್ಮಲವಾದ ಹಂಸ ವನ್ನೇ ವಾಹನವನ್ನಾಗಿ ಉಳ್ಳವನಾಗಿದ್ದಾನೆ. ಎಷ್ಟು ಸುಂದರವಾಗಿದೆ ಈ ತ್ರಿಮೂರ್ತಿಗಳ ಕಲ್ಪನೆ. ಅನಂತರ ವಿರಾಟ್ಪುರುಷನ ಕಲ್ಪನೆಯಲ್ಲಿ ಈ ತ್ರಿಮೂರ್ತಿಗಳೂ ಸೇರಿ ಹೋಗಿದ್ದಾರೆ. ಸೂರ್ಯ ಚಂದ್ರಾದಿಗಳು ಅಲ್ಲಿ ಅಡಗಿದ್ದಾರೆ. ಬ್ರಹ್ಮಾಂಡವೆಲ್ಲಾ ಅಲ್ಲಿದೆ. ಭಗವದ್ಗೀತೆಯ ೧೧ನೆಯ ಅಧ್ಯಾಯವು ಈ ವಿಷಯವನ್ನು ಸವಿಸ್ತಾರವಾಗಿ ನಿರೂಪಿಸಿದೆ. ಅಗಾಧವಾದ ಈ ಸೃಷ್ಟಿಗೆ ಒಬ್ಬ ಕರ್ತೃ ಇದ್ದಾನೆ. ಅವನು ಸಚ್ಚಿದಾನಂದ ಸ್ವರೂಪನಾಗಿದ್ದಾನೆ. ಅವನು ಸಹಸ್ರಾಕ್ಷ ನಾಗಿ, ಸಹಸ್ರ ಪಾದನಾಗಿ, ಅತ್ಯತಿಷ್ಠದ್ದಶಾಂಗುಲನಾಗಿ ಇದ್ದಾನೆ. ಅಣೋರಣೀಯನೂ ಮಹತೋಮಹೀಯನೂ ಆದ ಅವನು ಜಗತ್ತಿಗೆ ಕಾರಣ; ಅವನಿಗೆ ಯಾವ ಕಾರಣವೂ ಇಲ್ಲ. ಅವನು ಜಗತ್ತಿನ ತಂದೆ ತಾಯಿ; ಅವನಿಗೆ ಯಾವ ತಂದೆ ತಾಯಿಗಳೂ ಇಲ್ಲ ಎಂಬ ಮಾತನ್ನು ಕಾಳಿದಾಸಾದಿ ತತ್ತ್ವಜ್ಞಾನಿಗಳು ಹೇಳಿದ್ದಾರೆ. ಹಿಂದೂ ಜನರ ದೇವರ ಕಲ್ಪನೆಯು ಎಷ್ಟು ಸುಂದರವಾದುದು ಮತ್ತು ವೇದಾಂತ ವಿಜ್ಞಾನಗಳ ಸಮನ್ವಯಪಾದುದು ಎಂಬುದನ್ನು ಇದರಿಂದ ನಾವು ಅರಿಯಬಹುದು. ಶೈವ ದಾರ್ಶನಿಕರ ಲಿಂಗದ ಕಲ್ಪನೆ ತ್ರಿಮೂರ್ತಿಗಳನ್ನು ಒಳಗೊಂಡಿದೆ. ದೇವರ ಕಲ್ಪನೆಗೆ ಉತ್ತಮ ನಿದರ್ಶನವೆನಿಸಿದೆ. ಸಗುಣ ನಿರ್ಗುಣ ಪೂಜೆಗಳ ಸಮನ್ವಯವೆನಿಸಿದೆ ಈ ಲಿಂಗಪೂಜೆ. ಭಾರತ ದಲ್ಲಿನ ದ್ವಾದಶ ಜ್ಯೋತಿರ್ಲಿಂಗಗಳ ಪ್ರಾಚೀನತೆಯೂ, ರಾಮಾಯಣದಲ್ಲಿ ಶ್ರೀರಾಮನು ಲಿಂಗಪೂಜೆ ಮಾಡಿದುದೂ, ಮಹಾಭಾರತದಲ್ಲಿ ಅರ್ಜುನನು ಮರಳು ಲಿಂಗಪೂಜೆ ಮಾಡಿದುದೂ ಇಲ್ಲಿ ಸ್ಮರಣಾರ್ಹವಾಗಿವೆ. ಲಿಂಗಪೂಜೆಯು ಸಚ್ಚಿದಾನಂದರೂಪ ಪರಮಾತ್ಮನ ನೆನಹಿಗೆ ಒಂದು ಗಂಭೀರ ಸಾಧನೆಯಾಗಿದೆ.

ಮನುಷ್ಯನು ಹುಟ್ಟಿರುವುದು ಮೋಕ್ಷಕ್ಕಾಗಿ. ಧರ್ಮ ಮೂಲವಾದ ಅರ್ಥ ಕಾಮಗಳನ್ನು ಅರ್ಜಿಸಿ ಮೋಕ್ಷಕ್ಕೆ ಎರವಾಗದ ಹಾಗೆ ಇಹಪರಗಳನ್ನು ಜೊತೆಜೊತೆಯಲ್ಲಿಯೇ ಸಾಧಿಸಬೇಕೆಂಬುದು ಹಿಂದೂ ಧರ್ಮದ ಸಿದ್ಧಾಂತ. ಮನುಷ್ಯನು ಇತರ ಪ್ರಾಣಿಗಳಿಗಿಂತಲೂ ಮಿಗಿಲಾದ ಆಲೋಚನಾ ಶಕ್ತಿ, ಮಾತನಾಡುವ ಶಕ್ತಿ, ಮತ್ತು ಆನಂದ ಶಕ್ತಿಗಳನ್ನು ಪಡೆದಿದ್ದಾನೆ. ನಗುವ ಕಲೆ ಮನುಷ್ಯನ ಹೊರತು, ಮಾತನಾಡುವ ಶಕ್ತಿ ಮನುಷ್ಯನ ಹೊರತು, ಪರಿಪೂರ್ಣವಾದ ಆಲೋಚನಾಶಕ್ತಿ ಮಾನವನ ಹೊರತು ಮತ್ತಾವ ಪ್ರಾಣಿಗಳಿಗೂ ಇಲ್ಲವೆಂಬುದನ್ನು ನಾವು ನೆನಪಿ ನಲ್ಲಿಟ್ಟುಕೊಳ್ಳಬೇಕು. ಈ ಅಪೂರ್ವವಾದ ಶಕ್ತಿತ್ರಯ ಗಳನ್ನು ವಿಕಾಸಪಡಿಸಿಕೊಂಡು ಮನುಷ್ಯನು ಇಹಪರಗಳನ್ನು ಸಾಧಿಸಬೇಕಾದರೆ ಅವನಿಗೆ ವೇದಾಂತ-ವಿಜ್ಞಾನಗಳ ಪರಿಚಯ ಅಗತ್ಯ. ರಾಮಾಯಣದಲ್ಲಿ ಬರುವ ಪುಷ್ಪಕ ವಿಮಾನ, ಅಜ್ಜಿಯ ಕತೆಗಳಲ್ಲಿ ಬರುವ ಕೀಲು ಕುದುರೆ, ಯುದ್ಧಗಳಲ್ಲಿ ಬಳಸುವ ಅಗ್ನಿಬಾಣ, ವರುಣಾಸ್ತ್ರ ಮೊದಲಾದುವುಗಳೆಲ್ಲವೂ ವಿಜ್ಞಾನದ ಸಂತಾನವೇ ಆಗಿವೆ.

ನಮ್ಮ ಜನರು ಊಟ ಮಾಡಿ ನೂರಡಿ ತಿರುಗುವುದು, ಎಡ ಮಗ್ಗುಲಲ್ಲಿ ಮಲಗುವುದು, ಬೆಳಗ್ಗೆ ಎದ್ದು ಸ್ನಾನ ಪೂಜೆ, ಮಾಡುವುದು, ಸಂಧ್ಯಾವಂದನೆ ಮಾಡುವುದು, ಊಟವಾದ ಮೇಲೆ ಹಾಲು ಕುಡಿಯುವುದು, ಊಟದಲ್ಲಿ ಹಪ್ಪಳ, ಸಂಡಿಗೆ ಬಳಸುವುದು, ಎರಡು ಕೈಗಳಿಂದಲೂ ಪಾತ್ರೆ ಯನ್ನು ಎತ್ತಿಕೊಂಡು ನೀರು ಕುಡಿಯುವುದು, ಯಜ್ಞ ಗಳನ್ನು ಮಾಡುವುದು ಇವೆಲ್ಲವೂ ವಿಜ್ಞಾನದ ವಿಚಾರಗಳೇ ಆಗಿವೆ. ನವರಂಧ್ರಮಯವಾದ ಘಟವೆಂಬ ದೇಹದಲ್ಲಿ ಭುವನವೆಂಬ ನೀರು ಅಥವಾ ಪ್ರಾಣ ಹಲವಾರು ವರ್ಷ ಇರುವುದೇ ಒಂದು ಸೋಜಿಗವೆಂದು ತಿರುವಳ್ಳುವರ್ ಹೇಳಿ ದ್ದಾರೆ. ಪ್ರಾಣದಿಂದ ಕೂಡಿದ ದೇಹ ವಿದ್ಯುಚ್ಛಕ್ತಿಯಿಂದ ಕೂಡಿದ ಬಲ್ಬಿನಂತಿರುತ್ತದೆ. ಪ್ರಾಣದ ಗಾಳಿ ಹೊರಗೆ ಹೋದರೆ ಈ ದೇಹ ಸೌದೆಹೊರೆಗೆ ಸಮವೆನಿಸುತ್ತದೆ. ಆತ್ಮ ವಿಲ್ಲದ ದೇಹ ಮೃತದೇಹ. ಆದುದರಿಂದ ವೇದಾಂತದ ಪರಿಚಯವಿಲ್ಲದ ವಿಜ್ಞಾನವು ಮೃತ ದೇಹದಂತೆ. ವೇದಾಂತದ ಮಾರ್ಗದಲ್ಲಿ ಪ್ರಪಂಚವನ್ನು ತಿಳಿಯಲೆತ್ನಿಸು ವುದು ವಿವೇಕದ ಹಾದಿ. ದೇಹ, ಇಂದ್ರಿಯ, ಅಂತಃಕರಣ ಗಳ ಸಂಬಂಧ ಸ್ವರೂಪ ತಿಳಿಯುವುದು, ಆತ್ಮನಿಗೆ ಇವು ಹೇಗೆ ಅಧೀನವಾದುವು ಎಂಬುದನ್ನು ಅರಿಯುವುದು, ಮರಣ ಕಾಲದಲ್ಲಿ, ಇಂದ್ರಿಯಗಳಲ್ಲಿ ಮನಸ್ಸು, ಮನಸ್ಸಿನಲ್ಲಿ ಪ್ರಾಣ, ಪ್ರಾಣದಲ್ಲಿ ಜೀವ ಸೇರಿ ಎಲ್ಲರ ಮುಂದೆ ಯಾರಿಗೂ ಕಾಣದಂತೆ ಹಾರಿಹೋಗುವುದೆಂಬುದು ಇದನ್ನು ತಿಳಿಯು ವುದು ಅಗತ್ಯ. ಇವೆಲ್ಲಕ್ಕೂ ವೇದಾಂತ-ವಿಜ್ಞಾನಗಳ ಜಿಜ್ಞಾಸೆ ಅಗತ್ಯವಾಗಿದೆ.

ಬ್ರಹ್ಮನು ಅಥವಾ ಈಶ್ವರನು ಜಗತ್ತಿನ ಕಾರಣನು. ಪ್ರಪಂಚ ಅವನ ಕಾರ್ಯ ಎಂಬುದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ ಆದರೆ ಕಾರಣರೂಪನಾದ ಬ್ರಹ್ಮನು ಸತ್ಯ. ಅವನ ಕಾರ್ಯವಾದ ಪ್ರಪಂಚ ಮಾಯೆ (ಸುಳ್ಳು) ಎಂದು ಕೆಲವರು ವೇದಾಂತಿಗಳು ಹೇಳುತ್ತಾರೆ. ರಜ್ಜು ಸರ್ಪ, ಶುಕ್ತಿರಜತ ನ್ಯಾಯಗಳು ಅವರಿಗೆ ಆಶ್ರಯವಾಗಿವೆ. ಕಾರಣವು ಸತ್ಯವಾಗಿದ್ದು ಕಾರ್ಯವು ಅಸತ್ಯ ವಾಗುವುದು ಹೇಗೆ ಎಂಬ ಜಿಜ್ಞಾಸೆ ಇಲ್ಲಿ ಉದ್ಭವಿಸುತ್ತದೆ. ನೀರಿನಲ್ಲಿ ಸಕ್ಕರೆ ಕರಗುತ್ತದೆ. ವಿಜ್ಞಾನಿಗಳು ಮತ್ತೆ ನೀರು ಸಕ್ಕರೆಗಳನ್ನು ಬೇರೆ ಮಾಡುತ್ತಾರೆ. ಇದರಿಂದ ಅವೆರಡೂ ಇವೆ ಎಂದೇ ಅರ್ಥವಾಗುತ್ತದೆ. ಅಂತೆಯೇ ಪರಬ್ರಹ್ಮಮಯವಾದ ಪ್ರಪಂಚವು ಪರಿವರ್ತನಾತ್ಮಕವೆನಿಸಿದೆ. ಆದಮಾತ್ರಕ್ಕೆ ಅದು ನಶ್ವರ ಎನ್ನಲಾಗದು ಎಂಬುದು ಕೆಲವರ ವಾದವಾಗಿದೆ. ಶಿವಶರಣರು ಶಿವ, ಶಕ್ತಿ ಎರಡೂ ಸತ್ಯ ಎಂದು ಹೇಳುತ್ತಾರೆ.

ಪ್ರಕೃತಿ ಮಾತ್ರ ನಿಜ, ಕಣ್ಣಿಗೆ ಕಾಣುವುದು ಮಾತ್ರ ಸತ್ಯ. ದೇವರೆಂಬುದು ಅಂಜುಬುರುಕರು, ಮೂಢ ಬುದ್ಧಿಯವರು ಮಾಡಿಕೊಂಡ ಸಂಕೇತ ಎನ್ನುವ ವಿಜ್ಞಾನಿಗಳೂ ನಮ್ಮಲ್ಲಿದ್ದಾರೆ. ಚಾರ್ವಾಕರು, ಸಾಂಖ್ಯರು ದೇವರನ್ನು ನಂಬುವುದಿಲ್ಲ. ಬೌದ್ಧರು ದೇವರನ್ನು ಕುರಿತು ಚರ್ಚಿಸುವುದೇ ಇಲ್ಲ. ಜೈನರಲ್ಲಿ ದೇವರೆಂಬ ಮೂಲ ವ್ಯಕ್ತಿಯೇ ಇಲ್ಲ. ಕಾಲ, ಕರ್ಮ, ಜೀವ ಇವು ಜೈನರ ಅನಾದಿ ತತ್ತ್ವಗಳು. ಹೀಗೆ ಕೆಲವರು ಪುನರ್ಜನ್ಮವನ್ನೂ, ಕೆಲವರು ದೇವರನ್ನೂ ಒಪ್ಪುವುದಿಲ್ಲ. ಇಂದಿಗೂ ವಿಶ್ವದಲ್ಲಿ ಇಂತಹ ವಿಚಾರದ ೩ನೆಯ ಒಂದು ಭಾಗದಷ್ಟು ಜನರಿದ್ದಾರೆಂಬುದು ಗಮನಾರ್ಹ. ಬ್ರಹ್ಮವು ಸತ್ಯ, ಪ್ರಕೃತಿಯೂ ಸತ್ಯ. ಕಾರಣದ ಗುಣಗಳು ಕಾರ್ಯವನ್ನು ಅವಲಂಬಿಸುವುದು ಸಹಜ ಬೀಜಭೂಜನ್ಯಾಯದಂತೆ ಎನ್ನುವ ಯಥಾರ್ಥಮತಿಗಳೂ ಇದ್ದಾರೆ. ಸರ್. ಸಿ. ವಿ. ರಾಮನ್ ಹೇಳಿದಂತೆ ಜಗತ್ತಿನ ಮೂಲ ವಸ್ತುಗಳು 'ಮ್ಯಾಟರ್ ಮತ್ತು ಎನರ್ಜಿ' ಎಂಬುದನ್ನು ನಾವು ತಿಳಿದಾಗ, ಪ್ರಕೃತಿ ಪುರುಷರು ಕಾರ್ಯಕಾರಣ ಸಂಬಂಧವುಳ್ಳವರು ಎಂದಾಗ, ವೇದಾಂತ ವಿಜ್ಞಾನಗಳು ನಾಣ್ಯದ ಎರಡು ಮಗ್ಗುಲಿದ್ದಂತೆ ನಮಗೆ ಕಾಣಿಸಿಕೊಳ್ಳುತ್ತವೆ.

**ಬಿ. ಶಿವಮೂರ್ತಿ ಶಾಸ್ತ್ರೀ**

---





# ಗ್ರಂಥಾವಲೋಕನ

**ಶ್ರೀ ರಾಘವೇಂದ್ರ ಸ್ವಾಮಿಗಳು: ಲೇ: ಮೂಲರಘುಪತಿ; ಪ್ರಕಾಶಕರು: ಶ್ರೀ ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ, ನಂಜನಗೂಡು, ಪುಟ: xiv + ೧೬೬ ; ಬೆಲೆ: ೧-೫೦.**

ದ್ವೈತ ಸಿದ್ಧಾಂತ ಪ್ರಪಂಚದಲ್ಲಿ ಮಂತ್ರಾಲಯದ ಶ್ರೀ ರಾಘವೇಂದ್ರ ಗುರುಗಳ ಹೆಸರು ತುಂಬ ಪ್ರಸಿದ್ಧವಾದುದು. ಅವರು ಸಿದ್ಧಾಂತದ ಅನೇಕ ಉದ್ಗ್ರಂಥಗಳನ್ನು ರಚಿಸಿ ತತ್ತ್ವ ಪ್ರಚಾರ ಮಾಡಿದುದರೊಂದಿಗೆ, ತಮ್ಮ ಅಶೇಷ ಪುಣ್ಯರಾಶಿಯನ್ನು ಭಕ್ತರಿಗೆ ಧಾರೆಯೆರೆಯುವುದರ ಮೂಲಕ ಮಹಾಕರುಣಾಳುವಾದ ಗುರು ಸಾರ್ವಭೌಮ ಎಂಬ ಅನ್ವರ್ಥ ನಾಮಕ್ಕೆ ಪಾತ್ರರಾಗಿದ್ದಾರೆ. ಅವರು ಜೀವಿಸಿದ್ದಾಗಲೂ ತುಂಗಭದ್ರೆಯ ತಡಿಯಲ್ಲಿರುವ ಮಂತ್ರಾಲಯ ಕ್ಷೇತ್ರದಲ್ಲಿ ಸಶರೀರರಾಗಿ ವೃಂದಾವನ ಪ್ರವೇಶ ಮಾಡಿದ ಮೇಲಿನ ಈ ಮುನ್ನೂರು ವರ್ಷಗಳಲ್ಲಿಯೂ, ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಜನರನ್ನು ಉದ್ಧರಿಸಿ "ಕಲಿಯುಗ ಕಲ್ಪತರು" ಎಂಬ ಪ್ರಶಂಸೆಗೆ ಪಾತ್ರರಾಗಿದ್ದಾರೆ. "ಕರೆದಲ್ಲಿಗೆ ಬರುವ" ಎಂಬ ಹರಿದಾಸ ವಾಣಿಯಂತೆ ಶ್ರೀ ರಾಘವೇಂದ್ರ ಗುರು ಸಾರ್ವಭೌಮರ ವೃಂದಾವನಗಳು ನಾಡಿನ ಅನೇಕ ಕೇಂದ್ರಗಳಲ್ಲಿ ಅಂದಿನಿಂದಲೂ ಆಗಾಗ್ಗೆ ಸ್ಥಾಪಿತವಾಗುತ್ತಲಿದ್ದು, ಅಲ್ಲೆಲ್ಲಾ ರಾಯರ ಮಹಿಮೆಗಳು ಪ್ರಕಟವಾಗುತ್ತಿವೆ. ಲೌಕಿಕ ಪ್ರಯೋಜನಗಳಿಗಾಗಿ ರಾಯರ ಶರಣು ಹೊಕ್ಕವರು ಅವರ ಕೃಪೆಗೆ ಪಾತ್ರರಾದವರು ಅನಂತರ ಆಧ್ಯಾತ್ಮಿಕ ಬಲವನ್ನೂ ಗಳಿಸಿಕೊಂಡು ಇಹಪರ ಲಾಭಗಳನ್ನು ಹೊಂದಿದ್ದಾರೆ. ಆಧ್ಯಾತ್ಮಿಕ ಅರಿವನ್ನು ಬಯಸುವವರಿಗೆ ಅವರು ಜ್ಞಾನ ನಿಧಿಗಳೂ ಆಗಿದ್ದಾರೆ.

ಇಂತಹ ಮಹಾಮಹಿಮರಾದ ಮಂತ್ರಾಲಯದ ಗುರುರಾಜ ಶ್ರೀ ರಾಘವೇಂದ್ರ ಗುರುಗಳ ಜೀವನ ಚರಿತ್ರೆ ಮತ್ತು ಅಗಮ್ಯ ಮಹಿಮೆಗಳನ್ನು ಪ್ರಸಕ್ತ ಗ್ರಂಥ ಚಿತ್ರಿಸ ಹೊರಟಿದೆ. ಜೀವನ ಚರಿತ್ರೆಗೆ ೮೮ ಪುಟಗಳು ವಿನಿಯೋಗವಾಗಿದ್ದರೆ, ಮಹಿಮೆಗಳಿಗೆ, ಪವಾಡ ವರ್ಣನೆಗೆ ೭೬ ಪುಟಗಳು ಮೀಸಲಾಗಿವೆ. ಆಸ್ತಿಕರು, ರಾಯರ ಭಕ್ತವೃಂದ ಈ ಗ್ರಂಥಾವಲೋಕನದಿಂದ ತುಂಬ ಪ್ರಯೋಜನ, ಆನಂದ ಹೊಂದುವುದರಲ್ಲಿ ಸಂದೇಹವಿಲ್ಲ.

ಶ್ರೀ ಅಪ್ಪಣ್ಣಾಚಾರ್ಯಕೃತ ಶ್ರೀ ರಾಘವೇಂದ್ರ ಸ್ತೋತ್ರ ಶ್ಲೋಕದ ಸಾಲುಗಳನ್ನು ಉದ್ಧರಿಸಿ, ಅವುಗಳಿಗೆ ಉದಾಹರಣೆಯಾಗಿ, ನಡೆದ ಅನೇಕ ಪವಾಡಗಳನ್ನು ಕಥಾತ್ಮಕವಾಗಿ ಇಲ್ಲಿ ವಿವರಿಸಿರುವುದು ಈ ಪುಸ್ತಕದ ವೈಶಿಷ್ಟ್ಯವೆನ್ನಬಹುದು.

ಈ ಗ್ರಂಥ ವ್ಯಾಸಂಗದಿಂದ ಶ್ರೀ ರಾಘವೇಂದ್ರ ಗುರುಗಳಲ್ಲಿ ವಿಶ್ವಾಸ-ಭಕ್ತಿ ಉದಯವಾಗಿ ಆ ಮೂಲಕ ಪರಮಾತ್ಮನಲ್ಲಿಯೂ ಶ್ರದ್ಧೆ ಭಕ್ತಿಗಳು ಹುಟ್ಟುವುದು ಸಾಧ್ಯ-ಸ್ವಾಭಾವಿಕ. ಆಧ್ಯಾತ್ಮಿಕ ಶ್ರದ್ಧೆ ಲಯವಾಗುತ್ತಿರುವ ಈ ಕಾಲದಲ್ಲಿ ಇಂತಹ ಪುಸ್ತಕಗಳು, ಆಸ್ತಿಕ ಬುದ್ಧಿ ಪ್ರಚೋದನೆಗೆ ಸಹಾಯಕ; ಅದು ಅಗತ್ಯವಾಗಿ ಆಗಬೇಕಾದ ಕಾರ್ಯ. "ಮೂಲರಘುಪತಿ" ರಚಿತ "ಗುರುಚರಿತೆ" ಪ್ರಕಟವಾದಾಗ ಅದರಲ್ಲಿನ ಅನೇಕ ಅಭಿಪ್ರಾಯಗಳ ವಿಚಾರದಲ್ಲಿ ವಿರೋಧ, ವಾದ, ಗೊಂದಲ ನಡೆಯಿತು. ಆ ಗ್ರಂಥದಿಂದ ಶ್ರೀ ರಾಘವೇಂದ್ರ ಗುರುಗಳ ಚರಿತ್ರೆ ಭಾಗವನ್ನು ಮಾತ್ರ ಆಯ್ದು ಈಗ ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರದವರು ಪ್ರಕಟಿಸಿರುವುದು ಸ್ವಾಗತಾರ್ಹ.

ಪ್ರಕಾಶಕರು ತಾವೇ ಸ್ವಂತವಾಗಿ ಮುದ್ರಣಾಲಯವನ್ನು ಹೊಂದಿದ್ದರೂ, ಪುಸ್ತಕ ಅಷ್ಟೇನೂ ಅಂದವಾಗಿ ಅಚ್ಚುಕಟ್ಟಾಗಿ ಆಗಿಲ್ಲದಿರುವುದು ಆಶ್ಚರ್ಯಕರವಾಗಿದೆ. ಅಚ್ಚಿನ ದೋಷಗಳು ಅಷ್ಟಾಗಿ ಇಲ್ಲದಿದ್ದರೂ ಅಕ್ಷರಗಳ ಮುದ್ರಣ ಅಷ್ಟೇನೂ ಅಂದವಾಗಿಲ್ಲ. ಆಸ್ತಿಕ ವೃಂದ ಆಸಕ್ತಿಯಿಂದ ಕೊಂಡು, ಶ್ರದ್ಧೆಯಿಂದ ಓದಿ ಶೇಖರಿಸಿ ಇಟ್ಟುಕೊಳ್ಳುವ ಇಂತಹ ಹೊತ್ತಗೆಗಳು ಎಲ್ಲ ದೃಷ್ಟಿಗಳಿಂದಲೂ ಸಮರ್ಪಕ, ಸುಂದರ, ಆಗಿರುವುದು ಆವಶ್ಯಕ. ೧೯೬೭ ಮತ್ತು ೧೯೬೩ ಹೀಗೆ ಕ್ಷಿಪ್ರದಲ್ಲೇ ಪುನರ್ಮುದ್ರಣವಾಗುತ್ತಿರುವ ಈ ಕೃತಿ ಜನಪ್ರಿಯವೂ ಆಗಿರುವಂತಿದೆ. ಇದನ್ನು ಇನ್ನೂ ಅಂದವಾಗಿ ಅಚ್ಚುಕಟ್ಟಾಗಿ ಆಕರ್ಷಕವಾಗಿ ಹೊರತರುವುದು ಅಗತ್ಯ ಎಂದು ಹೇಳಬೇಕೆನಿಸುತ್ತದೆ.

**ಪುರಂದರೋಪನಿಷತ್ (ಭಾಗ ೩); ಲೇ: ಶ್ರೀ ಭದ್ರಗಿರಿ ಕೇಶವದಾಸರು; ಪ್ರಕಾಶಕರು: ದಾಸಾಶ್ರಮ, ಪುರಂದರಪುರ, ರಾಜಾಜಿನಗರ, ಬೆಂಗಳೂರು–೧೦; ಪುಟ: ೧೭೮ ಬೆಲೆ: ೨ ರೂ.**

ಇದೇ ಗ್ರಂಥಕರ್ತರಿಂದ ಪುರಂದರೋಪನಿಷತ್ ಗ್ರಂಥದ ಎರಡು ಭಾಗಗಳು ಈಗಾಗಲೇ ಹೊರಬಿದ್ದಿದ್ದು, ಅವುಗಳ ಅವಲೋಕನವೂ ಈ ಪತ್ರಿಕೆಯಲ್ಲಿ ಹಿಂದೆ ಪ್ರಕಟವಾಗಿದೆ.

ಇದೀಗ ಅದರ ಮೂರನೆಯ ಭಾಗ ಪ್ರಕಟವಾಗಿದೆ. ಯೋಜನೆಯೊಂದನ್ನಿಟ್ಟುಕೊಂಡು ಪುಸ್ತಕ ರಚನೆ-ಪ್ರಕಟಣೆಗಳನ್ನು ಆಯಾ ಕಾಲಕ್ಕೆ ಸಾಧಿಸುವುದು ಸಾಮಾನ್ಯ ವಿಷಯವೇನಲ್ಲ. ಗ್ರಂಥಕರ್ತರ ಜನಪ್ರಿಯತೆ ವ್ಯವಸ್ಥಾ ಸಾಮರ್ಥ್ಯಗಳಿಂದ ಇದು ಸಾಧ್ಯವಾಗಿದೆ. ಇದು ಪ್ರಶಂಸನೀಯ. ಪುರಂದರ ದಾಸರ ಉತ್ತಮ ಭಾಷ್ಯಕಾರರೆಂದು ಪುಸ್ತಕದ ಮುನ್ನುಡಿಯಲ್ಲಿ ನ್ಯಾಯಾಧೀಶ ಶ್ರೀ ಹೊಂಬೆಗೌಡರಿಂದ ಹೊಗಳಿಸಿಕೊಂಡ ಶ್ರೀ ಭದ್ರಗಿರಿ ಕೇಶವ ಪೈಗಳು ಅಭಿನಂದನಾರ್ಹರಾಗಿದ್ದಾರೆ.

ಮೂರನೆಯ ಈ ಭಾಗದಲ್ಲಿ ದಾಸರ ತತ್ತ್ವಬೋಧ ಮತ್ತು ಪ್ರಾರ್ಥನಾಪರ ಕೀರ್ತನೆಗಳನ್ನು ಆರಿಸಿಕೊಂಡು, ಅವುಗಳ ಅಂತರ್ಬಹಿರಾರ್ಥಗಳನ್ನು ಬರೆಯಲಾಗಿದೆ ಎಂದು ಗ್ರಂಥಕರ್ತರು ಸೂಚಿಸಿದ್ದಾರೆ. ಹಾಗೆಂದು ಇಲ್ಲಿ ವಿಭಜನೆ ಮಾಡಲಾಗಿದ್ದರೂ ಎರಡೂ ಬಗೆಯ ಕೃತಿಗಳು ಮಿಶ್ರವಾಗಿಯೇ ಬಂದಿವೆ. ಅಲ್ಲದೆ ಎರಡಕ್ಕೂ ಸೇರದಿರುವ "ದಾಸರ ನಿಂದಿಸ ಬೇಡ" (ಪುಟ ೧೧); ನೋಡಿಕೈ ಕಲ್ಪಭೂರುಹ (ಪುಟ ೧೩); ನೆಚ್ಚನಯ್ಯ ಹರಿಮೆಚ್ಚನಯ್ಯ (ವಿಡಂಬನ) (ಪುಟ ೨೮); ಮಾನಹೀನನಿಗಭಿಮಾನವೇಕೆ (ಪುಟ ೩೦); ಲಂಗೋಟಿ ಬಲು ಒಳ್ಳೇದಣ್ಣ (ಪುಟ ೬೬); ಮುಸುಳಾಟವೇಕೊ (ಪುಟ ೬೧) ಮುಂತಾದ ಕೃತಿಗಳೂ ಇಲ್ಲಿ ಸೇರಿವೆ. ಇಲ್ಲಿ ಆಯ್ದು ಅರ್ಥ ಬರೆದು ವಿವರಿಸಿರುವ ಕೃತಿಗಳ ಅಕಾರಾದಿ ಇಲ್ಲದಿರುವುದು ಪುಸ್ತಕದ ಒಂದು ಕೊರತೆಯಾಗಿದೆ.

ದಾಸರಾಯರು ಪ್ರತಿಪಾದಿಸಿರುವ ದ್ವೈತ ತತ್ತ್ವದ ನಿರೂಪಣೆ ಇಲ್ಲಿ ಸುಲಭ ಗದ್ಯದಲ್ಲಿ ಚೆನ್ನಾಗಿ ಬಂದಿದೆಯಾದರೂ ಕೆಲವೆಡೆ ಮಾಧ್ವ ಸಿದ್ಧಾಂತಕ್ಕೆ—ಪುರಂದರದಾಸರ ಹೃದಯಕ್ಕೆ ದೂರವಾದ ವ್ಯಾಖ್ಯಾನವೂ ಕಂಡುಬರುವುದು. ಉದಾಹರಣೆಗೆ ಪುಟ ೪-"ಹರಿಗೆ ಹಾಸಿಗೆ ಆಗಬೇಕು ಎಂದೆನುತಲಿ ಹರನು ಏಸು ಕಾಲ ತಪಗೈದ" ಎಂಬ ದಾಸರಮಾತಿಗೆ ಮಾಡಿರುವ ವ್ಯಾಖ್ಯಾನವನ್ನು ತೆಗೆದುಕೊಳ್ಳಬಹುದು.

"ಭಗವಂತನಿಗೆ ತಾನು ಹಾಸಿಗೆಯಾಗಬೇಕೆಂದು ಶಿವನು ಬಹುಕಾಲ ತಪಗೈದನಂತೆ, ಕೊನೆಗೂ ಸಾಧ್ಯವಾಗದೆ ಅವನಿಗೆ ಹಾಸಿಗೆಯಾಗುವಷ್ಟು ಭಾಗ್ಯ ಪಡೆದ ಶೇಷನನ್ನು ತನ್ನ ಭೂಷಣವಾಗಿರಿಸಿಕೊಂಡನಂತೆ."

ಕೃತ್ತಿವಾಸನು ಅನೇಕ ಕಲ್ಪಗಳಲ್ಲಿ ತಪಸ್ಸು ಮಾಡಿ ಪುರುಷೋತ್ತಮನ ಪರ್ಯಂಕಪದವನ್ನು ಐದಿದ ಎಂದು ಶ್ರೀ ಜಗನ್ನಾಥದಾಸರು ತಮ್ಮ ಹರಿಕಥಾಮೃತಸಾರದಲ್ಲಿ (೧-೧೧) ಸ್ಪಷ್ಟಪಡಿಸಿದ್ದಾರೆ. ಇದು ಸಿದ್ಧಾಂತವಾಗಿರುವ ವಿಚಾರ. ತತ್ತ್ವಬೋಧಪ್ರದವಾದ ಕೃತಿಗಳಿಗೆ ಅರ್ಥ ಬರೆಯುವಾಗ ತತ್ತ್ವ ವಿರೋಧವಾಗದಂತೆ ನೋಡಿಕೊಳ್ಳುವುದು ಅಗತ್ಯ.

ಮಣ್ಣಿಂದ ಕಾಯ (ಪುಟ ೩೭); ನಮ್ಮೂರಿವಾಸಿ (ಪುಟ ೪೫) ಮುಂತಾದ ಕೃತಿಗಳಿಗೆ ಬರೆದಿರುವ ಅರ್ಥ ವಿವರಣೆ ತುಂಬ ಮನೋಜ್ಞವಾಗಿದೆ. ಭಗವದ್ಗೀತೆ ಅನೇಕ ಉಪನಿಷತ್ತುಗಳು ಸರ್ವಮೂಲದ ಕೆಲವು ಭಾಗಗಳಿಂದ ಅಲ್ಲಲ್ಲಿ ಉಚಿತವಾದ ವಾಕ್ಯಗಳನ್ನು ಉದ್ಧರಿಸಿ ವಿವರಣೆಯನ್ನು ವಿದ್ವತ್ಪೂರ್ಣವಾಗಿಯೇ ಮಾಡಲಾಗಿದೆ. ಮಹಾರಾಷ್ಟ್ರ ಸಂತವಾಣಿಯ ಹೂಬಿಸಿಲು ಅಲ್ಲಲ್ಲಿ ಬಿದ್ದಿರುವುದು ಮನೋಹರವಾಗಿದೆ. ಶ್ರೀ ಕೇಶವದಾಸರ ಶೈಲಿ ಸರಳವಾಗಿದ್ದು ಶಬ್ದಗಳು ಸಲಿಲ ಸ್ರೋತದಂತೆ ಹರಿಯುವುದರಿಂದ ಓದು ಕಷ್ಟವಾಗುವುದಿಲ್ಲ.

ಪುರಂದರೋಪನಿಷತ್ ಉಪಯುಕ್ತ ಗ್ರಂಥ. ಲೇಖಕರ ಪ್ರಯತ್ನ ಸ್ತುತ್ಯ-ಅಭಿನಂದನೀಯ. ಉಳಿದೆರಡು ಭಾಗಗಳೂ ಬೇಗ ಬರಲಿ (ಬಂದೇ ಬರುವುದೆಂಬ ನಂಬಿಕೆ ಇದೆ) ಎಂದು ಹಾರೈಸುತ್ತೇವೆ.

**ಪುರಂದರೋತ್ಸವ ಮತ್ತು ಅಖಿಲ ಕರ್ಣಾಟಕದ ಕೀರ್ತನಕಾರರ ಸಮ್ಮೇಳನದ ದಿವ್ಯ ನೆನಹು: ಪ್ರಕಾಶಕರು: ಸಮ್ಮೇಳನ** ಸಮಿತಿ, ದಾಸಾಶ್ರಮ, ಪುರಂದರಪುರ, ಬೆಂಗಳೂರು-೧೦.

ಪುಸ್ತಕದ ಹೆಸರೇ ತಿಳಿಸುವಂತೆ ಕಳೆದ ಫೆಬ್ರುವರಿ ತಿಂಗಳಲ್ಲಿ ಶ್ರೀ ಭದ್ರಗಿರಿ ಕೇಶವ ಪೈ ಅವರ ಪ್ರಯತ್ನದ ಫಲವಾಗಿ ಬೆಂಗಳೂರಿನಲ್ಲಿ ನಡೆದ ಮೊದಲ ಅಖಿಲ ಕರ್ಣಾಟಕ ಕೀರ್ತನಕಾರರ ಸಮ್ಮೇಳನದ ಸಂಸ್ಮರಣದ ಸಂಚಿಕೆಯಿದು.

ಪುರಂದರದಾಸರು ಹಿರಿಯ ಸಾಹಿತಿ; ಪ್ರಸಿದ್ಧ ವಾಗ್ಗೇಯಕಾರರು; ಆದರ್ಶಭಕ್ತರು; ದೊಡ್ಡ ತತ್ತ್ವಜ್ಞಾನಿ ಎಂಬುದರ ಜೊತೆಗೆ ಅವರು ಕೀರ್ತನ ಕಲೆಗೆ ಅಧಿನಾಯಕರು, ಕೀರ್ತನ ಕಲಾಪಿತಮಹರು ಎಂಬುದು ಗಮನಿಸಬೇಕಾದ ಸಂಗತಿ. ಆದ್ದರಿಂದ ಈ ಸಮ್ಮೇಳನ ಪುರಂದರೋತ್ಸವದ ಅಂಗವಾಗಿ ಆ ಸಂದರ್ಭದಲ್ಲಿ ನಡೆದುದು ಉಚಿತ.

ಪುರಂದರದಾಸರು. ಕೀರ್ತನ ಪದ್ಧತಿ, ಕೀರ್ತನಕಾರರ ಕಲೆ, ಕೀರ್ತನ ಕಲೆ, ದಾಸಸಾಹಿತ್ಯ, ಕೀರ್ತಕಾರರ ಕಾಣಿಕೆ, ಈಶಾವಸ್ಯದ ಸಾರಾಂಶ, ಅಹಿಂಸಾ ಪರಮೋಧರ್ಮ, ದಾಸ್ಯ—ಈ ವಿಚಾರಗಳನ್ನು ಕುರಿತ ವಿವಿಧ ಲೇಖನಗಳು ಇಲ್ಲಿ ಸಂಗ್ರಹವಾಗಿವೆ. ಒಬ್ಬಿಬ್ಬರನ್ನು ಬಿಟ್ಟು ಆಯಾ ವಲಯದಲ್ಲಿ ಪ್ರಸಿದ್ಧರೂ ತಜ್ಞರೂ ಆದವರೇ ಇಲ್ಲಿ ಲೇಖನ ಕರ್ತೃಗಳಾಗಿದ್ದಾರೆ.

ಕೀರ್ತನಕಾರರ ಸಮ್ಮೇಳನ ಸಂಚಿಕೆ ಬಹು ಜನರ ಭಾವ

ಚಿತ್ರಗಳಿಂದ ಭೋಗ್ಯತೆಯುತ್ತಿದೆ. ಸಮ್ಮೇಳನದ ಹೆಸರಿಗೆ ತಕ್ಕಂತೆ ಅರವತ್ತನಾಲ್ಕು ಮಂದಿ ಕೀರ್ತನಕಾರರ ಭಾವಚಿತ್ರಗಳ ಜೊತೆಗೆ ಅವರ ಸಂಕ್ಷಿಪ್ತ ಪರಿಚಯಗಳನ್ನು ಕೊಟ್ಟಿರುವುದು ಉಚಿತವಾಗಿದೆ. ಅನೇಕ ಮಹನೀಯರ ಚಿತ್ರಗಳು ಎರಡೆರಡು ಬಾರಿ ಬಂದಿರುವುದೂ ಉಂಟು.

ಸಾಮಾನ್ಯವಾಗಿ ಹರಿಕಥೆ ಕೀರ್ತನೆಗಳನ್ನು ಕಾಲಕ್ಷೇಪ ಸಾಧನ ಎಂದು ತಾತ್ಸಾರದಿಂದ ನೋಡುವುದು ವಾಡಿಕೆಯಾಗಿದ್ದರೂ, ಅದು ಸರಿಯಲ್ಲವೆಂಬುದು ನಿಜ. ಭಾರತೀಯ–ಕರ್ಣಾಟಕ ಸಂಸ್ಕೃತಿ ಈ ಕೀರ್ತನೆಗಳ ಮೂಲಕ ಪ್ರಚಾರವಾಗುವುದು ಸರ್ವರಿಗೂ ವಿದಿತ ಆ ಬೆಲೆ ಕಡಿಮೆಯದೇನಲ್ಲ. ಆ ಕಾರ್ಯಕ್ಕೆ ಈ ಕಲೆ ತುಂಬ ಉತ್ತಮ ಮಾರ್ಗವೂ ಅಹುದು. ಅನೇಕ ಮಹನೀಯರಿಗೆ ಇದು ವೃತ್ತಿಯೂ ಆಗಿದೆ; ಪರಂಪರೆಯಿಂದ ಈ ವೃತ್ತಿಯಲ್ಲೇ ಇರುವವರೂ ಉಂಟು ಈ ವೃತ್ತಿ ಬಾಂಧವರು ಒಟ್ಟಿಗೆ ಸೇರಿ ವಿಚಾರ ವಿನಿಮಯ ಮಾಡಿಕೊಳ್ಳುವ ಸುಸಂದರ್ಭ ಈ ಸಮ್ಮೇಳನದಿಂದ ಒದಗಿತು. ಇದಕ್ಕೆ ಸಮ್ಮೇಳನದ ಸಂಚಾಲಕರು (ಪೈ ಸೋದರರು) ಮುಖ್ಯ ಕಾರಣ. ಅದಕ್ಕಾಗಿ ಅವರು ಅಭಿವಂದನಾರ್ಹರು.

ಈ ಸಮಿತಿ–ಸಮ್ಮೇಳನ ಯುಗದಲ್ಲಿ ಕೀರ್ತನಕಾರರೂ ಒಂದು ಸಮ್ಮೇಳನ ನಡೆಸಿದ್ದು ಸೋಜಿಗವೇನಲ್ಲ, ಸ್ತುತ್ಯ. ಅದರ ಫಲ ಏನು ಎಂಬುದನ್ನು ಕಾದು ನೋಡಬೇಕಾಗಿದೆ.

—ಕೆ. ಎಂ. ಕೃ.

**೧. ಪವಿತ್ರ ಜೀವನ:** ಬರೆದವರು: ಶ್ರೀ ಸಿಂಪಿ ಲಿಂಗಣ್ಣನವರು ಚಡಚಣ; ಸೈಜು: ಕ್ರೌನ್ ೧/೮; ಪುಟ: ೧೩೦; ಬೆಲೆ: ರೂ. ೧ ೫೦ ನ.ಪೈ.

ಈ ಗ್ರಂಥದಲ್ಲಿ ಮಹರ್ಷಿ ಟಾಲಸ್ಟಾಯರ ಏಳು ಕತೆಗಳು ನಿರೂಪಿತವಾಗಿವೆ. ರಾಷ್ಟ್ರಪಿತ ಗಾಂಧೀಜಿಯ ಆದರ್ಶ ಪುರುಷ ಟಾಲ್‌ಸ್ಟಾಯ್ ಎಂದ ಮೇಲೆ ಹೇಳುವುದೇನಿದೆ ಆ ಮಹಾತ್ಮನನ್ನು ಕುರಿತು.

ಪ್ರಕೃತ ಗ್ರಂಥದಲ್ಲಿ ೧. ಮನುಷ್ಯನು ಬದುಕುವುದು ಏತರಿಂದ, ೨. ಇಬ್ಬರು ಮುದುಕರು, ೩. ತ್ಯಾಗದಲ್ಲಿದೆ ಸುಖ, ೪. ಮರಳು ಮಲ್ಲೇಶಿ, ೫ ಪ್ರೇಮವಿದ್ದಲ್ಲಿ ಪರಮೇಶ್ವರ, ೬ ಒಬ್ಬನಿಗೆಷ್ಟು ಭೂಮಿ ಬೇಕು, ೭ ದೇವಪುತ್ರ ಎಂಬ ಏಳು ಕತೆಗಳಿವೆ.

ಮಹರ್ಷಿಗಳ ಕತೆಗಳನ್ನು ಕನ್ನಡದ ಜಾಯಮಾನಕ್ಕೆ ಅಳವಡಿಸಿಕೊಂಡು ಹೇಳಲಾಗಿದೆ. ಕತೆಗಳು ಸ್ವಾರಸ್ಯವಾಗಿವೆ. ಜೀವನದ ಪ್ರಗತಿಗೆ ಸಾಧಕವಾದ ತತ್ವಗಳಿಂದ ಕೂಡಿವೆ. ಭಾಷೆ ಸರಳ ಸುಂದರವಾಗಿದೆ. ಗ್ರಂಥವು ವಾಚನಾರ್ಹವೆನಿಸಿದೆ. ಚಡಚಣದ ಶ್ರೀ ಅರವಿಂದ ಗ್ರಂಥಾಲಯದ ಸಾಹಿತ್ಯವೆಲ್ಲವೂ ಪ್ರಾಯೇಣ ಉತ್ತಮ ವರ್ಗಕ್ಕೆ ಸೇರಿದುದು ಎಂದು ಹೇಳಲು ನಮಗೆ ಹರ್ಷವೆನಿಸುತ್ತದೆ.

**ಕೀಟಗಳ ಒಡನಾಡಿ: ಫೇಬರ್** ಬರೆದವರು: ಶ್ರೀಮತಿ ಬಿ. ಎಸ್. ರುಕ್ಕಮ್ಮ ಎಂ. ಎ. ಅವರು; ಸೈಜು: ಕ್ರೌನ್ ೧/೮; ಪುಟ: ೯೧; ಬೆಲೆ: ೧–೨೫.

ಮೈಸೂರಿನಲ್ಲಿ ತಳುಕಿನ ವೆಂಕಣ್ಣಯ್ಯ ಗ್ರಂಥ ಮಾಲೆಯಲ್ಲಿ ಪ್ರಕಟವಾಗಿರುವ ಈ ಗ್ರಂಥದಲ್ಲಿ ವಿಶ್ವ ವಿಜ್ಞಾನಿ ಫೇಬರ್‌ರವರು ನಿರೂಪಿಸಿದ ಪ್ರಾಣಿ ಜೀವನ ರಹಸ್ಯಗಳನ್ನು ಈ ಗ್ರಂಥದಲ್ಲಿ ಕತೆಗಳ ರೂಪದಲ್ಲಿ ನಿರೂಪಿಸಲಾಗಿದೆ. ನಾವು ನಿಕೃಷ್ಟವೆಂದು ಭಾವಿಸುವ ಇರುವೆ, ಹಾವು. ಜೇಳು, ಕಣಜ, ಜೇಡ ಮೊದಲಾದ ಪ್ರಾಣಿಗಳ ಜೀವನದಲ್ಲಿಯೂ ಹಲವು ಸ್ವಾರಸ್ಯ ಸಂಗತಿಗಳಿವೆ ಎಂಬುದನ್ನು ಈ ಪುಸ್ತಕಾವಲೋಕನದಿಂದ ಮನಗಾಣಬಹುದು. ಫೇಬರನ ಸಂಶೋಧನೆಗಳನ್ನು ಕತೆಗಳ ರೂಪದಲ್ಲಿ ಸ್ವಾರಸ್ಯವಾಗಿ ಬರೆದಿರುವುದು ಈ ಹೊತ್ತಗೆಯ ವೈಶಿಷ್ಟ್ಯ. ಜಾಗ (ಪುಟ ೧) ರೂಮು (ಪುಟ ೩೦) ಸ್ಕೂಲಿನ ಮಾಸ್ತರು (ಪುಟ ೮೮) ಹೋಟೆಲು (ಪುಟ ೬೪) ಇತ್ಯಾದಿ ಪರ ಭಾಷೆಯ ಶಬ್ದಗಳನ್ನು ಬಿಟ್ಟು ಸ್ಥಳ, ಕೋಣೆ, ಶಾಲೆಯ ಗುರುಗಳು, ಖಾನಾವಳಿ ಇತ್ಯಾದಿ ಕನ್ನಡ ಶಬ್ದಗಳನ್ನು ಬಳಸಬಹುದಾಗಿತ್ತು. ನಿಶ್ಚಿಷಿ–ಸು (ಪುಟ ೧೫) ಇಂಥಹ (ಪುಟ ೧೮) ಅಂಥಹ (ಪುಟ ೩೩) ಅರವತ್ತು (ಪುಟ ೩೫) ಬರವಣಿಗೆ (ಪುಟ ೮೮) ತೊಂಬಾ (ಪುಟ ೯೧) ಇತ್ಯಾದಿ ಶಬ್ದ ದೋಷಗಳನ್ನು ಸರಿಪಡಿಸಬಹುದು. ಪುಸ್ತಕವು ವಾಚನಾರ್ಹವಾಗಿದೆ.

—'ಶೂಲಪಾಣಿ'

## ಶ್ರೀ ಅಯ್ಯಣ್ಣದೇವ ಅಂಗಡಿ ಅವರಿಗೆ ಸತ್ಕಾರ

ತಾ|| ೧೨-೩-೧೯೬೪ ರಂದು ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ವಿಶ್ವ ಸಾಹಿತ್ಯ ಕ್ಷೇತ್ರದಲ್ಲಿ ದುಡಿಯುತ್ತಿರುವ ಕನ್ನಡಿಗರಾದ ಶ್ರೀಮಾನ್ ಅಯ್ಯಣ್ಣ ದೇವ ಅಂಗಡಿ, ಬಿ. ಎ., ಅವರ ಗೌರವಾರ್ಥವಾಗಿ ಸತ್ಕಾರ ಸಮಾರಂಭವನ್ನು ಏರ್ಪಡಿಸಿತ್ತು. ಮೈಸೂರಿನ ಹೈಕೋರ್ಟ್ ನಿವೃತ್ತ ನ್ಯಾಯಾಧೀಶರಾದ ಶ್ರೀ ಎಸ್. ಎಸ್. ಮಳಿಮಠ್ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಪರಿಷತ್ತಿನ ಅಧ್ಯಕ್ಷರಾದ ಆಸ್ಥಾನವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಅತಿಥಿಗಳನ್ನು ಬರಮಾಡಿಕೊಂಡು ಎಲ್ಲರಿಗೂ ಅವರ ಪರಿಚಯ ಮಾಡಿಕೊಟ್ಟರು.

'ಕನ್ನಡ ಮತ್ತು ವಿಶ್ವಸಾಹಿತ್ಯ' ಎಂಬ ವಿಷಯದಮೇಲೆ ಶ್ರೀ ಅಂಗಡಿಯವರು ಮಾತನಾಡುತ್ತ. ಪೌರ್ವಾತ್ಯ ಮತ್ತು ಪಾಶ್ಚಾತ್ಯ ದೇಶಗಳಿಗೆ ಇರಬೇಕಾದ ನಿಕಟ ಸಾಂಸ್ಕೃತಿಕ ಸಂಪರ್ಕದ ಅತ್ಯಾವಶ್ಯಕತೆಯನ್ನು ಕುರಿತು ಅಮೋಘವಾದ ಭಾಷಣವನ್ನು ಮಾಡಿದರು. ಲಂಡನ್ ನಗರದಲ್ಲಿ 'ಏಷ್ಯನ್ ಮ್ಯೂಸಿಕ್ ಸರ್ಕಲ್' ಎಂಬ ಸಾಂಸ್ಕೃತಿಕ ಕೇಂದ್ರವೊಂದನ್ನು ಅವರು ಸ್ಥಾಪಿಸಿರುವುದಾಗಿಯೂ ವಿಶ್ವ ವಿಖ್ಯಾತ ಪಿಟೀಲುವಾದನಕಾರ ಯಹೂದಿಮೆನುಹಿನ್ ಅವರು ಅದರ ಅಧ್ಯಕ್ಷರಾಗಿರುವುದಾಗಿಯೂ, ಈ ಕೇಂದ್ರದಲ್ಲಿ ತಾವು ಪೂರ್ವ ಮತ್ತು ಪಶ್ಚಿಮಗಳ ಸಂಗೀತ ಸಾಹಿತ್ಯಾದಿ ಲಕ್ಷಣಗಳನ್ನು ಕುರಿತು ಅಭ್ಯಸಿಸಿ ಪರಸ್ಪರ ವಿನಿಮಯಗೊಳಿಸುತ್ತಿರುವುದಾಗಿಯೂ ತಿಳಿಸಿದರು. ಯೂರೋಪಿನ ದೇಶಗಳಲ್ಲೆಲ್ಲ ಸಂಚರಿಸಿ ಭಾರತೀಯ ಸಂಸ್ಕೃತಿಯನ್ನು ಕುರಿತು ಸುಮಾರು ೬,೬೦೦ ಭಾಷಣಗಳನ್ನು ಮಾಡಿದುದಾಗಿಯೂ ತಿಳಿಸಿ ಸಭಿಕರನ್ನು ಬೆರಗುಗೊಳಿಸಿದರು. ಭಾರತೀಯರ ಪ್ರಾಚೀನ ಸಂಸ್ಕೃತಿಯ ಬೆಳಕನ್ನು ಕಾಣಲು ಪಾಶ್ಚಾತ್ಯರು ತುಂಬ ಹಾತೊರೆಯುತ್ತಿರುವುದಾಗಿ ಶ್ರೀಮಾನ್ ಅಂಗಡಿಯವರು ತಿಳಿಸಿ ನಮ್ಮ ಭಾರತ ಸರ್ಕಾರವು ಕೂಡಲೆ ಪ್ರಾಚೀನ ಸಂಸ್ಕೃತಿಯ ಪ್ರಸಾರವನ್ನು ವಿಶ್ವದಾದ್ಯಂತ ಕೈಗೊಳ್ಳಬೇಕೆಂದು ಒತ್ತಾಯಪಡಿಸಿದರಲ್ಲದೆ ಈಗಿನ ನಮ್ಮ ಪರಿಸ್ಥಿತಿಯಲ್ಲಿ ಉಂಟಾಗಿರುವ ಆಲಸ್ಯ ಮತ್ತು ಉದಾಸೀನ ಸ್ವಭಾವವನ್ನು ಕುರಿತು ತಮ್ಮ ವಿಷಾದವನ್ನು ವ್ಯಕ್ತಪಡಿಸಿದರು. ಪಾಶ್ಚಾತ್ಯ ನಾಗರೀಕತೆ ಮತ್ತು ಸಾಮಾಜಿಕ ಜೀವನದ ಭದ್ರತೆಯು ಕ್ರಮೇಣ ಕುಸಿಯುತ್ತಿದೆಯೆಂದೂ ಪೌರ್ವಾತ್ಯ ನಾಗರೀಕತೆ ಮತ್ತು ಸಾಮಾಜಿಕ ಜೀವನದ ಸಂಸ್ಕೃತಿಯ ಬೆಳಕಿನಿಂದ ಪಶ್ಚಿಮದ ಕತ್ತಲನ್ನು ನಾವು ಹೋಗಲಾಡಿಸಬೇಕೆಂದೂ ಶ್ರೀಮಾನ್ ಅಂಗಡಿಯವರು ಮನವಿಮಾಡಿಕೊಂಡರು. ಶ್ರೀ ಅಂಗಡಿ ಅವರು ಸುಮಾರು ೩೦ ವರ್ಷಗಳಿಂದ ಲಂಡನ್ನಿನಲ್ಲಿ ನೆಲೆಸಿರುವರು.

## ಗಮಕ ಪರೀಕ್ಷೆಯ ಫಲಿತಾಂಶ

ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ೧೯೬೪ನೇ ಫೆಬ್ರವರಿ ೧೬ರಂದು ನಡೆದ ಗಮಕ ಪ್ರವೇಶ ಪರೀಕ್ಷೆಯಲ್ಲಿ ಈ ಕೆಳಗೆ ಕಂಡ ರಿಜಿಸ್ಟರ್ ನಂಬರಿನ ವಿದ್ಯಾರ್ಥಿಗಳು ತೇರ್ಗಡೆಯಾಗಿರುತ್ತಾರೆ.

**ಮೊದಲನೆಯ ತರಗತಿ**

(ಅಂಕಗಳ ಅನುಕ್ರಮದಲ್ಲಿ)

೨೩, ೬೯, ೭೩, (೨೫-೪೩), (೬೭-೭೧), ೧೭, ೨೮, ೫೫ ಮತ್ತು ೫೬.

**ಎರಡನೆಯ ತರಗತಿ.**

೧, ೨, ೩, ೪, ೫, ೭, ೧೫, ೨೭, ೫೦, ೫೧, ೭೪, ಮತ್ತು ೮೪.

**ಮೂರನೆಯ ತರಗತಿ**

೬, ೧೦, ೧೨, ೧೩, ೧೯, ೨೦, ೨೧, ೨೨, ೨೪, ೩೩, ೩೫, ೩೬, ೩೭, ೩೮, ೩೯, ೪೦, ೪೨, ೪೪, ೪೫, ೪೭, ೪೮, ೫೨, ೫೮, ೫೯, ೬೦, ೬೧, ೬೨, ೬೪, ೬೫, ೬೬, ೭೦, ೭೨, ೭೬, ೭೭, ೭೮, ೭೯, ೮೦, ೮೧. ೮೩, ೮೫, ೮೬, ೮೮, ೮೯, ೯೦, ೯೧, ೯೩ ಮತ್ತು ೯೪.

ಶ್ರೀಮತಿ ಎ. ಪರಿಮಳ (ನಂ. ೨೩), ವನಿತಾಸದನ, (ಮೈಸೂರು ಕೇಂದ್ರ) ಇವರು ಪ್ರಥಮ ಶ್ರೇಣಿಯಲ್ಲಿ ತೇರ್ಗಡೆ ಹೊಂದಿರುತ್ತಾರೆ.

## ಭಾಷಣ ಕಲಾ ಪರೀಕ್ಷೆಯ ಫಲಿತಾಂಶ—೧೯೬೪

ತಾ ೮-೩-೬೪ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ ಭಾಷಣ ಕಲಾ ಪರೀಕ್ಷೆಯಲ್ಲಿ ಈ ಕೆಳಗೆ ಕಂಡ ರಿಜಿಸ್ಟರ್ ನಂಬರಿನ ವಿದ್ಯಾರ್ಥಿ ವಿದ್ಯಾರ್ಥಿನಿಯರು ತೇರ್ಗಡೆಯಾಗಿರುತ್ತಾರೆ.

**ಪ್ರಥಮ ಶ್ರೇಣಿ**

(ಅಂಕಗಳ ಅನುಕ್ರಮದಲ್ಲಿ)

೧೪, ೩, ೫,

**ದ್ವಿತೀಯ ಶ್ರೇಣಿ**

೧೫, ೬,

**ತೃತೀಯ ಶ್ರೇಣಿ**

೧೭, ೧, ೧೬, ೧೨, ೭, ೪.

## ಗಮಕ ಪ್ರೌಢ ಪರೀಕ್ಷೆಗಳು—೧೯೬೪

### ತಿಳಿವಳಿಕೆ ಪತ್ರ

೧೯೬೪ ನೇ ಸಾಲಿನ ಗಮಕ ಪ್ರೌಢ ಪರೀಕ್ಷೆಗಳು ಈ ಕೆಳಗೆ ಕಂಡ ಕೇಂದ್ರಗಳಲ್ಲಿ ೬-೬-೬೪ ನೇ ಶನಿವಾರ ಮತ್ತು ೭-೬-೬೪ ನೇ ಭಾನುವಾರಗಳಂದು ನಡೆಯುತ್ತದೆ.

ವ್ಯಾಸಂಗ ಕೇಂದ್ರಗಳಿಂದಲೂ ಮತ್ತು ಸ್ವಂತ ವ್ಯಾಸಂಗಿಗಳಿಂದಲೂ ಅಪೇಕ್ಷಾಪತ್ರಗಳನ್ನು ೧೦-೫-೬೪ ನೇ ತಾರೀಖಿನವರೆಗೆ ಸ್ವೀಕರಿಸಲಾಗುವುದು. ಅನಂತರ ಬಂದ ಅಪೇಕ್ಷಾ ಪತ್ರಗಳನ್ನು ಸ್ವೀಕರಿಸಲಾಗುವುದಿಲ್ಲ.

ಸ್ವಂತ ವ್ಯಾಸಂಗಿಗಳು ತಮ್ಮ ಅಪೇಕ್ಷಾ ಪತ್ರಗಳೊಂದಿಗೆ ಪರೀಕ್ಷಾ ಶುಲ್ಕ ೧೦=೦೦ ರೂ. ಗಳನ್ನು ಎಂ. ಓ. ಮಾಡಿದ ರಸೀತಿಯನ್ನು ತಪ್ಪದೆ ಕಳುಹಿಸಬೇಕು. ಹೀಗೆ ಎಂ. ಓ. ರಸೀತಿಗಳಿಲ್ಲದ ಅಪೇಕ್ಷಾ ಪತ್ರಗಳನ್ನು ಸ್ವೀಕರಿಸಲಾಗುವುದಿಲ್ಲ. ಎಂ. ಓ. ಕೂಪನ್ನುಗಳಲ್ಲಿ ವಿದ್ಯಾರ್ಥಿಗಳು ತಮ್ಮ ವಿಳಾಸವನ್ನು ತಪ್ಪದೆ ಶುದ್ಧವಾಗಿ ಬರೆಯಬೇಕು. ಹೀಗೆ ಬರೆಯದಿದ್ದಲ್ಲಿ ಅವರ ಅಪೇಕ್ಷಾ ಪತ್ರಗಳನ್ನು ರಿಜಿಸ್ಟರ್ ಮಾಡಿಕೊಳ್ಳುವುದಿಲ್ಲ. ಅಪೇಕ್ಷಾ ಪತ್ರಗಳನ್ನು Registered Post ಮೂಲಕ ರವಾನಿಸಬೇಕು.

ಕೇಂದ್ರ ವ್ಯವಸ್ಥಾಪಕರು ತಮ್ಮ ಕೇಂದ್ರದ ಅಪೇಕ್ಷಾ ಪತ್ರಗಳೆಲ್ಲವನ್ನೂ ಒಟ್ಟುಗೂಡಿಸಿ ಪರೀಕ್ಷಾರ್ಥಿಗಳ ಎರಡು ಪಟ್ಟಿಗಳೊಡನೆ ಕೇಂದ್ರದ ಪೂರ್ಣ ಪರೀಕ್ಷಾ ಶುಲ್ಕದೊಂದಿಗೆ ತಾರೀಖು ೧೦-೫-೬೪ ರೊಳಗಾಗಿ ಪರಿಷತ್ತಿಗೆ ತಲುಪುವಂತೆ ಕಳುಹಿಸಬೇಕು.

**ವೇಳಾಪಟ್ಟಿ**

| | | |
|---|---|---|
| | | ಲಿಖಿತ |
| ೬-೬-೬೪ ನೇ ಶನಿವಾರ ಮಧ್ಯಾಹ್ನ ೨ ರಿಂದ ೫ ರ ವರೆಗೆ | .... | ಸಾಹಿತ್ಯ ಭಾಗ |
| ೭-೬-೬೪ ನೇ ಭಾನುವಾರ ಬೆಳಿಗ್ಗೆ ೮-೩೦ ರಿಂದ ೧೧-೩೦ ರವರೆಗೆ | | ಗಮಕ ಮತ್ತು ಸಂಗೀತ |

**ಪರೀಕ್ಷಾ ಶುಲ್ಕ ೧೦ ರೂ.**

**ಕೇಂದ್ರಗಳು**

೧. ದೂರವಾಣಿನಗರ, ಬೆಂಗಳೂರು-೧೬.

೨. ಶಿವಮೊಗ್ಗ.

(**ವಿ. ಸೂ:** ಯಾವುದಾದರೊಂದು ಕೇಂದ್ರದಲ್ಲಿ ಕನಿಷ್ಠ ಪಕ್ಷ ಹತ್ತು ವಿದ್ಯಾರ್ಥಿಗಳಾದರೂ ಪರೀಕ್ಷೆಗೆ ಕುಳಿತುಕೊಳ್ಳುವುದಾದರೆ ಅಂತಹ ಸ್ಥಳದಲ್ಲಿಯೇ ಪರೀಕ್ಷೆಯನ್ನು ನಡೆಸಲಾಗುವುದು. ಇದನ್ನು ಪರಿಷತ್ತಿಗೆ ಕೂಡಲೇ ತಿಳಿಸಬೇಕು.

## ಗಮಕ ಪ್ರವೇಶ ಪರೀಕ್ಷೆಗಳು–೧೯೬೪-೬೫

### ತಿಳಿವಳಿಕೆ ಪತ್ರ

೧೯೬೪–೬೫ ನೇ ಸಾಲಿನ ಗಮಕ ಪ್ರವೇಶ ತರಗತಿಗಳನ್ನು ೧–೬–೬೪ ನೇ ತಾರೀಖಿನಿಂದ ಈ ಕೆಳಗೆ ಕಂಡ ಕೇಂದ್ರಗಳಲ್ಲಿ ಪ್ರಾರಂಭಿಸಲಾಗುವುದು.

ವ್ಯಾಸಂಗದ ಅವಧಿ – ಆರು ತಿಂಗಳಕಾಲ

| ಕೇಂದ್ರಗಳು | ತರಗತಿಗಳು ನಡೆಯುವ ಸ್ಥಳ |
|---|---|
| ೧. ಬೆಂಗಳೂರು | ೧. ಕನ್ನಡ ಸಾಹಿತ್ಯ ಪರಿಷತ್ತು. |
| | ೨. ಆಚಾರ್ಯ ಪಾಠಶಾಲಾ ಗರ್ಲ್ಸ್ ಹೈಸ್ಕೂಲು, N. R. ಕಾಲೋನಿ. |
| | ೩. ದೂರವಾಣಿನಗರ, ಬೆಂಗಳೂರು–೧೬. |
| ೨. ಮೈಸೂರು | ೪. ವನಿತಾಸದನ, ಜಯನಗರ, ಮೈಸೂರು–೫. |
| ೩. ಹಾಸನ | ೫. ಮಿತ್ರವೃಂದ, ಹಾಸನ. |
| ೪. ಶಿವಮೊಗ್ಗ | ೬. ಸರ್ವೋದಯ ಎಲಿಮೆಂಟರಿ ಸ್ಕೂಲ್ ಶಿವಮೊಗ್ಗ. |
| ೫. ದಾವಣಗೆರೆ | ೭. ಬೇಸಿಕ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್, ದಾವಣಗೆರೆ. |
| ೬. ತುಮಕೂರು | ೮ ಎಂಪ್ರೆಸ್ ಗರ್ಲ್ಸ್ ಹೈಸ್ಕೂಲು ತುಮಕೂರು. |
| ೭. ತಿಪಟೂರು | ೯. ಕಲ್ಪತರು ಕಾಲೇಜು, ತಿಪಟೂರು. |

ಪ್ರವೇಶ ಪರೀಕ್ಷೆಯ ತರಗತಿಗಳನ್ನು ತೆರೆಯಲು ಅಪೇಕ್ಷೆಯುಳ್ಳವರು ಪರಿಷತ್ತಿನ ಕಾರ್ಯದರ್ಶಿಗಳಿಗೆ ಏಪ್ರಿಲ್ ೩೦ನೆಯ ತಾರೀಖಿನೊಳಗಾಗಿ ಪೂರ್ಣ ವಿವರಗಳೊಡನೆ ಬರೆದುಕೊಳ್ಳಬೇಕಾಗಿ ವಿನಂತಿ.

ಕೆ. ಎಂ. ಕೃಷ್ಣರಾವ್,
ಎಸ್. ಶಂಕರಪ್ಪ,
ಗೌರವ ಕಾರ್ಯದರ್ಶಿಗಳು

# ಕನ್ನಡದ ಸುದ್ದಿಗಳು

**ಬೆಂಗಳೂರು**

ಬೆಂಗಳೂರಿನ ಎ. ಜಿ. ಕಚೇರಿಯ ಕರ್ನಾಟಕ ಸಂಘದ ಆರಂಭೋತ್ಸವವು ಏಪ್ರಿಲ್ ದಿನಾಂಕ ೧೧ರಂದು ಸಂಜೆ ನಡೆಯಿತು. ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು ಆರಂಭೋತ್ಸವ ನಡೆಸಿದರು. ಈ ಸಂದರ್ಭದಲ್ಲಿ ದಾಶರಥಿ ದೀಕ್ಷಿತರ 'ಸಿಡ್ಲು ಮರಿ' ಎಂಬ ನಾಟಕ ಪ್ರದರ್ಶನವೇರ್ಪಟ್ಟಿತ್ತು.

ವಿಮಾನಪುರದ ಕನ್ನಡ ಸೇವಾ ಸಮಾಜದಲ್ಲಿ ಮಾ ೩೩ ರಲ್ಲು ಚರ್ಚಾಸ್ಪರ್ಧೆ ಏರ್ಪಟ್ಟಿತ್ತು. ಡಾ|| ನಾರಾಯಣರಾವ್ ಪಿಸ್ಸೆ ಅವರು ಅಧ್ಯಕ್ಷರಾಗಿದ್ದರು. ದೂರವಾಣಿ ಕರ್ನಾಟಕ ಸಂಘದ ಶ್ರೀ ಶಂಕರಮೂರ್ತಿ, ಕಾಕ್ಸ್‌ಟೌನ್ ಕನ್ನಡ ಅಭಿಮಾನಿಗಳ ಸಂಘದ ಶ್ರೀ ರಾಮಕೃಷ್ಣ ಮತ್ತು ರಾಮಚಂದ್ರಪುರ ಕರ್ನಾಟಕ ಸಂಘದ ಶ್ರೀ ವಿಶ್ವನಾಥ್ ಇವರಿಗೆ ಅನುಕ್ರಮವಾಗಿ ಬಹುಮಾನಗಳು ಬಂದವು.

ಮಾರ್ಚಿ ತಿಂಗಳಲ್ಲಿ ದಾವಣಗೆರೆ ಪೌರಸಭೆಯವರು ಏರ್ಪಡಿಸಿದ್ದ ಅಖಿಲ ಕರ್ನಾಟಕ ನಾಟಕ ಸ್ಪರ್ಧೆಯಲ್ಲಿ ಬೆಂಗಳೂರಿನ ಕರ್ನಾಟಕ ಕಲಾ ಮಂಡಲಿಯವರ 'ಕ್ಷೇತ್ರದ ಕಾಗೆ' ಎಂಬ ನಾಟಕಕ್ಕೆ ಪ್ರಥಮ ರೋಲಿಂಗ್ ಷೀಲ್ಡ್ ಪ್ರಶಸ್ತಿಯು ದೊರೆಯಿತು.

ನಗರದ ಕನ್ನಡ ಚಿತ್ರಪ್ರೇಮಿಗಳ ಸಂಘದವರು ೧೯೬೩ ರಲ್ಲಿ ಬಿಡುಗಡೆಯಾದ ಕನ್ನಡ ಚಿತ್ರಗಳ ಶ್ರೇಷ್ಠ ಚಿತ್ರ ನಿರ್ದೇಶಕ, ಶ್ರೇಷ್ಠ ಸಾಹಿತಿ, ಶ್ರೇಷ್ಠ ಸಂಗೀತ ನಿರ್ದೇಶಕ, ಶ್ರೇಷ್ಠ ನಟ, ಹಾಸ್ಯ ನಟ ಮತ್ತು ನಟಿ ಮುಂತಾದವರುಗಳನ್ನು ಆಯ್ಕೆ ಮಾಡಿ ಜೂನ್ ತಿಂಗಳಲ್ಲಿ ಅವರನ್ನು ಸನ್ಮಾನಿಸುವ ವ್ಯವಸ್ಥೆ ಮಾಡಿರುವರು.

ಮಲ್ಲೇಶ್ವರಂ ಶ್ರೀರಾಮ ಮಂದಿರದಲ್ಲಿ ಕಳೆದ ಒಂದು ತಿಂಗಳಿಂದ ಕುಮಾರವ್ಯಾಸ ಭಾರತ ವಾಚನ ವ್ಯಾಖ್ಯಾನ ಮಾಲೆ ನಡೆಯುತ್ತಿದೆ. ಮತ್ತೂರಿನ ಶ್ರೀ ಲಕ್ಷ್ಮೀಕೇಶವ ಶಾಸ್ತ್ರಿಗಳು ಇದನ್ನು ನಡೆಸಿಕೊಡುತ್ತಿದ್ದಾರೆ. ಅಸಂಖ್ಯಾತ ಜನರು ಆಸಕ್ತಿ ವಹಿಸಿ ಕೇಳಿ ಆನಂದಪಡುತ್ತಿದ್ದಾರೆ.

ಕರ್ನಾಟಕದ ಸುಪ್ರಸಿದ್ಧ ಕನಕದಾಸರ ನಾಲ್ಕನೇ ಶತಮಾನೋತ್ಸವವನ್ನು ಆಚರಿಸಲು ಮೈಸೂರು ಸರ್ಕಾರ ತೀರ್ಮಾನಿಸಿ ಈ ಬಗ್ಗೆ ಉಪಸಚಿವ ಶ್ರೀ ವೈ. ರಾಮಚಂದ್ರ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಕ ಮಾಡಿದೆ. ಉತ್ಸವದ ಅಂಗವಾಗಿ ಒಂದು ಸ್ಮಾರಕವನ್ನು ಏರ್ಪಡಿಸಲು ಮತ್ತು ಸ್ಮಾರಕ ಸಂಚಿಕೆಯನ್ನು ಹೊರಡಿಸಲು ಯೋಜನೆ ನಡೆದಿದೆ. ಉತ್ಸವಕ್ಕಾಗಿ ಪ್ರತಿ ಜಿಲ್ಲೆಯಲ್ಲಿಯೂ ಸಮಿತಿಗಳನ್ನು ರಚಿಸಲಾಗವುದು.

ನೃತ್ಯ, ನಾಟಕ, ಸಂಗೀತ ಮತ್ತು ಲಲಿತ ಕಲೆಗಳ ಅಕಾಡೆಮಿಗಳ ಸಲುವಾಗಿ ನಗರದಲ್ಲಿ ಎರಡೂವರೆ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಪ್ರತ್ಯೇಕ ಕಟ್ಟಡವನ್ನು ಕಟ್ಟಲು ತೀರ್ಮಾನಿಸಲಾಗಿದೆ ಎಂದು ವಿದ್ಯಾಮಂತ್ರಿ ಶ್ರೀ ಕಂಠಿ ಅವರು ತಿಳಿಸಿದ್ದಾರೆ.

ರಾಜ್ಯದ ರಂಗಭೂಮಿಯ ಕಲೆ ಮತ್ತು ಕಲಾವಿದರ ಸಂಘದವರು ಬರುವ ಮೇ ದಿನಾಂಕ ೨ರಂದು ನಾಟಕ ಶಿರೋಮಣಿ ವರದಾಚಾರ್ಯರ ದಿನಾಚರಣೆಯನ್ನು ಆಚರಿಸಲು ವ್ಯವಸ್ಥೆ ಮಾಡಿದ್ದಾರೆ. ಇದೇ ಸಂದರ್ಭದಲ್ಲಿ ಬಳ್ಳಾರಿ ರಾಘವಾಚಾರ್ಯರ ಭಾವಚಿತ್ರ ಅನಾವರಣದ ಏರ್ಪಾಡನ್ನು ಮಾಡಿದ್ದಾರೆ. ಈ ಕಾರ್ಯವನ್ನು ಮದ್ರಾಸಿನ ನಿವೃತ್ತ ಮುಖ್ಯ ನ್ಯಾಯಾಧೀಶ ಶ್ರೀ ಪಿ. ವಿ. ರಾಜಮನ್ನಾರ್ ಅವರು ನೆರವೇರಿಸಲು ಒಪ್ಪಿದ್ದಾರೆ.

ಏಪ್ರಿಲ್ ದಿನಾಂಕ ೫ರಂದು ಕನ್ನಡ ಅಭಿಮಾನಿಗಳು, ರಾಜ್ಯವನ್ನು ಎರಡು ಮಾಡಬೇಕೆನ್ನುವವರ ಸೂಚನೆಯನ್ನು ವಿರೋಧಿಸುವ ಸಲುವಾಗಿ ಪ್ರದರ್ಶನ ನಡೆಸಿದರು. ಅದೇ ಸಂಜೆ ನಡೆದ ಸಭೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರು, ಶ್ರೀ ಅನ್ನದಾನಯ್ಯ ದೊಡ್ಡಮೇಟಿ, ಶ್ರೀ ವಾಟಾಳು ನಾಗರಾಜ್ ಮುಂತಾದವರು ಭಾಷಣಗಳನ್ನು ಮಾಡಿದರು. ರಾಜ್ಯದ ಹೆಸರು 'ಕರ್ನಾಟಕ' ಎಂದಾಗಲೇಬೇಕೆಂದು ನಿರ್ಣಯವಾಯಿತು. ಸಭೆಗೆ ವಿಧಾನಸಭಾ ಸದಸ್ಯರಾದ ಶ್ರೀ ಭಾಸ್ಕರ ಶೆಟ್ಟಿಯವರು ಅಧ್ಯಕ್ಷರಾಗಿದ್ದರು.

**ಸುರತ್ಕಲ್ಲು**

ಇಲ್ಲಿನ ವಿಜಯ ಸಾಹಿತ್ಯ ಮಾಲೆಯ ವತಿಯಿಂದ ನಡೆದ ಶ್ರೀ ಗೋವಿಂದ ಪೈ ಸ್ಮಾರಕ ಸ್ಪರ್ಧೆಗೆ ೫ ಪ್ರಬಂಧಗಳು ಬಂದಿದ್ದವೆಂದೂ, ಪ್ರಥಮ ಬಹುಮಾನಕ್ಕೆ ತಕ್ಕವು ಬರಲಿಲ್ಲವೆಂದೂ, ಪುತ್ತೂರಿನ ಸೆ. ಫಿ. ಕಾಲೇಜಿನ ವಿದ್ಯಾರ್ಥಿ ಶ್ರೀ ಕೆ. ರಾಮಚಂದ್ರಶರ್ಮ ಮತ್ತು ಮಂಜೇಶ್ವರ ಹೈಸ್ಕೂಲಿನ ವಿದ್ಯಾರ್ಥಿ ಶ್ರೀ ಟಿ. ಅಬ್ದುಲ್ಲರು ಬರೆದ ಪ್ರಬಂಧಗಳಿಗೆ ಪ್ರೋತ್ಸಾಹಕ ಬಹುಮಾನ ನೀಡಲಾಗುವುದೆಂದೂ ವ್ಯವಸ್ಥಾಪಕರು ತಿಳಿಸುತ್ತಾರೆ.

# ಸಂಪಾದಕೀಯ

## ಕಿಟೆಲ್ ಶಬ್ದಕೋಶದ ಪುನರ್ಮುದ್ರಣ

ರೆವರೆಂಡ್ ಫಾದರ್ ಕಿಟಲ್‌ರವರು ೧೮೯೪ರಲ್ಲಿ ಮಂಗಳೂರು ಬೇಸಲ್ ಮಿಷನ್ ಬುಕ್ ಅಂಡ್ ಟ್ರ್ಯಾಕ್ಟ್ ಡೆಪೋಸಿಟರಿಯವರ ಮುದ್ರಣಾಲಯದ ಮೂಲಕ ಕನ್ನಡಿಗರಿಗೆ ಅರ್ಪಿಸಿದ ಅಮರ ದೀವಿಗೆಯೇ ಈ ಶಬ್ದಕೋಶ—"ಕನ್ನಡ-ಇಂಗ್ಲಿಷ್ ಡಿಕ್ಷನೆರಿ" ಎಂಬ ಗ್ರಂಥ. ೧೮೯೪ ಜೂಲೈ ೨೨ರಲ್ಲಿ ಈ ಮಹಾನುಭಾವನು ಬರೆದ ಗ್ರಂಥ ಪೀಠಿಕೆಯಲ್ಲಿ ತಾನು ಅನುಸರಿಸಿದ ಮಾರ್ಗದಲ್ಲಿ ಕಂಡು ಬಂದ ಕಷ್ಟ, ಸಾಹಸಗಳನ್ನು ವಿಶದವಾಗಿ ತಿಳಿಸಿದ್ದಾನೆ. ಕನ್ನಡ ಭಾಷೆಯನ್ನು ಹಳೆಗನ್ನಡ, ನಡುಗನ್ನಡ ಮತ್ತು ಹೊಸ ಕನ್ನಡ—ಎಂಬ ಮೂರು ವರ್ಗಗಳಲ್ಲಿ ಕ್ರಮಬದ್ಧವಾಗಿ ವಿಂಗಡಿಸಿ ಸಂಬಂಧಪಟ್ಟ ಗ್ರಂಥಗಳನ್ನು ಪರಿಶೀಲಿಸಿ, ಎಂಟು ವರ್ಷಗಳ ಅವಧಿಯಲ್ಲಿ ಬೇಸಲ್ ಎವಾಂಜೆಲಿಕಲ್ ಮಿಷನ್ ಸೊಸೈಟಿಯವರ ಕೋರಿಕೆಯಂತೆ ರೆವರೆಂಡ್ ಎಫ್. ಕಿಟಲ್‌ರವರು ಈ ಮಹತ್ಕಾರ್ಯವನ್ನು ನೆರವೇರಿಸಿದರು. ಇಂಡಿಯಾ ಆಫೀಸಿನ ಮತ್ತು ಮೈಸೂರು ಸರ್ಕಾರದವರ ಉದಾರ ಧನಸಹಾಯದಿಂದ ೧೮೯೪ರಲ್ಲಿ ಈ ಮೇರುಕೃತಿಯು ಬೆಳಕನ್ನು ಕಂಡಿತು. ಅಲ್ಲಿಂದೀಚೆಗೆ ಈ ಶಬ್ದಕೋಶವು ಕನ್ನಡಿಗರ ಏಕೈಕ ಶಬ್ದಭಂಡಾರವಾಗಿ ಕನ್ನಡದ ಕೀರ್ತಿ ಲಾಂಛನವನ್ನು ಚಿರಸ್ಥಾಯಿಯಾಗಿ ಎತ್ತಿ ಹಿಡಿದಿದೆ. ಕನ್ನಡಿಗರು ರೆವರೆಂಡ್ ಎಫ್. ಕಿಟಲ್‌ರವರ ಅಮೋಘವಾದ ಸೇವೆಯನ್ನು ಮರೆಯುವಂತಿಲ್ಲ. ಕಿಟಲ್‌ರವರು ಜರ್ಮನರಾದರೂ ನಮ್ಮವರಾಗಿಬಿಟ್ಟಿದ್ದಾರೆ.

ಇಂತಹ ಮೇರು ಕೃತಿಯನ್ನು ತಿದ್ದಿ ಪುನರ್ಮುದ್ರಣ ಮಾಡಬೇಕಾದುದು ಈಗಿನ ನವೀನ ಕನ್ನಡ ಭಾಷೆಯ ಬೆಳವಣಿಗೆಗೆ ಅತ್ಯವಶ್ಯಕವೆಂದು ಪರಿಗಣಿಸಿ, ಮದರಾಸಿನಲ್ಲಿ ಕನ್ನಡ ವಿದ್ವಾಂಸರು ಕಾರ್ಯೋನ್ಮುಖರಾಗಿದ್ದಾರೆ. ಈ ಕಾರ್ಯನಿರ್ವಹಣೆಯಲ್ಲಿ ಮದರಾಸು ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾದ ಸನ್ಮಾನ್ಯ ಶ್ರೀ ಮರಿಯಪ್ಪ ಭಟ್ ಅವರು ಪ್ರಮುಖ ಪಾತ್ರ ವಹಿಸಿದ್ದಾರೆ. ಇದೀಗ ಅತೀವ ಸಂತಸದ ಸುದ್ದಿ. ಶ್ರೀ ಮರಿಯಪ್ಪ ಭಟ್‌ರವರು ಈಗಾಗಲೇ ಕನ್ನಡಿಗರ ಮನ್ನಣೆಯನ್ನು ಗಳಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಪ್ರಕಟವಾಗುತ್ತಿರುವ ಕನ್ನಡ ಶಬ್ದಕೋಶದ ರಚನಾ ಸಮಿತಿಯಲ್ಲಿ ಇವರು ಸದಸ್ಯರಾಗಿದ್ದಾರೆ. ಈ ಮಹನೀಯರು ಈಗ ಕೈಗೊಂಡಿರುವ ಕಾರ್ಯವು ತೀವ್ರಗತಿಯಲ್ಲಿ ಸುಸೂತ್ರವಾಗಿ ನೆರವೇರಲೆಂದು ಹಾರೈಸುತ್ತೇವೆ. ಸರ್ಕಾರದ ಮತ್ತು ಸಾರ್ವಜನಿಕರ ಘನ ಸಹಾಯದಿಂದ ಕಿಟಲ್ ಶಬ್ದಕೋಶದ ಪುನರ್ಮುದ್ರಣವು ಪರಿಪೂರ್ಣವಾಗುವುದೆಂದು ನಂಬಿದ್ದೇವೆ.

## ದಿ. ನ್ಯಾಯಮೂರ್ತಿ ವಾಸುದೇವಮೂರ್ತಿಯವರು

ಕನ್ನಡ ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯರಾಗಿ ನಗರದ ನಾನಾ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿ ಜನಪ್ರಿಯರಾಗಿ ಪರಿಶುದ್ಧರಾಗಿ ಬಾಳಿ ಬದುಕಿದ ಮೈಸೂರು ಹೈಕೋರ್ಟಿನ ನಿವೃತ್ತ ನ್ಯಾಯಮೂರ್ತಿ ಬಿ. ವಾಸುದೇವಮೂರ್ತಿಯವರು ತಮ್ಮ ೭೯ನೆಯ ವಯಸ್ಸಿನಲ್ಲಿ ಕಳೆದ ಮಾರ್ಚಿ ೧೮ರಂದು ನಮ್ಮನ್ನಗಲಿದರು. ಬಸವನಗುಡಿಯಲ್ಲಿರುವ ತಮ್ಮ ಮನೆಯ ಬಾವಿಯಲ್ಲಿ ಬಿದ್ದು ಇಹಲೋಕದ ವ್ಯಾಪಾರವನ್ನು ತ್ಯಜಿಸಿದರು. "ಜಾತಸ್ಯ ಮರಣಂ ಧ್ರುವಂ" ಎಂಬುದು ಸತ್ಯವಾದರೂ, ಮಾನವನಿಗೆ ತಾನು ಎಲ್ಲಿ, ಯಾವಾಗ, ಹೇಗೆ ಮರಣವನ್ನಪ್ಪುವೆನೆಂಬ ಪರಿಜ್ಞಾನವಿರುವುದಿಲ್ಲ. ಆದಾಗ್ಯೂ "ಶರಣರನ್ನು ಮರಣದಲ್ಲಿ ನೋಡು" ಎಂಬ ನಾಣ್ಣುಡಿಯನ್ನು ನಾವು ಗಮನಿಸಬೇಕು. ಶ್ರೀಮಾನ್ ಬಿ. ವಾಸುದೇವಮೂರ್ತಿಯವರ ಮರಣದಿಂದ ಮೈಸೂರಿನ ಜನತೆ ಅತ್ಯಂತ ದುಃಖಕ್ಕೀಡಾಗಿದೆ. ಸಾರ್ವಜನಿಕ ಸೇವೆಯಲ್ಲಿ ತನ್ನ ಜನ್ಮವನ್ನೇ ಧಾರೆಯೆರೆದ ಈ ಮಹನೀಯರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲಿ. ದಿವಂಗತರ ಇಷ್ಟ ಬಂಧುಮಿತ್ರರಿಗೆ ಈ ಅಗಲಿಕೆಯ ದುಃಖವನ್ನು ಸಹಿಸತಕ್ಕ ಶಕ್ತಿಯನ್ನು ದಯೆಪಾಲಿಸಲಿ.

# ಪರಿಷತ್ತಿನ ಸೇವಾಕಾಂಕ್ಷಿಗಳಿಬ್ಬರ ನಿಧನ

## ಕೈ॥ ಟಿ. ಎಸ್. ನಂಜುಂಡಪ್ಪನವರು

ಬೆಂಗಳೂರಿನ ಸುಪ್ರಸಿದ್ಧ ನಾಗರಿಕರೂ, ಕರ್ಣಾಟಕ ಮುದ್ರಣಾಲಯದ ಒಡೆಯರೂ, ಉದಾರ ದಾನಿಗಳೂ ಆದ ಶ್ರೀ ಟಿ. ಎಸ್. ನಂಜುಂಡಪ್ಪನವರು ತಾ॥ ೮-೮-೬೪ರ ರಾತ್ರಿ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ತಮ್ಮ ಭೌತಿಕ ದೇಹವನ್ನು ಬಿಟ್ಟು ಶಿವನ ಪಾದವನ್ನು ಸೇರಿದರು. ಮರಣ ಕಾಲದಲ್ಲಿ ಇವರಿಗೆ ೫೮ ವರ್ಷ ವಯಸ್ಸು. ಇವರು ಪತ್ನಿ ಮತ್ತು ಏಕಮಾತ್ರ ಪುತ್ರನನ್ನು ದುಃಖಕ್ಕೆ ಈಡುಮಾಡಿ ಹೋಗಿದ್ದಾರೆ. ಗಣ್ಯ ಸಾಹಿತಿಗಳಾದ ನ್ಯಾಯಮೂರ್ತಿ ಶ್ರೀ ಟಿ. ಎಸ್. ಮಲ್ಲಪ್ಪನವರು ಮತ್ತು ಶ್ರೀ ಟಿ. ಎಸ್. ಚೆನ್ನಪ್ಪನವರು ಮೃತರ ಸಹೋದರರು. ಶ್ರೀಯುತರು ಕನ್ನಡ ಸಾಹಿತ್ಯ ಪರಿಷತ್ತಿಗೆ ರೂ. ೧೫೫೦/ಗಳನ್ನು ಉದಾರವಾಗಿ ಕೊಟ್ಟು ಸಹಾಯ ಮಾಡಿದ್ದಾರೆ. ಅವರ ವಿಯೋಗವು ಅವರ ಮನೆತನಕ್ಕೇ ಅಲ್ಲ, ಬೆಂಗಳೂರಿಗೇ ಹೆಚ್ಚಿನ ನಷ್ಟವನ್ನು ಉಂಟುಮಾಡಿದೆಯೆಂದು ಹೇಳಬಹುದು. ಈಶ್ವರೇಚ್ಛೆಗೆ ಉಪಾಯವಿಲ್ಲ. ಮೃತರ ಆತ್ಮಕ್ಕೆ ಶಾಂತಿಯೂ, ವಿಯೋಗಿಗಳ ಮನಸ್ಸಿಗೆ ಸಮಾಧಾನವೂ ಉಂಟಾಗಲೆಂದು ಪ್ರಾರ್ಥಿಸುತ್ತೇವೆ.

## ದಿವಂಗತ ಡಿ. ನರಸಿಂಹಾಚಾರ್ ಅವರು

ಕನ್ನಡ ಸಾಹಿತ್ಯ ಪರಿಷತ್ತಿನ ಪುಸ್ತಕ ಭಂಡಾರದ ನಿರ್ವಾಹಕರಾಗಿದ್ದ ಶ್ರೀ ಡಿ. ನರಸಿಂಹಾಚಾರ್ಯರು ತಾ॥ ೧೦-೮-೬೪ರ ಸಂಜೆ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ನಿಧನರಾದರೆಂದು ತಿಳಿಸಲು ವ್ಯಸನವಾಗುತ್ತದೆ. ಇವರು ನಿವೃತ್ತ ಸಬ್ ರಿಜಿಸ್ಟ್ರಾರ್ ಆಗಿದ್ದು ಪರಿಷತ್ತಿಗೆ ಸೇರಿ ಶ್ರದ್ಧೆಯಿಂದ ಸೇವೆ ಸಲ್ಲಿಸುತ್ತಿದ್ದರು. ಪುಸ್ತಕಾಲಯದ ವ್ಯವಸ್ಥೆ ಹಾಗೂ ಏಳಿಗೆಗೆ ಬಹಳವಾಗಿ ಶ್ರಮಿಸಿದರು. 'ವೇದವ್ಯಾಸ' ಮೊದಲಾದ ಗ್ರಂಥಗಳನ್ನು ರಚಿಸಿ ಸಾಹಿತ್ಯ ಸೇವೆಯನ್ನು ಮಾಡಿದ್ದಾರೆ. ಇವರು ತುಂಬಾ ಪ್ರಾಮಾಣಿಕ ಕಾರ್ಯಕರ್ತರಾಗಿದ್ದರು. ಇವರ ವಿಯೋಗವು ಅವರ ಮನೆತನಕ್ಕೇ ಅಲ್ಲದೆ ಕನ್ನಡ ಸಾಹಿತ್ಯ ಪರಿಷತ್ತಿಗೂ ಮಿಗಿಲಾದ ನಷ್ಟವನ್ನುಂಟುಮಾಡಿದೆಯೆನ್ನಬಹುದು. ಈಶ್ವರೇಚ್ಛೆಗೆ ಉಪಾಯವಿಲ್ಲ. ಮೃತರ ಆತ್ಮಕ್ಕೆ ಶಾಂತಿಯನ್ನೂ ವಿಯೋಗಿಗಳ ಮನಸ್ಸಿಗೆ ಸಮಾಧಾನವನ್ನೂ ಉಂಟಾಗುವಂತೆ ಭಗವಂತನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಬಿ. ಶಿವಮೂರ್ತಿ ಶಾಸ್ತ್ರೀ



ಸಂಪಾದಕರು: ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು-೧೮.

# ಸಾದರ ಸ್ವೀಕಾರ

**ಕನ್ನಡದ ಜಾನಪದ ಗೀತೆಗಳು:** ಲೇಖಕರು: ಡಾ. ಬಿ. ಎಸ್. ಗದ್ದಗಿಮಠ, ಎಂ. ಎ., ಪಿಎಚ್.ಡಿ.; ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಪುಟ: ೩೯೨; ಸೈಜು ರಾಯಲ್; ಬೆಲೆ: ರೂ. ೫.

**ಶ್ರೀ ಪುರಂದರದಾಸರು:** ಸಂಪಾದಕ: ಶ್ರೀ ಬುರ್ಲಿ ಬಿಂದು ಮಾಧವ; ಪ್ರಕಾಶಕರು: ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ. ಸೈಜು ೧/೮ ಕ್ರೌನ್; ಪುಟ ೧೬೮; ಬೆಲೆ ರೂ. ೨.

**ಶ್ರೀ ಗುರುವಚನಗಳು:** ಲೇಖಕರು: ಶ್ರೀ ಡಿ. ಆರ್. ಚನ್ನೇಗೌಡ, ಬಿ. ಎ.; ಪ್ರಕಾಶಕರು: ಶ್ರೀ ರಾಮಕೃಷ್ಣ ಪುಸ್ತಕ ಭಂಡಾರ, ಗವೀಪುರ ವಿಸ್ತರಣ, ಬೆಂಗಳೂರು-೧೯; ಸೈಜು: ೧/೧೬ ಡೆಮ್ಮಿ; ಪುಟ ೧೩೬; ಬೆಲೆ ರೂ. ೧.

**ಸಾರ್ವಜನಿಕ ಅಭಿಪ್ರಾಯ:** ಲೇಖಕರು: ಪ್ರೊ. ಎನ್. ರಾಜಗೋಪಾಲರಾವ್, ಎಂ. ಎ.; ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಸೈಜು ೧/೮ ಫುಲ್‌ಸ್ಕೇಪ್; ಪುಟ: ೯೨: ಬೆಲೆ ೨೫ ನ.ಪೈ.

**ಕಿರಾತಾರ್ಜುನ ಪ್ರಸಂಗ:** ಲೇಖಕರು: ಪ್ರೊ॥ ದೇವೇಂದ್ರ ಕುಮಾರ ಹಕಾರಿ, ಎಂ. ಎ.; ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಸೈಜು: ೧/೮ ಫುಲ್‌ಸ್ಕೇಪ್; ಪುಟ: ೭೦; ಬೆಲೆ: ೨೫ ನ. ಪೈ.

**ನೀರಾವರಿ ಬೇಸಾಯ:** ಲೇಖಕರು: ಪ್ರೊ॥ ಎಸ್. ಎ. ಹೊಸಮನಿ; ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಸೈಜು ೧/೮ ಫುಲ್ ಸ್ಕೇಪ್; ಪುಟ ೫೮; ಬೆಲೆ ೨೫ ನ.ಪೈ.

**ಶ್ರೀ ಲಕ್ಷ್ಮೀನರಸಿಂಹ ಸ್ವಾಮಿಯ ಸಂಕ್ಷಿಪ್ತ ಇತಿಹಾಸ:** ಲೇಖಕರು: ಕೊಂ. ಪ. ರ. (ಕೆ. ಪಿ. ರಾಜಣ್ಣ); ಪ್ರಕಾಶಕರು: ಕೊ. ಪ. ರಾಜ್‌ಮೀನ, ಲಕ್ಷ್ಮೀನರಸಿಂಹ ನಿಲಯ, ಹಿರೆಗುಂಟನೂರು ಪೋಸ್ಟ್, ಚಿತ್ರದುರ್ಗ ತಾಲೂಕು; ಸೈಜು ೧/೧೬ ಡೆಮ್ಮಿ; ಪುಟ ೪೪; ಬೆಲೆ ೪೦ ನ.ಪೈ.

**ಶ್ರೀ ಸದಾಶಿವ (ಕುಮಾರ) ಮಹಾಸ್ವಾಮಿಗಳ ನಾಮಾವಳಿಯು:** ಲೇಖಕರು: (ಪುರಾತನರಕೆಂದ), ಮುಹಾರುದ್ರಪ್ಪ, ಮಹಾಲಿಗಂಪ್ಪ ಮಿರ್ಜಿ; ಪ್ರಕಾಶಕರು: ಗರುಸಿದ್ದಪ್ಪ ಮಹಾಲಿಂಗಪ್ಪ ಮಿರ್ಜಿ; ವಿರೂಪಾಕ್ಷಪ್ಪ ಮುಹಾರುದ್ರಪ್ಪ ಮಿರ್ಜಿ; ಸೈಜು ೧/೮ ಡೆಮ್ಮಿ; ಪುಟ: ೨೦

**ಗುಡ್ಡದ ಸಿಂಗಾರಿ** (ಕಾದಂಬರಿ): ಲೇಖಕರು: ಶಿರುಕ; ಪ್ರಕಾಶಕರು: ಅನಾಥ ಸೇವಾಶ್ರಮ, ಮಲ್ಲಾಡಿಹಳ್ಳಿ ಪೋಸ್ಟ್, ಹೊಳಲ್ಕೆರೆ ತಾಲೂಕು. ಸೈಜು ೧/೮ ಕ್ರೌನ್; ಪುಟ ೨೧೪; ಬೆಲೆ: ರೂ. ೩.

**ಶ್ರೀ ಪುರಂದರೋತ್ಸವ ಮತ್ತು ಅಖಿಲ ಕರ್ನಾಟಕ, ಕೀರ್ತನಕಾರರ ಸಮ್ಮೇಳನದ ದಿವ್ಯ ನೆನಹು:** ಪ್ರಕಾಶಕರು: ಶ್ರೀ ಪುರಂದರೋತ್ಸವ ಮತ್ತು ಅಖಿಲ ಕರ್ನಾಟಕ ಕೀರ್ತನಕಾರರ ಸಮ್ಮೇಲನ ಸಮಿತಿ, ಬೆಂಗಳೂರು. ಸೈಜು ೧/೪ ಕ್ರೌನ್; ಪುಟ: ೧೦೦; ಬೆಲೆ: ರೂ. ೨

**ದಾಸವಾಣಿ** (ಮಾಸಪತ್ರಿಕೆ): ಸಂಪಾದಕರು: ಶ್ರೀ ಕೀರ್ತನ ಕೇಸರಿ ಭದ್ರಗಿರಿ ಕೇಶವದಾಸರು, ಬಿ.ಎ.,ಎಲ್.ಎಲ್.ಬಿ. ಪ್ರಕಾಶಕರು: ಭದ್ರಗಿರಿ ಸರ್ವೋತ್ತಮ ಪೈ ಬಿ.ಎಸ್‌ಸಿ. ಪುಟ ೩೨; ಬೆಲೆ ೫೦ ನ.ಪೈ.

**ಪವಿತ್ರ ಜೀವನ:** ಲೇಖಕರು: ಸಿಂಪಿ ಲಿಂಗಣ್ಣ; ಪ್ರಕಾಶಕರು: ಅರವಿಂದ ಗ್ರಂಥಾಲಯ, ಚಡಚಣ; ಸೈಜು ೧/೮ ಕ್ರೌನ್; ಪುಟ ೧೩೦; ಬೆಲೆ ರೂ. [illegible]-೫೦ ನ.ಪೈ.

*** ಮಧ್ಯಬಿಂದು:** ಲೇಖಕರು: ಚಂದ್ರಶೇಖರ ಪಾಟೀಲ; ಪ್ರಕಾಶಕರು: ಚಂದ್ರಶೇಖರ ಬಿ. ಪಾಟೀಲ ಎಂ. ಎ., ಕರ್ನಾಟಕ ಕಾಲೇಜು, ಧಾರವಾಡ; ಸೈಜು ೧/೮ ಕ್ರೌನ್; ಪುಟ ೬೮; ಬೆಲೆ ರೂ. ೧–೫೦ ನ.ಪೈ.

**ವೀರಶೈವ ಧರ್ಮ:** ಲೇಖಕರು: ಬಿ. ಗಂಗಾಧರ ಶಾಸ್ತ್ರಿ, ಸದರನ್ ರೈಲ್ವೆ (೧೦೩೦) ವಿದ್ಯಾರಣ್ಯಪುರಂ, ಮೈಸೂರು–೪; ಪುಟ ೧೮; ಬೆಲೆ ೨೫ ನ.ಪೈ.

*** ತುಳಸಿ:** ಲೇಖಕರು: ಕವಿರಾಜ ಪಿ. ವಿ. ನಾಯಕ್; ಪ್ರಕಾಶಕರು: ಆನಂದ ಪ್ರಕಾಶನ, ಆನಂದ ಸ್ಟೋರ್ಸ್, ಮಿಶನ್ ಹೈಸ್ಕೂಲ್ ರೋಡ್, ಮಂಗಳೂರು–೧; ಪುಟ: ೨[illegible]; ಬೆಲೆ ೨೫ ನ.ಪೈ.

*** ದೇಶಭಕ್ತ ಕಾರ್ನಾಡ್ ಸದಾಶಿವರಾಯರ ದಿವ್ಯ ಜೀವನ ಚರಿತ್ರೆ:** ಲೇಖಕರು: ಶ್ರಿ ಪಿ. ವಿ. ನಾಯಕ್; ಪ್ರಕಾಶಕರು: ಆನಂದ ಪ್ರಕಾಶನ, ಬಿ.ಇ.ಎಂ. ಹೈಸ್ಕೂಲ್ ರಸ್ತೆ, ಮಂಗಳೂರು-೧; ಪುಟ ೩೪; ಬೆಲೆ ೫೦ ನ.ಪೈ.

*** ಸಾಹಿತ್ಯ ಸುಧೆ:** ಲೇಖಕರು: ಪ್ರೊ॥ ಬಿ. ಎಸ್. ಕುಲಕರ್ಣಿ; ಪ್ರಕಾಶಕರು: ಮನೋಹರ ಘಾಣೇಕರ, ಸಮಾಜ ಪುಸ್ತಕಾಲಯ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೧೩೮; ಬೆಲೆ ರೂ. ೧–೭೫ ನ.ಪೈ.

*** ಶ್ರೀ ಬಸವಣ್ಣನವರ ವಚನ ಸಂಗ್ರಹ:** ಸಂಪಾದಕ: ಸ. ಸ. ಮಾಳವಾಡ; ಪ್ರಕಾಶಕರು: ಪ್ರತಿಭಾ ಗ್ರಂಥಮಾಲೆ, ಸಮಾಜ ಪುಸ್ತಕಾಲಯ, ಧಾರವಾಡ–೧. ಸೈಜು ೧/೮ ಕ್ರೌನ್; ಪುಟ: ೨೦೬; ಬೆಲೆ ರೂ. ೪.

*** ಮಕ್ಕಳ ಸಾಮಾನ್ಯ ರೋಗಗಳು:** ಲೇಖಕರು: ಡಾ॥ ರಾಜಾರಾಮರಾವ್: ಪ್ರಕಾಶಕರು: ಮನೋಹರ ಘಾಣೇಕರ, ಸಮಾಜ ಪುಸ್ತಕಾಲಯ, ಧಾರವಾಡ. ಸೈಜು ೧/೮ ಕ್ರೌನ್; ಪುಟ: ೧೧೨; ಬೆಲೆ ರೂ. ೧–೫೦ ನ.ಪೈ.

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತದೆ.

# ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ-ಕನ್ನಡ ನಿಘಂಟು

## ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ "ಕನ್ನಡ ನಿಘಂಟು" ಡೆಮ್ಮಿ ಚತುಷ್ಪತ್ರ ಆಕಾರದ ಸುಮಾರು ೫,೦೦೦ ಪುಟಗಳನ್ನು ಒಳಗೊಂಡು, ಒಂದೊಂದು ಸಂಪುಟದಲ್ಲೂ ಸುಮಾರು ೧೨೫೦ ಪುಟಗಳಿರುವ ನಾಲ್ಕು ಸಂಪುಟಗಳಲ್ಲಿ (Volumes) ಪ್ರಕಟವಾಗುವಂತೆ ಏರ್ಪಡಿಸಲಾಗಿದೆ.

ನಿಘಂಟಿನ ಒಟ್ಟು ಬೆಲೆ ೧೨೦ ರೂಪಾಯಿಗಳು; ಮುಂಗಡವಾಗಿ ಹಣ ಸಲ್ಲಿಸುವ ಗ್ರಾಹಕರಿಗೆ ೧೦೦ ರೂಪಾಯಿಗಳ ರಿಯಾಯಿತಿ ದರದಲ್ಲಿ ಅದನ್ನು ಒದಗಿಸಲಾಗುತ್ತದೆ. ನಿಘಂಟು ಸಿದ್ಧವಾದಂತೆಲ್ಲ ೯೬ ಪುಟಗಳುಳ್ಳ ಸಂಚಿಕೆಗಳ (Fascicules) ರೂಪದಲ್ಲಿ ಅದನ್ನು ಮುಂಗಡವಾಗಿ ೧೦೦ ರೂಪಾಯಿಗಳ ರಿಯಾಯಿತಿಯ ಬೆಲೆಯನ್ನು ಸಲ್ಲಿಸಿರುವ ಗ್ರಾಹಕರಿಗೆ ತಲುಪಿಸಲಾಗುವುದು. ನಿಘಂಟಿನ ಸಂಪುಟಗಳನ್ನಾಗಲಿ ಸಂಚಿಕೆಗಳನ್ನಾಗಲಿ ಬಿಡಿ ಬಿಡಿಯಾಗಿ ವಿಕ್ರಯಿಸುವುದಿಲ್ಲ.

ನಿಘಂಟಿನ ಎರಡನೆಯ ಸಂಪುಟವು ಪ್ರಕಟವಾದ ಕೂಡಲೆ **ರಿಯಾಯಿತಿಯ ದರದಲ್ಲಿ** ಅದನ್ನು ವಿಕ್ರಯಿಸುವುದನ್ನು ನಿಲ್ಲಿಸಲಾಗುತ್ತದೆ; ಆ ಮುಂದೆ ಪೂರ್ಣವಾದ ಬೆಲೆಯನ್ನು ಕೊಡಬೇಕಾಗುತ್ತದೆ.

ನಿಘಂಟಿನ ಒಂದು ಸಂಪುಟವು ಸಿದ್ಧವಾದ ಬಳಿಕ ಅದರ ರಕ್ಷಾಕವಚವನ್ನು (Binding Case) ಮುಂಗಡವಾಗಿ ಬೆಲೆ ಸಲ್ಲಿಸಿರುವ ಗ್ರಾಹಕರಿಗೆ ಉಚಿತವಾಗಿ ಒದಗಿಸಲಾಗುವುದು.

ಸಂಚಿಕೆಗಳನ್ನೂ ರಕ್ಷಾಕವಚಗಳನ್ನೂ ಕಳಿಸಲು ತಗುಲುವ ಅಂಚೆವೆಚ್ಚವನ್ನು ಗ್ರಾಹಕರೇ ಸಲ್ಲಿಸತಕ್ಕದ್ದು.

ಗ್ರಾಹಕರು ಮುಂಗಡ ಬೆಲೆಯ ಜೊತೆಗೆ ಹತ್ತು ರೂಪಾಯಿಗಳನ್ನು ಅಂಚೆವೆಚ್ಚ, ರವಾನೆ ವೆಚ್ಚಗಳಿಗಾಗಿ ಸಲ್ಲಿಸಬೇಕು. ಸಂಚಿಕೆಗಳನ್ನು ರಿಜಿಸ್ಟರ್ಡ್ ಪೋಸ್ಟ್ ಮೂಲಕ ಕಳಿಸಬೇಕೆಂದು ಗ್ರಾಹಕರು ಅಪೇಕ್ಷಿಸಿದಲ್ಲಿ ಆ ವಿಷಯವನ್ನು ಅವರು ಲಿಖಿತರೂಪದಲ್ಲಿ ಮೊದಲೇ ತಿಳಿಸತಕ್ಕದ್ದು. ಹಾಗೆ ಮಾಡದಿದ್ದರೆ ಸಂಚಿಕೆಗಳನ್ನು "ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್" ಸಮೇತವಾಗಿ ಸಾದಾ ಟಪಾಲಿನ ಮೂಲಕ ಕಳಿಸಲಾಗುವುದು. ಸಂಚಿಕೆಗಳನ್ನು ಪರಿಷತ್ತಿನ ಕಚೇರಿಯಲ್ಲೇ ತೆಗೆದುಕೊಳ್ಳಲು ಅಪೇಕ್ಷಿಸುವವರು ಮುಂಚಿತವಾಗಿ ತಿಳಿಸಿ ಆ ರೀತಿ ಮಾಡಬಹುದು; ಅಂಥವರು ಅಂಚೆವೆಚ್ಚವನ್ನು ಕೊಡಬೇಕಾಗುವುದಿಲ್ಲ.

**ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.**

ಈ ವಿಳಾಸಕ್ಕೆ ಹಣ ಕಳುಹಿಸಿ ಪತ್ರ ವ್ಯವಹಾರ ಮಾಡಬಹುದು.

**ಕೆ. ಎಂ. ಕೃಷ್ಣರಾವ್**
ಗೌರವ ಕಾರ್ಯದರ್ಶಿ

Reg. No. B. G. 4—April 1964

Licensed to Post without pre-payment License No 1






ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೭] ಸಂಪಾದಕರು: ಡಿ. ಆರ್. ರಾಮಯ್ಯ, ಬಿ.ಎ. [ಸಂಚಿಕೆ ೫

## ಪರಿಷತ್ತಿನಲ್ಲಿ ನಡೆದ ವಸಂತ ಸಾಹಿತ್ಯೋತ್ಸವ



ಏಪ್ರಿಲ್ ದಿನಾಂಕ ೧೭ ರಂದು ಆರಂಭವಾದ ವಸಂತ ಸಾಹಿತ್ಯೋತ್ಸವದ ಉದ್ಘಾಟನಾ ಚಿತ್ರ : ಮೈಸೂರು ಪ್ರಧಾನ ನ್ಯಾಯಸ್ಥಾನದ ಮುಖ್ಯ ನ್ಯಾಯಮೂರ್ತಿ ಶ್ರೀ ಹೊಂಬೇಗೌಡರು ಉದ್ಘಾಟಿಸುತ್ತ ಮಾತನಾಡುತ್ತಿರುವ ಚಿತ್ರ.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

## ವಿಷಯ ಸೂಚಿಕೆ








ಸಂಪುಟ ೨೭ ] ಮೇ ೧೯೬೪ [ ಸಂಚಿಕೆ ೫

# ವಸಂತ ನಿಕೇತನ *

ಲೇಖಕಿ : ಎನ್. ಎಸ್. ಪರಿಮಳಾ

ವಸಂತ ಕಿಸಲಯ ಕೇಲೀ ವನದಲಿ
ಭ್ರಮರೀ ಗುಂಜಿತ ಕುವಲ ಯದಳದಲಿ
ಕುಂಜ ನಿಕುಂಜದಿ ರಂಜಿಪ ರವದಲಿ
ಮಂಜುಲ ಮಂಜುಲ ಗೀತಾಂಜಲಿಯಲಿ
ತಳಿರ್ ತೋಳ್ತೆಕ್ಕೆಯಲಾಡುವ ಅಲರಲಿ
ಹೊಮ್ಮಿತು ಹೊಸತನ, ಚಿಮ್ಮಿತು ಚೇತನ
ತಂದಿತು ಬಾಳಿಗೆ, ಹೊಸ ರಸಪಾತಣ ||

ಅನಂತ ನೀಲಿಮೆ ಉಯ್ಯಾಲೆಯಲಿ
ತೂಗುತ ಆಡಿತು ಮೇಘದ ಮಾಲೆ
ತೋರುತ, ತಾಳುತ ಹೊಸ ರೂಪದ ಸಾಲೆ
ಹೊಸ ಹೊಸ ಕನಸಿನ ಕ್ರೀಡಾ ಲೀಲೆ
ಆಡುತ ರಚಿಸಿತು ಸೊಬಗಿನ ಮಾಲೆ
ಹೊಮ್ಮಿಸಿ ಹೊಸತನ, ಚಿಮ್ಮಿಸಿ ಚೇತನ
ತಂದಿತು ಬಾಳಲಿ ಸವಿ ತಾನ ವಿತಾನ ||

ಗೂಡನು ಬಿಟ್ಟು, ಗೋವಿಹಂಗ ಓಡಿತು
ಬನ ಬನದಲಿ ಮರಿದುಂಬಿಯು ಹಾಡಿತು
ತನು ಮನದಲಿ ಹೊಸ ಹುರುಪದು ಮೂಡಿತು
ಮಕ್ಕಳ ವದನದಿ ನಗೆಯದು ಆಡಿತು
ನಲ್ಮೆಯ ಹೃದಯವು ಒಂದಡೆ ಕೂಡಿತು
ಹೊಮ್ಮಿಸಿ ಹೊಸತನ, ಚಿಮ್ಮಿಸಿ ಚೇತನ
ತಂದಿತು ಬಾಳಿಗೆ ಅಮೃತ ಗಾನ ||

ಗೊಲ್ಲನ ಕೊಳಲಿ ಅನುರಾಗವು ಉಕ್ಕಿತು
ಎಲ್ಲವ ಮರೆತು ಜಗವೇ ನಕ್ಕಿತು
ಹಂದರದಲಿ ಹೂ ಮಂದದಿ ಅರಳಿತು
ಮನಮಂದಿರದಲಿ ಜ್ಯೋತಿಯು ಬೆಳಗಿತು
ಬಂಧುರ ಬಾಳಿನ ಗುಟ್ಟದು ತಿಳಿಯಿತು
ಹೊಮ್ಮಿಸಿ ಹೊಸತನ, ಚಿಮ್ಮಿಸಿ ಚೇತನ
ಪಾಯಿತು ಜೀವನ, ವಸಂತ ನಿಕೇತನ ||

* ಕನ್ನಡ ಸಾಹಿತ್ಯ ಪರಿಷತ್ತು ಇದೇ ಏಪ್ರಿಲಿನಲ್ಲಿ ಏರ್ಪಡಿಸಿದ್ದ ವಸಂತ ಸಾಹಿತ್ಯೋತ್ಸವದ ಕವಿಗೋಷ್ಠಿಯಲ್ಲಿ ಓದಿದ ಕವನ.

# ವಧೂ ವಿಜಯ

## (ಪಾರ್ವತಿ ಪ್ರಣಯ – ಗೀತ ರೂಪಕ)

ಲೇಖಕಿ : ' ಮಂಡೋದರಿ ' *

ಸ್ಥಳ: ಕೈಲಾಸ. ಶಿವ ಧ್ಯಾನಮಗ್ನನಾಗಿರುವನು. ಸುರರು ಭಯಭೀತರಾಗಿರುವರು.

ಸುರರು : ಎಂಥ ಉಗ್ರ ತಪಸ್ಸಿದು! ಮಹಾದೇವನ ತಪಸ್ಸಿನಿಂದ ನಮಗೆಲ್ಲ ಒಳಿತಾಗುವುದರ ಬದಲು ಅತೀವ ಆತಂಕವೇ ಉಂಟಾಗಿದೆ....(ಹರನ ವರ ಪಡೆದು ಅಗ್ಗಳಿತ ರಾದ ಅಸುರರನ್ನು ಕಂಡು) ಏನಾಶ್ಚರ್ಯ! ಶಂಕರನಿಗೆ ಸುರಾಸುರರ ಭೇದವೇ ತಿಳಿಯದಂತಾಯಿತೇ?....ಮುನಿ ವರ್ಯರೇ, ದಯೆದೋರಿರಿ....ದಯೆದೋರಿರಿ....

(ನೇಪಥ್ಯದಲ್ಲಿ ಹಾಡು ಸಾಗಿದೆ).

### ರಾಗ – ಭೂಪಾಳಿ

ಸುರವರರು ಸುರಮುನಿಯ ಶರಣು ಶರಣೆಂದೆನುತ
ಶಶಿಧರನ ಸಮ್ಮೋಹ ಗೊಳಿಸಲರುಹಿದರು . . . . ಸುರ
ಪಾತಾಳ ಪ್ರಭು ಬಂದು ಪರಶಿವನ ವರದಿಂದ
ಮೂಲೋಕವಾಳಬಂದುದ ಕಂಡು ದಿಗಿಲು . . . . ಸುರ
ಸುರಲೋಕ ಭೂಲೋಕ ಸಂಸ್ಕೃತಿಯ ಸೆರೆ ಹಿಡಿವ
ಪಾತಾಳಿಗರರೆಲ್ಲರನು ಸಂಹರಿಸಲು.... ಸುರ
ಯೋಗೀಶ್ವರನ ಯೋಗ ಬಲಗುಂದಿ ತಪಭಂಗ
ಗೊಳಿಸಲನುಗೊಳಿಸೆ ಗಿರಿಜಾಂಬೆಯನು ತರಲು. . . .ಸುರ
ಮೋಹ ಬಲೆ ಬೀಸಿ ಗಿರಿಬಾಲೆಯಳ ಸೆರೆ ಹಿಡಿದು
ಭೋಗ–ಬಲದಿಂದವಳ ಒಲವ ಮುಂದಿಡಲು . . . . ಸುರ
ಸಂಮೋಹಶಕ್ತಿ ಸೆಲೆ ರತಿದೇವಿಯೊಡಗೂಡಿ
ಸಂಮೋಹದಂಬುಧರನಲ್ಲಿ ಕಳುಹಿಸಲು . . . . ಸುರ

ಸುರರು : ಓಹೋ, ಇದೇನು! ಗಿರಿರಾಜ ವರಾನ್ವೇಷಣೆಗೆ ಹೊರಟಿರುವನೆ? ನಾವಿನ್ನು ತ್ವರೆ ಮಾಡಬೇಕು.... ಪಾರ್ವತಿಗೆ ತಕ್ಕ ವರ ಪರಮೇಶ್ವರನಲ್ಲದೆ ಮತ್ತಾರಿರು ವರು?....ನೋಡೋಣ....

(ಸುರರ ನಿರ್ಗಮನ. ನೇಪಥ್ಯದಲ್ಲಿ ಹಾಡು ಸಾಗಿದೆ.)

### ರಾಗ – ಅಹಿರ್ಭೈರವ

ಗಿರಿರಾಜ ಹೊರ ಬಂದಾನ ॥
ತನ್ನ ಕುವರಿಯ ಅನುರೂಪ ವರದೇವನರಸುತ್ತ...ಗಿರಿ ॥
ಹಿಮಗಿರಿ ವರಕನ್ಯೆ ಗಿರಿಜಾಂಬೆಗನುರೂಪ
ವರದೇವ ವಿಷಕಂಠನಿರವ ತಾನರಿಯದೆ
ಭುವನೇಶಿಗೊಲಿಯುವ ಭುವನೀಶನಾ ತಾಣ
ಕೈಲಾಸವೇ ಕಾಣ ಕೆಳಗಿಳಿದು ಧರೆಗೆಂದು. . . .ಗಿರಿ ॥

ಗಿರಿರಾಜ : ಏನಿದು! ನನ್ನ ಮಗಳಿಗೆ ತಕ್ಕ ವರನಿಲ್ಲನೆ ಈ ಲೋಕದಲ್ಲಿ? ಏನೆಂದು ಹೇಳಲಿ ನಾನವಳಿಗೆ!

### ರಾಗ – ಭೂಪ

ಸುತ್ತಿ ಬಂದೆನ ಜಗದಾಂಬೆ ನಿನ್ನ
ಜಗದೀಶನಿಗಾಗಿ ಜಗವೆಲ್ಲವನ್ನೆ....ಸುತ್ತಿಬಂದೆನ....
ವರವತ್ಸೆ, ಎನ್ನ ಸುರಶಕ್ತಿ ಜನ್ಯೆ,
ಪರಶಕ್ತನನ್ನು ಅರಸುತ್ತಲೊಮ್ಮೆ....ಸುತ್ತಿಬಂದೆನ....
ಅವನಿಹನು ಎಂದು ಇಹಪರವ ಕಂಡು
ಪಾತಾಳಗೊಂಡು ಪರಿಪರಿಯಲೊಮ್ಮೆ....ಸುತ್ತಿಬಂದೆನ..

ಗಿರಿಜಾ : ತಾತ, ಅದಕ್ಕಾಗಿ ನೀವೇನೂ ಚಿಂತಿಸಬೇಡಿರಿ. ಇದೊ ನಾನು ಹೊರಟೆ.

### ರಾಗ – ಭೈರವ್

ಹೋಗಿ ಬರುವೆನ್ನೈ ತಾತ, ಹೋಗಿ ಬರುವೆನ್ನೈ
ನಾರಿತನವ ಅರಿತು ನಡೆವ ಧೀರವರನ
ಅರಸಿಕೊಂಡು....ಹೋಗಿ ಬರುವೆನ್ನೈ
ಶಕ್ತಿಸಂಧ ಮುಕ್ತನೆಂಬ ವ್ಯಕ್ತ ವರನ
ಅರಸಿಕೊಂಡು....ಹೋಗಿ ಬರುವೆನ್ನೈ
ಕೀರ್ತಿ ಶಿಖರವೇರಿ ಮೆರೆವ ಮೂರ್ತಿಮಂತ
ನರಸಿಕೊಂಡು ...ಹೋಗಿ ಬರುವೆನ್ನೈ
ಹರುಷದೊಂದು ಹದವ ಕಂಡು ಹರನ ಇರವ

---

* ಶ್ರೀಮತಿ ಮಂದಾಕಿನೀ ದೇವಿಯವರು "ಮಂಡೋದರಿ" ಎಂಬ ಕಾವ್ಯನಾಮದಿಂದ ಕನ್ನಡಿಗರಿಗೆ ಪರಿಚಿತರಾಗಿದ್ದಾರೆ. ೧೯೪೬ ರಲ್ಲಿ ಜಮಖಂಡಿಯ ಬಳಿಯಿರುವ ಹುಲ್ಯಾಳದಲ್ಲಿ ಕಸ್ತೂರಿಬಾ ಕೇಂದ್ರದಲ್ಲಿ ಗ್ರಾಮಸೇವಕಿಯಾಗಿ ಕೆಲಸ ಮಾಡಿ, ಮರಾಠಿ ಮತ್ತು ಕನ್ನಡ ಸಾಹಿತ್ಯಗಳಲ್ಲಿ ಪರಿಶ್ರಮ ಪಡೆದು, ಕವಿತೆ, ಸಣ್ಣ ಕಥೆ, ಪ್ರಬಂಧ ರಚನೆಯಲ್ಲಿ ತೊಡಗಿದ್ದಾರೆ.

ನರಸಿಕೊಂಡು....ಹೋಗಿ ಬರುವೆನ್ನೈ
(ನೇಪಥ್ಯದಲ್ಲಿ)

ರಾಗ – ಭೈರವ್

ಹೊರ ಹೊರಟಳಾಶಕ್ತಿ ಪೌರುಷವನರಸುತ್ತ
ಅತ್ತಿತ್ತ ಅಲೆಯುತ್ತ
ಮೇಲ್ಮೇಲೆ ಏರುತ್ತ
ಮನಮೀಟೆ ನೋಡುತ್ತ
ಮಾದೇವನರಸುತ್ತ....ಹೊರ ಹೊರಟಳಾ
ಗಿರಿ ಶಿಖರದಿಂ ಶಿಖರ
ಶೋಧಿಸುತ ಶೋಧಿಸುತ
ಪರಶಿವನ ಪರಮಶಕ್ತಿ–
ಯಲಿ ತಾ ಕಾಣುತ್ತ....ಹೊರ ಹೊರಟಳಾ
(ರತಿದೇವಿ–ಮನ್ಮಥರ ಆಗಮನ)

ಮನ್ಮಥ: ದೇವಿ, ಇದೀಗ ಸಮಯ. . . .ತ್ವರೆ ಮಾಡು, ಅದೋ! ಅಲ್ಲಿರುವಳು ಧವಳವಸ್ತ್ರದ ದಿವ್ಯ ತಪಸ್ವಿನಿ! ನೀನು ಗಿರಿಬಾಲೆಯನ್ನು ಸೆರೆ ಹಿಡಿಯುವೆ ಅಷ್ಟೆ? ನಾನಿನ್ನು ಮಹಾದೇವನತ್ತ ಸಾಗುವೆ. . . .

ರತಿದೇವಿ: ಆಗಲಿ ದೇವ. . . .ತ್ವರೆ ಮಾಡು. (ಗಿರಿಜೆಯ ಬಳಿ ಬಂದು)

ರಾಗ – ಅಹಿರ್ ಭೈರವ್

ಕಾದಿರುವುದೇಕಿಂತು ಕಾತರದಿ ಕಾಮಿನಿ?
ಆದಿಶಕ್ತನು ಎನ್ನ ವೈರಿ ಮನವೊಲಿಸೆ ನೀ. . . .
ಆಕಾಂಕ್ಷೆ ಏನೆಂದು ಅರಿದೊಡನೆ ಒರೆಯುವೆನು
ನಾಮಾಂಕಿತವು ಎನ್ನ ನಲುಮೆಯಲಿ ರಮಣಿ
(ರತಿದೇವಿ ಪಾರ್ವತಿಯನು ದಿಟ್ಟಿಸುವಳು. . . .ಮೌನ)
ಮಂಗಳವ ಬಯಸಿ ಬಂದವಳಾರು ನಾನೆಂದು
ಕಂಗಳನು ತೆರೆದೊಮ್ಮೆ ನೋಡೆನ್ನ ತರುಣಿ. . . .
(ಆದರೂ ಮೌನ!)
ಮತಿತಾರ್ಥ ಹಿತವಾದುದೆಂದು ನಂಬಲೆ ನಾನು?
(ಪಾರ್ವತಿಯ ಮೌನ)
ಮನ್ಮಥನ ಮಡದಿ ನಾ ನಿಶ್ಚಿತದಿ ರಾಣಿ
ಸಾಂಬನನ್ನರಸುತ್ತ ಬಂದಿರುವ ಸಾಂಬವಿ
ಕಾಂಬೆ ಕೈಲಾಸಕೇರಲು ಕಾಮದೇಣಿ. . . .
(ಯಾವ ಪರಿಣಾಮವೂ ಆಗದಿರುವ ಪಾರ್ವತಿ ಮೌನ)
ಶಂಕರನ ಅಂಕುಶವ ಕುಂಠಿತಗೊಳಿಸಲೇನು?
ಅಂಕುರಿಸಿದಾಸೆಯೊರೆ ಶಂಕಿಸದೆ ಶಿವೆ ನೀ. . . .

(ಉಮೆಯನ್ನು ಉನ್ಮತ್ತಗೊಳಿಸುವ ರತಿಯ ಯತ್ನ ವ್ಯರ್ಥವಾಯಿತು. ಧ್ಯಾನಮಗ್ನಳಾದ ಪಾರ್ವತಿಯ ಚಿತ್ತ ಎಳ್ಳಷ್ಟೂ ಚಲಿಸದಿರುವುದನ್ನು ಕಂಡ ರತಿದೇವಿ ಕಿಂಚಿತವೂ ಹತಾಶಳಾಗದೆ, ತನ್ನ ಮಂತ್ರಶಕ್ತಿಯಿಂದ ಆವಳ ಮೌನ ಮುರಿಯುವಳು–ಪಾರ್ವತಿ ಪ್ರಾರ್ಥನೆಗೆ ತೊಡಗುವಳು).

ರಾಗ – ಶಂಕರ

ಪಾರ್ವತಿ: ಶಂಭೊ ಶಂಕರಾ, ಚಂದ್ರಬಿಂಬಾಧರ ಹರ
ಬಂದೆ–ಮೆಚ್ಚಿ ಬಂದೆ, ಭಕ್ತಿಯಿಂದೇ ಪ್ರಿಯಕರ
ನಿನ್ನ ತಪೋಬಲ ಕಂಡು ಬಂದೆ ತಪಃ ಸಿದ್ಧಿಗಾಗಿ ಎನ್ನ
ನಿನ್ನ ಪೌರುಷದ ಪರಿಮಳ ಅದರಿತು ಪ್ರಕೃತಿಭಾವಕೆನ್ನ
ಓ! ಶಿವ ಪ್ರಕೃತಿಭಾವಕೆನ್ನ
ಮೂರು ಲೋಕದ ಸತ್ಯ ಸಂಸ್ಕೃತಿಯ ಶಕ್ತಿರೂಪ ಎಂಬೆ
ಮೂರು ಲೋಕದ ಸುಖ–ಶಾಂತಿಗಾಗಿ ಸತಿಶಕ್ತಿ ನೀಡ
ಬಂದೆ ಎನ್ನಯ ಶಕ್ತಿ ನೀಡ ಬಂದೆ. . . .,
(ಆಸನದಿಂದೆದ್ದು ಹೊರಡುವಳು. ಶಿಖರದತ್ತ ಸಾಗುವಳು.)

ರಾಗ – ಆಸಾವರಿ

ಪಾರ್ವತಿ: ಓ ದೇವ ದೇವ, ಪರಶಕ್ತಿದೇವ,
ನಿನ್ನುಳಿದು ಅನ್ಯರೆನಗಿಲ್ಲ ಸಮ, ದೇವ,
ಒಲಿಸು ಓರಗೆಯವನ ಒಲವರಿತು ನಾ ಬಂದೆ
ನೀ ತುಂಬಿ ಎನ್ನೊಳಗೆ
ನಾ ತುಂಬಿ ನಿನ್ನೊಳಗೆ
ತುಂಬಿ ತುಳುಕಲಿ ಜೀವ ಜೀವ ಮಾದೇವ
(ಪಾರ್ವತಿಯ ಪ್ರಾರ್ಥನೆ ಫಲಿಸುತ್ತದೆ. ಶಿವನ ತಪ ಭಂಗವಾಗಿ ಕಣ್ದೆರೆದು ನೋಡುವನು–ದಿವ್ಯ ದೃಷ್ಟಿ ಬೀರಿದಾಗ)

ಶಿವ: ಓ! ಅದಾವುದೊ ಶಕ್ತಿ ನನ್ನನ್ನು ಸೆಳೆಯುತ್ತಿದೆಯಲ್ಲ!

ರಾಗ – ಕೇದಾರ್

ಆರಿಹರು ಆರಲ್ಲಿ ಆರು ಈ ಗಿರಿಯಲ್ಲಿ
ಆರು ಅನವರತ ಅನುಭಾವದಿಂದೊರಲುವರು?
ಜ್ಞಾನದೀವಿಗೆ ಹಿಡಿದು ಮೌನ ಮಂಗಳ ಮನದಿ
ರಾಜಿಸುವ ದಿವ್ಯ ಶಕ್ತಿಯದೆಂತು ಇಹುದೊ!. . . .
ಕಾಣರಲ್ಲ! ಬರಿಯ ಕಾಮನೇ ಕಾಣುವನು
ಇರಲಿರಲಿ–ಇರಲಿರಲಿ ಭಸ್ಮಗೈಯುವೆನವನ. . . .

ಮನ್ಮಥ: ಅಯ್ಯೊ. . . .! ಉರಿ! ಮೈಯೆಲ್ಲಾ ಉರಿ. . . .!
ಮಹಾದೇವ, ಕ್ಷಮಿಸು. . . .ನನ್ನನ್ನು ಕ್ಷಮಿಸು ದೇವ!
ಅಯ್ಯೊ. . . .ಧಗೆ. . .! ನಾನಿನ್ನು ಸಹಿಸಲಾರೆ. . . .
ಇದೊ ನಾನು ಹೊರಟೆ. . . .ನಾನಿನ್ನು ಹೊರಟು
ಹೋಗುತ್ತೇನೆ ಮಹಾದೇವ. . . .!

ರಾಗ – ಜಾನಪದ ಥಾಟ

ಮರ್ತ್ಯದಲಿ ಮತ್ತೆ ಜನಿಸುವೆ
ಹರಸು ಹೋಗುವೆನೀಗಲೇ–ಶಿವ
ಹರಸು ಹೋಗುವೆನೀಗಲೇ
ಸತ್ಯ–ಶಿವ–ಸೌಂದರ್ಯವಿರದೆಡೆ
ನರ್ತಿಸುವೆ ನಾನಲ್ಲಿಯೇ–ಶಿವ
ನರ್ತಿಸುವೆ ನಾನಲ್ಲಿಯೇ
ವರ್ಷ ವರ್ಷವು ಭಸ್ಮವಾಗುತ
ಮತ್ತೆ ಜನಿಸುತ ಜೈಸುವೆ–ಶಿವ
ಮತ್ತೆ ಜನಿಸುತ ಜೈಸುವೆ
ಹರ್ಷದಿಂ ಹಾರೈಸಿ ಕಳುಹಿಸು
ಮರ್ತ್ಯಲೋಕದ ಮಹಿಮೆಗೆ–ಎನ್ನ
ಮರ್ತ್ಯಲೋಕದ ಮಹಿಮೆಗೆ

ಮಹಾದೇವ: ತಥಾಸ್ತು

ಮನ್ಮಥ: ಧನ್ಯ. . . .! ನಾನೇ ಧನ್ಯ ಮಹಾದೇವ. . . .! (ಪಾರ್ವತಿಯತ್ತ ತಿರುಗಿ) ತಾಯಿ, ನಿನ್ನೊಲವು ಎಂದೆಂದಿಗೂ ನನ್ನ ಮೇಲಿರಲಿ. . . .ನಿಮ್ಮಿಬ್ಬರ ಮಿಲನ ಮಂಗಳವಾಗಲಿ. . . .ಹರಸು ದೇವಿ, ನಾನಿನ್ನು ಹೊರಟೆ (ಎಂದು ಬಾಗಿ ನಮಸ್ಕರಿಸುವನು)

ಪಾರ್ವತಿ: ಮೊದಲು ನಿನ್ನಾಟ ನಡೆದರೂ ನಂತರದ ಮಿಲನ ಮಂಗಳವಾಗಲಿ. . . .ಮನ್ಮಥ. . . . .ಹೋಗು ನಿನಗೆ ಜಯವಾಗಲಿ. . . .

(ಮನ್ಮಥನ ನಿರ್ಗಮನ. ಬಳಿಕ ಪಾರ್ವತಿ ಶಿವನತ್ತ ತಿರುಗುವಳು. ಆತನ ಸಂತಸದ ನೋಟ ಕಂಡು ಹರ್ಷಗೊಳ್ಳುವಳು. ಮಹಾದೇವ ಮಹಾದೇವಿಯ ಕೈ ಹಿಡಿದು ತನ್ನ ಆಸನದತ್ತ ಕರೆದೊಯ್ಯುವನು. ಆಗಲೇ ನೇಪಥ್ಯದಲ್ಲಿ ಹಾಡು)

ರಾಗ – ಬಾಗೇಶ್ರೀ

ಕೈವಲ್ಯಧಾಮದಧಿದೇವಿ ಶೈಲಜಳನ್ನು
ಕೈಲಾಸನಾಥ ಕರೆದೊಯ್ದು ಪಚರಿಸಲು . . . .
ಬಯಲಾದ ಬಾಂದಳದ ಕೆಳಗೆ ಗಿರಿ ಬಯಲಲ್ಲ
ಶೈಲಾಸನದಿ ಹಿಮದ ಹಿರಿಯ ಹಿಗ್ಗಿನಲಿ. . . .
ಕೈಲಾಸ ರಾಣಿಯಳ ಕಂಗೊಳಿಸುತಿರೆ ಕಂಡು
ಕೈಲಾಸನಾಥ ನಿತ್ಯಾನಂದನೆಂದು. . . .

ಪಾರ್ವತಿ: (ಆನಂದದಿಂದ) ಮಹಾದೇವ. . . .!

ಪರಶಿವ: ಮಹಾದೇವಿ. . . .!

ಪಾರ್ವತಿ: ನಾನು ಧನ್ಯೆ. . . .!

ಪರಶಿವ: ನಾನು ಧನ್ಯ. . . .! ಇಂದಿನಿಂದ ಈ ಶಿಖರಕ್ಕೆ ಏನೆಂದು ಹೆಸರು, ಹೇಳು?. . . .

ಪಾರ್ವತಿ: 'ಗೌರೀ ಶಂಕರ' ಎಂದು. . . .! (ಇಬ್ಬರೂ ನಕ್ಕು ನಲಿಯುವರು. . . .ನೇಪಥ್ಯದಲ್ಲಿ ಹಾಡು)

ರಾಗ – ದರಬಾರಿ ಕಾನಡಾ

ಮರಳಿದಳು ಮುದದಿಂದ
ಗಿರಿಬಾಲೆ ಹರನಿಂದ
ಕಳಕಳಿಯ ಹಾರೈಕೆಯಿಂದ ಬೀಳ್ಕೊಂಡು
ಗಿರಿಶಿಖರದ ತನ್ನ ಹಿರಿ ಜೀವನದ ಕವನ
ಅರುಹಲಾನಂದದಿಂ ಎಲ್ಲರನು ಕಂಡು. . . .
(ತವರಿಗೆ ಬಂದ ಗಿರಿಸುತೆಯನ್ನು ಕಂಡ ಗಿರಿರಾಣಿ ಮಗಳನ್ನು ಅಪ್ಪಿಕೊಂಡು ವಿಚಾರಿಸುವಳು)

ಗಿರಿರಾಣಿ: ನನ್ನ ಮುದ್ದು ಮಗಳೆ, ಏನಿದು ಮೌನ. . . .! ಆನಂದ ತುಂಬಿದ ನಿನ್ನ ಕಂಗಳು ಏನೇನೋ ಹೇಳುತ್ತಿವೆಯಲ್ಲಾ. . . .!

ರಾಗ – ಜಾನಪದ ಥಾಟ

ಹೇಳ ಹೇಳವ್ವಾ ನಿನ್ನನಿಯ ಎಂಥ ಅಂದನ?
ಅವ ಎಂಥ ಚಂದನ?
ಭುವಿಯ ಕಂಡ ಭುವನೇಶ ತಾ ಹೌದ ಹೌದೇನ?
ಅಂಬುಜಾಕ್ಷಿ ಅಂದದಿಂದ ತುಂಬು ಕುಂಭ ಜಂಭದಿಂದ
ನಿಂತಿಯೇತಕೆ? ಅವ್ವಾ ನಿಂತಿಯೇತಕೆ?
ಶಂಭುಲಿಂಗನೆಂಬಾತ ಅವ ಹೌದ ಹೌದೇನ?
ಬೇರ ಹೊತ್ತ ನಾಗರಥಾಂಗ ನೀರೆ ನೀನು ಗರಬಡಿಥಾಂಗ
ನಿಂತೀಯೇತಕ? ಅವ್ವಾ ನಿಂತಿಯೇತಕ?
ಮಾರಹಾರಿ ಮಹಾದೇವತಾ ಹೌದ ಹೌದೇನ?. . .
ಭೂತಪ್ರೇತ ಬಳಗ ಕೂಡಿ ನಿತ್ಯ ಮಸಣದತ್ತ ಓಡಿ
ಕುಣಿವನಲ್ಲಿನ? ಅವ ಕುಣಿವನಲ್ಲಿನ?
ಸತ್ಯಾನಂದ ಗಂಗಾಧರ ತಾ ಹೌದ ಹೌದೇನ?. . .
ದಿಟ್ಟ ಕಾಮನತ್ತ ನೋಡಿ ಸುಟ್ಟ ಬೂದಿ ಮೈಗೆ ತೀಡಿದ

ಯೋಗಾನಂದನ–ಅವ ಯೋಗಾನಂದನ
ಬೆಟ್ಟದೊಡೆಯ ಭಕ್ತಿಪ್ರಿಯತಾ ಹೌದ ಹಾದೇನ?. . . .
ಭಾರವಾದ ಮೌನ ಕಂಡು ಮೂರ ಹಾದಿ ಮಣ್ಣ ತಂದು
ಇಳಿಸಿ ಒಗೆವೆನ–ಅವ್ವ ಇಳಿಸಿ ಒಗೆವೆನ
ಚೋರ ಚಿತ್ತನಾರನವ್ವ ಪೇಳ ಬೇಗನ. . . .
(ಎಂದು ಮಗಳ ದೃಷ್ಟಿ ತೆಗೆಯುವಳು ಗಿರಿರಾಣಿ)

ಗಿರಿರಾಣಿ: ಮಾತಾಡು ಮಗಳೆ ಇದೆಂಥ ಮೌನ. . . .!

(ಆಗ ಮಂತ್ರಮುಗ್ಧೆಯಾದ ಮಹಾದೇವಿ ತಾಯಿಯ ತೆಕ್ಕೆಯಿಂದ ಎದ್ದು ಆನಂದದಿಂದ ಹೇಳುವಳು)

ಮಹಾದೇವಿ:

ರಾಗ – ಜಾನಪದ ಧಾಟಿ

ಅವ್ವಾ ಎನಗೆ ದೆವ್ವ ಬಡಿದು ಹವ್ವ ಹಾರಿತ
ಭವ್ಯ ಬಯಲದೆವ್ವ ಎನಗೆ ಸುವ್ವ ತೋರಿತ
ತನ್ನ ಸುವ್ವ ತೋರಿತ. . . .
ಗಂಗಾ ಹೊತ್ತ ಭಾಲ ರುಂಡಮಾಲಧರಿಸಿತ
ಮಂದಹಾಸದಿಂದ ಎನ್ನ ದಂಗಗೊಳಿಸಿತ
ಭಂಡ ಭಸ್ಮಗೊಂಡ ಚಿಕ್ಕಮಂಡಲೊಡ್ಡಿತ
ದಿವ್ಯಮಂಡಲೊಡ್ಡಿತ. . . .
ಚಂದ್ರಚೂಡ ತನ್ನ ರುದ್ರಗಣ್ಣ ವಹಿಸಿತ
ಇಂದ್ರಜಾಲ ತಂದ ಕಾಮನಂದ ದಹಿಸಿತ
ಭದ್ರಲಿಂಗ ಭೂತಕಂಡು ಛಿದ್ರಗೊಂಡಿತ
ಜೀವ ಛಿದ್ರಗೊಂಡಿತ. . . .
ಕಂಡೂ ಕಾಣದಂತ ಎನ್ನ ಹಿಂದ ಬಂದಿತ
ನಂದೀಯೊಂದಿಗೆನ್ನ ಮುಂದ ಮುಂದೈ ತಂದಿತ
ಶಂಭುಲಿಂಗ ತಾನೆಂದು ಎನ್ನಂದಣೇರಿತ
ಚಿತ್ತದಂದಣೇರಿತ. . . .
ಒಪ್ಪಿಬಂದೆನವ್ವ ಏನ್ನ ಸರ್ಪಧರನ
ಉಟ್ಟ ಚರ್ಮದುಡಿಗೆ ಕಂಡು ಹರ್ಷಗೊಂಡೆನ
ಗಟ್ಟಿಮಾಡಿಕೊಂಡೆನ ವರ ಬೆಟ್ಟದೇವನ
ಬೆಳ್ಳಿಯ ಬೆಟ್ಟದೇವನ. . . .
ಮುಕ್ತ ಮಾಯೆಯುವ್ವ ಎನ್ನ ಚಿತ್ತದೇವಗ
ಶಕ್ತಸಾಂಬನವ್ವ ಶೋಕತಪ್ತ ಜೀವಕ
ಸುಟ್ಟ ಸುಡುಗಾಡಕ್ಕ ಒಲಿವ ನಿತ್ಯಾನಂದಕ
ತನ್ನ ನಿತ್ಯಾನಂದಕ. . . .
ಉಂಡ ನಂಜು ಲೋಕದ ಪ್ರಚಂಡ ಗಂಡನ
ಕಂಡ ಭಕ್ತನತ್ತ ಕುಣಿವ ತಾಂಡವಾಗನ
ಚಂಡಾಸುರರ ಕೊಂಡು ನಲಿವನೆಂದು ಕೊಂಡೆನ
ಶಿವ ತಾನೆಂದು ಕೊಂಡೆನ. . . .

(ಅಷ್ಟು ಹೊತ್ತಿಗೆ ಪಾರ್ವತಿಯ ಸಖಿಯರು ಬಂದು ಒಬ್ಬೊಬ್ಬರಾಗಿ ಕೇಳುವರು)

ರಾಗ – ಜಾನಪದ ಧಾಟಿ

ಮೊದಲನೇ ಸಖಿ: ಎಂತಿರುವನೆಂತಿರುವನೆಂತಿರುವ ಪೇಳ
ನಿನ್ನಂತರದ ಮಾಂತರಿಕನೆಂತಿರುವ ಪೇಳ. . . .

ಎರಡನೆಯವಳು: ಎಂತಿರುವನೆಂತಿರುವನೆಂತಿರುವ ಪೇಳ
ನಿನ್ನಂತರದ ಮಾಂತರಿಕನೆಂತಿರುವ ಪೇಳ. . . .

ಮೂರನೆಯವಳು: ಎಂತಿರುವನೆಂತಿರುವನೆಂತಿರುವ ಪೇಳ
ನಿನ್ನಂತರದ ಮಾಂತರಿಕನೆಂತಿರುವ ಪೇಳ. . . .

ಮಹಾದೇವಿ:

ರಾಗ – ಧೃತಿಗತಿ

ಅಂಜು ಅಳುಕಿಲ್ಲ; ನಂಜು ನೋವಿಲ್ಲ
ಸಂಗ–ನಿಸ್ಸಂಗ ದೇವಗ
ಹೆಣ್ಣು ಗಂಡೆಂಬ ಭೇದ ಮೊದಲಿಲ್ಲ
ಯೋಗಪ್ರಿಯನೆನ್ನ ದೇವಗ
ರೋಗ ರುಜೆನಿಲ್ಲ, ಮೋಹ ಮದವಿಲ್ಲ
ಭೋಗ ನೀಗಿರುವ ದೇವಗ
ಹಗಲು–ಇರುಳಿಲ್ಲ; ಮುಗಿಲು ಧರೆಯಿಲ್ಲ
ನಲಿವ ನಿತ್ಯಾನಂದಗ
ಕಿಚ್ಚು ಕೊರಗಿಲ್ಲ; ನಚ್ಚು ನವಿರಿಲ್ಲ
ಭಕ್ತಿಪ್ರಿಯನೆನ್ನ ದೇವಗ
ಹಚ್ಚ ಹಿಮಗಿರಿಯ ಹುಚ್ಚನಿವನೆನ್ನ
ಸಚ್ಚಿದಾನಂದ ದೇವಗ

ಮೊದಲನೆ ಸಖಿ: ಹೌದವ್ವಾ ಹೌದು. ನೀನೆ ಭಾಗ್ಯವತಿ ನೋಡವ್ವಾ. . . .!

ಎರಡನೇಯವಳು: ಶಂಕರನ ಸಾನಿಧ್ಯಗೊಂಡ ನೀನೇ ಧನ್ಯಳು!

ಮೂರನೇಯವಳು: ಅಷ್ಟೇ ಅಲ್ಲ. . . .ಮನೆ ಮನೆಯ ಮಂಗಳಗೌರಿ ನೀನಾಗುವೆ ನನ್ನ ಗೆಳತಿ. . . .!

(ಸಖಿಯರೆಲ್ಲರೂ ಹಾಡುವರು)

ಸಖಿಯರು:

ರಾಗ – ಮಿಶ್ರ ಖಮಾಜ್

ಮಂಗಳವೆನ್ನಿರೇ–ಮಂಗಳವೆನ್ನಿರೆ
ಆನಂದತುಂದಿಲಳ ತುಂಬು ಹೃದಯದಿಂದ

# ವಸಂತ ಸಾಹಿತ್ಯೋತ್ಸವದ ಕವಿಗೋಷ್ಠಿಯಲ್ಲಿ ಓದಿದ ಕವನಗಳು

## ಅರ್ಚನ

ಶ್ರೀ ಅರ್ಚಿಕ ವೆಂಕಟೇಶ

ಎಲ್ಲಿ ಎಲ್ಲಿ ನನ್ನ ಮನವೊ
ಅಲ್ಲಿ ನಿನ್ನ ರೂಪವು!
ಎಲ್ಲಿ ಎಲ್ಲಿ ನನ್ನ ಶಿರವೊ
ಅಲ್ಲಿ ನಿನ್ನ ಪಾದವು!

ಎಲ್ಲಿ ಎಲ್ಲಿ ನನ್ನ ಕಿವಿಯೋ
ಅಲ್ಲಿ ನಿನ್ನ ಗಾಯನ
ಎಲ್ಲಿ ಎಲ್ಲಿ ನನ್ನ ನಯನ
ಅಲ್ಲಿ ನಿನ್ನ ದರ್ಶನ!

ಎಲ್ಲಿ ಎಲ್ಲಿ ನಿತ್ಯ ಚೆಲುವೋ
ಅಲ್ಲಿ ನಿನ್ನ ನರ್ತನ
ಎಲ್ಲಿ ಎಲ್ಲಿ ರಸ ವರ್ಷವೋ
ಅಲ್ಲಿ ನಿನ್ನ ಸ್ಪರ್ಶನ

ಎಲ್ಲಿ ಎಲ್ಲಿ ಮಂತ್ರ ಘೋಷ
ಅಲ್ಲಿ ನಿನ್ನ ವರ್ಣನ;

ಎಲ್ಲಿ ಎಲ್ಲಿ ಪರಮ ಹರ್ಷ
ಅಲ್ಲಿ ರಮ್ಯ ರಂಜನ!

ಎಲ್ಲಿ ಎಲ್ಲಿ ಅಮೃತ ಪಾಕ
ಅಲ್ಲಿ ನೀನೆ ಕಾರಣ
ಎಲ್ಲಿ ಎಲ್ಲಿ ನಿತ್ಯ ನಾಕ
ಅಲ್ಲಿ ನಿನ್ನ ಪ್ರೇರಣ!

ಎಲ್ಲಿ ಎಲ್ಲಿ ಸಂತವಾಣಿ
ಅಲ್ಲಿ ನೀನೆ ಇಹೆ ಕಣಾ!
ಎಲ್ಲಿ ಎಲ್ಲಿ ಶುಭದ ಶ್ರೇಣಿ
ಅಲ್ಲಿ ನೀನೆ ಇಹೆ ಕಣಾ

ಎಲ್ಲಿ ಎಲ್ಲಿ ಕವಿಯ ಕವನ
ಅಲ್ಲಿ ನಿನ್ನ ಪೂಜನ;
ಎಲ್ಲಿ ಎಲ್ಲಿ ಹವನ ಹೋಮ
ಅಲ್ಲಿ ನಿನ್ನ ಅರ್ಚನ

---

ಮಂಗಳವೆನ್ನಿರೆ....
ಶೃಂಗಶ್ರೇಣಿಯ ಗಿರಿ ಕಂದರದಿಂದ ಏರಿ
ಉತ್ತುಂಗದಲಿ ತನ್ನ ನಿತ್ಯಾನಂದನು ಎಂಬ
ಉದ್ದಂಡನುರಿಗಣ್ಣನುರಿಗಣ್ಣ ಸಂತೈಸಿದವಳ
ಮಂಗಳವೆನ್ನಿರೆss ಮಂಗಳವೆನ್ನಿರೆs
ಶುಭ್ರ ಸೀರೆಯನುಟ್ಟು ಶುಭ್ರ ಭಾವದಿ ನಿಂದು
ಉಗ್ರ ತಪಸ್ಸಿನಿಂದ ರುದ್ರದೇವನ ಕಂಡು
ಭದ್ರ ಪ್ರೇಮಾಲಿಂಗನಕ್ಕೊಳತಂದ ರುದ್ರಾಣಿಯ
ಮಂಗಳವೆನ್ನಿರೇss ಮಂಗಳವೆನ್ನಿರೇs
ಅಂಗನೆಯರ ಮನೆ ಮಂಗಳ ಗೌರಿ ತಾನು
ತಿಂಗಳ ತುಂಬ ಬೆಳುದಿಂಗಳದಂತೆ ತೆಳು
ಬಾಂದಳ ಸಿರಿಯೇರಿ ಬಂದ ಭವಾನಿಗಿಂದು
ಮಂಗಳವೆನ್ನಿರೆss ಮಂಗಳವೆನ್ನಿರೆs....
(ಕೈಲಾಸದಿಂದ ಕುಸುಮ ವೃಷ್ಟಿಯಾಗುವುದು.
ವೈಕುಂಠದ ವಿಧಾತರೆಲ್ಲರೂ ಆನಂದ ವಿಭೋರರಾಗಿ
ಜಯಭೇರಿ ಬಾರಿಸುತ್ತ ಹೂಮಳೆಗರೆಯುವರು!)

---

## ಪ್ರಕೃತಿ ಪೂಜೆ

ಶ್ರೀ ನಾರಾಯಣ ಸಂಗಮ

ರಕ್ತಹೀನ ಧರೆ ಬರೆತು ಬೆಳ್ಳಗಿರೆ
ಮಾಗಿ ಮುಗಿದ ಮೇಗೆ
ಮಲಯ ಗಂಧ ಬರೆ ಮತ್ತೆ ವರ್ಣಭರ
ಹೇಗೆ ಬಂತೊ ಹೀಗೆ ॥ ೧ ॥

ಹೋಳಿ ಹುಣ್ಣಿಮೆಯ ಗಾಳಿಯೇರಿ ಸಾ-
ಗಿರುವ ಬಣ್ಣದೋಳಿ
ದಾಳಿ ಇಡಲು ಬೀಳ್ನೆಲಕೆ ಹೊಸ ಹೊಗರು
ಮೆರಗು ತಿರುಗಿ ತಾಳಿ ॥ ೨ ॥

ಮೋದ ನಿಖಿಲಕೇ ಪ್ರಕೃತಿ ಪುರುಷರೀ
ಆದಿ ಲೀಲೆಯಲ್ಲಿ

ರಾಧೆ ಕೃಷ್ಣ ಗೋಪಾದಿ ಗೋಪಿಯರ
ರಾಗ ರಸವೆ ಚೆಲ್ಲಿ || ೩ ||

ಭುವನ ಭವನದಲಿ ಧೂಮ ಧಾಮ, ಧಾ-
ಳಾಽ ಧೂಳಿ, ಹರ್ಷ !
ಜವನ ಹನನವನೆ ಹತಿಸಿ ನಡೆದಿಹುದು
ಜನನ ವರ್ಷ ವರ್ಷ
ರಕ್ತಹೀನ ಧರೆ ಬರೆತು ಬೆಳ್ಳಗಿರೆ . . . . || ೪ ||

ವೃಕ್ಷ ವಲ್ಲರಿಯ ಪರ್ಣ ವರ್ಣಗಳ
ಮೃದುಲ ಚಿಕ್ಕಣಕ್ಕೆ
ಸೂಕ್ಷ್ಮ ಬಿಂಬ ಛವಿ, ಪುಷ್ಯರಾಗೆ ಹೀ
ರಕದ ಮಿಶ್ರಣಕ್ಕೆ || ೫ ||

ಮಾಮರಕ್ಕೆ ಮುದವುಕ್ಕೆ ತಳಿತ ತೆನೆ
ಹೂವಿನುಕ್ಕೆವಕ್ಕೆ
ಬೆಳ್ಪು ನಕ್ಕುನಸು, ಹಳದಿ ಹೊಕ್ಕನನೆ-
ಗಚ್ಚ ಕೆಚ್ಚ ಟಿಕ್ಕೆ
ರಕ್ತ ಹೀನ ಧರೆ. . . . || ೬ ||

೨

ಬರಡು ಮೋಟು ಕೊನರಿತ್ತು ದಿಕ್ತಟಕೆ
ಭೃಂಗ ಭೇರಿ ಮೊಳಗೆ
ಮರಡು ದಿಬ್ಬ ಉಬ್ಬುಬ್ಬಿ ಹರಡಿರುವ
ಚೆಲುವು ಮೇಲೆ ಕೆಳಗೆ || ೭ ||

ನೆಲವೆ ಎದ್ದು ಮರ ರೆಂಬೆ-ಕೊಂಬೆ ಜೀ-
ಕಳಿಯ ಬುಗ್ಗೆ ಮುಗ್ಗೆ
ನಲಿವೆ ಹೊಮ್ಮಿಹುದು ಚಿಮ್ಮಿಸುತ್ತ ಓ-
ಕಳಿಯ ಲಗ್ಗೆ ನುಗ್ಗೆ
ರಕ್ತಹೀನ ಧರೆ ಬರೆತು ಬೆಳ್ಳಗಿರೆ . . . . || ೮ ||
ಭೂಮಿ ಇಂತು ದಳವೇರೆ ಬಂತು ಹೂ-

ಹಣ್ಣೆ ರಸದ ಕೋಡಿ
ವ್ಯೋಮ ಧಾಮ ಶೃಂಗಾರವಾಂತು ಖಗ-
ಗಳ್ಗೆ ಒಸಗೆ ಮೂಡಿ || ೯ ||

೩

ಸೃಷ್ಟಿ ವೈಭವವ ಕಂಡು ದೃಪ್ತ ಕಾ-
ಮನುದ್ದೀಪ್ತನಾದ
ಇಷ್ಟ ಮಿಥುನಗಳ ಅಂಗ ಅಂಗದಲಿ
ರಮಿಸೆ ಗುಪ್ತನಾದ || ೧೦ ||

ಸಂಗತೇಲಿ ವೈಮುರಸೆ ಮನ್ಮಥನು
ಭೋಗ ಮುಗ್ಧನಾದ
ಅಂಗದಾಹದಾಲಿಂಗನಕ್ಕೆ ಅತಿ-
ರತಿಗೆ ಗದ್ಧನಾದ || ೧೧ ||
ಶಿವನ ಕಣ್ಣುರಿಗೆ ಮಾರ, ಬಿಸಿಲ ಇ-

ಬ್ಬನಿಯೊಲಿಂಗಿ ಹೋದ
ಅವನ ರತಿಗೆ ಬರೆ ಭಂಗ, ಶಿವ ಸತಿಯ
ದಯಕನಂಗನಾದ
ರಕ್ತಹೀನ ಧರೆ ಬರೆತು ಬೆಳ್ಳಗಿರೆ . . . || ೧೨ ||

೪

ಪೃಥ್ವಿ ಪ್ರೇಯಸಿಯು ಪ್ರಾಣವಲ್ಲಭಗೆ
ಪಾದ ಪದ್ಮ ಚೆಲ್ಲೆ
ಹಾದಿಗುಂಟ ಹಾಸಿಹಳು ಹಚ್ಚ ಹಸೆ
ಕೆಚ್ಚಿ ರತ್ನದಲ್ಲೆ ! || ೧೩ ||

ಒಡೆಯ ನಡೆದು ಬರುವಲ್ಲಿ, ಮೊಗಕೆ ಸೆಕೆ
ಬಿಸಿಲು ತಾಕೆ ತಡೆಯ
ಹಿಡಿದು ನಿಂತಿರುವಳೆಲ್ಲ ಕಡೆಗೆ ಚಾ-
-ಚಿರುವ ಗಿಡದ ಕೊಡೆಯ

ರಕ್ತ ಹೀನಧರೆ ಬರೆತು ಬೆಳ್ಳಗಿರೆ . . . || ೧೪ ||
ಗಿಳಿಯ ತೋರಣದ ಸಾಲು ಮುಗಿಲ ಮೊಗ-
ಸಾವೆಗೆಲ್ಲ ಕಟ್ಟಿ
ಅಳಿಯ ಕುಲವು ಕೋರೆಲವು ಪಕ್ಷಿ ಪಾ-
ಡಿಹವು ಗೇಯಗೊಟ್ಟಿ || ೧೫ ||

ಸಕಲ ಪರಿಮಳದ ಪಕಳೆ ಹರವಿ ಕಾ-
ಯ್ದಿಹಳು ನೆಲದ ನಲ್ಲೆ
ಮುಕುಲ ಪುಷ್ಪ ಮಕರಂದ ಮಧುರ ಫಲ
ವಿಪುಲ ನಲ್ಲ ಮೆಲ್ಲೆ || ೧೬ ||

ಪತ್ರ ಪಲ್ಲವದ ನೇತ್ರ ಸಂಪುಟದಿ
ಸಿಕ್ತ ಪ್ರೇಮ ಕರುಣೆ
ಮುಕ್ತ ಮನದಿ ಹೃತ್ ಪೀಠ ಹೂಡಿಹಳು
ಭಕ್ತೆ, ಧರಣಿ, ಶರಣೆ || ೧೭ ||

ಅರ್ತ ನಶ್ವರವು ಕೊರ್ತು ಈಶ್ವರಗೆ
ಅರ್ಪಿಸುವದು ಪೂಜೆ
ಪ್ರಾರ್ಥಿಸುವದು ಎದೆ ತೆರೆದು ಜೀವಿಗಳಿ–
ಗಿರ್ಪ ನೋವು ಮಾಜೆ ॥ ೧೮ ॥

ಹಾಲ ಜಳಕ ಬೆಳ್ದಿಂಗಳಾಗೆ ಶ್ರೀ
ಗಂಧ ವನದ ಕಂಪು
ಗಾಳಿ ಧೂಪವಾ ಸೂರ್ಯ ದೀಪವಾ–
ರತಿಯು ಸಂಜೆಗೆಂಪು ॥ ೧೯ ॥

ಲಕ್ಷ ಲಕ್ಷ ನಕ್ಷತ್ರ ತಳೆವ ಅ–
ಕ್ಷಯ್ಯದ ಕ್ಷತೆಗಳು
ಭಕ್ಷ್ಯ ಭೋಜ್ಯ ನೈವೇದ್ಯಖಾದ್ಯ ಪಾ–
ನೀಯ ಈಪ್ಸಿತಗಳು ॥ ೨೦ ॥

ದ್ರಾಕ್ಷಿ ದಾಡಿಮವು ಮಾವು ಕದಳಿ ಖ–
ರ್ಜೂರ ನಾರಿಕೇಳ
ಇಕ್ಷು, ನಿಂಬೆ, ಕಿತ್ತ್ರೀಳೆ, ಕವಳಿ ಅಂ–
ಜೀರ ಫಲದ ಮೇಳ ॥ ೨೧ ॥

ಇಂಥ ಶಾಶ್ವತದ ನೋಂಪಿ ನಡೆದಿಹುದ–
ನಂತ ಕಾಲದಿಂದೆ
ತಿರೆ, ಚಿರಂತನಗೆ ವಾಸ ಯೋಗ್ಯ ಶುಭ
ಗೇಹವಾಗಲೆಂದೆ
ರಕ್ತಹೀನ ಧರೆ ಬರೆತು ಬೆಳ್ಳಗಿರೆ
ಮಾಗಿ ಮುಗಿದ ಮೇಗೆ ॥ ೨೨ ॥

---

# ಸಂದೇಶ

ಲೇಖಕಿ : ಎನ್. ಎಸ್. ಪರಿಮಳಾ

ನಾವು ಹೂವುಗಳು
ಎಂದು ಅರಳುವೆವು
ಒಂದ ಗಿಡದ ಮೇಲೆ ॥

ಕಂಪ ಬೀರುವೆವು
ತಂಪ ಸೂಸುವೆವು
ನಮ್ಮ ಬಳಿಯೆ ಸುಳಿಯೆ ॥

ಬಿರಿದು ಅರಳುವೆವು
ನಲಿದು ನಗಿಸುವೆವು
ಆಗಿ ಸೊಬಗಮಾಲೆ ॥

ಉದಯವಾಗುತಿರೆ
ಹೃದಯ ಬಿಚ್ಚುವೆವು
ಸಾಂ ಪ್ರೀತಿಯೋಲೆ ॥

ನಾವು ದುಂಬಿಗಳು
ನಂಬಿ ಬಾಳುವೆವು
ಹೀರಿ ಬಾಳ ಬಂಡು ॥

ಬಾಳಿ ಬದುಕುವೆವು
ತಾಳಿ ಸಹಿಸುವೆವು
ಬಾಳರಸವನುಂಡು ॥

ನಾವು ಚುಕ್ಕಿಗಳು
ಕೂಡಿ ಬೆಳಗುವೆವು
ತೂರಿ ತಮುವ ನಿಂದು ॥

ನಾವು ಹಕ್ಕಿಗಳು
ರೆಕ್ಕೆ ಬಿಚ್ಚುವೆವು
ಹಾರಿ ಮೇರೆ ಇಂದು ॥

ಬನ್ನಿ, ಬನ್ನಿ
ನೀವೆಲ್ಲ ಇಂದು
ನಾವಲ್ಲ ಬೇರೆ ಎಂದು ॥

ತನ್ನಿ ತನ್ನಿ
ಸುಖ ಶಾಂತಿ ಸಿಂಧು
ಕರ ಕೇಳಿ ಆಗಿ ಬಂಧು ॥

ಕಸವೆಲ್ಲ ಹೋಗಿ
ರಸಪೂರ್ಣವಾಗಿ
ಹೊಸದಾಗಿ ಬಾಳ ಬೆಳಸ ॥

ಬರಲೊಂದು ದಿವಸ ಮೂಡೀನಿ ಭಾಸ
ಮೈದೋರಿ ಮಧುರ ಹಾಸ ॥

ಇಳಿ ಬಿಟ್ಟ ಪರದೆ
ಭರದಿಂದ ಹರಿದು
ಒಮ್ಮತದಿ ನಾವು ಒಲಿದು ॥

ಕಲೆತಿಂದು ನಾವು
ಬಲ ಹೊಂದಿ ಇಂದು
ಬಾಳೋಣ ನಾವು ಒಲಿದು ॥

# ಪುಸ್ತಕ ಪರಿಚಯ

ಡಾ॥ ಕೆ. ಎಂ. ಕೃಷ್ಣರಾವ್ ಅವರಿಂದ

ಇಂದು ಪರಿಚಯಕ್ಕಾಗಿ ಬಂದಿರುವ ಪುಸ್ತಕಗಳು ಎರಡು. ಒಂದು ಕನ್ನಡ ಗಾದೆಗಳನ್ನು ಕುರಿತದ್ದಾದರೆ, ಮತ್ತೊಂದು ಶ್ರೀ ಪುರಂದರದಾಸರಿಗೆ ಸಂಬಂಧಿಸಿದ್ದು. ಮೊದಲು ಗಾದೆಗಳನ್ನು ಗಮನಿಸೋಣ. ಕಲ್ಕತ್ತೆಯ ನ್ಯಾಷನಲ್ ಲೈಬ್ರರಿಯ ಶ್ರೀ ಟಿ. ವಿ. ವೆಂಕಟರಮಣಯ್ಯನವರು ಸಂಪಾದಿಸಿರುವ, ಧಾರವಾಡದ ಪ್ರತಿಭಾ ಗ್ರಂಥಮಾಲೆಯವರು ಮುದ್ದಾಗಿ ಪ್ರಕಟಿಸಿರುವ, 'ಕನ್ನಡ ಗಾದೆಗಳ ಕೋಶ'; ೨೭೧ ಪುಟಗಳಲ್ಲಿ ೪೨೩೪ ಗಾದೆಗಳನ್ನು ಸಂಗ್ರಹಿಸಿರುವ ಈ ಪುಸ್ತಕದ ಬೆಲೆ ಎರಡೂ ಮುಕ್ಕಾಲು ರೂಪಾಯಿ.

ಗಾದೆಗಳು ಒಂದು ಭಾಷೆಯ ನಿಧಿ. ಜನಾಂಗದ ಬಹು ಕಾಲದ ಅನುಭವದಿಂದ, ಜಾಣರ ತೀಕ್ಷ್ಣ ಪ್ರಜ್ಞೆಯಿಂದ ಹೊರಬಿದ್ದ ಸ್ವಾರಸ್ಯವಾದ ಆಕರ್ಷಕ ಆನಂದದಾಯಕ ವಾಕ್ಯ ಅದು. 'ಗಾದೆ ವೇದಕ್ಕೆ ಸಮಾನ; ಗಾದೆ ವೇದಕ್ಕೆ ತಲೆದಿಂಬು; ಗಾದೆಯ ನುಡಿ ಚೆಂದ, ಸಾಧುವಿನ ನುಡಿ ಚೆಂದ' ಎಂಬ ಗಾದೆಗಳು ಅವುಗಳ ವೈಶಿಷ್ಟ್ಯವನ್ನು ಹೇಳುತ್ತವೆ. ಗಾದೆಗಳು ನಮಗೆ ವಿವೇಕ ಹೇಳುವ–ಕಲಿಸಿಕೊಡುವ ಸುಭಾಷಿತಗಳು.

ಗಾದೆಗಳು ಜನರ ನಾಲಿಗೆಯ ಮೇಲೆ ನಲಿಯುತ್ತಿರುತ್ತವೆ. ಕವಿ ಕೃತಿಗಳಲ್ಲಿ ಉದ್ಧರಿಸಲ್ಪಟ್ಟಿರುತ್ತವೆ. ಅನೇಕ ವೇಳೆ ಕವಿಯ ಉಕ್ತಿಗಳೂ ಗಾದೆಗಳಾಗುತ್ತವೆ. ಕನ್ನಡ ಸಾಹಿತ್ಯದಲ್ಲಿ ಶರಣರ ವಚನಗಳಲ್ಲೂ, ಹರಿದಾಸರ ಹಾಡುಗಳಲ್ಲೂ ಗಾದೆಗಳು ಅಪಾರವಾಗಿ ದೊರೆಯುತ್ತವೆ. ಇಲ್ಲಿಂದೆಲ್ಲಾ ಸಂಗ್ರಹಿಸಿ ಆಧುನಿಕರು ಗಾದೆಗಳನ್ನು ಪುಸ್ತಕ ರೂಪವಾಗಿ ಪ್ರಕಟಿಸಿದ್ದಾರೆ. 'ಸಾವಿರ ಮಾತಿನ ಸರದಾರ', 'ಗಾದೆಗಳ ಭಂಡಾರ', 'ಗಾದೆಗಳ ಗೀತೆಗಳು' ಮುಂತಾದ ಪುಸ್ತಕಗಳು ಈಗಾಗಲೇ ಬೆಳಕಿಗೆ ಬಂದಿರುವುದರ ಜೊತೆಗೆ ಈಗ ಗಾದೆಗಳ ಕೋಶವೆಂಬುದು ಹೊರಬಿದ್ದಿದೆ.

ಸಂಖ್ಯೆ ಮತ್ತು ಸ್ವಾರಸ್ಯ ಎರಡೂ ದೃಷ್ಟಿಗಳಿಂದ ಪ್ರಸಕ್ತ ಪುಸ್ತಕ ಪ್ರಮುಖವಾಗಿದೆ. ನಾಲ್ಕು ಸಾವಿರದ ಇನ್ನೂರ ಮೂವತ್ತಾಲ್ಕು ಗಾದೆಗಳನ್ನು ಇಲ್ಲಿ ಸಂಗ್ರಹಿಸಿರುವುದಲ್ಲದೆ ಅನೇಕ ಗಾದೆಗಳಿಗೆ ಅರ್ಥ, ಅದರ ಜಾತಿ, ಸಂಬಂಧಪಟ್ಟ ಕಥೆಗಳನ್ನು ಕೊಡಲಾಗಿದೆ; ಅಷ್ಟೂ ಅಲ್ಲದೆ ಕೊನೆಯಲ್ಲಿ ನೂರ ಆರು ಗಾದೆಗಳಿಗೆ ಆಂಗ್ಲಭಾಷೆಯಲ್ಲಿನ ಸಮಾನ ಗಾದೆಗಳನ್ನು ಅಳವಡಿಸಲಾಗಿದೆ. ಕವಿ ಬೇಂದ್ರೆಯವರ ಮುನ್ನುಡಿಯೂ, ಸಂಗ್ರಹಕಾರರ ಪೀಠಿಕೆಯೂ, ಗ್ರಂಥಋಣದ ಪಟ್ಟಿಯೂ ಇವೆ. ಅಲ್ಲದೆ ವಿಷಯಕ್ಕನುಗುಣವಾಗಿ ಗಾದೆಗಳನ್ನು ವಿಭಜಿಸಿರುವ ವಿಷಯಸೂಚಿಯನ್ನು ಕೊಡಲಾಗಿದೆ. ಗಾದೆಗಳನ್ನು ಅಕ್ಷರಾನುಕ್ರಮವಾಗಿ ಜೋಡಿಸಿಯೂ ಕೊಟ್ಟು ಸಂಪಾದಕರು ಪರಿಶ್ರಮಪಟ್ಟು ಪುಸ್ತಕ ಉಪಯುಕ್ತವಾಗುವಂತೆ ಮಾಡಿದ್ದಾರೆ.

'ಡಾಕ್ಟರ್ ಕೇಳುವ ಪ್ರಶ್ನೆಗಳಲ್ಲಿ, ಕೋಶ ಕೊಡುವ ಶಬ್ದಾರ್ಥಗಳಲ್ಲಿ, ಗಾದೆ ಕೊಡುವ ದೃಷ್ಟಾಂತಗಳಲ್ಲಿ ಮುಚ್ಚುಮರೆಯಿಲ್ಲ' ಎಂದು ಶ್ರೀ ಬೇಂದ್ರೆಯವರು ಮುನ್ನುಡಿಯಲ್ಲಿ ಒಂದು ಹೊಸ ಗಾದೆಯನ್ನು ಹೇಳಿರುವಂತೆ ಈ ಸಂಗ್ರಹದಲ್ಲಿ ಎಲ್ಲ ರೀತಿಯ ಗಾದೆಗಳಿಗೂ ಸ್ಥಾನ ಕೊಡಲಾಗಿದೆ. ಅನೇಕ ಗಾದೆಗಳಿಗೆ ಮತ್ತೊಂದು ಗಾದೆಯ ಹೋಲಿಕೆಯನ್ನು ಕೊಡಲಾಗಿದೆ.

ಗಾದೆಗಳಲ್ಲಿ ಧ್ವನಿ, ಚಮತ್ಕಾರ ಸ್ವಾರಸ್ಯವಾಗಿರುತ್ತದೆ. ಜೀವನ ಭಂಡಾರದಿಂದ ತೆಗೆದ ಅನುಭವದ ಅಮೂಲ್ಯ ರತ್ನವಲ್ಲವೆ ಗಾದೆ? ಗಾದೆ ಹಣವಿದ್ದಂತೆ ಎನ್ನಬಹುದು. ಬಳಸುವವರ ಜಾಣ್ಮೆ, ಔಚಿತ್ಯ ಹಿತ ವಿವೇಕಗಳನ್ನು ಅವಲಂಬಿಸಿ ಈ ರತ್ನದ ನಾಣ್ಯಕ್ಕೆ ಬೆಲೆ ಕಟ್ಟಬಹುದು. ಗಾದೆಯನ್ನು ಒಳ್ಳೆಯವರೂ ಕೆಟ್ಟವರೂ ತಮ್ಮ ಮೂಗಿನ ನೇರಕ್ಕೇ ಉಪಯೋಗಿಸಿಕೊಳ್ಳಬಹುದು. ನಮ್ಮ ಶಬ್ದಸಂಪತ್ತನ್ನು ಗಾದೆಗಳನ್ನು ಹೆಚ್ಚುಮಾಡಿಕೊಳ್ಳಬಹುದು.

ಗಾದೆಗಳು ಅರ್ಥಗರ್ಭಿತವಾಗಿ, ಸಂಕ್ಷೇಪವಾಗಿ ಅನೇಕ ವೇಳೆ ಕಾವ್ಯಮಯವಾಗಿ ಇರುತ್ತವೆ. ಲೋಕಶಿಕ್ಷಣಕ್ಕೂ, ಮಾತಿನ ಚಕಮಕಿ ಚಮತ್ಕಾರಕ್ಕೂ, ಸ್ವಾರಸ್ಯಕ್ಕೂ, ಅರ್ಥಸ್ಪಷ್ಟತೆಗೂ ಗಾದೆಗಳು ತುಂಬ ಉಪಯುಕ್ತ. ಜನಾಂಗದ ಯೋಗ್ಯತೆ ಸಂಸ್ಕೃತಿಗಳೂ ಗಾದೆಗಳಿಂದ ಗೊತ್ತಾಗುತ್ತವೆ. ಜನತೆಯ ಸಂಪ್ರದಾಯ ನಿಧಿನಿಷೇಧಗಳನ್ನು ಅವುಗಳಿಂದ ತಿಳಿಯಬಹುದು. ಉದಾಹರಣೆಗೆ ಈ ಕೆಲವು ಗಾದೆಗಳನ್ನು ನೋಡಬಹುದು:

ಅಕ್ಕಿಯ ಮೇಲೆ ಆಸೆ ನೆಂಟರ ಮೇಲೆ ಪ್ರೀತಿ.
ಅಡಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು.
ಅತ್ತೆ ಒಡೆದ ಪಾತ್ರೆಗೆ ಬೆಲೆಯಿಲ್ಲ.

ಅಳಿಲ ಭಕ್ತಿ ಮಳಲ ಸೇವೆ.
ಅಂಬಲಿ ಕುಡಿಯುವವನಿಗೆ ಮೀಸೆ ತಿಕ್ಕುವವನೊಬ್ಬ.
ಆರೋಗ್ಯವೇ ಭಾಗ್ಯ.
ಇಹ ನಂಬಿ ಪರ ಮರೆತ.
ಊಟ ಬಲ್ಲವನಿಗೆ ರೋಗವಿಲ್ಲ; ಮಾತು ಬಲ್ಲವನಿಗೆ ಜಗಳವಿಲ್ಲ.
ಎಲ್ಲರ ಮನೆಯ ದೋಸೆಯೂ ತೂತೆ.
ಒಲ್ಲದ ಗಂಡನಿಗೆ ಮೊಸರಿನಲ್ಲಿ ಕಲ್ಲು.
ಕನಸಿನ ನಂಟು ಕನ್ನಡಿಯೊಳಗಿನ ಗಂಟು.
ಕಾಸಿಗೆ ತಕ್ಕ ಕಜ್ಜಾಯ.
ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ.
ಕೋಣನ ಮುಂದೆ ಕಿನ್ನರಿ ಬಾರಿಸಿದ ಹಾಗೆ.

ಮೊದಲ ೧೧೨ ಪುಟಗಳಲ್ಲಿ ಅಕಾರಾದಿಯಾಗಿ ಗಾದೆಗಳನ್ನು ಜೋಡಿಸಿಕೊಟ್ಟಾದಮೇಲೆ ಮತ್ತೆ ಅ ದಿಂದ ಪ್ರಾರಂಭವಾಗಿ ಹೆಚ್ಚಿಗೆ ಸೇರಿಸಲಾದ ಗಾದೆಗಳು ಎಂದು ೧೨೪ ಪುಟಗಳಷ್ಟು ಕೊಡಲಾಗಿದೆ. ಪುಸ್ತಕ ಅಚ್ಚಾದ ಮೇಲೆ ಇದು ಸಂಗ್ರಹವಾಗಿರಬೇಕು.

ಇಲ್ಲಿನ ಕೆಲವು ಗಾದೆಗಳು ಕೊಂಚ ವ್ಯತ್ಯಾಸವಾಗಿರುವಂತೆ ತೋರುತ್ತದೆ. ಅಥವಾ ಎರಡೂ ರೀತಿ ಹೇಳುವುದುಂಟೇನೊ – ಉದಾ: ರವಿ ಕಾಣದ್ದನ್ನು ಕವಿ ಕಂಡ. ಎಂಬುದು ಇಲ್ಲಿ (೯೯೭) ಕವಿ ಕಂಡಷ್ಟು ರವಿಕಾಣ ಎಂದೂ ಗಂಡನಿಂದ ಊಟ ಮಕ್ಕಳಿಂದ ಸಿದ್ದೆ ಎಂಬುದು ಇಲ್ಲಿ (೭೧೬) ಗಂಡನ ಹೇಳಿಕೇಲಿ ಊಟ ಮಕ್ಕಳ ಹೇಳಿಕೇಲಿ ಸಿದ್ದೆ ಎಂದಿದೆ. ಗಂಡ ಪಟ್ಟೆಸೀರೆ ತರುತ್ತಾನೆಂದು ಇದ್ದ ಸೀರೆ ಸುಟ್ಟಳು (೭೧೦) ಎಂಬಲ್ಲಿ ಪಟ್ಟೇಸೀರೆ ಎಂದರೆ ರೇಸಿಮೆ ಸೀರೆ ಎಂದಿರಬೇಕು ಎನ್ನಿಸುತ್ತದೆ. ಹೊಟ್ಟೆ ನಿನ್ನಿಂದ ನಾ ಕೆಟ್ಟೆ ಎಂಬ ಗಾದೆ ಎರಡು ಕಡೆ ಬಂದಿದೆ. (೨೦೩೩ ಮತ್ತು ೪೧೮೧).

ಅನೇಕ ಒಳ್ಳೆಯ ಗಾದೆಗಳು ಇಲ್ಲಿ ಸೇರಿಲ್ಲ. ಉದಾಹರಣೆಗಾಗಿ :

ಲೋಕ ಸೇವಾನಿರತ ಹೆಂಡತಿ ಮಕ್ಕಳ ಮರೆತ;
ಹೊಟ್ಟೆಗೆ ಹಿಟ್ಟಿಲ್ಲ ಜುಟ್ಟಿಗೆ ಮಲ್ಲಿಗೆ ಹೂ ;
ಚಂಡಾಲ ದೈವಕ್ಕೆ ಚಪ್ಪಲಿ ಏಟು ;
ಗಡ್ಡಕ್ಕೆ ಬೇರೆ ಸೀಗೇಕಾಯಿ ;
ಉಗಳತಾ ಉಗಳತಾ ರೋಗ ಬೊಗಳತಾ ಬೊಗಳತಾ ರಾಗ ಇತ್ಯಾದಿ.

ಇಲ್ಲಿ ಅನೇಕ ಗಾದೆಗಳಿಗೆ ಸಂಕ್ಷೇಪವಾಗಿ ಅರ್ಥಕೊಟ್ಟಿರುವುದು ಸರಿಯಷ್ಟೆ. ಕ್ಲಿಷ್ಟವಾದುವಕ್ಕೆ ಯಾವ ಸೂಚನೆಯೂ ಇಲ್ಲ. ಕೆಲವೆಡೆ ಕೊಟ್ಟಿರುವ ವ್ಯಾಖ್ಯಾನ ಸರಿಯಿಲ್ಲ. ಉದಾ : ೯೩೩–ಈ ಗಾದೆ ಹಿಂದೆಯೂ ಇದ್ದಿತು. ಭಾರತದ ವಿಭಜನೆಯಾದ ಸನ್ನಿವೇಶದಲ್ಲಿ ಸೃಷ್ಟಿಯಾದುದಲ್ಲ. ಆಗಲೂ ಮತ್ತೆ ಅದು ಅನುಭವಕ್ಕೆ ಬಂದಿತಷ್ಟೆ.

ಗಾದೆಗಳಂತೆಯೇ ಕಾಣದಿರುವುವು ಸಪ್ಪೆಯಾಗಿರುವಂತಹವೂ ಇಲ್ಲಿ ಅನೇಕ ಸೇರಿವೆ. ಉದಾ: ತುತ್ತು ತುತ್ತಿಗೆ ಬ್ರಹ್ಮಾರ್ಪಣವೊ? ತುಳುವರಸನ ರಾಜ್ಯ ತುರುಕರು ಬಂದ ಮೇಲೆ ನಿಂತೀತೆ? ತೆರೆದ ಕಿಟಕಿಯಿಂದ ಬೆಕ್ಕು ಹೊಕ್ಕಿತು; ತೆಂಗಿನ ಮರ ತೆಂಕಲಾಗಿ ಹೆಚ್ಚು ಇತ್ಯಾದಿ.

ಗಾದೆಗಳ ಕೋಶ ಒಟ್ಟಿನಲ್ಲಿ ಉಪಯುಕ್ತ ಗ್ರಂಥ. ಕನ್ನಡ ನುಡಿ ಸಂಪತ್ತು ಎಷ್ಟು ಎಂಬುದು ಇಂತಹ ಗ್ರಂಥಗಳಿಂದ ಚೆನ್ನಾಗಿ ತಿಳಿಯುತ್ತದೆ.

ಎರಡನೆಯದು ಶ್ರೀ ಜಿ. ಎ. ರೆಡ್ಡಿ, ಎಂ. ಎ. ಅವರು ಬರೆದು ಹಾಸನದ ಶ್ರೀ ಮಯೂರ ಪ್ರಕಾಶನದವರು ಪ್ರಕಟಿಸಿರುವ ಕ್ರೌನ್ ಅಷ್ಟಪತ್ರ ೨೧೦ ಪುಟಗಳಷ್ಟಿರುವ ಶ್ರೀ ಪುರಂದರದಾಸರು ಎಂಬ ಪುಸ್ತಕ ; ಬೆಲೆ ಮೂರು ರೂಪಾಯಿ.

೧೯೬೪ನೆಯ ಜನವರಿ ತಿಂಗಳಲ್ಲಿ ಪುರಂದರದಾಸರಾಯರ ನಾಲ್ಕುನೂರು ವರ್ಷಗಳ ಪುಣ್ಯ ದಿನೋತ್ಸವದ ಸಂದರ್ಭದಲ್ಲಿ ಅವರನ್ನು ಕುರಿತು ಅನೇಕ ಲೇಖನಗಳು, ಪುಸ್ತಕಗಳು ಹೊರಬಿದ್ದುವು. ನಾಲ್ಕು ನೂರು ವರ್ಷಗಳ ತರುವಾಯವಾದರೂ ಕನ್ನಡ ನಾಡು ಜಾಗ್ರತಗೊಂಡ ಶುಭಚಿಹ್ನೆಯಿದು.

ದಾಸರ ಜೀವನ ವಿಕಾಸ–ಭಾವ ವಿಕಾಸಗಳನ್ನು ಅವರ ಕೃತಿಗಳ ಮೂಲಕವೇ ಗುರುತಿಸುವ ಪ್ರಯತ್ನವಿದೆಂದು ಗ್ರಂಥಕರ್ತರು ಅರಿಕೆಯಲ್ಲಿ ಹೇಳಿದ್ದಾರೆ. ಅವರ ಕೃತಿಗಳನ್ನು ಈ ದೃಷ್ಟಿಯಿಂದ ೧೯ ಬಗೆಯಾಗಿ ವಿಂಗಡಿಸಿ ಆ ಕೃತಿಗಳಲ್ಲಿ ಒಂದೊಂದರ ಪಲ್ಲವಿಯನ್ನೇ ಅಧ್ಯಾಯಗಳ ಶೀರ್ಷಿಕೆಯನ್ನಾಗಿ ಮಾಡಿದ್ದಾರೆ. ದಾಸರ ಕೃತಿಗಳಲ್ಲಿ ಬರುವ ಮಾತುಗಳೆಲ್ಲಾ ವಿಚಾರವನ್ನೆಲ್ಲಾ ದಾಸರ ತಲೆಗೇ ಕಟ್ಟುವ ಪ್ರಯತ್ನ ಇಲ್ಲಿ ನಡೆದಿರುವುದು, ಅದು ಅಷ್ಟು ಸಾಧುವಲ್ಲವೆನ್ನಬಹುದು. ದಾಸರ ಬಗ್ಗೆ ಪ್ರಚಲಿತವಾಗಿರುವ ಜೀವನ ಕಥೆಯನ್ನೇ ಕಷ್ಟದಿಂದ ಕೃತಿಗಳಲ್ಲಿ ಕಾಣುವ ಪ್ರಯತ್ನವನ್ನೂ ಇಲ್ಲಿ ಮಾಡಲಾಗಿದೆ. ದಾಸರ ಅಂತರಂಗ ಬಹಿರಂಗ ಶುದ್ಧಿ; ಆತ್ಮೋದ್ಧಾರ ಮತ್ತು ಲೋಕೋದ್ಧಾರಗಳನ್ನು ಅವರ ಕೃತಿಗಳಿಂದಲೇ ಹಂತಹಂತಗಳಾಗಿ ವಿಂಗಡಿಸಿ ಆಯ್ದು ಉದ್ಧರಿಸಲಾಗಿದೆ.

ರತ್ನಪಡಿ ವ್ಯಾಪಾರಿ ಶ್ರೀನಿವಾಸನಾಯಕರ ಕೃಪಣಜೀವನವನ್ನು ಮಾಮೂಲಾಗಿ ಸ್ವೀಕರಿಸಿ ಕೊಂಚ ಉತ್ಪ್ರೇಕ್ಷೆಯನ್ನೂ ಸೇರಿಸಿ ವರ್ಣಿಸಲಾಗಿದೆ. 'ಎತ್ತಪೋದನಮ್ಮ' ಎಂಬ ಕೃತಿ

ಯೊಂದನ್ನೇ ಅರ್ಥ ಮಾತ್ರ ಉದ್ಧರಿಸಿ ಅವರ ಪೂರ್ವ ಜೀವನವನ್ನು ಅಳವಡಿಸಿ ಮುಗಿಸಲಾಗಿದೆ. ಇಲ್ಲಿ ಇನ್ನೂ ಆಧಾರಗಳನ್ನು ಬೆದಕಿ ಸೂಚಿಸಬಹುದಾಗಿತ್ತು. ಅನಂತರ ಪಶ್ಚಾತ್ತಾಪದಿಂದ ಬೆಂದುದರ ಫಲವಾಗಿ ನಾಯಕರು ಹರಿದಾಸರಾಗಿ ಪುರಂದರದಾಸರೆನ್ನಿಸಿದ ವಿವರ ಸೂಚಿತವಾಗಿಲ್ಲವಾದರೂ ತರುವಾಯದ ಜೀವನಕ್ರಮವನ್ನು ದೈವ ಕೃಪೆಗಾಗಿ ಅವರು ಹಂಬಲಿಸಿದ ಪರಿಯನ್ನು ಬಿನ್ನಹಕೆ ಬಾಯಿಲ್ಲ, ದಯಮಾಡೊ ರಂಗ ಮತ್ತು ಕರೆದರೆ ಓ ಎನ್ನಬಾರದೆ ಎಂಬ ಮೂರು ಅಧ್ಯಾಯಗಳಲ್ಲಿ ಅಳವಡಿಸಲಾಗಿದೆ. ಇಲ್ಲಿ ಉದ್ಧರಿಸಲಾಗಿರುವ ಕೃತಿಗಳು ಉಚಿತವಾಗಿದ್ದು ವಿಷಯಕ್ಕೆ ಚೆನ್ನಾಗಿ ಹೊಂದಿಕೊಂಡಿವೆ. ನಿರೂಪಿಸಿರುವ ಕ್ರಮವೂ ಚೆನ್ನಾಗಿದೆ. ದಾಸನ್ನ ಮಾಡಿಕೊ ಎನ್ನ; ನೀನೇ ಗತಿ; ನೀನೇ ಮತಿ; ದಯಮಾಡೊ ರಂಗ, ಕರೆದರೆ ಓ ಎನ್ನಬಾರದೆ, ಬಿಡೆನಿನ್ನ ಪಾದವ ಇತ್ಯಾದಿ ಕೃತಿಗಳಲ್ಲಿ ಅಡಗಿರುವ ಆರ್ತಭಾವದ ಮೊರೆ, ಶುದ್ಧ ಹೃದಯದ ಭಕುತಿ, ಭಗವಂತನ ಸಾಕ್ಷಾತ್ಕಾರಕ್ಕಾಗಿ ಕಾತರ – ಇವುಗಳಿಗೆ ಹರಿ ಒಲಿದನು. ಬಂದ ಬಯಸಿದ ಫಲ ವಿಠಲನ ಕೃಪೆಗೆ ದಾಸರು ಪುಳಕಿತರಾಗಿ ಭಾವಪರವಶರಾಗಿ ಆನಂದತುಂದಿಲರಾಗಿ ಹಾಡಿದರು. ಗುಣವಾಯಿತೆನ್ನ ಭವರೋಗ (೬ ನೆಯ ಅಧ್ಯಾಯ) ಕಂಡೆ ನಾ ಕನಸಿನಲಿ ಗೋವಿಂದನ, ಕಣ್ಣಾರೆ ಕಂಡೆನಚ್ಯುತನ, ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದಂತಿದೆ, ಧನ್ಯನಾದೆನಾ ನೀಜಗದೊಳು, ಬದುಕಿದೆನು ಬದುಕಿದೆನು ಇತ್ಯಾದಿ.

ಅನಂತರ ತಮ್ಮನ್ನು ಅಧೋಗತಿಯಿಂದ ಉನ್ನತ ಮಾರ್ಗಕ್ಕೆ ಕೊಂಡೊಯ್ದ ಶ್ರೀಹರಿಯನ್ನು ಗಾಢಭಕ್ತಿಯಿಂದ ದಾಸರು ಕೊಂಡಾಡುವರು. ಹಾಡಿದರೆ ಎನ್ನೊಡೆಯನ ಹಾಡುವೆನು (೭ನೆಯ ಅಧ್ಯಾಯ) ಸಕಲ ಗ್ರಹಬಲ ನೀನೆ ಸರಸಿಜಾಕ್ಷ, ಹರಿಯಲ್ಲಿ ಸಲಿಗೆ ಸರಸಸಲ್ಲಾಪಗಳಿಂದ ಅಂತರಂಗ ಭಕ್ತರಾದರು ದಾಸರು. ಹರಿಯನ್ನು ಹಾಸ್ಯ ಮಾಡಿದರು, ನಿಂದಾಸ್ತುತಿ ಮಾಡಿದರು, ಅವನ ಪರಿವಾರವನ್ನು ಧನ್ಯವೆಂದು ಕೊಂಡಾಡಿದರು – ಏತರ ಚೆಲುವ ರಂಗಯ್ಯ, ಆವಕುಲವು ತಿಳಿಯಲಾಗದು, ಏನು ಧನ್ಯಳೋ ಲಕುಮಿ ಎಂದು. ಹರಿ ತನ್ನ ದಾಸರೊಂದಿಗೆ ಲೀಲೆಮಾಡಿದನು – ಮುಯ್ಯಕ್ಕೆ ಮುಯ್ಯ ತೀರಿಸಿದನು (೮ ನೆಯ ಅಧ್ಯಾಯ). ಇದೇ ಬಗೆಯ ಪವಾಡಸೂಚಕ ಕೃತಿ ಎಂದಪ್ಪಿಕೊಂಬೆ ರಂಗಯ್ಯನ, ಬಾರವ್ವ ಭಾಗೀರಥಿ, ಮಾಸಿಸರೊಳು ಮಾನಿಸ, ಕಲ್ಲಿಂದ ಜಗ ಕಲ್ಲಿಂದ ಮೊದಲಾದ ಕೃತಿಗಳನ್ನು ಕೊಟ್ಟು ಆ ಸನ್ನಿವೇಶಗಳನ್ನು ವಿವರಿಸಬಹುದಾಗಿತ್ತು.

ಅನಂತರ ದಾಸರು ಚಿತ್ರಿಸಿದ ಬಾಲಕೃಷ್ಣನ ಲೀಲೆಗಳನ್ನು ಅವರ ಮಾತೃಹೃದಯಕ್ಕೆ ದೃಷ್ಟಾಂತವಾಗಿ ಗೋಪೀಜನಪ್ರಿಯ ಗೋಪಾಲ ಎಂಬ ೯ನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಹರಿನಾಮ ಸ್ಮರಣೆಯ ಮಹಿಮೆಯನ್ನು ಪಕ್ವಹೃದಯದ ಶ್ರೀಮಂತಿಕೆಯಿಂದ ಪುರಂದರದಾಸರು ಪ್ರಚಾರಮಾಡಿದುದನ್ನು ೧೦ನೆಯ ಅಧ್ಯಾಯ ಕಲ್ಲು ಸಕ್ಕರೆ ಕೊಳ್ಳಿರೊ ಹೇಳುತ್ತದೆ.

ಪುರಂದರದಾಸರು ಚಿತ್ರಿಸಿದ ಸಮಾಜದ ವಿಡಂಬನೆ, ಕಟಕಿ ಅನುತಾಪ ಮೊದಲಾದುವನ್ನು ಮೂರ್ಖರಾದರು ಜನರು (ಅ. ೧೧); ನೆಚ್ಚನಯ್ಯ ಹರಿ ಮೆಚ್ಚನಯ್ಯ (ಅ. ೧೪) ಎಂಬುವು ಹೇಳಿದರೆ, ಆರು ಹಿತವರು ನಿನಗೆ (ಅ. ೧೨). ಮನುಜ ಶರೀರವಿದೇನು ಸುಖ (ಅ. ೧೩) ಎಂಬುವು ಲೋಕದ ಅಶಾಶ್ವತ ಸ್ಥಿತಿಯನ್ನು ಬೋಧಿಸುತ್ತವೆ.

ಈಸಬೇಕು ಇದ್ದು ಜೈಸಬೇಕು; ಮಾನವ ಜನ್ಮ ದೊಡ್ಡದು, ಬುತ್ತಿಯ ಕಟ್ಟೋ ಮನುಜ, ಪಾಥೇಯವ ಕಟ್ಟಿರೋ ವೈಕುಂಠಕ್ಕೆ ಎಂಬ ವೀರ ಸಂದೇಶವನ್ನು ಹದಿನೈದನೆಯ ಅಧ್ಯಾಯ ಸಾರುತ್ತದೆ. ದಾಸರ ಜ್ಞಾನಪರಿಪಕ್ವತೆ, ಹೃದಯವೈಶಾಲ್ಯ, ಉದಾರ ಮನಸ್ಸುಗಳನ್ನು ಆವ ಕುಲವಾದರೇನು (ಅ. ೧೬) ನಿಂದಕರಿರಬೇಕು (ಅ. ೧೭) ಎಂಬ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ. ಪುರಂದರದಾಸರ ಸ್ತ್ರೀ ಬೋಧೆಯನ್ನು ಸುಜ್ಞಾನಿಯೆಂದಾಳಬೇಕಣ್ಣ ಎಂಬ ಹದಿನೆಂಟನೆಯ ಅಧ್ಯಾಯದಲ್ಲಿ ಬಣ್ಣಿಸಲಾಗಿದೆ.

'ಕೊಳಲನೂದುವುದು ಬಲುಚೆಂದ' ಎಂಬ ಅರ್ಥಗರ್ಭಿತವಾದ ಶೀರ್ಷಿಕೆಯುಳ್ಳ ಕೊನೆಯ ಹತ್ತೊಂಭತ್ತನೆಯ ಅಧ್ಯಾಯದಲ್ಲಿ ಪುರಂದರದಾಸರ ಕೃತಿಗಳ ಭಾವ ಮಾಧುರ್ಯ, ವಿಷಯ ವೈವಿಧ್ಯ ಸಂಪತ್ತು, ಗೀತೆಯ ಸವಿ, ಲಲಿತಪದವಿನ್ಯಾಸ, ಸರಸೋಕ್ತಿ, ನಾಟಕೀಯತೆ, ಉಪಮಾ ಬಂಧುರತೆ, ಭಕ್ತಿ ಪರವಶತೆ, ಹೃದಯಂಗಮ ಆತ್ಮೀಯತೆಗಳನ್ನೂ ದಾಸರ ಪ್ರತಿಭಾ ಸಂಪತ್ತನ್ನೂ ಮೆಚ್ಚಿಕೊಂಡು ಈ ಕಾರಣಗಳಿಂದಲೇ ಅವು ಅತ್ಯಂತ ಜನಪ್ರಿಯವಾಗಿವೆ ಎಂಬುದನ್ನು ಗುರುತಿಸಿ ಮನಸಾರೆ ಮೆಚ್ಚಲಾಗಿದೆ. ಅವುಗಳಲ್ಲಿರುವ ತಿಳಿಹಾಸ್ಯ, ವಿಡಂಬನೆ ಚತುರೋಕ್ತಿಗಳನ್ನು ಪ್ರಶಂಸಿಸಲಾಗಿದೆ. ಕೃಷ್ಣನ ಕೊಳಲಿನ ನಾದ ಬಲುಚೆಂದ: ಅವನ ಅಂತರಂಗ ಭಕ್ತರಾದ ಪುರಂದರದಾಸರು ಅದರ ಮತ್ತು ಅವನ ಮಹಿಮೆಗಳನ್ನು ಹಾಡುವುದೂ ಬಲುಚೆಂದ ಎಂಬುದರೊಂದಿಗೆ ಗ್ರಂಥ ಸಮಾಪ್ತವಾಗಿರುವುದು ಸೂಕ್ತವಾಗಿದೆ.

ಹೀಗೆ ಪುರಂದರದಾಸರದೇ ಎಂಬ ಕೃತಿಗಳಿಂದಲೇ ಆಯ್ದು ಅವುಗಳಿಂದಲೇ ಪೋಣಿಸಿರುವ ಈ ಜೀವನ ವಿಕಾಸ, ಭಾವವಿಕಾಸ ಮಾಲೆ ಶ್ಲಾಘ್ಯವಾಗಿದೆ ಎಂದು ಸೂಚಿಸಲು ಸಂತೋಷವಾಗುತ್ತದೆ. ಪುರಂದರದಾಸರು ಪ್ರತಿಪಾದಿಸಿರುವ ತತ್ತ್ವ-ಸಿದ್ಧಾಂತ, ಅವರ ಅಪಾರ ವಿದ್ವತ್ತು, ಗೂಢಾರ್ಥಕ ಕೃತಿಗಳು, ಒಗಟುನುಡಿಗಳು, ಜಾಣನುಡಿಗಳು, ಪುರಂದರೋನಿಷತ್ತು ಎಂಬ ಸಾರ್ಥಕ ನಾಮ, ಸಮಕಾಲೀನರು, ಸುತ್ತಲ ಸನ್ನಿವೇಶ, ಅದರ ಪ್ರಭಾವ ಮೊದಲಾದುವುಗಳ ದೃಷ್ಟಿಯೂ ಇಲ್ಲಿ ಕೊಂಚವಾದರೂ ಸೇರಿಕೊಂಡಿದ್ದರೆ ಈ ಶೋಧನ ಕಾರ್ಯ ಇನ್ನೂ ಮೈದುಂಬಿ ಬರುತ್ತಿತ್ತು ಎನ್ನಿಸುತ್ತದೆ.

ಆದರೂ ಶ್ರೀ ಜಿ. ಎ. ರೆಡ್ಡಿಯವರ ಶ್ರೀ ಪುರಂದರದಾಸರು ಎಂಬ ಈ ಕೃತಿ ಸರಳ ಸುಂದರವಾಗಿದ್ದು ಅವರ ಪ್ರಾಮಾಣಿಕ ಪ್ರಯತ್ನದ ಫಲವಾಗಿ ಓದುಗರಿಗೆ ಆನಂದವನ್ನೀಯುವುದರಲ್ಲೂ, ಕನ್ನಡದ ಆ ಹಿರಿಯ ಸಂತರ ಸ್ಮರಣೆಗೆ ಇದೊಂದು ಒಳ್ಳೆಯ ಕಾಣಿಕೆ ಎಂಬುದರಲ್ಲೂ ಸಂಶಯವಿಲ್ಲ.

(ಬೆಂಗಳೂರು ಆಕಾಶವಾಣಿ ಕೃಪೆಯಿಂದ)

---




# ಗ್ರಂಥಾವಲೋಕನ

**ದೃಷ್ಟಿಯೋಗ:** ಸಂಪಾದಕರು: ಶ್ರೀ ಚ. ಸುಂದರೇಶನ್, ಎಂ.ಎ., ಅವರು, ಸೋಸಲೆ; ಸೈಜು: ಕ್ರೌನ್ ೧/೮; ಪುಟ: ೧೨೦; ಬೆಲೆ: ರೂ. ೧–೫೦ ನ.ಪೈ.

'ದೃಷ್ಟಿಯೋಗ' ಎಂಬ ಈ ವಿನೂತನ ಹೆಸರಿನ ಪುಸ್ತಕವು ಬೆಳಕಿಗೆ ಬಂದುದು ಕನ್ನಡಿಗರ ಪುಣ್ಯದ ಫಲ. ಅಂಗಯ್ಯ ಇಷ್ಟಲಿಂಗದ ಮೂಲಕ ಪ್ರಾಣಲಿಂಗ, ಭಾವಲಿಂಗಗಳ ಪೂಜಾನುಭವವನ್ನು ಪಡೆದು ಸೃಷ್ಟಿಕರ್ತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಯೋಗಕ್ಕೆ ದೃಷ್ಟಿಯೋಗವೆಂದು ಹೆಸರು. "ಅಲಿ ನಿಲ್ಲಲು ಸುಳಿದು ಸೂಸುವ ಗಾಳಿ ನಿಲುವುದು" ಎಂದು ಚಾಮರಸನು ಹೇಳುವ ಮಾತು ಈ ದೃಷ್ಟಿಯೋಗವನ್ನೇ ಕುರಿತಾದುದು. ಇದನ್ನೇ ಶಿವಯೋಗ, ಶಿವಾರ್ಪಣ ಯೋಗ ಎಂದು ಕೂಡ ಶರಣರು ಕರೆದಿದ್ದಾರೆ.

ಕಣ್ಣಿನ ಮೂಲಕ ಮುಕ್ಕಣ್ಣನನ್ನು ಸಾಧಿಸುವ ಈ ದೃಷ್ಟಿಯೋಗವನ್ನು ಸಮರ್ಥಿಸುವ ೧೧೧ ವಚನಗಳಿಂದ ಈ ಗ್ರಂಥವು ಕಂಗೊಳಿಸುತ್ತಿದೆ. ಕಡೆಯಲ್ಲಿ "ನೇತ್ರ ರತ್ನಾಕರ" ಎಂಬ ಯೋಗ ಪ್ರಕರಣವಿರುವುದು ಗ್ರಂಥಸ್ಥ ವಿಷಯಕ್ಕೆ ಪೂರಕವಾಗಿದೆ.

ಈ ಗ್ರಂಥಕ್ಕೆ ಸೋಮವಾರಪೇಟೆಯ ಶ್ರೀ ಗುರುಸಿದ್ಧ ಸ್ವಾಮಿಗಳು ಉಪಯುಕ್ತವಾದ ಮುನ್ನುಡಿ ಬರೆದಿದ್ದಾರೆ.

ಪ್ರಾರ್ಥನ, ಧನ್ಯ ಭಾವನ, ನಿವೇದನ (ಪುಟ ೧) ಯೋಗಃ ಶ್ಚಿತ್ತವೃತ್ತಿ ನಿರೋಧಃ (ಪೀಠಿಕೆ xii) ಇತ್ಯಾದಿ ಗಳಲ್ಲಿರುವ ಶಬ್ದದೋಷಗಳು ಮುಂದೆ ಸರಿಪಡಲಿ.

ಕಾಗದ, ಮುದ್ರಣ, ರಕ್ಷಾಪತ್ರ ಚೆನ್ನಾಗಿದೆ. ಲೇಖಕರ ಪ್ರಯತ್ನವು ಶ್ಲಾಘ್ಯವಾದುದು. ಗ್ರಂಥವು ವಾಚನಾರ್ಹವಾದುದು.

**ಪರಂಜ್ಯೋತಿ ದರ್ಶನ:** ಸಂಪಾದಕರು: ಶ್ರೀ ಚ. ಸುಂದರೇಶನ್, ಎಂ.ಎ., ಸೋಸಲೆ; ಸೈಜು: ೧/೮ ಫುಲ್‌ಸ್ಕೇಪ್; ಪುಟ: ೨೮; ಬೆಲೆ: ೨೮ ನ.ಪೈ.

ಮಂಗಳೂರು ಸರ್ಕಾರಿ ಕಾಲೇಜಿನಲ್ಲಿ ಕನ್ನಡ ಬೋಧಕರಾಗಿರುವ ಇವರು ಈಗಾಗಲೆ ತಮ್ಮ ಉತ್ತಮ ಲೇಖನ-ಭಾಷಣಾದಿಗಳಿಂದ ಕನ್ನಡಿಗರಿಗೆ ಪರಿಚಿತರಾಗಿದ್ದಾರೆ. ಇದರಲ್ಲಿ ಶರಣೆ ಲಿಂಗಮ್ಮನ ಕೆಲವು ವಚನಗಳನ್ನು ತಕ್ಕಷ್ಟು ವಿವರಣೆಯೊಡನೆ ಪ್ರಕಟಿಸಲಾಗಿದೆ. ವಚನ ಶಾಸ್ತ್ರದ ಅನುಭವ ಪಡೆಯಲು ಈ ಪುಟ್ಟ ಹೊತ್ತಗೆ ನೆರವಾಗುತ್ತದೆ. ಶ್ರೀ ಚ. ಸುಂದರೇಶನ್‌ರವರ ಸಾಹಿತ್ಯ ಸೇವಾ ತತ್ಪರತೆಯು ಶ್ಲಾಘ್ಯವಾಗಿದೆ.

ಈ ಗ್ರಂಥಸ್ಥ ವಿಷಯವು ಶರಣ ಸಾಹಿತ್ಯ – ಸಂ. ೨೬, ಸಂ. ೧ರಲ್ಲಿ ಈ ಮೊದಲು ಪ್ರಕಟವಾಗಿದೆ. ಅದನ್ನೇ ಈಗ ಗ್ರಂಥರೂಪವಾಗಿ ಪ್ರಕಟಿಸಲಾಗಿದೆ. ಈ ಪುಸ್ತಕ ವಾಚನಾರ್ಹವಾಗಿದೆ.

**—'ಶೂಲಪಾಣಿ'**

**ಯುಗಮಹಿಳೆ ದುಗ್ಗಳೆ:** ರಚಿಸಿದವರು: ಶ್ರೀ ಜಗದ್ಗುರು ಚನ್ನಬಸವರಾಜೇಂದ್ರ ಮಹಾಸ್ವಾಮಿಗಳವರು, ಶ್ರೀಶೈಲ ಸಂಸ್ಥಾನ ಮಠ, ನಿಡುಮಾಮಿಡಿ ನಿವಾಸ, ಹೆಚ್. ಬಿ. ಸಮಾಜ ರಸ್ತೆ, ಬಸವನಗುಡಿ, ಬೆಂಗಳೂರು-೪; ಬೆಲೆ: ರೂ ೧.

ಈ ಗ್ರಂಥವು ಚಿಕ್ಕದಾದರೂ ಮಹತ್ವದ ಅನೇಕ ವಿಷಯಗಳಿಂದ ಕೂಡಿದ್ದು ಪುರಾತನ ಮಹಿಳೆಯೊರ್ವಳ ಜೀವನ ಚರಿತ್ರೆಯನ್ನು ನಿರೂಪಿಸಿರುತ್ತಾರೆ ಶ್ರೀ ಗಳವರು. ತಮ್ಮ ಪಳಗಿದ ಲೇಖನಿಯಿಂದ, ಮೂಲೆ ಕಸವಾಗಿ ಬಿದ್ದಿದ್ದ ಸಾಹಿತ್ಯ ರಾಶಿಯಿಂದ ದುಗ್ಗಳೆಯ ಜೀವನ ಚರಿತ್ರೆಯನ್ನು ಎತ್ತಿ ತೆಗೆದು ರಸಮಯವಾಗಿ ಮಾಡಿ, ಜನತೆಯ ಮುಂದೆ ಒಂದು ಆದರ್ಶ ದಾಂಪತ್ಯ ಜೀವನವನ್ನು ತಂದು ನಿಲ್ಲಿಸಿದ್ದಾರೆ. ಹತ್ತನೆಯ ಶತಮಾನದಲ್ಲಿದ್ದ ಸ್ತ್ರೀಯರ ನಡವಳಿಕೆ, ಈ ಇಪ್ಪತ್ತನೆಯ ಶತಮಾನದಲ್ಲೂ ಜನಾಂಗದ ಜೀವನವನ್ನು ಹದಗೊಳಿಸಬೇಕಾದ ಸಾಹಿತ್ಯ ವಿಪುಲವಾಗಿದೆ. ಶಿವಶರಣೆಯರಲ್ಲಿ ಅಗ್ರಗಣ್ಯಳಾದ ಅಕ್ಕಮಹಾದೇವಿಯು ಸಾಹಿತ್ಯದಲ್ಲಿ ಅತ್ಯುನ್ನತ ಸ್ಥಾನವನ್ನು ಪಡೆದಿದ್ದರೆ, ಶಿವಶರಣೆ ದುಗ್ಗಳೆ ಮೂಲಗುಂಪಾಗಿದ್ದಾಳೆ. ಜೀವನದ ಎಲ್ಲಾ ಹಂತಗಳಲ್ಲೂ ಪತಿ (ದಾಸಿಮಾರ್ಯನೊಂದಿಗೆ) ಯೊಡನೆ ಬಾಳ್ವೆಮಾಡುತ್ತಾ, ವಿರತಿಯನ್ನು ಹೊಂದಿ ಸಂಸಾರವನ್ನು ತ್ಯಜಿಸದೆ, ಸಂಸಾರದಲ್ಲಿ ಬರುವ ಎಲ್ಲಾ ಎಡರುತೊಡರುಗಳಲ್ಲೂ ಪತಿಯ ಭುಜಕ್ಕೆ ಭುಜ ಕೊಟ್ಟು, ಎಲ್ಲಾ ಶಿವಶರಣೆಯರಿಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿದ್ದಾಳೆ. ಇಂತಹ ಪವಾಡ ಮಹಿಳೆಯನ್ನು ಚಿತ್ರಿಸುತ್ತಾ ಶ್ರೀಗಳು, ಪ್ರತಿಯೊಂದು ಪುಟದಲ್ಲೂ ಜೀವನದ ಆದರ್ಶಗಳು ಪ್ರತಿ ಬಿಂಬಿತವಾಗಿದ್ದು, ಪ್ರತಿ ಪುಟವೂ

ಸುವರ್ಣ ಫಲಕದಂತೆ ಕಂಗೊಳಿಸುತ್ತಾ, ಮೊದಲಿನಿಂದ, ಕೊನೆಯವರೆಗೂ, ಒಂದೇ ಉಸಿರಿನಲ್ಲಿ ಓದಿ ಮುಗಿಸುವಷ್ಟು ಚೆನ್ನಾಗಿದೆ. ಸಾಮಾನ್ಯ ಸ್ತ್ರೀಯಂತೆ ಕಂಡರೂ ಶಿವಶರಣೆ ದುಗ್ಗಳೆ ತನ್ನ ಭಕ್ತಿ ಭಂಡಾರವನ್ನು, ಧಾನ್ಯಭಂಡಾರವನ್ನು ಕೊನೆಗೆ ತನ್ನ ಪುಣ್ಯ ಭಂಡಾರವನ್ನು ನಾಡಿಗೆ ಧಾರೆಯೆರೆದಳು. ಅಪ್ರತಿಮವಾಗಿ ನೀಡಿ ನೀಡಿ ಅನುಪಮವಾಗಿ ಬೆಳಗಿದಳು. ಇವಳ ಜೀವನವನ್ನು ಶ್ರೀಗಳು ಈ ಕೆಳಗೆ ಕಂಡಂತೆ ಚಿತ್ರಿಸಿದ್ದಾರೆ.

"ಇಪ್ಪನೋರ್ವಂ ಭಕ್ತ ದಾಸಮಯ್ಯಂ ಪೆಸರ್
ಅಪ್ರತಿಮ ಮಹೇಶನುಂ ವಿಭವದೊಳಗಿಹರ್
ಆತಂಗೆ ಚಿತ್ತವಲ್ಲಭೆ ದುಗ್ಗಳಾದೇವಿ
ಮಾತಿಂಗೆ ಪ್ರತಿಶಬ್ದವಿಲ್ಲ, ಸದ್ಗುಣಭಾವಿ.
ಸತಿಪತಿಗಳೀರ್ವರುಂ ಚಿತ್ತಬುದ್ಧಿಗಳ್ಗಾಗೆ
ಅತಿಶಯ ಸದಾಚಾರ ತಮಗೆ ಸಂಪದವಾಗೆ
ಬಡವರಾಗಿಯೆ ಭಕ್ತಿಗೊಡೆಯರಾಗಿರ್ಪರುಂ
ಒಡಲಿಗಿಚ್ಛೆಗೆಳಸಿ ಪರದ್ರವ್ಯಮುಂ ನೋಡರುಂ"

ಈ ರೀತಿ ಆದರ್ಶ ಜೀವನವನ್ನು ನಡೆಸಿ, ಮಾರ್ಗದರ್ಶಕರಾಗಿದ್ದಾರೆ. ತವನಿಧಿಯನ್ನು ಪಡೆದು ಕೀರ್ತಿಶಾಲಿನಿಯಾಗಿದ್ದಾಳೆ.

ಶ್ರೀಗಳ ಶೈಲಿಯಲ್ಲೂ, ವಿಷಯ ಪ್ರತಿಪಾದನೆಯಲ್ಲೂ ಸ್ಖಾಲಿತ್ಯ ಕಾಣಬರದಿದ್ದರೂ, ಮುದ್ರಾರಾಕ್ಷಸ ಅಲ್ಲಲ್ಲೆ ನುಸುಳಿದ್ದಾನೆ. ಪುಟ ೯ ರಲ್ಲಿ "ಲಾಧವಾಗಲೀ", ಪುಟ ೧೧ ರಲ್ಲಿ "ಸವಾಂಗಲಿಂಗಮಯ", ಪುಟ ೧೬ ರಲ್ಲಿ "ಬೋದಿಸಿದ್ದಾರೆ", ಪುಟ ೨೫ ರಲ್ಲಿ "ಎಣಿಸಿದರ", ಪುಟ ೩೯ "ಅದೊರಯ", ಮತ್ತು "ಸ್ಪಲಿಸುತ್ತದೆ", ೪೪ ರಲ್ಲಿ "ತತ್ತ್ವಲದ", ೩೭ ರಲ್ಲಿ "ವಕ್ತಪಾದ", ೩೫ ರಲ್ಲಿ "ಹ್ಗದಯದೊಳು". ಇವುಗಳನ್ನು ಮುಂದಿನ ಮುದ್ರಣದಲ್ಲಿ ಸರಿಪಡಿಸಬಹುದು.

—"ಶಂಕರ"

ಗುಡ್ಡದ ಸಿಂಗಾರಿ : ಲೇಖಕರು : 'ತಿರುಕ'; ಪ್ರಕಾಶಕರು : ಅನಾಥ ಸೇವಾಶ್ರಮ, ಮಲ್ಲಾಡಿಹಳ್ಳಿ ಪೋಸ್ಟ್, ಹೊಳಲ್ಕೆರೆ ತಾಲ್ಲೂಕು; ಆಕಾರ ಕಿರೀಟ ಅಷ್ಟದಳ; ಪುಟಗಳು : ೨೧೪; ಬೆಲೆ : ೨ ರೂ.

ಕರ್ನಾಟಕದಲ್ಲಿರುವ ಲಂಬಾಣಿಗರ ಜೀವನಕ್ಕೆ ಸಂಬಂಧಿಸಿದ ಹಾಗೂ ಸಂಶೋಧನಾತ್ಮಕ ಕಾದಂಬರಿಯೇ ಗುಡ್ಡದ ಸಿಂಗಾರಿ. ಶ್ರೀ ತಿರುಕರು ಈ ಕಾದಂಬರಿಯಲ್ಲಿ ಲಂಬಾಣಿಗರ ಜನಾಂಗದ ಪರಿಚಯವನ್ನು ಬಹು ಸ್ವಾರಸ್ಯಕರವಾದ ರೀತಿಯಲ್ಲಿ ಓದುಗರಿಗೆ ಮಾಡಿಕೊಟ್ಟಿದ್ದಾರೆ.

ಈ ಲಂಬಾಣಿಗರು ಮಥುರಾ, ಬೃಂದಾವನ ಮತ್ತು ಗೋಕುಲದ ಕಡೆಯವರು, ಹಾಗೂ ಇವರ ಮಾತೃಭಾಷೆ ವ್ರಜಭಾಷೆ ಎಂದು. ಉತ್ತರದಲ್ಲಿ ಮುಸಲ್ಮಾನರ ಧಾಳಿಗಳು ಹೆಚ್ಚಾದಾಗ, ಇವರು ದಕ್ಷಿಣದ ಕಡೆಗೆ ಬಂದು ನೆಲಸಿದರು. ಆಗ, ಎತ್ತಿನಮೇಲೆ ಲವಣವನ್ನು ಹೇರಿಕೊಂಡು ವ್ಯಾಪಾರಮಾಡಿ ತಮ್ಮ ಉಪಜೀವನವನ್ನು ಸಾಗಿಸುತ್ತಿದ್ದುದರಿಂದ ಇವರು ಲವಣಿಗಳು, ಎಂದು ಹೆಸರ್ಗೊಂಡರು. 'ಲವಣಿ' ಎಂಬ ಪದದ ಅಪಭ್ರಂಶವೇ 'ಲಂಬಾಣಿ.' ಇವರಿಗೆ 'ಸುಖಾಲಿಗಳು' ಎಂದೂ ಹೆಸರಿದೆ. ಆಂಧ್ರಪ್ರದೇಶದಲ್ಲಿ ಇವರನ್ನು ಸುಖಾಲಿಗಳೆಂದೇ ಕರೆಯುತ್ತಾರೆ. ಬಣಜಾರರು ಎಂದೂ ಇವರನ್ನು ಕರೆಯುತ್ತಾರೆ. ಇವರು ದಕ್ಷಿಣದ ಜನರೊಡನೆ ಬೆರೆಯದೆ, ಪ್ರತ್ಯೇಕವಾಗಿ ಊರ ಹೊರಗೆ ಜೀವಿಸುತ್ತಿರುವುದರಿಂದ ಇವರ ಉಡಿಗೆ-ತೊಡಿಗೆ, ಆಚಾರ ವಿಚಾರಗಳಲ್ಲಿ ಭಿನ್ನತೆ ಎದ್ದುಕಾಣುತ್ತದೆ. ಈ ಲಂಬಾಣಿಗರು ಕೃಷ್ಣನನ್ನು ಪೂಜಿಸುತ್ತಾರೆ. ಕೃಷ್ಣನನ್ನು 'ಕನ್ಹಯ್ಯಾ' ಅಥವಾ 'ಕಿಸನ್‌ಜೀ' ಎಂದು ಇವರು ಕರೆಯುತ್ತಾರೆ. ಶ್ರೀಕೃಷ್ಣನ ಬಗೆಗೆ ಅನೇಕ ಜಾನಪದ ಗೀತೆಗಳನ್ನು ಇವರು ಹಾಡುತ್ತಾರೆ. 'ಸೇವೋಬಾ' ಮತ್ತು 'ದಾದವೋಲ' ಇವರುಗಳು ಈಲಂಬಾಣಿಗರ ಮೂಲಪುರುಷರು ಮತ್ತು ಸಂತರು.

ಹೀಗೆ ಬೇರೆಯಾಗಿ ಅನಾಗರಿಕರಾಗಿ ಜೀವಿಸುತ್ತಿರುವ ಈ ಲಂಬಾಣಿಗರ ಸುಧಾರಣೆಯೇ ಈ ಕಾದಂಬರಿಯ ಕಥಾವಸ್ತು. ಪಟ್ಟಾಭಿರಾಮಯ್ಯನೆಂಬುವರು ಈ ಸುಧಾರಣೆಗೆ ಕೈಹಾಕಿ ಅದನ್ನು ಮಟ್ಟಿಗೆ ಯಶಸ್ವಿಯಾದದ್ದು ಮತ್ತು ಅದರ ಸುತ್ತಲೂ ಹಬ್ಬಿಸಿರುವ ಘಟನಾವಳಿಯ ಸುಂದರ ಹಂದರವನ್ನೊಳಗೊಂಡು ಕಾದಂಬರಿ ಓಡುತ್ತದೆ. ಪಾತ್ರ ಪೋಷಣೆ ಚೆನ್ನಾಗಿದೆ. ಜಾನಕಿ ಮಧುರಾಬಾಯಿಯರ ಪಾತ್ರಗಳು ಜೀವಂತವಾಗಿವೆ. ಭಾಷೆಯಲ್ಲಿ ಗ್ರಾಮ್ಯಭಾಷೆಯು ಬೆರೆತಿದೆ. ಕೆಲವು ಪುಟಗಳ ಜೋಡಣೆ ಅಸ್ತವ್ಯಸ್ತವಾಗಿದೆ. 'ಗುಡ್ಡದ' ಎನ್ನುವ ಪದಕ್ಕೆ ಬದಲಾಗಿ 'ಗುಡ್ಲದ' ಎಂಬ ಪದವನ್ನು ಪ್ರಯೋಗಿಸಲಾಗಿದೆ. (ಪುಟ ೪೪). ಇನ್ನೂ ಅನೇಕ ಪದಗಳು ಅಶುದ್ಧವಾಗಿವೆ. ಮುದ್ರಣ ಅಷ್ಟೇನೂ ಆಕರ್ಷಕವಾಗಿಲ್ಲ. ಇಂತಹ ಸಣ್ಣ ಸಣ್ಣ ದೋಷಗಳನ್ನು ಮುಂದಿನ ಮುದ್ರಣದಲ್ಲಿ ಸರಿಪಡಿಸುವರೆಂದು ನಂಬಬಹುದಾಗಿದೆ. ಈಗಾಗಲೇ ಅನೇಕ ಕಾಣಿಕೆಗಳನ್ನು ಕನ್ನಡ ಜನತೆಗಿತ್ತು ಚಿರಪರಿಚಿತರಾಗಿರುವ ಶ್ರೀ ತಿರುಕರ ಈ ಕಾದಂಬರಿಯೂ ಕೂಡ ಅಷ್ಟೇ ಜನಪ್ರಿಯವಾಗಲು ಅರ್ಹತೆಯನ್ನು ಪಡೆದಿದೆ-ಎಂದು ಧಾರಾಳವಾಗಿ ಹೇಳಬಹುದು.

**ಬಂಬೈ ಮಿಠಾಯಿ :** ಲೇಖಕರು : ಪರಶುರಾಮ ಚಿತ್ರಗಾರ ಮತ್ತು ಜಾಲಿಹಾಳ ಜಿ. ವಿಜಾಪುರ. ಸಂಪಾದಕರು 'ಸಿಸು' ಸಂಗಮೇಶ. ಪ್ರಕಾಶಕರು : 'ಹರಿಹರ' ಭಾರತಿ ಸಾಹಿತ್ಯ ಭಂಡಾರ, ವಿಜಾಪುರ. ಪುಟಗಳು : ೩೩ ಬೆಲೆ ೫೦ ನ. ಪೈ. ಆಕಾರ ಫುಲ್ಸ್‌ಕೇಪಿನ ಅರ್ಧ.

ಮಕ್ಕಳಿಗಾಗಿ ಬರೆದ ಕೆಲವು ಕವಿತೆಗಳ ಸಂಗ್ರಹವೇ 'ಬಂಬೈ ಮಿಠಾಯಿ.' ಇದರಲ್ಲಿ ವಿಧವಿಧದ ಕವಿತೆಗಳಡಗಿವೆ. ಪರಕೆ, ಶಿವನಬುಟ್ಟಿ, ಪತಂಗ, ಕೊಡಿ, ಗಂಟೆಯಗಾಲಿ, ಬಂಬೈಮಿಠಾಯಿ, ಬಣ್ಣದ ಬೀಸಣಿಗೆ - ಇವುಗಳು ಮಕ್ಕಳ ನೋಟಕ್ಕೆ ಹೇಗೋ ಹಾಗೆ ಕಾಣುವಂತೆ ಲಿಖಿತವಾಗಿದೆ. ತಾಯಿಯ ಪೂಜ್ಯತೆಯನ್ನು 'ತಾಯಿ' ಎಂಬ ಕವಿತೆಯಲ್ಲಿಯೂ, ಬೆಕ್ಕಿನ ಒಳ್ಳೆಯತನವನ್ನು ಮುದ್ದುಬೆಕ್ಕು ಎಂಬುದರಲ್ಲಿಯೂ ಠಕ್ಕತನವನ್ನು 'ಕಾಮಿ' ಎಂಬ ಕವಿತೆಯಲ್ಲಿಯೂ ನಿರೂಪಿಸಲಾಗಿದೆ. ಮಕ್ಕಳ ಅಂಗಡಿಯಾಟದ ದೃಶ್ಯವನ್ನು 'ಕಿಟ್ಟನ ಅಂಗಡಿ' ಎಂಬ ಕವಿತೆಯಲ್ಲಿಯೂ, - 'ಡೊಂಬರಾಟ'ದಲ್ಲಿ ಡೊಂಬರಕುಣಿತವನ್ನು ವರ್ಣಿಸಲಾಗಿದೆ. ಇಂದಿನ ಪರಿಸ್ಥಿತಿಯ ಅರಿವು ಮೂಡಿಸುವ ಕವಿತೆಗಳು, 'ನಾಡಸೇವೆಗೆ ಬನ್ನಿರಿ' ಮತ್ತು 'ವಿನೋಬಾ.' ಉಳಿದ ಕವಿತೆಗಳೂ ಓದಲರ್ಹವಾಗಿವೆ. ಮಕ್ಕಳನ್ನು ಆಕರ್ಷಿಸಲು ಚಿತ್ರಗಳಿವೆ. ಮುದ್ರಣ ಅಂದವಾಗಿದೆ; ಆಕರ್ಷಕವಾಗಿದೆ; ಮಕ್ಕಳಿಗೆ ತಕ್ಕಂಥದ್ದಾಗಿದೆ. ಲೇಖಕರಿಗೆ 'ಜೊಕ್ಕಟ' ಎಂಬ ಕನ್ನಡಪದ ಹೊಳೆಯಲಿಲ್ಲವೇನೋ. ಸಫಾಯಿ ಎಂಬ ಹಿಂದಿ ಪದವನ್ನೇ ಬಳಸಿದ್ದಾರೆ. ಇಬ್ಬರು ಲೇಖಕರು ಇರುವುದರಿಂದ ಯಾವ ಕವಿತೆ ಯಾರು ಬರೆದಿದ್ದಾರೆಂಬುದು ತಿಳಿಯುವುದಿಲ್ಲ. ಆದರೂ ಶಿಶುಸಾಹಿತ್ಯಕ್ಕೆ ಇದೊಂದು ಉತ್ತಮ ಕಾಣಿಕೆಯೆಂದು ಹೇಳಬಹುದು. ಶ್ರೀ 'ಸಿಸು' ಸಂಗಮೇಶರ ಇತರ ಕೃತಿಗಳಂತೆ ಇದೂ ಕೂಡ ಜನಪ್ರಿಯವಾಗಲೆಂದು, ಇವನ್ನೂ ಮಕ್ಕಳು ಹೆಚ್ಚು ಹೆಚ್ಚಾಗಿ ಓದಲೆಂದು ಹಾರೈಸುತ್ತೇನೆ.

—'ವನವಿಹಾರಿ'

**ಬಿಸಿಲ ಹೂ :** ಕವನ ಸಂಗ್ರಹ. ಲೇಖಕರು : ಶ್ರೀ ಸೋಮಶೇಖರ ಜಿ. ಇಮ್ರಾಪೂರ, ಪ್ರಕಾಶಕರು : ಶ್ರೀ ಸೋಮಶೇಖರ ಜಿ. ಇಮ್ರಾಪೂರ, ಸ್ನೇಹಕುಂಜ, ಜನತಾ ಕಾಲೇಜು, ಧಾರವಾಡ, ಪುಟಗಳು : ೬೨, ಬೆಲೆ : ಒಂದು ರೂಪಾಯಿ, ಆಕಾರ : ಕಿರೀಟ ಅಷ್ಟದಳ.

ಲೇಖಕರೇ ಹೇಳಿಕೊಂಡಿರುವಂತೆ - ಈ ಸಂಗ್ರಹ ಅವರ 'ಮೊದಲಮಗು' ಇದರಲ್ಲಿ ನಲವತ್ತು ಕವಿತೆಗಳಿವೆ. 'ಹುಟ್ಟಿದೂರು' ಎಂಬ ಕವಿತೆಯಲ್ಲಿ ತೌರೂರ ಮಮತೆ ಎದ್ದು ಕಾಣುತ್ತದೆ. 'ಚಪ್ಪಲಾವತಾರ' ದಲ್ಲಿ ಅನೇಕ ಬಗೆಯ ಪಾದರಕ್ಷೆಗಳ ವರ್ಣನೆಯಿದೆ. 'ಹಸನಾಯ್ತು ಮಣ್ಣಜೀವ' ದಲ್ಲಿ ಅಗಲಿದ ಅಣ್ಣನನ್ನು ನೆನೆದಿದ್ದಾರೆ - ಲೇಖಕರು. 'ಯಾರದೇನಿದೆ' ಎಂಬ ಕವನದಲ್ಲಿ ಜೀವನವು ನಶ್ವರ - ಎಂದು ಸಾರಿದ್ದಾರೆ. '. . . ಗೆ' ಎಂಬ ಕವಿತೆಯಲ್ಲಿ ಒಲುಮೆಯ ಪತ್ನಿಗೆ ಆದರದ ಸ್ವಾಗತವಿದೆ. 'ಏಳಿತರುಣ ವೃಂದವೆ' 'ಭಾರತಿಗೆ ಜಯತಿಲಕ', 'ಯುದ್ಧ ಬಂತು ಎದೆಗೆ' 'ತಾಯಿ ಕರೆಯುತಿಹಳು,' ಮತ್ತು 'ಆರಿಲ್ಲ ಇನ್ನೂ ಧವಳಗಿರಿಜ್ವಾಲೆ,' 'ಸತ್ಯಮೇವ ಜಯತೆ' - ಎಂಬ ಕವನಗಳಲ್ಲಿ ಲೇಖಕರ ರಾಷ್ಟ್ರಭಕ್ತಿ ಹೊರಹೊಮ್ಮಿದೆ. ಈ ಐದೂ ಕವನಗಳು ಧಾರವಾಡದ ಆಕಾಶವಾಣಿಯಿಂದ ಪ್ರಸಾರವಾಗಿವೆ. 'ತಂಗೆವ್ವನಿನಗಾಗಿ' ಕವನದಲ್ಲಿ ಸೋದರಿಯ ಮೇಲಿನ ಮಮತೆ ಮೂಡಿ ಬಂದಿದೆ. 'ಶ್ರದ್ಧಾಂಜಲಿ' ಯನ್ನು ಲೇಖಕರು ದಿ|| ಹುಕ್ಕೇರಿಕರ ರಾಮರಾಯರಿಗೆ ಅರ್ಪಿಸಿದ್ದಾರೆ. 'ನಿನಗಂತ ಬರಿತೀನಿ ಇದನಾ' ಮತ್ತು 'ಮಾಡತಾರ ಏನ ಮಂಗನಾಂಗ' - ಈ ಕವನಗಳಲ್ಲಿ ರಸಿಕತೆ ಹಾಗೂ ಹಾಸ್ಯರಸವೂ ಚಿಮ್ಮಿದೆ. 'ಸೃಷ್ಟಿ - ಸವಿ' ಪ್ರಕೃತಿಯನ್ನು ಕುರಿತಾದ ಕವನ. 'ಹೂ ಬಿಸಿಲಿನಾಗ,' 'ಬಿಸಿಲ ಹೂ' ಉತ್ತಮ ದರ್ಜೆಯವು.

ಈ ನಲವತ್ತು ಕವನಗಳಲ್ಲಿ ಲೇಖಕರ ಕಾವ್ಯಪ್ರತಿಭೆ ಹೊರಹೊಮ್ಮಿದೆ. ತಮ್ಮ ಅನುಭವದಲ್ಲಿ ಮೂಡಿಬಂದುದನ್ನು ಕವನಗಳ ಮೂಲಕ ಲೇಖಕರು ಚಿತ್ರಿಸಿದ್ದಾರೆ. ಶ್ರೀ ಚಂದ್ರಶೇಖರ ಪಾಟೀಲರು 'ನಲುಮೆಯ ನಾಲ್ಕು ಮಾತು' ಗಳನ್ನು ಹೇಳಿದ್ದಾರೆ. ಶ್ರೀ ರಾ. ಯ. ಧಾರವಾಡಕರರ ಮುನ್ನುಡಿಯಿಂದ ಈ ಪುಟ್ಟಹೊತ್ತಿಗೆ ಮತ್ತಷ್ಟು ಶೋಭಿಸಿದೆ. ಈ ಲೇಖಕರಿಂದ ಇನ್ನೂ ಇಂಥ ಕಾವ್ಯಕುಸುಮಗಳನ್ನು ನಾವು ನಿರೀಕ್ಷಿಸಬಹುದು.

**ಪ್ರಜಾ ಪ್ರಭುತ್ವ :** ನಾಲ್ಕು ಏಕಾಂಕ ನಾಟಕಗಳು. ಲೇಖಕರು : ಶ್ರೀ 'ಜೀವಿ' ಕುಲಕರ್ಣಿ. ಪ್ರಕಾಶಕರು : ಲಲಿತ ಸಾಹಿತ್ಯ ಮಾಲೆ, ಧಾರವಾಡ : ಪುಟಗಳು : ೧೦೪. ಬೆಲೆ : ಸಾದಾಪ್ರತಿ ೧-೫೦, ಉತ್ತಮ ಪ್ರತಿ : ೨-೨೫ : ಆಕಾರ : ಕಿರೀಟ ಅಷ್ಟದಳ.

ಈ ಸಂಗ್ರಹದಲ್ಲಿ ಪ್ರಜಾಪ್ರಭುತ್ವ, ಗೃಹಿಣೀ ಗೃಹಮುಚ್ಯತೆ, ಗುಂಡನ ಮದುವೆ, ಎಲ್ಲಿದೆ ನರಕ - ಎಂಬೀ ನಾಲ್ಕು ನಾಟಕಗಳಿವೆ. ಮೊದಲನೆಯದಾದ ಪ್ರಜಾಪ್ರಭುತ್ವದಲ್ಲಿ ನಾಗರಿಕರ ಹಾಗೂ ಸುಶಿಕ್ಷಿತರ ವರ್ತನೆಯನ್ನು ಮನಗಾಣಬಹುದು. ಮಿಲ್ ಕೂಲಿಕಾರರಿಬ್ಬರು, ಪಂಡಿತರೊಬ್ಬರು, ಮಹಿಳಾ ಮಂಡಲದ ಇಬ್ಬರು ಕಾರ್ಯಕರ್ತೆಯರು, ಇಬ್ಬರು ಪ್ರೊಫೆಸರ್, ಒಬ್ಬಡಾಕ್ಟರ್, ಒಬ್ಬ ವಕೀಲರು - ಇಷ್ಟುಮಂದಿಯೂ ರಸ್ತೆಯಲ್ಲಿ ಸತ್ತುಬಿದ್ದಿದ್ದ

ನಾಯಿಯೊಂದನ್ನು ನೋಡಿ, ಮೂಗು ಮುಚ್ಚಿಕೊಂಡು ತಂತಮ್ಮಲ್ಲಿ ತರ್ಕ ವಿತರ್ಕಗಳನ್ನು ಮಾಡಿಕೊಂಡು ಹೊರಟು ಹೋಗುವರು. ಕಡೆಗೆ ಸಾಮಾನ್ಯ ಕೂಲಿಗಾರನೊಬ್ಬನು ಆ ನಾಯಿಯನ್ನು ನೋಡಿ ತಾನು ಒಡನೆ ತಂದಿದ್ದ ಗುದ್ದಲಿಯಿಂದ ಹಳ್ಳವನ್ನು ತಗೆದು ಹೂಳಿ, ಮುಂದೆ ಹೋಗುತ್ತಾನೆ. ಈ ನಾಟಕದಲ್ಲಿ ನಿರೀಕ್ಷಕನೂ ಇರುವುದು ಒಂದು ವೈಶಿಷ್ಟ್ಯವಾಗಿದೆ.

ಎರಡನೆಯದು 'ಗೃಹಿಣೀ ಗೃಹಮುಚ್ಯತೇ' ಎಂಬುದು. ಬಾಡಿಗೆ ಮನೆ ಸಿಕ್ಕುವುದೇ ಅತಿಕಷ್ಟವೆನಿಸಿರುವ ಮುಂಬಯಿ ನಗರದಲ್ಲಿ, ಗೃಹಸ್ಥರಿಗೆ ಮಾತ್ರ ಮನೆಯನ್ನು ಬಾಡಿಗೆಗೆ ಕೊಡುವೆನೆಂದು ಹಠಹಿಡಿದು ಕುಳಿತಿದ್ದ ಮಾಲೀಕ ರಾಮರಾಯರ ಕಣ್ಣಿಗೆ ಮಣ್ಣೆರಚುವುದಕ್ಕಾಗಿ ಗೆಳೆಯರಿಬ್ಬರು ಗಂಡ ಹೆಂಡತಿಯರಂತೆ ನಾಟಕವಾಡಿ ಮನೆಯನ್ನು ಬಾಡಿಗೆಗೆ ದೊರಕಿಸಿಕೊಂಡ ವಿಷಯ ಅಡಕವಾಗಿದೆ. ಮಾಲೀಕನ ಪತ್ನಿಗೆ ಕನ್ನಡ ಬಾರದು. ಆಕೆಯ ಸಂಭಾಷಣೆಯೆಲ್ಲ ಮರಾಠಿಯಲ್ಲೇ ಇದೆ. ಕಡೆಗೆ ಗೆಳೆಯರ ಗುಟ್ಟುರಟ್ಟಾಗಿ ಬಾಡಿಗೆದಾರರಿಗೂ, ಮಾಲಿಕರಿಗೂ ಹಣಾಹಣಿ ಆರಂಭವಾದಾಗ ಮಾಲೀಕರ ಗೆಳೆಯ ಗೋವಿಂದರಾಯರು ಮಧ್ಯೆ ಪ್ರವೇಶಿಸುವರು. ಗೆಳೆಯರಿಬ್ಬರೂ ಗೋವಿಂದರಾಯರ ಬಂಧುಗಳೇ ಆಗಿದ್ದ ವಿಷಯ ಹೊರಬಿದ್ದು, ಗೋವಿಂದರಾಯರೇ ಮಧ್ಯಸ್ಥಿಕೆ ವಹಿಸಿ ಮಾಲಿಕರ ಇಬ್ಬರು ಹೆಣ್ಣುಮಕ್ಕಳನ್ನೂ ಇಬ್ಬರು ಗೆಳೆಯರಿಗೂ ಕೊಟ್ಟು, ಲಗ್ನ ಮಾಡಿಸಿ ಅವರನ್ನು ಗೃಹಸ್ಥರನ್ನಾಗಿ ಮಾಡುವರು. ಈ ನಾಟಕದಲ್ಲಿ ಸಾಕಷ್ಟು ಮರಾಠಿ ಭಾಷೆಯು ಬೆರೆತಿರುವುದರಿಂದ ಕನ್ನಡ, ಮರಾಠಿಗಳನ್ನರಿತಿರುವವರಿಂದ ಮಾತ್ರ ಈ ನಾಟಕವಾಡಲು ಸಾಧ್ಯ.

ಮೂರನೆ ನಾಟಕ 'ಗುಂಡನ ಮದುವೆ' ಇದು ಹಾಸ್ಯ ಪ್ರಧಾನವಾಗಿದೆ. ಶ್ರೀಮಂತ ಜಮೀನ್ದಾರನೊಬ್ಬ, ತನ್ನ ಏಕಮಾತ್ರ ಪುತ್ರ ಹಾಗೂ ಪೆದ್ದನೆಂದು ಬಿರುದು ಹೊಂದಿದ್ದ ಗುಂಡನ ಮದುವೆಗಾಗಿ ಬಹು ಪ್ರಯಾಸಪಟ್ಟು ಪ್ರಯತ್ನಿಸುವನು. ಆಗ 'ಪೆದ್ದ' ಗುಂಡನು ತನ್ನನ್ನು ಲಗ್ನವಾಗಲು ಗೊತ್ತಾಗಿದ್ದ ಕನ್ಯೆಯ ಮುಂದೆ ತನ್ನ ದಡ್ಡತನವನ್ನು ಪ್ರದರ್ಶಿಸಿ ನಗೆಗೀಡಾಗುವನು. ಇದರಿಂದಾಗಿ ಲಗ್ನವು ತಪ್ಪಿ ಜಮೀನುದಾರನ ಶ್ರಮವೆಲ್ಲ ನೀರಿನಲ್ಲಿ ಹೋಮ ಮಾಡಿದಂತಾಗುವುದು.

ಕಡೆಯ ನಾಟಕ 'ಎಲ್ಲಿದೆ ನರಕ' – ಎಂಬುದು. ಇದರಲ್ಲಿ ಸಮಾಜದ ಹಲವಾರು ಲೋಪದೋಷಗಳನ್ನು ನಾವು ಕಾಣಬಹುದು. ಭೂಲೋಕದಲ್ಲಿ ತಪ್ಪು ಮಾಡಿದ್ದರೆಂದು ನರಕಕ್ಕೆ ಎಳೆತರಲಾಗಿದ್ದ ಹಾಲುಮಾರುವ ಭಯ್ಯಾ, ಸೇಠ್‌ಜಿ, ಪಿಂಟೋ ಡಾಕ್ಟರು, ದೇಶಭಕ್ತ – ಇವರುಗಳು ಸಾಕ್ಷಾತ್ ಯಮಧರ್ಮನೇ ನ್ಯಾಯಾಧೀಶನಾಗಿದ್ದ ಸುಪ್ರೀಂ ಕೋರ್ಟಿನಲ್ಲಿ ಆರೋಪಿಗಳಾಗಿರುತ್ತಾರೆ. ಭೂಲೋಕದ ನ್ಯಾಯಾಲಯದಲ್ಲಿರುವಂತೆ ಈ ಕೋರ್ಟಿನಲ್ಲಿ ಯಮಲೋಕದವರು ಪಾತ್ರಧಾರಿಗಳಾಗುತ್ತಾರೆ. ನರಕವೆಂಬ ಒಂದು ಲೋಕ ಇರುವುದು ನಿಜವೇ ಆಗಿದ್ದಲ್ಲಿ – ಈ ಭೂಲೋಕವೆಂಬುದು ಅದಕ್ಕಿಂತ ಹೆಚ್ಚಿನ ನರಕ – ಎಂದು ಲೇಖಕರು ವಿಷಾದದಿಂದ ತಿಳಿಸಹೊರಟಿದ್ದಾರೆ.

ಈಗಾಗಲೇ ಕನ್ನಡಿಗರಿಗೆ ಸಾಕಷ್ಟು ಪರಿಚಯವಿರುವ ಶ್ರೀ 'ಜೀವಿ' ಯವರ ಈ ನಾಟಕಗಳು ಜೀವಕಳೆಯಿಂದ ತುಂಬಿವೆ. ಸಂಭಾಷಣೆ, ವಿಷಯ ನಿರೂಪಣೆಗಳಲ್ಲಿ ತಿಳಿಯಾದ ಹಾಸ್ಯವಿದೆ. ಕಾಲೇಜು ವಿದ್ಯಾರ್ಥಿಗಳು ಅಭಿನಯಿಸಲು ಯೋಗ್ಯವಾಗಿದೆ. ಮೂರು, ನಾಲ್ಕನೆಯ ನಾಟಕಗಳಲ್ಲಿ ಸ್ತ್ರೀ ಪಾತ್ರಗಳೇ ಇಲ್ಲದಿರುವುದು ಒಂದು ವೈಶಿಷ್ಟ್ಯ.

ಮುನ್ನುಡಿಕಾರರಾದ ಶ್ರೀ ಚಿದಂಬರ ಕುಲಕರ್ಣಿಯವರು ತಿಳಿಸಿರುವಂತೆ ಶ್ರೀ 'ಜೀವಿ' ಯವರು ತಾವೇ ನಟರೂ, ದಿಗ್ದರ್ಶಕರೂ ಆಗಿರುವುದರಿಂದ ನಾಟಕಗಳು ಶ್ರೇಷ್ಠ ದರ್ಜೆಯವೆನ್ನಲು ಅಡ್ಡಿಯಿಲ್ಲ. ರಂಗಭೂಮಿಯ ಮೇಲೆ ನಾಟಕವಾಡಿ ಅದು ಯಶಸ್ವಿಯಾಯಿತೆಂದ ಮೇಲೆ ಈ ನಾಟಕಗಳು ಪುಸ್ತಕರೂಪದಲ್ಲಿ ಹೊರಬಿದ್ದಿವೆ. ಮರಾಠಿ ಪದಗಳ ಪ್ರಯೋಗ, ಸಂಭಾಷಣೆಗಳನ್ನು ಬಿಟ್ಟರೆ ಮಿಕ್ಕೆಲ್ಲ ದೃಷ್ಟಿಯಿಂದ ಇವು ಉತ್ತಮ ದರ್ಜೆಯವು. ಈ ಲೇಖಕರಿಂದ ಇಂತಹ ಇನ್ನೂ ಹಲವಾರು ನಾಟಕಗಳು ಹೊರಬಿದ್ದು ನಾಟಕಪ್ರಿಯರಿಗೆ ರಸದೌತಣಸಿಗಲೆಂದು ಹಾರೈಸುತ್ತೇನೆ.

—ಬ. ನ. ಸುಂ.

ನ್ಯೂ ಟೈಪ್ ಕನ್ನಡ ಟೀಚರ್ : ಲೇಖಕರು: ಶ್ರೀ ಜಹೀರುದ್ದೀನ್ ಅಹಮದ್ ; ಪ್ರಕಾಶಕರು: ಶ್ರೀ ಜಹೀರುದ್ದೀನ್ ಅಹಮದ್ ; ಆಕಾರ ೧/೮ ಡೆಮ್ಮಿ ; ಪುಟಗಳು: ೧೦೦ ; ಬೆಲೆ: ೧–೨೫ ನ. ಪೈ.

ಶ್ರೀ ಜಹೀರುದ್ದೀನ್ ರವರು ಬರೆದಿರುವ 'ನ್ಯೂ ಟೈಪ್ ಕನ್ನಡ ಟೀಚರ್' ಒಂದು ಉಪಯುಕ್ತ ಪುಸ್ತಕ. ಉರ್ದು ಭಾಷೆ ಬಲ್ಲವರು ಕನ್ನಡ ಕಲಿಯಲು ಸಹಕಾರಿಯಾಗಿದೆ. ಕನ್ನಡದ ಅಕ್ಷರಮಾಲೆ, ಸ್ವರ, ವ್ಯಂಜನ, ಮತ್ತು ಕಾಗುಣಿತ ಇವಕ್ಕೂ ಉರ್ದುವಿನ ಅಲೀಫ್, ಬೇ, ಸೇ, ಜಬರ್, ಮತ್ತು ಪೇಷ್ ಗಳಿಗೂ ಇರುವ ತಾರತಮ್ಯ ಬಹಳ. ಈ ಎರಡು ಭಾಷೆಗಳ ಬರವಣಿಗೆಯ ರೀತಿಯಲ್ಲೂ ಬಹಳ ತಾರತಮ್ಯವಿದೆ.

ಏಕೆಂದರೆ ಕನ್ನಡವನ್ನು ಎಡಗಡೆಯಿಂದ ಬಲಗಡೆಗೆ ಬರೆದರೆ, ಉರ್ದುವನ್ನು ಬಲಗಡೆಯಿಂದ ಎಡಗಡೆಗೆ ಬರೆಯಬೇಕು. ಉರ್ದುವಿನ ವ್ಯಾಕರಣದಲ್ಲಿ ಕೆಲವು ವೇಳೆ ಕರ್ಮಪದವು ಕ್ರಿಯಾಪದದೊಡನೆ ಹೊಂದುತ್ತದೆ. ಆದರೆ ಲೇಖಕರು ವ್ಯಾಕರಣದ ಗೋಜಿಗೆ ಹೋಗದೆ ನಿತ್ಯ ವ್ಯವಹಾರ ಪದಗಳನ್ನು ಬಳಸಿಕೊಂಡು ಉರ್ದು ಬಲ್ಲವರು ಕನ್ನಡವನ್ನು ಬೇಗ ಕಲಿಯಲು ತಮ್ಮ ಈ ಪುಸ್ತಕದ ಮೂಲಕ ಸಹಕಾರ ನೀಡಿದ್ದಾರೆ.

ಕನ್ನಡ ಪದಗಳ ಉಚ್ಚಾರಣೆಯನ್ನು ಉರ್ದೂ ಪದಗಳ ಸಹಾಯದಿಂದ ತಿಳಿದು ಕೊಳ್ಳುವಂತೆ ಮಾಡಿರುವುದು ಮತ್ತೂ ಸಹಕಾರಿಯಾಗಿದೆ. ಪ್ರಥಮ ಬಾರಿಗೆ ಪ್ರಕಟವಾಗಿರುವಂತಹ ಈ ಬಗೆಯ ಉರ್ದು ಕನ್ನಡ ಪುಸ್ತಕ ನಿಜಕ್ಕೂ ಸ್ವಾಗತಾರ್ಹ. ಇದರಿಂದ ಉರ್ದು ತಿಳಿದವರು ಕನ್ನಡವನ್ನು ಬಹಳ ಬೇಗನೆ ಕಲಿಯಲು ಸಾಧ್ಯವಾಗಿದೆ.

ಕನ್ನಡ ನಾಡಿನಲ್ಲಿ ಈಗ ಕನ್ನಡವೇ ವ್ಯವಹಾರ ಭಾಷೆ. ಇದರಿಂದ ಉರ್ದು ಮಾತನಾಡುವವರಿಗೆ ಕನ್ನಡವೇನೂ ಹೊಸ ಭಾಷೆಯಲ್ಲ. ಆದರೆ ಕನ್ನಡವನ್ನು ಓದುವುದನ್ನು ಕಲಿಯಲು ಕನ್ನಡ ಭಾಷೆಯ ರೂಪ ಮತ್ತು ವೈಖರಿಯನ್ನು ತಿಳಿಯಲು ಈ ಪುಸ್ತಕ ಬಹಳ ಪ್ರಯೋಜನಕಾರಿ. ಮುಸ್ಲಿಂ ಬಾಂಧವರು ಇದರ ಪ್ರಯೋಜನವನ್ನು ಸಂಪೂರ್ಣವಾಗಿ ಪಡೆಯುವರೆಂದು ನಂಬಿದ್ದೇನೆ.

— ಎಂ. ಫಜ್ಲುಲ್ ಹಸನ್.

---

# 'ಶರಣ ಸಾಹಿತ್ಯ' ಪತ್ರಿಕೆಯ ೨೭ನೇ ವಾರ್ಷಿಕೋತ್ಸವ

ತಾ|| ೧೫-೪-೬೪ ರಂದು ಶರಣ ಸಾಹಿತ್ಯದ ಇಪ್ಪತ್ತೇಳನೆಯ ವಾರ್ಷಿಕೋತ್ಸವವನ್ನು ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ವಿಜೃಂಭಣೆಯಿಂದ ಆಚರಿಸಲಾಯಿತು.

ಶರಣ ಸಾಹಿತ್ಯದ ಸಂಪಾದಕರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಯವರು ಸಾರಿಗೆ ಕಾರ್ಮಿಕ, ವಸತಿ ಖಾತೆ ಸಚಿವ ಶ್ರೀ ಡಿ. ದೇವರಾಜ ಅರಸ್‌ರವರ ಅಧ್ಯಕ್ಷತೆಯಲ್ಲಿ ೨೭ ನೇ ವಾರ್ಷಿಕೋತ್ಸವ ಸಮಾರಂಭವನ್ನು ಏರ್ಪಡಿಸಿದ್ದರು. ಶ್ರೀ ಶ್ರೀ ಉರವಕೊಂಡ ಮಹಾಸ್ವಾಮಿಗಳು ಆಶೀರ್ವಚನ ಭಾಷಣ ಮಾಡಿದರು.

ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎಂ. ಪಿ. ಎಲ್. ಶಾಸ್ತ್ರಿಯವರು ಕಾರ್ಯಾಲಯಕ್ಕಾಗಿ ಅರ್ಪಿಸಲ್ಪಟ್ಟಿದ್ದ ವಿಶ್ವಕವಿ ರವೀಂದ್ರನಾಥ ಠಾಕೂರರ ಭಾವಚಿತ್ರ ಅನಾವರಣ ಮಾಡಿದರು.

ಆಶೀರ್ವಚನ ಭಾಷಣ ಮಾಡಿದ ಶ್ರೀ ಶ್ರೀಗಳವರೂ, ಶ್ರೀ ಎಂ. ಪಿ. ಎಲ್. ಶಾಸ್ತ್ರಿಯವರೂ ಅಧ್ಯಕ್ಷಭಾಷಣ ಮಾಡಿದ ಸಚಿವರೂ ರಾಷ್ಟ್ರ ಬೆಳವಣಿಗೆಗೆ ಕಾರಣವಾದ ನಿರ್ಮಲ ಸಾಹಿತ್ಯದ ಬಗ್ಗೆ ಒತ್ತಿ ಹೇಳಿದರಲ್ಲದೆ ಇಂದು ಸಾಹಿತ್ಯ ಸರಿಯಾದ ರೀತಿಯಲ್ಲಿ ಅಭಿವೃದ್ಧಿ ಆಗುತ್ತಿಲ್ಲವೆಂದು ವಿಷಾದ ವ್ಯಕ್ತಪಡಿಸಿದರು.

ಶ್ರೀ ಶ್ರೀಗಳವರು ಆಶೀರ್ವಚನ ಭಾಷಣ ಮಾಡುತ್ತ ಉಚ್ಚಮಟ್ಟದ ಸಾಹಿತ್ಯ ನಿರ್ಮಾಣವಾಗಿ ಜನಜೀವನ ಮತ್ತು ನಡತೆ ಪರಿಶುದ್ಧವಾಗುವಂತಾಗಬೇಕೆಂದರು.

ಶ್ರೀ ಎಂ. ಪಿ. ಎಲ್. ಶಾಸ್ತ್ರಿಯವರು ರವೀಂದ್ರನಾಥ ಠಾಕೂರರ ಭಾವಚಿತ್ರ ಅನಾವರಣ ಮಾಡಿ ಅವರ ದೇಶಪ್ರೇಮ ಮತ್ತು ಸಾಹಿತ್ಯದ ನಿರ್ಮಲವಾದ ವೈವಿಧ್ಯತೆಯನ್ನು ವಿವರಿಸಿ ನಿರ್ಮಲವಾದ ಉಚ್ಚಮಟ್ಟದ ಸಾಹಿತ್ಯದಿಂದ ಅವರು ರಾಷ್ಟ್ರಕ್ಕೆ ಗೌರವ ತಂದಿದ್ದಾರೆ ಎಂದರು.

ಇಂದಿನ ಸಾಹಿತ್ಯದ ಬಗ್ಗೆ ಶ್ರೀ ಶಾಸ್ತ್ರಿಯವರು ಪ್ರಸ್ತಾಪಿಸಿ, ಅಶ್ಲೀಲ ಸಾಹಿತ್ಯದ ಬಗೆಗೆ ಎಲ್ಲರೂ ತಲೆತಗ್ಗಿಸುವಂತಹುದಾಗಿದೆ ಎಂದರು.

ಅಧ್ಯಕ್ಷತೆ ವಹಿಸಿದ್ದ ಸಚಿವ ಶ್ರೀ ಡಿ. ದೇವರಾಜ ಅರಸ್‌ರವರು ಮಾತನಾಡಿ ರಾಷ್ಟ್ರಪ್ರೇಮ ತುಂಬುವ, ರಾಜ್ಯಾಂಗದ ಗುರಿ ಸಾಧಿಸಲು ಅನುಕೂಲವಾಗುವಂತಹ ಸಾಹಿತ್ಯ ಸೃಷ್ಟಿಯಾಗಬೇಕೆಂದೂ, ವ್ಯಕ್ತಿ ನಿಷ್ಠೆಗಿಂತ ಸಮಾಜನಿಷ್ಠೆ ದೃಷ್ಟಿಯಿಂದ ಸಾಹಿತ್ಯ ರಚಿಸಬೇಕೆಂದೂ ತಿಳಿಸಿದರು.

ಪ್ರಾರಂಭದಲ್ಲಿ ಪ್ರಾರ್ಥನೆಯಾದ ಮೇಲೆ ಶರಣಸಾಹಿತ್ಯ ಸಂಪಾದಕರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಯವರು ಸ್ವಾಗತ ಭಾಷಣ ಮಾಡಿ ಶರಣ ಸಾಹಿತ್ಯ ೧೯೩೭ನೇ ಸಾಲಿನಲ್ಲಿ ಪ್ರಾರಂಭವಾಗಿ ದೇವರ ಕೃಪೆಯಿಂದ ನಡೆದುಕೊಂಡು ಬರುತ್ತಿದೆ ಎಂದರು.

ಕೊನೆಯಲ್ಲಿ ಶ್ರೀ ಎಚ್. ಎಸ್. ರೇಣುಕಾಪ್ರಸಾದ್‌ರವರು ವಂದನಾರ್ಪಣ ಮಾಡಿದರು.

ಈ ಉತ್ಸವಕ್ಕೆ ಶುಭವನ್ನು ಕೋರಿ ಶ್ರೀ ಚಿತ್ರದುರ್ಗ ಜಗದ್ಗುರು ಜಯವಿಭವ ಮಹಾಸ್ವಾಮಿಗಳು, ಶ್ರೀ ಸುತ್ತೂರು ಜಗದ್ಗುರು ಶಿವರಾತ್ರಿಸ್ವಾಮಿಗಳು, ಶ್ರೀ ಸರ್ಪಭೂಷಣ ಮಠ, ಶ್ರೀ ಗೋಕರ್ಣ ವೀರಶೈವ ಮಠ, ಶ್ರೀ ಹಲಗೂರು ವಿರಕ್ತ ಮಠ, ಶ್ರೀ ನಿಡುಮಾಮಿಡಿ ಜಗದ್ಗುರುಗಳು, ಮೈಸೂರು ಮುಖ್ಯಮಂತ್ರಿಗಳು, ದಿಲ್ಲಿಯಿಂದ ಶ್ರೀ ಹೆಚ್. ಸಿ. ದಾಸಪ್ಪನವರು, ಶ್ರೀ ನಿಟ್ಟೂರು ಶ್ರೀನಿವಾಸರಾಯರು, ಉಡುಪಿಯಿಂದ ಡಾ|| ಟಿ. ಎಂ. ಎ. ಪೈ ಅವರು, ಧರ್ಮಸ್ಥಳದಿಂದ ಶ್ರೀ ಡಿ. ಆರ್. ಹೆಗ್ಗಡೆಯವರು, ಸಹಕಾರ ಮಂತ್ರಿ ಶ್ರೀ ರಾಮಕೃಷ್ಣ ಹೆಗ್ಗಡೆ, ಶ್ರೀ ಅರ್ಚಿಕ ವೆಂಕಟೇಶ್, ಶ್ರೀ ಎಂ. ವಿ. ಸೀತಾರಾಮಯ್ಯ, ಉದಕಮಂಡಲ ವೀರಶೈವಾಶ್ರಮದ ಶ್ರೀ ಸಿದ್ಧಲಿಂಗಸ್ವಾಮಿಗಳು, ಕೋಲಾರದ ಶ್ರೀ ಕೆ. ಪಿ. ರಾಮರ್‌ರವರು, ಸುರತ್ಕಲ್ ಕೆ. ವೆಂಕಟರಾಯಾಚಾರ್ಯರು ಮೊದಲಾದವರು ಸಂದೇಶ ಕಳಿಸಿದ್ದರು.

ಈ ಉತ್ಸವ ಕಾಲದಲ್ಲಿ ಶರಣ ಸಾಹಿತ್ಯದ ಬಳಗದವರಾದ ವಿದ್ವಾನ್ ಎಚ್. ಕೆ. ಎ. ಎನ್. ಶಾಸ್ತ್ರಿಗಳು, ವಿದ್ವಾನ್ ಕೆ. ಮಧುಸೂದನರಾವ್, ವಿದ್ವಾನ್ ಎ. ಜಗನ್ನಾಥರಾವ್, ಕುಮಾರಿ ಸಿ. ಕೆ. ಪದ್ಮ, ಕುಮಾರಿ ಬಿ. ಜಿ. ರಮಾ, ಕುಮಾರಿ ಟಿ. ಆರ್. ನಾಗರತ್ನ, ಕುಮಾರಿ ಸುಧಾ, ಕುಮಾರಿ ಲಲಿತಾ, ಚಿ|| ಎಚ್. ಎಸ್. ಶಿವಪ್ರಕಾಶ್, ಚಿ|| ಟಿ. ಆರ್. ನಾಗರಾಜ, ಶ್ರೀಮತಿ ಶಕುಂತಲಾಬಾಯಿ, ಶ್ರೀ ವಿ. ಚಿನ್ನಪ್ಪ, ಶ್ರೀ ನಾಗೇಂದ್ರಪ್ಪ, ಶ್ರೀ ಬಸಪ್ಪ, ಶ್ರೀ ಹರಿ ಮೊದಲಾದವರಿಗೆ ಅಧ್ಯಕ್ಷರ ಹಸ್ತದಿಂದ ಬಹುಮಾನ ವಿನಿಯೋಗ ಮಾಡಲಾಯಿತು.

ಚಿ|| ಶಿವಪ್ರಕಾಶ್ ಓದಿದ ಕವಿತೆ—"ಜಯವೆನ್ನಿರಿ ಭಾರತಕೆ" ಎಲ್ಲರ ಮೆಚ್ಚುಗೆಯನ್ನೂ ಪಡೆಯಿತು.

ಸುಮಾರು ೨೭ ವರ್ಷಗಳಿಂದ ಶರಣಸಾಹಿತ್ಯದಂತಹ ಸುಪ್ರೌಢ ಪತ್ರಿಕೆಯನ್ನು ಅತಿಶ್ರದ್ಧೆಯಿಂದ ನಡೆಸಿಕೊಂಡು ಬರುತ್ತಿರುವ ಹಾಗೂ ಕಾರ್ಯಾಲಯದಿಂದ ಮೂವತ್ತು ಗ್ರಂಥಗಳನ್ನು ಪ್ರಕಟಿಸಿರುವ ಶ್ರೀ ಶಿವಮೂರ್ತಿ ಶಾಸ್ತ್ರಿಗಳ ಸಾಹಸವನ್ನು ಎಲ್ಲರೂ ಕೊಂಡಾಡಿದರು.

(ಸಂ. ಕ.)

# ಪರಿಷತ್ತಿನಲ್ಲಿ ವಸಂತ ಸಾಹಿತ್ಯೋತ್ಸವ

## ಮೂರು ದಿನಗಳ ವೈಭವದ ಕಾರ್ಯಕಲಾಪ

ಎಂದಿನಂತೆ ಈ ವರ್ಷವೂ ಕನ್ನಡ ಸಾಹಿತ್ಯ ಪರಿಷತ್ತು ವಸಂತ ಸಾಹಿತ್ಯೋತ್ಸವವನ್ನು ಏಪ್ರಿಲ್ ದಿನಾಂಕ ೧೭, ೧೮ ಮತ್ತು ೧೯ ಈ ಮೂರು ದಿನಗಳಲ್ಲಿ ವಿಜೃಂಭಣೆಯಿಂದ ನಡೆಸಿತು. ಈ ಮೂರು ದಿನದ ಕಾರ್ಯಕಲಾಪಗಳಲ್ಲಿ, ಪರಿಷತ್ತಿನ ಅಭಿಮಾನಿಗಳೂ ಕನ್ನಡ ಪ್ರೇಮಿಗಳೂ ಅಪಾರ ವಾಗಿ ಹಾಜರಿದ್ದು ಭಾಗವಹಿಸಿದರು.

ಈ ಉತ್ಸವವನ್ನು ದಿ. ೧೭ ರಂದು ಮೈಸೂರು ಪ್ರಧಾನ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳಾದ ಶ್ರೀ ಎಚ್. ಹೊಂಬೇಗೌಡರು ಉದ್ಘಾಟಿಸಿ, ಕನ್ನಡ ಸಾಹಿತ್ಯ ಸರ್ವಸಾಮಾನ್ಯ ಜನರ ಸ್ವತ್ತಾಗುವಂತಾಗಿ, ಕನ್ನಡ ಸಾಹಿತ್ಯ ಕೃಷಿಯ ಫಸಲು ಸಾಮಾನ್ಯ ಜನರಿಗೂ ಎಟುಕು ವಂತಾಗಲು ಕನ್ನಡ ಸಾಹಿತ್ಯ ಪರಿಷತ್ತು ಕಾರ್ಯಕ್ರಮ ಗಳನ್ನು ಕೈಗೊಳ್ಳಬೇಕೆಂದು ಕರೆಯಿತ್ತರು.

ಕುಮಾರಿಯರಾದ ಬಿ. ರಮಾ ಮತ್ತು ಸುಧಾ ಅವರಿಂದ ಪ್ರಾರ್ಥನೆಯಾದ ಮೇಲೆ ಪರಿಷತ್ತಿನ ಗೌರವ ಕಾರ್ಯದರ್ಶಿ ಗಳಲ್ಲೊಬ್ಬರಾದ ಡಾ|| ಕೆ. ಎಂ. ಕೃಷ್ಣರಾಯರು ಸ್ವಾಗತ ಭಾಷಣ ಮಾಡಿದರು.

ಶ್ರೀ ಹೊಂಬೇಗೌಡರು ಉತ್ಸವವನ್ನು ಉದ್ಘಾಟಿಸುತ್ತಾ, ಕನ್ನಡ ಸಾಹಿತ್ಯ ವಿಪುಲವಾಗಿ ಬೆಳೆದಿದೆ. ೩೦ ವರ್ಷಗಳ ಹಿಂದೆ ಕನ್ನಡ ಕಾವ್ಯ ಓದಬೇಕೆಂದರೆ ಹಳಗನ್ನಡ ಸಾಹಿತ್ಯ ವನ್ನು ಹುಡುಕಬೇಕಿತ್ತು. ಆದರೆ ಈಗ ಗದ್ಯ, ಪದ್ಯ, ನಾಟಕ, ಕಾದಂಬರಿ ಯಥೇಚ್ಛವಾಗಿ ಬೆಳೆದಿದೆ, ಎಂಬು ದಾಗಿ ಶ್ರೀ ಹೊಂಬೇಗೌಡರು ತಿಳಿಸಿ, ಸಾಮಾನ್ಯ ಜನರಿಗೆ ಹಿಂದಿನ ಗ್ರಂಥಗಳ ಪರಿಚಯವೇ ಮರೆತುಹೋಗುವಂತಾ ಗಿದೆ. ರನ್ನ, ಪಂಪ, ಕುಮಾರವ್ಯಾಸ ಮೊದಲಾದ ಕವಿಗಳ ಹೆಸರೇ ಹಲವರಿಗೆ ಗೊತ್ತಿಲ್ಲ. ಉಪನ್ಯಾಸಗಳೇ ಇತ್ಯಾದಿ ಪ್ರಚಾರಗಳ ಮೂಲಕ ಪ್ರಾಚೀನ ಸಾಹಿತ್ಯದ ಪರಿಚಯವನ್ನು ಜನತೆಗೆ ಮಾಡಿಕೊಡಲು ಸಾಹಿತ್ಯ ಪರಿಷತ್ತು ಪ್ರಯತ್ನಿಸ ಬೇಕು ಎಂದು ತಿಳಿಸಿದರು.

ಗೌರವ ಕಾರ್ಯದರ್ಶಿಗಳಲ್ಲೊಬ್ಬರಾದ ಶ್ರೀ ಶಂಕರಪ್ಪ ನವರು ಉತ್ಸವಕ್ಕೆ ಜಯ ಕೋರಿ ಕಳುಹಿಸಿದ್ದ ಅನೇಕರ ಸಂದೇಶಗಳನ್ನು ಓದಿದರು.

ಉತ್ಸವದ ಅಂಗವಾಗಿ ಮಂಡ್ಯದ ಕುಮಾರಿ ನಾಗರತ್ನ ಮತ್ತು ಅವರ ಸಂಗಡಿಗರಿಂದ ಸಂಗೀತ ಕಚೇರಿ, ಶ್ರೀಮತಿ ಶಕುಂತಳಾಬಾಯಿ ಪಾಂಡುರಂಗರಾವ್ ಅವರಿಂದ ಕಾವ್ಯ ವಾಚನ, ಶ್ರೀ ಪಿ. ಕಾಳಿಂಗರಾವ್ ಅವರಿಂದ ಜಾನಪದ ಗೀತೆ ಇವಾದವು.

ಅಧ್ಯಕ್ಷತೆ ವಹಿಸಿದ್ದ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರು ಮಾತನಾಡಿ, ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪಕ ಅಧ್ಯಕ್ಷರಾದ ದಿ|| ಎಚ್. ವಿ. ನಂಜುಂಡಯ್ಯನವರು, ಮುಂದಿಟ್ಟಿದ್ದ ಕನ್ನಡ ಸಂಸ್ಕೃತಿಯ ಬೆಳವಣಿಗೆ ಗುರಿಯ ಅಂಗವಾಗಿ ಈ ವಸಂತ ಸಾಹಿತ್ಯೋತ್ಸವ ವನ್ನು ಆಚರಿಸಲಾಗುತ್ತಿದೆಯೆಂದರು.

ಇದೇ ರೀತಿಯಲ್ಲಿ ನಾಡಿನ ಕವಿಪುಂಗವರ ಜಯಂತಿ ಸಮಾರಂಭಗಳನ್ನೂ ಸಾಹಿತ್ಯ ಪರಿಷತ್ತು ಏರ್ಪಡಿಸುತ್ತಿದೆ ಎಂದು ಅವರು ತಿಳಿಸಿದರು.

ಈ ಜಯಂತಿ ಉತ್ಸವಗಳನ್ನು ಹೆಚ್ಚು ವೈಭವದಿಂದ ನಡೆಸಲು, ರಾಜ್ಯದ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪ ನವರು ಸಾಹಿತ್ಯ ಪರಿಷತ್ತಿಗೆ ಸಹಾಯದ ಭರವಸೆ ನೀಡಿರು ವರೆಂದೂ ಶ್ರೀ ಶಾಸ್ತ್ರಿಯವರು ಹೇಳಿದರು.

ಕನ್ನಡದ ಶ್ರೇಷ್ಠ ಗ್ರಂಥಗಳನ್ನು ಈಗಿನ ಕಾಲದ ಅವಶ್ಯ ಕತೆಗನುಸಾರವಾಗಿ ಪರಿಷ್ಕರಿಸಿ ಪ್ರಕಟಿಸುವ ಕಾರ್ಯಕ್ರಮ ವನ್ನು ಸಾಹಿತ್ಯ ಪರಿಷತ್ತು ಹಾಕಿಕೊಂಡಿದೆಯೆಂದವರು ಹೇಳಿ, ಇದರ ಅಂಗವಾಗಿ ಪ್ರಕಟವಾಗಿರುವ "ಸೋಮೇ ಶ್ವರ ಶತಕ" ಮತ್ತು "ಕರ್ನಾಟಕ ಕವಿ ಚರಿತೆ ಭಾಗ–೧" ರ ಪ್ರತಿಗಳನ್ನು ಮುಖ್ಯ ನ್ಯಾಯಾಧೀಶ ಶ್ರೀ ಹೊಂಬೇಗೌಡ ಅವರಿಗೆ ಅರ್ಪಿಸಿದರು.

ವಂದನಾರ್ಪಣ, ರಾಷ್ಟ್ರಗೀತೆ ಇವುಗಳೊಡನೆ ಇಂದಿನ ಕಾರ್ಯಕಲಾಪ ಮುಕ್ತಾಯಗೊಂಡಿತು.

## ಮಹಿಳೆಯರ ಕಾರ್ಯಕ್ರಮ

ವಸಂತ ಸಾಹಿತ್ಯೋತ್ಸವದ ಅಂಗವಾಗಿ ಎರಡನೆ ದಿನ ಅಂದರೆ ದಿನಾಂಕ ೧೮ ರಂದು ಮಹಿಳಾ ಕಾರ್ಯಕ್ರಮ ಏರ್ಪಟ್ಟಿತ್ತು. ಸಮಾಜ ಕಲ್ಯಾಣ ಸಚಿವೆ ಶ್ರೀಮತಿ ಯಶೋಧರ ದಾಸಪ್ಪ ಅವರು ಅಧ್ಯಕ್ಷತೆ ವಹಿಸಿದ್ದರು.

ಶ್ರೀಮತಿ ಜಯಶ್ರೀ ಅವರಿಂದ ಪ್ರಾರ್ಥನೆಯಾದ ಮೇಲೆ ಶ್ರೀಮತಿ ಪಿ. ಆರ್. ಜಯಲಕ್ಷ್ಮಮ್ಮ ಅವರು ಸ್ವಾಗತಭಾಷಣ ಮಾಡಿದರು.

ಪರಿಷತ್ತಿನ ಅಧ್ಯಕ್ಷರಾದ ಶ್ರೀ ಶಿವಮೂರ್ತಿಶಾಸ್ತ್ರಿಗಳವರು ಮಾತನಾಡಿ, ಮಕ್ಕಳು ಮತ್ತು ಮಹಿಳೆಯರಿಗಾಗಿ ಒಂದು ಪ್ರತ್ಯೇಕ ಪುಸ್ತಕಭಂಡಾರವನ್ನು ಸ್ಥಾಪಿಸುವ ಯೋಚನೆ ಪರಿಷತ್ತಿಗಿದೆ ಎಂದು ಹೇಳಿದರು.

ಕುಮಾರಿ ಎಸ್. ವಿಮಲ ಅವರು 'ಕುವೆಂಪು' ಅವರ 'ರಾಮಾಯಣ ದರ್ಶನಂ' ಕಾವ್ಯದಲ್ಲಿ ಬರುವ ವಿಭೀಷಣ ಕುವರಿ ಅನಲೆಯ ಪಾತ್ರ ಪರಿಚಯ ಕುರಿತು ಭಾಷಣಮಾಡಿದರು.

ಜಯಲಕ್ಷ್ಮಿ ಮತ್ತು ವಿಮಲ ಇವರುಗಳಿಂದ ದೇವರ ನಾಮದ ಹಾಡಿಕೆಯಾದ ಮೇಲೆ ಅಶೋಕ ಶಿಶುವಿಹಾರದ ಮಕ್ಕಳಿಂದ ನೃತ್ಯ–ನಾಟಕ ಕಾರ್ಯಕ್ರಮ ನಡೆಯಿತು.

ಶ್ರೀಮತಿ ಜಿ. ಲಲಿತ ಅವರಿಂದ ವಂದನಾರ್ಪಣೆ ಆದಮೇಲೆ ಇಂದಿನ ಸಮಾರಂಭ ಮುಕ್ತಾಯಗೊಂಡಿತು.

## ಕವಿಗೋಷ್ಠಿ

ಮೂರನೆಯ ದಿನ ಅಂದರೆ ದಿನಾಂಕ ೧೯ ರಂದು ಬೆಳಿಗ್ಗೆ ಕವಿಗೋಷ್ಠಿ ನಡೆಯಿತು. ಶ್ರೀ ಕೆ. ಗೋಪಾಲಕೃಷ್ಣರಾಯರು ಅಧ್ಯಕ್ಷರಾಗಿದ್ದರು. ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರು ಗೋಷ್ಠಿಯನ್ನು ಉದ್ಘಾಟಿಸಿದರು. ಸಂಸ್ಕಾರಜನ್ಯವಾದ ಕಾವ್ಯಶಕ್ತಿಗೆ ರಸಪೋಷಣೆ ಮಾಡುವುದರಲ್ಲಿ ರಸಿಕ ಜನರ ಪಾತ್ರ ಪ್ರಧಾನವಾದುದೆಂದು ತಿಳಿಸಿ, ಉತ್ತಮ ಕಾವ್ಯಗಳ ರಚನೆಗೆ ಇಂತಹ ಕವಿಗೋಷ್ಠಿ ಹೆಚ್ಚು ಸಹಾಯಕವಾಗುವುದೆಂದೂ ನುಡಿದರು.

ಈ ಗೋಷ್ಠಿಯ ವ್ಯವಸ್ಥಾಪಕರಾಗಿದ್ದ ಶ್ರೀ ಡಿ. ಆರ್. ರಾಮಯ್ಯನವರು ಸ್ವಾಗತ ಭಾಷಣ ಮಾಡಿದರು.

ಈ ಇಪ್ಪತ್ತನಾಲ್ಕು ಮಂದಿ ಕವಿಗಳು ಈ ಗೋಷ್ಠಿಯಲ್ಲಿ ಭಾಗವಹಿಸಿ ತಮ್ಮ ಕವನಗಳನ್ನು ಪಠಿಸಿದರು :

ಶ್ರೀಮತಿ ಎಚ್. ಎಸ್. ಪರಿಮಳ, ಶ್ರೀ ಗೌಸ್ ಮೊಹಿಯುದ್ದೀನ್ (ಉರ್ದು), ಶ್ರೀಮತಿಗಳಾದ ಸೀತಮ್ಮ ಬೇಲಿ, ಉಷಾದೇವಿ, ಶ್ರೀಗಳಾದ ನಾರಾಯಣ ಸಂಗಮ, ಅರ್ಚಿಕ ವೆಂಕಟೇಶ್, ಲಂಕಾ ಕೃಷ್ಣಮೂರ್ತಿ(ತೆಲುಗು). ವೆಂಕಟಾದ್ರಿ ಶರ್ಮ, ಬ. ನ. ಸುಂದರರಾವ್, ಶ್ರೀಮತಿ ಮಂದಾಕಿನೀದೇವಿ, ಶ್ರೀಗಳಾದ ಹೆಚ್. ಕೆ. ಜಯರಾಮಯ್ಯ, ಟಿ. ಜಿ. ಸುಬ್ರಹ್ಮಣ್ಯ, ಎಂ. ವಾಸುದೇವಮೂರ್ತಿ, ಕೆ. ಎಸ್. ಪದ್ಮನಾಭಾಚಾರ್ಯ, ಎಸ್. ಜಿ. ರಾಮಚಂದ್ರಶರ್ಮ, ಎಸ್. ದಿವಾಕರ್, ಸಿ. ಓಂಕಾರಪ್ಪ, ಎ. ರಾ. ಜಗದೀಶ್, ಎಚ್. ಎಂ. ರಂಗನಾಥ್, ಎಸ್. ರಂಗಸ್ವಾಮಿ, ಎ. ಆರ್. ಸುಬ್ಬಕೃಷ್ಣ, ಈಶ್ವರಗೌಡ, ಡಿ. ಆರ್. ರಾಮಯ್ಯ, ಮತ್ತು ಕೆ. ಗೋಪಾಲಕೃಷ್ಣರಾವ್.

## ಮುಕ್ತಾಯ ಸಮಾರಂಭ

ದಿನಾಂಕ ೧೯ರಂದು ಸಂಜೆ ನಡೆದ ಸಮಾರಂಭದಿಂದ ವಸಂತ ಸಾಹಿತ್ಯೋತ್ಸವವು ಕೊನೆಗೊಂಡಿತು. ಅರಣ್ಯ ಸಚಿವ ಶ್ರೀ ಬಿ. ರಾಚಯ್ಯನವರು ಮುಕ್ತಾಯ ಭಾಷಣ ಮಾಡಿದರು. ಇಂದಿನ ಸಮಾರಂಭಕ್ಕೆ ವಿಧಾನ ಸಭಾಧ್ಯಕ್ಷರಾದ ಶ್ರೀ ಬಿ. ವೈಕುಂಠ ಬಾಳಿಗಾ ಅವರು ಅಧ್ಯಕ್ಷರಾಗಿದ್ದರು.

"ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ನಾಡು, ನುಡಿಗಳ ಶ್ರೇಯೋಭಿವೃದ್ಧಿಗಾಗಿ ಮಾಡುತ್ತಿರುವ ಸೇವೆ ಪ್ರಶಂಶಾರ್ಹವಾಗಿದೆ. ಇತ್ತೀಚೆಗೆ ಅಶ್ಲೀಲ ಸಾಹಿತ್ಯ ತುಂಬಾ ಬರುತ್ತಿದೆ. ಒಳ್ಳೆಯ ಸಾಹಿತ್ಯದ ಪ್ರಸಾರದ ಜೊತೆಗೆ ಜನರ ಮನಸ್ಸನ್ನು ಕೆಡಿಸುವಂಥ ಕೆಟ್ಟ ಸಾಹಿತ್ಯದ ಪ್ರಸಾರವನ್ನು ತಡೆಯಲು ಸಹ ಪರಿಷತ್ತು ಶ್ರಮಿಸಬೇಕು" ಎಂದು ಶ್ರೀ ಬಿ. ರಾಚಯ್ಯನವರು ತಮ್ಮ ಭಾಷಣದಲ್ಲಿ ಹೇಳಿದರು.

ಕುಮಾರಿ ಬಿ. ಜಿ. ರಮಾ ಮತ್ತು ಕುಮಾರಿ ಆರ್. ಲಲಿತಾ ಅವರ ದೇವತಾ ಪ್ರಾರ್ಥನೆಯಾದ ಮೇಲೆ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರು ಸ್ವಾಗತ ಭಾಷಣ ಮಾಡಿ, ವಸಂತ ಸಾಹಿತ್ಯೋತ್ಸವದ ಮೂರು ದಿನಗಳಲ್ಲಿ ನಡೆದ ಕಾರ್ಯಕ್ರಮವನ್ನು ವಿವರಿಸಿದರು. ಪರಿಷತ್ತು ನಾಡು ನುಡಿಗಳ ಶ್ರೇಯೋಭಿವೃದ್ಧಿಗಾಗಿ ಕಳೆದ ೪೯ ವರ್ಷಗಳಿಂದ ಶ್ರಮಿಸುತ್ತಿದೆಯೆಂದೂ ಮಹಾಜನರ, ಸರ್ಕಾರದ ತುಂಬ ನೆರವು ಅದಕ್ಕೆ ಬೇಕೆಂದೂ ಮನವಿ ಮಾಡಿದರು.

ಅನಂತರ ಕುಮಾರಿ ಸಿ. ಕೆ. ಪದ್ಮಾ ಮತ್ತು ಮಂಡಲಿಯವರಿಂದ ಸಂಗೀತ ನಡೆಯಿತು.

ಆಮೇಲೆ ಶಿಕ್ಷಣ ಇಲಾಖೆಯ ಜಾಯಿಂಟ್ ಡೈರೆಕ್ಟರ್ ಶ್ರೀ ಟಿ. ವಿ. ತಿಮ್ಮೇಗೌಡರು ಕಡ್ಡಾಯ ಪ್ರಾಥಮಿಕ ಶಿಕ್ಷಣ ಕುರಿತು ಅಂಕಿ ಅಂಶ ಸಮೇತ ಭಾಷಣ ಮಾಡಿದರು.

ಕುಮಾರಿ ಆಶಾ ರಾಯಬಾಗ್ ಎಂಬ ಪುಟ್ಟಬಾಲಕಿ ಸ್ವಯಂಪ್ರೇರಿತಳಾಗಿ ಬಂದು ಭಾಷಣ ಮಾಡಿದಳು.

ತರುವಾಯ ಪರಿಷತ್ತಿನ ಪ್ರಾರ್ಥನೆಯ ಮೇಲೆ ಶ್ರೀ ಅರ್ಚಿಕ ವೆಂಕಟೇಶ ಅವರು ಪ್ರಕೃತಿ ಚಿಕಿತ್ಸೆ ಎಂಬ ವಿಷಯ ಕುರಿತು ಭಾಷಣ ಮಾಡಿದರು.

ಶ್ರೀ ವೈಕುಂಠ ಬಾಳಿಗಾ ಅವರು ತಮ್ಮ ಭಾಷಣದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ನಡೆಸುತ್ತಿರುವ ಕೆಲಸ ಕಾರ್ಯಗಳನ್ನು ಪ್ರಶಂಸಿಸಿ ಸರಕಾರದಿಂದ ಹೆಚ್ಚು ಆರ್ಥಿಕ ನೆರವು ದೊರೆಯುವಂತೆ ಮಾಡಲು ತಾವು ನೇರವಾಗಿ ಮಾಡಲು ಸಾಧ್ಯವಿಲ್ಲವೆಂದೂ ನಾಲ್ಕು ಮಾತು ಹೇಳುವ ಪ್ರಸಂಗ ಬಂದಾಗ ತಾವು ಖಂಡಿತ ಹಿಂದುಳಿಯದೆ ತಮ್ಮ ಸಹಾಯವನ್ನು ಆ ಮೂಲಕ ಸಲ್ಲಿಸುವುದಾಗಿಯೂ ಹೇಳಿದರು.

ಉಪನ್ಯಾಸ ಮತ್ತು ಉತ್ಸವ ಸಮಿತಿಯ ವ್ಯವಸ್ಥಾಪಕರಾದ ಬಿ. ಶ್ರೀ. ಪಾಂಡುರಂಗರಾಯರು ವಂದನೆ ಅರ್ಪಿಸಿದರು.

ಕೊನೆಯಲ್ಲಿ ಜ್ಞಾನಜ್ಯೋತಿ ಕಲಾವಿದರು ಅಕ್ಕ-ಪಕ್ಕ ಎಂಬ ನಗೆ ನಾಟಕವನ್ನು ಸೊಗಸಾಗಿ ಅಭಿನಯಿಸಿದರು.

---

# ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.

## ಸಾಹಿತ್ಯ ಪರೀಕ್ಷೆಗಳು—ನವೆಂಬರ್ ೧೯೬೪

### ತಿಳಿವಳಿಕೆ

೧೯೬೪ ನೇ ಸಾಲಿನ ಸಾಹಿತ್ಯ ಪರೀಕ್ಷೆಗಳು ೧೯೬೪ ನೇ ನವೆಂಬರ್ ಮಾಹೆಯ ಕೊನೆಯ ವಾರದಲ್ಲಿ ನಡೆಯುತ್ತವೆ.

ವ್ಯಾಸಂಗ ಕೇಂದ್ರಗಳಿಂದಲೂ ಮತ್ತು ಸ್ವಂತ ವ್ಯಾಸಂಗಿಗಳಿಂದಲೂ ಅಪೇಕ್ಷಾ ಪತ್ರಗಳನ್ನು ೧೯೬೪ ನೇ ಆಗಸ್ಟ್ ಮಾಹೆ ೩೧ ನೇ ತಾರೀಖಿನವರೆಗೆ ಸ್ವೀಕರಿಸಲಾಗುವುದು. ನಂತರ ಬಂದ ಅಪೇಕ್ಷಾ ಪತ್ರಗಳನ್ನು ಸ್ವೀಕರಿಸುವುದಿಲ್ಲ. ವಿದ್ಯಾರ್ಥಿಗಳು ತಾವು ವ್ಯಾಸಂಗ ಮಾಡಿದ ಕೇಂದ್ರದಲ್ಲಿಯೇ ಪರೀಕ್ಷೆಗೆ ಕುಳಿತುಕೊಳ್ಳಬೇಕು. ಹೀಗೆ ವ್ಯಾಸಂಗ ಮಾಡಿದ ಕೇಂದ್ರವು ಪರೀಕ್ಷಾ ಕೇಂದ್ರವಾಗದಿದ್ದರೆ, ತಮಗೆ ಅತ್ಯಂತ ಸಮೀಪವಾಗಿರುವ ಪರೀಕ್ಷಾ ಕೇಂದ್ರವನ್ನು ಚುನಾಯಿಸಿಕೊಳ್ಳಬಹುದು. **ಒಂದು ಸಲ ಚುನಾಯಿಸಿಕೊಂಡ ಕೇಂದ್ರವನ್ನು ಯಾವ ಕಾರಣದಿಂದಲೂ ಬದಲಾಯಿಸಲಾಗುವುದಿಲ್ಲ.**

ಪರಿಷತ್ತಿನಿಂದ ಮುಂಚಿತವಾಗಿ ಅನುಮತಿ ಪಡೆದ ವ್ಯಾಸಂಗ ಕೇಂದ್ರ ವ್ಯವಸ್ಥಾಪಕರು ತಮ್ಮ ಕೇಂದ್ರದ ಅಪೇಕ್ಷಾ ಪತ್ರಗಳೆಲ್ಲವನ್ನೂ ಒಟ್ಟುಗೂಡಿಸಿ ಪರೀಕ್ಷಾರ್ಥಿಗಳ ಎರಡು ಪಟ್ಟಿಗಳೊಡನೆ, ಕೇಂದ್ರದ ಪೂರ್ಣ ಪರೀಕ್ಷಾ ಶುಲ್ಕದೊಂದಿಗೆ **ಆಗಸ್ಟ್ ೩೧ ನೇ ತಾರೀಖಿನೊಳಗಾಗಿ ಪರಿಷತ್ತಿಗೆ ತಲುಪುವಂತೆ ಕಳುಹಿಸಬೇಕು. ಚೆಕ್ಕುಗಳನ್ನು ಸ್ವೀಕರಿಸುವುದಿಲ್ಲ. ಬೇಕಾದರೆ ಬ್ಯಾಂಕ್ ಡ್ರಾಫ್ಟ್ ಮೂಲಕ ಕಳುಹಿಸಬಹುದು.**

ಸ್ವಂತ ವ್ಯಾಸಂಗಿಗಳು ತಮ್ಮ ಅಪೇಕ್ಷಾ ಪತ್ರಗಳೊಂದಿಗೆ ಪರೀಕ್ಷಾ ಶುಲ್ಕವನ್ನು 'ಎಂ. ಓ.' ಮಾಡಿದ ರಶೀತಿಯನ್ನು ತಪ್ಪದೆ ಕಳುಹಿಸಬೇಕು. ಹೀಗೆ 'ಎಂ. ಓ.' ರಶೀತಿಗಳಿಲ್ಲದ ಅಪೇಕ್ಷಾ ಪತ್ರಗಳನ್ನು ಸ್ವೀಕರಿಸುವುದಿಲ್ಲ. 'ಎಂ. ಓ.' ಕೂಪನ್ನುಗಳಲ್ಲಿ ವಿದ್ಯಾರ್ಥಿಗಳು ತಮ್ಮ ಪೂರ್ಣ ವಿಳಾಸವನ್ನು ತಪ್ಪದೆ ಶುದ್ಧವಾಗಿ ಬರೆಯಬೇಕು. ಹಾಗೆ ಬರೆಯದಿದ್ದಲ್ಲಿ ಅವರ ಅಪೇಕ್ಷಾ ಪತ್ರಗಳನ್ನು ರಿಜಿಸ್ಟರ್ ಮಾಡಿಕೊಳ್ಳುವುದಿಲ್ಲ. ಅಪೇಕ್ಷಾ ಪತ್ರಗಳನ್ನು Registered Post ಮೂಲಕ ರವಾನಿಸಬೇಕು. T. M. O. ಗಳನ್ನು **ಸ್ವೀಕರಿಸುವುದಿಲ್ಲ.**

ಅಪೇಕ್ಷಾ ಪತ್ರಗಳನ್ನು ತುಂಬುವಾಗ ವಿದ್ಯಾರ್ಥಿಗಳು ತಮ್ಮ ಪೂರ್ಣ ಹೆಸರು, ತಂದೆ ಹೆಸರು ಮತ್ತು ವಿಳಾಸವನ್ನು ಸ್ಪಷ್ಟವಾದ ಅಕ್ಷರಗಳಲ್ಲಿ ಬರೆಯಬೇಕು.

೧೯೬೪ ನೇ ಸಾಲಿನಿಂದ ಸಾಹಿತ್ಯ ಪರೀಕ್ಷೆಗಳನ್ನು ನಡೆಸುವ ಎಲ್ಲಾ ಕೇಂದ್ರಗಳಿಗೂ ಅಯಾ ಸ್ಥಳೀಯರಲ್ಲದ ಪರಿಷತ್ತಿನ ಪ್ರತಿನಿಧಿಗಳನ್ನು ಪರೀಕ್ಷೆಗಳ ಮೇಲ್ವಿಚಾರಕರಾಗಿ ಕಳುಹಿಸಬೇಕೆಂದು ತೀರ್ಮಾನಿಸಲಾಗಿದೆ. ಎಲ್ಲಾ ಕೇಂದ್ರದ ವ್ಯವಸ್ಥಾಪಕರು ಈ ವಿಷಯವನ್ನು ದಯವಿಟ್ಟು ಗಮನಿಸಬೇಕಾಗಿ ಕೋರಿದೆ.

'ಕಾವ' ಪರೀಕ್ಷಾ ಶುಲ್ಕ ರೂ. ೫-೦೦
'ಜಾಣ' ,, ರೂ. ೮-೦೦

ಕೆ. ಎಂ. ಕೃಷ್ಣರಾವ್
ಎಸ್. ಶಂಕರಪ್ಪ
ಗೌರವ ಕಾರ್ಯದರ್ಶಿಗಳು

# ಕನ್ನಡ ಸಾಹಿತ್ಯ ಪರಿಷತ್ತು

## ಪ್ರಬಂಧ ಸ್ಪರ್ಧೆಗಳ ಫಲಿತಾಂಶ

(೧) ಶ್ರೀಮಾನ್ ತೂಬಗೆರೆ ನಂಜಪ್ಪನವರ ದತ್ತಿ ನಿಧಿಯ ಪ್ರಬಂಧ ಸ್ಪರ್ಧೆಯಲ್ಲಿ (೧೯೬೩) "ಹಂಪೆಯ ಹರಿಹರ" ಎಂಬ ವಿಷಯವನ್ನು ಕುರಿತು ಶ್ರೀ ವಿ. ನಂಜುಂಡಸ್ವಾಮಿ, ದೊಡ್ಡಕೆರೆ ಬೀದಿ, ಆನೆಕಲ್, ಅವರು ಮತ್ತು ಶ್ರೀಮತಿ ಜಿ. ಜಯಲಕ್ಷ್ಮಮ್ಮ, ೨ (೨), ೮ನೇ ಮೆಯಿನ್ ರಸ್ತೆ, ಮಲ್ಲೇಶ್ವರಂ, ಬೆಂಗಳೂರು, ಈ ಇಬ್ಬರಿಗೂ ಬಹುಮಾನವನ್ನು ಸಮವಾಗಿ ಹಂಚಬೇಕೆಂದು ತೀರ್ಮಾನಿಸಲಾಗಿದೆ.

(೨) ದಿವಂಗತ ಶೇಷಮ್ಮ ಭಾಸ್ಕರರಾಯರ ಕನ್ನಡ ವಿಮರ್ಶಾ ಸ್ಪರ್ಧೆಯಲ್ಲಿ (೧೯೬೩) "ತ್ರಿವೇಣಿಯವರ ಕೃತಿಗಳು" ಎಂಬ ವಿಷಯವನ್ನು ಕುರಿತು ಶ್ರೀಮತಿ ಎಂ. ಎನ್. ಉಮಾದೇವಿ, 'ರಾಮದಾಸ ಪ್ರಸಾದ' ೩೧೩/೧ Xನೇ ಕ್ರಾಸ್ ರಸ್ತೆ, ವಿಲ್ಸನ್ ಗಾರ್ಡನ್ಸ್, ಬೆಂಗಳೂರು, ಇವರು ಬರೆದ ವಿಮರ್ಶಾ ಲೇಖನಕ್ಕೆ ಬಹುಮಾನವನ್ನು ಕೊಡಲಾಗಿದೆ.

## ಸಾಹಿತ್ಯ ಪರೀಕ್ಷೆಗಳ ಫಲಿತಾಂಶ

೧೯೬೪ನೆಯ ಫೆಬ್ರವರಿ ೨೯ ಮತ್ತು ಮಾರ್ಚಿ ೧ನೆಯ ತಾರೀಖುಗಳಲ್ಲಿ ಕರ್ಣಾಟಕದ ನಾನಾ ಕೇಂದ್ರಗಳಲ್ಲಿ ನಡೆದ ಸಾಹಿತ್ಯ ಪರೀಕ್ಷೆಗಳ ಫಲಿತಾಂಶ ಹೀಗಿದೆ:

**ಕಾವ ಪರೀಕ್ಷೆ :**

**ಮೊದಲನೆಯ ತರಗತಿ**

(ಅಂಕಗಳ ಅನುಕ್ರಮದಲ್ಲಿ)

೩, (೧೮ ಮತ್ತು ೩೨), ೨೧ ಮತ್ತು ೩೫.

**ಎರಡನೆಯ ತರಗತಿ**

೬, ೮, ೯, ೧೭, ೨೨, ೨೬, ೩೯, ೪೧, ೪೨ ಮತ್ತು ೪೪.

**ಮೂರನೆಯ ತರಗತಿ**

೨, ೪, ೫, ೭, ೧೦, ೧೨, ೧೪, ೧೫, ೨೦, ೨೪, ೫೮, ೬೨, ೬೮, ೬೯, ೭೦, ೭೧ ಮತ್ತು ೭೩.

**ಜಾಣ ಪರೀಕ್ಷೆ :**

**ಮೊದಲನೆಯ ತರಗತಿ**

ಯಾರೂ ಇಲ್ಲ.

**ಎರಡನೆಯ ತರಗತಿ**

೭೭, ೭೮, ಮತ್ತು ೭೯.

**ಮೂರನೆಯ ತರಗತಿ**

೧೪೧, ೧೪೭, ೨೦೨, ೨೩೫, ೨೩೬, ೨೪೪, ೨೪೫ ಮತ್ತು ೨೪೯.

---

### ೪೪ನೇ ಕನ್ನಡ ಸಾಹಿತ್ಯ ಸಮ್ಮೇಳನ—ಸಿದ್ಧಗಂಗಾ ಕ್ಷೇತ್ರ



ಈ ಚಿತ್ರದಲ್ಲಿ ಶ್ರೀ ಸಿದ್ಧಗಂಗಾ ಮಠಾಧೀಶ್ವರರಾದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಮಾತನಾಡುತ್ತಿರುವುದನ್ನು ಕಾಣಬಹುದು.



# ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.

## ಸಾಹಿತ್ಯ ಪರೀಕ್ಷೆಗಳ ಪಠ್ಯಪುಸ್ತಕಗಳ ಪಟ್ಟಿ (ನವೆಂಬರ್ ೧೯೬೪)

### ಕಾವ ಪರೀಕ್ಷೆ ೧೯೬೪

**I ಪದ್ಯ ಮತ್ತು ವ್ಯಾಕರಣ (ಪತ್ರಿಕೆ I)**

**ಪದ್ಯ :** ಕನ್ನಡ ಬಾವುಟ ಬೆಲೆ: ೨-೦೦
(ಪರಿಷತ್ತಿನ ಪ್ರಕಟನೆ)

೧. ಎರಡನೆಯ ತೆನೆ:

(i) ಕನ್ನಡ ನಾಡಿನ ಚೆಲುವು ಪುಟ ೧೭-೧೯

(ii) ಬಸವಣ್ಣ ಧರ್ಮದ ಕೆಚ್ಚು ಪುಟ ೩೮-೪೨

(iii) ದಾಸರ ಪದಗಳು ಪುಟ ೫೪-೬೧

೨. ಮೂರನೆಯ ತೆನೆ ಪೂರ್ತಿ ಪುಟ ೭೩ ರಿಂದ ೮೩ ಪೂರ್ತಿ

೩. ಗಮಕ ಕಾವ್ಯಮಂಜರಿ: ಪುಟ ೪೧ ರಿಂದ ಪೂರ್ತಿ. (ಪರಿಷತ್ತಿನ ಪ್ರಕಟಣೆ)
ಬೆಲೆ: ೧-೦೦

**ವ್ಯಾಕರಣ**

(ಆಯಾ ಪ್ರಾಂತಗಳ ಪ್ರೌಢಶಾಲೆಗಳಿಗೆ ನಿಯಮಿತವಾಗಿರುವ ವ್ಯಾಕರಣ)

**II ಗದ್ಯ ಮತ್ತು ಪ್ರಬಂಧ ರಚನೆ (ಪತ್ರಿಕೆ II)**

೧. ಸಾಹಿತ್ಯ ಸುಧೆ
ಪ್ರೊ. ಬಿ. ಎಸ್. ಕುಲಕರ್ಣಿ, ಎಂ.ಎ.
ಸಮಾಜ ಪುಸ್ತಕಾಲಯ, ಧಾರವಾಡ.
ಬೆಲೆ: ೧-೭೫

೨. ಆಧುನಿಕ ಗದ್ಯ ಸಾಹಿತ್ಯ ಭಾಗ I
ಪ. ಪ್ರಕಟನೆ ಬೆಲೆ: ೨-೫೦

೩. ನೆನಪುಗಳು.
ಕೆ. ವಾಸುದೇವಾಚಾರ್ಯರು,
ಕಾವ್ಯಾಲಯ, ಮೈಸೂರು. ಬೆಲೆ: ೩-೫೦

**III ಚರಿತ್ರೆ ಮತ್ತು ಲಲಿತಕಲೆ (ಪತ್ರಿಕೆ III)**

೧. ಕರ್ನಾಟಕ ಜನತೆಯ ಸಂಸ್ಕೃತಿ
ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್
ಜೀವನ ಕಾರ್ಯಾಲಯ, ಬೆಂಗಳೂರು-೧೯
ಬೆಲೆ: ೧-೦೦

೨. ಕನ್ನಡ ನಾಡಿನ ಚರಿತ್ರೆ, ಭಾಗ III, "ಕಲೆ"
ಪರಿಷತ್ತಿನ ಪ್ರಕಟಣೆ ಬೆಲೆ: ೧-೨೫

### ಜಾಣ ಪರೀಕ್ಷೆ ೧೯೬೪

**I ಪದ್ಯ ಮತ್ತು ನಾಟಕ (ಪತ್ರಿಕೆ I)**

೧. ಕಾವ್ಯ ಸೌರಭ: ಬೆಲೆ: ೨-೦೦
(ಪರಿಷತ್ತಿನ ಪ್ರಕಟಣೆ)

೨. ಕನ್ನಡ ಬಾವುಟ

(i) ಎರಡನೆಯ ತೆನೆ ಪುಟ ೨೧ ರಿಂದ ೩೦ ಮತ್ತು ೪೩ ರಿಂದ ೫೩.

(ii) ನಾಲ್ಕನೆ ತೆನೆ : ಪುಟ ೮೭ ರಿಂದ ೧೨೧

೩. ಹೊಳವು-ಝುಳವು:
ಪ್ರಕಾಶಕರು: ಕರ್ನಾಟಕ ಸಂಘ
ಗಾ॥ ಆರ್ಟ್ಸ್ ಮತ್ತು ಸೈಯಿನ್ಸ್
ಕಾಲೇಜು, ಬೆಂಗಳೂರು.

೪. ಅಪ್ಪಚ್ಚು ಕವಿಯ ಮೂರು ನಾಟಕಗಳು:
ವಿದ್ವಾನ್ ಮುತ್ತಣ್ಣ
ಇದರಲ್ಲಿ ಮೊದಲನೆಯ ಎರಡು
ನಾಟಕಗಳು ಮಾತ್ರ – ಸಾವಿತ್ರಿ
ಮತ್ತು ಯಯಾತಿರಾಜ.
ಉಷಾ ಪ್ರೆಸ್, ಮೈಸೂರು. ಬೆಲೆ: ೬-೫೦

**II ಗದ್ಯ ಮತ್ತು ಪ್ರಬಂಧ (ಪತ್ರಿಕೆ II)**

೧. ಕರ್ನಾಟಕ ಸಂದರ್ಶನ.
ಪುಟ ೩೪೯ ರಿಂದ ೪೪೪

ಬಿ. ಶಿವಮೂರ್ತಿ ಶಾಸ್ತ್ರಿಗಳು, ಶರಣ ಸಾಹಿತ್ಯ ಕಾರ್ಯಾಲಯ, ೧೫೦, ರಂಗಸ್ವಾಮಿ ಗುಡಿ ಬೀದಿ, ಬೆಂಗಳೂರು-೨ ಬೆಲೆ: ೫-೦೦

೨. ಏರಿಳಿತ – ಥಾಮಸ್ ಹಾರ್ಡಿಯವರ "ದಿ ಮೇಯರ್ ಆಫ್ ಕ್ಯಾಸ್ಟರ್ ಬ್ರಿಜ್" ಕಾದಂಬರಿಯ ಅನುವಾದ: ಎಂ. ಆನಂದರಾಯರು, ಎಂ.ಎ. ಪ್ರಕಾಶಕರು: ಎಂ. ರಾಮರಾವ್, ಹಿಂದೀ ಪ್ರಚಾರಕ, ಹರಪನಹಳ್ಳಿ, ಬಳ್ಳಾರಿ ಜಿಲ್ಲಾ ಬೆಲೆ : ೨-೫೫

೩. ದ್ರುಪದ ನಂದಿನಿ : ಡಾ|| ಕೆ. ಎಂ. ಕೃಷ್ಣ ರಾಯರು, ಸುರುಚಿ ಪ್ರಕಾಶನ, ಸರಸ್ವತೀಪುರ, ಮೈಸೂರು. ಬೆಲೆ: ೨-೫೫

೪. ಹಣ್ಣೆಲೆ ಚಿಗುರಿದಾಗ : ತ್ರಿವೇಣಿ, ಪ್ರಕಾಶಕರು: ಡಿ. ವಿ. ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು. ಬೆಲೆ: ೩-೦೦

೫. ಪ್ರಾಚೀನ ಸಾಹಿತ್ಯ: ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು. ಬೆಲೆ: ೧-೫೦

## III ವ್ಯಾಕರಣ, ಛಂದಸ್ಸು, ಅಲಂಕಾರ ಶಾಸ್ತ್ರ (ಪತ್ರಿಕೆ III)

೧. ವ್ಯಾಕರಣ: ಹಳಗನ್ನಡ ವ್ಯಾಕರಣ.

೨. ಛಂದಸ್ಸು: ಗಣಗಳು, ಪ್ರಾಸಗಳು, ವೃತ್ತಗಳು, ಶಾರ್ದೂಲ, ಮತ್ತೇಭ, ಉತ್ಪಲ, ಚಂಪಕ, ಸ್ರಗ್ಧರೆ, ಮಹಾಸ್ರಗ್ಧರೆ, ಮಾಲಿನಿ ಕಂದ, ಆರು ಷಟ್ಪದಿಗಳು, ರಗಳೆಗಳು, ಸಾಂಗತ್ಯ, ದ್ವಿಪದಿ, ತ್ರಿಪದಿ, ಸೀಸಪದ್ಯ. ಆಧುನಿಕ ಭಾವಗೀತೆಗಳಲ್ಲಿ ಬರುವ ಛಂದಸ್ಸು.

೩. ಅಲಂಕಾರ: ಶಬ್ದಾಲಂಕಾರ, ಅರ್ಥಾಲಂಕಾರಗಳಲ್ಲಿ ಉಪಮೆ, ರೂಪಕ, ಉತ್ಪ್ರೇಕ್ಷೆ, ಅತಿಶಯೋಕ್ತಿ, ಅರ್ಥಾಂತರನ್ಯಾಸ, ಶ್ಲೇಷೆ, ವಿರೋಧಾಭಾಸ, ರಸ, ಕವಿ ಸಮಯ, ಕಾವ್ಯ ಸ್ವರೂಪ, ಕಾವ್ಯದ ಗುಣಗಳು ಮತ್ತು ದೋಷಗಳು.

—ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾದ "ಕನ್ನಡ ಕೈಪಿಡಿ"ಯಲ್ಲಿ ಬರುವ ಭಾಗಗಳನ್ನು ಬೋಧಿಸಬೇಕು. ಬೆಲೆ: ೨-೫೦

## IV ಸಾಹಿತ್ಯ, ಚರಿತ್ರೆ ಮತ್ತು ಸಂಸ್ಕೃತಿ (ಪತ್ರಿಕೆ IV)

೧. ಕನ್ನಡ ನಾಡಿನ ಚರಿತ್ರೆ ಭಾಗ I (ಪರಿಷತ್ತಿನ ಪ್ರಕಟಣೆ) ಬೆಲೆ:

೨. ಕರ್ನಾಟಕದ ಗತವೈಭವ (ಆಲೂರು ವೆಂಕಟರಾಯರು) ಸಮಾಜ ಪುಸ್ತಕಾಲಯ, ಧಾರವಾಡ. ಬೆಲೆ: ೨-೨೫

ಜೊತೆಗೆ ಈ ಕೆಳಗೆ ಕಾಣಿಸಿರುವ ಕವಿಗಳ ಪರಿಚಯ ಹೊಂದಿರಬೇಕು :

೧. ಪಂಪ, ರನ್ನ, ಒಂದನೇ ನಾಗವರ್ಮ, ನಾಗಚಂದ್ರ, ನಯಸೇನ, ನೇಮಿಚಂದ್ರ, ಜನ್ನ, ಆಂಡಯ್ಯ.

೨. ಬಸವಣ್ಣ, ಮಹಾದೇವಿ ಅಕ್ಕ, ದೇವರ ದಾಸಿಮಯ್ಯ, ಹರಿಹರ, ರಾಘವಾಂಕ, ನಿಜಗುಣ ಶಿವಯೋಗಿ, ಚಾಮರಸ, ವಿರೂಪಾಕ್ಷ, ಗುಬ್ಬಿ ಮಲ್ಲಣಾರ್ಯ, ಷಡಕ್ಷರಿ, ಸರ್ವಜ್ಞ, ಬಸವಪ್ಪ ಶಾಸ್ತ್ರಿ.

೩. ಕಂತಿ, ದುರ್ಗಸಿಂಹ, ರುದ್ರಭಟ್ಟ, ನಾರಣಪ್ಪ, ಕನಕದಾಸರು, ಪುರಂದರದಾಸರು, ಜಗನ್ನಾಥ ದಾಸರು, ಚಿಕುಪಾಧ್ಯಾಯ, ಲಕ್ಷ್ಮೀಶ, ಹೊನ್ನಮ್ಮ, ಮುದ್ದಣ.

೪. ನೃಪತುಂಗ, ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ, ಸಾಳ್ವ, ತಿರುಮಲಾರ್ಯ.

೫. ಬಿ. ಎಂ. ಶ್ರೀ., ಗೋವಿಂದ ಪೈ, ಪಂಜೆ ಮಂಗೇಶರಾಯರು, ಆಲೂರು ವೆಂಕಟ ರಾಯರು, ಆರ್. ನರಸಿಂಹಾಚಾರ್ಯರು.

[ಉಪಾಧ್ಯಾಯರು ಈ ಭಾಗಗಳನ್ನು ಹೇಳಿಕೊಡಬೇಕಾದಾಗ ಡಾ|| ರಂ. ಶ್ರೀ. ಮುಗಳಿ ಅವರ "ಕನ್ನಡ ಸಾಹಿತ್ಯ ಚರಿತ್ರೆ", ಶ್ರೀ ಆರ್. ನರಸಿಂಹಾಚಾರ್ಯರ "ಕರ್ಣಾಟಕ ಕವಿಚರಿತೆ" – ಕನ್ನಡ ಕೈಪಿಡಿ ಭಾಗ II, ಪ್ರೊ. ಧಾರವಾಡಕರ್ ಅವರ ಕನ್ನಡ ಭಾಷಾಶಾಸ್ತ್ರ", ಮತ್ತು ಡಾ|| ಕರ್ಕಿಯವರ "ಛಂದೋ ವಿಕಾಸ" ಇವುಗಳನ್ನೂ ಆಧಾರವಾಗಿ ಅವಲೋಕನ ಮಾಡಬೇಕು.]

# ಕಾಸರಗೋಡು ತಾಲ್ಲೂಕಿನಲ್ಲಿ ಕನ್ನಡದ ಪ್ರಸಾರ

**ಪರಿಷತ್ತಿನ ಅಧಿಕಾರಿ ವರ್ಗದವರಿಂದ**

ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಕಾರ್ಯದರ್ಶಿ ಡಾ|| ಕೆ. ಎಂ. ಕೃಷ್ಣರಾಯರು, ಕೋಶಾಧಿಕಾರಿ ಶ್ರೀ ಆರ್. ಅನಂತರಾಮನ್ ಅವರು ಇದೇ ತಿಂಗಳು ತಾ|| ೫ ಮತ್ತು ೬ ರಂದು ಕಾಸರಗೋಡು ತಾಲ್ಲೂಕಿನ ಹಲವಾರು ಸ್ಥಳಗಳಲ್ಲಿ ಸಂಚರಿಸಿ ಕನ್ನಡ ಪ್ರಸಾರ ಕಾರ್ಯವನ್ನು ಕೈಗೊಂಡರು.

ತಾ|| ೫ರ ಸಂಜೆ ಕಾಸರಗೋಡಿನಲ್ಲಿ ನಡೆದ ಕನ್ನಡಿಗರ ಸಮ್ಮೇಳನದ ಅಧ್ಯಕ್ಷತೆಯನ್ನು ಶ್ರೀ ಆರ್. ಅನಂತರಾಮನ್ ಅವರು ವಹಿಸಿದ್ದರು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಈ ಸಮ್ಮೇಳನದ ಉದ್ಘಾಟನವನ್ನು ಮಾಡಿ, ಅಚ್ಚಕನ್ನಡ ನಾಡಾದ ಈ ಪ್ರದೇಶವು ಭಾಷೆ ಮತ್ತು ಆಡಳಿತ ಸೌಕರ್ಯ ದೃಷ್ಟಿಯಿಂದ ವಿಶಾಲ ಮೈಸೂರು ರಾಜ್ಯಕ್ಕೆ ಕೂಡಲೇ ಸೇರಬೇಕೆಂದು ನಿರೂಪಿಸಿದರು. ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ, ಕಾರ್ಯದರ್ಶಿ ಶ್ರೀ ಕೆ. ಎಂ. ಕೃಷ್ಣರಾವ್ ಕಾಸರಗೋಡಿನಲ್ಲಿರುವ ಧಾರ್ಮಿಕ ಸಂಸ್ಥೆಗಳನ್ನು ಸಂದರ್ಶಿಸಿದರು.

ಅದೇ ದಿನ ಕಾಸರಗೋಡು ತಾಲ್ಲೂಕಿನಲ್ಲಿರುವ ಸುಕ್ಷೇತ್ರ ಮಧುಪುರಿಗೆ ಹೋಗಿ, ಕಾಶ್ಮೀರ ನದೀ ತೀರದಲ್ಲಿರುವ ಶ್ರೀ ಗಣಪತಿಯನ್ನು ಸಂದರ್ಶಿಸಿ ಪೂಜಿಸಿದರು. ಯಕ್ಷಗಾನದ ಮಹಾಕವಿಯಾದ ಪಾರ್ತಿ ಸುಬ್ಬನ ಜನ್ಮಸ್ಥಳವಾದ ಕುಂಬಳೆಗೆ ಹೋಗಿ ಆ ಕವಿಯ ಇಷ್ಟದೇವತೆ ಶ್ರೀ ಗೋಪಾಲಕೃಷ್ಣ ಸ್ವಾಮಿ, ಆ ಕವಿ ಕುಳಿತು ಕಾವ್ಯವನ್ನು ಬರೆಯುತ್ತಿದ್ದ ಸಮುದ್ರ ತೀರದ ಆಲದಮರದ ಕಟ್ಟೆ ಇವುಗಳನ್ನು ಅವಲೋಕಿಸಿದರು.

ಅದೇ ದಿನ ಸಂಜೆ ಪೆರಡಾಲದ ಗ್ರಾಮ ಪಂಚಾಯಿತಿ ಭವನದಲ್ಲಿ ಕನ್ನಡ ನಾಡು ನುಡಿಗಳ ವಿಷಯವನ್ನು ಕುರಿತು ಈ ಮೂರು ಮಂದಿ ಉಜ್ವಲವಾದ ಭಾಷಣಗಳನ್ನು ಮಾಡಿದರು. ಅನಂತರ ಪೆರಲ ಗ್ರಾಮಕ್ಕೆ ಹೋಗಿ ಅಲ್ಲಿನ ಹೈಸ್ಕೂಲಿನಲ್ಲಿ ಕನ್ನಡ ಸಾಹಿತ್ಯ ಸಂಸ್ಕೃತಿಗಳನ್ನು ಕುರಿತು ಭಾಷಣ ಮಾಡಿದರು.

ತಾ|| ೭ರ ಬೆಳಿಗ್ಗೆ ಸುಕ್ಷೇತ್ರ ಕುಕ್ಕೆ ಸುಬ್ರಹ್ಮಣ್ಯಕ್ಕೆ ಹೋಗಿ, ದೇವರ ದರ್ಶನ ಪೂಜಾದಿಗಳನ್ನು ಮಾಡಿ, ಅಲ್ಲಿನ ಐತಿಹಾಸಿಕ ಸಂಗತಿಗಳನ್ನು ಸಂಗ್ರಹಿಸಿದರು. ಪರಿಷತ್ತು ಕೈಗೊಂಡಿರುವ ಮಹತ್ಕಾರ್ಯಗಳನ್ನು ಆ ಕ್ಷೇತ್ರವಾಸಿಗಳಿಗೆ ವಿವರಿಸಿದರು. ಈ ಮೂರು ದಿನಗಳ ಪ್ರವಾಸದಲ್ಲಿ ಅಧ್ಯಕ್ಷರು, ಕಾರ್ಯದರ್ಶಿಗಳು ಮತ್ತು ಕೋಶಾಧಿಕಾರಿಗಳು ಪರಿಷತ್ತು ಸ್ಥಾಪನೆಯಾದ ಉದ್ದೇಶ, ಅದು ಮಾಡುತ್ತಿರುವ ಕಾರ್ಯ, ಅದಕ್ಕೆ ಮಹಾಜನಗಳು ಸಲ್ಲಿಸಬೇಕಾದ ಸೇವೆ ಈ ವಿಷಯಗಳನ್ನು ಕುರಿತು ಹೃದಯಂಗಮವಾಗಿ ನಿರೂಪಿಸಿದರು. ಪರಿಷತ್ತಿನವರ ಈ ಪ್ರಸಾರ ಕಾರ್ಯದ ಪರಿಣಾಮವಾಗಿ ಕಾಸರಗೋಡು ತಾಲ್ಲೂಕಿನಲ್ಲಿ ಕನ್ನಡ ನಾಡು ನುಡಿಗಳ ಅಭಿಮಾನವು ಅಧಿಕವಾಗಿರುವುದಲ್ಲದೆ ಕಾಸರಗೋಡು ಕರ್ಣಾಟಕಕ್ಕೆ ಸೇರಲೇಬೇಕು ಎಂಬ ಜನಾಭಿಪ್ರಾಯ ಬಲವಾಗಿದೆ ಎಂದು ಹೇಳಬಹುದು.

'ಕನ್ನಡಿಗ'

---

## ಕನ್ನಡ ಸಾಹಿತ್ಯ ಪರಿಷತ್ತು

**ಚಾಮರಾಜಪೇಟೆ :: ಬೆಂಗಳೂರು-೧೮**

### ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ **ಕರ್ಣಾಟಕ ಕವಿಚರಿತೆಯ** ಮೊದಲನೇ ಭಾಗವನ್ನು ಪರಿಷತ್ತಿನ ಸದಸ್ಯರಿಗೆ ಇತರ ಪ್ರಕಟಣೆಗಳಿಗೆ ಇರುವ ರಿಯಾಯಿತಿ ದರದಲ್ಲೇ ಕೊಡಲಾಗುವುದು. ಮಾನ್ಯ ಸದಸ್ಯರು ಈ ರಿಯಾಯಿತಿಯ ಉಪಯೋಗ ಪಡೆಯಬೇಕೆಂದು ಕೋರಲಾಗಿದೆ.

**ಗೌರವ ಕಾರ್ಯದರ್ಶಿ**

# ವಸಂತ ಸಾಹಿತ್ಯೋತ್ಸವದ ದೃಶ್ಯಗಳು (ಏಪ್ರಿಲ್—೧೯೬೪)

## ಮನರಂಜನೆ ಕಾರ್ಯಕ್ರಮ



ದಿ. ೧೭ ರಂದು ಕುಮಾರಿ ಟಿ. ಆರ್. ನಾಗರತ್ನ ಮತ್ತು ಅವರ ಮಂಡಲಿಯವರಿಂದ ನಡೆದ ಸಂಗೀತ ಕಚೇರಿಯ ಚಿತ್ರ.

卐

## ಸಚಿವರಿಗೆ ಗೌರವಾರ್ಪಣ

卐



ಮುಕ್ತಾಯ ಭಾಷಣ ಮಾಡಲು ದಯಮಾಡಿಸಿದ್ದ ಅರಣ್ಯ ಖಾತೆ ಸಚಿವ ಶ್ರೀ ಬಿ. ರಾಚಯ್ಯನವರಿಗೆ ಪರಿಷತ್ತಿನ ಗೌ|| ಖಜಾಂಚಿ ಶ್ರೀ ಆರ್. ಅನಂತರಾಮನ್ ಅವರು ಹಾರ ಹಾಕುತ್ತಿದ್ದಾರೆ.



# ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ :: ಬೆಂಗಳೂರು-೧೮

---

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ

## ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರ

### ಪತ್ರಿಕಾಗೋಷ್ಠಿ

**(ದಿನಾಂಕ ೨೫-೭-೧೯೬೩ ನೇ ಗುರುವಾರ ಸಂಜೆ ೫ ಗಂಟೆಗೆ)**

**ಸನ್ಮಾನ್ಯ ಪತ್ರಿಕಾಕರ್ತರೆ, ಮತ್ತು ಮಾನ್ಯ ಮಿತ್ರರೆ,**

ದಿನಾಂಕ ೨೮-೭-೬೩ ನೇ ಭಾನುವಾರ ಬೆಳಗ್ಗೆ ೯ ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ೪೭ ನೆಯ ವರ್ಷದ ಸಕಲ ಸದಸ್ಯರ ಅಧಿವೇಶನ ಕೂಡುತ್ತದೆ. ಅಂದು ಪರಿಷತ್ತಿನ ಮುಂದಿನ ಮೂರು ವರ್ಷಗಳ ಆಡಳಿತ ನಿರ್ವಹಣೆಗಾಗಿ ಅಧ್ಯಕ್ಷರ ಮತ್ತು ಕಾರ್ಯಕಾರಿ ಸಮಿತಿಯ ಚುನಾವಣೆ ನಡೆಯುತ್ತದೆ. ಇಂತಹ ಸಂದರ್ಭದಲ್ಲಿ ದಿನಾಂಕ ೧೭-೬-೧೯೫೭ ರಿಂದ ಪರಿಷತ್ತಿನ ಅಧ್ಯಕ್ಷನಾಗಿದ್ದು—ಗೌರವ ಕಾರ್ಯದರ್ಶಿಗಳು, ಗೌ|| ಕೋಶಾಧಿಕಾರಿಗಳು, ವ್ಯವಸ್ಥಾಪಕರು, ಕಾರ್ಯಕಾರಿ ಸಮಿತಿಯ ಸದಸ್ಯರು, ಪತ್ರಿಕಾಕರ್ತರು, ಮತ್ತು ಪರಿಷತ್ತಿನ ಹಿತೈಷಿಗಳು ಇವರ ಸಹಾಯದಿಂದ ಪರಿಷತ್ತಿನ ಕಾರ್ಯಕಲಾಪಗಳನ್ನು ನಿರ್ವಹಿಸಿ ಈ ಮಹಾ ಸಂಸ್ಥೆಗೆ ಯಥಾಶಕ್ತಿಯ ಅಳಿಲು ಭಕ್ತಿಯ ಸೇವೆಯನ್ನು ಸಲ್ಲಿಸಿದ ನಾನು — ಈ ಸೇವಾವಕಾಶದಲ್ಲಿ ಪರಿಷತ್ತಿಗಾಗಿ ಸಲ್ಲಿಸಿದ ಕೈಂಕರ್ಯಗಳನ್ನು ಮಹಾ ಜನಗಳ, ಹಾಗೂ ಮಾನ್ಯ ಸದಸ್ಯರ ಮುಂದೆ ಇಂದು ನಿವೇದಿಸುವುದು ಅಗತ್ಯವೆಂದು ಭಾವಿಸಿದ್ದೇನೆ.

ನಾನು ೧೯೩೧ ರಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯನಾಗಿದ್ದೇನೆ. ಕೆಲವು ಕಾಲ ಕಾರ್ಯಕಾರಿ ಸಮಿತಿಯ ಸದಸ್ಯನಾಗಿ, ಕನ್ನಡ ನುಡಿಯ ಸಂಪಾದಕನಾಗಿ ಸೇವೆ ಸಲ್ಲಿಸಿದ್ದೇನೆ. ೧೯೩೧ ರಿಂದ ನಡೆದ ಸಾಹಿತ್ಯ ಸಮ್ಮೇಳನಗಳಲ್ಲಿ, ಹಲವಾರು ಸಮ್ಮೇಳನಗಳಲ್ಲಿ ಭಾಗ ವಹಿಸಿದ್ದೇನೆ. ಪರಿಷತ್ತಿನ ಅನೇಕ ಸಮಾರಂಭಗಳಲ್ಲಿ ಭಾಷಣಕಾರನಾಗಿ, ಪರಿಷತ್ತಿನ ಕನ್ನಡ ನಿಘಂಟು ಸಂಪಾದಕ ಸಮಿತಿಯ ಸದಸ್ಯನಾಗಿ, ಕನ್ನಡ ಕವಿಚರಿತೆಯ ಸಂಪಾದಕ ಮಂಡಲಿಯ ಸದಸ್ಯನಾಗಿ, ಹಾಗೂ ಹಲವು ಉಪಸಮಿತಿಗಳ ಸದಸ್ಯನಾಗಿ ಯಥಾಶಕ್ತಿ ಸೇವೆ ಸಲ್ಲಿಸಿದ್ದೇನೆ. ಪರಿಷತ್ತಿನ ಧ್ಯೇಯೋದ್ದೇಶಗಳಿಗನುಗುಣವಾದ ಕರ್ಣಾಟಕ ಏಕೀಕರಣ ಚಳುವಳಿಗಾಗಿ ಸುಮಾರು ೪೦ ವರ್ಷಗಳಿಂದ ಕೈಲಾದಷ್ಟು ಶ್ರಮಿಸಿದ್ದೇನೆ. ಕರ್ಣಾಟಕದ ಗಡಿಗಳಾದ, ಸೊಲ್ಲಾಪುರ, ಅಕ್ಕಲಕೋಟೆ, ಆದವಾನಿ, ಮಡಕಶಿರಾ, ಹೊಸೂರು, ಡೆಂಕಣಿ ಕೋಟೆ, ನೀಲಗಿರಿ, ಕಾರವಾರ, ಕಾಸರಗೋಡು, ತಾಳವಾಡಿ, ಗಡಹಿಂಗ್ಲೆಜ್, ನಿಪ್ಪಾಣಿ, ಕೊಲ್ಲಾಪುರ, ಬೀದರ್, ಭಾಲ್ಕಿ ಮೊದಲಾದ ಕಡೆ ಹಲವಾರು ಸಲ ಸಂಚರಿಸಿ ಕನ್ನಡದ ಜಾಗೃತಿಗಾಗಿ ಶ್ರಮಿಸಿದ್ದೇನೆ. ವಿಶಾಲ ಮೈಸೂರು ರಾಜ್ಯ ರಚನೆಗೆ ಕಿಂಚಿತ್ ಯತ್ನಿಸಿದ್ದೇನೆ.

## ಸಂಪದಭಿವೃದ್ಧಿ

ಪರಿಷತ್ಸದಸ್ಯರ ಅನುಗ್ರಹದಿಂದ ೧೯೫೬ ನೇ ಜೂನ್ ೧೭ ರಂದು ಪರಿಷತ್ತಿನ ಅಧ್ಯಕ್ಷ ಪದವಿಯನ್ನು ವಹಿಸಿಕೊಂಡಮೇಲೆ ಇಂದಿನವರೆಗೆ, ಪರಿಷತ್ತಿನ ಆರ್ಥಿಕ, ಶೈಕ್ಷಣಿಕ, ವಾಙ್ಮಯಾತ್ಮಕ ಮತ್ತು ಆಡಳಿತಗಳ ಪ್ರಗತಿಗಾಗಿ ಕಿಂಚಿತ್ತು ದುಡಿದಿದ್ದೇನೆ. ನಾನು ಅಧ್ಯಕ್ಷನಾದಾಗ ಪರಿಷತ್ತಿನ ಹಿಂಭಾಗದ ಪೌಳಿಗೋಡೆ (Compound) ಬಿದ್ದುಹೋಗಿತ್ತು. ಸಭಾಭವನದಲ್ಲಿ ಪೂರ್ತಿ ಕುರ್ಚಿಗಳಿರಲಿಲ್ಲ. ಪರಿಷತ್ತಿನ ಕೋಣೆಯೊಂದರಲ್ಲಿ ಪುಸ್ತಕಗಳು ರಾಶಿರಾಶಿಯಾಗಿದ್ದುವು. ಅವನ್ನೆಲ್ಲಾ ಸರಿಪಡಿಸಿ ಈಗ ವ್ಯವಸ್ಥೆಗೊಳಿಸಲಾಗಿದೆ. ಮೈಸೂರು ಸಂಗೀತ ನಾಟಕ ಅಕಾಡೆಮಿಯವರ ಸಹಾಯದಿಂದ ಪರಿಷತ್ತಿನ ರಂಗಮಂಟಪ ಸಜ್ಜುಗೊಂಡಿದೆ. ಸಂಗೀತೋಪಕರಣಗಳು ಸಿದ್ಧವಾಗಿವೆ. ಸಭಾಭವನದಲ್ಲಿ ಕುರ್ಚಿಗಳು ಸಂಪೂರ್ಣವಾಗಿ ಅಲಂಕರಿಸಲ್ಪಟ್ಟಿವೆ. ಪುಸ್ತಕಾಲಯದ ವ್ಯವಸ್ಥೆ ಅಚ್ಚುಕಟ್ಟಾಗಿದೆ. ವಾಚನಾಲಯವೂ ಉತ್ತಮಗೊಂಡಿದೆ. ಈ ಎಲ್ಲ ಸುಧಾರಣೆಗಳನ್ನೂ ಆಗ ಮೈಸೂರಿನ ಮುಖ್ಯಮಂತ್ರಿಗಳಾಗಿದ್ದ ಮಾನ್ಯ ಶ್ರೀ ಕೆ. ಹನುಮಂತಯ್ಯನವರು ನನ್ನ ಪ್ರಾರ್ಥನೆಯಂತೆ ಪರಿಷತ್ತಿಗೆ ಕೊಟ್ಟ ೩೫,೦೦೦ ರೂ. ಗಳ ಉದಾರ ಸಹಾಯದ್ರವ್ಯದ ನೆರವಿನಿಂದ ಮಾಡಲಾಯಿತು.

ಸರ್ಕಾರದಿಂದ ಪ್ರತಿವರ್ಷ ಪರಿಷತ್ತಿಗೆ ೫,೦೦೦ ರೂ.ಗಳ ಸಹಾಯ ದ್ರವ್ಯ ದೊರೆಯುತ್ತಿತ್ತು. ಆದರೆ ನಾವು ನಡೆಸಿದ ಪ್ರಯತ್ನದ ಫಲವಾಗಿ ೧೯೫೮-೫೯ ರಿಂದ ಪ್ರತಿವರ್ಷ ೭,೫೦೦ ರೂ.ಗಳ ಸಹಾಯ ದ್ರವ್ಯ ಬರುವಂತಾಯಿತು ಎಂಬುದನ್ನು ತಿಳಿಸಲು ಹರ್ಷಿಸುತ್ತೇನೆ. ಆದರೆ ಪರಿಷತ್ತು ನಡೆಸುತ್ತಿರುವ ಕಾರ್ಯಕಲಾಪಗಳಿಗೆ ಇದು ಸರಿಯಾದ ಸಹಾಯವಲ್ಲ. ಇತರ ರಾಜ್ಯಗಳಲ್ಲಿ ಇಂತಹ ಪರಿಷತ್ತುಗಳಿಗೆ ಉದಾರವಾಗಿ ಧನಸಹಾಯ ಸಿಗುತ್ತಿದೆ. ನಮ್ಮ ಸರ್ಕಾರ ಈ ವಿಷಯವಾಗಿ ಉದಾರವಾಗಬೇಕು. ವರ್ಷಕ್ಕೆ ೫೦,೦೦೦ ರೂ.ಗಳನ್ನಾದರೂ ಪರಿಷತ್ತಿಗೆ ಕೊಡಬೇಕೆಂಬುದು ನನ್ನ ಆಶೆ.

## ಬೆಂಗಳೂರು ಕಾರ್ಪೊರೇಷನ್ನಿನ ಸಹಾಯ

ಪರಿಷತ್ತಿನ ವಾಚನಾಲಯ ಮತ್ತು ವಸಂತ ಸಾಹಿತ್ಯೋತ್ಸವಕ್ಕೆ ಪ್ರತಿವರ್ಷ ಕೊಡುತ್ತಿದ್ದ ಹಣಕ್ಕಿಂತ ಹೆಚ್ಚು ಹಣವನ್ನು ನಗರಸಭೆ ಕೊಟ್ಟಿದೆ. ಅಲ್ಲದೆ ಪರಿಷತ್ತಿಗೆ ನೀರನ್ನು ಉಚಿತವಾಗಿ ಒದಗಿಸುತ್ತಿದೆ. ಬೆಂಗಳೂರು ನಗರಸಭೆಯ ಈ ಸಹಕಾರ ಶ್ಲಾಘನಾರ್ಹವಾಗಿದೆ.

## ಸನ್ಮಾನಸಭೆ

ಸಮ್ಮೇಳನಾಧ್ಯಕ್ಷರು ಮತ್ತು ಪರಿಷತ್ತಿನ ಸಂಪರ್ಕ ಮರೆಯದಿರಲೆಂದು ತಾ॥ ೧೨-೧೨-೫೬ ರ ಶುಭದಿನ ಡಾ॥ ಆರ್. ಆರ್. ದಿವಾಕರ್ ಅವರ ಅಧ್ಯಕ್ಷತೆಯಲ್ಲಿ ಮೈಸೂರಿನ ರಾಜ್ಯಪಾಲರ ಸಮ್ಮುಖದಲ್ಲಿ ಅದುವರೆಗೆ ಆಗಿಹೋದ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರನ್ನು ಆಹ್ವಾನಿಸಿ ಎಲ್ಲರಿಗೂ ರಜತಕರಂಡದಲ್ಲಿ ಬಿನ್ನಹ ಪತ್ರಿಕೆಯನ್ನು ಅರ್ಪಿಸಲಾಯಿತು. ಅದೇ ಸಂದರ್ಭದಲ್ಲಿ 'ಕನ್ನಡ ನುಡಿಯ ಸನ್ಮಾನೋತ್ಸವ ವಿಶೇಷ ಸಂಚಿಕೆ' (೧೯೫೬) ಪ್ರಕಟಿಸಲಾಯಿತು. ಆ ಸಂಚಿಕೆಯು ಪರಿಷತ್ತಿನ ಕಾರ್ಯಕಲಾಪಗಳ ಒಂದು ಕೈಪಿಡಿ ಎಂಬಂತಿದೆ. ಇದರ ರಚನೆಯ ಕಾಲದಲ್ಲಿ ಕಾರ್ಯಕಾರಿ ಸಮಿತಿಯ ಸದಸ್ಯರಾದ ಪ್ರೊ॥ ಜಿ. ವೆಂಕಟಸುಬ್ಬಯ್ಯನವರು ಮಾಡಿದ ಉಪಕಾರವನ್ನು ನಾನು ಇಲ್ಲಿ ಸ್ಮರಿಸಬೇಕಾಗಿದೆ.

## ಪರಿಷತ್ತಿನ ಸರಸ್ವತೀ ಭಂಡಾರ

ಪರಿಷತ್ತಿನ ಪುಸ್ತಕ ಭಂಡಾರದಲ್ಲಿ ಈಗ ಒಟ್ಟು ೧೪,೦೦೦ ಪುಸ್ತಕಗಳಿವೆ. ನಾನು ಅಧ್ಯಕ್ಷನಾದಮೇಲೆ ಪುಸ್ತಕ ಭಂಡಾರಕ್ಕೆ ಸುಮಾರು ೩,೫೦೦ ಗ್ರಂಥಗಳು ಹೊಸದಾಗಿ ಸೇರಿವೆ. ಇದರಲ್ಲಿ ೧,೮೦೦ ಗ್ರಂಥಗಳು ಪುಕ್ಕಟೆಯಾಗಿ ಮತ್ತು ವಿಮರ್ಶೆಗೆ ಬಂದವುಗಳು. ನನ್ನ ಸಂಚಾರ ಕಾಲದಲ್ಲಿ ಗ್ರಂಥಕರ್ತೃಗಳೊಂದಿಗೆ ಸಂಭಾಷಿಸಿ ಪರಿಷತ್ತಿಗೆ ಅನೇಕ ಉಪಯುಕ್ತ ಗ್ರಂಥಗಳನ್ನು ಉಚಿತವಾಗಿ ತಂದುಕೊಟ್ಟಿದ್ದೇನೆ. ಪುಸ್ತಕಗಳ ಅಕಾರಾದಿಯಾಗಿ ಗ್ರಂಥಗಳ ಪಟ್ಟಿಯನ್ನು ಸಿದ್ಧಪಡಿಸಿ ಅಚ್ಚಿಗೆ ಕೊಡಲಾಗಿದೆ. ಕರ್ಣಾಟಕದ ಗ್ರಂಥಕಾರರು ಪ್ರತಿಯೊಬ್ಬರೂ ತಮ್ಮ ಗ್ರಂಥಗಳನ್ನು ಪರಿಷತ್ತಿಗೆ ಕಳುಹಿಸುವುದರ ಮೂಲಕ ನೆರವಾಗಬೇಕೆಂದು ನನ್ನ ಮನವಿ.

## ಗ್ರಂಥ ಪ್ರಕಟಣೆ

ನಾನು ಪರಿಷತ್ತಿನ ಅಧ್ಯಕ್ಷನಾದಮೇಲೆ ಕರ್ಣಾಟಕ ಕವಿಚರಿತ್ರೆಯ ಮೂರು ಭಾಗಗಳನ್ನೂ ಸಂಸ್ಕರಿಸಿ ಅವುಗಳನ್ನು ಎರಡು ಭಾಗವಾಗಿ ವಿಂಗಡಿಸಿ ಈಗ ಪ್ರಥಮ ಭಾಗವನ್ನು ಪರಿಷತ್ತಿನಿಂದ ಪ್ರಕಟಿಸಲಾಗಿದೆ. ಎರಡನೇ ಭಾಗವು ಈಗ ಅಚ್ಚಿಗೆ ಸಿದ್ಧವಾಗಿದೆ. ಈ ಕಾರ್ಯವು ಸಮಗ್ರ ಕರ್ಣಾಟಕಕ್ಕೆ ಪರಿಷತ್ತು ಕೊಟ್ಟ ದೊಡ್ಡ ದೇಣಿಗೆಯೆಂದು ಹೇಳಬಹುದು. ಕಷ್ಟಕರವಾದ ಈ ಸಂಪಾದನೆಯ ಕಾರ್ಯದಲ್ಲಿ ವಿಖ್ಯಾತ ವಿದ್ವಾಂಸರಾದ ಪ್ರೊ|| ಡಿ. ಎಲ್. ನರಸಿಂಹಾಚಾರ್, ಎಂ.ಎ., ಶ್ರೀ ಕೆ. ಎಸ್. ಧರಣೇಂದ್ರಯ್ಯ, ಎಂ.ಎ., ಬಿ.ಟಿ., ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ, ಪ್ರೊ|| ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.—ಈ ನಾಲ್ಕು ಮಂದಿ ಕೂಡಿ ಈ ಕಾರ್ಯವನ್ನು ನಿರ್ವಹಿಸಿದ್ದಾರೆ. ಕವಿಚರಿತೆ ೨ ನೇ ಭಾಗವು ಅಚ್ಚಾಗಿ ಪ್ರಕಟವಾದರೆ ಅದರಿಂದ ಕನ್ನಡಾಭ್ಯಾಸಿಗಳಿಗೆ ತುಂಬಾ ಪ್ರಯೋಜನವಾಗುವುದೆಂದು ಭಾವಿಸಿದ್ದೇನೆ. ಇದರಲ್ಲಿ ಹೊಸ ಕವಿಗಳ ಹೆಸರೂ ಹೊಸ ವಿಚಾರವೂ ಬಹಳವಾಗಿ ಸೇರಿವೆ. ನಾನು ಪರಿಷತ್ತಿನ ಅಧ್ಯಕ್ಷನಾದಮೇಲೆ ಪರಿಷತ್ತಿನ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ಅನುಭವಮುಕುರಂ, ಚೇರಮಕಾವ್ಯಂ, ತ್ರಿಪುರದಹನ ಸಾಂಗತ್ಯ, ಉದ್ಭಟದೇವ ಚರಿತೆ,— ಎಂಬೀ ಪ್ರಾಚೀನ ಗ್ರಂಥಗಳು ಪ್ರಕಟವಾಗಿವೆ. ನೂತನ ಸಾಹಿತ್ಯ ಕೃತಿಗಳಾದ ಗಮಕ ಕಾವ್ಯಮಂಜರಿ, ಆಧುನಿಕ ಗದ್ಯಸಾಹಿತ್ಯ, ಅತ್ಯುತ್ತಮ ಸಣ್ಣಕತೆಗಳು, ಕಾದಂಬರಿ ಸಾಮಾನ್ಯ ಮನುಷ್ಯ, ಮೂರು ಸ್ಪರ್ಧಾ ನಾಟಕಗಳು, ವಾಚನ ಕಾವ್ಯಮಂಜರಿ, ಕಾವ್ಯ ಸೌರಭ ಮೊದಲಾದ ಗ್ರಂಥಗಳು ಪ್ರಕಟವಾಗಿವೆ. ಅಲ್ಲದೆ ಕನ್ನಡ ಬಾವುಟ, ಕನ್ನಡ ನಾಡಿನ ಚರಿತ್ರೆ ಮತ್ತು ನೂತನ ವಿಮರ್ಶೆಯಿಂದ ಕೂಡಿದ ಸೋಮೇಶ್ವರ ಶತಕ ಇವುಗಳ ಪುನರ್ಮುದ್ರಣವೂ ಆಗಿದೆ.

## ಕನ್ನಡ ನುಡಿ—ಪರಿಷತ್ಪತ್ರಿಕೆ

ವರ್ಷಕ್ಕೆ ೬ ರೂ. ಗಳ ಚಂದಾ ಪಡೆದು ಮಾನ್ಯ ಸದಸ್ಯರಿಗೆ 'ಕನ್ನಡ ನುಡಿ' ಮಾಸಿಕ (೧೨ ಪ್ರತಿ), 'ಸಾಹಿತ್ಯ ಪರಿಷತ್ ಪತ್ರಿಕೆ' ಷಾಣ್ಮಾಸಿಕ (೨ ಪ್ರತಿ) ಸಲ್ಲಿಸುವ ಪರಿಷತ್ತಿನ ಕಾರ್ಯ ಸಾಹಸಮಯವೇ ಸರಿ. ಮೇಲೆಕಂಡ ಎರಡು ಪತ್ರಿಕೆಗಳನ್ನೂ ಇತರ ಪರಿಷತ್ತಿನ ಸೌಲಭ್ಯಗಳನ್ನೂ ಪಡೆಯುವ ಮಾನ್ಯ ಸದಸ್ಯರು ವರ್ಷಕ್ಕೆ ೧೨ ರೂ. ಗಳ ಚಂದಾ ಸಲ್ಲಿಸುವುದಾದರೆ ಪರಿಷತ್ತಿಗೆ ಮಹೋಪಕಾರವನ್ನು ಮಾಡಿದಂತಾಗುತ್ತದೆ. ನಾನು ಪ್ರತಿ

ಯೊಂದು ಸಕಲ ಸದಸ್ಯರ ಸಭೆಯಲ್ಲೂ ಈ ಮಾತನ್ನು ಹೇಳುತ್ತಾ ಬಂದಿದ್ದೇನೆ. ಆದರೂ ಇದು ಸಭೆಯಿಂದ ಮಂಜೂರಾಗಿಲ್ಲ. ಈಗಲೂ ಮಾನ್ಯ ಸದಸ್ಯರು ದೊಡ್ಡ ಮನಸ್ಸು ಮಾಡಿ ನನ್ನ ಈ ಪ್ರಾರ್ಥನೆಯನ್ನು ಅಂಗೀಕರಿಸಿದರೆ ಪರಿಷತ್ತಿನ ಆರ್ಥಿಕಾಭಿವೃದ್ಧಿಗೆ ಸಹಾಯವಾಗುತ್ತದೆ. ಇದೇ ಊರಿನಲ್ಲಿರುವ ಒಂದು ಮಹಿಳಾ ಸಮಾಜವು ೧೨ ರೂ. ಗಳಂತೆಯೂ, ಗಾಯನ ಸಮಾಜವು ೧೫ ರೂ. ಗಳಂತೆಯೂ (ವರ್ಷಕ್ಕೆ) ಚಂದಾ ವಸೂಲು ಮಾಡುತ್ತಿವೆ. ಬಹುಮುಖವಾದ ಕಾರ್ಯಕಲಾಪಗಳನ್ನುಳ್ಳ ಪರಿಷತ್ತಿನಂತಹ ಮಹಾಸಂಸ್ಥೆಗೆ ವರ್ಷಕ್ಕೆ ೧೨ ರೂ. ಗಳ ಚಂದಾ ವಿಧಿಸುವುದು ಹೆಚ್ಚಲ್ಲವೆಂದು ನನ್ನ ಅಭಿಪ್ರಾಯ. ನಾನು ಪರಿಷತ್ತಿನ ಅಧ್ಯಕ್ಷನಾದ ಮೇಲೂ ಬಹುಕಾಲ ಕನ್ನಡ ನುಡಿ ಮತ್ತು ಪರಿಷತ್‌ಪತ್ರಿಕೆಗಳ ಸಂಪಾದಕನಾಗಿ ಕೆಲಸ ಮಾಡಿದ್ದೇನೆ. ಈಗ ಕನ್ನಡ ನುಡಿಗೆ ಶ್ರೀ ಅನ್ನದಾನಯ್ಯ ಪುರಾಣಿಕರು ಸಂಪಾದಕರಾಗಿದ್ದಾರೆ. ನಾನು ಪರಿಷತ್ಪತ್ರಿಕೆ ಸಂಪಾದಕನಾಗಿರುವೆನು. ಡಾ|| ಕೆ. ಎಂ. ಕೃಷ್ಣರಾಯರು ಇದರ ಸಹ ಸಂಪಾದಕರಾಗಿದ್ದಾರೆ.

## ಪರಿಷತ್ತಿನಲ್ಲಿರುವ ನಿಧಿಗಳು

ಪರಿಷತ್ತಿನ ಸಂಸ್ಥಾಪಕರ ದೂರದೃಷ್ಟಿಯ ಫಲವಾಗಿ ಪರಿಷತ್ತಿನಲ್ಲಿ ಗಮಕ ನಿಧಿ, ಹರಿದಾಸ ಸಾಹಿತ್ಯ ನಿಧಿ, ಸಾಹಿತ್ಯ ಪರೀಕ್ಷಾ ನಿಧಿ, ಉಪನ್ಯಾಸ ನಿಧಿ, ಇತರ ನಿಧಿಗಳು—ಹೀಗೆ ನಿಧಿಯ ರೂಪದಲ್ಲಿ ಒಟ್ಟು ೧೮,೯೫೧ ರೂ. ಗಳಿವೆ. ಇದರಿಂದ ಬರುವ ಬಡ್ಡಿಯಿಂದ ದಾನಿಗಳ ಉದ್ದೇಶಗಳಿಗನುಗುಣವಾಗಿ ಪರಿಷತ್ತಿನವರು ಕಾರ್ಯಕ್ರಮಗಳನ್ನು ನಿರ್ವಹಿಸುತ್ತಿದ್ದಾರೆ. ಈ ನಿಧಿಗಳು ಸಾಹಿತ್ಯೋನ್ನತಿಗೆ ನೆರವಾಗಿವೆ.

ನಾನು ಅಧ್ಯಕ್ಷನಾದ ಮೇಲೆ ಪರಿಷತ್ತಿನ ಉಜ್ವಲಾಭಿಮಾನಿಗಳೂ, ಬೆಂಗಳೂರಿನ ಪ್ರಮುಖ ವರ್ತಕರೂ, ಉದಾರದಾನಿಗಳೂ ಆದ ಶ್ರೀಮಾನ್ ಆರ್. ಚಂದ್ರಶೇಖರಯ್ಯನವರು ೨,೦೦೦ ರೂ. ಗಳನ್ನು ಪರಿಷತ್ತಿಗೆ ಒಂದು ನಿಧಿಯಾಗಿ ಅರ್ಪಿಸಿದ್ದಾರೆ. ಈ ನಿಧಿಯ ಸಮರ್ಪಣೆಯಲ್ಲಿ ಅವರ ಧರ್ಮಪತ್ನಿ ಶ್ರೀಮತಿ ಸುಬ್ಬಮ್ಮನವರು ನಮಗೆ ತುಂಬಾ ಉಪಕಾರ ಮಾಡಿದ್ದಾರೆ. ಬೆಂಗಳೂರಿನ ಮತ್ತೊಬ್ಬ ಗಣ್ಯಮಹನೀಯರೂ, ಕರ್ಣಾಟಕ ಮುದ್ರಣಾಲಯದ ಒಡೆಯರೂ ಆದ ಶ್ರೀಮಾನ್ ಟಿ. ಎನ್. ನಂಜುಂಡಪ್ಪನವರು ೧,೦೦೦ ರೂ. ಗಳ ನಿಧಿಯನ್ನು ಪರಿಷತ್ತಿಗೆ ಅರ್ಪಿಸಿದ್ದಾರೆ. ಅವರ ಉಪಕಾರವು ಇಲ್ಲಿ ಸ್ಮರಣಾರ್ಹವಾಗಿದೆ. ನಾಡಿನ ಮತ್ತು ನಗರದ ಪ್ರಮುಖ ವರ್ತಕರು ಈ ರೀತಿಯಾಗಿ ಪರಿಷತ್ತಿಗೆ ಹೆಚ್ಚು ನಿಧಿಗಳನ್ನು ಅರ್ಪಿಸಿ ಸಾಹಿತ್ಯ ಸೇವೆಗೆ ನೆರವಾಗಬೇಕೆಂದು ಕೋರುತ್ತೇನೆ.

## ಕನ್ನಡ ನಿಘಂಟು ರಚನಾಕಾರ್ಯ

ಪರಿಷತ್ತು ಕೈಗೊಂಡಿರುವ ಬಹು ದೊಡ್ಡ ಕಾರ್ಯ ಕನ್ನಡ-ಕನ್ನಡ ನಿಘಂಟಿನ ರಚನೆ. ಈ ಕಾರ್ಯವನ್ನು ಪರಿಷತ್ತಿನ ಹಿರಿಯರು, ೧೯೪೩ ರಿಂದ ಸುಪ್ರಸಿದ್ಧ ಡಾ|| ಎ. ಆರ್. ಕೃಷ್ಣಶಾಸ್ತ್ರಿಗಳ ನೇತೃತ್ವದಲ್ಲಿ ಪ್ರಾರಂಭಿಸಿದರು. ಕರ್ನಾಟಕದ ಪ್ರಮುಖ ವಿದ್ವಾಂಸರಾದ ಪ್ರೊ|| ಟಿ. ಎನ್. ಶ್ರೀಕಂಠಯ್ಯ, ಪ್ರೊ||. ಡಿ. ಎಲ್. ನರಸಿಂಹಾಚಾರ್, ಡಾ|| ಆರ್. ಎಸ್. ಮುಗಳಿ, ಪ್ರೊ|| ಎಸ್. ಎಸ್. ಮಾಳವಾಡ್, ಪ್ರೊ|| ಡಿ. ಕೆ. ಭೀಮಸೇನ ರಾವ್, ಪ್ರೊ|| ಕೆ. ಜಿ. ಕುಂದಣಗಾರ್, ಪ್ರೊ|| ಎಂ. ಮರಿಯಪ್ಪಭಟ್, ಪ್ರೊ|| ಕೆ. ವಿ.

ರಾಘವಾಚಾರ್, ಶ್ರೀ ಎನ್. ಲಕ್ಷ್ಮೀನಾರಾಯಣರಾವ್, ಶ್ರೀ ಕೆ. ಎಸ್. ಧರಣೇಂದ್ರಯ್ಯ, ಡಾ|| ಆರ್. ಸಿ. ಹಿರೇಮಠ್, ಶ್ರೀ ಡಿ. ಸಿ. ಸುಬ್ಬರಾಯಪ್ಪ, ಶ್ರೀ ಸಿದ್ದಯ್ಯಪುರಾಣಿಕ್, ಪ್ರೊ|| ಡಿ. ಜವರೇಗೌಡ ಮತ್ತು ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ ಮೊದಲಾದವರು ಈ ಸಂಪಾದಕಮಂಡಲಿಯಲ್ಲಿದ್ದಾರೆ. ನಿಘಂಟು ಡೆಮ್ಮಿ ೧/೮ ಆಕಾರದಲ್ಲಿ ಸುಮಾರು ೫,೦೦೦ ಪುಟಗಳಷ್ಟಾಗುತ್ತದೆ. ಈ ನಿಘಂಟು ರಚನೆಯಾದರೆ ಕನ್ನಡಿಗರಿಗೆ ಇದರಿಂದ ಮಹೋಪಕಾರ ವಾಗುವುದೆಂದು ನಂಬಬಹುದು. ಮೈಸೂರು ಸರಕಾರದವರು ಇದರ ರಚನೆಗೆ ಧನಸಹಾಯ ಮಾಡಿದ್ದಾರೆ. ತಾ|| ೨೯-೫-೧೯೬೧ ರಲ್ಲಿ ಸರ್ಕಾರದ ಕೂಡ ಪರಿಷತ್ತು ೧೫ ಲಕ್ಷ ರೂ. ಗಳ ವೆಚ್ಚದಲ್ಲಿ ನಿಘಂಟನ್ನು ರಚಿಸಲು ಕರಾರುಮಾಡಿಕೊಂಡಿದೆ. ಇದರಲ್ಲಿ ೧೦ ಲಕ್ಷ ರೂ. ಗಳು ಬಂದಿವೆ. ಈ ಸಂದರ್ಭದಲ್ಲಿ ಆಗಿನ ಮುಖ್ಯಮಂತ್ರಿ ಶ್ರೀ ಬಿ. ಡಿ. ಜತ್ತಿ, ಅರ್ಥಮಂತ್ರಿ ಶ್ರೀ ಟಿ. ಮರಿಯಪ್ಪ, ವಿದ್ಯಾಮಂತ್ರಿ ಶ್ರೀ ಅಣ್ಣಾರಾವ್ ಗಣಮುಖಿ ಈ ಮಹನೀಯರು ಮಾಡಿದ ಸಹಾಯ ಸ್ಮರಣಾರ್ಹ. ಈಗ ಪರಿಷತ್ತು ನಿಘಂಟಿನ ಕಾರ್ಯಕ್ಕಾಗಿ ಒಂದು ಹೊಸ ಕಟ್ಟಡ ವನ್ನು ಉದಾರಿಗಳ ನೆರವಿನಿಂದ (೧೬,೦೦೦ ರೂ. ಗಳ ವೆಚ್ಚದಿಂದ) ಕಟ್ಟಿಸಿದೆ. ಸುಮಾರು ಒಂದು ಲಕ್ಷ ರೂ.ಗಳ ವೆಚ್ಚದಲ್ಲಿ ಮುದ್ರಣ ಯಂತ್ರ, ಅದಕ್ಕೆ ಸಂಬಂಧಪಟ್ಟ ಯಂತ್ರೋಪಕರಣ ಗಳು ಸಿದ್ಧವಾಗಿವೆ. ಈ ನಿಘಂಟು ಮುಕ್ತಾಯವಾದರೆ ಪರಿಷತ್ತಿಗೆ ತಕ್ಕಷ್ಟು ಆರ್ಥಿಕ ಲಾಭ ವಾಗುತ್ತದೆ. ನಿಘಂಟಿನ ಮಾರಾಟದಲ್ಲಿ ಶೇಕಡ ೧೦ ರಷ್ಟು ಹಣ ಪರಿಷತ್ತಿಗೆ ಸಂಭಾವನಾ ರೂಪದಲ್ಲಿಯೂ, ನಿಘಂಟಿನ ೫೦೦ ಪ್ರತಿಗಳು ಉಚಿತವಾಗಿಯೂ ಕೊಡುವಂತೆ ಸರ್ಕಾರದಲ್ಲಿ ಕರಾರಾಗಿದೆ. ತುರ್ತುಪರಿಸ್ಥಿತಿಯ ಕಾರಣದಿಂದ ಸರ್ಕಾರದಿಂದ ಈ ಹಣ ಬರುವುದು ತಡವಾಗಿದೆ. ಈ ಬಗೆಗೆ ಪರಿಷತ್ತು ಸರ್ಕಾರದಲ್ಲಿ ಹಣವನ್ನು ಪಡೆಯಲು ವ್ಯವಹಾರ ನಡೆಸಿದೆ. ಕರ್ಣಾಟಕದ ಮಹಾಜನರು ಉದಾರವಾಗಿ ಧನಸಹಾಯ ಮಾಡಿ ಪರಿಷತ್ತು ಕೈಗೊಂಡಿರುವ ಈ ಕಾರ್ಯ ದಲ್ಲಿ ಸಹಾಯಮಾಡಬೇಕಾಗಿ ಕೋರುತ್ತೇನೆ. ಈ ಕನ್ನಡ ನಿಘಂಟು ಗಾತ್ರದಿಂದ ಶ್ರೀ ಕಿಟ್ಟೆಲರ ನಿಘಂಟಿನ ನಾಲ್ಕರಷ್ಟಾಗಿ ಹೆಚ್ಚು ಪ್ರಯೋಜನಕಾರಿಯಾಗಿ ಇಡೀ ಭಾರತದಲ್ಲಿಯೇ ಪ್ರಖ್ಯಾತವೆನಿಸುವುದು.

## ಪರಿಷತ್ತಿಗೆ ಒಂದು ಕನ್ನಡ ಟೈಪ್‌ರೈಟರ್

ಪರಿಷತ್ತಿಗೆ ಒಂದು ಕನ್ನಡ ಟೈಪ್‌ರೈಟರನ್ನು ತರಿಸಿದೆ. ಈಗ ಪ್ರತಿದಿನ ಸಂಜೆ ಈ ಯಂತ್ರವನ್ನು ಉಪಯೋಗಿಸಲು ತರಗತಿಗಳನ್ನು ನಡೆಸಲಾಗುತ್ತಿದೆ. ಶ್ರೀ ಅನಂತಸುಬ್ಬ ರಾಯರು ಈ ವಿಷಯದಲ್ಲಿ ಪರಿಷತ್ತಿಗೆ ನೆರವಾಗಿದ್ದಾರೆ.

## ಪರಿಷತ್ತಿನ ಪರೀಕ್ಷೆಗಳು

ಕನ್ನಡ ಸಾಹಿತ್ಯ ಪರಿಷತ್ತು ಹಲವಾರು ವರ್ಷಗಳಿಂದ ಕನ್ನಡ ಕಾವ, ಕನ್ನಡ ಜಾಣ ಮತ್ತು ಗಮಕ ಪ್ರವೇಶ ಪರೀಕ್ಷೆಗಳನ್ನು ನಡೆಸುತ್ತಿದೆ. ಕೆಲವು ಸಮಯದಲ್ಲಿ ಗಮಕ ಪ್ರೌಢ ಪರೀಕ್ಷೆ ನಡೆದುದೂ ಉಂಟು. ನಾನು ಅಧ್ಯಕ್ಷನಾದಮೇಲೆ, ಈ ಪರೀಕ್ಷೆಗಳನ್ನು ಚುರುಕು ಗೊಳಿಸಿ ಹೆಚ್ಚುಮಂದಿ ವಿದ್ಯಾರ್ಥಿಗಳು ಭಾಗವಹಿಸುವಂತೆ ಪ್ರಯತ್ನಿಸಲಾಗಿದೆ. ೧೯೫೬ ರಿಂದ ಈವರೆಗೆ ಕನ್ನಡ ಕಾವ ಪರೀಕ್ಷೆಯಲ್ಲಿ ೪೬೪ ಮಂದಿ, ಕನ್ನಡ ಜಾಣ ಪರೀಕ್ಷೆಯಲ್ಲಿ ೨,೮೦೪ ಮಂದಿ, ಗಮಕ ಪರೀಕ್ಷೆಯಲ್ಲಿ ೫೨೨ ಮಂದಿ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಉತ್ತೀರ್ಣ

## ಕನ್ನಡ ರಾಜ್ಯೋತ್ಸವ

ನಾನು ಪರಿಷತ್ತಿನ ಅಧ್ಯಕ್ಷನಾದಮೇಲೆ ೧೯೫೬ ನೇ ನವೆಂಬರ್‌ನಿಂದ ಪ್ರತಿವರ್ಷ ತಪ್ಪದಂತೆ ಕನ್ನಡ ರಾಜ್ಯೋತ್ಸವವನ್ನು ನಡೆಸುತ್ತಾ ಬರಲಾಗಿದೆ. ಅಷ್ಟೇ ಅಲ್ಲದೆ ಪರಿಷತ್ತಿನ ಕಚೇರಿಗೆ ಆ ದಿನ ರಜಾ ಕೊಡಲಾಗಿದೆ. ಎರಡು ಕೋಟಿ ಐವತ್ತು ಲಕ್ಷ ಮಂದಿ ಕನ್ನಡಿಗರ ಸಂತೋಷಕ್ಕೆ ಕಾರಣವಾದ ಈ ರಾಜ್ಯೋದಯಕ್ಕೆ ಮೈಸೂರು ಸರ್ಕಾರ ರಜಾ ಕೊಡದಿರುವುದನ್ನು ನಾವು ಇಲ್ಲಿ ಸ್ಮರಿಸಿಕೊಳ್ಳಬಹುದು. ಈ ಬಗೆಗೆ ಕನ್ನಡ ಪತ್ರಿಕೆಗಳು ತಳೆದಿರುವ ಅಭಿಮಾನಕ್ಕೆ ನಾನು ಚಕಿತನಾಗಿದ್ದೇನೆ.

## ಭಾಷೈಕ್ಯ ಸಾಧನೆ

೧೯೫೮ರಲ್ಲಿ ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ಬಂಗಾಳಿ ಸಾಹಿತ್ಯ ಸಮ್ಮೇಳನದ ಕಾರ್ಯಕಲಾಪಗಳಲ್ಲಿ ನಾನು ಪರಿಷತ್ತಿನ ಪರವಾಗಿ ಭಾಗವಹಿಸಿದ್ದೇನೆ. ಬಳ್ಳಾರಿ ಸಾಹಿತ್ಯ ಸಮ್ಮೇಳನ ಕಾಲದಲ್ಲಿ ತೆಲುಗು ವಿದ್ವಾಂಸರು ಹಲವರು ಬಂದು ಸಮ್ಮೇಳನದಲ್ಲಿ ಭಾಗವಹಿಸಿದುದು ಗಮನಾರ್ಹವಾಗಿದೆ.

ಬೆಂಗಳೂರಿನಲ್ಲಿರುವ ಮೈಸೂರು ಮುಸ್ಲಿಂ ಲೀಗಿನವರು ನನ್ನನ್ನು ಕರೆಸಿಕೊಂಡು ಬಿನ್ನವತ್ತಳೆಯನ್ನು ಅರ್ಪಿಸಿದ್ದಾರೆ. ಧರ್ಮಸ್ಥಳದ ಕನ್ನಡ ಸಾಹಿತ್ಯ ಸಮ್ಮೇಳನ ರಜತೋತ್ಸವ ಸಮಾರಂಭದಲ್ಲಿ ಮತ್ತು ಬೊಂಬಾಯಿ ಕರ್ನಾಟಕ ಸಂಘದ ರಜತೋತ್ಸವದಲ್ಲಿ ಹಾಗೂ ಮದ್ರಾಸ್ ಕರ್ನಾಟಕ ಸಂಘದ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷತೆಯನ್ನು ವಹಿಸುವ ಸುಯೋಗವು ನನಗೆ ಒದಗಿತ್ತು. ಇದೆಲ್ಲವೂ ಜನರಿಗೆ ಪರಿಷತ್ತಿನ ಮೇಲಿರುವ ಅಭಿಮಾನದ ಫಲವೆಂದು ನಾನು ಭಾವಿಸಿದ್ದೇನೆ.

ಭದ್ರಾವತಿ ಕರ್ನಾಟಕ ಸಂಘದವರು ಮತ್ತು ಮಳವಳ್ಳಿ, ಕಲಬುರ್ಗಿ, ನವಿಲುಗುಂದ, ಹಲಗೂರು, ಉಡುಪಿ, ಮಹಾಜನಗಳು ಪರಿಷತ್ತಿನ ಅಧ್ಯಕ್ಷನಾದ ನನ್ನನ್ನು ಕರೆಸಿಕೊಂಡು ಮಾನ ಪತ್ರವಿತ್ತು, ನಿಧಿಯನ್ನು ಸಮರ್ಪಿಸಿ ಗೌರವಿಸಿದ್ದಾರೆ. ಅವರ ಸಾಹಿತ್ಯಪ್ರೇಮವು ಶ್ಲಾಘ್ಯವೇ ಸರಿ. ಇಂದಿನ ತುರ್ತು ಪರಿಸ್ಥಿತಿಗಾಗಿ ವೀರಕವಿತೆಗಳ ವಾಚನಕ್ಕಾಗಿ ಕವಿಗೋಷ್ಠಿಗಳನ್ನು ಏರ್ಪಡಿಸಿದ್ದೇವೆ. ಮತ್ತು ರಾಷ್ಟ್ರೀಯ ರಕ್ಷಣಾನಿಧಿಗೆ ಪರಿಷತ್ತಿನ ಕಾರ್ಯಕರ್ತರು ಯಥಾಶಕ್ತಿ ಕಾಣಿಕೆಯನ್ನು ಕೊಟ್ಟಿದ್ದಾರೆ.

## ಪರಿಷತ್ತಿಗೆ ಸನ್ಮಾನ್ಯರ ಸಂದರ್ಶನ

ನಾನು ಅಧ್ಯಕ್ಷನಾಗಿದ್ದ ಈ ಅವಧಿಯಲ್ಲಿ ರಾಜ್ಯಪಾಲರಾದ ಮೈಸೂರಿನ ಶ್ರೀಮನ್ಮಹಾರಾಜರವರು ಎರಡು ಸಾರಿ ಪರಿಷತ್ತಿಗೆ ಬಂದು ಹೋಗಿದ್ದಾರೆ. ರಾಷ್ಟ್ರಾಧ್ಯಕ್ಷರಾಗಿದ್ದ ಡಾ|| ರಾಜೇಂದ್ರಪ್ರಸಾದರು (೧೪-೮-೧೯೫೯ ರಲ್ಲಿ) ಪರಿಷತ್ತಿಗೆ ಸಂದರ್ಶನವಿತ್ತಿದ್ದಾರೆ. ಕೇಂದ್ರ ಸಚಿವರಾಗಿದ್ದ ದಿ|| ಬಿ. ಎನ್. ದಾತಾರರು ಹಲವು ಸಾರಿ ಪರಿಷತ್ತಿಗೆ ಬಂದು ಹೋಗಿದ್ದಾರೆ. ಮಾನ್ಯರಾದ ಜಗಜೀವನರಾವ್, ಡಿ. ಪಿ. ಕರ್‌ಮರ್‌ಕರ್, ಪ್ರೊ|| ಹುಮಾಯೂನ್ ಕಬೀರ್, ಶ್ರೀ ಅನಂತಶಯನಂ ಅಯ್ಯಂಗಾರ್, ಶ್ರೀ ಎಸ್. ವಿ. ಕೃಷ್ಣಮೂರ್ತಿರಾವ್,

## ಮುಕ್ತಾಯ ಸಮಾರಂಭ



ದಿನಾಂಕ ೧೯ರಂದು ನಡೆದ ಮುಕ್ತಾಯ ಸಮಾರಂಭದ ಚಿತ್ರ. ಪರಿಷತ್ತಿನ ಅಧ್ಯಕ್ಷರು ಸ್ವಾಗತ ಭಾಷಣ ಮಾಡುತ್ತಿದ್ದಾರೆ. ಅವರ ಎಡಭಾಗದಲ್ಲಿ ಸಚಿವ ರಾಚಯ್ಯನವರೂ, ವಿಧಾನ ಸಭಾಧ್ಯಕ್ಷ ಶ್ರೀ ಬಿ. ವಿ. ಬಾಳಿಗಾ ಅವರು ಕುಳಿತಿದ್ದಾರೆ.

## ಭಾಷಣ



ದಿನಾಂಕ ೧೯ ರಂದು 'ಪ್ರಾಥಮಿಕ ಶಿಕ್ಷಣ' ಕುರಿತು ವಿದ್ಯಾ ಇಲಾಖೆಯ ಜಾಯಿಂಟ್ ಡೈರೆಕ್ಟರರಾದ ಶ್ರೀ ಟಿ. ವಿ. ತಿಮ್ಮೇಗೌಡರು ಭಾಷಣ ಮಾಡುತ್ತಿರುವುದು.

## ನಾಟಕ ಪ್ರದರ್ಶಕರು





'ಅಕ್ಕ-ಪಕ್ಕ' ಎಂಬ ನಗೆನಾಟಕವನ್ನು ಅಭಿನಯಿಸಿದ ಜ್ಯೋತಿ ಕಲಾಮಂದಿರದ ಕಲೆಗಾರರು, ಪರಿಷತ್ತಿನ ಅಧ್ಯಕ್ಷರು, ಶ್ರೀ ಬಾಳಿಗ ಮತ್ತು ಸಚಿವ ಶ್ರೀ ರಾಚಯ್ಯ ಇವರೊಡನೆ ಇದ್ದಾರೆ.

## ಅಧ್ಯಕ್ಷ ಭಾಷಣ





ಮುಕ್ತಾಯ ಸಮಾರಂಭದ ಅಧ್ಯಕ್ಷರಾದ ಶ್ರೀ ಬಿ. ವಿ. ಬಾಳಿಗಾ ಅವರು ಅಧ್ಯಕ್ಷ ಭಾಷಣ ಮಾಡುತ್ತಿದ್ದಾರೆ.

# ಕನ್ನಡದ ಸುದ್ದಿಗಳು

**ಕಾಸರಗೋಡು**

ಕರ್ಣಾಟಕ ಪ್ರಾಂತೀಕರಣ ಸಮಿತಿಯ ಆಶ್ರಯದಲ್ಲಿ ಮೇ ದಿನಾಂಕ ೫ರಂದು ನಡೆದ ರಾಜಕೀಯ ಸಮ್ಮೇಳನದ ಅಧ್ಯಕ್ಷರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಖಜಾಂಚಿಗಳಾದ ಶ್ರೀ ಆರ್. ಅನಂತರಾಮನ್ ಅವರು ಕಾಸರಗೋಡು ವಿಶಾಲ ಮೈಸೂರಿನೊಳಗೆ ಸೇರುವುದು ಅವಶ್ಯಕವೂ ಅತ್ಯಗತ್ಯವೂ ಆದುದೆಂದು ಹೇಳಿ, ಈ ಉದ್ದಿಶ್ಯ ಸಫಲವಾಗುವವರೆಗೆ ಕಾಸರಗೋಡಿನ ಕನ್ನಡಿಗರು ತಮ್ಮ ಚಳುವಳಿಯನ್ನು ನಿಲ್ಲಿಸಬಾರದೆಂದು ಕರೆಯಿತ್ತರು. ಶ್ರೀ ಬಿ. ಎಸ್. ಕಕ್ಕಿಲ್ಲಾಯ ಅವರು ಸ್ವಾಗತ ಭಾಷಣ ಮಾಡಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಸಮ್ಮೇಳನವನ್ನು ಉದ್ಘಾಟಿಸಿ, ಕಾಸರಗೋಡು; ಆದವಾನಿ, ಸೊಲ್ಲಾಪುರ ಮುಂತಾದ ಅಚ್ಚಕನ್ನಡ ಪ್ರದೇಶಗಳು ಮೈಸೂರಿನಲ್ಲಿ ಸೇರದಿರುವುದು ತುಂಬಾ ಅನ್ಯಾಯವಾಗಿದೆ ಎಂದೂ, ಕಾಸರಗೋಡಿನ ಜನತಾಭಿಪ್ರಾಯಕ್ಕೆ ಮನ್ನಣೆ ದೊರೆಯದಿರುವುದು ವಿಷಾದಕರವೆಂದೂ ಹೇಳಿದರು. ಶ್ರೀ ಎಸ್. ಎಂ. ಕೃಷ್ಣ, ಶ್ರೀ ಕೆ. ಆರ್. ಆಚಾರ್, ಶ್ರೀ ಸಿ. ಕೆ. ಬಾಲಕೃಷ್ಣರಾವ್ ಮುಂತಾದವರು ಭಾಷಣ ಮಾಡಿದರು. ಈ ಸಂದರ್ಭದಲ್ಲಿ ಯಕ್ಷಗಾನ ಕಲಾವಿದ ಶ್ರೀ ಬಲಿಪ ನಾರಾಯಣ ಭಾಗವತರನ್ನು ಗೌರವಿಸಲಾಯಿತು.

**ಬೆಂಗಳೂರು**

ಭಾರತ, ರಾಮಾಯಣ ಮುಂತಾದವುಗಳನ್ನು ಗದ್ಯರೂಪದಲ್ಲಿ ಕನ್ನಡದಲ್ಲಿ ಪ್ರಕಟಿಸಲು ಒಂದು ಯೋಜನೆಯನ್ನು ತಯಾರಿಸಲಾಗಿದೆ. ಒಂದು ಸಾವಿರ ಪುಟಗಳಿಂದ ಕೂಡಿದ ಈ ಗ್ರಂಥಗಳಿಗೆ ಸುಮಾರು ೧ ಲಕ್ಷ ರೂಪಾಯಿ ವೆಚ್ಚವಾಗುವುದೆಂದು ಹೇಳಲಾಗಿದೆ. ಹಣ ಸಂಗ್ರಹಕ್ಕಾಗಿ ಯತ್ನ ನಡೆದಿದೆ. ಗ್ರಂಥಗಳ ಪ್ರಕಟಣೆಗೆ ಶ್ರೀ ಶೃಂಗೇರಿ ಜಗದ್ಗುರುಗಳು ಬೇಕಾದ ಎಲ್ಲ ಸಹಾಯ ಮಾಡಲು ಭರವಸೆ ನೀಡಿದ್ದಾರೆ. ಮಹಾರಾಜ ಶ್ರೀ ಜಯಚಾಮರಾಜ ಒಡೆಯರು ಮಹಾಪೋಷಕರಾಗಿರುವರು. ಸಮಿತಿಯ ಅಧ್ಯಕ್ಷರು ಶ್ರೀ ವಿ. ವೆಂಕಟಪ್ಪನವರು. ಶ್ರೀ ಡಿ. ವಿ. ಗುಂಡಪ್ಪನವರ ನೇತೃತ್ವದಲ್ಲಿ ಗ್ರಂಥಗಳ ಪರಿಷ್ಕರಣ ಕಾರ್ಯ ನಡೆಯುತ್ತಿದೆ ಎಂದು ಗೊತ್ತಾಗಿದೆ.

ಮೇ ದಿನಾಂಕ ೧೦ರಂದು ಕನ್ನಡ ಚಲನಚಿತ್ರ 'ನವಜೀವನ'ದ ನಟ ನಟಿಯರನ್ನು ಸತ್ಕರಿಸಿದ ಸಂದರ್ಭದಲ್ಲಿ ವಿಧಾನ ಸಭಾಧ್ಯಕ್ಷ ಶ್ರೀ ವೈಕುಂಠ ಬಾಳಿಗಾ ಅವರು ಮಾತನಾಡುತ್ತಾ, ತಮಿಳು, ತೆಲುಗು, ಕನ್ನಡ, ಹಿಂದಿ ಮತ್ತು ಇನ್ನಿತರೆ ಭಾಷೆಗಳಲ್ಲಿನ ಚಲನಚಿತ್ರಗಳಂತ ಶ್ರೇಷ್ಠ ಚಿತ್ರಗಳನ್ನು ಕನ್ನಡದಲ್ಲೂ ಮಾಡಿ ಕಳೆದುಕೊಂಡಿರುವ ಸ್ಥಾನವನ್ನು ಗಳಿಸಲೆಂದು ಕನ್ನಡಿಗರಲ್ಲಿ ಕರೆಯಿತ್ತರು.

ಕನ್ನಡ-ತೆಲುಗು ನಟರಾಗಿದ್ದ ಸುಪ್ರಸಿದ್ಧ ಬಳ್ಳಾರಿ ರಾಘವಾಚಾರ್ಯರ ಭಾವಚಿತ್ರ ಅನಾವರಣವನ್ನು ಮದರಾಸಿನ ನಿವೃತ್ತ ಮುಖ್ಯ ನ್ಯಾಯಮೂರ್ತಿಗಳಾದ ಶ್ರೀ ಪಿ. ವಿ. ರಾಜಮನ್ನಾರ್‌ರವರು ನಾಟಕ ಶಿರೋಮಣಿ ಎ. ವಿ. ವರದಾಚಾರ್ಯರ ದಿನಾಚರಣೆ ಸಂದರ್ಭದಲ್ಲಿ ಮೇ ೫ರಂದು ಮಾಡಿದರು. ಈ ಸಮಾರಂಭಕ್ಕೆ ಶ್ರೀ ವಿ. ಸೀತಾರಾಮಯ್ಯನವರು ಅಧ್ಯಕ್ಷತೆ ವಹಿಸಿದ್ದರು. ಗೃಹಮಂತ್ರಿ ಶ್ರೀ ಆರ್. ಎಂ. ಪಾಟೀಲರು ಉದ್ಘಾಟಿಸಿದರು. ನಾಟಕರತ್ನ ಶ್ರೀ ಗುಬ್ಬಿ ವೀರಣ್ಣನವರು ಸ್ವಾಗತ ಭಾಷಣ ಮಾಡಿದರು. ಶ್ರೀ ಯಾಮುನಾಚಾರ್ ಮತ್ತು ಶ್ರೀ ಕೆ. ಸಂಪದ್ಗಿರಿರಾಯರು ಇವರು ನಾಟಕ ಶಿರೋಮಣಿ ವರದಾಚಾರ್ಯರು ಮತ್ತು ರಾಘವಾಚಾರ್ಯರು ಇವರುಗಳನ್ನು ಕುರಿತು ಭಾಷಣ ಮಾಡಿದರು.

ಕನ್ನಡ ಸಾಹಿತ್ಯ ಹಾಗೂ ರಂಗಭೂಮಿ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವ ಸಾಹಿತಿಗಳಿಗೂ, ಕಲಾವಿದರಿಗೂ ಆರ್ಥಿಕ ಹಾಗೂ ಇತರ ವಿಧವಾದ ಸೌಲಭ್ಯಗಳನ್ನು ಒದಗಿಸುವ ಸಲುವಾಗಿ ಒಂದು ಲಕ್ಷ ರೂಪಾಯಿಗಳ ಟ್ರಸ್ಟೊಂದನ್ನು ಏರ್ಪಡಿಸುವ ಯೋಜನೆ ಇದೆ ಎಂದು ಮೇಯರ್ ಶ್ರೀ ಜಿ. ನಾರಾಯಣ್ ಅವರು ತಿಳಿಸಿದ್ದಾರೆ.

ತಾ॥ ೧೧-೪-೬೪ ರಂದು ಬೆಂಗಳೂರು ಸರ್ಕಾರಿ ಕಲಾಶಾಲೆ ಕರ್ಣಾಟಕ ಸಂಘದಲ್ಲಿ ಕರ್ಣಾಟಕ ಸಂಘದ ಮುಕ್ತಾಯ ಭಾಷಣವನ್ನು ಶ್ರೀ ಗೊರೂರ್ ರಾಮಸ್ವಾಮಯ್ಯಂಗಾರ್ ಮಾಡಿದರು.

ದಿನಾಂಕ ೩೦-೪-೬೪ ರಿಂದ ಮೂರು ದಿನ ಪರ್ಯಂತವಾಗಿ ಬೆಂಗಳೂರು ವಿಮಾನಪುರಂ ಕನ್ನಡ ಸೇವಾ ಸಮಾಜದಲ್ಲಿ ಸಂಗೀತ, ನೃತ್ಯ, ಭಾಷಣ, ನಾಟಕಗಳಿಂದ ಕೂಡಿದ ವಾರ್ಷಿಕೋತ್ಸವ ನಡೆಯಿತು. ಶ್ರೀ ಕೆ. ಎಸ್.

ಧರಣೇಂದ್ರಯ್ಯ, ಶ್ರೀ ಬಿ. ಎಸ್. ರಾಮಚಂದ್ರರಾವ್, ಶ್ರೀ ಜಿ. ನಾರಾಯಣ್ ಇವರು ಮುಖ್ಯ ಅತಿಥಿಗಳಾಗಿದ್ದರು.

ದಿನಾಂಕ ೧೩-೫-೬೪ರಂದು ತುಮಕೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು "ಬಸವಣ್ಣನವರ ಧರ್ಮ" ಎಂಬ ವಿಷಯವಾಗಿ ಭಾಷಣ ಮಾಡಿದರು. ಕಲಾವಿದರಿಂದ ವಚನ ಗಾಯನ ನಡೆಯಿತು.

ದಿನಾಂಕ ೧೬-೫-೬೪ರಂದು ಮೈಸೂರು ಬಸವ ಜಯಂತಿ ಕಾರ್ಯಕ್ರಮದಲ್ಲಿ "ಭಗವಾನ್ ಬಸವೇಶ್ವರ" ಎಂಬ ಗ್ರಂಥ ವನ್ನು ಶ್ರೀ ಪಿ. ಮಲ್ಲಿಕಾರ್ಜುನಪ್ಪನವರು ಪ್ರಕಾಶಗೊಳಿಸಿದರು. ಶ್ರೀ ಜಗದ್ಗುರು ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು ಈ ಸಮಾರಂಭಕ್ಕೆ ಅಧ್ಯಕ್ಷತೆ ವಹಿಸಿದ್ದರು.

ದಿನಾಂಕ ೧೩-೫-೬೪ರಂದು ಶ್ರೀ ತರಳಬಾಳು ಜಗದ್ಗುರು ಶಿವಕುಮಾರ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಸಿರಿಗೆರೆಯಲ್ಲಿ ಬಸವ ಜಯಂತಿಯು ವೈಭವದಿಂದ ನಡೆಯಿತು. ವಚನ ಗಾಯನ, ಭಾಷಣಗಳು ಆದವು.

ದಿನಾಂಕ ೧೦-೫-೬೪ರಂದು ಬೆಂಗಳೂರಿನಲ್ಲಿ ಶ್ರೀ ಕೆ. ಎಸ್. ಧರಣೇಂದ್ರಯ್ಯನವರ ಅಧ್ಯಕ್ಷತೆಯಲ್ಲಿ ಜೈನ ಧರ್ಮ ಸಮ್ಮೇಳನದ ಅಂಗವಾಗಿ ಸಾಹಿತ್ಯಗೋಷ್ಠಿ ನಡೆಯಿತು. ಅದರಲ್ಲಿ ಅನೇಕ ಮಂದಿ ವಿದ್ವಾಂಸರು, ಜೈನ ವಾಙ್ಮಯವನ್ನು ಕುರಿತು ಭಾಷಣ ಮಾಡಿದರು.

ದಿನಾಂಕ ೧೪-೫-೬೪ರಂದು ಬೆಂಗಳೂರಿನಲ್ಲಿ ಮಾನ್ಯ ಮಂತ್ರಿ ಶ್ರೀ ಎಸ್. ಆರ್. ಕಂಠಿಯವರ ಅಧ್ಯಕ್ಷತೆಯಲ್ಲಿ, ಗಾನ ಕಲಾಸಿಂಧು ವಿದ್ವಾನ್ ಡಿ. ಸುಬ್ಬರಾಮಯ್ಯನವರಿಗೆ ಕರ್ನಾಟಕ ಸಂಗೀತ ವಿದ್ಯಾಲಯದ ಪರವಾಗಿ ಸನ್ಮಾನವನ್ನು ನೀಡಲಾಯಿತು.

ದಿನಾಂಕ ೧೩-೫-೬೪ ಮತ್ತು ೧೪-೫-೬೪ರಲ್ಲಿ ಬೆಂಗಳೂರಿನಲ್ಲಿ ವೀರಶೈವ ತತ್ವಪ್ರಸಾರ ಸಂಘದವರು ಶ್ರೀ ಬಸವ ಜಯಂತಿಯನ್ನು ಆಚರಿಸಿದರು. ಶ್ರೀ ನಿಡುಮಾಮಿಡಿ ಮಹಾಸ್ವಾಮಿಗಳ ಸಮ್ಮುಖದಲ್ಲಿ ಕಾರ್ಯಕ್ರಮಗಳು ನಡೆದವು. ಆ ಕಾಲದಲ್ಲಿ ಶ್ರೀ ಚ. ಸುಂದರೇಶನ್, ಶ್ರೀಮತಿ ನಾಗರತ್ನಮ್ಮ ಹಿರೇಮಠ್, ಶ್ರೀಮತಿ ಲೀಲಾ ರೇಣುಕ ಪ್ರಸಾದ್ ಮೊದಲಾದವರು ಭಾಷಣ ಮಾಡಿದರು.

ದಿನಾಂಕ ೧೩-೫-೬೪ರಿಂದ ಮೂರು ದಿನಗಳ ಪರ್ಯಂತವಾಗಿ ರಾಜಾಜಿನಗರದ ಬಸವೇಶ್ವರ ಹೈಸ್ಕೂಲಿನಲ್ಲಿ ಬಸವೇಶ್ವರ ಜಯಂತಿಯನ್ನು ಆಚರಿಸಲಾಯಿತು. ಆ ಸಮಯದಲ್ಲಿ ಶ್ರೀ ಡಿ. ಎಂ. ಸಿದ್ದಯ್ಯ ಎಂ.ಎಲ್.ಎ., ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ, ಶ್ರೀ ಸಿದ್ದಯ್ಯ ಪುರಾಣಿಕ್ ಮೊದಲಾದವರು ಬಸವಣ್ಣನವರ ಧರ್ಮವನ್ನು ಕುರಿತು ಭಾಷಣ ಮಾಡಿದರು.

ದಿನಾಂಕ ೧೪-೫-೬೪ರಂದು ಬೆಂಗಳೂರಿನಲ್ಲಿ ಶ್ರೀಶೈಲ ಜಗದ್ಗುರುಗಳ ಸನ್ನಿಧಿಯಲ್ಲಿ ನಡೆದ ಬಸವ ಜಯಂತಿಯಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಶ್ರೀ ಕುಳಕುಂದ ಶಿವರಾವ್, ಶ್ರೀಮತಿ ಗುರುದೇವಿ ಹಿರೇಮಠ ಇವರುಗಳು ಬಸವಣ್ಣನವರನ್ನು ಕುರಿತು ಭಾಷಣ ಮಾಡಿದರು. ಕುಮಾರಿ ಸಿ. ಕೆ. ಪದ್ಮಾ ಅವರು ಬಸವೇಶ್ವರ ವಚನಗಳನ್ನು ಹಾಡಿದರು.

**ಮುಂಬಯಿ**

ನಗರದ ಕನ್ನಡಿಗ ಮೇಯರ್ ಆದ ಶ್ರೀ ದೀವಗಿಯವರನ್ನು ಬರಮಾಡಿಕೊಂಡು ಇಲ್ಲಿನ ಕರ್ನಾಟಕ ಸಂಘದವರು ಸತ್ಕರಿಸಿದರು. ಈ ಸಮಯದಲ್ಲಿ ನಗರದ ಹಲವಾರು ಕನ್ನಡಿಗ ಪ್ರಮುಖರು ಬಂದಿದ್ದರು.

ಕನ್ನಡ ಕುಲಪುರೋಹಿತ ಶ್ರೀ ಆಲೂರು ವೆಂಕಟರಾಯರ ನಿಧನದ ಬಗ್ಗೆ ಇಲ್ಲಿನ ಕನ್ನಡಿಗರು ಕಲೆತು ಶ್ರದ್ಧಾಂಜಲಿಯನ್ನರ್ಪಿಸಿದರು.

ಭಾರತರತ್ನ ವಿಶ್ವೇಶ್ವರಯ್ಯನವರ ಸ್ಮಾರಕದ ಸಲುವಾಗಿ ಇಲ್ಲಿನ ಕರ್ನಾಟಕ ಸಂಘದವರು ಕಟ್ಟಿಸಲಿರುವ ಭವನದ ಅಡಿಗಲ್ಲನ್ನು ಮೇ ದಿನಾಂಕ ೨ರಂದು ಮಹಾರಾಷ್ಟ್ರದ ಮುಖ್ಯಮಂತ್ರಿ ಶ್ರೀ ವಿ. ಪಿ. ನಾಯಕ ಅವರು ಪ್ರತಿಷ್ಠಿಸಿದರು. ಕನ್ನಡ ಮುಖಂಡರಾದ ಶ್ರೀ ಆರ್. ಎ. ಜಹಗೀರ್‌ದಾರ್ ಅವರು ಭೂಮಿಪೂಜೆ ನಡೆಸಿದರು. ಆ ಸಂಜೆ ನೃತ್ಯ, ಸಂಗೀತ ಇತ್ಯಾದಿ ಕಾರ್ಯಕ್ರಮಗಳೇರ್ಪಟ್ಟಿದ್ದವು.

**ಸೊಲ್ಲಾಪುರ**

ದಿನಾಂಕ ೧೨-೪-೬೪ರಂದು ಸೊಲ್ಲಾಪುರದ ಮಿತ್ರ ಸಮಾಜದಲ್ಲಿ ಶ್ರೀ ಪುರಂದರದಾಸರ ೪೦೦ ವರ್ಷಗಳ ಉತ್ಸವವು ನಡೆಯಿತು. ಶ್ರೀ ದ. ರಾ. ಬೇಂದ್ರೆ, ಪಂಡಿತ ವರ್ಧಮಾನ ಶಾಸ್ತ್ರಿ ಮೊದಲಾದವರು ಇದರಲ್ಲಿ ಭಾಗ ವಹಿಸಿದ್ದರು.

ಮುಂಬಯಿ ನಗರದ ಕನ್ನಡಿಗ ಮೇಯರಾದ ಡಾ|| ದೀವಗಿಯವರು ಮೇ ದಿನಾಂಕ ೧ರಲ್ಲು ಇಲ್ಲಿನ ಕನ್ನಡ ಮಿತ್ರ ಮಂಡಲಕ್ಕೆ ದರ್ಶನವಿತ್ತರು. ನಗರದ ಗಣ್ಯ ನಾಗರಿಕರನ್ನು ಉದ್ದೇಶಿಸಿ ಮಾತನಾಡುತ್ತಾ, ಹೊರನಾಡಿನಲ್ಲಿನ ಕನ್ನಡಿಗರು ಸುಸಂಘಟಿತರಾಗಬೇಕಾದದ್ದು ಅವಶ್ಯಕವೆಂದು ಹೇಳಿದರು.

**ಚನ್ನಪಟ್ಟಣ**

ದಿನಾಂಕ ೩-೫-೬೪ರಂದು ಚನ್ನಪಟ್ಟಣದ ಭ್ರಮರ ಕಲಾನಿಕೇತನದಲ್ಲಿ ಸುಪ್ರಸಿದ್ಧ ಚಲನಚಿತ್ರ ನಟ ಶ್ರೀ ಉದಯಕುಮಾರ್‌ರವರನ್ನು ಆಹ್ವಾನಿಸಿ ಗೌರವಿಸಲಾಯಿತು.

# ಸಂಪಾದಕೀಯ

## ಒಡೆಯರ ಸಂಪ್ರದಾಯ

ಮೈಸೂರು ರಾಜ್ಯಲಕ್ಷ್ಮಿಯ ಕೀರ್ತಿ ವೈಭವಗಳನ್ನು ದಿಗಂತ ವಿಶ್ರಾಂತವಾಗಿ ಹರಡಿದ, ಅಪೂರ್ವವೂ, ಅಮೂಲ್ಯವೂ ಆದ ಸೌಭಾಗ್ಯವು ಮೈಸೂರು ಮಹಾರಾಜರೂ, ಮದರಾಸಿನ ರಾಜ್ಯಪಾಲರೂ ಆದ ಶ್ರೀ ಜಯಚಾಮರಾಜ ಒಡೆಯರ್ ಅವರಿಗೆ ಸಲ್ಲುತ್ತದೆ. ಮೈಸೂರಿನ ಮಹಾರಾಜರು ಮದರಾಸಿನ ರಾಜ್ಯಪಾಲರಾಗಿರುವುದರಲ್ಲಿ ಯಾವುದೋ ಅಗೋಚರವಾದ ದೈವಿಕಶಕ್ತಿ ಅಡಗಿರಬೇಕು. ಅದಕ್ಕೆ ಮನುಷ್ಯ ನಿರ್ಮಿತ ವರ್ಗಾವರ್ಗಿಗಳ ಕಾನೂನು ಕೇವಲ ನಿಮಿತ್ತ ಮಾತ್ರ. ಎಲ್ಲಿ ಹೋದರೆ ಅಲ್ಲಿ ಜನ ಸಂದಣಿಯ ಅಗಾಧ ಪ್ರೇಮವನ್ನು ಗಳಿಸುವುದು ಸುಲಭವಲ್ಲ. ನಮ್ಮ ಮೈಸೂರು ಮಹಾರಾಜರಿಗೆ–ಶ್ರೀ ಜಯಚಾಮರಾಜ ಒಡೆಯರಿಗೆ–ಅದೊಂದು ಪುಣ್ಯಫಲವಾಗಿ ಲಭಿಸಿದೆ. ನಿಜ. ಮೈಸೂರಿನ ಜನತೆ ತಮ್ಮ ಪ್ರೀತಿಯ ಮಹಾರಾಜರನ್ನು ಉಕ್ಕುವ ಅಶ್ರುಜಲವನ್ನು ತಡೆದು ಬೀಳ್ಕೊಟ್ಟಿದೆ. ಮದರಾಸಿನ ಜನತೆ ತಮ್ಮ ನೆಚ್ಚಿನ ರಾಜ್ಯಪಾಲರನ್ನು ಉಕ್ಕುವ ಆನಂದಾಶ್ರುವನ್ನು ಚಿಮ್ಮಿ ಬರಮಾಡಿಕೊಂಡಿದೆ. ತಾವು ಎಲ್ಲಿಯೇ ಇರಲಿ, ಹೇಗೇ ಇರಲಿ ಮೈಸೂರಿನ ಜನತೆಯ ಕ್ಷೇಮವನ್ನು ಮರೆಯಲಾರೆವೆಂದೂ, ತಮ್ಮ ಆರಾಧ್ಯ ದೇವಿಯಾದ ಶ್ರೀ ಚಾಮುಂಡೇಶ್ವರಿಯು ಮೈಸೂರು ರಾಜ್ಯಕ್ಕೆ ಮಂಗಳವನ್ನುಂಟುಮಾಡಲೆಂದೂ ಅವರು ಬಯಸಿದ್ದಾರೆ.

ಮಹಾರಾಜರ ವಿಶ್ವವಿಖ್ಯಾತಿಯನ್ನು ಮೈಸೂರಿನ ಹೊಸ ರಾಜ್ಯಪಾಲರಾಗಿ ಬಂದಿರುವ ಜ|| ಶ್ರೀನಾಗೇಶ್ ಅವರು ಮುಕ್ತಕಂಠದಿಂದ ಹೊಗಳಿ, ತಾವು ಒಡೆಯರ ಸಂಪ್ರದಾಯವನ್ನು ಅನುಸರಿಸಲು ಯತ್ನಿಸುವೆನೆಂದು ಹೇಳಿದ್ದಾರೆ. ಇದಕ್ಕಿಂತ ಹೆಚ್ಚಿನ ಪ್ರತಿಷ್ಠೆಯುಂಟೆ? ನಮ್ಮ ಮಹಾರಾಜರು ಮದರಾಸಿನ ರಾಜ್ಯಪಾಲರಾಗಿ ಮೆರೆದು, ಮರಳಿ ಮೈಸೂರು ರಾಜ್ಯಪಾಲರಾಗಿ ಮಹಾರಾಜರಾಗಿ ನಮ್ಮನ್ನು ಸೇರಲೆಂದು ಹಾರೈಸುತ್ತೇವೆ.

## ವಸಂತ ಸಾಹಿತ್ಯೋತ್ಸವ

ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಶ್ರೀ ಕ್ರೋಧಿನಾಮ ಸಂವತ್ಸರದ ವಸಂತ ಸಾಹಿತ್ಯೋತ್ಸವವು ೧೯೬೪ ಏಪ್ರಿಲ್ ತಿಂಗಳು ೧೭ ಶುಕ್ರವಾರ, ೧೮ ಶನಿವಾರ ಮತ್ತು ೧೯ ಭಾನುವಾರಗಳಂದು ಯಥಾವಿಧಿಯಾಗಿ ನಡೆದು ಕನ್ನಡಿಗರಲ್ಲಿ, ಕನ್ನಡ ಅಭಿಮಾನಿಗಳಲ್ಲಿ, ಕನ್ನಡ ಸಾಹಿತ್ಯದ ಸವಿನೆನಪನ್ನು ಮೂಡಿಸಿತು. ಕಾರ್ಯಕ್ರಮದಲ್ಲಿ ಪಾತ್ರ ವಹಿಸಲು ಒಪ್ಪಿಗೆಯಿತ್ತ ಕೆಲ ಮಹನೀಯರು ಇತರ ಕಾರ್ಯಬಾಹುಳ್ಯದ ನಿಮಿತ್ತ ಸಾಹಿತ್ಯ ಕಾರ್ಯವನ್ನು ಕೈಬಿಟ್ಟರಾದರೂ, ವ್ಯವಸ್ಥಾಪಕರು ತಮ್ಮ ಜವಾಬ್ದಾರಿಯನ್ನು ಮರೆಯದೆ ತೃಪ್ತಿಕರವಾಗಿ ಮೂರು ದಿನಗಳ ಕಾರ್ಯಕಲಾಪಗಳನ್ನೂ ನಡೆಸಿಕೊಟ್ಟರು. ಹಳೆಯ ಸಂಪ್ರದಾಯದ ಮತ್ತು ಹೊಸ ಸಂಪ್ರದಾಯದ ಕನ್ನಡ ಕುಲಬಾಂಧವರು ಅಧಿಕ ಸಂಖ್ಯೆಯಲ್ಲಿ ಸಭೆಗಳಿಗೆ ದಯಮಾಡಿಸಿದ್ದರು.

ವಿಶಾಲ ಮೈಸೂರು ಹೈಕೋರ್ಟಿನ ಶ್ರೇಷ್ಠ ನ್ಯಾಯಾಧೀಶರಾದ ಮಾನ್ಯ ಶ್ರೀ ಎಚ್. ಹೊಂಬೇಗೌಡರು ಉತ್ಸವವನ್ನು ಉದ್ಘಾಟಿಸುತ್ತ, ಇಂತಹ ವಸಂತ ಸಾಹಿತ್ಯ ಸಮ್ಮೇಳನದಲ್ಲಿ ಜನಸಾಮಾನ್ಯರಿಗೆ ತಿಳಿವಳಿಕೆಯುಂಟಾಗುವ ರೀತಿಯಲ್ಲಿ ಸಾಹಿತ್ಯ ಕಲಾಪಗಳನ್ನು ಅಳವಡಿಸಬೇಕಾದುದು ಅಗತ್ಯವೆಂದು ಹೇಳಿದರು. ಕನ್ನಡ ಜನತೆಗೆ ಪುರಾತನ ಕವಿಶ್ರೇಷ್ಠರ ಗ್ರಂಥ ಪರಿಚಯವಾಗಲು ಈಗಿನ ಪರಿಸ್ಥಿತಿಯಲ್ಲಿ ಅವಕಾಶವಿಲ್ಲದಂತಾಗಿದೆಯೆಂದೂ ವಿದ್ಯಾಭ್ಯಾಸ ಇಲಾಖೆಯವರು ರಚಿಸುವ ಪಠ್ಯಪುಸ್ತಕಗಳಲ್ಲಿ ಹೆಚ್ಚಿನ ರೀತಿಯಲ್ಲಿ ಹಳಗನ್ನಡ ಸಾಹಿತ್ಯದ ಪರಿಚಯಕ್ಕೆ ಅವಕಾಶವಿರಬೇಕೆಂದೂ ತಿಳಿಸಿದರು. ಬಹುಮಂದಿ ಕನ್ನಡಿಗರಿಗೆ ತಮ್ಮ ಪುರಾತನ ಕವಿಗಳ ಬಗ್ಗೆ ಪರಿಚಯವಿಲ್ಲದುದನ್ನು ಪ್ರಸ್ತಾಪಿಸಿ, "ಗದಗ್ ನಗರದಲ್ಲಿ ವೀರನಾರಾಯಣನ ಕಿಂಕರನಾಗಿ ಕನ್ನಡ ವರಕವಿ ನಾರಣಪ್ಪನು ಕನ್ನಡ ಭಾರತವನ್ನು ರಚಿಸಿದುದು ಸರಿಯಷ್ಟೆ. ಈ ಕವಿಯು ವೀರನಾರಾಯಣನ ದೇವಾಲಯದಲ್ಲಿ ಕುಳಿತು ಬರೆಯುತ್ತಿದ್ದ ಆಸರೆಯ ಕಂಬವೂ ಇದೆ. ಆದರೆ, ಗದಗಿನ ಜನತೆಯಲ್ಲಿ ಇದರ ಪರಿಜ್ಞಾನವೇ ಇಲ್ಲದುದನ್ನು ನಾನು ಕಂಡೆ." ಎಂದರು. ಇಂತಹ ಅಜ್ಞಾನ ಜನತೆಯಲ್ಲಿರಕೂಡದೆಂದೂ, ಕನ್ನಡ ಸಾಹಿತ್ಯ ಪರಿಷತ್ತು ಈಗ ನಡೆಸುತ್ತಿರುವ ಅನೇಕ ಮಹತ್ಕಾರ್ಯಗಳ ಜತೆಗೆ, ಕನ್ನಡ ಮಹಾಕವಿಗಳ ಪರಿಚಯವನ್ನು ಜನಸಾಮಾನ್ಯರಿಗೂ ಉಂಟುಮಾಡುವ ಸತ್ಕಾರ್ಯವನ್ನೂ ನಡೆಸಬೇಕೆಂದೂ, ವಸಂತ ಸಾಹಿತ್ಯೋತ್ಸವಗಳಲ್ಲಿ ಇದಕ್ಕಾಗಿ

ಸೂಕ್ತ ಕಾರ್ಯಕ್ರಮವನ್ನು ಕೈಗೊಳ್ಳಬೇಕೆಂದೂ ಸೂಚಿಸಿದರು.

ವಸಂತ ಸಾಹಿತ್ಯೋತ್ಸವದ ಸಂಬಂಧವಾಗಿ ೧೮-೪-೬೪ರಲ್ಲಿ ಮಹಿಳಾ ಕಾರ್ಯಕ್ರಮವು ನಡೆದು, ಮೈಸೂರು ರಾಜ್ಯದ ಸಮಾಜ ಕಲ್ಯಾಣದ ಸಚಿವೆ ಶ್ರೀಮತಿ ಯಶೋಧರಾ ದಾಸಪ್ಪನವರು ಅಧ್ಯಕ್ಷ ಪೀಠವನ್ನು ಅಲಂಕರಿಸಿ, ಕನ್ನಡ ಜನತೆಯಲ್ಲಿ ಮಹಿಳೆಯರು ಸಾಹಿತ್ಯ ಕ್ಷೇತ್ರವನ್ನು ಹೊಕ್ಕು, ಮತ್ತಷ್ಟು ಹೆಚ್ಚಿನ ರೀತಿಯಲ್ಲಿ ಸಾಹಿತ್ಯ ಸೇವೆಯನ್ನು ಸಲ್ಲಿಸುವ ಉತ್ಸಾಹವು ಅವರಲ್ಲಿ ಮೂಡಬೇಕಾಗಿದೆಯೆಂದು ತಿಳಿಸಿದರು. ೧೯-೪-೬೪ ಕವಿಗೋಷ್ಠಿಯೂ, ಮುಕ್ತಾಯ ಸಮಾರಂಭವೂ ನಡೆದು ಸಾಹಿತ್ಯೋತ್ಸವವು ಕನ್ನಡಿಗರ ಪ್ರೀತ್ಯಾದರಗಳನ್ನು ಗಳಿಸಿತು.

### ಕವಿಗೋಷ್ಠಿ

ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ನಡೆದ ವಸಂತ ಸಾಹಿತ್ಯೋತ್ಸವದಲ್ಲಿ ಕವಿಗೋಷ್ಠಿಯು ಹೆಚ್ಚಿನ ಪರಿಣಾಮಕಾರಿಯಾಗಿತ್ತು ; ಎಂದರೆ, ಹಳೆಯ ಸಂಪ್ರದಾಯದ, ಹೊಸ ಸಂಪ್ರದಾಯದ ಕವಿಗಳೂ, ಕವಯಿತ್ರಿಯರೂ ತಮ್ಮ ತಮ್ಮ ಕವಿತೆಗಳನ್ನು ಪಠಿಸಿ, ಕನ್ನಡ ಕಾವ್ಯಸಂಪತ್ತನ್ನು ಹೊರ ಸೂಸಿದರು. ಜತೆಗೆ ಮುಸ್ಲಿಂ ಕವಿಯೊಬ್ಬರೂ, ತೆಲುಗು ಕವಿಯೊಬ್ಬರೂ ಪಾತ್ರವಹಿಸಿದ್ದರೆಂದಮೇಲೆ, ಅದು ಕನ್ನಡಿಗರ ಹೃದಯ ವೈಶಾಲ್ಯಕ್ಕೆ ಸಾಕ್ಷಿಯಾಗಿತ್ತು. ಈ ಕವಿಗೋಷ್ಠಿಯಲ್ಲಿ ಓರ್ವ ಕವಿ ನುಡಿದಂತೆ:

ತೆಲುಗರು ಬರಲಿ, ತಮಿಳರು ಬರಲಿ,
ಕೊಂಕಣ ಕೊಡಗಿನ ಯಾರೇ ಬರಲಿ,
ಬದುಕನು ತರಲಿ, ಭಾಗ್ಯವ ತರಲಿ,
ಏನೇ ತರಲಿ ಕನ್ನಡವಿರಲಿ-
ಹಿಂದಿ, ಉರ್ದು, ಗುಜರಾತಿ, ಮರಾಠಿ
ಇಂಗ್ಲಿಷ್, ಜರ್ಮನ್, ಫ್ರೆಂಚ್ ಬರಲಿ
ಕಲಿತವರಿರಲಿ, ಮರೆತವರಿರಲಿ–
ಏನೇ ಇರಲಿ ಕನ್ನಡವಿರಲಿ!

ಎಂಬುದನ್ನು ಕನ್ನಡ ಜನತೆ ಮರೆಯುವಂತಿಲ್ಲ.

ಕವಿಗೋಷ್ಠಿಯ ಅಧ್ಯಕ್ಷತೆಯನ್ನು ಶ್ರೀ ಕೆ. ಗೋಪಾಲಕೃಷ್ಣರಾಯರು ವಹಿಸಿ, ಕವಿಸಂಪ್ರದಾಯದ ಅನುಭವದ ನುಡಿಗಳನ್ನು ವಿವರಿಸಿದರು ಕವಿಗೋಷ್ಠಿಯಲ್ಲಿ ಅಧ್ಯಕ್ಷರೂ ಸೇರಿ ೨೪ ಕವಿಗಳು ಪಾತ್ರವಹಿಸಿದ್ದು, ಅವರಲ್ಲಿ ನಾಲ್ವರು ಕವಿಯಿತ್ರಿಯರೂ, ಹಿಂದೆಯೇ ತಿಳಿಸಿರುವಂತೆ ಒಬ್ಬರು ಮುಸ್ಲಿಂ ಕವಿಯೂ, ಒಬ್ಬರು ತೆಲುಗು ಕವಿಯೂ ಇದ್ದರು. ಪ್ರತಿಯೊಬ್ಬ ಕವಿಯೂ ಗೊತ್ತಾಗಿದ್ದ ನಾಲ್ಕು ನಿಮಿಷಗಳ ಕಾಲವನ್ನು ಮೀರದೆ ಶಿಸ್ತು, ಸಂಯಮಗಳಿಂದ ಗೋಷ್ಠಿಯನ್ನು ಯಶಸ್ವಿಯಾಗಿ ನಡೆಸಲು ಸಂಪೂರ್ಣ ಸಹಕಾರ ನೀಡಿದರು.

---

ಸಂಪಾದಕರು: ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು-೧೮.

# ಸಾದರ ಸ್ವೀಕಾರ

* ಕ್ರೌಂಚಧ್ವನಿ: ಲೇಖಕರು: ಶ್ರೀ ಗೌರೀಶ ಕಾಯ್ಕಿಣಿ; ಪ್ರಕಾಶಕರು: ಶ್ರೀ ಮನೋಹರ ಘಾಣೇಕರ, ಪ್ರತಿಭಾ ಗ್ರಂಥಮಾಲೆ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೬೮; ಬೆಲೆ ರೂ. ೧.

* ಕನ್ನಡ ಗಾದೆಗಳ ಕೋಶ: ಸಂಪಾದಕರು: ಶ್ರೀ ಟಿ. ವಿ. ವೆಂಕಟರಮಣಯ್ಯ; ಪ್ರಕಾಶಕರು: ಶ್ರೀ ಮ. ಭಾ. ಘಾಣೇಕರ, ಪ್ರತಿಭಾ ಗ್ರಂಥಮಾಲೆ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೨೪೬; ಬೆಲೆ ರೂ. ೨–೭೫ ನ.ಪೈ.

* ಅಲ್ಲಿ–ಇಲ್ಲಿಯ ಕಥೆಗಳು: ಲೇಖಕರು: ಶ್ರೀ ರಮಾನಂದ; ಪ್ರಕಾಶಕರು: ಶ್ರೀ ಮನೋಹರ ಘಾಣೇಕರ, ಸಮಾಜ ಪುಸ್ತಕಾಲಯ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೪೮; ಬೆಲೆ ೫೦ ನ.ಪೈ.

* ಸಂಶೋಧಕರ ಸವಿಗತೆಗಳು: ಲೇಖಕರು: ಶ್ರೀ ಆನಂದ ವರ್ಟೆ; ಪ್ರಕಾಶಕರು: ಶ್ರೀ ಮನೋಹರ ಘಾಣೇಕರ, ಸಮಾಜ ಪುಸ್ತಕಾಲಯ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೧೪೪; ಬೆಲೆ ರೂ. ೧–೮೦ ನ.ಪೈ.

* ಕನ್ನಡ ನಾಡಿನ ಕೆಲವು ಶಾಸನ ಕವಿಗಳು: ಲೇಖಕರು: ಶ್ರೀ ಮೇವುಂಡಿ ಮಲ್ಲಾರಿ; ಪ್ರಕಾಶಕರು: ಸಮಾಜ ಪುಸ್ತಕಾಲಯ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೧೩೬; ಬೆಲೆ ರೂ. ೨–೫೦ ನ.ಪೈ.

ರವೀಂದ್ರ ಪೂಜನ: ಸಂಪಾದಕರು: ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್; ಪ್ರಕಾಶಕರು: ಮೈಸೂರು ಸರಕಾರದ ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಶಾಖೆ, ಬೆಂಗಳೂರು; ಸೈಜು ೧/೮ ಡೆಮ್ಮಿ; ಪುಟ ೩೪೦; ಬೆಲೆ ರೂ. ೬.

ರವೀಂದ್ರ ಪ್ರಶಸ್ತಿ: ಸಂಪಾದಕರು: ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್; ಪ್ರಕಾಶಕರು: ಮೈಸೂರು ಸರಕಾರದ ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಶಾಖೆ, ಬೆಂಗಳೂರು; ಸೈಜು ೧/೮ ಡೆಮ್ಮಿ; ಪುಟ ೩೪೦; ಬೆಲೆ ರೂ. ೬.

* ಸದಾಚಾರ ಪ್ರದೀಪ: ಲೇಖಕರು: ಶ್ರೀ ಮ. ನಿ. ಪ್ರ. ಬಂಥನಾಳ ಶ್ರೀ ಮಹಾ ಶಿವಯೋಗಿಗಳು; ಪ್ರಕಾಶಕರು: ಶ್ರೀ ಶಿವಾನುಭವ ಮಂಟಪ, ಸುಕ್ಷೇತ್ರ, ಬಂಥನಾಳ; ಸೈಜು ೧/೮ ಕ್ರೌನ್; ಪುಟ ೫೦; ಬೆಲೆ ೬೦ ನ.ಪೈ.

* ಮುಕ್ತಿದಾಯಕ ಪಂಚ ನಮಸ್ಕಾರ ಮಹಾಮಂತ್ರದ ಮಹಿಮೆ: ಸಂಪಾದಕರು: ವಿದ್ವಾನ್, ಪಂಡಿತ ಎಸ್. ಪಿ. ಅನಂತರಾಜ ಶಾಸ್ತ್ರೀ; ಪ್ರಕಾಶಕರು: ವಿದ್ವಾನ್, ಪಂಡಿತ ಎಸ್. ಪಿ. ಅನಂತರಾಜ ಶಾಸ್ತ್ರೀ, ಅಸಿಸ್ಟೆಂಟ್ ಪ್ರೊಫೆಸರ್, ಜೈನ ಸಿದ್ಧಾಂತ, ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜು, ಬೆಂಗಳೂರು–೧೮; ಸೈಜು ೧/೮ ಕ್ರೌನ್; ಪುಟ ೩೨; ಬೆಲೆ ೫೦ ನ.ಪೈ.

*ದೇವಿ ರೇಣುಕೆ: ಲೇಖಕರು: ಪಂಡಿತ ವಿಘ್ನೇಶ್ವರ ಶರ್ಮಾ; ಪ್ರಕಾಶಕರು: ಆನಂದ ಮುದ್ರಣ–ಪ್ರಕಾಶನ, ಗೋಕರ್ಣ (ದ.ಕ.); ಸೈಜು ೧/೮ ಕ್ರೌನ್; ಪುಟ ೫೨; ಬೆಲೆ ೭೫ ನ.ಪೈ.

ನಮ್ಮ ರೇಡಿಯೋ: ಲೇಖಕರು: ಶ್ರೀ ವೇಪಾ ವೆಂಕಟಲಕ್ಷ್ಮಣರಾವ್; ಪ್ರಕಾಶಕರು: ಪ್ರಗತಿ ಪ್ರಕಟನಾಲಯ, ಗಾಂಧೀನಗರ, ಬೆಂಗಳೂರು–೯; ಸೈಜು ೧/೮ ಕ್ರೌನ್; ಪುಟ ೧೪೪; ಬೆಲೆ ರೂ. ೧–೫೦ ನ.ಪೈ.

ಆಟಗಳ ಮನೆ ಮತ್ತು ಬಯಲು: ಲೇಖಕರು: ಶ್ರೀ ಟಿ. ಪಿ. ಸಂತಾನಕೃಷ್ಣ ನಾಯುಡು ಮತ್ತು ಪಿ. ಆರ್. ಸುಬ್ರಹ್ಮಣ್ಯಂ; ಪ್ರಕಾಶಕರು: ಸಮಾಜ ಪುಸ್ತಕಾಲಯ, ಭರತಸಿಂಗ ಬೀದಿ, ಧಾರವಾಡ-೧; ಸೈಜು ೧/೮ ಕ್ರೌನ್; ಪುಟ ೧೧೨; ಬೆಲೆ ರೂ. ೧–೨೦ ನ.ಪೈ.

* ಆದಿಕವಿ ವಾಲ್ಮೀಕಿ: ಲೇಖಕರು: ಕೆ. ಯಸ್. ಪದ್ಮನಾಭ ಆಚಾರ್ಯ; ಪ್ರಕಾಶಕರು: ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ; ಸೈಜು ೧/೮ ಕ್ರೌನ್; ಪುಟ ೫೬; ಬೆಲೆ ೫೦ ನ.ಪೈ.

ಆದರ್ಶ ಶರಣೆ ಸುಗ್ಗಳೆ: ಕರ್ತರು: ಸಿಂಹಾಸನಾಧೀಶ್ವರ ಶ್ರೀ ಜ.ಚ.ನಿ.; ಪ್ರಕಾಶಕರು: ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ, ೪೯, ಹ. ಬ. ಸಮಾಜ ರಸ್ತೆ, ಬೆಂಗಳೂರು-೪; ಸೈಜು ೧/೮ ಕ್ರೌನ್; ಪುಟ ೬೬; ಬೆಲೆ ರೂ. ೧.

ದೃಷ್ಟಿಯೋಗ: ಲೇಖಕರು: ಶ್ರೀ ಚ. ಸುಂದರೇಶನ್, ಎಂ.ಎ.; ಪ್ರಕಾಶಕರು: ಶ್ರೀ ಎಸ್. ಬಿ. ಚೆನ್ನಬಸವಪ್ಪ, "ಮಧುಮಾಧವಿ ಗ್ರಂಥಮಾಲಾ", ಹಳೇ ಸೋಸಲೆ, ಟಿ. ನರಸೀಪುರ ತಾಲೂಕು, ಮೈಸೂರು ಜಿಲ್ಲೆ; ಸೈಜು ೧/೮ ಕ್ರೌನ್; ಪುಟ ೧೨೦; ಬೆಲೆ ೫೦ ನ.ಪೈ.

* ಯೋಗಾರಂಭ: ಲೇಖಕರು: ಶ್ರೀ ಅರವಿಂದರು; ಪ್ರಕಾಶಕರು: ವಿ. ಎನ್. ಸಿಂಪಿ, ಎಂ. ಎ. ಶ್ರೀ ಅರವಿಂದ ಗ್ರಂಥಾಲಯ, ಚಡಚಣ; ಸೈಜು ೧/೮ಕ್ರೌನ್; ಪುಟ ೭೪; ಬೆಲೆ ರೂ. ೧.

* ಅರಳು–ಮರಳು (ಒಂದು ಪುಟ್ಟ ಏಕಾಂಕ ಪ್ರಹಸನ): ಲೇಖಕರು: ಶ್ರೀ ಸಿ. ಎಸ್. ವಿ. ಮೂರ್ತಿ; ಪ್ರಕಾಶಕರು: ಜಯಂತಿ ಪ್ರಕಾಶನ, ಬೆಂಗಳೂರು–೪; ಸೈಜು ೧/೮ ಕ್ರೌನ್; ಪುಟ ೩೮; ಬೆಲೆ ೭೫ ನ.ಪೈ.

ರಾಯರ ರಾದ್ಧಾಂತ (ಏಕಾಂಕ ನಗೆನಾಟಕ): ಲೇಖಕರು: ಶ್ರೀ ವೈ. ಆರ್. ಅಶ್ವತ್ಥನಾರಾಯಣರಾವ್; ಪ್ರಕಾಶಕರು: ಎಚ್. ಎನ್. ರಾವ್ ಬ್ರದರ್ಸ್, ಚಿಕ್ಕಪೇಟೆ, ಬೆಂಗಳೂರು–೨; ಸೈಜು ೧/೮ ಕ್ರೌನ್; ಪುಟ ೪೦; ಬೆಲೆ ೭೫ ನ.ಪೈ.

---

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತವೆ.



ಜೂನ್ 1964

# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪಾದಕರು: ಡಿ. ಆರ್. ರಾಮಯ್ಯ, ಬಿ.ಎ.

ಸಂಪುಟ ೨೭] [ಸಂಚಿಕೆ ೬

## ಭಾರತದ ಜನಪ್ರಿಯ ನಾಯಕಮಣಿ

★ ★



ದಿ॥ ಜವಹರಲಾಲ ನೆಹರು

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

ಸಂಪುಟ ೨೭ ] ಜೂನ್ ೧೯೬೪ [ ಸಂಚಿಕೆ ೬

## ವಿಷಯ ಸೂಚಿಕೆ






ಸಂಪುಟ ೨೭ ] ಜೂನ್ ೧೯೬೪ [ ಸಂಚಿಕೆ ೬

# ಕ್ರೂರ ವಿಧಿ

ಶ್ರೀ ಡಿ. ಆರ್. ರಾಮಯ್ಯ

ಹಾ, ಕ್ರೂರವಿಧಿ, ನಿನ್ನ ಕೋರೆದಾಡೆಯೊಳೌಂಕಿ,
ಏನು ಮಾಡಿದೆ! ಅಳಿದೆ ನೆಹರು ಸತ್ಯಾತ್ಮ!
ಭಾರತಾಂಬೆಯ ಮಕುಟಮಣಿಯೊಂದು ಕಳಚಿತೇ!
ತೋರು ಮಾರ್ಗವ ಜಗಕೆ ಭಾಗ್ಯದಾತ!

ಏನಿದೇನಿದು ಮೊಳಗು ಶೋಕರವದಿರವು!
ಏನಿದೇನಿದು ಜನರ ಹೊಗಳಿಕೆಯ ಬೆಡಗು!
ಬೀದಿಯಲಿ ಗದ್ದಲವು, ಬೀಡಿನಲಿ ಸಂಕಟವು,
ನಾಡಿನಲಿ ಗೊಂದಲವು ಮಿಗಿಲೆನಿಸಿತಿಂದು!

ಆನಂದಮಯನಾದ ವೀರವರನಿವನು,
ಆನಂದದಲಿ ಮಿಂದು ಶಾಂತಿಯಲಿ ನಿಂದು,
ಗೋಪುರವ ಬಯಸದಲೆ ನೂಪುರವ ನೆನೆಸದಲೆ,
ಭ್ರಾಂತಿಯನು ಬಿಟ್ಟಿಹನು ಧನ್ಯನಿವನು!

ಶಾಸನವ ಕೆತ್ತುವರು ನಾಡಿಗರು ಕೂಡಿ,
ಗೋಪುರವ ನೆತ್ತುವರು ನಲುಮೆಯಲಿ ಮೂಡಿ,
ಪ್ರತಿಮೆಯನು ನಿಲಿಸುವರು, ಸ್ತುತಿಯನುರೆ ರಚಿಸುವರು
ದೇಶಕೋಶದಿ ಮೆರೆದ ವೀರವರನೆಂದು!

ವಿಧಿ ನಿನ್ನ ಮಾಳ್ಕೆಗಳ ಬಲ್ಲವರು ಯಾರಿಹರು!
ಕೊಡು ಸದ್ಗತಿಯ, ಭರತಭೂಮಿಯನು ಬೆಳಗು,
ವಿಶ್ವದಲಿ ತನ್ನೊಂದು ಬಲ್ಮೆಯನು ತೋರು,
ಆಶ್ರಿತರ ಸೆರೆ ಸಲಹುವಂದವನು ಬೀರು.

# "ಪಂಡಿತ ನೆಹರೂ ವಿಯೋಗದಿಂದ ಸಾಹಿತ್ಯ ಪ್ರಪಂಚಕ್ಕೆ ನಷ್ಟ"

**ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರ ಹೇಳಿಕೆ**

ಭಾರತದ ಮಹಾಪ್ರಧಾನಿಗಳೂ ವಿಶ್ವಶಾಂತಿ ಸಾಧಕರೂ ಮಾನವೀಯತೆಯ ಉದ್ಧಾರಕರೂ ರಾಷ್ಟ್ರಪಿತ ಗಾಂಧೀಜಿ ಉತ್ತರಾಧಿಗಳೂ ಎನಿಸಿಕೊಂಡಿದ್ದ ಭಾರತರತ್ನ ಪಂಡಿತ ಜವಹರಲಾಲ್ ನೆಹರೂ ವಿಯೋಗವು, ಭಾರತೀಯರ ರಾಜಕೀಯಕ್ಕೆ ಲೋಕದ ಶಾಂತಿಸಾಧನೆಗೆ ಬಲವಾದ ಪೆಟ್ಟು ಎಂಬುದನ್ನು ಎಲ್ಲರೂ ಅರಿತಿದ್ದಾರೆ. ಗಾಂಧಿ ಮತ್ತು ನೆಹರು ನಿಜಕ್ಕೂ ಯುಗಪುರುಷರು. ಭಾರತದ ಐದು ಸಾವಿರ ವರ್ಷಗಳ ಚರಿತ್ರೆಯಲ್ಲಿ ಕೃಷ್ಣ–ಅರ್ಜುನ, ಬುದ್ಧ–ಅಶೋಕ, ಗಾಂಧಿ–ನೆಹರು ಇಂತಹ ಮಹನೀಯರನ್ನು ನಾವು ಮತ್ತೆಲ್ಲಿಯೂ ಕಾಣಲಾರೆವು. ಪಂಡಿತ ಜವಹರಲಾಲ್ ನೆಹರು ಬಹುಮುಖವಾದ ಪ್ರಜ್ಞೆಯುಳ್ಳವರು. ಹಿಂದಿ, ಉರ್ದು, ಪರ್ಷಿಯನ್, ಸಂಸ್ಕೃತ, ಇಂಗ್ಲೀಷ್ ಮೊದಲಾದ ಭಾಷೆಯಲ್ಲಿ ಅವರಿಗೆ ಅಪಾರವಾದ ಪಾಂಡಿತ್ಯವಿದ್ದಿತು. ವಿದ್ಯಾಸಾಗರ ಎನಿಸಿದ್ದ ಪಂಡಿತ ಮೋತಿಲಾಲ್ ನೆಹರೂಗೆ ವಿದ್ಯಾಸಮುದ್ರ ಪಂಡಿತ ಜವಹರಲಾಲ್ ನೆಹರೂ ತಕ್ಕ ಮಗ ಎನಿಸಿಕೊಂಡಿದ್ದರು. ಭಾರತೀಯ ಸಾಹಿತ್ಯ ಸಂಸ್ಕೃತಿಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದರು. ಇಂಗ್ಲೆಂಡಿನ ಹ್ಯಾರೋ ಮತ್ತು ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯಗಳಲ್ಲಿ ಹೆಚ್ಚಿನ ವಿದ್ಯಾಭ್ಯಾಸವನ್ನು ಗಳಿಸಿದ್ದ ಅವರು ಭಾರತದ ಮಹಾಪ್ರಧಾನರೇ ಅಲ್ಲದೆ ಅಖಿಲ ಭಾರತದ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರೂ ಆಗಿದ್ದರೆಂಬುದು ಗಮನಾರ್ಹ. ಅದಕ್ಕೂ ಮಿಗಿಲಾಗಿ ಸತ್ಯ ಸೌಂದರ್ಯಗಳ ಉಪಾಸಕರಾದ ಸಹೃದಯರೆಂಬುದು ಇಲ್ಲಿ ನೆನಪಿಡುವ ಸಂಗತಿ. ಅವರು ಬರೆದಿರುವ ಆತ್ಮ ಚರಿತ್ರೆ, ಭಾರತ ದರ್ಶನ, (Discovery of India) ಮಗಳಿಗೆ ತಂದೆಯ ಓಲೆಗಳು ಮೊದಲಾದ ಗ್ರಂಥಗಳು ಕನ್ನಡಕ್ಕೂ ಅನುವಾದವಾಗಿವೆ. ಕೋಟಿ ಕೋಟಿ ಕನ್ನಡಿಗರು ಅದನ್ನು ಓದಿಕೊಂಡು ಸ್ಫೂರ್ತಿಗೊಂಡಿದ್ದಾರೆ. ಅವರ ಭಾರತ ದರ್ಶನವು ವಿಶ್ವದಲ್ಲೆಲ್ಲ ಭರತಖಂಡಕ್ಕೆ ಹೆಚ್ಚಿನ ಮನ್ನಣೆಯನ್ನು ಗಳಿಸಿಕೊಂಡಿದೆ. ಈಗ ಪಂಡಿತ ನೆಹರೂ ಅವರನ್ನು ಕುರಿತು ಭಾರತದ ಎಲ್ಲ ಭಾಷೆಗಳಲ್ಲಿಯೂ ವಿಶೇಷವಾಗಿ ಇಂಗ್ಲೀಷಿನಲ್ಲಿಯೂ ಮಹತ್ವದ ಗ್ರಂಥಗಳು ಪ್ರಕಟವಾಗಿವೆ. ದೇಶನಾಯಕರಾದ ಅವರ ಆತ್ಮ ಚರಿತ್ರೆ ಭಾರತೀಯ ಭಾಷೆಗಳಲ್ಲೆಲ್ಲಾ ವಿಖ್ಯಾತವಾಗಿವೆ. ನಾಡಿನ ವಿದ್ವಾಂಸರು ಅವರನ್ನು ಕುರಿತು ಬರೆದ ಲೇಖನಗಳಿಂದ ಕೂಡಿದ 'A Study of Nehru' ಎಂಬ ಗ್ರಂಥವು ಇಂಗ್ಲಿಷ್ ಸಾಹಿತ್ಯಕ್ಕೆ ಅಮೂಲ್ಯ ರತ್ನವೆಂಬಂತಿದೆ. ಇದರಿಂದ ನೆಹರೂರವರ ಅಸದೃಶವಾದ ವ್ಯಕ್ತಿತ್ವವು ಪ್ರಪಂಚಕ್ಕೆ ವಿದಿತವಾಗಿದೆ.

ಪಂಡಿತ ಜವಹರಲಾಲ್ ನೆಹರು ಸಂಸ್ಕಾರಜನ್ಯ ಮಹಾಪುರುಷರು. ಸಜೀವ ಜ್ಞಾನಭಂಡಾರದಂತೆ ಇದ್ದವರು. ಅವರು ಭಾರತದಲ್ಲಿಯೂ ಇಂಗ್ಲೆಂಡ್, ಅಮೆರಿಕ, ರಷ್ಯ, ಈಜಿಪ್ಟ್ ಮೊದಲಾದ ದೇಶಗಳಲ್ಲಿಯೂ ಕಾಂಗ್ರೆಸ್ ಅಧ್ಯಕ್ಷರಾಗಿ ಮತ್ತು ಲೋಕಸಭೆಯ ಮುಖಂಡರಾಗಿ ಮಾಡಿದ ಭಾಷಣಗಳನ್ನೆಲ್ಲಾ ಸಂಗ್ರಹಿಸಿ ಪ್ರಕಟಿಸಿದರೆ ಅದು ಪ್ರಪಂಚಕ್ಕೇ ಉಪಯೋಗವಾಗುವ ಒಂದು ಬೃಹದ್ ಗ್ರಂಥವಾಗುತ್ತದೆಂದು ಹೇಳಬಹುದು.

ಪರಮಹಂಸರು, ಅರವಿಂದರು, ವಿವೇಕಾನಂದರು, ರವೀಂದ್ರರು, ಗಾಂಧಿಯವರು ತಮ್ಮ ಅವತಾರಗಳಿಂದ ಭಾರತ ಮತ್ತು ವಿಶ್ವಗಳನ್ನು ಪರಿಪೂರ್ಣಗೊಳಿಸಿದಂತೆಯೇ ಪಂಡಿತ ಜವಹರಲಾಲರೂ ಕೂಡ ತಮ್ಮ ಜನನದಿಂದ ಭರತಖಂಡಕ್ಕೆ ಮಿಗಿಲಾದ ಕೀರ್ತಿ ಗೌರವಗಳನ್ನು ತಂದಿರುತ್ತಾರೆ. ಅವರು ವಿಶ್ವಮಾನವರೆಂಬುದಕ್ಕೆ ಭಾರತದಲ್ಲಿಯೂ ಇತರ ಮಿತ್ರ ರಾಜ್ಯಗಳಲ್ಲಿಯೂ ವ್ಯಕ್ತವಾದ ಪ್ರತಿಕ್ರಿಯೆಯು ಸುಸ್ಪಷ್ಟವಾದ ನಿದರ್ಶನವಾಗಿದೆ. ಅವರ ವಿಯೋಗವು ಕೇವಲ ರಾಜಕೀಯ ಪ್ರಪಂಚಕ್ಕೇ ಅಲ್ಲ ಸಾಹಿತ್ಯ ಪ್ರಪಂಚಕ್ಕೂ ಅಪಾರವಾದ ನಷ್ಟವನ್ನುಂಟುಮಾಡಿದೆಯೆಂದು ಹೇಳಬಹುದಾಗಿದೆ. ಕರುಣಾಳುವಾದ ಪರಮೇಶ್ವರನು ದಿವಂಗತ ನೆಹ್ರೂರವರ ಆತ್ಮಕ್ಕೆ ಶಾಂತಿಯನ್ನೂ ಅವರ ಸುಪುತ್ರಿ, ಸೋದರಿ, ಮೊಮ್ಮಕ್ಕಳು ಮೊದಲಾದ ಬಂಧುಮಿತ್ರರ ಮನಸ್ಸಿಗೆ ಸಮಾಧಾನವನ್ನೂ ಉಂಟುಮಾಡಲೆಂದು ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಪ್ರಾರ್ಥಿಸುತ್ತೇನೆ.

# ಶ್ರೀ ಚಿತ್ರದುರ್ಗ ಜಗದ್ಗುರುಗಳು ಲಿಂಗೈಕ್ಯರಾದರು

## ಕರ್ಣಾಟಕದ ಜ್ಞಾನಭಂಡಾರ ನೂಾಯವಾಯಿತು

ಚಿತ್ರದುರ್ಗದ ಚಿನ್ಮೂಲಾದ್ರಿ ಶೂನ್ಯಸಿಂಹಾಸನಾಧೀಶ್ವರರೂ, ಕನ್ನಡ, ಸಂಸ್ಕೃತ, ಹಿಂದಿ, ಬಂಗಾಳಿ, ಮರಾಠಿ, ಮೊದಲಾದ ಭಾಷಾವಿಶಾರದರೂ, ವೇದಶಾಸ್ತ್ರ ಪಾರಂಗತರೂ, ಶಿವಾನುಭವ ಕಲಾಕೋವಿದರೂ, ಸರ್ವಧರ್ಮ ಸಮನ್ವಯಾಚಾರ್ಯರೂ ಎನಿಸಿದ್ದ ವೈರಾಗ್ಯನಿಧಿ ಚಿತ್ರದುರ್ಗ ಜಗದ್ಗುರು ಜಯವಿಭವ ಮುರುಘರಾಜೇಂದ್ರ ಮಹಾಸ್ವಾಮಿಗಳವರು ದಿನಾಂಕ ೨೦-೫-೬೪ರ ಮಧ್ಯಾಹ್ನ ೧೨ ಗಂಟೆ ೧೫ ನಿಮಿಷಕ್ಕೆ ಚಿತ್ರದುರ್ಗದ ಶ್ರೀ ಶ್ರೀ ಸಂಸ್ಥಾನ ಮಠದಲ್ಲಿ ಅದರ ಕರ್ತೃ ಮುರುಘೇಶನ ಸನ್ನಿಧಿಯಲ್ಲಿ ತಮ್ಮ ಭೌತಿಕ ದೇಹವನ್ನು ವಿಸರ್ಜಿಸಿ ಪರಮೇಶ್ವರನಲ್ಲಿ ಐಕ್ಯರಾದರು ಎಂಬುದನ್ನು ತಿಳಿಸಲು ದುಃಖವಾಗುತ್ತದೆ.

ಶ್ರೀ ಜಗದ್ಗುರುಗಳು ನೈಷ್ಠಿಕ ಬ್ರಹ್ಮಚರ್ಯ, ಅತುಲವಾದ ವೈರಾಗ್ಯ, ಮಿಗಿಲಾದ ವಿದ್ಯಾ ಸಂಪತ್ತು, ಉದಾರವಾದ ಭಾವನೆಗಳು, ಉಜ್ವಲದೇಶಾಭಿಮಾನ — ಇವುಗಳಿಗೆ ಹೆಸರಾಗಿದ್ದರು. ಶ್ರೀ ಜಗದ್ಗುರುಗಳು ತಮ್ಮ ಹಿರಿಯರಂತೆಯೇ ದೇಶೋನ್ನತಿ ಕಾರ್ಯಗಳಿಗೂ, ವಿದ್ಯಾಸಂಸ್ಥೆಗಳಿಗೂ ಲಕ್ಷಗಟ್ಟಲೆ ಧನವನ್ನು ಉದಾರವಾಗಿ ಕೊಟ್ಟಿರುತ್ತಾರೆ. ಹಾಸನದ ಸಾರ್ವಜನಿಕ ವಿದ್ಯಾರ್ಥಿ ನಿಲಯಕ್ಕೆ ೧ ಲಕ್ಷ ರೂ.ಗಳನ್ನು, ರಾಷ್ಟ್ರೀಯ ರಕ್ಷಣಾನಿಧಿಗೆ ೧೦ ಸಹಸ್ರ ರೂ.ಗಳನ್ನು ರವೀಂದ್ರ ಕಲಾ ಕ್ಷೇತ್ರಕ್ಕೆ ೫ ಸಹಸ್ರ ರೂ.ಗಳನ್ನು ಅನುಗ್ರಹಿಸಿರುತ್ತಾರೆ. ಕನ್ನಡ ನಾಡು ನುಡಿಗಳ ಉಜ್ವಲಾಭಿಮಾನಿಗಳಾದ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಮಹಾಪೋಷಕರಾಗಿದ್ದರೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಲೋಕಾವಿಖ್ಯಾತರಾದ ಶ್ರೀ ಚಿತ್ರದುರ್ಗದ ಜಯದೇವ ಜಗದ್ಗುರುಗಳ ಕರಕಂಸಂಜಾತರಾದ ಇವರು ೧೯೧೨ನೇ ವರ್ಷದ ಮೇ ತಿಂಗಳು ೨೨ನೆಯ ತಾರೀಖು ಕರ್ಣಾಟಕದ ಓರ್ವ ಜಂಗಮ ಮನೆತನದಲ್ಲಿ ಜನಿಸಿದರು. ಬಾಲ್ಯದಲ್ಲಿ ಅಥಣಿ ಶಿವಯೋಗಿಗಳ ಕೃಪಾನುಗ್ರಹಕ್ಕೆ ಪಾತ್ರರಾದರು. ಅನಂತರ ಶ್ರೀ ಜಯದೇವ ಜಗದ್ಗುರುಗಳ ದೃಷ್ಟಿ ಇವರ ಮೇಲೆ ಬಿದ್ದಿತು.

ಇವರು ಕಾಶೀ ಕ್ಷೇತ್ರಕ್ಕೆ ಹೋಗಿ ಸಾಹಿತ್ಯ, ವ್ಯಾಕರಣ, ವೇದಾಂತ, ಮತ್ತು ತರ್ಕಶಾಸ್ತ್ರಗಳನ್ನು ಅಭ್ಯಾಸಮಾಡಿದರು. ಸಂಸ್ಕೃತ, ಹಿಂದಿ, ಮತ್ತು ಬಂಗಾಲಿಗಳಲ್ಲಿ ಒಳ್ಳೆಯ ಪಂಡಿತರಾದರು. ಕನ್ನಡ ಭಾಷೆಯಲ್ಲಿಯೂ ಇವರಿಗೆ ಆಳವಾದ ಪಾಂಡಿತ್ಯವಿತ್ತು. ಮರಾಠಿ ಮತ್ತು ಇಂಗ್ಲಿಷ್ ಭಾಷೆಗಳ ಪರಿಚಯವನ್ನೂ ಪಡೆದುಕೊಂಡಿದ್ದರು. ಸುಮಾರು ೨೦ ವರ್ಷ ಕಾಲ ಕಾಶಿಯಲ್ಲಿ ವಿವಿಧ ಶಾಸ್ತ್ರಗಳನ್ನು ಶ್ರದ್ಧೆಯಿಂದ ಅಭ್ಯಾಸಮಾಡಿದರು. ೧೯೪೪ನೆಯ ಫೆಬ್ರವರಿ ೧೪ನೇ ದಿನ ಇವರಿಗೆ ಚಿತ್ರದುರ್ಗ ಶೂನ್ಯಸಿಂಹಾಸನದ ಪಟ್ಟಾಧಿಕಾರವಾಯಿತು. ಈ ಸಂಸ್ಥಾನಮಠದ ಆಡಳಿತವನ್ನು ಅತ್ಯಂತ ದಕ್ಷತೆಯಿಂದ ನಿರ್ವಹಿಸಿದರು. ಶ್ರೀ ಚಿತ್ರದುರ್ಗ ಮುರುಘಾಮಠವು ವಿದ್ವತ್ತು, ವೈರಾಗ್ಯ, ಲೋಕಸೇವೆ ಮತ್ತು ಸಂಪತ್ತುಗಳಿಗೆ ಸಮಗ್ರ ಭಾರತದಲ್ಲಿಯೇ ಹೆಸರಾಗಿದೆ. ಕನ್ನಡನಾಡಿನ ಕವಿ ಪಂಡಿತರಿಗೆ ಇವರು ಕಾಮಧೇನುವಂತಿದ್ದರು. ಇವರ ಮನಸ್ಸು ಗಂಗಾನದಿಯಂತೆ ನಿರ್ಮಲವಾಗಿತ್ತು. ಇವರ ಭಾವನೆಗಳು ಹಿಮಾಲಯದ ಉತ್ತುಂಗಶಿಖರಗಳಂತೆ ಉನ್ನತವಾಗಿದ್ದವು. ಇವರ ಜೀವನವು ಶಾಂತಿ ಸಾಗರದಂತೆ ವಿಶಾಲವೂ ಗಂಭೀರವೂ ಆದುದು. ಇವರು ಒಳ್ಳೆಯ ಆಕಾರ, ಅದಕ್ಕೆ ಸದೃಶವಾದ ಶಾಸ್ತ್ರದ ಪ್ರಜ್ಞೆ, ಅವುಗಳಿಗೆ ಭೂಷಣಪ್ರಾಯವಾದ ಉತ್ತಮ ನಡವಳಿಕೆಗಳಿಂದ ಕೂಡಿದ್ದರು. ಇವರ ಮುಖಮುದ್ರೆಯು ಸದಾ ಪ್ರಶಾಂತವಾಗಿ ಕಂಗೊಳಿಸುತ್ತಿತ್ತು. ಮೃದುಮಧುರವಾದ ಮಾತುಗಳಿಗೆ ಇವರು ಹೆಸರಾಗಿದ್ದರು.

ಬೆಂಗಳೂರು ಗಾಂಧಿನಗರದಲ್ಲಿರುವ ಶ್ರೀ ಸಂಸ್ಥಾನಕ್ಕೆ ಸೇರಿದ ತಿಪ್ಪಶೆಟ್ಟರ ಮಠದಲ್ಲಿ ಸುಮಾರು ೫ ಲಕ್ಷ ರೂ.ಗಳ ವೆಚ್ಚದಲ್ಲಿ ಇವರು ಒಂದು ದೊಡ್ಡ ಪುಸ್ತಕಾಲಯವನ್ನೂ ಸಂಶೋಧನಾಲಯವನ್ನೂ ಮಾಡಬೇಕೆಂದಿದ್ದರು. ಸುಮಾರು ೫೦ ದಿನಗಳ ಹಿಂದೆ ಬೆಂಗಳೂರಿಗೆ ಬಂದವರು ತಮ್ಮ ನಿವಾಸವೆನಿಸಿದ್ದ ಶ್ರೀ ಸರ್ಪಭೂಷಣ ಮಠಕ್ಕೆ ರಾಜ್ಯಪ್ರಮುಖರನ್ನು ಬರಮಾಡಿಕೊಂಡು ಈ ಬಗ್ಗೆ ಮಾತುಕತೆ ನಡೆಸಿದರು. ಆದರೆ ವಿಧಿ ಅವರ ಬೆನ್ನ ಹಿಂದೆಯೇ ಬಂದಿತು. 'ಶರೀರವನಾಂತ ಬಳಿಕ್ಕ ಸಾವುದೇ ದಿಟಂ' 'ಜಾತಸ್ಯ ಮರಣಂ ಧ್ರುವಂ' 'Death is Near' ಎಂಬ ಆರ್ಯೋಕ್ತಿಗಳಂತೆ ಅವರು ಮರಣಕ್ಕೆ ಈಡಾಗಲೇಬೇಕಾಯಿತು. ಅವರಿಗೆ ಕ್ಯಾನ್ಸರ್ ಇತ್ತೆಂದು ವೈದ್ಯರ ಅಭಿಪ್ರಾಯ. ವೈದ್ಯರು ಬಹಳವಾಗಿ ಪ್ರಯತ್ನಿಸಿದರು. ಆದರೆ ಪ್ರಬಲವಾದ ವಿಧಿಯ ಮುಂದೆ ವೈದ್ಯರ ಆಟ ಸಾಗುವುದೆ? ಶ್ರೀ ಜಗದ್ಗುರುಗಳು 'ಮರಣವೇ ಮಹಾನವಮಿ' ಎಂಬ ಬಸವೇಶ್ವರನ ವಾಕ್ಯ

ದಂತೆ ಮರಣವನ್ನು ಧೈರ್ಯದಿಂದ ಸ್ವಾಗತಿಸಿದರು. ತಮ್ಮ ಮರಣ ಖಚಿತವೆಂದು ತಿಳಿದ ಅವರು ತಾ. ೧೩-೫-೬೪ರ ಶ್ರೀ ಬಸವಜಯಂತಿಯ ಶುಭದಿನ ಬೆಂಗಳೂರಿನಲ್ಲಿರುವ ತಮ್ಮ ಸಂಸ್ಥಾನಮಠದ ಉತ್ತರಾಧಿಕಾರಿಗಳನ್ನಾಗಿ ಹಾವೇರಿ ಮತ್ತು ಅಥಣಿ ಮಠಗಳ ಅಧ್ಯಕ್ಷರೂ, ವಿಖ್ಯಾತ ವಿದ್ವಾಂಸರೂ, ವೈರಾಗ್ಯ ಸಂಪನ್ನರೂ, ವ್ಯಾಕರಣಾಚಾರ್ಯ ಪದವೀಧರರೂ ಆದ ಶ್ರೀ ಶ್ರೀ ಮಲ್ಲಿಕಾರ್ಜುನಸ್ವಾಮಿಗಳನ್ನು ನಿಯಾಮಕ ಮಾಡಿದರು. ಅದಕ್ಕೆ ಸರ್ಕಾರದ ಮತ್ತು ಸಮಾಜದ ಒಪ್ಪಿಗೆಯನ್ನು ಕೂಡ ಪಡೆದರು. ಅವರು ತಮ್ಮ ಜೀವನದ ಅಂತ್ಯ ದಿನವನ್ನು ಚಿತ್ರದುರ್ಗದ ಶ್ರೀ ಸಂಸ್ಥಾನಮಠದಲ್ಲಿಯೇ ಕಳೆಯಬೇಕೆಂದು ತಾ. ೧೮-೫-೬೪ರ ದಿನ ಬೆಂಗಳೂರಿನಿಂದ ಚಿತ್ರದುರ್ಗದ ಶ್ರೀ ಮಠಕ್ಕೆ ದಯಮಾಡಿಸಿದರು. ಪ್ರಕೃತಿನಿಯಮದಂತೆ ಶ್ರೀ ಜಗದ್ಗುರುಗಳು ಈ ದಿನ ಮಧ್ಯಾಹ್ನ ೧೨ ಗಂಟೆ ೧೫ ನಿಮಿಷಕ್ಕೆ ಭಗವಂತನಲ್ಲಿಗೆ ಬೆರತುಹೋದರು. ಅವರ ವಿಯೋಗವು ವೀರಶೈವ ಸಮಾಜಕ್ಕೆ, ಕನ್ನಡ ನಾಡಿಗೆ ಅಷ್ಟೇ ಅಲ್ಲ, ಸಮಗ್ರ ಭಾರತಕ್ಕೆ, ಅದರಲ್ಲಿಯೂ ಧಾರ್ಮಿಕ ಪ್ರಪಂಚಕ್ಕೆ ಅಪಾರವಾದ ನಷ್ಟವನ್ನುಂಟುಮಾಡಿದೆಯೆನ್ನಬಹುದು.

ತಾ॥ ೨೦-೫-೬೪
ಬೆಂಗಳೂರು

**ಬಿ. ಶಿವಮೂರ್ತಿ ಶಾಸ್ತ್ರೀ**
ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು.




## ಬಾಷ್ಪಾಂಜಲಿ

ಶ್ರೀ ಸೋ. ದಿವಾಕರ್

ಬಾನ ಮುತ್ತಿದ ಮುಗಿಲು ಹಗಲ ಹೆಗಲೇರಿರಲು
ದಿನಮಣಿಯು ಮರೆಯಾಗಿ ಹೋದನಲ್ಲ
ನಂದಿಹೋಯಿತು ಬೆಳಕು; ಕೆಳಗೆ ಬಿದ್ದಿತು ದೀಪ-
ಕತ್ತಲೆಯು ನಮಗಾಗಿ ಬದುಕಿತಲ್ಲ

ಮುಂಜಾವದಲಿ ಹೊಳೆವ ಮಂಜು ಹನಿಗಳ ತೆರದಿ
ಮಂದಹಾಸಕೆ ಮನವು ಕರಗುತಿತ್ತು
ಮೃದುಲ ನಡಿಗೆಗೆ ನವಿಲು ನಾಚಿ ಓಡುತ್ತಿತ್ತು;
ಮಾತು ಮಾತಿಗೆ ಮುತ್ತು ಸುರಿಯುತಿತ್ತು.

ಮುದ್ದು ಮಕ್ಕಳ ಜೊತೆಗೆ ಮುದ್ದಾಗಿ ಆಡಿದೆ-
ದೀನದಲಿತರಿಗೆಲ್ಲ ತಂದೆಯಾದೆ
ಬುದ್ಧ ಗಾಂಧೀಜಿಯರ ತತ್ತ್ವವನ್ನನುಸರಿಸಿ
ದೇಶಸೇವೆಗೆ ಜೀವ ತೆಯ್ದುಬಿಟ್ಟೆ.

ಇಳೆಯೆಲ್ಲ ತನ್ನದೆಂದೆನುವ ಅಭಿಮಾನದಲಿ
ಹಗಲಿರುಳು ದುಡಿದು ಹಣ್ಣಾಗಿಹೋದೆ
ಈ ಜಗದ ಕಣ್ಣಾಗಿ ಅಂಧಕಾರವನೆಲ್ಲ
ತೊಲಗಿಸಿದ ನಿನಗೆ ಸರಿಯಾರು ತಂದೆ?

ಕ್ರಾಂತಿ ಸಾಮ್ರಾಜ್ಯದಲಿ ಶಾಂತಿ ದೀಪವ ಹಿಡಿದು
ನಡೆದು ಮಾಡಿದೆಯಲ್ಲ, ಆತ್ಮಾರ್ಪಣ
ತಬ್ಬಲಿಗಳಾಗಿ ನಾವಿಲ್ಲಿಹೆವು, ಓ ತಂದೆ
ಸ್ವೀಕರಿಸು, ಈ ನಮ್ಮ ಕೊನೆಯ ನಮನ.

ಕಾರಿರುಳ ಕುರುಡರಂತಾಗಿಹೆವು ನಾವುಗಳು,
ಆರಲಾರದು ನಮ್ಮ ಮನದ ತಾಪ.
ಭಾರತದ ಉನ್ನತಿಗೆ ಎಡೆಬಿಡದೆ ಶ್ರಮಿಸಿರುವ-
ನಿನ್ನ ನೆನಪೇ ನಮಗೆ ದಾರಿದೀಪ.

---

# ಗ್ರಂಥಾವಲೋಕನ

**ಪುರಂದರದಾಸರು :** ಲೇಖಕರು : ಕೀರ್ತನಾಲಂಕಾರ, ಧರ್ಮಪ್ರಚಾರಕ ಶ್ರೀ ಹಂಡೆ ಗುರು ವೇದವ್ಯಾಸದಾಸರು, ಬೆಂಗಳೂರು; ಪ್ರಕಾಶಕರು: ಶ್ರೀ ಕೆ. ಮಧುಸೂದನರಾವ್, ಆರ್ಕಾಟ್ ಶ್ರೀನಿವಾಸಾಚಾರ್ ರಸ್ತೆ, ಬೆಂಗಳೂರು-೨; ಸೈಜು: ಕ್ರೌನ್ ೧/೮; ಪುಟ: ೧೨೦; ಬೆಲೆ: ರೂ. ೧-೫೦ ನ.ಪೈ.

ಶ್ರೀ ಪುರಂದರದಾಸರ ಚತುಶ್ಶತಮಾನೋತ್ಸವ ನಿಮಿತ್ತವಾಗಿ, ಈ ವರ್ಷಾರಂಭದಿಂದ ಶ್ರೀ ದಾಸರಾಯರ ಜೀವನ ಚರಿತ್ರೆ, ಪದ ಸುಳಾದಿ ಮುಂತಾಗಿ ಶ್ರೀ ಪುರಂದರ ಸಾಹಿತ್ಯ, ಅವರ ದೇವರನಾಮಗಳಿಗೆ ಸಂಗೀತ ಶಾಸ್ತ್ರ ರೀತ್ಯಾ ಸ್ವರ ಸಂಯೋಜನೆ ಮಾಡಿ ಪ್ರಕಟಿಸಿದ ಗ್ರಂಥಗಳು, ಅಲ್ಲದೆ ಸಂಶೋಧಕ ದೃಷ್ಟಿಯಿಂದ ಶ್ರೀ ದಾಸರ ಜೀವನ-ಜೀವಿತ ಕಾರ್ಯ, ಅವರೆಸಗಿದ ಕರ್ಣಾಟಕ ಸಂಗೀತ-ಸಾಹಿತ್ಯ ಪುನರುದ್ಧಾರ ಮಹಾಕಾರ್ಯ, ಭಾಗವತ ಧರ್ಮ ಜೀರ್ಣೋದ್ಧಾರ ಕಾರ್ಯ ಇವುಗಳನ್ನೆಲ್ಲ ವರ್ಣಿಸುವ ಅನೇಕಾನೇಕ ಲೇಖನಗಳು ಮುಂತಾಗಿ ಶ್ರೀ ಪುರಂದರ ಸಾಹಿತ್ಯವು ವಿಶೇಷ ಸಂಖ್ಯೆಯಿಂದ ಪ್ರಕಟವಾಗಿ ದೇಶಾದ್ಯಂತ ದಾಸರ ಪರಿಚಯ ಮಾಡಿಕೊಟ್ಟಿವೆ. ಈ ಸಂದರ್ಭಕ್ಕಾಗಿ, ಹೆಚ್ಚುಕಡಿಮೆ ಕರ್ಣಾಟಕದ ಎಲ್ಲಾ ಪತ್ರಿಕೆಗಳವರೂ ವಿಶೇಷ ಸಂಚಿಕೆಗಳನ್ನು ಹೊರಡಿಸಿದ್ದಾರೆ. ಪ್ರಕೃತ ಗ್ರಂಥವೂ ಈ ಮಹೋತ್ಸವ ನಿಮಿತ್ತವಾಗಿಯೇ ಶ್ರೀ ಹಂಡೆ ಗುರು ವೇದವ್ಯಾಸದಾಸರಿಂದ ರಚಿತವಾಗಿ ಪ್ರಕಾಶಗೊಂಡುದಾಗಿದೆ.

ಶ್ರೀ ಪುರಂದರದಾಸರ ನಾಲ್ಕನೆಯ ಶತಮಾನೋತ್ಸವ ಸಂಬಂಧದಲ್ಲಿ ಪ್ರಕಟವಾದ ಹಲವಾರು ದಾಸರ ಜೀವನ ಚರಿತ್ರೆಗಳಿಗೂ ಈ ಗ್ರಂಥಕ್ಕೂ ಒಂದು ಸ್ಪಷ್ಟವಾದ ವ್ಯತ್ಯಾಸವು ಕಂಡುಬರುತ್ತಿದೆ. ಇತರ ಗ್ರಂಥಗಳು ಚಾರಿತ್ರಿಕ ದೃಷ್ಟಿಯನ್ನವಲಂಬಿಸಿ, ಬರೆದುವಾಗಿದ್ದರೆ ಪ್ರಕೃತ ಗ್ರಂಥವು ದಾಸಸಾಹಿತ್ಯವನ್ನೇ ಮೂಲಾಧಾರವನ್ನಾಗಿಟ್ಟುಕೊಂಡು ರಚಿಸಿದುದಾಗಿದೆ. ಗ್ರಂಥಕರ್ತರು, ಹರಿದಾಸರ ವಂಶ ಸಂಜಾತರಾಗಿ, ತಾವೂ ಕೀರ್ತನ ಸೇವಾ ಕ್ಷೇತ್ರದಲ್ಲೇ ಸುಮಾರು ಇಪ್ಪತ್ತು ವರ್ಷಗಳಿಗೆ ಮೇಲ್ಪಟ್ಟು ಪರಿಶ್ರಮಿಸುತ್ತಿರುವುದರಿಂದ, ಶ್ರೀ ಪುರಂದರದಾಸ ಚರಿತ್ರ ಲೇಖನಕ್ಕೆ ದಾಸಸಾಹಿತ್ಯಾಧಾರದಿಂದ ವಿಷಯ ಸಂಗ್ರಹ ಮಾಡಲು ವಿಶೇಷ ಅನುಭವ ಸಂಪನ್ನರಾಗಿಯೂ ಇದ್ದಾರೆ. ಆದುದರಿಂದ ಈ ಚರಿತ್ರೆಯು ಸಂಪ್ರದಾಯಬದ್ಧ ರೀತಿಯಲ್ಲಿ ಪ್ರಕಟವಾದ ಶ್ರೀ ದಾಸರಾಯ ಚರಿತ್ರೆಯೆನ್ನಲು ಸಂದೇಹವಿಲ್ಲ.

ಪ್ರಾರಂಭಕ್ಕೆ ಶ್ರೀ ಪುರಂದರದಾಸರನ್ನು ಕನ್ನಡ ನಾಡಿಗೆ ಅನುಗ್ರಹಿಸಿದ, ಅವರ ಗುರುವರ್ಯರಾದ ಶ್ರೀ ವ್ಯಾಸರಾಯರ ಮಹತ್ವವನ್ನು ತಿಳಿಸಿರುವುದು ಸಮಂಜಸವಾಗಿದೆ. ತರುವಾಯ ಶ್ರೀ ದಾಸರ ಚರಿತ್ರೆಯ ರಚನೆಗೆ ಮುಖ್ಯ ಆಧಾರಭೂತವಾದ ಶ್ರೀ ವಿಜಯದಾಸರ ಕೃತಿಗಳು, ನಾರದ ಮಹರ್ಷಿಗಳು ದಾಸರಾಗಿ ಅವತರಿಸಲು ಸಂಭವಿಸಿದ ಪೂರ್ವ ವೃತ್ತಾಂತ-ಭಾಗವತ ಧರ್ಮಪ್ರಚಾರ ಕಾರ್ಯದ ಮಹೋದ್ದೇಶ-ಅದರ ಅಂಗವಾಗಿ ರೂಪುಗೊಂಡ ಕರ್ಣಾಟಕ ಶ್ರೀಹರಿ ಕೀರ್ತನಕಲೆಯ ಮಹತ್ವ ಇವೆಲ್ಲ ಯುಕ್ತರೀತಿಯಲ್ಲಿ ವಿವರಿಸಲ್ಪಟ್ಟಿವೆ. ಶ್ರೀ ಪುರಂದರದಾಸರ ಪೂರ್ವ ಜೀವನ ವಿಚಾರವನ್ನು ಸಂಪ್ರದಾಯಬದ್ಧ ರೀತಿಯಲ್ಲೇ ವಿವರಿಸಿದ್ದಾರೆ. ಶ್ರೀ ತಿರುಪತಿಯ ಶ್ರೀಸಿವಾಸನ ಪರಮಾನುಗ್ರಹರೂಪವಾಗಿ ವರದಪ್ಪನಾಯಕ-ಲಕ್ಷ್ಮೀಬಾಯಿಯರ ಉದರದಲ್ಲಿ ಜನಿಸಿದ ಶಿಶುವಿಗೆ-(ಹೆಚ್ಚಿನವರ ಅಭಿಪ್ರಾಯವನ್ನನುಸರಿಸಿ) ಕೃಷ್ಣಪ್ಪ ನಾಯಕನೆಂದು ನಾಮಕರಣ ಮಾಡಿದನೆಂದು (ಪುಟ ೭೫, ೭೬) ಹೇಳಿದ ಗ್ರಂಥಕರ್ತರು, ಮುಂದೆ ಏನು ಕಾರಣವೋ (ಪುಟ ೩೩) ಶ್ರೀನಿವಾಸನಾಯಕನೆಂದೇ ಕರೆಯುತ್ತ ಸಾಗಿದ್ದಾರೆ. ನಾಯಕರ ಜೀವನದಲ್ಲಿ ಕಂಡುಬಂದ ಲೋಭದ ಪರಮಾವಧಿ ವರ್ಣನೆಯೂ ಭಗವಂತನಿಂದ ನಡೆದ ನಾಯಕರ ಪರೀಕ್ಷೆ, ಮಹಾತ್ಯಾಗ, ಜೀವನಪರಿವರ್ತನೆ ಮುಂತಾದುವೆಲ್ಲ, ಕೀರ್ತನರಂಗದಲ್ಲಿ ಶ್ರೋತೃಗಳ ಚಿತ್ತಾಕರ್ಷಣೆಗಾಗಿ ಉಪಯೋಗಿಸುವ ಸಹಜ ವರ್ಣನೆಯಿಂದ ಕೂಡಿವೆ. ತರುವಾಯ ಶ್ರೀ ವ್ಯಾಸರಾಯ ಸ್ವಾಮಿಗಳಿಂದ ಅಂಕಿತಪ್ರದಾನ, ದಾಸತ್ವದೀಕ್ಷಾ, ಮಂತ್ರೋಪದೇಶ, ಇತ್ಯಾದಿಗಳೂ, ದಾಸತ್ವದ ಸುಮಾರು ನಾಲ್ವತ್ತು ವರ್ಷಾವಧಿಯ ಕಾಲದಲ್ಲಿ ಶ್ರೀ ಪುರಂದರದಾಸರಿಂದ ನಡೆದ ಹಲವಾರು ಮಹಿಮಾ ಪ್ರದರ್ಶಕ ಕಾರ್ಯಗಳೂ, ಇತರ ಅನೇಕ ಅನುಭವ ವಿಚಾರಗಳೂ ದಾಸರ ಉತ್ತರ ಜೀವನ ವಿಭಾಗದಲ್ಲಿ ವಿಸ್ತಾರವಾಗಿ, ಆಕರ್ಷಕ ರೀತಿಯಲ್ಲಿ ವರ್ಣಿತವಾಗಿವೆ.

ಶ್ರೀ ಪುರಂದರದಾಸರಿಂದ ನಿರ್ಮಿತವಾದ ಅಗಾಧ ಭಕ್ತಿ ಸಾಹಿತ್ಯ ಕನ್ನಡ ನಾಡಿಗೇ ಒಂದು ಅಮೂಲ್ಯ ನಿಧಿಯಾಗಿ,

ಶ್ರೀ ವ್ಯಾಸರಾಯ ಸ್ವಾಮಿಗಳಿಂದ ಪುರಂದರೋಪನಿಷತ್ತು ಎಂಬ ಗೌರವನಾಮದಿಂದ ವಿಭೂಷಿತವಾದ ಸಂದರ್ಭವೂ ಸಂಪ್ರದಾಯ ರೀತಿಯಲ್ಲೇ ವರ್ಣಿತವಾಗಿದೆ.* ಇಷ್ಟೆಲ್ಲದ ರೊಂದಿಗೆ, ದಾಸಪಂಥದವರಲ್ಲೇ ಜಿಜ್ಞಾಸೆಗೆ ಈಡಾಗಿರುವ,- ಅವರ ಕೃತಿಗಳು ೪,೭೫,೦೦೦ ವೇ ಅಥವಾ ೪,೨೫,೦೦೦ವೇ ಎಂಬ ವಿಚಾರವನ್ನು ಗ್ರಂಥಕರ್ತರು ಸ್ವಲ್ಪಮಟ್ಟಿಗೆ ವಿಮರ್ಶಿಸಿದ್ದರೆ ಉತ್ತಮವೆನ್ನಿಸುತ್ತಿತ್ತು. ಒಂದಿಗೇ ದಾಸರಾಯರ ಜೀವಿತಕಾಲ ಕರ್ಣಾಟಕದ ಇತಿಹಾಸದೊಂದಿಗೇ ಹೇಗೆ ಸಾಗಿ ಬಂದಿದೆ ಎಂಬುದನ್ನು ಕುರಿತ ಲೇಶಮಾತ್ರ ಐತಿಹಾಸಿಕ ವಿಚಾರ ವಿವರಣೆಯೂ ಬಂದಿದ್ದರೆ, ದಾಸರ ಧಾರ್ಮಿಕ ಜೀವನವು ಜನತೆಯ ಧಾರ್ಮಿಕ ಸುಧಾರಣೆಗೂ ಹೇಗೆ ಸಹಾಯಕವಾಯಿತು ಎಂಬುದನ್ನು ಸ್ಪಷ್ಟಗೊಳಿಸಬಹುದಾಗಿತ್ತು. ಒಟ್ಟಿನಲ್ಲಿ ಶ್ರೀ ಪುರಂದರದಾಸರ ಜೀವನ-ಜೀವಿತ ಕಾರ್ಯಗಳ ಒಂದು ಸ್ಪಷ್ಟ ನಿರೂಪಣೆ ಈ ಗ್ರಂಥದಲ್ಲಿ ರೂಪುಗೊಂಡು ಓದುಗರಿಗೆ ತೃಪ್ತಿದಾಯಕವಾಗಿದೆ ಎಂದು ಗ್ರಂಥಕರ್ತರನ್ನೂ, ಅವರಿಗೆ ಪ್ರಕಾಶನ ಕಾರ್ಯದಲ್ಲಿ ಬೆಂಬಲಿಗರಾಗಿ ಸಹಾಯ ಮಾಡಿದ ಪ್ರಕಾಶಕರನ್ನೂ ಅಭಿನಂದಿಸಬೇಕಾಗಿದೆ.

**—ಸುಬೋಧ ಎಂ. ರಾಮರಾವ್**

---

* ಈ ಗ್ರಂಥದಲ್ಲಿ ಉಡುಪಿಯ ಶ್ರೀಕೃಷ್ಣ, ಶ್ರೀ ಮಧ್ವಾಚಾರ್ಯರು, ಶ್ರೀ ಪುರಂದರದಾಸರು, ಮೂವರು ಶ್ರೀಪಾದಂಗಳವರು, ಗ್ರಂಥಕರ್ತರ ತಂದೆಯವರು, ಗ್ರಂಥಕರ್ತರು, ಅವರ ಉತ್ತೇಜಕರು ಮುಂತಾದ ಹತ್ತು ಹನ್ನೆರಡು ಭಾವಚಿತ್ರಗಳೂ ಗ್ರಂಥದ ಅಂದವನ್ನು ಹೆಚ್ಚಿಸಲು ಕೊಡಲ್ಪಟ್ಟಿವೆ.

**ವೈಶ್ಯ ಕುಲದೇವತೆ:** ಲೇಖಕರು ಮತ್ತು ಪ್ರಕಾಶಕರು: ಪಂಡಿತ ಟೀಕಾ ವೆಂಕಟಾಚಲಗುಪ್ತ, ಸಾಹಿತ್ಯಾಲಂಕಾರ, ವಿದ್ವಾನ್, ಚಿತ್ರದುರ್ಗ; ಕಿರೀಟಾಕಾರ ಅಷ್ಟದಳ ಪುಟಗಳು: ೧೧೭; ಬೆಲೆ: ಒಂದು ರೂ.

ವೈಶ್ಯಧರ್ಮ ಪ್ರಕಾಶಿಕೆ, ವೈದ್ಯಪುರಾಣ ಮತ್ತು ಕನ್ಯಕಾಪುರಾಣಗಳ ಆಧಾರದಮೇಲೆ 'ವೈಶ್ಯ ಕುಲದೇವತೆ' ಎಂಬ ಈ ಗ್ರಂಥವನ್ನು ಶ್ರೀ ವೆಂಕಟಾಚಲಗುಪ್ತ ರವರು ಕನ್ನಡ ಭಾಷೆಯಲ್ಲಿ ರಚಿಸಿ, ಕನ್ನಡಿಗರಿಗೆ ಮಹೋಪಕಾರ ಮಾಡಿದ್ದಾರೆ. ಈ ಪುಸ್ತಕವನ್ನು ವೈಶ್ಯ ಕುಲದೇವತೆಯಾದ ಶ್ರೀ ಕನ್ಯಕಾಪರಮೇಶ್ವರಿಗೇ ಅರ್ಪಿಸಲಾಗಿದೆ. ಡಾ|| ಎಸ್. ರಾಧಾಕೃಷ್ಣನ್, ಶ್ರೀ ಮಹದೇವ ಚೈತನ್ಯಸ್ವಾಮಿಗಳು, ಶ್ರೀ ಪಿ. ಗೋಪಾಲಕೃಷ್ಣ ಶ್ರೇಷ್ಠಿಯವರು, ಶ್ರೀ ಕ. ರಾ. ಲಕ್ಷ್ಮೀಕಾಂತಯ್ಯನವರು, ಶ್ರೀ ಎಸ್. ಸುಬ್ರಹ್ಮಣ್ಯ ಶ್ರೇಷ್ಠಿಯವರು, ಕವಿಕೇಸರಿ ಶ್ರೀ ಅದ್ದೇಪಲ್ಲಿ ಸತ್ಯನಾರಾಯಣಗುಪ್ತರವರು, ಉಭಯ ಭಾಷಾಪ್ರವೀಣ ಶ್ರೀಮತಿ ಬಟ್ಟುಲ ಕಾಮಾಕ್ಷಮ್ಮ, ರಾಜಮಹೇಂದ್ರಿ, ಶ್ರೀ ಶಂಕರಾನಂದಗಿರಿ ಸ್ವಾಮಿಗಳು-ಮೊದಲಾದ ಅನೇಕ ಗಣ್ಯರೂ ವಿದ್ವಾಂಸರೂ ಈ ಪುಸ್ತಕವನ್ನು ಪ್ರಶಂಶಿಸಿ, ತಮ್ಮ ಅಭಿಪ್ರಾಯಗಳನ್ನು ಸೂಚಿಸಿರುತ್ತಾರೆ.

ಈ ಗ್ರಂಥವು ವೈಶ್ಯ ಜನಾಂಗಕ್ಕೆ ಅತ್ಯಂತ ಉಪಯುಕ್ತವಾಗಿದೆ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಶ್ರೀ ಕನ್ಯಕಾಪರಮೇಶ್ವರಿಯ ಬಗ್ಗೆ ಹೆಚ್ಚಿನ ಮಾಹಿತಿ ಪಡೆಯಲಪೇಕ್ಷೆಯುಳ್ಳವರು ಈ ಗ್ರಂಥವನ್ನು ಓದಿ ತಿಳಿಯಬಹುದು. ಬ್ರಾಹ್ಮಣ ಕ್ಷತ್ರಿಯರಿಗೆ ತ್ಯಾಗ, ರಸಿಕತೆಯುಳ್ಳ ಮಹೋನ್ನತವಾದ ಚಾರಿತ್ರಿಕ ಪ್ರಶಸ್ತಿ, ಹಿನ್ನೆಲೆ ಪರಂಪರೆಗಳು ಪ್ರಕಾಶಿಸುತ್ತಿರುವಂತೆ ಆರ್ಯ ವೈಶ್ಯರಿಗೂ ಕೂಡ ಮಹತ್ತರವಾದ ಚಾರಿತ್ರಿಕ ಹಿನ್ನೆಲೆ ಇದೆ-ಎಂಬ ವಾದವನ್ನು ಬಹು ಗಂಭೀರವಾಗಿ ಎತ್ತಿಹಿಡಿದು, ಲೇಖಕರು ವೈಶ್ಯಕುಲಕ್ಕೆ ಮಹೋಪಕಾರ ಮಾಡಿ ವೈಶ್ಯಮಹನೀಯರ ಕಣ್ಣು ತೆರೆಯಿಸಿದ್ದಾರೆ.

ಇದರಲ್ಲಿ ಕಂಡುಬರುವ ವೈಶ್ಯಧರ್ಮದ ಗೋತ್ರ ಪ್ರವರಗಳು, ಅಷ್ಟೋತ್ತರ ನಾಮಾವಳಿ, ಉಪದೇಶಾಮೃತ-ಮೊದಲಾದುವು ಪುಸ್ತಕಕ್ಕೆ ಹೊಸಕಾಂತಿಯನ್ನು ಕೊಟ್ಟಿದೆ. ಶೈಲಿ ಸುಲಭವಾಗಿರುವುದರಿಂದ ಎಲ್ಲರೂ ಓದಿ ಅರ್ಥ ಮಾಡಿಕೊಳ್ಳಬಹುದು. ನಮ್ಮ ರಾಷ್ಟ್ರಾಧ್ಯಕ್ಷರು ತಿಳಿಸಿರುವಂತೆ "ಶ್ರೀ ಕನ್ಯಕಾಪರಮೇಶ್ವರಿಯ ಜೀವನ ಮಾನವ ಜನಾಂಗದ ಇತಿಹಾಸದಲ್ಲಿ ಒಂದು ಉಜ್ವಲ ಪ್ರಕರಣ. ಇದು ಮಾನವ ಜನಾಂಗಕ್ಕೆ ಸ್ಫೂರ್ತಿದಾಯಕವಾಗಿದೆ. ಏಸುಕ್ರಿಸ್ತನಂತೆ ಶ್ರೀ ಕನ್ಯಕಾಪರಮೇಶ್ವರಿಯೂ ಅಹಿಂಸೆ, ಆತ್ಮಬಲಿದಾನಗಳಿಂದ ಸದ್ಗತಿಯನ್ನು ಪಡೆದಳಲ್ಲದೆ, ಮಾನವನ ಮೋಕ್ಷಸಾಧನೆಗೆ, ಆತ್ಮೋದ್ಧಾರಕ್ಕೆ ತ್ಯಾಗ ಬಲಿದಾನಗಳೇ ಮಾರ್ಗ ಎಂದು ತೋರಿಸಿಕೊಟ್ಟಿರುವಳು. ಈ ಮಹಾದೇವಿಯ ಜೀವನ ನಮ್ಮೆಲ್ಲರನ್ನೂ ಪಾವನ ಗೊಳಿಸಲಿ."

ಈ ಪುಸ್ತಕದಲ್ಲಿ ಮೂರು ಭಾಗಗಳಿವೆ.

ಮೊದಲನೆಯ ಭಾಗದಲ್ಲಿ ಪುರಾಣಕಾಲದ ಕತೆ, ನೈಮಿಶಾರಣ್ಯದ ವರ್ಣನೆ, ಋಷಿಗಳ ಸಮಾಗಮ, ವೈಶ್ಯರ ಪೂರ್ವ ಚರಿತ್ರೆ-ಇವುಗಳು ವಿವರಿಸಲ್ಪಟ್ಟಿವೆ. ಎರಡನೆಯ ಭಾಗದಲ್ಲಿ ವಾಸವಿಯ ಪೂರ್ವ ವೃತ್ತಾಂತ, ವಿಷ್ಣುವರ್ಧಮಹಾರಾಜನ ಆಗಮನ, ಕಾಮವಿಕಾರ, ಅದರ ಪರಿಣಾಮ, ವೈಶ್ಯರಮಹಾಸಭೆ, ವಾಸವಿಯ ದೇಹತ್ಯಾಗ, ಹಗೆಯಮರಣ, ಇತ್ಯಾದಿ ಪ್ರಕರಣಗಳು ಸವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ. ಮೂರನೆಯ ಭಾಗದಲ್ಲಿ ಗೋತ್ರಪ್ರವರಗಳು, ಸಂಕೇತನಾಮಗಳು, ಆತ್ಮಬಲಿದಾನ ಮಾಡಿದವರ ಹೆಸರುಗಳು, ಅಷ್ಟೋತ್ತರ

ನಾಮಾವಳಿ, ವಿಚಾರಲಹರಿ ಮೊದಲಾದುವುಗಳಿವೆ. ಈ ಭಾಗವಂತೂ ಎಲ್ಲ ವೈಶ್ಯಬಂಧುಗಳಿಗೂ ಬಹು ಉಪಯುಕ್ತವಾಗಿದೆ.

ಒಟ್ಟಿನಲ್ಲಿ ಈ ಗ್ರಂಥವನ್ನು ಬರೆದ ಈ ಲೇಖಕರು ವಂದನಾರ್ಹರು. ಇವರಿಂದ ಇನ್ನೂ ಅನೇಕ ಸಂಶೋಧನಾತ್ಮ ಗ್ರಂಥಗಳು ಹೊರಬೀಳಲಿ.

**ಮಕ್ಕಳ ಸಾಮಾನ್ಯ ರೋಗಗಳು:** ಲೇಖಕರು: ಡಾ॥ ರಾಜಾರಾಮರಾವ್; ಪ್ರಕಾಶಕರು: ಸಮಾಜ ಪುಸ್ತಕಾಲಯ, ಧಾರವಾಡ; ಬೆಲೆ: ರೂ. ೧–೫೦; ಪುಟ: ೧೧೨, ಆಕಾರ: ಕಿರೀಟ ಅಷ್ಟದಳ.

ವೈದ್ಯಶಾಸ್ತ್ರವನ್ನು ಕುರಿತಾದ ಪುಸ್ತಕಗಳು ಕನ್ನಡದಲ್ಲಿ ಅತಿ ವಿರಳ. ಈ ಕೊರತೆಯನ್ನು ಲೇಖಕರು ನೀಗಿಸಲು ಹೊರಟು ಯಶಸ್ವಿಯಾಗಿದ್ದಾರೆ. ಈ ಪುಟ್ಟಗ್ರಂಥ ಕನ್ನಡ ಜನತೆಗೆ ಅದರಲ್ಲೂ ಗೃಹಿಣಿಯರಿಗೆ ಅತ್ಯುಪಯುಕ್ತವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ. ಲೇಖಕರ ಮಾತಿನಲ್ಲಿಯೇ ಹೇಳುವುದಾದರೆ – ಈ 'ಪುಸ್ತಿಕೆ'ಯಲ್ಲಿ ಹತ್ತು ಅಧ್ಯಾಯಗಳಿವೆ. ಅವುಗಳಲ್ಲಿ ವೈದ್ಯರ ಅವಶ್ಯಕತೆ, ರೋಗಿಯ ಶುಶ್ರೂಷೆ-ಎಂಬ ಅಧ್ಯಾಯಗಳು ಬಹಳ ಸೊಗಸಾಗಿವೆ. ವೈದ್ಯರ ಬಳಿ ರೋಗಿಯನ್ನು ಕರೆತಂದಾಗ, ಕರೆತಂದವರು ಹೇಗೆ ನಡೆದುಕೊಳ್ಳಬೇಕೆಂಬ ಅಂಶವನ್ನು ಸರಳವಾಗಿ, ಸ್ಪಷ್ಟವಾಗಿ ತಿಳಿಸಿದ್ದಾರೆ. ಸಾಂಕ್ರಾಮಿಕ ರೋಗಗಳು ಹರಡುವ ವಿಧಾನಗಳನ್ನು ತಿಳಿಸಿ, ಅದು ಹರಡದಂತೆ ತಡೆಗಟ್ಟುವ ಮುನ್ನೆಚ್ಚರಿಕೆಯನ್ನೂ ಕೊಟ್ಟಿದ್ದಾರೆ. ನಿತ್ಯಜೀವನದಲ್ಲಿ ಅತಿ ಸಣ್ಣ ಕಾಯಿಲೆಯೆಂದು ನಾವು ಉದಾಶೀನ ಮಾಡುವ ಹಲವಾರು ಸಣ್ಣಪುಟ್ಟ ಕಾಯಿಲೆಗಳು ಹೇಗೆ ಮುಂದೆ ಪ್ರಮಾದವಾಗಿ ಅನಾಹುತವಾಗುವುದೆಂಬುದನ್ನು ವಿಶದಪಡಿಸಿದ್ದಾರೆ. 'ವಿಟಮಿನ್' ಆಹಾರ ಸತ್ವಗಳ ಅಭಾವದಿಂದ ಉಂಟಾಗುವ ತೊಂದರೆಗಳನ್ನೂ ಈ ಪುಸ್ತಕದಿಂದ ನಾವು ಅರಿಯಬಹುದು. ನಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳುವ ಬಗ್ಗೆ ಹಲವಾರು ಸಲಹೆಗಳನ್ನು ಓದುಗರ ಮುಂದಿಟ್ಟು ಲೇಖಕರು ಉಪಕಾರ ಮಾಡಿದ್ದಾರೆ.

ಆಕರ್ಷಕವಾದ ಚಿತ್ರಗಳನ್ನೊಳಗೊಂಡ ಈ ಪುಸ್ತಕದ ಮುದ್ರಣ ಅಂದವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ.

ವೈದ್ಯರ ಅಭಿಪ್ರಾಯ ಕೇಳದೆ ಸ್ವತಃ ತೋಚಿದ ಔಷಧಗಳನ್ನು ಕೊಡುವಂಥ 'ಸ್ವ–ವೈದ್ಯ'ರಿಗೆ ಬಲವಾದ ಎಚ್ಚರಿಕೆ ಕೊಟ್ಟಿದ್ದಾರೆ. ಹಾಗೆ ಔಷಧಗಳ ಪ್ರಮಾಣವನ್ನರಿಯದೆ ತೋಚಿದ ಔಷಧಗಳನ್ನು ಸೇವಿಸುವುದರಿಂದ ಆಗುವ, ಆಗಿರುವ ಅನೇಕ ಅನಾಹುತಗಳನ್ನು ನಿತ್ಯಜೀವನದಲ್ಲಿ ನಾವು ಕಾಣುತ್ತಿದ್ದೇವೆ. ಇಂಥ 'ಸ್ವ–ವೈದ್ಯರು' ಈ ಪುಸ್ತಕವನ್ನು ಅವಶ್ಯಕವಾಗಿ ಓದಲೇಬೇಕು.

ಸಾಧಾರಣವಾಗಿ ಆಗಾಗ ಮನುಷ್ಯನಿಗೆ ಬಂದು ತೊಂದರೆ ಕೊಡುತ್ತಿರುವ ನೆಗಡಿ, ಕೆಮ್ಮು, ತಲೆನೋವು, ಕಣ್ಣುನೋವು ಇತ್ಯಾದಿ ಸಣ್ಣಪುಟ್ಟ ರೋಗಗಳಿಗೆ ಚಿಕಿತ್ಸಾಕ್ರಮವನ್ನೂ ಸೂಚಿಸಿದ್ದಾರೆ. ಒಟ್ಟಿನಲ್ಲಿ ಹೇಳುವುದಾದರೆ ಈ ಗ್ರಂಥ ಪ್ರಥಮ ಚಿಕಿತ್ಸೆಯ ಕೈಪಿಡಿಯೆಂದರೆ ತಪ್ಪಾಗಲಾರದು. ಈ ಗ್ರಂಥ ಪ್ರತಿಯೊಂದು ಸಂಸಾರದಲ್ಲಿ ಇರಲೇಬೇಕಾದುದು. ವೈದ್ಯಶಾಸ್ತ್ರವನ್ನು ಕುರಿತ ಇನ್ನೂ ಅನೇಕ ಗ್ರಂಥಗಳು ಹೊರಬೀಳುವುದೆಂಬ ಭರವಸೆಯನ್ನು ಓದುಗರು ತಾಳಬಹುದು ಮತ್ತು ಹಾಗೆ ಗ್ರಂಥಗಳು ಹೊರಬರಲೆಂದೇ ಹಾರೈಸೋಣ.

**—ಬ. ನ. ಸುಂದರರಾವ್**

**ಸಂಶೋಧಕರ ಸವಿಗತೆಗಳು:** ಲೇಖಕರು: ಆನಂದ ವರ್ಟಿ; ಪ್ರಕಾಶಕರು: ಸಮಾಜ ಪುಸ್ತಕಾಲಯ, ಧಾರವಾಡ; ಬೆಲೆ: ರೂ. ೧–೮೦; ಪುಟ: ೧೪೪; ಆಕಾರ: ಕಿರೀಟಾಕಾರ ಅಷ್ಟದಳ.

ಈ ಪುಸ್ತಕಾಕಾಶದಲ್ಲಿ ನಮಗೆ ಕಾಣಿಸುವುದು ಹದಿನೈದು ಪ್ರಕಾಶಮಾನ ಸಂಶೋಧಕ ತಾರೆಗಳು. ಟೆಲಿಫೋನ್ ಕಂಡುಹಿಡಿದ ಬೆಲ್, ಚಲನಚಿತ್ರ ಕಂಡುಹಿಡಿದ ಗ್ರೀನ್, ರೇಡಿಯೋ ಕಂಡುಹಿಡಿದ ಗುಗ್ಲಿ ಎಲ್ಮೊ ಮಾರ್ಕೋನಿ, ಟೆಲಿವಿಷನ್ ಕಂಡುಹಿಡಿದ ಜೋನ್, ಮೋಟಾರ್‌ಕಾರ್ ಕಂಡುಹಿಡಿದ ಹೆನ್ರಿ, ಹಬೆಯಂತ್ರವನ್ನು ಕಂಡುಹಿಡಿದ ಜಾರ್ಜ್ ಸ್ಟೀಫನ್‌ಸನ್, ಏರೋಪ್ಲೇನ್ ಕಂಡುಹಿಡಿದ ರೈಟ್ ಸೋದರರು, ವಿದ್ಯುದ್ದೀಪ, ಫೋನೋಗ್ರಾಫ್, ಕಿನೆಟೋಗ್ರಾಫ್ ಮುಂತಾದ ಹದಿನೈದು ಸಾವಿರ ಸಂಶೋಧನೆಗಳನ್ನು ನಡೆಸಿದ ಥಾಮಸ್ ಆಲ್ವ ಎಡಿಸನ್, ಹೊಲಿಗೆ ಯಂತ್ರದ ಸಂಶೋಧಕ ಎಲಿಯಾಸ್ ಹೋವ್, ಟೈಪ್‌ರೈಟರ್ ಕಂಡುಹಿಡಿದ ಷೋಲ್ಸ್, ಎಕ್ಸ್‌ರೇ ಕಂಡುಹಿಡಿದ ವಿಲ್‌ಹೆಲ್ಮ್, ಅಣುಕಣದ ಒಗಟನ್ನೊಡೆದ ರುದರ್‌ಫೋರ್ಡ್, ರೇಡಿಯಂ ಧಾತುವನ್ನು ವಿಜ್ಞಾನಿಗಳಿಗಿತ್ತ ಮೇಡಂ ಮೇರಿ ಕ್ಯೂರಿ, ಭಾರತೀಯ ವಿಜ್ಞಾನಿ ಬೆಂಗಳೂರಿನ ಸರ್ ಸಿ. ವಿ. ರಾಮನ್, ರಾಕೆಟ್ ಜನಕ ಕಾನ್‌ಸ್ಟೆಂಟಿನ್ – ಈ ಸಂಶೋಧಕರೇ ಆ ಹದಿನೈದು ತಾರೆಗಳು. ಹಿರಿಯ ವಿಜ್ಞಾನಿಗಳ ಹೆಜ್ಜೆಯನ್ನನುಸರಿಸಿ ಹೋಗಬೇಕೆಂದಿರುವ ತರುಣ ವಿಜ್ಞಾನಿಗಳಿಗೆ ಮೇಲ್ಕಂಡ ಹದಿನೈದು ವಿಜ್ಞಾನಿಗಳ ಲಘು ಪರಿಚಯ ಈ ಪುಸ್ತಕದಲ್ಲಿದೆ. ಲೇಖಕರು ಅತ್ಯಂತ ಸವಿ, ಹಾಗೂ ಸರಳ ಶೈಲಿಯಲ್ಲಿ ಅವರ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಶೀರ್ಷಿಕೆಗಳು ಅತ್ಯಾಕರ್ಷಕವಾಗಿವೆ. ಈಗ ನಮ್ಮ ನಿತ್ಯಜೀವನದಲ್ಲಿ ನಾವು ಬಳ

ಸುತ್ತಿರುವ ವಸ್ತುಗಳ ಕಾರಣಪುರುಷರು, ಅವರು ಪಟ್ಟ ತೊಂದರೆ ಮಾಡಿದ ಸಾಹಸ ಮತ್ತು ಅವರು ಗಳಿಸಿದ ವಿಜಯ –ಇವುಗಳೇ ಈ ಸಣ್ಣ ಕಥೆಗಳ ಕಥಾವಸ್ತು. 'ಜನಸೇವಕ' ಪತ್ರಿಕೆಯ ಸಾಪ್ತಾಹಿಕದಲ್ಲಿ ಈ ಕತೆ ಅಥವಾ ವ್ಯಕ್ತಿ ಪರಿಚಯಗಳು 'ಲೇಖನಮಾಲೆ'ಯಾಗಿ ಪ್ರಕಟವಾಗಿ, ಈಗ ಪುಸ್ತಕರೂಪದಲ್ಲಿ ಹೊರಬಿದ್ದಿದೆ. ಈ ವಿಜ್ಞಾನಿಗಳ ಜೊತೆಗೆ ನಮ್ಮ ಭಾರತೀಯ ವಿಜ್ಞಾನಿಗಳ ಪರಿಚಯಗಳು ಹೆಚ್ಚು ಸಂಖ್ಯೆಯಲ್ಲಿಲ್ಲದಿದ್ದರೂ, ಭಾರತೀಯ ವಿಜ್ಞಾನಿಗಳ ಪ್ರತಿನಿಧಿಯಾಗಿ ಸರ್ ಸಿ. ವಿ. ರಾಮನ್‌ರವರ ಪರಿಚಯ ಈ ಪುಸ್ತಕದಲ್ಲಿ ಸೇರಿರುವುದು ಸ್ವಲ್ಪ ಸಮಾಧಾನವೆನಿಸಿದೆ. ಮುದ್ರಣ ಅಂದವಾಗಿದೆ. ತಪ್ಪು–ಒಪ್ಪೋಲೆ ಮುಂದಿನ ಮುದ್ರಣದ ವೇಳೆಗೆ ಮಾಯವಾಗಬಹುದೆಂಬ ಭರವಸೆಯನ್ನು ನಾವು ತಾಳಬಹುದು. ಇದೇ ರೀತಿಯ ಆಧುನಿಕ ಶೈಲಿಯಲ್ಲಿ ಇನ್ನೂ ಅನೇಕ ವಿಜ್ಞಾನಿಗಳ ಪರಿಚಯಗಳನ್ನು ಲೇಖಕರು ಓದುಗರಿಗೆ ಮಾಡಿಕೊಡಲೆಂದು ನನ್ನ ಹಾರ್ದಿಕ ಹಾರೈಕೆ. ಈ ಪುಸ್ತಕವನ್ನು ಎಲ್ಲ ಕನ್ನಡಿಗರೂ ಅದರಲ್ಲೂ ವಿದ್ಯಾರ್ಥಿ ವಿದ್ಯಾರ್ಥಿನಿಯರು ಅತ್ಯವಶ್ಯಕವಾಗಿ ಓದಲೇಬೇಕು.

—'ವನವಿಹಾರಿ'

ಮಸ್ತಾನಿ: ಲೇಖಕರು: ಶ್ರೀ ಎಂ. ವಿ. ಶ್ರೀನಿವಾಸ್; ಪ್ರಕಾಶಕರು: ಪದ್ಮ ಪ್ರಕಾಶನ, ಬೆಂಗಳೂರು–೪; ಬೆಲೆ: ರೂ. ೨–೫೦.

ಮಸ್ತಾನಿ ಒಂದು ದುರಂತ ಐತಿಹಾಸಿಕ ಕಾದಂಬರಿ. ಹಿಂದೂ–ಮುಸ್ಲಿಂ ಸಂಬಂಧ ಅನೇಕ ವೇಳೆ ಮಧುರವಾಗಿದ್ದರೂ ಸಂಪ್ರದಾಯಶರಣರಿಗೆ ಅದು ಹಿಡಿಸದೆ ಅವರ ಕೃತ್ರಿಮಕ್ಕೆ ಸಂಬಂಧಪಟ್ಟವರು ಬಲಿಯಾಗುವರು ಎಂಬುದನ್ನು ಈ ಐತಿಹಾಸಿಕ ಕತೆ ಸೂಚಿಸುತ್ತದೆ. ಬಾಜಿರಾವ್ ಪ್ರಸಿದ್ಧ ಪೇಶ್ವೆ–ಮಹಾವೀರ ಮಹರಾಷ್ಟ್ರ ಸರದಾರ ಬುಂದೇಲ್ ಖಂಡದಿಂದ ಬಹುಮಾನವಾಗಿ ಬಂದ, ಆತನ ಪರಾಕ್ರಮಕ್ಕಾಗಿ ಮೆಚ್ಚಿ ಪ್ರೇಮದಿಂದ ಹೃದಯವನ್ನರ್ಪಿಸಿದ ಮಸ್ತಾನಿಯನ್ನು ಧರ್ಮಪತ್ನಿ ಕಾಶೀಬಾಯಿಗಿಂತ ಹೆಚ್ಚು ಪ್ರೇಮದಿಂದ ನೋಡಿದ. ಇವರ ಈ ವಿಜಾತಿ ಸಂಬಂಧ ಯಾವ ಪ್ರಿಯ ಪತಿ–ಪತ್ನಿಯರಿಗೂ ಕಡಿಮೆಯಾದುದಲ್ಲ. ಆದರೂ ಸಂಪ್ರದಾಯವನ್ನು ಅನುಸರಿಸುವ, ಜಾತಿಯನ್ನು ಹೆಚ್ಚೆಂದು ಬಗೆದ ಜನ ಇದನ್ನು ಸಹಿಸದೆ ಕಿತಾಪತಿ ಮಾಡಿದರು. ಹೊರಗಿನವರ ಕುಹಕ ಅಸಹಕಾರಕ್ಕೆ ಹೆದರಿದ, ಕಂಗೆಟ್ಟ ಚಿತ್‌ಪಾವನ್ ವಂಶದ ಒಳಗಿನವರು ಈ ಪ್ರೇಮಪೂರ್ಣ ದಾಂಪತ್ಯವನ್ನು ವಿಚ್ಛೇದಿಸಲು ಪ್ರಯತ್ನಪಟ್ಟರು. ಬಾಜಿರಾಯನ ತಾಯಿ ರಾಧಾಬಾಯಿ, ತಮ್ಮ ಚಿಮ್ನಾಜಿಯರ ಪ್ರಯತ್ನ ವಿಫಲವಾದಾಗ ಸ್ವಂತ ಮಗ ನಾನಾ (ಬಾಲಾಜಿ ಬಾಜಿರಾವ್) ಅಜ್ಜಿಗೂ ಚಿಕ್ಕಪ್ಪನಿಗೂ ಭರವಸೆ ಕೊಟ್ಟು ಪರಿಣಾಮವನ್ನು ಯೋಚಿಸದೆ ಪರಿಸ್ಥಿತಿಯನ್ನು ಪೂರ್ಣವಾಗಿ ಅರಿಯಲು ಶಕ್ತಿ–ವಯಸ್ಸುಗಳೆರಡೂ ಸಾಲದೆ ಹುಡುಗತನದ ದುಡುಕಿನಿಂದ ದಥಾರನೆ ಪ್ರವೇಶಮಾಡಿ ಸಿಂಹದಂತೆ ಇದ್ದ, ಇಡೀ ಭರತಖಂಡವನ್ನೇ ನಡುಗಿಸಿದ ತಂದೆಯನ್ನು ಕಳೆದುಕೊಳ್ಳುವ ಸಾಹಸ ಮಾಡಿದ. ತಂದೆಗೆ ತಿಳಿಯದಂತೆ ಮಸ್ತಾನಿಯನ್ನು ಬಲವಂತದಿಂದ ಸ್ಥಳಾಂತರಗೊಳಿಸಿ ತಂದೆಗೆ ಸಹಿಸಲಾರದ ವಿರಹವ್ಯಥೆಯನ್ನು ತಂದೊಡ್ಡಿದ. ಬಾಜಿರಾಯ ಈ ವಿರಹವೇದನೆಯನ್ನು ತಡೆಯಲಾರದೆ ಖಾಯಿಲೆ ಬಿದ್ದು ಕಣ್ಣುಮುಚ್ಚಿದ. ಸತ್ತಮೇಲೆ ಎಲ್ಲರಿಗೂ ಬುದ್ಧಿ ಬಂದಿತು. ಬೆಲೆಯುಳ್ಳ ವಸ್ತುವನ್ನು ಅವಿವೇಕದಿಂದ ಕಳೆದುಕೊಂಡೆವೆಂದು ಎಲ್ಲರೂ ಗೋಳಾಡಿದರು.

ಇದು ಸ್ಥೂಲವಾಗಿ ಕತೆಯ ಹಂದರ. ಇದೊಂದು ಸೊಗಸಾದ ವಸ್ತು. ಚರಿತ್ರೆಯ ಅಧ್ಯಾಪಕರಾಗಿರುವ ಲೇಖಕರು ಪೇಷ್ವೆ ಇತಿಹಾಸವನ್ನು ವಿಶೇಷ ವಿಷಯವನ್ನಾಗಿ ಅಧ್ಯಯನ ಮಾಡಿದವರು. ಅದನ್ನು ಉಪಯೋಗಿಸಿಕೊಂಡು ಕಾದಂಬರಿ ರಚನೆಗೆ ತೊಡಗಿರುವುದು ಸ್ತುತ್ಯ. ಕಾದಂಬರಿ ರಚನೆಗೆ ವ್ಯಾಸಂಗ–ಪಾಂಡಿತ್ಯದ ಹಿನ್ನೆಲೆ ಇರುವುದು ನಮ್ಮಲ್ಲಿ ಇನ್ನೂ ಅಪೂರ್ವವೇ ತಾನೆ? ಹಲವು ಗ್ರಂಥಗಳ ನೆರವನ್ನು ಇದರ ರಚನೆಗಾಗಿ ಪಡೆದಿರುವುದು ಮೆಚ್ಚಬೇಕಾದ ಸಂಗತಿ.

ಒಳ್ಳೆಯ ವಸ್ತುವನ್ನಾರಿಸಿಕೊಂಡಿದ್ದರೂ ಕಾದಂಬರಿಕಾರರು ಎಷ್ಟು ಯಶಸ್ವಿಗಳಾಗಬೇಕಾಗಿತ್ತೊ ಅಷ್ಟು ಇಲ್ಲಿ ಆಗಿಲ್ಲನೆಂದು ಮಾತ್ರ ಹೇಳಬೇಕಾಗಿದೆ. ಕೈ ಇನ್ನೂ ಪಳಗದೇ ಇರುವುದರಿಂದ ಶೈಲಿಯಲ್ಲಿ ಓಟ–ಹರಿತ ಸಾಲದು. ಅದರಲ್ಲೂ ಸುಮಾರು ಅರ್ಧಕ್ಕಿಂತಲೂ ಕೊಂಚ ಹೆಚ್ಚು ಭಾಗ ಸಲೀಸಾಗಿ ಓದುವುದೇ ತೊಡಕು. ಉಳಿದ ಭಾಗ ಹೆಚ್ಚು ಯಶಸ್ವಿಯಾಗಿದೆ. ಮಸ್ತಾನಿ ಬಾಜಿರಾಯರ ವಿಯೋಗವಾದ ತರುವಾಯದ ಕತೆಯಲ್ಲಿ ಒಳ್ಳೆ ಓಟವಿದೆ, ಕೊಂಚ ಹರಿತವಾದ ಶೈಲಿಯೂ ಇದೆ; ಓದುಗನನ್ನು ಸೆರೆ ಹಿಡಿಯುವ ಶಕ್ತಿ ಇಣಿಕಿದೆ.

ಬಾಜಿರಾಯ ಪೇಷ್ವೆ ಪದವಿಗೇರಿದ ವಿಷಯ, ಸೇನಾಪತಿ ದಾಭಡೆಯ ತಾಯಿ ಉಮಾಬಾಯಿ ಬಾಜಿರಾಯನನ್ನು ಶಿಕ್ಷಿಸಲು ಇಚ್ಛಿಸದ ಸನ್ನಿವೇಶ–ತನಗೊದಗಿರುವ ಪುತ್ರಶೋಕವೇ ಸಾಕು – ಬೇರೊಬ್ಬ ಮಾತೆಗೆ ಅದನ್ನುಂಟುಮಾಡಲು ಅಪೇಕ್ಷಿಸುವುದಿಲ್ಲ. ಈ ಚಿತ್ರ (ಪುಟ ೪೫–೪೬) ಇನ್ನೂ

ಚೆನ್ನಾಗಿ ಬರಬೇಕಾಗಿತ್ತು. ಕೆಲವೆಡೆಗಳಲ್ಲಿ ಕಾದಂಬರಿಯ ರೀತಿ–ಠಾವುಗಳನ್ನು ಕಳೆದುಕೊಂಡು ಚರಿತ್ರೆ ಗ್ರಂಥದಂತೆ ಇದೆ. ಉದಾ: ಪುಟ ೮೮. ಕೆಲವು ಸನ್ನಿವೇಶಗಳು ಅಪ್ರಮುಖ ಚಾರಿತ್ರಿಕ ಘಟನೆಗಳ ಪಟ್ಟಿಯಂತಿವೆ. ಉದಾ: ಪೇಶ್ವೆಯ ತಾಯಿ ರಾಧಾಬಾಯಿಯ ಉತ್ತರ ಭಾರತ ಯಾತ್ರೆ, ದೆಹಲಿಯ ಮುತ್ತಿಗೆ, ಭೂಪಾಲ್ ಯುದ್ಧ–ಇವು ಸಪ್ಪೆಯಾಗಿ ಕಾಣುತ್ತವೆ. ಜನಾರ್ದನ, ಅಗಾಧ ಧನುರ್ವಿದ್ಯೆ ಹಟ, ಒರೆ ಮುಂತಾದ ಮಾತುಗಳು ಸರಿಯಾದ ರೂಪದಲ್ಲಿಲ್ಲ. ಪುನರಾವೃತ್ತಿ ದೋಷವೂ ತಲೆಹಾಕಿದೆ. ಅಚ್ಚಿನ ತಪ್ಪು ಗಳೂ ಇವೆ.

ಬೇಸಿನ್ ಕೋಟೆಯನ್ನು ಮರಾಠರು ವಶಪಡಿಸಿಕೊಂಡ ಸನ್ನಿವೇಶದಲ್ಲಿ ಚಿತ್ರಿಸಲಾಗಿರುವ ಚಿಮ್ಣಾಜಿ ಪಾತ್ರ ಚೆನ್ನಾಗಿ ಬಂದಿದೆ.

ಶನಿವಾರವಾಡದಿಂದ ಮಸ್ತಾನಿಯ ನಿರ್ಗಮನ ಕೊಂಚ ಅವಾಸ್ತವಿಕವಾಗಿ ಕಂಡರೂ ಚೆನ್ನಾಗಿ ಬಂದಿದೆ. ಅನಂತರದ ಬಾಜಿರಾಯನ ನಿರಾಸೆ, ವಿರಹ ಅವನ ಪ್ರೇಮನಿಷ್ಠೆಯ ಹೆಗ್ಗುರುತಾಗಿ ಬಂದಿದೆ. ಆ ಸಮಯದಲ್ಲಿನ ತಾಯಿಯ ಗಣಪತಿ ಪ್ರಾರ್ಥನೆ ಮಾರ್ಮಿಕವಾಗಿದೆ.

ಬಾಜೀರಾಯ–ಮಸ್ತಾನಿ ಇವರ ಗಾಢಪ್ರೇಮ ಅಮರತ್ವಕ್ಕೆ ಏರಿ, ಅವರ ತ್ಯಾಗ ಓದುಗರ ಹೃದಯವನ್ನು ಕಲಕುವ ವಸ್ತುವಾಗಿದೆ. ಮಸ್ತಾನಿಯ ಮರಣವಂತೂ ಆಕೆಯ ಅಮರಪ್ರೇಮವನ್ನು ಸಾರುತ್ತದೆ; ಜನ್ನ ಚಿತ್ರಿಸಿರುವ ಸುನಂದೆಯನ್ನು ಜ್ಞಾಪಕಕ್ಕೆ ತರುತ್ತದೆ.

ಕತ್ತಿಯ ಏಟುಗಳೆಲ್ಲ ಯೋಧನಿಗೆ ಮುತ್ತಿನ ಮಳೆಯಂತೆ–ಆದರೆ ಅಣ್ಣನ ಮನಸ್ಸನ್ನು ಇರಿಯುತ್ತಿರುವ ಕತ್ತಿಯೇ ಬೇರೆ ಎಂಬ ಚಿಮ್ಣಾಜಿಯ ಮಾತು ಧ್ವನಿಪೂರ್ಣವಾಗಿದೆ. ಅರ್ತಿ ಯಾವುದು ಎಂಬುದರ ಮರ್ಮ ಬಾಜೀರಾಯನ ಧರ್ಮಪತ್ನಿ ಕಾಶೀಬಾಯಿಗೂ ಚೆನ್ನಾಗಿ ತಿಳಿದಿದೆ.

ಕಾಶೀಬಾಯಿ ಗೆದ್ದು ಸೋತಿದ್ದಳು; ಮಸ್ತಾನಿ ಸೋತು ಗೆದ್ದಿದ್ದಳು; ಬಾಜೀರಾಯ ಈ ಮಧ್ಯೆ ಸಿಕ್ಕಿ ಸತ್ತನು. ಹಿರಿಯರು ಕಿರಿಯನ ಮೂಲಕ ಬಾಜೀರಾಯನ ವೀರವ್ಯಕ್ತಿತ್ವದ–ಮೃದುಜೀವವನ್ನು ಹೀರಿದರು ಧರ್ಮದ–ಜಾತಿಯ ಹೆಸರಿನಲ್ಲಿ ಎಂಬುದು ಮಾತ್ರ ತುಂಬ ದಾರುಣವಾದ ಕತೆ. ಮಸ್ತಾನಿಯಂತಹ ಹೆಣ್ಣುಹೃದಯ ಬಾಜೀರಾಯನಂತಹ ಗಂಡುಹೃದಯ ಎರಡೂ ಅಪೂರ್ವವೇ ಎನ್ನಬೇಕು. ನಿರ್ಮಲವಾದ ಪ್ರೇಮಕ್ಕೆ ಜಾತಿ ಅಡ್ಡ ಬಾರದು, ಬರಬಾರದು ಎಂಬ ಸಂದೇಶವನ್ನು ಮಸ್ತಾನಿ–ಬಾಜಿರಾಯರ ದುರಂತ ಪ್ರೇಮ ಕತೆ ಲೋಕಕ್ಕೆ ಸಾರುತ್ತದೆ. ಕೊಂಚ ಹೆಚ್ಚು ಕಡಿಮೆ ಅಂತಹ ದುರಂತಗಳು ಲೋಕದಲ್ಲಿ ಆಗಾಗ್ಗೆ ನಡೆಯುತ್ತವೆ. ಆದರೂ ಲೋಕ ಅದರಿಂದ ಏನೂ ಕಲಿಯುವುದಿಲ್ಲ, ತಿದ್ದಿಕೊಳ್ಳುವುದಿಲ್ಲ.

ಲೋಕೋತ್ತರವಾಗಬಲ್ಲ ಶಕ್ತಿಯುಳ್ಳ ಕಥಾವಸ್ತುವನ್ನು ಆಯ್ದಿದ್ದರೂ ಮಸ್ತಾನಿ ಕಾದಂಬರಿ ಮಾತ್ರ ಆ ಮಟ್ಟಕ್ಕೇರಿಲ್ಲ.

ತಲೆಕಟ್ಟು: ಶ್ರೀ ಚಿ. ಸುಂದರೇಶನ್, ಎಂ.ಎ.; ಪ್ರಕಾಶಕರು: ಮಧು ಮಾಧವಿ, ಸೋಸಲೆ; ಫುಲ್ಸ್‌ಕೇಪ್ ಪುಟ: ೨೪.

"ತಲೆಕಟ್ಟು, ರುಚಿಕಟ್ಟಾಗಿದೆ........ಶೈಲಿಯ ಸೊಗಸೇ ಸೊಗಸು. ಅದಕ್ಕೆ ಭಾವದ ಬೆಡಗು ಬೆರೆದು ಚಿನ್ನಕ್ಕೆ ಕುಂದಣವಿಟ್ಟಂತೆ ಇರುತ್ತದೆ........ಈ ಭಾವಪೂರ್ಣವಾದ ಸಂಶೋಧನ ಬರೆಹವು ಭಾಷಾಭಿಜ್ಞರ ಮೆಚ್ಚುಗೆಯನ್ನು ಪಡೆಯುವುದರಲ್ಲಿ ಯಾವ ಸಂದೆಗವಿಲ್ಲ" ಎಂಬ ಮುನ್ನುಡಿಯ ಹೊನ್ನುಡಿಯಿಂದ ಹೊರಬಿದ್ದಿರುವ ಈ ಪುಟ್ಟ ಪುಸ್ತಕ ಹೊಸ ಬಗೆಯದು. ಲಿಪಿ ಶಾಸ್ತ್ರದ ವಿಷಯವಾಗಿ ನಮ್ಮಲ್ಲಿ ಪುಸ್ತಕಗಳು ಕಡಿಮೆ. ಆ ದೃಷ್ಟಿಯಿಂದ ಈ ಲೇಖನಕ್ಕೆ ಪ್ರಾಶಸ್ತ್ಯವುಂಟು. ತಲೆಕಟ್ಟು ಬಹುಪಾಲು ಸ್ವರ ಚಿಹ್ನೆಗಳ ಪೂರ್ಣತೆಗೆ, ವ್ಯಂಜನಗಳ ಆಕೃತಿಗೆ ಅನಿವಾರ್ಯ ಘಟಕ, ಅಲಂಕಾರದ ತಿಲಕ. ಅದರ ನಾನಾ ಸ್ವರೂಪಗಳನ್ನೂ ಶುದ್ಧ ರೀತಿಯನ್ನೂ ತಪ್ಪು ತಿಳಿವಳಿಕೆಯನ್ನೂ ಇಲ್ಲಿ ಲೇಖಕರು ವಿಶದಪಡಿಸಿದ್ದಾರೆ. ಜೊತೆಗೆ ವಿವಿಧ ಭಾಷೆಗಳಲ್ಲಿ ತಲೆಕಟ್ಟಿನ ರೂಪ ಸ್ಥಾನಗಳನ್ನು ಇಲ್ಲಿ ವಿವರಿಸಲಾಗಿದೆ. ಸಣ್ಣ ಲೇಖನವೊಂದನ್ನು ಪುಟ್ಟ ಪುಸ್ತಕರೂಪದಲ್ಲಿ ಅಂದವಾದ ಆಕರ್ಷಕವಾದ ಹೊದಿಕೆಯೊಂದಿಗೆ – ಅಕ್ಷರ ಚಿತ್ರಗಳ ಸಮೇತ ಶ್ರಮವಹಿಸಿ ಪ್ರಕಟಿಸಲಾಗಿದೆ. ಈ ಶ್ರದ್ಧೆಯನ್ನು ಮೆಚ್ಚಬೇಕು. ಲಿಪಿ ಸಂಶೋಧನೆ ಅಗತ್ಯವಾಗಿ ಆಗಬೇಕಾದ ಕೆಲಸ. ಈ ನಿಟ್ಟಿನಲ್ಲಿ ಮಾಡಬೇಕಾದ ಕಾರ್ಯ ತುಂಬ ಇದೆ. ಅದನ್ನು ಪ್ರಾರಂಭಿಸಿರುವ ಲೇಖಕರ ಸಂಶೋಧನೆ ಮುಂದುವರಿದು ಬೆಲೆಯುಳ್ಳ ಸಾಧನೆಗೆ ಈ ಹೊತ್ತಗೆ ನಾಂದಿಯಾಗಲಿ ಎಂದು ಹಾರೈಸುತ್ತೇನೆ.

— ಕೆ. ಎಂ. ಕೃ.

## ನೆಹರು ಅವರ ನಿಧನದ ಬಗ್ಗೆ ಪರಿಷತ್ತಿನ ಸಂತಾಪ

ಭಾರತದ ಪ್ರಧಾನಿ ಪಂಡಿತ ಜವಹರಲಾಲ ನೆಹರು ಅವರ ನಿಧನದ ಸಲುವಾಗಿ ಸಂತಾಪವನ್ನು ವ್ಯಕ್ತಪಡಿಸಲು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಮೇ ದಿನಾಂಕ ೨೮ ರಂದು ಬೆಳಿಗ್ಗೆ ಸಾರ್ವಜನಿಕ ಸಭೆ ಸೇರಿತ್ತು. ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಅಧ್ಯಕ್ಷತೆ ವಹಿಸಿದ್ದರು. ಸಭೆಯಲ್ಲಿ ಪರಿಷತ್ತಿನ ಅಧಿಕಾರಿ ವರ್ಗದವರು, ಸದಸ್ಯರು ಮತ್ತು ಇತರರು ಹಾಜರಿದ್ದು ಕಾರ್ಯಕಲಾಪದಲ್ಲಿ ಭಾಗಿಗಳಾಗಿದ್ದರು. ಅಧ್ಯಕ್ಷರು ದಿವಂಗತ ನೆಹರುರವರ ಗುಣಗಾನ ಮಾಡಿ, ಅವರೊಬ್ಬ ಉತ್ತಮ ಸಾಹಿತಿಯಾಗಿದ್ದರೆಂದೂ, ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದರೆಂದೂ ಇಂದು ಅವರ ನಿಧನದಿಂದ ಸಾಹಿತ್ಯಲೋಕಕ್ಕೆ ಅಪಾರ ನಷ್ಟವುಂಟಾಗಿದೆ ಎಂದೂ ತಿಳಿಸಿ ಅವರ ಆತ್ಮಕ್ಕೆ ಶಾಂತಿಕೋರಿದರು. ಅಲ್ಲದೆ ತಾವು ನೆಹರೂರವರ ವಿಚಾರವಾಗಿ ರಚಿಸಿದ್ದ ಕವನವನ್ನು ಪಠಿಸಿದರು. ಶ್ರೀ ಸೋ. ದಿವಾಕರ್ ಅವರೂ ಸಹ ಒಂದು ಕವನವನ್ನು ಓದಿದರು. ತರುವಾಯ ಪರಿಷತ್ತಿನ ಗೌರವ ಕೋಶಾಧಿಕಾರಿಗಳಾದ ಶ್ರೀ ಆರ್. ಅನಂತರಾಮನ್ ಅವರು ಸಂತಾಪಸೂಚಕ ನಿರ್ಣಯವನ್ನು ಸೂಚಿಸಿದರು. ಸಭಿಕರು ಎದ್ದು ನಿಂತು ಮೌನದಿಂದ ಈ ನಿರ್ಣಯವನ್ನು ಅಂಗೀಕರಿಸಿದರು.

### ನಿರ್ಣಯ

"ಸ್ವತಂತ್ರ ಭರತಖಂಡದ ಮಹಾ ಪ್ರಧಾನಿಗಳೂ, ವಿಶ್ವ ಶಾಂತಿ ಸಾಧಕರೂ, ನಮ್ಮ ನೆಚ್ಚಿನ ನಾಯಕರೂ ಆದ ಭಾರತರತ್ನ ಪಂಡಿತ ಜವಹರಲಾಲ್ ನೆಹರೂ ಅವರು ನವದೆಹಲಿಯಲ್ಲಿ ೨೭-೫-೧೯೬೪ ರಂದು ಮಧ್ಯಾಹ್ನ ನಿಧನ ಹೊಂದಿದ ವಾರ್ತೆ ನಮಗೆಲ್ಲಾ ಅಪಾರ ದುಃಖವನ್ನು ತಂದಿದೆ.

"ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ ಈ ಸಭೆ ಮೃತರ ಆತ್ಮಕ್ಕೆ ಶಾಂತಿಯನ್ನೂ ಅವರ ಕುಟುಂಬವರ್ಗದವರಿಗೂ, ಅಪಾರ ದೇಶಬಾಂಧವರಿಗೂ, ಬಂಧು ಮಿತ್ರರಿಗೂ ಈ ದುಃಖವನ್ನು ಭರಿಸುವ ಶಕ್ತಿಯನ್ನು ಕೊಡಲೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತದೆ."

---

## ನೂತನ ರಾಜ್ಯಪಾಲರಿಗೆ ಪರಿಷತ್ತಿನ ಗೌರವಾರ್ಪಣ

ವಿಶಾಲ ಮೈಸೂರು ರಾಜ್ಯದ ರಾಜ್ಯಪಾಲರಾದ ಜನರಲ್ ಎಸ್. ಎಂ. ಶ್ರೀನಾಗೇಶ್ ಅವರನ್ನು ತಾ|| ೧-೬-೬೪ರ ಬೆಳಿಗ್ಗೆ ರೆಸಿಡೆನ್ಸಿ ಭವನದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಗೌರವ ಕಾರ್ಯದರ್ಶಿಗಳಾದ ಡಾ|| ಕೆ. ಎಂ. ಕೃಷ್ಣರಾಯರು ಸಂದರ್ಶಿಸಿ ಪರಿಷತ್ತಿನ ಪರವಾಗಿ ಫಲಪುಷ್ಪಗಳನ್ನು ಸಮರ್ಪಿಸಿದರು. ೪೯ ವರ್ಷಗಳಿಂದ ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಗಳ ಏಳಿಗೆಗಾಗಿ ಕನ್ನಡ ಸಾಹಿತ್ಯ ಪರಿಷತ್ತು ಮಾಡಿರುವ ಮತ್ತು ಮಾಡುತ್ತಿರುವ ಕಾರ್ಯಕಲಾಪಗಳನ್ನು ಕುರಿತಾದ ಒಂದು ಮನವಿಪತ್ರವನ್ನು ರಾಜ್ಯಪಾಲರಿಗೆ ಒಪ್ಪಿಸಲಾಯಿತು.

ಶ್ರೀನಾಗೇಶ್ ಅವರು ಪರಿಷತ್ತಿನ ಕಾರ್ಯಕಲಾಪಗಳನ್ನು ಕೇಳಿ ಸಂತೋಷಿಸಿದರಲ್ಲದೆ ಒಂದು ಒಳ್ಳೆಯ ಸಂದರ್ಭದಲ್ಲಿ ಪರಿಷತ್ತನ್ನು ಸಂದರ್ಶಿಸುವುದಾಗಿಯೂ ಮತ್ತು ಅಲ್ಲಿ ನಡೆಯುವ ಕಾರ್ಯಕಲಾಪಗಳನ್ನು ಕಣ್ಣಾರೆ ನೋಡಿ ಹರ್ಷಿಸುವುದಾಗಿಯೂ ತಿಳಿಸಿದರು. ಪರಿಷತ್ತಿನ ಪ್ರಕಟನೆಗಳಾದ ಸಾಹಿತ್ಯ ಪರಿಷತ್ಪತ್ರಿಕೆ ಮತ್ತು ಕನ್ನಡ ನುಡಿಗಳನ್ನು, ಶ್ರೀ ಶಿವಮೂರ್ತಿ ಶಾಸ್ತ್ರಿಗಳ ಸ್ವಂತ ಪತ್ರಿಕೆಯಾದ ಶರಣ ಸಾಹಿತ್ಯದ ಕೆಲವು ವಿಶೇಷ ಪ್ರತಿಗಳನ್ನೂ ರಾಜ್ಯಪಾಲರಿಗೆ ಅರ್ಪಿಸಲಾಯಿತು. ಪರಿಷತ್ತಿನ ಪರವಾಗಿ ಹೊಸ ರಾಜ್ಯಪಾಲರಿಗೆ ಶುಭವನ್ನು ಕೋರಲಾಯಿತು.

# ಶ್ರೀ ಟಿ. ಎಂ. ಎ. ಪೈ ಅವರಿಗೆ ಪರಿಷತ್ತಿನ ಸನ್ಮಾನ

ಬೆಂಗಳೂರು ಮೇ ೧೮: "ರಚನಾತ್ಮಕ ಕಾರ್ಯಗಳು ಸಿದ್ಧಿಸಬೇಕಾದರೆ ಅದು ಭಾಷೆಯ ಮೂಲಕವೇ" ಎಂದು ಅಭಿಪ್ರಾಯಪಟ್ಟ ಮೈಸೂರು ವಿಶ್ವವಿದ್ಯಾನಿಲಯದ ಉಪ ಕುಲಪತಿ ಡಾ॥ ಶ್ರೀಮಾಲಿ ಅವರು ಕನ್ನಡ ಭಾಷೆಯ ಅಭಿವೃದ್ಧಿಯಿಂದ ಕನ್ನಡನಾಡಿನ ತನ್ಮೂಲಕ ಇಡೀ ರಾಷ್ಟ್ರದ ಹಿತಸಾಧನೆ ಸಾಧ್ಯವಾಗುತ್ತದೆ ಎಂದರು.

ಭಾಷೆಯು ರಾಷ್ಟ್ರದಲ್ಲಿನ ಜನರಲ್ಲಿರುವ ಅಂತರವನ್ನು ಕಮ್ಮಿ ಮಾಡಲು ಮುಖ್ಯ ಸಾಧನವೆಂದೂ ಅವರು ಹೇಳಿ ಭಾಷೆಯ ಅಭಿವೃದ್ಧಿಗಾಗಿ ಕೆಲಸ ಮಾಡುತ್ತಿರುವ ಸಾಹಿತ್ಯ ಪರಿಷತ್ತಿನಂತಹ ಸಂಸ್ಥೆ ನಿಜವಾದ ಸೇವೆ ಸಲ್ಲಿಸುತ್ತಿದೆ ಎಂದರು.

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಇಂದು ಮಣಿಪಾಲದ ಡಾ॥ ಟಿ.ಎಂ.ಎ. ಪೈ ಅವರಿಗೆ ಮಾನಪತ್ರ ಸಮರ್ಪಣೆ ಸಮಾರಂಭ ಏರ್ಪಡಿಸಲಾಗಿತ್ತು. ಆ ಉತ್ಸವದ ಅಧ್ಯಕ್ಷತೆಯನ್ನು ಡಾ॥ ಶ್ರೀಮಾಲಿ ಅವರು ವಹಿಸಿದ್ದರು. ಶ್ರೀ ಕೆ. ಹನುಮಂತಯ್ಯನವರು ಭಾಷಣ ಕಲಾ ವಿದ್ಯಾರ್ಥಿಗಳಿಗೆ ಸಂದೇಶ ನೀಡಿದರು.

ಭಾಷಣ ಕಲಾ ತರಗತಿಗಳನ್ನು ನಡೆಸಲು ಡಾ॥ ಪೈ ಅವರು ಪರಿಷತ್ತಿಗೆ ಹಣಸಹಾಯ ನೀಡಿದ್ದಾರೆ. ಈ ದಿನ ಭಾಷಣ ಕಲಾ ತರಗತಿಯಲ್ಲಿ ಉತ್ತೀರ್ಣರಾದವರಿಗೆ ಡಾ॥ ಪೈ ಅವರಿಂದ ಪ್ರಶಸ್ತಿ ಪತ್ರ ಪ್ರದಾನ ಮಾಡಿಸಲಾಯಿತು.

ಉತ್ಸವವು ಪ್ರಾರ್ಥನೆಯಿಂದಾಗಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳಿಂದ ಸ್ವಾಗತ ಭಾಷಣವಾದ ಮೇಲೆ ಶ್ರೀಶೈಲದ ಜಗದ್ಗುರುಗಳು ಕಳಿಸಿದ ಶುಭಾಶಯವನ್ನು ಗೌ॥ ಕಾರ್ಯದರ್ಶಿಗಳಲ್ಲಿ ಒಬ್ಬರಾದ ಶ್ರೀ ಎಸ್. ಶಂಕರಪ್ಪನವರು ಓದಿದರು. ಮತ್ತೊಬ್ಬ ಕಾರ್ಯದರ್ಶಿ ಶ್ರೀ ಕೆ. ಎಂ. ಕೃಷ್ಣರಾವ್ ಅವರು ಮಾನಪತ್ರವನ್ನು ಓದಿ ಅರ್ಪಿಸಿದರು.

ಶ್ರೀ ಕೆ. ಹನುಮಂತಯ್ಯನವರು ಮಾತನಾಡುತ್ತಾ, ಪ್ರಜಾಪ್ರಭುತ್ವದಲ್ಲಿ ಭಾಷಣ ಕಲೆಗೆ ಪ್ರಾಮುಖ್ಯತೆ ಇದೆ ಎಂದೂ ಒಳ್ಳೆಯ ವಾಗ್ಮಿಗಳಾಗಿರುವುದು ಅವಶ್ಯಕವೆಂದೂ ತಿಳಿಸಿ ದೇಶದ ಹಿತಸಾಧನೆಗೆ ಸಮಾಜದ ಒಳ್ಳೆಯದಕ್ಕೆ ತಮ್ಮ ವಿದ್ಯೆಯನ್ನು ಉಪಯೋಗಿಸಬೇಕೆಂದು ವಿದ್ಯಾರ್ಥಿಗಳಿಗೆ ತಿಳಿಸಿದರು. ಭಾಷಣಕಾರರ ಹೃದಯ ಉದ್ದೇಶ ಮತ್ತು ವಾಕ್ ಶುದ್ಧವಾಗಿರಬೇಕೆಂದೂ ವಾಕ್ಚತುರತೆ ಅಗತ್ಯವೆಂದೂ ತಿಳಿಸಿದರು.

ಡಾ॥ ಟಿ. ಎಂ. ಎ. ಪೈ ಅವರು ಮಾತನಾಡಿ, ದೇಶದಲ್ಲಿ ಶೇಕಡ ೨೦ ಕ್ಕೂ ಕಮ್ಮಿ ಮಂದಿ ಹಣವಂತರಿದ್ದಾರೆ. ಶೇಕಡ ೮೦ ರಷ್ಟು ಬಡವರಿದ್ದಾರೆ. ಹಣವಂತರ ಹಣವನ್ನೆಲ್ಲಾ ಬಡವರಿಗೆ ಹಂಚಿದರೆ ತಲಾ ಎರಡು ರೂಪಾಯಿ ಬರುವುದಿಲ್ಲ. ಆದ್ದರಿಂದ ಬಡವರ ಉದ್ಧಾರ ಹಣವಂತರ ಆಸ್ತಿ ಹಂಚುವುದರಿಂದಲ್ಲ, ಉತ್ಪಾದನೆ ಹೆಚ್ಚಿಸುವುದರಿಂದ ಸಾಧ್ಯ ಎಂದು ಹೇಳಿ ಈ ವಾಗ್ಮಿಯ ಪಾಂಡಿತ್ಯ ಪಡೆಯುವುದು ಉತ್ಪಾದನೆ ಹೆಚ್ಚಿಸುವ ಹಾಗೂ ದೇಶದ ಜನರು ಸರಿಯಾದ ಮಾರ್ಗದಲ್ಲಿ ನಡೆಯುವಂತೆ ಮಾಡುವ ಕಾರ್ಯಗಳಿಗೆ ಉಪಯೋಗಿಸಬೇಕೆಂದರು.

## ವಿದ್ಯೆ ಒಂದೇ ಸಾಧನ

ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ॥ ಶ್ರೀಮಾಲಿ ಅವರು ಅಧ್ಯಕ್ಷಭಾಷಣ ಮಾಡಿ, ದೇಶದಲ್ಲಿ ಕೆಲವರು ಮಾತ್ರ ಅನುಕೂಲಸ್ಥರಿದ್ದಾರೆ, ಕೆಲವರು ಮಾತ್ರ ವಿದ್ಯಾವಂತರಿದ್ದಾರೆ, ವಿದ್ಯಾವಂತರ ಮತ್ತು ಅವಿದ್ಯಾವಂತರ ನಡುವೆ ಇರುವ ಅಂತರ ಬಹಳವಾಗಿದೆ, ಇದು ಕಿರಿದಾಗುವಂತೆ ಶ್ರಮಿಸುವುದು ಅಗತ್ಯ ಎಂದರು.

ಈ ಕಾರ್ಯ ಸಾಧನೆಗೆ ಜನರ ಸಹಕಾರ ಅಗತ್ಯ, ಸಂಸ್ಥೆಗಳ ಕಾರ್ಯನಿರ್ವಹಣೆ ಮುಖ್ಯ ಎಂದು ಹೇಳಿ ಡಾ॥ ಶ್ರೀಮಾಲಿ ಅವರು ಡಾ॥ ಪೈ ಅಂತಹವರು ವಿದ್ಯಾಕ್ಷೇತ್ರದಲ್ಲಿ ಅಪಾರವಾದ ಸೇವೆ ಸಲ್ಲಿಸುತ್ತಿದ್ದಾರೆ, ಕನ್ನಡ ಸಾಹಿತ್ಯ ಪರಿಷತ್ತು ಕೂಡ ಅಂತಹ ಕಾರ್ಯದಲ್ಲಿ ನಿರತವಾಗಿದೆ ಎಂದರು.

ವಿದ್ಯಾಭ್ಯಾಸದಿಂದ ಧನಿಕ ಮತ್ತು ದರಿದ್ರರ ನಡುವೆ ಇರುವ ಅಂತರ ಕಡಿಮೆಯಾಗುತ್ತದೆ ಎಂದು ಅವರು ಅಭಿಪ್ರಾಯಪಟ್ಟು, ಸಂಸ್ಕೃತಿಯೂ ಈ ಕಾರ್ಯದಲ್ಲಿ ಮುಖ್ಯ ಪಾತ್ರವಹಿಸುತ್ತದೆ, ಸಾಂಸ್ಕೃತಿಕವಾಗಿ ಜನರನ್ನು ಮೇಲೆತ್ತುವುದೂ ಸಾಹಿತ್ಯ ಪರಿಷತ್ತಿನಂತಹ ಸಂಸ್ಥೆಗಳು ಮಾಡುತ್ತಿರುವ ಕೆಲಸ ಎಂದು ನುಡಿದರು.

ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದ ಶ್ರೀ ಎಸ್. ಶಂಕರಪ್ಪನವರಿಂದ ವಂದನಾರ್ಪಣೆ ಆಗಿ ಸಮಾರಂಭವು ಮುಗಿಯಿತು.

ಈ ಸಂದರ್ಭದಲ್ಲಿ ಶ್ರೀಮತಿ ಜಿ. ವಿ. ರಂಗನಾಯಕಮ್ಮನವರ ಹಾಡುಗಾರಿಕೆಯು ವಿದ್ವಾನ್ ಎಚ್. ಕೆ. ಅಶ್ವತ್ಥನಾರಾಯಣಶಾಸ್ತ್ರಿ ಅವರ ಪಿಟೀಲು ಹಾಗೂ ವಿದ್ವಾನ್ ಶ್ರೀ ಕೆ. ಮಧುಸೂದನರಾಯರ ಮೃದಂಗದೊಡನೆ ಆಯಿತು.

ಸಮಾರಂಭಕ್ಕೆ ಮೇಯರ್ ಶ್ರೀ ಜಿ. ನಾರಾಯಣ ಅವರೂ ಆಗಮಿಸಿದ್ದರು.

# ಡಾ॥ ಟಿ. ಎಂ. ಎ. ಪೈ ಅವರಿಗೆ ಸನ್ಮಾನ

ಮಣಿಪಾಲದ ವಿದ್ಯಾ ಸಂಸ್ಥೆಗಳ ರಿಜಿಸ್ಟ್ರಾರ್ ರವರಾದ ಡಾ॥ ಟಿ. ಎಂ. ಎ. ಪೈ ಅವರಿಗೆ ಮೇ ದಿನಾಂಕ ೧೮ ರಂದು ಪರಿಷತ್ತು ಸನ್ಮಾನಿಸಿದಾಗ ತೆಗೆದ ಚಿತ್ರ. ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಸ್ವಾಗತ ಭಾಷಣ ಮಾಡುತ್ತಿದ್ದಾರೆ. ಈ ಚಿತ್ರದಲ್ಲಿ ಮೇಯರ್ ಶ್ರೀ ಜಿ. ನಾರಾಯಣ, ಅಧ್ಯಕ್ಷತೆ ವಹಿಸಿದ್ದ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ॥ ಶ್ರೀಮಾಲಿ, ಮಾಜಿ ಮುಖ್ಯಮಂತ್ರಿ ಶ್ರೀ ಕೆ. ಹನುಮಂತಯ್ಯ ಇವರುಗಳನ್ನು ಕಾಣಬಹುದು.





ಸನ್ಮಾನಪತ್ರಕ್ಕೆ ಡಾ॥ ಟಿ.ಎಂ.ಎ. ಪೈ ಅವರು ಉತ್ತರವೀಯುತ್ತಿದ್ದಾರೆ. ಇವರ ಎಡಗಡೆ ಇವರ ಧರ್ಮಪತ್ನಿಯವರಿದ್ದಾರೆ.



ಭಾಷಣ ಕಲಾ ಶಿಕ್ಷಣ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳನ್ನು ಕುರಿತು ಮಾಜಿ ಮುಖ್ಯಮಂತ್ರಿ ಶ್ರೀ ಕೆ. ಹನುಮಂತಯ್ಯನವರು ಭಾಷಣ ಮಾಡುತ್ತಿರುವ ಚಿತ್ರ.



ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಡಾ॥ ಶ್ರೀಮಾಲಿಯವರು ಮಾತನಾಡುತ್ತಿದ್ದಾರೆ.

# ಕರ್ನಾಟಕದ ಗಡಿಗಳು ರಕ್ಷಿಸಲ್ಪಡಲಿ!

೧೯೫೬ನೆಯ ನವೆಂಬರ್ ೧ ರಂದು ಭಾಷಾವಾರು ರಾಜ್ಯಗಳು – ಆಡಳಿತ ಸೌಕರ್ಯವನ್ನು ಗಮನಿಸಿ ರಚನೆಯಾದ ಮೇಲೆ ಈಗಿನ ವಿಶಾಲ ಮೈಸೂರು ರಾಜ್ಯವು ರೂಪುಗೊಂಡಿದೆ. ಕನ್ನಡ ನಾಡಿನಲ್ಲಿ ೫೦ ವರ್ಷ ಏಕೀಕರಣ ಚಳುವಳಿ ನಡೆದುದರ ಫಲ ಈ ವಿನೂತನ ರಾಜ್ಯರಚನೆ.

ಕೇರಳಕ್ಕೆ ಸೇರಿದ ಕಾಸರಗೋಡು, ಮದರಾಸಿಗೆ ಸೇರಿದ ತಾಳವಾಡಿ, ಹೊಸೂರು ಮತ್ತು ನೀಲಗಿರಿ, ಆಂಧ್ರಕ್ಕೆ ಸೇರಿದ ಮಡಕಶಿರ, ರಾಯದುರ್ಗ, ಆದವಾನಿ, ಆಲೂರು, ಮಹಾರಾಷ್ಟ್ರಕ್ಕೆ ಸೇರಿದ ಅಕ್ಕಲಕೋಟೆ, ಜತ್ತ, ಸೊಲ್ಲಾಪುರ, ಇವುಗಳು ಐತಿಹಾಸಿಕ, ಭೌಗೋಳಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಕರ್ನಾಟಕಕ್ಕೆ ಸೇರಬೇಕಾದ ಭಾಗಗಳು. ಹಲವಾರು ವಿಶೇಷ ಕಾರಣಗಳಿಂದ ನೀಲಗಿರಿಯನ್ನು ಕೇಂದ್ರ ಸರ್ಕಾರವು ಮದರಾಸಿಗೆ ಸೇರಿಸಿದೆ. ಮದರಾಸು ರಾಜ್ಯಕ್ಕೆ ಅರಣ್ಯಪ್ರದೇಶ ಇಲ್ಲವೆಂಬ ಕಾರಣವೇ ಕೇಂದ್ರದ ಈ ನೀಲಗಿರಿ ಸಮಾರಾಧನೆಗೆ ಕಾರಣವಾಗಿದೆ.

## ಕಾಸರಗೋಡಿನಲ್ಲಿ ಕಣ್ಣೀರು

ಒಂದು ವೇಳೆ ನೀಲಗಿರಿಯನ್ನು ಮರೆತರೂ ಉಳಿದ ಭಾಗಗಳು ವಿಶಾಲ ಮೈಸೂರು ರಾಜ್ಯಕ್ಕೆ ಸೇರುವುದು ಅತಿ ಅಗತ್ಯ. ಕಾಸರಗೋಡಿನಲ್ಲಿ ಕೇರಳದ ದಬ್ಬಾಳಿಕೆ ಅಧಿಕವಾಗಿದೆ. ಪುತ್ತೂರಿನಿಂದ ಕಾಸರಗೋಡಿಗೆ ಬರುವ ಅಕ್ಕಿಗೆ ಸುಂಕ. ಕಾಸರಗೋಡಿನಿಂದ ಮಂಗಳೂರಿಗೆ ಹೋಗುವ ಅಡಕೆಗೆ ಸುಂಕ, ಕಾಸರಗೋಡು ತಾಲ್ಲೂಕಿನಲ್ಲಿ ಯಕ್ಷಗಾನ ಬಯಲಾಟ ಆಡಿದರೆ ೫ ರೂ. ಸುಂಕ. ಕಾಸರಗೋಡು ತಾಲ್ಲೂಕಿನಲ್ಲಿ ಕಂದಾಯದ ಜೊತೆಗೆ ಕೇರಳ ಸರ್ಕಾರಕ್ಕೆ ವರುಷಕ್ಕೆ ಸುಮಾರು ೧ ಕೋಟಿ ರೂ. ಸಂದಾಯವಾಗುತ್ತಿದೆ. ಇಷ್ಟಾದರೂ ಅಲ್ಲಿ ಕನ್ನಡ ಕಲಿಯಲು ಸಹಾಯ ಸಂಪತ್ತಿಲ್ಲ. ಕನ್ನಡ ಜನಕ್ಕೆ ಉಳಿಗಾಲವಿಲ್ಲ. ಫಜಲಾಲಿ ಕಮಿಷನ್ ಬಂದಾಗ ಕೇರಳದ ಜನ ಅಥವಾ ಸರ್ಕಾರ– ಕಾಸರಗೋಡು ಕೇರಳಕ್ಕೆ ಸೇರಬೇಕೆಂದು ಕೇಳಲಿಲ್ಲ. ಆದರೂ ದಿ. ಪಣ್ಣಿಕರ್ ಕೇರಳದವರಾದ ಕಾರಣ ಅನ್ಯಾಯವಾಗಿ ಕಾಸರಗೋಡನ್ನು ಕೇರಳಕ್ಕೆ ಸೇರಿಸಿದರು. ಅಲ್ಲಿನ ಎರಡು ಲಕ್ಷ ಕನ್ನಡಿಗರು ಕಣ್ಣೀರು ಸುರಿಸುವಂತೆ ಮಾಡಿದರು.

## ತಾಳವಾಡಿಯ ತಾಕಲಾಟ

ಚಾಮರಾಜನಗರಕ್ಕೆ ಹತ್ತಾರು ಮೈಲಿ ದೂರವಿರುವ ತಾಳವಾಡಿ ಫಿರ್ಕದ ಎಲ್ಲ ಹಳ್ಳಿಗಳೂ ಕನ್ನಡಿಗರಿಂದ ತುಂಬಿವೆ. ಆದರೆ ಅದು ಈಗ ಕೊಯಮುತ್ತೂರು ಜಿಲ್ಲೆಯ ಒಂದು ಅಂಗವಾಗಿದೆ. ಅಲ್ಲಿನ ಜನ ಮಾತೆತ್ತಿದರೆ ಕೊಯಮುತ್ತೂರು ಮತ್ತು ಮದರಾಸುಗಳಿಗೆ ಹೋಗಬೇಕಾಗಿದೆ. ಈ ದ್ರಾವಿಡ ಪ್ರಾಣಾಯಾಮದಿಂದ ತಾಳವಾಡಿಯ ಕನ್ನಡಿಗರು ತಲ್ಲಣಿಸುತ್ತಿದ್ದಾರೆ.

## ತೆಲುಗರ ಮಧ್ಯೆ ಕನ್ನಡಿಗರು

ಮಡಕಶಿರ, ರಾಯದುರ್ಗ, ಆಲೂರು ಮತ್ತು ಆದವಾನಿ ಈ ಪ್ರಾಂತಗಳಲ್ಲಿ ಅರ್ಧಕ್ಕಿಂತ ಹೆಚ್ಚು ಮಂದಿ ಕನ್ನಡಿಗರಿದ್ದಾರೆ. ಈ ತಾಲೂಕಿನಲ್ಲಿ ಕನ್ನಡದ ಅಭ್ಯಾಸಕ್ಕೆ ಆಂಧ್ರ ಸರ್ಕಾರ ಗಮನ ಕೊಡುತ್ತಿಲ್ಲ. ಈ ಜನತೆಯ ಬಾಳು ಬದುಕುಗಳೆಲ್ಲವೂ ಮೈಸೂರಿನೊಂದಿಗೆ ಮಿಲನವಾಗಿದೆ. ಮಡಕಶಿರ ತಾಲೂಕು ಮೈಸೂರಿನ ಭೂಪಟವನ್ನು ವಿರೂಪಗೊಳಿಸಿದೆ. ಆ ಒಂದು ತಾಲೂಕಾದರೂ ಆಡಳಿತದ ದೃಷ್ಟಿಯಿಂದ ಮೈಸೂರಿಗೆ ಸೇರಬೇಕಾದುದು ಅಗತ್ಯ.

## ಹೊಸೂರು ಮತ್ತು ಬೆಂಗಳೂರುಗಳ ಬಾಂಧವ್ಯ

ಹೊಸೂರು ಬೆಂಗಳೂರಿಗೆ ೨೫ ಮೈಲಿ ದೂರದಲ್ಲಿದೆ. ಈ ತಾಲೂಕು ಈಗ ಸೇಲಂ ಜಿಲ್ಲೆಗೆ ಸೇರಿದೆ. ಇಲ್ಲಿ ಕನ್ನಡ, ತೆಲುಗು, ತಮಿಳು ಭಾಷೆಗಳು ಬಳಕೆಯಲ್ಲಿವೆ. ಹೊಸೂರು ತಾಲೂಕಿನಲ್ಲಿ ಕನ್ನಡ ಕಲಿಯುವ ಮಕ್ಕಳಿಗೆ ಕೇವಲ ಒಂದೇ ಒಂದು ಶಾಲೆಯಿದೆ. ತಾಲೂಕು ಆಫೀಸು ಮತ್ತು ಸಬ್ ರಿಜಿಸ್ಟ್ರಾರ್ ಅವರ ಆಫೀಸುಗಳಲ್ಲಿ ಕನ್ನಡಕ್ಕೆ ಪ್ರವೇಶವಿಲ್ಲ. ಅಲ್ಲಿನ ಕನ್ನಡ ಜನತೆಯ ಸ್ಥಿತಿ ಚಿಂತಾಜನಕವಾಗಿದೆ.

ಫಜಲಾಲಿ ಕಮಿಷನ್ ಕಾಲದಲ್ಲಿ ಹೊಸೂರಿನ ಜನ ಮೈಸೂರಿಗೆ ಸೇರಲು ತಕ್ಕಷ್ಟು ಪ್ರಯತ್ನ ನಡೆಸಿದ್ದಾರೆ. ಎಲ್ಲವೂ ಅರಣ್ಯರೋಧನವಾಗಿದೆ. ಅಕ್ಕಲಕೋಟೆ, ಜತ್ತ ಮತ್ತು ದಕ್ಷಿಣ ಸೊಲ್ಲಾಪುರ ತಾಲೂಕುಗಳು ೧೬ಆಣೆ ಕನ್ನಡ ಪ್ರದೇಶಗಳು. ಸೊಲ್ಲಾಪುರದಲ್ಲಿ ನಡೆಯುವ ವ್ಯಾಪಾರಕ್ಕೆಲ್ಲಾ ಕನ್ನಡ ರೈತರೇ ಮೂಲ ಪುರುಷರಾಗಿದ್ದಾರೆ.

ಬೆಳಗಾಂವಿ ಜಿಲ್ಲೆಯಲ್ಲಿರುವ ಕೆಲವಾರು ಮರಾಠಿ ಹಳ್ಳಿಗಳಿಗೆ ಮಹಾರಾಷ್ಟ್ರದವರು ಗಲಾಟೆಮಾಡುತ್ತಿದ್ದಾರೆ. ಆದರೆ

ಕರ್ನಾಟಕದ ಈ ಮೇಲೆ ಕಂಡ ಗಡಿಗಳ ಬಗೆಗೆ ಪ್ರಯತ್ನ ಏಳ್ಳಷ್ಟೂ ನಡೆಯುತ್ತಿಲ್ಲ. ಕನ್ನಡ ನಾಡಿನ ಮುಂದಾಳುಗಳು ತಮ್ಮ ಅಧಿಕಾರವನ್ನು ಭದ್ರಪಡಿಸಿಕೊಳ್ಳುವುದರಲ್ಲಿ ನಿರತರಾಗಿದ್ದಾರೆ. ಆದರೆ ಮೈಸೂರು ಶಾಸನಸಭಾ ಸದಸ್ಯರು, ದಿಲ್ಲಿಯ ಲೋಕಸಭಾ ಮತ್ತು ರಾಜ್ಯಸಭಾ ಸದಸ್ಯರು, ಕರ್ನಾಟಕದ ಮುಂದಾಳುಗಳು, ಪತ್ರಿಕಾಕರ್ತರು ಕರ್ನಾಟಕದ ಗಡಿಗಳ, ಕನ್ನಡಿಗರ ಕಷ್ಟ ಕಾರ್ಪಣ್ಯಗಳನ್ನು ಸಂಬಂಧಪಟ್ಟ ಸರಕಾರಗಳ ಗಮನಕ್ಕೆ ತರಬೇಕು. ಗಡಿನಾಡಿನ ಕನ್ನಡಿಗರು ತಮ್ಮ ಧ್ವನಿ ದಿಲ್ಲಿ, ಮುಂಬಯಿ, ಹೈದರಾಬಾದು, ಮದರಾಸ್, ತಿರುವಾಂಕೂರು ಮತ್ತು ಬೆಂಗಳೂರುಗಳಿಗೆ ಕೇಳಿಸುವಂತೆ ಗಟ್ಟಿಯಾಗಿ ಕೂಗಿಕೊಳ್ಳಬೇಕು. ತಮ್ಮ ಕಷ್ಟ ಕಾರ್ಪಣ್ಯಗಳನ್ನು ಸರ್ಕಾರದ ಮುಂದೆ ಮತ್ತು ಶಾಸಕರ ಮುಂದೆ ಹೇಳಿಕೊಳ್ಳಬೇಕು. ಮಗು ಅತ್ತಲ್ಲದೆ ತಾಯಿ ಹಾಲುಕೊಡುವುದಿಲ್ಲ ತಾನೆ?

ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ ಉಳಿಯಬೇಕಾದರೆ ಕನ್ನಡ ಜನ ಸುಖ ಸಂತೋಷಗಳಿಂದ ಬಾಳಬೇಕಾದರೆ ಗಡಿನಾಡಿನಲ್ಲಿರುವ ೫೫ ಲಕ್ಷ ಕನ್ನಡಿಗರು ವಿಶಾಲ ಮೈಸೂರಿಗೆ ಸೇರಿದಂತಾಗಬೇಕು. ಆಗ ಕರ್ನಾಟಕದ ಏಕೀಕರಣ ಚಳುವಳಿ ಮುಗಿಯುತ್ತದೆ. ಸರ್ವಾಂಗಸುಂದರವಾದ ಕರ್ನಾಟಕದ ರಚನೆಯಾಗುತ್ತದೆ. ಮೈಸೂರಿನ ಹಿತದೃಷ್ಟಿಯಿಂದ ಗೋವೆ ಮೈಸೂರಿಗೆ ಸೇರಬೇಕು ಅಥವ ಕೇಂದ್ರ ಸರ್ಕಾರದ ಅಧೀನದಲ್ಲಿರಬೇಕು ಎಂಬುದನ್ನು ನಾವು ನೆನಪಿನಲ್ಲಿಡಬೇಕು. ಬಲವಿದ್ದವರು ಬದುಕುತ್ತಾರೆ. ಗಟ್ಟಿಯಾಗಿ ಕೂಗುವವರನ್ನು ಜನ ಗಮನಿಸುತ್ತಾರೆ ಎಂಬ ಮಾತುಗಳನ್ನು ಕನ್ನಡದ ಜನ ತಿಳಿದುಕೊಳ್ಳುವುದು ಅಗತ್ಯ. ಈ ಉದಾತ್ತ ಕಾರ್ಯಗಳಿಗಾಗಿಯೇ ಕನ್ನಡ ಸಾಹಿತ್ಯ ಪರಿಷತ್ತು ೪೯ ವರ್ಷಗಳಿಂದ ಶ್ರಮಿಸುತ್ತಿದೆ, ಮುಂದೆಯೂ ಶ್ರಮಿಸಲಿದೆ.

ತಾ|| ೨೩-೫-೬೪
ಬೆಂಗಳೂರು

**ಬಿ. ಶಿವಮೂರ್ತಿ ಶಾಸ್ತ್ರೀ**
ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು.

# ಕಾಸರಗೋಡು ಕನ್ನಡಿಗರ ಸಮ್ಮೇಳನ



ಮೇ ದಿನಾಂಕ ೫ ರಂದು ಕಾಸರಗೋಡಿನಲ್ಲಿ ನಡೆದ ಕನ್ನಡಿಗರ ಸಮ್ಮೇಳನದ ಚಿತ್ರ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಇದನ್ನು ಉದ್ಘಾಟಿಸುತ್ತಿದ್ದಾರೆ. ಪರಿಷತ್ತಿನ ಕೋಶಾಧಿಕಾರಿ ಶ್ರೀ ಆರ್. ಅನಂತರಾಮನ್ ಅವರು ಅಧ್ಯಕ್ಷತೆ ವಹಿಸಿದ್ದರು. ಇವರು ಶ್ರೀ ಶಾಸ್ತ್ರಿಗಳವರ ಎಡದಲ್ಲಿದ್ದಾರೆ.





ಸಮ್ಮೇಳನದ ಅಧ್ಯಕ್ಷ ಶ್ರೀ ಆರ್. ಅನಂತರಾಮನ್ ಅವರು ಅಧ್ಯಕ್ಷ ಭಾಷಣ ಮಾಡುತ್ತಿರುವುದು.

## ಜಗದ್ಗುರುಗಳ ಭೇಟಿ



ಬೆಂಗಳೂರಿಗೆ ಆಗಮಿಸಿದ್ದ ದ್ವಾರಕಾಪೀಠದ ಜಗದ್ಗುರು ಶ್ರೀ ಶಂಕರಾಚಾರ್ಯರನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಮತ್ತು ಗೌರವ ಕಾರ್ಯದರ್ಶಿಯವರೂ ಭೇಟಿ ಮಾಡಿ ಗೌರವವನ್ನರ್ಪಿಸಿದಾಗ ತೆಗೆದ ಚಿತ್ರ.

ಜಗದ್ಗುರುಗಳ ಬಲದಲ್ಲಿ ಗೌ|| ಕಾರ್ಯದರ್ಶಿ ಶ್ರೀ ಶಂಕರಪ್ಪನವರೂ,
ಎಡದಲ್ಲಿ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರೂ ನಿಂತಿದ್ದಾರೆ.

# ಇನ್ನಿಲ್ಲ ಜವಹರನು *

೧

"ಭಾರತದ ರತ್ನ" ಪಂಡಿತ ನೆಹರು ಇನ್ನಿಲ್ಲ
ಧಾರಿಣಿಯ ಶಾಂತಿ ಸಾಮ್ರಾಟನಿನ್ನಿಲ್ಲ ;
ಧೀರ ಸ್ವಾತಂತ್ರ್ಯಸಂಗ್ರಾಮದಗ್ರಣಿಯಿಲ್ಲ
ಕ್ರೂರವಿಧಿ ಬೆನ್ನಟ್ಟಿ ಕೊಂಡೊಯ್ದುದಕಟಾ !

೨

ಗಾಂಧೀಜಿ ತತ್ತ್ವ ಸಂರಕ್ಷಕನು ಇನ್ನಿಲ್ಲ
ಸಾಂದ್ರಯಶ ಜವಹರಲಾಲನಿನ್ನಿಲ್ಲ ;
ಇಂದ್ರಸಮ ಘನ ಮೋತಿಲಾಲಸುತನಿನ್ನಿಲ್ಲ
ಇಂದುಮುಖಿ ಇಂದಿರಾಗಾಂಧಿ ಪಿತನಿಲ್ಲ

೩

ಮೋತಿಲಾಲರ ವಂಶಸಾಗರಕೆ ಚಂದ್ರಮನು
ನೀತಿವಿದೆ ಕಮಲಾಳ ಹೃದಯೇಶನವನು ;
ಈ ಧರೆಯೊಳೆಲ್ಲ ವಿಖ್ಯಾತನೆಂದೆನಿಸಿದನು
ಸಾತಿಶಯವೆನಿಸಿದನು ಭಾರತಾವನಿಯ

೪

ಸಕಲ ಶಾಸ್ತ್ರದ ಸಾರವರಿತ ಪಂಡಿತನವನು
ಯುಕುತಿಯೆಲ್ಲವನರಿತ ಮತಿವಂತನವನು ;
ಕ್ಷಿತಿಯ ಪಾಲಕನೆಂಬ ಕೀರ್ತಿಯಂ ಗಳಿಸಿದನು
ಅತಿಶಯದ ಕೃತಿಗಳನು ರಚಿಸಿ ಮೆರೆದಿಹನು

೫

ಪತಿತರುದ್ಧಾರಕ್ಕೆ ಕಂಕಣವ ಕಟ್ಟಿದನು
ಅತಿಶಯದಿ ಮಕ್ಕಳನು ಪ್ರೀತಿಸಿದನವನು ;
ಮತಿವಂತರಿಂದ 'ಭಾರತರತ್ನ' ಎನಿಸಿದನು
ಗತಿಯೆನಗೆ ಭಾರತವು ಎಂದು ನಂಬಿದನು

೬

ಯುಗಪುರುಷನವನು ಪಂಡಿತ ನೆಹರು ಧರೆಯೊಳಗೆ
ಗಗನದಾ ಚಂದ್ರಮನ ತೆರದಿ ಮೆರೆದವನು ;
ನಗಜಾಧಿಪತಿಯ ಪಾದವನಿಂದು ಸೇರಿದನು
ಪೊಗಳದವರಾರವನ ಮಾನವೋತ್ತಮನ

೭

ಮಾನವತೆಯುದ್ಧಾರಕಾಗಿ ಶ್ರಮಿಸಿದನವನು
ಮಾನನಿಧಿಯೆನಿಸಿ ಭಾರತದಿ ಬೆಳಗಿದನು ;
ಕ್ಷೋಣಿಯೊಳಗವನೋರ್ವ ಕಾರಣಿಕನೆನಿಸಿದನು
ಏಣಾಂಕಧರನ ಘನ ರಾಜ್ಯಕೈದಿದನು

೮

'ಮರಣವೇ ಮಹನವಮಿ' ಎಂದು ತಿಳಿದವನವನು
ಭರತಭೂಮಿಯೆ ಸ್ವರ್ಗವೆಂದು ನಂಬಿದನು ;
ಹರಿಜನರ–ಗಿರಿಜನರ ಉದ್ಧಾರಕೆಳೆಸಿದನು
ಧರೆಯನೆಲ್ಲವ ಸುತ್ತಿ ಜಸವ ಗಳಿಸಿದನು

೯

ಇಂದಿರಾಗಾಂಧಿಯೆಂದೆಂಬ ಯೋಷಾಮಣಿಯ
ತಂದೆಯೆಂದೆನಿಸಿದನು ರಾಷ್ಟ್ರಪಿತನವನು ;
ಇಂದು ಜಾಗ್ರತ ವಿಶ್ವದಲ್ಲಿ ಭಾರತರಾಷ್ಟ್ರ
ಕೊಂದು ಮಾನ್ಯತೆ ದೊರಕುವಂತೆ ಮಾಡಿದನು

೧೦

ಭೌತಿಕದ ದೇಹವನು ಕವಚದಂದದೆ ಬಿಸುಟು
ಸಾತಿಶಯದಿಂದ ಜಸದೊಡಲ ಕೂಡಿದನು ;
ಈ ಧರೆಯ ಸಂಸಾರವಸ್ಥಿರವು ತಾನೆಂದು
ನೀತಿವಿದ ಶಾಶ್ವದ ರಾಜ್ಯಕೈದಿದನು

೧೧

ರವಿಯ ಕಿರಣಗಳೆಲ್ಲ ಕಡೆಗವನ ಕೂಡುವುವು
ಭುವಿಯ ಜೀವಿಗಳೆಲ್ಲ ಶಿವನ ಕೂಡುವುವು ;
ಜಗದ ನದಿಗಳವೆಲ್ಲ ಸಾಗರವ ಸೇರುವುವು
ಬಗೆಯಲೀವಿಧಿಯ ಮೀರುವುದಾವನಳವು

೧೨

ಜಗದ ಮಿತ್ರನು ಮುಳುಗೆ ಕತ್ತಲೆಯು ಕವಿದಿಹುದು
ಜಗದೊಳೆಲ್ಲೆಲ್ಲಿಯೂ ದುಃಖ ತುಂಬಿಹುದು ;
ಮಿಗೆ ದಾರಿ ತೋರ್ಪರಿನ್ನಾರೆಂದು ತಿಳಿಯದೆಯೆ
ಬಗೆಯೊಳೆಲ್ಲೆಲ್ಲಿಯೂ ಮಂಕು ಕವಿದಿಹುದು !

೧೩

ಭಾರತದ ಉದ್ಧಾರ ಕರ್ತೃ ಕಣ್ಮರೆಯಾದ
ಸಾರಸ್ವತದ ನಿಧಿಯು ಮಾಯವಾಗಿಹುದು ;
ಧೀರ ಶ್ರೀರಾಮಾರ್ಜುನಾಶೋಕರಂಥವನು
ಕಾರುಣ್ಯಮಯ ನೆಹರು ಮರೆಯಾದನವನು

**ಬಿ. ಶಿವಮೂರ್ತಿಶಾಸ್ತ್ರೀ**
(ತಾ. ೨೮-೫-೧೯೬೪)

---

* ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ ಸಂತಾಪ ಸೂಚಕ ಸಭೆಯಲ್ಲಿ ಶ್ರೀ ಶಾಸ್ತ್ರಿಗಳು ಓದಿದ ಬಾಷ್ಪಾಂಜಲಿ. (ಸಂ.)

# ನೆಹರು ಚಿತಾಭಸ್ಮ!

ಕಂಡೆ ನಿನ್ನಯ ಚಿತಾಭಸ್ಮವಂ ಮಹನೀಯ
ಪಂಡಿತೋತ್ತಮ ನೆಹರು ಭಾರತಿ ಸುಪುತ್ರ

೧

ವಟವೃಕ್ಷದುತ್ತುಂಗ ಶಕ್ತಿಯೆಲ್ಲವು ನೋಡೆ
ವಟಬೀಜದೊಳಗಿರ್ಪ ತೆರದೆ ಭಾವಿಸಲು
ಓಷಧಿಗಳೊಳಗಿರ್ಪ ಚೈತನ್ಯವೆಲ್ಲವೂ
ಔಷಧದಿ ಸಂಗ್ರಹಿಸುತಡಗಿರ್ಪ ತೆರದಿ

೨

ಶಿವನ ಚೈತನ್ಯವೆಲ್ಲವು ಮಹಾಭಸ್ಮದೊಳು
ತವೆ ತುಂಬಿ ತುಳುಕಾಡುತಿರ್ಪ ಭಾವದೊಳು
ಸುವಿವೇಕಿ ನಿನ್ನ ಸರ್ವಸ್ವವನು ಕಾಣುವೆವು
ಭುವಿಯೊಳಗೆ ತವ ಚಿತಾಮಯ ಭಸ್ಮದೊಳಗೆ

೩

ಹಿಂದೆ ಬುದ್ಧನ ಅಸ್ತಿ ಗಾಂಧಿಜಿಯ ಭಸ್ಮವು
ಹಿಂದುದೇಶದೊಳೆಲ್ಲ ಪೂಜೆಗೊಂಡಿಹವು ;
ಇಂದು ನಿನ್ನಯ ಚಿತಾಭಸ್ಮವಾತೆರನಂತೆ
ವಂದನಾರ್ಹವು ಎನಿಸಿ ಪೂಜೆಗೊಂಡಿಹುದು

೪

ಸೂರ್ಯನಾ ಸಾಮರ್ಥ್ಯ ಸೂರ್ಯಕಿರಣದೊಳಿಹುದು
ಧೈರ್ಯನಿಧಿ ನಿನ್ನಂಶವೆಲ್ಲವಲ್ಲಿಹುದು ;
ಪಂಚಭೂತದ ಗರ್ಭದೊಳಗಿಹುದು ನಿನ್ನ ತನು
ಮಿಂಚಿನಂದದಿ ಜಗವ ತುಂಬಿಹುದು ಕೀರ್ತಿ

೫

ಭಾರತದ ದೇಹದೊಳು ಭಾರತದ ಜೀವರೊಳು
ಸಾರವಮಿತಿ ನಿನ್ನಂಶವಿಂದು ತುಂಬಿಹುದು ;
ಮಾರಾರಿ ಸನ್ನಿಧಿಯೊಳಿರ್ಪ ನಿನ್ನಾತ್ಮನಿಗೆ
ನೂರು ಶರಣಾರ್ಥಿಗಳು ಘನ ಕರ್ಮಯೋಗಿ

೬

ಬೆಂಗಳೂರಿನ ಕೆಂಪು ತೋಟದೊಳು ನೋಡಿದೆನು
ಮಂಗಲಾತ್ಮಕ ನಿನ್ನ ಚಿತೆಯ ಭಸ್ಮವನು
ಕಂಗಳಿಂದೆನ್ನ ಬಾಷ್ಪಾಂಜಲಿಯನರ್ಪಿಸಿದೆ
ತುಂಗಶಯ ನಿನಗಾಗಿ ನಿನ್ನಾತ್ಮಕಾಗಿ

— ಓಂ ಶಾಂತಿಃ ಶಾಂತಿಃ ಶಾಂತಿಃ —

ಬಿ. ಶಿವಮೂರ್ತಿಶಾಸ್ತ್ರೀ
(ತಾ. ೫-೬-೧೯೬೪)

## ಪ್ರ ಕ ಟ ಣೆ

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ "ಕರ್ನಾಟಕ ಕವಿಚರಿತೆ"ಯ ಮೊದಲನೇ ಭಾಗವನ್ನು ಪರಿಷತ್ತಿನ ಸದಸ್ಯರಿಗೆ ಇತರ ಪ್ರಕಟಣೆಗಳಿಗೆ ಇರುವ ರಿಯಾಯಿತಿ ದರದಲ್ಲೇ ಕೊಡಲಾಗುವುದು. ಮಾನ್ಯ ಸದಸ್ಯರು ಈ ರಿಯಾಯಿತಿಯ ಉಪಯೋಗ ಪಡೆಯಬೇಕೆಂದು ಕೋರಲಾಗಿದೆ.

ಗೌ|| ಕಾರ್ಯದರ್ಶಿ

# ಬಾಷ್ಪಾಂಜಲಿ

'ರಘುವರ'

ಭರತಮಾತೆ ಸುಪುತ್ರನೊಬ್ಬನ ಕಳೆದುಕೊಂಡಳು ಈ ದಿನ।
ಪರಮಸದ್ಗುಣಿ ದೇಶಭಕ್ತನ ನೆಹರು ಜವಹರಲಾಲನ ॥ ೧ ॥

ಎಲ್ಲ ದೇಶದ ಎಲ್ಲ ಮತಗಳ ಎಲ್ಲ ಜನಗಳ ಬಲ್ಲನ।
ಎಲ್ಲ ಜನಗಳ ಕ್ಷೇಮಚಿಂತನೆಯೆಲ್ಲ ಕಾಲಕು ಗೈದನ ॥ ೨ ॥

ಮುದ್ದುಮಕ್ಕಳ ಮನದಿ ಹರುಷದ ಮುದ್ರೆಯೊತ್ತಿದ ಚೆನ್ನನ।
ವೃದ್ಧರಿಂಗೆಯು ಬುದ್ಧರಿಂಗೆಯು ಬುದ್ಧಿ ಪೇಳುವ
ಘನ್ನನ ॥ ೩ ॥

ಶಾಂತಿ ಸಹಬಾಳುವೆಯ ತತ್ವವ ಮನುಜಕೋಟಿಗೆ ಸಾರ್ದನ।
ಅಂತರಂಗದಿ ಚಿತ್ತನಿರ್ಮಲ ಸಮತೆಭಾವವ ತಾಳ್ದನ ॥ ೪ ॥

ನಗೆಮೊಗದೊಳೆಲ್ಲರಿಗು ಮೋದವ ಬೀರುತಿರ್ದಾ ಸುಹೃದನ।
ಹಗೆಗಳಿಲ್ಲವು ನಮಗೆ ಮಿತ್ರರು ಸಕಲರೆಂದೇ ಬಗೆದನ ॥ ೫ ॥

ಭರತಮಾತೆಯಪಾರ ಮಮತೆಯ ಮರೆಯದಲೆ ಮನಗಂಡನ।
ಭರತಮಾತೆಯ ಸೇವೆಯನು ನಿಸ್ವಾರ್ಥಮತಿಯಿಂ
ಗೈದನ ॥ ೬ ॥

ಕೊನೆಯುಸಿರವರೆಗೆಮ್ಮ ನಾಡಿನ ಸೌಖ್ಯಕಾಗಿಯೆ ದುಡಿದನ।
ಜನುಮ ಸಫಲತೆಪಡೆದು ಜನಹಿತಚಿಂತನೆಯಲೇ ಮಡಿದನ
॥ ೭ ॥

ಉನ್ನತಾದರ್ಶವನು ನಿಜದೇಶೋನ್ನತಿಗೆ ತೋರಿರುವನ।
ಧನ್ಯ ಧನ್ಯನುಯೆನಿಸಿ ತಾಯಿಯ ಮಡಿಲ ಪುನರಪಿ
ಸೇರ್ದನ ॥ ೮ ॥

ದೇಶಹಿತದೃಷ್ಟಿಯಲಿ ಸ್ವಾತ್ಮಾರ್ಪಣೆಯ ಮಾಡಿದ ಧೀರನ।
ಶ್ರೀಶ ರಘುವರ ನೆಡೆಗೆ ಸಾರಿದ ನಮ್ಮ ನೆಚ್ಚಿನ ವೀರನ ॥ ೯ ॥

---

# ಶ್ರೀ ಆಲೂರು ವೆಂಕಟರಾಯರ ಸ್ಮರಣೆ

ಲೇ: ಶ್ರೀ ಡಿ. ಪಿ. ಗೌಡಯ್ಯ ಪಿ.

ಕನ್ನಡದ ಕುಲಮಣಿಯೇ
ಕರ್ನಾಟಕ ಕಣ್ಮಣಿಯೆ
ಕರುನಾಡ ಕಣ್ಣಾಗಿ
ಮೆರೆದೆ ನೀ ಕವಿಯಾಗಿ

ಕನ್ನಡದ ಗಿಡಕೆ ನೀ ಪಾತಿಯನು ಕಟ್ಟಿ
ನೀರೆರೆದು ಪೋಷಿಸಿದೆ ಓ! ನನ್ನ ಕವಿ ಶ್ರೇಷ್ಠಿ
ತಿಲಗರ ಗರಡಿಯ ಹಸನಾದ ಆ ಮಟ್ಟಿ
ಕನ್ನಡದ ಸಂಸ್ಕೃತಿಗೆ ನೀನಾದೆ ಜಟ್ಟಿ

ಕನ್ನಡದ ತಾಯ್‌ಹಾಲು ಕುಡಿದು ಬೆಳೆದೆ ನೀನು
ಕನ್ನಡಕೆ ಈ ದೇಹವೆಂದು ತೋರಿದೆ ನೀನು
ಸಪ್ತರ್ಶಿ ಮಾಲೆಯೊಳು ಮಿನುಗುತಿರುವೆ ನೀನು
ಕಲಸಿಟ್ಟು ಹೋಗಿರುವೆ ಕನ್ನಡದ ಹೆಜ್ಜೇನು

ಗಗನದಲಿ ಮಿನುಗು ನಕ್ಷತ್ರದಂದದಲಿ
ನಿನ್ನ ನೀತಿ ಎಮಗೆ ಕನ್ನಡಿಯು ಆಗಿರಲಿ
ಕರುನಾಡ ಜನ ಹೃದಯ ಕನ್ನಡವೆ ತುಂಬಿರಲಿ
ಇದನೋಡಿ ನಿನ್ನಮನ ಸಂತಸದಿ ನಲಿಯಲಿ

ಕನ್ನಡತಿ ಒಡಲಲ್ಲಿ ಮತ್ತೊಮ್ಮೆ ಜನಿಸಿ ನೀ ಬಾ!
ಕರುನಾಡ ಈ ಗುಡಿಗೆ ಗೋಪುರವ ಕಟ್ಟು ಬಾ!
ಕನ್ನಡದ ಕಂದರಿಕೆ ನೀ ದಾರಿ ತೋರು ಬಾ!
ಕನ್ನದದ ಕಸ್ತೂರಿ ಪರಿಮಳವ ಹರಡು ಬಾ!

# ಸಂಪಾದಕೀಯ

**ಅಗಲಿದ ಅಧಿನಾಯಕ**

ಕಲಿಯುಗದ "ಕಲ್ಕಿ" ಕಣ್ಮರೆಯಾದರು! ವಿಧಿ ಸಂಕಲ್ಪ ಅದೆಷ್ಟು ಕ್ರೂರ! ನಮ್ಮ ರಾಷ್ಟ್ರಗೀತೆಯ ಮೊದಲನೆಯ ಚರಣದ – "ಜನಗಣಮನ ಅಧಿನಾಯಕ ಜಯಹೇ, ಭಾರತ ಭಾಗ್ಯವಿಧಾತ" – ಎಂಬ ಅಮರನುಡಿಯಲ್ಲಿ ಯಾರು ಜನಗಣದ ಮನದ ಅಧಿನಾಯಕರಾಗಿ ಕಂಗೊಳಿಸಿ ಬೆಳಗುವರೋ ಅವರೇ ಭಾರತದ ಭಾಗ್ಯವಿಧಾತರು, ಅವರಿಗೆ ಜಯವಾಗಲಿ ಎಂಬ ಮಾತನ್ನು ವಿಶ್ವಕವಿ ರವೀಂದ್ರನಾಥ ಠಾಕೂರರು ಅರ್ಥಗರ್ಭಿತವಾಗಿ ಭಾವಪೂರ್ಣವಾಗಿ ಪ್ರಯೋಗಿಸಿದ್ದಾರೆ. ಭರತಖಂಡದಲ್ಲಿ ಪುರಾಣೇತಿಹಾಸಗಳ ಕಾಲದಿಂದ ಇಂತಹ ಮಹಿಮಾನ್ವಿತರಾದ ಅಧಿನಾಯಕರೂ, ಭಾಗ್ಯವಿಧಾತರೂ ಕಾಣಿಸಿಕೊಂಡು ಭಾರತಮಾತೆಯ ಕೀರ್ತಿಧ್ವಜವನ್ನು ಅಚ್ಚಳಿಯದಂತೆ ಎತ್ತಿ ಹಿಡಿದಿದ್ದಾರೆ. "ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ| ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ||" ಎಂಬ ಗೀತಾ ವಚನದಲ್ಲೂ ಇದು ಎದ್ದುಕಾಣುತ್ತದೆ. ಇದೆಲ್ಲವೂ ಹಳೆಯ ಮಾತೆಂದು ಹಳಿದರೂ, ನಮ್ಮ ಕಣ್ಣಮುಂದೆ ನಡೆದ ಪ್ರಸಂಗಗಳನ್ನು ಗಮನಿಸಿದಾಗ ಈ ಹಳೆಯ ಮಾತೇ ಹೊಸ ರೂಪದಲ್ಲಿ ನಮ್ಮನ್ನು ಎಚ್ಚರಗೊಳಿಸುತ್ತದೆ. ೧೯೪೮ ಜನವರಿ ೩೦ರಲ್ಲಿ ಮಹಾತ್ಮಾ ಗಾಂಧಿಯವರು ನಮ್ಮನ್ನಗಲಿದಾಗಲೂ, ೧೯೬೪ ಮೇ ೨೭ರಲ್ಲಿ ಮಹಾಪುರುಷ ನೆಹ್ರೂರವರು ನಮ್ಮ ಕೈ ಬಿಟ್ಟಾಗಲೂ ಈ ಭಾರತ ಭಾಗ್ಯವಿಧಾತರ ಸ್ಮರಣೆ ನಮ್ಮ ಹೃದಯಾಂತರಾಳದಲ್ಲಿ ದುಃಖವನ್ನೂ, ಧೈರ್ಯವನ್ನೂ ಏಕಮುಖವಾಗಿ ಉಕ್ಕಿಸುತ್ತದೆ.

ಅಮೇರಿಕಾದ ಪ್ರಾಚೀನ ಪ್ರಖ್ಯಾತ ಕವಿ ಲಾಂಗ್‌ಫೆಲೋ ಎಂಬಾತನು "Psalm of Life" ಎಂಬ ಜೀವನ ಗೀತೆಯಲ್ಲಿ ಸಾರಿರುವಂತೆ –

Lives of great men all remind us,
We will make our lives sublime,
Departing, leave behind us
Foot prints on the sands of time;
Foot prints that perhaps another,
Sailing over life's solemn main,
A forlorn and ship-wrecked brother,
Seeing shall take heart of again.

ಎಂಬ ದಿವ್ಯವಾಣಿ ನೊಂದ ಹೃದಯಕ್ಕೆ ಗಂಭೀರ ಭಾವವನ್ನು ತುಂಬುತ್ತದೆ.

ನಾವೀಗ ಅಂತಹ ಸಂದಿಗ್ಧ ಪರಿಸ್ಥಿತಿಯಲ್ಲಿದ್ದೇವೆ. ನಮ್ಮ ಅಧಿನಾಯಕ, ಭಾರತ ಭಾಗ್ಯವಿಧಾತ, ಮಹಾಪ್ರಧಾನಿ, ಕಲಿಯುಗದ ಕಲ್ಕಿ, ಪಂಡಿತ ಜವಾಹರಲಾಲ್ ನೆಹ್ರೂರವರನ್ನು ಕಳೆದುಕೊಂಡುದು ಸಾಮಾನ್ಯವಲ್ಲ; ಅದರಿಂದ ನಮಗಾಗಿರುವ ದುಃಖವೂ ಸಾಮಾನ್ಯವಲ್ಲ. ಈ ಅಗಲಿಕೆಯ ದುಃಖವನ್ನು ಕಳೆಯುವುದಾದರೂ ಹೇಗೆ! ಅದು ನಿರಂತರವಾದ ಅನಿರ್ವಚನೀಯವಾದ ಸಂಕಟ! ಈ ದುಃಖವೇ, ಈ ಸಂಕಟವೇ ನಮ್ಮ ನರನಾಡಿಗಳಲ್ಲಿ ಪ್ರವಹಿಸಿ ನಮ್ಮನ್ನು ಮುಂದಿನ ಮಾರ್ಗದ ಕಡೆ ನೂಕುತ್ತಿದೆ. ನೆಹ್ರೂರವರು ತಮ್ಮ ಜೀವನದ ಚಿತ್ರವನ್ನು ಅಮೇರಿಕಾದ ಇನ್ನೊಬ್ಬ ಆಧುನಿಕ ಪ್ರಖ್ಯಾತ ಕವಿ ರಾಬರ್ಟ್ ಫ್ರಾಸ್ಟ್ ಎಂಬಾತನು ನುಡಿದ ಕವಿವಾಣಿಯಲ್ಲಿ ಪ್ರತಿಬಿಂಬಿಸಿಕೊಂಡಿದ್ದರು.

The Woods are lovely, dark and deep,
But I have promises to keep,
And miles to go before I sleep,
And miles to go before I sleep!

ಎಂಬ ಈ ಕವಿವಾಣಿಯಲ್ಲಿ ನೆಹ್ರೂರವರು ತಮ್ಮ ಜೀವಿತದ ಪ್ರತಿಬಿಂಬವನ್ನು ಕಂಡು ನಮ್ಮನ್ನು ಬಿಟ್ಟುಹೋಗಿದ್ದಾರೆ! ನೆಹ್ರೂರವರ ಕರ್ತವ್ಯಪರಾಯಣತೆಗೆ, ದೂರದೃಷ್ಟಿಗೆ ಈ ಕವಿವಾಣಿ ಆದರ್ಶಪ್ರಾಯವಾಗಿದೆ. ಭಾರತಮಾತೆಯ ಮಹಾಪುರುಷನನ್ನು ಕಳೆದುಕೊಂಡ ನಾವು ನಿರ್ಭಾಗ್ಯರೇ ಸರಿ. ಆದರೆ, ಅವರು ಹಾಕಿಕೊಟ್ಟ ಪಂಚಶೀಲದ ಶಾಂತಿ ಮಾರ್ಗದಲ್ಲಿ ನಾವು ನಡೆದು, ಅವರ ಪವಿತ್ರ ಆತ್ಮ ಚಿರಕಾಲ ಬೆಳಗುವಂತೆ ಮಾಡೋಣ. ಇದೀಗ ಪ್ರತಿಯೊಬ್ಬ ಭಾರತೀಯನ ಭೀಷ್ಮಪ್ರತಿಜ್ಞೆಯಾಗಲೆಂದು ಹಾರೈಸೋಣ.

**ಶ್ರೀ ಶ್ರೀ ಜಯವಿಭವ ಮುರುಘರಾಜೇಂದ್ರ ಸ್ವಾಮಿಗಳವರು**

೧೯೬೪ ಮೇ ೨೦ರಂದು ಚಿತ್ರದುರ್ಗದ ಶ್ರೀಮಚ್ಚಿನ್ಮೂಲಾದ್ರಿ ಬೃಹನ್ಮಠದ ಪೀಠಾಧಿಕಾರಿಗಳಾದ ಜಗದ್ಗುರು ಶ್ರೀ ಶ್ರೀ ಜಯವಿಭವ ಮುರುಘರಾಜೇಂದ್ರ ಸ್ವಾಮಿಗಳವರು ಶಿವೈಕ್ಯರಾದುದು ಶ್ರೀಮಠದ ಶಿಷ್ಯರಿಗೂ ಭಕ್ತರಿಗೂ ಅಪಾರ

ದುಃಖವನ್ನುಂಟುಮಾಡಿದೆ. ಮಹಾಸ್ವಾಮಿಗಳವರು ಪೂಜ್ಯಪಾದ ಜಗದ್ಗುರು ಶ್ರೀ ಶ್ರೀ ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರು ನಿಧನರಾದಮೇಲೆ ೧೯೫೬ ಫೆಬ್ರವರಿ ೧೭ ರಂದು ಶ್ರೀಮುಚ್ಚಿನ್ಮೂಲಾದ್ರಿ ಬೃಹನ್ಮಠದ ಪೀಠಾಧಿಕಾರಿ ಕಾರಿಗಳಾದರು. ತಮ್ಮ ಹಿರಿಯರು ಹಾಕಿಕೊಟ್ಟ ಮಾರ್ಗದಲ್ಲಿ ನಡೆಯುತ್ತ ನಿರಾಡಂಬರ ಜೀವಿಗಳಾಗಿ ಬಾಳಿದರು. ತಮ್ಮ ಅಪಾರ ಧನಸಂಪತ್ತನ್ನು ಧರ್ಮಕಾರ್ಯಗಳಿಗೂ, ವಿದ್ಯಾಪ್ರಗತಿಗೂ, ರಾಷ್ಟ್ರೋನ್ನತಿಗೂ, ಜ್ಞಾನಾಭಿವೃದ್ಧಿಗೂ ವಿನಿಯೋಗಿಸಿದರು. ಶಿವೈಕ್ಯರಾದ ಮಹಾಸ್ವಾಮಿಗಳಿಗೆ ನಮ್ಮ ಭಕ್ತಿಪ್ರಣಾಮಗಳನ್ನು ಅರ್ಪಿಸಿ, ಇಂದು ಪೀಠಾಧಿಕಾರವನ್ನು ವಹಿಸಿಕೊಂಡಿರುವ ಶ್ರೀ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳನ್ನು ಭಕ್ತಿಭರವಸೆಯಿಂದ ಸ್ವಾಗತಿಸುತ್ತೇವೆ. ಪೂಜ್ಯ ಶ್ರೀ ಶ್ರೀಗಳವರು ಶ್ರೀಮುಚ್ಚಿನ್ಮೂಲಾದ್ರಿ ಬೃಹನ್ಮಠವನ್ನು ಮತ್ತಷ್ಟು ಭಕ್ತಿಮಾರ್ಗದಲ್ಲಿ ಧರ್ಮದೃಷ್ಟಿಯಿಂದ ಬೆಳೆಸಬಲ್ಲರೆಂದೂ, ಬೆಳಗಬಲ್ಲರೆಂದೂ ನಂಬಿದ್ದೇವೆ.

## ಮಹಾಪ್ರಧಾನಿ ಲಾಲ್‌ಬಹದ್ದೂರ್ ಶಾಸ್ತ್ರಿಗಳವರು

ದಿವಂಗತ ಪಂಡಿತ ಜವಾಹರಲಾಲ್ ನೆಹ್ರೂರವರ ತರುವಾಯ ಮಹಾಪ್ರಧಾನಿ ಪೀಠಕ್ಕೆ ಸರ್ವಸಮ್ಮತವಾಗಿ ಆಯ್ಕೆಯಾಗಿರುವ ಲಾಲ್‌ಬಹದ್ದೂರ್ ಶಾಸ್ತ್ರಿಗಳವರು ಭಾರತೀಯರಿಗೆ ಹೊಸಬರೇನೂ ಅಲ್ಲ. ಇವರು ಪಂಡಿತ ಜವಾಹರಲಾಲ್ ನೆಹ್ರೂರವರಿಗೆ ತೀರ ಹತ್ತಿರವಿದ್ದುಕೊಂಡು ರಾಷ್ಟ್ರದ ವಿದ್ಯಮಾನಗಳನ್ನೆಲ್ಲ ಚೆನ್ನಾಗಿ ತಿಳಿದವರು. ಕೇಂದ್ರ ಮಂತ್ರಿಮಂಡಲದಲ್ಲಿ ಹಿಂದೆ ರೈಲ್ವೆ ಸಚಿವರಾಗಿದ್ದು ಇತ್ತೀಚೆಗೆ ಖಾತೆಯಿಲ್ಲದ ಸಚಿವರಾಗಿ ದಿವಂಗತ ಮಹಾಪ್ರಧಾನಿ ನೆಹ್ರೂರವರ ಪಡಿನೆಳಲಂತೆ ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಿದ್ದವರು. ಇಂತಹ ಅರಿತು ನುರಿತ ಮಹನೀಯರು ಭರತಖಂಡದ ಸಾರ್ವಜನಿಕ ಜೀವನದಲ್ಲೂ, ವಿದೇಶೀಯ ವ್ಯವಹಾರದಲ್ಲೂ ತಮ್ಮ ಪ್ರಭಾವವನ್ನು ಬೀರುವುದರಲ್ಲಿ ಸಂಶಯವಿಲ್ಲ. ಇದೇ ಸಮಯದಲ್ಲಿ ಶ್ರೀ ಕಾಮರಾಜರಂತಹ ಪ್ರಭಾವಶಾಲಿಗಳಾದ ಮಹನೀಯರು ಕಾಂಗ್ರೆಸ್ ಮಹಾಸಂಸ್ಥೆಯ ಅಧ್ಯಕ್ಷರಾಗಿ ಸಮೀಪದಲ್ಲಿಯೇ ಇರುವುದರಿಂದ ನೂತನ ಮಹಾಪ್ರಧಾನಿಗಳಿಗೆ ತುಂಬ ಬೆಂಬಲವಿರುತ್ತದೆ. ಒಟ್ಟಿನಲ್ಲಿ ಮುಂದಿನ ದಿನಗಳಲ್ಲಿ ಭರತಖಂಡದ ಇತಿಹಾಸದಲ್ಲಿ ಬಹಳ ಎಚ್ಚರಿಕೆಯಿಂದಿರಬೇಕಾದುದಗತ್ಯವಿದೆ. ಆಡಳಿತಗಾರರು ಯಾರೇ ಆಗಲಿ, ಎಲ್ಲಿಯೇ ಆಗಲಿ ದುಡುಕಿ ಮಾತನಾಡುವುದಾಗಲಿ, ದುಡುಕಿ ವರ್ತಿಸುವುದಾಗಲಿ ಸೂಕ್ತವಲ್ಲ. ಭಾರತಮಾತೆಯು ತನ್ನ ಕ್ಷೇಮಕ್ಕಾಗಿ ಎಲ್ಲರನ್ನೂ ಎಲ್ಲ ರೀತಿಗಳಲ್ಲಿಯೂ ಉತ್ತಮ ಮಾರ್ಗದಲ್ಲಿ ನಡೆಯುವಂತೆ ದಾರಿತೋರಲೆಂದು ಹಾರೈಸಿ, ಮಹಾಪ್ರಧಾನಿ ಲಾಲ್‌ಬಹದ್ದೂರ್ ಶಾಸ್ತ್ರಿಗಳವರನ್ನು ಸ್ವಾಗತಿಸುತ್ತೇವೆ.

## ನಮ್ಮ ನೂತನ ರಾಜ್ಯಪಾಲರು

ಮೈಸೂರು ರಾಜ್ಯದ ನೂತನ ರಾಜ್ಯಪಾಲರಾದ ಜನರಲ್ ಸತ್ಯವಂತ ಮಲ್ಲಣ್ಣ ಶ್ರೀನಾಗೇಶ್‌ರವರು ಮೇ ೪ ನೆಯ ತಾರೀಖು ಸೋಮವಾರ ಅಧಿಕಾರ ಸ್ವೀಕಾರ ಮಾಡಿದರು. ಪ್ರತಿಭಾವಂತರೂ ಪ್ರಭಾವಶಾಲಿಗಳೂ ಆದ ಈ ಮಹನೀಯರು ಮೈಸೂರು ರಾಜ್ಯದ ಧವಳಕೀರ್ತಿಯನ್ನು ಪರಿಪಾಲಿಸುವರೆಂಬ ನಂಬಿಕೆ ನಮಗೆ ಸಂಪೂರ್ಣವಾಗಿದೆ. ಹಿಂದಿನ ರಾಜ್ಯಪಾಲರಾದ ಶ್ರೀ ಜಯಚಾಮರಾಜ ಒಡೆಯರ ಸಂಪ್ರದಾಯವನ್ನು ಅನುಸರಿಸಲು ಯತ್ನಿಸುತ್ತೇನೆಂದು ಹೇಳಿರುವಾಗ ಮೈಸೂರಿನ ಜನತೆಗೆ ಅದಕ್ಕಿಂತ ಹೆಚ್ಚಿನ ಭರವಸೆ ಇನ್ನಿಲ್ಲ. ಒಡೆಯರುಗಳ ಆಡಳಿತದಲ್ಲಿ ಒಂದು ಶತಮಾನದಿಂದ ಮಾದರಿಯ ರಾಜ್ಯವೆಂದು ಹೆಸರುವಾಸಿಯಾಗಿರುವ ಮೈಸೂರು ಜನರಲ್ ಶ್ರೀ ಎಸ್. ಎಂ. ಶ್ರೀನಾಗೇಶ್‌ರವರ ಅಧಿಕಾರದಲ್ಲಿ ತನ್ನ ಕೀರ್ತಿ ಪ್ರತಿಷ್ಠೆಗಳನ್ನು ಉನ್ನತ ರೀತಿಯಲ್ಲಿ ಬೆಳಗಬಲ್ಲುದೆಂದು ನಂಬಿದ್ದೇವೆ.

---

ಸಂಪಾದಕರು: ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು—೧೮.

# ಸಾದರ ಸ್ವೀಕಾರ

* ಕಾಸರಗೋಡು ಸಮಾಚಾರ: ಸಂಪಾದಕರು: ಶ್ರೀ ವೈ. ಮಹಾಲಿಂಗ ಭಟ್, ಬಿ. ಎ.; ಪ್ರಕಾಶಕರು: ಶ್ರೀ ಎಸ್. ಕೃಷ್ಣಭಟ್, ಸಿರಿಗನ್ನಡ ಪ್ರೆಸ್, ಕಾಸರಗೋಡು, ದ. ಕನ್ನಡ; ಸೈಜು ೧/೮ ಕ್ರೌನ್; ಪುಟ ೧೦೦; ಬೆಲೆ ರೂ. ೧–೫೦ ನ.ಪೈ.

* ಮಧುಪುರ: ಸಂಪಾದಕರು: ಕೆ. ವೆಂಕಟಕೃಷ್ಣಯ್ಯ; ಪ್ರಕಾಶಕರು: ಗೀತಾ ಪ್ರಕಾಶನ, ಶ್ರೀರಾಮಪೇಟೆ, ಕಾಸರಗೋಡು; ಪುಟ ೨೩೬; ಬೆಲೆ ರೂ. ೫–೫೦ ನ.ಪೈ.

ಮಹಾಜನ ಸಂಸ್ಕೃತ ಕಲಾಶಾಲ, ಪೆರಡಾಲ, ಸುವರ್ಣ ಮಹೋತ್ಸವ ದೀಪಿಕಾ, ೧೯೬೩; ಪ್ರಕಾಶಕರು: ಮಹಾಜನ ಸಂಸ್ಕೃತ ಕಾಲೇಜ್, ಪೆರಡಾಲ (ಕಾಸರಗೋಡು); ಪುಟ ೧೦೦.

ಪೆರಡಾಲ ಕನ್ನಡ ನೂಸ್ತರ ಕೃತಿಗಳು: ಲೇಖಕರು: ಶ್ರೀ ಪೆರಡಾಲ ಕೃಷ್ಣಯ್ಯ; ಪ್ರಕಾಶಕರು: ಶ್ರೀ ಎಸ್. ಕೃಷ್ಣಭಟ್, ಸಿರಿಗನ್ನಡ ಮುದ್ರಣಾಲಯ ಮತ್ತು ಪುಸ್ತಕಾಲಯ, ಶ್ರೀರಾಮ ಪೇಟೆ, ಕಾಸರಗೋಡು; ಪುಟ ೧೪೨; ಬೆಲೆ ರೂ. ೩.

* ಫ್ಯಾಶನ್ನುಗಳು: ಲೇಖಕರು: ಶ್ರೀ ಕೆ. ಡಿ. ತಂಗೋಡ, ಎಂ.ಎ.; ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಸೈಜು ೧/೮ ಫುಲ್‌ಸ್ಕೇಪ್; ಪುಟ ೬೪; ಬೆಲೆ ೨೫ ನ.ಪೈ.

* ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ವನಿಷ್ಠೆ: ಲೇಖಕರು: ಶ್ರೀ ಬಿ. ವ್ಹಿ. ಮಲ್ಲಾಪುರ, ಎಂ.ಎ.; ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಸೈಜು ೧/೮ ಫುಲ್ ಸ್ಕೇಪ್; ಬೆಲೆ ೨೫ ನ.ಪೈ.

ಪ್ರಾಚೀನ ಸಾಹಿತ್ಯ: ಲೇಖಕರು: ಶ್ರೀ ಟಿ. ಎಸ್. ವೆಂಕಣ್ಣಯ್ಯ; ಪ್ರಕಾಶಕರು: ತ. ವೆಂ. ಗ್ರಂಥಮಾಲೆ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೧೨೪; ಬೆಲೆ ರೂ. ೧–೫೦ ನ.ಪೈ.

* ಆರ್ಯರ ದಿನಚರ್ಯೆ (ಆರೋಗ್ಯ ಜೀವನ): ಲೇಖಕರು: ಶ್ರೀ ಹರಿದಾಸ "ಕೀರ್ತನ ಕೇಸರಿ" ಕಾರವಾರ ವೆಂಕಟದಾಸ ಅಚ್ಯುತ ಕಾಮತ; ಪ್ರಕಾಶಕರು: ಶ್ರೀ ಹರಿದಾಸ "ಕೀರ್ತನ ಕೇಸರಿ" ಕಾರವಾರ ವೆಂಕಟದಾಸ ಅಚ್ಯುತ ಕಾಮತ, ಸೇವಾನಿವೃತ್ತ ಪೋಸ್ಟಮಾಸ್ತರ, "ಯಶೋದಾಭವನ" ಕಾಜುಭಾಗ, ಕಾರವಾರ; ಸೈಜು ೧/೮ ಕ್ರೌನ್; ಪುಟ ೧೮೦; ಬೆಲೆ ರೂ. ೧–೫೦ ನ.ಪೈ.

ಕನ್ನಡಕ್ಕೆ ಶ್ರೀ ಪುರಂದರದಾಸರು ನೀಡಿದ ಕೊಡುಗೆ: ಲೇಖಕರು: ಶ್ರೀ ಜಿ. ಡಿ. ನಾಡಕರ್ಣಿ, ಎಂ.ಎ.; ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಸೈಜು ೧/೮ ಫುಲ್ ಸ್ಕೇಪ್; ಪುಟ ೫೨; ಬೆಲೆ ೨೫ ನ.ಪೈ.

* ಕನ್ನಡ ಕಾವ್ಯಗಳಲ್ಲಿ ಕಿರಾತಾರ್ಜುನ ಪ್ರಸಂಗ: ಲೇಖಕರು: ಪ್ರೊ॥ ದೇವೇಂದ್ರಕುಮಾರ ಹಕಾರಿ, ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಸೈಜು ೧/೮ ಫುಲ್ ಸ್ಕೇಪ್; ಪುಟ ೭೦; ಬೆಲೆ ೨೫ ನ.ಪೈ.

ಭಾರತ ಬಿಡುಗಡೆ ಗಳಿಸಿತು: ಲೇಖಕರು: ಶ್ರೀ ವಿ. ಸೀತಾರಾಮಯ್ಯ; ಪ್ರಕಾಶಕರು: ಓರಿಯಂಟ್ ಲಾಂಗ್‌ಮನ್ಸ್, ೩೬-A, ಮೌಂಟ್ ರೋಡ್, ಮದರಾಸು–೨; ಸೈಜು ೧/೮ ಡೆಮ್ಮಿ; ಪುಟ ೩೪೦; ಬೆಲೆ ರೂ. ೭–೫೦ ನ.ಪೈ.

ರಾಣಿ ರತ್ನಾಜಿ: ಲೇಖಕರು: ಶ್ರೀ ಹೆಚ್. ಬಿ. ಜ್ವಾಲನಯ್ಯ, ಬಿ.ಎ.; ಪ್ರಕಾಶಕರು: ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಸೈಜು ೧/೮ ಕ್ರೌನ್; ಪುಟ ೭೨; ಬೆಲೆ ೩೫ ನ.ಪೈ.

ಮಹಾಶಿಲ್ಪಿ: ಲೇಖಕರು: ಶ್ರೀ ಹೆಚ್. ಬಿ. ಜ್ವಾಲನಯ್ಯ, ಬಿ.ಎ., ಎಂ.ಇ.; ಪ್ರಕಾಶಕರು: ಕರ್ಣಾಟಕ ಪ್ರಾಂತೀಯ ಹಿಂದೀ ಪ್ರಚಾರ ಸಭಾ, ಧಾರವಾಡ; ಸೈಜು ೧/೮ ಕ್ರೌನ್; ಪುಟ ೬೪; ಬೆಲೆ ರೂ. ೧.

* ತಲೆಕಟ್ಟು: ಲೇಖಕರು ಮತ್ತು ಪ್ರಕಾಶಕರು: ಶ್ರೀ ಚ. ಸುಂದರೇಶನ್, ಎಂ.ಎ., ಕನ್ನಡ ಅಧ್ಯಾಪಕ, ಮಹಾರಾಣಿ ಕಾಲೇಜು, ಬೆಂಗಳೂರು; ಸೈಜು ೧/೮ ಫುಲ್‌ಸ್ಕೇಪ್; ಪುಟ ೨೪.

* ದಾಸ ರಾಮಾಯಣ (ಬಾಲಕಾಂಡ): ಲೇಖಕರು: ಕೀರ್ತನಕೇಸರಿ ಶ್ರೀ ಭದ್ರಗಿರಿ ಕೇಶವದಾಸರು, ಬಿ.ಎ.ಎಲ್‌ಎಲ್.ಬಿ.; ಪ್ರಕಾಶಕರು: ದಾಸಾಶ್ರಮ, ಪುರಂದರಪುರ, ರಾಜಾಜಿನಗರ, ಬೆಂಗಳೂರು–೧೧; ಸೈಜು ೧/೮ ಕ್ರೌನ್; ಪುಟ ೧೮೪; ಬೆಲೆ ರೂ. ೨–೫೦ ನ.ಪೈ.

* ಕಾಲೂರ ಚೆಲುವೆ: ಲೇಖಕರು ಮತ್ತು ಪ್ರಕಾಶಕರು: ಶ್ರೀ ಕೊಳಂಬೆ ಪುಟ್ಟಣ್ಣಗೌಡ, ವಿದ್ವಾನ್, ಚೊಕ್ಕಾಡಿ ಪೋಸ್ಟು, ಸುಳ್ಯ, ದ.ಕ.; ಸೈಜು ೧/೮ ಕ್ರೌನ್; ಪುಟ ೧೯೪; ಬೆಲೆ ರೂ. ೨–೫೦ ನ ಪೈ.

* ನೀನಾ (ಕವನ ಸಂಗ್ರಹ): ಲೇಖಕರು: ಶ್ರೀ ಸಿದ್ದಲಿಂಗ ಪಟ್ಟಣ ಶೆಟ್ಟಿ; ಪ್ರಕಾಶಕರು: ಶ್ರೀ ಎಸ್. ಬಿ. ಪಟ್ಟಣ ಶೆಟ್ಟಿ, ಎಂ.ಎ., ೪೯, ಪಾರ್ವತಿ ನಿವಾಸ, ಮಾಳಮಡ್ಡಿ, ಧಾರವಾಡ–೧; ಸೈಜು ೧/೮ ಕ್ರೌನ್; ಪುಟ ೮೦; ಬೆಲೆ ರೂ. ೧–೫೦ ನ.ಪೈ.

* ಈ ಗುರ್ತಿನ ಪುಸ್ತಕಗಳ ವಿಮರ್ಶೆ 'ಕನ್ನಡ ನುಡಿ' ಯಲ್ಲಿ ಪ್ರಕಟವಾಗುತ್ತದೆ.

# ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.

## ಪ್ರಕಟಣೆ

ಕನ್ನಡ ನಿಘಂಟಿನ ರಿಯಾಯಿತಿ ಬೆಲೆ ನೂರು ರೂಪಾಯಿಗಳನ್ನು ಸೂಕ್ತ ಕಂತುಗಳಲ್ಲಿ ಪಾವತಿ ಮಾಡುವುದಕ್ಕೆ ಅನುಕೂಲ ಮಾಡಿಕೊಡಬೇಕೆಂದು ಅನೇಕರು ಪರಿಷತ್ತಿಗೆ ಕಾಗದಗಳನ್ನು ಬರೆದಿರುವುದರಿಂದ, ಹತ್ತು ರೂಪಾಯಿಗಳಿಗೆ ಕಡಿಮೆಯಿಲ್ಲದ ಕಂತುಗಳಲ್ಲಿ ಪಾವತಿ ಮಾಡಿ ನಿಘಂಟಿಗೆ ಗ್ರಾಹಕರಾಗಲು ಏರ್ಪಡಿಸಲಾಗಿದೆ. ಆದರೆ ಈ ಕಂತುಗಳು ಪೂರ್ಣವಾಗಿ ಪಾವತಿಯಾಗುವವರೆಗೂ ಸಂಚಿಕೆಗಳನ್ನು ಕಳಿಸಲಾಗುವುದಿಲ್ಲ.

ನಿಘಂಟನ್ನು ಕೊಳ್ಳಲು ಆಸಕ್ತಿಯುಳ್ಳವರು ಈ ಸೌಲಭ್ಯವನ್ನು ಉಪಯೋಗಿಸಿಕೊಂಡು ಕನ್ನಡ ನಿಘಂಟಿಗೆ ಗ್ರಾಹಕರಾಗಬೇಕೆಂದು ಕೋರಲಾಗಿದೆ.

ಬೆಂಗಳೂರು
೨೦-೫-೧೯೬೪

**ಕೆ. ಎಂ. ಕೃಷ್ಣರಾವ್**
**ಗೌ॥ ಕಾರ್ಯದರ್ಶಿ**

Reg. No. B. G. 4—June 1964

Licensed to Post without pre-payment. License No 1







ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.






# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೭]

ಸಂಪಾದಕರು: ಡಿ. ಆರ್. ರಾಮಯ್ಯ, ಬಿ.ಎ.

[ಸಂಚಿಕೆ ೭

## ಪರಿಷತ್ತಿನಲ್ಲಿ ಸಾಹಿತ್ಯ ಸಮಾರಾಧನೆಯ ಸಮಾರಂಭ



ಜೂನ್ ದಿನಾಂಕ ೧೩ ರಂದು ಆರಂಭವಾದ ಸಮಾರಂಭವನ್ನು ಶ್ರೀ ವಿ. ಕೆ. ಗೋಕಾಕರು ಉದ್ಘಾಟಿಸುತ್ತಿರುವ ಚಿತ್ರ. ಶ್ರೀ ಗೋಕಾಕರು ಮಾತನಾಡುತ್ತಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

# ವಿಷಯ ಸೂಚಿಕೆ

# ಕನ್ನಡನುಡಿ



ಸಂಪುಟ ೨೭ ] ಜುಲೈ ೧೯೬೪ [ ಸಂಚಿಕೆ ೭

## ನಿನಗೆ ಸ್ಮಾರಕ ನೆಹರು*

'ಸು'

೧

ಶಾಂತಿ ನೆಲೆವೀಡೆನಿಪ ಈ ನಮ್ಮ ಭಾರತದಿ
ಜನುಮ ಧರಿಸಿದೆ ನೀನು ಎಮ್ಮ ಸಯ್ಪಿನ ಕತದಿ
ಆಗರ್ಭ ಶ್ರೀಮಂತ ತುಂಬ ಮೇಧಾವಂತ
ಎಂಬ ಹೆಸರನು ಆಂತ ಇಂಬು ಮನೆತನದಿ
ತಾಯ್ತಂದೆ ಬಳಗಕ್ಕೆ ಕಣ್ಮಣಿಯು ನೀನಾದೆ
ರಾಜಕುವರನ ತೆರದಿ ವರ್ಧಿಸುತ ಮೆರೆದೆ

೨

ರೂಪಿನಲಿ ರತಿಪತಿಯ ನಾಚಿಸುತ ಬೆಳೆದು
ವಿದ್ಯೆಯಲಿ ವಾಗ್ದೇವಿ ಪೂರ್ಣವರ ಪಡೆದು
ಜ್ಞಾನದಾಹಕೆ ಮಾತ್ರ ವಿದ್ಯೆ ನೀ ಪಡೆದೆ
ಗಳಿಕೆ ಪದವಿಗೆ ಅಲ್ಲ ನಿನ್ನ ಕೃತಿಗಳಿಂ ಜಗಬಲ್ಲುದಿದನೆಲ್ಲ

೩

ದಾಸ್ಯ ಶೃಂಖಲೆಯಲ್ಲಿ ಬಳಲಿದ್ದ ಭಾರತದ
ಬಂಧನವ ಬಿಡಿಸಲ್ಕೆ ಎದೆಯಿತ್ತು ನಿಂತೆ
ಆ ಶಾಂತಿ ಸಮರದಲಿ ರಾಷ್ಟ್ರಪಿತ ಬಾಪೂಗೆ
ನೆರವಾಗಿ ಸಮಸೆಣಿಸಿ ಗಳಿಸಿದ್ಯೆ ಸ್ವಾತಂತ್ರ್ಯ
ಈ ನಿನ್ನ ನಾಡಿಂಗೆ ಭುವನವೆಲ್ಲವು ಮೆಚ್ಚೆ

೪

ಅಂದಿನಿಂ ಜಗಕೆಲ್ಲ ಶಾಂತಿ ಸಾರುವ ದೂತ
ನೀನಾದೆ ಎಮ್ಮ ನೆಹರು ಆದೆ ನೀ ನಾಡ ರಕ್ಷೆ
ನಿನ್ನ ನೇತೃತ್ವದಲಿ ನಾಡು ಮುಂದರಿಯುತಿರೆ
ನೀನಿಲ್ಲದಾದೆ ಇಂದು ಗತಿಯೇನು ಇನ್ನು ಮುಂದು

೫

ನಿನ್ನ ಸಿರಿ ಇರುವನಕ ತ್ಯಾಗಿ ನೀ ದುಡಿದೆ
ನಾಯಕ ಶಿಖಾಮಣಿ ಎಂಬ ಖ್ಯಾತಿವೆತ್ತೆ
ದೇಶಭಕ್ತಿಯಲಿ ಸದಾ ಲೋಕಹಿತ ಸಾಧನದಿ
ಬಿಡುವ ಕಾಣದೆ ನೀನು ಬಾಳ ಸಾಗಿಸಿದೆ

೬

ಕರ್ಮಯೋಗಿಯ ಬಾಳ ಬದುಕಿ ಸಾಗಿದೆ ಇನ್ನು
ನೀಗಿಕೊಂಡೆವೊ ನಾವು ನಾಡ ಉಸಿರನ್ನು
ದುಡಿಮೆ, ಸನ್ನಡೆ, ತ್ಯಾಗ, ಸತ್ವಪೂರಣದ
ಸೌಹಾರ್ದ ಸತ್ಯ ಶಾಂತಿಯುತ ಸಹಬಾಳ್ವೆಯು

* ದಿ: ೧೩-೬-೬೪ರಲ್ಲಿ ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘದಲ್ಲಿ ಕವಿಗೋಷ್ಠಿಯಲ್ಲಿ ಓದಿದ್ದು.

ವ್ಯಕ್ತಿವ್ಯಕ್ತಿಯ ಮೇಣು ಜಗದ ಉದ್ಧಾರಕ್ಕು
ಅತ್ಯಗತ್ಯವದೆಂಬ ಸಂದೇಶವನು ಬೀರಿ
ಆ ತೆರನ ಜೀವನನ ಅನವರತ ಅಳವಡಿಸಿ
ಪರಮ ಉನ್ನತದ ಆದರ್ಶ ಎಮಗಿತ್ತು ನಡದೆ
ಅದೆ ಎಮಗೆ ಸ್ಫೂರ್ತಿ
ಜಗದಗಲ ಅದೆ ನಿನ್ನ ಕೀರ್ತಿ

೭

ಮನೆಯ ಎಲ್ಲರ ಕಣ್ಮಣಿ ಅಂದು ನೀ
ಮುಂದಾದೆ ಈ ನಾಡ ಪೇರ್ಮಣಿಯು
ಮಹೋನ್ನತ ಜೀವರಥವನು ನಡೆಸಿ
ನೀನಾದೆ ಜಗದ ಹೃನ್ಮಣಿ ಇಂದು ನೆಹರು!
ಆಘಾತವಿಂದಾಯ್ತು ಎಮಗನಿತೆ ಅಲ್ಲ
ಜಗದಲಿರುವೆಲ್ಲ ಮನಮನಕು ಅನುಮಾನವಿಲ್ಲ
ಇಂದೆಮ್ಮ ಸಂಕಲ್ಪವೆಂತೆಂದು ಬಲ್ಲೆವು ನಾವು
ನಿನ್ನ ಮರೆಯದೆಲೆ ಬಾಳ್ವಪೀಳಿಗೆಯು ನಾವು
ನಿನ್ನ ಆದರ್ಶಗಳ ಸಲಿಸುವರು ನಾವು
ಅದೆ ನಿನಗೆ ನಾವೀವ
ದಿವ್ಯ ಭವ್ಯವಹ ಸ್ಮಾರಕವು ನೆಹರು!!
ನಮ್ಮ ಭಾರತದ
ಆನಂದ ರನ್ನ ನೆಹರು.

೮

ಆ ರೂಪು ಆ ನೋಟ ಆ ನಗೆ ಆ ನಿಲುವು
ಆ ಕವಿಯ ಹೃದಯ ಆ ಸೌಂದರ್ಯದೋಪಾಸನೆ
ಆ ಕಂಠ ಆ ವಾಣಿ ಆ ಪ್ರೇಮ ಆ ಚೆಲುವು
ಆ ಕೆಚ್ಚೆದೆಯ ನಿರ್ಧಾರ ಆ ಅಚಲದಾ ನಡೆ
ನಿನ್ನದೆ ನಿನ್ನದೆ ಯುಗಪುರುಷ ನೆಹರು
ನಿನಗಲ್ಲದಿನ್ನಾರಿಗೂ ಇಲ್ಲ ಇದು ಎಲ್ಲ
ಶಕಪುರುಷ ಅಂಶಪುರುಷನೊ ನೀನು
ಇರಬೇಕು ಇರಬೇಕು ಮಗುವಿನಂತಹ ನೆಹರು
ಹೂವಿನಂತಹ ಮನಸು ಹೂವಿನಂತಹ ಹೃದಯ
ಹೂವಿನೊಲು ನಗು ಹೂವಾಗಿ ಬಂದು ನೀ
ಹೂವಾಗಿ ನಡೆದೆ
ಮುಕ್ತಸ್ವರೂಪ ರತುನವೊ ನೀನು!
ರಿಕ್ತರೊ ನೀನಿಲ್ಲದಲೆ ನಾವು
ನಿನಗೆ ನೀನೇ ಸಾಟಿ
ರಾಮ ರಾಮಗೆ ಸಾಟಿ
ಗಗನ ಗಗನಕೆ ಸಾಟಿ
ಸಾಗರಕೆ ಸಾಗರವೆ ಸಾಟಿ
ಎಂಬಂತೆ!!
ಈ ನೆನಪೆ ಎಮ್ಮೆದೆಯ ನೆನಹು
ಇದೆ ನಿನಗೆ ಎಮ್ಮ ಸ್ಮಾರಕವು ನೆಹರು!!!

# ಪಂಪಮಹಾಕವಿಯ ಕೆಲವು ಪದಗಳು

ಶ್ರೀ ಹಂಪ. ನಾಗರಾಜಯ್ಯ, ಎಂ.ಎ.

ಅಜ್ಞಾತವಾಸಕ್ಕಾಗಿ ಪಾಂಡವರು ಮಾರುವೇಷದಿಂದ ವಿರಾಟಪುರವನ್ನು ಪ್ರವೇಶಿಸಿದರು. ಆಗ ಧರ್ಮರಾಜ ಕಂಕ ಭಟ್ಟನಾದ; ಭೀಮಸೇನ ವಲಲನೆಂಬ ಅಡಿಗೆಯ ಭಟ್ಟನಾದ. ಆ ಸಮಯಕ್ಕೆ "ನಕುಳನುಮಂಕವಣಿಯುಂ ಬಾಳುಂ ಬಾರುಂ ಚಮ್ಮಟಿಗೆಯುಮನೋರ್ವ ಕೀಟಾಳಿಂ ಪಿಡಿಯಿಸಿಕೊಂಡು"–ಬಂದನಂತೆ.[೧] ಇಲ್ಲಿ ಅಂಕವಣಿ ಎಂಬ ಪದ ಸ್ವಾರಸ್ಯವಾಗಿದೆ. ಪಂಪಭಾರತದ ನಿಘಂಟಿನಲ್ಲಿ ಈ ಪದಕ್ಕೆ 'ಕುದುರೆಯ ಮೇಲಣ ತಡಿ' ಎಂಬ ಅರ್ಥ ಹೇಳಿದ್ದಾರೆ.[೨] ಅಂದರೆ ನಕುಲನು ಸೇವಕನ ಕೈಯಲ್ಲಿ ಕತ್ತಿ, ಬಾರುಕೋಲು, ಚಮ್ಮಟಿಗೆ ಮತ್ತು ಕುದುರೆಯ ಮೇಲಿನ ತಡಿ (?) – ಇವನ್ನು ಹೊರಿಸಿಕೊಂಡು ಬಂದನೆಂದು ಅರ್ಥ.

ಕಿಟೆಲ್ ಕೋಶದಲ್ಲಿ ಅಂಕವಣಿ ಎಂಬ ಪದಕ್ಕೆ A decorated stool or seat ಎಂಬ ಅರ್ಥವಿದೆ, ಅದರ ಜೊತೆಯಲ್ಲಿ ಯಾವ ಪ್ರಶ್ನಾರ್ಥಕ ಚಿಹ್ನೆಯೂ ಇಲ್ಲ.[೩] ಅಂದರೆ ಅಂಕವಣಿ ಪದಕ್ಕೆ ಶೃಂಗಾರಮಾಡಿದ ಸ್ಟೂಲು ಅಥವಾ ಪೀಠವೆಂಬ ಅರ್ಥವೆಂದಾಯಿತು. ಇದರಿಂದ ಪಂಪಭಾರತ ನಿಘಂಟಿನಲ್ಲಿ ಹೇಳಿದ ಅರ್ಥಕ್ಕೂ, ಕಿಟೆಲ್‌ರವರು ಕೊಟ್ಟಿರುವ ಅರ್ಥಕ್ಕೂ ಅಜಗಜಾಂತರ ವ್ಯತ್ಯಾಸ ವ್ಯಕ್ತವಾಗುತ್ತದೆ, ಒಂದಕ್ಕೊಂದು ಸಂಬಂಧವಿಲ್ಲ. ಇಲ್ಲಿ ಏನೋ ತಪ್ಪಿರಬೇಕೆನ್ನಿಸುತ್ತದೆ. ಆದುದರಿಂದ ಅಂಕವಣಿ ಪದದ ಅರ್ಥವಿವೇಚನೆ, ಪುನರ್‌ಪರಿಶೀಲನೆ ಅವಶ್ಯ ಆಗಬೇಕು.

ಒಮ್ಮೆ ಜನಕನು ಮಾಯಾ ಕುದುರೆಯನ್ನು ಹತ್ತುವ ಸಂದರ್ಭದಲ್ಲಿನ ಪದ್ಯ,

ಉಂಗುಟಮನಂಕವಣಿಗೆ ಕ
ರಾಂಗುಳಿಯಂ ಸ್ಕಂಧ ಸಂಧಿಗುಯ್ದೇಱಿದನು।
ತ್ತುಂಗ ತುರಂಗಮುಮಂ ನೃಪ
ಪುಂಗಂ ಸೂಕಳಮಿದೆಂದು ಸೆಡೆದನೆ ಮನದೊಳ್ ॥ [೪]

ಕಾಲಿನ ಉಂಗುಷ್ಠವನ್ನು (ಹೆಬ್ಬೆರಳನ್ನು) ಅಂಕವಣಿಗೆ, ಕೈ ಬೆರಳನ್ನು ಹೆಗಲಿನ ಸಂಧಿಗೆ ತಂದು ಎತ್ತರದ ಕುದುರೆಯನ್ನು ನೃಪನು ಹತ್ತಿದನು – ಎಂಬರ್ಥದ ನಾಗಚಂದ್ರನ ಈ ಪದ್ಯದಲ್ಲಿ ಅಂಕವಣಿ ಪದಕ್ಕೆ ಕುದುರೆಯ ಮೇಲಿನ ತಡಿ ಎಂಬ ಅರ್ಥವಾಗಲೀ, ಅಲಂಕಾರ ಮಾಡಿದ ಪೀಠವೆಂಬ ಅರ್ಥವಾಗಲೀ ಹೊಂದಿಕೆಯಾಗುವುದಿಲ್ಲ. ಏಕೆಂದರೆ ಎತ್ತರವಾದ ಕುದುರೆಯ ಮೇಲೆ ಹಾಕಿದ ತಡಿಗೆ ನೆಲದ ಮೇಲಿಂದ ಹೇಗೆ ಕಾಲಿನ ಬೆರಳನ್ನು ಇಡುವುದು? ಇದು ಅಸಾಧ್ಯ. ಅಥವಾ ಅಲಂಕಾರ ಗೈದ ಪೀಠ ಇಲ್ಲಿ ಎಲ್ಲಿ ಬರಬೇಕು? ಈಗ ಕೇಶಿರಾಜನು ಕೊಟ್ಟ ಉದಾಹರಣಾ ಪದ್ಯಾರ್ಧವನ್ನು ನೋಡಿ,

ಮರದ ಹರಿಯಣದೊಳುಂಡಂ
ಮರದೊಳ್ ಸಮೆದಂಕವಣಿಯನೇಱಿದಂ [೫]

ಅಂದರೆ ಮರದಲ್ಲಿ ಸಿದ್ಧಪಡಿಸಿದ ತಟ್ಟೆಯಲ್ಲಿ ಊಟಮಾಡಿದ, ಮರದಲ್ಲಿಯೇ ಸಿದ್ಧಪಡಿಸಿದ ಅಂಕವಣಿಯನ್ನು ಹತ್ತಿದ ಎಂದು ಇದರ ಅರ್ಥ. ಇಲ್ಲಿ ಪಂಪಭಾರತದ ನಿಘಂಟಿನಲ್ಲಿ ಹೇಳಿದ ತಡಿ ಎಂಬ ಅರ್ಥ ಹೊಂದುವುದಿಲ್ಲ. ಅಲಂಕಾರದ ಪೀಠವೆಂಬ ಅರ್ಥವೇನೋ ಅನ್ವಯವಾಗುತ್ತದೆಯಾದರೂ ನಾಗಚಂದ್ರನ ಪದ್ಯದಲ್ಲಿ ಅದು ಹೊಂದಿಕೆಯಾಗಲಿಲ್ಲವಲ್ಲಾ! ಒಂದು ಅರ್ಥ ಒಂದು ಕಡೆ ಹೊಂದಿಕೊಂಡು ಇನ್ನೊಂದು ಕಡೆ ಹೊಂದುವುದಿಲ್ಲವೆಂದರೆ ಆಭಾಸವಾಗುವುದಿಲ್ಲವೆ? ಆದುದರಿಂದ ಈ ಎರಡೂ ಅರ್ಥಗಳು ತಪ್ಪಿರಬೇಕು ಮತ್ತು ಸರಿಯಾದ ಅರ್ಥ ಬೇರೊಂದಿರಬೇಕು.

ಕಿಟೆಲ್‌ರವರು ಹೆಚ್ಚು ಕಡಿಮೆ ಇಂಥವೇ ಇನ್ನೆರಡು ಪದಗಳನ್ನು ಕೊಟ್ಟಿದ್ದಾರೆ. ಅಂಕೋಣಿ, ಅಂಗವಡಿ – ಎಂಬುವೇ ಆ ಪದಗಳು. ಅವಕ್ಕೆ Stirrup, ರಿಕಾಪು ಎಂದು ಅರ್ಥವಿದೆ. ಇದೇ ಅರ್ಥವನ್ನು ಈ ಹಿಂದೆ ಉದಾಹರಿಸಿದ ಎರಡು ಪದ್ಯಗಳ ಮತ್ತು ಪಂಪನ ಪದಗಳಿಗೆ ಹೋಲಿಸಿ ನೋಡಿದರೆ ಬಹಳ ಸಮಂಜಸವಾಗಿ ಹೊಂದಿಕೊಳ್ಳುತ್ತದೆ. ವಾಸ್ತವವಾಗಿ ಅಂಕವಣಿ, ಅಂಕವಣೆ, ಅಂಕೋಣಿ, ಅಂಗವಡಿ–ಈ ಎಲ್ಲಾ ಪದಗಳಿಗೂ ಅರ್ಥ ಒಂದೇ. ಕುದುರೆಯನ್ನು ಹತ್ತಲು ಮೊದಲು ಕಾಲಿಟ್ಟು, ಯಾವುದರ ಆಧಾರ ಮತ್ತು ಸಹಾಯದಿಂದ ನಾವು ಕುದುರೆಯ ಬೆನ್ನಿನ ಮೇಲೆ ಕುಳಿತುಕೊಳ್ಳಲು ಸುಲಭವಾಗುತ್ತದೆಯೋ ಆ ಕಬ್ಬಿಣದ ಬಳೆಗೆ ಅಂಕವಣಿಯೆಂದು ಹೆಸರು. ಇದಕ್ಕೆ ರಿಕಾಪು ಎಂಬ ಇನ್ನೊಂದು ಪದವೂ ಇದೆ, ಮತ್ತು ಈ ಪದವೇ ಇಂದು ಪ್ರಚುರದಲ್ಲಿರುವುದು. ಈ ರಿಕಾಪು ಎಂಬುದು

---

೧. ಪಂಪಭಾರತ – ೮–೫೪ ವ.

೨. ಪಂಪಭಾರತ ನಿಘಂಟು – ಪುಟ ೧.

೩. ಕಿಟೆಲ್‌ರವರ ನಿಘಂಟು – ಪುಟ ೧೭.

೪. ಪಂಪರಾಮಾಯಣ (ನಾಗಚಂದ್ರ) ೪–೧೨೦. ಈ ಪದ್ಯದ ಅಂಕವಣಿಗೆ ಎಂಬ ಪದಕ್ಕೆ ಅಂಕವಣಿಗೆ ಎಂಬ ಪಾಠಾಂತರವೂ ಉಂಟು.

೫. ಕೇಶಿರಾಜನ ಶಬ್ದಮಣಿದರ್ಪಣ: ಸಂ: ಆಚಾರ್ಯ ಡಿ. ಎಲ್. ನರಸಿಂಹಾಚಾರ್, ಪುಟ ೨೦೩.

ದೇಶೀಯ ಪದವಲ್ಲ. ಹಿಂದೂಸ್ಥಾನಿಯ ರಿಕಬೀ, ರಿಕಿಬೀ ಎಂಬ ಪದಗಳಿಗೆ ಸಂಬಂಧಪಟ್ಟದ್ದು ರಿಕಾಪು. ಅನ್ಯ ದೇಶೀಯವಾದ ರಿಕಾಪು ಬಂದು ದೇಶೀಯವಾದ ಅಂಕವಣಿ ಯನ್ನು ಓಡಿಸಿತು.

ಅಂಕವಣಿ ಸ್ವಲ್ಪ ಹೆಚ್ಚು ಕಡಿಮೆ ಕುದುರೆ ಲಾಳದ (Horse shoe) ಆಕಾರದಲ್ಲಿದ್ದು ಅದರ ಎರಡು ತುದಿ ಯನ್ನು ಕೂಡಿಸಿಕೊಂಡ ಒಂದು ಅಡ್ಡವೊಳೆಯಿರುತ್ತದೆ. ಆ ಅಡ್ಡವೊಳೆ ಕೆಳಮುಖನಾಗಿ ಬರುವಂತೆ ಕುದುರೆಯ ಬೆನ್ನಿನ ಮೇಲಿಂದ ಸಾಮಾನ್ಯ ಮಟ್ಟಕ್ಕೆ, ಅಂದರೆ ಹೊಟ್ಟೆಯ ಹತ್ತಿರಕ್ಕೆ ಬರುವಂತೆ ತೂಗಿಬಿಟ್ಟಿರುತ್ತಾರೆ. ಕುದುರೆಯನ್ನು ಹತ್ತುವ ಸವಾರ ಲಗಾಮನ್ನು ಕೈಗೆ ತೆಗೆದುಕೊಂಡು ಅನಂತರ ತನ್ನ ಒಂದು ಕಾಲನ್ನು ಈ ಅಂಕವಣಿಯ ಮೇಲಿಟ್ಟು ಕುದುರೆಯ ಬೆನ್ನಿನ ಮೇಲಕ್ಕೆ ನೆಲದಿಂದ ಚಿಮ್ಮಿ ದಂತೆ ನೆಗೆದು ಕುಳಿತುಕೊಳ್ಳುವನು. ಅವನಿಗೆ ಅಂಕವಣಿಯ ಆಧಾರದಿಂದ ಈ ಕೆಲಸ ಅಂದರೆ ಹತ್ತುವ ಕೆಲಸ ಬಹು ಸುಲಭವಾಗುತ್ತದೆ. ಒಂದು ಉಪಮಾನದಿಂದ ಹೇಳುವು ದಾದರೆ ಮಹಡಿ ಹತ್ತಲು ಮೆಟ್ಟಲು ಇದ್ದಂತೆ ಕುದುರೆ ಹತ್ತಲು ಅಂಕವಣಿ ಇರುತ್ತದೆ. ಸವಾರಿ ಮಾಡುವ ಸಮಯ ದಲ್ಲಿ ಕುದುರೆಯ ಮೇಲೆ ಕುಳಿತ ಸವಾರ ತನ್ನ ಕಾಲುಗಳನ್ನು ಅತ್ತ ಇತ್ತ ಇಳಿಬಿಟ್ಟ, ಈ ಅಂಕವಣಿಯ ಮೇಲೆ ಇಟ್ಟು ಕೊಂಡಿರುತ್ತಾನೆ. ಅದರಿಂದ ಕಾಲುಗಳಿಗೂ ಒಂದು ಆಸರೆ ಸಿಕ್ಕಂತೆ ಆಗುತ್ತದೆ.

ಇನ್ನು ಈ ಶಬ್ದದ ಕುಲಗೋತ್ರ ವಿಚಾರ: ಅಂಕವಣಿ ಯೆಂಬುದು ಶುದ್ಧ ದೇಶೀಯ ಪದ. ತಮಿಳಿನಲ್ಲಿ ಅಂಕವಟಿ, ಅಂಗವಡಿ, ಅಂಗಬಡಿ, ಅಂಕಪಟಿ ಎಂದೂ, ತೆಲುಗಿನಲ್ಲಿ ಅಂಕವನ್ನೆ, ಅಂಕವನ್ನಿಯ, ಅಂಕೆಮು ಎಂದೂ; ಮಲೆ ಯಾಳಂನಲ್ಲಿ ಅಂಕವಟಿ, ಅಂಕಪಟಿ ಎಂದೂ; ತುಳು ನಾಡಿನಲ್ಲಿ ಅಂಕೋಲೆ ಎಂದೂ ಜ್ಞಾತಿಪದಗಳಿವೆ.[೬] ಎಮಿನೊ ಮತ್ತು ಬರೋರವರು ಕೊಟ್ಟಿರುವ ಪಟ್ಟಿಯಲ್ಲಿ ಕನ್ನಡದ ಅಂಗವಡಿ, ಅಂಕೋಣಿ ಎಂಬ ಪದಗಳು ಸೇರಿವೆಯೇ ಹೊರತು ಮುಖ್ಯವಾದ ಅಂಕವಣಿ ಎಂಬ ಪದ ಸೇರಿಲ್ಲ. ಅದಕ್ಕೆ ಕಾರಣ ಕಿಟೆಲ್‌ರವರು ಅಂಕವಣಿ ಪದಕ್ಕೆ ಕೊಟ್ಟ ತಪ್ಪು ಅರ್ಥ. ಅವರು ಪ್ರಮಾಣವೆಂದು ಅಂಗೀಕರಿಸಿದ ಕಿಟೆಲ್ ಕೋಶದಲ್ಲೇ ತಪ್ಪಿದ್ದರೆ ಅವರೇನು ಮಾಡಿಯಾರು? ಆದುದರಿಂದ ಪಂಪಭಾರತ ನಿಘಂಟಿನಲ್ಲಿ ಅಂಕವಣಿ ಪದಕ್ಕೆ ಕೊಟ್ಟಿರುವ ಕುದುರೆಯ ಮೇಲಿನ ತಡಿ ಎಂಬ ಅರ್ಥ ತಪ್ಪು, ಅದರ ಬದಲು ರಿಕಾಪು ಎಂಬ ಅರ್ಥಸೂಚಿತವಾಗಬೇಕು. ಹಾಗೆಯೇ ಕಿಟೆಲ್ ಕೋಶದಲ್ಲಿರುವ ಅರ್ಥವೂ ಪಲ್ಲಟವಾಗಿ ರಿಕಾಪು, stirrup ಎಂಬ ಅರ್ಥ ಸೇರಬೇಕು. ಮತ್ತು ದ್ರಾವಿಡ ಭಾಷಾಜ್ಞಾತಿ ಕೋಶದಲ್ಲಿ ಕನ್ನಡದ ಪದಗಳ ಜೊತೆಗೆ ಅಂಕವಣಿ ಪದವೂ ಸೇರಬೇಕು.

ಮುನಿದೀಶಂತವೆಸುಟ್ಟು ಮುಂ ಕರುಣದಿಂದಿತ್ತಂ ಪುನರ್ಜನ್ಮಮಂ
ನಿನಗೆಂದಾದತಿ ಪಾಪಮುಂ ಪಡಣಮುಂ ಪೋಪಂತೆ ಕಾಮಂಗೆ ಮ
ಜ್ಜನಕೆಂದೆತ್ತಿದ ಚಂದ್ರಕಾಂತ ಘಟದೊಳ್ ತಂದಟ್ಟಿಯಿಂ ಪುಷ್ಪವಾ
ಸನೆಗೆಂದಿಕ್ಕಿದ ನೀಳನೀರರುಹಮಂ ಪೋಲ್ದತ್ತು ಕಟ್ಟಿಂದುವಾ ‖ ೭

ಚಂದ್ರೋದಯ ವರ್ಣನೆಯ ಸಂದರ್ಭದಲ್ಲಿ ಬರುವ ಪಂಪನ ಈ ಪದ್ಯದಲ್ಲಿ ಪೌರಾಣಿಕ ಕತೆಯ ಹಿನ್ನೆಲೆ ಮತ್ತು ಉತ್ಪ್ರೇಕ್ಷಾ ಲಂಕಾರದ ಸೊಗಸು ಸಮವಾಗಿ ಸೇರಿದೆ.[೮] ಮೊದಲು ಈಶ್ವರನು ಕೋಪದಿಂದ ಮನ್ಮಥನನ್ನು ಸಂಪೂರ್ಣವಾಗಿ ಸುಟ್ಟು, ತರುವಾಯ ಸಹಾನುಭೂತಿಯಿಂದ ಅವನಿಗೆ ಮರು ಹುಟ್ಟನ್ನು ಕೊಟ್ಟು, ಹಿಂದೆ ಆದ (?) ಅತಿಯಾದ ಪಾಪ ವನ್ನೂ ಪಡಣವನ್ನೂ (?) ಹೋಗುವಂತೆ ಮದನನ ಮಜ್ಜನ ಕ್ಕೆಂದು ಎತ್ತಿದ ಚಂದ್ರಕಾಂತದ ಕೊಡದಲ್ಲಿ ಪ್ರೀತಿಯಿಂದ ತಂದು ಹೂವಿನ ಸುವಾಸನೆಗೆಂದು ಇಟ್ಟ ವಿಸ್ತಾರವಾದ ಕಮಲವೋ ಎಂಬಂತೆ ಚಂದ್ರನೊಳಗಿನ ಕಪ್ಪು ಕಾಣಿಸಿತಂತೆ. ಇಲ್ಲಿ ಪಡಣ ಎಂಬ ಪದಕ್ಕೆ ಪಂಪಭಾರತ ನಿಘಂಟಿನಲ್ಲಿ ಕೇವಲ ಪ್ರಶ್ನಾರ್ಥಕ ಚಿಹ್ನೆ ಹಾಕಿದ್ದಾರೆ.[೯] ಕಿಟೆಲ್ ಕೋಶ ದಲ್ಲಿ ಪಡಣ ಪದವೇ ಇಲ್ಲ. ಆದುದರಿಂದ ಈ ಪದದ ಅರ್ಥ ನಿಷ್ಕರ್ಷೆಗೆ ಒಂದೆರಡು ನೆರವಾಗುವ ಪ್ರಯೋಗಗಳನ್ನು ಗಮನಿಸಬೇಕು. ಪಾರ್ಶ್ವ ಪಂಡಿತನ ಪಾರ್ಶ್ವನಾಥ ಪುರಾಣದ ಒಂದು ಪದ್ಯ –

ಅವನನಪನೀತಿ ಭವನನ
ನವಿವೇಕದೆ ಪೋದ ಪಡಣಮುಂತಲೆ ವಿಡಿವಂ।
ತೆ ಪೊಲಜಿಸಿ ಪೋಪರಿದುಮಿ
ಟ್ಟುವನಜಸಿಯೆಪೋಪತೆಜನನಜುಪುಗುಮುಲ್ತೇ ‖ ೧೦

ಕೆಟ್ಟ ನಡತೆಯ ನಿಕೇತನದಂತೆ ಇರುವ ಅವನನ್ನು ಅಜ್ಞಾನ ದಿಂದ, ಹೋದ ಪಡಣ (?) ವನ್ನು ತಲೆಹಿಡಿಯುವ ಹಾಗೆ

---

೬. A Dravidian Etymological Dictionary; Page 4; No. 34.

೭. ಪಂಪಭಾರತ – ೪-೫೧.

೮. ಪಂಪಭಾರತದ ಈ ಪದ್ಯ ಸೂಕ್ತಿಸುಧಾರ್ಣವದಲ್ಲೂ ಇದೆ. ಪುಟ–೧೭೭.

೯. ಪಂಪಭಾರತ ನಿಘಂಟು – ಪುಟ ೪೪.

೧೦. ಪಾರ್ಶ್ವನಾಥ ಪುರಾಣ – ೮-೪೩; ಮದ್ರಾಸ್ ಮುದ್ರಣ, ಪುಟ ೬೮.

ಹುಡುಕಿಕೊಂಡು ಹೋಗುತ್ತಿರುವರು. ಇದು ಸಾವನ್ನೇ ಹುಡುಕಿಕೊಂಡು ಹೋಗುವ ರೀತಿಯನ್ನು ತಿಳಿಸುವುದಿಲ್ಲವೆ? ಎಂಬುದು ಇಲ್ಲಿನ ಅರ್ಥ. ಇಲ್ಲಿಯೂ ಪಡಣ ಪದದ ಅರ್ಥ ತಿಳಿಯುವುದಿಲ್ಲ. ಸೂಕ್ತಿ ಸುಧಾರ್ಣವದಲ್ಲಿನ ಪದ್ಯವಿದು,

> ಹಡಣಂ ಪೋದತ್ತು ಕುತ್ತಂ ಕೞಿದುದು ಶನಿ
> ಪಿಂಗಿತ್ತು ಗುಹ್ಯಾಂಗದಿಂ ಮು
> ತ್ತೈದೆಗಪ್ಪಿತ್ತೆಂದು ಜನ್ಮಂ ಹಱಿದುದುಱಿದುದೆಂತಾನುಂ
> ಮೇಱಾಳಿಭಂಡಂ
> ಕಡುಭಂಡಂ ಕೂಸಿಗೀಗಳ್ ಬಿಸದದ
> ತಡೆಬಿಟ್ಟತ್ತವಳ್ಗೆಂದದರ್ೂವರ್ಗಳ್
> ನುಡಿವಳ್ ನಿಶ್ಚಿಂತದಿಂ ಕುಂಟಣಿ ನೆರೆಯುವರೊಳ್
> ಸ್ವೇಚ್ಛೆಯಿಂದಂ ನಗುತ್ತಂ ॥ ೧೧

ಪಕಾರವು ಹಕಾರವಾಗಿ ಪರಿವರ್ತನೆಯಾದ ಕಾಲದ ಪದ್ಯವಿದು, ಪಡಣ>ಹಡಣ ಆಗಿದೆ. ಇಲ್ಲಿನ ಪದ್ಯ ಭಾವನೆಯನ್ನು ಪರಿಶೀಲಿಸಿದರೆ ಹಡಣ (<ಪಡಣ) ಪದಕ್ಕೆ ತೊಂದರೆ ಎಂಬ ಅರ್ಥವಿರುವಂತೆ ಭಾಸವಾಗುತ್ತದೆ. ಆಚಾರ್ಯ ಶ್ರೀ ಡಿ. ಎಲ್. ನರಸಿಂಹಾಚಾರ್‌ರವರು ಹಲವು ಪ್ರತಿಗಳ ಆಧಾರದಿಂದ ಆದಷ್ಟೂ ಪರಿಶುದ್ಧವಾಗಿ ಸಿದ್ಧಪಡಿಸಿರುವ ಶಬ್ದಮಣಿದರ್ಪಣದಲ್ಲಿ ಅವರು ಪರಿಶೀಲಿಸಿದ 'ಕ' ಪ್ರತಿಯ ಅಂಚಿನಲ್ಲಿ ಬರೆದಿದ್ದ ಕೆಲವು ಅಪೂರ್ವ ಪದಗಳ ಅರ್ಥವನ್ನು ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದಾರೆ. ಅವುಗಳಲ್ಲಿ ವಾಚ್ಯಲಿಂಗ ವಿಶೇಷ್ಯಾಧೀನಲಿಂಗವಾದುದಕ್ಕೆ ಕೇಶಿರಾಜ ಪ್ರಯೋಗವಾಗಿ ಕೊಟ್ಟಿರುವ "ಹಡಣಂ" ಪದಕ್ಕೆ 'ಕ' ಪ್ರತಿಯಲ್ಲಿ 'ಕಷ್ಟ' ಎಂಬ ಟಿಪ್ಪಣಿಯಿರುವುದು ಗಮನಾರ್ಹವಾಗಿದೆ.೧೨ ಇದನ್ನು ನೋಡಿದ ಮೇಲೆ ನಮ್ಮ ಕಷ್ಟವೂ ಪರಿಹಾರವಾಗುತ್ತದೆ.

ಪಡಣ>ಹಡಣ ಎಂದರೆ ತೊಂದರೆ, ಕಷ್ಟ, ನೋವು ಮತ್ತು ಅವನ್ನು ಅನುಭವಿಸುವ ಭಾವ ಎಂದು ಅರ್ಥ. ಪಡಣ ಎಂಬುದು ದೇಶ್ಯಪದವೆಂದೇ ಸ್ಪಷ್ಟ. ಏಕೆಂದರೆ ಉಳಿದ ಕನ್ನಡದ ಸೋದರ ಭಾಷೆಗಳಲ್ಲಿ ಇದಕ್ಕೆ ಸಮಾನ ಪದಗಳಿವೆ. ತಮಿಳಿನಲ್ಲಿ ಪಟು, ಪಟುತ್ತು, ಪಟುತ್ತಿ ಎಂದೂ ; ಮಲೆಯಾಳಂನಲ್ಲಿ ಪಾಟು ಎಂದೂ ; ತೊದಭಾಷೆಯಲ್ಲಿ ಪೊಟ್, ಪೊರ್ ; ಕೊಡಗು ಮಾತಿನಲ್ಲಿ ಪಡ್, ಪಟ್, ಪಡುವ್ ; ತುಳು ನುಡಿಯಲ್ಲಿ ಪಡೆಯುನಿ, ಪಡೆವುನಿ ; ತೆಲುಗಿನಲ್ಲಿ ಪಡು, ಪಡಚು, ಪಱಚು, ಪಾಟು ಎಂದೂ ಕಷ್ಟ, ತೊಂದರೆ, suffer, suffering, endure ಎಂಬ ಅರ್ಥದಲ್ಲಿ ಇವೆ. ಇದೇ ಅರ್ಥದ ಕನ್ನಡದ ಪಡು, ಪಟ್ಟ, ಪಡಲ್, ಪಾಡು, ಪಾಟು ಎಂಬ ಪದಗಳನ್ನು ಗಮನಿಸಬಹುದು. ಇಂದಿಗೂ ಬಹಳ ಕಷ್ಟವನ್ನು ಅನುಭವಿಸಿದೆ ಎಂಬುದಕ್ಕೆ 'ಬಲು ಪಡುಪಾಟ್ಲು ಬಿದ್ದೆ' ಎಂದು ಗ್ರಾಮ್ಯರು ನುಡಿಯುವರು. ಪಡುಪಾಟಲು ಎಂಬಲ್ಲಿ ಸಮಾನ ಅರ್ಥದ ಎರಡು ಪದಗಳು ಸೇರಿ ಒಂದೇ ಪದವಾಗಿರುವುದು ಕಾಣುತ್ತದೆ. ಆದರೂ ಕಷ್ಟ ಎಂಬುದಕ್ಕೆ ಪಾಡು ಎಂಬ ಪದವೇ ಹೆಚ್ಚು ಬಳಕೆಯಲ್ಲಿರುವುದು. ಬಹಳ ಕಷ್ಟಪಡುವವನು ತನ್ನ ತೊಂದರೆಯನ್ನು 'ನಾಯಿಪಾಡು' ಎಂದು ಹೇಳಿಕೊಳ್ಳುವುದುಂಟು, ಬೇಂದ್ರೆಯವರ

> ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ
> ನೀಡುವೆನು ರಸಿಕ ನಿನಗೆ।

ಎಂಬ ನಿವೇದನೆ ಸುಪ್ರಸಿದ್ಧವಾಗಿದೆ. ಆದುದರಿಂದ ಪಂಪಭಾರತ ನಿಘಂಟಿನಲ್ಲಿ ಪಡಣ ಪದಕ್ಕೆ ಇರುವ ಪ್ರಶ್ನಾರ್ಥಕ ಚಿಹ್ನೆ ತೆಗೆದುಹಾಕಿ ಅದರ ಸ್ಥಾನದಲ್ಲಿ ಕಷ್ಟ, ತೊಂದರೆ ಎಂಬ ಅರ್ಥಸೂಚಿತವಾಗಬೇಕು. ಹಾಗೆಯೇ ಮದ್ರಾಸ್ ವಿಶ್ವವಿದ್ಯಾನಿಲಯದವರು ಕಿಟೆಲ್‌ಕೋಶದ ಪುನರ್‌ಮುದ್ರಣ ಮಾಡಲಿರುವುದರಿಂದ ಅದರಲ್ಲಿ ಪಡಣ ಪದವೂ ಅದರ ಅರ್ಥದೊಡನೆ ಸೇರಬೇಕು. ಅಲ್ಲದೆ ಬರೊ ಮತ್ತು ಎಮಿನೊರವರ ದ್ರಾವಿಡಭಾಷಾ ಜ್ಞಾತಿಕೋಶದ ಪಟ್ಟಿಯಲ್ಲಿ ಕನ್ನಡದ ಪಡಣ>ಹಡಣ ಪದವೂ ಸೇರಬೇಕು.೧೩ ಮತ್ತು ಸೂಕ್ತಿ ಸುಧಾರ್ಣವದ ಆಧಾರದಿಂದ ಪಂಪನ ಪದ್ಯವನ್ನು ಕೊಂಚ ತಿದ್ದಿ ಹೀಗಿಡಬಹುದು,

> ಮುನಿದೀಕಂತವೆಸುಟ್ಟು ಮುಂ ಕರುಣದಿಂದಿತ್ತಂ
> ಪುನರ್‌ಜನ್ಮಮಂ
> ನಿನಗೆಂದಾ[ರತಿ]ಪಾಪಮುಂ ಪಡಣಮುಂ ಪೋಪಂತೆ
> ಕಾಮಂಗೆಮ
> ಜ್ಜನಕೆಂದೆತ್ತಿದ ಚಂದ್ರಕಾಂತ ಘಟ[ದಿಂ]ತಂದಱ್ತಿಯಿಂ
> ಪುಷ್ಪನಾ
> ಸನೆಗೆಂದಿಕ್ಕಿದ ನೀಳನೀರರುಹಮುಂ ಪೋಲ್ದತ್ತು
> ಕಟ್ಟಿಂದುವಾ ॥
>
> *  *  *  *
>
> ತಡಕುಂ ಪಿಟ್ಟೆಯುಮೊತ್ತೆ ಮೆಲ್ಲಡಿಗಳಂ
> ಬಳ್ಕುತ್ತುಮಳ್ಕುತ್ತುಮೋ
> ರಡಿಗೊರ್ವೊರ್ವರ್ಕುಳುತ್ತುಮೇಱುತಿರೆ ಕಂಡಿತಾಗ
> ದಿನ್ನೇಱುಮೆಂ
> ದೊಡನಂದಯ್ವರುಮಂ ನಿಜಾಂಸಯುಗದೊಳ್
> ಪೊತ್ತೆತ್ತಿತಳ್ಕೊಳ್ವಸೀ
> ಱುಡುವಿಂದದ್ಭುತದಾ ಹಿಡಿಂಬ ವನಮುಂ ಪೊಕ್ಕಂ
> ಮರುನ್ನಂದನಂ ॥ ೧೪

ಅರಗಿನ ಮನೆಯ ಅನಾಹುತದಿಂದ ತಪ್ಪಿಸಿಕೊಂಡ ಪಾಂಡವರು ಗೊಂಡಾರಣ್ಯದಲ್ಲಿ ಮಧ್ಯರಾತ್ರಿಯಲ್ಲಿ ನಡೆದುಕೊಂಡು ಹೋಗುವಾಗ ಅವರ ದಾರುಣ ಸ್ಥಿತಿಯನ್ನು ತಿಳಿಸುವ ಪದ್ಯ

---

೧೧. ಸೂಕ್ತಿಸುಧಾರ್ಣವ–೮-೪೫೫, ಪುಟ ೨೧೨.
೧೨. ಪುಟ ೭೪. ಸೂತ್ರ ೯೮ಕ್ಕೆ ಉದಾಹರಣೆ.
೧೩. ಪದಸಂಖ್ಯೆ ೩೯೯೧.
೧೪. ಪಂಪಭಾರತ–೩-೯.

ಏಡು. ನಕ್ಷತ್ರಗಳು ತೋರುವ ಬೆಳಕಿನಲ್ಲಿ ಅವರು ಜಾಗರೂಕರಾಗಿ ಹೋಗುತ್ತಿರುವಾಗ ತಡಕುಂ ಪಿಟ್ಟೆಯುಂ (?) ಅವರ ಮೃದುಪಾದಗಳನ್ನು ಒತ್ತಲು ಅವರು ಬಳುಕುತ್ತಾ, ಅಳುಕುತ್ತಾ ಒಂದೊಂದು ಕಡೆ ಒಮ್ಮೊಮ್ಮೆ ಕುಳಿತುಕೊಂಡು ಏಳುತ್ತಾ ಬರುತ್ತಿರಲು ಭೀಮನು ಹೀಗಾದರೆ ಆಗದೆಂದು ಐದು ಜನರನ್ನೂ ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು ಜೀರುಂಡೆಗಳು ಜೀs ಎಂದು ಧ್ವನಿಗೈಯ್ಯುತ್ತಿದ್ದ ಆ ಹಿಡಿಂಬವನವನ್ನು ಪ್ರವೇಶಿಸಿದನಂತೆ – ಇದು ಪದ್ಯದ ಸಾರಾಂಶ ಮತ್ತು ಸಂನಿವೇಶ.

ಇಲ್ಲಿ ತಡಕುಂ ಮತ್ತು ಪಿಟ್ಟೆ ಎಂಬ ಶಬ್ದಗಳಿಗೆ ಪಂಪಭಾರತ ನಿಘಂಟಿನಲ್ಲಿ ಯಾವ ಅರ್ಥವೂ ಸೂಚಿತವಾಗಿಲ್ಲ, ಕೇವಲ ಪ್ರಶ್ನಾರ್ಥಕ ಚಿಹ್ನೆ ಇದೆ.[೧೫] ತಡಕು ಎಂಬ ಪದಕ್ಕೆ ಕಡಕು ಎಂಬ ಪಾಠಾಂತರವಿದೆ. ಕಡಕು ಎಂದರೆ ಚೆನ್ನು, ಸುಂದರ ಎಂದರ್ಥ. ಮೇಲಿನ ಪದ್ಯದ ಸಂನಿವೇಶಕ್ಕೆ ಈ ಅರ್ಥ ಹೊಂದಿಕೆಯಾಗುವುದಿಲ್ಲ. ಆದುದರಿಂದ ತಡಕು ಪದವೇ ಸರಿಯಾಗಿರಬೇಕು. ತಡಕು ಎಂಬ ಪದ ಹುಡುಕಿದರೆ ಅಷ್ಟೇನೂ ಅಪರೂಪವಾದ ಪದದಂತೆ ಕಾಣುವುದಿಲ್ಲ. ತಡ, ತಡಪ, ತಡವು, ತಡಹು, ತಡೆ, ತಡಕು ಎಂದರೆ ತಡವರಿಸು, ಹುಡುಕು, ನಿಲ್ಲಿಸು, ಅಡ್ಡಿಮಾಡು, ತಡೆಹಿಡಿ, ತೊಂದರೆಗೊಳಿಸು ಇತ್ಯಾದಿ ಅರ್ಥವಿದೆ. ಈ ಪದದ ಸಂಬಂಧ ಪದಗಳ ಅಸ್ತಿತ್ವವನ್ನು ಇತರ ಸೋದರಭಾಷೆಗಳಲ್ಲೂ ಗುರುತಿಸಬಹುದು. ತಮಿಳಿನಲ್ಲಿ ತಟು, ತಟುಪ್ಪು, ತಟಕ್ಕು, ತಟಂಕು, ತಟಂಕಿ, ತಟುಕ್ಕಲ್ ; ಮಲೆಯಾಳಂನಲ್ಲಿ ತಟಿ, ತಟಿಕ್ಕ, ತಟಿಯುಕ, ತಟಕ್ಕುಕ, ತಟುಕ್ಕಲ್ ; ಕೊಲಾಮಿಯಲ್ಲಿ ತರ್, ತರ್ವ್ ; ತೊದಭಾಷೆಯಲ್ಲಿ ತರ್ಫ್, ತರ್ಥ್, ತರ್, ತಡಗಿಲ್ ; ಕೊಡಗು ನುಡಿಯಲ್ಲಿ ತಡೆ, ತಡಂದ್ ; ತುಳುವಿನಲ್ಲಿ ತಡವು, ತಡೆ ; ಕುರುಖ್ ಭಾಷೆಯಲ್ಲಿ ಟಂಡನಾ ; ತೆಲುಗಿನಲ್ಲಿ ತಡೆಯು–ಎಂದೂ ಇದೇ ಅರ್ಥದಲ್ಲಿ ಇವೆ.[೧೬] ಆದುದರಿಂದ ತಡಂಕು ಎಂದರೆ ತಡವರಿಸುವುದು, ತಡೆಹಿಡಿಯುವುದು ಎಂದು ಅರ್ಥ. ಕತ್ತಲಲ್ಲಿ ನಡೆಯುವಾಗ ಪಾಂಡವರು ದಾರಿ ಸರಿಯಾಗಿ ಕಾಣದೆ ತಡವರಿಸಿಕೊಂಡು ನಿಧಾನವಾಗಿ ಹುಡುಕಿಕೊಂಡು ಹೋಗುತ್ತಿದ್ದರು. ಹೀಗೆ ಮಾಡುತ್ತಿದ್ದುದರಿಂದ ಹೆಜ್ಜೆ ಸರಿಯಾಗಿ ಇಡಲು ಆಗದೆ ಪಾದಗಳಿಗೆ ನೋವು ಆಗುತ್ತಿತ್ತು, ಸುಖಪ್ರಯಾಣಕ್ಕೆ ಅಡ್ಡಿಯಾಗುತ್ತಿತ್ತು.

ಇನ್ನು ಪಿಟ್ಟೆ ಎಂಬ ಪದ. ಪಿಟ್ಟೆ ಎಂದರೆ ಹಿಟ್ಟು (flour) ಎಂದರ್ಥ, ಅದು ಸಂಸ್ಕೃತ ಪಿಷ್ಟಪದದ ತದ್ಭವ. ಆದರೆ ಇಲ್ಲಿ ಆ ಅರ್ಥ ಅನ್ವಯವಾಗುವುದಿಲ್ಲ. ಪಂಪಭಾರತದ 'ಘ' ಪ್ರತಿಯಲ್ಲಿ ಪೆಟ್ಟೆ ಎಂಬ ಪದವಿದೆ. ಘ–ಪ್ರತಿ ಆರಾದ ಪ್ರತಿ ಮತ್ತು ಇದ್ದುದರಲ್ಲಿ ಪ್ರಾಚೀನವೂ, ನಂಬಲರ್ಹವೂ ಆದ ಪ್ರತಿ. ಆದುದರಿಂದಲೇ ಸಾಮಾನ್ಯವಾಗಿ ಆ ಪ್ರತಿಯ ಪದ ಸ್ವೀಕಾರಾರ್ಹವಾಗಿರುತ್ತದೆ. ಇಲ್ಲಿಯೂ ಪೆಟ್ಟೆ ಎಂಬ ಪದವೇ ಸಮಂಜಸವಾಗಿ ಕಾಣುತ್ತದೆ. ಪೆಟ್ಟೆ ಎಂಬ ಪದದ ಪ್ರಯೋಗ ಕನ್ನಡ ಕಾವ್ಯಗಳಲ್ಲಿ ಅಪರೂಪವೇನೂ ಅಲ್ಲ. ಅತ್ಯಂತ ಹಳೆಯ ಗದ್ಯ ಗ್ರಂಥವಾದ ವಡ್ಡಾರಾಧನೆಯಲ್ಲೇ ಪೆಟ್ಟೆ ಪದ ಸಿಗುತ್ತದೆ.[೧೭] ಪೆಟ್ಟೆ, ಪೆಟ್ಟು, ಪೆಂಟೆ>ಹೆಂಟೆ, ಹೆಂಡೆ ಎಂದರೆ A lump of earth, a clod, ಮಣ್ಣಿನ ಗಟ್ಟಿ ಮುದ್ದೆ ಎಂದು ಅರ್ಥ,[೧೮] ಅಂದರೆ ರಾತ್ರಿಯ ವೇಳೆ ತಾರೆಗಳ ಮಬ್ಬು ಬೆಳಕಿನಲ್ಲಿ ತಡವರಿಸಿಕೊಂಡು (ತಡಂಕಿಯುಂ) ಹೋಗುತ್ತಿದ್ದುದೂ, ಮಣ್ಣಿನ ಹೆಂಟೆಗಳು ಕಾಲಿಗೆ ಚುಚ್ಚುತ್ತಿದ್ದುದರಿಂದಲೂ ಪಾಂಡವರ ಮೃದುಪಾದಗಳು (ಭೀಮನ ಹೊರತಾಗಿ!) ಒತ್ತಿದಂತಾಗಿ ನೋಯುತ್ತಿದ್ದುವು ಎಂದು ಇಲ್ಲಿನ ಅರ್ಥ. ತಡವರಿಸಿಕೊಂಡು ಹೋಗುವುದರಿಂದ ಎಡವಿಕೊಳ್ಳುತ್ತಿದ್ದರೆಂದೂ ಅದರಿಂದ ಕಾಲಿಗೆ ನೋವಾಗುತ್ತಿತ್ತೆಂದೂ ಇಲ್ಲಿನ ಧ್ವನ್ಯಾರ್ಥ. ಹೀಗೆ ಈ ಎರಡೂ ಪದಗಳಿಗೆ ಅರ್ಥ ತಿಳಿದುದರಿಂದ ಪಂಪನ ಇಡೀ ಪದ್ಯದ ಭಾವ ಚೆನ್ನಾಗಿ ವ್ಯಕ್ತವಾಗಿ ಅದರ ಒಟ್ಟಂದ, ಚಾರುತ್ವ ವೆಗ್ಗಳಿಸಿದಂತಾಗುತ್ತದೆ.

ಪೆಟ್ಟೆ ಎಂಬುದೂ ದೇಶೀಯ ಪದವೇ ಆಗಿದ್ದು ಇತರ ಸೋದರಭಾಷೆಗಳಲ್ಲೂ ಇದರ ಸಂಬಂಧ ಪದಗಳನ್ನು ಗುರುತಿಸಬಹುದು. ಉದಾಹರಣೆಗೆ ತುಳು ಭಾಷೆಯಲ್ಲಿ ಹೆಂಟೆ, ಎಂಟೆ ಎಂದೂ ತೆಲುಗಿನಲ್ಲಿ ಪೆಡ್ಡ ಎಂದೂ ಇದೆ. ಆದುದರಿಂದ ಪಂಪಭಾರತದ ಮೇಲಿನ ಪದ್ಯದ ಮೊದಲನೆಯ ಸಾಲು

ತಡಕುಂ ಪೆಟ್ಟೆಯುಮೊತ್ತೆ ಮೆಲ್ಲಡಿಗಳಂ.... .......

ಎಂದು ಆರಂಭವಾಗುವುದು ಸೂಕ್ತವಲ್ಲವೆ? ಪಂಪಭಾರತ ನಿಘಂಟಿನಲ್ಲಿಯೂ ತಡಕು ಪದಕ್ಕೆ ಇರುವ ಪ್ರಶ್ನೆಯ ಬದಲು ಅದರ ಸ್ಥಾನದಲ್ಲಿ ತಡವರಿಸುವುದು – ಎಂದೂ ; ಪಿಟ್ಟೆ ಎಂಬುದು ಪೆಟ್ಟೆ ಎಂದಾಗಿ ಅದಕ್ಕೆ ಹೆಂಟೆ, ಮಣ್ಣಿನ ಗಟ್ಟಿ ಎಂಬ ಅರ್ಥವೂ ಸೂಚಿತವಾಗುವುದು ಉಚಿತವಾಗಿ ಕಾಣುತ್ತದೆ.

ಈ ಸಲಹೆಗಳನ್ನು ವಿದ್ವಾಂಸಲೋಕ ಪರಿಶೀಲಿಸುವುದೆಂದು ಆಶಿಸುತ್ತೇನೆ.

---

೧೫. ಪಂಪಭಾರತ ಕೋಶ–ಪುಟಗಳು ೩೨, ಮತ್ತು ೫೦.
೧೬. ದ್ರಾವಿಡಭಾಷಾ ಜ್ಞಾತಿಕೋಶ, ಪದಸಂಖ್ಯೆ ೨೪೬೦.
೧೭. ಇದನ್ನು ಜ್ಞಾನೋಪಾಸಕದಲ್ಲಿ ನನ್ನ ಸನ್ಮಿತ್ರರಾದ ಟಿ. ವಿ. ವೆಂ. ಶಾಸ್ತ್ರಿಯವರೂ ಸೂಚಿಸಿದ್ದಾರೆ.
೧೮. ಕಿಟೆಲ್ ಕೋಶ – ಪುಟ ೧೦೦೯.

## ಕಾಸರಗೋಡಿನ ಕನ್ನಡ ಮಕ್ಕಳಿಗೆ ಮೈಸೂರು ಸರ್ಕಾರ ಆಶ್ರಯವೀಯಲಿ

ಕನ್ನಡ ನಾಡಿನ ಒಂದು ಭಾಗವೇ ಆಗಿದ್ದು ರಾಜಕೀಯದ ಯಾವುದೋ ಒಂದು ದುರ್ಘಟನೆಯ ಫಲವಾಗಿ ತಾತ್ಕಾಲಿಕವಾಗಿ ಕೇರಳಕ್ಕೆ ಸೇರಿರುವ ಕಾಸರಗೋಡು ತಾಲೂಕಿನ ಎರಡು ಲಕ್ಷ ಕನ್ನಡಿಗರ ಒಲುಮೆಯ ಮಕ್ಕಳಾದ ಸುಮಾರು ೩೦೦ ಮಂದಿ ವಿದ್ಯಾರ್ಥಿಗಳಿಗೆ ಕಾಲೇಜಿಗೆ ಸೇರಲು (ಪಿ. ಯು. ಸಿ.) ಮೈಸೂರು ಸರ್ಕಾರ ಈಗಲೂ ಉದಾರವಾಗಿ ಆಶ್ರಯವೀಯಬೇಕಾಗಿದೆ.

ಕಾಸರಗೋಡು ಕೇರಳಕ್ಕೆ ಸೇರಿದುದು ಕೇವಲ ಆಕಸ್ಮಿಕ ದುರಂತ ಘಟನೆ. ಅಲ್ಲಿನ ಜನ ಕೇರಳಕ್ಕೆ ಸೇರಲು ಬಯಸಿಲ್ಲ. ಕೇರಳ ಸರ್ಕಾರವು ಕಾಸರಗೋಡು ತಮಗೆ ಸೇರಬೇಕೆಂದು ಕೇಂದ್ರವನ್ನು ಕೇಳಿಲ್ಲ. ಆದರೂ ದುರದೃಷ್ಟದ ಘಟನೆಯೊಂದರಿಂದ ಕಾಸರಗೋಡು ಕೇರಳಕ್ಕೆ ಸೇರಿಕೊಂಡಿದೆ. ಶೇಕಡ ೯೫ ಭಾಗ ಕಾಸರಗೋಡು ತಾಲೂಕಿನಲ್ಲಿನ ಜನ ಕನ್ನಡಿಗರು. ಅದು ಯಕ್ಷಗಾನಕಲೆಯ ನೆಲೆವೀಡು. ಅವರು ಕನ್ನಡ ಸಾಹಿತ್ಯ ಸಂಸ್ಕೃತಿಗಳ ಉಜ್ವಲಾಭಿಮಾನಿಗಳು. ಅವರು ಪ್ರಾಣ ಹೋದರೂ ಕೇರಳಕ್ಕೆ ಸೇರುವುದಿಲ್ಲವೆಂದು ಪಣತೊಟ್ಟ ವೀರ ಜನ. ೧೯೫೬ ರಿಂದ ಕಾಸರಗೋಡು ಕರ್ನಾಟಕಕ್ಕೆ ಸೇರಬೇಕೆಂದು ಅವರು ಪ್ರಾಂತೀಕರಣ ಸಮಿತಿಯ ಪರವಾಗಿ ಒತ್ತಾಯ ಮಾಡುತ್ತಿದ್ದಾರೆ. ಅವರ ಅಂತಃಕರಣಪೂರ್ವಕವಾದ ಬೇಡಿಕೆ ಕೇರಳ ಸರ್ಕಾರಕ್ಕೂ, ಕೇಂದ್ರ ಸರ್ಕಾರಕ್ಕೂ, ಮೈಸೂರು ಸರ್ಕಾರಕ್ಕೂ ಮುಟ್ಟಿದೆ. ಕರ್ನಾಟಕಕ್ಕೆ ಸೇರುವ ಈ ತಮ್ಮ ನಿರ್ಧಾರವನ್ನು ಅವರು ಎಂತಹ ಕಷ್ಟಸಮಯದಲ್ಲಿಯೂ ಬದಲಾಯಿಸುವುದಿಲ್ಲ. ಈ ತಮ್ಮ ಅಭಿಪ್ರಾಯವನ್ನು ಬೆಂಗಳೂರು, ಮಂಗಳೂರು, ತಿರುವಾಂಕೂರುಗಳಲ್ಲಿ ಪ್ರದರ್ಶನಗಳ ಮೂಲಕ, ಸಭೆಗಳ ಮೂಲಕ, ನಿಯೋಗಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಕಾರಣ ಮೈಸೂರಿಗೂ ಕಾಸರಗೋಡಿಗೂ ಇರುವ ಭಾಷೆ, ಸಾಹಿತ್ಯ ಸಂಸ್ಕೃತಿಗಳ, ಸಾವಿರಾರು ವರ್ಷಗಳ ಐತಿಹಾಸಿಕ, ಭೌಗೋಳಿಕ ಬಾಂಧವ್ಯಗಳ ಫಲವಾಗಿ ಇಂದಲ್ಲ ನಾಳೆ ಕಾಸರಗೋಡು ಕರ್ನಾಟಕಕ್ಕೆ ಸೇರಲೇ ಬೇಕಾಗಿರುವ ನಿಮಿತ್ತವಾಗಿ ಕಾಸರಗೋಡು ಕನ್ನಡ ಮಕ್ಕಳಿಗೆ ಕನ್ನಡಿಗರ ಮಂತ್ರಿಸಂಪುಟದಿಂದ ಕೂಡಿರುವ ಮೈಸೂರು ಸರ್ಕಾರವು ಉದಾರಾಶ್ರಯವನ್ನು ನೀಡಬೇಕೆಂದು ಪ್ರಾರ್ಥಿಸುತ್ತೇವೆ. ಈ ಅಪೂರ್ವ ಸಂದರ್ಭದಲ್ಲಿ ಮೈಸೂರಿನ ಮಾನ್ಯ ಮುಖ್ಯಮಂತ್ರಿಗಳು, ವಿದ್ಯಾಮಂತ್ರಿಗಳು ಶಾಸನಸಭಾ ಮತ್ತು ಪರಿಷತ್ತಿನ ಸದಸ್ಯರು ಕರ್ನಾಟಕದ ಅಭಿಮಾನದಿಂದ ಕನ್ನಡ ಕುಲ ಮತ್ತು ನೆಲಗಳ ಅಭಿಮಾನದಿಂದ ಉದಾರವಾಗಿ ವ್ಯವಹರಿಸುವರೆಂದು ನಂಬುತ್ತೇವೆ.

ತಾ|| ೨೭-೬-೧೯೬೪
ಬೆಂಗಳೂರು

**ಬಿ. ಶಿವಮೂರ್ತಿ ಶಾಸ್ತ್ರೀ**
ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು.

**ಆರ್. ಅನಂತರಾಮನ್**
ಅಧ್ಯಕ್ಷ, ಕನ್ನಡ ಗಡಿನಾಡು ಕ್ರಿಯಾಸಮಿತಿ

## ಕರ್ನಾಟಕದಲ್ಲಿ ಬೆಂಗಳೂರಿನಲ್ಲಿ ರಾಷ್ಟ್ರಪುರುಷರ ನಾಮಕರಣಗಳಾಗಲಿ

ಭಾರತವು ಸ್ವತಂತ್ರವಾಗಿದೆ. ವಿಶಾಲ ಮೈಸೂರು ರಚನೆಯಾಗಿದೆ. ಭಾರತದಲ್ಲಿ ಪ್ರಜಾಪ್ರಭುತ್ವವು ಕ್ರಮಕ್ರಮವಾಗಿ ವಿಕಾಸಗೊಳ್ಳುತ್ತಿದೆ. ಕರ್ನಾಟಕದಲ್ಲಿಯೂ ಮಹತ್ಕಾರ್ಯಗಳು ನಡೆಯುತ್ತಿವೆ. ಕಾರಣ ಇಂತಹ ಜಾಗೃತ ಪರಿಸ್ಥಿತಿಯಲ್ಲಿ ಬೆಂಗಳೂರಿನಲ್ಲಿಯೂ, ಕರ್ನಾಟಕದ ಇತರ ಭಾಗಗಳಲ್ಲಿಯೂ ಪ್ರಮುಖ ಸ್ಥಳಗಳಿಗೆ, ರಾಜವೀಧಿಗಳಿಗೆ ರಾಷ್ಟ್ರಪುರುಷರ ನಾಮಕರಣವಾಗುವುದು ಅಗತ್ಯವೂ ಅನಿವಾರ್ಯವೂ ಆಗಿದೆ. ಆದುದರಿಂದ ಈ ಮುಂದೆ ಸೂಚಿಸಿರುವ ಭಾರತದ ಮತ್ತು ಕರ್ನಾಟಕದ ಮಹಾಪುರುಷರ ಹೆಸರುಗಳನ್ನು ರಾಜ್ಯದ ಸ್ಥಳಗಳಿಗೆ ಅನ್ವಯಿಸಲು ಬೆಂಗಳೂರು ನಗರಸಭೆಯವರು ಮತ್ತು ಮೈಸೂರು ಸರ್ಕಾರದವರು ಕೂಡಲೇ ಕಾರ್ಯಕ್ರಮ ಕೈಗೊಳ್ಳಬೇಕೆಂದು ಸಲಹೆ ಮಾಡುತ್ತೇನೆ.

ಬೆಂಗಳೂರಿನಲ್ಲಿರುವ ಲಾಲ್ ಬಾಗ್ ಎಂಬ ಕೆಂಪು ತೋಟಕ್ಕೆ ಇನ್ನು ಮುಂದೆ ವಿಶ್ವಮಾನವ ಪಂಡಿತ ಜವಾಹರಲಾಲ್ ನೆಹರು ಸ್ಮಾರಕವಾಗಿ ನೆಹರೂ ಲಾಲ್‌ಬಾಗ್ ಅಥವಾ

ನೆಹರೂ ಕೆಂಪುತೋಟ ಎಂದು ಹೆಸರಿಡಬಹುದು. ಹಾಗೆಯೇ ಬೆಂಗಳೂರು ಕಬ್ಬನ್‌ಪಾರ್ಕ್ ಇನ್ನುಮುಂದೆ ರಾಷ್ಟ್ರನಾಯಕ ಸರ್ದಾರ್ ಪಟೇಲರ ಶುಭನಾಮದಿಂದ ಸರ್ದಾರ್‌ಪಾರ್ಕ್ ಅಥವಾ ವಲ್ಲಭಬಾಯ್ ಉಪವನ ಎಂದಾಗಬಹುದು. ಅಂತೆಯೇ ತುಂಗಭದ್ರಾ ಜಲಾಶಯಕ್ಕೆ ದಿವಂಗತ ರಾಜೇಂದ್ರ ಪ್ರಸಾದರ ಪವಿತ್ರನಾಮವನ್ನು ಅಳವಡಿಸಿ ರಾಜೇಂದ್ರ ಜಲಾಶಯವೆಂದು ಕರೆಯಬಹುದು. ನಿರ್ಮಾಣವಾಗುತ್ತಿರುವ ಲಕ್ಕವಳ್ಳಿ ಜಲಾಶಯಕ್ಕೆ ನಮ್ಮ ಮಹಾರಾಜರೂ, ರಾಜ್ಯಪಾಲರೂ ಆಗಿದ್ದು ಕರ್ಣಾಟಕ ರಾಜ್ಯಕ್ಕೆ ಭದ್ರವಾದ ನೆಲಗಟ್ಟನ್ನು ಹಾಕಿದ ಶ್ರೀ ಜಯಚಾಮರಾಜರ ಶುಭ ನಾಮವನ್ನು ಅಳವಡಿಸಿ ಜಯಚಾಮರಾಜ ಜಲಾಶಯ ಎಂದು ಹೆಸರಿಡಬಹುದು. ಬೆಂಗಳೂರು ನಗರದ ರಾಜವೀಧಿಗಳಿಗೆ ಕರ್ಣಾಟಕದ ಮಹಾಪುರುಷರಾದ ಚಾಲುಕ್ಯವಿಕ್ರಮ, ಇಮ್ಮಡಿ ಪುಲಿಕೇಶಿ, ಕೃಷ್ಣದೇವರಾಯ, ಶಿವಪ್ಪನಾಯಕ, ಕೆಳದಿಯ ಚೆನ್ನಮ್ಮಾಜಿ, ಕಿತ್ತೂರು ಚೆನ್ನಮ್ಮ, ಚಿಕ್ಕದೇವರಾಜ ಒಡೆಯರು ಮೊದಲಾದವರ ಶುಭನಾಮವನ್ನು ಕರೆಯಬಹುದು. ಚಾಮರಾಜಪೇಟೆಯಲ್ಲಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಅಕ್ಕಪಕ್ಕದ ಬೀದಿಗಳಿಗೆ ರಾಷ್ಟ್ರಕೂಟ ನೃಪತುಂಗ, ಆದಿಪಂಪ, ಬಸವೇಶ್ವರ, ಅಕ್ಕಮಹಾದೇವಿ, ಕವಿ ರನ್ನ, ಹರೀಶ್ವರ, ರಾಘವಾಂಕ, ಚಾಮರಸ, ಲಕ್ಷ್ಮೀಶ, ಕುಮಾರವ್ಯಾಸ, ಷಡಕ್ಷರದೇವ, ಪುರಂದರದಾಸರು, ಕನಕದಾಸರು, ಸರ್ವಜ್ಞಮೂರ್ತಿ, ಕವಿ ಕಾಳಿದಾಸ, ಸರ್ಪಭೂಷಣ ಶಿವಯೋಗಿ, ನಿಜಗುಣ ಶಿವಯೋಗಿ, ಮುದ್ದಣ ಮೊದಲಾದವರ ಹೆಸರುಗಳನ್ನು ಕರೆಯಬಹುದು.

ಈ ರಾಷ್ಟ್ರೀಯ ನಾಮಕರಣದಿಂದ ನಮ್ಮ ಜನರಲ್ಲಿ ದೇಶಭಾಷಾಭಿಮಾನಗಳು ಬೆಳೆದು ನವಸ್ಫೂರ್ತಿಯುಂಟಾಗಲು ಕಾರಣವಾಗುತ್ತದೆ. ಆದುದರಿಂದ ನಮ್ಮ ಘನಸರ್ಕಾರದವರೂ ಬೆಂಗಳೂರು ನಗರಸಭೆಯವರೂ ಇಂತಹ ಉತ್ತಮ ಬದಲಾವಣೆಗಳನ್ನು ಕೂಡಲೇ ಕೈಗೊಳ್ಳುವರೆಂದು ನಿರೀಕ್ಷಿಸಬಹುದೆ?

ತಾ॥ ೨೬-೬-೧೯೬೪ ಬೆಂಗಳೂರು

**ಬಿ. ಶಿವಮೂರ್ತಿ ಶಾಸ್ತ್ರೀ**
ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು.

---

## ವಚನಶಾಸ್ತ್ರ ಪಿತಾಮಹ ಡಾ॥ ಫ. ಗು. ಹಳಕಟ್ಟಿಯವರು ಕಣ್ಮರೆಯಾದರು

ಕನ್ನಡ ನಾಡು ನುಡಿಗಳ ಉಜ್ವಲಾಭಿಮಾನಿಗಳೂ "ಶಿವಾನುಭವ," "ನವಕರ್ಣಾಟಕ" ಪತ್ರಿಕೆಗಳ ಸಂಪಾದಕರೂ, ಜ್ಞಾನವೃದ್ಧ, ವಯೋವೃದ್ಧ, ತಪೋವೃದ್ಧರೂ, ಎನಿಸಿದ ರಾವ್ ಬಹದ್ದೂರ್ ಡಾ॥ ಫಕೀರಪ್ಪ ಗುರುಬಸಪ್ಪ ಹಳಕಟ್ಟಿಯವರು ಸುಮಾರು ತಮ್ಮ ತೊಂಬತ್ತನೆಯ ವಯಸ್ಸಿನಲ್ಲಿ ದಿನಾಂಕ ೨೬–೬–೬೪ರ ಸಂಜೆ ಸೂರ್ಯನು ಮುಳುಗುವ ಹೊತ್ತಿನಲ್ಲಿ ಕತ್ತಲೆಯು ಲೋಕವನ್ನಾವರಿಸುವ ಸಮಯದಲ್ಲಿ ಬಿಜಾಪುರದ ತಮ್ಮ ಮನೆಯಲ್ಲಿ ತಮ್ಮ ಭೌತಿಕ ದೇಹವನ್ನು ಬಿಟ್ಟು ಪರಶಿವನ ಪಾದವನ್ನು ಸೇರಿದರು ಎಂದು ತಿಳಿಸಲು ದುಃಖವಾಗುತ್ತದೆ.

ಡಾ॥ ಫ. ಗು. ಹಳಕಟ್ಟಿಯವರು ಧಾರವಾಡದಲ್ಲಿ ಹುಟ್ಟಿದವರು. ಅವರ ತಂದೆ ಗುರುಬಸಪ್ಪ ಹಳಕಟ್ಟಿಯವರು ಒಳ್ಳೆಯ ಸಾಹಿತ್ಯ ಪ್ರೇಮಿಗಳು. ಮಗನಿಗೆ ಕನ್ನಡದ ಮತ್ತು ವಚನಶಾಸ್ತ್ರದ ಹುಚ್ಚು ಹಿಡಿಸಿದವರೇ ತಂದೆ ಗುರುಬಸಪ್ಪನವರು. ಡಾ॥ ಹಳಕಟ್ಟಿಯವರು ಬಿ. ಎ. ಎಲ್. ಎಲ್. ಬಿ. ಪದವೀಧರರು. ಮೊದಲು ಬೆಳಗಾಂವಿಯಲ್ಲಿ ವಕೀಲಿ ಪ್ರಾರಂಭಿಸಿ ಕಡೆಗೆ ಬಿಜಾಪುರದಲ್ಲಿ ಹೋಗಿ ನಿಂತರು. ಬಿಜಾಪುರದಲ್ಲಿರುವ ಸಿದ್ದೇಶ್ವರ ಹೈಸ್ಕೂಲ್, ಸಿದ್ದೇಶ್ವರ ಬ್ಯಾಂಕ್, ವಿಜಯ ಕಾಲೇಜ್, ಬರಗಾಲ ಸಹಾಯಕರ ಸಂಸ್ಥೆ ಮೊದಲಾದುವುಗಳ ಸ್ಥಾಪನೆಗೆ ಅವರು ಕಾರಣಕರ್ತರು. ಕೆಲವು ಕಾಲ ಬೊಂಬಾಯಿ ಶಾಸನ ಸಭೆ (೧೯೨೪) ಮತ್ತು ವಿಶ್ವವಿದ್ಯಾನಿಲಯ ಸೆನೆಟ್ ಸಭೆಗಳ ಸದಸ್ಯರಾಗಿದ್ದರು. ಅವರು ಸಮಾಜದ ನಾನಾ ಕ್ಷೇತ್ರಗಳಲ್ಲಿ ಉತ್ಸಾಹದಿಂದ ದುಡಿದರು.

ಹಳಕಟ್ಟಿಯವರಿಗೆ ಕನ್ನಡ, ಸಂಸ್ಕೃತ, ಮರಾಠಿ ಭಾಷೆಗಳಲ್ಲಿ ಒಳ್ಳೆಯ ಪಾಂಡಿತ್ಯ. ೧೯೨೬ರಲ್ಲಿ ಬಳ್ಳಾರಿಯ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿದ್ದರು. ೧೯೨೮ರಲ್ಲಿ ಧಾರವಾಡದಲ್ಲಿ ಕರ್ಣಾಟಕ ಏಕೀಕರಣ ಸಮ್ಮೇಳನದ ಅಧ್ಯಕ್ಷರಾಗಿದ್ದರು. ೧೯೩೩ರಲ್ಲಿ ಅಖಿಲಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರಾಗಿದ್ದರು. ಕನ್ನಡ ಸಾಹಿತ್ಯ ಪರಿಷತ್ತು ಅವರನ್ನು ಕರೆದು ಮಾನಪತ್ರವನ್ನಿತ್ತು ಗೌರವಿಸಿತು.

ಕರ್ನಾಟಕ ವಿಶ್ವವಿದ್ಯಾನಿಲಯ ಅವರಿಗೆ ಡಾಕ್ಟರೇಟ್ ಪದವಿ ಕೊಟ್ಟಿತು.

ಶಿವಶರಣರ ವಚನಗಳನ್ನು ಸಂಗ್ರಹಿಸಿ ಪ್ರಕಟಿಸಿ ಅವರು ಕನ್ನಡ ನಾಡಿಗೆ ಮಹೋಪಕಾರ ಮಾಡಿದರು. ಬಸವೇಶ್ವರ ಚೆನ್ನಬಸವೇಶ್ವರ, ಪ್ರಭುದೇವರು, ಸಿದ್ಧರಾಮೇಶ್ವರ, ಮಾಚಿದೇವ, ಅಕ್ಕಮಹಾದೇವಿ, ಲಿಂಗಮ್ಮ, ಆದಯ್ಯ ಘನಲಿಂಗಿದೇವ ಮೊದಲಾದವರ ವಚನಗಳನ್ನು ಪರಿಷ್ಕರಿಸಿ ಪ್ರಕಟಿಸಿದರು. ವಚನಶಾಸ್ತ್ರಸಾರ ೩ ಭಾಗಗಳನ್ನು, ಶಿವ ಶರಣರ ಚರಿತ್ರೆ ೩ ಭಾಗಗಳನ್ನೂ ಸಂಪಾದಿಸಿ ಪ್ರಕಟಿಸಿದರು. ಹರಿಹರನ ರಗಳೆಗಳು, ರಾಘವಾಂಕನ ಸೋಮನಾಥ ಚರಿತೆ, ಘನಮಠಾರ್ಯರು, ಕರಿಬಸವಸ್ವಾಮಿಗಳು ಮೊದಲಾದವರ ಕೃತಿಗಳನ್ನು ಸಂಗ್ರಹಿಸಿ, ಸಂಪಾದಿಸಿ ಪ್ರಕಟಿಸಿದರು.



ದಿವಂಗತ ಡಾ|| ಫ. ಗು. ಹಳಕಟ್ಟಿಯವರು

ಅರ್ಜುನವಾಡದ ಶಿಲಾಶಾಸನ, ಅಬ್ಬಲೂರು ಶಿಲಾಶಾಸನ ಮೊದಲಾದ ನೂರಾರು ಶಿಲಾಶಾಸನಗಳನ್ನು ಸಂಗ್ರಹಿಸಿ ವಿಮರ್ಶಿಸಿ ಪ್ರಕಟಿಸಿದರು, ಶಿವಾನುಭವ ಎಂಬ ಉತ್ತಮ ವರ್ಗದ ಮಾಸಿಕವನ್ನು ೧೯೨೬ರಲ್ಲಿ ಪ್ರಾರಂಭಿಸಿ ಸುಮಾರು ೩೦ ವರ್ಷ ಕಾಲ ನಡೆಸಿ ಕನ್ನಡಕ್ಕೆ ಮಹೋಪಕಾರ ಮಾಡಿದರು. ನವಕರ್ನಾಟಕ ಎಂಬ ವಾರಪತ್ರಿಕೆಯನ್ನು ನಡಸಿ ಕರ್ನಾಟಕ ಏಕೀಕರಣಕ್ಕೆ ಬೆಂಬಲವಿತ್ತರು.

ಡಾ|| ಆರ್. ಆರ್. ದಿವಾಕರರ 'ವಚನ ಶಾಸ್ತ್ರ ರಹಸ್ಯ ಮತ್ತು ಅಂತರಾತ್ಮನಿಗೆ', ದಿವಂಗತ ಎಂ. ಆರ್. ಶ್ರೀನಿವಾಸ ಮೂರ್ತಿಯವರ 'ವಚನ ಧರ್ಮಸಾರ, ಮತ್ತು ಭಕ್ತಿ ಭಂಡಾರಿ ಬಸವಣ್ಣನವರು' ಪ್ರೊ|| ರಾನಡೆಯವರ 'ಕನ್ನಡ ಸಂತರ ಪರಮಾರ್ಥಮಾರ್ಗ' ಇತ್ಯಾದಿ ಗ್ರಂಥಗಳಿಗೆ ಸ್ಫೂರ್ತಿಕೊಟ್ಟವರು ಡಾ|| ಹಳಕಟ್ಟಿಯವರು ಎಂದು ಹೇಳಬಹುದು. ಡಾ|| ಹಳಕಟ್ಟಿಯವರು ದೈವಭಕ್ತಿ, ದೇಶಭಕ್ತಿ, ಸರ್ವಸಮತೆ, ದಾಕ್ಷಿಣ್ಯಪರತೆ, ವಿನಯ ಶೀಲತೆ, ಮೊದಲಾದ ಸದ್ಗುಣಗಳ ಖಣಿ ಎನಿಸಿದ್ದರು. ಅವರು ಪ್ರಖ್ಯಾತ ವಿದ್ವಾಂಸರಾಗಿದ್ದರು. ಸುಳ್ಳು, ಮೋಸ, ವಂಚನೆ ಎಂದರೆ ಏನೆಂಬುದನ್ನು ಅರಿಯದವರಾಗಿದ್ದರು, ನಾಡಿಗೆ ಅವರು ಮಾಡಿದ ಸೇವೆಯನ್ನು ಮೆಚ್ಚಿದ ಜನ ಅವರನ್ನು 'ವಚನಶಾಸ್ತ್ರ ಪಿತಾಮಹ', ಇಪ್ಪತ್ತನೆಯ ಶತಮಾನದ ಶಿವಶರಣ ಎಂದು ಕರೆಯುತ್ತಿದ್ದರು. ಅವರ ಜೀವನದ ಕಡೆಯ ಕಾಲದಲ್ಲಿ ಅವರ ಆರ್ಥಿಕ ಮುಗ್ಗಟ್ಟಿಗೆ ಒಳಗಾದರು. ಹತ್ತಾರು ವರ್ಷಗಳ ಮೊದಲೇ ಅವರ ಪ್ರಬುದ್ಧನಾದ ಮಗ ಕಣ್ಮರೆಯಾಗಿ ಅವರಿಗೆ ಹೆಚ್ಚಿನ ವ್ಯಥೆಯನ್ನು ಉಂಟುಮಾಡಿತು. ಅವರು ನಡೆಸುತ್ತಿದ್ದ ಹಿತಚಿಂತಕ ಮುದ್ರಣಾಲಯವೇ ಅವರ ಜೀವನಾಧಾರವೆನಿಸಿತು. ಕನ್ನಡ ನಾಡಿನ ಜ್ಞಾನ ಭಂಡಾರದಂತಿದ್ದ ಅವರ ಮನೆಯಲ್ಲಿ ನೂರಾರು ತಾಳೆಯೋಲೆ ಗ್ರಂಥಗಳು, ತಾಮ್ರಶಾಸನಗಳು, ಶಿಲಾಶಾಸನ ಪ್ರತಿಗಳು, ಕೈಫಿಯತ್ತುಗಳು ಮೊದಲಾದ ಐತಿಹಾಸಿಕ ಸಂಪತ್ತು ತುಂಬಿದೆ. ಅದರ ಉಪಯೋಗ ಆಗಬೇಕಾದರೆ ಅದನ್ನು ಕನ್ನಡ ಸಾಹಿತ್ಯ ಪರಿಷತ್ತಿಗೆ ಅಥವಾ ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಅವರ ಮಗ ಶ್ರೀ ಗುರಪ್ಪ ದಾನಮಾಡುವರೆಂದು ನಂಬುತ್ತೇನೆ. ಕನ್ನಡ ನಾಡು ನುಡಿಗಳು ಇರುವವರೆಗೆ ಶ್ರೀ ಹಳಕಟ್ಟಿಯವರ ಹೆಸರು ಉಳಿಯುತ್ತದೆ. ನವ ಕರ್ನಾಟಕವನ್ನು ನಿರ್ಮಿಸಿದ ಶಿಲ್ಪಿಗಳಲ್ಲಿ ಅವರೂ ಒಬ್ಬರು. ಡೆಪ್ಯುಟಿ ಚೆನ್ನಬಸಪ್ಪನವರು, ವೆಂಕಟರಂಗೋಕಟ್ಟಿಯವರು, ಆರ್. ನರಸಿಂಹಾಚಾರ್ಯರು, ಎಂ. ಶಾಮರಾವ್ ಅವರು, ಆಲೂರು ವೆಂಕಟರಾಯರು, ಎಂ. ಗೋವಿಂದ ಪೈ ಅವರು, ರೆ. ಉತ್ತಂಗಿಯವರು, ಪ್ರೊ|| ಬಸವನಾಳರು, ಪ್ರೊ|| ಬಿ. ಎಂ. ಶ್ರೀಕಂಠಯ್ಯನವರು, ಪ್ರೊ|| ವೆಂಕಣ್ಣಯ್ಯನವರು, ಪಂಜೆ ಮಂಗೇಶರಾಯರು – ಮೊದಲಾದ ಹಿರಿಯರ ಸಾಲಿನಲ್ಲಿ ಸೇರ ತಕ್ಕವರು ಡಾ|| ಹಳಕಟ್ಟಿಯವರು. ಕರುಣಾಳುವಾದ ಪರಮೇಶ್ವರನು ಮೃತರ ಆತ್ಮಕ್ಕೆ ಶಾಂತಿಯನ್ನೂ ವಿಯೋಗಿಗಳ ಮನಸ್ಸಿಗೆ ಸಮಾಧಾನವನ್ನೂ ಅನುಗ್ರಹಿಸಲೆಂದು ಹಾರೈಸುತ್ತೇನೆ.

ಬಿ. ಶಿವಮೂರ್ತಿ ಶಾಸ್ತ್ರೀ

---

# ಗ್ರಂಥಾವಲೋಕನ

**ಕಿರಾತಾರ್ಜುನ ಪ್ರಸಂಗ:** ಬರೆದವರು: ಶ್ರೀ ದೇವೇಂದ್ರ ಕುಮಾರ ಹಕಾರಿ, ಎಂ.ಎ., ಅವರು; ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಪೂ. ೧/೮; ಪುಟ: ೭೦; ಬೆಲೆ: ೨೫ ಪೈ.

ಕರ್ನಾಟಕ ವಿಶ್ವವಿದ್ಯಾಲಯದ ಉಪನ್ಯಾಸ ಗ್ರಂಥಮಾಲೆಯಲ್ಲಿ ಈ ಹೊತ್ತಗೆ ಬೆಳಕಿಗೆ ಬಂದಿದೆ. ಇದರಲ್ಲಿ ಪಂಚಮ ವೇದವೆನಿಸಿದ ಮಹಾಭಾರತದ ಒಂದು ಸ್ವಾರಸ್ಯಪ್ರಕರಣವಾದ ಕಿರಾತಾರ್ಜುನೀಯ ವಿಚಾರವು ಪ್ರಸ್ತಾಪಿಸಲ್ಪಟ್ಟಿದೆ. ಸಂಸ್ಕೃತದಲ್ಲಿ ಕಿರಾತಾರ್ಜುನೀಯ ಕಾವ್ಯವು ಪ್ರಖ್ಯಾತವೆನಿಸಿದೆ. ಆದರೆ ಪ್ರಕೃತ ಗ್ರಂಥಕಾರರು ಆದಿಪಂಪ-ಪಂಪ ಭಾರತದಲ್ಲಿ, ಲಕ್ಕಣ್ಣ ದಂಡೇಶ ಶಿವತತ್ವ ಚಿಂತಾಮಣಿಯಲ್ಲಿ, ಕುಮಾರ ವ್ಯಾಸ ಕನ್ನಡ ಭಾರತದಲ್ಲಿ, ವಿರೂಪಾಕ್ಷ ಪಂಡಿತ ಚೆನ್ನಬಸವ ಪುರಾಣದಲ್ಲಿ ಷಡಕ್ಷರದೇವನು ಶಬರಶಂಕರ ವಿಳಾಸದಲ್ಲಿ ಈ ಕಿರಾತಾರ್ಜುನ ಪ್ರಸಂಗವನ್ನು ಹೇಗೆ ನಿರೂಪಿಸಿದ್ದಾರೆಂಬುದನ್ನು ತುಲನಾತ್ಮಕ ದೃಷ್ಟಿಯಿಂದ ವಿವೇಚಿಸಿದ್ದಾರೆ. ವೀರ ಹಾಗೂ ಭಕ್ತಿರಸಪ್ರಧಾನವಾದ ಈ ಕಥಾಪ್ರಸಂಗವು ಪರಮೇಶ್ವರನ ೨೫ ಲೀಲೆಗಳಲ್ಲಿ ಒಂದಾಗಿದೆಯೆಂಬುದೂ ಪಾಂಡವ ಮಧ್ಯಮನಾದ ಅರ್ಜುನನು ಇದರ ಕಥಾನಾಯಕನಾಗಿರುವುದೂ ಈ ಪ್ರಸಂಗದ ಮಹತ್ವವನ್ನು ಹೆಚ್ಚಿಸಿದೆ. ಲೇಖಕರು ವಿಷಯವನ್ನು ಸರಳ ಭಾಷೆಯಲ್ಲಿ ಸ್ವಾರಸ್ಯವಾಗಿ ನಿರೂಪಿಸಿದ್ದಾರೆ. ಸಾಹಿತ್ಯಾಭ್ಯಾಸಿಗಳಿಗೂ ವಿದ್ಯಾರ್ಥಿಗಳಿಗೂ ಇದು ಉಪಯುಕ್ತ ಗ್ರಂಥವಾಗಿದೆ. ಕಾಗದ, ಮುದ್ರಣ, ರಕ್ಷಾಪತ್ರ ಎಲ್ಲವೂ ಚೆನ್ನಾಗಿದೆ.

**ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ತ್ವನಿಷ್ಠೆ:** ಬರೆದವರು: ಶ್ರೀ ಬಿ. ವಿ. ಮಲ್ಲಾಪುರ, ಎಂ.ಎ., ಅವರು; ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಪೂ. ೧/೮; ಪುಟ: ೬೪; ಬೆಲೆ: ೨೫ ಪೈ.

ಕನ್ನಡ ಮಹಾಕವಿಗಳಲ್ಲಿ ಒಬ್ಬನೂ ಷಟ್ಪದಿಗಳಲ್ಲಿ ಕಾವ್ಯ ರಚನೆ ಪ್ರಾರಂಭಿಸಿದವನೂ, ಹರಿಶ್ಚಂದ್ರ ಕಾವ್ಯ, ಸಿದ್ಧರಾಮ ಪುರಾಣ, ಸೋಮನಾಥ ಚರಿತೆ, ವೀರೇಶಚರಿತೆ ಮೊದಲಾದ ಮಹತ್ಕೃತಿಗಳನ್ನು ರಚಿಸಿದವನೂ ಆದ ರಾಘವಾಂಕನ ಕಾವ್ಯಗಳಲ್ಲಿ ಬರುವ ಪ್ರಮುಖ ಪಾತ್ರಗಳ ತತ್ತ್ವನಿಷ್ಠೆ ಕುರಿತು ಇಲ್ಲಿ ನಿರೂಪಿಸಲಾಗಿದೆ. ಹರಿಶ್ಚಂದ್ರ ಕಾವ್ಯದ ವಶಿಷ್ಠ, ಚಂದ್ರಮತಿ, ಹರಿಶ್ಚಂದ್ರ, ಸತ್ಯಕೀರ್ತಿ, ಪಾತ್ರಗಳನ್ನು ವಿಮರ್ಶಿಸಿ ಮುಖ್ಯವಾದ ವಿಶ್ವಾಮಿತ್ರ ಪಾತ್ರವನ್ನು ಬಿಟ್ಟಿರಲು ಕಾರಣ ತಿಳಿಯದು. ಹರಿಶ್ಚಂದ್ರ ಕಾವ್ಯದಲ್ಲಿ ಕೌಶಿಕನೇ (ವಿಶ್ವಾಮಿತ್ರ) ಪ್ರತಿನಾಯಕನೆಂಬಂತಿದೆ. ಸಿದ್ಧರಾಮ ಚಾರಿತ್ರದಲ್ಲಿ ಸಿದ್ಧರಾಮ, ಪ್ರಭುದೇವರನ್ನು ವಿಮರ್ಶಿಸಲಾಗಿದೆ. ಸೋಮನಾಥ ಚರಿತೆಯಲ್ಲಿ ಆದಯ್ಯ-ಪದ್ಮಾವತಿಯರು ವಿಮರ್ಶಿಸಲ್ಪಟ್ಟಿದ್ದಾರೆ. ವೀರೇಶಚರಿತೆಯಲ್ಲಿ ದಾಕ್ಷಾಯಣಿಯನ್ನು ಮಾತ್ರ ವಿಮರ್ಶಿಸಲಾಗಿದೆ. ಈ ಕಾವ್ಯದಲ್ಲಿ ದಕ್ಷ ಮತ್ತು ವೀರಭದ್ರ ಪಾತ್ರಗಳನ್ನು ಮರೆಯಬಾರದಾಗಿತ್ತು. ಒಟ್ಟಿನಲ್ಲಿ ಈ ಗೇಯ ವಾಚನಾರ್ಹವಾಗಿದೆ. ವಿದ್ಯಾರ್ಥಿಗಳು ಇದರ ಲಾಭ ಪಡೆಯಬಹುದು. ಛಲ (ಪುಟ ೨೩) ಜೊತೆ (ಪುಟ ೩೯) ತತ್ವ (ಪುಟ ೬) ಮೊದಲಾದ ಭಾಷಾ ದೋಷಗಳನ್ನು ಮುಂದಿನ ಮುದ್ರಣದಲ್ಲಿ ಸರಿಪಡಿಸುವುದಗತ್ಯ.

ಕಾಗದ, ಮುದ್ರಣ, ರಕ್ಷಾಪತ್ರ, ಚೆನ್ನಾಗಿದೆ.

**ಆನಂದ ಗ್ರಾಮ:** ಲೇಖಿಕೆಯರು: ಶ್ರೀಮತಿ ಪ್ರಭುದಾಸಿ ನಿವೇದಿತಾ ಅವರು; ಪ್ರಕಾಶಕರು: ಪ್ರದೀಪ ಕಾರ್ಯಾಲಯ, ಧಾರವಾಡ; ಪೂ. ೧/೮; ಪುಟ: ೨೦೭; ಬೆಲೆ: ೨ ರೂ.

ಅಮೃತಕುಂಭ, ನಂದಾದೀಪಗಳನ್ನು ಬರೆದವರೇ ಈ ಆನಂದಗ್ರಾಮವನ್ನೂ ರಚಿಸಿದ್ದಾರೆ. ಇದರಲ್ಲಿ ೧. ಆನಂದ ಗ್ರಾಮ, ೨. ಪ್ರೇಮಸಾಮ್ರಾಜ್ಯ, ೩. ಶಾಪವಿಮೋಚನೆ, ೪. ಕಣ್ಣುಮುಚ್ಚಾಟ, ೫. ವಿಶ್ವವೀಣೆ, ೬. ಪದಪದ್ಮ, ೭. ವಿಸ್ಮರಣ, ೮. ಪ್ರೇಮಾನುಭವ ಎಂಬ ಎಂಟು ಕಥೆಗಳಿವೆ. ಇದಕ್ಕೆ ಶ್ರೀ ಬೇಂದ್ರೆಯವರ ಮುನ್ನುಡಿಯಿದೆ. ಪ್ರದೀಪ ಮಾಸಿಕದ ಮೂಲಕ ವಾಚಕರಿಗೆ ಪರಿಚಿತವಾದ ಕಥೆಗಳು ಈಗ ಗ್ರಂಥರೂಪದಿಂದ ಬೆಳಕು ಕಂಡುದು ಒಳ್ಳೆಯದೇ ಆಗಿದೆ.

ಶ್ರೀ ವಿನೀತರಾಮಚಂದ್ರ ಮತ್ತು ಶ್ರೀಮತಿ ಪ್ರಭುದಾಸಿ ನಿವೇದಿತಾ ಇಬ್ಬರೂ ಒಟ್ಟು ಕೂಡಿ ಸಂಸಾರ ನಿರ್ವಹಿಸುವುದರ ಜತೆಗೆ ಸಾಹಿತ್ಯಸೇವೆಯನ್ನೂ ಮಾಡುತ್ತಿರುವುದು ಶ್ಲಾಘ್ಯವಾಗಿದೆ. ಈ ಗ್ರಂಥಸ್ಥ ಕಥೆಗಳು ಸರಳಭಾಷೆಯಲ್ಲಿ ಹೃದಯಂಗಮ ರೀತಿಯಲ್ಲಿ ನಿರೂಪಿತವಾಗಿವೆ. ಓದುಗರಿಗೆ

ಸಂತೋಷವನ್ನೂ ಚಿತ್ತಸಂಸ್ಕಾರವನ್ನೂ ಉಂಟುಮಾಡುತ್ತವೆ. ಕಥೆಗಳು ಓದಲರ್ಹವಾಗಿವೆ. ಕಾರಣ ಪುಸ್ತಕವು ಸ್ವಾಗತಾರ್ಹವಾಗಿದೆ.

—ಶೂಲಪಾಣಿ

**ಉದಯ ವಂದನೆ:** ಲೇಖಕರು: ವಿ. ಹರಿಕೃಷ್ಣ ಮತ್ತು ಲಕ್ಷ್ಮಣ, ಅಳವಂಡಿ; ಪ್ರಕಾಶಕರು: ಕಾವ್ಯಶ್ರೀ ಪ್ರಕಾಶನ, ೬೩೩, ಬುರುಗಲ್ ಮಠದ ರಸ್ತೆ, ವಿಶ್ವೇಶ್ವರಪುರ, ಬೆಂಗಳೂರು-೪; ಪುಟಗಳು: ೪೯; ಬೆಲೆ: ೧-೨೫ ಪೈ.

ಇದೊಂದು ಕವನ ಸಂಕಲನ. ಇದರಲ್ಲಿ ಇಪ್ಪತ್ತೈದು ಆಧುನಿಕ ಕವನಗಳಿವೆ. ಸುಪ್ರಸಿದ್ಧ ಸಾಹಿತಿಗಳೂ, ಹೆಸರಾಂತ ಶಿಕ್ಷಕರೂ ಆದ ಪೂಜ್ಯ ಶ್ರೀ ಎಂ. ವಿ. ಸೀತಾರಾಮಯ್ಯ, ಎಂ.ಎ., ಅವರು ಈ ಇಬ್ಬರು ಲೇಖಕರನ್ನೂ ಹರಸಿದ್ದಾರೆ.

ಉದಯೋನ್ಮುಖ ಕವಿಮಿತ್ರರಾದ ಈ ಇಬ್ಬರೂ ತಮ್ಮ ವಿದ್ಯಾರ್ಥಿ ಕ್ಷೇತ್ರದ ಹಲವು ಸನ್ನಿವೇಶಗಳಲ್ಲಿ ಸ್ಫೂರ್ತಿಯಿಂದ ವ್ಯವಸಾಯವೆಸಗುತ್ತಿರುವುದು ಶುಭ ಸೂಚನೆ. ರಸಿಕ ನಿನಗೆ ವಂದನೆ, ನಮ್ಮೂರ ಚೆನ್ನೀರು ನೀರಿಗೆ ಹೊರಟಾಗ, ನಾನೆ ನರ್ತಕ; ನೀನೆ ನರ್ತಕಿ, ವಿದ್ಯಾರ್ಥಿ ಸಂಸಾರ, ಮೊಗ್ಗಲ್ಲ-ಹೂ!, ಬಾಳಗಡಲು, ಓ ಹಾಡೇ! ನೀ ಹಾಡೇ, ಮಡಿಲು ತುಂಬಿದ ಕಂದ, ಹೃದಯ—ಮೊರೆತ, 'ಒಲುವಿ'ಗೆ ಓಲೆ, ಆತ್ಮಸಂಯಮವಿರಲಿ, ಆಹ್ವಾನ – ಈ ಕವನಗಳು ಉತ್ತಮ ಸಂವಿಧಾನದಿಂದ ಒಡಮೂಡಿವೆ.

(i) ನನ್ನ-ನಿನ್ನಯ ನಾಟ್ಯಜೋಡಿಗೆ ಪ್ರಕೃತಿ ಮಂಟಪವಾಗಿದೆ (ಪು-೮), (ii) ಕಲಿಯು ಕವಿಯಾಗಿಸುವ ಶಾಂತಿ ಹಾಡು! ಭಾವುಕನ ಭಾವನಾ ಸಾಗರ (ಪು-೧೦), (iii) ಜೀವನವೊಂದು ಸಾಗರ; ಮಾನವ ಮೀನು—ಹರಡಿಹುದು ವಿಧಿ ಬಲೆಯನ್ನು ಬೇಟೆಗಾಗಿ....ಎಚ್ಚರಿಕೆ.... (ಪು – ೧೫), (iv) ಜೀವನ ವೀಣೆಗೆ ಹಾಡಿದು ಜೋಡಿ, ಕರುಣೆಯ ಕಂಪನು ನುಡಿಸೀತೆ? (ಪು – ೨೧), (v) ಚಿತೆಯ ತುದಿಯಲಿ ಕಿಡಿಯ ಮೂಕು ತಿ ಪ್ರೇತಮೊಗದಲಿ ಮಿಂಚಿದೆ (ಪು—೨೩), (vi) ಜೀವನದ ಆಸೆಗಳು ಕಿಚ್ಚಿದ್ದು ಉರಿವಾಗ, ವಜ್ರಹೃದಯದ ವೀರ ನೀನಾಗಿರು (ಪು-೩೧), (vii) ಕಾಯ್ದುಕೋ ವಿಶ್ವದಲಿ ನಿನ್ನತನ (ಪು-೩೭)

—ಇವು ಆಣಿಮುತ್ತಿನಂತಹ ನುಡಿಗಳು.

ಆದರೂ ಅಲ್ಲಲ್ಲಿ ಕವನಗಳ ನಡೆ ಕುಂಠಿತವಾಗಿರುವುದೂ, ಅನುಚಿತ ಪದಪ್ರಯೋಗವಾಗಿರುವುದೂ ಕಂಡುಬರುತ್ತದೆ. ಸತತಾಭ್ಯಾಸ ಪ್ರಯತ್ನಶೀಲರಾಗಿ, ದೈವದತ್ತವಾಗಿ ಲಭ್ಯವಾಗಿರುವ ಪ್ರತಿಭೆಯನ್ನು ಯೋಗ್ಯರೀತಿಯಲ್ಲಿ ಹದಮಾಡಿದರೆ ಸಾಕು; ಸುಂದರ ಕೃತಿಗಳು ಹೊರಬರಲಿಕ್ಕೆ ಬೇಕು.

—ಪಂ|| ಕೆ. ಪಿ. ಶಿವಲಿಂಗಯ್ಯ

**ಯೋಗಾರಂಭ:** ಮೂಲಲೇಖಕರು: ಶ್ರೀ ಅರವಿಂದರು; ಅನುವಾದಕರು: ಶ್ರೀ ವೀರೇಂದ್ರ ಸಿಂಪಿ; ಪ್ರಕಾಶಕರು: ಶ್ರೀ ಅರವಿಂದ ಗ್ರಂಥಾಲಯ, ಪೋ. ಚಡಚಣ, ವಿಜಾಪುರ; ಪುಟಗಳು: ೭೪; ಬೆಲೆ: ರೂ. ೧-೦೦.

ಇದು ಶ್ರೀ ಅರವಿಂದರ "Elements of Yoga" ಎಂಬುದರ ಅನುವಾದ. ೧೯೩೩ ರಿಂದ ೧೯೩೬ ರ ವರಿಗಿನ ಅವಧಿಯಲ್ಲಿ ಯೋಗಾರಂಭವನ್ನು ಕುರಿತ ಕೆಲವು ಪ್ರಶ್ನೆಗಳಿಗೆ ಶ್ರೀ ಅರವಿಂದರು ಬರೆದುಕೊಟ್ಟ ಉತ್ತರಗಳಿಂದ ಈ ಪುಸ್ತಕವು ಸಿದ್ಧವಾಗಿದೆ.

ಯೋಗ ಎಂದ ಕೂಡಲೇ ಗಾಬರಿಗೊಂಡು, ಇದು ನಮ್ಮ ಹಲ್ಲಿನ ಕಡಲೆಯಲ್ಲ ಎಂದು ಮೂಗು ಮುರಿಯುವ ಪದ್ಧತಿ ಸಾಮಾನ್ಯ ಜನತೆಯದು. ಆದರೆ "ಯೋಗಾರಂಭವು" ದ್ರಾಕ್ಷಾಪಾಕದಂತೆ ಸುಲಭ—ಪೌಷ್ಟಿಕ. ಸಹಜತೆ, ಸರಳತೆ ಮತ್ತು ಶುದ್ಧತೆಯನ್ನು ಈ ಪುಸ್ತಕದಲ್ಲಿ ನಾವು ಮನಗಾಣಬಹುದು. ಸಾಮಾನ್ಯವಾಗಿ ವಿಚಾರಪರ ಗ್ರಂಥಗಳಲ್ಲಿ ಭಾಷೆಯು ಸರಳವಾಗಿರಬೇಕಾದುದು ಅತ್ಯವಶ್ಯಕ. ಇಲ್ಲಿ ಆ ಮಾರ್ಗವನ್ನು ಸಂಪೂರ್ಣವಾಗಿ ಅನುಸರಿಸಲಾಗಿದೆ. ಪ್ರತಿ ಒಬ್ಬರೂ ಓದಿ ಅರಗಿಸಿಕೊಳ್ಳಬಹುದಾದ ತತ್ವ. ಸುಲಭವೂ ಲಲಿತವೂ ಆದ ನಿರೂಪಣೆ, ಇವುಗಳು ಸದಭಿರುಚಿಯುಳ್ಳ ಓದುಗನಿಗೆ ಈ ಪುಸ್ತಕವನ್ನು ಗ್ರಾಹ್ಯವನ್ನಾಗಿ ಮಾಡಿದೆ.

ಯೋಗದ ಆಹ್ವಾನ ಮತ್ತು ಅರ್ಹತೆ, ಅದರ ತಳಹದಿ ಅಭೀಪ್ಸೆ, ನಿಷ್ಠೆ, ಶ್ರದ್ಧೆ, ಸಮರ್ಪಣೆ, ಪ್ರೇಮ, ಈ ವಿಚಾರಗಳೆಲ್ಲೂ, ಅಂತರಾತ್ಮನ ಬಾಹ್ಯದರ್ಶನ, ಅನುಭವಗಳು ಮತ್ತು ದರ್ಶನಗಳು, ಕಾರ್ಯ, ಪರಿವರ್ತನೆ ತೊಂದರೆಗಳು ಮತ್ತು ಪ್ರಗತಿಯೂ, ಲೈಂಗಿಕ ಪ್ರವೃತ್ತಿ, ಆಹಾರ, ನಿದ್ರೆ ಈ ವಿಷಯಗಳ ಮೇಲೂ ಕೆಲ ವಿವರಣೆಯೊಂದಿಗೆ ಈ ಪುಸ್ತಕವು ಮುಕ್ತಾಯಗೊಳ್ಳುತ್ತದೆ.

ಕನ್ನಡ ಅನುವಾದ ಶುದ್ಧವೂ ಸರಳವೂ ಆಗಿದ್ದರೂ, ಕೆಲ ತಾಂತ್ರಿಕ ಪದಗಳಿಗೆ ಹೆಚ್ಚು ವಿವರಣೆ ಇತ್ತಿದ್ದರೆ ಇನ್ನೂ ಸುಲಭವಾಗಿ ಮನಮುಟ್ಟಬಹುದಾಗಿತ್ತು.

**ಅರುಳು-ಮರುಳು** (ಒಂದು ಪುಟ್ಟ ಏಕಾಂಕ ಪ್ರಹಸನ) : ಲೇಖಕರು: ಶ್ರೀ ಸಿ. ಎಸ್. ವಿ. ಮೂರ್ತಿ; ಪ್ರಕಾಶಕರು: ಜಯಂತಿ ಪ್ರಕಾಶನ, ಬೆಂಗಳೂರು-೪ ; ಪುಟಗಳು : ೩೮; ಬೆಲೆ : ೭೫ ಪೈ.

ವೃದ್ಧಾಪ್ಯದ ಕಾರಣ ಚಂಚಲಚಿತ್ತರಾದ ಹಿರಿಯರೊಬ್ಬರು ಅರುಳುಮರುಳಾಗಿ ಭ್ರಾಮಿಕರಂತೆ ವರ್ತಿಸುವುದು, ಮತ್ತು ಇದರಿಂದ ಆ ಸಂಸಾರದಲ್ಲಿ ಉಂಟಾದ ಒಂದು ಪ್ರಕ್ಷುಬ್ಧ ವಾತಾವರಣ, ಇದೇ ಈ ನಾಟಕದ ವಸ್ತು. ಹಾಸ್ಯಭರಿತ ಸಂಭಾಷಣೆ, ನಯವಾದ, ಅತಿಯಲ್ಲದ ತಿಳಿ ಹಾಸ್ಯ ಸನ್ನಿವೇಶಗಳು ಈ ನಾಟಕವನ್ನು ಮತ್ತೂ ಆಕರ್ಷಕವನ್ನಾಗಿ ಮಾಡಿವೆ.

ಕೇವಲ ಐದು ಪಾತ್ರಗಳನ್ನುಳ್ಳ ಈ ನಾಟಕವು ಸುಮಾರು ಅರ್ಧ ಗಂಟೆ ಹೊತ್ತು ನಮಗೆ ಉತ್ತಮವಾದ ಮನರಂಜನೆಯನ್ನುಂಟುಮಾಡುವುದು ಮತ್ತು ವಿಲಾಸೀ ನಾಟಕ ಮಂಡಲಿಗಳಿಗೆ ಅಭಿನಯಿಸಲು ಯೋಗ್ಯವಾಗಿದೆ. "ನಮ್ಮಳ್ಳಿ ನಾಟ್ಕ" ಎಂಬ ಹಾಸ್ಯಪೂರಿತ ನಾಟಕ ಬರೆದ ಈ ನಾಟಕಕಾರರ ಈ ದ್ವಿತೀಯ ಪ್ರಯತ್ನವು ಸಫಲವಾಗಿದೆ ಎಂದು ಹೇಳಲು ನಮಗೆ ಸಂತೋಷವಾಗುವುದು. ಇವರಿಂದ ಇನ್ನೂ ಅನೇಕ ಹಾಸ್ಯ ನಾಟಕಗಳನ್ನು ಆಶಿಸುತ್ತೇವೆ.

—ಕೆ. ಎಸ್. ಸೂಲಿಬೆಲೆ

**ಗುರುಕರುಣ:** ಲೇಖಕರು: ಸ್ವಾಮಿ ಮಹಾಮನೆ; ಪ್ರಕಾಶಕರು: ಮಹಾಮನೆ ಪ್ರಕಟಣಾಲಯ, ಚಾಮುಂಡಿಪುರಂ, ಮೈಸೂರು-೪ ; ಪುಟಗಳ: : iv + ೩೩ + ೪ ; ಬೆಲೆ : ೭೫ ಪೈ.

ಕ್ರಿ. ಶ. ೧೨ನೆ ಶತಮಾನದಲ್ಲಿ ಕಲ್ಯಾಣದಲ್ಲಿ ಬಸವಣ್ಣನವರಿಂದ ಸ್ಥಾಪಿಸಲ್ಪಟ್ಟ ಅನುಭವ ಮಂಟಪದ ಶ್ರೇಷ್ಠ ವಚನಕಾರರಲ್ಲಿ ಒಬ್ಬನಾದ ಶೂನ್ಯ ಸಿಂಹಾಸನ ಪೀಠವನ್ನೇರಿದವರಲ್ಲಿ ಮೂರನೆಯವನಾದ ಸೊನ್ನಲಿಗೆಯ (ಈಗಿನ ಸೊಲ್ಲಾಪುರ) ಸಿದ್ಧರಾಮನ ಪಾತ್ರದ ಸುತ್ತಲೂ ಹೆಣೆದಿರುವರ ೩೩ ಪುಟಗಳ ರೇಡಿಯೋದಲ್ಲಿ ಪ್ರಸಾರಿತವಾದ ನಾಟಕ.

ಸಿದ್ಧರಾಮ ಕರ್ಮಯೋಗಿ, ಆದರೆ ಅಹಂಕಾರಿ, ಕೋಪಿ; ಈತನ ಕೋಪವನ್ನು ನಿರಸನ ಮಾಡಲು ಪ್ರಭುದೇವನು ಈತನನ್ನು ಕಲ್ಯಾಣಕ್ಕೆ ಕರೆತರುತ್ತಾನೆ. ಅಲ್ಲಿ ಚೆನ್ನಬಸವಣ್ಣ (ಬಸವಣ್ಣನ ಸೋದರಳಿಯ) ನವರಿಂದ ಲಿಂಗದೀಕ್ಷೆಯಾಗುತ್ತದೆ. ಇದೇ ಗುರುವಿನ ಕರುಣೆ. "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣಾ ಮುಕುತಿ" (ಪುರಂದರದಾಸ) ಮತ್ತು "ಮಡಕೆಯ ಮಾಡುವರೆ ಮಣ್ಣೇ ಮೊದಲು, ತೊಡಿಗೆಯ ಮಾಡುವರೆ ಹೊನ್ನೇ ಮೊದಲು. ಶಿವಪಥವನರಿವೊಡೆ ಗುರುಪಥವೇ ಮೊದಲು" ಎಂಬ ಮಾತುಗಳಿಗೆ ವ್ಯಾಖ್ಯಾನದಂತಿದೆ ಈ ನಾಟಕ. ಗುರುವಿನ ಗರಿಮೆಯನ್ನೂ ಎಲ್ಲ ಮತದ ಮಹಾನುಭಾವರೂ ಒಪ್ಪಿಕೊಂಡಿದ್ದಾರೆ. ನಾಟಕದ ಶೀರ್ಷಿಕೆ ಸಾರ್ಥಕವಾಗಿದೆ.

೧೨ನೆಯ ಶತಮಾನದಲ್ಲಿ ಉತ್ತರಾಪಥ ಮತ್ತು ದಕ್ಷಿಣಾಪಥ ಎರಡರಲ್ಲಿಯೂ ಭಕ್ತಿಪಂಥಗಳ ಮತ್ತು ಭಕ್ತಿರಸ ಪ್ರಧಾನವಾದ ಸಾಹಿತ್ಯದ ಬೆಳಸು ಬಂದಿತು. ಇಂಥ ಭಕ್ತಿ ಸಾಹಿತ್ಯ ವಾಟಿಕೆಯಲ್ಲಿ ವಚನ ಸಂಗೀತ ಹಾಡಿದೆ ಕವಿ ಕೋಗಿಲೆ ಸಿದ್ಧರಾಮ.

ಸಂಭಾಷಣೆಯ ಶೈಲಿ ದೇಶ-ಕಾಲ-ಪಾತ್ರೋಚಿತವಾಗಿದೆ. ವಚನ-ವಾಙ್ಮಯದ ಬೆಳಕು ಈ ನಾಟಕದ ರಂಗಸ್ಥಳದ ಮೇಲೆ ಬಿದ್ದಿದೆ.

ಮೂವತ್ತುಮೂರು ಪುಟಗಳ ಹರಹಿನ ಈ ಪುಟ್ಟ ನಾಟಕದಲ್ಲಿ ಹದಿಮೂರು ಪಾತ್ರಗಳಿವೆ. 'ಸಿದ್ಧರಾಮ'ನ ಪಾತ್ರ ಪೋಷಣೆ ಸಾಕಷ್ಟು ನಡೆದಿದೆ. ಇದೇ ನಾಟಕದ ಪ್ರಧಾನ ಪಾತ್ರ. ಉಪದೇಶಾತ್ಮಕ ಪ್ರವೃತ್ತಿಯುಳ್ಳ ಅನೇಕ ಪಾತ್ರ ಅನುಭವಮಂಟಪದಲ್ಲಿ ಬಂದುಹೋಗುತ್ತವೆ. ಪಾತ್ರಗಳ ಸಂಖ್ಯೆ ಹೆಚ್ಚು ಎನ್ನದೆ ವಿಧಿಯಿಲ್ಲ. ಎಲ್ಲ ಸಮಸಾಮಯಿಕ ಪಾತ್ರಗಳನ್ನೂ ರಂಗಸ್ಥಳದ ಮೇಲೆ ತರಲೇಬೇಕೆಂಬುದೇನಿಲ್ಲ. ಬಳಸಿರುವ ವಚನಗಳಲ್ಲಿ ಕೆಲವು ಮನನೀಯವಾಗಿವೆ. ಉದಾ :

(೧) ಕಾಲಿಲ್ಲವೆಂಬರಯ್ಯಾ ಪ್ರಭುದೇವರ, ಸಂಸಾರ ಸೂತಕವ ಮೆಟ್ಟನಾಗಿ. ಕೈಯಿಲ್ಲವೆಂಬರಯ್ಯಾ ಪ್ರಭುದೇವರ, ಪರಧನವ ಕೊಳ್ಳನಾಗಿ. ಕಿವಿಯಿಲ್ಲವೆಂಬರಯ್ಯಾ ಪ್ರಭುದೇವರ, ಅನ್ಯವ ಕೇಳನಾಗಿ....

(೨) ಮರದ ನೆಳಲಲ್ಲಿದ್ದು ತನ್ನ ನೆಳಲನರಸಬಹುದೇ ?

(೩) ಸತ್ವವ ಬಲ್ಲವರು ಸತ್ತಂತಿರಬೇಕು.

(೪) ಹೊಟ್ಟೆಯೊಳಗಿರ್ಪ ಶಿಶು ಮಾತೆಗೆ ಮುದ್ದಿನ ಮೋಹದಪ್ಪಿನ ಸುಖವನಿತ್ತು ಜೋಗುಳವಾಡಿಸಿಕೊಂಬುದೇ?

(೫) ಆಕಾಶವನಡರುವಂಗೆ ಅಟ್ಟಗೋಲ ಹಂಗೇಕೆ? ಸಮುದ್ರವ ದಾಟುವಂಗೆ ಹರಿಗೋಲ ಹಂಗೇಕೆ?

(೬) ಗೋವಿನ ಹೊಟ್ಟೆಯಲಿ ಘೃತವಿದ್ದಡೇನು. ಆ ಗೋವು ದಿನದಿನಕೆ ಪುಷ್ಟಿಯಾಗಬಲ್ಲುದೆ?

—ಕಂ. ಸು. ವೆಂಕಟಾದ್ರಿ ಶರ್ಮಾ

# ಸಾಹಿತ್ಯ ಸಮಾರಾಧನೆಯ ಸಮಾರಂಭ

ಜೂನ್ ದಿನಾಂಕ ೧೨ ರಿಂದ ೧೭ರ ತನಕ ಕನ್ನಡ ಸಾಹಿತ್ಯ ಪರಿಷತ್ತು ಸಾಹಿತ್ಯ ಸಮಾರಾಧನೆ ಎಂಬ ಹೆಸರಿನಲ್ಲಿ ಉಪನ್ಯಾಸ ಮತ್ತು ಕಾವ್ಯವಾಚನಾದಿಗಳನ್ನು ಶ್ರೀ ಕೃಷ್ಣ ರಾಜ ಪರಿಷನ್ಮಂದಿರದಲ್ಲಿ ಏರ್ಪಡಿಸಿತ್ತು. ಈ ಎಲ್ಲ ದಿನ ಗಳಲ್ಲಿಯೂ ಸಾಹಿತ್ಯಾಭಿಮಾನಿಗಳೂ, ಭಾಷಾಭಿಮಾನಿಗಳೂ ಅಪಾರ ಸಂಖ್ಯೆಯಲ್ಲಿ ಸೇರಿದ್ದು ಕಾರ್ಯಕ್ರಮಗಳ ಪರಿಚಯ ಮಾಡಿಕೊಂಡರು.

೧೨ ರಂದು ಈ ಉತ್ಸವವನ್ನು ಪದ್ಮಶ್ರೀ ವಿ. ಕೆ. ಗೋಕಾಕರವರು ಉದ್ಘಾಟಿಸುತ್ತ, ಕನ್ನಡದ ಸುಂದರ ಕಾವ್ಯ ಗಳ ಮೇಲೆ ಈ ರೀತಿಯ ಉಪನ್ಯಾಸಗಳು ಬಹುಮಟ್ಟಿಗೆ ಪ್ರಯೋಜನಕಾರಿಗಳಾಗಿರುತ್ತವೆಯೆಂದೂ ಕನ್ನಡದ ಎಲ್ಲ ಜನ ಎಲ್ಲ ಕಾವ್ಯಗಳನ್ನು ಓದಿ ಕೇಳುವುದರ ಮೂಲಕ ಜನ ಒಂದಾಗಲು ತುಂಬಾ ಸಹಾಯವಾಗುತ್ತದೆಯೆಂದೂ ಈ ಭಾವೈಕ್ಯಸಾಧನೆ ತತ್ಕಾಲದ ಅವಶ್ಯಕತೆಯೆಂದೂ ನುಡಿದರು.

ಆ ದಿನವೇ ಶ್ರೀ ಮರಿಯಪ್ಪಭಟ್ಟರ ಅಧ್ಯಕ್ಷತೆಯಲ್ಲಿ ಪಂಡಿತರತ್ನ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು "ಲಕ್ಷ್ಮೀಶನ ಕಾವ್ಯ ಸೌಂದರ್ಯ"ದ ಮೇಲೆ ಮಾತನಾಡಿದರು. ಗಮಕ ಕೋವಿದ ಶ್ರೀ ಎಂ. ಎಸ್. ಚಂದ್ರಶೇಖರಯ್ಯನವರು ಜೈಮಿನಿಭಾರತದಿಂದ ಕಾವ್ಯವಾಚನ ಮಾಡಿದರು.

೧೩ ರಂದು ಡಾ|| ರಂ. ಶ್ರೀ. ಮುಗಳಿಯವರು ಅಧ್ಯಕ್ಷತೆ ಯನ್ನು ವಹಿಸಿದ್ದರು. ಶ್ರೀ ಟಿ. ಎಸ್. ಚನ್ನಪ್ಪನವರು ರಾಜಶೇಖರ ವಿಳಾಸದ ರಸ ಸ್ಥಾನಗಳನ್ನು ಸ್ವಾರಸ್ಯವಾಗಿ ವಿವರಿಸಿದರು. ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗ ರಾಯರು ತಿರುಕೊಳವಿನಾಚಿಯ ಪ್ರಲಾಪದ ಭಾಗವನ್ನು ಚೆನ್ನಾಗಿ ಓದಿದರು.

೧೪ ರಂದು ರಾವ್‌ಬಹದೂರ್ ಶ್ರೀ ಬಿ. ವೆಂಕಟೇಶಾ ಚಾರ್ಯರು ಅಧ್ಯಕ್ಷತೆ ವಹಿಸಿದ್ದರು. ಪರಿಷತ್ತಿನ ತೀರ ಪ್ರಾರಂಭದಿಂದ ಮೊದಮೊದಲ ಸಮ್ಮೇಳನಗಳನ್ನು ಆಗು ಮಾಡಿಸಿಕೊಟ್ಟು, ಅದರಲ್ಲಿ ಅಭಿಮಾನವಿಟ್ಟಿರುವ ಹಿರಿಯ ರೆಂದು ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಅವರ ಪರಿಚಯ ಮಾಡಿಕೊಟ್ಟರು. ಆಚಾರ್ಯರು ಶಾಸ್ತ್ರ ಮತ್ತು ಗೀತೆಗಳ ಪರಸ್ಪರ ಉಪಯುಕ್ತತೆಯನ್ನು ವಿವರಿಸಿ ಗಹನವಾದ ತತ್ವ ಗಳನ್ನು ಸುಲಭ ರೀತಿಯಲ್ಲಿ ಜನಕ್ಕೆ ಸಾಹಿತ್ಯವಾಗಿ ಒದಗಿಸಿದ ಸಂಪ್ರದಾಯವನ್ನೂ ಅವುಗಳನ್ನು ಇಂಪಾದ ಕಾವ್ಯವಾಚನ ರೀತಿಯಲ್ಲಿ ಜನಕ್ಕೆ ಹೃದಯಂಗಮವಾಗಿರುವ ಸರಳತೆಯನ್ನೂ ಲಾಕ್ಷಣಿಕವಾಗಿ ವರ್ಣಿಸಿದರು. ಡಾ|| ಕೆ. ಎಂ. ಕೃಷ್ಣ ರಾಯರು ಶ್ರೀ ಜಗನ್ನಾಥದಾಸರ ಜೀವನ ಪರಿಚಯವನ್ನೂ ಹರಿಕಥಾಮೃತಸಾರದ ಪ್ರಾತಿನಿಧಿಕ ಪದ್ಯಗಳ ವಿವೇಚನೆ ಯನ್ನೂ ಮಾಡಿಕೊಟ್ಟರು. ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗರಾಯರು ಹರಿಕಥಾಮೃತಸಾರದ ಅನೇಕ ಪದ್ಯ ಗಳನ್ನು ಹಾಡಿ ತೋರಿಸಿದರು.

೧೬ ರಂದು ವಿದ್ಯಾವಿಭೂಷಣ ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳು ಅಧ್ಯಕ್ಷತೆ ವಹಿಸಿ ಕಾವ್ಯಮೀಮಾಂಸೆಯನ್ನು ರಸಿಕರ ಮುಂದೆ ಇಟ್ಟರು. ಶ್ರೀ ಕೆ. ಗೋಪಾಲಕೃಷ್ಣ ರಾಯರು ಕನ್ನಡದಲ್ಲಿ ಸಣ್ಣ ಕತೆ ಮತ್ತು ಕಾದಂಬರಿ ಎಂಬ ವಿಷಯವಾಗಿ ಮಾತನಾಡಿದರು. ಶ್ರೀ ಕೆ. ಎಸ್. ಧರಣೇಂದ್ರಯ್ಯನವರು ಆದಿ ಪಂಪನೇ ಮೊದಲಾಗಿ ಪ್ರಸಿದ್ಧ ಪ್ರಾಚೀನ ಕವಿಗಳಿಂದ ಸೊಗಸಾದ ಪದ್ಯಗಳನ್ನು ಉದಹರಿಸಿ ಕನ್ನಡ ಸಾಹಿತ್ಯದ ಮಾಧುರ್ಯವನ್ನು ಎತ್ತಿ ತೋರಿಸಿದರು. ಅದೇ ದಿನ ನಗರದ ಮೇಯರ್ ಶ್ರೀ ಜಿ. ನಾರಾಯಣ ಅವರ ಸಮ್ಮುಖದಲ್ಲಿ ಜ್ಞಾನಜ್ಯೋತಿ ಕಲಾವಿದರು ಹೆಣ್ಣೊಂದು ಗಂಡು ಎಂಬ ನಾಟಕವನ್ನಾಡಿದರು. ಶ್ರೀ ಕೆ. ಹನು ಮಂತಯ್ಯನವರು ಮತ್ತು ಶ್ರೀ ಸಿದ್ದಲಿಂಗಯ್ಯನವರು ಸಭೆಗೆ ದಯಮಾಡಿಸಿದ್ದರು.

೧೭ ರಂದು ಸಭೆ ಮೈಸೂರು ಶಾಸನ ಸಭೆಯ ಅಧ್ಯಕ್ಷರಾದ ಶ್ರೀ ಬಿ. ವೈಕುಂಠ ಬಾಳಿಗಾ ಅವರ ಅಧ್ಯಕ್ಷತೆಯಲ್ಲಿ ನಡೆ ಯಿತು. ಅಂದಿನ ಉಪನ್ಯಾಸ ವಿಷಯದಂತಹ ಗಹನ ವಿಷಯಗಳನ್ನು ಕೇಳಿ ತಿಳಿದುಕೊಳ್ಳುವ ಅಭ್ಯಾಸ ಬರಬೇ ಕೆಂದು ಅವರು ನುಡಿದರು. ನ್ಯಾಯಮೂರ್ತಿ ಶ್ರೀ ಟಿ. ಎಸ್. ಮಲ್ಲಪ್ಪನವರು ವಚನಶಾಸ್ತ್ರ ಮತ್ತು ಉಪನಿಷತ್ತು ಎಂಬ ವಿಷಯವಾಗಿ ಎರಡರ ಸಾಮರಸ್ಯವನ್ನು ವಿವರಿಸಿದರು. ಶ್ರೀ ಪು. ತಿ. ನರಸಿಂಹಾಚಾರ್ಯರು ನಾಗಚಂದ್ರನ ರಾಮಾಯಣ ದಲ್ಲಿಯ ಕೈಕೇಯಿಯ ಪಾತ್ರ ಕುರಿತು ಮಾತನಾಡಿದರು. ಶ್ರೀ ಕೆ. ಹನುಮಂತಯ್ಯನವರು ಮುಕ್ತಾಯ ಭಾಷಣವನ್ನು ಮಾಡಿದರು. ಪರಿಷತ್ತು ಮಾಡಿರುವ ಕಾರ್ಯಕ್ರಮಗಳನ್ನು ಶ್ಲಾಘಿಸಿ ರಾಮಾಯಣ ಭಾರತಗಳನ್ನು ಮೂಲದಲ್ಲಿರುವ ಪಾತ್ರ ವಿವೇಚನೆ ಭಾವ ಸ್ವಾರಸ್ಯಗಳನ್ನು ಗ್ರಹಿಸಿ ಓದುವುದರ ಸಾಂಸ್ಕೃತಿಕ ಉಪಯುಕ್ತತೆಯನ್ನು ಒತ್ತಿ ಹೇಳಿದರು. ಜನ ಸಾಹಿತ್ಯಕ್ಕೆ ಬೆಂಬಲ ಕೊಡಬೇಕೆಂದು ಸೂಚಿಸಿದರು.

# ಗಡಿನಾಡು ಕನ್ನಡಿಗರ ಹಿತರಕ್ಷಣೆಗೆ ಒತ್ತಾಯ

## ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ವಿಚಾರಗೋಷ್ಠಿ

ಜುಲೈ ದಿನಾಂಕ ೪ರಂದು ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ "ಗಡಿನಾಡಿನ ಕನ್ನಡಿಗರ ಹಿತಚಿಂತನೆ ಮತ್ತು ಕನ್ನಡಿಗರ ರಕ್ಷಣೆ" ಎಂಬ ಬಗೆಗೆ ವಿಚಾರಗೋಷ್ಠಿ ಏರ್ಪಟ್ಟಿತ್ತು. ವಿಧಾನಸಭೆಯ ಸದಸ್ಯರಾದ ಶ್ರೀ ಅಂದಾನಪ್ಪ ದೊಡ್ಡಮೇಟಿಯವರು ಅಧ್ಯಕ್ಷತೆ ವಹಿಸಿದ್ದರು.

ಪರಿಷದಧ್ಯಕ್ಷ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಸಭೆಯನ್ನು ಉದ್ಘಾಟಿಸಿದರು. ಕರ್ಣಾಟಕದ ಕಾಸರಗೋಡು, ತಾಳವಾಡಿ, ಹೊಸೂರು, ಮಡಕಶಿರ, ಆದವಾನಿ, ಆಲೂರು, ರಾಯದುರ್ಗ, ಅಕ್ಕಲಕೋಟೆ, ಜತ್ತ, ಸೊಲ್ಲಾಪುರಗಳಲ್ಲಿರುವ ಜನರ ಪರಿಸ್ಥಿತಿಯನ್ನು ಸ್ವಾರಸ್ಯವಾಗಿ ನಿರೂಪಿಸಿದರು.

ಲೋಕಸಭಾ ಸದಸ್ಯರಾದ ಶ್ರೀ ಎಚ್. ಶ್ರೀರಾಮರೆಡ್ಡಿ ಮಡಕಶಿರಾದ ವಿಚಾರವಾಗಿಯೂ, ಶ್ರೀ ಎ. ಶಿವಮೂರ್ತಿಸ್ವಾಮಿ ಮಹಾರಾಷ್ಟ್ರದಲ್ಲಿರುವ ಕನ್ನಡ ಭಾಗಗಳ ವಿಚಾರವಾಗಿಯೂ, ಶ್ರೀ ಡಿ. ಭಾಸ್ಕರಶೆಟ್ಟಿ ಎಂ. ಎಲ್. ಎ., ಕಾಸರಗೋಡಿನ ಬಗೆಗೂ, ಶ್ರೀ ಎಸ್. ಎಂ. ಕೃಷ್ಣ ಎಂ. ಎಲ್. ಎ., ಗಡಿನಾಡಿನ ಬಗೆಗೂ, ಶ್ರೀ ಆರ್. ಎಸ್. ಹೆಗ್ಗಡೆ ಎಂ.ಎಲ್.ಎ. ಕಾರವಾರದ ಬಗೆಗೂ, ಶ್ರೀ ಎಸ್. ಎಸ್. ಪಾಟೀಲ್ ಬೆಳಗಾವಿ ಜಿಲ್ಲೆ ಬಗೆಗೂ ಭಾಷಣ ಮಾಡಿದರು.

### ನಿರ್ಣಯ

ಭಾಷಣಗಳಾದ ಮೇಲೆ ಶ್ರೀ ಆರ್. ಅನಂತರಾಮನ್ ಅವರು ನಿರ್ಣಯಗಳನ್ನು ಮಂಡಿಸಿದರು. ಅವು ಅಂಗೀಕಾರವಾದವು.

ಕಾರಸಗೋಡು, ತಾಳವಾಡಿ, ಹೊಸೂರು, ಮಡಕಶಿರ, ಆಲೂರು, ಆದವಾನಿ, ರಾಯದುರ್ಗ, ಅಕ್ಕಲಕೋಟೆ, ಜತ್ತ, ದಕ್ಷಿಣ ಸೊಲ್ಲಾಪುರ ಮತ್ತು ಸೊಲ್ಲಾಪುರ ನಗರದ ಜನರು, ಕರ್ನಾಟಕ ರಾಜ್ಯಕ್ಕೆ ಸೇರಬೇಕೆಂದು ಅಪೇಕ್ಷೆಪಡುತ್ತಿರುವುದಾಗಿ, ಈ ನಿರ್ಣಯ ತಿಳಿಸಿತಲ್ಲದೆ "ಪ್ರಜಾಪ್ರಭುತ್ವದ ಮೂಲಸಿದ್ಧಾಂತ ಹಾಗೂ ಭಾಷಾವಾರು ಪ್ರಾಂತ ರಚನೆಯ ಉದ್ದೇಶಕ್ಕೆ ಅನುಗುಣವಾಗಿ ಜನರ ಅಪೇಕ್ಷೆಯನ್ನು ಈಡೇರಿಸಬೇಕು" ಎಂದೂ ಸೂಚಿಸಿತು.

ನೆರೆಯ ರಾಜ್ಯಗಳಲ್ಲಿರುವ ಕನ್ನಡ ಪ್ರದೇಶಗಳ ಜನರ ಶಿಕ್ಷಣ ಕನ್ನಡದಲ್ಲಿ ನಡೆಯಲು ಅಲ್ಲಿಯ ಸರಕಾರಗಳು ಸೂಕ್ತ ಏರ್ಪಾಡು ಮಾಡಬೇಕೆಂದೂ, ಕಾಸರಗೋಡಿನ ಕನ್ನಡ ವಿದ್ಯಾರ್ಥಿಗಳಿಗೆ ಮೈಸೂರಿನ ಕಾಲೇಜುಗಳಲ್ಲಿ ಕಲಿಯಲು ಕಲ್ಪಿಸಿಕೊಟ್ಟಿರುವ ಸೌಲಭ್ಯವನ್ನು ಇತರ ಭಾಗಗಳ ಕನ್ನಡಿಗರಿಗೂ ಅನ್ವಯಿಸಬೇಕೆಂದೂ ವಿಚಾರಗೋಷ್ಠಿ ಕೇಳಿಕೊಂಡಿತು.

ಅಂಗೀಕಾರವಾದ ಇನ್ನೊಂದು ನಿರ್ಣಯದಲ್ಲಿ, "ಶುದ್ಧ ಕನ್ನಡ ಭಾಗಗಳಾದ ಬೆಳಗಾವಿ, ನಿಪ್ಪಾಣಿ, ಕಾರವಾರ, ಮುಂತಾದ ಪ್ರದೇಶಗಳು ಮಹಾರಾಷ್ಟ್ರಕ್ಕೆ ಸೇರಬೇಕೆಂದು ಮಹಾರಾಷ್ಟ್ರೀಯರು ಹೇಳುತ್ತಿರುವುದನ್ನು ತೀವ್ರವಾಗಿ ವಿರೋಧಿಸಿದೆಯಲ್ಲದೆ, ಗಡಿ ಸಮಸ್ಯೆ ಇತ್ಯರ್ಥವಾಗುವತನಕ, "ಆಡಳಿತ ದೃಷ್ಟಿಯಿಂದ ಮೈಸೂರಿಗೆ ಸೇರಬೇಕಾಗಿರುವ ಗೋವ" ಕೇಂದ್ರದ ಅಧೀನದಲ್ಲಿರಬೇಕೆಂದು ಕೇಳಿಕೊಂಡಿತು.

# ಡಾ॥ ಹಳಕಟ್ಟಿಯವರ ನಿಧನ – ಪರಿಷತ್ತಿನಲ್ಲಿ ದುಃಖಸೂಚಕ ಸಭೆ

ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಬಿಜಾಪುರದ ರಾವ್‌ಬಹದೂರ್ ಡಾ॥ ಫ. ಗು. ಹಳಕಟ್ಟಿಯವರ ನಿಧನದ ಸಲುವಾಗಿ ಕನ್ನಡ ಸಾಹಿತ್ಯ ಪರಿಷತ್ತು ಜುಲೈ ದಿನಾಂಕ ೭ ರಂದು ಸಂಜೆ ಸಂತಾಪಸೂಚಕ ಸಭೆಯನ್ನು ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ವ್ಯವಸ್ಥೆ ಮಾಡಿದ್ದಿತು. ಮೈಸೂರು ಪ್ರಧಾನ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿಗಳಾದ ಶ್ರೀ ಎಸ್. ಎಸ್. ಮಳೀಮಠರು ಅಧ್ಯಕ್ಷತೆ ವಹಿಸಿದ್ದರು. ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರೂ, ಶ್ರೀ ಮಂಗಳವೇಡೆ ಶ್ರೀನಿವಾಸರಾಯರೂ ಶ್ರೀ ಅಯ್ಯಣ್ಣದೇವ ಅಂಗಡಿಯವರೂ, ಶ್ರೀ ಎಚ್. ಎಸ್. ರೇಣುಕಾ ಪ್ರಸಾದ್ ಮುಂತಾದವರೂ ದಿವಂಗತರ ಗುಣಗಾನ ಮಾಡಿದರು. ತರುವಾಯ ದುಃಖಸೂಚಕ ನಿರ್ಣಯ ಅಂಗೀಕಾರವಾಯಿತು.

## ನಿರ್ಣಯ

"ಕನ್ನಡ ಸಾಹಿತ್ಯ ಪರಿಷತ್ತಿನ ಸಂಸ್ಥಾಪಕರಲ್ಲಿ ಒಬ್ಬರೂ, ಕನ್ನಡ ನಾಡಿನ ಏಕೀಕರಣಕ್ಕಾಗಿ ಬಹುವಾಗಿ ದುಡಿದವರೂ, ವೀರಶೈವ ಮಹಾಸಭೆಯ ಅಧ್ಯಕ್ಷರೂ, ಬಳ್ಳಾರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರೂ, 'ನವಕರ್ಣಾಟಕ' ಮತ್ತು 'ಶಿವಾನುಭವ' ಸಂಪಾದಕರೂ, ಕನ್ನಡ ನಾಡಿನ ಸುಪ್ರಸಿದ್ಧ ಹಿರಿಯ ವಿದ್ವಾಂಸರೂ ಆಗಿದ್ದ ರಾವ್‌ಬಹದೂರ್ ಡಾ॥ ಫ. ಗು. ಹಳಕಟ್ಟಿಯವರು ೨೯-೬-೧೯೬೪ ರಂದು ಬಿಜಾಪುರದಲ್ಲಿ ಕೈಲಾಸವಾಸಿಗಳಾದುದನ್ನು ಕೇಳಿ ಈ ಸಭೆ ಅಪಾರ ದುಃಖವನ್ನು ಸೂಚಿಸುತ್ತದೆ. ಪರಮಾತ್ಮನು ಅವರ ಆತ್ಮಕ್ಕೆ ಶಾಂತಿಯನ್ನೂ, ಅವರ ಬಂಧುವರ್ಗದವರಿಗೆ ಆ ಶೋಕವನ್ನು ಭರಿಸಲು ಶಕ್ತಿಯನ್ನೂ ಕರುಣಿಸಲೆಂದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ೭-೭-೧೯೬೪ ರಂದು ಸಂಜೆ ನ್ಯಾಯಮೂರ್ತಿ ಎಸ್. ಎಸ್. ಮಳೀಮಠ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸಭೆಯು ಭಗವಂತನನ್ನು ಪ್ರಾರ್ಥಿಸುತ್ತದೆ."

# ಕನ್ನಡದ ಸುದ್ದಿಗಳು

**ಬೆಂಗಳೂರು**

ಆಳಿದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ಆಸ್ಥಾನ ವಿದ್ವಾಂಸರಿಂದ ಅನುವಾದ ಮಾಡಿಸಿ ಮುದ್ರಿಸಿದ ಶ್ರೀಮದ್ರಾಮಾಯಣ ಮಹಾಕಾವ್ಯವನ್ನು ಇನ್ನೊಂದು ವರ್ಷದೊಳಗೆ ಪುನರ್ಮುದ್ರಿಸಿ ಕನ್ನಡ ಜನಕೋಟಿಗೆ ಅರ್ಪಿಸಲು ನಿರ್ಧರಿಸಿರುವುದಾಗಿ, ಪ್ರಕಟನ ಸಮಿತಿಯ ಕಾರ್ಯದರ್ಶಿಗಳಲ್ಲೊಬ್ಬರಾದ ಶ್ರೀ ಜಿ. ನಾರಾಯಣ ಅವರು ತಿಳಿಸಿದ್ದಾರೆ. ಈ ಸಮಿತಿಯು ಮೊದಲು ರಾಮಾಯಣ, ಅನಂತರ ಮಹಾಭಾರತ, ಭಾಗವತ ಮತ್ತು ಇನ್ನಿತರ ಧರ್ಮಗ್ರಂಥಗಳ ಮುದ್ರಣಕಾರ್ಯವನ್ನು ಕೈಗೊಳ್ಳುವುದಾಗಿಯೂ ಹೇಳಿದ್ದಾರೆ. ಈ ಸಮಿತಿಗೆ ಶ್ರೀ ಜಯಚಾಮರಾಜ ಒಡೆಯರು ಮಹಾಪೋಷಕರಾಗಲು ಒಪ್ಪಿದ್ದಾರೆ. ಈ ಸಂದರ್ಭದಲ್ಲಿ ಕಾರ್ಯೋನ್ಮುಖ ಸಮಾರಂಭವು ಜುಲೈ ದಿನಾಂಕ ೮ರಂದು ಸಂಜೆ ನೆರವೇರಿತು. ರಾಜ್ಯಪಾಲರು ನೆರವೇರಿಸಿದರು.

ರಾಜಾಜಿನಗರದಲ್ಲಿರುವ 'ವಾಗ್ವಿಲಾಸ ಪ್ರಕಾಶನ' ಸಂಸ್ಥೆಯವರು ಆಧುನಿಕ ಕಾಲದ ಕವಿಗಳ ಒಂದೊಂದು ಕವನವನ್ನೊಳಗೊಂಡ ಸಂಕಲನವೊಂದನ್ನು ಅವರ ಭಾವಚಿತ್ರ ಮತ್ತು ಸಂಕ್ಷಿಪ್ತ ಪರಿಚಯದೊಂದಿಗೆ ಪ್ರಕಟಿಸಲು ಯೋಜಿಸಿದ್ದಾರೆ. ತಮ್ಮ ಕವನ, ಪರಿಚಯ ಮತ್ತು ಭಾವಚಿತ್ರಗಳನ್ನು ಇದೇ ೧೫ರೊಳಗಾಗಿ ಕಳುಹಿಸಿಕೊಡಬೇಕೆಂದು ವ್ಯವಸ್ಥಾಪಕರು ಕೋರುತ್ತಾರೆ.

ಬೆಂಗಳೂರು ನಗರದಲ್ಲಿ ಸದ್ಯದಲ್ಲೇ ರಾಜ್ಯಮಟ್ಟದ ಲೇಖಕ ಲೇಖಕಿಯರ ವಿಚಾರ ಸಮ್ಮೇಳನವೊಂದನ್ನು ಏರ್ಪಡಿಸಲಾಗುವುದು. ಇದಕ್ಕೊಂದು ಸಮಿತಿಯು ಆಯ್ಕೆಯಾಗಿದೆ. ನಾಡಿನ ಎಲ್ಲ ಲೇಖಕ ಲೇಖಕಿಯರು ತಮ್ಮ ವಿಳಾಸವನ್ನು ಶ್ರೀ ಎಸ್. ರಂಗಸ್ವಾಮಿ, ೧೯೬, ರಾಮೈಂಗಾರ್ ರಸ್ತೆ, ವಿಶ್ವೇಶ್ವರಪುರ, ಬೆಂಗಳೂರು ಇವರಿಗೆ ತಿಳಿಸಬೇಕೆಂದು ಸಂಚಾಲಕರು ಕೋರುತ್ತಾರೆ.

**ದೆಹಲಿ**

ಮೂಲಭೂತ ಮತ್ತು ಸಾಂಸ್ಕೃತಿಕ ಸಾಹಿತ್ಯ ರಚನೆಯ ಸ್ಪರ್ಧೆಯಲ್ಲಿ ಶ್ರೀ ಎಚ್. ಭದ್ರಯ್ಯನವರು ಬರೆದಿರುವ "ಆಕಾಶದ ಆಶ್ಚರ್ಯ" ಮತ್ತು ಶ್ರೀ ವಿ. ಚೆಲುವರಾಜ ಅಯ್ಯಂಗಾರ್ಯರು ಬರೆದಿರುವ "ನಕ್ಷತ್ರಗಳು ಮತ್ತು ಗ್ರಹಗಳು" ಎಂಬ ಕನ್ನಡ ಪುಸ್ತಕಗಳಿಗೆ ತಲಾ ಒಂದು ಸಾವಿರ ರೂಪಾಯಿಗಳ ಬಹುಮಾನ ಕೇಂದ್ರ ಇಲಾಖೆಯಿಂದ ನಿರ್ಧಾರವಾಗಿದೆ.

**ಚನ್ನಪಟ್ಟಣ**

ಜೂನ್ ದಿನಾಂಕ ೧೪ರಂದು ಇಲ್ಲಿನ ಕನ್ನಡ ಮಿತ್ರ ಸಂಘದ ವಾರ್ಷಿಕೋತ್ಸವವು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಂದರ್ಭದಲ್ಲಿ ಕುಮಾರಿ ಲತಾದೇವಿ ಅವರಿಗೆ 'ನಾಟ್ಯಮಯೂರಿ' ಎಂಬ ಪ್ರಶಸ್ತಿಯನ್ನೂ ರಜತ ಫಲಕವನ್ನೂ ಇತ್ತು ಗೌರವಿಸಲಾಯಿತು. ಶ್ರೀ ಎಂ. ರಾಮಮೂರ್ತಿ ಮತ್ತು ಶ್ರೀಮತಿ ಬಿ. ಜಯಮ್ಮನವರು ಭಾಷಣ ಮಾಡಿ, ಕನ್ನಡ ಕಲೆಗೆ ಪ್ರೋತ್ಸಾಹ ನೀಡಬೇಕೆಂದು ಒತ್ತಿ ಹೇಳಿದರು. ಸಂಘದ ಉಪಾಧ್ಯಕ್ಷ ಶ್ರೀ ರಾಜಪ್ಪಗೌಡರು ಸ್ವಾಗತ ಭಾಷಣ ಮಾಡಿದರು. ಸಂಘದ ಸದಸ್ಯರು "ಹೊಸ ಬಾಳು" ಎಂಬ ಕನ್ನಡ ನಾಟಕವನ್ನು ಅಭಿನಯಿಸಿದರು.

**ಶಿವಮೊಗ್ಗ**

ಇಲ್ಲಿನ ಕರ್ನಾಟಕ ಸಂಘದವರು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ॥ ಶ್ರೀಮಾಲಿಯವರನ್ನು ಜುಲೈ ೫ ರಂದು ಬರಮಾಡಿಕೊಂಡು ಸತ್ಕರಿಸಿದರು. ಈ ಸಂದರ್ಭದಲ್ಲಿ ಸಂಘದ ಅಧ್ಯಕ್ಷರು ಉಪಕುಲಪತಿಗಳಲ್ಲಿ ಮನವಿಯೊಂದನ್ನು ಅರ್ಪಿಸಿ ತಮ್ಮ ಸಂಘದವರು ಪ್ರಕಟಿಸಿರುವ 'ಸುಕುಮಾರ ಚರಿತೆ' ಎಂಬ ಪುಸ್ತಕವನ್ನು ಬಿ.ಎ. ತರಗತಿಗೆ ಪಠ್ಯಪುಸ್ತಕವನ್ನಾಗಿ ಮಾಡಬೇಕೆಂದು ಕೋರಿದರು. ಶ್ರೀಮಾಲಿಯವರು ಕರ್ನಾಟಕ ಸಂಘದ ಚಟುವಟಿಕೆಗಳನ್ನು ಶ್ಲಾಘಿಸಿದರು.

# ಸಾಹಿತ್ಯ ಸಮಾರಾಧನೆಯ ಸಮಾರಂಭದ ಚಿತ್ರಗಳು (ಜೂನ್ ೧೨ರಿಂದ ೧೬ರ ವರೆಗೆ)



ಈ ಸಮಾರಂಭದಲ್ಲಿ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಮಾತನಾಡುತ್ತಿದ್ದಾರೆ.



ದಿನಾಂಕ ೧೬ ರಂದು ನಡೆದ ಕಾರ್ಯಕಲಾಪದ ಚಿತ್ರ. ಅಂದು ಅಧ್ಯಕ್ಷತೆ ವಹಿಸಿದ್ದ ಶ್ರೀ ಎಂ.ಪಿ.ಎಲ್. ಶಾಸ್ತ್ರಿಗಳವರು ಭಾಷಣ ಮಾಡುತ್ತಿದ್ದಾರೆ.

ಇಲ್ಲಿ ಮಾಜಿ ಮಂತ್ರಿ ಶ್ರೀ ಸಿದ್ದಲಿಂಗಯ್ಯ ಮತ್ತು ಮಾಜಿ ಮುಖ್ಯಮಂತ್ರಿ ಶ್ರೀ ಹನುಮಂತಯ್ಯ ಇವರನ್ನು ನೋಡಬಹುದು.



೧೬ರ ದಿನದ ಕಾರ್ಯಕ್ರಮದಲ್ಲಿ ಶ್ರೀ ಕೆ. ಗೋಪಾಲಕೃಷ್ಣರಾಯರು ಕನ್ನಡದಲ್ಲಿ ಸಣ್ಣ ಕತೆ ಮತ್ತು ಕಾದಂಬರಿ ಎಂಬ ವಿಷಯವಾಗಿ ಮೂತನಾಡುತ್ತಿರುವ ಚಿತ್ರವಿದು.



ದಿನಾಂಕ ೧೬ರಂದು ನಡೆದ ಕಾರ್ಯಕ್ರಮದಲ್ಲಿ ವಿಧಾನಸಭಾಧ್ಯಕ್ಷರಾದ ಶ್ರೀ ವೈಕುಂಠ ಬಾಳಿಗಾ ಅವರು ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದಲ್ಲಿ ನಿವೃತ್ತ ನ್ಯಾಯಮೂರ್ತಿ ಶ್ರೀ ಟಿ. ಎನ್. ಮಲ್ಲಪ್ಪನವರು ವಚನಶಾಸ್ತ್ರ ಮತ್ತು ಉಪನಿಷತ್ತು ಎಂಬ ವಿಷಯವಾಗಿ ಭಾಷಣ ಮಾಡಿದರು. ಅವರು ಭಾಷಣ ಮಾಡುತ್ತಿರುವುದನ್ನು ಇಲ್ಲಿ ಕಾಣಬಹುದು.






೧೭ ರಂದು ಶ್ರೀ ಪು. ತಿ. ನರಸಿಂಹಾಚಾರ್ಯರು ಭಾಷಣ ಮಾಡುತ್ತಿರುವ ಚಿತ್ರ.



ಕಡೆಯ ದಿನದಂದು ಅಂದರೆ ದಿನಾಂಕ ೧೭ ರಂದು ಸಮಾರಂಭದ ಮುಕ್ತಾಯ ಭಾಷಣವನ್ನು
ಶ್ರೀ ಕೆ. ಹನುಮಂತಯ್ಯನವರು ಮಾಡುತ್ತಿರುವಾಗ ತೆಗೆದ ಚಿತ್ರ.
ಶ್ರೀ ಹನುಮಂತಯ್ಯನವರು ಮಾತನಾಡುತ್ತಿದ್ದಾರೆ.

# ಸಂಪಾದಕೀಯ

## ಬೇಗನೆ ಕಟ್ಟಿರಿ ಗೋಪುರವ

ಯಾವುದಕ್ಕೂ ಕಾಲ ಕೂಡಿಬರಬೇಕು. ಬೆಂಗಳೂರು ಕಾರ್ಪೊರೇಷನ್ನಿನ ಮೇಯರಾಗಿ, ಈಗ ನಗರದ ಪ್ರಥಮ ಪ್ರಜೆಯಾಗಿರುವ ಶ್ರೀವರ್ಮಾ ಜಿ. ನಾರಾಯಣರವರ ಕಾಲಕ್ಕೆ ಬೆಂಗಳೂರು ನಿರ್ಮಾಪಕ ಕೆಂಪೇಗೌಡರ ಸ್ಮಾರಕಕ್ಕೆ ಕಾಲ ಕೂಡಿಬಂದಿದೆಯೆಂದರೆ ಅದು ಉತ್ಪ್ರೇಕ್ಷೆಯಾಗಲಾರದು. ಬಹಳ ಹಿಂದಿನ ಕನಸು ಈಗ ನನಸಾಗುವ ಕಾಲ ಬಂದಿದೆ. ಇದಕ್ಕಾಗಿ ಶ್ರೀವರ್ಮಾ ಜಿ. ನಾರಾಯಣರವರಿಗೂ, ಅವರಿಗೆ ಹಲವಾರು ಸಲಹೆ ನೀಡಿರುವ ಸಮಿತಿಯವರಿಗೂ ನಾವು ಧನ್ಯವಾದಗಳನ್ನು ಮೊದಲು ಅರ್ಪಿಸುತ್ತೇವೆ.

ಮಾಗಡಿ ಕೆಂಪೇಗೌಡರ ಪ್ರತಿಮೆಯನ್ನು ಸ್ಥಾಪಿಸಬೇಕೆಂದು ಪ್ರಪ್ರಥಮವಾಗಿ ಮೇಯರ್ ಆಗಿ ಚುನಾಯಿಸಲ್ಪಟ್ಟ ಶ್ರೀ ಆರ್. ಸುಬ್ಬಣ್ಣನವರ ಕಾಲದಲ್ಲಿ ಆರಂಭಗೊಂಡು, ಅವರು ಹಾಕಿಕೊಟ್ಟ ಮಾರ್ಗವನ್ನು ಅನುಸರಿಸಿ ಈ ವಿಷಯದಲ್ಲಿ ಒಂದು ನಿರ್ಧಾರಕ್ಕೆ ಬಂದು, ಇಂದು ಸಮಿತಿಯನ್ನು ರಚಿಸಿದುದಾಗಿ ಮೇಯರ್ ಅವರು ತಿಳಿಸಿದ್ದಾರೆ. ಎಂಟು ಅಡಿ ಎತ್ತರವುಳ್ಳ ೫೫ ಮಣ ಪಂಚಲೋಹದಿಂದ ಸುಮಾರು ಐವತ್ತು ಸಾವಿರ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಿರುವ ಕೆಂಪೇಗೌಡರ ಪ್ರತಿಮೆಯನ್ನು ಮುಂದಿನ ಆಗಸ್ಟ್ ತಿಂಗಳಿನಲ್ಲಿ ಕಾರ್ಪೊರೇಷನ್ ಮುಂಭಾಗದಲ್ಲಿರುವ ವರ್ತುಳದಲ್ಲಿ ಸ್ಥಾಪಿಸುವ ಕಾರ್ಯ ಶೀಘ್ರಗತಿಯಲ್ಲಿ ಸಾಗುತ್ತಿದೆ. ೧೯೫೫ ಡಿಸೆಂಬರ್ ೩೧ ರಲ್ಲಿ ಆದ ತೀರ್ಮಾನದಂತೆ ಈ ಪ್ರತಿಮೆಯನ್ನು ಮೈಸೂರಿನ ಚಾಮರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟಿನಲ್ಲಿ ತಯಾರಿಸಿರುತ್ತಾರೆ.

ಈ ಮಹಾಪುರುಷನ ಸ್ಮಾರಕವು ಮತ್ತಷ್ಟು ವಿಸ್ತಾರವಾಗಿ ನಗರದ ಜನಜೀವನದಲ್ಲಿ ಬೆರೆತು ಬೆಳಗುವಂತೆ ಮಾಡಲು ಹೆಚ್ಚಿನ ಕೆಲವು ಕಾರ್ಯಕ್ರಮಗಳನ್ನೂ ಕೈಗೊಳ್ಳುವಂತೆ ಕಾರ್ಪೊರೇಷನವರು ನಿರ್ಧರಿಸಿರುವುದಾಗಿ ತಿಳಿದು ಬಂದಿದೆ. ಅದರಲ್ಲಿ ಮುಖ್ಯವಾಗಿ, ಚೈತ್ರ ಶುದ್ಧ ಪೂರ್ಣಿಮೆಯ ದಿನ ಬೆಂಗಳೂರಿನಲ್ಲಿ ನಡೆಯುವ ಕರಗದ ದಿನವನ್ನೇ ಕಾರ್ಪೊರೇಷನ್ ದಿನವಾಗಿಯೂ, ಕೆಂಪೇಗೌಡರ ಪುಣ್ಯದಿನವಾಗಿಯೂ ಆಚರಣೆಗೆ ತರುವುದೊಂದು. ಬೆಂಗಳೂರಿನ ಬಡಾವಣೆಯೊಂದಕ್ಕೆ ಕೆಂಪೇಗೌಡ ಬಡಾವಣೆಯೆಂದು ಹೆಸರಿಡುವುದು ಎರಡನೆಯದು. ಕೆಂಪೇಗೌಡನು ಬೆಂಗಳೂರಿನ ಸುತ್ತು ವಳಯದಲ್ಲಿ ಕಟ್ಟಿಸಿರುವ ಕೆರೆಗಳು, ದೇವಾಲಯಗಳು, ಗೋಪುರಗಳು – ಇವುಗಳನ್ನು ಪ್ರವಾಸೀ ಕೇಂದ್ರಗಳಾಗಿ ಪರಿವರ್ತಿಸುವುದು ಮೂರನೆಯದು. ಕೆಂಪೇಗೌಡರ ಹೆಸರಿನ ಅಂಚೆ ಚೀಟಿಗಳನ್ನು ಪ್ರಕಟಿಸುವುದು ನಾಲ್ಕನೆಯದು. ಹೀಗೆ ಹಲವಾರು ಸೂಕ್ತ ಯೋಜನೆಗಳು ಕೈಗೂಡುವ ಕಾಲ ಬಂದಿದೆ. ಮಹಾಪುರುಷರುಗಳ ಸ್ಮರಣೆಯು – ಅವರು ಯಾರೇ ಆಗಿರಲಿ – ಅದು ಭಾವಿ ಜನಾಂಗಕ್ಕೆ ಮಾರ್ಗದರ್ಶನ ನೀಡುತ್ತದೆ. ಅಂದಮೇಲೆ, ಬೆಂಗಳೂರು ಸ್ಥಾಪಕರಾದ ಕೆಂಪೇಗೌಡರ ಸ್ಮರಣೆ ಬೆಂಗಳೂರಿನ ನಾಗರಿಕರಿಗೆ ನವಚೇತನವನ್ನು ನೀಡುವುದರಲ್ಲಿ ಸಂಶಯವಿಲ್ಲ.

## ರಾಷ್ಟ್ರಪುರುಷರ ನಾಮಾಂಕಿತ

ಬ್ರಿಟಿಷರು ನಮ್ಮನ್ನು ಲಾರ್ಡ್ ಕ್ಲೈವ್ ಕಾಲದಿಂದ ಲಾರ್ಡ್ ಮೌಂಟ್ ಬೇಟನ್ ಕಾಲದವರೆಗೆ ಆಳಿದುದರಿಂದ ನಮಗೆ ಒಂದೆರಡು ರೀತಿಗಳಲ್ಲಿ ಉಪಕಾರವೂ ಆಗಿದೆ. ಅದರಲ್ಲಿ ಮೊದಲನೆಯದು ಒಂದು ರಾಷ್ಟ್ರದ ಆಡಳಿತ ಸೂತ್ರವನ್ನು ಸೆಕ್ರಿಟೇರಿಯೇಟ್ ಕ್ರಮದಲ್ಲಿ ನಡೆಸತಕ್ಕ ವಿಧಾನವನ್ನು ನಮಗೆ ಕಲಿಸಿದವರು ಬ್ರಿಟಿಷರು. ಅದರಂತೆ, ರಾಷ್ಟ್ರಪುರುಷರ ಸ್ಮಾರಕಗಳನ್ನು ಪ್ರತಿಮೆಗಳ ಮೂಲಕ, ಗೋಪುರಗಳ ಮೂಲಕ, ತಾದ್ರೂಪ್ಯವಾಗಿ ಸಕಾಲದಲ್ಲಿ ಸ್ಥಾಪಿಸಿ, ಆ ಮಹಾಪುರುಷರಲ್ಲಿ ತಮಗಿರುವ ಪ್ರೀತ್ಯಭಿಮಾನಗಳನ್ನು ತಾರತಮ್ಯವಿಲ್ಲದೆ ಪ್ರಕಟಿಸಿ, ಮುಂದಿನ ಜನಾಂಗಕ್ಕೆ ಸ್ಫೂರ್ತಿಯನ್ನು ನೀಡುವ ಕಲೆಯನ್ನು ನಮಗೆ ಕಲಿಸಿದವರೂ ಬ್ರಿಟಿಷರೇ. ನಮ್ಮವರೂ ಹಿಂದೆ ಮಹಾಪುರುಷರನ್ನು ಸ್ಮರಿಸುತ್ತಿದ್ದರು, ನಿಜ. ಅದು ಕೇವಲ ಶಾಸನ ಪದ್ಯಮಂಜರಿಗಳಲ್ಲಿ ಅಡಗಿಬಿಡುತ್ತಿತ್ತು. ಮುಂದೆ, ಅದು ಬಾಯಿಂದ ಬಾಯಿಗೆ "ಅಂತೆ ಕಂತೆ" ಗಳಾಗಿ ಬೆಳೆದು ಅಡಗೂಲಜ್ಜಿಯ ಕಥೆಯಾಗಿ ಉಳಿಯುತ್ತಿತ್ತು.

ನಮ್ಮಲ್ಲಿ ಈಗ ರಾಷ್ಟ್ರನಾಯಕರಿಗಾಗಲಿ, ಮಹಾಪುರುಷರಿಗಾಗಲಿ ಕೊರತೆಯಿಲ್ಲ. ಅವರ ನಾಮಾಂಕಿತದಲ್ಲಿ ಶಾಶ್ವತವಾದ ಸ್ಮಾರಕಗಳನ್ನು ತೋಟ ತುಡಿಕೆಗಳ ಮೂಲಕ, ಗುಡಿ ಗೋಪುರಗಳ ಮೂಲಕ, ಬೀದಿಭಂಡಾರಗಳ ಮೂಲಕ, ವಾಪೀ

ಹೊಸ ತಟಾಕಗಳ ಮೂಲಕ ಚಿರಸ್ಥಾಯಿಯಾಗುವಂತೆ ತ್ವರೆಯಿಂದ ಮಾಡುವುದು ನಮ್ಮ ಮುಖಂಡರ ಮತ್ತು ಆಡಳಿತ ಸೂತ್ರವನ್ನು ಹಿಡಿದಿರುವ ಸರ್ಕಾರದವರ ಆದ್ಯ ಕರ್ತವ್ಯವಾಗಿದೆ. ಎಂದಮೇಲೆ, ಕೂಡಲೇ ಜನರಲ್ಲಿ ರಾಷ್ಟ್ರಸೇವೆಯ ಮನೋಭಾವವು ಮೊಳೆಯುವಂತೆ ನಮ್ಮ ರಾಷ್ಟ್ರನಾಯಕರ, ಪುಣ್ಯಪುರುಷರ, ಹೆಸರುಗಳನ್ನು ಬಳಕೆಗೆ ತರಬೇಕಾಗಿದೆ.

### ದಿವಂಗತ ಪಿ. ಜಿ. ಹಳಕಟ್ಟಿಯವರು

ಬಿಜಾಪುರದ ಇತ್ತೀಚಿನ ಇತಿಹಾಸದಲ್ಲಿ ದಿವಂಗತ ಪಿ. ಜಿ. ಹಳಕಟ್ಟಿಯವರ ಹೆಸರು ಹಾಸುಹೊಕ್ಕಾಗಿತ್ತು. ಇಂತಹ ಅನನ್ಯ ಸಾಧಾರಣವಾದ ಪ್ರತಿಭಾವಂತರು ತಮ್ಮ ತೊಂಭತ್ತನೆಯ ವಯಸ್ಸಿನಲ್ಲಿ ೨೭-೬-೧೯೬೪ರ ಸಂಜೆ ಶಿವಸಾಯುಜ್ಯವನ್ನು ಪಡೆದುದು ಕನ್ನಡ ಜನತೆಗೆ ಅಪಾರ ನಷ್ಟವನ್ನುಂಟುಮಾಡಿದೆ. ಕನ್ನಡ ನಾಡಿನ ಜ್ಞಾನಭಂಡಾರವಾಗಿತ್ತು ಇವರ ಮನೆ. ತಾಳೆಯೋಲೆ ಗ್ರಂಥಗಳು, ತಾಮ್ರಶಾಸನಗಳು, ಶಿಲಾಶಾಸನ ಪ್ರತಿಗಳು, ಕೈಫಿಯತ್ತುಗಳು - ಇವರ ಮನೆಯಲ್ಲಿ ಐತಿಹಾಸಿಕ ಸಂಪತ್ತನ್ನು ತುಂಬಿದ್ದುವು. ದಿವಂಗತರು "ಶಿವಾನುಭವ", "ನವಕರ್ಣಾಟಕ" ಪತ್ರಿಕೆಗಳ ಸಂಪಾದಕರಾಗಿದ್ದರು. ಇವರು ಬಿ.ಎ., ಎಲ್‌ಎಲ್.ಬಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಮೊದಲು ಬೆಳಗಾವಿಯಲ್ಲಿ ವಕೀಲಿ ವೃತ್ತಿಯನ್ನು ಪ್ರಾರಂಭಿಸಿ, ಆ ತರುವಾಯ ಬಿಜಾಪುರದಲ್ಲಿ ನೆಲೆಸಿದರು. ಕನ್ನಡ ನಾಡಿಗೆ, ಅದರಲ್ಲೂ ವೀರಶೈವ ಸಿದ್ಧಾಂತ ಪ್ರಚಾರಕ್ಕೆ, ಅವರು ಸಲ್ಲಿಸಿದ ಅಪಾರ ಸೇವೆಗಾಗಿ ಅವರನ್ನು "ವಚನಶಾಸ್ತ್ರ ಪಿತಾಮಹ", ಇಪ್ಪತ್ತನೆಯ ಶತಮಾನದ "ಶಿವಶರಣ" ಎಂದು ಮಹಾಜನರು ಕರೆಯುತ್ತಿದ್ದರು.

ದಯಾಮಯನಾದ ಪರಮೇಶ್ವರನು ದಿವಂಗತರ ಆತ್ಮಕ್ಕೆ ಶಾಂತಿಯನ್ನೀಯಲೆಂದೂ, ಇವರ ಕುಟುಂಬವರ್ಗಕ್ಕೆ ಈ ವಿಯೋಗ ದುಃಖವನ್ನು ಸಹಿಸುವ ಶಕ್ತಿಯನ್ನು ದಯಪಾಲಿಸಲೆಂದೂ ಹಾರೈಸುತ್ತೇವೆ.



### ಡಾ|| ಮುಗಳಿ ಅವರ ವಿದೇಶ ಪ್ರವಾಸ

೪೪ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರೂ, ಸಾಂಗ್ಲಿಯ ವಿಲ್ಲಿಂಗ್‌ಡನ್ ಕಾಲೇಜಿನ ಪ್ರಿನ್ಸಿಪಾಲರೂ ಆದ ಡಾ|| ರಂ. ಶ್ರೀ. ಮುಗಳಿ ಅವರು ಶೀಘ್ರದಲ್ಲೇ ಜಿನೀವಾಕ್ಕೆ ಪ್ರಯಾಣ ಮಾಡಲಿದ್ದಾರೆ. ಅವರು ಅಲ್ಲಿ ನಡೆಯುವ ಅಂತರ್ರಾಷ್ಟ್ರೀಯ ಸಾಹಿತ್ಯಿಕ ಸಮ್ಮೇಳನದಲ್ಲಿ ಭಾಗವಹಿಸಿ, ರಾಷ್ಟ್ರೀಯತ್ವ ಹಾಗೂ ವಿಶ್ವಬಂಧುತ್ವ ಎಂಬ ವಿಷಯವಾಗಿ ಭಾಷಣ ಮಾಡಲಿರುವರು.

ಸಂಪಾದಕರು: ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು–೧೮.

# ಸಾದರ ಸ್ವೀಕಾರ

* ಸಂತಾನ (ಸಂಗೀತ ಸಾಮಾಜಿಕ ನಾಟಕ) : ಲೇಖಕರು: ಶ್ರೀ ರಾ. ಕ. ನಾಯಕ ; ಪ್ರಕಾಶಕರು: ರಾ. ಕಾ. ನಾಯಕ, ಹೆಬ್ಬಾಳ, (ತಾ. ಹುಕ್ಕೇರಿ) ಬೆಳಗಾವಿ ಡಿಸ್ಟ್ರಿಕ್ಟ್ ; ಸೈಜು ೧/೮ ಕ್ರೌನ್ ; ಪುಟ ೭೮ ; ಬೆಲೆ ರೂ. ೨.

* ಕಲ್ಯಾಣ ದೀಪ : ಸಂಪಾದಕರು : ಶಾಂತರಸ ಮತ್ತು ಅಮರಾನಂದ ; ಪ್ರಕಾಶಕರು : ಅನುಭವ ಮಂಟಪ, ರಾಯಚೂರು ; ಸೈಜು ೧/೮ ಕ್ರೌನ್ ; ಪುಟ ೮೨ ; ಬೆಲೆ ರೂ. ೧.

ಮೃತ್ಯುಂಜಯ : ಸಂಪಾದಕ: ಶ್ರೀ ಎಸ್. ಆರ್. ಗುಂಜಾಲ, M.A., D.L.Sc., ಮತ್ತು ಶ್ರೀ ಎಸ್. ಕೊನೇಸಾಗರ; ಪ್ರಕಾಶಕರು : ಶ್ರೀ ಉತ್ತಂಗಿ ಪ್ರಕಾಶನ ಸಮಿತಿ, ಮಿಶನ್ ಕಂಪೌಂಡ, ಧಾರವಾಡ ; ಸೈಜು ೧/೮ ಕ್ರೌನ್ ; ಪುಟ ೧೮೬ ; ಬೆಲೆ ರೂ. ೧-೫೦ ಪೈ.

* ಆಹಾರ ವಿಜ್ಞಾನ (ತ್ರೈಮಾಸಿಕ ಪತ್ರಿಕೆ): ಸಂಪಾದಕರು: ಡಾ॥ ಬಿ. ಎಲ್. ಅಮ್ಲ ಮತ್ತು ಪಿ. ಎಸ್. ಬಾಲಕೃಷ್ಣನ್ ; ಪ್ರಕಾಶಕರು : ಕೇಂದ್ರ ಆಹಾರ ಸಂಶೋಧನಾಲಯ, ಮೈಸೂರು ; ಪುಟ ೨೪ ; ಬೆಲೆ ವಾರ್ಷಿಕ ಚಂದಾ ೧ ರೂ. (ಬಿಡಿ ಪ್ರತಿ ೩೦ ಪೈ.)

* ಒಲವಿನ ಸೆರೆಯಲ್ಲಿ : ಲೇಖಕರು : ರಾ. ಸು. ಮಣಿ ; ಪ್ರಕಾಶಕರು : ಮಣಿ ಪ್ರಕಾಶನ, ರಾಯನಕೆರೆ ಡೈರಿ ಫಾರಂ, ಮೈಸೂರು ; ಸೈಜು ೧/೮ ಕ್ರೌನ್ ; ಪುಟ ೨೫೦ ; ಬೆಲೆ ೨-೨೫ ಪೈ.

ಮರುತಾಶ್ವಮೇಧ (ಪ್ರಸಂಗ): ಲೇಖಕರು : ಶ್ರೀ ಯು. ಬಿ. ಗೋವಿಂದ ಭಟ್ಟ ; ಪ್ರಕಾಶಕರು : ಶ್ರೀ ನಿಲಯ-ಸಾಹಿತ್ಯ ನಿಲಯ, ಜಾಲ್ಸೂರು ; ಸೈಜು ೧/೮ ಕ್ರೌನ್ ; ಪುಟ ೪೪ ; ಬೆಲೆ ೭೫ ಪೈ.

ಯಕ್ಷಗಾನ ರಾತ್ರಿಶಾಲೆ ಅಥವಾ ನೈಟ್‌ಸ್ಕೂಲ್ : ರಚಿಸಿದವರು : ಯು. ಬಿ. ಗೋವಿಂದ ಭಟ್ಟ ; ಪ್ರಕಾಶಕರು : ಬಿ. ಆರ್. ಶೆಣೈ, ಜಾಲ್ಸೂರು ಪೋಸ್ಟು ; ಸೈಜು ೧/೮ ಕ್ರೌನ್ ; ಪುಟ ೩೩ ; ಬೆಲೆ ೩೦ ಪೈ.

* ನ್ಯಾಯದರ್ಶನ : ಸಂಪಾದಕ: ಅನ್ನದಾನಯ್ಯ ಪುರಾಣಿಕ, ಬಿ.ಕಾಂ., ಎಲ್‌ಎಲ್.ಬಿ., ಪ್ರಕಾಶಕರು : ಕನ್ನಡ ಸಂಘ, ಸರ್ಕಾರಿ ಲಾ ಕಾಲೇಜು, ಬೆಂಗಳೂರು ; ಪುಟ ೫೦ ; ಬೆಲೆ ರೂ. ೧.

* ಆನಂದ ಗ್ರಾಮ (ರೂಪಕ ಕಥಾಸಂಗ್ರಹ) : ಲೇಖಕರು ಮತ್ತು ಪ್ರಕಾಶಕರು : ಶ್ರೀ ವಿನೀತ ರಾಮಚಂದ್ರ ರಾಯರು, "ಪ್ರೇಮ-ಕುಂಜ", ರೈಟರ ಗಲ್ಲಿ, ಧಾರವಾಡ ; ಸೈಜು ೧/೪ ಫುಲ್ ಸ್ಕೇಪ್ ; ಪುಟ ೨೦೮ ; ಬೆಲೆ ರೂ. ೨.

ಘನಲಿಂಗ ದೇವರ ವಚನಗಳು : ಸಂಪಾದಕರು : ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳು ; ಪ್ರಕಾಶಕರು : ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ, ಮೈಸೂರು ; ಪುಟ ೮೬ ; ಬೆಲೆ ರೂ. ೩.

ಅಸಲಿ ನಕಲಿ : ಲೇಖಕರು : ಸವ್ಯಸಾಚಿ ; ಪ್ರಕಾಶಕರು : ಭಾರ್ಗವ ಪ್ರಕಾಶನ, ಭಾರ್ಗವಪುರಿ, ಚಿಕ್ಕಮಗಳೂರು ; ಸೈಜು ೧/೮ ಕ್ರೌನ್ ; ಪುಟ ೪೪ ; ಬೆಲೆ ೮೦ ಪೈ.

ವಿದ್ಯಾರ್ಥಿ ಜೀವನದ ಪರಿಪಕ್ವತೆ : ಲೇಖಕರು : ಮ. ಮಲ್ಲಪ್ಪ ; ಪ್ರಕಾಶಕರು : ಜ್ಞಾನಕಿರಣ ಕಾರ್ಯಾಲಯ, ಹಲಗೂರು, ಮಳವಳ್ಳಿ ತಾಲ್ಲೂಕು ; ಸೈಜು ೧/೮ ಕ್ರೌನ್ ; ಪುಟ ೩೦.

ಅಭಿವೃದ್ಧಿ ಯೋಜನೆಗಳಲ್ಲಿ ಸಹಕಾರದ ಪಾತ್ರ : ಲೇಖಕರು : ಎಸ್. ಜಿ. ಕರಭಂಟನಾಳ, ಎಂ. ಎ., ಪ್ರಕಾಶಕರು : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ; ಸೈಜು ೧/೧೬ ಡೆಮ್ಮಿ ; ಪುಟ ೫೬ ; ಬೆಲೆ ೨೫ ಪೈ.

## ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ-ಕನ್ನಡ ನಿಘಂಟು

### ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ "ಕನ್ನಡ ನಿಘಂಟು" ಡೆಮ್ಮಿ ಚತುಷ್ಪತ್ರ ಆಕಾರದ ಸುಮಾರು ೫,೦೦೦ ಪುಟಗಳನ್ನು ಒಳಗೊಂಡು, ಒಂದೊಂದು ಸಂಪುಟದಲ್ಲೂ ಸುಮಾರು ೧೨೫೦ ಪುಟಗಳಿರುವ ನಾಲ್ಕು ಸಂಪುಟಗಳಲ್ಲಿ (Volumes) ಪ್ರಕಟವಾಗುವಂತೆ ಏರ್ಪಡಿಸಲಾಗಿದೆ.

ನಿಘಂಟಿನ ಒಟ್ಟು ಬೆಲೆ ೧೨೦ ರೂಪಾಯಿಗಳು; ಮುಂಗಡವಾಗಿ ಹಣ ಸಲ್ಲಿಸುವ ಗ್ರಾಹಕರಿಗೆ ೧೦೦ ರೂಪಾಯಿಗಳ ರಿಯಾಯಿತಿ ದರದಲ್ಲಿ ಅದನ್ನು ಒದಗಿಸಲಾಗುತ್ತದೆ. ನಿಘಂಟು ಸಿದ್ಧವಾದಂತೆಲ್ಲ ೯೬ ಪುಟಗಳುಳ್ಳ ಸಂಚಿಕೆಗಳ (Fascicules) ರೂಪದಲ್ಲಿ ಅದನ್ನು ಮುಂಗಡವಾಗಿ ೧೦೦ ರೂಪಾಯಿಗಳ ರಿಯಾಯಿತಿಯ ಬೆಲೆಯನ್ನು ಸಲ್ಲಿಸಿರುವ ಗ್ರಾಹಕರಿಗೆ ತಲುಪಿಸಲಾಗುವುದು. ನಿಘಂಟಿನ ಸಂಪುಟಗಳನ್ನಾಗಲಿ ಸಂಚಿಕೆಗಳನ್ನಾಗಲಿ ಬಿಡಿ ಬಿಡಿಯಾಗಿ ವಿಕ್ರಯಿಸುವುದಿಲ್ಲ. ಮುಂಗಡ ಹಣ ನೂರು ರೂಪಾಯಿಗಳನ್ನು ಹತ್ತು ರೂ.ಗೆ ಕಡಿಮೆಯಿಲ್ಲದ ಕಂತುಗಳಲ್ಲಿ ಪಾವತಿ ಮಾಡಬಹುದು. ಆದರೆ ಪೂರ್ತ ಹಣ ಸಂದಾಯ ವಾಗುವವರೆಗೆ ಸಂಚಿಕೆಗಳನ್ನು ಕಳಿಸಲಾಗುವುದಿಲ್ಲ.

ನಿಘಂಟಿನ ಎರಡನೆಯ ಸಂಪುಟವು ಪ್ರಕಟವಾದ ಕೂಡಲೆ **ರಿಯಾಯಿತಿಯ ದರದಲ್ಲಿ** ಅದನ್ನು ವಿಕ್ರಯಿಸುವುದನ್ನು ನಿಲ್ಲಿಸಲಾಗುತ್ತದೆ; ಆ ಮುಂದೆ ಪೂರ್ಣವಾದ ಬೆಲೆಯನ್ನು ಕೊಡಬೇಕಾಗುತ್ತದೆ.

ನಿಘಂಟಿನ ಒಂದು ಸಂಪುಟವು ಸಿದ್ಧವಾದ ಬಳಿಕ ಅದರ ರಕ್ಷಾಕವಚವನ್ನು (Binding Case) ಮುಂಗಡವಾಗಿ ಬೆಲೆ ಸಲ್ಲಿಸಿರುವ ಗ್ರಾಹಕರಿಗೆ ಉಚಿತವಾಗಿ ಒದಗಿಸಲಾಗುವುದು.

ಸಂಚಿಕೆಗಳನ್ನೂ ರಕ್ಷಾಕವಚಗಳನ್ನೂ ಕಳಿಸಲು ತಗುಲುವ ಅಂಚೆವೆಚ್ಚವನ್ನು ಗ್ರಾಹಕರೇ ಸಲ್ಲಿಸತಕ್ಕದ್ದು.

ಗ್ರಾಹಕರು ಮುಂಗಡ ಬೆಲೆಯ ಜೊತೆಗೆ ಹತ್ತು ರೂಪಾಯಿಗಳನ್ನು ಅಂಚೆವೆಚ್ಚ, ರವಾನೆ ವೆಚ್ಚ ಗಳಿಗಾಗಿ ಸಲ್ಲಿಸಬೇಕು. ಸಂಚಿಕೆಗಳನ್ನು "ರಿಜಿಸ್ಟರ್ಡ್ ಪೋಸ್ಟ್" ಮೂಲಕ ಕಳಿಸಬೇಕೆಂದು ಗ್ರಾಹಕರು ಅಪೇಕ್ಷಿಸಿದಲ್ಲಿ ಆ ವಿಷಯವನ್ನು ಅವರು ಲಿಖಿತರೂಪದಲ್ಲಿ ಮೊದಲೇ ತಿಳಿಸಬೇಕು. ಹಾಗೆ ಮಾಡದಿದ್ದರೆ ಸಂಚಿಕೆಗಳನ್ನು "ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್" ಸಮೇತವಾಗಿ ಸಾದಾ ಟಪಾಲಿನ ಮೂಲಕ ಕಳಿಸ ಲಾಗುವುದು. ಸಂಚಿಕೆಗಳನ್ನು ಪರಿಷತ್ತಿನ ಕಚೇರಿಯಲ್ಲೇ ತೆಗೆದುಕೊಳ್ಳಲು ಅಪೇಕ್ಷಿಸುವವರು ಮುಂಚಿತವಾಗಿ ತಿಳಿಸಿ ಆ ರೀತಿ ಮಾಡಬಹುದು; ಅಂಥವರು ಅಂಚೆವೆಚ್ಚವನ್ನು ಕೊಡಬೇಕಾಗುವುದಿಲ್ಲ.

**ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.**

ಈ ವಿಳಾಸಕ್ಕೆ ಹಣ ಕಳುಹಿಸಿ ಪತ್ರ ವ್ಯವಹಾರ ಮಾಡಬಹುದು.

**ಕೆ. ಎಂ. ಕೃಷ್ಣರಾವ್**
ಗೌರವ ಕಾರ್ಯದರ್ಶಿ

Reg. No. B. G. 4—July 1964

Licensed to Post without pre-payment. License No 1



[illegible] ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.








ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೭] ಸಂಪಾದಕರು : ಡಿ. ಆರ್. ರಾಮಯ್ಯ, ಬಿ.ಎ. [ಸಂಚಿಕೆ ೮


## ಪರಿಷತ್ತಿನ ಕಾರ್ಯಸಮಿತಿ ಸಭೆ



ತಾ॥ ೨೬-೭-೬೪ ರಂದು ಸೊಲ್ಲಾಪುರ ಜಿಲ್ಲಾ ದುಧನಿಯಲ್ಲಿ ನಡೆದ ಪರಿಷತ್ತಿನ ಕಾರ್ಯಸಮಿತಿ ಸಭೆಯ ದೃಶ್ಯವಿದು. ಅಧ್ಯಕ್ಷರು ಗಡಿ ಪರಿಸ್ಥಿತಿ ಕುರಿತು ಮಾತನಾಡುತ್ತಿದ್ದಾರೆ. ಕಾರ್ಯಸಮಿತಿ ಸದಸ್ಯರಾದ ಶ್ರೀ ಚಂದ್ರಶೇಖರ ಶಾಸ್ತ್ರಿಗಳು, ಶ್ರೀ ವಿ. ಬಿ. ನಾಯಕರು, ಶ್ರೀ ಎಸ್. ಶಂಕರಪ್ಪನವರು, ದುಧನಿಯ ಶ್ರೀ ಕಲ್ಯಾಣಪ್ಪ ಪಾಟೀಲರು, ಶ್ರೀ ಕಲ್ಯಾಣ ಶೆಟ್ಟಿ ಮೊದಲಾದವರನ್ನು ಈ ಚಿತ್ರದಲ್ಲಿ ಕಾಣಬಹುದು.


ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

# ವಿಷಯ ಸೂಚಿಕೆ






ಸಂಪುಟ ೨೭ ] ಆಗಸ್ಟ್ ೧೯೬೪ [ ಸಂಚಿಕೆ ೮

## ಓಂ ನಮೋ *

ಲೇ: ವಿದ್ವಾನ್ ಶ್ರೀ ಕೆ. ಎಸ್. ಪದ್ಮನಾಭಾಚಾರ್ಯರು

ಓಂ ನಮೋ ಕರ್ನಾಟ ಭಾಷಾಮಯಿಯಾ ದೇವಿ
ಓಂ ನಮೋ ಓಂ ನಮೋ ಓಂ ನಮೋ

೧

ಕನ್ನಡವು ಎಂದರದು ಒಂದು ಭಾಷೆಯ ಹೆಸರು
ಅದನು ಆಡುವ ಜನರು ಕನ್ನಡಿಗರಾಗಿಹರು
ಆ ನೆಲಕೆ ಕನ್ನಡದ ನಾಡೆಂದು ನುಡಿಯುವರು
ಆ ನಿಸರ್ಗವೆ ಕನ್ನಡದ ಮಾತೆ ದೇವಿಯರು
ಓಂ ನಮೋ

೨

ಕನ್ನಡದ ನೆಲದಲ್ಲಿ ಬೆಳೆಯುತಿಹ ಬಹು ಬೆಳೆಯು
ಕನ್ನಡದ ಜನರಲ್ಲಿ ಮೆರೆಯುತಿಹ ಸಂಸ್ಕೃತಿಯು
ಕನ್ನಡದ ಸು ನಿಸ್ಸರ್ಗ ದಲ್ಲಿ ಚೆಲ್ಲಿಹ ಸಿರಿಯು
ಎಲ್ಲವೂ ಕನ್ನಡವು ಅದು ಭಾಷೆ ಅದೆ ನೆಲೆಯು
ಓಂ ನಮೋ

೩

ಕನ್ನಡದ ಭಾಷೆಯೊಂ ದೊಂದು ಇರದಿರೆ ಎಲ್ಲಿ
ಕನ್ನಡಿಗರೆಂಬವರು ಕನ್ನಡದ ನೆಲವೆಲ್ಲಿ
ಕನ್ನಡ ನಿಸರ್ಗದಾ ಮಾತೆ ದೇವಿಯರಲ್ಲಿ
ಕನ್ನಡದ ಭಾಷೆಯೊ ಬಹು ಸೃಷ್ಟಿ ಇದು ಇಲ್ಲಿ
ಓಂ ನಮೋ

೪

ಭಾಷೆಯೇ ಜನ ಜೀವ ಭಾಷೆ ದೇವಿಯೆ ಭಾವ
ಭಾಷೆ ತಾಯಿಯು ನೆರವ ಸರ್ವಸ್ವ ಕೊಡುತಿರುವ
ಭಾಷೆ ಸಭ್ಯತೆಯೀವ ವ್ಯವಹಾರವನು ಕಾವ
ರಾಜ್ಯಪದ ಪೊಂದಿರುವ ವಾಗ್ದೇವಿ ವಂದಿಸುವ
ಓಂ ನಮೋ

೫

ಈ ನಿಸರ್ಗದ ನಿನ್ನ ಜನ ನೆಲದ ವೈದಡವಿ
ಹರಸುತಿರು ಮಾನವನ ಮಾನವತೆಯನು ಓವಿ
ಶಕ್ತಿ-ಭಕ್ತಿಯ ಮೆರೆಸು ಅದೆ ಸಂಪದವು ಭಾವಿ
ಓಂ ನಮೋ ಕರ್ಣಾಟಭಾಷಾಮಯಿಯಾದೇವಿ
ಓಂ ನಮೋ

* ೧೯-೪-೧೯೬೪ರಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ನಡೆದ ವಸಂತ ಸಾಹಿತ್ಯೋತ್ಸವದ ಕವಿಗೋಷ್ಠಿಯಲ್ಲಿ ಹಾಡಿದ ಪ್ರಾರ್ಥನಾ ಗೀತೆ.

# ಪಂಪಭಾರತದ ಕೆಲವು ಪಾಠಾಂತರಗಳು

ಶ್ರೀ ಹಂಪ. ನಾಗರಾಜಯ್ಯ, ಎಂ.ಎ.

(ಅ) ಸುಪ್ರತೀಕವೆಂಬ ಆನೆಯನ್ನೂ ಭಗದತ್ತನನ್ನೂ ತೀಕ್ಷ್ಣವಾದ ಬಾಣಗಳಿಂದ ಅರ್ಜುನನು ಗಾಸಿಗೊಳಿಸಿದಾಗ ಕುಪಿತನಾದ ಭಗದತ್ತ ಭೂದೇವಿಯಿಂದ ಪಡೆದ ದಿವ್ಯಾಂಕುಶವನ್ನು ಪ್ರಯೋಗಿಸಲು ಪಾಂಡವರ ಬಂಡಿಯಬೋವನಾದ ಶ್ರೀಕೃಷ್ಣನು ತನ್ನ ಎದೆಯೊಡ್ಡಿ ಕೊರಳಲ್ಲಿ ಧರಿಸಿದನು. ಅರ್ಜುನ ಬೆರಗಾಗಿ ಪ್ರಶ್ನಿಸಲು ಆ ಆಯುಧದ ಮಹಿಮೆಯನ್ನು ಬಿತ್ತರಿಸಿ 'ಇನ್ನು ಆನೆಯನ್ನೂ ಮಾವುತನನ್ನೂ ಸುಲಭವಾಗಿ ಸಂಹರಿಸು' ಎಂದನು. ಕೃಷ್ಣನು ಹಾಗೆ

ಎಂಬುದುಮೊಂದೆ ದಿವ್ಯಶರದಿಂ ಶಿರಮುಂ
ಪಱಿಯೆಚ್ಚೊಡಾತನೊ
ತ್ತಂಬದಿನಾಂತೊಡಾಂಬಱದೆ ತಪ್ಪಿದೆನೆಂದು ಕಿರೀಟಿ ತನ್ನ ಬಿ।
ಲ್ಲಂಬಿಸುಟಿರ್ದೊಡಚ್ಯುತನಿದೇತರಿನಾಕುಲಮಿರ್ದೆ
ನೋಡಿದೆಂ
ತ್ತೆಂಬುದುಮೆಚ್ಚನಂತೆರಡು ಕೆಯ್ಗಳುಮಂ
ಮುಳಿಸಿಂ ಗುಣಾರ್ಣವಂ ॥ ೧೧–೭೭ ॥

ಮೇಲಿನ ಪದ್ಯದಲ್ಲಿನ ಮೂರನೆಯ ಸಾಲಿನಲ್ಲಿ 'ಏತರಿನಾಕುಲಮಿರ್ದೆ'–ಎಂಬಲ್ಲಿ ಏತರಿನ್ ಎಂಬ ಪದವನ್ನು ಗಮನಿಸಬೇಕು. ಏನ್ ಎಂಬುದು ಸರ್ವನಾಮಪದ. ಪ್ರಥಮೆಯಲ್ಲಿ ಈ ಏನ್ ಎಂಬ ಸರ್ವನಾಮ ಪದ ಏನ್–ಏತಱ್ ಎಂಬುದಾಗಿಯೂ; ಚತುರ್ಥಿಯಲ್ಲಿ ಏತರ್ಕೆ–ಏಕೆ ಎಂದೂ; ತೃತೀಯೆ ಮೊದಲಾದವುಗಳಲ್ಲಿ ಏತಱ್ ಎಂದೂ ಪ್ರಕೃತಿಯಾಗಿ ನಿಲ್ಲುತ್ತದೆ. ಇದು ಕೇಶಿರಾಜನ ಹೇಳಿಕೆಯೂ ಆಗಿದೆ (ಸೂತ್ರ ೧೨೨). ಪಂಪನ ಪದ್ಯದಲ್ಲಿ ಏತಱಿನ್ ಎಂಬುದು ತೃತೀಯೆಯ ಪ್ರಕೃತಿ. ಇದು ಪಂಚಮಿಯಲ್ಲಿ ಏತಱತ್ತಣಿಂ ಎಂದೂ; ಷಷ್ಠಿಯಲ್ಲಿ ಏತಱ ಎಂದೂ; ಸಪ್ತಮಿಯಲ್ಲಿ ಏತಱೊಳ್ ಎಂದೂ ಆಗುತ್ತದೆ. ಆದುದರಿಂದ ಮೇಲಿನ ಪದ್ಯದಲ್ಲಿ ಏತರಿನಾಕುಲಮಿರ್ದೆ ಎಂಬ ರೇಫೆ ಬೆರಸಿದ ಪದ ತಪ್ಪು; ಅದು ಏತಱಿನಾಕುಲಮಿರ್ದೆ ಎಂದು ಶಕಟರೇಫೆಯಿರಬೇಕು. ಏತಱ ಮಾತೊ ಭೂತಳದೊಳ್ ಎಂಬ ಕೇಶಿರಾಜನ ಮತ್ತೊಂದು ಉದಾಹರಣೆಯನ್ನು ಗಮನಿಸಬಹುದು.

(ಇ) ಪ್ರೀತಿಯ ಪುತ್ರ ಅಭಿಮನ್ಯುವಿನ ಮರಣಕ್ಕೆ ಕಾರಣನಾದ ಸೈಂಧವನನ್ನು ಮರುದಿನ ಸೂರ್ಯಾಸ್ತದೊಳಗಾಗಿ ಸಂಹರಿಸುವುದಾಗಿ ಅರ್ಜುನನು ವೀರಪ್ರತಿಜ್ಞೆಗೈದುದನ್ನು 'ಸೈಂಧವನ ಸಜ್ಜನಂ ದುರ್ಯೋಧನನತಂಗೆ ದುಶ್ಶಳೆ ಕೇಳ್ದು ಮಲಮಲ ಮಱುಗಿ ತಮ್ಮಣ್ಣನಲ್ಲಿಗೆ ವಂದುಕಾಲಮೇಲೆ ಕವಿದುಪಟ್ಟು

ತನ್ನ ಸುತನೞಿಯಲೞಿಯಲ್
ನಿನ್ನಯಮಯ್ದುನನನರ್ಜುನಂ ಪೂಣ್ದನದ
ರ್ಕಾನ್ನಡುಗಿ ಬಂದೆನಿನ್ನೀ
ನೆನ್ನೋಲೆಯ ಕಡಗದೞಿವನೇಂ ನೋಡಿದಪಾ ॥ ೧೧–೧೨೩ ॥

ಎಂದು ದುಃಖೋದ್ವೇಗದಿಂದ ಬಿನ್ನೈಸಿದಳಂತೆ. 'ತನ್ನ ಮಗ ಅಳಿಯಲು ನಿನ್ನ ಮಯ್ದುನ ಅಳಿಯುವಂತೆ ಅರ್ಜುನ ಪ್ರತಿಜ್ಞೆ ಮಾಡಿದ್ದಾನೆ. ಅದರಿಂದ ನಾನು ನಡುಗಿ ನಿನ್ನ ಬಳಿಗೆ ಬಂದಿದ್ದೇನೆ. ನನ್ನ ಓಲೆ ಮತ್ತು ಬಳೆಯ ಭಾಗ್ಯ ವಳಿಯುವುದನ್ನು ನೀನು ನೋಡುವೆಯಾ?'–ಎಂಬುದು ಈ ಪದ್ಯದ ಸ್ಥೂಲಾರ್ಥ. ತನ್ನ ಪತಿಯ ಹೆಸರನ್ನು ಸತಿಯಾದವಳು ಹೇಳಬಾರದೆಂಬ ಸಜ್ಜನ ಸೌಜನ್ಯವನ್ನು ಕವಿ ಗಮನಿಸಿದ್ದಾನೆ. ಆದುದರಿಂದ ದುಶ್ಶಲೆ ತನ್ನ ಗಂಡ ಸೈಂಧವನ ಹೆಸರು ಹೇಳದೆ ತನ್ನ ಅಣ್ಣನಿಗೆ 'ನಿನ್ನ ಮೈದುನ' (ಅರ್ಥಾತ್ ತನ್ನ ಪತಿ) ಎಂದು ವಿವರಿಸತೊಡಗಿದ್ದಾಳೆ. ಇಲ್ಲಿ ನಾವು ವಿಶೇಷವಾಗಿ ಗಮನಿಸಬೇಕಾದುದು ಅೞಿಯಲ್ ಎಂಬ ಪದವನ್ನು. ಏಕೆಂದರೆ ಮೇಲಿನ ಕಂದ ಪದ್ಯದ ಮೊದಲ ಪಾದದಲ್ಲಿ 'ತನ್ನ ಸುತನೞಿಯಲೞಿಯಲ್ ನಿನ್ನಯ ಮಯ್ದುನನ್' ಎಂದಿದೆ. ಅೞಿಯಲ್ ಎಂದರೆ ನಾಶವಾಗಲು, ಸಾಯಲು ಎಂದರ್ಥ. ತನ್ನ ಸುತನ್ + ಅೞಿಯಲ್ – ಅಂದರೆ ಅರ್ಜುನನ ಮಗ ಅಭಿಮನ್ಯು ಮೃತನಾಗಲು; ಅೞಿಯಲ್ ನಿನ್ನಯ ಮೈದುನನ್ – 'ಅಣ್ಣಾ ದುರ್ಯೋಧನ ನಿನ್ನ ಮೈದುನನಾದ ಸೈಂಧವ ಅಳಿಯುವಂತೆ' ಅರ್ಜುನ ಪ್ರತಿಜ್ಞೆ ಸ್ವೀಕರಿಸಿದ್ದಾನೆಂಬುದು ಇಲ್ಲಿನ ಮಥಿತಾರ್ಥ. ಆದರೆ ಅೞಿಯಲ್ ಎಂಬ ಪದದ ಪುನರುಕ್ತಿ ಅಷ್ಟು ಉಚಿತವಾಗಿ ಬಂದಿರುವಂತೆ ಕಾಣುವುದಿಲ್ಲ. ಕವಿಗಳು ಕಾವ್ಯದ ಸೌಂದರ್ಯವನ್ನು ಹೆಚ್ಚಿಸಲೂ, ಭಾವತೀವ್ರತೆಯನ್ನು ತೋರಿಸಲೂ, ಓದುಗರ ಮೇಲೆ ಪದ್ಯದ ಪರಿಣಾಮ ಹೆಚ್ಚು ಫಲಕಾರಿಯಾಗುವಂತೆ ಮಾಡಲೂ ಪುನರುಕ್ತಿ ತರುವುದುಂಟು. ಅಥವಾ ಒಂದೇ ಪದವನ್ನು ಮತ್ತೆ ಮತ್ತೆ ಬಳಸಿ ಅದರ ವಿವಿಧಾರ್ಥಗಳನ್ನು ಸೂಚಿಸುವುದೂ ಉಂಟು. ಇಲ್ಲಿ

ಅಂಥ ಔಚಿತ್ಯ ಸಾಧಿತವಾದಂತೆ ಕಾಣುವುದಿಲ್ಲ. ತನ್ನ ಸುತನಟ್ಟುಯಲ್ ಎಂಬಲ್ಲಿ ಅಟ್ಟುಯಲ್ ಎಂಬ ಪದ ಭೂತಕಾಲ ಕ್ರಿಯೆಯನ್ನು ಸೂಚಿಸಿದೆ; ಅಟ್ಟುಯಲ್ ನಿನ್ನಯ ಮೈದುನನ್ ಎಂಬಲ್ಲಿ ಭವಿಷ್ಯತ್ಕಾಲ ಸೂಚಕವಾಗಿ ಬಂದಂತೆ ಕಾಣುತ್ತದೆ. ಆದರೆ ಇದು ಅಷ್ಟು ಶೋಭಿಸುವಂತೆ ತೋರುವುದಿಲ್ಲ. ತನ್ನ ಗಂಡನ ಸಾವನ್ನು ಕುರಿತು ಹೀಗೆ ಸ್ಪಷ್ಟವಾಗಿ ದುಶ್ಶಲೆ ತಿಳಿಸಿರಲಾರಳು, ಅಂಥ ಯೋಚನೆಯೂ ಅವಳಿಗೆ ದುಸ್ಸಾಧ್ಯವಾಗಿರಬೇಕು. ಅಲ್ಲದೆ ಅರ್ಜುನನ ವೀರಪ್ರತಿಜ್ಞೆ ಪಾಂಡವರ ಪಾಳೆಯದಲ್ಲಿ ಅಂತಿರಲಿ, ಶತ್ರುಪಾಳಯದಲ್ಲೂ ತಿಳಿದುಹೋಗಿದೆ. ಹೀಗೆ ಎಲ್ಲರಿಗೂ ತಿಳಿದಿರುವ ವಿಚಾರವನ್ನು, ತನಗೆ ಆಘಾತವನ್ನುಂಟುಮಾಡಿರುವ ಸುದ್ದಿಯನ್ನು ಆಕೆ ಪುನಃ ಉಚ್ಚರಿಸಿ ಹೇಳಲು ಬಾಯಾದರೂ ಹೇಗೆ ಬಂದೀತು? ಆದುದರಿಂದ ಇಲ್ಲಿ ಮತ್ತೇನೊ ಪಾಠಾಂತರವಿರಬೇಕು. ಪದ್ಯದ ಮೊದಲ ಸಾಲಿನ ಉತ್ತರಾರ್ಧ **ಅಟ್ಟುಯಲ್** ಎಂಬುದಕ್ಕೆ ಪಂಪಭಾರತದ ಮೊದಲನೆಯ ಅಚ್ಚಿನ 'ಕ' ಪ್ರತಿಯಲ್ಲೂ, ಆರಾದ ಪ್ರತಿಯಾದ 'ಘ' ಪ್ರತಿಯಲ್ಲೂ '**ಅಟಿಲೊಳ್**' ಎಂಬ ಪಾಠಾಂತರವಿದೆ. ಆ ಪದಕ್ಕೆ ಅಟಲ್ ಎಂಬುದು ಧಾತು. ಕೇಶಿರಾಜನು ಧಾತು ಪ್ರಕರಣದಲ್ಲಿ ಅಟಲ್-ದುಃಖೇ ಎಂದು ತಿಳಿಸಿದ್ದಾನೆ. ಆದುದರಿಂದ ಅಟಿಲೊಳ್ ಎಂದರೆ ದುಃಖದಿಂದ ಎಂದು ಅರ್ಥ. ಇದು ಆರಾ ಪ್ರತಿಯ ಪಾಠಾಂತರವೆಂಬುದನ್ನೂ ಗಮನಿಸಬೇಕು. ಪಂಪಭಾರತದ ಪ್ರತಿಗಳಲ್ಲೆಲ್ಲಾ ಆರಾದ ಪ್ರತಿಯೇ ಪ್ರಾಚೀನ ಹಾಗೂ ಆಧಾರಾರ್ಹ; ಸಾಮಾನ್ಯವಾಗಿ ಅದರ ಪಾಠ ಸ್ವೀಕಾರಾರ್ಹವಾಗಿರುತ್ತದೆ. ಈ ಅಟಿಲೊಳ್ ಎಂಬ ಪಾಠಾಂತರವೇ ಇದುವರೆಗೆ ನಡೆಸಿದ ವಿವೇಚನೆಯಿಂದ ಸಮಂಜಸವಾಗಿರುವಂತೆ ಕಾಣುತ್ತದೆ. ಆದುದರಿಂದ ಪಂಪನ ಕಂದ ಪದ್ಯದ ಪ್ರಥಮ ಚರಣ ತನ್ನ ಸುತನಟ್ಟುಯಲಟಿಲೊಳ್ -ಎಂದಿರಬೇಕು. ಅರ್ಜುನ ತನ್ನ ಮಗ ಅಭಿಮನ್ಯುವಿನ ಸಾವಿನ ಸುದ್ದಿಯಿಂದಾದ ದುಃಖೋದ್ವೇಗದಲ್ಲಿ ಆ ನೋವನ್ನು ಭರಿಸಲಾಗದೆ ಅವನ ಮರಣಕ್ಕೆ ಕಾರಣನಾದವನನ್ನು ನಾಳೆ ಸಂಜೆಯೊಳಗಾಗಿ ಯಮಸದನಕ್ಕೆ ಅಟ್ಟುವುದಾಗಿ ಪ್ರತಿಜ್ಞಾ ಸ್ವೀಕಾರ ಮಾಡಿದನೆಂದರೆ ಪದ್ಯದ ಸ್ವಾರಸ್ಯ ಮತ್ತೂ ಹೆಚ್ಚುತ್ತದೆಯಲ್ಲವೆ?

(ಉ) ದ್ವಾರಾವತೀಪುರವನ್ನು ಪ್ರವೇಶಿಸುವ ಅರ್ಜುನನ ಚೆಲುವನ್ನು ಸುಭದ್ರೆ,

ಒದವಿದ ತನ್ನ ಜವ್ವನದ ರೂಪಿನ ಮೆಯ್ಯೊಳೆ ತಪ್ಪುದಪ್ಪುನೋ
ಟದೊಳೆ ಪೊಡರ್ಪು ತಪ್ಪುಬಗೆ ತಪ್ಪುಮನೋಜನ
ಪೂವಿನಂಬುತೀ
ವಿದ ದೊಣೆ ತೀವಿ ತನ್ನನಿಸೆ ಜಾಣನೆ ತಪ್ಪದೆ
ತಪ್ಪುದಪ್ಪುನೋ
ಡಿದುದದಱಿಂ ಗುಣಾರ್ಣವನನಾ ಸತಿ ತಪ್ಪದೆ
ತಪ್ಪುನೋಟದೊಳ್ ॥ ೪-೪೧

ಸುಭದ್ರೆಗೆ ಸಹಜವಾಗಿ ಸಂಜನಿಸಿದ ಏರುಂಜವ್ವನದಿಂದಾಗಿ ಅನುರಾಗವೂ ಸಹಜವಾಗಿಯೇ ಉಂಟಾಯಿತೆಂದೂ, ತತ್ಪರಿಣಾಮವಾಗಿ ತಪ್ಪದೆ ಒಂದೇ ಸಮನೆ ತಪ್ಪುನೋಟದಲ್ಲಿಯೇ ಅರ್ಜುನನನ್ನು ನೋಡಿದಳಂತೆ. ಏಕೆಂದರೆ ಮನ್ಮಥನ ತುಂಬಿದ ಬತ್ತಳಿಕೆಯ ಪುಷ್ಪಬಾಣ ತುಂಬಿ ತನ್ನ ಮೇಲೆ ಪ್ರಯೋಗವಾಗುತ್ತಿದೆ, ಅದರಿಂದ ಬೇರೆದಾರಿಯೇ ಇಲ್ಲದೆ ಅವಳು ಮೋಹಪರವಶಳಾಗಿದ್ದಾಳೆ– ಇದು ಈ ಚಮತ್ಕಾರ ಪದ್ಯದ ಸ್ವಾರಸ್ಯ. ಆದರೆ 'ಇಲ್ಲಿ ಅಲರಂಬು ತುಂಬಿದ ಬತ್ತಳಿಕೆ ತುಂಬಿ ತನ್ನನ್ನು ಹೊಡೆಯಲು' ಎಂಬ ಕಡೆ ತುಂಬಿತನ್ನನ್ನು ಹೊಡೆಯಲು ಎಂಬುದು ಸಹಜವಾಗಿರದೆ ಕೃತಕವಾಗಿರುವಂತೆ ಕಾಣುತ್ತದೆ. ಏಕೆಂದರೆ "ತೀವಿದ ದೊಣೆ ತೀವಿ ತನ್ನನಿಸೆ" ಎಂಬಲ್ಲಿ ತೀವಿಪದದ ಎರಡನೆಯ ಪ್ರಯೋಗ ಅನುಚಿತವಾಗಿದೆಯೆನ್ನಿಸುತ್ತದೆ. ಪಂಪನಿಗೆ ಪದದಾರಿದ್ರ್ಯವಿಲ್ಲ. ಹಲವುದೃಷ್ಟಿಗಳಿಂದ ತೀರ ಅತ್ಯಗತ್ಯವೆನ್ನಿಸಿದ ಹೊರತು ಸಾಮಾನ್ಯವಾಗಿ ಒಂದೇ ಪದದದ್ವಿರುಕ್ತಿ ಪಂಪನ ಕಾವ್ಯಗಳಲ್ಲಿ ಅಪರೂಪ. ಅಲ್ಲದೆ ಆ ಪದಕ್ಕೆ ಮತ್ತೊಂದು ಪಾಠಾಂತರವೂ ಇದ್ದು ನಮ್ಮ ಅನುಮಾನವನ್ನು ಇನ್ನೂ ಬಲಪಡಿಸುತ್ತದೆ. ಭಂಡಾರ್ಕರ್ ಪ್ರಾಚ್ಯ ಸಂಶೋಧನಾಲಯದಲ್ಲಿನ ಪಂಪಭಾರತದ (ಗ) ಪ್ರತಿಯಲ್ಲೂ, ಆರಾದ (ಘ) ಪ್ರತಿಯಲ್ಲೂ ತೀವಿ ಎಂಬ ಪದಕ್ಕೆ **ಕೀಱಿ** ಎಂಬ ಪಾಠಾಂತರವಿದೆ. ಕೀಱಿ ಎಂಬ ಪದವನ್ನು ವಿಕ್ರಮಾರ್ಜುನ ವಿಜಯದಲ್ಲಿ ಮೂಱುನಾಲ್ಕು ಕಡೆ ಬಳಸಿದ್ದಾನೆ (ಉದಾ : ೬-೬೭ವ, ೭-೨ವ, ೧೧-೮೩). ಆದಿ ಪುರಾಣದಲ್ಲೂ ಬಳಸಿದ್ದಾನೆ (೧೩-೮೫). ಪಂಪಭಾರತ ನಿಘಂಟಿನಲ್ಲಿ ಕೀಱು ಎಂಬ ಪದಕ್ಕೆ ರೇಗು ಎಂಬರ್ಥ ಕೊಟ್ಟಿದ್ದಾರೆ (ಪುಟ ೨೧). ಆದರೆ ಪಂಪನ ಎಲ್ಲ ಪ್ರಯೋಗಗಳಲ್ಲೂ ರೇಗು ಎಂಬರ್ಥ ಹೊಂದುವುದಿಲ್ಲ (ಉದಾ: ೭-೨ವ), ಒತ್ತಾಯ, ಬಲಾತ್ಕಾರ ಎಂಬರ್ಥವೂ, ಬರುತ್ತದೆ. ಕೇಶಿರಾಜ ಧಾತು ಪ್ರಕರಣದಲ್ಲಿ ಕೀಱು (ಕೀಱ್), ಆಗ್ರಹ, ಪ್ರಮಾರ್ಜನಯೋಃ-ಎಂಬ ಅರ್ಥ ಸೂಚಿಸಿದ್ದಾನೆ. ಕೇಶಿರಾಜ ಕೊಟ್ಟಿರುವ ಕೋಪ, ಉಜ್ಜು ಎಂಬರ್ಥವೇ ಅಲ್ಲದೆ ಘೋಷಿಸು, ಒತ್ತಾಯಪಡಿಸು, ಬಲಾತ್ಕಾರಮಾಡು ಎಂಬ ಅರ್ಥವೂ ಕೀಱಿ ಪದಕ್ಕೆ ಇದೆ. ವಡ್ಡಾರಾಧನೆ (ಪುಟ ೮, ೧೮, ೩), ಲೀಲಾವತಿಯಲ್ಲೂ (೨-೩೮), ಮಲ್ಲಿನಾಥ

ಪುರಾಣದಲ್ಲೂ (೭–೬೪) ಕೀಱು ಪದದ ಪ್ರಯೋಗವನ್ನು ಗಮನಿಸಬಹುದು. ಆದುದರಿಂದ ಪಂಪನ ಪದ್ಯದಲ್ಲಿ 'ತೀವಿದ ದೊಣೆ ಕೀಱು ತನ್ನನಿಸೆ' ಎಂದಿರಬೇಕು; ತೀವಿದ ದೊಣೆ ತೀವಿ ತನ್ನನಿಸೆ ಎಂದಲ್ಲ. ಮನ್ಮಥನ ಬತ್ತಳಿಕೆಯ ಬಾಣ ಒತ್ತಂಬದಿಂದ ತನ್ನನ್ನು (ಸುಭದ್ರೆಯನ್ನು) ಚುಚ್ಚಲು ಎಂಬುದು ಇದರ ಅರ್ಥ. ಹೀಗೆ ಮಾಡುವುದರಿಂದ ಪದ್ಯದ ಒಟ್ಟಂದ, ಭಾವಾರ್ಥ ಇನ್ನೂ ಮಿಗಿಲಾದ ಕಾಂತಿ ಅರ್ಥಗೌರವದಿಂದ ಶೋಭಿಸುತ್ತದೆ.

(ಖ) ಪಂಪಭಾರತದ ಕೆಳಗಿನ ಪದ್ಯವನ್ನು ಗಮನಿಸಿ,

ದೋಷಮುಮೇವಮುಂ ಶಕುನಿಯಿಂ
　　　　ಯುವರಾಜನಿನಾಯ್ತು ಪೋಯ್ತು ನಿ
ರ್ದೋಷಿಗಳಪ್ಪ ನಿಮ್ಮೆರಡು ತಂಡಮುಮಿಂ
　　　　ಪುದುವಾಳ್ವು ದಂತದೇಂ
ದೋಷಮೊ ಮೇಣ್ ವೃಕೋದರನಿನಾರಣ
　　　　ರಂಗದೊಳಾದ ದುಷ್ಟದು
ಶ್ಶಾಸನರಕ್ತ ಮೋಕ್ಷದೊಳೆ ದೋಷ ವಿಮೋಕ್ಷಮದೇಕೆ
　　　　ಕೊಂಡ ಪೈ॥ ೧೩–೬೮.

ಈ ಪದ್ಯದಲ್ಲಿ **ಪುದುವಾಳ್** ಎಂಬ ಪದ ತಪ್ಪಾಗಿ ಮುದ್ರಣವಾಗಿದೆ. ಕೇಶಿರಾಜನ ಧಾತುಪ್ರಕರಣದಲ್ಲಿ ಬಾೞ್– ಜೀವನೇ, ಖಡ್ಗೇ ಕುಳಂ – ಎಂಬುದನ್ನೂ; ಬಾೞೆಂದು ಜೀವನಾರ್ಥದೊಳ್ ೞಂ – ಎಂಬ ಹೇಳಿಕೆಯನ್ನೂ ಗಮನಿಸಬೇಕು, ಪುದುವಾಳ್ – ಎಂದರೆ ಒಟ್ಟಿಗೆ ಇರುವ ಖಡ್ಗ ಎಂದಾಗುತ್ತದೆ. ಆದರೆ ಇಲ್ಲಿ ಸಹಬಾಳ್ವೆ co-existence ಎಂದು ಅರ್ಥವಾಗಬೇಕು. ಆದುದರಿಂದ ಇದು **ಪುದುವಾೞ್** – ಎಂದಾಗಬೇಕು. ಪಂಪನೇ "ಪುದುವಾೞ್ತೆನೆಂಬೆನೇ" (೧೩–೧೪) ಎಂದು ಇನ್ನೊಂದು ಕಡೆ ಬಳಸಿದ್ದಾನೆ. ಇದು ಸಂಪಾದಕರ ತಪ್ಪಲ್ಲವೆಂದೂ, ಬಹುಶಃ ಮುದ್ರಣದೋಷವೆಂದೂ ಕಾಣುತ್ತದೆ. ಏಕೆಂದರೆ ಹಳಗನ್ನಡ ಗ್ರಂಥಗಳು ಅಚ್ಚಾಗುವಾಗ ಎಷ್ಟೇ ಎಚ್ಚರಿಕೆಯಿಂದಿದ್ದರೂ ಕೆಲವಾದರೂ ತಪ್ಪುಗಳು ಸಂಪಾದಕನ ಅವಧಾನದ ಕಣ್ಣೋಟವನ್ನೂ ತಪ್ಪಿಸಿ ಉಳಿಯುತ್ತವೆ. ಇದಕ್ಕೆ ಉತ್ತಮ ನಿರ್ದಶನವೆಂದರೆ ಪ್ರೊ॥ ಕುಂದಣಗಾರ್, ಚೌಗುಲೆಯವರು ಸಂಪಾದಕರಾಗಿ ಅಚ್ಚುಹಾಕಿಸಿರುವ ಆದಿಪುರಾಣ. ಪಂಪನ ಬಹುಪ್ರಖ್ಯಾತವಾದ, ಮಲ್ಲಿಕಾರ್ಜುನ–ಕೇಶಿರಾಜರೂ ಉದಾಹರಿಸಿರುವ 'ಇರು ಮರುಳೆ ಶುಷ್ಕವೈಯಾಕರಣಂಗಂ' ಎಂಬ ಕಂದಪದ್ಯ 'ಇದು ಮರುಳೆ . . .' ಎಂದೇ ಗ್ರಂಥದಲ್ಲೂ ಮತ್ತು ಪದ್ಯಗಳ ಅಕಾರಾದಿಯಲ್ಲೂ ಅಚ್ಚಾಗಿದೆ, ತಿದ್ದುಪಡಿಯಲ್ಲೂ ಸೇರದೆ! ಇದು ಕೇವಲ ಮುದ್ರಣದೋಷವೆಂದು ಸ್ವಯಂ ಸ್ಪಷ್ಟ. ಹಾಗೆಯೇ ಮೇಲೆ ಉದಾಹರಿಸಿದ ದೋಷಮು ಮೇವಮುಂ – ಎಂಬ ಪದ್ಯದಲ್ಲೂ ಪುದುವಾೞ್ವುದಂತದೇಂ – ಎಂದಿರಬೇಕಾದ್ದು ಸ್ಪಷ್ಟ. ಳಕಾರವು ೞಕಾರದ ಸ್ಥಾನದಲ್ಲಿ ತಪ್ಪಾಗಿ ಬಿದ್ದಿದೆ, ಓದುಗರು ತಿದ್ದಿಕೊಳ್ಳಬೇಕು.

(ಎ) ಅಳವಱಿಯದೆಗ್ಗು ಬಳವಳ
ಬಳವಿನೆಗಂ ಪಚ್ಚಪಸಿಯ ತುಱುಕಾಱಂಗ।
ಗ್ಗಳಿಕೆಯನೆ ಮಾಡಿ ನೀನುಂ
ಪಳಿಯಂ ಕಟ್ಟಿದೆಯೊ ಭೂಪರಿನಿಬರ ಕೊರಲೊಳ್ ॥ ೬–೪೬

ಧರ್ಮರಾಯ ರಾಜಸೂಯಯಾಗ ನಡೆಸಿದ್ದು ಆದಮೇಲೆ ಭೀಷ್ಮನ ಸಲಹೆಯ ಮೇರೆಗೆ ಶ್ರೀಕೃಷ್ಣನಿಗೆ ಅನರ್ಘ್ಯದರ್ಘ್ಯವನ್ನು ಎತ್ತಿದಾಗ ಸಭೆಯಲ್ಲಿದ್ದ ಶಿಶುಪಾಲನಿಗೆ ರೇಗಿತು. ಕ್ರೋಧದಿಂದ ಸಿಡಿದೆದ್ದು ಕಿಡಿಕಾರುತ್ತಾ ಕೃಷ್ಣನನ್ನು ನಿಂದಿಸುವನು. 'ಎಲೈ ಧರ್ಮರಾಯನೆ ನೀನು ವ್ಯಕ್ತಿಗಳ ಸಾಮರ್ಥ್ಯವರಿಯದೆ ನಿನ್ನ ದಡ್ಡತನ ದೊಡ್ಡದಾಗುವಂತೆ ದನಕಾಯುವವನಿಗೆ ಪ್ರಾಶಸ್ತ್ಯವಿತ್ತು ಈ ಸಭೆಯಲ್ಲಿ ಸೇರಿರುವ ಸಮಸ್ತ ರಾಜರಿಗೂ ಕೊರಳಿಗೆ ಪಳಿ(?)ಯನ್ನು ಕಟ್ಟಿದ್ದೀಯೆ' –ಎಂದು ಶಿಶುಪಾಲನ ಆರೋಪ. ಇಲ್ಲಿ ಪಳಿ ಎಂಬ ಪದ ವಿಚಾರಣೀಯ. ಇಡೀ ಪಂಪಭಾರತದಲ್ಲಾಗಲಿ, ಆದಿಪುರಾಣದಲ್ಲಾಗಲಿ ಪಳಿ ಎಂಬ ಳಯುಕ್ತವಾದ ಪದವನ್ನು ಪಂಪ ಮತ್ತೆಲ್ಲಿಯೂ ಬಳಸಿದಂತೆ ಕಾಣದು. ಪಳಿ ಎಂದರೆ ರೀತಿ, ಕ್ರಮ ಎಂದರ್ಥ; ನಡವಳಿ, ಸಾಗುವಳಿ ಎಂಬ ಪದಗಳಲ್ಲಿ ಪಳಿಯ ಅಸ್ತಿತ್ವವನ್ನು ಗುರುತಿಸಬಹುದು. ಆದರೆ ಮೇಲಿನ ಪದ್ಯದಲ್ಲಿ ಆ ಅರ್ಥ ಹೊಂದಿಕೆಯಾಗದು. ಆದುದರಿಂದ ಪರಿಷತ್ತಿನ ಪ್ರತಿಯ ಸಂಪಾದಕರು "ೞಿ" ಎಂಬ ಸಲಹೆಯನ್ನು ಅಡಿಟಿಪ್ಪಣಿಯಲ್ಲಿ ತೋರಿಸಿದ್ದಾರೆ. ಅನೇಕ ಕಡೆ ಪಂಪನ ಪದ್ಯಗಳನ್ನು ಆಧಾರಗಳಿಂದ ತಿದ್ದಿದ ಸಂಪಾದಕ ಮಂಡಲಿ ಇಲ್ಲಿ ಮಾತ್ರ ಆ ರೀತಿ ತಿದ್ದದೆ ಕೇವಲ ಸಲಹೆಯನ್ನು ಸೂಚಿಸಿ ಸುಮ್ಮನಾಗಿದ್ದಾರೆ. ಬಹುಶಃ ಪೞಿ ಎಂದು ಇಟ್ಟುಕೊಂಡರೆ 'ಳ'ಕಾರದ ಪ್ರಾಸಸ್ಥಾನದಲ್ಲಿ 'ೞ'ಕಾರ ಸೇರುತ್ತದೆ; ಪಂಪ ಸಾಮಾನ್ಯವಾಗಿ ಎಲ್ಲಿಯೂ ಪ್ರಾಸ ಉಲ್ಲಂಘಿಸುವುದಿಲ್ಲ; ಆದುದರಿಂದ ಇಲ್ಲಿ ಮತ್ತೇನೊ ಇರಬೇಕು–ಎಂದು ಅವರು ಭಾವಿಸಿದ್ದಿರಬೇಕು. ಆದರೆ ಕೆಲವು ಕಡೆ ಪಂಪ ಪ್ರಾಸನಿಯಮವನ್ನು ಉಲ್ಲಂಘಿಸಿದ್ದಾನೆ; 'ರ–ಱ; ಳ–ೞ'ಗಳನ್ನು ಪ್ರಾಸ ಮಾಡಿದ್ದಾನೆ. ಪದ್ಯ ೮–೮೫ರಲ್ಲಿ ಪೊರಸು ಎಂಬ ಪದ ಪೊಱಸು ಎಂದಿರಬೇಕೆಂದೂ, ರ–ಱಕಾರಗಳ ಪ್ರಾಸ ಆ ಪದ್ಯದಲ್ಲಿದೆಯೆಂದೂ ಆಚಾರ್ಯ ಶ್ರೀ ಡಿ. ಎಲ್. ನರಸಿಂಹಾಚಾರ್‌ರವರು ಆಧಾರಗಳಿಂದ ತೋರಿಸಿದ್ದಾರೆ (ಶಬ್ದವಿಹಾರ). ಆದುದರಿಂದ ಇಲ್ಲಿ

ಪಟು ಎಂಬುದೇ ಉಚಿತವಾದುದು. ಪಟು ಎಂಬ ಪದಕ್ಕೆ ನಿಂದಾಯಾಂ, ವಸ್ತ್ರವಿಶೇಷೇ ಚ-ಎಂಬ ಎರಡು ಅರ್ಥಗಳಿವೆ ಯೆಂದು ಕೇಶಿರಾಜನ ವಿವರಣೆ (ಧಾತು ಪ್ರಕರಣ). ಪಂಪನು ಪಟು ಎಂಬ ಪದವನ್ನು ಬಟ್ಟೆ, ವಸ್ತ್ರ ಎಂಬರ್ಥದಲ್ಲಿ ೩-೪೦ (ವ), ೪-೮೩(ವ) ಎಂಬಲ್ಲಿಯೂ; ನಿಂದೆ, ಬೈಗುಳ, ದೂಷಣೆ ಎಂಬರ್ಥದಲ್ಲಿ ೪-೯೧ ವ, ೬-೫೯ರಲ್ಲೂ ಪ್ರಯೋಗಿಸಿದ್ದಾನೆ. ಹಾಗೆಯೇ ಈ ಮೇಲಿನ ಕಂದ ಪದ್ಯದಲ್ಲಿ ಅಪಮಾನ, ನಿಂದೆ ಎಂಬ ಅರ್ಥದಲ್ಲಿ ಪಟು ಪದ ಪ್ರಯೋಗ ವಾಗಿದೆ. ರಾಜಸೂಯ ಯಾಗದ ಮಹಾಸಭೆಯಲ್ಲಿ ಸೇರಿದ ಪ್ರತಿಷ್ಠಿತ ಪ್ರಭುಗಳ ಕೊರಳಿಗೆ ಪಟುಯನ್ನು (ಅಪಮಾನ ವನ್ನು) ಕಟ್ಟಿದೆಯಾ? ಎಂಬುದು ಧರ್ಮರಾಯನ ಮೇಲೆ ಶಿಶುಪಾಲನ ಆಪಾದನೆ. ಆದುದರಿಂದ ಪಂಪನ ಈ ಪದ್ಯದಲ್ಲಿ ಳ-ಟುಕಾರಗಳ ಪ್ರಾಸವಿದೆ; ಪಟು ಎಂಬುದೇ ಸ್ವೀಕಾರಾರ್ಹ ವಾಗಿದೆ.

(ಬ) ತನಗೆ ಆಶ್ರಯ ಕೊಟ್ಟ ದೊರೆಯ ವಂಶಾವಳಿಯನ್ನೂ, ಕೀರ್ತಿ-ಪ್ರತಾಪಗಳನ್ನೂ ಕಾವ್ಯದ ಆರಂಭದಲ್ಲೇ ಪಂಪಕವಿ ವಿಹರಿಸುವ ಸಂದರ್ಭದಲ್ಲಿ ಬರುವ ಒಂದು ಪದ್ಯ ಇಂತಿದೆ,

ಅರಿಕೇಸರಿಯೆಂಬಂ ಸುಂ
ದರಾಂಗನತ್ಯಂತವಸ್ತುವಂ ಮದಕರಿಯಂ
ಹರಿಯಂ ಪಡಿವಡೆ ಗುರ್ಚಿದ
ಕರವಾಳನೆ ತೋಱಿ ನೃಪತಿ ಗೆಲ್ಲಂಗೊಂಡಂ ॥ ೧-೧೯.

ಬಿಚ್ಚಿಹಿಡಿದ ಕೈಗತ್ತಿಯನ್ನೆ ಪಡಿವಡೆಗೆ ತೋರಿಸಿ ಅದರ ಬೆದರಿಕೆಯಿಂದಲೇ ಅರಿಕೇಸರಿಯೆಂಬ ಸುಂದರಾಂಗನಾದ ನೃಪತಿ ಉತ್ತಮ ವಸ್ತುಗಳನ್ನೂ, ಮದಿಸಿದಾನೆಗಳನ್ನೂ, ಕುದುರೆಗಳನ್ನೂ ಗೆದ್ದನೆಂಬರ್ಥದ ಈ ಪದ್ಯದಲ್ಲಿ ಪಡಿವಡೆ ಎಂಬ ಪದ ಗಮನಾರ್ಹವಾದುದು. ಪಡಿವಡೆ ಎಂಬುದು ಪ್ರತಿಸೈನ್ಯವೆಂಬ ಸಂಸ್ಕೃತ ಪದದ ತದ್ಭವ; ಶತ್ರುಸೈನ್ಯವೆಂದು ಅರ್ಥ. ಪಂಪನು ಈ ಪದವನ್ನು ಮತ್ತೆಲ್ಲಿಯೂ ಬಳಸಿದಂತೆ ಕಾಣುವುದಿಲ್ಲ; ಅಲ್ಲದೆ ಕಿವಿಗೂ ಈ ಪದ ಅಷ್ಟು ಹಿತವಾಗಿಲ್ಲ. ಕನ್ನಡದಲ್ಲಿ 'ಪಡಿ' ಪದವನ್ನು ಬಾಗಿಲು (ಪಡಿಯರತಿ) ಎಂಬರ್ಥದಲ್ಲಿ ಬೇರೆ ಬಳಸುತ್ತೇವೆ. ಹೀಗಾಗಿ ಇಲ್ಲಿ ಬೇರೊಂದು ಉಚಿತವಾದ ಪದವಿದ್ದರೆ ಚೆನ್ನಾಗಿರುತ್ತದೆ ಯೆಂಬ ಭಾವನೆಯುಂಟಾಗುವುದು ಸಹಜ. ಪಂಪಭಾರತದ 'ಘ' ಪ್ರತಿಯಲ್ಲಿ ಪಡಿವಡೆ ಎಂಬುದಕ್ಕೆ 'ಪಗೆವಡೆ' ಎಂಬ ಪಾಠಾಂತರವಿದೆ. ಪಗೆವಡೆಯೆಂಬ ಪದಕ್ಕೂ ಶತ್ರುಸೈನ್ಯವೆಂಬ ಅರ್ಥವೇ ಇದ್ದು ಪಂಪನು ಹಲವು ಸಲ ಅದನ್ನು ಬಳಸಿರುವುದು ಕಾಣುತ್ತದೆ. ಉದಾಹರಣೆಗೆ ೧೦-೧೬, ೧೦-೧೧೧ ಮೊದಲಾದ ಪದ್ಯಗಳಲ್ಲಿ ಪಗೆವಾಡಿ ಪದದ ಪ್ರಯೋಗವನ್ನು ಗುರುತಿಸಬಹುದು. ಆದುದರಿಂದ ಮೇಲೆ ಉದಾಹರಿಸಿದ ಪಂಪನ ಪದ್ಯದಲ್ಲಿಯೂ ಪಡಿವಡೆ ಎಂಬ ಪದಕ್ಕಿಂತಲೂ ಪಗೆವಡೆಯೆಂಬ ಪದವೇ ಸಮಂಜಸವಾಗಿದ್ದು ಸ್ವೀಕಾರಾರ್ಹವಾಗಿದೆ. ಮಱುವಕ್ಕ ಎಂಬರ್ಥದಲ್ಲಿ ಪಗೆವಡೆಯೆಂಬ ಪದದ ಪ್ರಯೋಗವುಂಟೆಂಬುದನ್ನು ಕಿಟೆಲ್‌ರವರೂ ತಮ್ಮ ನಿಘಂಟಿನಲ್ಲಿ ಸೂಚಿಸಿದ್ದಾರೆ. ಮತ್ತು 'ಪಡಿವಡೆ' ಎಂಬ ಪದ ಕಿಟೆಲ್‌ಕೋಶದಲ್ಲಿ ಇಲ್ಲದುದನ್ನೂ ಗಮನಿಸಬೇಕು.

(ಕ) ಅರಿಕೇಸರಿಯ ಕುಲದಲ್ಲಿ ಬದ್ದೆಗನೆಂಬ ಹಿಂದಿನ ದೊರೆಯ ಪರಾಕ್ರಮನನ್ನೂ ಮಹಿಮೆಯನ್ನೂ ತಿಳಿಸುತ್ತಾ ಪಂಪಕವಿ ಹೀಗೆ ಹೇಳುವನು,

ಬಲ್ಪರಿಕೆಯೊಳರಿ ನೃಪರ ಪ
ಡಲ್ವಡೆ ತಳ್ತಿಱಿದು ರಣದೊಳಾ ವಿಕ್ರಮಮಂ
ಸೊಲ್ಪಿನ ಮಾವರ್ಜಿಸಿದಂ
ನಾಲ್ವತ್ತೆರಡಱಿಕೆಗಾಳಿಗಂಗಳೊಳೀತಂ ॥ ೧-೩೫.

ನಲವತ್ತೆರಡು ಸುಪ್ರಸಿದ್ಧ ಕಾಳೆಗಗಳಲ್ಲಿ ಬದ್ದೆಗನು ತನ್ನ ಶಕ್ತಿಯಿಂದ ಮುನ್ನುಗ್ಗುವಿಕೆಯಿಂದ ಶತ್ರುರಾಜರು ಚೆಲ್ಲಾಪಿಲ್ಲಿಯಾಗುವಂತೆ ಧ್ವಂಸ ಮಾಡಿ ತನ್ನ ಆ ಪರಾಕ್ರಮವನ್ನು ಹೇಳುವಂತೆ ಆವರ್ಜಿಸಿದನಂತೆ. ಪಂಪಭಾರತದ ಸಂಪಾದಕರಾದ ಶ್ರೀ ಬೆಳ್ಳಾವೆ ವೆಂಕಟನಾರಣಪ್ಪನವರು ಆವರ್ಜಿಸಿದಂ ಎಂಬ ಪದಕ್ಕೆ ಪ್ರಶ್ನಾರ್ಥಕ ಚಿಹ್ನೆ ಹಾಕಿದ್ದಾರೆ. ಆವರ್ಜಿಸಿದಂ ಎಂದರೆ ಸೆಳೆದುಕೊಂಡನು ಎಂದು ಅರ್ಥ. ಪಂಪನ ಪದ್ಯದ ಅರ್ಥ ವಿವರಣೆಗೆ ಈ ಪದ ಹೊಂದಿಕೊಳ್ಳುವುದಿಲ್ಲ. ಆದುದರಿಂದಲೇ ಸಂಪಾದಕರು ಪ್ರಶ್ನಾರ್ಥಕ ಚಿಹ್ನೆಯಿಂದ ತಮ್ಮ ಸಂದೇಹವನ್ನು ಸೂಚಿಸಿರುವುದು. ಆವರ್ಜಿಸಿದಂ ಎಂಬ ಪದದ ಬದಲು **ಆವರ್ತಿಸಿದಂ** ಎಂಬ ಪಾಠಾಂತರವೂ ಇದೆ. ಆವರ್ತಿಸಿದಂ ಎಂದರೆ ವ್ಯಾಪಿಸಿದನು ಎಂದು ಅರ್ಥ. ಸೆಳೆದುಕೊಂಡನು ಎಂಬ ಅರ್ಥಕ್ಕಿಂತಲೂ ವ್ಯಾಪಿಸಿದನು ಎಂಬ ಅರ್ಥವೇ ಯೋಗ್ಯವಾಗಿರುವಂತೆ ಕಾಣುತ್ತದೆ. ಆದುದರಿಂದ ಈ ಆವರ್ಜಿಸಿದಂ ಎಂಬ ಪದದ ಬದಲು ಸೂಕ್ತವಾಗಿ ಕಾಣುವ ಆವರ್ತಿಸಿದಂ ಎಂಬ ಪಾಠಾಂತರವನ್ನೇ ಇಟ್ಟುಕೊಳ್ಳುವುದು ತಕ್ಕುದಾಗಿ ಕಾಣುತ್ತದೆ.

(ಗ) ಅರ್ಜುನನು ಸಕಲ ವಿದ್ಯಾ ಪಾರಂಗತನಾದನೆಂದು ಪಂಪಕವಿ ವಿಸ್ತಾರವಾಗಿ ವಿವರಿಸುತ್ತಾ "ಗಜಾಗಮಜ್ಞರಾಜಪುತ್ರ ಗೌತಮ ವಾದ್ವಾಕಿ ಪಾಳಕಾಶ್ಯಪ ಸುಪತಿ ಶ್ರೀಹರ್ಷಾದಿ ಪುರಾಣಪುರುಷವಿರಚಿತಂಗಳಪ್ಪ ಹಸ್ತಿಶಾಸ್ತ್ರಂಗಳೊಳಂ" (೨-೩೪ ವ.) ಪರಿಣತನಾದನಂತೆ. ಬಹಳ ಹಿಂದೆಯೇ

ಗಜಶಾಸ್ತ್ರ ಅಶ್ವಶಾಸ್ತ್ರ ವಿಚಾರದಲ್ಲಿ ಪುರಾತನಾಚಾರ್ಯರಿಂದ ಕೃತಿಗಳು ರಚಿತವಾದಂತೆ ತಿಳಿದುಬರುತ್ತದೆ. ಇವುಗಳ ಅಭ್ಯಾಸದಿಂದ ರಾಜನಾಗುವವನು ಶಸ್ತ್ರವಿದ್ಯಾಪಾರಂಗತನಾದಂತೆ ಶಾಸ್ತ್ರವಿದ್ಯಾಪಾರಂಗತನೂ ಆಗಬೇಕಿತ್ತು. ಕನ್ನಡದ ಹಿರಿಯ ವಿದ್ವಾಂಸರಾದ ಆಚಾರ್ಯ ಶ್ರೀ ಡಿ. ಎಲ್. ನರಸಿಂಹಾಚಾರ್‌ರವರು ಸುಮಾರು ಎಂಟು ತಾಳೆಗರಿ ಪ್ರತಿಗಳ ಆಧಾರದಿಂದ ಸಶಾಸ್ತ್ರೀಯವಾಗಿ ಸಿದ್ಧಪಡಿಸಿರುವ ವಡ್ಡಾರಾಧನೆಯೆಂಬ ಗದ್ಯಗ್ರಂಥ ಕೆಲವು ವರ್ಷಗಳಷ್ಟಾದರೂ ಪಂಪಪೂರ್ವಕೃತಿಯೆಂದು ಭಾಷಾ ದೃಷ್ಟಿಯಿಂದ ಅಭಿಪ್ರಾಯಪಟ್ಟಿದ್ದಾರೆ. ಹಲವು ದೃಷ್ಟಿಗಳಿಂದ ವಿಶಿಷ್ಟ ಕೃತಿಯಾದ ಆ ಗದ್ಯಗ್ರಂಥದಲ್ಲಿ ಪುಟ ೪, ೨೩, ೧೨೮, ೧೮೩–ಮೊದಲಾದ ಕಡೆಗಳಲ್ಲಿ 'ಪಾಳ(ಲ)ಕಾಪ್ಯಂ' ಎಂದೇ ಇದೆ. ಪಂಪಭಾರತದ ೧೮೯೮ರ ಮೊದಲ ಮುದ್ರಣದ ಪ್ರತಿಯಲ್ಲೂ ಪಾಳಕಾಪ್ಯ ಎಂದಿದೆ. ವಡ್ಡಾರಾಧನೆಯ ಆಧಾರದಿಂದ ಪಂಪನ ಕಾವ್ಯದಲ್ಲೂ ಮೇಲಿನ ಗದ್ಯದಲ್ಲಿ ಪಾಳಕಾಶ್ಯಪ ಎಂಬುದನ್ನು ಪಾಳಕಾಪ್ಯ ಎಂದು ತಿದ್ದುವುದೇ ಉಚಿತವಾಗಿ ಕಾಣುತ್ತದೆ. ಪ್ರೊ|| ಡಿ. ಎಲ್. ಎನ್–ರವರು ಎಂ. ಎ. ತರಗತಿಯಲ್ಲಿ ನಮಗೆ ಪಾಠ ಹೇಳುವಾಗ ಪಾಳಕಾಪ್ಯಂ ಎಂಬುದೇ ಸರಿಯಾದ ಪಾಠವೆಂದು ಅಭಿಪ್ರಾಯಪಟ್ಟಿದ್ದು ನನಗೆ ನೆನಪಿದೆ. ಪಾಳಕಾಪ್ಯ ಎಂಬ ಪದ ಕಿಟೆಲ್ ಕೋಶದಲ್ಲಿ ಇಲ್ಲವಾದುದರಿಂದ ಅದರ ಪುನರ್‌ಮುದ್ರಣದಲ್ಲಿ ಸೇರುವುದು ಅಗತ್ಯ. ಗಜಶಾಸ್ತ್ರವನ್ನು ಬರೆದ ಪಾಳಕಾಪ್ಯನ ಹೆಸರೇ ಕ್ರಮೇಣ ಗಜಶಾಸ್ತ್ರಕ್ಕೆ ಅನ್ವಯವಾಯಿತು; ಔಷಧಿಯನ್ನು ಹೊಸದಾಗಿ ಕಂಡುಹಿಡಿದ ವಿಜ್ಞಾನಿಯ ಹೆಸರನ್ನೇ ಆ ಔಷಧಿಗೆ ಇಡುವಂತೆ!

(ಚ) ಪ್ರತಿಸ್ಪರ್ಧಿಗಳಾದ ದುಶ್ಯಾಸನ–ಭೀಮ ಇಬ್ಬರೂ ಬದ್ಧವೈರದಿಂದ ಯುದ್ಧಮಾಡುವ ಸಂನಿವೇಶದಲ್ಲಿ ಬರುವ ಪದ್ಯವೊಂದು ಇಂತಿದೆ,

**ಕಱುಪೆಟ್ಟಿ ಪಗೆಯ ಬೇರ್ವರಿ**
**ದುಱುವಿಂಕೆಯ ಪೊದಟ್ಟಿಗಂಡಮಚ್ಚರದೊದವಾ**
**ನೆಱನನೆ ಮೂದಲಿಸುತ್ತುಂ**
**ನೆಱನನೆ ತೆಗೆದೆಚ್ಚರೊರ್ವರೊರ್ವರನಾಗಳ್ || ೧೨–೧೪೭.**

ಅಸಹನೆ ಎದ್ದ(?) ಶತ್ರುವಿನ ಬೇರನ್ನು ಕತ್ತರಿಸಿ ಅಧಿಕವಾಗಿ ವ್ಯಾಪಿಸಿದ ಹಳೆಯ ಮಾತ್ಸರ್ಯದಿಂದ ಮರ್ಮಸ್ಥಾನಗಳನ್ನು ಮೂದಲಿಸಿಕೊಂಡು ಒಬ್ಬರು ಮತ್ತೊಬ್ಬರ ಆಯಸ್ಥಾನಕ್ಕೆ ಹೊಡೆದರಂತೆ. ಈ ಪದ್ಯದ ಪ್ರಾರಂಭದ ಪಾದದ ಪೂರ್ವಾರ್ಧದಲ್ಲಿನ 'ಕಱುಪೆಟ್ಟಿ' ಪದ ವಿಚಾರಾರ್ಹವಾದುದು. ಅದು ಕಱುಪು + ಎಟ್ಟಿ = ಕಱುಪೆಟ್ಟಿ – ಎಂದಾಗಿದೆ. ಕಱುಪು ಎಂದರೆ ಅಸಹನೆ; ಎಟ್ಟಿ ಎಂದರೆ ಎದ್ದ ಎಂದು ಅರ್ಥ. ಆದರೆ 'ಅಸಹನೆ ಎದ್ದ' ಎಂಬುದು ಅಸಮಂಜಸವಾಗಿ ಕಾಣುತ್ತದೆ. ಪದ್ಯದ ಭಾವಾರ್ಥವನ್ನು ಗಮನಿಸಿದಾಗಲೂ 'ಅಸಹನೆ ಎದ್ದ ಶತ್ರುವಿನ' ಎಂಬ ವಿವರಣೆಯಲ್ಲಿ ಹೊಂದಾಣಿಕೆಯಿಲ್ಲ. ಈ ಎಟ್ಟಿ ಪದಕ್ಕಿರುವ ಪಾಠಾಂತರ ಗಮನಿಸೋಣ. ಪಂಪಭಾರತದ ಖ ಮತ್ತು ಗ ಪ್ರತಿಗಳಲ್ಲಿ **'ಎರ್ದ'** ಎಂಬ ಪದವಿದೆ, ಆದರೆ ಎರ್ದ ಪದ ಎಟ್ಟಿ ಪದದ ತರುವಾಯದ ರೂಪವಾದುದರಿಂದ ಸ್ವೀಕಾರಾರ್ಹವಲ್ಲ. ಘ–ಪ್ರತಿಯಲ್ಲಿ **ಇರ್ದ** ಎಂಬ ಪದವಿದೆ (ಕಱುಪು + ಇರ್ದ = ಕಱುಪಿರ್ದ = ಅಸಹನೆಯಿದ್ದ). ಈ ಪಾಠಾಂತರ ಅತ್ಯಂತ ಯೋಗ್ಯವಾಗಿದೆ. 'ಬಾಲ್ಯದಿಂದಲೂ ಒಬ್ಬರಿಗೊಬ್ಬರಿಗೆ ಆಗದೆ ಮತ್ಸರವಿರುವ ಪಗೆಯ ಬುಡವನ್ನೇ ಕಿತ್ತು ಕತ್ತರಿಸುವಂತೆ ಹೋರಾಡಿದರು'–ಎಂಬುದರಲ್ಲಿ ಔಚಿತ್ಯವಿದೆ. ಆದುದರಿಂದ ಕಱುಪೆಟ್ಟಿ ಎಂಬುದು ಕಱುಪಿರ್ದ ಎಂದಾಗುವುದು ಸರಿ. ಸಂಶೋಧಕರು ಈ ಸೂಚನೆಗಳನ್ನು ಪರಿಶೀಲಿಸಬೇಕಾಗಿ ವಿನಂತಿಸುವೆನು.

# ಧಾರವಾಡದ ವಿದ್ಯಾವರ್ಧಕ ಸಂಘದ ೭೫ನೇ ಹುಟ್ಟುಹಬ್ಬ

ಸಮಗ್ರ ಕರ್ನಾಟಕದ ಸರ್ವಾಂಗೀಣ ಉನ್ನತಿಗೆ ಪರಿಶ್ರಮಿಸಲೆಂದು ಸ್ಥಾಪಿತವಾದ, ಪ್ರಾಯಶಃ ಮೊಟ್ಟ ಮೊದಲನೇ ಸಂಸ್ಥೆಯಾದ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘವು ತನ್ನ ೭೫ನೇ ಹುಟ್ಟು ಹಬ್ಬವನ್ನು ಮೊನ್ನೆ ನಿರಾಡಂಬರ ರೀತಿಯಲ್ಲಿ ಆದರೂ ಪ್ರಭಾವಶಾಲಿಯಾಗಿ ಆಚರಿಸಿತು.

ಧಾರವಾಡದಲ್ಲಿ ಕನ್ನಡತನವೇ ಇಲ್ಲದ ಕಾಲವೊಂದಿತ್ತು ಎಂದು ಹೇಳಿದರೆ ಇಂದು ಯಾರೂ ನಂಬಲಿಕ್ಕಿಲ್ಲ. ಆದರೆ ಅಂಥ ದಿನದಲ್ಲಿ ಕನ್ನಡತನದ ಜಾಗೃತಿಯುಳ್ಳ ಸದ್ಗೃಹಸ್ಥರ ಸಭೆ ೨೦-೭-೧೮೯೦ ರಂದು ಸೇರಿ ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಲಾಯಿತು. ಈ ಸಂಘದ ಮೊದಲನೇ ಅಧ್ಯಕ್ಷರು ಶಾಮರಾವ್ ವಿಠಲ ಕಾಯಕಿಣಿ ಎಂಬುವರು. ಕನ್ನಡ ಭಾಷಾಭಿವೃದ್ಧಿಗೆ ಪ್ರಯತ್ನಿಸಬೇಕು. ಧಾರವಾಡದಲ್ಲಿ ಕನ್ನಡ ಗ್ರಂಥ ಭಂಡಾರ ಸ್ಥಾಪಿಸಬೇಕು ಎಂಬ ಉದಾತ್ತ ಧ್ಯೇಯಗಳನ್ನು ಸಂಘವು ಇಟ್ಟುಕೊಂಡಿದ್ದರೂ ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಕಲಿಸುವ ಮಟ್ಟದಿಂದ ಸಂಘವು ತನ್ನ ಚಟುವಟಿಕೆ ಪ್ರಾರಂಭಿಸಬೇಕಾಯಿತು. ಅಂದಿನ ಮುಂದಾಳುಗಳೂ ಅಷ್ಟೇ ಹಟವಾದಿಗಳಾಗಿದ್ದರು. ಅಂತೇ ದಕ್ಷಿಣ ಮಹಾರಾಷ್ಟ್ರವೆನಿಸಿದ ಈ ಉತ್ತರ ಕರ್ನಾಟಕದ ಭಾಗದಲ್ಲಿ ಕನ್ನಡ ಶಾಲೆಗಳು ಪ್ರಾರಂಭವಾದವು. ಸ್ವತಃ ವಿದ್ಯಾವರ್ಧಕ ಸಂಘವೇ ಕಳೆದ ಶತಮಾನದ ಕೊನೆಯಲ್ಲಿ ವಾಗ್ಭೂಷಣ ಎಂಬ ಮಾಸಿಕವನ್ನು ಪ್ರಾರಂಭಿಸಿ ೧೮ ವರ್ಷಗಳಕಾಲ ಜನತೆಯಲ್ಲಿ ಕನ್ನಡ ಪ್ರಚಾರವನ್ನು ಅಮೋಘವಾಗಿ ಮಾಡಿತು. ಗ್ರಂಥಪ್ರಕಟನೆ ಕಾರ್ಯ ಕೈಗೊಂಡು ಇದುವರೆಗೆ ೧೧೦ ಗ್ರಂಥಗಳನ್ನು ಪ್ರಸಿದ್ಧಿಸಿರುವ ಈ ಸಂಘವು ವಿವಿಧ ೨೫ ಲೇಖಕರಿಗೆ ೨೨ ಸಾವಿರಕ್ಕೂ ಮಿಕ್ಕಿ ಹಣವನ್ನು ಪಾರಿತೋಷಕವಾಗಿ ನೀಡಿರುತ್ತದೆ. ಈ ಸಂಘದ ಅಧ್ಯಕ್ಷ ಪರಂಪರೆಯಲ್ಲಿ ರೆವರೆಂಡ್ ಜಿಗ್ಲರ್‌ಸಾಹೇಬರು, ವೆಂಕಟರಂಗೋ ಕಟ್ಟಿಯವರು, ಸವಣೂರಿನನವಾಬಸಾಹೇಬರು, ಸಿ. ಸಿ. ಹುಲಕೋಟಿ, ಜಿ. ಆರ್. ನಲವಡಿ ಅವರು ಪ್ರಮುಖರೆಂದು ಹೇಳಬಹುದು.

ವಿದ್ಯಾವರ್ಧಕ ಸಂಘವು ೧೯೧೭ ರಲ್ಲಿಯೇ ಕರ್ನಾಟಕ ಏಕೀಕರಣದ ಪ್ರಸ್ತಾಪ ಮಾಡಿದ್ದಿತು. ಹಾಗೆ ನೋಡಿದರೆ ಇಂದು ಕರ್ನಾಟಕದಲ್ಲಿ ಆಗಿರುವ ಸಕಲ ಮಹತ್ಕಾರ್ಯಗಳ ಬೀಜಾರೋಪಣ ಈ ಸಂಘದಿಂದಲೇ ಆಗಿದೆ. ಕನ್ನಡ ಸಾಹಿತ್ಯ ಪರಿಷತ್ತಿಗೆ ಇದು ಮಾತೃ ಸಂಸ್ಥೆ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಆಕಾಶವಾಣಿ ಕೇಂದ್ರಗಳಿಗೂ ಈ ಸಂಘದ ಪ್ರಯತ್ನಗಳೇ ಮೂಲಕಾರಣ ಇಷ್ಟೊಂದು ಕಾರ್ಯ ಸಾಧಿಸಿರುವ ಸಂಘವು (೧) ಕನ್ನಡಿಗರಲ್ಲಿ ಜ್ಞಾನ ಪ್ರಸಾರ ಮಾಡುವುದು (೨) ಹಳೆ ಕನ್ನಡ ಕಾವ್ಯ ಅಭ್ಯಾಸಕ್ಕೆ ಉತ್ತೇಜನ ನೀಡುವುದು (೩) ಕನ್ನಡ ಬಾರದಿರುವವರಿಗೆ ಕನ್ನಡ ಕಲಿಸುವುದು. ವಿದ್ಯಾವರ್ಧಕ ಸಂಘವು ಸದ್ಯ ತನ್ನ ಮುಂದೆ ಇಟ್ಟುಕೊಂಡಿರುವ ಗುರಿ ಮಹತ್ವದ್ದೇ ಆಗಿದೆಂದು ಬೇರೆ ಹೇಳಬೇಕಾಗಿಲ್ಲ. ಕರ್ನಾಟಕದ ಜೀವ ಜೀವಾಳವಾಗಿ ಬೆಳೆದು ಬಂದಿರುವ ಈ ವಿದ್ಯಾವರ್ಧಕ ಸಂಘವು ತನ್ನ ಚಟುವಟಿಕೆಗಳನ್ನು ನಿರಂತರವಾಗಿ ಸಾಗಿಸಿ ಶತಮಾನೋತ್ಸವವನ್ನು ಕಾಣಲಿ. ಕನ್ನಡ ಕುಲಕೋಟಿಗೆ ಸುಖ ಸಮೃದ್ಧಿಯನ್ನು ನೀಡುವಂತಾಗಲಿ ಎಂದು 'ಸಂಯುಕ್ತ ಕರ್ನಾಟಕ' ಬರೆದಿದೆ.

## ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರ ಮತ್ತು ಕಾರ್ಯಕಾರಿ ಸಮಿತಿಯ ಸದಸ್ಯರ ಚುನಾವಣೆಯು **ತಾ॥ ೨೫-೧೦-೧೯೬೪ನೆಯ ಭಾನುವಾರ ನಡೆಯುತ್ತದೆ.** ಈ ಸಂದರ್ಭದಲ್ಲಿ ಪರಿಷತ್ತಿನ ಸದಸ್ಯತ್ವದ ಚಂದಾ ಬಾಕಿಯನ್ನೂ ಮತ್ತು ಹೊಸ ಸದಸ್ಯತ್ವದ ಚಂದಾ ಹಣವನ್ನೂ **ತಾ॥ ೨೪-೮-೧೯೬೪ನೆಯ ಸೋಮುವಾರ ಸಂಜೆ ೫ ಗಂಟೆಯವರೆಗೆ ಮಾತ್ರ ಸ್ವೀಕರಿಸಲಾಗುತ್ತದೆ.**

**ಕೆ. ಎಂ. ಕೃಷ್ಣರಾವ್**
ಎಸ್. ಶಂಕರಪ್ಪ
ಗೌರವ ಕಾರ್ಯದರ್ಶಿಗಳು

# ಕನ್ನಡ ಸಾಹಿತ್ಯ ಪರಿಷತ್ತು ಶ್ರೀ ನಂದಾರವರಲ್ಲಿ ಒಪ್ಪಿಸಿದ ವರದಿ

ಭಾರತದ ಮಹಾಜನಗಳ ಅಪೇಕ್ಷೆಯಂತೆ ಮಹಾತ್ಮ ಗಾಂಧಿ, ಪಂಡಿತ ನೆಹರು, ಸರ್ದಾರ್ ಪಟೇಲ್ ಮೊದಲಾದವರ ಆಶೀರ್ವಾದದ ಫಲವಾಗಿ, ರಾಜ್ಯಪುನರ್‍ರಚನಾ ಸಮಿತಿ ತೀರ್ಮಾನದ ಫಲವಾಗಿ ೧೯೫೬ನೆಯ ನವೆಂಬರ್ ೧ನೇ ತಾರೀಖು ವಿಶಾಲ ಮೈಸೂರು ಅಥವಾ ಕರ್ಣಾಟಕರಾಜ್ಯ ಉದಯವಾಗಿದೆಯಷ್ಟೆ. ಇದರಿಂದ ನಮ್ಮ ಕರ್ಣಾಟಕ ರಾಜ್ಯಕ್ಕೆ ತುಂಬಾ ನಷ್ಟವೂ, ಅನ್ಯಾಯವೂ ಆಗಿದೆ. ಮಹಾರಾಷ್ಟ್ರದಲ್ಲಿ ಸೇರಿಹೋಗಿರುವ ಸೊಲ್ಲಾಪುರ, ದಕ್ಷಿಣ ಸೊಲ್ಲಾಪುರ, ಅಕ್ಕಲಕೋಟೆ, ಜತ್ತ, ಗಡಹಾಗ್ಲೇಜು ತಾಲ್ಲೂಕುಗಳು ದೇಗಲೂರು ಮತ್ತು ಉಮರಗ ಮೈಸೂರು ರಾಜ್ಯಕ್ಕೆ ಬರಬೇಕಾಗಿವೆ.

ಅಲ್ಲಿನ ಜನರ ಶಿಕ್ಷಣ, ಜೀವನ ಪ್ರಗತಿ, ಆರೋಗ್ಯ ರಕ್ಷಣೆ, ನಗರನಿರ್ಮಲೀಕರಣ ಇತ್ಯಾದಿಗಳಿಗೆ ಮಹಾರಾಷ್ಟ್ರ ಸರ್ಕಾರವು ಗಮನಕೊಟ್ಟಿಲ್ಲ. ಇವು ಎಂದಾದರೂ ಕರ್ಣಾಟಕ ರಾಜ್ಯಕ್ಕೆ ಹೋಗುವ ಭಾಗಗಳೆಂದು ಉದಾಸೀನ ಮಾಡಿದ್ದಾರೆ. ಇದರಿಂದ ಈ ಭಾಗದ ಜನಗಳ ಅಭ್ಯುದಯಕ್ಕೆ ತೊಂದರೆಯಾಗಿದೆ. ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಗಳ ಏಳಿಗೆಗೂ ಅಡಚಣೆಯಾಗಿದೆ. ಕಾರಣ ಸುಮಾರು ಈ ಭಾಗದಲ್ಲಿರುವ ೩೦ ಲಕ್ಷಮಂದಿ ಕನ್ನಡಿಗರು ಕಣ್ಣೀರು ಸುರಿಸುತ್ತಿದ್ದಾರೆ. ಈ ಜನ ಮೈಸೂರು ರಾಜ್ಯಕ್ಕೆ ಸೇರಬೇಕೆಂದು ಬಯಸುತ್ತಿದ್ದಾರೆ.

ಬಹು ಕಾಲ ಕರ್ಣಾಟಕದ ಭಾಗವಾಗಿದ್ದು ದಕ್ಷಿಣ ಕನ್ನಡ ಜಿಲ್ಲೆಯ ಒಂದು ತಾಲ್ಲೂಕು ಭಾಗವಾಗಿದ್ದ ಕಾಸರಗೋಡು ಶುದ್ಧ ಕನ್ನಡ ಪ್ರದೇಶವಾಗಿರುತ್ತದೆ. ದಿವಂಗತ ಸರ್ದಾರ್ ಫಣಿಕ್ಕರರ ಪಕ್ಷಪಾತದ ಫಲವಾಗಿ ಅದು ಕೇರಳಕ್ಕೆ ಸೇರಿದೆ. ಅಲ್ಲಿರುವ ಸುಮಾರು ೨ ಲಕ್ಷಜನ ಮೈಸೂರಿಗೆ ಸೇರಲು ಬಹಳವಾಗಿ ಪ್ರಯತ್ನಿಸುತ್ತಿದ್ದಾರೆ. ಜನರಿಂದ ಕೇರಳ ಸರ್ಕಾರ ಪಡೆದುಕೊಳ್ಳುವ ಸುಮಾರು ವರುಷಕ್ಕೆ ೧ ಕೋಟಿ ರೂಪಾಯಿ ತೆರಿಗೆಯ ಪ್ರತಿಫಲವಾಗಿ ಆ ಭಾಗದ ಜನರ ಏಳಿಗೆಗಾಗಿ ಆ ಸರ್ಕಾರ ಯಾವ ಪ್ರಯತ್ನವನ್ನೂ ಮಾಡುತ್ತಿಲ್ಲ. ಆದುದರಿಂದ ಈ ಭಾಗವು ಕೂಡಲೇ ಮೈಸೂರಿಗೆ ಸೇರುವಂತೆ ಇಂಡಿಯಾ ಸರ್ಕಾರವು ಏರ್ಪಡಿಸಬೇಕು.

ಮದರಾಸ್ ರಾಜ್ಯಕ್ಕೆ ಸೇರಿರುವ ನೀಲಗಿರಿ ಡಿಸ್ಟ್ರಿಕ್ಟ್, ತಾಳವಾಡಿ ಫಿರ್ಕ, (ಕೊಯಮತ್ತೂರು ಡಿಸ್ಟ್ರಿಕ್ಟ್) ಹೊಸೂರು ತಾಲ್ಲೂಕು (ಸೇಲಂ ಡಿಸ್ಟ್ರಿಕ್ಟ್) ಮೊದಲಾದ ಪ್ರದೇಶಗಳು ಐತಿಹಾಸಿಕ, ಭೌಗೋಳಿಕ, ಸಾಂಸ್ಕೃತಿಕ ಕಾರಣಗಳಿಂದ ಮೈಸೂರಿಗೆ ಸೇರತಕ್ಕುವುಗಳಾಗಿವೆ. ಆಡಳಿತ ಸೌಕರ್ಯ ದೃಷ್ಟಿಯಿಂದ ಕೂಡ ಇವು ಮೈಸೂರಿಗೆ ಸೇರಲು ಅರ್ಹವಾಗಿವೆ. ಕೂಡಲೇ ಇವನ್ನು ಮೈಸೂರು ರಾಜ್ಯಕ್ಕೆ ಸೇರಿಸಬೇಕಾಗಿ ಕೇಂದ್ರ ಸರ್ಕಾರವನ್ನು ಪ್ರಾರ್ಥಿಸುತ್ತೇವೆ.

ಮಡಕಶಿರ, ಆದವಾನಿ, ಆಲೂರು, ರಾಮದುರ್ಗ ಮತ್ತು ಹಿಂದೂಪುರ ಈ ತಾಲ್ಲೂಕುಗಳು ಆಂಧ್ರ ರಾಜ್ಯಕ್ಕೆ ಸೇರಿವೆ. ಇವುಗಳಲ್ಲಿ ಕನ್ನಡ ಪ್ರದೇಶಗಳು ಬಹಳವಾಗಿವೆ. ಆಂಧ್ರ ಸರ್ಕಾರದವರು ಈ ಭಾಗದಲ್ಲಿರುವ ಸುಮಾರು ೬ ಲಕ್ಷ ಮಂದಿ ಕನ್ನಡಿಗರ ಹಿತಕ್ಕಾಗಿ ಯಾವ ಪ್ರಯತ್ನವನ್ನೂ ಮಾಡುತ್ತಿಲ್ಲ. ಅಲ್ಲಿ ಕನ್ನಡ ಭಾಷೆಗೆ ರಾಜ್ಯಾಂಗ ನಿಯಮದ ಪ್ರಕಾರವಾಗಿ ಯಾವ ರಕ್ಷಣೆಯನ್ನೂ ಮಾಡಿಲ್ಲ. ಈ ತಾಲ್ಲೂಕುಗಳಲ್ಲಿರುವ ಕನ್ನಡ ಪ್ರದೇಶಗಳು ಕೂಡಲೇ ಮೈಸೂರು ರಾಜ್ಯಕ್ಕೆ ಸೇರುವಂತೆ ಕೇಂದ್ರ ಸರ್ಕಾರವನ್ನು ಪ್ರಾರ್ಥಿಸುತ್ತೇವೆ.

ಬೆಳಗಾಂವಿ, ನಿಪ್ಪಾಣಿ, ಕಾರವಾರ್ ಪ್ರದೇಶಗಳು ಶುದ್ಧ ಕನ್ನಡ ಪ್ರದೇಶಗಳಾಗಿವೆ. ಇವು ಆಡಳಿತ ದೃಷ್ಟಿಯಿಂದಲೂ, ಐತಿಹಾಸಿಕ, ಭೌಗೋಳಿಕ ದೃಷ್ಟಿಯಿಂದಲೂ ಮೈಸೂರಿಗೆ ಸೇರಿದ ಭಾಗಗಳಾಗಿವೆ. ಫಜಲಾಲಿ ಕಮಿಟಿಯವರು ವಿಚಾರ ಮಾಡಿಯೇ ಇವನ್ನು ಮೈಸೂರಿಗೆ ಸೇರಿಸಿದ್ದಾರೆ. ಆದ್ದರಿಂದ ಈ ಭಾಗಗಳು ಯಾವ ಕಾರಣದಿಂದಲೂ ಮೈಸೂರು ರಾಜ್ಯವನ್ನು ಬಿಟ್ಟು ಹೋಗಬಾರದೆಂದು ಕನ್ನಡ ಸಾಹಿತ್ಯ ಪರಿಷತ್ತಿನ ಮತ್ತು ಎರಡೂವರೆ ಕೋಟಿ ಕನ್ನಡಿಗರ ಸ್ಪಷ್ಟಾಭಿಪ್ರಾಯವಾಗಿದೆ. ಈ ವಿಷಯದಲ್ಲಿ ಮೈಸೂರು ಸರ್ಕಾರದವರು ತೆಗೆದುಕೊಂಡಿರುವ ನಿಲುವಿಗೆ ಪರಿಷತ್ತಿನ ಸಂಪೂರ್ಣ ಬೆಂಬಲವಿದೆ.

ಈಗ ತಾನೇ ಸ್ವತಂತ್ರವಾಗಿರುವ ಗೋವ ಐತಿಹಾಸಿಕ, ಭೌಗೋಳಿಕ ಮತ್ತು ಆಡಳಿತ ಸೌಕರ್ಯ ದೃಷ್ಟಿಯಿಂದ ಮೈಸೂರಿಗೆ ಸೇರುವುದೇ ಸಮಂಜಸವೆಂದು ಕನ್ನಡ ಸಾಹಿತ್ಯ ಪರಿಷತ್ತಿನ ಖಚಿತ ಅಭಿಪ್ರಾಯವಾಗಿದೆ.

ಕರ್ಣಾಟಕದ ಜನರು ಸಂಸ್ಕೃತಿವಂತರು ಮತ್ತು ನಿಯಮಬದ್ಧರು. ಗಡಿನಾಡಿನ ಇತರರಂತೆ ಗಲಾಟೆ ಮಾಡುವ ಜನಗಳಲ್ಲ ಎಂಬುದನ್ನು ಇಂಡಿಯಾ ಸರ್ಕಾರದ

ಗಮನಕ್ಕೆ ತರಲು ನಾವು ಬಯಸುತ್ತೇವೆ. ಈ ನಮ್ಮ ಬೇಡಿಕೆಗಳ ಬಗೆಗೆ ನ್ಯಾಯನಿಷ್ಠರಾದ ತಮ್ಮಿಂದಲೂ ಇಂಡಿಯಾ ಸರ್ಕಾರದಿಂದಲೂ ಸರಿಯಾದ ನ್ಯಾಯವು ಸಿಕ್ಕುವುದೆಂದು ನಂಬುತ್ತೇವೆ. ಪ್ರಜಾಪ್ರಭುತ್ವದ ಇಂದಿನ ದಿವಸಗಳಲ್ಲಿ ಜನಾಭಿಪ್ರಾಯಕ್ಕೆ ಮನ್ನಣೆ ಕೊಡಬೇಕೆಂಬುದನ್ನು ನಾವು ತಮಗೆ ಬಿನ್ನವಿಸಬೇಕಾಗಿಲ್ಲ, ದೇಶಕ್ಕೆ ದೊರೆತ ಸ್ವಾತಂತ್ರ್ಯ ಭಾಗ್ಯವು ಎಲ್ಲರಿಗೂ ಸಮವಾಗಿ ಹಂಚಿಕೆಯಾಗಬೇಕೆಂಬುದು ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯ. ಈ ಮನವಿಯಲ್ಲಿ ನಾವು ಭಿನ್ನವಿಸಿರುವ ಪ್ರಕಾರ ಮಹಾರಾಷ್ಟ್ರ, ಆಂಧ್ರ, ತಮಿಳುನಾಡು, ಕೇರಳ, ಪ್ರದೇಶಗಳಲ್ಲಿರುವ ಸೊಲ್ಲಾಪುರ, ಅಕ್ಕಲಕೋಟೆ, ಜತ್ತ, ಗಡಹಾಂಗ್ಲೇಜ, ದೇಗಲೂರು, ಉಡುರಗ, ಮಡಕಶಿರ, ಆದವಾನಿ, ರಾಯದುರ್ಗ, ಆಲೂರು, ತಾಳವಾಡಿ, ಹೊಸೂರು, ಕಾಸರಗೋಡು, ಮತ್ತು ನೀಲಗಿರಿ ಈ ಕರ್ಣಾಟಕದ ಪ್ರದೇಶಗಳನ್ನು ವಿಶಾಲ ಮೈಸೂರು ಅಥವಾ ಕರ್ಣಾಟಕ ರಾಜ್ಯಕ್ಕೆ ಕೂಡಲೇ ಸೇರುವಂತೆ ಮಾಡಿ ಆ ಜನಗಳ ಕೃತಜ್ಞತೆಗೆ ಮಾನ್ಯರಾದ ತಾವು ಪಾತ್ರರಾಗಿ ಮೈಸೂರೂ ರಾಜ್ಯದ ಸರ್ವಾಂಗೀಣ ಪ್ರಗತಿಗೆ ಕಾರಣರಾಗಬೇಕೆಂದು ಬೇಡುತ್ತೇವೆ.

---



# ಕರ್ನಾಟಕ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು

ಬರೆದವರು: ದ್ವೈಪಾಯನಾಚಾರ್ಯ ಜಹಾಗೀರದಾರ, ಬಿಜಾಪುರ.

ನಾನು ಶಿವಮೂರ್ತಿ ಶಾಸ್ತ್ರಿಗಳನ್ನು ಪ್ರಥಮ ಸಲ ಕಂಡುದು ೧೯೩೨-೩೩ ನೇ ಇಸ್ವಿಯಲ್ಲಿ ವಿಜಾಪುರದಲ್ಲಿ ಕೂಡಿದ ಜಿಲ್ಲಾ ಸಾಹಿತ್ಯ ಸಮ್ಮೇಲನದ ಸಮಯದಲ್ಲಿ. ಆಗ ಅವರು ಕೀರ್ತನಾಚಾರ್ಯರಾಗಿ ಸಂಚಾರದಲ್ಲಿದ್ದರು. ಆಗಲೇ ಅವರಿಗೆ ಕೀರ್ತನಾಚಾರ್ಯ ಎಂಬ ಬಿರುದು ದೊರೆತಿತ್ತು.

ಎತ್ತರವಾದ ಆಳು, ಗಡುತರವಾದ ದೇಹ, ಖಾದಿ ಶರಟು, ಮೈಸೂರ ರುಮಾಲು, ಹೆಗಲಮೇಲೆ ಒಂದು ವಲ್ಲಿ, ಹೊದ್ದು ಕೊಂಡು ಕೈಯಲ್ಲಿ ತಾಳಗಳನ್ನು ಹಿಡಿದುಕೊಂಡು ಸಭಾಮಧ್ಯ ದಲ್ಲಿ ನಿಂತರೆ ತೀರಿತು, ಎಲ್ಲವೂ ಸ್ತಬ್ಧ. ಕೈಯಲ್ಲಿಯ ತಾಳ ಗಳಂತೂ ತೀರ ಚಿಕ್ಕವು. ಬಾರಿಸಹತ್ತಿದರೆ ಜನರ ಕಿವಿ, ಕಣ್ಣು, ಮನಸ್ಸು ಎಲ್ಲವೂ ಅವರಲ್ಲಿ. ಈ ರೀತಿ ಜನರ ಮನಸ್ಸನ್ನು ಸೆಳೆದುಕೊಂಡು ಕೀರ್ತನೆ ಹೇಳಹತ್ತಿದರೆ ಎರಡು ತಾಸೋ ಮೂರು ತಾಸೋ ಹಾಗೇ ಸಾಗುವರು. ಸಮಯದ ಕಡೆಗೆ ಲಕ್ಷವೇ ಇಲ್ಲ. ಈ ರೀತಿ ಕೀರ್ತನೆ ಹೇಳುವಲ್ಲಿ ಅವರು ನಿಸ್ಸೀಮರು.

ಅಲ್ಲಿಂದ ಕಂಡುದು ಧಾರವಾಡ ಸಾಹಿತ್ಯ ಸಮ್ಮೇಲನದಲ್ಲಿ. ಕರ್ನಾಟಕ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೆಂದು ಆಗ ಅವರು ಮಾತಾಡಿದುದು ನಾಟಕೀಯವಾದುದು, ಪ್ರಾಸಭರಿತ ವಾದುದು. ಆಗಿನ ಅವರ ವೇಷವೂ ಅದೇರೀತಿ. ಅನಂತರ ಈಗ ಅವರನ್ನು ಅನೇಕ ಸಲ ಕಂಡಿದ್ದೇನೆ. ಶಾಸ್ತ್ರಿಗಳ ಜೀವನ ರಸಭರಿತವಾದುದು. ಅವರ ಕಾರ್ಯ ನಾನಾಬಗೆ ಯಾದುದು. ಅವರ ಶಿಕ್ಷಣ ಅಪ್ಪರ ಸೆಕೆಂಡರಿವರೆಗೆ ಆದರೂ ಅವರು ಹಿಂದಿನಿಂದ ಚೆನ್ನಾಗಿ ಓದಿಕೊಂಡು ಕನ್ನಡ ಸಂಸ್ಕೃತಗಳ ಆಳವಾದ ಅಭ್ಯಾಸ ಮಾಡಿದವರು. ಹಾಗೂ ಇನ್ನೂ ಮಾಡುತ್ತಿರುವರು. ಶಾಸ್ತ್ರಿಗಳ ಗುರುಗಳು ಮಹಾ ಪಂಡಿತರು. ಕನ್ನಡದ ಘನ ವಿದ್ವಾಂಸರು ಶ್ರೀ ಪಿ. ಆರ್. ಕರಿಬಸವಶಾಸ್ತ್ರಿಗಳು. ಅವರಲ್ಲಿ ಸಂಸ್ಕೃತ ಅಭ್ಯಾಸವಾದುದು. ಶಾಸ್ತ್ರಿಗಳ ಮನೆತನ ಪುರಾಣಿಕರದು. ಅಂತೆಯೇ ಅವರಲ್ಲಿಯೂ ಈ ಗುಣ ಬೆಳೆದು ಬಂದು ಶಾಸ್ತ್ರಿಗಳು ಕೀರ್ತನಾಚಾರ್ಯರಾದರು. ೧೫ ವರ್ಷಗಳವರೆಗೆ ಕೀರ್ತನ ಮಾಡುತ್ತ ಸಂಚರಿಸಿದರು. ಶ್ರೀ ಕರಿಬಸವ ಶಾಸ್ತ್ರಿ ಗಳಲ್ಲದೆ ಮೈಸೂರಿನ ಶ್ರೀ ಶಿವಪ್ಪ ಶಾಸ್ತ್ರಿ, ಶ್ರೀ ಮಾಗಡಿ ವೀರಪ್ಪಶಾಸ್ತ್ರಿಗಳೂ ಗುರುಗಳು. ಗುರು ಪರಂಪರೆ ದೊಡ್ಡದು.

ಶಾಸ್ತ್ರಿಗಳ ಜೀವನ ಪ್ರಾರಂಭವಾದುದು ಸ್ಕೂಲ ಮೇಸ್ತ್ರ ರಾಗಿ, ಬಳಿಕ ಕನ್ನಡ ಪಂಡಿತರಾಗಿ ಕೆಲಸಮಾಡಿದರು. ಆದರೆ ಶಾಸ್ತ್ರಿಗಳ ಮನಸ್ಸು ಸರಕಾರಿ ಸೇವೆಗಿಂತ ಸ್ವತಂತ್ರ ವೃತ್ತಿಯ ಕಡೆಗೆ ಹರಿದು ಕೀರ್ತನ ವ್ಯವಸಾಯ ಕೈಕೊಂಡರು. ಬಳಿಕ ಸಾಹಿತ್ಯ ಸೇವೆಗೆ ಇಳಿದರು. ೧೯೩೭ ರಲ್ಲಿ ಶರಣ ಸಾಹಿತ್ಯ ಮಾಸಪತ್ರಿಕೆ ಪ್ರಾರಂಭಿಸಿ ವೀರಶೈವ ಸಾಹಿತ್ಯ ಪ್ರಚಾರ ಪ್ರಸಾರ ಕಾರ್ಯ ಕೈಕೊಂಡರು. ಕಾರ್ಯಕ್ಷೇತ್ರ ಬೆಳೆಯಿತು. ಆದರಿಂದ ತುಮಕೂರನಲ್ಲಿರು ವದಕ್ಕಿಂತಲೂ ಬೆಂಗಳೂರಿಗೆ ಬರುವದು ಅವಶ್ಯವೆನಿಸಿತು. ಬೆಂಗಳೂರಿಗೆ ಬಂದು ಕಾರ್ಯ ಕೈಕೊಂಡರು. ತಮ್ಮ ಕಾರ್ಯಕ್ಕೆ ಅನುಕೂಲವಾಗಲೆಂದು ಸ್ವತಂತ್ರ ಕರ್ನಾಟಕ ಮುದ್ರಣಾಲಯವನ್ನು ರಚಿಸಿಕೊಂಡು ಕಾರ್ಯ ನಡಿಸಿದರು. ಅವರು ಒಟ್ಟಿಗೆ ಮೂವತ್ತು ಪುಸ್ತಕ ಪ್ರಕಾಶನ ಪಡಿಸಿದ್ದು ಅವೆಲ್ಲ ದುರ್ಮಿಳ ಗ್ರಂಥಗಳು. ವೀರಶೈವ ಸಾಹಿತ್ಯ ಕೃತಿ ಗಳು.

ಶಾಸ್ತ್ರಿಗಳಿಗೆ ಈಗ ೬೨ ವರುಷಗಳು. ವಯಸ್ಸು ೬೨. ಮನಸ್ಸು ೩೨. ದೇಹ ಮೂವತ್ತೆರಡು. ಅವರ ಚಟುವಟಿಕೆ ಕಾರ್ಯ ಪದ್ಧತಿಯನ್ನು ನೋಡಿದರೆ ಇವರಿಗೆ ೬೨ ವರುಷ ಹೇಗೆ? ಎಂದು ಯಾರಾದರೂ ಕೇಳಬಹುದು.

ಶಾಸ್ತ್ರಿಗಳ ಗುರುಪರಂಪರೆ ದೊಡ್ಡದು. ರಂಭಾಪುರಿ, ಉಜ್ಜಯನಿ, ಶ್ರೀಶೈಲ ಶೃಂಗೇರಿ, ಕಾಶಿ, ಚಿತ್ರದುರ್ಗ ಸ್ವಾಮಿಗಳು, ಶಾಸ್ತ್ರಿಗಳನ್ನು ಆಶೀರ್ವದಿಸಿ, ಅಭಿನಂದಿಸಿ ಪ್ರಶಸ್ತಿ ಪತ್ರಗಳನ್ನು ಕೊಟ್ಟುದುಂಟು. ಗುರುಮನೆಯವರು ಆಶೀರ್ವದಿಸಿ ಅನುಗ್ರಹಿಸಿದರೆ ಅರಮನೆಯವರು ಆಸ್ಥಾನ ವಿದ್ವಾನ, ಕರ್ನಾಟಕ ಭಾಷಾರತ್ನ ಬಿರುದುಗಳನಿತ್ತು ಆದರಿಸಿ ಸತ್ಕರಿಸಿರುವರು.

ಶಾಸ್ತ್ರಿಗಳಿಗೆ ವಯಸ್ಸಾದಂತೆ ಕಾರ್ಯಕ್ಷೇತ್ರ ಬೆಳೆದಿದೆ. ಅರವತ್ತಾರರ ಅರವು ಮರವು ಅವರಿಗಿಲ್ಲ. ಉದಯಗಿರಿಯಿಂದ ನೀಲಗಿರಿಯವರೆಗೆ ಹಬ್ಬಿದೆ ಅವರ ಕಾರ್ಯ. ಗಡಿ ಸಮಸ್ಯೆಗಳ ಬಗ್ಗೆ ಅವರ ಹೋರಾಟ ನಡೆದಿದೆ. ಕರ್ನಾಟಕದ ಗಡಿಗಳು ಭದ್ರವಾಗಿರಬೇಕೆಂದು ಅವರ ಮನೀಷೆ. ಅದಕ್ಕಾಗಿ ಅವರು ಹಗಲಿರುಳು ಕನವರಿಸುತ್ತಿರುವರು. ಮಹಾರಾಷ್ಟ್ರದಲ್ಲಿಯ ಕನ್ನಡ ಭಾಗಗಳು ನಮ್ಮ ನಾಡಿನಲ್ಲಿ ಬಂದು ಸೇರಬೇಕೆಂದು

ಬಯಕೆ. ಅದಕ್ಕಾಗಿ ಅವರು ಭಾರತ ಸರಕಾರದ ಗೃಹಮಂತ್ರಿ ಮಾನ್ಯ ನಂದಾರವರಿಗೆ ಪರಿಷತ್ತಿನ ಪರವಾಗಿ ಮನವಿಯನ್ನರ್ಪಿಸಲು ಒಂದು ನಿಯೋಗವನ್ನು ರಚಿಸಿಕೊಂಡು ಹೊರಟಿರುವರು.

ಕಳೆದ ೮ ವರುಷಗಳಿಂದ ಶಾಸ್ತ್ರಿಗಳು ಕರ್ನಾಟಕ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿರುವರು. ನಾನಾ ಬಗೆಯಾಗಿ ಬೆಳೆಸಿರುವರು. ಬೆಳೆಸುತ್ತಿರುವರು. ಕಟ್ಟಡ, ಅಚ್ಚುಕೂಟ, ಪುಸ್ತಕ ಪ್ರಕಾಶನ, ಸಾಹಿತ್ಯ ಪರೀಕ್ಷೆ ಮುಂತಾದವುಗಳು ಅವರ ಗುರಿಗಳು. ಗುರಿಮುಟ್ಟಲು ಅವರು ಪಡುವ ಸಾಹಸ ಅಸಮ. ಅನುಪಮ. ಅವರ ಸಾಹಸಕ್ಕೆ ಪರಮಾತ್ಮನು ಅನುಗ್ರಹಿಸಲೆಂದು ಗುರುಗಳು ಆಶೀರ್ವದಿಸಲೆಂದು ನಮ್ಮ ಹಾರೈಕೆ.

'ಸಂದರ್ಶನ'

(ತಾ॥ ೬-೮-೬೪)

# ಗಡಿನಾಡಿನ ಕನ್ನಡ ಭಾಗಗಳ ಸ್ಥಿತಿ ವಿವರಣೆ



ತಾ॥ ೨೬-೭-೬೪ ರಂದು ದುಧನಿಯಲ್ಲಿ ನಡೆದ ಕಾರ್ಯಸಮಿತಿಯ ಮುಂದೆ ಶ್ರೀ ಚನ್ನವೀರ ಕಲ್ಯಾಣಶೆಟ್ಟಿ ಅವರು ಸೊಲ್ಲಾಪುರ-ಅಕ್ಕಲಕೋಟ-ಜತ್ತಗಳ ಪರಿಸ್ಥಿತಿ ವಿವರಿಸುತ್ತಿದ್ದಾರೆ.

# ಶ್ರೀ ನಂದಾ ಅವರೊಡನೆ ಪರಿಷತ್ತಿನ ಅಧಿಕಾರಿವರ್ಗದವರ ಮಾತುಕತೆ

ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಅಧ್ಯಕ್ಷ ಪಂಡಿತ ರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಮತ್ತು ಗೌರವ ಕಾರ್ಯದರ್ಶಿಗಳಾದ ಡಾ|| ಕೆ. ಎಂ. ಕೃಷ್ಣರಾವ್ ಅವರು ೪-೮-೧೯೬೪ ರಂದು ಸಂಜೆ ಏಳು ಗಂಟೆಗೆ ವಿಧಾನಸೌಧದಲ್ಲಿ ಭಾರತದ ಗೃಹಮಂತ್ರಿ ಶ್ರೀ ಜಿ. ಎಲ್. ನಂದ ಅವರನ್ನು ಸಂದರ್ಶಿಸಿ ಮೈಸೂರಿಗೆ ಸೇರಬೇಕಾದ ಕನ್ನಡ ಜನ ಬಾಹುಳ್ಯವುಳ್ಳ ಪ್ರದೇಶಗಳ ವಿಚಾರವಾಗಿ ಒಂದು ಮನವಿ ಪತ್ರವನ್ನು ಸಮರ್ಪಿಸಿದರು. ಡಾ|| ಕೆ. ಎಂ. ಕೃಷ್ಣರಾವ್ ಅವರು ಮನವಿಯ ಇಂಗ್ಲಿಷ್ ರೂಪವನ್ನು ಓದಿ (ಮನವಿಯನ್ನು ಪ್ರತ್ಯೇಕವಾಗಿ ಕೊಟ್ಟಿದೆ.) ಇತ್ತೀಚೆಗೆ ಪರಿಷತ್ತಿನ ಕಾರ್ಯಸಮಿತಿ ದುಧನಿಯಲ್ಲಿ ಸೇರಿದ ಸಂದರ್ಭದಲ್ಲಿ ಪರಿಷತ್ತಿನವರು ಗಡಿನಾಡಿನಲ್ಲಿ ಸಂಚರಿಸಿದಾಗ ಕಂಡ-ಕೇಳಿದ ವಿಚಾರವನ್ನು ಮಾನ್ಯ ಸಚಿವರಲ್ಲಿ ಅರಿಕೆ ಮಾಡಿದರು.

---

# ಕನ್ನಡ ಗಡಿನಾಡಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಚಾರ ಕಾರ್ಯ

೧೯೬೪ ಜುಲೈ ೨೬ರಂದು ಸೊಲ್ಲಾಪುರ ಜಿಲ್ಲೆಯ ದುಧನಿಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯ ಸಮಿತಿಯ ಸಭೆ ಸೇರಿ, ಪರಿಷತ್ತಿನ ಆಡಳಿತ ಸಂಬಂಧವಾದ ಕೆಲವು ನಿರ್ಣಯಗಳನ್ನೂ, ಮುಂದಿನ ಮೂರು ವರ್ಷಗಳ ಅವಧಿಗೆ ಹೊಸ ಕಾರ್ಯ ಸಮಿತಿಯ ಸದಸ್ಯರನ್ನೂ ಅಧ್ಯಕ್ಷರನ್ನೂ ಆಯ್ಕೆ ಮಾಡಲು ತಾರೀಖನ್ನೂ ಆಯ್ಕೆ ನಡೆಯ ಬೇಕಾದ ವಿಧಾನವನ್ನೂ ತೀರ್ಮಾನಿಸಿತು. (ಈ ವಿಚಾರದ ಪ್ರಕಟಣೆ ಪ್ರತ್ಯೇಕವಾಗಿ ಕೊಡಲಾಗಿದೆ)

ಈ ಸಂಬಂಧದಲ್ಲಿ ಕಾರ್ಯಸಮಿತಿ ಸದಸ್ಯರು ಅಧ್ಯಕ್ಷರು ಕಾರ್ಯದರ್ಶಿಯವರು ಕನ್ನಡ ಪ್ರಚಾರ ಕಾರ್ಯಕ್ರಮವನ್ನು ಕೈಗೊಂಡರು. ೨೬-೭-೧೯೬೪ ರಂದು ಸಂಜೆ ಶ್ರೀ ಶಾಂತಲಿಂಗೇಶ್ವರ ಮಠಾಧೀಶರ ಅಧ್ಯಕ್ಷತೆಯಲ್ಲಿ ದುಧನಿಯಲ್ಲಿ ಸಾರ್ವಜನಿಕ ಸಭೆ ಏರ್ಪಟ್ಟಿದ್ದಿತು. ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಶ್ರೀ ವಿ. ಬಿ. ನಾಯಕರು ಶ್ರೀ ರಾ. ಗು. ಜೋಷಿಯವರು, ಶ್ರೀ ಆರ್. ಅನಂತರಾಮನ್, ಶ್ರೀ ಟಿ. ಮಾದೇಗೌಡರು ಮತ್ತು ಎಚ್. ಎಸ್. ರೇಣುಕಾ ಪ್ರಸಾದ್ ಅವರು ಕನ್ನಡ ನಾಡು ನುಡಿಗಳ ಹಿರಿಮೆ ಅಭಿಮಾನ ಸಂಸ್ಕೃತಿಗಳನ್ನು ಕುರಿತು ಮಾತನಾಡಿದರು. ಪ್ರಸಿದ್ಧ ಗಮಕಿ ವಿದುಷಿ ಶ್ರೀಮತಿ ಶಕುಂತಳಾ ಬಾಯಿ ಪಾಂಡುರಂಗರಾವ್ ಅವರು ಕಾವ್ಯವಾಚನ ಮಾಡಿದರು. ಶ್ರೀ ಬಿ. ಶ್ರೀ. ಪಾಂಡುರಂಗರಾಯರು ವ್ಯಾಖ್ಯಾನ ಮಾಡಿದರು.

ದುಧನಿಯ ಶ್ರೀಮಂತ ಶ್ರೀ ಕಲ್ಯಾಣಪ್ಪ ಪಾಟೀಲ್ ಮತ್ತು ಡಾ|| ಡಿ. ಸಿ. ವರ್ಝೊ ಅವರು ಅತಿಥಿ ಸತ್ಕಾರವನ್ನು ಶ್ರದ್ಧೆಯಿಂದ ಏರ್ಪಡಿಸಿದ್ದರು.

೨೭-೭-೧೯೬೪ ರಂದು ಪ್ರಾತಃಕಾಲ ಪರಿಷತ್ತಿನ ಅಧ್ಯಕ್ಷರಾದ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಗೌ|| ಕಾರ್ಯದರ್ಶಿಗಳಾದ ಡಾ|| ಕೆ. ಎಂ. ಕೃಷ್ಣರಾವ್ ಮತ್ತು ಕಾರ್ಯ ಸಮಿತಿ ಸದಸ್ಯ ಶ್ರೀ ಎಸ್. ಎಂ. ದೇಶಾಯಿ ಅವರು ಶ್ರೀ ಮತ್ತು ಶ್ರೀಮತಿ ಬಿ. ಶ್ರೀ. ಪಾಂಡುರಂಗರಾಯರು ಸೊಲ್ಲಾಪುರದ ಗಡಿನಾಡು ಕ್ರಿಯಾ ಪರಿಷತ್ತಿನ ಕರೆಯಮೇರೆ ಸೊಲ್ಲಾಪುರಕ್ಕೆ ದಯಮಾಡಿಸಿದರು. ಅಂದು ಮಧ್ಯಾಹ್ನ ೩ ಗಂಟೆ ಸೊಲ್ಲಾಪುರದ ರಾಷ್ಟ್ರೀಯ ಮಹಿಳಾ ಟೇಲರಿಂಗ್ ಕಾಲೇಜಿನಲ್ಲಿ ಡಾ|| ಕೆ. ಎಂ. ಕೃಷ್ಣರಾವ್ ಎಂ.ಎ., ಪಿಎಚ್.ಡಿ. ಅವರ ಅಧ್ಯಕ್ಷತೆಯಲ್ಲಿ ಶ್ರೀಮತಿ ಶಕುಂತಲಾ ಬಾಯಿಯವರು ಕಾವ್ಯವಾಚನವನ್ನು ಮಾಡಿದ ಮೇಲೆ ಬೆಂಗಳೂರಿನ ಮಕ್ಕಳ ಮಂಟಪದ ಒಡೆಯರಾದ ಶ್ರೀ ಬಿ. ಶ್ರೀ. ಪಾಂಡುರಂಗರಾಯರು ಕಾಲೇಜಿನ ವಿದ್ಯಾರ್ಥಿನಿಯರನ್ನು ಕುರಿತು ಹಿತವಚನಗಳನ್ನಾಡಿದರು.

ಅಂದೇ ಸಂಜೆ ೬ ಗಂಟೆಗೆ ಮಂಗಳವಾರ ಪೇಟೆಯಲ್ಲಿನ ಶ್ರೀ ಬಾಬಾ ಸಾಹೇಬ್ ವಾರದ್ ಅವರ ಗೃಹಾಂಗಣದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಒಂದು ಪತ್ರಿಕಾಗೋಷ್ಠಿಯನ್ನು ಕರೆಯಲಾಯಿತು. ಪ್ರಮುಖ ಮಹಾರಾಷ್ಟ್ರ

ಪತ್ರಿಕೆಗಳ ಪ್ರತಿನಿಧಿಗಳಾದ ಕೇಸರಿ, ಸಕಾಳ್, ಸಮಾಚಾರ್, ಸಂಚಾರ್, ಮೊದಲಾದ ಪತ್ರಿಕೆಗಳ ಪ್ರತಿನಿಧಿಗಳೂ, ಪಿ. ಟಿ. ಐ. ಪ್ರತಿನಿಧಿಗಳೂ, ಸಂಯುಕ್ತ ಕರ್ನಾಟಕ, ಪ್ರಜಾವಾಣಿ, ತಾಯಿನಾಡು ಪತ್ರಿಕೆಗಳ ಪ್ರತಿನಿಧಿಗಳೂ, ಗಡಿನಾಡು ಕ್ರಿಯಾಸಮಿತಿಯ ಪ್ರತಿನಿಧಿಗಳೂ ಈ ಗೋಷ್ಠಿಯಲ್ಲಿ ಭಾಗವಹಿಸಿದ್ದರು. ಪರಿಷತ್ತಿನ ಅಧ್ಯಕ್ಷರು ಕನ್ನಡ ಮಾತನಾಡುವ ಜನ ಬಾಹುಳ್ಯವುಳ್ಳ ಭಾಗಗಳು ಮೈಸೂರಿಗೆ ಬರಬೇಕೆಂದೂ ಸಾಂಸ್ಕೃತಿಕ ಚಾರಿತ್ರಿಕ ಭೌಗೋಳಿಕ ಕಾರಣಗಳಿಂದಲೂ ಆಡಳಿತ ಸೌಕರ್ಯ ದೃಷ್ಟಿಯಿಂದಲೂ ದಕ್ಷಿಣ ಸೊಲ್ಲಾಪುರ, ಸೊಲ್ಲಾಪುರನಗರ, ಅಕ್ಕಲಕೋಟ್ ಜತ್, ಗಡ ಇಂಗ್ಲೇಜ್, ದೇಗಲೂರು, ಹುಮರಗ ಇವು ಮಹಾರಾಷ್ಟ್ರದಿಂದಲೂ, ಆದವಾನಿ, ರಾಯದುರ್ಗ, ಆಲೂರುಗಳು ಆಂಧ್ರದಿಂದಲೂ, ಹೊಸೂರು, ತಾಳವಾಡಿ, ನೀಲಗಿರಿಗಳು ಮದ್ರಾಸಿನಿಂದಲೂ, ಕಾಸರಕೋಡು ಕೇರಳದಿಂದಲೂ ಮೈಸೂರಿಗೆ ಬರಬೇಕು ಎಂಬ ವಿಚಾರವನ್ನು ಕೂಲಂಕುಷವಾಗಿ ವಿವರಿಸಿದರು. ಘಟನಾತ್ಮಕ ಪ್ರಯತ್ನದಿಂದ ಇದಾಗಲಿ ಎಂದು ಆಶಿಸುವುದು ನಿಜವಾದರೂ ಕನ್ನಡಿಗರು ಇದಕ್ಕಾಗಿ ಚಳವಳಿಗಳಿಗೂ ಸಿದ್ಧ ಎಂದೂ ಹೇಳಿದರು. ಕಾರ್ಯದರ್ಶಿ ಡಾ॥ ಕೆ. ಎಂ. ಕೃಷ್ಣರಾಯರು ಇಂಗ್ಲಿಷಿನಲ್ಲಿ ಅದನ್ನು ವಿವರಿಸಿದರು. ಶ್ರೀ ಎಸ್. ಎಂ. ದೇಸಾಯರೂ ಇಂಗ್ಲೀಷಿನಲ್ಲಿ ಮಾತನಾಡಿದರು. ಪತ್ರಿಕಾಪ್ರತಿನಿಧಿಗಳು ಅನೇಕ ಪ್ರಶ್ನೆಗಳನ್ನು ಹಾಕಿ ಪರಿಷತ್ತಿನ ಅಧಿಕಾರಿಗಳಿಂದ ಸೂಕ್ತ ಉತ್ತರ ಪಡೆದರು. ಸಮಾಚಾರ್ ಪತ್ರಿಕೆಯ ಪ್ರತಿನಿಧಿ ಶ್ರೀ ಕೊಠವಳೆ ಅವರು ಪತ್ರಿಕಾ ಪ್ರತಿನಿಧಿಗಳ ಪರವಾಗಿ ವಂದನಾರ್ಪಣೆ ಮಾಡಿದರು. ಪರಿಷತ್ತಿನ ಪರವಾಗಿ ಡಾ॥ ಕೆ. ಎಂ. ಕೃಷ್ಣರಾಯರು ಎಲ್ಲರನ್ನೂ ವಂದಿಸಿದರು.

೨೮-೭-೧೯೬೪ ರಂದು ಸಂಜೆ ಸೊಲ್ಲಾಪುರದಲ್ಲಿ ಕನ್ನಡಿಗರ ಹಿರಿಯ ಸಭೆ ಏರ್ಪಟ್ಟಿದ್ದಿತು. ನಗರದ ಪ್ರಸಿದ್ಧ ಕನ್ನಡಿಗರೂ ಮಹಾದಾನಿಗಳೂ ಆದ ಶ್ರೀ ನಾಗಪ್ಪಣ್ಣ ಕಾಡಾದಿ ಅವರ ಅಧ್ಯಕ್ಷತೆಯಲ್ಲಿ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಶರಣರ ಸಂದೇಶ ಎಂಬ ವಿಷಯವನ್ನು, ಡಾ॥ ಕೆ. ಎಂ. ಕೃಷ್ಣರಾಯರು ಹರಿದಾಸರ ಸಂದೇಶ ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು. ಶ್ರೀ ಬಿ. ಶ್ರೀ. ಪಾಂಡುರಂಗರಾಯರ ಚಾಮರಸ ಕವಿಯ ಮತ್ತು ಆತನ ಕೃತಿ ಪ್ರಭುಲಿಂಗ ಲೀಲೆಯ ವಿಚಾರವಾಗಿ ಪ್ರಾಸ್ತಾವಿಕ ಭಾಷಣ ಮಾಡಿದ ಮೇಲೆ ಶ್ರೀಮತಿ ಶಕುಂತಳಾಬಾಯಿಯವರು ಆ ಕಾವ್ಯದ ಸಿದ್ಧರಾಮ ಅಲ್ಲಮ ಭೇಟಿಯ ಸಂದರ್ಭದ ಹಲವು ಪದ್ಯಗಳನ್ನು, ಬಸವಣ್ಣ ಮತ್ತು ಅಕ್ಕಮಹಾದೇವಿಯವರ ಕೆಲವು ವಚನಗಳನ್ನು ಸುಶ್ರಾವ್ಯವಾಗಿ ಹಾಡಿದರು. ಸಭೆಗೆ ದಯಮಾಡಿಸಿದ್ದ ವಿಶೇಷ ಅತಿಥಿಗಳಾದ ಕಿರೀಟಮಠದ ಮೃತ್ಯುಂಜಯ ಸ್ವಾಮಿಗಳು ಮಾತನಾಡಿದರು. ಅಧ್ಯಕ್ಷ ಭಾಷಣಾನಂತರ ಶ್ರೀ ರಾಜಶೇಖರವಾಡಕಿಯವರಿಂದ ವಂದನಾರ್ಪಣೆಯಾಯಿತು.

೨೯-೭-೧೯೬೪ ರಂದು ಸೊಲ್ಲಾಪುರ ತಾಲ್ಲೂಕಿನ ವಳಸಂಗೆ ಗ್ರಾಮದವರು ಉತ್ಸಾಹದಿಂದ ಪರಿಷತ್ತಿನವರನ್ನು ಬರಮಾಡಿಕೊಂಡರು. ಗ್ರಾಮ ಪಂಚಾಯಿತಿಯ ಆಶ್ರಯದಲ್ಲಿ ಸಾರ್ವಜನಿಕ ಸಭೆ ನಡೆದು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು, ಡಾ॥ ಕೆ. ಎಂ. ಕೃಷ್ಣರಾಯರು ಭಾಷಣ ಮಾಡಿದರು. ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗರಾಯರು ವಚನಗಳನ್ನು ಹಾಡಿದರು.

ಅದೇ ದಿನ ಮಧ್ಯಾಹ್ನ ಅಕ್ಕಲಕೋಟೆಯ ಕನ್ನಡ ಶಾಲೆಯಲ್ಲೊಂದು ಸಭೆಯಲ್ಲೂ, ಸಂಜೆ ಊರಿನ ಸಾರ್ವಜನಿಕ ಬೃಹತ್ ಸಭೆಯಲ್ಲೂ ಪರಿಷತ್ತಿನವರು ಭಾಗವಹಿಸಿದರು. ಶ್ರೀಮತಿ ಶಕುಂತಳಾಬಾಯಿಯವರ ಕಾವ್ಯವಾಚನವಾದ ಮೇಲೆ ಡಾ॥ ಕೆ. ಎಂ. ಕೃಷ್ಣರಾವ್ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆ ಸಾಧನೆಗಳನ್ನು ಕುರಿತು ಮಾತನಾಡಿದರು. ಅನಂತರ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಮೈಸೂರಿನ ಗಡಿ ಪ್ರದೇಶಗಳನ್ನು ಕುರಿತು ಭಾಷಣ ಮಾಡಿದರು. ಅಲ್ಲದೆ ಅಂದೇ ಸಂಜೆ ಅಕ್ಕಲಕೋಟೆಯ ಮಂಗಳೆ ಹೈಸ್ಕೂಲಿನ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಕುರಿತು ಪರಿಷತ್ತಿನ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು ಹಿತವಚನ ಹೇಳಿದರು.

---

# ಪರಿಷತ್ತಿನ ಅಧ್ಯಕ್ಷರ ಮತ್ತು ಕಾರ್ಯಸಮಿತಿ ಸದಸ್ಯರ ಚುನಾವಣೆ

## ವೇಳಾಪಟ್ಟಿಯ ಪ್ರಕಟನೆ

ತಾ॥ ೨೬-೭-೧೯೬೪ ರಂದು ಸೊಲ್ಲಾಪುರ ಜಿಲ್ಲೆಯ ದುಧಸಿಯಲ್ಲಿ ಸೇರಿದ್ದ ಪರಿಷತ್ತಿನ ಕಾರ್ಯಸಮಿತಿಯು ಪರಿಷತ್ತಿನ ಅಧ್ಯಕ್ಷರು ಮತ್ತು ಕಾರ್ಯಸಮಿತಿಯ ಸದಸ್ಯರ ಚುನಾವಣೆಯನ್ನು ನಡೆಸುವ ವಿಚಾರದಲ್ಲಿ ಈ ಕೆಳಕಂಡ ನಿರ್ಣಯಗಳನ್ನು ಕೈಗೊಳ್ಳಲಾಯಿತು.

ತಾ॥ ೨೫-೧೦-೧೯೬೪ನೆಯ ಭಾನುವಾರ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಸಕಲ ಸದಸ್ಯರ ಸಭೆಯನ್ನು ಕರೆದು ಚುನಾವಣೆಯನ್ನು ನಡೆಸಲಾಗುವುದು.

ಈ ಸಂಬಂಧದಲ್ಲಿ ಪರಿಷತ್ತಿನ ಸದಸ್ಯತ್ವದ ಚಂದಾ ಬಾಕಿಯನ್ನೂ ಮತ್ತು ಹೊಸ ಸದಸ್ಯತ್ವದ ಚಂದಾ ಹಣವನ್ನೂ ತಾ॥ ೨೪-೮-೧೯೬೪ನೆಯ ಸೋಮವಾರ ಸಂಜೆ ೫ ಗಂಟೆಯವರೆಗೆ ಮಾತ್ರ ಸ್ವೀಕರಿಸಲಾಗುವುದು ಮತ್ತು ಅದೇ ದಿನ ಸಂಜೆ ಅದುವರೆಗಿನ ಸದಸ್ಯರ ಸಂಖ್ಯೆಯನ್ನು ಪರಿಷತ್ತಿನಲ್ಲಿ ಪ್ರಕಟಿಸಲಾಗುವುದು.

ಮತದಾರರ ಪಟ್ಟಿಯನ್ನು ತಾ॥ ೩೧-೮-೧೯೬೪ ರಂದು ಅಥವಾ ಆ ಒಳಗಾಗಿ ಪ್ರಕಟಿಸಲಾಗುವುದು.

ಪರಿಷತ್ತಿನಿಂದ ಕಳಿಸುವ ಚುನಾವಣಾ ತಿಳಿವಳಿಕೆ ಪತ್ರವನ್ನು ಮತದಾರರು ಚುನಾವಣೆಯ ದಿನ ತಮ್ಮ ಗುರುತಿಗಾಗಿ ತರಬೇಕಾಗುವುದು.

ಕಾರ್ಯಸಮಿತಿಯ ಸದಸ್ಯರಾಗಲು ಮತ್ತು ಪರಿಷತ್ತಿನ ಅಧ್ಯಕ್ಷರಾಗಲು ಬಯಸುವ ಉಮೇದುವಾರರು ಅಭ್ಯರ್ಥಿ ಪತ್ರವನ್ನು ತಾ॥ ೧೦-೧೦-೧೯೬೪ನೆಯ ಶನಿವಾರ ಸಂಜೆ ೫ ಗಂಟೆಯೊಳಗಾಗಿ ಪರಿಷತ್ತಿಗೆ ತಲುಪುವಂತೆ ಕಳಿಸಬೇಕು. ಈ ಅಭ್ಯರ್ಥಿಪತ್ರವನ್ನು ತಾ॥ ೧೨-೧೦-೧೯೬೪ನೆಯ ಸೋಮವಾರ ಸಂಜೆ ೪ ಘಂಟೆಗೆ ಪರಿಶೀಲಿಸಲಾಗುವುದು.

ತಾ॥ ೧೨-೧೦-೧೯೬೪ನೆಯ ಸೋಮವಾರ ಸಂಜೆ ೭-೩೦ ಘಂಟೆಗೆ ಉಮೇದುವಾರರ ಪಟ್ಟಿಯನ್ನು ಪ್ರಕಟಿಸಲಾಗುವುದು. ತಾ॥ ೧೫-೧೦-೧೯೬೪ನೆಯ ಗುರುವಾರ ಅಥವಾ ಆ ಒಳಗಾಗಿ ತಮ್ಮ ಉಮೇದುವಾರಿಕೆಯನ್ನು ವಾಪಸ್ ತೆಗೆದುಕೊಳ್ಳಬಹುದು.

ಮತದಾರರ ಪಟ್ಟಿಯನ್ನು ಅಪೇಕ್ಷೆಪಟ್ಟವರಿಗೆ ೫ ರೂ.ಗಳ ಬೆಲೆಗೆ ಕೊಡಲಾಗುವುದು.

ಗೌರವ ಕಾರ್ಯದರ್ಶಿಗಳು

---

# ನಿವೃತ್ತ ಪತ್ರಿಕಾ ಸಂಪಾದಕರಿಗೆ ಪರಿಷತ್ತಿನ ಗೌರವ

ಸ್ವತಂತ್ರ ಭಾರತವನ್ನು ಸಮರ್ಥ ರಾಷ್ಟ್ರವನ್ನಾಗಿ ಮಾಡಲು ಪತ್ರಿಕೆಗಳೂ ಹಾಗೂ ನಾಯಕರೂ ಪ್ರಯತ್ನ ಮಾಡಬೇಕೆಂದು 'ಕರ್ಮವೀರ' ವಾರ ಪತ್ರಿಕೆಯ ನಿವೃತ್ತ ಸಂಪಾದಕರಾದ ಶ್ರೀ ಎಚ್. ಆರ್. ಪುರೋಹಿತ ಅವರು ಇಂದು (ಆಗಸ್ಟ್ ೬) ಇಲ್ಲಿ ಕರೆ ನೀಡಿದರು.

ಪತ್ರಿಕಾ ವ್ಯವಸಾಯ ಕ್ಷೇತ್ರದಲ್ಲಿ ಕಳೆದ ಮೂವತ್ತು ವರ್ಷಗಳಿಗಿಂತಲೂ ಹೆಚ್ಚಿಗೆ ಸೇವೆ ಸಲ್ಲಿಸಿ ಈಗ ನಿವೃತ್ತರಾಗಿರುವ ಶ್ರೀ ಪುರೋಹಿತ ಅವರನ್ನು ಕನ್ನಡ ಸಾಹಿತ್ಯ ಪರಿಷತ್ತು ಇಂದು ಗೌರವಿಸಲು ಒಂದು ಸಮಾರಂಭವನ್ನೇರ್ಪಡಿಸಿತ್ತು. ಈ ಸಮಾರಂಭದಲ್ಲಿ ಮಾತನಾಡುತ್ತ ಶ್ರೀ ಪುರೋಹಿತ ಅವರು ಮೇಲಿನಂತೆ ಹೇಳಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಶ್ರೀ ಪುರೋಹಿತ ಅವರಿಗೆ ಪುಷ್ಪಮಾಲೆಯನ್ನು ಅರ್ಪಿಸಿ ಗೌರವಿಸಿದರು. ಕಳೆದ ಮೂವತ್ತು ವರ್ಷಗಳಿಗಿಂತಲೂ ಹೆಚ್ಚು ಅವಧಿವರೆಗೆ ಯಾವ ಪಕ್ಷಪಾತವಿಲ್ಲದೆ, ಗಂಭೀರವಾಗಿ ಶ್ರೀ ಪುರೋಹಿತರು ಸಲ್ಲಿಸಿದ ಸೇವೆ ಒಂದು 'ತಪಸ್ಸು' ಆಗಿದೆ. ಭಾಷೆ, ಸಾಹಿತ್ಯ, ಸಂಸ್ಕೃತಿ ಹಾಗೂ ನಾಡಿಗಾಗಿ ಅವರು ಅಪಾರ ಸೇವೆ ಸಲ್ಲಿಸಿದ್ದಾರೆ. ಅವರ ಸುದೀರ್ಘ ಅನುಭವ ಯುವಕರಿಗೆ ಮಾರ್ಗದರ್ಶನವಾಗಲಿ ಎಂದು ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಆಶಿಸಿದರು.

ಶ್ರೀ ಎಚ್. ಆರ್. ಪುರೋಹಿತ ಅವರು ತಮ್ಮ ಪತ್ರಿಕಾ ವ್ಯವಸಾಯ ಕ್ಷೇತ್ರದ ಅನುಭವಗಳನ್ನು ವಿವರಿಸಿದರು.

ತಾವು 'ಕರ್ಮವೀರ' ಸಂಪಾದಕ ಹುದ್ದೆಯಿಂದ ನಿವೃತ್ತರಾಗಿರುವದಾದರೂ ಸಾಹಿತ್ಯ ಸೇವೆಯನ್ನು ಮುಂದುವರಿಸುವುದಾಗಿಯೂ ಶ್ರೀ ಪುರೋಹಿತರು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಶಿವಮೂರ್ತಿಶಾಸ್ತ್ರಿಗಳು, ಕನ್ನಡ ಉಳಿದರೆ ಕನ್ನಡ ನಾಡು ಉಳಿಯುವುದು, ಕನ್ನಡ ಅಳಿದರೆ ಕನ್ನಡ ನಾಡೂ ಅಳಿಯುವುದು. ಇದನ್ನು ರಾಜಕೀಯ ನಾಯಕರುಗಳು ಗಮನದಲ್ಲಿಟ್ಟುಕೊಳ್ಳಬೇಕೆಂದು ಹೇಳಿ ರಾಜ್ಯದ ಹೊರಗುಳಿದಿರುವ ಕನ್ನಡ ಪ್ರದೇಶಗಳನ್ನು ಪಡೆಯಲು ಎಲ್ಲ ಪ್ರಯತ್ನಗಳನ್ನೂ ಮಾಡಬೇಕೆಂದು ಅವರು ಒತ್ತಾಯಪಡಿಸಿದರು.

ಪ್ರಾರಂಭದಲ್ಲಿ ಕುಮಾರಿ ರತ್ನಾ ಅವರಿಂದ ಪ್ರಾರ್ಥನೆಯಾದ ನಂತರ ಶ್ರೀ ಆದ್ಯ ರಾಮಾಚಾರ್ಯರು ಅತಿಥಿಗಳ ಪರಿಚಯ ಮಾಡಿಕೊಟ್ಟರು.

## ೧೯೬೪ರಲ್ಲಿ ನಡೆದ ಗಮಕ ಪ್ರೌಢ ಪರೀಕ್ಷೆಯ ಫಲಿತಾಂಶ

ಪರಿಷತ್ತಿನ ಆಶ್ರಯದಲ್ಲಿ ೧೯೬೪ನೇ ಜೂನ್ ತಿಂಗಳಲ್ಲಿ ನಡೆದ ಗಮಕ ಪ್ರೌಢ ಪರೀಕ್ಷೆಯಲ್ಲಿ ಈ ಕೆಳಗೆ ಕಂಡ ರಿಜಿಸ್ಟರ್ ನಂಬರಿನ ವಿದ್ಯಾರ್ಥಿಗಳು ತೇರ್ಗಡೆಯಾಗಿರುತ್ತಾರೆ.

**ಮೊದಲನೆಯ ತರಗತಿ**

ಯಾರೂ ಇಲ್ಲ.

**ತೇರ್ಗಡೆಯಾದವರು (ಪಾಸ್ ಕ್ಲಾಸ್)**

೪, ೫, ೬, ೭, ೮, ೧೦, ೧೨, ೧೩ ಮತ್ತು ೧೪.

**ಕೆ. ಎಂ. ಕೃಷ್ಣರಾವ್**
ಗೌರವ ಕಾರ್ಯದರ್ಶಿ



# ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ-ಕನ್ನಡ ನಿಘಂಟು

## ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ "ಕನ್ನಡ ನಿಘಂಟು" ಡೆಮ್ಮಿ ಚತುಷ್ಪತ್ರ ಆಕಾರದ ಸುಮಾರು ೫,೦೦೦ ಪುಟಗಳನ್ನು ಒಳಗೊಂಡು, ಒಂದೊಂದು ಸಂಪುಟದಲ್ಲೂ ಸುಮಾರು ೧೨೫೦ ಪುಟಗಳಿರುವ ನಾಲ್ಕು ಸಂಪುಟಗಳಲ್ಲಿ (Volumes) ಪ್ರಕಟವಾಗುವಂತೆ ಏರ್ಪಡಿಸಲಾಗಿದೆ.

ನಿಘಂಟಿನ ಒಟ್ಟು ಬೆಲೆ ೧೨೦ ರೂಪಾಯಿಗಳು; ಮುಂಗಡವಾಗಿ ಹಣ ಸಲ್ಲಿಸುವ ಗ್ರಾಹಕರಿಗೆ ೧೦೦ ರೂಪಾಯಿಗಳ ರಿಯಾಯಿತಿ ದರದಲ್ಲಿ ಅದನ್ನು ಒದಗಿಸಲಾಗುತ್ತದೆ. ನಿಘಂಟು ಸಿದ್ಧವಾದಂತೆಲ್ಲ ೯೬ ಪುಟಗಳುಳ್ಳ ಸಂಚಿಕೆಗಳ (Fascicules) ರೂಪದಲ್ಲಿ ಅದನ್ನು ಮುಂಗಡವಾಗಿ ೧೦೦ ರೂಪಾಯಿಗಳ ರಿಯಾಯಿತಿಯ ಬೆಲೆಯನ್ನು ಸಲ್ಲಿಸಿರುವ ಗ್ರಾಹಕರಿಗೆ ತಲುಪಿಸಲಾಗುವುದು. ನಿಘಂಟಿನ ಸಂಪುಟಗಳನ್ನಾಗಲಿ ಸಂಚಿಕೆಗಳನ್ನಾಗಲಿ ಬಿಡಿ ಬಿಡಿಯಾಗಿ ವಿಕ್ರಯಿಸುವುದಿಲ್ಲ. ಮುಂಗಡ ಹಣ ನೂರು ರೂಪಾಯಿಗಳನ್ನು ಹತ್ತು ರೂ.ಗೆ ಕಡಿಮೆಯಿಲ್ಲದ ಕಂತುಗಳಲ್ಲಿ ಪಾವತಿ ಮಾಡಬಹುದು. ಆದರೆ ಪೂರ್ತ ಹಣ ಸಂದಾಯ ವಾಗುವವರೆಗೆ ಸಂಚಿಕೆಗಳನ್ನು ಕಳಿಸಲಾಗುವುದಿಲ್ಲ.

ನಿಘಂಟಿನ ಎರಡನೆಯ ಸಂಪುಟವು ಪ್ರಕಟವಾದ ಕೂಡಲೆ **ರಿಯಾಯಿತಿಯ ದರದಲ್ಲಿ** ಅದನ್ನು ವಿಕ್ರಯಿಸುವುದನ್ನು ನಿಲ್ಲಿಸಲಾಗುತ್ತದೆ; ಆ ಮುಂದೆ ಪೂರ್ಣವಾದ ಬೆಲೆಯನ್ನು ಕೊಡಬೇಕಾಗುತ್ತದೆ.

ನಿಘಂಟಿನ ಒಂದು ಸಂಪುಟವು ಸಿದ್ಧವಾದ ಬಳಿಕ ಅದರ ರಕ್ಷಾಕವಚವನ್ನು (Binding Case) ಮುಂಗಡವಾಗಿ ಬೆಲೆ ಸಲ್ಲಿಸಿರುವ ಗ್ರಾಹಕರಿಗೆ ಉಚಿತವಾಗಿ ಒದಗಿಸಲಾಗುವುದು.

ಸಂಚಿಕೆಗಳನ್ನೂ ರಕ್ಷಾಕವಚಗಳನ್ನೂ ಕಳಿಸಲು ತಗುಲುವ ಅಂಚೆವೆಚ್ಚವನ್ನು ಗ್ರಾಹಕರೇ ಸಲ್ಲಿಸತಕ್ಕದ್ದು.

ಗ್ರಾಹಕರು ಮುಂಗಡ ಬೆಲೆಯ ಜೊತೆಗೆ ಹತ್ತು ರೂಪಾಯಿಗಳನ್ನು ಅಂಚೆವೆಚ್ಚ, ರವಾನೆ ವೆಚ್ಚ ಗಳಿಗಾಗಿ ಸಲ್ಲಿಸಬೇಕು. ಸಂಚಿಕೆಗಳನ್ನು "ರಿಜಿಸ್ಟರ್ಡ್ ಪೋಸ್ಟ್" ಮೂಲಕ ಕಳಿಸಬೇಕೆಂದು ಗ್ರಾಹಕರು ಅಪೇಕ್ಷಿಸಿದಲ್ಲಿ ಆ ವಿಷಯವನ್ನು ಅವರು ಲಿಖಿತರೂಪದಲ್ಲಿ ಮೊದಲೇ ತಿಳಿಸಬೇಕು. ಹಾಗೆ ಮಾಡದಿದ್ದರೆ ಸಂಚಿಕೆಗಳನ್ನು "ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್" ಸಮೇತವಾಗಿ ಸಾದಾ ಟಪಾಲಿನ ಮೂಲಕ ಕಳಿಸ ಲಾಗುವುದು. ಸಂಚಿಕೆಗಳನ್ನು ಪರಿಷತ್ತಿನ ಕಚೇರಿಯಲ್ಲೇ ತೆಗೆದುಕೊಳ್ಳಲು ಅಪೇಕ್ಷಿಸುವವರು ಮುಂಚಿತವಾಗಿ ತಿಳಿಸಿ ಆ ರೀತಿ ಮಾಡಬಹುದು; ಅಂಥವರು ಅಂಚೆವೆಚ್ಚವನ್ನು ಕೊಡಬೇಕಾಗುವುದಿಲ್ಲ.

**ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.**

ಈ ವಿಳಾಸಕ್ಕೆ ಹಣ ಕಳುಹಿಸಿ ಪತ್ರ ವ್ಯವಹಾರ ಮಾಡಬಹುದು.

**ಕೆ. ಎಂ. ಕೃಷ್ಣರಾವ್**
ಗೌರವ ಕಾರ್ಯದರ್ಶಿ

# ಗೋವಾದಲ್ಲಿ ಕನ್ನಡದ ಸ್ಥಿತಿಗತಿ

ಒಂದು ಕಾಲದಲ್ಲಿ ಭೌಗೋಳಿಕ ಐತಿಹಾಸಿಕ ಕಾರಣಗಳಿಂದ ಕರ್ನಾಟಕದ ಭಾಗವೇ ಆಗಿದ್ದ ಗೋವ ಸ್ವತಂತ್ರವಾದ ಮೇಲೆ ಮಹಾರಾಷ್ಟ್ರಕ್ಕೆ ಸೇರಬೇಕು ಎಂಬ ಕೂಗು ಬಲವಾಗುತ್ತಿದೆ. ಇದಕ್ಕೆ ಕನ್ನಡಿಗರ ಆಲಸ್ಯ ಮರಾಟಿಗರ ಮುಂಗೈಜೋರು ಕಾರಣವಾಗಿದೆ. ಸ್ಪಷ್ಟವಾಗಿ ಹೇಳಬೇಕಾದರೆ ಮಾಂಡವೀ ನದಿಯ ದಕ್ಷಿಣ ಭಾಗದ ಗೋವಾ ಪ್ರದೇಶದ ೨/೩ ಭಾಗ ಕರ್ನಾಟಕಕ್ಕೂ ಮಾಂಡವಿಯ ಉತ್ತರ ಭಾಗ ೧/೩ ಮಹಾರಾಷ್ಟ್ರಕ್ಕೂ ಸೇರಬೇಕಾಗುತ್ತದೆ. ಕಾಸರಗೋಡಿನಲ್ಲಿ ಚಂದ್ರಗಿರಿ ಹೊಳೆಯ ಉತ್ತರ ಭಾಗವು ಕರ್ನಾಟಕಕ್ಕೂ ದಕ್ಷಿಣ ಭಾಗವು ಮಲೆಯಾಳಕ್ಕೂ ಸೇರಬೇಕೆಂಬ ಪರಿಸ್ಥಿತಿಯು ಇಲ್ಲಿಯೂ ಇದೆಯೆಂದು ಹೇಳಬಹುದು. ಗೋವಾದಲ್ಲಿ ಸುಮಾರು ೬ ಲಕ್ಷ ಜನಸಂಖ್ಯೆ ಇದೆ. ಅದರಲ್ಲಿ ಶೇಕಡ ೭೦ರಂತೆ ಕೊಂಕಣಿಗರಿದ್ದಾರೆ. ಗೋವಾದಲ್ಲಿ ಕನ್ನಡ ಮಾತಾಡುವವರು ಸುಮಾರು ೩೦ ಸಾವಿರ ಜನ, ಮರಾಠಿ ಮಾತೃಭಾಷೆಯಾಗಿ ಉಳ್ಳವರು ಶೇಕಡ ೭ರಂತೆ ಇದೆ.

ಗೋವಾ ಸ್ವತಂತ್ರವಾಗಿರಬೇಕೆ ಅಥವಾ ಬೇರೇ ಭಾಗಕ್ಕೆ ಸೇರಬೇಕೆ ಎಂಬುದು ಅಲ್ಲಿನ ಜನರಿಗೆ ಸಂಬಂಧಪಟ್ಟ ವಿಷಯ. ಗೋವಾ ಪ್ರದೇಶವನ್ನು ಕನ್ನಡಿಗರಾದ ಸ್ವಾದೀ ರಾಜರಿಂದ ಪೋರ್ಚುಗೀಸರು ಪಡೆದಿದ್ದಾರೆ. ಬಾಂದೋಡಾದಲ್ಲಿರುವ ಸ್ವಾದೀರಾಜರ ಅರಮನೆಯಲ್ಲಿ, ಪಂಜಿಂನಲ್ಲಿರುವ ಪ್ರಾಚೀನ ವಸ್ತುಸಂಗ್ರಹಾಲಯದಲ್ಲಿ ಇದಕ್ಕೆ ಸಂಬಂಧಪಟ್ಟ ಶಾಸನಗಳನ್ನೂ ದಾಖಲೆಗಳನ್ನೂ ನೋಡಬಹುದು.

ಈಗ ಗೋವಾದಲ್ಲಿಯೂ ಕನ್ನಡಿಗರು ಕಣ್ತೆರೆದಿದ್ದಾರೆ. ಶ್ರೀ ವಾ. ಜಿ. ಶಾನುಭೋಗ್ ಇವರ ಅಧ್ಯಕ್ಷತೆಯಲ್ಲಿ ವಡಗಾಂನಲ್ಲಿ ಕರ್ನಾಟಕ ಸಂಘ ಸ್ಥಾಪನೆಯಾಗಿದೆ. ಇನ್ನೂ ಅಲ್ಲಿ ಹಲವಾರು ಕನ್ನಡ ಶಾಲೆಗಳನ್ನು ಸ್ಥಾಪಿಸಲು ಕರ್ನಾಟಕ ಸಂಘದವರು ಪ್ರಯತ್ನಿಸುತ್ತಿದ್ದಾರೆ. ಅವರ ಸಹಾಯಕ್ಕಾಗಿ ಮೈಸೂರು ಸರಕಾರವನ್ನೂ ಕನ್ನಡ ಸಾಹಿತ್ಯ ಪರಿಷತ್ತನ್ನೂ ಕನ್ನಡದ ಅಭಿಮಾನಿಗಳನ್ನೂ ಪ್ರಾರ್ಥಿಸುತ್ತಿದ್ದಾರೆ. ಗೋವಾ ರಾಜ್ಯದಲ್ಲಿ ಕನ್ನಡ ರಾಜ್ಯವನ್ನುಳಿಸುವುದು ಎಲ್ಲ ದೃಷ್ಟಿಯಿಂದಲೂ ಅಗತ್ಯವಾದ ಕಾರ್ಯ. ಕಾರಣ ಕನ್ನಡ ನಾಡು ನುಡಿಗಳ ಅಭಿಮಾನಿಗಳೆಲ್ಲರೂ ಈ ಕಾರ್ಯದಲ್ಲಿ ಸಹಕರಿಸುವರಾಗಿ ನಂಬುತ್ತೇನೆ.

**ಬಿ. ಶಿವಮೂರ್ತಿ ಶಾಸ್ತ್ರೀ**





೩

# ಕನ್ನಡ ಸಾಹಿತ್ಯ ಪರಿಷತ್ತಿಗೆ ಕನ್ನಡಿಗರ ಮನವಿಗಳು

ಕನ್ನಡ ಸಾಹಿತ್ಯ ಅಧ್ಯಕ್ಷರಿಗೆ ವಳಸಂಗ ತಾ. ದ. ಸೋಲಾಪೂರ ಜಿ. ಸೋಲಾಪೂರ ಇಲ್ಲಿಯ ನಾಗರಿಕರು ವಿನಂತಿಸಿದ ನಿವೇದನ ಪತ್ರ.

೧

ಭಾಷಾವಾರ ಪ್ರಾಂತರಚನೆಯ ಮೇರೆಗೆ ಮೈಸೂರು, ಮಹಾರಾಷ್ಟ್ರ, ಗುಜರಾಥ ಈರೀತಿ ವಿಭಾಗಿಸಲ್ಪಟ್ಟಿತು. ಅದರಂತೆ ನಮ್ಮ ಭಾಗವು ಮೈಸೂರ ಪ್ರದೇಶಕ್ಕೆ ಕೂಡದೆ ಮಹಾರಾಷ್ಟ್ರ ಪ್ರದೇಶದಲ್ಲಿ ವಾದಗ್ರಸ್ಥವಾಗಿ ಉಳಿದಿದೆ.

ವಾದಗ್ರಸ್ತವಾಗಿ ಉಳಿದ ಈ ಅಚ್ಚಕನ್ನಡ ಪ್ರದೇಶವು ಮಹಾರಾಷ್ಟ್ರ ರಾಜ್ಯಸರಕಾರದಿಂದ ದೊರೆಯಬೇಕಾದ ಸಕಲ ಸೌಲಭ್ಯ ಸೌಕರ್ಯಗಳು ಸಿಗದ್ದರಿಂದ ಎಲ್ಲ ರೀತಿಯಿಂದಲೂ ಹಿಂದುಳಿದ ಪ್ರದೇಶವಾಗಿದೆ. ಅಲ್ಲದೆ ನಮ್ಮ ಕನ್ನಡ ಸಂಸ್ಕೃತಿಯ ಮೇಲೆಯೂ ಪರಿಣಾಮವಾಗಿದೆ.

ಕನ್ನಡ ಶಿಕ್ಷಣ ಪಡೆಯುವ ಮಕ್ಕಳಿಗೆ ಮುಖ್ಯವಾಗಿ ಬೇಕಾಗುವ ಪಠ್ಯಪುಸ್ತಕಗಳ ಅಭಾವವು ಹೇಳತೀರದಾಗಿ ವಿದ್ಯಾರ್ಥಿಗಳಲ್ಲಿ ನಿರುತ್ಸಾಹ ಪಾಲಕರಲ್ಲಿ ಜಿಗುಪ್ಸೆ ಉಂಟಾಗಿದೆ.

ಮಾತೃಭಾಷೆಯ ಶಿಕ್ಷಣ ಪಡೆದು (ಪೂರ್ಣ ಮುಗಿಸಿ) ಉಚ್ಚ ಶಿಕ್ಷಣಕ್ಕಾಗಿ ಹೋರಾಡುವ ಪಾಲಕ, ವಿದ್ಯಾರ್ಥಿಗಳಿಗೆ ಮೈಸೂರ ರಾಜ್ಯದಲ್ಲಿ ದೊರೆಯತಕ್ಕ ಎಲ್ಲ ಸೌಲಭ್ಯಗಳು ಈ ರಾಜ್ಯದಲ್ಲಿ ದೊರೆಯದಂತಾಗಿದೆ.

ಮೈಸೂರ ರಾಜ್ಯದಲ್ಲಿಯಾದರೂ ಹೋಗಿ ಉಚ್ಚ ಶಿಕ್ಷಣ ಪಡೆಯಬೇಕೆನ್ನುವವರಿಗೆ ಅಲ್ಲಿ ಸ್ಥಾನವಿಲ್ಲ. ಇಲ್ಲಿ ಅನುಕೂಲವಿಲ್ಲ. ಹೀಗಾಗಿ ನಮ್ಮ ಸಾಂಸ್ಕೃತಿಯು ಅಗಸರ ನಾಯಿಯಂತಾಗಿದೆ.

ಈ ಪ್ರದೇಶವು ವಾದಗ್ರಸ್ತವಾಗಿ ಉಳಿದದ್ದರಿಂದ ವಿಕಾಸ ಯೋಜನೆಯ ಕಾರ್ಯಗಳೆಲ್ಲವೂ ನಿಷ್ಕ್ರಿಯಸಿದ್ದು ಸ್ಥಗಿತವಾಗಿ ಉಳಿಯುತ್ತಾ ಹೊರಟವೆ. ಅಲ್ಲದೆ ಜನತೆಯ ಸಹಕಾರ ಪ್ರೋತ್ಸಾಹನ ಸಾಕಷ್ಟು ಇದ್ದು ಪೂರ್ಣ ಕೈಕೊಂಡ ಕಾರ್ಯಕ್ಕೂ ಸಹಕಾರವಿಲ್ಲದಾಗಿದೆ. ಇಂಥ ಕಾರ್ಯ ಸ್ವಕಷ್ಟದಿಂದ ಮಾಡಿದರೂ ಅದಕ್ಕೆ ದೊರೆಯಬೇಕಾದ ಸಹಕಾರ, ಸಹಾಯವಿಲ್ಲದಾಗಿ ಕನಸಾಗಿದೆ. ಪ್ರೋತ್ಸಾಹನ ಸಹವಿಲ್ಲ.

ಈ ಎಲ್ಲ ಕಾರಣಗಳ ಮೂಲಕ ಅಚ್ಚಕನ್ನಡವಾದ ಈ ಭಾಗಗಳು ಅನಾಥವಾಗಿವೆ. ಈ ಅನಾಥವಾದ ಭಾಗವು ಕರ್ನಾಟಕ ರಾಜ್ಯದಲ್ಲಿ ಸೇರಿಸಬೇಕು. ಅದರಿಂದಲೆ ನಮ್ಮ ಕಲ್ಯಾಣವಾಗುವದು.

---

# ಮಾತೃಭಾಷೆಯಲ್ಲಿ ಶಿಕ್ಷಣ ಆಗಬೇಕು

ವಳಸಂಗ ಗ್ರಾಮದವರ ಮನವಿ

೨

ಈ ಮೊದಲು ಇಲ್ಲಿಯ ಶಿಕ್ಷಣವು ಮರಾಠಿಯಲ್ಲಿ (೧೯೩೭ರ ಪೂರ್ವದಲ್ಲಿ) ದೊರೆಯುತ್ತಿತ್ತು. ಆ ಕಾಲಕ್ಕಾದರೂ ಮಾತೃಭಾಷೆಯಾದ ಕನ್ನಡ ಶಿಕ್ಷಣವು ಖಾಸಗಿ ಶಾಲೆಯಿಂದ ದೊರೆಯುತ್ತಿತ್ತು.

ಮುಂದೆ ೧೯೩೭ರಲ್ಲಿ ಮಾತೃಭಾಷೆಯ ಬೆಳಕು ಜನರಲ್ಲಿ ಬಿಂಬಿಸಿತು. ಅದೇ ಸಮಯಕ್ಕೆ ಈ ಗ್ರಾಮಕ್ಕೆ ಮುಂಬಯಿ ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ಬಿ. ಜಿ. ಖೇರರವರು ಭೆಟ್ಟಿ ಕೊಟ್ಟಾಗ ಇಲ್ಲಿಯ ಎಲ್ಲ ನಾಗರಿಕರು ಕನ್ನಡದಲ್ಲಿ ಶಿಕ್ಷಣ ದೊರೆತರೆ ನಮ್ಮ ಏಳ್ಗೆಯಾಗುವದು ಎಂದು ಬಿನ್ನೈಸಿದರು.

ನಾಗರಿಕರ ಇಚ್ಛೆಯಂತೆ ೧೯೩೭ರಲ್ಲಿ ಮಾತೃಭಾಷೆಯ ಕನ್ನಡ ಶಿಕ್ಷಣವು ಪ್ರಾರಂಭವಾಯಿತು.

ಅಂದಿನಿಂದ ಇಂದಿನವರೆಗೆ ಮಾತೃಭಾಷೆಯ ಶಿಕ್ಷಣದ ಪ್ರಗತಿಯಿಂದ ಎಂ. ಬಿ. ಬಿ. ಯಸ್. ಪರೀಕ್ಷೆ ಪಾಸಾಗಿ

ವಿದೇಶಕ್ಕೆ ಉಚ್ಚ ಶಿಕ್ಷಣಕ್ಕಾಗಿ ಹೋಗಿದ್ದಾರೆ. ಅಲ್ಲದೆ ಬಿ. ಇ., ಡಿಪ್ಲೋಮಾ, ಮುಂತಾದ ಉಚ್ಚ ಶಿಕ್ಷಣ ಪೂರ್ಣ ಮುಗಿಸಿದ್ದಾರೆ. ಇನ್ನೂ ಕೆಲವರು ಉಚ್ಚ ಶಿಕ್ಷಣವನ್ನು ಪಡೆಯುತ್ತಿದ್ದಾರೆ.

ಈ ಪೂರ್ವದಲ್ಲಿ ದೊರೆಯುತ್ತಿದ್ದ ಮರಾಠಿ ಶಿಕ್ಷಣದಿಂದ ಹೆಚ್ಚು ಪ್ರಗತಿ ಎಂದರೆ ಅಧ್ಯಾಪಕ ವೃತ್ತಿಯ ಹೊರತಾಗಿ ಬೇರೆ ಯಾವದೂ ಪ್ರಗತಿಯಾಗಿಲ್ಲ. ಇವರಾದರೂ ಅತಿ ವಿರಳ.

ಇಲ್ಲಿಯ ಮಾತೃಭಾಷೆಯ ಶಿಕ್ಷಣ ಪಡೆಯುತ್ತಿರುವ ಸಂಸ್ಥೆಗಳು ಉತ್ತಮ ತರಗತಿಯಲ್ಲಿ ಇರುತ್ತವೆ ಎಂದು ಹೇಳಲು ಅಭಿಮಾನವೆನಿಸುವದು. ಯಾಕಂದರೆ ೧೯೪೬ರಿಂದ ಪಿ.ಎಸ್.ಸಿ. ಪರೀಕ್ಷೆಯು ಪ್ರಾರಂಭವಾಗಿ ಹದಿನೆಂಟು ವರುಷಗಳಾದವು. ಈ ಅವಧಿಯಲ್ಲಿ ಪರೀಕ್ಷೆಯ ಪರಿಣಾಮವು ೧೦೦ಕ್ಕೆ ೧೦೦ರ ವರೆಗೆ ಆಗಿದ್ದು ಉಳಿದ ವರುಷಗಳಲ್ಲಿ ಯಾದರೂ ಹೆಚ್ಚು ಪ್ರಗತಿಪಥದಲ್ಲಿ ಇದ್ದುದೆ ಕಾರಣವಾಗಿದೆ.

ಈ ಕಾರಣದಿಂದ ಮಾತೃಭಾಷೆಯ ಶಿಕ್ಷಣವು ಇನ್ನೂ ಪ್ರಗತಿಯಲ್ಲಿ ಸಾಗಬೇಕಾದರೆ ಈ ಭಾಗವು ಕರ್ನಾಟಕದಲ್ಲಿ ಸೇರ್ಪಡೆಯಾಗಬೇಕು.

ಅಂದರೆ ನಮ್ಮ ಕನ್ನಡ ಮಾತೃಭಾಷೆಯ ಸಾಂಸ್ಕೃತಿಯು ಪ್ರಗತಿಪಥದಲ್ಲಿ ಉಳಿದು ಜನರ ಕಲ್ಯಾಣವಾಗುವದು. ಇದರ ಜೊತೆಗೆ ಈ ನಿವೇದನ ಇಡಲಾಗಿದೆ.

---

# ಸಂಯುಕ್ತ ಕರ್ನಾಟಕ ಗಡಿನಾಡು ಸಮಿತಿ ಸ್ಥಾಪನೆ

ಗಡಿನಾಡುಗಳಲ್ಲಿ ಕೆಲಸ ಮಾಡುತ್ತಿರುವ ಕನ್ನಡ ಸಂಘ ಸಂಸ್ಥೆಗಳನ್ನೊಳಗೊಂಡ ಕೇಂದ್ರ ಸಂಸ್ಥೆಯೊಂದನ್ನು ರಚಿಸುವುದು ಅಗತ್ಯವೆಂದು ಭಾವಿಸಿ ಕರ್ನಾಟಕ ರಾಜ್ಯದ ಸಮಗ್ರ ಗಡಿ ಭಾಗಗಳ ಕಾರ್ಯಕರ್ತರ ಸಭೆಯೊಂದನ್ನು ಆ. ದಿ. ೫ ರಂದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಏರ್ಪಡಿಸಲಾಗಿತ್ತು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಅಧ್ಯಕ್ಷತೆ ವಹಿಸಿದ್ದರು.

ಈ ಸಭೆಯಲ್ಲಿ 'ಸಂಯುಕ್ತ ಕರ್ನಾಟಕ ಗಡಿನಾಡು ಸಮಿತಿ' ಎಂಬ ಹೆಸರಿನಿಂದ ಒಂದು ಸಂಸ್ಥೆಯನ್ನು ಸ್ಥಾಪಿಸಲಾಯಿತು. ಈ ಸಮಿತಿಗೆ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಅಧ್ಯಕ್ಷರಾಗಿರುತ್ತಾರೆ. ಶ್ರೀ ಆರ್. ಅನಂತರಾಮನ್, ಕಾಸರುಗೋಡಿನ ಶ್ರೀ ಕೆ. ಮಹಾಬಲ ಭಂಡಾರಿ, ಸೊಲ್ಲಾಪುರದ ಶ್ರೀ ನಾಗಪ್ಪ ಕಡಾದಿ ಮತ್ತು ಬೀದರಿನ ಶ್ರೀ ಪ್ರಭುರಾವ್ ವಕೀಲರು ಉಪಾಧ್ಯಕ್ಷರಾಗಿರುತ್ತಾರೆ.

ಸರ್ವಶ್ರೀ ಆದ್ಯ ರಾಮಾಚಾರ್ಯ (ಪ್ರಧಾನ ಕಾರ್ಯದರ್ಶಿ) ಆರ್. ಚಂದ್ರಶೇಖರಯ್ಯ (ಕೋಶಾಧಿಕಾರಿ) ದಾವುದ್ ಸಹೇಬ ಮನಿಯಾರ್, ಚನ್ನವೀರಕಲ್ಯಾಣಶೆಟ್ಟಿ, ಬಿ. ಯು. ಹಕ್ಕಿ ಮತ್ತು ಎಂ. ಎ. ಬಳ್ಳುಳಾಯ ಅವರುಗಳು ಕಾರ್ಯಕಾರಿ ಮಂಡಳಿಯ ಸದಸ್ಯರಾಗಿರುತ್ತಾರೆ. ಇತರ ಗಡಿಪ್ರದೇಶಗಳ ಕಾರ್ಯಕರ್ತರನ್ನು ಆರಿಸಲು ಅಧ್ಯಕ್ಷರಿಗೆ ಅಧಿಕಾರ ವೀಯಲಾಗಿದೆ.

### ಸಂಪಾದಕ ಮಂಡಳಿ

ಸರ್ವಶ್ರೀ ತಿ. ತಾ. ಶರ್ಮ, ಬಿ. ಶಿವಮೂರ್ತಿ ಶಾಸ್ತ್ರಿ ಮತ್ತು ಡಿ. ಆರ್. ರಾಮಯ್ಯನವರನ್ನುಳ್ಳ ಸಂಪಾದಕ ಮಂಡಳಿಯನ್ನು ರಚಿಸಲಾಗಿದೆ. ಈ ಮಂಡಳಿ ಕನ್ನಡ ಗಡಿಭಾಗಗಳ ಜನರ ಕುಂದು ಕೊರತೆ, ಅಂಕಿ-ಅಂಶಗಳನ್ನು ಸಂಗ್ರಹಿಸಿ ಕೈಕೊತ್ತಿಗೆಯೊಂದನ್ನು ಶೀಘ್ರದಲ್ಲೇ ಪ್ರಕಟಿಸಬೇಕೆಂಬ ಗೊತ್ತುವಳಿಯೊಂದನ್ನು ಅಂಗೀಕರಿಸಲಾಯಿತು.

---

# ಕನ್ನಡ ತಾಯಿಯ ಮಾನ ಗೌರವಗಳನ್ನು ಕಾಪಾಡಲು ಎಲ್ಲರೂ ಸಿದ್ಧರಾಗಬೇಕು

**ಕೇಂದ್ರ ಸರ್ಕಾರ ಪಕ್ಷಪಾತ ನೀತಿ ಅನುಸರಿಸುತ್ತಿದೆಯೆಂದು ಶ್ರೀ ಕೆ. ಹನುಮಂತಯ್ಯ**

ಬೆಂಗಳೂರು, ಆ. ೫-ಪ್ರತಿ ರಾಜ್ಯವೂ ಒಂದಲ್ಲ ಒಂದು ರೀತಿಯಲ್ಲಿ ಗಡಿ ಸಮಸ್ಯೆಯನ್ನು ಹೊಂದಿರುವಾಗ ಕಾನೂನು ಮತ್ತು ಸಂಪ್ರದಾಯಕ್ಕೆ ವಿರುದ್ಧವಾಗಿ ಶ್ರೀ ನಂದಾ ಅವರು ಬೆಳಗಾಮ್ ಮತ್ತು ಕಾರವಾರಗಳ ಬಗ್ಗೆ ಮಾತ್ರ ಆಸಕ್ತಿಯನ್ನು ವ್ಯಕ್ತಪಡಿಸುತ್ತಿರುವುದು ಉಚಿತ ಕ್ರಮವಲ್ಲ-ಎಂಬುದಾಗಿ ಮಾಜಿ ಮುಖ್ಯ ಮಂತ್ರಿಯವರೂ ಮತ್ತು ಲೋಕ

ಸಭಾ ಸದಸ್ಯರೂ ಆದ ಶ್ರೀ ಕೆ. ಹನುಮಂತಯ್ಯನವರು ನಿನ್ನೆ ಇಲ್ಲಿ ತಿಳಿಸಿದರು.

ಗುಬ್ಬಿ ಥಿಯೇಟರಿನಲ್ಲಿ ಕನ್ನಡ ಚಳುವಳಿಯ ಅಂಗವಾಗಿ ವ್ಯವಸ್ಥೆ ಮಾಡಿದ್ದ ಬಹಿರಂಗ ಸಭೆಯ ಅಧ್ಯಕ್ಷ ಭಾಷಣ ಮಾಡುತ್ತಾ ಮೇಲ್ಕಂಡಂತೆ ತಿಳಿಸಿದ ಶ್ರೀ ಕೆ. ಹನುಮಂತಯ್ಯನವರು ಕನ್ನಡ ತಾಯಿ ಭುವನೇಶ್ವರಿಯ ಸೆರಗನ್ನು ಮಹಾರಾಷ್ಟ್ರೀಯರು ಎಳೆಯುತ್ತಿದ್ದಾರೆ. ನಮ್ಮ ಮಾತೆಯ ಮಾನ ಗೌರವಗಳನ್ನು ಕಾಪಾಡಲು ನಾವು ಪ್ರಾಣ ನೀಗಲು ಸಿದ್ಧರಾಗಬೇಕು. ಕೇಂದ್ರ ಸರಕಾರ ಪಕ್ಷಪಾತ ನೀತಿಯನ್ನು ಅನುಸರಿಸುತ್ತಿದೆ. ಗುಂಪು ರಾಜಕೀಯವೇ ಈ ಪರಿಸ್ಥಿತಿಗೆ ಕಾರಣವಾಗಿದೆ. ಗಡಿ ವಿವಾದಗಳ ಇತ್ಯರ್ಥ ಕಾರ್ಯವನ್ನು ವಲಯ ಸಮಿತಿಗಳಿಗೆ ವಹಿಸಬೇಕು. ಸಣ್ಣ ಪುಟ್ಟ ಹೊಂದಾಣಿಕೆಗಳಿಗೆ ಕಾನೂನಿನಲ್ಲಿಯೂ ಅವಕಾಶವಿದೆ. ಆಗಸ್ಟ್ ೧೫ ರೊಳಗೆ ಗಡಿ ವಿವಾದವನ್ನು ಪರಿಹರಿಸುವ ಪಣವನ್ನು ಶ್ರೀ ನಂದಾ ಅವರು ತೊಡಲು ಕಾರಣವಾದರೂ ಏನು? ಇಂತಹ ಪಣತೊಡುವ ಅವಶ್ಯಕತೆಯಿರಲಿಲ್ಲ ಎಂಬುದಾಗಿಯೂ ತಿಳಿಸಿದರು.

ಕರ್ನಾಟಕ ಮಾತೆಯ ಮಾನ ಕಾಪಾಡಲು ನಾವೆಲ್ಲರೂ ಒಗ್ಗಟ್ಟಾಗಿ ದುಡಿಯಬೇಕಾಗಿದೆ– ಎಂಬುದಾಗಿಯೂ ಶ್ರೀ ಕೆ. ಹನುಮಂತಯ್ಯನವರು ತಿಳಿಸಿದರು.

## ರಾಜ್ಯ ಸರ್ಕಾರಕ್ಕೆ ಪೂರ್ಣ ಬೆಂಬಲ

ಮೈಸೂರು ಮಹಾರಾಷ್ಟ್ರ ಗಡಿ ಸಮಿತಿಯ ಸದಸ್ಯರಲ್ಲೊಬ್ಬರಾಗಿ ಕೆಲಸಮಾಡಿದ ಶ್ರೀ ಎಸ್. ಚನ್ನಯ್ಯನವರು ಸಭೆಯನ್ನು ಉದ್ದೇಶಿಸಿ ಮಾತನಾಡುತ್ತ ಶ್ರೀ ನಂದಾ ಅವರು ರಾಜಕೀಯ ಮುಖಂಡರ ಒತ್ತಾಯದ ಕಾರಣ ವಿವಾದದಲ್ಲಿ ವೈಯಕ್ತಿಕ ಆಸಕ್ತಿಯನ್ನ ವ್ಯಕ್ತಪಡಿಸಿ ಪರಿಹರಿಸುವದಾಗಿ ಹೇಳಿ ಮುಂದೆ ಬಂದಿದ್ದಾರೆ. ಪ್ರಸ್ತುತ ರಾಜ್ಯ ಸರ್ಕಾರದೊಂದಿಗೆ ನಮ್ಮ ಭಿನ್ನಾಭಿಪ್ರಾಯಗಳೇನೇ ಇದ್ದರೂ ಗಡಿ ವಿವಾದದಲ್ಲಿ ಸರ್ಕಾರಕ್ಕೆ ಪೂರ್ಣ ಬೆಂಬಲ ಕೊಡಲು ಸಿದ್ಧರಿದ್ದೇವೆ. ಮಹಾರಾಷ್ಟ್ರೀಯರು ಕೇವಲ ಪಡೆಯುವ ಧೋರಣೆಯನ್ನು ಹೊಂದಿದ್ದು ದಬ್ಬಾಳಿಕೆಯ ನೀತಿಯನ್ನು ಅನುಸರಿಸುತ್ತಿದ್ದಾರೆ ಎಂಬುದಾಗಿ ತಿಳಿಸಿದರು.

## ಸಹಸ್ರಾರು ಮಂದಿ ಉಪವಾಸ ಸತ್ಯಾಗ್ರಹಕ್ಕೆ ಸಿದ್ಧ

ವಿಧಾನ ಪರಿಷತ್ತಿನ ಸದಸ್ಯ ಶ್ರೀ ಎಂ. ಪಿ. ಎಲ್. ಶಾಸ್ತ್ರಿ ಅವರು ಮಾತಾನಾಡಿ ಈ ಸಣ್ಣ ವಿಷಯದಲ್ಲಿ ಶ್ರೀ ನಂದಾ ಅವರು ವೈಯಕ್ತಿಕ ಆಸಕ್ತಿಯನ್ನು ವ್ಯಕ್ತಪಡಿಸಿರುವುದು ವಿಚಾರ ಮೂಢತ್ವವೆ ಎಂದು ತಿಳಿಸಿದರು.

ಶ್ರೀ ಶಾಂತಪ್ಪಯಳಮಲಿ ಅವರು ಮಾತನಾಡಿ ಮಹಾರಾಷ್ಟ್ರೀಯರು ನಡೆಸಿದ ಉಪವಾಸ ಸತ್ಯಾಗ್ರಹದಿಂದ ಶ್ರೀ ನಂದಾ ಅವರು ಪ್ರಭಾವಿತವಾಗಿದ್ದಾರೆ. ನಮ್ಮಲ್ಲಿಯೂ ಸಹಸ್ರಾರು ಮಂದಿ ಉಪವಾಸ ಸತ್ಯಾಗ್ರಹ ನಡೆಸಲು ಸಿದ್ಧರಾಗಿದ್ದಾರೆ ಎಂಬುದಾಗಿ ತಿಳಿಸಿದರು.

ಶ್ರೀ ಎಸ್. ಎಲ್. ಉಪಾಧ್ಯಾಯರವರು ಮಾತನಾಡಿ ಗಡಿ ವಿವಾದದ ಬಗ್ಗೆ ಕೇಂದ್ರ ಸರ್ಕಾರ ನಿರ್ದಿಷ್ಟ ಧೋರಣೆಯನ್ನು ತಳೆಯುವುದು ಅಗತ್ಯವೆಂದು ತಿಳಿಸಿದರು.

ಕಾಸರಗೋಡಿನಿಂದ ಆಗಮಿಸಿದ್ದ ಶ್ರೀ ಕೃಷ್ಣಭಟ್ ಅವರು ಮಾತನಾಡಿ ಕಾಸರಗೋಡಿನ ಎರಡು ಲಕ್ಷ ಮಂದಿ ಕನ್ನಡಿಗರು ಕಣ್ಣೀರು ಸುರಿಸುತ್ತಿದ್ದು, ಅಲ್ಲಿ ಕನ್ನಡ ನಿರ್ನಾಮವಾಗುವ ಹಂತವುಟ್ಟಿದೆಯೆಂದು ತಿಳಿಸಿದರು.

ಸಭೆಯನ್ನು ಉದ್ದೇಶಿಸಿ ಮಾತನಾಡಿದ ಸರ್ವಶ್ರೀ ಡಿ. ಎಸ್. ಪುಟ್ಟಸಿದ್ದಯ್ಯ, ಅಂದಾನಪ್ಪ ದೊಡ್ಡಮೇಟಿ, ಬಿ. ಶಿವಮೂರ್ತಿಶಾಸ್ತ್ರಿ, ಕಾಂ|| ಸಿದ್ದನಾಥ್ ಪೂರ್ವಾಚಾರ್, ಶ್ರೀಕಂಠಯ್ಯರವರುಗಳೂ ಶ್ರೀ ನಂದಾ ಅವರ ನೀತಿಯನ್ನು ಟೀಕಿಸಿದರು.

ಸಭೆಯಲ್ಲಿ ಶ್ರೀ ಸೋಸಲೆ ಜವರಯ್ಯನವರಿಂದ ಪ್ರಾರ್ಥನೆ ನಡೆಯಿತು. ಪ್ರಾರಂಭದಲ್ಲಿ ಶ್ರೀ ವಾಟಾಳ ನಾಗರಾಜ್ ಅವರು ಸ್ವಾಗತ ಭಾಷಣ ಮಾಡಿದರು. ವಂದನಾರ್ಪಣೆಯೊಂದಿಗೆ ಸಭೆ ಮುಕ್ತಾಯವಾಯಿತು.

---

**ಬೆಂಗಳೂರು**

ಕನ್ನಡ ಪಂಡಿತ ಮತ್ತು ಮುನ್ಷಿ ಪರೀಕ್ಷೆಗಳನ್ನು ೧೯೬೫ರ ಮಾರ್ಚಿ ತಿಂಗಳಲ್ಲಿ ನಡೆಸಲಾಗುವುದೆಂದು ವಿದ್ಯಾ ಇಲಾಖೆ ಪ್ರಕಟಿಸಿದೆ.

ಆಗಸ್ಟ್ ೯ರಂದು ನಡೆದ ಬಹಿರಂಗಸಭೆಯಲ್ಲಿ ಭಾಷಣ ಮಾಡುತ್ತ ಮಾಜಿ ಮುಖ್ಯ ಮಂತ್ರಿ ಶ್ರೀ ಕೆ. ಹನುಮಂತಯ್ಯನವರು ಕರ್ಣಾಟಕದ ಕೀರ್ತಿಯನ್ನು ದೇಶದಲ್ಲಿ ಕಳಶ ಪ್ರಾಯಕ್ಕೇರಿಸಲು ತಾವು ಪ್ರಯತ್ನಿಸುವುದಾಗಿ ಶಪಥ ಮಾಡಿದರು. ಕರ್ಣಾಟಕ ಭವಿಷ್ಯ ಕುರಿತು ಚರ್ಚಿಸಲು ಈ ಸಭೆ ಏರ್ಪಾಟಾಗಿದ್ದಿತ್ತು. ಇಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು, ಶ್ರೀ ಕೋಣಂದೂರು ಲಿಂಗಪ್ಪ, ಶ್ರೀ ವಿ. ನಾಗರಾಜ, ಶ್ರೀ ಅಡಿಕೇರಪ್ಪ, ಶ್ರೀ ಚನ್ನಬಸವರಾಜ ಕವಲಿ ಮುಂತಾದವರು ಭಾಷಣ ಮಾಡಿದರು. ಈ ಸಭೆಯನ್ನುದ್ದೇಶಿಸಿ ಮಾತನಾಡಿದ ಮೇಯರ್ ಶ್ರೀ ಜಿ. ನಾರಾಯಣ ಅವರು ನಗರದ ಕನ್ನಡ ಸಂಘಗಳು ಇನ್ನು ಮುಂದೆ ಅಶ್ಲೀಲ ಸಾಹಿತ್ಯ ವಿರುದ್ಧ ಹೋರಾಟ ನಡೆಸಬೇಕೆಂದು ಕರೆ ನೀಡಿದರು.

**ನೈವೇಲಿ**

ಇಲ್ಲಿನ ಕನ್ನಡ ಸಂಘದ ಐದನೇ ವಾರ್ಷಿಕೋತ್ಸವವು ಜುಲೈ ತಿಂಗಳ ೧೯ನೇ ದಿನದಂದು ನಡೆಯಿತು. ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಕಾರ್ಯದರ್ಶಿಗಳೂ ಬೆಂಗಳೂರು ವಿಜಯ ಕಾಲೇಜಿನ ಕನ್ನಡ ಪ್ರಾಧ್ಯಾಪಕರೂ ಆದ ಶ್ರೀ ಜಿ. ವೆಂಕಟಸುಬ್ಬಯ್ಯನವರು ಮುಖ್ಯ ಅತಿಥಿಗಳಾಗಿ ಬಂದಿದ್ದರು. ಅಲ್ಲದೆ 'ಬಾಳಿಗೆ ಕಾವ್ಯದ ಬೆಳಕು' ಎಂಬ ವಿಷಯವಾಗಿ ವಿದ್ವತ್‌ಪೂರ್ಣವಾದ ಭಾಷಣ ಮಾಡಿದರು. ಲಿಗ್ನೈಟ್ ಕಾರ್ಪೊರೇಷನ್ನಿನ ಆರ್ಥಿಕ ಸಲಹೆಗಾರರಾದ ಶ್ರೀ ಆರ್. ಪಿ. ರಂಗಾ ಅವರು ಅಧ್ಯಕ್ಷತೆ ವಹಿಸಿದ್ದರು. ಸಂಘದ ಮಕ್ಕಳಿಂದ ನೃತ್ಯ ಕಾರ್ಯಕ್ರಮವಾದಮೇಲೆ ಶ್ರೀ ಟಿ. ಸುನಂದಮ್ಮನವರ 'ಕೂಸು ಹುಟ್ಟುವುದಕ್ಕೆ ಮುಂಚೆ' ಎಂಬ ನಾಟಕವನ್ನು ಪ್ರದರ್ಶಿಸಲಾಯಿತು.

---

# ಚಲುವಿಗಿಹುದೇ ಬಲವು

ಲೇ : ಗು. ಹು. ಹನ್ನೆರಡುಮಠ, ಎಂ.ಎ.

ಕಣ್ಣು ನಾಲಗೆ ತುಂಬಿ ವಿಷರಕ್ತ ಉಕ್ಕಿರಲು
ಸೊಗಸಿನಲಿ ಸವಿಚುಕ್ಕೆ ಓ ಎಂದಿತು
ಈ ಜೀವವೀಭಾವ ನಿರ್ಭಾವವಾಗಿರಲು
ಜೀವರಂಜಿಗೆಯೊಂದು ಜೇಂಗೊಡೆಯಿತು

ಬಿಸಿಲಾಡಿ ಬೆಮರಾಡಿ ಎದೆಗೂಡು ಕರಗಿರಲು
ಥಂಥನನ ತಂಗಾಳಿ ತೀಡಿರುವದು
ರಣರಣದ ರೌರವದ ಕಗ್ಗೊಲೆಯ ಹೆಣಗಳಲಿ
ಕೋಗಿಲೆಯು ಒಂದಿನಿಸು ಕೂಗಿರುವದು

ಈ ಜೀವ ರೌರವವೊ ನಲುಗೊಂಡ ಸೌರಭವೊ
ಹಾಗೊಮ್ಮೆ ಹೀಗೊಮ್ಮೆ ತೋರಿರುವದು
ಬಿಸಿಲಿಟ್ಟು ಮಳೆಯಾಗಿ ಚಳಿಯಿಟ್ಟು ಬಿಸಿಲಾಗಿ
ಅಂತೊಮ್ಮೆ ಇಂತೊಮ್ಮೆ ಹೊಮ್ಮಿರುವದು

ಓ ಹೆಣವೆ ಓ ನೋಣವೆ ಓ ವಿಷದ ಉರಿರಣವೆ
ಓ ರಕ್ತ ಓ ರಕ್ತ ಹೇಳು ಹೇಳು
ಈ ಗೋಳು ಥಂಥಣವು ಈ ಬೀಳು ಭಂಭಣವು
ಸತ್ಯವಹುದೋ ಹೇಳು ಬೇಗ ಹೇಳು

ಹಸಿರು ರಂಗಿಣಿ ಚಲುವಿ ಗಿಣಿಯುಂಡ ರಸರಾಣಿ
ಜೇಸು ತುಂಬಿದ ಗಲ್ಲ ಮುದ್ದಿರುವುದೇ
ರಕ್ಕಸದ ಲೋಕದಲಿ ಚಲುವಿಗಿಹುದೇ ಬಲವು
ಠಂತನನ ತಂಗಾಳಿ ತೀಡಿರುವುದೇ

# ಸಾದರ ಸ್ವೀಕಾರ

ಗೀತಾ ದರ್ಶನ : ಲೇಖಕರು : ಶ್ರೀ ಎಸ್. ಗಣಪತಿ ಶಾಸ್ತ್ರಿ ; ಪ್ರಕಾಶಕರು : ಎಸ್. ಆರ್. ಹೆಗಡೆ, ಕಡವೆ, ಶಿರಸಿ, ಉತ್ತರ ಕನ್ನಡ ; ಪುಟ ೧೭೬ ; ಸೈಜು ೧/೮ ಕ್ರೌನ್ ; ಬೆಲೆ ರೂ. ೨-೫೦.

ವಿಜ್ಞಾನದ ಧರ್ಮನಾಶಕ ರೂಪ : ಲೇಖಕರು : ಶ್ರೀ ಕೋಟ ವಾಸುದೇವ ಕಾರಂತ ; ಪ್ರಕಾಶಕರು : ಶ್ರೀ ಪಿ. ಆರ್. ಶೇಷಪ್ಪ, ಬಿ. ಎಸ್‌ಸಿ., ಬಿ. ಇ., ನೆಹರು ಎವಿನ್ಯು ಕ್ರೋಸ್ ರೋಡ್, ಮಂಗಳೂರು-೩ ; ಪುಟ ೩೮ ; ಸೈಜು ೧/೮ ಕ್ರೌನ್ ; ಬೆಲೆ ೨೫ ಪೈ.

ಕೈಗೆ ಬಂದ ತುತ್ತು : ಲೇಖಕರು : ಶ್ರೀ ಶಾ. ಬಾಲೂರಾವ್ ; ಪ್ರಕಾಶಕರು : ಕನ್ನಡ-ಭಾರತೀ, ೪/೧೦ ವೆಸ್ಟರನ್ ಎಕ್ಸ್‌ಟೆನ್‌ಷನ್, ಕರೋಲ್‌ಬಾಗ್, ದೆಹಲಿ ೫ ; ಪುಟ ೩೮ ; ಸೈಜು ೧/೮ ಕ್ರೌನ್ ; ಬೆಲೆ ೧ ರೂ.

ಶ್ರೀಶೈಲದರ್ಶನಿ : ಪ್ರಕಾಶಕರು : ಶ್ರೀ ಡಿ. ಮಲ್ಲಿಕಾರ್ಜುನಯ್ಯ, ಪ್ರಧಾನ ಕಾರ್ಯದರ್ಶಿ, ಶ್ರೀ ೧೦೦೮ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರ ಅಡ್ಡ ಪಾಲಕಿ ಮಹೋತ್ಸವ ಸಮಿತಿ, ಬೆಂಗಳೂರು-೯ ; ಪುಟ ೧೩೬.

ಪುರಂದರೋಪನಿಷತ್ (ಭಾಗ ೪) : ಪ್ರಕಾಶಕರು : ದಾಸಾಶ್ರಮ, ಪುರಂದರಪುರ, ರಾಜಾಜಿನಗರ, ಬೆಂಗಳೂರು-೧೦ ; ಪುಟ ೧೯೨ ; ಸೈಜು ೧/೮ ಕ್ರೌನ್ ; ಬೆಲೆ ೩ ರೂ.

ತರಕಾರಿಯ ಬೆಳೆ : ಲೇಖಕರು : ಶ್ರೀ ಉ. ಸುಬ್ಬರಾಯಾಚಾರ್ ; ಪ್ರಕಾಶಕರು : ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು-೫ ; ಪುಟ ೨೮ ; ಸೈಜು ೧/೮ ಕ್ರೌನ್ ; ಬೆಲೆ ೭೫ ಪೈ.

ಸಾವಿನ ತೆಕ್ಕೆಯಲ್ಲಿ : ಲೇಖಕಿ : ಶ್ರೀಮತಿ ಪಂಕಜ, ಪ್ರಕಾಶಕರು : ಸುರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು-೫ ; ಪುಟ ೧೬೭ ; ಸೈಜು ೧/೮ ಕ್ರೌನ್ ; ಬೆಲೆ (ಸಾದಾಪ್ರತಿ) ರೂ. ೨-೨೫.

The Conscience of a Liberal by Chester Bowles; Published by Atma Ram & Sons, Book sellers & Publishers, Kashmir Gate, Delhi-6; xxiv + 351 Page; Price Rs. 9-00.

ರತ್ನಹಾರ (ನಾಟಕ ಸಂಕಲನ) : ಪ್ರಕಾಶಕರು : ಮಹಾಮನೆ ಪ್ರಕಟನಾಲಯ, ೨೫೨೬, ಚಾಮುಂಡಿಪುರಂ, ಮೈಸೂರು-೪ ; ಪುಟ ೮೦ ; ಸೈಜು ೧/೮ ಕ್ರೌನ್ ; ಬೆಲೆ ೩ ರೂ.

ಸಿಡಿಲು ಸನ್ಯಾಸಿ : ಲೇಖಕರು : ಸಿಂಪಿ ಲಿಂಗಣ್ಣ ಚಡಚಣ ; ಪ್ರಕಾಶಕರು : ಅರವಿಂದ ಗ್ರಂಥಾಲಯ, ಚಡಚಣ, ಜಿ. ವಿಜಾಪುರ ; ಪುಟ ೩ + ೧೦೪ ; ಸೈಜು ೧/೮ ಕ್ರೌನ್ ; ಬೆಲೆ ರೂ. ೧-೫೦.

ದ್ಯಾವರು ಒದ್ದರೆ ! ಲೇಖಕರು : ಶ್ರೀ ಸಂಪಿಗೆ ಸುಬ್ಬಣ್ಣ ; ಪ್ರಕಾಶಕರು : ಸಂಪಿಗೆ ಪ್ರಕಾಶನ, ಎಸ್. ಆರ್. ಕಾಲೋನಿ, ಬೆಂಗಳೂರು-೧೯ ; ಪುಟ ೧೮೧ (ಪೇಪರ್) ; ಸೈಜು ೧/೮ ಕ್ರೌನ್ ; ಬೆಲೆ ರೂ. ೨-೫೦.

ಜಾನಪದ ಕಥೆಗಳು : ಸಂಗ್ರಹ : ಕುಮಾರಿ ಸೀತಾಚಾರಿ ; ಪ್ರಕಾಶಕರು : ಸುದರ್ಶನ ಪ್ರಕಾಶನ, ತಾರಾನಿವಾಸ, ತಿಪಟೂರು ; ಪುಟ vi + ೧೪೪ ; ಸೈಜು ೧/೮ ಕ್ರೌನ್ ; ಬೆಲೆ ರೂ. ೧-೫೦.

ಮಹಾಕವಿ ಹರಿಹರದೇವರ ವಿರಚಿತ ಅಲ್ಲಮಪ್ರಭುದೇವರ ರಗಳೆ : ಪ್ರಕಾಶಕರು : ಶ್ರೀ ಸಿದ್ಧೇಶ್ವರ ಗ್ರಂಥಪ್ರಕಾಶನ ಮಂಡಲಿ, ಸೊಲ್ಲಾಪುರ, ೧೯೬೪ ; ಸದುಪಯೋಗಕ್ಕೆ ; ಪುಟ ೫ + ೨೭ ; ಸೈಜು ೧/೮ ಕ್ರೌನ್.

ಸತ್ಯದರ್ಶನ : ಲೇಖಕರು : ಶ್ರೀ ಷ. ಬ್ರ. ಪ್ರ. ನೀಲಕಂಠ ಶಿವಾಚಾರ್ಯರು ; ಪ್ರಕಾಶಕರು : ಶ್ರೀ ಸಿದ್ಧೇಶ್ವರ ಗ್ರಂಥಪ್ರಕಾಶನ ಮಂಡಲಿ, ಸೊಲ್ಲಾಪುರ, ೧೯೬೪ (ಸದುಪಯೋಗಕ್ಕೆ) ಪುಟ x-೫೦ ; ಸೈಜು ೧/೮ ಕ್ರೌನ್.

ವಜ್ರಮಹೋತ್ಸವ ಸ್ಮಾರಕ ಗ್ರಂಥ ಅರ್ಪಣ : ಪ್ರಕಾಶಕರು : ಡಾ॥ ಎಚ್. ಟಿ. ಸಾಸನೂರ, ಎಂ.ಎ., ಬಿ.ಟಿ., ಪಿಎಚ್.ಡಿ. ಪ್ರೊಫೆಸರ, ವಿಜಯ ಕಾಲೇಜ, ವಿಜಾಪುರ, ೧೯೬೩ ; ಪುಟ ೧೨೮ ; ಸೈಜು ೧/೮ ಕ್ರೌನ್ ; ಬೆಲೆ ೪ ರೂ.

'ಉತ್ತರ' (ಕವನಗಳು) : ಲೇಖಕರು : ಜಿ. ಎಸ್. ಸಿದ್ಧಲಿಂಗಯ್ಯ ; ಪ್ರಕಾಶಕರು : ಶ್ರೀ ಪ್ರಕಾಶನ, ೧/೨೦೦೫, ಹೊಸ ಮಂಡಿ ಪೇಟೆ ಬಡಾವಣೆ, ತುಮಕೂರು ; ಪುಟ vii + ೫೧ ; ಸೈಜು ೧/೮ ಕ್ರೌನ್ ; ಬೆಲೆ ೨ ರೂ.

# ಸಂಪಾದಕೀಯ

## ಕನ್ನಡ ಶ್ರೀಮದ್ರಾಮಾಯಣ ಮಹಾಭಾರತಗಳ ಪುನರ್ಮುದ್ರಣ

ಮಹರ್ಷಿಗಳಾದ ವಾಲ್ಮೀಕಿ, ವೇದವ್ಯಾಸರುಗಳು ಸಂಸ್ಕೃತದಲ್ಲಿ ಶ್ರೀಮದ್ರಾಮಾಯಣ ಶ್ರೀಮನ್ಮಹಾಭಾರತಗಳೆಂಬ ದಿವ್ಯ ಕಾವ್ಯಗಳನ್ನು ಆದಿಯಲ್ಲಿ ರಚಿಸಿದರೆಂಬುದನ್ನು ಪ್ರಾಚೀನ ಕಾಲದಿಂದಲೂ ಭಾರತ ಭೂಮಿಯಲ್ಲಿ ಸಮಸ್ತರೂ ಬಲ್ಲರು. ಸುಮಾರು ನೂರು ವರ್ಷಗಳ ಹಿಂದೆ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರ್ ಅವರು ಈ ರಾಮಾಯಣ ಮಹಾಭಾರತಗಳನ್ನು ಕನ್ನಡದಲ್ಲಿ ಪ್ರಕಟಿಸಿದರು. ಶ್ರೀ ಕೃಷ್ಣರಾಜೇಂದ್ರ ವಿರಚಿತ ರಾಮಾಯಣ ಮಹಾಭಾರತಗಳನ್ನು ಅಕ್ಷರದ ತಪ್ಪುಗಳಿದ್ದಲ್ಲಿ ತಿದ್ದಿ, ಸಂಸ್ಕೃತ ಮೂಲದೊಡನೆ ಹೋಲಿಸಿ ನೋಡಿ ಹೆಚ್ಚು ವ್ಯತ್ಯಾಸಗಳಿದ್ದರೆ ಅದನ್ನು ಅಡಿಟಿಪ್ಪಣಿಯಲ್ಲಿ ಅನುಬಂಧದಲ್ಲಿಯೇ ತೋರಿಸಿ, ಗ್ರಂಥವನ್ನು ಪರಿಷ್ಕರಿಸುವ ಪ್ರಯತ್ನ ಈಗ ನಡೆದಿದೆ. ಈ ಪರಿಷ್ಕರಣ ಮತ್ತು ಪ್ರಕಟಣ ಕಾರ್ಯಗಳನ್ನು ಕೈಗೊಳ್ಳಲು ಒಂದು ಪ್ರಕಟನಾ ಸಮಿತಿ ಬೆಂಗಳೂರಿನ ಮಾಜಿ ಮೇಯರ್ ಶ್ರೀ ಕೃಷ್ಣಯ್ಯರ್ ಮತ್ತು ಪ್ರಸ್ತುತ ಮೇಯರ್ ಶ್ರೀ ಜಿ. ನಾರಾಯಣ ಅವರುಗಳ ಮಹತ್ಪ್ರಯತ್ನದಿಂದ ಕಳೆದ ಜುಲೈ ೩೧ರಲ್ಲಿ ರೂಪುಗೊಂಡಿದೆ. ಮೈಸೂರು ರಾಜ್ಯಪಾಲರಾದ ಶ್ರೀ ಶ್ರೀನಾಗೇಶ್‌ರವರು ಈ ಸಮಿತಿಯ ಕಾರ್ಯಕಲಾಪಗಳನ್ನು ಶಂಕರಮಠದ ಪ್ರಾಕಾರದಲ್ಲಿ ನೆರೆದಿದ್ದ ಮಹಾಸಭೆಯಲ್ಲಿ ಉದ್ಘಾಟಿಸಿದರು. ಈ ಮಹಾಕಾರ್ಯಕ್ಕೆ ಒಂದು ಲಕ್ಷ ರೂಪಾಯಿಗಳು ಬೇಕಾಗುವುದೆಂದೂ, ದಾನ ದತ್ತಿಗಳ ಮೂಲಕ ಈ ಹಣವನ್ನು ಸಂಗ್ರಹಿಸುವುದಾಗಿಯೂ ಸಮಿತಿಯು ನಿಶ್ಚಯಿಸಿದೆ. ಕನ್ನಡ ಸಾಹಿತ್ಯದ ಬೆಳವಣಿಗೆಗೆ ಇದೊಂದು ಪ್ರಾಮುಖ್ಯ ಸಾಧನವಾಗುವುದೆಂಬುದರಲ್ಲಿ ಸಂದೇಹವಿಲ್ಲ.

ಆದರೆ, ಆಗಿನ ಕಾಲದ ಕನ್ನಡ ಶೈಲಿ, ಭಾಷೆ ಮತ್ತು ಕ್ರಮಗಳು ಈಗಿನ "ರಾಕೆಟ್ ಯುಗ"ಕ್ಕೆ ಹಿಡಿಸುವುದಿಲ್ಲವೆಂದು ಹೇಳುವವರೂ ಕೆಲವರಿದ್ದಾರೆ. ಇದು ಸರಿಯಲ್ಲ. ಈ "ರಾಕೆಟ್ ಯುಗ"ದಲ್ಲಿ ನಡೆಯುತ್ತಿರುವ ಶೈಲಿಯ, ಭಾಷೆಯ ಮತ್ತು ಕ್ರಮದ ಕೊಲೆಯನ್ನು ತಪ್ಪಿಸಬೇಕಾದರೆ, "ಅಡಿಟಿಪ್ಪಣಿಗಳನ್ನು ಓದಿ, ಸಂಸ್ಕೃತ ಮೂಲಶ್ಲೋಕಗಳಿಗೂ ಅದರ ಭಾಷಾಂತರ ವಚನಕ್ಕೂ ಇರುವ ವ್ಯತ್ಯಾಸವನ್ನು ತಾಳೆನೋಡುವ" ತಾಳ್ಮೆ ಕನ್ನಡಿಗರಲ್ಲಿ ಮೂಡಬೇಕು. ಆದುದರಿಂದ ಈಗ ಪ್ರಕಟನಾ ಸಮಿತಿಯವರು ಕನ್ನಡ ಮಹಾಜನರ ಮುಂದಿಡುವ ಶ್ರೀ ಕೃಷ್ಣರಾಜೇಂದ್ರ ವಿರಚಿತ ರಾಮಾಯಣ ಮಹಾಭಾರತಗಳಲ್ಲಿ ಕಾಣುವ ಕನ್ನಡ ಶೈಲಿ, ಭಾಷೆ ಮತ್ತು ಕ್ರಮಗಳನ್ನು "ರಾಕೆಟ್ ಯುಗ"ದ ಕನ್ನಡಿಗರು ಓದಲೇಬೇಕು. ಇದರಿಂದ "ಅರೆಬೆರಕೆಯ" ಕನ್ನಡವು ತೊಲಗಿ "ಪರಿಸ್ಫುಟವಾದ" ಕನ್ನಡವು ಮತ್ತೆ ತಲೆದೋರಲು ಅವಕಾಶವುಂಟಾಗುತ್ತದೆ. ಸಮಿತಿಯವರು ತಮ್ಮ ಕಾರ್ಯಕ್ರಮದಲ್ಲಿ ಈ ಬಗ್ಗೆ ಎಲ್ಲಾ ಸಾಹಿತ್ಯವನ್ನೂ ಎಂದರೆ ಮದ್ರಾಸಿನ ಶ್ರೀ ಅಳಸಿಂಗ್ರಾಚಾರ್ಯರು ಈಗ್ಗೆ ಐವತ್ತು ವರ್ಷಗಳ ಹಿಂದೆ ರಚಿಸಿದ ರಾಮಾಯಣ ಮತ್ತು ಮಹಾಭಾರತಗಳನ್ನೂ, ಇತ್ತೀಚೆಗೆ ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿಗಳು ರಚಿಸಿರುವ ವಚನ ಮಹಾಭಾರತವನ್ನೂ ಪರಿಶೀಲಿಸಬೇಕಾದುದು ಅಗತ್ಯವೆಂಬುದನ್ನು ನಾವು ಹೇಳಬೇಕಾಗಿಲ್ಲ.

ಸಮಿತಿಯವರು ದಾನಗಳನ್ನು ಐದು ವರ್ಗಗಳಾಗಿ ವಿಂಗಡಿಸಿದ್ದಾರೆ. ೧,೦೦೦ ರೂ., ೫೦೦ ರೂ., ೨೫೦ ರೂ., ೧೦೦ ರೂ. ಮತ್ತು ಒಂದಕ್ಕಿಂತ ಹೆಚ್ಚು ಪ್ರತಿ ತೆಗೆದುಕೊಳ್ಳುವವರು – ಹೀಗೆ ಐದು ವರ್ಗಗಳಿವೆ. ದತ್ತಿ ಕೊಡುವವರಿಗೆ ಯಾವ ಮಿತಿಯೂ ಇರಲಾರದು. ಸಮಿತಿಯವರು ತಾವು ಕೈಗೊಂಡಿರುವ ಮಹಾಕಾರ್ಯದಲ್ಲಿ ಕೃತಕೃತ್ಯರಾಗಿ, ಕನ್ನಡ ದೇವಿಯ ಪೂಜಾರಿಗಳಾಗಿ, ಕನ್ನಡ ಮಹಾಜನರ ನಿರಂತರ ಕೃತಜ್ಞತೆಗೆ ಪಾತ್ರರಾಗುವರೆಂದು ನಂಬಿದ್ದೇವೆ. ಈ ಗ್ರಂಥಗಳ ಬೆಲೆಮಾತ್ರ ಆದಷ್ಟು ಕಡಮೆಯಾಗಿರಲಿ. ಕನ್ನಡಿಗರೆಲ್ಲರ ಮನೆಮನೆಗಳಲ್ಲೂ ಈ ಗ್ರಂಥಗಳು ಬೆಳಗಲಿ.

## ಬೆಂಗಳೂರು ವಿಶ್ವವಿದ್ಯಾನಿಲಯ

ಮೈಸೂರು ವಿಶ್ವವಿದ್ಯಾನಿಲಯ, ಕರ್ನಾಟಕ ವಿಶ್ವವಿದ್ಯಾನಿಲಯ – ಇವೆರಡರ ಜತೆಗೆ ಈಗ ಬೆಂಗಳೂರು ವಿಶ್ವವಿದ್ಯಾನಿಲಯವು ಮೈಸೂರು ರಾಜ್ಯದ ವಿದ್ಯಾಪ್ರಗತಿಯನ್ನು ಸೂಚಿಸುತ್ತಿದೆ. ಇದರಂತೆ ನಾಲ್ಕನೆಯ ವಿಶ್ವವಿದ್ಯಾನಿಲಯವೊಂದು ಮಲೆನಾಡಿನಲ್ಲಿ ಸ್ಥಾಪಿತವಾದರೆ ಲೇಸೆಂದು ನಾವು ನಂಬಿದ್ದೇವೆ. ಇದು ಕೇವಲ ವಿದ್ಯಾರ್ಥಿಗಳ ಸಂಖ್ಯೆಯ ದೃಷ್ಟಿಯಿಂದ ಮಾತ್ರವೇ ಅಲ್ಲದೆ, ಹಲವಾರು ಪರಿಶೋಧನೆಗಳಿಗೆ ಪಶ್ಚಿಮ ತೀರ ಪ್ರದೇಶ ಬಹಳ ಮಟ್ಟಿಗೆ ಅನುಕೂಲವಾಗಿರುವುದರಿಂದ ಈ ಅಂಶವನ್ನು ನಾವು ಸರ್ಕಾರದ ಗಮನಕ್ಕೆ ತರಬೇಕಾಗಿದೆ.

ನಮ್ಮ ದೇಶದ ವಿದ್ಯಾಭ್ಯಾಸ ಕ್ರಮವು ಬಹಳ ಹಿಂದುಳಿದಿದೆಯೆಂಬುದನ್ನು ನಾವು ಮರೆಯುವಂತಿಲ್ಲ. ಪ್ರಾಥಮಿಕ ವಿದ್ಯಾನಿಲಯಗಳಿಂದ ಹಿಡಿದು ವಿಶ್ವವಿದ್ಯಾನಿಲಯಗಳವರೆಗೆ ಎಲ್ಲವೂ "ದೊಡ್ಡಿ"ಗಳಂತೆ, "ಸಂತೆ"ಗಳಂತೆ, ಪರಿಣಮಿಸಿವೆ. ಅದಕ್ಕೆ ಬದಲು ಇವು ಯೋಗ್ಯ ವಿದ್ಯಾ ಶಿಕ್ಷಣ ಸಂಸ್ಥೆ

ಗಳಾಗಬೇಕಾದ ಕಾಲದಲ್ಲಿ ನಾವಿದ್ದೇವೆ. ಆಧುನಿಕ ವಿದ್ಯಾ ಪ್ರಗತಿಯನ್ನು ಪಾಶ್ಚಾತ್ಯ ದೇಶಗಳಲ್ಲಿ ಗಮನಿಸಿದರೆ ಅಲ್ಲಿ ಪರಮಾವಧಿ ೧೦,೦೦೦ ದಿಂದ ೧೨,೦೦೦ ವಿದ್ಯಾರ್ಥಿಗಳಿಗೊಂದು ವಿಶ್ವವಿದ್ಯಾನಿಲಯವಿರುವುದೆಂದು ಗೊತ್ತಾಗುತ್ತದೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ೫೦,೦೦೦ಕ್ಕೂ ಮೀರಿದೆ. ಬೆಂಗಳೂರು ನಗರವೊಂದರಲ್ಲಿಯೇ ಸುಮಾರು ೨೫,೦೦೦ ವಿದ್ಯಾರ್ಥಿಗಳಿದ್ದಾರೆ. ಅಂದಮೇಲೆ, ೨೫,೦೦೦ ವಿದ್ಯಾರ್ಥಿಗಳು ಮೈಸೂರು ವಿಶ್ವವಿದ್ಯಾನಿಲಯದಲ್ಲಿಯೂ, ಮಿಕ್ಕ ೨೫,೦೦೦ ವಿದ್ಯಾರ್ಥಿಗಳು ಬೆಂಗಳೂರು ವಿಶ್ವವಿದ್ಯಾಲಯದಲ್ಲಿಯೂ ತಮ್ಮ ಪ್ರೌಢ ವ್ಯಾಸಂಗವನ್ನು ಮುಂದುವರಿಸಲು ಅವಕಾಶವಿರುತ್ತದೆ.

ಹಿಂದೆ ಭಾರತದ ವಿಶ್ವವಿದ್ಯಾನಿಲಯಗಳ ಶಿಕ್ಷಣ ಮಟ್ಟವು ಉನ್ನತವಾಗಿತ್ತು. ನಲಂದ, ತಕ್ಷಶಿಲ ಇವೆರಡು ವಿಶ್ವವಿದ್ಯಾನಿಲಯಗಳು ವಿದೇಶಿಯರನ್ನು ಆಕರ್ಷಿಸುತ್ತಿದ್ದುವು. ಚೀಣಾ ಅರೇಬಿಯ ಮುಂತಾದ ದೇಶಗಳಿಂದ ಇಲ್ಲಿ ವ್ಯಾಸಂಗಕ್ಕಾಗಿ ಬರುತ್ತಿದ್ದರು. ಈಗ ಭಾರತ ದೇಶವು ವಿದ್ಯಾಭ್ಯಾಸದಲ್ಲಿ ಕೆಳಮಟ್ಟಕ್ಕೆ ಬಂದಿರುವುದನ್ನು ತಿಳಿದಾಗ ಇದಕ್ಕೆ ಕಾರಣವೇನೆಂಬುದನ್ನು ನಾವು ಕೂಡಲೇ ಅರಿತು ತಿದ್ದಿಕೊಳ್ಳಬೇಕು. ಮುಖ್ಯವಾಗಿ ಶಿಕ್ಷಣ ತಜ್ಞರಾದವರನ್ನು, ಆಡಳಿತ ನಿಪುಣರಾದವರನ್ನು, ವಿದ್ವತ್ಪೂರ್ಣರಾದವರನ್ನು ಯಾವವಿಧವಾದ ಜಾತಿ ನೀತಿಗಳ ಬಂಧನವಿಲ್ಲದೆ, ಎಲ್ಲ ಬಗೆಯ "ರಾಜಕೀಯ" ದಿಂದಲೂ ದೂರವಾಗಿದ್ದು ನೇಮಿಸಿಕೊಳ್ಳಬೇಕಾದುದು ಅಗತ್ಯ. ವಿದ್ಯಾರ್ಥಿಗಳಲ್ಲಿ "ಗುರು ಭಾವನೆ" ಹುಟ್ಟುವಂತೆ, ನಡೆವಳಿಕೆಯಲ್ಲೂ ಕಾರ್ಯಚಟುವಟಿಕೆಗಳಲ್ಲೂ ಅಪಾರ ತಿದ್ದುಪಡಿಯಾಗಬೇಕಾಗಿದೆ.

## ರಾಜ್ಯಗಡಿಗಳ ಪುನರ್ರಚನೆ

ರಾಜ್ಯದ ಗಡಿಗಳ ಪುನರ್ರಚನೆಯ ಪ್ರಶ್ನೆ ೧೯೫೬ ನವೆಂಬರ್ ೧ರಂದು ೧೪ರಾಜ್ಯಗಳ ವಿಂಗಡನೆಯಾದ ದಿನವೇ ಪ್ರಾರಂಭವಾಯಿತು. ರಚನೆಯಾದ ಮೇಲೆ ಪುನರ್ರಚನೆಯ ಮಾತು ಹುಟ್ಟಲೇಬೇಕು. ಏಕೆಂದರೆ, ರಾಜ್ಯಗಳ ವಿಂಗಡನೆಯ ಸಮಿತಿಯವರಿಗೆ ಆಯಾ ಸ್ಥಳೀಯ ವಿದ್ಯಮಾನಗಳು ಅಗ್ಗಿಅಷ್ಟಾಗಿ ಗೊತ್ತಿರುವುದಿಲ್ಲ. "To err is human" ಅದರಂತೆ, ಆ ಸಮಿತಿಯವರು ಮಾಡಿರುವ ತಪ್ಪನ್ನು ಮನ್ನಿಸುವುದು ಸೂಕ್ತ. "To forgive is divine" ಇಷ್ಟಾದಮೇಲೆ, ಶಾಂತರೀತಿಯಿಂದ ತಪ್ಪುಗಳನ್ನು ತಿದ್ದುವ ಕಾಲ ಈಗ ಬಂದಿದೆ. ಮಹಾರಾಷ್ಟ್ರ, ಆಂಧ್ರ, ಮದರಾಸು ಮತ್ತು ಕೇರಳ ಈ ರಾಜ್ಯಗಳಿಗೂ ಮೈಸೂರು ರಾಜ್ಯಕ್ಕೂ ೧೯೫೬ ನವೆಂಬರ್ ೧ರಂದು ಆರಂಭವಾದ ಗಡಿ ವಿವಾದಕ್ಕೆ ಈಗ ನಿವಾರಣೆ ದೊರೆಯುವಂತಿದೆ, ಈ ನಾಲ್ಕು ರಾಜ್ಯಗಳಲ್ಲಿ ಪರಸ್ಪರ ಭಿನ್ನಾಭಿಪ್ರಾಯವಿಲ್ಲದಿದ್ದರೂ, ಈ ರಾಜ್ಯಗಳಿಗೆ ಮೈಸೂರು ರಾಜ್ಯದ ಮೇಲೆ ಕಣ್ಣು! ಅದೇನು ವಿಚಿತ್ರವೋ ಹೇಳಲು ಸಾಧ್ಯವಿಲ್ಲ. ಮೈಸೂರು ರಾಜ್ಯ ಫಲವತ್ತಾಗಿದೆಯೆಂದೋ, ಮೈಸೂರಿನ ಜನತೆ ಶಾಂತಸ್ವಭಾವದವರೆಂದೋ! ಏನೇ ಆಗಲಿ, ಈ "ಗಡಿನಾಟಕ" ಸಮಾಪ್ತವಾಗಲೇಬೇಕು. "ಕೊಟ್ಟು–ತೆಗೆದುಕೊಳ್ಳುವ" ಶಾಸ್ತ್ರ ಮುಗಿಯಲೇಬೇಕು.

ಕೇಂದ್ರ ಗೃಹಮಂತ್ರಿ ನಂದಾರವರು ಬೆಂಗಳೂರಿಗೆ ಬಂದು ಮೂರು ದಿನವಿದ್ದು, ಮುಖ್ಯವಾಗಿ ಮೈಸೂರು – ಮಹಾರಾಷ್ಟ್ರ ರಾಜ್ಯಗಳ ಗಡಿವಿವಾದಗಳ ಪೂರ್ಣಪರಿಚೆಯ ಮಾಡಿಕೊಂಡು ಇದೇ ೬ನೆಯ ತಾರೀಖು ದೆಹಲಿಗೆ ತೆರಳಿದ್ದಾರೆ. ಇವರ ವರದಿ ೧೪ನೆಯ ತಾರೀಖು ಶುಕ್ರವಾರ ಪ್ರಧಾನಿಗಳ ಕೈಗೆ ಬಂದು ಪೊರಬೀಳುತ್ತದೆ. ಶ್ರೀ ನಂದಾರವರಿಗೆ ಮಿಕ್ಕ ಗಡಿ ವಿವಾದಗಳ ಪರಿಚಯವೂ ತಕ್ಕ ಮಟ್ಟಿಗೆ ಆಗಿರಲೇಬೇಕು. ಒಟ್ಟಿನಲ್ಲಿ, ಮೈಸೂರು ರಾಜ್ಯಕ್ಕೆ ಅನ್ಯಾಯವಾಗಬಾರದು.

ಹೊಸ ಮೈಸೂರು ರಾಜ್ಯದ ಹೊರಗಡೆ ಗಡಿಗಳಲ್ಲಿ ನಿಂತು ಸುಮಾರು ೩೦ ಲಕ್ಷಮಂದಿ ಕನ್ನಡಿಗರು ತಮ್ಮ ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಗೆ ಅವಕಾಶವಿಲ್ಲದೆ ತೊಂದರೆಗೀಡಾಗಿದ್ದಾರೆ. ಇವರು ಮೈಸೂರು ರಾಜ್ಯಕ್ಕೆ ಸೇರಲು ಬಯಸುತ್ತಿದ್ದಾರೆ. ಈ ಗಡಿಪ್ರದೇಶಗಳು ಯಾವುವೆಂದರೆ–

(೧) ಮದರಾಸು ರಾಜ್ಯಕ್ಕೆ ಸೇರಿರುವ ನೀಲಗಿರಿ ಜಿಲ್ಲೆ, ತಾಳವಾಡಿ ಫಿರ್ಕಾ ಮತ್ತು ಹೊಸೂರು ತಾಲ್ಲೂಕು.

(೨) ಆಂಧ್ರ ಪ್ರದೇಶಕ್ಕೆ ಸೇರಿರುವ ಮಡಕಶಿರ, ಆದವಾನಿ, ಆಲೂರು, ರಾಯದುರ್ಗ ಮತ್ತು ಹಿಂದೂಪುರ.

(೩) ಕೇರಳಕ್ಕೆ ಸೇರಿರುವ ಕಾಸರಗೋಡು.

(೪) ಮಹಾರಾಷ್ಟ್ರಕ್ಕೆ ಸೇರಿರುವ ಸೊಲ್ಲಾಪುರ, ಅಕ್ಕಲಕೋಟೆ, ಜತ್ತ, ಗಡಹಾಂಗ್ಲೇಜ, ದೇಗಲೂರು ಮತ್ತು ಉಮರಗ.

ಈ ಗಡಿಪ್ರದೇಶಗಳಲ್ಲಿ ಕನ್ನಡಿಗರಿದ್ದಾರೆ. ಅದರಂತೆ ಅಲ್ಲಿನ ಅಕ್ಕಪಕ್ಕದ ಹಳ್ಳಿಗಳಲ್ಲಿ ಮರಾಠಿಯವರಾಗಲಿ, ಆಂಧ್ರರಾಗಲಿ, ತಮಿಳರಾಗಲಿ, ಮಲೆಯಾಳಿಗಳಾಗಲಿ ಇರಲೇಬೇಕು. ಕೇವಲ ಭಾಷೆಯ ದೃಷ್ಟಿಯಿಂದ ರಾಜ್ಯದ ಪುನರ್ರಚನೆಯಾಗುವುದರಿಂದ ತೊಡಕುಂಟು. ಇದರ ಜತೆಗೆ ಸಂಸ್ಕೃತಿ ಮತ್ತು ಇತಿಹಾಸಗಳನ್ನು ಗಮನದಲ್ಲಿಟ್ಟು ಪುನರ್ರಚನೆಯಾಗಲಿ. ದಕ್ಷಿಣ ಭಾರತದಲ್ಲಿ ಶಾಂತಿನೆಲಸಲಿ.

ಸಂಪಾದಕರು: ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು–೧೮.






ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೭]　　ಸಂಪಾದಕರು: ಡಿ. ಆರ್. ರಾಮಯ್ಯ, ಬಿ.ಎ.　　[ಸಂಚಿಕೆ ೯

## ಪರಿಷತ್ತಿನಲ್ಲಿ ಯಕ್ಷಗಾನ ಪ್ರದರ್ಶನ



ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ದಿನಾಂಕ ೨೭-೮-೧೯೬೪ ರಂದು ಏರ್ಪಡಿಸಿದ್ದ ಯಕ್ಷಗಾನ 'ಮೀನಾಕ್ಷಿ ಕಲ್ಯಾಣ' ಪ್ರದರ್ಶನದ ಒಂದು ದೃಶ್ಯ.

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮

## ವಿಷಯ ಸೂಚಿಕೆ






ಸಂಪುಟ ೨೭ ] ಸೆಪ್ಟೆಂಬರ್ ೧೯೬೪ [ ಸಂಚಿಕೆ ೯

# ಇಂದು ನಮ್ಮ ನಾಡು

ಲೇ: ವಿಷ್ಣುಮೂರ್ತಿ ಕಾರ್ಗಲ್

ನಮ್ಮ ಈ ನಾಡಲ್ಲಿ ಇಂದೇನು ನಡೆಯುತಿದೆ
ಅಮ್ಮ ನೀ ನೋಡು ಬಾರೆ,
ಗಡಿನಾಡ ಒಳಜಗಳ ಮಹಾಸಮರವಾಗಲಿದೆ
ನೀ ಬುದ್ಧಿ ಹೇಳು ಬಾರೆ

ಇತ್ತ ಮೈಸೂರು ಗಡಿ ಅತ್ತ ಮಹರಾಷ್ಟ್ರದಲಿ
ನಿತ್ಯವೂ ನಡೆಯುತಿದೆ ರಂಪಾಟ ಕಾಟ
ಉತ್ತರದ ಗಡಿಯಲ್ಲಿ ಹೂಣ ಚೀಣರ ಕಾಟ
ಸುತ್ತುವರೆದಿದೆ ಪಾಕ್ ಸೈನಿಕರ ಬೊಬ್ಬಾಟ

ತಮಿಳು ತೆಲುಗುಗಳಂತೆ ನಾಡು ನುಡಿಯಂತೆ
ಹಿಂದಿ ಆಂಗ್ಲರ ಭಾಷೆ ಇರಲೆ ಬೇಕಂತೆ.
ಕನ್ನಡದಿ ವಿವಿಧಕುಲ ಬೆರೆಯುತಿಹುದಂತೆ!
ಹೀಗೆಷ್ಟು ದಿನ ನಡೆವುದೋ ಈ ನಾಡಸಂತೆ.

ಎತ್ತ ನೋಡಿದರತ್ತ ಸ್ವಾರ್ಥಾಂಧಕಾರ
ಮತ್ತೆಲ್ಲೆ ತುಂಬಿಹುದು ಕುಹಕ ಮಮಕಾರ
ಜಾತಿ ಜಾತಿಗೆ ದೂರ ಭಾಷೆ ವೈರ
ಮತ್ತೆಲ್ಲಿ ಅಡಗಿಹನೊ ಕನ್ನಡದ ವೀರ

ಸೃಷ್ಟಿಯಲಿ ವೈಮರೆತು ನಾ ಸರಿವೆ ದೂರ
ಯಾರಿಗಾಗೀ ಬದುಕು ಏಕೆ ಮಮಕಾರ.

---

# ಸಿದ್ಧರಾಮನ ಕಾಯಕನಿಷ್ಠೆ

ಲೇ: ಬಸವಲಿಂಗಯ್ಯ ಮಲ್ಲಾಪುರ

ವ್ಯಕ್ತಿಯ ಭಾವಶುದ್ಧಿ, ಮತ್ತು ರಾಷ್ಟ್ರದ ಆರ್ಥಿಕ ಸಿದ್ಧಿಗೆ ಕಾಯಕನಿಷ್ಠೆ ಅತ್ಯಾವಶ್ಯಕ. ಅದಕ್ಕಿಂತ ಮೇಲಾದ ಸಾಧನ ಮತ್ತೊಂದಿಲ್ಲ. ಸತ್ಯ ಶುದ್ಧಕಾಯಕದಲ್ಲಿ ಸದಾ ನಿರತ-ನಾದವನ ಮನಸ್ಸು, ಕೆಟ್ಟದುದನ್ನು ನೆನೆಯುವದಿಲ್ಲ. ಇನ್ನೊಬ್ಬನಲ್ಲಿ ಸಂಪತ್ತಿದೆ ಅದು ನನಗಿಲ್ಲ. ಹೇಗಾದರೂ ಮಾಡಿ ಅದನ್ನು ಕಬಳಿಸಬೇಕೆಂಬ ಕುವಿಚಾರ, ಕಾಯಕ ನಿಮಗ್ನ ವ್ಯಕ್ತಿಯ ಬಗೆಯಲ್ಲಿ ತಪ್ಪಿಯೂ ಸುಳಿಯುವುದಿಲ್ಲ. ಅದೊಂದು ಬಗೆಯ ತಪಸ್ಸು. ಸ್ವಾರ್ಥದ ವಾಸನೆ ಅದಕ್ಕೆ ಇರಕೂಡದು. ಕಾಯಕದಲ್ಲಿ ಮೇಲು, ಕೀಳುಗಳಿಲ್ಲ. ತಮ್ಮ ತಮ್ಮ ಅಭಿರುಚಿ, ಮತ್ತು ಶಕ್ತಿಗನುಸಾರವಾಗಿ ಯಾವ ಕಾಯಕವನ್ನಾದರೂ ಮಾಡಬಹುದು. "ಹಾಗದ ಕಾಯಕ ಮಾಡಿಕೊಂಡು ಹಣವಡ್ಡವ ತರುವುದು" ಕಾಯಕ ತತ್ವಕ್ಕೆ ಸರ್ವಥಾ ಸಲ್ಲದು. ಗುರುಲಿಂಗಜಂಗಮ ಸೇವೆಗೆ ಬೇಕಾದು ದನ್ನು ಕಾಯಕದಿಂದಲೇ ಪಡೆಯಬೇಕು. ಕಾಯಕದ ಮಹತಿಯನ್ನ ಕುರಿತು ಅನೇಕ ಶಿವಶರಣರು ಹೇಳಿದ್ದಾರೆ.

"ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ"

"ಕೃಷಿಕೃತ್ಯಕಾಯಕದಿಂದಾದಡೇನು? ತನುಮನ ಬಳಲಿಸಿತಂದು ದಾಸೋಹವ ಮಾಡುವ, ಪರಮ ಭಕ್ತನ ಪಾದವ ತೋರಯ್ಯ ಎನಗೆ. ಅದೆಂತೆನೆ ಆತನ ತನು ಶುದ್ಧ. ಆತನ ಮನ ಶುದ್ಧ. ಆತನ ನಡೆ ಶುದ್ಧ. ನುಡಿಯೆಲ್ಲ ಪಾವನವು ಆತಂಗೆ ಉಪದೇಶ ಮಾಡಿದಾತನೆ ಪರಮ ಸದ್ಗುರು. ಅಂತಪ್ಪ ಸದ್ಭಕ್ತನ ಮನೆಯ ಕೈಲಾಸವೆಂದು ಪೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮನೆ ಜಗತ್ಪಾವನ. ಇಂತಪ್ಪವರ ನಾನು ನೆರೆನಂಬಿ ನಮೋ ನಮೋ ಎಂಬೆನಯ್ಯ ಕೂಡಲ ಸಂಗಮದೇವ."

"ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತಿ. ಲಿಂಗವಾದರೂ ಕಾಯಕದಿಂದಲೇ ಶಿಲೆಯಕುಲ ಹರಿವುದು. ಜಂಗಮವಾದರೂ ಕಾಯಕದಿಂದ ವೇಷದ ಪಾಶ ಹರಿವುದು. ಇದು ಚೆನ್ನಬಸವಣ್ಣಪ್ರಿಯ ಚಂದೇಶ್ವರ ಲಿಂಗದ ಅರಿವು"

"....ಕಾಯಕವೇ ಕೈಲಾಸವಾದ ಕಾರಣ ಅಮಳೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗೆ."

ಇವೆಲ್ಲ ಶಿವಶರಣರ ಸೂಳ್ನುಡಿಗಳು. ಕಾಯಕದ ಮಹತ್ವವನ್ನು ಎತ್ತಿತೋರಿಸುತ್ತವೆ. ಗುರುಲಿಂಗ, ಜಂಗಮರಿಗೂ ಕಾಯಕ ತಪ್ಪಿದ್ದಲ್ಲ. ಕಾಯಕವೇ ಕೈಲಾಸ ಮುಂತಾದ ಮಾತುಗಳು ಸೂತ್ರಪ್ರಾಯವೂ ಅರ್ಥಗರ್ಭಿತವೂ ಆಗಿವೆ. ಶರಣರು ಕಾಯಕದಿಂದ ಮೂರನ್ನು ಸಾಧಿಸಿದ್ದಾರೆ. ಚಿತ್ತಶುದ್ಧಿ, ಸಂಪದಭಿವೃದ್ಧಿ ಮತ್ತು ಜ್ಯಾತ್ಯತೀತ ಸಮಾಜ ನಿರ್ಮಾಣ ಸಿದ್ಧಿ. ಇಂದು ನಮಗೆ ಬೇಕಾಗಿರುವುವೂ ಇವೇ. ಆದುದರಿಂದ ಇಂದಿನ ಸಮಸ್ಯೆಗಳಿಗೆ ಪರಿಹಾರವನ್ನು, ಶರಣರ ನುಡಿ ಗಡಣಗಳ ಅಭ್ಯಾಸದಿಂದ ಕಂಡುಹಿಡಿಯಬಹುದಾಗಿದೆ.

ಆದರ್ಶ ಸಿದ್ಧನ ಚಿತ್ರಣವೊಂದನ್ನು 'ಸಿದ್ಧರಾಮ ಚಾರಿತ್ರ' ಕೃತಿಯ ಮೂಲಕ ಕೊಡಬಯಸಿದ ಮಹಾಕವಿ 'ರಾಘವಾಂಕ'ನು ಶಿವಸಿದ್ಧನ ಸಾಕಾರನಿಷ್ಠೆ, ಭೂತಾನುಕಂಪೆ, ರಾಜಕಾರಣ ನಿರ್ಲಿಪ್ತತೆ, ವಿಷಯಸುಖ ವಿರಕ್ತತೆ, ಯೋಗಸಾಮರ್ಥ್ಯ ಮತ್ತು ಸಂಪತ್ತಿನ ವಿಷಯದಲ್ಲಿ ನಿರಾಸಕ್ತಿ ಮುಂತಾದ ಸದ್ಗುಣಗಳನ್ನು, ಬೇರೆ ಬೇರೆ ಸನ್ನಿವೇಶಗಳ ಮೂಲಕ ದೊರೆಯುವುದರ ಜೊತೆಗೆ, ಅವುಗಳಷ್ಟೇ ಮಹತ್ವದ ಅವನ ಕಾಯಕ ನಿಷ್ಠೆಯನ್ನೂ ಹೇಳದೆ ಬಿಟ್ಟಿಲ್ಲ. ಶರಣರು ಸಿದ್ಧರು, ಮತ್ತು ಯೋಗಿಗಳು, ತಮ್ಮ ಜೀವನದ ಪರಿಪೂರ್ಣತೆಗೆ ಅನುಸರಿಸಬೇಕಾದ ತತ್ವಗಳಲ್ಲಿ, ಕಾಯಕ ನಿಷ್ಠೆಯೂ ಒಂದೆಂಬುದನ್ನು ರಾಘವಾಂಕನ ಸಿದ್ಧರಾಮನು ಮರೆತಿಲ್ಲ. ಅದನ್ನು ಅವನ ಬಾಯಿಂದಲೇ ಹೇಳಿಸಿದ ಪ್ರಸಂಗ ಸಿದ್ಧರಾಮ ಚಾರಿತ್ರದಲ್ಲಿ ಬಂದಿದೆ.

ಸಿದ್ಧನ, ಸಾಕಾರನಿಷ್ಠೆ; ಅವನ ಹುಟ್ಟಿನೊಡನೇ ಒಡಮೂಡಿಬಂದುದು ಎವೆಯಿಕ್ಕದ, ಉಸಿರಿಕ್ಕದ, ಉಣ್ಣದ ಮಗು "ಧೂಳಯ್ಯನೆಂದು ಕಿವಿಯಲಿ ಕೂಗಿ ಕರೆದಡಂ ಕೇಳದಂತಿಪ್ಪನು. ಎಲೆ ಸಿದ್ಧರಾಮಯ್ಯ ಎಂದು ಆಳೋಕಿಸದ ಮುನ್ನ ತಿರುಗಿ ನೋಳ್ಪಂ ನಡಿಸಿತಂದು ಶಿವನಿಳಯದೊಳಗೆ ಲೀಲೆಯಿಂ ಕುಣಿಸೆ ಕುಣಿವಂ..." ಎಂದು ಕವಿಯು ಹೇಳುವ ಮಾತುಗಳು ಮೇಲಿನ ಹೇಳಿಕೆಯನ್ನು ಸಮರ್ಥಿಸುತ್ತವೆ. ಮನೆಯಲ್ಲಿ "ಮರುಳಂತೆ ಜಡನಾಗಿ" ಸುಮ್ಮನಿರುವ ಸಿದ್ಧರಾಮನನ್ನು, ಕರು ಕಾಯಲು ಕಳಿಸಿದರೆ, ಅಡವಿಯಲ್ಲಿ ದನಗಳ ಹಿಂದೆ ತಿರುಗಾಡಿ, ಬಿಸಿಲಿನ ತಾಪದಿಂದ ಹಸಿದು, ನೀರಡಿಸಿ, ಮರೆತಾದರೂ ಉಣ್ಣಬಹುದು, ನೀರು ಕುಡಿಯಬಹುದು ಎಂದು ಆಶಿಸಿ, ದನಕಾಯುವ ಹುಡುಗರ

ಜೊತೆ, "ಚೆಲುವಹ ಕಲಸುಗೂಳ್ ಕಟ್ಟಿಕೊಟ್ಟು" ತಂದೆ ಮುದ್ದುಗೌಡನು ಕಳುಹುತ್ತಾನೆ. ಸಿದ್ಧರಾಮನ ಸಾಕಾರ ನಿಷ್ಠೆ ಇನ್ನಷ್ಟು ಬೆಳೆಯಲು ಅವಕಾಶ ಸಿಕ್ಕಂತಾಯಿತು. ತಾಯಿ ಕಟ್ಟಿದ ಬುತ್ತಿಯನ್ನು "ಕರುಗಾವ ಮಕ್ಕಳುಗಳನಿಬರ್ಗೆ ದಣಿಯುಣಲಿಕ್ಕಿ" ತಾನು, "ಪಲವುನೂಮರದಡಿಯ ಮಲ್ಲಿಕಾ ಮಂಟಪದ ತಳದ ತಣ್ಣೆಳಲ ತಿಳಿಗೊಳನ ಪುಣ್ಯಸ್ಥಲದಿ" ಮೆರೆಯುತ್ತಿರುವ ಲಿಂಗವನ್ನು ಕಂಡು 'ಪರಿಪರಿಯ ಹೂಪತ್ರೆಗೊಯ್ದು' ಅದನ್ನು ಪೂಜಿಸಿ, 'ಸೊಲ್ಲಿಸಲು ಬಾರದಾನಂದದಿಂದ' ನಡು ಹಗಲ ತನಕ ಆಡಿ ಪಾಡುತ್ತಾನೆ. ನಿತ್ಯ ಇದೇ ಕ್ರಮ. ಹೀಗೆ ಕರುಗಾವನೆವದಿಂದ ಲಿಂಗಾರ್ಚನಾ ಸುಖಪಡೆಯುವ ಭಾಗ್ಯ ಸಿದ್ಧನದಾಗುತ್ತದೆ. ತತ್ಫಲವಾಗಿ ಮಲ್ಲಿಕಾರ್ಜುನನು ಜಂಗಮ ರೂಪದಿಂದ ಬಂದು ಸಿದ್ಧರಾಮನಿಗೆ ದರ್ಶನಕೊಟ್ಟು ಮಾಯವಾಗಿ ಬಿಡುತ್ತಾನೆ. ಅಂಬಲಿಯೊಡನೆ ಮನೆಯಿಂದ ಹಿಂದಿರುಗಿದ ಸಿದ್ಧರಾಮ, ಮಲ್ಲಯ್ಯನನ್ನು ಕಾಣದೆ, ತಾಯನಗಲಿದ ಕರುವಿನಂತೆ ಹಲುಬಿ ಹಂಬಲಿಸುತ್ತ, ಹಾದಿಯ ಹುಡಿಯಲ್ಲಿ ಬಿದ್ದು ಹೊರಳಾಡುತ್ತಿರಲು ಯಾತ್ರಿಕರು ಅವನನ್ನು ಕರೆದೊಯ್ದು ಶ್ರೀ ಶೈಲದಲ್ಲಿ ಬಿಡುತ್ತಾರೆ. ಅಲ್ಲಿ ಮಲ್ಲಿಕಾರ್ಜುನನನ್ನು ಹುಡುಕುತ್ತ ಗಿರಿಕಂದರಗಳನ್ನೆಲ್ಲ ಸುತ್ತಾಡುತ್ತಾನೆ. ಮಲ್ಲಯ್ಯನು ಕಾಣದಿರಲು, ಕೊನೆಗೆ ರುದ್ರಗವ್ಮರಿಯೊಂದರಲ್ಲಿ ಬಿದ್ದು ಪ್ರಾಣ ತ್ಯಾಗಮಾಡಬಯಸಿದಾಗ, ಮಲ್ಲಿಕಾರ್ಜುನನು ಬಂದು ಉದ್ಧರಿಸುತ್ತಾನೆ. ಆಮೇಲೆ ಸಿದ್ಧರಾಮನಿಗೆ 'ಉತ್ತಮಾಂಗದಲಿ ಮೂಡಿದ ಗೂಢಲಿಂಗಮಾ ತೋರಿ, ಪಂಚಾಕ್ಷರಿಯ ಹೃದಯ ಮಾ ತಿಳಿಪಿ . . . . ಭೂತದಯಾ ವಿಚಾರಮಾ ನೇಮಮಾಕೊಟ್ಟು" ಸೊನ್ನಲಿಗೆಗೆ ಹಿಂದಿರುಗಲು ಶಿವನು ಹೇಳುತ್ತಾನೆ. ಅದಕ್ಕೆ ಸಿದ್ಧರಾಮನು ಒಲ್ಲೆನೆಂದು ಖಂಡಿತವಾಗಿ ನುಡಿದುಬಿಡುತ್ತಾನೆ. ನಾನಾಪರಿಯಿಂದ ತಿಳಿಸಿ ಹೇಳಿದರೂ ಅಗಲಲೊಲ್ಲದ ಸಿದ್ಧನಿಗೆ "ಹಿಂದುಗೊಂಡೇ ಬಂದು ನೀಂ ಹಿಡಿದುದಂ ಹಿಡಿದು . . . ನಿಂದಲ್ಲಿನಿಂದು ಕರೆದೊಡೋಯೆಂದು. . . . .ನೀನೆಂದಂತೆ ಮಾಳ್ಪೆನ್ ಉಮ್ಮಳಿಸಬೇಡ, ಅಂಜಬೇಡ" ಎಂದು ಶಿವನು ನಂಬುಗೆಯಿತ್ತು ಕಳುಹುತ್ತಾನೆ. ಹೀಗೆ ಭೂತಾನುಕಂಪೆಯ ವ್ರತವನ್ನು, ಶಿವನ ಅಪ್ಪಣೆಯ ಮೇರೆಗೆ ಪರಿಗ್ರಹಿಸಿ ಸಿದ್ಧರಾಮನು ಸೊನ್ನಲಿಗೆಗೆ ಹಿಂದಿರುಗುತ್ತಾನೆ. ಮುಂದೆ ಅವನ ಸಾಕಾರನಿಷ್ಠೆ, ಮತ್ತು ಭೂತಾನುಕಂಪೆಯನ್ನು ತೋರಿಸುವ ಅನೇಕ ಸಂದರ್ಭಗಳನ್ನು ಕವಿ ಹೇಳಿದ್ದಾನೆ.

ತನ್ನ ಭೂತಾನುಕಂಪೆ, ಕೇವಲ ಮಾನವರಿಗಷ್ಟೇ ನೇಮಿತವಾಗಿರಬಾರದೆಂಬ ಕಲ್ಪನೆ ಒಂದು ದಿನ ಸಿದ್ಧನಲ್ಲಿ ಮೂಡುತ್ತದೆ. "ನರಕಮಂ ನರರ್ಕೈದೆ ಗೆಲುವುದಕೆ ಗುರಿಯಾದನೀ ಮಲ್ಲಿನಾಥನು" ಇದು ಸಿಕ್ಕದೆ ಅಜ್ಞಾನಿ ಜನ್ಮ ಪಡೆದು ಹೊರಗಿರುವ ಪಶುಪಕ್ಷಿ ಕ್ರಿಮಿಕೀಟಕಾವಳಿಗಳೇನು ಮಾಡಬೇಕು? ಅವುಗಳ ಜನ್ಮ ಸಾರ್ಥಕವಾಗುವ ಬಗೆ ಹೇಗೆ? ಎಂದು ವಿಚಾರಿಸಿ, ಅವೆಲ್ಲ "ಅರತು ನೀರ್ಗುಡಿಯೆ ಭವವಳಿವಂತು ಕಟ್ಟುವೆಂ ಕೆರೆಯನ್" ಎಂಬ ನಿರ್ಧಾರಕ್ಕೆ ಬರುತ್ತಾನೆ. ಮರುದಿನವೇ ಮಲ್ಲಿಕಾರ್ಜುನನ ಮಹಮಂದಿರದ ಆಗ್ನೇಯ ದಿಕ್ಕಿನಲ್ಲಿ "ತಟಾಕ ಖನನೋದ್ಯೋಗವನ್ನು" ಪ್ರಾರಂಭಿಸಿಯೇ ಬಿಡುತ್ತಾನೆ. "ಜೀವಕಿಲ್ಲರ ದುರಿತಕರಿಗೆ ಅಂಕುಶಂಗೊಂಬ ಮಾವತಿಗನಂತೆ ಗುದ್ದಲಿಗೊಂಡು" ನೆಲವನ್ನಗಿಯಲು ಮೊದಲು ಮಾಡುತ್ತಾನೆ. ಸಿದ್ಧನೇ ಗುದ್ದಲಿಗೊಂಡಮೇಲೆ ಶಿಷ್ಯರು ಸುಮ್ಮನಿರುತ್ತಾರೆಯೇ? ಕೂಡಲೇ ನಾಲ್ಕು ಸಾವಿರ ಸಮರ್ಥಗುಡ್ಡರು ಸಿದ್ಧನ ಜೊತೆ ಕೆಲಸಕ್ಕೆ ನಿಲ್ಲುತ್ತಾರೆ. ಕೆರೆ ಕಟ್ಟುವ ಕೆಲಸ ಮುಂದುವರಿಯುತ್ತದೆ.

ನಡುವಗಲ ಬಿರು ಬಿಸಿಲಿನಲ್ಲಿಯೂ, ಗುಡ್ಡರೊಡಗೂಡಿ, ಕೆರೆ ಕಡಿಯುವ, ಸಿದ್ಧರಾಮನ ಕಾಯಕವು ಅವ್ಯಾಹತವಾಗಿ ಸಾಗುತ್ತದೆ. ಒಂದುದಿನ ಆಕಾಶದಲ್ಲಿ ವಿಹರಿಸುತ್ತಿರುವ ಶಿವನು ಸಿದ್ಧನ ಈ ಶ್ರಮವನ್ನು ನೋಡಿ, ಕನಿಕರ ಹುಟ್ಟಿ ಗಂಗೆಯನ್ನು ಕುರಿತು "ಕಂದನ್ ಈಸೊಂದು ಕೆಲಸಕ್ಕೆ ಆರನೆಲೆಗಂಗೆ, ಇಂದುಳ್ಳ ಪುಣ್ಯನದಿಗಳು ಬೆರೆಸಿಹೋಗಿ, ಸಿದ್ಧೇಂದ್ರನು ಇರಹೇಳ್ವ ಎಡೆಯೊಳಿರು, ಹೋಗಬೇಗ" ಎಂದು ಬೆಸಸಿ ಕಳುಹುತ್ತಾನೆ. ಶಿವನಾಜ್ಞೆಯಂತೆ ಗಂಗೆಯು, ತುಂಗಭದ್ರೆ, ಪ್ರಯಾಗೆ, ಕಾಳಿಂದಿ, ನರ್ಮದೆ, ಮಲಪ್ರಹಾರಿಣಿ ಮುಂತಾದ ಪವಿತ್ರನದಿಗಳನ್ನು ಕೂಡಿಕೊಂಡು, ಎಲ್ಲರೂ "ನಿಜರೂಪಿನ ಪ್ರಭೆಯೊಳೆಯ್ತಂದು" ಸಿದ್ಧೇಂದ್ರನಿಗೆ ಒಂದಿಸಿ ನಿಲ್ಲುತ್ತಾರೆ. ಆಗ ನಡೆದ ಮಾತುಕತೆಗಳಿವು.

ಸಿದ್ಧೇಂದ್ರ : ಸುದತಿಯರು ನೀವಾರು?

ಗಂಗೆ : ದರಾತಳಾಗ್ರದ ಪುಣ್ಯನದಿಗಳ್

ಸಿದ್ಧ : ಆರಟ್ಟಿದರು ?

ಗಂಗೆ : ಶಿವನ್

ಸಿದ್ಧ : ಏಕೆ?

ನದಿ : ನಿಮ್ಮಪುರದೊಳಿರಲ್ಕೆ

ಸಿದ್ಧ : ತಾಯ್ಗಳಿರ, ನೀವಿರಲು ತಕ್ಕ ಸದಮಳಸ್ಥಾನವಿದಿರೊಳಗಿಲ್ಲ, ನಿಮ್ಮ ನಿಜಸದನಕ್ಕೆ ಸದುಳೆ ಬಿಜಯಂಗೆಯ್ವುದು.

ಗಂಗೆ : ನೀನುದಯಿಸಿದುದೇ ಮಹಾಕ್ಷೇತ್ರವು. ಅವೆಯ್ತಂದ ಹದನ ವನವಧರಿಸು. ಈ ಸರಿಯನ್, ಈ ಬಿಸಿಲೊಳ್ ಅಯ್ಯ ನೀನ್ ಒಡೆದೆಗೆದು ಸೂಸುವ ಆಯಾಸಮಂ ಬಿಡುಸಾಕು. ನಾವು ಈ ಪ್ರದೇಶದೊಳು, ಕೆರೆಯಾಗಿ ತೊರೆಯಾಗಿ, ಡೊಣೆಯಾಗಿ ವಾಪಿ ಕೂಪಂಗಳಾಗಿ ಈಶನ ಅಭಿಷವದಗ್ರ ಜಲಕೆ ಸಂದಿಪ್ಪೆವು.

ಸಿದ್ಧರಾಮ: ಶಿವಯೋಗಿಯ ಶರೀರಂ ವೃಥಾಸವೆಯಲಾಗದು. ಅನುಗೊಂಬನಿತು ಕಾಯಕಂ ನಡೆಯುತಿರಬೇಕು.

ಗಂಗೆ: ಬೇಗಂ ಹೋಗಿ, (ನೀಂ) ಬೆಸಸಿದರೊಳ್ ಇರ ಹೇಳ್ದು ಎವಗೆ ಶಿವನೆ ಅಟ್ಟಿದಂ.

ಸಿದ್ಧ : ದಿಟವೆ?

ಗಂಗೆ: ದಿಟಂ.

ಸಿದ್ಧ : ಅದಡೆ ಈ ಕೆರೆಯೊಳು, ಅವನಿಯೊಳಗುಳ್ಳ ಅಪ್ಪಷಷ್ಟಿಗಳು, ದಿವ್ಯನದಿಗಳು, ದಿವ್ಯತೀರ್ಥಂಗಳು, ಅವಿವೆನ್ನದೆ ಎಲ್ಲವಂ ತಂದು ಇದರೊಳ್ ಇರ್ಪುದು.

ಸಿದ್ಧರಾಮನ ಅಜ್ಞೆಯಂತೆ, ಆ ಪವಿತ್ರ ನದಿಗಳೆಲ್ಲ ಹೆಣ್ಣು ವೇಷಗಳನ್ನು ಬಿಟ್ಟು, ನೋಡು ನೋಡುವಷ್ಟರಲ್ಲಿ ಪುಣ್ಯ ಜಲಂಗಳಾಗಿ ಕೆರೆಯ ನಡುವೆ ನಿಂತು ಬಿಡುತ್ತವೆ.

'ಸಿದ್ಧರಾಮ ಚಾರಿತ್ರ'ದಲ್ಲಿ ಬರುವ ಈ ಸನ್ನಿವೇಶದ ಮುಖ್ಯ ಉದ್ದೇಶ, ಸಿದ್ಧನು ಕಟ್ಟಿದ ಕೆರೆಯನೀರು ಬಹಳ ಪವಿತ್ರವಾದುದು, ಅದನ್ನು ಸೇವಿಸಿದರೆ, ಅದರಲ್ಲಿ ಸ್ನಾನಮಾಡಿದರೆ, ಕೇವಲ ಮಾನವರಿಗಷ್ಟೇ ಏಕೆ, ಪಶುಪಕ್ಷಿಗಳಿಗೂ, ಗಂಗೆ, ತುಂಗಭದ್ರೆ ಮುಂತಾದ ಪವಿತ್ರನದಿಗಳ ನೀರನ್ನು ಸೇವಿಸಿದ ಅವುಗಳಲ್ಲಿ ಸ್ನಾನಮಾಡಿದ ಪುಣ್ಯವು ಪ್ರಾಪ್ತವಾಗುತ್ತದೆ ಎಂದು ತಿಳಿಸುವುದೇ ಆಗಿದೆ. ಆದರೂ ಇದರಲ್ಲಿ ಸಿದ್ಧನ ಕಾಯಕದ ಬಗ್ಗೆ ಇದ್ದ ವಿಚಾರಗಳು, ಅದರಲ್ಲಿ ಅವನಿಗಿರುವ ನಿಷ್ಠೆ ಇವೆಲ್ಲವೂ ಪ್ರಕಟವಾಗಿವೆ ಯೆಂಬುದನ್ನು ಮರೆಯುವಂತಿಲ್ಲ. "ಶಿವಯೋಗಿಯ ಶರೀರಂ ವೃಥಾ ಕೇಡಲಾಗದು. ಅನುಗೊಂಬನಿತು ಕಾಯಕಂ ನಡೆಯುತಿರಬೇಕು" ಎಂದು ಸಿದ್ಧರಾಮನು ನದಿಗಳನ್ನು ಉದ್ದೇಶಿಸಿ ಹೇಳುವ ಮಾತುಗಳು, ಮೇಲಿನ ಹೇಳಿಕೆಯನ್ನು ಪುಷ್ಟೀಕರಿಸುತ್ತವೆ. ಶಿವಯೋಗಿಯಾದವನಿಗೂ ಕಾಯಕ ತಪ್ಪಿದ್ದಲ್ಲವೆಂಬುದನ್ನು, ಮನಗಂಡವನಾದುದರಿಂದಲೇ, ಸಿದ್ಧರಾಮನು ಸ್ವತಃ ಗುದ್ದಲಿ ಹಿಡಿದು ಎಲ್ಲರಿಗಿಂತ ಮೊದಲು ತಾನು ಕೆರೆಯಗಿಯಲು ಪ್ರಾರಂಭಿಸುತ್ತಾನೆ. ಸಿದ್ಧರಾಮನ ಈ ಕಷ್ಟವನ್ನು ಪರಮಾತ್ಮನು ನೋಡಿ. ಗಂಗೆಯನ್ನು ಕಳುಹಿಕೊಟ್ಟನೆಂಬುದು ಒಂದು ಪವಾಡವೇ ನಿಜವಾದರೂ, ಅದರ ಹಿನ್ನೆಲೆಯನ್ನು ತಿಳಿದಾಗ ಅದರ ಸಮಂಜಸತೆ ತಿಳಿದು ಬರುತ್ತದೆ. ಘನೋದ್ದೇಶದಿಂದ ಪ್ರೇರಿತನಾಗಿ, ಕೈಕೊಂಡ ಸತ್ಯಶುದ್ಧ ಕಾಯಕದಲ್ಲಿ ನಿಷ್ಠಾವಂತನಾದ ವ್ಯಕ್ತಿಗೆ, ಪರಮಾತ್ಮನು ಒಲಿಯುತ್ತಾನೆ. ಅನೇಕ ಬಗೆಯಲ್ಲಿ ನಾನಾರೂಪಗಳಲ್ಲಿ ಸಹಾಯಮಾಡುತ್ತಾನೆಂಬ ತತ್ವವನ್ನು ಪ್ರತಿಮಾ ವಿಧಾನದ ಮೂಲಕ, ಪವಾಡ ರೂಪದಲ್ಲಿ ಮಹಾಕವಿ ರಾಘವಾಂಕನು, ಇಲ್ಲಿ ಕೌಶಲ್ಯಪೂರ್ಣವಾಗಿಯೂ, ಮಾರ್ಮಿಕವಾಗಿಯೂ, ನಾಟಕೀಯವಾಗಿಯೂ ಚಿತ್ರಿಸಿದ್ದಾನೆ. ಶಿವನಾಜ್ಞೆಗೆ ತಲೆಬಾಗುವ ಸಿದ್ಧರಾಮನ ಮತ್ತೊಂದು ಸದ್ಗುಣವೂ ಇಲ್ಲಿ ಸುಸ್ಪಷ್ಟವಾಗಿ ಒಡಮೂಡಿದೆ.




# ಗ್ರಂಥಾವಲೋಕನ

**ಕಾಲೂರ ಚೆಲುವೆ:** ಲೇಖಕರು ಶ್ರೀ. ಕೊಳಂಬೆ ಪುಟ್ಟಣ್ಣ ಗೌಡ, ವಿದ್ವಾನ್, ಸುಳ್ಯ, ಪುಟಗಳು: ೧೩ + ೧೯೩ + ೩ + ೬: ಬೆಲೆ: ರೂ. ೨-೫೦ ಪೈ.

ಎಂಟೆಂಟು ಸಾಲುಗಳ ೪೪೦ ಪದ್ಯಗಳಿರುವ ಕಾಲೂರ ಚೆಲುವೆಯೆಂಬ ಖಂಡಕಾವ್ಯ ಕನ್ನಡ ಕಥನ ಕಾವ್ಯ ಕ್ಷೇತ್ರದಲ್ಲಿ ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣಗೌಡರ ಮಹತ್ಸಾಧನೆ, ಅಪೂರ್ವಕಾಣಿಕೆ.

ಮಲೆನಾಡಿನ ಹೊಸವೂರಿನ ರೈತರಾದ ಕೊರಗ ಮತ್ತು ಮುಸೆಯರ ಮಗ ಕಾಳು, ಮಗಳು ಬೆಳ್ಳಿ. ಒಮ್ಮೆ ನೆರೆಮನೆಯೊಂದರ ಮದುವೆಗೆ ಹೋಗಿದ್ದಾಗ ಅಲ್ಲಿಗೆ ನೆಲ್ಲೂರಿನಿಂದ ಬಂದಿದ್ದ ದೊಡ್ಡನೆಂಬ ಜವ್ವನಿಗನೂ ಬೆಳ್ಳಿಯೂ ಒಬ್ಬರಿಗೊಬ್ಬರು ಬಗೆ ಸೋತರು. ದೊಡ್ಡ ಒಲವಿನ ರಸಗಂಗೆಯಲ್ಲಿ ಮುಳುಗಿ ಹೋಗಿ ಬೇರೆ ಸಂಬಂಧ ಒಪ್ಪಲಿಲ್ಲ. ಅವನ ತಂದೆ ಹೊನ್ನ ತನ್ನ ಮಗನ ವಿಚಾರ ತಿಳಿದು ಇತರರೊಡನೆ ಪ್ರಸ್ತಾಪಿಸಿ, ದೊಡ್ಡನನ್ನೇ ಹೊಸವೂರಿಗೆ ಕಳುಹಿಸಿ ಕೊಡುವನು. ದೊಡ್ಡನನ್ನು ಕಂಡ ಬೆಳ್ಳಿಯ ಮೋರೆ ಲಜ್ಜೆಯಿಂದ ಬಂಗಾರವಾಯಿತು. ಬಾಂಧವ್ಯದ ಬೆಸುಗೆಗೆ ಬೆಳ್ಳಿಯ ತಂದೆ ತಾಯಿ–ಅಣ್ಣ ಒಪ್ಪಿದರು. ಈ ಸುದ್ದಿ ತಿಳಿದು ದೊಡ್ಡನ ಮನೆಯವರೂ ಮುದವಾಂತರು. ಈ ಮಧ್ಯೆ ದೊಡ್ಡನ ಮನೆಯ ದನ ತಿಂದ ಹುಲಿಯನ್ನೂ, ಊರಿಗೆ ಪಿಡುಗಾಗಿದ್ದ ಮತ್ತೊಂದು ಹೆಬ್ಬುಲಿಯನ್ನೂ ದೊಡ್ಡ ಬೇಟೆಯಾಡಿ ಕೊಂದ. ಆ ಬೇಟೆಯಲ್ಲಿ ಹೆಬ್ಬುಲಿ ಇವನಿಗೆ ಚೆನ್ನಾಗಿ ಗಾಯಮಾಡಿದ ಸುದ್ದಿ ಆಕರ್ಣಾಂತವಾಗಿ ಬೆಳ್ಳಿಯ ಕಿವಿಗೂ ಬಿದ್ದು ಗಾಬರಿಯಾದಳು. ಅವಳ ಅಣ್ಣ ಕಾಳು ನೆಲ್ಲೂರಿಗೆ ಓಡಿಬಂದು ದೊಡ್ಡ ಆರೋಗ್ಯವಾಗಿರುವುದನ್ನು ಕಂಡು ಹಿಂತಿರುಗಿ ಹೋಗಿ ಈ ಸಂತಸದೊಸಗೆಯನ್ನು ತಿಳಿಸಿದ. ವಿವಾಹ ಸಮೀಪಿಸುತ್ತಿತ್ತು. ಹೀಗಿರುವಾಗ ಒಂದು ದಿನ ಬೆಳ್ಳಿ ಕಾಡಿನಿಂದ ಸೌದೆ ತರುವಾಗ ತಕರಾರು ಮಾಡಿದ ಕಾಡಿನ ಅಧಿಕಾರಿ ಬೋಳನಿಗೆ ಕೈಯ ಕತ್ತಿಯಿಂದ ಗಾಯ ಪಡಿಸಿದಳು. ತಪ್ಪು ಅವನದೇ ಆಗಿದ್ದರೂ ಆ ಹಾಳು ಬೋಳ ಹೋಗಿ ಪೋಲೀಸರಿಗೆ ದೂರಿತ್ತ. ಬೆಳ್ಳಿ ಬೆದರಿದಳು, ಜ್ವರ ಬಂತು, ಕೊಂಚ ಇಳಿಯಿತು. ಮನೆಯಲ್ಲಿ ಎಲ್ಲ ವಿವರ ತಿಳಿಯಿತು. ಆದರೆ ಲಂಚಕೊಟ್ಟು ಅಧಿಕಾರಿಗಳ ಕೈ ಬೆಚ್ಚಗೆ ಮಾಡಲು ಹಣ ಎಲ್ಲಿಂದ ತರುವುದು? ಅಷ್ಟರಲ್ಲಿ ಮದುವೆ ಬಂದೇ ಬಿಟ್ಟಿತು. ನೆಲ್ಲೂರಿನಿಂದ ದಿಬ್ಬಣ ಬಂತು. ಆದರೆ ಬೆಳ್ಳಿ ಗುಣಮುಖಳಾಗಿರಲಿಲ್ಲ. ಕೊರಗ ಕೊರಗುತ್ತಿದ್ದ; ಮುಸೆ, ಕಾಳರು ಮಂಕಾದರು. ಯಾರೊ ಒಬ್ಬರು ಮದ್ದು ಕೊಟ್ಟ ಮೇಲೆ ಬೆಳ್ಳಿ ಸ್ವಲ್ಪ ಚೇತರಿಸಿಕೊಂಡಾಗ ಎಲ್ಲರ ಮುಖದ ಮೇಲೂ ನಗೆಯಾಡಿತು. ಆದರೆ ಆರುವ ಮೊದಲು ದೀಪದ ಕುಡಿ ಪ್ರಜ್ವಲಿಸುವಂತೆ ಬೆಳ್ಳಿಯ ಸ್ಥಿತಿಯಾಯಿತು. ಇನ್ನೇನು ಮದುವೆ ಸುಸೂತ್ರವಾಗಿ ಮುಗಿಯುವುದೆನ್ನುವಷ್ಟರಲ್ಲಿ ಪೋಲೀಸರ ಪಡೆ ಹಸಿದ ಹುಲಿಗಳಂತೆ, ಜವರಾಯನಟ್ಟಿದ ಆಳುಗಳಂತೆ ಧಾಳಿಯಿಟ್ಟರು. ಎಲ್ಲರ ಮಾತೂ ಎಲ್ಲೋ ಹೂತುಹೋಯಿತು. ಅಧಿಕಾರಿಗಳಲ್ಲಿ ನಿಜ ನುಡಿದು ಎಷ್ಟು ಬೇಡಿದರೂ ಕರುಣೆ ತೊಟ್ಟಿಕ್ಕಲಿಲ್ಲ. ಕೊಳನಿಗೆ ಥಳಿಸಿದರು. ಬೆಳ್ಳಿಯನ್ನು ಕರೆಸಿದರು. ಮೊದಲೇ ಅರೆಜೀವವಾಗಿದ್ದ ಬೆಳ್ಳಿ ಈಗ ಭೂಮಿಗಿಳಿದಳು. ಕುಡಿದಿದ್ದ ಕೋಲ್ಕಾರನೊಬ್ಬ ಬೆಳ್ಳಿಗೆ ಒಂದೇಟು ಕೊಟ್ಟ. ಅಪಮಾನದಿಂದ ನೊಂದುನೊಂದು ಬೆಂದು ಹೋಗಿದ್ದ ಬೆಳ್ಳಿಯ ಜೀವಜ್ಯೋತಿ ಆರಿಹೋಗಲು ಒಂದೇಟು ಸಾಕಿತ್ತು. ಬೆಳ್ಳಿಯ ಬೆಳಕು ನಂದಿತು; ಎಲ್ಲರ ಮುಖವೂ ಬಾಡಿತು. ಜನ ಚದುರಿತು. ಬೆದರಿದ ಅಧಿಕಾರಿ ಓಡಿಹೋದ. ಕೊರಗ ಕರಗಿಹೋದ, ಮುಸೆ ಕುಸಿದಳು, ಕಾಳನು ನೋವು ತಾಳಲಾರದಾದ. ಮದುವೆಯ ಮನೆ ಸ್ಮಶಾನವಾಯಿತು. ಚಿತೆ ಸಿದ್ಧವಾಯಿತು. ಬೆಳ್ಳಿಯ ದೇಹಕ್ಕೆ ಅಗ್ನಿ ಸ್ಪರ್ಶವಾಯಿತು. ಎದೆಯ ಬೇಗುದಿಯಿಂದ ಎಲ್ಲಿಯೋ ಹೊರಟು ಹೋಗಿದ್ದ ದೊಡ್ಡ ಆರು ತಿಂಗಳ ತರುವಾಯ ಹಿಂತಿರುಗಿದ. ಮನೆಯವರೆಲ್ಲಾ ಒತ್ತಾಯ ಮಾಡಿ ಅವನಿಗೆ ಇನ್ನೊಂದು ಹೆಣ್ಣು ಕೊಟ್ಟು ಮದುವೆ ಮಾಡುವರು. ದೊಡ್ಡನ ಕನಸಿನಲ್ಲಿ ಕಾಣಿಸಿಕೊಂಡ ಬೆಳ್ಳಿ, ದೊಡ್ಡನನ್ನು ಕಣ್ತುಂಬ ಕಂಡು, ಹೊಸ ತಂಗಿಯನ್ನು ಹರಸಿದಳು. ಬೆಳ್ಳಿ ಅಳಿದರೂ ಅಳಿಯದೆ ನೆನಪಿನಲ್ಲೇ ಉಳಿದಳು. ಇದಿಷ್ಟೂ ಈ ಕಾಲೂರ ಚೆಲುವೆ ನೀಳ್ಗಾವ್ಯದ ಕಥಾಸಾರ.

ಕಾಲೂರ ಚೆಲುವೆ ಅರ್ಥಾತ್ ಹಳ್ಳಿಯ ಚೆಲುವೆ ನಿಜಕ್ಕೂ ಚೆಲುವಾಗಿದೆ. ಹಲವು ದೃಷ್ಟಿಗಳಿಂದ ಗಮನಾರ್ಹವಾಗಿದೆ. ಈ ನೀಳ್ಗವಿತೆಯ ವಸ್ತು ಸಾಮಾಜಿಕ ಜನಜೀವನ. ಬಡ

ತನದ ದಾರುಣವಾದ, ಹೃದಯ ವಿದ್ರಾವಕವಾದ ಸಜೀವ ಚಿತ್ರವನ್ನು ಲೇಖಕರು ಸಮರ್ಪಕವಾಗಿ, ಸತ್ತ್ವಯುಕ್ತವಾಗಿ ಕೊಟ್ಟಿದ್ದಾರೆ. ನಮ್ಮ ನಾಡಿನ ಹಳ್ಳಿ ಗಾಡುಗಳಲ್ಲಿ ನಡೆಯುವ ಅತ್ಯಾಚಾರ, ಸರ್ಕಾರಿ ಅಧಿಕಾರಿಗಳ ದರ್ಪ, ಬಡವರ ಮೇಲೇ ನಡೆಸುವ ದೌರ್ಜನ್ಯ, ಒಕ್ಕಲಿಗರ ಜೀವನ, ಅವರ ಬದುಕಿನಲ್ಲಿ ಮಳೆರಾಯನು ತೋರುವ ಏಳುಬೀಳುಗಳು, ದುಷ್ಟಜಂತುಗಳ ಆರ್ಭಟ, ಮೂಕಪ್ರಾಣಿಗಳ ಒದ್ದಾಟ, ಅಸಹಾಯಕರಪೇಚಾಟ, ಕೃತ್ರಿಮವಿಲ್ಲದ ಅವರ ಸಹಜಬಾಳ್ವೆ ಅವರ ಮುಗ್ಧಭಾವನೆಗಳ ನೈರ್ಮಲ್ಯ, ಮದುವೆಯ ಸಡಗರ, ವಿಧಿಯ ವಿಲಾಸ, ಪೋಲೀಸರಿಂದ ಆದ ದುರಂತ—ಇವೆಲ್ಲಾ ವರ್ಣನೆ ಕಾವ್ಯದಲ್ಲಿ ಹದವರಿತು ಮಿಳಿತಗೊಂಡು ವಿಶಿಷ್ಟ ಕಾವ್ಯವಾಗಿ ರೂಪುಗೊಂಡಿದೆ. ಹಲವು ಋತುಗಳ ವರ್ಣನೆ ಪ್ರಕೃತಿ ವರ್ಣನೆ, ಜಲವರ್ಣನೆ, ಬೇಟೆಯ ವಿವರ ಇವೆಲ್ಲಾ ಹಿಂದಿನ ಕಾವ್ಯಾಂಗಗಳಾದ ಅಷ್ಟಾದಶ ವರ್ಣನೆಯನ್ನು ನೆನಪಿಗೆ ತರುತ್ತವೆ. ಸಾಮಾಜಿಕ ಜೀವನವನ್ನೇ ವಸ್ತುವನ್ನಾಗಿ ಆರಿಸಿಕೊಂಡು ಈ ಸುದೀರ್ಘ ಕಾವ್ಯವನ್ನು ರಚಿಸಿರುವ ಪುಟ್ಟಣ್ಣಗೌಡರ ಸಾಹಸ ಮತ್ತು ಸಾಹಸಕ್ಕೆ ತಕ್ಕ ಸಾಮರ್ಥ್ಯವನ್ನು ಎಷ್ಟು ಪ್ರಶಂಸಿದರೂ ಸಾಲದು. ಇಲ್ಲಿ ಒಂದು ಸಲಹೆ ಸೂಚಿಸಬೇಕೆನ್ನಿಸುತ್ತದೆ. ಕಾವ್ಯವನ್ನು ಬೆಳ್ಳಿಯ ಸಾವಿನೊಡನೆ, ಆಕೆಯ ಚಿತೆಗೆ ಅಗ್ನಿ ಸಂಸ್ಕಾರ ಆದಲ್ಲಿಗೇ ನಿಲ್ಲಿಸಿದ್ದರೆ ಇನ್ನೂ ಪ್ರಭಾವಶಾಲಿಯಾದ ದುರಂತ ಕಾವ್ಯವಾಗಿ ಪರಿಣಮಿಸುತ್ತಿತ್ತು. ಆದರೆ ಲೇಖಕರು ಮಂಗಳಾಂತವಾದ ಕಾವ್ಯ ಮಾಡುವ ದೃಷ್ಟಿಯಿಂದ ಕಥಾನಾಯಕ ದೊಡ್ಡನಿಗೆ ಇನ್ನೊಂದು ಮದುವೆ ಮಾಡಿಸಿ, ಅವನ ಕನಸಿನಲ್ಲಿ ಬೆಳ್ಳಿ ಬಂದು ಹರಸುವಂತೆ ಮಾಡಿದ್ದಾರೆ.

ಕಾಲೂರ ಚೆಲುವೆ ಕಾವ್ಯದ ಕತೆಯನ್ನು ಆದಷ್ಟೂ ಅಚ್ಚಗನ್ನಡದ ಕಾಲುವೆಯಲ್ಲಿ ಹರಿಯಿಸಿದ್ದಾರೆ. ಕಾವ್ಯದುದ್ದಕ್ಕೂ ದೇಶ್ಯ ಪದಗಳನ್ನೇ ತುಂಬ ಬಳಸಿದ್ದಾರೆ. ಹಳಗನ್ನಡದಲ್ಲಿ ಅವರ ಪಾಂಡಿತ್ಯ ಮತ್ತು ಕನ್ನಡ ನುಡಿಯಲ್ಲಿ ಅವರ ಪ್ರಭುತ್ವ ಸ್ತುತ್ಯಾರ್ಹ. ಇಂದು ಕನ್ನಡದಲ್ಲಿ ಸಂಸ್ಕೃತ ಭೂಯಿಷ್ಠವಾದ ಕಾವ್ಯಗಳೇ ಹೆಚ್ಚು. ಭಾಷಣದಲ್ಲೂ, ಸಂಭಾಷಣೆಯಲ್ಲೂ, ಪತ್ರವ್ಯವಹಾರದಲ್ಲೂ, ಪತ್ರಿಕೆಗಳಲ್ಲೂ ಸಂಸ್ಕೃತ ಬಳಕೆಯು ಬಹಳವಾಗಿ ಕಾಣುತ್ತದೆ. ಶತಶತಮಾನಗಳ ಹಿಂದೆ ಸಂಸ್ಕೃತ ರಾಜಭಾಷೆಯಾಗಿ ಮೆರೆದು, ಕನ್ನಡದ ಮುನ್ನಡೆಗೆ ಕುತ್ತವಾಗಿ ಪರಿಣಮಿಸಿದ್ದಾಗ ಅಚ್ಚಗನ್ನಡದ ಕೆಚ್ಚನ್ನು ಎಲ್ಲರ ಮೆಚ್ಚುಗೆಗೂ ಪಾತ್ರವಾಗುವಂತೆ ತೋರಿದವನು ಹಿರಿಯ ಕವಿ ಆಂಡಯ್ಯ. ಅವನ ಕಬ್ಬಿಗರ ಕಾವ ಕನ್ನಡ ನುಡಿಯ ಬಲ್ಮೆಯನ್ನು ತೆರೆದು ತೋರುವ ಕಾವ್ಯಗಳಲ್ಲಿ ಒಂದು ಮೈಲಿಗಲ್ಲು. ಬಹುಶಃ ಈ ಕಾವ್ಯ 'ಕಾಲೂರ ಚೆಲುವೆ'ಯ ಕವಿಗೂ ಹಿಡಿಸಿತೆಂದು ಕಾಣುತ್ತದೆ. ಆ ದೊರೆಯ ಕಾವ್ಯವೊಂದನ್ನು ಮತ್ತೆ ರಚಿಸಬೇಕೆಂಬ ಬಯಕೆಯಿಂದ ಇದನ್ನು ಸಿದ್ಧಪಡಿಸಿರಬಹುದು. ಅವರ ಬಯಕೆ ಬಹುಮಟ್ಟಿಗೆ ಈಡೇರಿದೆ, ಇದಕೆ ಸಂಶಯವಿಲ್ಲ. ಪೂದಿಂಗಳರಸ, ಬಿಡುಗಣ್ಣವರ್, ಬೀಳೇಳು (ಕ್ಷಯವೃದ್ಧಿ), ಕಡಲಣುಗಿ, ಮಲರ್ಗಣ್ಣ ಕಿಸುವಣ್ಣ (ಕೆಂಪುಹಣ್ಣು), ಬಗೆಯೊಡವೆ, ಬರ್ದಿಲ (ಸ್ವರ್ಗ), ಸುಸಿಲ್, ನೆಲವೆಣ್ ಮೊದಲಾದ ಪದಗಳು ಅಚ್ಚಗನ್ನಡದ ಉಪಾಸಕ ಆಂಡಯ್ಯನನ್ನು ನೆನಪಿಗೆ ತರುತ್ತವೆ.

ಆದಿಕವಿ ಪಂಪನ ಕಾವ್ಯಗಳನ್ನೂ, ಕೇಶಿರಾಜನ ಶಬ್ದಮಣಿದರ್ಪಣವನ್ನೂ ಈ ಕವಿ ಚೆನ್ನಾಗಿ ಅಭ್ಯಾಸ ಮಾಡಿ ಕಂಠಪಾಠ ಮಾಡಿಕೊಂಡಿರುವಂತೆ ಕಾಣುತ್ತದೆ. ಆ ಹಿರಿಯ ಕವಿಗಳ ಕಾಲದಲ್ಲಿ ಪ್ರಯೋಗವಾಗುತ್ತಿದ್ದ ಕೆಲವು ಪದಗಳನ್ನು ಈ ಕವಿ ಪುನರುಜ್ಜೀವನಗೊಳಿಸುವ ಅಪೇಕ್ಷೆಯಿಂದ ಬಳಸಿದ್ದಾರೆ. ಅವರ ಈ ಪ್ರಯತ್ನ ಅತ್ಯಂತ ಸ್ವಾಗತಾರ್ಹ. ನಿದರ್ಶನಕ್ಕಾಗಿ ಕೆಲವು ಪದಗಳನ್ನು ನೋಡಬಹುದು.

| ಕಾಲೂರ ಚೆಲುವೆ | ಪಂಪ | ಕೇಶಿರಾಜ |
|---|---|---|
| ರೋಡಾಡು–ಪದ್ಯ ೧೯ | ಏಗೆಟ್ಟಪುದಿದೆಂದು ಜಿೞೋಡಾಡಲ್ | ಜಿೞೋಡಾಡು ವಿಕೃತಾಂಗಾಪಹಸನೇ |
| ತುಳಿಲ್–ಪದ್ಯ ೨೧, ೩೩ | ತುೞಿಲ ಪರಕೆಯ ಸಮಾನ ಪ್ರತಿಪತ್ತಿಯಿಂ | ತುೞಿಲೆಂದು ಪೊಡವಡಿಕೆಯುಮಕ್ಕುಂ |
| ಪಣ್ಣೆ–೩೫ | ಪಣ್ಣಿದ ಜಾತ್ಯಶ್ವ | ಪಣ್, ಸಜ್ಜೀಕರಣೇ |
| ಪಪ್ಪರಿಕೆ–೩೪೬ | ಪರ್ಪರಿಕೆಗಿಡದೆ ಕಲಿ | ಪಪ್ಪರಿಕೆಯೆಂದು ಕರ್ಕಶತೆ |
| ಕೈವೊಲ–೬೮ | ಬೆಳೆದೆಱಗಿರ್ದ ಕೆಯ್ವೊಲನೆ | — |
| ಅರವೆ–೪೧ | — | ಅರವೆ ಅರಲ್ದ ಬಯಲ್ದಾವರಿ |
| ಸುಸಿಲ್–೩೦ | — | ಸುಸಿಲೆಂದು ಪ್ರಭಾತ ಕಾಲಮುಮಕ್ಕುಂ |
| ತಳೆ–೬೦ | ಎತ್ತಿದ ತೞಿ | ತೞಿ, ಆಪಪತ್ರೇ |

ಹೀಗೆಯೇ ಪುದುವಾಳ್ಕೆ(ಪದ್ಯ-೪೯)=ಬಾಂಧವ್ಯದ ಕೂಡಿಕೆ ಅಲ್ಲಣಿದ (೪೫)=ವಿನೋದದ, ಇಟ್ಟಳ (೩೨೨)=ಮನೋಹರ ಎಡ್ಡ (೫೦)=ರಮ್ಯ, ಅಲಂಪು (೮೭)=ಸೌಂದರ್ಯ, ಅಂಡಲೆ (೧೫೩)=ತೊಂದರೆ–ಆ ಸನ್ನಪೀಡನೆ–ಕೇಶಿರಾಜ, ತೆಲ್ಲಟಿ (೧೭೮)=ಉಡುಗೊರೆ, ತಳ್ಕೈಸು (೧೫೨)=ಅಪ್ಪಿಕೊಳ್ಳು–ಇತ್ಯಾದಿಯಾದ ಹತ್ತಾರು ಪದಗಳನ್ನು ಲಕ್ಷಿಸಬಹುದು. ಇವೆಲ್ಲಾ ಕವಿಯ ವ್ಯುತ್ಪತ್ತಿಯನ್ನೂ, ಸತ್ತಾಭ್ಯಾಸವನ್ನೂ ತಿಳಿಸುತ್ತವೆ. ಹಳಗನ್ನಡದಲ್ಲಿದ್ದ ಱ ಮತ್ತು ೞ ಕಾರಗಳನ್ನು ಇಂದು ನಾವು ಬಳಸುವ 'ರ–ಳ' ಕಾರದಿಂದ ಕೂಡಿದ ಪದಗಳನ್ನಾಗಿ ಮಾಡಿದ್ದಾರೆ. ಕನ್ನಡದಲ್ಲಿ ಇಂದು ಱ–ೞ ವರ್ಣಗಳು ಬಳಕೆಯಲ್ಲಿ ಇಲ್ಲದುದರಿಂದ ಈ ಬದಲಾವಣೆಯೇನೂ ತಪ್ಪಾಗಿ ಕಾಣುವುದಿಲ್ಲ.

ಇದುವರೆಗಿನ ವಿವರಣೆಯೆಲ್ಲಾ ಗುಣದ ಮಾತಾಯಿತು. ಇನ್ನು ಈ ಕಾಲೂರ ಚೆಲುವೆ ಕಾವ್ಯದ ಕೆಲವು ಸಂದೇಹಾಸ್ಪದ ಭಾಗಗಳನ್ನೂ ಗಮನಿಸಬಹುದು. ನಿದರ್ಶನಕ್ಕಾಗಿ ಈ ಕೆಳಗೆ ಎಂಟು ಪದಗಳನ್ನು ಮಾತ್ರ ಆರಿಸಿದೆ.

**೧ ಒಲ್ಲಣಿಗೆ;—**

ಬೆಳ್ಳಿನಿಂದಲ್ ಬಂದು
ಮನೆಮಾಡಬಿಸುಗುತ್ತ–
ದೊಲ್ಲಣಿಗೆಯ ಮುಕುತಿರೆ
ಪಡೆಯಿಲರ ಮುಂದೆ (ಪದ್ಯ ೩೭೮)

ಇಲ್ಲಿ ಬರುವ ಒಲ್ಲಣಿಗೆ ಎಂಬ ಪದಕ್ಕೆ ಲೇಖಕರು 'ಗಾಣ' ಎಂಬ ಅರ್ಥ ಕೊಟ್ಟಿದ್ದಾರೆ. ಬಹುಶಃ ಅವರು ಪಂಪನ 'ಒಲ್ಲಣಿಗೆಯಂ ಪಿಏುವಂತೆ' ಎಂಬ ಪ್ರಯೋಗವನ್ನೂ ಪಂಪಭಾರತ ನಿಘಂಟಿನಲ್ಲಿ ಆ ಪದಕ್ಕೆ ಗಾಣ ಎಂಬ ಅರ್ಥ ಕೊಟ್ಟಿರುವುದನ್ನೂ ಗಮನಿಸಿರಬೇಕು. ಆದರೆ ಈ ಅರ್ಥ ತಪ್ಪು. ಒಲ್ಲಣಿಗೆ ಎಂದರೆ ಗಾಣವಲ್ಲ, ಒದ್ದೆ ಬಟ್ಟೆ ಎಂದು ಅರ್ಥ. ಇದನ್ನು ಸಂಸ್ಕೃತದಲ್ಲಿ ಆರ್ದ್ರಪಟಿಕಾ ಎಂದು ಹೇಳುವರು. ಆರ್ದ್ರ ಪಟಿಕಾ>ಒಲ್ಲವಡಿಗೆ >ಒಲ್ಲವೞಗೆ> ಒಲ್ಲಳಿಗೆ ಒಲ್ಲಣಿಗೆ–ಇದು ಈ ಪದ ಸಂಸ್ಕೃತ–ಪ್ರಾಕೃತಗಳಿಂದ ಕನ್ನಡಕ್ಕೆ ಬಂದ ಕ್ರಮ. ಪಂಪಭಾರತದ ನಿಘಂಟಿನಲ್ಲಿ ಈ ಪದಕ್ಕೆ ಗಾಣ ಎಂದು ತಪ್ಪಾಗಿ ಅರ್ಥ ಕೊಟ್ಟಿರುವುದನ್ನು ಕನ್ನಡದ ಹಿರಿಯ ವಿದ್ವಾಂಸರೂ, ಸಂಶೋಧಕರೂ ಆದ ಆಚಾರ್ಯ ಶ್ರೀ ಡಿ. ಎಲ್. ನರಸಿಂಹಾಚಾರ್‌ರವರು ಆಧಾರ ಪೂರ್ವಕವಾಗಿ ತೋರಿಸಿದ್ದಾರೆ. ಅವರ ಶಬ್ದವಿಹಾರವೆಂಬ ಹೊತ್ತಗೆಯನ್ನು ಈ ಲೇಖಕರು ಅವಶ್ಯ ನೋಡಬೇಕು.

**೨ ಅಲ್ಲರೊಳ್ಪು :—**

ಉಳ್ಕೊಡವೆಯಂ ಮಾರಿ
ಬೇಕಾದುದಂ ಕೊಳಲ್
ಮಿಳಿರ್ವುದೇ ನೊಸಗೆ ಬ
ರ್ಪಲ್ಲ ರೊಳ್ಪಿದೆನೆ ॥ ೪೩ ॥

ಈ ಪದ್ಯದಲ್ಲಿ ಬರುವ ಅಲ್ಲರೊಳ್ಪು ಎಂಬುದಕ್ಕೆ 'ಪ್ರೇಮಿಗಳ ಸಂಪತ್ತು' ಎಂದು ಲೇಖಕರೇ ಅರ್ಥಕೊಟ್ಟಿದಾರೆ (ಪುಟ. ೩೮). ಅದು ಹೇಗೆ? ಈ ಪದಕ್ಕೆ ಆಧಾರವಾಗಿ ಕನ್ನಡ ಸಾಹಿತ್ಯದಲ್ಲಿ ಇತರ ಪ್ರಯೋಗ ಇದ್ದಂತೆ ಕಾಣುವುದಿಲ್ಲ. ಒಳ್ಪು ಎಂಬ ಪದವಿದೆಯಾದರೂ, ಅಲ್ಲರ್ ಎಂಬ ಪದವೇ ಇದ್ದಹಾಗೆ ಕಾಣುವುದಿಲ್ಲ. ಇನ್ನು ಅಲ್ಲರ ಎಂಬ ಪದವೇನೋ ಇದೆ. ಆದರೆ ಅಲ್ಲರ ಎಂದರೆ ಅಗಲುವಿಕೆ, ವಿರಹ— ಎಂದು ಅರ್ಥ. ಆದುದರಿಂದ ಇಲ್ಲಿ ನಲ್ಲರೊಳ್ಪು ಎಂದು ಇರಬೇಕಿತ್ತು.

**೩ ಪಂದಳಿಗೆ;—**

ಪಂದಳಿಗೆ ನೆಲಮಿಂಚಿ
ಬಿದ್ದಿನನ ಸವಿನುಡಿಯ
ನಿಂದು ನೋಡುವುದೆನಲ್
ಹೊಂಚಿ ಬೆಂದಳಿಗೆ ॥ ೧೦೯ ॥

ಇಲ್ಲಿ ಪ್ರಯೋಗವಾಗಿರುವ ಪಂದಳಿಗೆ ಪದಕ್ಕೆ ಹುಲ್ಲಿನ ಚಾಪೆ ಎಂದು ಶ್ರೀ ಪುಟ್ಟಣ್ಣಗೌಡರು ಅರ್ಥೈಸಿದ್ದಾರೆ (ಪುಟ ೭೪). ಪಂದಳಿಗೆ ಪದಕ್ಕೆ ಹುಲ್ಲಿನ ಚಾಪೆ ಎಂಬ ಅರ್ಥ ಎಲ್ಲಿಯೂ ಇರುವಂತೆ ಕಾಣುವುದಿಲ್ಲ. ಪನ್+ತಳಿಗೆ= ಪಂದಳಿಗೆ ಪದದಲ್ಲಿ ಪನ್ ಎಂಬುದು ಪಂ, ಪಚ್ಚನೆ, ಪಚ್ಚ, ಪಚ್ಚೆ, ಪಸಿ, ಹಸಿರು, ಹೊಸದಾದ ಎಂಬರ್ಥದಲ್ಲಿಯೂ, ತಳಿಗೆ ಪದ ಭಾಂಡ, ಪಾತ್ರೆ, ತಟ್ಟೆ ಎಂಬರ್ಥದಲ್ಲೂ ಪ್ರಯೋಗವಿದೆ. (ಪೊಂದಳಿಗೆಯೆಂದರೆ ಚಿನ್ನದ ತಟ್ಟೆ) ಆದುದರಿಂದ ಪಂದಳಿಗೆಯೆಂದರೆ ಹುಲ್ಲಿನ ಚಾಪೆ ಆಗುವುದಿಲ್ಲ. ಬಹುಶಃ ಅದು **ಮುಂದಲಿಗೆ** ಎಂದಿರಬೇಕು; ಮುಂದಲಿಗೆಯೆಂದರೆ ಜೊಂಡುಹುಲ್ಲಿನ ಚಾಪೆ.

**೪ ಪರಲ್ ;—**ಈ ಪದವನ್ನು ಲೇಖಕರು ಮುತ್ತು, ಮಣಿ ಎಂಬ ಅರ್ಥದಲ್ಲಿ ಬಳಸಿದ್ದಾರೆ. ಪದ್ಯ ಸಂಖ್ಯೆ ೩, ೩೦ (ಪರಲಪಲ್=ಮುತ್ತಿನಂತಹ ಹಲ್ಲು). ಆದರೆ ಪರಲ್ ಪದಕ್ಕೆ ಕೇವಲ ಕಲ್ಲು, ಹರಳು ಎಂಬ ಅರ್ಥವಲ್ಲವೆ. ಹಿಂದಿನ ಕಾವ್ಯಗಳಲ್ಲಿ ಅದೇ ಅರ್ಥದಲ್ಲಿ ಅದನ್ನು ಬಳಸುವರು. ಉದಾಹರಣೆಗೆ ಅಲಿವರಲ್, ರನ್ನವರಲ್–ಎಂಬ ಪದಗಳನ್ನು ಗಮನಿಸಬಹುದು. ಬಹುಶಃ ಲೇಖಕರು ಈ ಪದದ ವಿಸ್ತೃತಾರ್ಥದಲ್ಲಿ ಬಳಸಿರಬಹುದು. ಹಾಗಿದ್ದರೆ ಆಗಬಹುದು.

**೫ ಪದಪನಿಂ ;**—ಈ ಪದಕ್ಕೆ ಒಂದು ಕಡೆ (೧೦೭ನೆಯ ಪದ್ಯ) ಆತುರದಿಂದ ಎಂಬ ಅರ್ಥವನ್ನೂ, ಇನ್ನೊಂದು ಕಡೆ (೪೧೨) ಬಯಕೆಯಿಂದ ಎಂಬರ್ಥವನ್ನೂ, ಮತ್ತೊಂದು ಕಡೆ (೧೨೭) ಬಯಕೆ ಎಂಬರ್ಥವನ್ನೂ ಕೊಟ್ಟಿದ್ದಾರೆ. ಆದರೆ ವಾಸ್ತವವಾಗಿ ಪದಪು ಎಂದರೆ ಸೌರಂಭ, ಸಡಗರ, ಸಂತೋಷ ಎಂಬುದೇ ಅರ್ಥ. ಪದಪ ನೀವ ಎಂದರೆ ಸಂತೋಷ ಕೊಡುವ ಎಂದರ್ಥ, ಲೇಖಕರು ಪದಪು ಪದವನ್ನು ಒಂದು ಕಡೆ ಮಾತ್ರ ಸಂತೋಷ ಎಂಬರ್ಥದಲ್ಲೇ ಬಳಸಿದ್ದಾರೆ.

ಮದುವೆಯಾಗಿಹ ಕೆಲರು
ಕಯ್ ಹೊಸೆದು ನೋಡಿದರು
ಮದುವೆ ನಿರಿದಿಹ ಕೆಲರು
ತಲೆಯ ಸವರಿದರು
ಒದಗದಿರೆ ತಮಗೆ ಬೇ
ಕಾದ ಪೆಣ್ ಕೆಲಕೆಲರು
ಪದಪಿನಿಂ ನೋಡಿ ತ
ಮ್ಮನುವ ಮೆಚ್ಚಿದರು ॥೪೯॥

**೬ ದೊಂದುಳಿ ;** ಈ ಪದವನ್ನು ಕಾಲೂರ ಚೆಲುವೆ ಕಾವ್ಯದಲ್ಲಿ ಅನೇಕ ಕಡೆ ಬಳಸಿ (೮೧, ೧೧೮, ೧೬೬, ೧೭೨–ಇತ್ಯಾದಿ) ಸಂತೋಷ, ಆನಂದ ಎಂಬ ಅರ್ಥ ಕೊಟ್ಟಿದ್ದಾರೆ. ಆದರೆ ದೊಂದುಳಿ ಪದಕ್ಕೆ ಸಂತೋಷ ಎಂಬ ಅರ್ಥವಿರುವಂತೆ ಕಾಣುವುದಿಲ್ಲ. ದೊಂದುಳಿ, ದೊಂದಡೆ, ದೊಂದಣ, ದೊಂದಣಿ– ಎಂಬ ಪದಗಳಿಗೆ ಗೊಂದಣ, ಗಡಣ, ನೆರವಿ, ಸಮೂಹ, ಗುಂಪು–ಎಂಬ ಅರ್ಥಗಳಿವೆಯೇ ಹೊರತು ಸಂತೋಷ ಎಂಬರ್ಥವಿದ್ದಂತೆ ತಿಳಿಯದು.

**೭ ತರುವಲಿ ;** ಈ ಪದವನ್ನು ೧೪, ೪೪, ೧೫೦–ಮೊದಲಾದ ಸಂಖ್ಯೆಯ ಪದ್ಯಗಳಲ್ಲಿ ಬಳಸಿ **ಯುವಕ** ಎಂಬ ಅರ್ಥ ಕೊಟ್ಟಿದ್ದಾರೆ. ಆದರೆ ತರುವಲಿ ಪದದ ಅರ್ಥದ ವಿಚಾರದಲ್ಲಿ ಸಂದೇಹವಿದೆ. ಏಕೆಂದರೆ ಪಂಪಭಾರತದ ನಿಘಂಟಿನಲ್ಲೇ (೧೧–೪೮) ತರುವಲಿ ಪದಕ್ಕೆ ಹುಡುಗ, ತಬ್ಬಲಿ ಎಂಬ ಎರಡೂ ಅರ್ಥಗಳನ್ನು ಕೊಟ್ಟು ಪ್ರಶ್ನಾರ್ಥಕ ಚಿನ್ನೆಹಾಕಿ ಅನುಮಾನ ಸೂಚಿಸಿದ್ದಾರೆ ( ಪುಟ ೩೨). ವಡ್ಡಾರಾಧನೆ ಗದ್ಯ ಗ್ರಂಥದಲ್ಲಿ (ಆಚಾರ್ಯ ಡಿ. ಎಲ್. ಎನ್.) ತರುವಲಿ ಪದ ತಬ್ಬಲಿ ಎಂಬ ಅರ್ಥದಲ್ಲಿದೆ. ತರುವಲಿ>ತರ್ವಲಿ>ತಬ್ಬಲಿ–ಎಂದು ಆಗಿರಲೂ ಬಹುದು. ಆದುದರಿಂದ ಲೇಖಕರು ಈ ಅನುಮಾನವನ್ನು ಗಮನಿಸಬೇಕು.

**೮ ಸಸಿನಂ ;** ಈ ಪದವನ್ನು ೯೧ ನೆಯ ಪದ್ಯದಲ್ಲಿ ಬಳಸಿ ಔಚಿತ್ಯ ಎಂಬ ಅರ್ಥವನ್ನೂ, ೧೧ ನೆಯ ಪದ್ಯದಲ್ಲಿ ಪ್ರಯೋಗಿಸಿ ಸರಳತೆ ಎಂಬ ಅರ್ಥವನ್ನೂ ತಿಳಿಸಿದ್ದಾರೆ. ಸಸಿನಂ ಎಂದರೆ ಸರಳತೆ ಎಂಬ ಅರ್ಥವೇನೋ ಹೊಂದಿಕೊಳ್ಳಬಹುದಾದರೂ ಔಚಿತ್ಯ ಎಂಬ ಅರ್ಥ ಹೊಂದಿಕೊಳ್ಳಲಾರದು. ಸಸಿನ ವೆಂದರೆ ನೇರ, ನೇರಿತು, ನಿರುತ–ಎಂದು ಅರ್ಥ. 'ಹಾವಿನ ಡೊಂಕು ಹುತ್ತಕ್ಕೆ ಸಸಿನ' ಎಂಬ ಪ್ರಯೋಗವನ್ನು ಗಮನಿಸಬೇಕು.

ಮತ್ತೆ ಕೆಲವು ಕಡೆ ಒಂದೇ ಪದದ ಪ್ರಾಚೀನ ಮತ್ತು ಅರ್ವಾಚೀನ ರೂಪಗಳೆರಡನ್ನೂ ಬಳಸಿದ್ದಾರೆ. ಉದಾಹರಣೆಗೆ ಪೊಟಲ್ ಎಂದರೆ ಪಟ್ಟಣ. ಅದು ಕ್ರಮೇಣ ಪೊಳಲು>ಹೊಳಲು ಎಂದಾಯಿತು. ಲೇಖಕರು ಪೊಳಲು (೮೩) ಮತ್ತು ಹೊಳಲು (೧೫,೪೨೬) ಎಂಬ ಎರಡು ರೂಪಗಳನ್ನೂ ಬಳಸಿದ್ದಾರೆ. ಹಾಗೆಯೇ ಪಸೆ (೩೩೪) ಮತ್ತೆ ಹಸೆ (೩೯೦) ಎಂಬ ಎರಡನ್ನೂ ಉಪಯೋಗಿಸಿದ್ದಾರೆ. ಇವುಗಳಲ್ಲಿ ಯಾವುದಾದರೂ ಒಂದೇ ರೂಪವನ್ನು ಪ್ರಯೋಗಿಸಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತು. ಮತ್ತು ಅಧಿಕವಾಗಿರುವ ಅಚ್ಚಿನ ತಪ್ಪುಗಳನ್ನು ತಪ್ಪಿಸ ಬಹುದಿತ್ತು. ಮುದ್ರಾರಾಕ್ಷಸನ ಹಾವಳಿ ಎಷ್ಟಿದೆಯೆಂದರೆ ಕಾವ್ಯದ ಕೊನೆಯಲ್ಲಿ ಮೂರು ಪುಟದ ತಿದ್ದುಪಡಿಯಲ್ಲೂ ಸೇರದೆ ಸುವ್ವಿ (ಪುಟ ೩೧, ಅಡಿಟಿಪ್ಪಣಿ) ಕಯ್ಪಿಡಿ (ಪುಟ ೭೯) ಮೊದಲಾದ ತಪ್ಪುಗಳು ಉಳಿದಿವೆ. ಇಂಥ ಕೆಲವು ಆಗು ಹೋಗು (ಗುಣದೋಷ) ಗಳನ್ನು ಕವಿ ಶ್ರೀ ಪುಟ್ಟಣ್ಣಗೌಡರು ಮುಂದಿನ ಮುದ್ರಣದಲ್ಲಿ ಅವಶ್ಯವಾಗಿ ನೇರ್ಪುಗೊಳಿಸುವರೆಂದು ಆಶಿಸುತ್ತೇನೆ.

ಈ ಕಾವ್ಯದ ಛಂದಸ್ಸಿನ ಬಗ್ಗೆ ಒಂದೆರಡು ಮಾತು. ಇಡೀ ಕಾವ್ಯ ಸರಳ ರಗಳೆಯ ಓಟದಂತೆ ಇದೆ. ಎಂಟೆಂಟು ಸಾಲಿಗೆ ಒಂದೊಂದು ಪದ್ಯದಂತೆ ಒಟ್ಟು ೪೪೦ ಪದ್ಯಗಳಿವೆ. ಒಂದು, ಎರಡು, ಮೂರು ಮತ್ತು ಐದು, ಆರು, ಏಳನೆಯ ಪಾದಗಳಲ್ಲಿ ಐದೈದು ಮಾತ್ರೆಯ ಎರಡು ಗಣಗಳೂ; ನಾಲ್ಕು ಮತ್ತು ಎಂಟನೆಯ ಸಾಲಿನಲ್ಲಿ ಐದು ಮಾತ್ರೆಯ ಒಂದು ಗಣ, ಮೂರು ಮಾತ್ರೆಯ ಒಂದು ಗಣ–ಇದು ಪ್ರತಿ ಪದ್ಯದ ಮಾತ್ರಾಗಣ ವಿನ್ಯಾಸ. ಆದರೂ ಐದು ಮಾತ್ರೆಯ ಗಣದಲ್ಲಿ ೨+೩ ; ೩+೨ ಮಾತ್ರೆಗಳ ಒಳ ಮಾರ್ಪಾಟೂ ಇದೆ. ಮತ್ತು ಎಂಟನೆಯ ಸಾಲಿನ ಕೊನೆಯ ಗಣಕ್ಕೆ ಮೂರು ಮಾತ್ರೆಯ ಬೆಲೆಯಾದರೂ ಹಾಡು ಗಬ್ಬದಂತೆ ಈ ಕಾವ್ಯವಿರುವುದರಿಂದ ಆ ಗಣವೂ ಹಾಡುವಾಗ ಐದು ಮಾತ್ರೆಯ ಲೆಕ್ಕಕ್ಕೇ ಹಿಗ್ಗುತ್ತದೆ. ಈ ಕೆಳಗಿನ ಪದ್ಯ ನೋಡಿ.

ಮಳೆ ಕೊಡುವ ಬೆಟ್ಟಗಳ
ನೊಲೆಯುಂಡು ಹಸುರೆಲೆಯ
ತಳೆ ವಿಡಿಮ ನೆಲದ ದಾ
ರಿಯ ನೋಳ್ಪ ಚೆಲುವೆ
ಹೊಳಲ ಹೂ ಕೆರೆಗಳಂ
ತೆರೆಯ ಬೆಳ್ನೆಸಗಳಂ
ಮಳಲ ಚೆಲ್ವ ಮಸೆಗೆ
ಕಾಲೂರ ಚೆಲುವೆ ॥ ೭ ॥

ಹಾಗೆಯೇ ಪ್ರಾಸಾನುಪ್ರಾಸದ ಸಹಜ ಸೊಗಸು ಅಲ್ಲಲ್ಲಿ ಕಾಣಿಸಿಕೊಂಡಿದೆ. ನಿದರ್ಶನಕ್ಕಾಗಿ ೧೨ನೆಯ ಪದ್ಯ ನೋಡಬಹುದು. ಆದಿ-ಅಂತ್ಯ ಪ್ರಾಸವೂ ಅನೇಕ ಕಡೆ ಇದೆ. ಇವೆಲ್ಲಾ ಕಾವ್ಯದ ಬೆಲೆಯನ್ನು ಹೆಚ್ಚಿಸಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕನ್ನಡ ಕವಿಗಳು ಕಾಲಕಾಲಕ್ಕೆ ಕಾಣಿಸಿಕೊಂಡು ಕೆಲವು ಕಾವ್ಯಗಳ ಕಾಣಿಕೆಯಿಂದ ಕನ್ನಡದ ಐಸಿರಿಯನ್ನು ಹೆಚ್ಚಿಸಿದ್ದಾರೆ. ಅವರಲ್ಲಿ ಮುಳಿಯ ತಿಮ್ಮಪ್ಪಯ್ಯ, ಕಡೆಂಗೋಡ್ಲು ಶಂಕರಭಟ್ಟ, ಸೇಡಿಯಾಪು ಕೃಷ್ಣಭಟ್ಟ—ಮೊದಲಾದವರನ್ನು ಹೆಸರಿಸಬಹುದು. ಶ್ರಿ. ಕೊಳಂಬೆ ಪುಟ್ಟಣ್ಣಗೌಡರೂ ಆ ಹಿರಿಯ ಸಾಲಿಗೆ ಸೇರುವ ಸಮರ್ಥಕವಿ. ಅವರ ಅಪಾರ ನುಡಿವುರುಳ್ (ಶಬ್ದಸಂಪತ್ತು) ಬಲ್ಪಿರಿದು, ಬಲ್ಸೊಗಸು. ಉಜ್ವಲ ಭವಿಷ್ಯವಿರುವ ಇವರ ಲೇಖನಿಯಿಂದ ಇನ್ನೂ ಹಲವು ಕೃತಿ ರತ್ನಗಳು ಬೇಗನೆ ಬರಲೆಂದು ಹಾರೈಸುವೆನು.

—ಹಂಪ. ನಾಗರಾಜಯ್ಯ

**ತಲೆಕಟ್ಟು**; ಲೇಖಕರು: ಚ. ಸುಂದರೇಶನ್ ಎಂ.ಎ.; ಪ್ರಕಾಶಕರು: ಚ. ಸುಂದರೇಶನ್ ಎಂ.ಎ. ಕನ್ನಡ ಅಧ್ಯಾಪಕ ಮಹಾರಾಣಿ ಕಾಲೇಜು, ಬೆಂಗಳೂರು. [ಪ್ರಥಮ ಮುದ್ರಣ ೧೯೬೩]

ಶ್ರೀ ಚ. ಸುಂದರೇಶನ್ ಎಂ.ಎ., ಅವರ ಈ ಗ್ರಂಥ ಲಿಪಿಶಾಸ್ತ್ರ ಸಂಬಂಧಿಯಾದ ಸಂಶೋಧನ ಲೇಖನದ ಒಂದು ಶ್ಲಾಘ್ಯಪ್ರಯತ್ನ. ಅವರ ಬರೆವಣಿಗೆಯ ಉತ್ಸಾಹ, ಸಂಶೋಧನ ಸಾಮರ್ಥ್ಯ ಈ ಯೆರಡನ್ನೂ ತಿಳಿಯಲು ಇದು ತೆರೆದಿಟ್ಟ ಪುಸ್ತಕ. ಲೇಖಕರ ಅರಿಕೆ, ಸ್ವಾಮಿಯವರ ಮುನ್ನುಡಿ, ಪ್ರಾಧ್ಯಾಪಕರ ಅಭಿಪ್ರಾಯ, ವಿದ್ವಾಂಸರ ಮೆಚ್ಚುಮಾತು, ಇವೆಲ್ಲ ಈ ಗ್ರಂಥಕರ್ತೃ ಹಿರಿಯರಿಂದ ಗಳಿಸಿರುವ ಆದರಾಭಿಮಾನಗಳಿಗೆ ಸಾಕ್ಷಿಯೆನ್ನಬಹುದು. ಇಂಥ ವಿಶ್ವಾಸಕ್ಕೆ ಅವರು ನಿಜವಾಗಿಯೂ ಪಾತ್ರರೆಂದು ಈ ಲಘುಕೃತಿಯನ್ನು ಓದಿದ ಯಾರಾದರೂ ಹೇಳುತ್ತಾರೆ.

ಸ್ವರಚಿಹ್ನೆಗಳ ಪರಂಪರೆಯನ್ನು ಮೊದಲು ಹೇಳಿ, ಅದರಲ್ಲಿ ತಲೆಕಟ್ಟನ್ನು ವಿಶೇಷ ವಿಚಾರಕ್ಕೆ ಎತ್ತಿಕೊಂಡಿದ್ದಾರೆ. 'ಅ' ಸ್ವರದ ಪ್ರತಿನಿಧಿ ತಲೆಕಟ್ಟು ಎಂದಮೇಲೆ ಅನುಭಾವದ ಪ್ರಪಂಚದಲ್ಲಿ ಹೇಗೋ ಹಾಗೆ ವಾಙ್ಮಯದ ಸೀಮೆಯಲ್ಲಿಯೂ ಈ ಸ್ವರವು ವೈಶಿಷ್ಟ್ಯವನ್ನೂ ಮಹತ್ತ್ವವನ್ನೂ ಉಳ್ಳದ್ದೆಂದು ಪ್ರತಿಪಾದಿಸಿದ್ದಾರೆ. '... ಬಹುಪಾಲು ಸ್ವರಚಿಹ್ನೆಗಳ ಪೂರ್ಣತೆಗೆ, ವ್ಯಂಜನಗಳ ಆಕೃತಿಗೆ ತಲೆಕಟ್ಟು ಅನಿವಾರ್ಯವಾದ ಘಟಕ' ಎಂದು ಸೂತ್ರಿಸಿ ಪ್ರಯೋಗ ಪೂರ್ವಕವಾಗಿ ಸಾಧಿಸಿದ್ದಾರೆ. ತಲೆಕಟ್ಟು ಕಾಣದ ಕೆಲವು ವ್ಯಂಜನಗಳಲ್ಲಿ 'ರೂಪತಃ' ಇಲ್ಲವಾದರೂ 'ಧ್ವನಿಪೂರ್ವಕವಾಗಿ' ತಲೆಕಟ್ಟಿನ ಪರಿಣಾಮ ಸಾಧ್ಯವಾಗಿದೆ ಎಂದಿದ್ದಾರೆ. ಇದಾದಮೇಲೆ ತಲೆಕಟ್ಟಿನ ರೂಪ ಮತ್ತು ಸ್ವನ ಕನ್ನಡ ವರ್ಣಮಾಲೆಯ ವಿವಿಧ ವರ್ಣಗಳಲ್ಲಿ ಕಾಣಿಸಿರುವ ವೈಲಕ್ಷಣ್ಯಗಳನ್ನು ವಿಭಜಿಸಿದ್ದಾರೆ. ಶಾಸನಗಳಲ್ಲಿ ತಲೆಕಟ್ಟನ್ನುಕುರಿತ ಸಂಗತಿಗಳನ್ನು ಕ್ರೋಢೀಕರಿಸಿದ್ದಾರೆ.

ಈಯೆಲ್ಲ ನಿರೂಪಣೆ ಸಾಕಷ್ಟು ಸ್ಪಷ್ಟವಾಗಿಯೂ ವಿಶಿಷ್ಟವಾಗಿಯೂ ಇದೆ. ಉಚ್ಚರಿಸಿದಾಗ ಈ ಚಿಹ್ನೆಯಿಂದ ಹೊರಡುವ ಧ್ವನಿ 'ಅ' (ಪು. ೨,); ಮೂಲ ಮಾತೃಕೆ; "ಧವಳ ವರ್ಣಂ ಅಕ್ಷರರೂಪಂ"(ಪು. ೪); ಅರೆಯಕ್ಕರ; ಔತ್ವದಚಿಹ್ನೆ; 'ವಟ್ರಸುಳಿ-ಎಂದರೆ ವೃತ್ತಾಕಾರದ ಸುಳಿ, ಬಟ್ಟೆತ್ತಾದ ಸುಳಿ (ಪು. ೬); ಅಕ್ಷರಗಳ ಉಪಾಂಗ-ಪ್ರಧಾನಾಂಗ ಈ ಯೊಂದೆರಡು ಅಂಶಗಳು ವಿಚಾರಯೋಗ್ಯವಾಗಿ ತೋರುತ್ತದೆ.

ಒಟ್ಟಿನಲ್ಲಿ ಶ್ರೀಯುತರ ಪ್ರಯತ್ನ ಪ್ರಶಂಸನೀಯವಾದ್ದು, ಲೇಖನ ಉಲ್ಲೇಖನೀಯವಾದ್ದು.

—ಟಿ. ವಿ. ವಿ. ಎಸ್

"ರಾಯರ ರಾದ್ಧಾಂತ" (ಏಕಾಂಕ ನಗೆನಾಟಕ). ಕರ್ತೃ: ವೈ. ಆರ್. ಅಶ್ವತ್ಥನಾರಾಯಣರಾವ್, ಪ್ರಕಾಶಕರು: ಎಚ್. ಎನ್. ರಾವ್ ಬ್ರದರ್ಸ್, ಚಿಕ್ಕಪೇಟೆ, ಬೆಂಗಳೂರು ನಗರ. ಪೂ. ೧/೮ ಕ್ರೌನ್; ಪುಟಗಳು: ೩೮; ಬೆಲೆ: ೭೫ಪೈ.

ಕನ್ನಡ ಸಾಹಿತ್ಯರಾಶಿಯಲ್ಲಿ ನಾಟಕಗಳ ಸಂಖ್ಯೆ ಕಡಿಮೆಯೆಂದೇ ಹೇಳಬೇಕು. ಕಳೆದ ನಾಲ್ಕೈದು ದಶಕಗಳಿಂದ ಹುಲುಸಾಗಿ ಬೆಳೆದ ನಾಟಕವೃಕ್ಷ, ಈಗೀಗ ಮಂದವಾಗತೊಡಗಿದೆ. ಆದರೆ ನಗೆನಾಟಕಗಳು ಹುರುಪಿನಿಂದ ಬರುತ್ತಿವೆ. "ರಾಯರ ರಾದ್ಧಾಂತ" ಸಮಾಜದಲ್ಲಿ ಪ್ರಮುಖ ವ್ಯಕ್ತಿಯೆನಿಸಿಕೊಂಡಿರುವ ನ್ಯಾಯಾಧೀಶನ ಪ್ರತಿಬಿಂಬವನ್ನು ಮೂಡಿಸುವಂತಿದೆ. ನಾಟಕದ ವಸ್ತು ಅತಿ ಚಿಕ್ಕದಾದರೂ, ಅದರ ಜೋಡಣೆಯಲ್ಲಿ ಕರ್ತೃವಿನ ಪ್ರತಿಭೆ ನಿಂತಿದೆ. ಶಾಮು

ರಾಯ ಮತ್ತು ರಂಗಣ್ಣನದೇ ನಾಟಕವೆನ್ನಬಹುದು. ಉಳಿದ ಪಾತ್ರಗಳು ಪೋಷಕವಾಗಿವೆಯಾದರೂ, ಅವುಗಳಿಗೆ ಅವಕಾಶ ಸಾಲದು. ಪಾತ್ರಗಳ ಪೋಷಣೆಯಲ್ಲಿ ಅಲ್ಲಲ್ಲಿ ಕುಂದು ಕಂಡುಬರುತ್ತದೆ. ರಂಗಣ್ಣನ ಪಾತ್ರ ಸ್ವಲ್ಪ ಅತಿಯಾಯಿತೇನೋ ಎನ್ನಿಸುತ್ತದೆ. ಸುಂದರಮ್ಮನವರ ಪಾತ್ರ ಸುಂದರವಾಗಿದೆ. ರಂಗಣ್ಣನ ಮಾತಿನಲ್ಲಿ ಗ್ರಾಮ್ಯಭಾಷೆ ಬಹಳವಾಗಿದೆ. ಇದು ಈ ಪಾತ್ರಕ್ಕೆ ಹೊಂದುವ ಭಾಷೆಯಾಗಿಲ್ಲ. ನಾಟಕದಲ್ಲಿ ಬರುವ ಪತ್ರ ಪ್ರಮಾದ ನಿಜಕ್ಕೂ ಪ್ರಮಾದವಾಗಿದೆ. ರಾಯರ ಪುಕ್ಕಲುತನವನ್ನು ಚೊಕ್ಕವಾಗಿಕಾಣಬಹುದು. ಆದರೆ ನ್ಯಾಯಾಧೀಶರ ಜೀವನಕ್ಕೆ ವಿರೋಧವಾಗಿ ಬಂದಂತಿದೆ.

'ರಾದ್ಧಾಂತ'ಕ್ಕೆ ಕನ್ನಡ ನಾಟಕ ರಂಗದಲ್ಲಿ ರಾದ್ಧಾಂತ ಮಾಡುವ ಶಕ್ತಿಯಿದೆ. ಮನಕ್ಕೆ ಮಂಕು ಕವಿದಾಗ ಈ ನಾಟಕವನ್ನು ನೋಡಿ ಮನರಂಜನೆ ಪಡೆಯಬಹುದು. ಸಮಾರಂಭಗಳಲ್ಲಿ ಅಲ್ಪಕಾಲದಲ್ಲಿ ಯಶಸ್ವಿಯಾಗಿ ಅಭಿನಯಿಸಬಹುದು ಈ ರಾದ್ಧಾಂತ ವನ್ನು.

**—ಹೀ. ಚಿ. ಶಾಂತವೀರಯ್ಯ**

**ರಸಗಂಗೆ : (ಕವನ ಸಂಕಲನ) ಲೇಖಕರು : ಕವಿ ಜಿ. ಎಸ್. ಸಿದ್ದಲಿಂಗಯ್ಯ, ೧/೨೦೦೫ ಹೊಸಮುಂಡಿಪೇಟೆ ಬಡಾವಣೆ, ತುಮಕೂರು; ಪುಟಗಳು : ೬೮; ಬೆಲೆ : ರೂ. ೧–೨೫ ಪೈ.**

ನಲವತ್ತು ಕವನಗಳ ಈ ಸಂಕಲನಕ್ಕೆ ಹೆಸರಾಂತ ಶಿಕ್ಷಕರೂ ಸ್ವಯಂ ಕವಿಯೂ ಆದ ಶ್ರೀ ಎಂ. ಗೋಪಾಲಕೃಷ್ಣ ಅಡಿಗರವರು ವಿಮರ್ಶಾತ್ಮಕವಾದ ಮುನ್ನುಡಿಯನ್ನು ಬರೆದಿದ್ದಾರೆ.

ಕೃತಿಗಿಟ್ಟಿರುವ 'ರಸಗಂಗೆ' – ಈ ಹೆಸರು ಬಹುಮಟ್ಟಿಗೆ ಪದ್ಯಗಳ ನಡೆ (ಗಂಗಾಪ್ರವಾಹದಂತೆ) ಚೆನ್ನಾಗಿ ಮೂಡಿಬಂದಿರುವುದರಿಂದ ಒಪ್ಪುತ್ತದೆಯೆನ್ನಲಡ್ಡಿಯಿಲ್ಲ. ಆದರೆ ರಸ ಭಾವಗಳು ಎಲ್ಲ ಕಡೆಯೂ ತುಂಬಿ ಬಂದಿವೆಯೆನ್ನಲು ಸಾಧ್ಯವಿಲ್ಲ.

ಸಹೃದಯನಿಗೆ ಎಂಬ ಕವನದಲ್ಲಿ ಬರುವ 'ಹೂಗಣ್ಣ ತೆರೆದು, . . . ಹೂದುಟಿಯ ತೆರೆದು' –ಹೀಗೆ ಒಂದೇ ವಸ್ತುವನ್ನು ಸಮೀಪಸವಲಯದಲ್ಲಿಯೇ ಬೇರೆ ಬೇರೆ ರೂಪಕಗಳಾಗಿ ಸಂಭಾವಿಸುವುದು ಪಳಗಿದ ಕೈ ಲಕ್ಷಣವಲ್ಲ. ಆದರೂ 'ಮೊಗ್ಗಿನ ಆ ಹಿಗ್ಗುವಾಸೆ . . . ನನ್ನೆದೆಯೂ ಅರಳಬೇಕು' ಎಂಬ ಕವಿಯಾಶಯು ಮೆಚ್ಚುವಂತಹುದು.

'ಚೆಲುವುಲಿವೆ ಶಿವ . . .' (ಪು. ೪) ಸೌಂದರ್ಯಕೆಲ್ಲಂತ್ಯ? (ಪು. ೧೦) ನಿನ್ನ ಒಡಲು . . . ಜ್ಞಾನಾಮೃತ ಸಾಗರ (ಪು. ೧೬) ತಿಂಗಳನಗೆಯುರುಳಿದಂತೆ (ಪು. ೨೫) . . . ನೀ ಸೃಷ್ಟಿಪೀಠ (ಪು. ೪೫) . . . ಒಂದೆ ಕೋಣೆಯ ಒಳಗೆ ಎರಡು ವಿಶ್ವ (ಪು. ೬೫)–ಇವು ಕವಿ ಪ್ರತಿಭೆಯನ್ನು ಸೂಚಿಸತಕ್ಕ ವಾಣಿಗಳು.

ಕೆಲವು ಉಕ್ತಿಗಳು ಒಂದಕ್ಕಿಂತ ಹೆಚ್ಚುಬಾರಿ ಕಾಣಿಸಿಕೊಂಡಿರುವುದು ಅಷ್ಟು ಆರೋಗ್ಯಕರವೆನಿಸಲಾರದು. ನಿದರ್ಶನಕ್ಕೆ 'ದಾಳಿಂಬರೆ ಬಿರಿಯುವಿಕೆ' (ಪು. ೧ ಮತ್ತು ೩೭).–ಇದನ್ನು ಹೆಸರಿಸಬಹುದು.

ಮೈಯೆಲ್ಲವೂ ನಗುವ, ಮೋಹಮಾಂಸವೇ ನೀನು, ಬಿಂಕ –ಇವು ಉತ್ತಮ ಸಂವಿಧಾನದಿಂದ ಒಡ ಮೂಡಿರುವ ಕವನಗಳು.

ಈ ಕವಿ ಪ್ರಕೃತಿಯನ್ನು ಮೆಚ್ಚಿ, ಅದಕ್ಕೆ ಮಾರುಹೋಗಿರುವರೆಂಬ ವಿಷಯ ಕಾವೇರಿತಾಯಿ ಕವನ ಸಂಕಲನ ಪ್ರಕಟಿಸಿಹಳು (ಪು. ೩೦), . . . ಕೊಂಬೆ ಕೊಂಬೆಗಳೆಲ್ಲ ಕವಿಯಾಗಲು (ಪು. ೪೩), ಭುವಿ ಯಾಗಲು ಕವಿ . . (ಪು. ೪೪) ಈ ಸಾಲುಗಳಿಂದ ಸ್ಪಷ್ಟ ಪಡುತ್ತದೆ.

ಒಟ್ಟಾರೆ, ಕವಿ ಯಾವ ವಿಧವಾದ ಸಂಕೋಚ ಪ್ರವೃತ್ತಿಗೂ ಒಳಗಾಗದೆ 'ನಡೆದುದೆ ಮಾರ್ಗಂ' ಮಾಡಿಕೊಂಡು, ಜಗದ ಜೀವಾಳವಾದ ಪ್ರಕೃತಿಯನ್ನು ಕವಿಯಾಗಿ ಮೈದುಂಬಿಸಿಕೊಳ್ಳಲು ಪ್ರಯತ್ನಿಸಿರುವುದು ಸ್ತುತ್ಯ.

**—ಪಂಡಿತ ಕೆ. ಪಿ. ಶಿವಲಿಂಗಯ್ಯ**

**ಒಲವಿನ ಸೆರೆಯಲ್ಲಿ (ಸಾಮಾಜಿಕ ಕಾದಂಬರಿ) : ಲೇಖಕರು ಶ್ರೀ .ರಾ ಸು. ಮಣಿ; ಪ್ರಕಾಶಕರು : ಮಣಿಪ್ರಕಾಶನ, ರಾಯನಕೆರೆ ಡೈರಿಫಾರಂ, ಮೈಸೂರು; ಪುಟಗಳು : ೧೬೪; ಬೆಲೆ : ರೂ. ೨–೨೫ ಪೈ.**

ಕಿಟ್ಟಿ, ಮೀನಾ ಇವರದು ಹಾಲಿನಂಥಾ ದಾಂಪತ್ಯ ಜೀವನ. ಇದರಲ್ಲಿ ಹುಳಿ ಹಿಂಡಲು ತಾಯಿ ಪಾತು, ತಂಗಿ ಪಚ್ಚಿ ಇವರು ಯತ್ನಿಸುವರು, ವಿಫಲರಾಗುವರು. ಅನೇಕ ಸುಖ ದುಃಖಾಂತ ಘಟನೆಗಳನಂತರ ಮೀನಾ ಪಂಗುವಾಗಿ ಕಿಟ್ಟಿಯನ್ನು ಸೇರುವಳು. ಇಷ್ಟು ಕಾದಂಬರಿಯ ಕಥಾವಸ್ತು.

ಕಾದಂಬರಿಯ ವಸ್ತುವಿನಲ್ಲೇನೂ ಹೊಸತಿಲ್ಲ. ಸರ್ವೇ ಸಾಮಾನ್ಯವಾಗಿ ಎಲ್ಲಾ ಸಂಸಾರಗಳಲ್ಲೂ ನಡೆಯುತ್ತಿರುವ

ವ್ಯಾಪಾರವೇ. ಆದರೆ ಅದರ ಸುತ್ತಲೂ ಹೆಣೆದಿರುವ ಕಥಾ ತಂತ್ರದಲ್ಲಿ ಶ್ರೀ ರಾ. ಸು. ಮಣಿಯವರ ಹಸ್ತ ಕೌಶಲ ಎದ್ದು ಕಾಣುತ್ತದೆ. ಪಾತು ಮತ್ತು ಪಚ್ಚಿ ದುಷ್ಟ ವಿಗ್ರಹಗಳು. ಸೇಡಿಗಾಗಿ ಸ್ವಂತ ಮಗನ ಹಿತವನ್ನು ದುರ್ಲಕ್ಷಿಸಿ ಸೊಸೆಗೆ ವಿಷ ಉಣ್ಣಿಸಿದವಳು ಪಾತು, ಪಚ್ಚಿ ಪಾತುವಿನ ದುರುದ್ದೇಶಗಳ ಒಂದು ಕೈ ಗೊಂಬೆಮಾತ್ರ. ಕೊನೆಯಲ್ಲಿ ಒಂದು ಮರ್ಯಾದಾಯುಕ್ತ ಸಂಸಾರದ ಮುಖಕ್ಕೆ ಮಸಿ ಬಳಿದು, ತನ್ನ ಶರೀರ ಸುಖಕ್ಕಾಗಿ ಯಾರೊಡನೆಯೋ ಬೊಂಬಾಯಿಗೆ ಓಡಿಹೋಗಿ, ಅಲ್ಲಿ ಕ ರೆ ತಂ ದ ವ ನಿಂ ದ ವಿವರ್ಜಿತಳಾಗಿ ಬೊಂಬಾಯಿನ ಆ ದುರ್ಭರ ಸೂಳೆಗೇರಿಯನ್ನು ಸೇರುವಳು.

ಇದರಲ್ಲಿ ಕಾಣಿಸಿಕೊಳ್ಳುವ ಪ್ರತಿಯೊಂದು ಪಾತ್ರವು ಅಷ್ಟೆ ತನ್ನದೇ ಆದ ಪ್ರಪಂಚದಲ್ಲಿ ವಿಹರಿಸುತ್ತಾ ಜೀವನದಲ್ಲಿ ತೋರಿದತ್ತ ನುಗ್ಗುವ ಮನೋಭಾವ, ಚೀನಿ, ಚಂದಿ, ರಾಜಣ್ಣ, ಕಂಠಿ, ರತ್ನಾ, ದೊರೆ ಇವರು ನಮ್ಮ ಸುತ್ತ ಮುತ್ತಲೂ ಓಡಿಯಾಡುತ್ತಿರುವ ಜೀವಂತ ಸಮಾಜವೇ. ಕೇವಲ ಸಣ್ಣ ಪೋಷಕ ಪಾತ್ರಗಳೂ ಸಹ, (ಪದ್ದಿ, ಸುಬ್ಬಮ್ಮ, ಸಾಕಮ್ಮ, ಭಟ್ಟರು, ಕಮಲಾ ಸಾನಿ ಇತ್ಯಾದಿ) ಸಮಾಜದ ಇನ್ನೊಂದು ಮುಖದ ದರ್ಶನವನ್ನು ನಮಗೆ ಮಾಡಿಕೊಡುವುವು.

ಕಾದಂಬರಿಯಲ್ಲಿ ಕೆಲವೊಂದು ಪಾತ್ರಗಳು ಅನಾವಶ್ಯಕವಾಗಿ ತುರುಕಿದಂತೆ ಭಾಸವಾಗುತ್ತದೆ. ಉದಾ : ಶಾಮಣ್ಣನ ಮತ್ತು ಅವನ ಮಗಳು. ಕಾದಂಬರೀ ಬೆಳೆದಂತೆ ಮುಂದೆ ಅವರ ಸೊಲ್ಲೇಇಲ್ಲ. ಆ ಪಾತ್ರಗಳ ಪೋಷಣೆಗೆ ಲೇಖಕರು ಯಾವ ಶ್ರಮವನ್ನೂ ವಹಿಸಿದಂತೆ ಕಾಣಿಸುವುದಿಲ್ಲ. ಹೆಸರುಗಳಲ್ಲೂ ಸಹಾ ಅನೇಕವೇಳೆ ದಾರಿತಪ್ಪಿದಂತೆ ಕಂಡು ಬರುವುದು. ಶ್ರೀ ಕಂಠೇಶ್ವರ ಅಯ್ಯರು, ಶ್ರೀಕಂಠಯ್ಯನಾಗುವುದು (ಶ್ರೀಕಂಠಯ್ಯನೆಂಬ ಇನ್ನೊಂದು ಪಾತ್ರವಿದೆ) ರಾಜಣ್ಣನ ಹೆಂಡತಿಯ ಹೆಸರು ಒಂದೆಡೆ 'ಮಾಲತಿ' ಇನ್ನೊಂದೆಡೆ 'ನಾಗರತ್ನ'; ಅನೇಕ ವ್ಯಾಕರಣ ದೋಷಗಳು, ಹೇರಳವಾದ ಅಚ್ಚುತಪ್ಪುಗಳು, ಇವು ವಾಚಕರ ವಾಚನದ ಓಟವನ್ನು ಕುಂಠಿತಗೊಳಿಸುತ್ತವೆ. ಮುಂದಿನ ಮುದ್ರಣದಲ್ಲಿ ಲೇಖಕರು ಈ ದಿಟ್ಟಿನಲ್ಲಿ ದೃಷ್ಟಿ ಹರಿಸಿದರೆ ಉತ್ತಮ. ಒಟ್ಟಿನಲ್ಲಿ ಶ್ರೀ ರಾ. ಸು. ಮಣಿಯವರು ಒಳ್ಳೆಯ ಕಾದಂಬರೀಕಾರರಾಗಬಲ್ಲರೆಂಬ ಅಂಶ ಈ ಕಾದಂಬರಿಯಿಂದ ಮೂಡಿಬರುತ್ತದೆ.

**ಸಂತಾನ (ಸಂಗೀತ ಸಾಮಾಜಿಕ ನಾಟಕ); ಲೇಖಕರು : ಶ್ರೀ ರಾ. ಕ. ನಾಯಕ; ಪ್ರಕಾಶಕ : ಶ್ರೀ ರಾ. ಕ. ನಾಯಕ; ಪುಟಗಳು : ೭೪; ಬೆಲೆ : ರೂ. ೨.**

ನಾಟಕದ ಪ್ರಾರಂಭದಲ್ಲೇ ಲೇಖಕರು ನಾಟಕವೆಂದರೇನು ಮತ್ತು ಕನ್ನಡ ನಾಡಿನ ಪದ್ಯದ ನಾಟಕಗಳ ಮತ್ತು ರಂಗಭೂಮಿಯ ವಿವೇಚನೆ, ನಾಟಕ ಆಡುವವರು, ಆಡಿಸುವವರು ನೋಡುವವರು ಇವರ ಬಗ್ಗೆ ವಿವರಣೆ, ಇವೆಲ್ಲಾ ಇವೆ. ಅಷ್ಟಲ್ಲದೆ ನಾಟಕವೆಂದರೆ ಯಾಂತ್ರಿಕ ಯೋಜನೆಯಲ್ಲ, ಎಲ್ಲಾ ಕಲಾವಿದರ ಏಕ ಮನಸ್ಸಿನ ಕಲಾಸಾಧನೆ, ಆದ್ದರಿಂದ ಪ್ರತಿ ಒಬ್ಬರೂ ತನ್ನದಾದ ಪ್ರತಿಯೊಂದನ್ನು ಇರಿಸಿಕೊಂಡು ಅಭ್ಯಸಿಸಿ, ಎಲ್ಲರೂ ವಿಚಾರ-ವಿಮರ್ಶೆ-ಚರ್ಚೆಗಳ ಸಶಕ್ತ-ಫಲವಾಗಿ ನಾಟಕ ಕೂಡಿಸಿ ಆಡಬೇಕೆಂಬ ಸೂಚನೆಯೊಡನೆ ನಾಟಕವನ್ನು ಪ್ರಾರಂಭಿಸುತ್ತಾರೆ.

ನಾಟಕದ ವಸ್ತುವಿಷ್ಟೆ. ಗೋವರ್ಧನರಾಯ ಮನೆಯ ಹಿರಿಯ. ಗಣೇಶ, ಕೇಶವ ಆತನ ಇಬ್ಬರು ಮಕ್ಕಳು. ಗಣೇಶನ ಪತ್ನಿ ಲಲಿತಾ. ತನ್ನ ಮಗನ ಸುಖಮಯವಾದ ಸಂಸಾರ ಪ್ರಾರಂಭದಲ್ಲಿ ತಾನು ತೀರ್ಥಯಾತ್ರೆಗೆ ಹೊರಡುತ್ತಾನೆ. ಆತನು ತೀರ್ಥಯಾತ್ರೆ ಮುಗಿಸಿ ವಾಪಸ್ಸು ಬಂದಾಗ ಆದರ್ಶಮಯವಾಗಿದ್ದ ತನ್ನ ಸಂಸಾರ ಅಧೋಗತಿಗೆ ಇಳಿದದ್ದನ್ನು ಕಾಣುತ್ತಾನೆ. ಕೊನೆಗೆ ಅದೇ ಮನಸ್ಸಿನಮೇಲೆ ಭಾರಿ ಆಘಾತವಾಗಿ ಸಾಯುತ್ತಾನೆ.

ನಾಟಕದಲ್ಲಿ ಹೆಚ್ಚಿನ ಘಟನೆಗಳು ಇಲ್ಲ. ಯಾವುದೋ ಪೂರ್ವವ್ಯವಸ್ಥಿತ ಶಕ್ತಿಗೆ ಒಳಗಾದಂತೆ ಪಾತ್ರಗಳು ಬಂದು ಹೋಗಿ ಮಾಡುತ್ತವೆ. ಲೇಖಕರೇ ಹೇಳುವಂತೆ, ನಾಟಕದಲ್ಲಿ ಹೆಚ್ಚೇನೂ ಇಲ್ಲ. ಒಂದನೇ ಅಂಕದಲ್ಲಿ ಮುದುಕ ಹೊರಗೆ ಹೋದ, ಉಳಿದವರು ಒಳಗೆ ಬಂದರು. ಎರಡನೇ ಅಂಕದಲ್ಲಿ ಮುದುಕ ಮನೆಗೆ ಬಂದ, ಉಳಿದವರು ಮನೆ ಬಿಟ್ಟರು. ಮೂರನೇ ಅಂಕದಲ್ಲಿ ಎಲ್ಲರನ್ನೂ ಕರೆಸಿ ಮುದುಕ ತಾನೇ ಸತ್ತ. ಇಷ್ಟರ ಆಧಾರದ ಮೇಲೆ ಕತೆ ಬರೆಯುವುದು ಸ್ವಲ್ಪ ಸಾಹಸವೇ.

ನಾಟಕದ ಏಕಾದಶ ಪಾತ್ರಗಳು, ಪ್ರವೇಶ ಸಂಭಾಷಣೆ, ನಿಷ್ಕ್ರಮಣ. ಈ ಕ್ರಿಯಾತ್ರಯವನ್ನು ಕೇವಲ ಪಾಲಿಸುತ್ತವೆ ಅಷ್ಟೆ. ಮುಖ್ಯ ನಾಟಕದಲ್ಲಿ ಜೀವಕಳೆ ಕಾಣಿಸುತ್ತಿಲ್ಲ. ಪೋಷಕರಿಗೆ ನಿಶ್ಚಯವಾಗಿಯೂ ಬೇಜಾರೆನಿಸುವುದು. ಕೆಲವು ಪಾತ್ರಗಳು ಅರ್ಥವಾಗುವುದೇ ಕಷ್ಟವಾಗಿದೆ. ಒಟ್ಟಿನಲ್ಲಿ ನಾಟಕಕಾರರು ತಾವು ಇತ್ತಿರುವ ದೀರ್ಘ ಉಪದೇಶವನ್ನು ತಾವೇ ಅನುಸರಿಸಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ! ಅನೇಕ ಮುದ್ರಣದ ದೋಷಗಳಿಂದ ಕೂಡಿದ ಈ ಹೊತ್ತಿಗೆಯನ್ನು ಪುನರ್ ಮುದ್ರಣದ ಹೊತ್ತಿಗೆ ಪರಿಷ್ಕರಿಸಿದರೆ ಉತ್ತಮವಾದೀತು.

ಆಹಾರ ವಿಜ್ಞಾನ (ತ್ರೈಮಾಸಿಕ ಪತ್ರಿಕೆ) ; ಸಂಪುಟ : ೬ ; ಸಂಚಿಕೆ : ೧ ; (ಮಾರ್ಚಿ ೧೯೬೪) ಪ್ರಕಾಶಕರು : ಕೇಂದ್ರ ಆಹಾರ ಸಂಶೋಧನಾಲಯ, ಮೈಸೂರು ; ಸಂಪಾದಕರು : ಶ್ರೀ ವಿ. ಎಸ್. ಬಾಲಕೃಷ್ಣನ್ ; ಪುಟಗಳು : ೨೪ ; ಬೆಲೆ : ೩೦ ಪೈ.

ಈ ಸಂಚಿಕೆಯು ಥಯಮೀನ್ ಕೊರತೆಯಿಂದಾಗುವ ತೊಂದರೆಗಳನ್ನು ಕುರಿತು ಒಂದು ಲೇಖನ, 'ಕೀಟಗಳು ಮನುಷ್ಯನ ಶತ್ರುಗಳು' ಎಂಬ ವಿಭಾಗದಲ್ಲಿ ಮನೆಗಳಲ್ಲಿ ಬಳಸಲು ಯೋಗ್ಯವಾದ ಕೀಟನಾಶಕ ಪದಾರ್ಥಗಳ ವಿಚಾರದಲ್ಲಿ ಒಂದು ಪ್ರಬಂಧ, ರುಚಿರುಚಿಯಾದ ತಿಂಡಿ ಪದಾರ್ಥಗಳ ತಯ್ಯಾರಿಕಾ ವಿಚಾರದಲ್ಲಿ ಒಂದು ಸಲಹೆ, ಗೃಹಿಣಿಯರಿಗೊಂದು ಕಿವಿ ಮಾತಿನಲ್ಲಿ ತರಕಾರಿಗಳ ಬಗ್ಗೆ ತಿಳಿದಿರಬೇಕಾದ ಅಂಶಗಳ ಬಗ್ಗೆ ಒಂದು ವಿಚಾರ ಪೂರಿತ ಲೇಖನ, ತೊಗರಿಯ ಬಗ್ಗೆ ಒಂದು ಮಾಹಿತಿ, ಕೊನೆಯದಾಗಿ ನಿಮ್ಮ ಪ್ರಶ್ನೆಗಳಿಗೆ ನಮ್ಮ ಉತ್ತರಗಳು ಈ ವಿಚಾರಗಳನ್ನು ಒಳಗೊಂಡಿದೆ.

ಇದು ಗೃಹಿಣಿಯರಿಗೆ ಮತ್ತು ಗೃಹವಿಜ್ಞಾನದ ವಿದ್ಯಾರ್ಥಿಗಳಿಗೆ ಬಹಳ ಉಪಯುಕ್ತವಾದ ಪುಸ್ತಕ ಮತ್ತು ಅನೇಕ ವಿಚಾರಗಳನ್ನು ಮನಮುಟ್ಟುವಂತೆ ಸರಳ ಕನ್ನಡ ಶೈಲಿಯಲ್ಲಿ ಕೊಡಲಾಗಿದೆ.

—ಕೆ. ಎಸ್. ಸೂಲಿಬೆಲೆ

---

# ಶ್ರೀ ಎಂ. ರಾಜೇಶ್ವರಯ್ಯನವರ ಸಾಹಿತ್ಯ ಸೇವೆ

ಶ್ರೀ ಎಂ. ರಾಜೇಶ್ವರಯ್ಯನವರು ಸುಮಾರು ೧೮ ವರ್ಷಗಳಿಂದ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಹಿಂದೀ ಪ್ರಾಧ್ಯಾಪಕರಾಗಿದ್ದಾರೆ. ಹಾಲಿ ಮಹಾರಾಜಾ ಕಾಲೇಜಿನ ಹಿಂದೀ ವಿಭಾಗದ ಅಧ್ಯಕ್ಷರಾಗಿದ್ದಾರೆ.

ಕನ್ನಡ ಹಾಗೂ ಹಿಂದಿಯಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಕನ್ನಡ ಮತ್ತು ಹಿಂದೀ ಬಾಂಧವ್ಯಕ್ಕಾಗಿ ಅಧಿಕವಾಗಿ ದುಡಿಯುತ್ತಿದ್ದಾರೆ. ೧೯೬೧ರ ಬಳ್ಳಾರಿಯಲ್ಲೂ ೧೯೬೩ರಲ್ಲಿ ಸಿದ್ಧಗಂಗೆಯಲ್ಲೂ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಭಾಗವಹಿಸಿ ಕನ್ನಡ–ಹಿಂದೀ ಬಾಂಧವ್ಯದ ಬಗ್ಗೆ ವಿಚಾರ ಪೂರಿತ ಭಾಷಣಗಳನ್ನು ಮಾಡಿದ್ದಾರೆ.

ಕನ್ನಡ ಸಾಹಿತ್ಯ ಚರಿತ್ರೆಯನ್ನು (ಸುಮಾರು ೫೦೦ ಪುಟಗಳ ಗ್ರಂಥ) ಕನ್ನಡ ಹಾಗೂ ಹಿಂದೀ ಭಾಷೆಗಳಲ್ಲೂ ಶ್ರೀ ತ. ಸು. ಶಾಮರಾಯರೊಂದಿಗೆ ಸೇರಿ ೨-೧೦-೬೪ರಂದು ಹೊರತರಲಿರುವ ವಿಷಯ ಕನ್ನಡ ನಾಡಿಗೆ ಅಭಿಮಾನ ಉಂಟು ಮಾಡುವುದಾಗಿದೆ.

ಡಾ॥ ಸಿದ್ಧಲಿಂಗಯ್ಯ, ಶ್ರೀ ತ. ಸು ಶಾಮರಾಯರೊಂದಿಗೆ ಸೇರಿ "ನಮ್ಮ ಮಕ್ಕಳು ಮತ್ತು ನಮ್ಮ ಶಿಕ್ಷಣ" ಎಂಬ ಗ್ರಂಥವನ್ನು ಮುಖ್ಯ ಮಂತ್ರಿ ಮಾನ್ಯ ಶ್ರೀ ಎಸ್. ನಿಜಲಿಂಗಪ್ಪನವರ ಮುನ್ನುಡಿಯೊಡನೆ, ಕನ್ನಡ, ಹಿಂದಿ ಮತ್ತು ಇಂಗ್ಲಿಷ್‌ನಲ್ಲಿ ಇದೇ ೨-೧೦-೬೪ ರಂದು ಹೊರತರಲಿರುವ ವಿಷಯ ಹೆಮ್ಮೆಯುಂಟು ಮಾಡುತ್ತದೆ.

ಬಸವಣ್ಣನವರ ವಚನಗಳ ಹಿಂದೀ ರೂಪಾಂತರ, ೧೯೫೧ರಲ್ಲಿ, ನಂತರ ಹಿಂದಿ ಫೂಲ್ (ಹಿಂದೀ ಹೂ) ಎನ್ನುವ ಹಿಂದಿ ರೀಡರುಗಳು, ಸರಕಾರಕ್ಕೆ ತಯಾರು ಮಾಡಿಕೊಟ್ಟಿರುವ ೮-೧೦ ಹಿಂದೀ ರೀಡರುಗಳು. ಕುಮಾರವ್ಯಾಸ ಭಾರತದಿಂದ ಸಂಪಾದಿಸಿ ಪ್ರಕಟಿಸಿರುವ ಇಂದ್ರಕೀಲ ಎಂಬ ಕನ್ನಡ ಗ್ರಂಥ.

ಶ್ರೀ ಗುರುದತ್ ಅವರೊಡಗೂಡಿ ಕನ್ನಡ ಮತ್ತು ಹಿಂದಿಯಲ್ಲಿ ಊರ್ಮಿಳೆ ಎಂಬ ಗ್ರಂಥ. ಡಾ॥ ಜವಳಿ ಕೃತ "ಸ್ವತಂತ್ರ ಸಮಾಜದ ಶಿಕ್ಷಣ ಪದ್ಧತಿ" ಎಂಬ ೫೦೦ ಪುಟದ ಕನ್ನಡ ಗ್ರಂಥದ ಹಿಂದೀ ಅನುವಾದ.

ಧಾರವಾಡದ ಕರ್ನಾಟಕ ಪ್ರಾಂತೀಯ ಹಿಂದಿ ಪ್ರಚಾರ ಸಭೆಯ ರಜತೋತ್ಸವದ ಸಮಯದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಡಾ॥ ಶ್ರೀ ಕೆ. ಎಲ್. ಶ್ರೀಮಾಲಿ ಅವರ ಶ್ರೀ ರಾಜೇಶ್ವರಯ್ಯನವರಿಗೆ ಅವರ ಸಾಹಿತ್ಯ ಸೇವೆಗಾಗಿ ಸನ್ಮಾನ ಪ್ರಾಪ್ತವಾಗುತ್ತಿರುವುದನ್ನು ಈ ಚಿತ್ರದಲ್ಲಿ ನೋಡಬಹುದು. ಇವರು ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯರೂ ಅಹುದು.



## ಕನ್ನಡ ಸಾಹಿತ್ಯ ಪರಿಷತ್ತಿನ

# ಕನ್ನಡ-ಕನ್ನಡ ನಿಘಂಟು

## ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ "ಕನ್ನಡ ನಿಘಂಟು" ಡೆಮ್ಮಿ ಚತುಷ್ಪತ್ರ ಆಕಾರದ ಸುಮಾರು ೫,೦೦೦ ಪುಟಗಳನ್ನು ಒಳಗೊಂಡು, ಒಂದೊಂದು ಸಂಪುಟದಲ್ಲೂ ಸುಮಾರು ೧೨೫೦ ಪುಟಗಳಿರುವ ನಾಲ್ಕು ಸಂಪುಟಗಳಲ್ಲಿ (Volumes) ಪ್ರಕಟವಾಗುವಂತೆ ಏರ್ಪಡಿಸಲಾಗಿದೆ.

ನಿಘಂಟಿನ ಒಟ್ಟು ಬೆಲೆ ೧೨೦ ರೂಪಾಯಿಗಳು; ಮುಂಗಡವಾಗಿ ಹಣ ಸಲ್ಲಿಸುವ ಗ್ರಾಹಕರಿಗೆ ೧೦೦ ರೂಪಾಯಿಗಳ ರಿಯಾಯಿತಿ ದರದಲ್ಲಿ ಅದನ್ನು ಒದಗಿಸಲಾಗುತ್ತದೆ. ನಿಘಂಟು ಸಿದ್ಧವಾದಂತೆಲ್ಲ ೯೬ ಪುಟಗಳುಳ್ಳ ಸಂಚಿಕೆಗಳ (Fascicules) ರೂಪದಲ್ಲಿಅದನ್ನು ಮುಂಗಡವಾಗಿ ೧೦೦ ರೂಪಾಯಿಗಳ ರಿಯಾಯಿತಿಯ ಬೆಲೆಯನ್ನು ಸಲ್ಲಿಸಿರುವ ಗ್ರಾಹಕರಿಗೆ ತಲುಪಿಸಲಾಗುವುದು. ನಿಘಂಟಿನ ಸಂಪುಟಗಳನ್ನಾಗಲಿ ಸಂಚಿಕೆಗಳನ್ನಾಗಲಿ ಬಿಡಿ ಬಿಡಿಯಾಗಿ ವಿಕ್ರಯಿಸುವುದಿಲ್ಲ. ಮುಂಗಡ ಹಣ ನೂರು ರೂಪಾಯಿಗಳನ್ನು ಹತ್ತು ರೂ.ಗೆ ಕಡಿಮೆಯಿಲ್ಲದ ಕಂತುಗಳಲ್ಲಿ ಪಾವತಿ ಮಾಡಬಹುದು. ಆದರೆ ಪೂರ್ತ ಹಣ ಸಂದಾಯ ವಾಗುವವರೆಗೆ ಸಂಚಿಕೆಗಳನ್ನು ಕಳಿಸಲಾಗುವುದಿಲ್ಲ.

ನಿಘಂಟಿನ ಎರಡನೆಯ ಸಂಪುಟವು ಪ್ರಕಟವಾದ ಕೂಡಲೆ **ರಿಯಾಯಿತಿಯ ದರದಲ್ಲಿ** ಅದನ್ನು ವಿಕ್ರಯಿಸುವುದನ್ನು ನಿಲ್ಲಿಸಲಾಗುತ್ತದೆ; ಆ ಮುಂದೆ ಪೂರ್ಣವಾದ ಬೆಲೆಯನ್ನು ಕೊಡಬೇಕಾಗುತ್ತದೆ.

ನಿಘಂಟಿನ ಒಂದು ಸಂಪುಟವು ಸಿದ್ಧವಾದ ಬಳಿಕ ಅದರ ರಕ್ಷಾಕವಚವನ್ನು (Binding Case) ಮುಂಗಡವಾಗಿ ಬೆಲೆ ಸಲ್ಲಿಸಿರುವ ಗ್ರಾಹಕರಿಗೆ ಉಚಿತವಾಗಿ ಒದಗಿಸಲಾಗುವುದು.

ಸಂಚಿಕೆಗಳನ್ನೂ ರಕ್ಷಾಕವಚಗಳನ್ನೂ ಕಳಿಸಲು ತಗುಲುವ ಅಂಚೆವೆಚ್ಚವನ್ನು ಗ್ರಾಹಕರೇ ಸಲ್ಲಿಸತಕ್ಕದ್ದು.

ಗ್ರಾಹಕರು ಮುಂಗಡ ಬೆಲೆಯ ಜೊತೆಗೆ ಹತ್ತು ರೂಪಾಯಿಗಳನ್ನು ಅಂಚೆವೆಚ್ಚ, ರವಾನೆ ವೆಚ್ಚ ಗಳಿಗಾಗಿ ಸಲ್ಲಿಸಬೇಕು. ಸಂಚಿಕೆಗಳನ್ನು "ರಿಜಿಸ್ಟರ್ಡ್ ಪೋಸ್ಟ್" ಮೂಲಕ ಕಳಿಸಬೇಕೆಂದು ಗ್ರಾಹಕರು ಅಪೇಕ್ಷಿಸಿದಲ್ಲಿ ಆ ವಿಷಯವನ್ನು ಅವರು ಲಿಖಿತರೂಪದಲ್ಲಿ ಮೊದಲೇ ತಿಳಿಸಬೇಕು. ಹಾಗೆ ಮಾಡದಿದ್ದರೆ ಸಂಚಿಕೆಗಳನ್ನು "ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್" ಸಮೇತವಾಗಿ ಸಾದಾ ಟಪಾಲಿನ ಮೂಲಕ ಕಳಿಸ ಲಾಗುವುದು. ಸಂಚಿಕೆಗಳನ್ನು ಪರಿಷತ್ತಿನ ಕಚೇರಿಯಲ್ಲೇ ತೆಗೆದುಕೊಳ್ಳಲು ಅಪೇಕ್ಷಿಸುವವರು ಮುಂಚಿತವಾಗಿ ತಿಳಿಸಿ ಆ ರೀತಿ ಮಾಡಬಹುದು; ಅಂಥವರು ಅಂಚೆವೆಚ್ಚವನ್ನು ಕೊಡಬೇಕಾಗುವುದಿಲ್ಲ.

**ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.**

ಈ ವಿಳಾಸಕ್ಕೆ ಹಣ ಕಳುಹಿಸಿ ಪತ್ರ ವ್ಯವಹಾರ ಮಾಡಬಹುದು.

**ಕೆ. ಎಂ. ಕೃಷ್ಣರಾವ್**
ಗೌರವ ಕಾರ್ಯದರ್ಶಿ

## ಯಕ್ಷಗಾನ ಪ್ರದರ್ಶನ

ಆಗಸ್ಟ್ ದಿನಾಂಕ ೨೭ ರಂದು ಸಂಜೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕರ್ಣಾಟಕ ಯಕ್ಷಗಾನ ಕಲಾ ಮಿತ್ರ ಮಂಡಲಿಯವರಿಂದ 'ಮೀನಾಕ್ಷಿ ಕಲ್ಯಾಣ' ಎಂಬ ಯಕ್ಷಗಾನದ ಪ್ರದರ್ಶನ ಏರ್ಪಾಟಾಗಿತ್ತು. ಈ ಸಮಾರಂಭಕ್ಕೆ ರಾಜ್ಯದ ಉಪಸಚಿವ ಶ್ರೀ ವೈ. ರಾಮಚಂದ್ರ ಅವರು ಅಧ್ಯಕ್ಷತೆ ವಹಿಸಿದ್ದರು. ಯಕ್ಷಗಾನ ಕಲೆಯ ವಿಚಾರವಾಗಿ ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳೂ, ಕೀರ್ತನಕೇಸರಿ ಭದ್ರಗಿರಿ ಕೇಶವದಾಸರೂ ಭಾಷಣ ಮಾಡಿ ಈ ಕಲೆಯ ಮಹತ್ವವನ್ನು ಬಣ್ಣಿಸಿದರು. ಯಕ್ಷಗಾನವನ್ನು ನೋಡಿ ಆನಂದಿಸಲು ಶ್ರೀ ಕೃಷ್ಣರಾಜ ಪರಿಷನ್ಮಂದಿರದ ತುಂಬ ಮಹಿಳೆಯರೂ, ಪುರುಷರೂ ಸೇರಿದ್ದರು. ವಿಶೇಷ ಅತಿಥಿಗಳಾಗಿ ಮೈಸೂರು ಕಾಂಗ್ರೆಸ್ ಕಾರ್ಯದರ್ಶಿ ಶ್ರೀ ಡಿ. ಎಂ. ಸಿದ್ದಯ್ಯನವರು ಆಗಮಿಸಿದ್ದರು.

## ಭಾಷಣ ಕಲಾ ಶಿಕ್ಷಣ ತರಗತಿಯ ಆರಂಭ

ಆಗಸ್ಟ್ ದಿನಾಂಕ ೨೯ ರಂದು ಸಂಜೆ ಪರಿಷತ್ತಿನಲ್ಲಿ ಈ ವರ್ಷದ ಕನ್ನಡ ಭಾಷಣ ಕಲಾ ಶಿಕ್ಷಣ ತರಗತಿಯ ಆರಂಭೋತ್ಸವವಾಯಿತು. ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಅಧ್ಯಕ್ಷತೆ ವಹಿಸಿದ್ದರು. ಮಣಿಪಾಲದ ವಿದ್ಯಾ ಸಂಸ್ಥೆಗಳ ರಿಜಿಸ್ಟ್ರಾರ್ ಅವರಾದ ಡಾ|| ಟಿ. ಎಂ. ಎ. ಪೈರವರ ಔದಾರ್ಯದ ಫಲವಾಗಿ ಈ ಶಿಕ್ಷಣ ತರಗತಿ ಏರ್ಪಟ್ಟಿದೆ.

## ಕೀರ್ತನ ಕಾಲಕ್ಷೇಪ— ದಾಸರಿಗೆ ಪ್ರಶಸ್ತಿ

ಸೆಪ್ಟೆಂಬರ್ ದಿನಾಂಕ ೧ ರಂದು ಸಂಜೆ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಕೀರ್ತನಕೇಸರಿ ಭದ್ರಗಿರಿ ಕೇಶವದಾಸರಿಂದ 'ಶ್ರೀ ಕನಕದಾಸರು' ಎಂಬ ಕೀರ್ತನ ಕಾಲಕ್ಷೇಪದ ಏರ್ಪಾಟಾಗಿತ್ತು. ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು ಈ ಸಮಾರಂಭದಲ್ಲಿ ಆಹ್ವಾನಿಸಲ್ಪಟ್ಟು ಆಗಮಿಸಿದ್ದುದು, ಕಾಲಕ್ಷೇಪಕ್ಕೆ ಅಪೂರ್ವ ಕಳೆಯುಂಟುಮಾಡಿತ್ತು. ನಿವೃತ್ತ ನ್ಯಾಯಮೂರ್ತಿ ಶ್ರೀ ಟಿ. ಎನ್. ಮಲ್ಲಪ್ಪನವರು ಸಭಾಧ್ಯಕ್ಷತೆ ವಹಿಸಿದ್ದರು.

ಈ ಸುಸಂದರ್ಭದಲ್ಲಿ ಶ್ರೀ ಕೇಶವದಾಸರಿಗೆ ಪರಿಷತ್ತಿನ ಪರವಾಗಿ 'ಕೀರ್ತನ—ನಾಟಕ ಕಲಾ ವಿಶಾರದ' ಎಂಬ ಪ್ರಶಸ್ತಿಯನ್ನು ಪೇಜಾವರ ಮಠಾಧೀಶರ ಹಸ್ತದಿಂದ ಕೊಡಿಸಿ ಸನ್ಮಾನಿಸಲಾಯಿತು.

ಶ್ರೀಗಳವರು ಮಾತನಾಡಿ, ಪರಿಷತ್ತಿನವರು ಶ್ರೀ ಕೇಶವದಾಸರನ್ನು ಸನ್ಮಾನಿಸಿದುದು ಸ್ತುತ್ಯವಾದ ಕಾರ್ಯವೆಂದು ಹೇಳಿ ದಾಸರನ್ನು ಆಶೀರ್ವದಿಸಿದರು.

ಕರ್ಣಾಟಕ ಯಕ್ಷಗಾನ ಕಲಾ ಮಂಡಲಿಯ ವ್ಯವಸ್ಥಾಪಕರಾದ ಶ್ರೀ ಕೆ. ನೀಲಕಂಠರಾಯರನ್ನೂ ಈ ಸನ್ನಿವೇಶದಲ್ಲಿ ಸನ್ಮಾನಿಸಲಾಯಿತು. ಪೇಜಾವರ ಮಠಾಧೀಶರೂ, ಪರಿಷತ್ತಿನ ಅಧ್ಯಕ್ಷರೂ ಶ್ರೀ ನೀಲಕಂಠರಾಯರ ಮತ್ತು ಅವರ ಮಂಡಲಿಯವರ ಕಲಾಸೇವೆಯನ್ನು ಮುಕ್ತ ಕಂಠದಿಂದ ಹೊಗಳಿದರು. ಶ್ರೀ ನೀಲಕಂಠರಾಯರಿಗೆ ಖಾದಿಯ ಶಾಲನ್ನೂ ಪುಷ್ಪಾಹಾರವನ್ನೂ ಶ್ರೀ ಶ್ರೀಗಳವರ ಹಸ್ತದಿಂದ ಕೊಡಿಸಲಾಯಿತು.

ಸಭಾಧ್ಯಕ್ಷರಾದ ಶ್ರೀ ಟಿ. ಎನ್. ಮಲ್ಲಪ್ಪನವರು ಶ್ರೀ ಕೇಶವ ದಾಸರು ಮತ್ತು ಅವರ ಸಹೋದರರಾದ ಶ್ರೀ ಅಚ್ಯುತ ದಾಸರು ಅಲ್ಲದೆ ಶ್ರೀ ನೀಲಕಂಠರಾಯರು, ಸಮಾಜ ಹಾಗೂ ಕಲಾಸೇವೆ ಗೈಯ್ಯುತ್ತಿರುವುದನ್ನು ಪ್ರಶಂಸಿಸಿ, ಅವರನ್ನು ಅಭಿನಂದಿಸಿದರು. ಪರಿಷತ್ತಿನ ಕಾರ್ಯದರ್ಶಿಗಳವರಿಂದ ವಂದನಾರ್ಪಣೆಯಾದನಂತರ ಅಂದಿನ ಕಾರ್ಯಕಲಾಪ ಮುಕ್ತಾಯಗೊಂಡಿತು.

# ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ :: ಬೆಂಗಳೂರು-೧೮

## ತಿಳಿವಳಿಕೆಯ ಪತ್ರ

**ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರ ಮತ್ತು ಕಾರ್ಯಸಮಿತಿ ಸದಸ್ಯರ ಚುನಾವಣೆಗೆ ಸಂಬಂಧಪಟ್ಟ ೪೮ನೆಯ ಅಧಿವೇಶನವು ೧೯೬೪ನೆಯ ಅಕ್ಟೋಬರ್ ತಿಂಗಳು ೨೫ನೆಯ ತಾರೀಖು ಭಾನುವಾರ ಬೆಳಗ್ಗೆ ೮-೩೦ ಗಂಟೆಗೆ**

ಬೆಂಗಳೂರಿನಲ್ಲಿ ಶ್ರೀ ಕೃಷ್ಣರಾಜ ಪರಿಷನ್ಮಂದಿರದ ಸಭಾಂಗಣದಲ್ಲಿ ನಡೆಯುತ್ತದೆ.

ಸದಸ್ಯರೆಲ್ಲರೂ ಸಕಾಲಕ್ಕೆ ದಯಮಾಡಿಸಬೇಕಾಗಿ ಪ್ರಾರ್ಥನೆ.

ಬೆಂಗಳೂರು-೧೮
ತಾ|| ೧೦-೮-೧೯೬೪

**ಕೆ. ಎಂ. ಕೃಷ್ಣರಾವ್**
**ಎಸ್. ಶಂಕರಪ್ಪ**
ಗೌರವ ಕಾರ್ಯದರ್ಶಿಗಳು

### ಕಾರ್ಯಸೂಚಿ

೧. ಪರಿಷತ್ತಿನ ಅಧ್ಯಕ್ಷರ ಮತ್ತು ಕಾರ್ಯಸಮಿತಿ ಸದಸ್ಯರ ಆಯ್ಕೆ * (ಈ ಸಂಬಂಧವಾದ ನಿಯಮಾವಳಿಯನ್ನು ಇದರೊಂದಿಗೆ ಕೊಡಲಾಗಿದೆ.)

---

**ವಿ. ಸೂ :**

೧. ಪರಿಷತ್ತಿನ ನಿಬಂಧನೆ ೨೫ : ಪರಿಷತ್ತಿನ ಎಲ್ಲ ಆಯ್ಕೆಗಳ ಬಗ್ಗೆಯೂ ಅಭ್ಯರ್ಥಿಯಾಗುವ ಅಧಿಕಾರ ಆಯಾ ಆಯ್ಕೆಗಳು ನಡೆಯುವ ತಾರೀಖಿಗೆ ಅರುವತ್ತು ದಿನಗಳು ಮುಂಚೆ ಸದಸ್ಯರಾಗಿರುವವರಿಗೆ ಮಾತ್ರ ಇರತಕ್ಕದ್ದು. ಮತ್ತು ತಮ್ಮಿಂದ ಪರಿಷತ್ತಿಗೆ ಚಂದಾ ಹಣದ ಬಾಕಿ ಮೂರು ತಿಂಗಳಿಗಿಂತ ಹೆಚ್ಚಾಗಿದ್ದರೆ ಮತ ಕೊಡುವ ಮತ್ತು ಅಭ್ಯರ್ಥಿಯಾಗುವ ಅಧಿಕಾರವನ್ನು ಉಪಯೋಗಿಸಲು ಅಂಥ ಬಾಕಿದಾರರಿಗೆ ಅರ್ಹತೆ ಇರುವುದಿಲ್ಲ.

೨. ಪರಿಷತ್ತಿನ ಅಂಗಸಂಸ್ಥೆಗಳು ಮೇಲೆ ಕಂಡ ಅಧಿವೇಶನಕ್ಕೆ ಕಳುಹಿಸಬೇಕೆಂದಿರುವ ಪ್ರತಿನಿಧಿಗಳ ಹೆಸರು ಮೊದಲಾದ ವಿವರಗಳನ್ನು ೧೯೬೪ನೆಯ ಸೆಪ್ಟೆಂಬರ್ ೩೦ ನೆಯ ತಾರೀಖಿನೊಳಗಾಗಿ ಪರಿಷತ್ತಿಗೆ ಕಳುಹಿಸಬೇಕು.

೩. ಸದಸ್ಯರು ಈ ತಿಳಿವಳಿಕೆಯ ಪತ್ರವನ್ನು ತಮ್ಮ ಗುರುತಿಗಾಗಿ ಸಭೆಗೆ ಬರುವಾಗ ತಮ್ಮ ಸಂಗಡ ತರಬೇಕು.

## ಆಯ್ಕೆಯ ನಿಯಮಗಳು

ತಾ|| ೨೬-೭-೧೯೬೪ ರಂದು ಸೇರಿದ ಪರಿಷತ್ತಿನ ಕಾರ್ಯಸಮಿತಿಯ ನಿರ್ಣಯದಂತೆ * ಆಯ್ಕೆಯ ನಿಯಮಗಳು :

(೧) ಪರಿಷತ್ತಿನ ಸದಸ್ಯತ್ವದ ಚಂದಾ ಬಾಕಿಯನ್ನು ಮತ್ತು ಹೊಸ ಸದಸ್ಯತ್ವದ ಚಂದಾ ಹಣವನ್ನು ತಾ|| **೨೪-೮-೧೯೬೪** ನೆಯ **ಸೋಮವಾರ** ಸಂಜೆ ೫ ಘಂಟೆಯವರೆಗೆ ಮಾತ್ರ ಸ್ವೀಕರಿಸಲಾಗುವುದು.

(೨) ಮತದಾರರ ಪಟ್ಟಿಯನ್ನು ತಾ|| **೩೧-೮-೧೯೬೪** ಅಥವಾ ಈ ಆವಧಿಯ ಒಳಗೆ ಪ್ರಕಟಿಸಲಾಗುವುದು. †

(೩) ಅಧ್ಯಕ್ಷತೆಗೆ ಮತ್ತು ಕಾರ್ಯಸಮಿತಿಯ ಸದಸ್ಯತ್ವಕ್ಕೆ ಸ್ಪರ್ಧಿಸಬಯಸುವ ಉಮೇದುವಾರರು ತಮ್ಮ ಅಭ್ಯರ್ಥಿ ಪತ್ರವನ್ನು ತಾ|| **೧೦-೧೦-೧೯೬೪** ನೆಯ **ಶನಿವಾರ** ಸಂಜೆ **೫** ಘಂಟೆಯೊಳಗಾಗಿ ಪರಿಷತ್ತಿಗೆ ತಲುಪುವಂತೆ ಕಳುಹಿಸಬೇಕು. ಈ ಅಭ್ಯರ್ಥಿ ಪತ್ರವನ್ನು ತಾ|| **೧೨-೧೦-೧೯೬೪** ನೆಯ **ಸೋಮವಾರ** ಸಂಜೆ **೪** ಘಂಟೆಗೆ ಪರಿಶೀಲಿಸಿ, ಸಂಜೆ **೭-೩೦** ಘಂಟೆಗೆ ಉಮೇದುವಾರರ ಪಟ್ಟಿಯನ್ನು ಪ್ರಕಟಿಸಲಾಗುವುದು.

(೪) ಉಮೇದುವಾರರು ತಮ್ಮ ಉಮೇದುವಾರಿಕೆಯನ್ನು ತಾ|| **೧೫-೧೦-೬೪** ರಂದು ಅಥವಾ ಆ ಒಳಗಾಗಿ ಹಿಂದಕ್ಕೆ ತೆಗೆದುಕೊಳ್ಳಬಹುದು.

† ಈ ಪಟ್ಟಿಯನ್ನು ರೂ. ೫/=ಗಳ ಬೆಲೆಗೆ ಪರಿಷತ್ತಿನಲ್ಲಿ ಪಡೆಯಬಹುದು (ಕಾರ್ಯ ಸಮಿತಿಯ ತೀರ್ಮಾನದಂತೆ).

## ಕನ್ನಡ ಸಾಹಿತ್ಯ ಪರಿಷತ್ತಿನ ಚುನಾವಣೆಗೆ ಸಂಬಂಧಿಸಿದ ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಈಗಾಗಲೇ ಗೊತ್ತು ಮಾಡಿರುವ ಕಾರ್ಯಕ್ರಮದಂತೆ ದಿನಾಂಕ ೨೫-೧೦-೧೯೬೪ ರಂದು ನಡೆಯಲಿರುವ ಅಧ್ಯಕ್ಷರ ಮತ್ತು ಕಾರ್ಯಕಾರಿಸಮಿತಿ ಸದಸ್ಯರ ಚುನಾವಣೆಯ ಅಂಗವಾಗಿ ಮತದಾರರಪಟ್ಟಿಯನ್ನು ಪ್ರಕಟಿಸಲಾಗಿದೆ. ಮತ್ತು ಚುನಾವಣಾ ತಿಳಿವಳಿಕೆ ಪತ್ರವನ್ನು ಸದಸ್ಯರಿಗೆ ಅಂಚೆ ಮೂಲಕ ಕಳುಹಿಸಲಾಗಿದೆ. ಈ ಬಗ್ಗೆ ಸದಸ್ಯರಿಗೆ ತಿಳಿಯ ಪಡಿಸುವುದೇನೆಂದರೆ: ಪ್ರಕಟಿಸಿರುವ ಮತದಾರರ ಪಟ್ಟಿಯಲ್ಲಿ ತಮ್ಮ ಹೆಸರು ವಿಳಾಸಗಳ ಬಗ್ಗೆ ತಪ್ಪಾಗಿದ್ದಲ್ಲಿ ಕೂಡಲೇ ಪರಿಷತ್ತಿನ ಕಛೇರಿಗೆ ತಿಳಿಸಬೇಕು. ಅಲ್ಲದೆ ಯಾವುದೇ ಕಾರಣದಿಂದ, ಚುನಾವಣೆ ತಿಳಿವಳಿಕೆ ಪತ್ರ ತಲುಪದಿದ್ದಲ್ಲಿ ಅದನ್ನು ಪರಿಷತ್ತಿನಿಂದ ಮತ್ತೆ ಪಡೆಯಬೇಕು.

ಮೇಲೆ ಕಂಡ ಚುನಾವಣೆಯು **ತಾ|| ೨೫-೧೦-೧೯೬೪ ನೇ ಭಾನುವಾರ ಬೆಳಗ್ಗೆ ೮-೩೦ ರಿಂದ ಸಂಜೆ ೪-೩೦ ರ ವರೆಗೆ** ನಡೆಯುತ್ತದೆ.

**ಕೆ. ಎಂ. ಕೃಷ್ಣರಾವ್**
**ಎಸ್. ಶಂಕರಪ್ಪ**
ಗೌ|| ಕಾರ್ಯದರ್ಶಿಗಳು

# ಕನ್ನಡದ ಸುದ್ದಿಗಳು

### ಬೆಂಗಳೂರು

ಆಗಸ್ಟ್ ದಿ. ೨೩ ರಂದು ನಡೆದ ಕನ್ನಡ ಚಳುವಳಿಯ ಬಹಿರಂಗ ಸಭೆಯಲ್ಲಿ "ಕನ್ನಡ ನಾಡಿನಲ್ಲಿ ಬಂದು ನೆಲೆಸಿರುವ ಇತರ ಭಾಷೆಗಳವರು ಕನ್ನಡವನ್ನು ಕಲಿತುಕೊಳ್ಳಬೇಕು; ರಾಜ್ಯದಲ್ಲಿರುವ ಕೈಗಾರಿಕೆಗಳಲ್ಲಿ ಕನ್ನಡಿಗರಿಗೆ ಪ್ರಾತಿನಿಧ್ಯ ದೊರಕಬೇಕು, ಹೊರಗಿರುವ ಕನ್ನಡ ಭಾಗಗಳು ಕನ್ನಡ ನಾಡಿಗೆ ಸೇರಬೇಕು" ಇತ್ಯಾದಿಯಾಗಿ ಕೆಲವು ಭಾಷಣಕಾರರು ಹೇಳಿದರು. ಈ ಸಭೆಗೆ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಅಧ್ಯಕ್ಷತೆ ವಹಿಸಿದ್ದರು. ಇವರು "ರಾಜಧಾನಿಯಲ್ಲಿ ಕನ್ನಡಕ್ಕೆ ತಕ್ಕ ಸ್ಥಾನ ದೊರಕಬೇಕು" ಎಂದು ನುಡಿದರು. ಶ್ರೀ ಆರ್. ಸಂಜೀವಪ್ಪ, ಶ್ರೀ ವೆಂಕಟರಮಣ, ಶ್ರೀ ವಾಟಾಳ್ ನಾಗರಾಜು, ಶ್ರೀ ಗೋ. ಅ. ನಾರಾಯಣ, ಶ್ರೀ ರಾಮಸ್ವಾಮಿ ಮುಂತಾದವರು ಮಾತನಾಡಿದರು.

ಸೆ. ದಿನಾಂಕ ೧೩ ರಂದು ಸಂಜೆ ಬೆಂಗಳೂರು ನಗರದ ಅರಳೇಪೇಟೆಯಲ್ಲಿ ನಡೆದ ಬಿನ್ನಿ ಗಿರಣಿ ಕರ್ನಾಟಕ ಸಂಘದ ಉದ್ಘಾಟನೆಯನ್ನು ಶ್ರೀ ಅ. ನ. ಕೃಷ್ಣರಾಯರು ನೆರವೇರಿಸಿದರು. ಮೇಯರ್ ಶ್ರೀ ಜಿ. ನಾರಾಯಣ ಅವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಬಿ. ನಾರಾಯಣಸ್ವಾಮಿಯವರು ಸ್ವಾಗತ ಭಾಷಣ ಮಾಡಿದರು.

ಹೊಸದಾಗಿ ಓದು ಬರೆಹ ಕಲಿತವರ ಪ್ರಯೋಜನಾರ್ಥವಾಗಿ ಪ್ರಕಟಿಸಲಾಗುವ ಪುಸ್ತಕಗಳ ಸ್ಪರ್ಧೆಯಲ್ಲಿ ಕನ್ನಡದ ಮೂರು ಪುಸ್ತಕಗಳಿಗೆ ಬಹುಮಾನ ಕೊಡಲಾಗಿದೆ. ಶ್ರೀ ಎಂ. ಎಲ್. ನರಸಿಂಹಯ್ಯಂಗಾರ್ ಅವರ 'ವನಮಾಲ', ಡಾ|| ಅನುಪಮ ನಿರಂಜನರ 'ಕೆಂಪಮ್ಮನ ಮಗು' ಮತ್ತು ಶ್ರೀ ಎಸ್. ಆರ್. ನಾರಾಯಣರಾವ್ ಅವರ 'ಸೊಳ್ಳೆ ಹರಡುವ ರೋಗಗಳು' ಇವು ಬಹುಮಾನ ಪಡೆದ ಪುಸ್ತಕಗಳು. ಈ ಕೃತಿಗಳ ಲೇಖಕರಿಗೆ ತಲಾ ೫೦೦ ರೂಪಾಯಿಗಳ ಬಹುಮಾನ ಕೊಡಲಾಗುವುದು.

ಕನ್ನಡ ಸಾಹಿತ್ಯ ಪರಿಷದಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ದಿ. ೯-೯-೬೪ರಂದು ಬೆಂಗಳೂರು ಧನಲಕ್ಷ್ಮಿ ಶ್ರೀಭರ್ವ, ಜಗಜೀವನರಾಂ ವಿದ್ಯಾರ್ಥಿ ಮಂದಿರಂ, ರಾಂನಗರ ಬಾಲಿಕಾ ಪಾಠಶಾಲೆ, ರಾಜಾಜಿನಗರ ಗಣಪತಿ ಮಂಡಲಿಗಳಲ್ಲಿ "ಗಣಪತಿ ಪೂಜಾರಹಸ್ಯ ಹಾಗೂ ಮಹತ್ವ" ಗಳನ್ನು ಕುರಿತು ಭಾಷಣ ಮಾಡಿದರು.

ದಿ. ೧೩-೯-೬೪ ರಂದು ಶ್ರೀ ಸಿದ್ಧಗಂಗಾ ಮಠಾಧೀಶರಾದ ಶ್ರೀ ಶಿವಕುಮಾರ ಸ್ವಾಮಿಗಳು ಪಂಡಿತ ಸುಧಾಕರಜಿ ಬರೆದ ವಾಲ್ಮೀಕಿ ಕಂಡ ಶ್ರೀರಾಮ ಎಂಬ ಪುಸ್ತಕವನ್ನು ಪರಿಷನ್ಮಂದಿರದಲ್ಲಿ ಉದ್ಘಾಟಿಸಿದರು. ಮೇಯರ್ ಶ್ರೀ ಜಿ. ನಾರಾಯಣ, ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ ಮೊದಲಾದವರು ರಾಮಾಯಣದ ಮಹತ್ವ ಕುರಿತು ಭಾಷಣ ಮಾಡಿದರು. ಶ್ರೀ ಸ್ವಾಮಿಜಿ ಅವರು ರಾಮಾಯಣವು ಧರ್ಮನೀತಿಗಳ ಭಂಡಾರ, ಮಾನವರನ್ನು ಉದ್ಧರಿಸುವ ಕೃತಿ ಎಂದು ನಿರೂಪಿಸಿದರು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ರಾಮಾಯಣದ ವಾನರರು ಕನ್ನಡಿಗರು, ಕಪಿಧ್ವಜರು, ಕಪಿಗಳಲ್ಲ ಎಂದು ನಿರೂಪಿಸಿದರು.

### ಕಲಾವಿದರಿಗೆ ಪ್ರಶಸ್ತಿ

ಕೇಂದ್ರ ಸರ್ಕಾರದ ಸಂಗೀತ ನಾಟಕ ಅಕಾಡೆಮಿಯವರು ಪ್ರಶಸ್ತಿ ಇತ್ತು, ಬಹುಮಾನಿಸಿರುವ ಕಲಾವಿದರಲ್ಲಿ ಇಬ್ಬರು ಕನ್ನಡಿಗರಿದ್ದಾರೆ. ಒಬ್ಬರು ಮೈಸೂರಿನ ಶ್ರೀಮತಿ ಕೆ. ವೆಂಕಟಲಕ್ಷ್ಮಮ್ಮ, ಮತ್ತೊಬ್ಬರು ದಕ್ಷಿಣ ಕನ್ನಡದ ಶ್ರೀ ಹಾರಾಡಿ ರಾಮ. ಶ್ರೀಮತಿಯವರು ಭರತನಾಟ್ಯದಲ್ಲಿ ಶ್ರೀಯುತರು ಯಕ್ಷಗಾನದಲ್ಲಿ ಕೀರ್ತಿ ಗಳಿಸಿದ್ದಾರೆ.

### ಮೈಸೂರು

ಆ. ದಿನಾಂಕ ೨೦ ರಂದು ಮಹಾರಾಣಿ ಕಾಲೇಜಿನ ಕರ್ನಾಟಕ ಸಂಘದ ಆರಂಭ ಭಾಷಣ ಮಾಡುತ್ತ, ವಿಶ್ರಾಂತ ಕನ್ನಡ ಪ್ರಾಧ್ಯಾಪಕ ಶ್ರೀ ತೀ. ನಂ. ಶ್ರೀಕಂಠಯ್ಯನವರು "ಕನ್ನಡಕ್ಕೆ ಇಂದಿರುವ ಸ್ಥಾನವನ್ನು ಖಚಿತಪಡಿಸಿಕೊಳ್ಳದಿದ್ದರೆ ಇರುವುದೂ ಹೋದೀತು" ಎಂದು ಹೇಳಿದರು.

### ದೇವನಹಳ್ಳಿ

ಪ್ರಸಿದ್ಧ ಸಾಹಿತಿ ಶ್ರೀ ಅ. ನ. ಕೃಷ್ಣರಾಯರನ್ನು ಆ. ೩೦ ರಂದು ಇಲ್ಲಿನ ನಾಗರಿಕರು ಸನ್ಮಾನಿಸಿದರು. ಈ ಸಮಾರಂಭಕ್ಕೆ ಬೆಂಗಳೂರಿನ ಮೇಯರ್ ಶ್ರೀ ಜಿ. ನಾರಾಯಣ ಅವರು

ಅಧ್ಯಕ್ಷತೆ ವಹಿಸಿದ್ದರು. ಚಿಕ್ಕಬಳ್ಳಾಪುರದ ಪುರಸಭಾಧ್ಯಕ್ಷರೂ, ವಿಧಾನಸಭಾ ಸದಸ್ಯರೂ ಆದ ಶ್ರೀ ಸಿ. ವಿ. ವೆಂಕಟರಾಯಪ್ಪ ನವರು ಮುಖ್ಯ ಅತಿಥಿಗಳಾಗಿ ಬಂದಿದ್ದರು. ಶ್ರೀ ಕೃಷ್ಣ ಮೂರ್ತಿಯವರು ಸ್ವಾಗತಭಾಷಣ ಮಾಡಿದರು. ಡಾ|| ಪಾಣಿಯವರು ಶ್ರೀ ಅ. ನ. ಕೃ. ಅವರಿಗೆ ಸನ್ಮಾನ ಪತ್ರ ವನ್ನೂ ನಿಧಿಯನ್ನೂ ಅರ್ಪಿಸಿದರು. ಈ ಸಂದರ್ಭದಲ್ಲಿ ಶ್ರೀ ನಟರಾಜನ್, ಶ್ರೀ ರಾಮಮೂರ್ತಿ, ಶ್ರೀ ನಾಡಿಗೇರ್, ಶ್ರೀ ಸಿ. ವಿ. ವೆಂಕಟರಾಯಪ್ಪ ಮುಂತಾದವರು ಭಾಷಣ ಮಾಡಿದರು.

### ಶಿರಾಳಕೊಪ್ಪ

ದಿ. ೭-೯-೬೪ರಂದು ಶಿರಾಳಕೊಪ್ಪದಲ್ಲಿ ವೇದಾಂತಾ ಚಾರ್ಯ ಶ್ರೀ ಶಿವಕುಮಾರ ಸ್ವಾಮಿಗಳ ಸಮ್ಮುಖದಲ್ಲಿ ಬಸವ ಪುರಾಣ ಪ್ರವಚನ ಮುಕ್ತಾಯ ಸಮಾರಂಭ ನಡೆಯಿತು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು "ಬಸವ ಪುರಾಣಗಳು" ಎಂಬ ಬಗೆಗೆ ಭಾಷಣ ಮಾಡಿದರು.

### ಶಿವಮೊಗ್ಗ

ದಿ. ೮-೯-೬೪ರಂದು ಶಿವಮೊಗ್ಗಾ ಜಿಲ್ಲಾದಲ್ಲಿರುವ ಅಲ್ಲಮಪ್ರಭುವಿನ ಬೆಳ್ಳಿಗ್ರಾಮ, ಅಕ್ಕಮಹಾದೇವಿಯ ಉಡುತಡಿಗಳನ್ನು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಸಂದರ್ಶಿಸಿದರು.

### ಬಾಗೆಪಲ್ಲಿ

ದಿ. ೨೫-೮-೬೪ರಂದು ಬಾಗೆಪಲ್ಲಿ ಪ್ರೌಢಶಾಲೆಯಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು 'ವಿದ್ಯಾರ್ಥಿ ಧರ್ಮ' ಕುರಿತು ಭಾಷಣ ಮಾಡಿದರು. ಶ್ರೀ ಎಂ. ರಾಮಮೂರ್ತಿ ಸಭಾಧ್ಯಕ್ಷರಾಗಿದ್ದರು.

---

## ಪರಿಷತ್ತಿನಲ್ಲಿ ಕೀರ್ತನ ಕಾಲಕ್ಷೇಪ



ದಿನಾಂಕ ೧-೯-೬೪ರಂದು ಏರ್ಪಾಟಾಗಿದ್ದ 'ಶ್ರೀ ಕನಕದಾಸ' ಎಂಬ ಕೀರ್ತನ ಕಾಲಕ್ಷೇಪ ಸಮಯದಲ್ಲಿ ಆಹ್ವಾನಿತರಾಗಿದ್ದ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು ಮಾತನಾಡುತ್ತಿರುವಾಗ ತೆಗೆದ ಚಿತ್ರ.

# ಸಂಪಾದಕೀಯ

## ಕನ್ನಡತನಕ್ಕೆ ಪ್ರೋತ್ಸಾಹ

ಕನ್ನಡ ನುಡಿಯ ದೃಷ್ಟಿಯಿಂದ ಕನ್ನಡತನಕ್ಕೆ ಸಲ್ಲುತ್ತಿರುವ "ಮನ್ನಣೆ" ಏನೇನೂ ಸಾಲದು. ಆಹಾರ ಧಾನ್ಯಗಳ ಧಾರಣೆಗೆ, ರಸ್ತೆ ಸಂಚಾರ ಸೌಲಭ್ಯಕ್ಕೆ, ಸಾರ್ವಜನಿಕರ ಪ್ರಾಣರಕ್ಷಣೆಗೆ ಬೇರೆ ಬೇರೆ ವೇದಿಕೆಗಳಿವೆ. ಅಲ್ಲದೆ, ಈ "ವೇದನೆ" ಸರ್ವರಿಗೂ ವೇದನೆಯೇ! ಆದರೆ, ಕನ್ನಡಿಗರಿಗೆ ಸಲ್ಲುತ್ತಿರುವ ಮನ್ನಣೆ ಗೌರವಗಳಿಗೆ ಕನ್ನಡಿಗರೇ ಹೊಣೆ. ಬೇರೆಯವರಿಗೆ ಈ "ವೇದನೆ" ಅರ್ಥವಾಗುವುದಿಲ್ಲ; ಅರ್ಥ ವಾಗಬೇಕಾದ್ದೂ ಇಲ್ಲ. ಎಂದವೇಲೆ, ಇತ್ತೀಚೆಗೆ, ಎಂದರೆ ಒಂದೆರಡು ವರ್ಷಗಳಿಂದೀಚೆಗೆ "ಕನ್ನಡ ಚಳುವಳಿ" ನಡೆದು "ಕನ್ನಡದ ಗಡಿ" ಪ್ರಶ್ನೆಯಷ್ಟೇ ಚುರುಕಾಗಿ "ಕನ್ನಡತನ"ದ ಪ್ರಶ್ನೆಯೂ ಎದ್ದು ನಿಂತಿದೆ.

ಇದರ ಪರಿಣಾಮವಾಗಿ "ಕನ್ನಡ ಚಲನಚಿತ್ರ"ಗಳೆಂದರೆ ಮೂಸಿಯೂ ನೋಡದಿದ್ದ ಚಿತ್ರಮಂದಿರಗಳಲ್ಲಿ ಕನ್ನಡ ಚಿತ್ರಗಳು ಕಾಣುತ್ತಿವೆ. ಕನ್ನಡ ಸಾಹಿತ್ಯವೊಂದುಂಟೇ ಎಂದು ಶಂಕಿಸುತ್ತಿದ್ದ ಸರ್ಕಾರಗಳು ಕನ್ನಡ ಸಾಹಿತಿಗಳಿಗೆ, ಸಂಗೀತಗಾರರಿಗೆ, ನೃತ್ಯಕಲಾವಿಶಾರದರಿಗೆ ಮನ್ನಣೆ ನೀಡು ತ್ತಿದ್ದಾರೆ. ಈ ಅಂಶಗಳಲ್ಲಿ ಸರ್ಕಾರದವರು ಸಹಕರಿಸಿ ನಡೆಯುತ್ತಿರುವುದಕ್ಕಾಗಿ ಕನ್ನಡಿಗರು ಚಿರಋಣಿಗಳಾಗಿರ ಬೇಕಾಗಿದೆ. ಇದೇ ಮಾರ್ಗದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಕನ್ನಡ ಮಹಾಜನರು ಮುಂದುವರಿದು "ಕನ್ನಡ ತನ"ದ ಮಹತ್ವವನ್ನು ಲೋಕಕ್ಕೆ ಪ್ರಕಟಿಸುತ್ತಿರುವುದು ಮೆಚ್ಚತಕ್ಕ ವಿಚಾರವೇ ಆಗಿದೆ. ಉದಾಹರಣೆಗೆ, ಮೈಸೂರಿನ ಆಸ್ಥಾನವಿದುಷಿ ಎಂದು ಪ್ರಸಿದ್ಧರಾಗಿರುವ ಶ್ರೀಮತಿ ಕೆ. ವೆಂಕಟಲಕ್ಷ್ಮಮ್ಮನವರಿಗೆ ಭರತನಾಟ್ಯದಲ್ಲಿ ಸಂಗೀತ ನಾಟಕ ಅಕೆಡೆಮಿಯ ಪ್ರಶಸ್ತಿ ದೊರೆತಿದೆ. ಅದರಂತೆಯೇ ದಕ್ಷಿಣ ಕನ್ನಡದ ಹೆಸರಾಂತ ಯಕ್ಷಗಾನ ಕಲಾವಿದರಾದ ಶ್ರೀ ಹಾರಾಡಿ ರಾಮು ಅವರಿಗೆ ಯಕ್ಷಗಾನ ಕಲಾ ಪ್ರಶಸ್ತಿ ಬಂದಿದೆ. ಕನ್ನಡ ಮಹಾಜನರೂ ಈ ಅಂಶವನ್ನು ಗಮನಿಸಿ ಪ್ರಖ್ಯಾತ ಕನ್ನಡ ಸಾಹಿತಿಗಳಿಗೆ ಗೌರವವನ್ನು ಸಲ್ಲಿಸುತ್ತಿದ್ದಾರೆ. ಕನ್ನಡದ ಶ್ರೇಷ್ಠ ಕಾದಂಬರಿಕಾರರಾದ ಶ್ರೀ ಅ. ನ. ಕೃಷ್ಣರಾಯರಿಗೆ ಇಂದು ನಾಡಿನಲ್ಲಿ ಸಲ್ಲುತ್ತಿರುವ ಸತ್ಕಾರ ಸಮಾರಂಭಗಳು ಇದಕ್ಕೆ ನಿದರ್ಶನವಾಗಿವೆ. ಅದರಂತೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿಯೂ ಕನ್ನಡ ಸರಸ್ವತಿಗೆ ಮನ್ನಣೆಯ ಸಮಾ ರಂಭಗಳು ಆಗಿಂದಾಗ್ಗೆ ನಡೆಯುತ್ತಲೇ ಇವೆ. ಇತ್ತೀಚೆಗೆ ಕರ್ಣಾಟಕ ಯಕ್ಷಗಾನ ಕಲಾ ಮಿತ್ರಮಂಡಲಿಯ ವ್ಯವ ಸ್ಥಾಪಕರಾದ ಶ್ರೀ ನೀಲಕಂಠರಾಯರಿಗೂ, ಕೀರ್ತನಕೇಸರಿ ಶ್ರೀ ಭದ್ರಗಿರಿ ಕೇಶವದಾಸರಿಗೂ ಪೇಜಾವರ ಮಠಾಧೀಶ್ವರ ರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಸಮ್ಮುಖ ದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಸಲ್ಲಿಸಿದ ಗೌರವವು ಇಂತಹ ಕನ್ನಡ ಸಾರಸ್ವತ ಸೌಭಾಗ್ಯಕ್ಕೆ ಮಾರ್ಗದರ್ಶನದಂತಿದೆ.

ಇಷ್ಟಾದರೂ ಕನ್ನಡ ಜನತೆ ಎಚ್ಚೆತ್ತಿಲ್ಲ. ಕನ್ನಡ ಕಲಾ ವಿದರನ್ನು ಗೌರವಿಸಿ ಸುಮ್ಮನೆ ಕೂತರೆ "ಕನ್ನಡತನ" ಉಳಿಸಿ ದಂತಾಗಿಲ್ಲ. ಮನೆಯ ಒಳಗೆ, ಹೊರಗೆ, ಮಾತಿನಲ್ಲಿ, ವ್ಯವಹಾರದಲ್ಲಿ, "ಏನೇ ಬರಲಿ ಕನ್ನಡವಿರಲಿ" ಎಂಬ ಮಹೋನ್ನತ ಧ್ಯೇಯವನ್ನು ಸಾಧಿಸಬೇಕು. ನಮ್ಮ ನೆರೆ ಹೊರೆಯ ರಾಜ್ಯಗಳನ್ನು ನೋಡಿಯಾದರೂ ಕನ್ನಡಿಗರು ಎಚ್ಚೆತ್ತುಕೊಳ್ಳಬೇಕು. ತಮಿಳು, ಮಲೆಯಾಳ, ತೆಲುಗು, ಮರಾಠಿ—ಈ ಭಾಷೆಗಳು ಆಯಾ ರಾಜ್ಯಗಳಲ್ಲಿ ಹೇಗೆ ಬೆಳೆದು, ಜನಜೀವನದಲ್ಲಿ ಮಿಳಿತವಾಗಿ ರಕ್ತಗತವಾಗಿ, ನಿಂತಿವೆಯೆಂಬು ದನ್ನು ಅರಿಯಬೇಕು. ಕನ್ನಡದ ಕೀರ್ತಿಪತಾಕೆಯನ್ನು ಎಡೆ ತಡೆಯಿಲ್ಲದೆ ಮೆರೆಯಿಸುವ ದಿಟ್ಟತನ ಪ್ರತಾಪ, ಶಕ್ತಿ, ಸಾಹಸ, ಇವುಗಳು ಕನ್ನಡಿಗರಲ್ಲಿ ಅಚ್ಚಳಿಯದಂತೆ ಬೆಳೆಯುವಂತಾಗ ಬೇಕು ಮತ್ತು ಬೆಳಗುವಂತಾಗಬೇಕು.

## ನಾಡಹಬ್ಬ

ದಸರಾ ಎಂಬ ಪದ ಭರತಖಂಡದಲ್ಲೆಲ್ಲ ಹಬ್ಬಿದೆ. ಹತ್ತು ರಾತ್ರಿ ನಡೆಯತಕ್ಕ ಈ ಹಬ್ಬ (ವಿಜಯದಶಮಿ ಸೇರಿ) ಪಾಂಡವರು "ಶಮೀ" ವೃಕ್ಷದಲ್ಲಿ ತಮ್ಮ ಶಸ್ತ್ರಾಸ್ತ್ರಗಳನ್ನು ಬಚ್ಚಿಟ್ಟು ಅಜ್ಞಾತವಾಸ ಪೂರೈಸಿದ ಮೇಲೆ ಮತ್ತೆ ಆ ಶಸ್ತ್ರಾಸ್ತ್ರಗಳನ್ನು ಪಡೆದ ಮಹಾಭಾರತದ ಪವಿತ್ರ ಸನ್ನಿವೇಶ ವನ್ನು ನೆನಪಿಗೆ ತರುತ್ತದೆ. ಈ ಹಬ್ಬಕ್ಕೆ "ನವರಾತ್ರಿ" ಎಂಬುದೂ ಒಂದು ನಾಮಧೇಯ. ಮೈಸೂರಿನವರಿಗೆ ಇದು "ಜಂಬೂ ಸವಾರಿ"ಯನ್ನು ನೆನಪಿಗೆ ತರುತ್ತದೆ. ಅಲಂಕರಿಸಿದ ಆನೆಯ ಮೇಲೆ ಸುವರ್ಣಸಜ್ಜಿತ ಅಂಬಾರಿಯಲ್ಲಿ ಮಂಡಿಸಿ ಬನ್ನಿಮಂಟಪಕ್ಕೆ (ಬನ್ನಿ ಎಂಬುದು ಶಮೀ ವೃಕ್ಷಕ್ಕೆ ಮತ್ತೊಂದು ಹೆಸರು) ವಿಜಯ ಪತಾಕೆಯನ್ನು ಹಿಡಿದು

ಮೈಸೂರು ಶ್ರೀಮನ್ಮಹಾರಾಜರು ವಿಜಯದಶಮಿ ದಿನ ಮೆರವಣಿಗೆಯಲ್ಲಿ ಪ್ರೌಢವುಟ್ಟು ಮೈಸೂರು ನಗರದ ರಾಜ ಮಾರ್ಗಗಳಲ್ಲಿ ನಡೆತರುವ ನೋಟ ಪರಮ ಪವಿತ್ರವೆಂದು ಮೈಸೂರು ರಾಜ್ಯದ ಜನತೆಗೆ ಗೊತ್ತಿದೆ. ಈ ಪವಿತ್ರ ನೋಟ ಇನ್ನಿಲ್ಲವೇನೋ ಎಂಬ ಶಂಕೆ ಮೈಸೂರಿನ ಜನತೆಯನ್ನು ಕಾಡುತ್ತಿತ್ತು. ಏಕೆಂದರೆ, ಯದುಸಂತಾನಶ್ರೀಯ ಮಹೋನ್ನತ ಕೀರ್ತಿಸಂಪನ್ನರೆನಿಸಿದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರು ಮದರಾಸಿನ ರಾಜ್ಯಪಾಲರಾದಮೇಲೆ ಮೈಸೂರು ರಾಜ್ಯದ ಪವಿತ್ರ ನಾಡಹಬ್ಬವಾದ ದಸರಾ ಮಹೋತ್ಸವಕ್ಕೆ ಅವಕಾಶವಿಲ್ಲವೆಂದು ಜನರು ಹೆದರಿದ್ದರು. ಮೈಸೂರು ರಾಜ್ಯಪಾಲರಾದ ಶ್ರೀ ಶ್ರೀನಾಗೇಶ್ ರವರೂ, ಅವರ ಮಂತ್ರಿಮಂಡಲವೂ ಸಹಕರಿಸಿ, ಈ ಮಹೋತ್ಸವವನ್ನು ನಾಡಹಬ್ಬವನ್ನು ಯಥಾವಿಧಿಯಾಗಿ ನೆರವೇರಿಸುವಂತೆ ಕೇಂದ್ರ ಸರ್ಕಾರದ ಒಡಂಬಡಿಕೆಯನ್ನು ಪಡೆದಿರುವುದಕ್ಕಾಗಿ ಮೈಸೂರು ರಾಜ್ಯದ ಜನತೆ ಅವರನ್ನು ಚಿರಕಾಲ ಸ್ಮರಿಸುತ್ತದೆ. ಅಕ್ಟೋಬರ್ ೬ ರಿಂದ ೧೬ ರ ವರೆಗೆ ಮೈಸೂರು ನಗರವು ದೇಶ ವಿದೇಶಗಳ ಕಣ್ಮಣಿಯಾಗಿ ಸಂಭ್ರಮದಿಂದ ಮೆರೆಯುವುದನ್ನು ನಾವು ಮತ್ತೊಮ್ಮೆ ನೋಡುವಂತಾಯಿತು. ಇದೀಗ ದೂರದೃಷ್ಟಿ. ಇದೇ ಸಂಪ್ರದಾಯ ಸೃಷ್ಟಿ. ಚಿರಮಭಿವರ್ಧತಾಂ ಯದುಸಂತಾನಶ್ರೀಃ.

---



## ಪ್ರಶಸ್ತಿ ಪತ್ರ ಸಮರ್ಪಣೆ



ದಿನಾಂಕ ೧-೯-೬೪ ರಂದು ಕೀರ್ತನ ಕಾಲಕ್ಷೇಪ ನಡೆಸಿದ ಕೀರ್ತನಕೇಸರಿ ಭದ್ರಗಿರಿ ಕೇಶವದಾಸರಿಗೆ ಪರಿಷತ್ತಿನ ಪರವಾಗಿ ಪ್ರಶಸ್ತಿ ಪತ್ರವನ್ನು ಶ್ರೀ ಕೆ. ಗೋಪಾಲಕೃಷ್ಣರಾಯರು ಅರ್ಪಿಸುತ್ತಿರುವ ಚಿತ್ರ.

ಸಂಪಾದಕರು: ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು—೧೮.

# ಸಾದರ ಸ್ವೀಕಾರ

ಶ್ರೀ ಜಗದ್ಗುರು ಶ್ರೀಶೈಲ ಪಂಡಿತಾರಾಧ್ಯ ಸುಪ್ರಭಾತ ನಕ್ಷತ್ರಮಾಲಾ: ಲೇಖಕರು: ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ; ಪ್ರಕಾಶಕರು: ಶ್ರೀಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ, ಹ. ಬಾ. ರಸ್ತೆ ಬೆಂಗಳೂರು-೪; ಸೈಜು ೧/೮ ಕ್ರೌನ್ ; ಪುಟ ೬;

ಶ್ರೀ ಚೇಳ್ಳಿಗುರಿಕೀ ಕ್ಷೇತ್ರಾಧಿವಾಸ ಶ್ರೀ ಎರ್ರಿತಾತ ಸುಪ್ರಭಾತಂ: ಲೇಖಕರು: ಅಮರವಾಣಿ; ಪ್ರಕಾಶಕರು: ಶ್ರೀ ಎರ್ರಿಸ್ವಾಮಿ ಜೀವಸಮಾಧಿ ಮಠದ ಟ್ರಸ್ಟ್ ಕಮಿಟಿ, ಚೆಳ್ಳಿಗುರಿಕೀ. ಪುಟ ೬; ಬೆಲೆ ಉಚಿತ.

ಭಾರತ ಗೌರವ: ಲೇಖಕರು: ಭಾರತ ಸರ್ಕಾರ ಸಮಾಚಾರ ಮತ್ತು ಪ್ರಸಾರ ಸಚಿವಾಲಯ, ಪ್ರಕಾಶಕರು: ಕೃಷ್ಣ ಪ್ರಿಂಟಿಂಗ್ ವರ್ಕ್ಸ್, ಕರೋಲ್ ಬಾಗ್, ಹೊಸದೆಲ್ಲಿ, ಸೈಜು ೧/೮ ಕ್ರೌನ್; ಬೆಲೆ ರೂ. ೨-೨೫ ಪೈ.

ವಾಲ್ಡನ್ (ಹೆನ್ರಿ ಡೇವಿಡ್ ಥೋರೋ): ಲೇಖಕರು: ದೇವುಡು ನರಸಿಂಹಶಾಸ್ತ್ರಿಗಳ ಅನುವಾದ; ಪ್ರಕಾಶಕರು: ಶಾರದ ಪ್ರಕಟನಾಲಯ ಅರಳೇಪೇಟೆ, ಬೆಂಗಳೂರು-೨; ಸೈಜು ೧/೮ ಕ್ರೌನ್; ಬೆಲೆ ೬ ರೂ.

ಆಂಧ್ರ ಕಥಾ ಮಂಜೂಷ: ಅನುವಾದಕರು: ಕೊ. ಚನ್ನಬಸಪ್ಪ; ಪ್ರಕಾಶಕರು: ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ ಲಿ॥, ಬೆಂಗಳೂರು (ಬೆಂಗಳೂರು ಪ್ರೆಸ್); ಸೈಜು ೧/೮ ಕ್ರೌನ್; ಪುಟ ೩೬೦; ಬೆಲೆ ರೂ. ೪-೫೦ ಪೈ.

ರಸದುಂಬಿ: ಲೇಖಕರು: ಅಪ್ಪಾಸಾಹೇಬ ಸವರಜೋಶಿ, ಪ್ರಕಾಶಕರು: 'ಸುಶೀಲಾ' ಪ್ರಕಾಶನ, ಗೆಳೆಯರ ಬಳಗ, ಚಿಕ್ಕೋಡಿ, ಸೈಜು ೧/೮ ಕ್ರೌನ್; ಪುಟ xiv + ೨೦ + ೧೨+೨೬+೮-೬೪; ಬೆಲೆ ೧ ರೂ.

ವಿಖ್ಯಾತ ಆಂಗ್ಲ ಸಾಹಿತಿಗಳು: ಲೇಖಕರು: ಶ್ರೀ ಎನ್. ಎಸ್. ಗದಗಕರ; ಸಂಪಾದಕರು: ಬರ್ಲಿ ಬಿಂದುಮಾಧವ; ಪ್ರಕಾಶಕರು: 'ಮಿಂಚಿನ ಬಳ್ಳಿ' ಕಾರ್ಯಾಲಯ, ಧಾರವಾಡ (೧೯೬೪). ಸೈಜು ೧/೮ ಕ್ರೌನ್; ಪುಟ ೯+೯೫; ಬೆಲೆ ರೂ. ೧-೨೫ಪೈ.

ಶ್ರೀ ಬಸವಣ್ಣನವರ ವಚನ ಸಂಗ್ರಹ: ಸಂಪಾದಕ: ಶ್ರೀ ಸ. ಸ. ಮಾಳವಾಡ; ಪ್ರಕಾಶಕರು: ಪ್ರತಿಭಾ ಗ್ರಂಥಮಾಲೆ, ಧಾರವಾಡ (೧೯೬೪); ಸೈಜು ೧/೮ ಕ್ರೌನ್; ಪುಟ xxviii+೨೮೫; ಬೆಲೆ ೩ ರೂ.

ಐದು ದೀಪದ ಕಂಬ (ಕವನ ಸಂಕಲನ); ಲೇಖಕರು: ಶ್ರೀ ಹ. ವೆಂ. ನಾಗರಾಜಾರಾವ್; ಪ್ರಕಾಶಕರು: ಅಖಿಲ ಕರ್ನಾಟಕ ಪುರೋಗಾಮಿ ಸಾಹಿತ್ಯ ಸಂಘ, ಮಲ್ಲೇಶ್ವರ, ಬೆಂಗಳೂರು-೩; ಸೈಜು ೧/೮ ಕ್ರೌನ್; ಪುಟ ೪೮; ಬೆಲೆ ರೂ. ೧.

ಕಾಮಾಕ್ಷಿಯ ಕಾಣಿಕೆ (ಕಥಾಸಂಕಲನ); ಲೇಖಕಿ: ದಿವಂಗತ ಆರ್. ಕಾಮಾಕ್ಷಮ್ಮ; ಸಂಗ್ರಹಕಾರರು: ಶ್ರೀ ಡಿ. ಆರ್. ರಾಮಯ್ಯ; ಪ್ರಕಾಶಕರು: ರಂಗನಿಲಯ ಸಾಹಿತ್ಯಪೀಠ, ಗೋವಿಂದಪ್ಪ ರಸ್ತೆ, ಬಸವನಗುಡಿ, ಬೆಂಗಳೂರು-೪; ಸೈಜು ೧/೮ ಕ್ರೌನ್; ಪುಟ iv + ೫೨; ಬೆಲೆ ೭೫ ಪೈ.

**Bulletin of the Deccan College Research-Institute** vol-23 (1962-63) M. H. Patwardhan, Sangam Press, Poona-2- Published by S. M. Katu for the Deccan College, Yeravada Poona-6. page 107, Price Rs. 20.

ವಾಲ್ಮೀಕಿಕಂಡ ಶ್ರೀರಾಮ (ವೇದಾಂತ ಗ್ರಂಥ) ೧೯೬೪; ಲೇಖಕರು: ಶ್ರೀ ಪಂಡಿತ ಸುಧಾಕರಜೀ: ಪ್ರಕಾಶಕರು: ಕೆ. ವಿ. ಶಂಕರನಾರಾಯಣ, ನ್ಯೂ ಮೀನಾಕ್ಷಿ ಭವನ, ಸೇತೂರಾವ್ ಬೀದಿ, ಸಿಟಿ ಮಾರ್ಕೆಟ್, ಬೆಂಗಳೂರು-೨; ಪುಟ xvi+೬೨; ರೂ. ೧-೨೫ಪೈ.

ಗುರುರಾಜ ಚರಿತೆ (ಜೀವನ ಚರಿತ್ರೆ): ಲೇಖಕಿ: ಶ್ರೀಮತಿ ಕೆ. ಜಿ. ಸುಶೀಲಮ್ಮ; ಪ್ರಕಾಶಕರು: ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ, ಕೃಷ್ಣಮೂರ್ತಿಪುರಂ, ಮೈಸೂರು; ೧೯೬೪, ಸೈಜು ೧/೮ ಕ್ರೌನ್. ಪುಟ xii + ೯೬; ಬೆಲೆ ರೂ. ೧-೫೦ ಪೈ.

ಶ್ರೀ ಮದನಾದಿ ಚರಕುಲ ಚಕ್ರವರ್ತಿಯತಿತತಿ ಸಾರ್ವಭೌಮ ಶ್ರೀ ಎಡೆಯೂರ ಶ್ರೀ ಸಿದ್ಧಲಿಂಗ ಶಿವಯೋಗಿಗಳ ಪುಣ್ಯನಾಮಾವಳಿಯು (೧೯೬೪); ಲೇಖಕರು: ಶ್ರೀ ಮಹಾರುದ್ರಪ್ಪ ಮಹಾಲಿಂಗಪ್ಪ ಮಿರ್ಜಿ; ಪ್ರಕಾಶಕರು: ಗುರುಸಿದ್ದಪ್ಪ ಮಹಾಲಿಂಗಪ್ಪ ಮಿರ್ಜಿ, ಬಿ. ಎ., ಎಲ್ಎಲ್.ಬಿ. ಅಡ್ವೋಕೇಟ್, ಹುಬ್ಬಳ್ಳಿ, ವಿರೂಪಾಕ್ಷಪ್ಪ, ಮಹಾರುದ್ರಪ್ಪ ಮಿರ್ಜಿ, ಬಿ.ಎ. ದಾಜೀಬಾನ ಪೇಟೆ, ಹುಬ್ಬಳ್ಳಿ; ಪುಟ ೨೦.

ಮಧುರಚೆನ್ನ ಸಂಸ್ಮರಣೆ ೧೯೬೪ (ಕನ್ನಡ ಸಾಹಿತ್ಯಕೂಟ, ಮುಂಬಯಿ); ಪ್ರಕಾಶಕರು: ಶ್ರೀ ಕೆ. ಎಚ್. ಕುಲಕರ್ಣಿ, ವಾಮನ ಕೇಣೀಹೌಸ್, ದೇವನಾರ, ಮುಂಬೈ-೩೧; ಪುಟ ೧೪; ಬೆಲೆ ೨೫ ಪೈ.

## ಯಕ್ಷಗಾನ ಪ್ರದರ್ಶನ



ದಿನಾಂಕ ೨೭-೮-೬೪ ರಂದು ಪರಿಷತ್ತಿನಲ್ಲಿ ಏರ್ಪಾಟಾಗಿದ್ದ ಯಕ್ಷಗಾನ ಪ್ರದರ್ಶನದ ಸಂದರ್ಭದಲ್ಲಿ ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಪರಿಚಯ ಭಾಷಣ ಮಾಡುತ್ತಿರುವ ಚಿತ್ರ. ಇಲ್ಲಿ ಉಪಸಚಿವ ಶ್ರೀ ವೈ. ರಾಮಚಂದ್ರ ಮತ್ತು ಅಂದಿನ ಅಧ್ಯಕ್ಷತೆ ವಹಿಸಿದ್ದ ಶ್ರೀ ಟಿ. ಎನ್. ಮಲ್ಲಪ್ಪ ಇವರನ್ನು ನೋಡಬಹುದು.






# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ ೨೭] ಸಂಪಾದಕರು: ಡಿ. ಆರ್. ರಾಮಯ್ಯ, ಬಿ.ಎ. [ಸಂಚಿಕೆ ೧೦



ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೧೮




ಸಂಪುಟ ೨೭ ] ಅಕ್ಟೋಬರ್ ೧೯೬೪ [ ಸಂಚಿಕೆ ೧೦

# ಶಾರದೆಯ ಕಂಠ

ಶ್ರೀ ಡಿ. ಆರ್. ರಾಮಯ್ಯ

ಶಾರದೆಯ ಸಂಪತ್ತು ಸಾಹಿತ್ಯ ಪರಿಷತ್ತು,
ಶಾರದೆಯ ಕಂಠವೇ ಗಮಕ ಸತ್ಕಲೆಯು,
ಚಾರುತರ ಸೌಭಾಗ್ಯವಿದು ನಿಖಿಲ ಜನಕೆಲ್ಲ,
ಸಾರಗುಣ ಗಣಿಯಂತೆ ಗಣಿಸುವೆವು ಸೊಲ್ಲ ॥

ಬನ್ನಿರೈ ಬಂಧುಗಳೆ ಗಮಕಕಲೆಯಿದ ಕೊಳ್ಳಿ,
ಸನ್ನುತಿಯ ಜೀವನಕೆ ನಂದನದ ಹೂಬಳ್ಳಿ,
ಮನ್ನಣೆಯನೀಯಲ್ಕೆ ಸಾಹಿತ್ಯ ಪರಿಷತ್ತು,
ಉನ್ನತಿಯ ಗಳಿಸಿರೈ ಗಮಕ ಸಿರಿಸೊತ್ತು ॥

ನಾವು ಗಮಕಿಗಳು ನಮ್ಮಯ ಗಾನ ಭಂಡಾರ,
ಠೀವಿ ಬೆಳಗಲಿ ನಾಡನುಡಿಯ ಗುಡಿಯಲ್ಲಿ,
ಕೋವಿದರ ಕನ್ನಡದ ಕಂದಗಳ ನೆರೆಯಲ್ಲಿ,
ಶ್ರೀ ವಿನುತ ಸಾಹಿತ್ಯ ಪರಿಷತ್ತಿನಲ್ಲಿ ॥

ಬೆಳಗಲಿದು ಈ ನಾಡು ನಮ್ಮ ಕನ್ನಡ ನಾಡು
ಬೆಳೆಯಲಿದು ಈ ಕಲೆಯು ಗಮಕ ಸತ್ಕಲೆಯು
ಬೆಳಗಲಿದು ಸುಸ್ವರವು ಸುಮಧುರದ ಸವಿನೆಲೆಯು
ಬೆಳೆಯಲಿದು ಕನ್ನಡದ ಬೀಡಿನಲಿ ಬದುಕು ॥

(೨೮–೯–೬೪ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ ಗಮಕಿಗಳ ಸತ್ಕಾರ ಕೂಟದಲ್ಲಿ ಹಾಡಿದ್ದು)

# ಇತಿಹಾಸದ ಸಾಧನಗಳು - ಶಿಲಾಶಾಸನಗಳು, ತಾಮ್ರಶಾಸನಗಳು

ಡಾ॥ ಪಿ. ಬಿ. ದೇಸಾಯಿ

ಭಾರತೀಯರಿಗೆ ಇತಿಹಾಸದಲ್ಲಿ ಶ್ರದ್ಧೆ ಕಡಿಮೆ; ಯಥಾರ್ಥ ಚರಿತ್ರಲೇಖನ ವಿದ್ಯೆಯನ್ನು ಅವರು ಸಾಕಷ್ಟು ಬೆಳೆಯಿಸಿ ಕೊಂಡು ಬರಲಿಲ್ಲ. ಈ ವಿಧದ ಆಪಾದನೆಗಳು ಭಾರತೀಯರ ಮೇಲೆ ಹೊರಿಸಲಾಗಿದೆ. ಇವು ಒಂದು ಭಾಗ ನಿಜಾಂಶ ವಾಗಿರಬಹುದು. ಒಂದು ಭಾಗ ನಿಜವೆಂದು ಒಪ್ಪಿಕೊಳ್ಳಲು ಕಾರಣಗಳು ಇಲ್ಲದೆ ಇಲ್ಲ.

ಕಲ್ಹಣನ ರಾಜತರಂಗಿಣಿ, ಬಿಲ್ಹಣನ ವಿಕ್ರಮಾಂಕ ದೇವ ಚರಿತದಂತಹ ಹತ್ತೆಂಟು ಮಾತ್ರ ಚಾರಿತ್ರಕ ಕಾವ್ಯ ಗ್ರಂಥ ಗಳನ್ನು ಬಿಟ್ಟರೆ ಖಚಿತವಾದ ಚರಿತ್ರ ಗ್ರಂಥಗಳು ನಮಗೆ ದೊರೆತಿಲ್ಲ. ಇದ್ದವೋ, ಇಲ್ಲವೋ, ತಿಳಿಯದು. ಇದ್ದರೆ ನಷ್ಟವಾಗಿರಬಹುದು. ಭಾರತೀಯರ ಪ್ರಾಚೀನ ಸಾಹಿತ್ಯ ಸಂಸ್ಕೃತಿಯ ಸಾಧನ ಸಾಮಗ್ರಿ ಲೆಕ್ಕವಿಲ್ಲದಷ್ಟು ನಶಿಸಿ ಹೋಗಿದೆ. ಅದರಲ್ಲಿ ಒಂದುಪಾಲು ಚಾರಿತ್ರಕ ಲೇಖನಗಳು ಆಗಿರಬಹುದು.

ಭಾರತೀಯರ ಮನೋಧರ್ಮ ತನ್ನದೇ ಒಂದು ರೀತಿ ಯದು. ಅವರು ಧರ್ಮ, ವೇದಾಂತ, ತತ್ವಜ್ಞಾನದತ್ತ ಒಲಿದಷ್ಟು ಇತಿಹಾಸದತ್ತ ಒಲಿಯಲಿಲ್ಲ. ಸಾಹಿತ್ಯ, ಕಾವ್ಯ, ಕವನಕಲೆಯಲ್ಲಿ ನಿರತರಾದಷ್ಟು ಚರಿತ್ರೆಯಲ್ಲಿ ಆಸಕ್ತಿವಹಿಸ ಲಿಲ್ಲ. ಇದರಿಂದಾಗಿ ಅಪ್ಪಟ ಇತಿಹಾಸಲೇಖನ ಗ್ರಂಥಗಳು ನಮ್ಮಲ್ಲಿ ಅಲ್ಪ ಪ್ರಮಾಣದಲ್ಲಿ ದೊರೆಯುತ್ತವೆ.

ಏಳನೆಯ ಶತಮಾನದಲ್ಲಿ ಭಾರತವನ್ನು ಸಂದರ್ಶಿಸಿದ ಚೀನಾ ಯಾತ್ರಿಕ ಹುಯೆನ್‌ತ್ಸಾಂಗ ಭಾರತದ ಆಯಾರಾಜ್ಯ ಗಳಲ್ಲಿ ದೈನಂದಿನ ಘಟನೆಗಳನ್ನು ಬರೆದಿಡುವ ವ್ಯವಸ್ಥೆ ಇದ್ದಂತೆ ಹೇಳಿದ್ದಾನೆ. ತನ್ನ ಹಿಂದಿನ ಪಂಡಿತರು ಬರೆದಿಟ್ಟ ಚಾರಿತ್ರಕ ಲೇಖನಗಳನ್ನು ತನ್ನ ಗ್ರಂಥಕ್ಕಾಗಿ ಬಳಸಿ ಕೊಂಡತೆ ಕಲ್ಹಣನು ನಿವೇದಿಸುತ್ತಾನೆ. ಇಂಥ ಹೇಳಿಕೆಗಳು ಭಾರತೀಯರ ಮೇಲಿನ ಐತಿಹಾಸಿಕ ಅಸಡ್ಡೆಯ ಅಪವಾದ ವನ್ನು ಕೆಲಮಟ್ಟಿಗೆ ಹಿಂದೂಡುತ್ತವೆ.

ಚಾರಿತ್ರಿಕ ಲೇಖನ, ಗ್ರಂಥಗಳ ವಿಚಾರವನ್ನು ಬದಿಗಿರಿಸಿ ದರೆ, ಚರಿತ್ರೆಗೆ ಅತ್ಯಂತ ಸಹಾಯಕವಾದ ಶಿಲಾಶಾಸನಗಳು, ತಾಮ್ರಶಾಸನಗಳು ನಮ್ಮ ದೇಶದಲ್ಲಿ ಬಹುವಾಗಿ ದೊರೆತಿವೆ. ನಿಶ್ಚಿತವಾದ ಕಾಲವನ್ನು ನಿರ್ದೇಶಿಸಿ, ಇಲ್ಲವೆ ಸೂಚಿಸಿ, ಆ ಕಾಲಕ್ಕೆ ಸಂಬಂಧಿಸಿದ ಐತಿಹಾಸಿಕ ವ್ಯಕ್ತಿಗಳನ್ನು ಮತ್ತು ಘಟನೆಗಳನ್ನು ಅಂಗಾಂಗವಾಗಿ ನಿರೂಪಿಸುವ ಈ ಸಾಧನಗಳು ನಮ್ಮ ಇತಿಹಾಸ ರಚನೆಗೆ ಪ್ರಬಲ ಆಧಾರಗಳಾಗಿವೆ. ಅದು ಹೇಗೆ ಎಂಬುದನ್ನು ಕಿರಿದರಲ್ಲಿ ವಿವೇಚಿಸುವ.

ಮೌರ್ಯವಂಶದ ಅಶೋಕರಾಜನು ಗುಡ್ಡಗಳ, ಗವಿಗಳ ಬಂಡೆಗಳ ಮೇಲೆ, ಸ್ತಂಭಗಳಮೇಲೆ ಕೊರೆಯಿಸಿದ ವಿವಿಧ ಲೇಖನಗಳು ನಮ್ಮ ದೇಶದ ಅತ್ಯಂತ ಪ್ರಾಚೀನ ಶಾಸನ ಗಳಾಗಿವೆ. ಇವುಗಳ ಕಾಲ ಕ್ರಿ. ಪೂ. ಮೂರನೆಯ ಶತಮಾನ. ಇವು ಮೌರ್ಯ ಸಾಮ್ರಾಜ್ಯದ ವಿಸ್ತಾರ ಮತ್ತು ಘನತೆ, ಆಡಳಿತ ವ್ಯವಸ್ಥೆ, ಅಶೋಕನ ಆಳಿಕೆ ಆತನ ಅಲೌಕಿಕ ವ್ಯಕ್ತಿತ್ವ, ಅಪೂರ್ವ ಧರ್ಮಬುದ್ಧಿ, ಮೊದಲಾದ ಅನೇಕ ವಿಷಯಗಳ ಮೇಲೆ ಬೆಳಕನ್ನೂ ಬೀರುತ್ತವೆ. ಅಶೋಕನ ಶಾಸನಗಳು ಪ್ರಪಂಚದ ಚರಿತ್ರೆಯಲ್ಲಿ ಘನತೆಯ ಸ್ಥಾನವನ್ನು ಗಳಿಸಿವೆ. ಅಶೋಕನ ಶಾಸನಗಳು ಕೇವಲ ಇತಿಹಾಸಕ್ಕೆ ಮಾತ್ರವಲ್ಲ, ಲೇಖನವಿದ್ಯೆ ಮತ್ತು ಲಿಪಿಶಾಸ್ತ್ರದ ಅಧ್ಯಯನ ಮಾಡುವವರಿಗೆ ಮೌಲಿಕ ಸಹಾಯವನ್ನು ಸಲ್ಲಿಸುತ್ತವೆ.

ಅಶೋಕನಿಂದೀಚೆಗೆ ಆಳಿದ ಹಲವು ರಾಜರ, ಮಹಾ ರಾಜರ ಶಾಸನಗಳು ದೊರೆತಿವೆ. ಅವುಗಳಿಂದ ಮುಂದಿನ ನಾಲ್ಕೈದು ಶತಮಾನಗಳ ಇತಿಹಾಸವು ತಿಳಿದುಬಂದಿದೆ. ಅನಂತರ ಗುಪ್ತವಂಶದ ಪ್ರಖ್ಯಾತ ಅರಸರು ಊರ್ಜಿತ ರಾದರು. ಈ ಮನೆತನದ ಸಮುದ್ರಗುಪ್ತನು ಬರೆಯಿಸಿದ ಅಲಹಾಬಾದ ಸ್ತಂಭಪ್ರಶಸ್ತಿ ಪ್ರಮಾಣಭೂತ ಶಾಸನ ವೆಂದು ಪರಿಗಣಿಸಲಾಗಿದೆ. ಇದು ಗುಪ್ತರಾಜರ ಮೇಲ್ಮೆ ಯನ್ನು, ಸಮುದ್ರಗುಪ್ತನ ಸಾಹಸ, ಪರಾಕ್ರಮ ಕರ್ತೃತ್ವ, ಪ್ರತಿಭೆಯನ್ನು ಎತ್ತಿತೋರಿಸುತ್ತದೆ. ಆಮೇಲೆ ಕನೋಜದ ಹರ್ಷವರ್ಧನ, ಗುರ್ಜರ ಪ್ರತೀಹಾರರು, ಇನ್ನಿತರ ರಾಜರು ಗಳ ಶಿಲಾಶಾಸನ, ತಾಮ್ರಶಾಸನಗಳು ಉತ್ತರ ಭಾರತದ ಇತಿಹಾಸದ ಅನೇಕ ಸಂಗತಿಗಳನ್ನು ಒದಗಿಸುತ್ತವೆ.

ಉತ್ತರ ಭಾರತಕ್ಕಿಂತ ದಕ್ಷಿಣ ಭಾರತದಲ್ಲಿ ಶಿಲಾಶಾಸನ, ತಾಮ್ರಶಾಸನಗಳು ಅಧಿಕ ಸಂಖ್ಯೆಯಲ್ಲಿ ದೊರೆತಿವೆ. ಸಾತ ವಾಹನರು, ಪಲ್ಲವರು, ಚೋಳರು, ಪಾಂಡ್ಯರು, ಗಂಗರು, ಕದಂಬರು, ಪಶ್ಚಿಮ ಚಾಲುಕ್ಯರು, ಪೂರ್ವ ಚಾಲುಕ್ಯರು ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಾಕತೀಯರು, ಸೇವುಣರು, ಹೊಯ್ಸಳರು, ವಿಜಯನಗರದ ಅರಸರು, ಈ

ಭೂಭಾಗದಲ್ಲಿ ಕ್ರಿ. ಪೂ. ಎರಡನೆಯ ಶತಮಾನದಿಂದ ಕ್ರಿಸ್ತೋತ್ತರ ಹದಿನಾರನೆಯ ಶತಮಾನದವರೆಗೆ ರಾಜ್ಯಭಾರ ಮಾಡಿದರು. ಈ ನರೇಂದ್ರರು ಬರೆಯಿಸಿದ ನೂರಾರು, ಸಾವಿರಾರು ಶಾಸನಗಳು ಎಲ್ಲೆಡೆಗಳಲ್ಲಿ ದೊರೆತಿವೆ. ಇವು ನಮ್ಮ ಇತಿಹಾಸದ ಅನೇಕಾನೇಕ ಮುಖ್ಯ ಘಟನೆಗಳನ್ನು, ಸೂಕ್ಷ್ಮವಿವರಗಳನ್ನು ಪೂರಯಿಸುತ್ತವೆ. ಇವುಗಳ ಅಧ್ಯಯನದಿಂದ ನಮ್ಮ ಚರಿತ್ರೆಯ ಜ್ಞಾನವು ವೃದ್ಧಿಂಗತವಾಗಿದೆ.

ದಕ್ಷಿಣ ಭಾರತದ ಶಾಸನಗಳಲ್ಲಿ ಕನ್ನಡ ನಾಡಿನ ಶಾಸನಗಳು ತಮ್ಮದೇ ಆದ ವೈಶಿಷ್ಟ್ಯವನ್ನು ಪಡೆದಿವೆ. ನಮ್ಮ ನಾಡಿನ ಶಾಸನ ಲೇಖಕರಿಗೆ ಕಾಲಪರಿಜ್ಞಾನವು ವಿಶೇಷವಾಗಿದ್ದಂತೆ ಕಂಡುಬರುತ್ತದೆ. ನಮ್ಮ ನಾಡಿನಶಾಸನಗಳಲ್ಲಿ ಕಾಲನಿರ್ದೇಶಗಳು, ಐತಿಹಾಸಿಕ ಸಂಗತಿಗಳು, ಚಾರಿತ್ರಿಕ ವಿವರಗಳು ಅಧಿಕ ಪ್ರಮಾಣದಲ್ಲಿ ದೊರೆಯುತ್ತವೆ.

"ದೇವಾನಾಂಪ್ರಿಯಃ ಪ್ರಿಯದರ್ಶೀ" ಎಂದು ಹೇಳಿಕೊಳ್ಳುವ ರಾಜನು ಅಶೋಕನೇ ವಿನಾ ಅನ್ಯ ನರಪತಿಯಲ್ಲ, ಎಂದು ಮೊದಲು ಬಾರಿ ಪ್ರಕಟಗೊಳಿಸಿದ ಅಶೋಕನ ಮಸ್ಕಿಯ ಪ್ರಸ್ತರ ಲೇಖ, ಕದಂಬ ಮಯೂರ ವರ್ಮನ ಚಂದ್ರವಳ್ಳಿಯ ಪ್ರಾಕೃತಶಾಸನ, ಕ್ರಿ. ಶ. ೫೪೩ರಲ್ಲಿ ಒಂದನೆಯ ಪುಲಕೇಶಿ ಬಾದಾಮಿ ಕೋಟೆಯನ್ನು ಕಟ್ಟಿದನೆಂದು ಸಾರುವ ಬಾದಾಮಿಯ ಬೆಟ್ಟದಲ್ಲಿ ಕೊರೆದ ಸಂಸ್ಕೃತ ಶಾಸನ; ಹಾಲ್ಮಿಡಿಯ ಪ್ರಥಮ ಕನ್ನಡ ಶಾಸನ; ಕದಂಬ ವಂಶ ವೃತ್ತಾಂತವನ್ನು ನಿರೂಪಿಸುವ ಕದಂಬ ಶಾಂತಿವರ್ಮನ ತಾಳಗುಂದ ಶಾಸನ; ಬಾದಾಮಿಯ ಚಾಲುಕ್ಯರ ಪೂರ್ವೇತಿಹಾಸವನ್ನು, ಇಮ್ಮಡಿ ಪುಲಿಕೇಶಿಯ ಅದ್ಭುತ ವಿಜಯಗಳನ್ನು ನಿವೇದಿಸುವ ಐಹೊಳೆಯ ವಿಸ್ತೃತ ದೀರ್ಘ ಪ್ರಶಸ್ತಿ ಶಾಸನ; ರಾಷ್ಟ್ರಕೂಟ ಧ್ರುವ ಮತ್ತು ಗೋವಿಂದರಾಜರು ಉತ್ತರ ಭಾರತದಲ್ಲಿ ನೆರವೇರಿಸಿದ ರೋಮಾಂಚಕಾರಕ ವಿಜಯ ಯಾತ್ರೆಗಳನ್ನು ರಮ್ಯವಾಗಿ ವರ್ಣಿಸುವ ಸಂಜಾನದ ತಾಮ್ರ ಶಾಸನ; ಅಲ್ಪ ಸಂಖ್ಯಾತರಾದ ಜೈನರು ಮತ್ತು ಬಹು ಸಂಖ್ಯಾತರಾದ ರಾಮಾನುಜರು, ಇವರ ಒಡಂಬಡಿಕೆಯನ್ನು ಘೋಷಿಸುವ ಬುಕ್ಕರಾಯನ ರಾಜನೈತಿಕ ಶಾಸನ; ಇವು ನಮ್ಮ ನಾಡಿನ ಶಾಸನಗಳಲ್ಲಿ ಅಗ್ರಸ್ಥಾನವನ್ನು ಪಡೆದ ಶಾಸನಗಳು.

ಇದೀಗ ಹೇಳಿದಂತೆ, ಒಂದನೆಯ ಪುಲಕೇಶಿ ಬಾದಾಮಿ ಕೋಟೆಯನ್ನು ಕಟ್ಟಿಸಿದ ವಿಷಯವನ್ನು ನಿರೂಪಿಸುವ ಶಾಸನದ ಪಾಠವು ಹೀಗಿದೆ:

ಸ್ವಸ್ತಿ॥ ಶಕವರ್ಷೇಷು ಚತುಃ ಶತೇಷು ಪಂಚಷಷ್ಟಿಯುತೇಷು ॥
ಅಶ್ವಮೇಧಾದಿ ಯಜ್ಞಾನಾಂ ಯಜ್ವಾ ಶ್ರೌತವಿಧಾನತಃ ।
ಹಿರಣ್ಯಗರ್ಭ ಸಂಭೂತಃ ಚಲಿಕ್ಯೋ ವಲ್ಲಭೇಶ್ವರಃ ॥
ಧರಾಧರೇಂದ್ರ ವಾತಾಪಿ ಮಜೇಯಂ ಭೂತಯೇ ಭುವಃ ।
ಅಧಸ್ತಾದು ಪರಿಷ್ಟಾಚ್ಚ ದುರ್ಗಮೇತದಚೀಕರತ್ ॥

ಇಲ್ಲಿ ಗಮನಿಸಬೇಕಾದ ವಿಶೇಷ ಸಂಗತಿ ಎಂದರೆ, ಇದು ಶಕ ವರ್ಷವನ್ನು ಹೆಸರಿಸುವ ಅತ್ಯಂತ ಪ್ರಾಚೀನ ಶಾಸನವಾಗಿದೆ.

ಈ ಮೇರೆಗೆ ಶಿಲಾಶಾಸನಗಳು, ತಾಮ್ರ ಶಾಸನಗಳು ನಮ್ಮ ಇತಿಹಾಸಜ್ಞಾನಕ್ಕೆ ಮೌಲಿಕ ಸಾಧನಗಳೂ, ಪ್ರಮಾಣಭೂತ ಆಧಾರಗಳೂ ಆಗಿವೆ. ಇವುಗಳ ಅನ್ವೇಷಣ, ಅಧ್ಯಯನಗಳು ಮುಂದುವರಿದಂತೆ ನಮ್ಮ ದೇಶದ ಚಾರಿತ್ರಿಕ ವಿಷಯಗಳು ಹೆಚ್ಚು ಹೆಚ್ಚು ಪ್ರಕಾಶಕ್ಕೆ ಬರುತ್ತಲಿವೆ. ಇಂಥ ಶಾಸನಗಳು ದಶಸಹಸ್ರ ಸಂಖ್ಯೆಯಿಂದ ಎಣಿಸುವಷ್ಟು ವಿಪುಲವಾಗಿ ದೊರೆತಿವೆ. ನಮ್ಮ ಸಂಶೋಧನ ಪ್ರಯತ್ನಗಳು ಸಫಲವಾದಂತೆ ಇನ್ನು ಹೆಚ್ಚಾಗಿ ದೊರೆಯುವಂತಿವೆ. ಅನ್ಯಸಾಧನಗಳ ಅಭಾವದಿಂದಾಗಿ ಮಂಜು ಮುಸುಕಿದ ನಮ್ಮ ಪ್ರಾಚೀನ ಇತಿಹಾಸದ ಹೆದ್ದಾರಿಯನ್ನು ಬೆಳಗಿಸುವ ಮಾರ್ಗದೀಪಗಳೆಂದು ನಾವೀ ಶಾಸನಗಳಿಗೆ ಸುಸ್ವಾಗತವನ್ನು ಬಯಸಬೇಕಾದುದು. ಈ ಶಾಸನಗಳ ಅಧ್ಯಯನದಿಂದ ನಮ್ಮ ಚರಿತ್ರೆಯ ಅನೇಕ ಉಜ್ವಲ ಸಂನ್ನಿವೇಶಗಳು ಅಭಿವ್ಯಕ್ತವಾಗುತ್ತವೆ. ಇವುಗಳ ಬಲದಿಂದ ಭಾರತೀಯರು ಇತಿಹಾಸವನ್ನು ಉಪೇಕ್ಷಿಸಿದರು ಎಂಬ ಆಪಾದನೆಯ ಸತ್ಯತೆಯನ್ನು ಒಂದು ಮುಖದಿಂದ ಆಹ್ವಾನಿಸುವ ಧೈರ್ಯವು ನಮಗೆ ಉಂಟಾಗಿದೆ.

ಹನ್ನೆರಡನೆಯ ಶತಮಾನದ ಒಂದು ಕನ್ನಡ ಶಾಸನದಲ್ಲಿ ಒಬ್ಬ ನಾಯಕನ ಸದ್ಗುಣಗಳನ್ನು ಶಾಸನ ರೂಪದಿಂದ ಬಣ್ಣಿಸಿದೆ. ಆ ಶಾಸನ ಪದ್ಯವನ್ನು ಕಿಂಚಿತ್ ತಿರುಗಿಸಿ ಶಿಲಾಶಾಸನಗಳ ಸ್ತುತಿಯೆಂಬಂತೆ ಹೀಗೆ ಮಾರ್ಪಡಿಸಬಹುದು.

"ಶಾಸನ ಮಾಗಿರೊಳ್ಪೆಸೆವ ಕಲ್ಲಿನ ಶಾಸನ ಮೊಂದಿದಲ್ತು ಕೇಳ್
ಸಾಸದ ಶಾಸನಂ ಜಯದ ಶಾಸನ ವಾರ್ಪಿನಶಾಸನಂ ಗುಣೋ ।
ದ್ಭಾಸನ ಶಾಸನಂ ಸಿರಿಯ ಶಾಸನ ಮೊಳ್ಪಿನ ಶಾಸನಾಳಿಯಿಂ
ಲೇಸೆನೆ ರಾಷ್ಟ್ರದೇವಿ ನಿಜಶಾಸನ ಕೋಟೆಯ ನೆಯ್ದೆತಾಳ್ದಿದಳ್" ॥

ಶಾಸನಕವಿ ಇಲ್ಲಿ ಸೂಚಿಸುವಂತೆ ಶಾಸನಗಳು ಬರಿಯ ಕಲ್ಲಿನ ಶಾಸನಗಳಲ್ಲ, ನಮ್ಮ ಜನಾಂಗದ ಶೌರ್ಯ, ಸಾಹಸದ ಶಾಸನಗಳು, ಪರಾಕ್ರಮದ ಶಾಸನಗಳು ವಿಜಯ, ಸಿರಿ, ಸೌಭಾಗ್ಯದ ಶಾಸನಗಳು, ಅವು ನಾಡಿನ ಇತಿಹಾಸ ಕಥೆಯನ್ನು ಸೊಗಸಾಗಿ ಚಿತ್ತರಿಸುವ ರಾಷ್ಟ್ರದೇವಿಯ ದೇದೀಪ್ಯಮಾನ ಅಲಂಕಾರಗಳಾಗಿವೆ.*

* ಬೆಂಗಳೂರು ಆಕಾಶವಾಣಿಯ ಕೃಪೆಯಿಂದ.

# ಶೃಂಗಾರ ರಸ

ಶ್ರೀ ಎನ್. ಎಸ್. ಗದಗಕರ ಎಂ. ಪಿ.

"ಏಕೋ ರಸಃ ಕರುಣ ಏವ" ಎಂದು ಭವಭೂತಿ ತನ್ನ ಲೋಕಪ್ರಿಯ ಉತ್ತರರಾಮ ಚರಿತ ನಾಟಕದಲ್ಲಿ ಹೇಳಿದ್ದರೂ ಜನಸಾಮಾನ್ಯರಿಗೆ ಶೃಂಗಾರದ ಮೋಹಕತೆಯೆ ಉತ್ಕಟ ವಾಗಿರುವದು. ಹಾಗೆ ನೋಡಿದರೆ, ಶೃಂಗಾರ ಕರುಣೆಗಳು ದೂರವರ್ತಿಗಳಲ್ಲ. ಅವು ಒಂದೇ ನಾಣ್ಯದ ಎರಡು ಬದಿಗ ಳೆಂದು ಔಚಿತ್ಯ ಪೂರ್ಣವಾಗಿ ಉಸಿರಬಹುದು. ಶೃಂಗಾರ ಪ್ರಸಂಗದಲ್ಲಿ ವ್ಯಕ್ತಿಗಳು ಆನಂದ ತುಂದಿಲರಾದರೂ ಆ ಆನಂದ ಚಿರ ಸ್ಥಾಯಿಯಲ್ಲ. ಒಮ್ಮೊಂದೊಮ್ಮೆ ಭಗ್ನ ಪ್ರಣಯದ ಸನ್ನಿವೇಶ ಅಡಿ ಇಡುವದೂ ಸಹಜ. ಈ ಜಗತ್ತಿನಲ್ಲಿ ಯಾವುದು ಶಾಶ್ವತ? ಪಂಡಿತರಾಜ ಜಗನ್ನಾಥನು ನಿಜಕ್ಕೂ ಪಂಡಿತರಲ್ಲಿ ರಾಜನೆ! ಆದರೆ ಲವಂಗಿತೆಯಿಂದ ಅವನಿಗೆ ಅಗಲುವಿಕೆಯುಂಟಾಯಿತು. ಕಾಲಂತರದಲ್ಲಿ ಅವ ವೈರಾಗ್ಯ ಮಾರ್ಗಹಿಡಿದ. ಇಹಲೋಕದ ಪ್ರೇಮಕ್ಕೆ ತಿಲಾಂಜಲಿ ಇತ್ತ. ತುಚ್ಛವಾಗಿ ತಿಳಿದ. ಕೊನೆಗೆ ಗಂಗಾ ಮಾತೆಯ ಅಡಿದಾವರೆಯಲ್ಲಿ ಆತ್ಮಾರ್ಪಣೆ ಮಾಡಿಕೊಂಡ. ಆ ಮಹಾತಾಯಿ ಕೂಡ ಅವನನ್ನು ಕ್ಷಮಿಸಿ ಆತ್ಮಸಾತ್ ಮಾಡಿಕೊಂಡಳು. ಕತೆ ಪವಾಡವೆನಿಸಿದರೂ "Truth is stranger than fiction" ಉಕ್ತಿ ಸುಳ್ಳಲ್ಲ!

ಪ್ರಣಯದಲ್ಲಿಯ ಎಲ್ಲ ಸ್ಥಿತ್ಯಂತರಗಳಿಗೂ ಅಷ್ಟು ಪ್ರಾಮುಖ್ಯತೆ ಇದೆ ಎಂದು ಸಾಧಿಸಿದರೆ, ರಸಿಕರು ಒಪ್ಪಲಾರರು. ಪ್ರಥಮ ಸಂದರ್ಶನದ ಪ್ರಣಯ ಕಥಾ ಕಾದಂಬರಿಗಳಲ್ಲಿ ಸ್ವಾಭಾವಿಕವಾಗಿ ಉಲ್ಲೇಖಿತವಾಗುವದು. ಕವಿಕುಲ ಗುರು ಕಾಲಿದಾಸನ ತೀರ ಪರಿಪಕ್ವ ಕಲಾಕೃತಿ ಇದಕ್ಕೆ ತಕ್ಕ ನಿದರ್ಶನ. ಶಕುಂತಲೆ ದುಷ್ಯಂತರ ಪ್ರೇಮ ಸ್ವರ್ಗೀಯವೆನಿಸಿದರೂ ಅದು ಪ್ರಥಮ ಸಮಾಗಮದ್ದೇ. ಅದು ಮುಂದೆ ಗಾಂಧರ್ವ ವಿವಾಹಕ್ಕೆ ಪರಿವರ್ತಿತವಾಗಿ ಪ್ರಣಯದ ಇತಿಹಾಸದಲ್ಲಿ ಅದಕ್ಕೆ ಅಮರತ್ವ ಪ್ರಾಪ್ತವಾಯಿತು. 'The path of true love never runs smooth' ಎಂಬ ಅನುಭವೋಕ್ತಿ ಕೂಡ ಅವರ ಪ್ರೇಮ ಪ್ರಕರಣದಲ್ಲಿ ಅರ್ಥಪೂರ್ಣವಾಗಿ ಪರಿಣಮಿಸಿತು. ಚಿನ್ನಕ್ಕೆ ಪುಟವಿಟ್ಟಂತಾಯಿತು. ಅದೇ ದುಷ್ಯಂತ, ಶಕುಂತಲೆಗೆ ಕೊಟ್ಟ ಉಂಗುರ ಕಳೆದಿರದಿದ್ದರೆ, ಆಕೆ ತನ್ನ ಪತಿಯ ಚಿಂತನೆಯಲ್ಲಿ ತಾದಾತ್ಮ್ಯ ಕಳೆದಿರದಿದ್ದರೆ, ಕತೆ ಸಪ್ಪೆಯಾಗುತ್ತಿತ್ತು. ಶೃಂಗಾರ ರಂಜಕವಾಗುತ್ತಿರಲಿಲ್ಲ. ಪಾತ್ರಧಾರಿಗಳು ಎಷ್ಟು ಭಾವ ಪೂರ್ಣವಾಗಿ ನಟಿಸಿದರೂ ನಾಟಕ ಕಳೆಕಟ್ಟುತ್ತಿರಲಿಲ್ಲ!

ಇರಲಿ, ಶೃಂಗಾರ ಕೇವಲ ಒಂದು ಕಾವ್ಯದ ರಸವೆಂದರೆ ಅದರ ವ್ಯಾಪ್ತಿ ಅಲ್ಪವಾಗುವದು. ಮೂಲತಃ ಶೃಂಗಾರ ಶಬ್ದವು ಸೌಂದರ್ಯ ಅನ್ವಯಿಸುವದು. ಸೌಂದರ್ಯ ಪ್ರದರ್ಶಿಸುವ ಪ್ರೀತಿ ಯಾರಿಗಿಲ್ಲ? ಅಂದವಾಗಿ ಕಾಣಲೆಂದು ಅಲಂಕರಿಸಿಕೊಳ್ಳುವ ಕಲೆ ಮಹಿಳೆಯರಿಗೆ ಯಾರೂ ತಿಳಿಹೇಳಬೇಕಿಲ್ಲ. ನಾಗರಿಕತೆಯ ಶಿಖರ ಮುಟ್ಟಿದರೂ ಅಷ್ಟೆ. ಮುಟ್ಟದಿದ್ದರೂ ಅಷ್ಟೆ. ಈ ಗುಣ ಮಾನವ ಕೋಟಿಗೆ ಅಂಟಿಕೊಂಡು ಬಿಟ್ಟಿದೆ. ಆದರೂ ಔಚಿತ್ಯವರಿತು ಅಲಂಕರಿಸಿಕೊಳ್ಳಬೇಕೆಂಬ ಮಾತನ್ನು ಅನುಭವಿಗಳು—"ಸೆಟ್ಟಿ ಸಿಂಗಾರ ಆಗೋದರಾಗ ಪಟ್ಟಣ ಹಾಳ ಆತು" ಎಂಬ ಉಕ್ತಿಯಿಂದ ವಿಶದಪಡಿಸಿರುವರು.

ಶೃಂಗಾರ ರಸದ ಪರಾಕಾಷ್ಟೆಯನ್ನು ನಾವು ಗುರುತಿಸಬೇಕಾದರೆ, ಮೇಘದೂತದ ಯಕ್ಷ ಯಕ್ಷಿಣೆಯರ ಪ್ರೇಮಾರಾಧನೆ ನೆನಪು ಮಾಡಿಕೊಳ್ಳಬೇಕು. ಅವರ ಪ್ರೇಮದ ಪರಿಶುದ್ಧತೆ, ಅಗಲುವಿಕೆಯಲ್ಲಿ ಸ್ಫುಟವಾಗಿ ನಮಗೆ ಮನದಟ್ಟಾಗುವದು. ಯಕ್ಷ ತನ್ನ ಒಡೆಯ ಕುಬೇರನಿಂದ ಶಪಿತನಾಗಿ ರಾಮಗಿರಿ ಆಶ್ರಮದಲ್ಲಿ ವಾಸವಾಗಿರುವ ಆವನು "ಅಸ್ತಂಗಮಿತ್ ಮಹಿಮ' ಎಂದು ಕವಿ ಉಸಿರಿ ಅವನು ದೇವತೆಗಿಂತ ಕಿಂಚಿತ್ ಊನವೆಂದು ಸೂಚಿಸಿರುವ ಆಷಾಢ ಮಾಸದ ಪ್ರಥಮ ದಿನವದು. ಅದೇ ಮೇಘಗಳು ಮಾಲೆ ಮಾಲೆಯಾಗಿ ತೂರಿ ಬರುವ ಕಾಲ. ಯಕ್ಷನಿಗೆ ತನ್ನ ಪ್ರಿಯ ಪ್ರೇಯಸಿಯ ನೆನಪು ನುಗ್ಗದೆ ಹೋಗಲಿಲ್ಲ. ಆಕೆಗೆ ಪ್ರಣಯ ಸಂದೇಶ ತಿಳಿಸುವ ರೀತಿ ಸಹಸ್ಸೆವ ಸೂಚಿತವಾಯ್ತು ನಿಸರ್ಗ ನಿರೀಕ್ಷಿಸುವಾಗ. ಮೇಘವನ್ನು ಕಾಮರೂಪಿ ಎಂದು ಹೊಗಳಿ ಅವರ ವಂಶಾವಳಿ ಸ್ತುತಿಸಿ ಕಾರುಣ್ಯಮಯನಾಗಿ ಮಡದಿಗೆ ಸಂದೇಶ ಮುಟ್ಟಿಸೆಂದು ಬಿನ್ನವಿಸಿ ತನ್ನ ಅಲಕಾನಗರಿಯ ಮಾರ್ಗ ಬಿತ್ತರಿಸುವನು. ಆನುಷಂಗಿಕವಾಗಿ ಶೃಂಗಾರಮಯವಾಗಿ ಯಕ್ಷಿಣಿ ಪ್ರಿಯೆಯನ್ನು ಆಕೆಯ ವಿರಹಾವಸ್ಥೆಯನ್ನು, ಚಿತ್ರಮಯವಾಗಿ ಬಣ್ಣಿಸುವ. 'ಹಸ್ತಪ್ರಾಪ್ಯಸ್ತಬಕ ನಮಿತ'ವಾದ ಮನೆಯ ಎದುರಿಗಿನ ಬಾಲ ಮಂದಾರ ವೃಕ್ಷ, ಕಾಮನಬಿಲ್ಲಿನೋಪಾದಿಯ ತೋರಣ ಕೂಡ ವರ್ಣಿಸದೆ ಬಿಡುವದಿಲ್ಲ.

ಯಕ್ಷಿಣಿ ದಿನ ಗತಿಸಿದುದನ್ನು ದೇಹಲಿಯ ಮೇಲೆ ಹೂವು ಇಡುವದರ ಮುಖಾಂತರ ತೋರಿಸುವದು ಓದುಗರಿಗೆ ರಂಜಕವಾದರೂ ವಿರಹ ವ್ಯಥೆಯ ವಿಶೇಷ ಸಂಕೇತ ಎನಿಸದೇ ಹೋಗದು!

ಅಹುದು. ಶೃಂಗಾರದ ಪ್ರಶ್ನೆ ಎತ್ತಿದೊಡನೆ, ಸಹಜವಾಗಿ ಶಿವನ ಹಣೆಗಣ್ಣಿಗೆ ಆಹುತಿಯಾದ ಮನ್ಮಥನ ಚಿತ್ರ ಕಣ್ಕಟ್ಟುವದು. ಅವನು ಪಂಚಬಾಣ. ಅವನ ಅಸ್ತ್ರ ಸುಕುಮಾರ—ಉರ್ವಶಿಯು ಇಂದ್ರನಿಗೆ ಸುಕೋಮಲ ಪ್ರಹರಣವಾದಂತೆ! ಶಿವನಿಗೆ ಯಾತರ ಅರಿವಿಲ್ಲದಂತೆ ಅವನ ತಪಸ್ಸು ಅವಿಚ್ಛಿನ್ನವಾಗಿ ನಡೆದಿತ್ತು. ಜಗತ್ತಿನಲ್ಲಿ ತಾರಕಾಸುರನ ಉಪಟಳ ತಡೆಯಲು ಬೇರಾರಿಗೂ ಸಾಧ್ಯವಾಗಿರಲಿಲ್ಲ. ಅವನ ತಪೋಭಂಗಮಾಡಲು ದೇವಾನುದೇವತೆಗಳು ಕಾಮದೇವನನ್ನು ಅನಿವಾರ್ಯವಾಗಿ ಲೋಕ ಕಲ್ಯಾಣಕ್ಕಾಗಿ ಬಲಿ ಕೊಟ್ಟರು. ಆದರೆ ಅವರು ದಗ್ಧನಾದಾಗ ರತಿಯ ವಿಲಾಪ ಹೇಳತೀರದು. ಜಗತ್‌ಚಕ್ರ ನಡೆಯುವವರೆಗೆ ಮಾನವ ಕೋಟಿಯ ಮನಸ್ಸಿನಲ್ಲಿ ಅವನೆಲಸುವನೆಂದಾಗ ರತಿಗೆ ಸ್ವಲ್ಪ ಸಾಂತ್ವನ ಎನಸಿತು. ಅಂತೂ ರತಿದೇವಿ ವ್ಹೀನಸ್‌ಳಿಗೆ ಸರಿ ದೊರೆ. ಶೃಂಗಾರ ಸಮುದ್ರವನ್ನು ಕಡೆದಾಗ ಸೀತಾದೇವಿ ಉದ್ಭೂತಳಾದಳೆಂದು ನಾಗಚಂದ್ರನ ರಾವಣನು ಆಕೆಯನ್ನು 'ಸುಧಾರಸಧಾರೆ' 'ಕರ್ಪೂರ ಶಲಾಖೆ' ಎಂದು ಬಣ್ಣಿಸುವುದು ಮನೋಹರವಾಗಿದೆ.

ಶೃಂಗಾರ ರಸಕ್ಕೂ ಅಲಂಕಾರಕ್ಕೂ ನಿಕಟ ಸಂಬಂಧವೆಂದಿಟ್ಟುಕೊಂಡಾಗ ಬಾಣನ ಕಾದಂಬರಿಯಲ್ಲಿಯ ಪುಂಡರೀಕನ ಪಾತ್ರ ನೆನಪಾಗುವುದು. ಅವನ ಕರ್ಣಾವತಂಸವಾದ ಸ್ವರ್ಗೀಯ ಹೂವಿನ ಗುಚ್ಛಕ್ಕೆ ಮಹಾಶ್ವೇತೆ ಅತೀವ ಆಶಿಸಿದಳು. ತತ್ಪರಿಣಾಮವಾಗಿ ಮುನಿಕುಮಾರಕನ ಸನ್ಯಾಸ ವೃತ್ತಿಗೆ ಚ್ಯುತಿ ಬಂದಂತಾಯಿತು. ಮಹಾಶ್ವೇತೆ ಮುಂದೆ ಅವನ ಕರ್ಣಾಭರಣವನ್ನಲ್ಲದೆ ಅವನನ್ನೂ ಮೋಹಿಸಿಬಿಟ್ಟಳು. ಕೈಯ್ಯಲ್ಲಿಯ ಅಕ್ಷಮಾಲೆ ಭೂಮಿಗೆ ಬಿದ್ದು ಮಹಾಶ್ವೇತೆಯ ಪಾಲಾಯ್ತು.! ಮುಂದೆ ಮುನಿಗೆ ಎಂತಹ ಪಶ್ಚಾತ್ತಾಪ! ಅದರಿಂದ ಅವನ ಹೃದಯ ದಗ್ಧವಾಯಿತು. ಅವನನ್ನು ಸನ್ಮಾರ್ಗಕ್ಕೆ ಹಚ್ಚಲು ಗೆಳೆಯ ಕಪಿಂಜಲನ ಹವ್ಯಾಸವೆಷ್ಟು!

ಪ್ರೇಮವು ಬರಿ ದೈಹಿಕವೆಂದರೆ ಸಾಮಾನ್ಯರು ಒಪ್ಪುವರು. ಆದರೆ ಪ್ಲೇಟೊ, ಶೆಲೆ, ಓಮರಖಾಯಾಂ ಮುಂತಾದವರು ಭಿನ್ನಾಭಿಪ್ರಾಯದವರಾಗಿರುವರು. "Pantheism" ಎಂಬ ವಾದವಂತೂ ಇದೇ ವಿಶ್ವವೆ ಈಶ್ವರನ ಪ್ರತೀಕ ಎಂದು ಸಾರುವದು. "Beauty is truth and truth is beauty" ಎಂಬ ಉಕ್ತಿ ಪ್ರೇಮದ ಉಚ್ಚಸ್ವರೂಪ, ಶುದ್ಧ ಸ್ವರೂಪ, ಆಧ್ಯಾತ್ಮಿಕ ಸ್ವರೂಪ. ಅಂತೇ ಶೃಂಗಾರವು ಕೇವಲ ದೈಹಿಕ ಮಾನಸಿಕವಾಗದೆ ಬಹುವಾಗಿ ಸಾಂಕೇತಿಕವಾದುದೆ ಚೆನ್ನು ಎಂದು ರಾಧಾಕೃಷ್ಣರ ಸಮಗ್ರಲೀಲೆಗಳನ್ನು ಹೃದಯಂಗಮವಾಗಿ ಬಣ್ಣಿಸಿದ ಜಯದೇವನು ಉಚ್ಚಮಟ್ಟದ ಕವಿಯೇ ಸೈ. ಅವನ ಗೀತಗೋವಿಂದ ಅಮರ ಕಾವ್ಯವೇ ಸೈ. ಇದೀಗ ನೈಜ ಶೃಂಗಾರ ರಸದ ಮೇಲ್ಮೆ, ಆದರ ಅನುಪಮತೆ, ಮುಕ್ತಸ್ಥಿತಿ!

---

# ಗ್ರಂಥಾವಲೋಕನ

**ಹೆಳವನಕಟ್ಟೆ ಗಿರಿಯಮ್ಮ : ಲೇಖಕರು : ತಿರುಕ, ಮಲ್ಲಾಡಿ ಹಳ್ಳಿ ; ಸೈಜು : ಕ್ರೌನ್ ೧/೮ ; ಪುಟ : ೪೩ ; ಬೆಲೆ : ೦-೭೫ ಪೈ.**

ಸುಮಾರು ಕ್ರಿ. ಶ. ೧೭೫೦ ರಲ್ಲಿ ಧಾರವಾಡ ಜಿಲ್ಲಾ ರಾಣಿಬೆನ್ನೂರು ತಾಲ್ಲೂಕು ಹೆಳವನಕಟ್ಟೆಯಲ್ಲಿ ಜೀವಿಸಿದ್ದ ಭಗವದ್ಭಕ್ತೆ ಗಿರಿಯಮ್ಮನನ್ನು ಕುರಿತಾದ ಗ್ರಂಥವಿದು. ಗಿರಿಯಮ್ಮ ಹೆಳವನಕಟ್ಟೆ ರಂಗನಾಥನ ಅಂಕಿತವಾಗಿ ಚಂದ್ರಹಾಸನ ಕಥೆ, ಉದ್ದಾಲೀಕನ ಕಥೆ, ಭಾಗವತ, ರಾಮಾಯಣ, ಗಜೇಂದ್ರ ಮೋಕ್ಷ, ಸೀತಾಕಲ್ಯಾಣ ಮತ್ತು ಹಾಡುಗಳು ಮೊದಲಾದ ಕೃತಿಗಳನ್ನು ಬರೆದಿದ್ದಾಳೆ. ಮಹಾವೈರಾಗ್ಯ ಸಂಪನ್ನಳಾದ ಈಕೆಯು ಉತ್ತರದ ಮೀರಾಬಾಯಿ, ದಕ್ಷಿಣದ ಭೂವಧೂತಾಯಿ ಇವರಿಗೆ ಸಮಾನಳಾದ ವ್ಯಕ್ತಿತ್ವವುಳ್ಳವರೆಂದು ಹೇಳುತ್ತಾರೆ.

ಸಮಾಜಸೇವೆಗೆ ಕಂಕಣಕಟ್ಟಿರುವ ಶ್ರೀ " ತಿರುಕ " ಅವರು ಸಾಹಿತ್ಯ ಸೇವೆಯನ್ನು ಕೈಗೊಂಡಿರುವುದು ಶ್ಲಾಘ್ಯವಾಗಿದೆ. ಪ್ರಕೃತ ಗ್ರಂಥದಲ್ಲಿ ಕೀರ್ತನಾ, ಹೊತ್ತಿಗೆ, ಸಮರ್ಪಣೆ, ಪ್ರಸ್ಥ, ವಲಿದುಬಾ, ಇತ್ಯಾದಿ ಅಶುದ್ಧ ಪ್ರಯೋಗಗಳಿವೆ. ರಾಣಿಬೆನ್ನೂರು ಕರ್ನಾಟಕದ ಮಧ್ಯಭಾಗದಲ್ಲಿದೆ, ಉತ್ತರ ಭಾಗದಲ್ಲಿಲ್ಲ. ಈ ತಪ್ಪುಗಳನ್ನೆಲ್ಲಾ ಮುಂದಿನ ಮುದ್ರಣದಲ್ಲಿ ಸರಿಪಡಿಸುವುದು ಅಗತ್ಯ. ಕಾಗದ, ಮುದ್ರಣ ಸಾಮಾನ್ಯವಾಗಿದೆ.

**ಶ್ರೀ ಕೆ. ಎಸ್. ನರಸಿಂಹಸ್ವಾಮಿ ಅವರು : ಲೇಖಕರು : ಶ್ರೀ ಎಸ್. ದಿವಾಕರ್, ಕಿನ್ನಿಗೋಳಿ ; ಸೈಜು : ಕ್ರೌನ್ ೧/೮ ; ಪುಟ : ೧೧೦ ; ಬೆಲೆ : ೨ ರೂ.**

ಹೊಸಕನ್ನಡ ಸಾಹಿತ್ಯದಲ್ಲಿ ಹೆಸರಾಂತ ಕವಿಗಳಲ್ಲಿ ಒಬ್ಬರಾದ ಶ್ರೀ ಕೆ. ಎಸ್. ನರಸಿಂಹಸ್ವಾಮಿಯವರನ್ನು ಕುರಿತಾದ ಗ್ರಂಥವಿದು. ಶ್ರೀ ಯುತರಿಂದ ವಿರಚಿತವಾಗಿರುವ ಮೈಸೂರು ಮಲ್ಲಿಗೆ, ಮನೆಯಿಂದ ಮನೆಗೆ, ಐರಾವತ, ಉಪವಸ್ತ್ರ, ಉಂಗುರ, ಇರುವಂತಿಗೆ, ಶಿಲಾಲತೆ ಇತ್ಯಾದಿ ಗ್ರಂಥಗಳು ಈ ಹೊತ್ತಿಗೆಯಲ್ಲಿ ವಿಮರ್ಶಿಸಲ್ಪಟ್ಟಿವೆ.

ಆಧುನಿಕ ಸಾಹಿತ್ಯದಲ್ಲಿ ಹೆಸರಾಂತ ಕವಿಗಳಲ್ಲಿ ಶ್ರೀ ಕೆ. ಎಸ್. ನರಸಿಂಹಸ್ವಾಮಿಯವರು ಒಬ್ಬರು. ಅವರ ಕೃತಿಗಳು ಕನ್ನಡಿಗರಿಗೆ ಪ್ರಿಯವಾಗಿವೆ. ಇಂತಹ ಖ್ಯಾತ ಕವಿಗಳ ಕಾವ್ಯಗಳನ್ನು ಕುರಿತು ವಿಮರ್ಶಿಸಿ ಒಂದು ಗ್ರಂಥವನ್ನು ಪ್ರಕಟಿಸಿರುವುದು ಉತ್ತಮ ಕಾರ್ಯ. ಕವಿ-ಕಾವ್ಯ ವಿಮರ್ಶಾತ್ಮಕ ಗ್ರಂಥಗಳು ಹೆಚ್ಚುತ್ತಿರುವುದು ಸಾಹಿತ್ಯದಲ್ಲಿ ಪ್ರಗತಿಯ ಸೂಚನೆಯೆನ್ನಬಹುದು. ಗ್ರಂಥವು ಸಾಹಿತ್ಯಾಭ್ಯಾಸಿಗಳಿಗೆ ಉಪಕಾರಿಯೆನಿಸಿದೆ.

**ಭಾರತೀಯ ವಿಜ್ಞಾನಿಗಳು : ಲೇಖಕರು : ಶ್ರೀ ಗೌರೀಶಕಾಯ್ಕಿಣಿ ಅವರು ; ಪ್ರಕಾಶಕರು : ಮಿಂಚಿನಬಳ್ಳಿ ಗ್ರಂಥಮಾಲೆ, ಧಾರವಾಡ ; ಸೈಜು : ಕ್ರೌನ್ ೧/೮ ; ಪುಟ : ೧೬೫ ; ಬೆಲೆ : ೨ ರೂ.**

ಭರತಖಂಡವು ವೇದಾಂತದಲ್ಲಿ ಮುಂದುವರೆದಿದೆ. ವಿಜ್ಞಾನದಲ್ಲಿ ಹಿಂದುಳಿದಿದೆ ಎಂಬ ಪ್ರತೀತಿಯಿದೆ. ಆದರೂ ಈ ಪುಣ್ಯ ಭೂಮಿಯಲ್ಲಿಯೂ ಕೆಲವು ಮಂದಿ ವಿಜ್ಞಾನಿಗಳು ಅವತರಿಸಿರುವುದು ನಾಡಿನ ಸುಕೃತವಿಶೇಷವೆನಿಸಿದೆ.

ಈ ಗ್ರಂಥದಲ್ಲಿ ೧. ಡಾ|| ಮಹೇಂದ್ರ ಸರ್ಕಾರ, ೨. ಸರ್. ಜಗದೀಶಚಂದ್ರಬೋಸ್, ೩. ಡಾ|| ಪ್ರಫುಲ್ಲಚಂದ್ರರಾಯ್, ೪. ಸರ್ ಸಿ. ವಿ. ರಾಮನ್ ಎಂಬ ನಾಲ್ಕುಮಂದಿ ವಿಜ್ಞಾನಿಗಳ ಚರಿತ್ರೆ ಸಂಗ್ರಹಿಸಲ್ಪಟ್ಟಿದೆ. ಮೊದಲಿನ ಮೂವರು ದಿವಂಗತರು. ನಾಲ್ಕನೆಯವರು ನಮ್ಮ ಮಧ್ಯೆ ವಿರಾಜಿಸುತ್ತಿರುವವರು.

ಇದು ವಿಜ್ಞಾನಯುಗ. ರಷ್ಯಾ, ಅಮೇರಿಕಾ, ಇಂಗ್ಲೆಂಡ್ ಮೊದಲಾದ ದೇಶಗಳು ವಿಜ್ಞಾನದಲ್ಲಿ ಮಿಗಿಲಾದ ಮುನ್ನಡೆಯನ್ನು ಸಾಧಿಸಿವೆ. ಭಾರತದಲ್ಲಿ ವಿಜ್ಞಾನದ ಪ್ರಗತಿ ಅಗತ್ಯವಾಗಿದೆ. ಕಾರಣ ಭಾರತೀಯ ವಿಜ್ಞಾನಿಗಳ ಸಾಹಸಮಯ ಜೀವನವನ್ನು ನಮ್ಮ ಜನ ಅರಿವುದು ಅಗತ್ಯ. ಈ ದೃಷ್ಟಿಯಿಂದ ಗ್ರಂಥವು ಸ್ವಾಗತಾರ್ಹ ಹಾಗೂ ವಾಚನಾರ್ಹವಾಗಿದೆ. ಭಾಷೆ ಸರಳ ಸುಂದರವಾಗಿದೆ. ಕಾಗದ, ಮುದ್ರಣ, ರಕ್ಷಾಪತ್ರ ಎಲ್ಲವೂ ನೆಟ್ಟಗೆ. ಲೇಖಕರೂ ಪ್ರಕಾಶಕರೂ ಗೌರವಾರ್ಹರು.

**ವಿಖ್ಯಾತ ಆಂಗ್ಲ ಸಾಹಿತಿಗಳು : ಲೇಖಕರು ಶ್ರೀ ಎನ್. ಎಸ್. ಗದಗ್‌ಕರ್ ಎಂ.ಎ., ಅವರು ; ಪ್ರಕಾಶಕರು : ಮಿಂಚಿನಬಳ್ಳಿ ಗ್ರಂಥಮಾಲೆ, ಧಾರವಾಡ ; ಸೈಜು : ಕ್ರೌನ್ ೧/೮ ; ಪುಟ : ೯೫ ; ಬೆಲೆ : ೨೫ ಪೈ.**

ಭರತಖಂಡದಲ್ಲಿ ರಾಜಕೀಯ ಕ್ರಾಂತಿ, ದೇಶ ಭಾಷಾಭಿಮಾನಗಳು ಅಧಿಕಗೊಳ್ಳಲು ಇಂಗ್ಲಿಷ್ ಜನರೂ ಇಂಗ್ಲಿಷ್

ಭಾಷೆಯೂ ಬಹುಮಟ್ಟಿಗೆ ಕಾರಣವೆನ್ನಬಹುದು. ಇಂದು ಇಂಗ್ಲಿಷ್ ಸಾಹಿತ್ಯವು ವಿಶ್ವಸಾಹಿತ್ಯವೆನ್ನುವಷ್ಟುಮಟ್ಟಿಗೆ ಮುಂದುವರಿದಿದೆಯೆಂಬುದು ಸರ್ವವಿದಿತವಾಗಿದೆ.

ಪ್ರಕೃತ ಗ್ರಂಥದಲ್ಲಿ ವಿಖ್ಯಾತರಾದ ಆಂಗ್ಲಸಾಹಿತಿಗಳು ೧ ಚಾಸರ್, ೨ ಬೇಕನ್, ೩ ಎಲಿಜಬೆಥೆನ್, ೪ ವಾಲ್ಟರ್ ಸ್ಕಾಟ್, ೫ ಗೋಲ್ಡ್‌ಸ್ಮಿತ್, ೬ ಶೆಲ್ಲಿ, ೭ ಹೆರಾಲ್ಡ್, ೮ ಹ್ಯಾಜ್ಲಿಟ್, ೯ ವ್ಯಾನಿಟಿಫೇರ್, ೧೦ ಥಾಮಸ್‌ಹಾರ್ಡಿ ೧೧ ಕಾರ್ಲಾಯಲ್, ೧೨ ಬಂಗೆ, ೧೩ ಆಸ್ಟೆನ್, ೧೪ ಇಲಿಯಟ್, ೧೫ ಜಾನ್‌ಮೆಸ್‌ಫೀಲ್ಡ್, ೧೬ ಬರ್ನಾರ್ಡ್ ಷಾ, ೧೭ ಗಾಲ್ಸ್‌ವರ್ದಿ, ೧೮ ಗಾರ್ಡಿನರ್, ೧೯ ಫಾರ್ಸ್ಟರ್, ೨೦ ಮೆರಿಥಿಕ್, ೨೧ ಬ್ರಿಜಿಸ್, ೨೨ ಈಟ್ಸ್ ಇವರ ಕವಿ ಕಾವ್ಯಪರಿಚಯವಿದೆ. ಈ ಕವಿಗಳಲ್ಲಿ ಕಥೆ, ಕಾದಂಬರಿ, ಪ್ರಬಂಧ ಮೊದಲಾದ ವಿವಿಧ ಲೇಖಕರು ಸಮಾವೇಶವಾಗಿದ್ದಾರೆ. ಈ ಗ್ರಂಥಾವಲೋಕನದಿಂದ ಆಂಗ್ಲಸಾಹಿತ್ಯದ ಹಲವು ವಿಚಾರಗಳನ್ನು ತಿಳಿಯಬಹುದು. ಪುಸ್ತಕವು ವಾಚನಾರ್ಹವಾಗಿದೆ. ಶೈಲಿ ಸರಳ, ಭಾಷೆ ಸರಸ, ವಿಷಯ ಉಪಯುಕ್ತವೆನಿಸಿದೆ. ಗ್ರಂಥದ ಬಾಹ್ಯಸೌಂದರ್ಯವೂ ತೃಪ್ತಿಕರವಾಗಿದೆ.

**ರಾಯರ ರಾದ್ಧಾಂತ:** ಲೇಖಕರು: ಶ್ರೀ ವೈ. ಆರ್. ಅಶ್ವತ್ಥನಾರಾಯಣರಾವ್; ಪ್ರಕಾಶಕರು: ಎಚ್. ಎಂ. ರಾವ್ ಬ್ರದರ್ಸ್, ಬೆಂಗಳೂರು; ಸೈಜು: ಕ್ರೌನ್ ೧/೮; ಪುಟ: ೪೦; ಬೆಲೆ: ೭೫ ಪೈ.

ಇದೊಂದು ಏಕಾಂಕ ನಗೆನಾಟಕ. ಸಾಮಾಜಿಕ ವಿಷಯವಾದುದು. ಇದರಲ್ಲಿ ಶಾಮರಾಯರು, ರಂಗಣ್ಣ, ಮೇಷ್ಟ್ರು ಸುಂದರಮ್ಮ, ಉಷಾ ಎಂಬ ಐದು ಪಾತ್ರಗಳಿವೆ. ಈ ನಾಟಕವನ್ನು ಕೈಲಾಸಂ ನಾಟಕಗಳ ಶೈಲಿಯಲ್ಲಿ ವಿರಚಿಸಲಾಗಿದೆ. ವಿರಾಮ ಕಾಲದಲ್ಲಿ ಅಭಿನಯಿಸಲು ಅರ್ಹವಾಗಿದೆ.

ಇಂತಹ (ಪುಟ ೧), ಅಥವ (ಪುಟ ೨೧), ಜನನ್ನ (ಪುಟ ೩೫), ಇತ್ಯಾದಿ ಭಾಷಾ ದೋಷಗಳು ಮುಂದಿನ ಮುದ್ರಣದಲ್ಲಿ ಸರಿಪಡಲಿ.

ಕನ್ನಡದಲ್ಲಿ ನಾಟಕ ಸಾಹಿತ್ಯ ವಿಸ್ತಾರವಾಗಿ ಬೆಳೆಯುತ್ತಿರುವುದಕ್ಕೆ ಈ ತರದ ಗ್ರಂಥಗಳು ನಿದರ್ಶನವಾಗಿವೆ. ನಾಟಕ ವಾಚನಾರ್ಹವಾಗಿದೆ. ಅಭಿನಯಿಸಲು ತಕ್ಕುದಾಗಿದೆ.

—ಶೂಲಪಾಣಿ

**ಗುರುರಾಜ ಚರಿತೆ:** ಲೇಖಕಿಯವರು: ಶ್ರೀಮತಿ ಕೆ. ಜಿ. ಸುಶೀಲಮ್ಮ; ಪ್ರಕಾಶಕರು: ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ, ಕೃಷ್ಣಮೂರ್ತಿಪುರಂ, ಮೈಸೂರು; ಆಕಾರ: ಕ್ರೌನ್ ೧/೮; ಪುಟ: xii + ೯೮; ಬೆಲೆ: ೧–೫೦ ರೂ.

ಪರಿಪಕ್ವ ಚೇತನವೊಂದು ರಚಿಸಿದ ಕೃತಿಯು ಸತ್ಪರಿಣಾಮಕಾರಿ ಎಂಬುದಕ್ಕೆ ಈ ಪುಟ್ಟ ಹೊತ್ತಗೆಯೇ ಹಿರಿಯ ಸಾಕ್ಷಿ. ಇದನ್ನು ಆಮೂಲಾಗ್ರವಾಗಿ ಓದಿದವರು ಶ್ರೀ ರಾಘವೇಂದ್ರಗುರುವರರ ಮಹಿಮೆಯನ್ನು ಅರಿತಿರುವರಾದರೆ, ಅವರಿಗೆ ಆಪ್ಯಾಯಮಾನವಾಗುತ್ತದೆ; ಆ ಮಹಿಮೆಯ ಪರಿಚಯ ಸಾಕಷ್ಟು ಇಲ್ಲದವರಾದರೆ ಅವರಿಗೆ "ಗುರುಮಹಿಮೆಯನ್ನು ಕೇಳು, ಆ ಸದ್ಗುರುವಿಗೆ ಶರಣೆಂದು ಭವಸಾಗರವನ್ನೀಸು ನೀನು," ಎಂದು ಕಾಂತಾಸಮ್ಮಿತಿಯಿಂದ ಬೋಧಿಸುತ್ತದೆ. ಇದಕ್ಕಿಂತ ಇನ್ನೇನು ಬೇಕು ಇಂಥ ಕೃತಿಯ ಸಾರ್ಥಕತೆಗೆ ಸಾಕ್ಷಿ! ಇಂಥ ಸುಲಲಿತ ರಮ್ಯ ಕಾವ್ಯ ರಚಿಸಿದ ಕವಯಿತ್ರಿ ಶ್ರೀಮತಿ ಸುಶೀಲಮ್ಮನವರು ತಮ್ಮ ಮಟ್ಟಿಗೆ ತಾವು ಧನ್ಯರು ಮಾತ್ರವಲ್ಲ; ಕನ್ನಡ ಬಲ್ಲವರಿಗೆಲ್ಲ ಮಾನ್ಯರೂ ಆಗಿರುವರು.

ಇಲ್ಲಿ ರಚನೆಗೆ ಆಗರ–ಕೃತಿಕಾರರೇ ತಮ್ಮ ಪೀಠಿಕೆಯಲ್ಲಿ ಬಿನ್ನೈಸಿರುವಂತೆ ಗುರುಪ್ರೇರಣೆ; ಇದರ ಜೊತೆಗೆ ಪೂರ್ವಜನ್ಮ ಸಂಸ್ಕಾರವೂ ಇಂಥ ರಚನೆಗೆ ಪ್ರಚೋದನಕಾರಿಯೆನ್ನಲಡ್ಡಿಯಿಲ್ಲ. ಇಲ್ಲದಿದ್ದಲ್ಲಿ ಇಂಥ ಕೃತಿಗಳನ್ನು ಅನೇಕರು ರಚಿಸಲು ಸುಲಭಸಾಧ್ಯವಾಗುತ್ತಿತ್ತೇನೊ. ಸಂಸ್ಕಾರ ಜನ್ಯ ಸತ್ಪ್ರೇರಣಾಯುತ ಕೃತಿರಚನೆಯಲ್ಲದಿದ್ದರೆ ಅದು ಪಾಂಡಿತ್ಯ ಅಥವಾ ಜಾಣ್ಮೆಯ ಪ್ರದರ್ಶನದ ಕುರುಹು ಮಾತ್ರವಾಗುತ್ತದೆ. ಅಂತರ್ವಾಣಿಯ ಪ್ರೇರಣೆಯಿಂದ ತಾನೇ ತಾನಾಗಿ ಉದ್ಭವಿಸಿದ ಈ ಕೃತಿ–ಇಂಥ ಕೃತಿಗಳು ತುಂಬ ಅಪರೂಪ–ಸಂಸಾರದಲ್ಲಿ ಬಾಳುತ್ತಿರುವ ಒಬ್ಬ ಸದ್ಗೃಹಿಣಿ ಆ ತೊಳಲಾಟವನ್ನು ಮರೆಯುವ ಸಾಧನವನ್ನು ಈ ರೀತಿ ಸಾರ್ಥಕವಾಗಿ ಅಳವಡಿಸಿಕೊಂಡಿರುವುದು ನಮ್ಮ ಅಕ್ಕ ತಂಗಿಯರಿಗೆಲ್ಲ ಆದರ್ಶಪ್ರಾಯವಾಗಿದೆ.

ಈ ಹೊತ್ತಗೆಯು ಎಲ್ಲ ರೀತಿಯಲ್ಲೂ ಔಚಿತ್ಯಪೂರ್ಣವಾಗಿ ಅಳವಟ್ಟಿದೆ. ಮೊಟ್ಟ ಮೊದಲಲ್ಲಿ ಶ್ರೀ ಶ್ರೀಗಳ ಅನುಗ್ರಹ ಪೂರಿತ ಸಂದೇಶ; ಕೃತಿಕಾರರ ಮನಮುಟ್ಟುವ ಮಾತಿನ ಮೊದಲನುಡಿ: ಶ್ರೀಮತಿ ಸುಶೀಲಮ್ಮನವರ ಶೀರ್ಘರೂಪು ಅಣ್ಣನವರ ಸ್ಥಾನದಲ್ಲಿರುವ ಶ್ರೀ ತ. ಸು. ಶಾಮರಾಯರ ಅನುರಾಗ ಭರಿತ ಮುನ್ನುಡಿ; 'ಗುರುಕೃಪೆ' ಯೆಂಬ ಶೀರ್ಷಿ

ಕೆಯಲ್ಲಿ ಮೂಡಿಬಂದಿರುವ ವಸ್ತುರಚನೆಗೆ ಪ್ರಚೋದನೆ ನೀಡಿದ ಕೃತಿಕಾರರ ಮನೆಮಾತಿನ ಪ್ರಬಂಧ ಎಲ್ಲ ಒಂದಕ್ಕಿಂತ ಒಂದು ರಸವತ್ತಾಗಿವೆ. ಇನ್ನು ನಿರರ್ಗಳವಾಗಿ ಹರಿದುಬಂದಿರುವ ಗ್ರಂಥದ ಹೂರಣ "ಆರ್ಯಾ" ಛಂದಸ್ಸಿನಲ್ಲಿ ರಚಿತವಾದ "ಗುರುರಾಜ ಚರಿತೆ"ಯನ್ನು ಮತ್ತು ರಾಗ ತಾಳಕ್ಕನುಗುಣವಾಗಿ ರಚಿತವಾದ ಅನುಭಾವಿ ಗೀತೆಗಳನ್ನು ಓದಿ ಸವಿಯಬೇಕು; ಓದಿ ಮೆಲುಕುಹಾಕಬೇಕೆನ್ನಿಸುತ್ತದೆ. ಕೊನೆಯಲ್ಲಿರುವ ಸೋಪಯೋಗಿ ಅನುಬಂಧವೂ ಔಚಿತ್ಯಪೂರಣ ಚಿತ್ರಗಳು (ಕೃತಿಕಾರರ ಚಿತ್ರವೂ ಇಲ್ಲಿದ್ದಿದ್ದರೆ ಚೆನ್ನವಾಗುತ್ತಿತ್ತೇನೊ ಎನ್ನಿಸುತ್ತದೆ ಓದುಗರಿಗೆ) ಪುಸ್ತಕದ ಮಹತ್ವವನ್ನು ಹೆಚ್ಚಿಸಿವೆ.

ಈ ಪುಟ್ಟದಾದರೂ ಮಹಿಮಾಪೂರ್ಣಕೃತಿ ನಮ್ಮನಾಡ ಮನೆಮನೆಯಲ್ಲೂ ಅಜರಾಮರವಾಗಿ ವಿರಾಜಿಸಿ ಗುರುರಾಜರ ಮಹಿಮೆ ಎಲ್ಲ ಹೃದಯಗಳನ್ನೂ ತಣಿಸಬಲ್ಲುದು.

—ಟಿ. ಜಿ. ಸುಬ್ರಹ್ಮಣ್ಯಂ

---

# ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ :: ಬೆಂಗಳೂರು-೧೮.

## ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ

## ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರ

### ಪತ್ರಿಕಾಗೋಷ್ಠಿ

**(ದಿನಾಂಕ ೮-೧೦-೧೯೬೪ರ ಸಂಜೆ ೫ ಗಂಟೆಗೆ)**

**ಸನ್ಮಾನ್ಯ ಪತ್ರಿಕಾಕರ್ತರೆ ಮತ್ತು ಮಾನ್ಯ ಮಿತ್ರರೆ,**

ದಿನಾಂಕ ೨೫-೧೦-೬೪ನೇ ಭಾನುವಾರ ಬೆಳಗ್ಗೆ ೮-೩೦ ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ೪೭ ನೆಯ ವರ್ಷದ ಸಕಲ ಸದಸ್ಯರ ಅಧಿವೇಶನ ಕೂಡುತ್ತದೆ. ಅಂದು ಪರಿಷತ್ತಿನ ಮುಂದಿನ ಮೂರು ವರ್ಷಗಳ ಆಡಳಿತ ನಿರ್ವಹಣೆಗಾಗಿ ಅಧ್ಯಕ್ಷರ ಮತ್ತು ಕಾರ್ಯಕಾರಿ ಸಮಿತಿಯ ಚುನಾವಣೆ ನಡೆಯುತ್ತದೆ. ಇಂತಹ ಸಂದರ್ಭದಲ್ಲಿ ದಿನಾಂಕ ೧೭-೬-೧೯೫೬ ರಿಂದ ಪರಿಷತ್ತಿನ ಅಧ್ಯಕ್ಷನಾಗಿದ್ದು—ಗೌರವ ಕಾರ್ಯದರ್ಶಿಗಳು, ಗೌ|| ಕೋಶಾಧಿಕಾರಿಗಳು, ವ್ಯವಸ್ಥಾಪಕರು, ಕಾರ್ಯಕಾರಿ ಸಮಿತಿಯ ಸದಸ್ಯರು, ಪತ್ರಿಕಾಕರ್ತರು ಮತ್ತು ಪರಿಷತ್ತಿನ ಹಿತೈಷಿಗಳು ಇವರೆಲ್ಲರ ಸಹಾಯದಿಂದ ಪರಿಷತ್ತಿನ ಕಾರ್ಯಕಲಾಪಗಳನ್ನು ನಿರ್ವಹಿಸಿ ಈ ಮಹಾ ಸಂಸ್ಥೆಗೆ ಯಥಾಶಕ್ತಿಯ ಅಳಿಲು ಭಕ್ತಿಯ ಸೇವೆಯನ್ನು ಸಲ್ಲಿಸಿದ ನಾನು ಈ ಸೇವಾವಕಾಶದಲ್ಲಿ ಪರಿಷತ್ತಿಗಾಗಿ ಸಲ್ಲಿಸಿದ ಕೈಂಕರ್ಯಗಳನ್ನು ಮಹಾಜನಗಳ, ಹಾಗೂ ಮಾನ್ಯ ಸದಸ್ಯರ ಮುಂದೆ ಇಂದು ನಿವೇದಿಸುವುದು ಆಗತ್ಯವೆಂದು ಭಾವಿಸಿದ್ದೇನೆ.

ನಾನು ೧೯೩೧ ರಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯನಾಗಿದ್ದೇನೆ. ಕೆಲವು ಕಾಲ ಕಾರ್ಯಕಾರಿ ಸಮಿತಿಯ ಸದಸ್ಯನಾಗಿ, ಕನ್ನಡ ನುಡಿಯ ಸಂಪಾದಕನಾಗಿ ಸೇವೆ ಸಲ್ಲಿಸಿದ್ದೇನೆ. ೧೯೩೧ ರಿಂದ ನಡೆದ ಸಾಹಿತ್ಯ ಸಮ್ಮೇಳನಗಳಲ್ಲಿ, ಹಲವಾರು ಸಮ್ಮೇಳನಗಳಲ್ಲಿ ಭಾಗವಹಿಸಿದ್ದೇನೆ. ಪರಿಷತ್ತಿನ ಅನೇಕ ಸಮಾರಂಭಗಳಲ್ಲಿ ಭಾಷಣಕಾರನಾಗಿ, ಪರಿಷತ್ತಿನ ಕನ್ನಡ ನಿಘಂಟು ಸಂಪಾದಕ ಸಮಿತಿಯ ಸದಸ್ಯನಾಗಿ, (ಸರ್ಕಾರದ ಪತ್ರಿನಿಧಿ) ಕನ್ನಡ ಕವಿಚರಿತೆಯ ಸಂಪಾದಕ ಮಂಡಲಿಯ ಸದಸ್ಯನಾಗಿ, ಹಾಗೂ ಹಲವು ಉಪಸಮಿತಿಗಳ ಸದಸ್ಯನಾಗಿ ಯಥಾಶಕ್ತಿ ಸೇವೆ ಸಲ್ಲಿಸಿದ್ದೇನೆ. ಪರಿಷತ್ತಿನ ಧ್ಯೇಯೊದ್ದೇಶಗಳಿಗನುಗುಣವಾದ ಕರ್ಣಾಟಕ ಏಕೀಕರಣ ಚಳುವಳಿಗಾಗಿ ಸುಮಾರು ೪೦ ವರ್ಷಗಳಿಂದ ಕೈಲಾದಷ್ಟು ಶ್ರಮಿಸಿದ್ದೇನೆ. ಕರ್ಣಾಟಕದ ಗಡಿಗಳಾದ, ಸೊಲ್ಲಾಪುರ, ಅಕ್ಕಲಕೋಟೆ, ಆದವಾನಿ, ಮಡಕಶಿರಾ, ಹೊಸೂರು, ಡೆಂಕಣಿಕೋಟೆ, ನೀಲಗಿರಿ, ಕಾರವಾರ, ಕಾಸರಕೋಡು, ತಾಳವಾಡಿ, ಗಡಹಿಂಗ್ಲೆಜ್, ನಿಪ್ಪಾಣಿ, ಕೊಲ್ಲಾಪುರ,

ಬೀದರ್, ಭಾಲ್ಕಿ, ಉದ್ಗಿರಿ, ಉಮ್ಮರಗ, ಮೊದಲಾದ ಕಡೆ ಹಲವಾರು ಸಲ ಸಂಚರಿಸಿ ಕನ್ನಡದ ಜಾಗೃತಿಗಾಗಿ ಶ್ರಮಿಸಿದ್ದೇನೆ. ವಿಶಾಲ ಮೈಸೂರು ರಾಜ್ಯ ರಚನೆಗೆ ಕಿಂಚಿತ್ ಪ್ರಯತ್ನಿಸಿದ್ದೇನೆ.

## ಸಂಪದಭಿವೃದ್ಧಿ

ಪರಿಷತ್ಸದಸ್ಯರ ಅನುಗ್ರಹದಿಂದ ೧೯೫೬ ನೇ ಜೂನ್ ೧೭ ರಂದು ಪರಿಷತ್ತಿನ ಅಧ್ಯಕ್ಷ ಪದವಿಯನ್ನು ವಹಿಸಿಕೊಂಡಮೇಲೆ ಇಂದಿನವರೆಗೆ, ಪರಿಷತ್ತಿನ ಆರ್ಥಿಕ, ಶೈಕ್ಷಣಿಕ, ವಾಙ್ಮಯಾತ್ಮಕ ಮತ್ತು ಆಡಳಿತಗಳ ಪ್ರಗತಿಗಾಗಿ ಕಿಂಚಿತ್ತು ದುಡಿದಿದ್ದೇನೆ. ನಾನು ಅಧ್ಯಕ್ಷನಾದಾಗ ಪರಿಷತ್ತಿನ ಹಿಂಭಾಗದ ಪೌಳಿಗೋಡೆ (Compound) ಕೆಲಭಾಗ ಬಿದ್ದುಹೋಗಿತ್ತು. ಸಭಾಭವನದಲ್ಲಿ ಪೂರ್ತಿ ಕುರ್ಚಿಗಳಿರಲಿಲ್ಲ. ಪರಿಷತ್ತಿನ ಕೋಣೆಯೊಂದರಲ್ಲಿ ಪುಸ್ತಕಗಳು ರಾಶಿ ರಾಶಿಯಾಗಿದ್ದುವು. ಅವನ್ನೆಲ್ಲಾ ಸರಿಪಡಿಸಿ ಈಗ ವ್ಯವಸ್ಥೆಗೊಳಿಸಲಾಗಿದೆ. ಮೈಸೂರು ಸಂಗೀತ ನಾಟಕ ಅಕಾಡೆಮಿಯವರ ಸಹಾಯದಿಂದ ಪರಿಷತ್ತಿನ ರಂಗಮಂಟಪ ಸಜ್ಜುಗೊಂಡಿದೆ. ಸಂಗೀತೋಪಕರಣಗಳು ಸಿದ್ಧವಾಗಿವೆ. ಸಭಾಭವನದಲ್ಲಿ ಕುರ್ಚಿಗಳು ಸಂಪೂರ್ಣವಾಗಿ ಅಲಂಕರಿಸಲ್ಪಟ್ಟಿವೆ. ಪುಸ್ತಕಾಲಯದ ವ್ಯವಸ್ಥೆ ಅಚ್ಚುಕಟ್ಟಾಗಿದೆ. ವಾಚನಾಲಯವೂ ಉತ್ತಮಗೊಂಡಿದೆ. ಈ ಎಲ್ಲ ಸುಧಾರಣೆಗಳನ್ನೂ ಆಗ ಮೈಸೂರಿನ ಮುಖ್ಯಮಂತ್ರಿಗಳಾಗಿದ್ದ ಮಾನ್ಯ ಶ್ರೀ ಕೆ. ಹನುಮಂತಯ್ಯನವರು ನನ್ನ ಪ್ರಾರ್ಥನೆಯಂತೆ ಪರಿಷತ್ತಿಗೆ ಕೊಟ್ಟ ೩೫,೦೦೦ ರೂ.ಗಳ ಉದಾರ ಸಹಾಯದ್ರವ್ಯದ ನೆರವಿನಿಂದ ಮಾಡಲಾಯಿತು.

ಸರ್ಕಾರದಿಂದ ಪ್ರತಿವರ್ಷ ಪರಿಷತ್ತಿಗೆ ೫,೦೦೦ ರೂ. ಗಳ ಸಹಾಯ ದ್ರವ್ಯ ದೊರೆಯುತ್ತಿತ್ತು. ಆದರೆ ನಾವು ನಡೆಸಿದ ಪ್ರಯತ್ನದ ಫಲವಾಗಿ ೧೯೫೮-೫೯ ರಿಂದ ಪ್ರತಿವರ್ಷ ೭,೫೦೦ ರೂ. ಗಳ ಸಹಾಯ ದ್ರವ್ಯ ಬರುವಂತಾಯಿತು ಎಂಬುದನ್ನು ತಿಳಿಸಲು ಹರ್ಷಿಸುತ್ತೇನೆ. ಆದರೆ ಪರಿಷತ್ತು ನಡೆಸುತ್ತಿರುವ ಕಾರ್ಯಕಲಾಪಗಳಿಗೆ ಇದು ಸರಿಯಾದ ಸಹಾಯವಲ್ಲ. ಇತರ ರಾಜ್ಯಗಳಲ್ಲಿ ಇಂತಹ ಪರಿಷತ್ತುಗಳಿಗೆ ಉದಾರವಾಗಿ ಧನಸಹಾಯ ಸಿಗುತ್ತಿದೆ. ನಮ್ಮ ಸರ್ಕಾರ ಈ ವಿಷಯವಾಗಿ ಉದಾರವಾಗಬೇಕು. ವರ್ಷಕ್ಕೆ ೫೦,೦೦೦ ರೂ ಗಳನ್ನಾದರೂ ಪರಿಷತ್ತಿಗೆ ಕೊಡಬೇಕೆಂಬುದು ನನ್ನ ಆಶೆ.

## ಬೆಂಗಳೂರು ಕಾರ್ಪೊರೇಷನ್ನಿನ ಸಹಾಯ

ಪರಿಷತ್ತಿನ ವಾಚನಾಲಯ ಮತ್ತು ವಸಂತ ಸಾಹಿತ್ಯೋತ್ಸವಕ್ಕೆ ಪ್ರತಿವರ್ಷ ಕೊಡುತ್ತಿದ್ದ ಹಣಕ್ಕಿಂತ ಹೆಚ್ಚು ಹಣವನ್ನು ನಗರಸಭೆ ಕೊಟ್ಟಿದೆ. ಅಲ್ಲದೆ ಪರಿಷತ್ತಿಗೆ ನೀರನ್ನು ಉಚಿತವಾಗಿ ಒದಗಿಸುತ್ತಿದೆ. ಬೆಂಗಳೂರು ನಗರಸಭೆಯ ಈ ಸಹಕಾರ ಶ್ಲಾಘನಾರ್ಹವಾಗಿದೆ.

## ಸನ್ಮಾನ ಸಭೆ

ಸಮ್ಮೇಳನಾಧ್ಯಕ್ಷರು ಮತ್ತು ಪರಿಷತ್ತಿನ ಸಂಪರ್ಕ ಮರೆಯದಿರಲೆಂದು ತಾರೀಖು ೧೨-೧೨-೫೬ ರ ಶುಭದಿನ ಡಾ|| ಆರ್. ಆರ್. ದಿವಾಕರ್ ಅವರ ಅಧ್ಯಕ್ಷತೆಯಲ್ಲಿ ಮೈಸೂರಿನ ರಾಜ್ಯಪಾಲರ ಸಮ್ಮುಖದಲ್ಲಿ ಆದುವರೆಗೆ ಆಗಿಹೋದ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರನ್ನು ಆಹ್ವಾನಿಸಿ ಎಲ್ಲರಿಗೂ ರಜತಕರಂಡದಲ್ಲಿ ಬಿನ್ನಹ ಪತ್ರಿಕೆಯನ್ನು ಅರ್ಪಿಸಲಾಯಿತು. ಅದೇ ಸಂದರ್ಭದಲ್ಲಿ 'ಕನ್ನಡ ನುಡಿಯ ಸನ್ಮಾನೋತ್ಸವ ವಿಶೇಷ ಸಂಚಿಕೆ' (೧೯೫೬) ಪ್ರಕಟಿಸ

ಲಾಯಿತು. ಆ ಸಂಚಿಕೆಯು ಪರಿಷತ್ತಿನ ಕಾರ್ಯಕಲಾಪಗಳ ಒಂದು ಕೈಪಿಡಿ ಎಂಬಂತಿದೆ. ಇದರ ರಚನೆಯ ಕಾಲದಲ್ಲಿ ಕಾರ್ಯಕಾರಿ ಸಮಿತಿಯ ಸದಸ್ಯರಾದ ಪ್ರೊ|| ಜಿ. ವೆಂಕಟಸುಬ್ಬಯ್ಯನವರು ಮಾಡಿದ ಉಪಕಾರವನ್ನು ನಾನು ಇಲ್ಲಿ ಸ್ಮರಿಸಬೇಕಾಗಿದೆ.

## ಪರಿಷತ್ತಿನ ಸರಸ್ವತೀ ಭಂಡಾರ

ಪರಿಷತ್ತಿನ ಪುಸ್ತಕ ಭಂಡಾರದಲ್ಲಿ ಈಗ ಒಟ್ಟು ೧೪,೦೦೦ ಪುಸ್ತಕಗಳಿವೆ. ಈ ಸೇವಾವಕಾಶದಲ್ಲಿ ಪುಸ್ತಕ ಭಂಡಾರಕ್ಕೆ ಸುಮಾರು ೪,೦೦೦ ಗ್ರಂಥಗಳು ಹೊಸದಾಗಿ ಸೇರಿವೆ. ಇದರಲ್ಲಿ ೨,೦೦೦ ಗ್ರಂಥಗಳು ಪುಕ್ಕಟೆಯಾಗಿ ಮತ್ತು ವಿಮರ್ಶೆಗೆ ಬಂದವುಗಳು. ನನ್ನ ಸಂಚಾರ ಕಾಲದಲ್ಲಿ ಗ್ರಂಥಕರ್ತೃಗಳೊಂದಿಗೆ ಸಂಭಾಷಿಸಿ ಪರಿಷತ್ತಿಗೆ ಅನೇಕ ಉಪಯುಕ್ತ ಗ್ರಂಥಗಳನ್ನು ಉಚಿತವಾಗಿ ತಂದುಕೊಟ್ಟಿದ್ದೇನೆ. ಪುಸ್ತಕಗಳ ಅಕಾರಾದಿಯಾಗಿ ಗ್ರಂಥಗಳ ಪಟ್ಟಿಯನ್ನು ಸಿದ್ಧಪಡಿಸಿ ಅಚ್ಚಿಗೆ ಕೊಡಲಾಗಿದೆ. ಕರ್ಣಾಟಕದ ಗ್ರಂಥಕಾರರು ಪ್ರತಿಯೊಬ್ಬರೂ ತಮ್ಮ ಗ್ರಂಥಗಳನ್ನು ಪರಿಷತ್ತಿಗೆ ಕಳುಹಿಸುವುದರ ಮೂಲಕ ನೆರವಾಗಬೇಕೆಂದು ಪ್ರಾರ್ಥಿಸುತ್ತೇನೆ.

## ಗ್ರಂಥ ಪ್ರಕಟಣೆ

ಕರ್ಣಾಟಕ ಕವಿಚರಿತ್ರೆಯ ಮೂರು ಭಾಗಗಳನ್ನೂ ಸಂಸ್ಕರಿಸಿ ಅವುಗಳನ್ನು ಎರಡು ಭಾಗವಾಗಿ ವಿಂಗಡಿಸಿ ಈಗ ಪ್ರಥಮ ಭಾಗವನ್ನು ಪರಿಷತ್ತಿನಿಂದ ಪ್ರಕಟಿಸಲಾಗಿದೆ. ಎರಡನೇ ಭಾಗವು ಈಗ ಅಚ್ಚಿಗೆ ಸಿದ್ಧವಾಗಿದೆ. ಈ ಕಾರ್ಯವು ಸಮಗ್ರ ಕರ್ಣಾಟಕಕ್ಕೆ ಪರಿಷತ್ತು ಕೊಟ್ಟ ದೊಡ್ಡ ದೇಣಿಗೆಯೆಂದು ಹೇಳಬಹುದು. ಕಷ್ಟಕರವಾದ ಈ ಸಂಪಾದನೆಯ ಕಾರ್ಯದಲ್ಲಿ ವಿಖ್ಯಾತ ವಿದ್ವಾಂಸರಾದ ಪ್ರೊ|| ಡಿ. ಎಲ್. ನರಸಿಂಹಾಚಾರ್, ಎಂ.ಎ., ಶ್ರೀ ಕೆ. ಎಸ್. ಧರಣೇಂದ್ರಯ್ಯ, ಎಂ.ಎ., ಬಿ.ಟಿ., ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ, ಪ್ರೊ|| ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ. —ಈ ನಾಲ್ಕು ಮಂದಿ ಕೂಡಿ ಈ ಕಾರ್ಯವನ್ನು ನಿರ್ವಹಿಸಿದ್ದಾರೆ. ಕವಿಚರಿತೆ ೨ನೇ ಭಾಗವು ಅಚ್ಚಾಗಿ ಪ್ರಕಟವಾದರೆ ಅದರಿಂದ ಕನ್ನಡಾಭ್ಯಾಸಿಗಳಿಗೆ ತುಂಬಾ ಪ್ರಯೋಜನವಾಗುವುದೆಂದು ಭಾವಿಸಿದ್ದೇನೆ. ಇದರಲ್ಲಿ ಹೊಸ ಕವಿಗಳ ಹೆಸರೂ ಹೊಸ ವಿಚಾರವೂ ಬಹಳವಾಗಿ ಸೇರಿವೆ. ಕಾಲದಲ್ಲಿ ಪರಿಷತ್ತಿನ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ಅನುಭವಮುಕುರಂ, ಚೇರಮಕಾವ್ಯಂ, ತ್ರಿಪುರದಹನ ಸಾಂಗತ್ಯ, ಉದ್ಭಟದೇವ ಚರಿತೆ,—ಎಂಬೀ ಪ್ರಾಚೀನ ಗ್ರಂಥಗಳು ಪ್ರಕಟವಾಗಿವೆ. ನೂತನ ಸಾಹಿತ್ಯ ಕೃತಿಗಳಾದ ಗಮಕ ಕಾವ್ಯಮಂಜರಿ, ಆಧುನಿಕ ಗದ್ಯ ಸಾಹಿತ್ಯ, ಅತ್ಯುತ್ತಮ ಸಣ್ಣಕತೆಗಳು, ಕಾದಂಬರಿ ಸಾಮಾನ್ಯ ಮನುಷ್ಯ, ಮೂರು ಸ್ಪರ್ಧಾ ನಾಟಕಗಳು, ವಾಚನ ಕಾವ್ಯಮಂಜರಿ, ಕಾವ್ಯಸೌರಭ ಮೊದಲಾದ ಗ್ರಂಥಗಳು ಪ್ರಕಟವಾಗಿವೆ. ಅಲ್ಲದೆ ಕನ್ನಡ ಬಾವುಟ, ಕನ್ನಡ ನಾಡಿನ ಚರಿತ್ರೆ ಮತ್ತು ನೂತನ ವಿಮರ್ಶೆಯಿಂದ ಕೂಡಿದ ಸೋಮೇಶ್ವರ ಶತಕ ಇವುಗಳ ಪುನರ್ಮುದ್ರಣವೂ ಆಗಿದೆ.

## ಕನ್ನಡ ನುಡಿ – ಪರಿಷತ್ಪತ್ರಿಕೆ

ವರ್ಷಕ್ಕೆ ೬ ರೂ. ಗಳ ಚಂದಾ ಪಡೆದು ಮಾನ್ಯ ಸದಸ್ಯರಿಗೆ 'ಕನ್ನಡ ನುಡಿ' ಮಾಸಿಕ (೧೨ ಪ್ರತಿ), 'ಸಾಹಿತ್ಯ ಪರಿಷತ್ಪತ್ರಿಕೆ' ಷಾಣ್ಮಾಸಿಕ (೨ ಪ್ರತಿ) ಸಲ್ಲಿಸುವ ಪರಿಷತ್ತಿನ ಕಾರ್ಯ ಸಾಹಸಮಯವೇ ಸರಿ. ಮೇಲೆ ಕಂಡ ಎರಡು ಪತ್ರಿಕೆಗಳನ್ನೂ ಇತರ ಪರಿಷತ್ತಿನ ಸೌಲಭ್ಯ

ಗಳನ್ನೂ ಪಡೆಯುವ ಮಾನ್ಯ ಸದಸ್ಯರು ವರ್ಷಕ್ಕೆ ೧೨ ರೂ. ಗಳ ಚಂದಾ ಸಲ್ಲಿಸುವುದಾದರೆ ಪರಿಷತ್ತಿಗೆ ಮಹೋಪಕಾರವನ್ನು ಮಾಡಿದಂತಾಗುತ್ತದೆ. ನಾನು ಪ್ರತಿಯೊಂದು ಸಕಲ ಸದಸ್ಯರ ಸಭೆಯಲ್ಲೂ ಈ ಮಾತನ್ನು ಹೇಳುತ್ತಾ ಬಂದಿದ್ದೇನೆ. ಆದರೂ ಇದು ಸಭೆಯಿಂದ ಮಂಜೂರಾಗಿಲ್ಲ. ಈಗಲೂ ಪರಿಷತ್ತಿನ ಸದಸ್ಯರು ದೊಡ್ಡ ಮನಸ್ಸು ಮಾಡಿ ನನ್ನ ಈ ಪ್ರಾರ್ಥನೆಯನ್ನು ಅಂಗೀಕರಿಸಿದರೆ ಪರಿಷತ್ತಿನ ಆರ್ಥಿಕಾಭಿವೃದ್ಧಿಗೆ ಸಹಾಯವಾಗುತ್ತದೆ. ಇದೇ ಊರಿನಲ್ಲಿರುವ ಒಂದು ಮಹಿಳಾ ಸಮಾಜವು ೧೨ ರೂ. ಗಳಂತೆಯೂ, ಗಾಯನ ಸಮಾಜವು ೧೫ ರೂ. ಗಳಂತೆಯೂ (ವರ್ಷಕ್ಕೆ) ಚಂದಾ ವಸೂಲು ಮಾಡುತ್ತಿವೆ. ಬಹುಮುಖವಾದ ಕಾರ್ಯಕಲಾಪಗಳನ್ನುಳ್ಳ ಪರಿಷತ್ತಿನಂತಹ ಮಹಾಸಂಸ್ಥೆಗೆ ವರ್ಷಕ್ಕೆ ೧೨ ರೂ. ಗಳ ಚಂದಾ ವಿಧಿಸುವುದು ಹೆಚ್ಚಲ್ಲವೆಂದು ನನ್ನ ಅಭಿಪ್ರಾಯ. ಈ ಸೇವಾವಕಾಶದಲ್ಲಿ ಬಹುಕಾಲ ಕನ್ನಡ ನುಡಿ ಮತ್ತು ಪರಿಷತ್ಪತ್ರಿಕೆಗಳ ಸಂಪಾದಕನಾಗಿ ಕೆಲಸ ಮಾಡಿದ್ದೇನೆ. ಈಗ ಕನ್ನಡ ನುಡಿಗೆ ಶ್ರೀ ಡಿ. ಆರ್. ರಾಮಯ್ಯನವರು ಸಂಪಾದಕರಾಗಿದ್ದಾರೆ. ನಾನು ಪರಿಷತ್ಪತ್ರಿಕೆಗೆ ಸಂಪಾದಕನಾಗಿರುವೆನು. ಡಾ|| ಕೆ. ಎಂ. ಕೃಷ್ಣರಾಯರು ಇದರ ಸಹ ಸಂಪಾದಕರಾಗಿದ್ದಾರೆ.

## ಪರಿಷತ್ತಿನಲ್ಲಿರುವ ನಿಧಿಗಳು

ಪರಿಷತ್ತಿನ ಸಂಸ್ಥಾಪಕರ ದೂರದೃಷ್ಟಿಯ ಫಲವಾಗಿ ಪರಿಷತ್ತಿನಲ್ಲಿ ಗಮಕ ನಿಧಿ, ಹರಿದಾಸ ಸಾಹಿತ್ಯ ನಿಧಿ, ಸಾಹಿತ್ಯ ಪರೀಕ್ಷಾ ನಿಧಿ, ಉಪನ್ಯಾಸ ನಿಧಿ, ಇತರ ನಿಧಿಗಳು—ಹೀಗೆ ನಿಧಿಯ ರೂಪದಲ್ಲಿ ಒಟ್ಟು ೧೮,೯೫೧ ರೂ. ಗಳಿವೆ. ಇದರಿಂದ ಬರುವ ಬಡ್ಡಿಯಿಂದ ದಾನಿಗಳ ಉದ್ದೇಶಗಳಿಗನುಗುಣವಾಗಿ ಪರಿಷತ್ತಿನವರು ಕಾರ್ಯಕ್ರಮಗಳನ್ನು ನಿರ್ವಹಿಸುತ್ತಿದ್ದಾರೆ. ಈ ನಿಧಿಗಳು ಸಾಹಿತ್ಯೋನ್ನತಿಗೆ ನೆರವಾಗಿವೆ.

ಪರಿಷತ್ತಿನ ಉಜ್ವಲಾಭಿಮಾನಿಗಳೂ, ಬೆಂಗಳೂರಿನ ಪ್ರಮುಖ ವರ್ತಕರೂ, ಉದಾರ ದಾನಿಗಳೂ ಆದ ಶ್ರೀಮಾನ್ ಆರ್. ಚಂದ್ರಶೇಖರಯ್ಯನವರು ೨,೦೦೦ ರೂ.ಗಳನ್ನು ಪರಿಷತ್ತಿಗೆ ಒಂದು ನಿಧಿಯಾಗಿ ಅರ್ಪಿಸಿದ್ದಾರೆ. ಈ ನಿಧಿಯ ಸಮರ್ಪಣೆಯಲ್ಲಿ ಅವರ ಧರ್ಮಪತ್ನಿ ಶ್ರೀಮತಿ ಸುಬ್ಬಮ್ಮನವರು ನಮಗೆ ತುಂಬಾ ಉಪಕಾರ ಮಾಡಿದ್ದಾರೆ. ಬೆಂಗಳೂರಿನ ಮತ್ತೊಬ್ಬ ಗಣ್ಯ ಮಹನೀಯರೂ, ಕರ್ಣಾಟಕ ಮುದ್ರಣಾಲಯದ ಒಡೆಯರೂ ಆದ ಶ್ರೀಮಾನ್ ಟಿ. ಎನ್. ನಂಜುಂಡಪ್ಪನವರು ೧,೦೦೦ ರೂ.ಗಳ ನಿಧಿಯನ್ನು ಪರಿಷತ್ತಿಗೆ ಅರ್ಪಿಸಿದ್ದಾರೆ. ಅವರ ಉಪಕಾರವು ಇಲ್ಲಿ ಸ್ಮರಣಾರ್ಹವಾಗಿದೆ. ನಾಡಿನ ಮತ್ತು ನಗರದ ಪ್ರಮುಖ ವರ್ತಕರು ಈ ರೀತಿಯಾಗಿ ಪರಿಷತ್ತಿಗೆ ಹೆಚ್ಚು ನಿಧಿಗಳನ್ನು ಅರ್ಪಿಸಿ ಸಾಹಿತ್ಯ ಸೇವೆಗೆ ನೆರವಾಗಬೇಕೆಂದು ಕೋರುತ್ತೇನೆ.

## ಕನ್ನಡ ನಿಘಂಟು ರಚನಾಕಾರ್ಯ

ಪರಿಷತ್ತು ಕೈಗೊಂಡಿರುವ ಬಹು ದೊಡ್ಡ ಕಾರ್ಯ ಕನ್ನಡ-ಕನ್ನಡ ನಿಘಂಟಿನ ರಚನೆ. ಈ ಕಾರ್ಯವನ್ನು ಪರಿಷತ್ತಿನ ಹಿರಿಯರು, ೧೯೪೩ ರಿಂದ ಸುಪ್ರಸಿದ್ಧ ಡಾ|| ಎ. ಆರ್. ಕೃಷ್ಣಶಾಸ್ತ್ರಿಗಳ ನೇತೃತ್ವದಲ್ಲಿ ಪ್ರಾರಂಭಿಸಿದರು. ಕರ್ನಾಟಕದ ಪ್ರಮುಖ ವಿದ್ವಾಂಸರಾದ ಪ್ರೊ|| ಟಿ. ಎನ್. ಶ್ರೀಕಂಠಯ್ಯ, ಪ್ರೊ|| ಡಿ. ಎಲ್. ನರಸಿಂಹಾಚಾರ್, ಡಾ|| ಆರ್. ಎಸ್. ಮುಗಳಿ, ಪ್ರೊ|| ಎಸ್. ಎಸ್. ಮಾಳವಾಡ್, ಪ್ರೊ|| ಡಿ. ಕೆ. ಭೀಮಸೇನರಾವ್, ಪ್ರೊ|| ಕೆ. ಜಿ.

ಕುಂದಣಗಾರ್, ಪ್ರೊ|| ಎಂ. ಮರಿಯಪ್ಪಭಟ್, ಪ್ರೊ|| ಕೆ. ವಿ. ರಾಘವಾಚಾರ್, ಶ್ರೀ ಎಲ್. ಲಕ್ಷ್ಮೀನಾರಾಯಣರಾವ್, ಶ್ರೀ ಕೆ. ಎಸ್. ಧರಣೇಂದ್ರಯ್ಯ, ಡಾ|| ಆರ್. ಸಿ. ಹಿರೇಮಠ್, ಶ್ರೀ ಡಿ. ಸಿ. ಸುಬ್ಬರಾಯಪ್ಪ, ಶ್ರೀ ಸಿದ್ದಯ್ಯಪುರಾಣಿಕ್, ಪ್ರೊ|| ಡಿ. ಜವರೇಗೌಡ ಮತ್ತು ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ ಮೊದಲಾದವರು ಈ ಸಂಪಾದಕ ಮಂಡಲಿಯಲ್ಲಿದ್ದಾರೆ. ನಿಘಂಟು ಡೆಮ್ಮಿ ೧/೮ ಆಕಾರದಲ್ಲಿ ಸುಮಾರು ೫,೦೦೦ ಪುಟಗಳಷ್ಟಾಗುತ್ತದೆ. ಈ ನಿಘಂಟು ರಚನೆಯಾದರೆ ಕನ್ನಡಿಗರಿಗೆ ಇದರಿಂದ ಮಹೋಪಕಾರವಾಗುವುದೆಂದು ನಂಬಬಹುದು. ಮೈಸೂರು ಸರಕಾರದವರು ಇದರ ರಚನೆಗೆ ಧನಸಹಾಯ ಮಾಡಿದ್ದಾರೆ. ತಾ|| ೨೯-೫-೧೯೬೧ ರಲ್ಲಿ ಸರ್ಕಾರದ ಕೂಡ ಪರಿಷತ್ತು ೧೫ ಲಕ್ಷ ರೂ.ಗಳ ವೆಚ್ಚದಲ್ಲಿ ನಿಘಂಟನ್ನು ರಚಿಸಲು ಕರಾರು ಮಾಡಿಕೊಂಡಿದೆ. ಇದರಲ್ಲಿ ೨ತಿ ಲಕ್ಷ ರೂ.ಗಳು ಬಂದಿವೆ. ಈ ಸಂದರ್ಭದಲ್ಲಿ ಆಗಿನ ಮುಖ್ಯಮಂತ್ರಿ ಶ್ರೀ ಬಿ. ಡಿ. ಜತ್ತಿ, ಅರ್ಥಮಂತ್ರಿ ಶ್ರೀ ಟಿ. ಮರಿಯಪ್ಪ, ವಿದ್ಯಾಮಂತ್ರಿ ಶ್ರೀ ಅಣ್ಣಾರಾವ್ ಗಣಮುಖಿ ಈ ಮಹನೀಯರು ಮಾಡಿದ ಸಹಾಯ ಸ್ಮರಣಾರ್ಹ. ಈಗಿನ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪನವರು, ಅರ್ಥಮಂತ್ರಿ ಶ್ರೀ ಬಿ. ಡಿ. ಜತ್ತಿಯವರು, ವಿದ್ಯಾಮಂತ್ರಿ ಶ್ರೀ ಎಸ್. ಆರ್. ಕಂಠಿಯವರು ಈ ದೆಸೆಯಲ್ಲಿ ಉಪಕಾರಿಗಳು. ಈಗ ಪರಿಷತ್ತು ನಿಘಂಟಿನ ಕಾರ್ಯಕ್ಕಾಗಿ ಒಂದು ಹೊಸ ಕಟ್ಟಡವನ್ನು ಉದಾರಿಗಳ ನೆರವಿನಿಂದ (೨೦,೦೦೦ ರೂ.ಗಳ ವೆಚ್ಚದಿಂದ) ಕಟ್ಟಿಸಿದೆ. ಸುಮಾರು ಒಂದು ಲಕ್ಷ ರೂ.ಗಳ ವೆಚ್ಚದಲ್ಲಿ ಮುದ್ರಣ ಯಂತ್ರ, ಅದಕ್ಕೆ ಸಂಬಂಧಪಟ್ಟ ಯಂತ್ರೋಪಕರಣಗಳು ಸಿದ್ಧವಾಗಿವೆ. ಈ ನಿಘಂಟು ಮುಕ್ತಾಯವಾದರೆ ಪರಿಷತ್ತಿಗೆ ತಕ್ಕಷ್ಟು ಆರ್ಥಿಕ ಲಾಭವಾಗುತ್ತದೆ. ನಿಘಂಟಿನ ಮಾರಾಟದಲ್ಲಿ ಶೇಕಡ ೧೦ ರಷ್ಟು ಹಣ ಪರಿಷತ್ತಿಗೆ ಸಂಭಾವನಾ ರೂಪದಲ್ಲಿಯೂ, ನಿಘಂಟಿನ ೫೦೦ ಪ್ರತಿಗಳು ಉಚಿತವಾಗಿಯೂ ಕೊಡುವಂತೆ ಸರ್ಕಾರದಲ್ಲಿ ಕರಾರಾಗಿದೆ. ನಿಘಂಟಿನ ಮಾರಾಟದಿಂದ ನೂರಕ್ಕೆ ೨೫ ರಷ್ಟು ಹಣ ಪರಿಷತ್ತಿಗೆ ಬರುತ್ತದೆ. ಮುದ್ರಣದ ಹಣವೂ ಬರುತ್ತದೆ. ಕರ್ಣಾಟಕದ ಮಹಾಜನರು ಉದಾರವಾಗಿ ನಿಘಂಟನ್ನು ಕೊಂಡು ಪರಿಷತ್ತು ಕೈಗೊಂಡಿರುವ ಈ ಕಾರ್ಯದಲ್ಲಿ ಸಹಾಯಮಾಡಬೇಕಾಗಿ ಕೋರುತ್ತೇನೆ. ಈ ಕನ್ನಡ ನಿಘಂಟು ಗಾತ್ರದಿಂದ ಶ್ರೀ ಕಿಟ್ಟೆಲರ ನಿಘಂಟಿನ ನಾಲ್ಕರಷ್ಟಾಗಿ ಹೆಚ್ಚು ಪ್ರಯೋಜನಕಾರಿಯಾಗಿ ಇಡೀ ಭಾರತದಲ್ಲಿಯೇ ಪ್ರಖ್ಯಾತವೆನಿಸುವುದು.

## ಪರಿಷತ್ತಿಗೆ ಒಂದು ಕನ್ನಡ ಟೈಪ್‌ರೈಟರ್

ಪರಿಷತ್ತಿಗೆ ಒಂದು ಕನ್ನಡ ಟೈಪ್‌ರೈಟರನ್ನು ತರಿಸಿದೆ. ಈಗ ಪ್ರತಿದಿನ ಸಂಜೆ ಈ ಯಂತ್ರವನ್ನು ಉಪಯೋಗಿಸಲು ತರಗತಿಗಳನ್ನು ನಡೆಸಲಾಗುತ್ತಿದೆ. ಶ್ರೀ ಅನಂತಸುಬ್ಬರಾಯರು ಈ ವಿಷಯದಲ್ಲಿ ಪರಿಷತ್ತಿಗೆ ನೆರವಾಗಿದ್ದಾರೆ.

## ಪರಿಷತ್ತಿನ ಪರೀಕ್ಷೆಗಳು

ಕನ್ನಡ ಸಾಹಿತ್ಯ ಪರಿಷತ್ತು ಹಲವಾರು ವರ್ಷಗಳಿಂದ ಕನ್ನಡ ಕಾವ, ಕನ್ನಡ ಜಾಣ ಮತ್ತು ಗಮಕ ಪ್ರವೇಶ ಪರೀಕ್ಷೆಗಳನ್ನು ನಡೆಸುತ್ತಿದೆ. ಕೆಲವು ಸಮಯದಲ್ಲಿ ಗಮಕ ಪ್ರೌಢ ಪರೀಕ್ಷೆ ನಡೆದುದೂ ಉಂಟು. ನಾನು ಅಧ್ಯಕ್ಷನಾದ ಮೇಲೆ, ಈ ಪರೀಕ್ಷೆಗಳನ್ನು ಚುರುಕುಗೊಳಿಸಿ ಹೆಚ್ಚು ಮಂದಿ ವಿದ್ಯಾರ್ಥಿಗಳು ಭಾಗವಹಿಸುವಂತೆ ಪ್ರಯತ್ನಿಸಲಾಗಿದೆ. ೧೯೫೬ ರಿಂದ

ಈವರೆಗೆ ಕನ್ನಡ ಕಾವ ಪರೀಕ್ಷೆಯಲ್ಲಿ ೪೭೪ ಮಂದಿ, ಕನ್ನಡ ಜಾಣ ಪರೀಕ್ಷೆಯಲ್ಲಿ ೨,೮೦೪ ಮಂದಿ, ಗಮಕ ಪರೀಕ್ಷೆಯಲ್ಲಿ ೫೨೨ ಮಂದಿ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಉತ್ತೀರ್ಣ ರಾಗಿರುತ್ತಾರೆ. 'ಕನ್ನಡ ಜಾಣ' ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಹೈದರಾಬಾದು, ಬೊಂಬಾಯಿ ಕರ್ನಾಟಕದಲ್ಲಿ ಉಪಾಧ್ಯಾಯ ಪದವಿ ಸಿಕ್ಕುತ್ತಿದೆ. ಈ ಬಗೆಗೆ ಬಂದಿರುವ ಕೆಲವು ಅಡಚಣೆಗಳನ್ನು ಕುರಿತು ಶಿಕ್ಷಣಾಧಿಕಾರಿಗಳೊಡನೆ ಪರಿಷತ್ತು ವ್ಯವಹರಿಸುತ್ತಿದೆ.

ಪರಿಷತ್ತಿನಲ್ಲಿ ಹಿಂದಿನಿಂದ ನಡೆದುಕೊಂಡು ಬಂದಂತೆ ಗಮಕ ತರಗತಿಗಳು, ಮೈಸೂರು, ಬೆಂಗಳೂರು, ಭದ್ರಾವತಿ, ತಿಪಟೂರು, ಬಿಜಾಪುರ, ಚಾಮರಾಜನಗರ, ಮಡಿಕೇರಿ, ಮಂಡ್ಯ, ಶಿವಮೊಗ್ಗ. ಚಿಕ್ಕಮಗಳೂರು, ಹಾಸನ ದಾವಣಗೆರೆ ಮೊದಲಾದ ಕಡೆಗಳಲ್ಲಿ ನಡೆದಿವೆ. ನೂರಾರು ಮಂದಿ ವಿದ್ಯಾರ್ಥಿಗಳು ಉತ್ತೀರ್ಣರಾಗಿ ಸಾಹಿತ್ಯ ಮತ್ತು ಕಲಾಸೇವೆಯನ್ನು ಮಾಡುತ್ತಿದ್ದಾರೆ. ವಿದ್ಯಾರ್ಥಿಗಳ ಪ್ರಯೋಜನಕ್ಕಾಗಿ 'ಗಮಕ ಕಾವ್ಯಮಂಜರಿ' ಎಂಬ ಗ್ರಂಥ ವನ್ನು ಪ್ರಕಟಿಸಿದೆ. ಇದು ಗಮಕ ವಿದ್ಯಾರ್ಥಿಗಳಿಗೆ ಒಂದು ಕೈಪಿಡಿಯಾಗಿದೆ.

## ಸಾಹಿತ್ಯ ಸಮ್ಮೇಳನಗಳು

೧೯೫೬ ರಿಂದೀಚೆಗೆ ಧಾರವಾಡ(೧೯೫೭), ಬಳ್ಳಾರಿ(೧೯೫೮), ಬೀದರ್ (೧೯೬೦), ಉಡುಪಿ(೧೯೬೦), ಗದಗ(೧೯೬೧), ಸಿದ್ಧಗಂಗೆ(೧೯೬೩) ಈ ಐದು ಸಮ್ಮೇಳನಗಳನ್ನು ನಡೆಸ ಲಾಗಿದೆ. ಇತ್ತೀಚಿನ ತುರ್ತು ಪರಿಸ್ಥಿತಿಯಲ್ಲಿ ಇಂತಹ ಸಮ್ಮೇಳನ ನಡೆಸುವುದು ನಮಗೆ ಕಷ್ಟಕರ ವಾಗಿದೆ. ಇದುವರೆಗೆ ೪೪ ಸಮ್ಮೇಳನಗಳು ನಡೆದಿವೆ. ಈ ಎಲ್ಲ ಸಮ್ಮೇಳನಗಳಿಗೂ ಗಣ್ಯರೂ, ಜನಪ್ರಿಯರೂ ಆದ ಮಹನೀಯರನ್ನು ಅಧ್ಯಕ್ಷರನ್ನಾಗಿ ಆರಿಸಲಾಗಿದೆ. ಈ ವರ್ಷ ಡಾ|| ಆರ್. ಎಸ್. ಮುಗಳಿಯವರು ಸಮ್ಮೇಳನಾಧ್ಯಕ್ಷರಾಗಿದ್ದಾರೆ.

## ಪರಿಷತ್ತಿನಲ್ಲಿ ಸಂಗೀತ ತರಗತಿಗಳು

ವಿನೂತನವಾಗಿ ಪರಿಷತ್ತಿನಲ್ಲಿ ಹರಿದಾಸರ ಮತ್ತು ಶಿವಶರಣರ ಕೃತಿಗಳ ತರಗತಿ ಗಳನ್ನು ನಡೆಸಿ ರಾಗ-ತಾಳ ಬದ್ಧವಾಗಿ ಕನ್ನಡ ಕೃತಿಗಳನ್ನು ಹಾಡಲು ಕಲಿಸುವ ಸಂಗೀತ ಶಾಲೆಯನ್ನು ಎರಡು ವರ್ಷಗಳ ಕಾಲ ಏರ್ಪಡಿಸಿತ್ತು. ವೈಣಿಕ ವಿದ್ವಾನ್ ಶ್ರೀ ಎಲ್. ರಾಜಾ ರಾಯರು, ಸಂಗೀತ ವಿದ್ವಾನ್ ಶ್ರೀ ಎಸ್. ಚಂದ್ರಪ್ಪನವರು ಈ ತರಗತಿಗಳನ್ನು ನಡೆಸಿ ಉಪಕಾರ ಮಾಡಿದ್ದಾರೆ. ಧನಾಭಾವದಿಂದ ಈ ಶಾಲೆಗಳು ನಿಂತಿವೆ. ಸಂಗೀತ ನಾಟಕ ಅಕ್ಯಾಡೆಮಿಯವರು ಈ ಬಗೆಗೆ ಪರಿಷತ್ತಿಗೆ ಧನಸಹಾಯ ಮಾಡಿ ನೆರವಾಗುವರೆಂದು ನಂಬುವೆನು.

## ಭಾಷಣ ಕಲಾ ತರಗತಿ

ಮಣಿಪಾಲಿನ ಅಕಾಡೆಮಿ ಆಫ್ ಜನರಲ್ ಎಜುಕೇಷನ್ನಿನ ರಿಜಿಸ್ಟ್ರಾರ್‌ರವರಾದ ಡಾ|| ಟಿ. ಎಂ. ಎ. ಪೈರವರ ಉದಾರವಾದ ಸಹಾಯದ ಫಲವಾಗಿ, ಈಗಾಗಲೇ ಸಂದಾಯ ವಾಗಿರುವ ೧,೦೦೦ ರೂ.ಗಳ ನೆರವಿನಿಂದ ಪರಿಷತ್ತಿನಲ್ಲಿ ಭಾಷಣಕಲಾ ತರಗತಿಯನ್ನು ಏರ್ಪಡಿ ಸಿದೆ. ಕಳೆದ ವರ್ಷ ಈ ತರಗತಿಯಲ್ಲಿ ೧೩ ಮಂದಿ ಉತ್ತೀರ್ಣರಾಗಿದ್ದಾರೆ. ಈ ವರ್ಷವೂ ತರಗತಿ ನಡೆಯುತ್ತಿದೆ. ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಉಪನ್ಯಾಸವನ್ನೂ, ಚರ್ಚಾಕೂಟ

ವನ್ನೂ ಏರ್ಪಡಿಸಲಾಗುತ್ತಿದೆ. ಆರು ತಿಂಗಳ ಕಾಲದಲ್ಲಿ ನಡೆಯುವ ಈ ತರಗತಿಯಲ್ಲಿ ಓದಿ ಉತ್ತೀರ್ಣರಾದವರಿಗೆ ಮಾತುಗಾರಿಕೆಯ ಪ್ರಥಮ ಶಿಕ್ಷಣ ಲಭಿಸುತ್ತದೆ. ಪರಿಷತ್ತಿನ ಈ ಸಾಹಸವು ಕನ್ನಡ ನಾಡಿನಲ್ಲೇ ಪ್ರಪ್ರಥಮವಾದುದೆಂದು ನಾವು ಹೇಳಬಹುದು. ಭಾಷಣ ಕಲೆಯನ್ನು ಕುರಿತು ಒಂದು ಪ್ರಮಾಣಭೂತವಾದ ಗ್ರಂಥವನ್ನು ಕೂಡ ಪರಿಷತ್ತು ಪ್ರಕಟಿಸಲು ಕೈಗೊಂಡಿದೆ. ಇದುವರೆಗೆ ಈ ಉಪನ್ಯಾಸ ಕಲೆಯನ್ನು ಕುರಿತು ಕನ್ನಡದಲ್ಲಿ ಒಂದು ಗ್ರಂಥ ಮಾತ್ರ ರಚನೆಯಾಗಿರುವುದು ಆಶ್ಚರ್ಯ. ಪ್ರಜಾಪ್ರಭುತ್ವದ ಇಂದಿನ ಕಾಲದಲ್ಲಿ ಈ ಭಾಷಣ ಕಲೆಯ ಅಭ್ಯಾಸ ಜನರಿಗೆ ಅತ್ಯಗತ್ಯವೆಂದು ಹೇಳಬೇಕಾಗಿಲ್ಲವಷ್ಟೆ.

## ಗಡಿನಾಡಿನಲ್ಲಿ ಭಾಷಾ ಜಾಗೃತಿ

ಪರಿಷತ್ತಿನಲ್ಲಿ ನಡೆಯುವ ಸಾಹಿತ್ಯೋತ್ಸವಗಳನ್ನು ಕಾರ್ಯಸಮಿತಿಯ ಸಭೆಗಳನ್ನು ಬಹುಮಟ್ಟಿಗೆ ಗಡಿನಾಡಿನಲ್ಲಿ ಕನ್ನಡದ ಹಿತದೃಷ್ಟಿಯಿಂದ ನಡೆಸಲಾಗಿದೆ. ನೀಲಗಿರಿ, ಸೊಲ್ಲಾಪುರ, ಗೋಕರ್ಣ, ಬೀದರ, ಕಲಬುರ್ಗಿ, ಕೊಳ್ಳೇಗಾಲ, ಕಾಸರಗೋಡು, ತುಮಕೂರು, ಕೋಲಾರ, ಶಿವಮೊಗ್ಗ, ಉಡುಪಿ, ಮಡಿಕೇರಿ, ಬಳ್ಳಾರಿ, ಧಾರವಾಡ, ಗದಗ, ದುಧನಿ, ಅಕ್ಕಲಕೋಟೆ ಮೊದಲಾದ ಕಡೆ ಪರಿಷತ್ತಿನ ಈ ಸಭೆಗಳು ನಡೆದಿವೆ.

ದತ್ತಿಯ ಭಾಷಣಗಳನ್ನು ಕರ್ಣಾಟಕದಲ್ಲಿಯೇ ಅಲ್ಲದೆ ದಿಲ್ಲಿ, ಮೊದಲಾದ ಹೊರ ನಾಡಿನಲ್ಲಿಯೂ ನಡೆಸಲಾಯಿತು. ಈ ಸೇವಾವಕಾಶದಲ್ಲಿ ಮದರಾಸು, ಬೊಂಬಾಯಿ, ಹೈದರಾಬಾದು, ಕಾಶಿ, ಹೊಸದಿಲ್ಲಿಯ ಕರ್ನಾಟಕ ಸಂಘಗಳನ್ನು ಸಂದರ್ಶಿಸಿ ಇವುಗಳಿಗೂ ಪರಿಷತ್ತಿಗೂ ಇರುವ ಮಧುರ ಬಾಂಧವ್ಯ ಹೆಚ್ಚುವಂತೆ ಪ್ರಯತ್ನಿಸಲಾಗಿದೆ.

## ಮಹಾಕವಿ ಕಾಳಿದಾಸ ಜಯಂತಿ

ಮಹಾಕವಿ ಕಾಳಿದಾಸ ಜಯಂತಿಯನ್ನು ಸರ್ಕಾರದ ಉದಾರ ಸಹಾಯದಿಂದ ಪರಿಷತ್ತಿನಲ್ಲಿ ಪ್ರಾರಂಭಿಸಲಾಗಿದೆ. ಭಾರತದ ರಾಷ್ಟ್ರೀಯ ಮಹಾಕವಿಯ ಈ ಜಯಂತಿಯು ಸಮಗ್ರ ಕರ್ಣಾಟಕದಲ್ಲಿ ಆಚರಿಸಲ್ಪಟ್ಟಿದೆ. ಬೆಂಗಳೂರು, ತುಮಕೂರು, ಕೋಲಾರ, ರಾಯಚೂರು, ಶಿವಮೊಗ್ಗ, ಧಾರವಾಡ, ಕುಮಟ, ಸೊಲ್ಲಾಪುರ, ಬಿಜಾಪುರ, ಯಾದಗಿರಿ, ಕಲಬುರ್ಗಿ, ಕುಷ್ಟಗಿ, ಚನ್ನಪಟ್ಟಣ, ಮೇಲುಕೋಟೆ, ಬೆಳಗಾಂವಿ, ಗದಗ, ಹುಬ್ಬಳ್ಳಿ ಮೊದಲಾದ ಸ್ಥಳಗಳಲ್ಲಿ ಈ ಜಯಂತಿಯನ್ನು ಆಚರಿಸಲಾಗಿದೆ. ಪ್ರಸಿದ್ಧ ಸಂಸ್ಕೃತ ವಿದ್ವಾಂಸರು ಈ ಜಯಂತಿಯಲ್ಲಿ ಭಾಗವಹಿಸಿ ಜನತೆಗೆ ಕಾಳಿದಾಸನ ಕಾವ್ಯಸಂದೇಶವನ್ನು ಸಾರಿ ಹೇಳಿದ್ದಾರೆ. ಇದರಿಂದ ಕನ್ನಡ ಮತ್ತು ಸಂಸ್ಕೃತದ ಮಧುರ ಬಾಂಧವ್ಯಕ್ಕೂ ನೆರವಾಗಿದೆ.

## ರಾಷ್ಟ್ರೀಯ ಉತ್ಸವಗಳು

೧೯೬೧ರಲ್ಲಿ ರಾಷ್ಟ್ರೀಯ ಉತ್ಸವಗಳಾದ ರವೀಂದ್ರನಾಥರ ಶತಮಾನೋತ್ಸವ, ಸರ್. ಎಂ. ವಿಶ್ವೇಶ್ವರಯ್ಯನವರ ಶತಮಾನೋತ್ಸವ, ಶ್ರೀ ವಿವೇಕಾನಂದರ ಶತಮಾನೋತ್ಸವ, ಪಂಪ, ಹರಿಹರ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ, ಸರ್ವಜ್ಞ ಮೊದಲಾದ ಮಹಾಕವಿಗಳ ಜಯಂತ್ಯುತ್ಸವಗಳು ಪರಿಷತ್ತಿನಲ್ಲಿ ವಿಪುಲವಾಗಿ ನಡೆದಿವೆ.

## ಕನ್ನಡ ರಾಜ್ಯೋತ್ಸವ

೧೯೫೬ನೇ ನವೆಂಬರಿನಿಂದ ಪ್ರತಿ ವರ್ಷ ತಪ್ಪದಂತೆ ಕನ್ನಡ ರಾಜ್ಯೋತ್ಸವವನ್ನು ನಡೆಸುತ್ತಾ ಬರಲಾಗಿದೆ. ಅಷ್ಟೇ ಅಲ್ಲದೆ ಪರಿಷತ್ತಿನ ಕಚೇರಿಗೆ ಆ ದಿನ ರಜಾ ಕೊಡಲಾಗಿದೆ. ಎರಡು ಕೋಟಿ ಐವತ್ತು ಲಕ್ಷ ಮಂದಿ ಕನ್ನಡಿಗರ ಸಂತೋಷಕ್ಕೆ ಕಾರಣವಾದ ಈ ರಾಜ್ಯೋದಯಕ್ಕೆ ಮೈಸೂರು ಸರ್ಕಾರ ರಜಾ ಕೊಡದಿರುವುದನ್ನು ನಾವು ಇಲ್ಲಿ ಸ್ಮರಿಸಿಕೊಳ್ಳಬಹುದು. ಈ ಬಗೆಗೆ ಕನ್ನಡ ಪತ್ರಿಕೆಗಳು ತಳೆದಿರುವ ಅಭಿಮಾನಕ್ಕೆ ನಾನು ಚಕಿತನಾಗಿದ್ದೇನೆ.

## ಭಾವೈಕ್ಯ ಸಾಧನೆ

೧೯೫೯ರಲ್ಲಿ ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ಬಂಗಾಳಿ ಸಾಹಿತ್ಯ ಸಮ್ಮೇಳನದ ಕಾರ್ಯಕಲಾಪಗಳಲ್ಲಿ ಪರಿಷತ್ತು ಭಾಗವಹಿಸಿದೆ. ಬಳ್ಳಾರಿ ಸಾಹಿತ್ಯ ಸಮ್ಮೇಳನ ಕಾಲದಲ್ಲಿ ತೆಲುಗು ವಿದ್ವಾಂಸರು ಹಲವರು ಬಂದು ಆ ಸಮ್ಮೇಳನದಲ್ಲಿ ಭಾಗವಹಿಸಿದುದು ಗಮನಾರ್ಹವಾಗಿದೆ.

ಬೆಂಗಳೂರಿನಲ್ಲಿರುವ ಮೈಸೂರು ಮುಸ್ಲಿಂ ಲೀಗಿನವರು ನನ್ನನ್ನು ಕರೆಸಿಕೊಂಡು ಬಿನ್ನವತ್ತಳೆಯನ್ನು ಅರ್ಪಿಸಿದ್ದಾರೆ. ಧರ್ಮಸ್ಥಳದ ಕನ್ನಡ ಸಾಹಿತ್ಯ ಸಮ್ಮೇಳನ ರಜತೋತ್ಸವ ಸಮಾರಂಭದಲ್ಲಿ ಮತ್ತು ಬೊಂಬಾಯಿ ಕರ್ಣಾಟಕ ಸಂಘದ ರಜತೋತ್ಸವದಲ್ಲಿ ಹಾಗೂ ಮದ್ರಾಸ್ ಕರ್ಣಾಟಕ ಸಂಘದ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷತೆಯನ್ನು ವಹಿಸುವ ಸುಯೋಗವು ನನಗೆ ಒದಗಿತ್ತು. ಇದೆಲ್ಲವೂ ಜನರಿಗೆ ಪರಿಷತ್ತಿನ ಮೇಲಿರುವ ಅಭಿಮಾನದ ಫಲವೆಂದು ನಾನು ಭಾವಿಸಿದ್ದೇನೆ.

ಭದ್ರಾವತಿ ಕರ್ಣಾಟಕ ಸಂಘದವರು ಮತ್ತು ಮುಳವಳ್ಳಿ, ಕಲಬುರ್ಗಿ, ನವಿಲುಗುಂದ, ಹಲಗೂರು, ಉಡುಪಿ, ಮಹಾಜನಗಳು ಪರಿಷತ್ತಿನ ಅಧ್ಯಕ್ಷನಾದ ನನ್ನನ್ನು ಕರೆಸಿಕೊಂಡು ಮಾನಪತ್ರವಿತ್ತು, ಗೌರವಿಸಿದ್ದಾರೆ. ಅವರ ಸಾಹಿತ್ಯಪ್ರೇಮವು ಶ್ಲಾಘ್ಯವೇ ಸರಿ. ಇಂದಿನ ತುರ್ತು ಪರಿಸ್ಥಿತಿಗಾಗಿ ವೀರಕವಿತೆಗಳ ವಾಚನಕ್ಕಾಗಿ ಕವಿಗೋಷ್ಠಿಗಳನ್ನು ಏರ್ಪಡಿಸಿದ್ದೇವೆ. ಮತ್ತು ರಾಷ್ಟ್ರೀಯ ರಕ್ಷಣಾನಿಧಿಗೆ ಪರಿಷತ್ತಿನ ಕಾರ್ಯಕರ್ತರು ಯಥಾಶಕ್ತಿ ಕಾಣಿಕೆಯನ್ನು ಕೊಟ್ಟಿದ್ದಾರೆ.

## ಪರಿಷತ್ತಿಗೆ ಸನ್ಮಾನ್ಯರ ಸಂದರ್ಶನ

ನನ್ನ ಸೇವಾವಕಾಶದ ಈ ಅವಧಿಯಲ್ಲಿ ರಾಜ್ಯಪಾಲರಾದ ಮೈಸೂರಿನ ಶ್ರೀಮನ್ಮಹಾರಾಜರವರು ಮೂರು ಸಾರಿ ಪರಿಷತ್ತಿಗೆ ಬಂದು ಹೋಗಿದ್ದಾರೆ. ರಾಷ್ಟ್ರಾಧ್ಯಕ್ಷರಾಗಿದ್ದ ದಿ|| ಡಾ|| ರಾಜೇಂದ್ರಪ್ರಸಾದರು (೧೪-೮-೧೯೫೯ರಲ್ಲಿ) ಪರಿಷತ್ತಿಗೆ ಸಂದರ್ಶನವಿತ್ತಿದ್ದಾರೆ. ಕೇಂದ್ರ ಸಚಿವರಾಗಿದ್ದ ದಿ|| ಬಿ. ಎಫ್. ದಾತಾರರು ಹಲವು ಸಾರಿ ಪರಿಷತ್ತಿಗೆ ಬಂದು ಹೋಗಿದ್ದಾರೆ. ಮಾನ್ಯರಾದ ಜಗಜೀವನರಾಮ್, ಡಿ. ಪಿ. ಕರ್‌ಮರ್‌ಕರ್, ಪ್ರೊ|| ಹುಮಾಯೂನ್ ಕಬೀರ್, ಶ್ರೀ ಅನಂತಶಯನಂ ಅಯ್ಯಂಗಾರ್, ಶ್ರೀ ಎಸ್. ವಿ. ಕೃಷ್ಣಮೂರ್ತಿರಾವ್, ಮೈಸೂರಿನ ಮುಖ್ಯ ಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪನವರು, ಶ್ರೀ ಬಿ. ಡಿ. ಜತ್ತಿಯವರು, ಶ್ರೀ ಎಸ್. ಆರ್. ಕಂಠಿಯವರು, ಡಾ|| ನಾಗಪ್ಪ ಆಳ್ವರು, ಶ್ರೀ ಆರ್. ಎಂ. ಪಾಟೀಲರು, ಸಭಾಪತಿ ಶ್ರೀ ಜಿ. ವಿ. ಹಳ್ಳಿಕೇರಿಯವರು, ಮೈಸೂರು ಹೈಕೋರ್ಟಿನ ಮುಖ್ಯ ನ್ಯಾಯಾಧೀಶ

ಶ್ರೀ ಎ. ಶ್ರೀನಿವಾಸರಾಯರು, ಜ|| ಸೋಮನಾಥ ಅಯ್ಯರ್, ಜ|| ಇಕ್ಬಾಲ್ ಹುಸೇನ್, ಜ|| ಹೊಂಬೇಗೌಡರು, ಜ|| ಟಿ. ಕೆ. ತುಕ್ಕೋಳ್, ಜ|| ಹೆಗ್ಗಡೆ, ಜ|| ಸದಾಶಿವಯ್ಯ ಮೊದಲಾದವರು, ಡಾ|| ಕತ್ರಿ, ಡಾ|| ವಾಳ್ವೇಕರ್, ಶ್ರೀರಾಮ್ (Illustrated Weekly), ಶ್ರೀ ಕೆ. ಹನುಮಂತಯ್ಯ, ಶ್ರೀ ಆರ್. ಆರ್. ದಿವಾಕರ್, ಮಣಿಪಾಲಿನ ಡಾ|| ಮಾಧವ ಪೈ ಇತ್ಯಾದಿ ಅನೇಕ ಮಂದಿ ನಾಡಿನ ಗಣ್ಯ ಮಹನೀಯರು ಪರಿಷತ್ತಿಗೆ ಬಂದು ಹೋಗಿದ್ದಾರೆ. ಈಗಿನ ರಾಷ್ಟ್ರಾಧ್ಯಕ್ಷರಾದ ಡಾ|| ಎಸ್. ರಾಧಾಕೃಷ್ಣರವರು (ತಾ|| ೯-೧೦-೧೯೬೩ ರಲ್ಲಿ) ಪರಿಷತ್ತಿಗೆ ಸಂದರ್ಶನವಿತ್ತು ಅನುಗ್ರಹಿಸಿದ್ದಾರೆ. ವಿಖ್ಯಾತ ಕನ್ನಡ ಸಾಹಿತಿಗಳು ಮೇಲಿಂದ ಮೇಲೆ ಪರಿಷತ್ತಿಗೆ ದಯೆಮಾಡಿಸಿದ್ದಾರೆ. ಅಲ್ಲದೆ ಪ್ರಮುಖ ಮಠಾಧಿಪತಿಗಳಾದ, ಶ್ರೀ ಕೂಡಲಿ ಶೃಂಗೇರಿ ಜಗದ್ಗುರುಗಳವರು, ಶ್ರೀ ಸುತ್ತೂರು ಜಗದ್ಗುರುಗಳವರು, ಶ್ರೀ ಅದಮಾರು ಮಠಾಧೀಶ್ವರರು, ಶ್ರೀ ಸೋಸಲೆ ವ್ಯಾಸರಾಯ ಮಠಾಧೀಶ್ವರರು, ಶ್ರೀ ಪೇಜಾವರ ಮಠಾಧೀಶ್ವರರು, ಧಾರವಾಡದ ಶ್ರೀ ಮುರುಘಾ ಮಠಾಧೀಶ್ವರರು, ಶ್ರೀ ನವಲುಗುಂದ ಮಠಾಧೀಶ್ವರರು, ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರು ಮುಂತಾದ ಪೂಜ್ಯ ಸ್ವಾಮಿಗಳವರು ಪರಿಷತ್ತಿಗೆ ಸಂದರ್ಶನವಿತ್ತು ತಕ್ಕಷ್ಟು ಧನಸಹಾಯವನ್ನೂ ಮಾಡಿ ನಮ್ಮನ್ನು ಅನುಗ್ರಹಿಸಿದ್ದಾರೆಂದು ತಿಳಿಸಲು ಹರ್ಷಿಸುತ್ತೇನೆ.

ಸಮಗ್ರ ಕನ್ನಡ ನಾಡಿನ ಹಿತಚಿಂತನೆಯಿಂದ ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಗಳ ಏಳಿಗೆಗಾಗಿ ಪರಿಷತ್ತು ೧೯೧೫ ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟಿತು. ಕೀರ್ತಿಶೇಷರಾದ ಹೆಚ್. ವಿ. ನಂಜುಂಡಯ್ಯನವರು, ಕರ್ಪೂರ ಶ್ರೀನಿವಾಸರಾಯರು, ಬೆಳ್ಳಾವೆ ವೆಂಟನಾರಣಪ್ಪನವರು, ಬಿ. ಎಂ. ಶ್ರೀಕಂಠಯ್ಯನವರು, ಎಸ್. ಎಸ್. ಬಸವನಾಳ್ ಅವರು, ಎಂ. ಆರ್. ಶ್ರೀನಿವಾಸಮೂರ್ತಿಗಳು, ಮುದುವೀಡು ಕೃಷ್ಣರಾಯರು, ರೆ|| ಉತ್ತಂಗಿ ಚೆನ್ನಪ್ಪನವರು, ಆಲೂರು ವೆಂಕಟರಾಯರು, ಡಾ|| ಫ. ಗು. ಹಳಕಟ್ಟಿಯವರು ಮೊದಲಾದ ಮಹನೀಯರು ಪರಿಷತ್ತಿನ ಪ್ರಗತಿಗಾಗಿ ಬಹಳವಾಗಿ ಶ್ರಮಿಸಿದ್ದಾರೆ. ನಾಡಿನ ಸುವಿಖ್ಯಾತರಾಗಿರುವ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರರು, ಡಾ|| ಡಿ. ವಿ. ಗುಂಡಪ್ಪನವರು, ಡಾ|| ಎ. ಆರ್. ಕೃಷ್ಣಶಾಸ್ತ್ರಿಗಳು, ಮೊದಲಾದವರು ಈ ಪರಿಷತ್ತಿನ ಅಭಿವೃದ್ಧಿಗೆ ಬಹಳ ಮಟ್ಟಿಗೆ ಕಾರಣಕರ್ತರಾಗಿದ್ದಾರೆ. ಮೈಸೂರಿನ ಶ್ರೀಮನ್ಮಹಾರಾಜರವರು, ರಾಜಮನೆತನದವರು, ಮೈಸೂರು ಸರ್ಕಾರದವರು, ಬೆಂಗಳೂರು ಕಾರ್ಪೊರೇಷನ್ನಿನವರು, ನಾಡಿನ ಶ್ರೀಮಂತ ವರ್ಗದವರು, ಕನ್ನಡ ಸಾಹಿತ್ಯ ವಿದ್ವಾಂಸರು ಪರಿಷತ್ತಿಗೆ ಬೆಂಬಲವಾಗಿ ನಿಂತು ಅದನ್ನು ಪೋಷಿಸಿಕೊಂಡು ಬಂದಿದ್ದಾರೆ ಎಂಬುದನ್ನು ಈ ಸಂದರ್ಭದಲ್ಲಿ ನಾನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.

## ಪರಿಷತ್ತಿನ ಒಂದು ಮೈಲಿಗಲ್ಲು

ದಿನಾಂಕ ೧೦-೬-೧೯೬೩ ರಂದು ರಾಜ್ಯಪಾಲರಾದ ಶ್ರೀಮನ್ಮಹಾರಾಜ ಜಯಚಾಮರಾಜ ಒಡೆಯರು ಪರಿಷತ್ತಿಗೆ ಆಗಮಿಸಿ ಕನ್ನಡ ನಿಘಂಟಿನ ಮುದ್ರಣವನ್ನು ಪ್ರಾರಂಭಿಸಿ, ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ ವಿಸ್ತರಣ ಕಟ್ಟಡದ ಪ್ರವೇಶೋತ್ಸವ ನಡೆಸಿ ಪರಿಷತ್ತು ಕೈಗೊಂಡಿರುವ ಕಾರ್ಯಕಲಾಪಗಳನ್ನು ಮನಸಾರ ಮೆಚ್ಚಿ ಹರಸಿರುವುದು ಪರಿಷತ್ತಿನ ಒಂದು ಮೈಲಿಗಲ್ಲು ಎಂದು ಕನ್ನಡ ಪತ್ರಿಕೆಗಳು ಕರೆದಿರುವುದು ಗಮನಾರ್ಹವಾದುದು. ಆ ಸಂದರ್ಭದಲ್ಲಿ ನಮ್ಮ ಜನಪ್ರಿಯ ರಾಜ್ಯಪಾಲರು " ಕರ್ನಾಟಕ ರಾಜ್ಯೋದಯವಾದ ಮೇಲೆ ಪರಿಷತ್ತು

ಉತ್ಸಾಹಶಾಲಿಗಳಾದ ಆಸ್ಥಾನ ವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ನೇತೃತ್ವದಲ್ಲಿ ಅನೇಕ ಉಪಯುಕ್ತವಾದ ಮತ್ತು ಪ್ರಗತಿಪರವಾದ ಕೆಲಸಗಳನ್ನು ನೆರವೇರಿಸುತ್ತಿರುವುದು ಎಲ್ಲರ ಮೆಚ್ಚಿಗೆಗೂ ಪಾತ್ರವಾಗಲು ಅರ್ಹವಾಗಿದೆ. ಯಾವ ಪ್ರತಿಫಲವೂ ಇಲ್ಲದೆ ಕೇವಲ ನಾಡು ನುಡಿಗಳ ಅಭಿಮಾನದಿಂದ ಪರಿಷತ್ತಿನವರು ಸೇವೆ ಸಲ್ಲಿಸುತ್ತಿರುವುದು ಸ್ತೋತ್ರಾರ್ಹವಾಗಿದೆ" ಎಂದು ಅಪ್ಪಣೆ ಕೊಡಿಸಿರುವುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬೇಕಾಗಿದೆ.

## ನಾಟಕಕಲೆಗೆ ಪ್ರೋತ್ಸಾಹ

ಪರಿಷತ್ತು ನಾಟಕ ಸಾಹಿತ್ಯಕ್ಕೂ ಕನ್ನಡ ರಂಗಭೂಮಿಗೂ ಮಿಗಿಲಾದ ಸೇವೆಯನ್ನು ಸಲ್ಲಿಸಬೇಕಾಗಿದೆ. ಅದಕ್ಕಾಗಿ ಸುಸಜ್ಜಿತ ಸಭಾಭವನ ರಚನೆಯಾಗಬೇಕು, ನಾಟಕ ಸಪ್ತಾಹಗಳಾಗಬೇಕು, ಕಲಾವಿದರನ್ನು ಪ್ರೋತ್ಸಾಹಿಸಬೇಕು. ಆದರೆ ಇದೆಲ್ಲಕ್ಕೂ ಪರಿಷತ್ತಿನಲ್ಲಿ ಕಲಾಪ್ರೇಮದಿಂದ ದುಡಿಯುವ ಜನಬೇಕು, ಪ್ರೋತ್ಸಾಹಿಸುವ ಕಲಾಭಿಮಾನಿಗಳೂ ಬೇಕು. ಆದರೂ ಈ ಎರಡು ವರ್ಷಗಳಲ್ಲಿ ಪರಿಷತ್ತಿನಲ್ಲಿ ಹಲವು ನಾಟಕ ಯಕ್ಷಗಾನಗಳು ನಡೆದಿವೆ.

## ಸದಸ್ಯ ಸಂಪತ್ತು

ಈ ವರ್ಷ ಪರಿಷತ್ತಿನ ಸದಸ್ಯ ಸಂಪತ್ತು ಬಹಳವಾಗಿದೆ. ಈ ಉತ್ಸಾಹವನ್ನು ಕಂಡು ನನಗೆ ಸಂತೋಷವಾಗಿದೆ. ಈಗ ಆಜೀವ ಸದಸ್ಯರು ೮೬೫ ಮಂದಿ, ಸಾಮಾನ್ಯ ಸದಸ್ಯರು ೧೮೯೨ ಮಂದಿ ಒಟ್ಟು ೨೭೧೭ ಮಂದಿ. ಇದೇ ಆಗಸ್ಟ್ ೨೪ ರಿಂದ ಚುನಾವಣೆ ನಿಮಿತ್ತ ಸದಸ್ಯ ಸಂಗ್ರಹ ನಿಲ್ಲಿಸಲಾಯಿತು.

## ಸರ್ಕಾರದ ಮನ್ನಣೆ

ದಸರಾಕಾಲದಲ್ಲಿ (೧೯೬೦) ನಮ್ಮ ಸರ್ಕಾರದವರು ಪರಿಷತ್ತಿಗೆ ಪ್ರಶಸ್ತಿ ಪತ್ರ ಕೊಟ್ಟು ಗೌರವಿಸಿದ್ದಾರೆ.

## ವಿದ್ವಾಂಸರಿಗೆ ಮನ್ನಣೆ

ಪರಿಷತ್ತಿನ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ನಾಡಿನ ಗಣ್ಯಮಹನೀಯರಾದ ತ್ರಿಭಾಷಾಕವಿ ಉಭಯ ಗಾಯನಾಚಾರ್ಯ ಶ್ರೀ ಪುಟ್ಟರಾಜ ಗವಾಯಿಗಳು, ಸಂಗೀತ ವಿದ್ವಾನ್ ಡಿ. ಸುಬ್ರಾಮಯ್ಯನವರು, ಕೀರ್ತನಕಾರರಾದ ಶ್ರೀ ಭದ್ರಗಿರಿ ಕೇಶವ ದಾಸರು, ಸಂಗೀತಕಾರರಾದ ವಿದ್ವಾನ್ ಎಚ್. ಕೆ. ಅಶ್ವತ್ಥನಾರಾಯಣ ಶಾಸ್ತ್ರಿಗಳು, ವಿದ್ವಾನ್ ಕೆ. ಮಧುಸೂದನ ರಾಯರು, ಯಕ್ಷಗಾನ ಕಲಾಪ್ರೋತ್ಸಾಹಕರಾದ ಶ್ರೀ ಕೆ. ನೀಲಕಂಠರಾಯರು ಮೊದಲಾದವರನ್ನು ಪರಿಷತ್ತಿಗೆ ಆಹ್ವಾನಿಸಿ ಗೌರವಿಸಲಾಗಿದೆ.

## ಪರಿಷತ್ತಿನ ಸೇವೆ

೧೭-೬-೫೭ ರಂದು ಪರಿಷತ್ತಿಗೆ ಮೊದಲ ಸಾರಿ ಅಧ್ಯಕ್ಷನಾಗಿ ಚುನಾಯಿತನಾದೆ. ಅನಂತರ ೨೪-೧-೬೦ ರಂದು ಪರಿಷತ್ತಿಗೆ ಅವಿರೋಧವಾಗಿ ಅಧ್ಯಕ್ಷನಾದೆ. ಮೂರನೆಯ ಸಾರಿ ೨೮-೭-೬೩ ರಲ್ಲಿ ಕೂಡಿದ ಸಕಲ ಸದಸ್ಯರ ಸಭೆಯಲ್ಲಿ ಅತ್ಯಧಿಕ ಬಹುಮತವಿದ್ದಿತಾದರೂ ಚುನಾವಣೆ ಸಂಬಂಧವಾಗಿ ಗಡಿಬಿಡಿಯಾಗಿ ಸಭೆ ಮುಂದುವರಿಯಿತು. ಇತ್ತೀಚೆಗೆ ದುಧನಿಯಲ್ಲಿ (೨೬-೭-೬೪) ಆದ ಕಾರ್ಯಕಾರೀ ಸಮಿತಿಯ ಸಭೆಯಲ್ಲಿ ಆದ ತೀರ್ಮಾನದಂತೆ ಚುನಾವಣೆಯ

ವೇಳಾಪಟ್ಟಿಯಂತೆ ತಾರೀಖು ೨೫-೧೦-೬೪ ರಂದು ಪರಿಷತ್ತಿನ ಅಧ್ಯಕ್ಷರ ಮತ್ತು ಕಾರ್ಯಕಾರೀ ಸಮಿತಿ ಸದಸ್ಯರ ಚುನಾವಣೆ ನಡೆಯಲಿದೆ. ಈ ಚುನಾವಣೆಯಲ್ಲಿ ಸಮರ್ಥರಾದ ಅಧ್ಯಕ್ಷರು, ಪ್ರಭಾವಶಾಲಿಗಳಾದ ಕಾರ್ಯಕಾರೀ ಸದಸ್ಯರು ಚುನಾಯಿತರಾಗಿ ಪರಿಷತ್ತು ಅಭಿವೃದ್ಧಿಯನ್ನು ಹೊಂದುವುದೆಂದು ನಂಬುತ್ತೇನೆ. ಚುನಾವಣೆಯನ್ನು ಘಟನಾತ್ಮಕವಾಗಿಯೂ ಗೌರವಯುತವಾಗಿಯೂ ನಡೆಸಬೇಕೆಂದು ನಂಬುತ್ತೇನೆ.

## ಕೃತಜ್ಞತೆ

ಈ ಸೇವಾವಕಾಶದಲ್ಲಿ ಕಾರ್ಯದರ್ಶಿಗಳಾಗಿ, ಕೋಶಾಧಿಕಾರಿಗಳಾಗಿ, ಕಾರ್ಯಸಮಿತಿಯ ಸದಸ್ಯರಾಗಿ ಸಹಾಯಮಾಡಿದ ಎಲ್ಲ ಮಹನೀಯರನ್ನೂ ಇಲ್ಲಿ ಸ್ಮರಿಸಿಕೊಳ್ಳುತ್ತೇನೆ. ಕೋಶಾಧಿಕಾರಿಗಳಾಗಿ ಸಹಾಯಮಾಡಿದ ಶ್ರೀ ಎಚ್. ಎಸ್. ಸೀತಾರಾಮ್, ಶ್ರೀ ಜಿ. ಶ್ರೀನಿವಾಸನ್, ಶ್ರೀ ಆರ್. ಅನಂತರಾಮನ್, ಕಾರ್ಯದರ್ಶಿಗಳಾಗಿ ಸಹಾಯಮಾಡಿದ ಶ್ರೀ ಡಿ. ಆರ್. ರಾಮಯ್ಯ, ಶ್ರೀ ಸಿ. ಕೆ. ನಾಗರಾಜರಾವ್, ಶ್ರೀ ಕೆ. ಗೋಪಾಲಕೃಷ್ಣರಾವ್, ಶ್ರೀ ಅನ್ನದಾನಯ್ಯ ಪುರಾಣಿಕ, ಡಾ|| ಕೆ. ಎಂ. ಕೃಷ್ಣರಾವ್, ಶ್ರೀ ಎಸ್. ಶಂಕರಪ್ಪ ಮೊದಲಾದ ಮಹನೀಯರಿಗೂ, ಸನ್ಮಿತ್ರರಾದ ಕಾರ್ಯಸಮಿತಿಯ ಎಲ್ಲ ಸದಸ್ಯರಿಗೂ ಮತ್ತು ಉಪಸಮಿತಿಯ ವ್ಯವಸ್ಥಾಪಕರುಗಳಿಗೂ ನಾನು ಇಂದು ನನ್ನ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ಪರಿಷತ್ತು ಕೈಗೊಂಡ ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದ ಹೊಸ ಕಟ್ಟಡಕ್ಕೆ ಉದಾರವಾಗಿ ಧನಸಹಾಯ ಮಾಡಿದ ಶ್ರೀ ಕೋಡೆ ಈಶ್ವರಸಾ ಅಂಡ್ ಸನ್ಸ್ ೧,೦೦೦ ರೂ. ಮಾಜಿ ಮೇಯರ್ ಕೆ. ಎಂ. ನಂಜಪ್ಪನವರು, ೨೫೦ ರೂ. ನಾಟಕರತ್ನಂ ಜಿ. ಎಚ್. ವೀರಣ್ಣನವರು, ೨೫೦ ರೂ. ಶ್ರೀ ಕೆ. ಎಸ್. ಈಶ್ವರರಾಯರು, ೨೫೦ ರೂ. ಶ್ರೀ ಎಂ. ನಂಜಪ್ಪನವರು, ೨೫೦ ರೂ. ಶ್ರೀ ಜಿ. ಶ್ರೀನಿವಾಸನ್ ಅವರು, ೫೦೦ ರೂ. ಶ್ರೀ ಕೆ. ಶ್ರೀನಿವಾಸನ್, ೨೫೦ ರೂ. ಶ್ರೀ ವಸುದೇವ ಭೂಪಾಲಂರವರು ೨೫೦ ರೂ. ಶ್ರೀ ಟಿ. ಎನ್. ನಂಜುಂಡಪ್ಪನವರು, ೨೫೦ ರೂ. ಮೊದಲಾದ ಮಹನೀಯರ ಉಪಕಾರವನ್ನು ನಾನು ಇಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ. ಈಗಾಗಲೇ ವಾಗ್ದಾನ ಮಾಡಿರುವ ಉಳಿದ ಮಹನೀಯರೂ ಜನತಾ ವಿಶ್ವವಿದ್ಯಾನಿಲಯವೆನಿಸಿರುವ, ಕರ್ಣಾಟಕ ಸರಸ್ವತೀ ನಿವಾಸಸ್ಥಾನವೆನಿಸಿರುವ ಈ ಮಹಾಸಂಸ್ಥೆಗೆ ಕೂಡಲೇ ಧನಸಹಾಯ ಮಾಡಿ ಪುಣ್ಯಭಾಗಿಗಳಾಗುವರೆಂದು ನಂಬುತ್ತೇನೆ.

## ಪತ್ರಿಕಾಕರ್ತರ ಸಹಕಾರ

ನಾಡಿನ ಪ್ರಖ್ಯಾತ ಪತ್ರಿಕೆಗಳಾದ ಪ್ರಜಾವಾಣಿ, ಸಂಯುಕ್ತಕರ್ಣಾಟಕ, ಡೆಕ್ಕನ್ ಹೆರಾಲ್ಡ್, ತಾಯಿನಾಡು, ಜನವಾಣಿ, ಪ್ರಜಾಮತ, ಜನಪ್ರಗತಿ, ಮೈಸಿಂಡಿಯಾ, ಹಿಂದೂ, ಇಂಡಿಯನ್ ಎಕ್ಸ್‌ಪ್ರೆಸ್ ಮೊದಲಾದ ಪತ್ರಿಕೆಗಳೂ, ಆಕಾಶವಾಣಿ ಸುದ್ದಿಗಾರರೂ ಪರಿಷತ್ತಿಗೆ ಸದಾ ಬೆಂಬಲ ನೀಡಿದ್ದಾರೆ. ಅವರೆಲ್ಲರ ಉಪಕಾರವನ್ನು ನಾನು ಇಲ್ಲಿ ಸ್ಮರಿಸುತ್ತೇನೆ.

## ಮುಂದೆ ಆಗಬೇಕಾದ ಕಾರ್ಯ

ಪರಿಷತ್ತಿನಲ್ಲಿ ಆಗಬೇಕಾದ ಕಾರ್ಯಗಳು ಬಹಳವಾಗಿವೆ. 2½ ಕೋಟಿ ಕನ್ನಡಿಗರ ಸಾಂಸ್ಕೃತಿಕ ಹೊಣೆಗಾರಿಕೆಯನ್ನು ಪರಿಷತ್ತು ಹೊತ್ತಿದೆ. ಪರಿಷತ್ತಿಗೆ ಈಗ ಒಂದು ದೊಡ್ಡ

ಸಭಾಭವನ ಬೇಕು. ಈಗಿನ ಸಭಾಭವನ ಈಗಿನ ಪುಸ್ತಕಾಲಯ ವಾಚನಾಲಯವಾಗಬೇಕು. ಅಚ್ಚುಕೂಟವೂ ಈಗ ವಿಸ್ತರಿಸಲ್ಪಟ್ಟು ಚನ್ನಾಗಿ ನಡೆಯಲು ಅನುಕೂಲವಾಗಿದೆ. ನಿಘಂಟು ಕಚೇರಿಯು ಅಚ್ಚುಕೂಟ ಕಟ್ಟಡದ ಮಹಡಿಯ ಮೇಲೆ ನಡೆಯಬೇಕು. ಈಗಿನ ಕಾಂಪೌಂಡನ್ನು ಎತ್ತರಿಸಿ ಸುವ್ಯವಸ್ಥೆಗೊಳಿಸುವುದು ಅಗತ್ಯ. ಪರಿಷತ್ತಿನಲ್ಲಿ ಸಂಶೋಧನಾಲಯವಾಗಿ, ಕರ್ನಾಟಕ ದಲ್ಲಿ ಮೂಲೆಗುಂಪಾಗಿ ಬಿದ್ದಿರುವ ಶಿಲಾ ಹಾಗೂ ತಾಮ್ರ ಶಾಸನಗಳು, ಪ್ರಾಚೀನ ಗ್ರಂಥಗಳು, ಇವನ್ನೆಲ್ಲಾ ಸಂಗ್ರಹಿಸಿ, ಸಂಶೋಧನಾಲಯವನ್ನು ಸ್ಥಾಪಿಸುವುದು ಅಗತ್ಯವಾಗಿದೆ.

ಮುಂದೆ ಬರುವ ಮಹನೀಯರು ಈ ಕಾರ್ಯವನ್ನು ನಿರ್ವಹಿಸುವರೆಂದು ನಂಬುತ್ತೇನೆ.

ನಾನು ಪರಿಷತ್ತಿನ ಅಧ್ಯಕ್ಷನಾದ ಮೇಲೆ ಸಂಗೀತ ನಾಟಕ ಅಕಾಡೆಮಿ, ಸಾಹಿತ್ಯ ಅಕಾಡೆಮಿ, ಸಂಸ್ಕೃತ ಬೋರ್ಡು, ಗೌರ್ನಮೆಂಟ್ ಪ್ರೆಸ್, ರೀಸರ್ಚ್ ಬ್ಯೂರೋ, ಬೆಂಗಳೂರು ವಿಶ್ವವಿದ್ಯಾನಿಲಯ, ಕನ್ನಡ ವಿಶ್ವಕೋಶ ಸಂಪಾದಕ ಸಮಿತಿ ಇತ್ಯಾದಿ ಸಂಘಸಂಸ್ಥೆಗಳಲ್ಲಿ ಪರಿಷತ್ತಿನ ಅಧ್ಯಕ್ಷರಿಗೆ ಸದಸ್ಯತ್ವ ಪ್ರಾಪ್ತವಾಗಿದೆ ಎಂದು ತಿಳಿಸಲು ಹರ್ಷಿಸುತ್ತೇನೆ. ಮೈಸೂರು ರಾಜ್ಯದ ಅಕ್ಷರ ಪ್ರಚಾರ ಕಾರ್ಯಸಮಿತಿಯಲ್ಲಿ ಪರಿಷತ್ತಿಗೆ ಮೊದಲಿನಿಂದಲೂ ಸ್ಥಾನವಿದೆ ಯೆಂದು ಈ ಸಮಯದಲ್ಲಿ ನಾನು ತಿಳಿಸಬೇಕಾಗಿದೆ.

ಎಲ್ಲರಿಗೂ ಕೃತಜ್ಞತಾ ವಂದನೆಗಳು. ನಾನು ಪರಿಷತ್ತಿನ ಅಧ್ಯಕ್ಷನಾಗಿದ್ದ ೮ ವರ್ಷಗಳ ಅವಧಿಯಲ್ಲಿ, ನನಗೆ ಎಲ್ಲ ವಿಧದಿಂದಲೂ ನೆರವಾದ ಸರಕಾರ ಹಾಗೂ ಸಾರ್ವಜನಿಕರು, ಪತ್ರಿಕಾಕರ್ತರು, ಕಾರ್ಯಸಮಿತಿ ಸದಸ್ಯರು, ಕಾರ್ಯದರ್ಶಿಗಳು, ಕೋಶಾಧಿಕಾರಿ ಹಾಗೂ ವ್ಯವಸ್ಥಾಪಕರು ಮೊದಲಾದ ಎಲ್ಲ ಮಹನೀಯರುಗಳಿಗೂ ಮತ್ತೊಮ್ಮೆ ವಂದಿಸುತ್ತೇನೆ.

**ಸಿರಿಗನ್ನಡಂ-ಗೆಲ್ಗೆ-ಬಾಳ್ಗೆ**

ಇಂತು

ದಿನಾಂಕ ೮-೧೦-೧೯೬೪ **ಬಿ. ಶಿವಮೂರ್ತಿಶಾಸ್ತ್ರೀ,**

ಬೆಂಗಳೂರು-೧೮. **(ಕನ್ನಡಿಗರ ಕಿಂಕರ)**

# ಮಾಜಿ ಮಂತ್ರಿ ಶ್ರೀ ಮರಿಯಪ್ಪನವರು ಕೀರ್ತಿಕಾಯರಾದುದು ಕನ್ನಡ ನಾಡಿಗೆ ಅಪಾರವಾದ ನಷ್ಟ

ಮೈಸೂರು ರಾಜ್ಯದ ಮಾಜಿ ಮಂತ್ರಿಗಳೂ, ಹಿರಿಯ ಕಾಂಗ್ರೆಸ್ ಕಾರ್ಯಕರ್ತರೂ, ಕನ್ನಡ ನಾಡು ನುಡಿಗಳ ಉಜ್ವಲಾಭಿಮಾನಿಗಳೂ ಆದ ಶ್ರೀ ಟಿ. ಮರಿಯಪ್ಪನವರು ದಿನಾಂಕ ೨-೧೦-೧೯೬೪ರ ಸಂಜೆ ಬೆಂಗಳೂರಿನ ತಮ್ಮ ಮನೆಯಲ್ಲಿ ತಮ್ಮ ೬೦ನೆಯ ವಯಸ್ಸಿನಲ್ಲಿ ಭೌತಿಕ ದೇಹವನ್ನುಳಿದು ಭಗವಂತನ ಪಾದವನ್ನು ಸೇರಿದರು. ಶ್ರೀ ಟಿ. ಮರಿಯಪ್ಪನವರು ಮೈಸೂರಿನ ಗಣ್ಯ ಮಹನೀಯರು. ಒಳ್ಳೆಯ ಬುದ್ಧಿಶಾಲಿಗಳು, ಮಿಗಿಲಾದ ಲೋಕಾನುಭವವನ್ನು ಉಳ್ಳವರು. ಕನ್ನಡ ನಾಡು ನುಡಿಗಳ ಬಗೆಗೆ ಅವರಿಗೆ ಅಪಾರವಾದ ಅಭಿಮಾನವಿತ್ತು. ಹಿಂದುಳಿದ ಜನಗಳಿಗೆ ಅವರು ಹಿತಚಿಂತಕರಾಗಿದ್ದರು. ಶ್ರೀ ಕೆ. ಸಿ. ರೆಡ್ಡಿಯವರು, ಶ್ರೀ ಬಿ. ಡಿ. ಜತ್ತಿಯವರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದಾಗ ಮೇಧಾವಿಗಳಾದ ಇವರು ಗೃಹಮಂತ್ರಿ ಮತ್ತು ಅರ್ಥಮಂತ್ರಿಗಳಾಗಿದ್ದು ರಾಜ್ಯಕ್ಕೆ ಮಿಗಿಲಾದ ಸೇವೆಯನ್ನು ಸಲ್ಲಿಸಿದರು. ಕಾಂಗ್ರೆಸ್ ಕಾರ್ಯಕರ್ತರಾಗಿ ಆ ಸಂಸ್ಥೆಯನ್ನು ಬಲಪಡಿಸಿದರು. ಶ್ರೀ ಮರಿಯಪ್ಪನವರು ಸಾಹಿತ್ಯ ಪರಿಷತ್ತಿನ ಅಭಿಮಾನಿಗಳು. ಪರಿಷತ್ತು ಕೈಗೊಂಡಿರುವ ಕನ್ನಡ-ಕನ್ನಡ ನಿಘಂಟು ನಿರ್ಮಾಣಕ್ಕೆ ಸರ್ಕಾರ ೧೫ ಲಕ್ಷ ರೂಪಾಯಿಗಳನ್ನು ಮಂಜೂರು ಮಾಡುವಾಗ ಶ್ರೀ ಮರಿಯಪ್ಪನವರು ರಾಜ್ಯದ ಅರ್ಥಮಂತ್ರಿಗಳಾಗಿದ್ದರು. ಮಾನ್ಯ ಶ್ರೀ ಬಿ. ಡಿ. ಜತ್ತಿ, ಮಾನ್ಯ ಶ್ರೀ ಜಿ. ಅಣ್ಣಾರಾವ್ ಗಣಮುಖಿ ಇವರುಗಳನ್ನು ಈ ಬಗೆಗೆ ಒಪ್ಪಿಸಿದ ಕೀರ್ತಿ ದಿವಂಗತರಿಗೆ ಹೆಚ್ಚಾಗಿ ಸೇರತಕ್ಕದ್ದು.

ಶ್ರೀ ಮರಿಯಪ್ಪನವರು ದೈವಭಕ್ತರಾಗಿಯೂ, ದೇಶಾಭಿಮಾನಿಗಳಾಗಿಯೂ, ಸ್ನೇಹಪರರಾಗಿಯೂ ಇದ್ದರು. ಶ್ರೀಯುತರ ವಿಯೋಗದಿಂದ ರಾಜ್ಯದ ಒಬ್ಬ ಮೇಧಾವಿ, ಅನುಭವಿಕ ಕಾರ್ಯಕರ್ತ ಇಲ್ಲದಂತಾಗಿದೆ. ಶ್ರೀ ಮರಿಯಪ್ಪನವರು ೬೦ ವರುಷ ಸಾರ್ಥಕ ಜೀವನವನ್ನು ನಡೆಸಿದ್ದಾರೆ. ದೈವೇಚ್ಛೆಗೆ ಉಪಾಯವಿಲ್ಲ. ಭಗವಂತನು ಮೃತರ ಆತ್ಮಕ್ಕೆ ಶಾಂತಿಯನ್ನೂ, ವಿಯೋಗಿಗಳ ಪತ್ನೀಪುತ್ರರ ಮನಸ್ಸಿಗೆ ಸಮಾಧಾನವನ್ನೂ ಉಂಟುಮಾಡಲಿ.

ಕನ್ನಡ ಸಾಹಿತ್ಯ ಪರಿಷತ್ತು ಶ್ರೀ ಟಿ. ಮರಿಯಪ್ಪನವರ ಸಹಾಯ ಸಹಾನುಭೂತಿಗಳನ್ನು ಸದಾ ಕೃತಜ್ಞತೆಯಿಂದ ಸ್ಮರಿಸುತ್ತೇವೆ.

**ಬಿ. ಶಿವಮೂರ್ತಿ ಶಾಸ್ತ್ರೀ**

ಅಧ್ಯಕ್ಷ, ಕನ್ನಡ ಸಾಹಿತ್ಯ ಪರಿಷತ್ತು.

## ಕನ್ನಡ ಸಾಹಿತ್ಯ ಪರಿಷತ್ತು

**ಚಾಮರಾಜಪೇಟೆ :: ಬೆಂಗಳೂರು-೧೮**

### ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಕರ್ಣಾಟಕ ಕವಿಚರಿತೆಯ ಮೊದಲನೇ ಭಾಗವನ್ನು ಪರಿಷತ್ತಿನ ಸದಸ್ಯರಿಗೆ ಇತರ ಪ್ರಕಟಣೆಗಳಿಗೆ ಇರುವ ರಿಯಾಯಿತಿ ದರದಲ್ಲೇ ಕೊಡಲಾಗುವುದು. ಮಾನ್ಯ ಸದಸ್ಯರು ಈ ರಿಯಾಯಿತಿಯ ಉಪಯೋಗ ಪಡೆಯಬೇಕೆಂದು ಕೋರಲಾಗಿದೆ.

**ಗೌರವ ಕಾರ್ಯದರ್ಶಿ**

# ಎಲ್ಲವೂ ನೀನಾಗು*

ಲೇ: ಡಿ. ಸಿ. ಗೌಡಯ್ಯ, ಪಿ.

ಇಲ್ಲಿಯೇ ಹೂವಾಗು – ಇಲ್ಲಿಯೇ ಕುಸುಮಾಗು
ಇಲ್ಲಿಯೇ ಕಾಯಾಗು – ಇಲ್ಲಿಯೇ ಹಣ್ಣಾಗು
ಚೆಲುವಿನಲಿ ಚೆಲುವಾಗು – ಗೆಲುವಿನಲಿ ಗೆಲುವಾಗು
ಒಲವಿನಲಿ ಒಲವಾಗು – ಬಡವರಿಗೆ ನೆರವಾಗು
॥ ಎಲ್ಲವೂ ನೀನಾಗು ॥ ೧

ಗುರುವಿನಡಿ ಹೂವಾಗು – ಹಿರಿಯರಿಗೆ ಶಿರಬಾಗು
ದೇವನಿಗೆ ಕಂದನಾಗು – ಮಾತೆಯುರ ಮಗನಾಗು
ಕನ್ನಡಿಗ ನೀನಾಗು – ದೇಶರಕ್ಷಕನಾಗು
ಧರ್ಮ ತಕ್ಕಡಿಯಾಗು – ಸತ್ಯದ ಕಲ್ಲಾಗು
॥ ಎಲ್ಲವೂ ನೀನಾಗು ॥ ೨

ಪರರಿಗೆ ನೆರವಾಗು – ಪರಹೆಣ್ಣಿಗಣ್ಣನಾಗು
ಬೆಟ್ಟದಡಿ ಹುಲ್ಲಾಗು – ಕತ್ತಲೆಯ ಬೆಳಕಾಗು
ಮಕ್ಕಳಲಿ ಮಗುವಾಗು – ರಸಕಿಂತ ರುಚಿಯಾಗು
ತುಂಬಿದಾ ಕೊಡವಾಗು – ಈ ನಾಡ ಕಲಿಯಾಗು
॥ ಎಲ್ಲವೂ ನೀನಾಗು ॥ ೩

ಶರಣರಿಗೆ ಶರಣಾಗು – ಕರುಣೆಯ ಕಣ್ಣಾಗು
ಬಲ ಭೀಮ ನೀನಾಗು – ಭಾರತಿಯ ಮಗನಾಗು
ಹಾಲಾಗು ಜೇನಾಗು – ತಿಂಗಳಿನ ಬೆಳಕಾಗು
ಜೀವ ಚೇತನವಾಗು – ಲೋಕ ತಾರಕನಾಗು
॥ ಎಲ್ಲವೂ ನೀನಾಗು ॥ ೪

*ಪರಿಷತ್ತಿನಲ್ಲಿ ಅಕ್ಟೋಬರ್ ದಿನಾಂಕ ೨ ರಂದು ಆಚರಿಸಿದ ಗಾಂಧಿ ಜಯಂತಿ ಸಂದರ್ಭದಲ್ಲಿ ಓದಿದ ಕವಿತೆ.

# ಕನ್ನಡ ಸಾಹಿತ್ಯ ಪರಿಷತ್ತಿನ
# ಕನ್ನಡ-ಕನ್ನಡ ನಿಘಂಟು



## ಪ್ರಕಟಣೆ

ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ "ಕನ್ನಡ ನಿಘಂಟು" ಡೆಮ್ಮಿ ಚತುಷ್ಪತ್ರ ಆಕಾರದ ಸುಮಾರು ೫,೦೦೦ ಪುಟಗಳನ್ನು ಒಳಗೊಂಡು, ಒಂದೊಂದು ಸಂಪುಟದಲ್ಲೂ ಸುಮಾರು ೧೨೫೦ ಪುಟಗಳಿರುವ ನಾಲ್ಕು ಸಂಪುಟಗಳಲ್ಲಿ (Volumes) ಪ್ರಕಟವಾಗುವಂತೆ ಏರ್ಪಡಿಸಲಾಗಿದೆ.

ನಿಘಂಟಿನ ಒಟ್ಟು ಬೆಲೆ ೧೨೦ ರೂಪಾಯಿಗಳು; ಮುಂಗಡವಾಗಿ ಹಣ ಸಲ್ಲಿಸುವ ಗ್ರಾಹಕರಿಗೆ ೧೦೦ ರೂಪಾಯಿಗಳ ರಿಯಾಯಿತಿ ದರದಲ್ಲಿ ಅದನ್ನು ಒದಗಿಸಲಾಗುತ್ತದೆ. ನಿಘಂಟು ಸಿದ್ಧವಾದಂತೆಲ್ಲ ೯೬ ಪುಟಗಳುಳ್ಳ ಸಂಚಿಕೆಗಳ (Fascicules) ರೂಪದಲ್ಲಿಅದನ್ನು ಮುಂಗಡವಾಗಿ ೧೦೦ ರೂಪಾಯಿಗಳ ರಿಯಾಯಿತಿಯ ಬೆಲೆಯನ್ನು ಸಲ್ಲಿಸಿರುವ ಗ್ರಾಹಕರಿಗೆ ತಲುಪಿಸಲಾಗುವುದು. ನಿಘಂಟಿನ ಸಂಪುಟಗಳನ್ನಾಗಲಿ ಸಂಚಿಕೆಗಳನ್ನಾಗಲಿ ಬಿಡಿ ಬಿಡಿಯಾಗಿ ವಿಕ್ರಯಿಸುವುದಿಲ್ಲ. ಮುಂಗಡ-ಹಣ ನೂರು ರೂಪಾಯಿಗಳನ್ನು ಹತ್ತು ರೂ.ಗೆ ಕಡಿಮೆಯಿಲ್ಲದ ಕಂತುಗಳಲ್ಲಿ ಪಾವತಿ ಮಾಡಬಹುದು. ಆದರೆ ಪೂರ್ತ ಹಣ ಸಂದಾಯ ವಾಗುವವರೆಗೆ ಸಂಚಿಕೆಗಳನ್ನು ಕಳಿಸಲಾಗುವುದಿಲ್ಲ.

ನಿಘಂಟಿನ ಎರಡನೆಯ ಸಂಪುಟವು ಪ್ರಕಟವಾದ ಕೂಡಲೆ **ರಿಯಾಯಿತಿಯ ದರದಲ್ಲಿ** ಅದನ್ನು ವಿಕ್ರಯಿಸುವುದನ್ನು ನಿಲ್ಲಿಸಲಾಗುತ್ತದೆ; ಆ ಮುಂದೆ ಪೂರ್ಣವಾದ ಬೆಲೆಯನ್ನು ಕೊಡಬೇಕಾಗುತ್ತದೆ.

ನಿಘಂಟಿನ ಒಂದು ಸಂಪುಟವು ಸಿದ್ಧವಾದ ಬಳಿಕ ಅದರ ರಕ್ಷಾಕವಚವನ್ನು (Binding Case) ಮುಂಗಡವಾಗಿ ಬೆಲೆ ಸಲ್ಲಿಸಿರುವ ಗ್ರಾಹಕರಿಗೆ ಉಚಿತವಾಗಿ ಒದಗಿಸಲಾಗುವುದು.

ಸಂಚಿಕೆಗಳನ್ನೂ ರಕ್ಷಾಕವಚಗಳನ್ನೂ ಕಳಿಸಲು ತಗುಲುವ ಅಂಚೆವೆಚ್ಚವನ್ನು ಗ್ರಾಹಕರೇ ಸಲ್ಲಿಸತಕ್ಕದ್ದು.

ಗ್ರಾಹಕರು ಮುಂಗಡ ಬೆಲೆಯ ಜೊತೆಗೆ ಹತ್ತು ರೂಪಾಯಿಗಳನ್ನು ಅಂಚೆವೆಚ್ಚ, ರವಾನೆ ವೆಚ್ಚ ಗಳಿಗಾಗಿ ಸಲ್ಲಿಸಬೇಕು. ಸಂಚಿಕೆಗಳನ್ನು "ರಿಜಿಸ್ಟರ್ಡ್ ಪೋಸ್ಟ್" ಮೂಲಕ ಕಳಿಸಬೇಕೆಂದು ಗ್ರಾಹಕರು ಅಪೇಕ್ಷಿಸಿದಲ್ಲಿ ಆ ವಿಷಯವನ್ನು ಅವರು ಲಿಖಿತರೂಪದಲ್ಲಿ ಮೊದಲೇ ತಿಳಿಸಬೇಕು. ಹಾಗೆ ಮಾಡದಿದ್ದರೆ ಸಂಚಿಕೆಗಳನ್ನು "ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್" ಸಮೇತವಾಗಿ ಸಾದಾ ಟಪಾಲಿನ ಮೂಲಕ ಕಳಿಸ ಲಾಗುವುದು. ಸಂಚಿಕೆಗಳನ್ನು ಪರಿಷತ್ತಿನ ಕಚೇರಿಯಲ್ಲೇ ತೆಗೆದುಕೊಳ್ಳಲು ಅಪೇಕ್ಷಿಸುವವರು ಮುಂಚಿತವಾಗಿ ತಿಳಿಸಿ ಆ ರೀತಿ ಮಾಡಬಹುದು; ಅಂಥವರು ಅಂಚೆವೆಚ್ಚವನ್ನು ಕೊಡಬೇಕಾಗುವುದಿಲ್ಲ.

**ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.**

ಈ ವಿಳಾಸಕ್ಕೆ ಹಣ ಕಳುಹಿಸಿ ಪತ್ರ ವ್ಯವಹಾರ ಮಾಡಬಹುದು.

**ಕೆ. ಎಂ. ಕೃಷ್ಣರಾವ್**
ಗೌರವ ಕಾರ್ಯದರ್ಶಿ

# ಕನ್ನಡ ಸಾಹಿತ್ಯ ಪರಿಷತ್ತಿನ ಅಭಿವೃದ್ಧಿ

[ಪರಿಷತ್ತಿನಲ್ಲಿ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ನಡೆಸಿದ ಪತ್ರಿಕಾಗೋಷ್ಠಿಯಲ್ಲಿ ಹೊರಬಿದ್ದ ವಿಚಾರಗಳ ಕುರಿತು 'ಜನವಾಣಿ' ಪತ್ರಿಕೆಯಲ್ಲಿ ಪ್ರಕಟವಾದ ಸಂಪಾದಕೀಯ ಯನ್ನು ಇಲ್ಲಿ ಕೊಡಲಾಗಿದೆ]

ಕಳೆದ ಎಂಟು ವರ್ಷಗಳಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಅಭಿವೃದ್ಧಿ ಎಷ್ಟರಮಟ್ಟಿಗೆ ಆಗಿದೆಯೆಂಬುದರ ಸಮೀಕ್ಷೆ ನಡೆಸಿ ಪರಿಷತ್ತಿನ ಈ ಕಾಲಾವಧಿಯ ಅಧ್ಯಕ್ಷತೆಯನ್ನು ತಮ್ಮದೇ ಆದ ದಕ್ಷತೆಯಿಂದ ನಿರ್ವಹಿಸಿದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಸೋದಾಹರಣವಾಗಿ ವಿವರಿಸಿದ್ದಾರೆ. ಇನ್ನು ಮುಂದೆ ಸಾಧಿಸಬೇಕಾಗಿರುವ ಮಹತ್ಕಾರ್ಯದ ಗಾತ್ರದ ದೃಷ್ಟಿಯಿಂದ ಈ ಎಂಟುವರ್ಷಗಳಲ್ಲಿ ತಹಲುವರೆಗೆ ಆಗಿರುವ ಸಾಧನೆ ಅಲ್ಪವೆಂದೇ ಹೇಳಬೇಕು-ಎಂಬುದಾಗಿ ಶ್ರೀ ಶಾಸ್ತ್ರಿಗಳು ತಿಳಿಸಿರುವುದರಲ್ಲಿ ಅವರ ಸೌಜನ್ಯ ಕಂಡುಬರುತ್ತದೆ. ಪರಿಷತ್ತಿನ ಸಾಂಸ್ಥಿಕ ವ್ಯಕ್ತಿತ್ವ ಅಗಾಧವಾಗಿ ವೃದ್ಧಿ ಹೊಂದಿದೆ. ಅದರ ಕರ್ತವ್ಯಬಾಧ್ಯತೆಯೂ ಬಹಳವಾಗಿ ಬೆಳೆದಿದೆ. ಶ್ರೀ ಶಾಸ್ತ್ರಿಗಳ ಆಡಳಿತ ವಿಧಾನ ಮತ್ತು ಸಕಲ ಸದಸ್ಯರಲ್ಲಿ ವ್ಯವಹಾರ ವಿಶಿಷ್ಟವಾಗಿದ್ದು ಕೆಲವರಿಗೆ ಅಸಮಾಧಾನವಾಗಿರಬಹುದು. ಆದರೂ ಅವರ ಅರ್ಹತೆ ಮತ್ತು ದಕ್ಷತೆಗಳನ್ನು ಯಾರೂ ಅಲ್ಲಗಳೆಯಲಾರರು.

ಮೊನ್ನಿನ ಪತ್ರಿಕಾ ಗೋಷ್ಠಿಯಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ತಾವು ಪ್ರಜಾಸತ್ತೆಯ ಕಡೆ ಒಲವುಳ್ಳವರೆಂಬುದನ್ನು ಚೆನ್ನಾಗಿ ತೋರಿಸಿಕೊಂಡರು. ತಾವು ಅಧ್ಯಕ್ಷತೆಯನ್ನು ಎಂಟು ವರ್ಷ ಕಾಲ ಅನುಭವಿಸಿರುವುದರಿಂದ ಇನ್ನು ಮುಂದೆಯೂ ಅದಕ್ಕಾಗಿ ಆಸೆಪಟ್ಟು ಚುನಾವಣೆಗೆ ನಿಲ್ಲುವುದು ಉಚಿತವಲ್ಲವೆಂಬ ಅಭಿಮತ ತಮಗೆ ಖಚಿತವಾಗಿ ಉಂಟಾಗಿರುವುದಾಗಿ ತಿಳಿಯಪಡಿಸಿದರು. ಅವರ ಅಭಿಮತ ಮತ್ತು ನಿರ್ಧಾರಗಳಿಗೆ ಸುಪುಷ್ಟವಾದ ಆಧಾರವಿದೆ. ಒಬ್ಬ ವ್ಯಕ್ತಿ ಎಷ್ಟೇ ಸಮರ್ಥರಾಗಿದ್ದರೂ ಪ್ರಜಾಸತ್ತಾತ್ಮಕ ವ್ಯವಸ್ಥೆಯಿರುವಾಗ ಅದೇ ವ್ಯಕ್ತಿ ಪುನಃ ಪುನಃ ಚುನಾವಣೆಗೆ ನಿಂತು ಆರಿಸಿಬರುವುದು ವಿಹಿತವಲ್ಲ. ಇದರಿಂದ ಇಲ್ಲದ ಪೈಪೋಟಿ, ಆಕ್ಷೇಪಣೆ ಮತ್ತು ಟೀಕೆಗಳಿಗೆ ದಾರಿಮಾಡಿದಂತಾಗುತ್ತದೆ. ಎರಡು ಮೂರು ವರ್ಷಗಳಾದಮೇಲೆ ಒಬ್ಬರೇ ಆಯ್ಕೆಯಾಗುತ್ತಾ ಬಂದರೆ ಚುನಾವಣಾ ಪೈಪೋಟಿಯಲ್ಲಿ ಹತಾಶರಾದವರಾದರೂ ಸಹಜ ಅಸಮಾಧಾನದಿಂದ ಅನುಮಾನ ಪಟ್ಟು, ನ್ಯೂನತೆಗಳನ್ನು ಎತ್ತಿ ತೋರಿಸುತ್ತಾರೆ. ಹೀಗಾದಮೇಲೆ 'ರಾಜಕೀಯ' ತಲೆಹಾಕಿ ದೋಷಾರೋಪಣೆ ಪ್ರತ್ಯಾರೋಪಣೆ ಮಾಡಲಾಗುತ್ತದೆ. ಈ ಘಟ್ಟ ಮುಟ್ಟಿದಮೇಲೆ ಸಂಸ್ಥೆಯ ಮುನ್ನಡೆ ಕೇವಲ ಪ್ರಚಾರವಸ್ತುವಾಗುತ್ತದೆ.

ಆದ್ದರಿಂದ ಜಾಣರಾದ ಅಧ್ಯರು ವ್ಯಕ್ತಿಯ ಸುತ್ತ ವಿವಾದ ಬೆಳೆದ ಸ್ಥಿತಿಯಲ್ಲಿ ಪ್ರಮುಖ ಸ್ಥಾನದಿಂದ ವ್ಯಾವೃತ್ತರಾಗಿ ಮನಃ ಕಷಾಯವಿಲ್ಲದೆ ಸಂಸ್ಥೆಯ ಏಳಿಗೆಗಾಗಿ ಬೇರೆ ರೀತಿಯಲ್ಲಿ ಶ್ರಮಿಸುತ್ತಾರೆ. ಶ್ರೀ ಶಾಸ್ತ್ರಿಗಳು ಇಂತಹ ಸಮುಚಿತ ಮನೋಧರ್ಮ ಪ್ರದರ್ಶಿಸಿರುವುದು ಯೋಗ್ಯವಾಗಿಯೇ ಇದೆ. ಈ ಸಂದರ್ಭದಲ್ಲಿ ಒಂದು ಉನ್ನತ ತತ್ತ್ವವನ್ನೂ ಅಷ್ಟೇ ಉನ್ನತ ಉದಾಹರಣೆಯನ್ನೂ ಪ್ರಸ್ತಾಪಿಸಿದರೆ ಅನುಚಿತವಾಗಲಾರದೆಂದು ಭಾವಿಸುತ್ತೇವೆ. ಟೆನಿಸನ್ ಕವಿಯ ಒಂದು ನುಡಿ ಪ್ರಾಸ್ತಾವಿಕವಾಗಿದೆ. "ಎಷ್ಟೇ ಒಳ್ಳೆಯದೇ ಆದರೂ ತುಂಬಾ ಕಾಲವಿದ್ದರೆ ಅದರ ಗುಣ ಸವೆತಕ್ಕೀಡಾಗಿ ಅಹಿತಕ್ಕೆಡೆಗೊಡುತ್ತದೆ." ಈ ನುಡಿಯನ್ನು ಶ್ರೀ ನೆಹರು ಅವರಂತಹ ಉನ್ನತ ವ್ಯಕ್ತಿಗೂ ಅನ್ವಯಿಸಿದವರುಂಟು. ಪ್ರಜಾಪ್ರಭುತ್ವದ ಸ್ವಭಾವವೇ ಹಾಗೆ. ಸ್ಥಿತಿಗತಿಗಳು ಹೀಗಿರುವಾಗ ಮಿಕ್ಕವರ ಪಾಡೇನು?

ಶ್ರೀ ಶಾಸ್ತ್ರಿಗಳು ಪರಿಷತ್ಸದಸ್ಯತ್ವದ ವ್ಯಾಪ್ತಿ ಹೆಚ್ಚಿದೆ, ಸಾಹಿತ್ಯ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳ ಚಟುವಟಿಕೆ ಅಧಿಕವಾಗಿದೆ—ಎಂದು ಸಾಹಿತ್ಯ ಪರಿಷತ್ತಿನ ಅಭಿವೃದ್ಧಿಯನ್ನು ಕುರಿತು ಉದಾಹರಿಸಿದ್ದಾರೆ. ಆದರೆ ಆಡಳಿತ ವಿಭಾಗದಲ್ಲಿ ವೈಯುಕ್ತಿಕ ಅಥವಾ ರಾಜಕೀಯಾಂಶಗಳಿಗೆ ಎಡೆಗೊಡದಂತೆ ಕೇವಲ (acadmic) ಬೌದ್ಧಿಕ ಮತ್ತು ಸಾಹಿತ್ಯ ಸಂಬಂಧ ಕ್ರಿಯಾತ್ಮಕ ವೃದ್ಧಿಗೆ ಭದ್ರವಾದ ವ್ಯವಸ್ಥೆ ಮಾಡುವ ಅಗತ್ಯವಿದೆ. ಉದ್ಗ್ರಂಥಗಳ ಪ್ರಕಟಣೆ, ಪ್ರಮಾಣೀಕೃತ ವಿಜ್ಞಾನ ಪುಸ್ತಕಗಳ ಪ್ರಕಾಶನ ಮತ್ತು ಸಂಶೋಧನೆಗಳ ಕಡೆ ಕಾರ್ಯಶೀಲ ಗಮನವಿತ್ತು ಮುನ್ನಡೆ ಸಾಧಿಸಲು ಕನ್ನಡ ಸಾಹಿತ್ಯ ಪರಿಷತ್ತು ಸಮರ್ಥವಾಗಬೇಕು. ಅಭಿವೃದ್ಧಿ ಹೊಂದಲು ಪರಿಷತ್ತಿಗೆ ಸಾರ್ವಜನಿಕರ ಬೆಂಬಲ ಮತ್ತು ಸರ್ಕಾರದವರ ನೆರವು ಪರ್ಯಾಪ್ತವಾಗಿ ದೊರೆಯಬೇಕು. ಇವುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಪಡೆದು ಪುರೋಭಿವೃದ್ಧಿ ಸಾಧಿಸಲು ಪರಿಷತ್ತಿಗೆ ಸಮರ್ಥ ಅಧ್ಯರ ನೇತೃತ್ವ ಬೇಕು. ವಿದ್ವತ್ತು, ಘನತೆ, ಗಣ್ಯತೆ, ವಿದ್ಯಾಪಕ್ಷಪಾತಿತ್ವ, ಕಾರ್ಯದಕ್ಷತೆಗಳುಳ್ಳ ಅಧ್ಯರ (ಗಣದ) ಮಾರ್ಗದರ್ಶಿತ್ವ—ಮುಂದಾಳುತನ—ಕನ್ನಡ ಸಾಹಿತ್ಯ ಪರಿಷತ್ತಿಗೆ ಸಮೃದ್ಧಿಯಾಗಿ ಲಭಿಸಿ ಸರ್ವತೋಮುಖ ಪುರೋಭ್ಯುದಯ ಸಿದ್ಧಿಸಲೆಂದು ಹಾರೈಸುತ್ತೇವೆ.

# ಪರಿಷತ್ತಿನ ಸುದ್ದಿಗಳು

## ಗಮಕಿಗಳ ಸಲುವಾಗಿ ಸಂತೋಷಕೂಟ

ಕನ್ನಡ ಸಾಹಿತ್ಯ ಪರಿಷತ್ತಿಗೆ ಸೇವೆ ಸಲ್ಲಿಸಿರುವ ಬೆಂಗಳೂರಿನ ಗಮಕಿಗಳ ಸಲುವಾಗಿ ದಿನಾಂಕ ೨೮–೯–೧೯೬೪ ನೆಯ ಸೋಮವಾರ ಸಂಜೆ ೬–೩೦ ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಸಂತೋಷಕೂಟವನ್ನು ಏರ್ಪಡಿಸಲಾಗಿತ್ತು. ಪರಿಷತ್ತಿನ ಅಧ್ಯಕ್ಷರಾದ ಆಸ್ಥಾನವಿದ್ವಾನ್ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಅಧ್ಯಕ್ಷತೆಯನ್ನು ವಹಿಸಿದ್ದರು. ಗಮಕ ಸಮಿತಿಯ ಪರವಾಗಿ ವ್ಯವಸ್ಥಾಪಕರಾದ ಶ್ರೀ ಎಂ. ರಾಘವೇಂದ್ರರಾಯರೂ, ಶ್ರೀ ಚಂದ್ರಶೇಖರಯ್ಯನವರೂ ಕಾರ್ಯಕಲಾಪಗಳನ್ನು ನಡೆಯಿಸಿಕೊಟ್ಟರು. ಪ್ರಾರ್ಥನೆಯಾದ ಮೇಲೆ ಶ್ರೀಮತಿ ಆರ್. ಯಮುನಾಬಾಯಿಯವರು ಶ್ರೀ ಡಿ. ಆರ್. ರಾಮಯ್ಯನವರು ರಚಿಸಿದ್ದ “ಶಾರದೆಯ ಕಂಠ” ಎಂಬ ಗಮಕಗೀತೆಯನ್ನು ಸುಲಲಿತವಾಗಿ ಸ್ಫೂರ್ತಿಯುತವಾಗಿ ಹಾಡಿದರು. (ಈ ಗೀತೆಯನ್ನು ಈ ಸಂಚಿಕೆಯ ಬೇರೊಂದು ಕಡೆ ಮುದ್ರಿಸಿದೆ.) ಶ್ರೀ ಎಂ. ರಾಘವೇಂದ್ರರಾಯರು ರಚಿಸಿದ್ದ ಮತ್ತೊಂದು ಗಮಕಗೀತೆಯನ್ನು ಕುಮಾರಿ ಸೀತಾಲಕ್ಷ್ಮಿಯವರು ಹಾಡಿದ ಮೇಲೆ, ಶ್ರೀಮತಿಯರಾದ ಜಯಲಕ್ಷ್ಮಿ ಸುಬ್ಬರಾವ್ ಮತ್ತು ಕಮಲಾ ರಾಮಕೃಷ್ಣರವರೂ ಮತ್ತು ಶ್ರೀ ನಾರಾಯಣ ಮೂರ್ತಿಯವರೂ ಸುಶ್ರಾವ್ಯವಾಗಿ ಕಾವ್ಯವಾಚನ ಮಾಡಿದರು. ತರುವಾಯ ಅಧ್ಯಕ್ಷರು ಗಮಕ ಸಂಪತ್ತನ್ನು ಉಳಿಸಿ ಬೆಳೆಸಿ, ಬೆಳಗಲು ಕನ್ನಡ ಸಾಹಿತ್ಯ ಪರಿಷತ್ತು ಇದುವರೆಗೆ ನಡೆಯಿಸಿರುವ ಕಾರ್ಯಕ್ರಮಗಳನ್ನು ವಿವರಿಸಿ, ಗಮಕ ಕಲೆಗೆ ಉತ್ತಮ ಭವಿಷ್ಯವಿದೆಯೆಂದು ನುಡಿದರು. ಇದಕ್ಕೆ ಪೂರ್ವಭಾವಿಯಾಗಿ ಶ್ರೀ ಚಂದ್ರಶೇಖರಯ್ಯನವರು ಸ್ವಾಗತ ಭಾಷಣ ಮಾಡಿ, ಪರಿಷತ್ತಿನ ಔದಾರ್ಯವನ್ನು ಶ್ಲಾಘಿಸಿದರು. ಸಭೆಗೆ ಆಗಮಿಸಿದ್ದ ಗಮಕ ವಿದ್ವಾಂಸರಿಗೆ ಗೌರವ ಪೂರ್ವಕವಾಗಿ ಹಾರಗಳನ್ನು ಅರ್ಪಿಸಿದ ಮೇಲೆ, ವಂದನಾರ್ಪಣೆಯೊಡನೆ ಸಂತೋಷಕೂಟವು ಮುಕ್ತಾಯಗೊಂಡಿತು.

## ಗಾಂಧೀಜಿ ಜಯಂತ್ಯುತ್ಸವ

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅಕ್ಟೋಬರ್ ದಿನಾಂಕ ೨ ರಂದು ಸಂಜೆ ಮಹಾತ್ಮ ಗಾಂಧೀಜಿಯವರ ಜಯಂತ್ಯುತ್ಸವದ ಏರ್ಪಾಟಾಗಿತ್ತು. ಪರಿಷತ್ತಿನ ಅಧ್ಯಕ್ಷ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಯವರು ಅಧ್ಯಕ್ಷತೆ ವಹಿಸಿದ್ದರು. ಪ್ರಾರ್ಥನೆ, ಓರ್ವ ಪುಟ್ಟ ಬಾಲಿಕೆಯಿಂದ ಭಾಷಣ, ಶ್ರೀ ಗೌಡಯ್ಯನವರಿಂದ ಕವಿತಾ ಪಠನ ಇತ್ಯಾದಿ ಕಾರ್ಯಕ್ರಮಗಳಾದ ಮೇಲೆ ಅಧ್ಯಕ್ಷರು ಭಾಷಣ ಮಾಡಿ, ಗಾಂಧೀಜಿಯ ವ್ಯಕ್ತಿತ್ವ, ಅಪಾರವಾದ ದೇಶಸೇವೆ, ಜಗತ್ತಿಗೆ ಮಾರ್ಗದರ್ಶನ ಮಾಡಿಕೊಟ್ಟ ಅಹಿಂಸಾ ತತ್ವ – ಇವನ್ನು ಹೃದಯಂಗಮವಾಗಿ ವಿವರಿಸಿದರು. ವಂದನಾರ್ಪಣದೊಡನೆ ಇಂದಿನ ಸಮಾರಂಭ ಮುಕ್ತಾಯಗೊಂಡಿತು.

## ದೇವರ ನಾಮಗಳ ಸ್ಪರ್ಧೆ

ಡಾ|| ಎ. ಆರ್. ಕೃಷ್ಣಶಾಸ್ತ್ರಿಗಳವರ ದತ್ತಿಯ ನೆರವಿನಿಂದ ಕನ್ನಡ ಸಾಹಿತ್ಯ ಪರಿಷತ್ತು ಅಕ್ಟೋಬರ್ ದಿನಾಂಕ ೧೫ ರಂದು ಸಂಜೆ ಎಂದಿನಂತೆ ಕನ್ನಡ ದೇವರ ನಾಮಗಳ ಸ್ಪರ್ಧೆಯನ್ನು ಹೆಣ್ಣುಮಕ್ಕಳ ಸಲುವಾಗಿ ಏರ್ಪಡಿಸಿತ್ತು. ಈ ಸ್ಪರ್ಧೆಯಲ್ಲಿ ಹಲವು ಮಂದಿ ಹೆಣ್ಣುಮಕ್ಕಳು ಭಾಗವಹಿಸಿದ್ದರು. ಉತ್ತೀರ್ಣರಾದವರಿಗೆ ಪರಿಷತ್ತಿನ ಗೌ|| ಕಾರ್ಯದರ್ಶಿಗಳಾದ ಶ್ರೀ ಎಸ್. ಶಂಕರಪ್ಪನವರು ಬಹುಮಾನ ಹಂಚಿದರು. ವ್ಯವಸ್ಥಾಪಕಿಯರಿಂದ ವಂದನಾರ್ಪಣವಾದ ಮೇಲೆ ಸಮಾರಂಭ ಮುಕ್ತಾಯಗೊಂಡಿತು.

# ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು - ೧೮.

## ತಾ|| ೨೫-೧೦-೧೯೬೪ ರಂದು ನಡೆಯುವ ಚುನಾವಣೆಯಲ್ಲಿ ಪರಿಷತ್ತಿನ ಕಾರ್ಯಸಮಿತಿಯ ಸದಸ್ಯತ್ವಕ್ಕೆ ನಿಂತಿರುವ ಅಭ್ಯರ್ಥಿಗಳು

**ಹಳೆಯ ಮೈಸೂರು :**

ಶ್ರೀಗಳಾದ / ಶ್ರೀಮತಿಯರಾದ

೧. ಕೆ. ಎಸ್. ಧರಣೇಂದ್ರಯ್ಯ
೨. ಡಿ. ಜವರೇಗೌಡರು
೩. ಪಿ. ಎಸ್. ರೆಡ್ಡಿ
೪. ಕೆ. ಗೋಪಾಲಕೃಷ್ಣರಾವ್
೫. ನಾಗೇಶ ಹತ್ವಾರ್
೬. ಜೀರಿಗೆಕಟ್ಟೆ ಬಸವಪ್ಪ
೭. ವೈ. ಎಂ. ಶ್ರೀಕಂಠಯ್ಯ
೮. ಡಿ. ಎ. ಸೇತುಮಾಧವರಾವ್
೯. ಕೆ. ಎಸ್. ನಾಗಭೂಷಣಂ
೧೦. ಎಚ್. ದೇವೀರಪ್ಪ
೧೧. ಕೆ. ರಾಚಪ್ಪ
೧೨. ಕೆ. ಎಂ. ಆರ್. ವಿ. ಶಾಸ್ತ್ರೀ
೧೩. ಟಿ. ಆರ್. ವಿ. ಆರಾಧ್ಯ
೧೪. ಸಿ. ಎಸ್. ನರಸಿಂಹನ್
೧೫. ಬಿ. ಜಿ. ಸುಶೀಲಮ್ಮ
೧೬. ಅ. ನ. ಕೃಷ್ಣರಾಯರು
೧೭. ಹಿ. ಮ. ನಾಗಯ್ಯ
೧೮. ಎಚ್. ಎಸ್. ರೇಣುಕ ಪ್ರಸಾದ್
೧೯. ಲೀಲಾವತಿ ಆರ್. ಪ್ರಸಾದ್
೨೦. ಸಿ. ಕೆ. ನಾಗರಾಜರಾವ್
೨೧. ತೋ. ಸು. ಸುಬ್ರಹ್ಮಣ್ಯಂ
೨೨. ಕೆ. ಟಿ. ಬಸಶಂಕರಮ್ಮ
೨೩. ದಿಬ್ಬೂರ್ ಕುಮಾರ್
೨೪. ಎಸ್. ಎಸ್. ರಾಮಪ್ರಸಾದ್
೨೫. ವಾಟಾಳ್ ನಾಗರಾಜ್
೨೬. ಹೇರೂರ್ ರಾಮಸ್ವಾಮಿ
೨೭. ಎ. ಸಂಜೀವಪ್ಪ
೨೮. ಡಿ. ಎಚ್. ಚಂದ್ರಶೇಖರಯ್ಯ
೨೯. ಡಿ. ಆರ್. ರಾಮಯ್ಯ
೩೦. ಕೆ. ಪಿ. ಶಿವಲಿಂಗಯ್ಯ
೩೧. ರಾಮಾಚಾರ್ಯ ಸೇಶೂರಾಮಾಚಾರ್ಯ ಆದ್ಯ
೩೨. ಪ್ರಮೀಳ
೩೩. ಜಿ. ಎ. ರಾಮಕೃಷ್ಣರಾವ್

**ಮದರಾಸು ಕರ್ನಾಟಕ :**

೧. ಬನ್ನಂಜೆ ರಾಮಾಚಾರ್
೨. ಕೆ. ನೀಲಕಂಠರಾವ್
೩. ಕೆ. ವೆಂಕಟರಾಯಾಚಾರ್ಯ
೪. ಸೂರ್ಯನಾರಾಯಣ ಚಡಗ
೫. ವಿ. ರಘುರಾಮ ಶೆಟ್ಟಿ
೬. ಐ. ಸಿ. ಸುಬ್ಬಯ್ಯ

## ಬೊಂಬಾಯಿ ಕರ್ನಾಟಕ:

೧. ವೆಂಕಟರಾಜ ಪಾನಸೆ
೨. ಎನ್. ಎಸ್. ಹೆಗ್ಗಡೆ
೩. ಪಿ. ಎಸ್. ಭಟ್
೪. ಡಾ|| ಆರ್. ಸಿ. ಹಿರೇಮಠ
೫. ಎಸ್. ಎಂ. ದೇಸಾಯಿ ಮುರಗೋಡು
೬. ಎನ್. ಎಸ್. ನೆಜ್ಜೂರ್
೭. ಕೃಷ್ಣಮೂರ್ತಿ ಪುರಾಣಿಕ
೮. ಜೆ. ವೆಂಕಟೇಶ ಸಾಂಗಲಿ
೯. ಎ. ಎಲ್. ಹಿರೇಮಠ
೧೦. ಆದ್ಯ ರಾಮಾಚಾರ್ಯ

## ಹೈದರಾಬಾದ್ ಕರ್ನಾಟಕ:

೧. ಕೆ. ಆರ್. ನಾಡಗೌಡ
೨. ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು
೩. ಎಚ್. ಆರ್. ದಾಸೇಗೌಡರು
೪. ಅನ್ನದಾನಯ್ಯ ಪುರಾಣಿಕ
೫. ಕಂಠೀರವ ದೇಶಪಾಂಡೆ
೬. ರಾ. ಗು. ಜೋಷಿ
೭. ಡಾ|| ಎಸ್. ರಾಮಕೃಷ್ಣ

ಮೈಸೂರು: ೩೩
ಮದರಾಸು: ೬
ಬೊಂಬಾಯಿ: ೧೦
ಹೈದರಾಬಾದ್: ೭
ಒಟ್ಟು: ೫೬

ಬೆಂಗಳೂರು-೧೮
ತಾ|| ೧೬-೧೦-೧೯೬೪

ಕೆ. ಎಂ. ಕೃಷ್ಣರಾವ್
ಎಸ್. ಶಂಕರಪ್ಪ
ಗೌರವ ಕಾರ್ಯದರ್ಶಿಗಳು

# ಕನ್ನಡದ ಸುದ್ದಿಗಳು

### ಬೆಂಗಳೂರು

ಕನ್ನಡ ಕವಯಿತ್ರಿ ಶ್ರೀಮತಿ ಶಿಖರಂ ಕಮಲಾಂಬಾರವರಿಗೆ ಬೆಂಗಳೂರು ನಟನ ಕಲಾ ಸಂಘದವರು ತಾರೀಖು ೨೭-೯-೬೮ ರಂದು ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಮಾನಪತ್ರವಿತ್ತು ಗೌರವಿಸಿದರು.

ಅಂಚೆ-ತಂತಿ ಕೆಲಸಗಾರರ ಕನ್ನಡ ಕಲಾ ಸಂಘದವರು ಶ್ರೀ ಎಂ. ಎಸ್. ಬಾಲಕೃಷ್ಣರವರ ಅಧ್ಯಕ್ಷತೆಯಲ್ಲಿ ತಾ|| ೪-೧೦-೬೮ ರಂದು ತಮ್ಮ ಕಲಾಸಂಘದ ವಾರ್ಷಿಕೋತ್ಸವ ನಡೆಸಿದರು.

ತಾ|| ೨೭-೯-೬೮ರಂದು ಬೆಂಗಳೂರು ಶ್ರೀ ರಾಮಲಲಿತ ಕಲಾಮಂದಿರದಲ್ಲಿ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು 'ಗಣಪತಿ ಮಹಿಮೆ'ಕುರಿತು ಭಾಷಣ ಮಾಡಿದರು. ಶ್ರೀ ಕೆ. ಗೋಪಾಲ ಕೃಷ್ಣರಾಯರು ಸಭಾಧ್ಯಕ್ಷರಾಗಿದ್ದರು.

ಮಹಾಕವಿ ಕನಕದಾಸರ ೪೦೦ ವರ್ಷಗಳ ಪುಣ್ಯಾರಾಧನೆಯನ್ನು ೧೯೬೯ ರಲ್ಲಿ ನೆರವೇರಿಸಲಾಗುತ್ತದೆ. ರಾಜ್ಯ ಸರ್ಕಾರ ಇದಕ್ಕಾಗಿ ಒಂದು ಸಮಿತಿ ರಚಿಸಿದೆ. ಶ್ರೀ ಎಸ್. ನಿಜಲಿಂಗಪ್ಪನವರು ಅಧ್ಯಕ್ಷರು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ; ಶ್ರೀ ವಿ. ಸೀತಾರಾಮಯ್ಯ, ಡಾ|| ಆರ್. ಸಿ. ಹಿರೇಮಠ, ಪ್ರೊ|| ಡಿ. ಜವರೇಗೌಡರು, ಶ್ರೀ ರಾಯನಗೌಡ ಕಲ್ಲೂರು ಮೊದಲಾದ ಸಾಹಿತಿಗಳಲ್ಲಿ ಸದಸ್ಯರಾಗಿದ್ದಾರೆ.

### ಧಾರವಾಡ

ತಾ|| ೧-೧೦-೬೮ ರಂದು ಕರ್ಣಾಟಕ ವಿಶ್ವವಿದ್ಯಾನಿಲಯದಲ್ಲಿ ಧಾರವಾಡದಲ್ಲಿ ಹಿರಿಯ ಸಾಹಿತಿಗಳಾದ ಶ್ರೀ ಶಂ. ಬಾ. ಜೋಷಿಯವರು ಕರ್ಣಾಟಕ ಸಂಘವನ್ನು ಪ್ರಾರಂಭಿಸಿದರು. ಡಾ|| ಆರ್. ಸಿ. ಹಿರೇಮಠರು ಸಭಾಧ್ಯಕ್ಷರಾಗಿದ್ದರು.

### ಮೈಸೂರು

ತಾ|| ೧೬-೧೦-೬೮ ರಂದು ಮೈಸೂರಿನಲ್ಲಿ ದಸರಾ ಕವಿಸಮ್ಮೇಳನ ನಡೆಯಿತು. ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ, ಶ್ರೀ ಕಯ್ಯಾರ ಕಿಞ್ಞಣ್ಣರೈ. ಶ್ರೀ ಕೆ. ಎಸ್. ಧರಣೇಂದ್ರಯ್ಯ, ಪಂಡಿತ ದೇಶಿಕಾಚಾರ್ ಮೊದಲಾದವರು ಭಾಗವಹಿಸಿದ್ದರು. ಶ್ರೀ ಸಿದ್ದಯ್ಯ ಪುರಾಣಿಕರು ಅಧ್ಯಕ್ಷರಾಗಿದ್ದರು.

### ಚಾಮರಾಜನಗರ

ತಾ|| ೬-೧೦-೬೮ ರಂದು ಚಾಮರಾಜನಗರದ ಕನ್ನಡ ಗೆಳೆಯರ ಬಳಗದಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು 'ನಾಡಹಬ್ಬ ಮತ್ತು ಕರ್ಣಾಟಕ' ಎಂಬ ವಿಷಯವಾಗಿ ಭಾಷಣ ಮಾಡಿದರು.

### ಬೊಂಬಾಯಿ

ಇಲ್ಲಿನ ಕನ್ನಡ ಸಂಘದವರು ಅಕ್ಟೋಬರ್ ದಿನಾಂಕ ೧೦ ಮತ್ತು ೧೧ ರಂದು ನಾಡಹಬ್ಬವನ್ನಾಚರಿಸಿದರು. ಇಲ್ಲಿನ ಮೇಯರ್ ಡಾ|| ಬಿ. ಪಿ. ದಿವ್ಗಿ ಅವರು ಉದ್ಘಾಟಿಸಿದರು. ಪ್ರಾಧ್ಯಾಪಕ ಶ್ರೀ ಕೀರ್ತಿನಾಥ ಕುರ್ತುಕೋಟಿ ಅವರು ಮುಖ್ಯ ಅತಿಥಿಗಳಾಗಿದ್ದರು. ಈ ಸಂದರ್ಭದಲ್ಲಿ ಕವಿಸಮ್ಮೇಳನ, ನಾಟಕ ಪ್ರದರ್ಶನ ಮುಂತಾದುವೇರ್ಪಟ್ಟಿದ್ದವು. ಅಲ್ಲದೆ ೧೭ ರಂದು ಯಕ್ಷಗಾನ ಸಹ ನಡೆಯಿತು.

### ರಂಗಂಪೇಟೆ

ನಾಡಹಬ್ಬ ಮಹೋತ್ಸವವು ಅ ದಿನಾಂಕ ೮ ರಿಂದ ೧೨ ರ ವರೆಗೆ ವಿಜೃಂಭಣೆಯಿಂದ ಜರುಗಿತು.

ದಿನಾಂಕ ೮ ರಂದು ಮುಂಜಾನೆ ೮ ಗಂಟೆಗೆ ನಾಡದೇವಿಯ ಮೆರವಣಿಗೆಯಾಗಿ ೯ ಗಂಟೆಗೆ ಧ್ವಜವಂದನೆ ಸಂಘದ ಅಧ್ಯಕ್ಷರಾದ ಶ್ರೀ ಬೋಡಾ ರಾಮಣ್ಣನವರಿಂದ ನಡೆಯಿತು. ೯|| ಗಂಟೆಗೆ ನಾಡದೇವಿಯ ಸ್ಥಾಪನೆ, ಪೂಜಾ, ಪ್ರಸಾದ ವಿನಿಯೋಗವಾಯಿತು. ಸಾಯಂಕಾಲ ೭ ಗಂಟೆಗೆ ಸಾರ್ವಜನಿಕ ಸಭೆ ಗಾಂಧಿ ಬಯಲಿನಲ್ಲಿ ನಡೆಯಿತು. ಶ್ರೀ ಪಿ. ಎಂ. ಗಲಗಲಿ ಅವರು "ಮಹಾಕವಿ ಹರಿಹರ" ಎಂಬ ವಿಷಯದ ಮೇಲೆ ಭಾಷಣವನ್ನಿತ್ತರು.

ದಿನಾಂಕ ೯ರ ಸಂಜೆಗೆ ಶ್ರೀ ಪಿ. ಎಂ. ಗಲಗಲಿಯವರು "ಭಾರತೀಯ ಸಂಸ್ಕೃತಿ" ಎಂಬ ವಿಷಯದ ಮೇಲೆ ಭಾಷಣವನ್ನಿತ್ತ್ರ ಮೇಲೆ ಪ್ರೌಢ ವಿದ್ಯಾರ್ಥಿಗಳಿಂದ "ಮುಂದೇನು ಗತಿ" ಎಂಬ ಏಕಾಂಕ ಪ್ರದರ್ಶಿಸಲ್ಪಟ್ಟಿತು.

ದಿನಾಂಕ ೧೦ ರಂದು ಶ್ರೀ ಇಟಗಿ ರಾಘವೇಂದ್ರ, (ಧಾರವಾಡ ಆಕಾಶವಾಣಿ) ಅವರು "ಕಾವ್ಯಾನುಭವ" ಎಂಬ ವಿಷಯದ ಮೇಲೆ ಭಾಷಣವನ್ನಿತ್ತ್ರರು. ಶ್ರೀ ಆರ್. ಆರ್. ರುದ್ರಸ್ವಾಮಿ ಮಠ ಅವರಿಂದ ರಚಿತವಾದ "ವಾಗನಗೇರಿ ಕಾಳಗ" ಎಂಬ ಏಕಾಂಕವು ಪ್ರದರ್ಶಿಸಲ್ಪಟ್ಟಿತು.

ದಿನಾಂಕ ೧೧ ರಂದು ಶ್ರೀ ಎಂ. ಆರ್. ಭಾವಿಕಟ್ಟಿ ಅವರು "ಶರಣ ಸಾಹಿತ್ಯವು ಜನತೆಗೆ ನೀಡಿದ ಜೀವನ ದೃಷ್ಟಿ" ಎಂಬ ವಿಷಯವಾಗಿ ಭಾಷಣ ಮಾಡಿದರು. ಶ್ರೀ ಎಂ. ಆರ್. ಬುದ್ಧಿವಂತ ಶೆಟ್ಟರಿಂದ ಕಾವ್ಯಗಾಯನವಾಯಿತು.

ದಿನಾಂಕ ೧೨ ರಂದು ಶ್ರೀ ಬೋಡಾ ರಾಮಣ್ಣನವರ ಅಧ್ಯಕ್ಷತೆಯಲ್ಲಿ ಕಲಬುರ್ಗಿ ವಿಭಾಗದ ಡಿ.ಡಿ.ಪಿ.ಐ. ಅವರಾದ ಶ್ರೀ ಎಂ. ಪಿ. ಜಾಲಿಯವರಿಂದ ಸಂಘದಿಂದ ಪ್ರಸಿದ್ಧವಾದ "ಸಾಹಿತ್ಯ ಸುಧೆ" (ಪ್ರಬಂಧ ಸಂಕಲನ) ಎಂಬ ಗ್ರಂಥ ಪ್ರಕಟನೋತ್ಸವವು ಜರುಗಿತು. ಆ ಮೇಲೆ ಲೇಖನ, ಭಾಷಣ, ಕಾವ್ಯಗಾಯನ, ರಂಗವಲ್ಲಿ, ನೂಲುವುದು, ಈಜುವುದು, ಕಬಡ್ಡಿ ಮುಂತಾದ ಸ್ಪರ್ಧೆಗಳಲ್ಲಿ ವಿಜಯಿಯಾದವರಿಗೆ ಶ್ರೀ ಜಾಲಿಯವರ ಅಮೃತಹಸ್ತದಿಂದ ಪಾರಿತೋಷಕ ವಿತರಣೆಯಾಯಿತು.

ಪ್ರತಿ ದಿನವೂ ಮಕ್ಕಳಿಂದ ಪ್ರಾರ್ಥನೆ, ಸ್ವಾಗತಗೀತೆ, ಕೋಲಾಟ, ಕವಿತಾ ವಾಚನ, ವಿವಿಧ ಮನರಂಜನೆ ಕಾರ್ಯಕ್ರಮಗಳು ಜರುಗಿದವು.

---



## " ವಿದ್ಯಾವಾರಿಧಿ "

## ಶ್ರೀ ಶಿವಮೂರ್ತಿ ಶಾಸ್ತ್ರಿಗಳು



ಆ ದಿನಾಂಕ ೧೪ ರಂದು ಚಿತ್ರದುರ್ಗದಲ್ಲಿ ಕನ್ನಡ ಸಾಹಿತ್ಯಪರಿಷತ್ತಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರಿಗೆ ಶ್ರೀ ಶ್ರೀ ಜಗದ್ಗುರುಗಳು 'ವಿದ್ಯಾವಾರಿಧಿ' ಎಂಬ ಪ್ರಶಸ್ತಿಯನ್ನಿತ್ತು ಗೌರವಿಸಿದರು.

# ಸಂಪಾದಕೀಯ

## ಆಕಾಶವಾಣಿ ಮತ್ತು ಪ್ರಚಾರಶಾಖೆ

ಒಂದು ನಾಡಿನ ಸರ್ಕಾರ, ಸಮಾಜ ಮತ್ತು ಸಂಪ್ರದಾಯಗಳ ನೆಲೆಗಟ್ಟಿಗೆ ಆಕಾಶವಾಣಿಯೇ ಕಿವಿ; ಪ್ರಚಾರ ಶಾಖೆಯೇ ನಾಲಿಗೆ ಎಂದರೆ ಅದು ಅತಿಶಯೋಕ್ತಿಯಲ್ಲ. ಏಕೆಂದರೆ, ಮಹಾಜನರು ತಮ್ಮ ಸರ್ಕಾರದ, ಸಮಾಜದ, ಸಂಪ್ರದಾಯಗಳ ಆಗುಹೋಗುಗಳನ್ನು ಆಕಾಶವಾಣಿಯ ಮೂಲಕ ಕಿವಿಯಿಂದ ಕೇಳಿ ಗ್ರಹಿಸುತ್ತಾರೆ. ಅದರಂತೆ, ಪ್ರಚಾರ ಶಾಖೆಯ ಮೂಲಕ ಮಾತಿನಿಂದ ತಿಳಿದು ಗ್ರಹಿಸುತ್ತಾರೆ. ಹಾಗೆಂದ ಮೇಲೆ, ಕೇಂದ್ರ ಸರ್ಕಾರದ ಆಡಳಿತ ಕ್ಕೊಳಪಟ್ಟ ಆಕಾಶವಾಣಿ ಮತ್ತು ರಾಜ್ಯ ಸರ್ಕಾರಗಳ ಆಡಳಿತಕ್ಕೊಳಪಟ್ಟ ಪ್ರಚಾರಶಾಖೆ – ಇವೆರಡು ಬಹುಮಟ್ಟಿಗೆ ಪ್ರಭಾವಪೂರ್ಣವಾಗಿ ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸಲೇಬೇಕು. ತೀವ್ರಗತಿಯಲ್ಲಿ ಮುಂದುವರಿಯುತ್ತಿರುವ ಜನಜೀವನದ ಜತೆಗೆ ಅಷ್ಟೇ ತೀವ್ರಗತಿಯಲ್ಲಿ ಅವು ಚಲಿಸುತ್ತಿರಬೇಕು. ಇಲ್ಲವಾದರೆ ಅವು ಇದ್ದೂ ಪ್ರಯೋಜನವಿಲ್ಲವೆಂಬ ಅಂಶವನ್ನು ನಾವು ಆಗಾಗ್ಗೆ ಮನಗಾಣುತ್ತಿದ್ದೇವೆ. ಇವೆರಡು ಶಾಖೆಗಳನ್ನೂ ಪುನರ್ವ್ಯವಸ್ಥೆಗೊಳಿಸಲು ಒಂದು ಮೇಲ್ಮಟ್ಟದ ತನಿಖಾ ಸಮಿತಿಯನ್ನು ಏರ್ಪಡಿಸುವುದಾಗಿ ತಿಳಿದುಬಂದಿದೆ. ಆದರೆ ಯಾವುವೇ ಲೋಪದೋಷಗಳನ್ನು ತಿದ್ದಿ ಸರಿಪಡಿಸಬೇಕಾದರೆ ಸಮಿತಿಗಳ ಮಾರ್ಗಕ್ಕಿಂತ ಇಲಾಖೆಯ ಮಟ್ಟದಲ್ಲಿಯೇ ಲೋಪದೋಷಗಳನ್ನು ಸರಿಪಡಿಸುವುದು ಸುಲಭವೂ ಶೀಘ್ರವೂ ಆದ ಮಾರ್ಗ. ಏನೇ ಆಗಲಿ ಇವೆರಡು ಶಾಖೆಗಳಲ್ಲಿ ಲೋಪದೋಷಗಳಿವೆಯೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಒಟ್ಟಿನಲ್ಲಿ, ಇವೆರಡು ಶಾಖೆಗಳೂ ಜನಸಾಮಾನ್ಯರ ತಿಳುವಳಿಕೆಗೆ ನಿಲುಕುವಂತೆ ಸರ್ಕಾರ, ಸಮಾಜ ಮತ್ತು ಸಂಪ್ರದಾಯಗಳಿಗೆ ಸಂಬಂಧಪಟ್ಟ ಕಾರ್ಯಕ್ರಮಗಳನ್ನು ರೂಢಿಸುವಂತಾಗಬೇಕು.

## ಕವಿ ಸಮ್ಮೇಳನಗಳು

ಇತ್ತೀಚೆಗೆ ಕವಿಸಮ್ಮೇಳನಗಳು ಹೆಚ್ಚುಹೆಚ್ಚಾಗಿ ನಡೆಯುವುದು ವಾಡಿಕೆಯಾಗಿದೆ, ನಿಜ. ನಾಡಿನಲ್ಲಿ ಸ್ವಯಂಪ್ರತಿಭೆಯಿಂದ ಹೊಳೆದೋರುವ ಕವಿವರ್ಯರಿಗೆ ಪ್ರೋತ್ಸಾಹ ನೀಡುವುದರಿಂದ ಅವರಲ್ಲಿ ಕೆಲವರಾದರೂ ಉತ್ತಮ ಮಟ್ಟಕ್ಕೆ ಏರಲು ಅವಕಾಶವಿರುತ್ತದೆ. ಆದಾಗ್ಯೂ, ಕವಿಸಮ್ಮೇಳನಗಳನ್ನು ನಡೆಸುವುದರಲ್ಲಿ ಒಂದು ಕ್ರಮವಿರಬೇಕು. ಇಂದು ಹಳೆಯ ಸಂಪ್ರದಾಯ ಮತ್ತು ಹೊಸ ಸಂಪ್ರದಾಯಗಳು ಮಿಲನವಾಗುವ ಕಾಲದಲ್ಲಿ ನಾವಿದ್ದೇವೆ. ಇದಕ್ಕೆ ಪ್ರಾಂತೀಯ ಭಾವನೆಯಾಗಲಿ, ವಯೋಗುಣದ ಭಾವನೆಯಾಗಲಿ, ಜಾತಿ ಭಾವನೆಯಾಗಲಿ, ಸ್ವಾರ್ಥ ಭಾವನೆಯಾಗಲಿ ಸೇರದಂತಿರಬೇಕು. ಅನೇಕ ವೇಳೆ ಕವಿಸಮ್ಮೇಳನಗಳು ತಮತಮಗೆ ಬೇಕಾದ ಕವಿಗಳ ಸಮ್ಮೇಳನಗಳಾಗಿ ಪರಿಣಮಿಸುವ ಸಂಭವವಿದೆ. ಆದುದರಿಂದ ಸಂಸ್ಥಾಪಕರು ಸರ್ವಸಮನ್ವಯವಾದ ರೀತಿಯಲ್ಲಿ ಕವಿಗಳನ್ನು ಆರಿಸುವುದು ಸೂಕ್ತವೆನಿಸುತ್ತದೆ. ಈ ವಿಚಾರದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸಹಾಯ ಸಲಹೆಗಳನ್ನು ಕೋರುವುದು ಅನುಚಿತವಾಗಲಾರದು. ಒಟ್ಟಿನಲ್ಲಿ ಕವಿಗಳಲ್ಲಿ—ಆಕಾಶವಾಣಿ ಕವಿಗಳು, ದಸರಾ ಮಹೋತ್ಸವದ ಕವಿಗಳು, ಕನ್ನಡ ಸಾಹಿತ್ಯ ಪರಿಷತ್ತಿನ ಕವಿಗಳು, ಉತ್ತರ ಕರ್ಣಾಟಕದ ಕವಿಗಳು, ದಕ್ಷಿಣ ಕರ್ಣಾಟಕದ ಕವಿಗಳು, ಹಳೇ ಮೈಸೂರು ಕವಿಗಳು—ಎಂಬ ಗುಂಪುಭಾವನೆಗೆ ಅವಕಾಶವಿರಕೂಡದು. ಆಗ ಮಾತ್ರವೇ ಕಾವ್ಯಸಂಪತ್ತು ಸುಸೂತ್ರವಾಗಿ ಬೆಳೆದೀತು.

## ಕಣ್ಮರೆಯಾದ ಕನ್ನಡಿಗರು

ಶ್ರೀಮನ್ನಿರಂಜನ ಪ್ರಣವಸ್ವರೂಪಿ ಪರಮಪಾವನ ಶ್ರೀ ಶ್ರೀ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳವರು ಅಕ್ಟೋಬರ್ ೧೩ ಪ್ರಾತಃಕಾಲ ಧಾರವಾಡದಲ್ಲೂ, ಮೈಸೂರು ರಾಜ್ಯದ ಮಾಜಿ ಮಂತ್ರಿಗಳಾದ ಶ್ರೀ ಟಿ. ಮರಿಯಪ್ಪನವರು ಅಕ್ಟೋಬರ್ ೭ನೆಯ ಮಧ್ಯಾಹ್ನ ಬೆಂಗಳೂರಿನಲ್ಲೂ, ಪತ್ರಿಕೋದ್ಯಮಿಗಳ ಸಂಘದ ಮಾಜಿ ಉಪಾಧ್ಯಕ್ಷರಾದ ಮಾವಳ್ಳಿ ಪಟೇಲ್ ಶ್ರೀ ಎಂ. ರಾಮಯ್ಯನವರು ಅಕ್ಟೋಬರ್ ೧೦ರ ಪ್ರಾತಃಕಾಲ ಬೆಂಗಳೂರಿನಲ್ಲೂ, ದಿವಂಗತರಾದ ಸುದ್ದಿ ಅಪಾರ ದುಃಖವನ್ನುಂಟುಮಾಡಿದೆ. ಇವರು ಕನ್ನಡ ಸಾಹಿತ್ಯದ ಅಭಿಮಾನಿಗಳು ಮಾತ್ರವಲ್ಲದೆ, ಕನ್ನಡ ಸಾಹಿತ್ಯದ ಬೆಳವಣಿಗೆಗೆ ತಮ್ಮಿಂದ ಸಾಧ್ಯವಾದಷ್ಟು ಸಹಾಯ ಸಂಪತ್ತಿಯನ್ನು ನೀಡಿದವರು. ಪರಮಾತ್ಮನು ದಿವಂಗತರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಹಾರೈಸುತ್ತೇವೆ.

ಸಂಪಾದಕರು: ಶ್ರೀ ಡಿ. ಆರ್. ರಾಮಯ್ಯನವರು, ಬಿ.ಎ., ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ.
ಮುದ್ರಕರು: ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಬೆಂಗಳೂರು—೧೮.

